ಶ್ರೀಮತಿ ಶಾಂತಾದೇವಿ ಕಣವಿ

# ಕಥಾಮಂಜರಿ

(ಶ್ರೀಮತಿ ಶಾಂತಾದೇವಿ ಕಣವಿ-ಇದುವರೆಗಿನ ಕಥೆಗಳು)

ಸಪ್ನ



# ಕಥಾಮಂಜರಿ

(ಶ್ರೀಮತಿ ಶಾಂತಾದೇವಿ ಕಣವಿ–ಇದುವರೆಗಿನ ಕಥೆಗಳು)



# ಕಥಾಮಂಜರಿ

(ಶ್ರೀಮತಿ ಶಾಂತಾದೇವಿ ಕಣವಿ–ಇದುವರೆಗಿನ ಕಥೆಗಳು)

**ಶ್ರೀಮತಿ ಶಾಂತಾದೇವಿ ಕಣವಿ**




ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

"**KATHAMANJARI**" : A complete collection of Kannada short stories by **Smt. Shantadevi Kanavi,** Published by **Sapna Book House (P) Ltd.,** R.O. # 11, 3rd Main Road, Gandhinagar, Bangalore - 9, Tel. : 40114455.

[K.B. 1913]

**ISBN** : **978-81-280-2003-2**

ಹಕ್ಕುಗಳು : ಲೇಖಕರು

ಪ್ರಥಮ ಮುದ್ರಣ : ನವೆಂಬರ್ 2012

| | |
|---|---|
| ಪುಟಗಳು : xxii + 630 = 652 | ಪ್ರತಿಗಳ ಸಂಖ್ಯೆ : 1000 |
| ಬೆಲೆ : ₹ 550/- | Paper Used : 11.6 Kg D/C (60 gsm) N. S Maplitho |
| | Book Size : A5 |

ಹಂಚಿಕೆದಾರರು : ಸಪ್ನ ಎಂಟರ್‌ಪ್ರೈಸಸ್
ಸದ್ಗುರು ಕಾಂಪ್ಲೆಕ್ಸ್, ನಂ. 14, 27ನೇ ಅಡ್ಡರಸ್ತೆ
4ನೇ ಬ್ಲಾಕ್ (ಪಶ್ಚಿಮ), ಜಯನಗರ
ಬೆಂಗಳೂರು – 11, ದೂರವಾಣಿ : 41307322

ಅಕ್ಷರ ಜೋಡಣೆ : ವಚನ ಗ್ರಾಫಿಕ್ಸ್, ಧಾರವಾಡ

ಮುಖಪುಟ ವಿನ್ಯಾಸ : ಶ್ರೀಪಾದ, ಬೆಂಗಳೂರು

ಮುದ್ರಣ : ಪ್ರಿಂಟ್ ಫಾಸ್ಟ್, ಬೆಂಗಳೂರು

# ಅರ್ಪಣೆ

ಪ್ರೀತಿ, ಸಾಮರಸ್ಯದ ಬದುಕನ್ನು ನೀಡಿದ ಜೊತೆಗಾರ
ಚೆನ್ನವೀರ ಕಣವಿ
ಅವರಿಗೆ



# ಮುನ್ನುಡಿ

೧

ಕನ್ನಡದಲ್ಲಿ ಮಹಿಳೆಯರು ಇನ್ನೂ ದೊಡ್ಡ ಸಂಖ್ಯೆಯಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಳ್ಳದಿದ್ದ ಕಾಲದಲ್ಲಿಯೇ ಶ್ರೀಮತಿ ಶಾಂತಾದೇವಿ ಕಣವಿಯವರು ಸಣ್ಣಕತೆಗಳನ್ನು ಬರೆಯಲು ಆರಂಭಿಸಿದರು. ಅವರ ಮೊದಲ ಸಣ್ಣಕತೆ 'ಸ್ವರೂಪದರ್ಶನ' ("ಸಂಜೆ ಮಲ್ಲಿಗೆ") ರಚನೆಯಾದದ್ದು ೧೯೫೮ರಲ್ಲಿ. ಈವರೆಗೆ ಅವರ "ಸಂಜೆ ಮಲ್ಲಿಗೆ" (೧೯೬೭), "ಬಯಲು ಆಲಯ" (೧೯೭೩), "ಮರುವಿಚಾರ" (೧೯೭೮), "ಜಾತ್ರೆ ಮುಗಿದಿತ್ತು" (೧೯೮೧), "ಕಳಚಿ ಬಿದ್ದ ಪೈಜಣ" (೧೯೮೩), "ನೀಲಿಮಾ ತೀರ" (೧೯೯೨) ಮತ್ತು "ಗಾಂಧೀ ಮಗಳು" (೧೯೯೭) ಏಳು ಕಥಾಸಂಕಲನಗಳು ಪ್ರಕಟವಾಗಿವೆ. ಈಚಿನ ಹೊಸ ಕತೆಗಳನ್ನೂ ಸೇರಿಸಿದರೆ ಅವರು ಬರೆದಿರುವ ಒಟ್ಟು ಕತೆಗಳ ಸಂಖ್ಯೆ ೧೧೦ನ್ನು ದಾಟುತ್ತದೆ. ಕಿರೀಟ ೧/೮ ಆಕಾರದ ೧೧೫೦ ಪುಟಗಳಷ್ಟು ಅವರ ಬರವಣಿಗೆಯ ವ್ಯಾಪ್ತಿ ಇದೆ. ಅವರ ಕತೆಗಳ ಸರಾಸರಿ ಪುಟ ಸಂಖ್ಯೆ ೧೦. ಈ ಸಂಗತಿಗಳು ಅವರ ಬರವಣಿಗೆಯ ಬಗ್ಗೆ ಕೆಲವು ಮುಖ್ಯವಿಷಯಗಳನ್ನು ಸೂಚಿಸುತ್ತವೆ. ಮೊದಲನೆಯದಾಗಿ, ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಅವರು ಕತೆಗಳನ್ನು ಬರೆದಿದ್ದಕ್ಕೆ ಮುಖ್ಯ ಕಾರಣ, ಅವರು ಸಣ್ಣಕತೆಯನ್ನೇ ತಮ್ಮ ಅಭಿವ್ಯಕ್ತಿಯ ಮುಖ್ಯ ಸಾಧನವನ್ನಾಗಿ ಆಯ್ದುಕೊಂಡದ್ದು. ಎರಡನೆಯದು, ಅವರ ಬರವಣಿಗೆಯ ಸ್ಥಿರತೆ. ಸತತವಾಗಿ ಅವರು ತಮ್ಮ ಬರವಣಿಗೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಮೂರನೆಯದು, ಅವರ ಸಣ್ಣ ಕತೆಗಳ ಹ್ರಸ್ವತೆ. ಅವರ ಕತೆಗಳ ಕಿರು ಗಾತ್ರ ಅವುಗಳ ತೀವ್ರತೆಗೆ ಕಾರಣವಾಗಿರುವಂತೆ ಸ್ವಲ್ಪಮಟ್ಟಿನ ಸರಳತೆಗೂ ಕಾರಣವಾಗಿದೆ.

ಹೀಗೆ ೪೫ ವರ್ಷಗಳಿಂದ ಅವರು ಕತೆಗಳನ್ನು ಬರೆಯುತ್ತಿದ್ದರೂ ಅವರ ಕಥಾಸಂಕಲನಗಳಿಗೆ ಆಗಾಗ ಬರೆದಿರುವ ಬಸವರಾಜ ಕಟ್ಟೀಮನಿ ("ಸಂಜೆ ಮಲ್ಲಿಗೆ"), ಶಂಕರ ಮೊಕಾಶಿ ಪುಣೇಕರ ("ಬಯಲು-ಆಲಯ"), ಎಲ್.ಎಸ್. ಶೇಷಗಿರಿರಾವ್ ("ಕಳಚಿಬಿದ್ದ ಪೈಜಣ"), ಕ.ವೆಂ. ರಾಜಗೋಪಾಲ ("ನೀಲಿಮಾ ತೀರ") ಅವರ ಮುನ್ನುಡಿಗಳನ್ನು ಮತ್ತು ಜಿ.ಎಸ್. ಆಮೂರ ಅವರು ಬರೆದಿರುವ ಬೆನ್ನುಡಿ ("ನೀಲಿಮಾ ತೀರ")ಯನ್ನು. ಪತ್ರಿಕೆಗಳಲ್ಲಿ ಬಂದಿರುವ ಸಂಕ್ಷಿಪ್ತ ವಿಮರ್ಶೆಗಳನ್ನು ಮತ್ತು ಕೆಲವು ಸಮೀಕ್ಷೆಗಳಲ್ಲಿ ಬಂದಿರುವ ಪ್ರಸ್ತಾಪಗಳನ್ನು ಬಿಟ್ಟರೆ, ಶಾಂತಾದೇವಿಯವರ ಸಣ್ಣಕತೆಗಳನ್ನು ಕುರಿತು ಗಂಭೀರ ವಿಮರ್ಶೆ ಬಂದಂತೆ ಕಾಣುವುದಿಲ್ಲ. ವೀಣಾ ಶಾಂತೇಶ್ವರ ಅವರು ಸಂಪಾದಿಸಿರುವ "ಸಣ್ಣ ಕತೆಗಳ ಸಂಕಲನ" (೨೦೦೧)ವನ್ನು ಭಿಟ್ಟರೆ, ಅವರ ಕತೆಗಳು ಯಾವ ಪ್ರಾತಿನಿಧಿಕ ಸಾಮಾನ್ಯ ಸಂಕಲನಗಳಲ್ಲಿ ಸ್ಥಾನ ಪಡೆದಿಲ್ಲ. ಮಹಿಳಾ ಸಾಹಿತ್ಯವನ್ನು ಕುರಿತು ಕನ್ನಡ ವಿಮರ್ಶೆ ಈವರೆಗೆ ತಳೆದಿದ್ದ ಔದಾಸೀನ್ಯವೂ ಇದಕ್ಕೆ ಒಂದು ಕಾರಣವಾಗಿರಬಹುದು. ಈ ಔದಾಸೀನ್ಯಕ್ಕೆ ಸಾಹಿತ್ಯಿಕವಾಗಿ ಏನೇ ಸಮಸ್ಯೆಗಳಿದ್ದರೂ ಕೇವಲ ಸಾಹಿತ್ಯಕ ಶ್ರೇಷ್ಠತೆಯ ಮಾನದಂಡಗಳಿಂದ ಸಾಹಿತ್ಯವನ್ನು ಅಳೆಯುವ ಪ್ರವೃತ್ತಿ ಈಚೆಗೆ ಬದಲಾಗಿ, ಸಾಂಸ್ಕೃತಿಕ ಆಸಕ್ತಿಗಳೂ ವಿಮರ್ಶೆಯಲ್ಲಿ ಸೇರಿಕೊಳ್ಳುತ್ತಿರುವುದರಿಂದಾಗಿ ಜನಪ್ರಿಯ ಸಾಹಿತ್ಯದಿಂದ ಮೊದಲುಗೊಂಡು ಎಲ್ಲ ಸಾಹಿತ್ಯವನ್ನೂ ಗಂಭೀರವಾಗಿ ಅಭ್ಯಸಿಸುವ ಕ್ರಮಗಳು ಆರಂಭವಾಗಿವೆ. ಅದರಲ್ಲೂ ಸ್ತ್ರೀವಾದಿ ಅಧ್ಯಯನಗಳು ಆರಂಭವಾದ ಮೇಲೆ, ಈವರೆಗೆ ಹಿನ್ನೆಲೆಗೆ ಸರಿದಿದ್ದ ಅನೇಕ ಲೇಖಕಿಯರನ್ನು ಕುರಿತು ಹೊಸ ದೃಷ್ಟಿಕೋನ ತೆರೆದುಕೊಂಡಿದೆ. ಈ ಹಿನ್ನೆಲೆಯಲ್ಲಿ ಶಾಂತಾದೇವಿ ಕಣವಿಯವರ ಸಣ್ಣ ಕತೆಗಳನ್ನು ನೋಡಬಹುದಾಗಿದೆ.

ಶಾಂತಾದೇವಿಯವರು ಸಣ್ಣಕತೆಗಳನ್ನು ಬರೆಯಲು ಆರಂಭಿಸಿದ್ದಾಗ ಆಗಲೇ ಕನ್ನಡದಲ್ಲಿ ನವ್ಯತೆ ಆರಂಭವಾಗಿತ್ತಾದರೂ, ಅವರಿಗೆ ಆದರ್ಶ ಮಾದರಿಯಾಗಿ ಕಂಡದ್ದು ಮಾಸ್ತಿ ಸಂಪ್ರದಾಯ. ಉದಾರ ಮಾನವತಾವಾದಿ ದರ್ಶನದಲ್ಲಿ, ಬದುಕನ್ನು ಎಲ್ಲ ವಿವರಗಳಲ್ಲಿ ನಿರೀಕ್ಷಿಸಿ ದಾಖಲಿಸುವ ರೀತಿಯಲ್ಲಿ, ಮಾನವೀಯ



ಅನುಕಂಪದಲ್ಲಿ, ನಿರುದ್ವಿಗ್ನವಾಗಿ ಕಥೆ ಹೇಳುವ ಕ್ರಮದಲ್ಲಿ ವಾಸ್ತವವಾದಿ ಚಿತ್ರಣದಲ್ಲಿ ಮಾಸ್ತಿಯವರ ಪ್ರಭಾವ ಶಾಂತಾದೇವಿಯವರ ಮೇಲೆ ದಟ್ಟವಾಗಿ ಹರಡಿರುವುದು ಕಾಣುತ್ತದೆ. ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಅದು ಅವರ ಈಚಿನ ಕತೆಗಳಲ್ಲೂ ಮುಂದುವರಿದುಕೊಂಡು ಬಂದಿದೆ. ಬದುಕಿನಲ್ಲಿ ನೋವು ಇದ್ದರೂ, ಸಹನೆಯ ಮೂಲಕ, ಹೊಂದಾಣಿಕೆಯಿಂದ, ತಿಳುವಳಿಕೆಯಿಂದ, ಪ್ರೀತಿಯಿಂದ, ತ್ಯಾಗದಿಂದ ಅದನ್ನು ಸರಿಪಡಿಸಿಕೊಳ್ಳಬಹುದೆಂಬ ಮಾಸ್ತಿಯವರ ನಿಲುವು ಶಾಂತಾದೇವಿಯವರ ಕತೆಗಳಲ್ಲೂ ಕಾಣುತ್ತದೆ. ಅಂತೆಯೇ ಅವರ ಎಲ್ಲ ಮಹತ್ವದ ಕತೆಗಳಲ್ಲಿ ಸಮಸ್ಯೆ ದೀರ್ಘಕ್ಕೆ ಹೋಗಿ ಹರಿಯುವುದಿಲ್ಲ. ನವ್ಯಕತೆಗಳಲ್ಲಿಯಂತೆ ಸಂದಿಗ್ಧದಲ್ಲೂ ನಿಲ್ಲುವುದಿಲ್ಲ. ಬದಲಾಗಿ ಸಮಾಧಾನಕರವಾದ ಮರು ಹೊಂದಾಣಿಕೆಯಲ್ಲಿ ಅಥವಾ ನಿಶ್ಚಿತ ಪರಿಹಾರದಲ್ಲಿ ಸಮಸ್ಯೆ ಬಗೆಹರಿಯುತ್ತದೆ. ಇದಕ್ಕೆ ಅಪವಾದವಾಗಿ ಒಂದೆರಡು ಕತೆಗಳು ಕಾಣುತ್ತವಾದರೂ ಅವರ ಮುಖ್ಯ ಕಾಳಜಿ ಇರುವುದು ಹೊಂದಾಣಿಕೆಯಲ್ಲಿ.

ಅವರ ಎಲ್ಲ ಸಣ್ಣಕತೆಗಳಲ್ಲೂ ಎದ್ದುಕಾಣುವ ಒಂದು ಮುಖ್ಯ ಅಂಶವೆಂದರೆ ಕಥೆ ಹೇಳಬೇಕೆನ್ನುವ ತವಕ. ವೈಚಾರಿಕತೆಯನ್ನು ಅದರ ಪಾಡಿಗೆ ಬಿಟ್ಟು, ಸ್ವಾರಸ್ಯವಾಗಿ ಕಥೆ ಹೇಳುವುದರಲ್ಲಿಯೇ ಅವರು ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾರೆ. ಘಟನೆಗಳ ನಿರೂಪಣೆಗಾಗಿಯೇ ಅವರ ಕಲೆಗಾರಿಕೆಯ ಎಲ್ಲ ಸಾಧನಗಳೂ ದುಡಿಯುತ್ತವೆ. ದೀರ್ಘ ವರ್ಣನೆಗಳಾಗಲಿ, ವೈಚಾರಿಕ ಗೊಂದಲಗಳ ವಿಶ್ಲೇಷಣೆಗಳಾಗಲಿ ಅವರ ಕತೆಗಳಲ್ಲಿ ಇಲ್ಲ. ನೇರವಾಗಿ ಕಥೆಯ ನಿರೂಪಣೆಯೇ ಇದೆ. ಅವರ ಕತೆಗಳು ಚಿಕ್ಕವಾಗಿರುವುದಕ್ಕೆ ಇದೂ ಒಂದು ಕಾರಣ. ಈಚಿನ ಕೆಲವು ಕತೆಗಳಲ್ಲಿ - ನವ್ಯದ ಪ್ರಭಾವದಿಂದಲೋ ಏನೊ - ಪಾತ್ರಗಳ ಮನೋವಿಶ್ಲೇಷಣೆಯನ್ನೂ ಅವರು ಅಳವಡಿಸಿಕೊಳ್ಳಲು ಯತ್ನಿಸಿದ್ದಾರೆ. ಆದರೆ ಇದು ನವ್ಯಕಥೆಗಳಲ್ಲಿ ಬರುವ ಮಾನಸಿಕ ತೊಳಲಾಟ, ಸಾಂಕೇತಿಕತೆ, ಸಂದಿಗ್ಧತೆ, ಹೊಯ್ದಾಟಗಳ ಮಾದರಿಯ ಪ್ರಜ್ಞಾಪ್ರವಾಹ ತಂತ್ರವಲ್ಲ. ಅದು ಅವರ ಕತೆಗಾರಿಕೆಯ ಸಹಜ ಸ್ವಭಾವಕ್ಕೆ ಒಗ್ಗುವುದಿಲ್ಲ. ಪಾತ್ರಗಳ ಒಳಮನಸ್ಸಿನ ಕಡೆಗೆ ತಿರುಗಿದ ಕೂಡಲೇ ಅವು ಸ್ವಗತಗಳಾಗಿ ಆತ್ಮವಿಶ್ಲೇಷಣೆಗಲ್ಲ - ಆತ್ಮಕಥೆಗೆ ತಿರುಗಿಕೊಳ್ಳುತ್ತವೆ. ಈ ಆತ್ಮಕಥೆಗಳಲ್ಲಿ ಫ್ಲ್ಯಾಷ್‌ಬ್ಯಾಕಿನ ರೀತಿಯಲ್ಲಿ ಹಿಂದೆ ನಡೆದ ಘಟನೆಗಳೇ ನಿರೂಪಿತವಾಗಿ ಕಥೆಯನ್ನು ಬೆಳೆಸುತ್ತವೆ. ಉದಾಹರಣೆಯೆಂದು 'ಬಯಲು-ಆಲಯ' ಕತೆಯ ಜಾನಕ್ಕನ ನೆನಪು-ಹಳವಂಡ-ಆತಂಕಗಳನ್ನು ನೋಡಬಹುದು. ಅವೆಲ್ಲ ಗಂಡನೊಂದಿಗೆ ನಡೆದಿದ್ದ ಜಗಳದ ಕಥೆಯನ್ನು ನಿರೂಪಿಸುತ್ತವೆ. ಎಷ್ಟೋ ಸಲ ಸಂಭಾಷಣೆಗಳೂ ಸಹ ಘಟನೆಗಳನ್ನೇ ನಿರೂಪಿಸುತ್ತವೆ.

ಕಥೆ ಹೇಳಬೇಕೆನ್ನುವ ಈ ತವಕ ಅಥವಾ ಗುಂಗು, ಕಥೆಗಾಗಿ ರೋಚಕ ಸನ್ನಿವೇಶಗಳನ್ನು ಹುಡುಕಿಕೊಂಡು ಹೋಗುವ ಹವ್ಯಾಸ 'ಮುಖಾಮುಖಿ' (ಕಳಚಿ ಬಿದ್ದ ಪೈಜಣ"), 'ಆಜನ್ಮ ಶಿಕ್ಷೆ' ("ಜಾತ್ರೆ ಮುಗಿದಿತ್ತು") ಮೊದಲಾದ ಕೆಲವು ಕತೆಗಳಲ್ಲಿ ಆಕಸ್ಮಿಕಗಳಿಗೆ ಮೊರೆ ಹೋಗಿ ಮೆಲೊಡ್ರಮ್ಯಾಟಿಕ್ ಆದದ್ದೂ ಇದೆ. 'ನೀಲಿಮಾ ತೀರ'ದಲ್ಲಿಯಂತೆ ಅತಿ ಭಾವುಕವಾದದ್ದೂ ಇದೆ. ಆದರೆ ಇವು ಶಾಂತಾದೇವಿಯವರ ಕತೆಗಾರಿಕೆಯ ವಿಶಿಷ್ಟ ಲಕ್ಷಣಗಳೇನೂ ಅಲ್ಲ. ತಮ್ಮ ಯಶಸ್ವಿ ಕತೆಗಳಲ್ಲಿ ವಾಸ್ತವವಾದದ ಮೇಲಿನ ಹಿಡಿತದಿಂದ ಈ ದೋಷಗಳನ್ನು ಅವರು ಸಹಜವಾಗಿ ಪರಿಹರಿಸಿಕೊಂಡಿದ್ದಾರೆ.

ಶಾಂತಾದೇವಿಯವರ ಬಹಳಷ್ಟು ಕತೆಗಳಲ್ಲಿ ಚಿತ್ರಿತವಾಗಿರುವ ಮುಖ್ಯ ವಸ್ತು ಕೌಟುಂಬಿಕ ಬಿಕ್ಕಟ್ಟು. ಭಾರತದ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಎದುರಿಸಬೇಕಾದ ಸಮಸ್ಯೆಗಳು. ಈ ವಸ್ತುವನ್ನು ಅವರು ಮೂರು ನೆಲೆಗಳಲ್ಲಿ ನಿರ್ವಹಿಸಿದ್ದಾರೆ. ಒಂದು, ಗ್ರಾಮೀಣ ಕೌಟುಂಬಿಕ ವ್ಯವಸ್ಥೆಯ ನೆಲೆ. ಇಂಥ ಕತೆಗಳು ಕೆಲವೇ ಇದ್ದರೂ, ಅವುಗಳ ಸ್ವರೂಪ-ಪರಿಹಾರ ಭಿನ್ನವಾಗಿವೆ. ಇನ್ನೊಂದು, ಸುಶಿಕ್ಷಿತ ಮಧ್ಯಮ ವರ್ಗದ ನೆಲೆ. ಈ ಹಿನ್ನೆಲೆಯ ಕತೆಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಬಹುಶಃ ಇದು ಶಾಂತಾದೇವಿಯವರಿಗೆ ಹೆಚ್ಚು ಪರಿಚಿತವಾದ ಲೋಕವಾಗಿರುವುದೇ ಇದಕ್ಕೆ ಕಾರಣವಾಗಿದೆ. ಇಲ್ಲಿಯ ಸಮಸ್ಯೆಗಳಲ್ಲಿ ಮತ್ತು ಸನ್ನಿವೇಶಗಳಲ್ಲಿ ಸಾಕಷ್ಟು ವೈವಿಧ್ಯವಿದೆ. ಮೂರನೆಯದು



ಕೆಳವರ್ಗದ ನೆಲೆ. ಈ ನೆಲೆಯಲ್ಲಿ ನೇರ ನಿರೂಪಣೆಯ ಸ್ವತಂತ್ರ ಕತೆಗಳಿಲ್ಲ. ಮಧ್ಯಮ ವರ್ಗದ ಬದುಕಿನ ಕತೆಗಳಲ್ಲೇ ಇವು ಸಮಾಂತರವಾಗಿ, ವೈದೃಶ್ಯವಾಗಿ ಬಂದು ಒಂದು ಇನ್ನೊಂದರ ಮೇಲೆ ಬೆಳಕು ಚೆಲ್ಲುತ್ತವೆ. ಇಲ್ಲೆಲ್ಲ ಮಧ್ಯಮ ವರ್ಗದ ಹೆಣ್ಣಿನ ದೃಷ್ಟಿಕೋನವೇ ಕಥೆಯನ್ನು ನಿಯಂತ್ರಿಸುತ್ತದೆ. ಬಹುಶಃ ಈ ಬದುಕಿನ ನಿಕಟ ಪರಿಚಯ ಇಲ್ಲದಿರುವುದರಿಂದಲೇ ಏನೋ, ಇಂಥ ಕಥೆಗಳು ಹೊರಗಿನಿಂದ ನಿರೂಪಿತವಾಗಿವೆ.

ಈ ಎಲ್ಲ ನೆಲೆಗಳ ಚಿತ್ರಣದಲ್ಲೂ ಸಾಮಾನ್ಯವಾಗಿರುವ ಅಂಶವೆಂದರೆ, ಪುರುಷ ಪ್ರಧಾನವಾದ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಇಕ್ಕಟ್ಟುಗಳು, ಅಸುರಕ್ಷತೆ, ದೈಹಿಕ/ ಮಾನಸಿಕ ಹಿಂಸೆ, ವೈಯಕ್ತಿಕ ಆಶೆ-ಆಕಾಂಕ್ಷೆಗಳ ದಮನ, ಅವಮಾನ. ಬಹಳಷ್ಟು ಕತೆಗಳಲ್ಲಿ ಪುರುಷಾಹಂಕಾರವೇ ಹೆಣ್ಣಿನ ಎಲ್ಲ ದುಃಖಕ್ಕೆ ಕಾರಣವಾಗಿದೆ. ಕೆಲಸಲ ಅತ್ತೆ ಮಾವ, ನಾದಿನಿ, ಮೈದುನ, ಭಾವ ಮೊದಲಾದವರೂ ಸೇರುತ್ತಾರೆ. ಒಂದೆರಡು ಅಪವಾದಗಳನ್ನೂ ಬಿಟ್ಟರೆ, ಎಲ್ಲ ಕತೆಗಳಲ್ಲೂ ಹೆಣ್ಣು - ಅದರಲ್ಲೂ ದಮನಕ್ಕೆ ಒಳಗಾದ ಹೆಣ್ಣು - ನಿರೂಪಕಿಯಾಗಿರುವುದರಿಂದ ಮತ್ತು ಅವಳ ದೃಷ್ಟಿಕೋನದಿಂದ ಸಮಸ್ಯೆಯನ್ನು ನೋಡಿರುವುದರಿಂದ ಗಂಡಿನ ದೌರ್ಜನ್ಯದ ಮೇಲೆ ಏಕಮುಖಿಯಾದ ಒತ್ತು ಬಿದ್ದಿದೆ. ಅಂತೆಯೇ ಪರಿಣಾಮ ಸಾಕಷ್ಟು ಕಟುವಾಗಿದೆ. ಇದರಿಂದ ಉಂಟಾಗಿರುವ ಒಂದು ಮಿತಿ ಎಂದರೆ, ಇಲ್ಲಿಯ ಪುರುಷ ಪಾತ್ರಗಳಿಗೆ ತಮ್ಮನ್ನು ಸಮರ್ಥಿಸಿಕೊಳ್ಳಲು ಅವಕಾಶವೇ ಸಿಗುವುದಿಲ್ಲ. ಇದು ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಸರಳಗೊಳಿಸುತ್ತದೆ. ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುತ್ತಿರುವ ಇಕ್ಕಟ್ಟಿನಲ್ಲಿ ಗಂಡಿನ ಪಾತ್ರವನ್ನು ಒಪ್ಪಿಕೊಂಡು ಈ ಮಾತು ಹೇಳಬೇಕಾಗುತ್ತದೆ.

'ಕಿತ್ತು ಹಚ್ಚಿದ ಗಿಡ' ("ಸಂಜೆ ಮಲ್ಲಿಗೆ") ಎಂಬುದು ಶಾಂತಾದೇವಿಯವರ ಒಂದು ಕತೆಯ ಹೆಸರು. ಇದು, ಭಾರತೀಯ ಕುಟುಂಬ ವ್ಯವಸ್ಥೆಯಲ್ಲಿ ಅನುಭವಿಸಬೇಕಾದ ಒಂದು ಅನಿವಾರ್ಯ ಅವಸ್ಥೆಗೆ ಅತ್ಯಂತ ಸಮರ್ಪಕವಾದ ರೂಪಕ. ಸಾಮಾನ್ಯವಾಗಿ ಶಾಂತಾದೇವಿಯವರದು ರೂಪಕಾತ್ಮಕವಾದ ಶೈಲಿಯಲ್ಲವಾದರೂ, ತಮ್ಮ ವಾಸ್ತವ ಮಾರ್ಗದ ಶೈಲಿಯಲ್ಲೇ ಅವರು ಕ್ವಚಿತ್ತಾಗಿ ಇಂಥ ರೂಪಕಗಳನ್ನು ಬಳಸುತ್ತಾರೆ. ವಿಶಿಷ್ಟ ಗುಣದ ಮಣ್ಣು, ನೀರು, ಹವಾಮಾನಗಳಲ್ಲಿ ಸಹಜವಾಗಿ ಬೆಳೆದ ಗಿಡವನ್ನು ಕಿತ್ತು ಬೇರೆ ಗುಣದ ಮಣ್ಣು, ನೀರು, ಹವಾಮಾನಗಳಿಂದ ಮತ್ತೊಂದು ಜಾಗೆಯಲ್ಲಿ ಹಚ್ಚಿದಾಗ ಅವು ಅನುಭವಿಸುವಂಥ ಸಂಕಟವನ್ನು ಪ್ರತಿಯೊಬ್ಬ ಹೆಣ್ಣೂ ಅನುಭವಿಸಬೇಕಾಗುತ್ತದೆ. ತವರು ಮನೆಯಿಂದ ಗಂಡನ ಮನೆಗೆ ಬಂದು ಹೊಸ ವಾತಾವರಣಕ್ಕೆ ಹೊಂದಿಕೊಳ್ಳಬೇಕಾದ ಕಷ್ಟವನ್ನು ಈ ರೂಪಕ ಸಂಕೇತಿಸುತ್ತದೆ. ಕುಟುಂಬದ ಜೀವನದ ಇಕ್ಕಟ್ಟಿನಲ್ಲಿ ಹೆಣ್ಣು ಅನುಭವಿಸುವ ಎಲ್ಲ ಕಷ್ಟಗಳಿಗೂ ಇದೇ ಮೂಲ. ಇದರ ಜೊತೆಗೆ ಗಂಡ-ಹೆಂಡತಿಯರ ಮನೋಧರ್ಮಗಳಲ್ಲಿ ಹೊಂದಾಣಿಕೆಯಿರದಿದ್ದರೆ ಅದು ಇಬ್ಬರ ಕಷ್ಟಕ್ಕೂ ಕಾರಣವಾಗುತ್ತದೆ ಮತ್ತು ಇಂಥ ಸಂದರ್ಭದಲ್ಲಿ ಯಾರು ಯಾರನ್ನು ಅನುಸರಿಸಿಕೊಂಡು ಹೋಗಬೇಕೆನ್ನುವುದು ಸಮಸ್ಯೆಯಾಗುತ್ತದೆ.

ಈ ಮಾತುಗಳ ಹಿನ್ನೆಲೆಯಲ್ಲಿ ಶಾಂತಾದೇವಿಯವರ ಮೂರು ಪ್ರಾತಿನಿಧಿಕ ಸಣ್ಣಕತೆಗಳನ್ನು ಪರಿಶೀಲಿಸಬಹುದು.

ಮೊದಲಿಗೆ, ಅವರ ಕಲೆಗಾರಿಕೆಯ ಒಂದು ನೆಲೆಯಾದ ಗ್ರಾಮೀಣ ಹಿನ್ನೆಲೆಯ ಪ್ರಾತಿನಿಧಿಕ ಕಥೆ ಎನ್ನಬಹುದಾದ 'ಬಾರುಕೋಲು' ('ಕಳಚಿ ಬಿದ್ದ ಪೈಜಣ') ಎಂಬ ಕತೆಯನ್ನು ನೋಡೋಣ. ಇಲ್ಲಿಯೂ ಕೂಡ ಕೌಟುಂಬಿಕ ಜೀವನದ ಇಕ್ಕಟ್ಟಿನದೇ ಒಂದು ಚಿತ್ರವಿದೆ. ಆದರೆ ಇಲ್ಲಿ ಹೆಣ್ಣಿನ ಮೇಲಿನ ದೌರ್ಜನ್ಯಕ್ಕೆ ಕಾರಣವಾಗಿರುವುದು ಗಂಡಲ್ಲ, ಹೆಣ್ಣು. ಮಾದವ್ವ ತನ್ನ ಅತ್ತೆ ಸಂಕ್ರವ್ವನ ಕೈಯಲ್ಲಿ ತರತರದಿಂದ ನೋವು ಅನುಭವಿಸಿದವಳು. ಒಮ್ಮೆ ಆಕೆಯ ಕೈಯಿಂದ ಮಣ್ಣಿನ ಹರವಿ ಜಾರಿಬಿದ್ದು ಒಡೆದದ್ದೇ ನೆಪವಾಗಿ ಸಂಕ್ರವ್ವ



ಸೊಸೆಯನ್ನು "ನೆಲಕ್ಕೆ ಕೆಡವಿ, ಬೆನ್ನುಹತ್ತಿ ಕೂತು, ಕೂದಲು ಜಗ್ಗಿ ಹೊಡೆಯುತ್ತಿದ್ದುದನ್ನು ನೋಡಿದ ಮಾವ ಕನಿಕರಪಟ್ಟು ಬಿಡಿಸಲು ಬಂದ. ಆಗ ಹೆಂಡತಿಯ ಬಾಯಿಂದ ಹೊರಹೊಮ್ಮಿದ ಅಶ್ಲೀಲ ಬೈಗುಳಗಳನ್ನು ಕೇಳಿದ ಮಾವ ಕಿವಿ ಮುಚ್ಚಿಕೊಂಡು ಹೊರಗೆ ಓಡಿಹೋದದ್ದನ್ನು, ಮೊದಲಿಗಿಂತ ಇಮ್ಮಡಿ ಸಿಟ್ಟಿನಿಂದ ಚಚ್ಚಿದ್ದನ್ನು" ಕತೆ ವಿವರವಾಗಿ ಚಿತ್ರಿಸುತ್ತದೆ. ಚುಟುಕಾ ಕಾಯಿಸಿ ಸೊಸೆಯ ಮೈತುಂಬಾ ಕೊಟ್ಟ ಬರೆಗಳು ಅವಳ ಕಪ್ಪು ಮೈಯಲ್ಲಿ ಕಾಣುವುದಿಲ್ಲ ಅಷ್ಟೇ. ಮಕ್ಕಳನ್ನು ಹಡೆಯದ ಸೊಸೆಯನ್ನು ತರತರದಿಂದ ಉರಿಸಿಕೊಂಡು ಮನೆ ಬಿಟ್ಟು ಓಡಿಸಬೇಕೆಂದು ಅವಳ ಸಂಚು. "ಆದರೆ ಮಾದವ್ವ ಮೊಂಡ ಹೆಣ್ಣು ; ಅವ್ವ-ಅಪ್ಪನೂ ಇಲ್ಲದ ತವರಿಗೆ ಅವಳೇಕೆ ಹೋದಾಳು? ನೆಲ ಕಚ್ಚಿ ನಿಂತಳು." ಗ್ರಾಮೀಣ ಕುಟುಂಬಗಳಲ್ಲಿ ಸಾಮಾನ್ಯವೆಂಬಂಥ ಇಂಥ ದೌರ್ಜನ್ಯಕ್ಕೆ ಮಕ್ಕಳಾಗದ್ದು ಒಂದು ಕಾರಣವಾದರೆ, ಹೆಣ್ಣಿನ ಆರ್ಥಿಕ ಅಸಹಾಯಕತೆ ಇನ್ನೊಂದು ಕಾರಣ. ಗಂಡನ ಮನೆಯನ್ನು ಬಿಟ್ಟರೆ ಅವಳಿಗೆ ಬೇರೆ ಆಶ್ರಯವೇ ಇಲ್ಲ. ಇಂಥ ಸ್ಥಿತಿಯಲ್ಲಿ ದೌರ್ಜನ್ಯವನ್ನು ಅನಿವಾರ್ಯವಾಗಿ, ಮೌನವಾಗಿ ಅನುಭವಿಸುತ್ತ ನೆಲ ಕಚ್ಚಿ ನಿಲ್ಲಬೇಕಾದ ಹೆಣ್ಣಿನ ಅಸಹಾಯಕ ಚಿತ್ರ ಎದೆ ನಡುಗಿಸುವಂಥದು.

ಒಮ್ಮೆ ಹೀಗೇ, ಸೊಸೆಯನ್ನು ಬೆನ್ನಟ್ಟಿ ಹೊಡೆಯಲು ಹೋದ ಸಂಕ್ರವ್ವ ಸಿಟ್ಟಿನಲ್ಲಿ ಜೋಲಿ ತಪ್ಪಿ ಪಡಸಾಲೆಯ ಕಟ್ಟೆಯ ಮೇಲಿಂದ ಬಿದ್ದು ನಡ ಮುರಿದುಕೊಳ್ಳುತ್ತಾಳೆ. ಈಗ ಸೇಡು ತೀರಿಸಿಕೊಳ್ಳುವದು ಮಾದವ್ವನ ಸರದಿ. ಆಕೆ ಅತ್ತೆಗೆ ಯಾವ ಉಪಚಾರವನ್ನೂ ಮಾಡದೆ ಕೆಟ್ಟದಾಗಿ ನಡೆಸಿಕೊಳ್ಳುತ್ತಾಳೆ. ಅವಳು ಸತ್ತ ಮೇಲೆ ತನ್ನ ತಂಗಿಯ ಮಗ ನಿಂಗಣ್ಣನನ್ನು ತಂದು ಮನೆಯಲ್ಲಿಟ್ಟುಕೊಂಡು ಅವನಿಗೆ ಮದುವೆ ಮಾಡುತ್ತಾಳೆ. ಆಕೆಯನ್ನು ಕಂಡರೆ ನಿಂಗಣ್ಣನಿಗಷ್ಟೇ ಅಲ್ಲ, ಅವಳ ಗಂಡನಿಗೂ ಭಯ.

ತನ್ನ ಅತ್ತೆಯ ಕೈಯಲ್ಲಿ ಅಷ್ಟೆಲ್ಲ ಕಷ್ಟ ಸೋಸಿದ ಮಾದವ್ವ ತನ್ನ ಅತ್ತೆಯ ಮೇಲೆ ಸೇಡು ತೀರಿಸಿಕೊಂಡದ್ದು ಸಾಲಲಿಲ್ಲವೆಂಬಂತೆ ತನ್ನ ಸೊಸೆ ಚೆನ್ನವ್ವನನ್ನೂ ಕಾಡಿಸತೊಡಗುತ್ತಾಳೆ. ಗಂಡನೇನೋ ಅವಳನ್ನು ಪ್ರೀತಿಸುತ್ತಾನೆ. ಆದರೆ ಅವನ ಪ್ರೀತಿ ರಾತ್ರಿಯ ಏಕಾಂತಕ್ಕೆ ಮಾತ್ರ ಸೀಮಿತವಾದದ್ದು (ಭಾರತೀಯ ಕೂಡು ಕುಟುಂಬಗಳಲ್ಲಿ ಇದೂ ಒಂದು ಸಾಮಾನ್ಯ ಸಂಗತಿ). ಅತ್ತೆ ತನ್ನ ಸೊಸೆಗೆ ಉಣ್ಣಲು, ತೊಡಲು ಕಡಿಮೆ ಮಾಡುವುದಿಲ್ಲ. ಒಂದು ಸಲ ಇದ್ದೂರಲ್ಲೇ ಇದ್ದ ತವರುಮನೆಗೆ ಸೊಸೆ ಚಿನ್ನವ್ವ ತವರು ಮನೆಗೆ ಹೋದಾಗ ಮಾದವ್ವ ಸೊಸೆಯ ಮೈಮೇಲೆ ಹಾಕಿದ್ದ ವಸ್ತು-ವಡವೆ ಸಹಿತ ಮನೆ ಕಳುವಾದದ್ದೇ ಕಾರಣವಾಗಿ ಸೊಸೆಯನ್ನು ತವರುಮನೆಗೆ ಕಳಿಸಲು ಒಪ್ಪುವುದಿಲ್ಲ. ಅವರ ಎಲ್ಲ ಸಂಬಂಧ ಹರಿದುಕೊಂಡು ಸೊಸೆಗೂ ಅದೇ ನಿರ್ಬಂಧ ಹೇರುತ್ತಾಳೆ. ಕಳೆದುಹೋದ ವಸ್ತು-ಒಡವೆ ತಿರುಗಿ ಕೊಡಬೇಕೆಂದು ಅವಳ ಹಟ. ಜೀವ ತಡೆಯದೆ ಚಿನ್ನವ್ವ ಅತ್ತೆಗೆ ಎದ್ದು ಕಾಡಿದ್ದೇ ನೆಪವಾಗಿ ಮಾದವ್ವ, ತನಗೆ ತನ್ನ ಅತ್ತೆ ಮಾಡಿದಂತೆ, ಚುಟುಕಾ ಕಾಯಿಸಿ ಸೊಸೆಯ ಬೆನ್ನಿನ ಮೇಲೆ ಬರೆ ಎಳೆಯುತ್ತಾಳೆ. ಇದು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿರುವ ದೌರ್ಜನ್ಯವೆಂಬಂತೆ ಕತೆ ಚಿತ್ರಿಸುತ್ತದೆ. ಇದರಲ್ಲಿ ಯಾರಿಗೆ ಏನನ್ನಬೇಕೋ ತಿಳಿಯದ ಸ್ಥಿತಿಯಿದೆ. ಮೊದಲಿಗೆ ಮಾದವ್ವನ ಬಗೆಗೆ ಹುಟ್ಟುವ ಅನುಕಂಪ ಬದಲಾಗಿ ಅವಳ ಮೇಲೆ ಸಿಟ್ಟು ಬರುತ್ತದೆ. ಈಗ ಅನುಕಂಪ ಚಿನ್ನವ್ವನತ್ತ ವಾಲುತ್ತದೆ.

ಮಗಳ ಮೇಲೆ ನಡೆದ ದೌರ್ಜನ್ಯದ ಸುದ್ದಿ ಕೇಳಿದ ಚನ್ನಪ್ಪನ ಅಪ್ಪ ಗುರಪ್ಪ ಕೆಂಡಾಮಂಡಲವಾಗಿ ಮಾದವ್ವನ ಮನೆಗೆ ಬಂದರೂ, ಹಕ್ಕೆಯಲ್ಲಿ ತೂಗುಬಿಟ್ಟಿದ್ದ ಬಾರುಕೋಲು ಎಳೆದುಕೊಂಡು ಮಾದವ್ವನ ಮೇಲೆ ಮನಬಂದಂತೆ ಬೀಸುತ್ತಾನೆ. ಅವಳ ರಂಬಾಟವನ್ನು ನಿಂತು ನೋಡುವ ಯಾರೂ ಬಿಡಿಸಿಕೊಳ್ಳಲು ಬರುವುದಿಲ್ಲ. ಅಲ್ಲಿಗೆ ಮಾದವ್ವ ತಣ್ಣಗಾಗುತ್ತಾಳೆ ಇಲ್ಲಿಗೆ ಕತೆ ಮುಗಿಯಿತೆ? ಮೋಜಿನ ಸಂಗತಿ ಎಂದರೆ -



ಕತೆ ಇಲ್ಲಿಗೇ ಮುಗಿಯಲಿಲ್ಲ. ಚೆನ್ನವ್ವ ತವರ್ಮನೆಯಲ್ಲಿ ನಾಗರಪಂಚಮಿ ಹಬ್ಬ ಮಾಡಿ ಅತ್ತೆ ಮನೆಗೆ ಬಂದಳು. ಅವಳೀಗ ಆರು ಮಕ್ಕಳ ತಾಯಿ. ಗುರಪ್ಪ ಆಗಾಗ ಅವಳ ಮಗಳ ಮನೆಗೆ ಹೋಗಿ ಮೊಮ್ಮಕ್ಕಳನ್ನು ಆಡಿಸಿ, ನಕ್ಕು ನಲಿದು ಮಾದವ್ವನೊಡನೆ ಹರಟೆ ಹೊಡೆದು ಬರುತ್ತಾನೆ.

ಈ ಕತೆಯಲ್ಲಿರುವಂತೆ, ಕೌಟುಂಬಿಕ ಬಿಕ್ಕಟ್ಟು ಬಗೆಹರಿದು, ಕಥೆ ಸುಖಾಂತವಾಗಬೇಕೆಂಬ ತುಡಿತ ಶಾಂತಾದೇವಿಯವರ ಬಹುತೇಕ ಕತೆಗಳ ಹಿಂದಿರುವ ಒತ್ತಾಸೆಯಾಗಿದೆ. ಹಾಗೆಯೇ ಇದು ಜನಪ್ರಿಯ ಕತೆಗಾರಿಕೆಯ ಒಂದು ಮುಖ್ಯ ಲಕ್ಷಣವೂ ಹೌದು: ದುಷ್ಟರಿಗೆ ತಕ್ಕ ಶಿಕ್ಷೆಯಾಗಿ ಒಳ್ಳೆಯವರಿಗೆ ಸುಖವಾಗಬೇಕು; ಇದು ಓದುಗರಿಗೆ ಒಂದು ಬಗೆಯ ಮಾನಸಿಕ ಸಮಾಧಾನವನ್ನು ಕೊಡುತ್ತದೆ. ಕಲೆಗಾರಿಕೆಯ ದೃಷ್ಟಿಯಿಂದ ಸಮಾಧಾನ ಕೊಡುವ ಅಂಶವೆಂದರೆ, ಕಥೆಗೆ ಸಿಗುವ ಖಚಿತ ಮುಕ್ತಾಯ; ಇಲ್ಲದಿದ್ದರೆ ಓದುಗ ಗಲಿಬಿಲಿಗೊಳ್ಳುತ್ತಾನೆ ಮತ್ತು ಗಲಿಬಿಲಿಗೊಳ್ಳಲು ಸಾಮಾನ್ಯ ಓದುಗರು ಇಷ್ಟಪಡುವುದಿಲ್ಲ.

ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ, ಗ್ರಾಮೀಣ ಬದುಕಿನ ಬಗ್ಗೆ ಕತೆಗಾರ್ತಿಗಿರುವ ಆಪ್ತ ತಿಳುವಳಿಕೆ. ಹಳ್ಳಿಯ ಪರಿಸರದ ಚಿತ್ರಣ, ಅದರಲ್ಲೂ ವಿಶೇಷವಾಗಿ ಒಕ್ಕಲುತನಕ್ಕೆ ಸಂಬಂಧಿಸಿದ ವಿವರಗಳು ಅತ್ಯಂತ ನೈಜವಾಗಿವೆ. ಈ ಕತೆಯಲ್ಲಿ ಗುರಪ್ಪನ ಬಣಿವೆ ಒಟ್ಟುವ ಕೌಶಲ್ಯದ ಕುರಿತ ವಿವರಗಳನ್ನು ಈ ದೃಷ್ಟಿಯಿಂದ ನೋಡಬೇಕು. ಇಂಥ ಚಿತ್ರಣಗಳಲ್ಲಿ ಶಾಂತಾದೇವಿಯವರ ಭಾಷೆಗೆ ಹೊಸದೊಂದು ಆಯಾಮ ಕೂಡಿಕೊಳ್ಳುತ್ತದೆ. ಗ್ರಾಮೀಣ ಹಿನ್ನೆಲೆಯ ಅವರ ಎಲ್ಲ ಕತೆಗಳಿಗೂ ಈ ಮಾತು ಅನ್ವಯಿಸುತ್ತದೆ. ಇದು ನಮ್ಮ ಹೆಣ್ಣುಮಕ್ಕಳ ಬರವಣಿಗೆಯಲ್ಲಿ ಬಹಳ ಅಪರೂಪವಾದ ಸಂಗತಿ.

ಶಾಂತಾದೇವಿಯವರ ಗ್ರಾಮೀಣ ಕತೆಗಳೆಲ್ಲ ಹೀಗೆ ಸುಖಾಂತವಾಗಿಯೇ ಮುಗಿಯುತ್ತವೆಂದೇನಿಲ್ಲ. 'ಬಾರುಕೋಲು' ಕತೆಯ ಚಿನ್ನವ್ವನಂತೆ, ಜಾತ್ರೆಗೆಂದು ತವರುಮನೆಗೆ ಹೋಗಿಬರಬೇಕೆಂದು ಹಂಬಲಿಸುವ 'ಜಾತ್ರೆ ಮುಗಿದಿತ್ತು' ('ಜಾತ್ರೆ ಮುಗಿದಿತ್ತು'') ಕತೆಯ ಮಲ್ಲವ್ವನ ಆಶೆ, ತಪ್ಪು ತಿಳುವಳಿಕೆಯಿಂದಾಗಿ, ಭೀಕರ ದುರಂತದಲ್ಲಿ ಮುಗಿಯುತ್ತದೆ. ಆದರೂ ಹೆಣ್ಣಿನ ಸ್ಥಿತಿಯಲ್ಲೇನೂ ವ್ಯತ್ಯಾಸವಿಲ್ಲ.

೩

ಶಾಂತಾದೇವಿಯವರ ಎರಡನೆಯ ನೆಲೆಯಾದ ಮಧ್ಯಮ ವರ್ಗದ ಬದುಕಿನಲ್ಲಿ ಕೂಡ ಇದೇ ಕೌಟುಂಬಿಕ ಬಿಕ್ಕಟ್ಟು-ಇಕ್ಕಟ್ಟುಗಳು ಮುಂದುವರಿಯುತ್ತವೆ. ಒಂದು ವಿಶೇಷ ವ್ಯತ್ಯಾಸವೆಂದರೆ, ಗ್ರಾಮೀಣ ಬದುಕಿನಲ್ಲಿ ಹೆಣ್ಣು ದೈಹಿಕ ಮತ್ತು ಮಾನಸಿಕ ಹಿಂಸೆಗಳೆರಡನ್ನೂ ಅನುಭವಿಸುತ್ತಿದ್ದರೆ, ಇಲ್ಲಿ ಅದು ಸೂಕ್ಷ್ಮ ಮಾನಸಿಕ ಹಿಂಸೆಯಾಗಿ ಕಾಣಿಸಿಕೊಳ್ಳುತ್ತದೆ.

ಈ ಮಾತಿಗೆ ನಿದರ್ಶನವಾಗಿ 'ಮರುವಿಚಾರ' ("ಮರುವಿಚಾರ") ಎಂಬ ಕತೆಯನ್ನು ಪರಿಶೀಲಿಸಬಹುದು. ಎಲ್ಲ ದೃಷ್ಟಿಯಿಂದ ಇದು ಶಾಂತಾದೇವಿಯವರ ಪ್ರಾತಿನಿಧಿಕ ಕತೆ. ಅವರ ಕತೆಗಾರಿಕೆಯ ವೈಶಿಷ್ಟ್ಯವನ್ನು, ಶಕ್ತಿ ಮಿತಿಗಳನ್ನೆಲ್ಲ ಎತ್ತಿತೋರಿಸುವಂಥದು.

ಇದು ಸರೋಜಳ ಕಥೆ. ಹಾಗೆಯೇ ಅವಳ ತಾಯಿ ಗಂಗಮ್ಮನ ಕಥೆಯೂ ಹೌದು. ಗಂಡನ ಸ್ವಾರ್ಥ, ದೌರ್ಜನ್ಯಗಳಿಂದ ಬೇಸತ್ತು ಸರೋಜ ತವರಿಗೆ ಬಂದಿದ್ದಾಳೆ. ಮಗ-ಸೊಸೆ-ಮೊಮ್ಮಗನೊಂದಿಗೆ ಇರುವ ತಾಯಿ ಗಂಗಮ್ಮನಿಗೆ ಮಗಳು ಮನೆಗೆ ಬಂದು ಹಲವು ದಿನಗಳಾದರೂ ಗಂಡನಿಗೆ ಪತ್ರ ಬರೆಯದಿರುವುದು, ತಿರುಗಿ ಗಂಡನ ಮನೆಗೆ ಹೋಗುವ ವಿಷಯವನ್ನೇ ಎತ್ತದಿರುವುದು ಆತಂಕಕ್ಕೆ ಕಾರಣವಾಗುತ್ತದೆ. ಒತ್ತಿ ಕೇಳಿದಾಗ, ಸರೋಜ ಗಂಡ ತನ್ನನ್ನು ನಡೆಸಿಕೊಳ್ಳುವ ರೀತಿಯ ಬಗ್ಗೆ ಬೇಸರದ ಮಾತಾಡುತ್ತಾಳೆ. ಅವನು ತನ್ನ ವೈಯಕ್ತಿಕ ಆಶೆ-ಅಭಿರುಚಿಗಳಿಗೆ ಬೆಲೆಯನ್ನು ಕೊಡುವುದಿಲ್ಲವೆಂದು ದೂರುತ್ತಾಳೆ. ಒಂದು ಸಲ ತನ್ನನ್ನು ಹೊಡೆದೇ ಬಿಟ್ಟುದಾಗಿ ಹೇಳಿಕೊಳ್ಳುತ್ತಾಳೆ.



ಬಿ.ಎ. ಮಾಡಿರುವ ತಾನು ನೌಕರಿ ಹಿಡಿದು ಸ್ವತಂತ್ರ ಜೀವನ ಸಾಗಿಸಬೇಕು, ಸೊಸೆಯ ಕಿರಿಕಿರಿಯಿಂದ ಗಂಗಮ್ಮನನ್ನು ಬಿಡುಗಡೆ ಮಾಡಿ ತನ್ನೊಂದಿಗೆ ಕರೆದುಕೊಂಡು ಹೋಗಬೇಕು ಎಂದು ಅವಳ ಯೋಚನೆ. ಅವಳ ತಕರಾರುಗಳಿಗೆಲ್ಲ ಗಂಗಮ್ಮನಲ್ಲಿ ಸಮಾಧಾನದ ಉತ್ತರಗಳಿವೆ.

"ಇಂಥಾ ಪಲ್ಲೆ, ಇಂಥಾ ಅಡಿಗಿ, ತಿಂಡಿ-ತಿನಿಸು, ಏನಿದ್ದರೂ ಅವರು ಹೇಳಿದಾಂಗ ಮಾಡಬೇಕು ನಾನು. ನನಗೆ ಸೇರಿದ್ದು ಏನೂ ಮಾಡೂ ಹಾಂಗಿಲ್ಲ" ಎಂದು ಸರೋಜ ದೂರಿದರೆ, "ಬರೇ ಊಟಾ ತಿನಿಸಿನ ಬಗ್ಗೆ ಜಗಳ ಬಂದರ ನೀ ಅಷ್ಟ ಯಾಕ ಸಿಟ್ಟಿಗೇಳಬೇಕು? ನಾಲಿಗೀ ರುಚೀನ ಮುಖ್ಯ ಅಲ್ಲಲ್ಲ. ಅವರಿಗೇನ ಬೇಕು ಮಾಡಿ ಹಾಕಿದರಾತು" ಎಂದು ಗಂಗಮ್ಮನಿಗೆ ಇದು ದೊಡ್ಡ ಪ್ರಶ್ನೆ ಎನಿಸುವುದೇ ಇಲ್ಲ. ತನಗೆ ಬೇಕಾದ ಬಣ್ಣದ ಪತ್ತಲ ಉಡುವುದಕ್ಕೂ ತನಗೆ ಸ್ವಾತಂತ್ರ್ಯವಿಲ್ಲ ಎಂದು ಸರೋಜ ಸಿಟ್ಟುಮಾಡಿಕೊಂಡರೆ, "ಹೆಣ್ಣುಮಕ್ಕಳಿಗೆ ಸಹನಗುಣಾ ಇದ್ದಾಂಗ ಗಂಡಸರಿಗೆ ಇರೂದಿಲ್ಲವಾ. ಅವರಿಗೆ ಸಿಟ್ಟು ಜಾಸ್ತಿ.... ನೀ ಹೆರಳು ಹಾಕಿಕೊಳ್ಳೂದು, ಶೃಂಗಾರ ಮಾಡಿಕೊಳ್ಳೂದು, ಸೀರಿ ಉಡೂದು ಎಲ್ಲಾ ಅವರಿಗೆ ಛಂದ ಕಾಣತಿ ಅಂತ ಹೌದಲ್ಲೊ? ಅಂದ ಮ್ಯಾಲೆ 'ನೀವ ಹೇಳಿದಂಗ ಆಗಲಿ, ಬರ್ರಿ ನನ ಜೋಡಿ ಪ್ಯಾಟಿಗೆ. ನೀವs ಸೀರಿ ಆರಿಸರಿ. ನಾನು ಅದನ್ನ ಉಡತೇನಿ' ಅಂತ ಹೇಳಬೇಕು" ಎಂದು ಗಂಗಮ್ಮನ ಸರಳ ಪರಿಹಾರ. ಮಗಳ ನೆವದಿಂದ ಗಂಡ ಸೆಟಗೊಂಡು ಚಹಾ ಕುಡಿಯದೆ ಹೋದರು ಎಂದು ಸರೋಜ ಹೇಳಿದರೆ, "ಅಲ್ಲಾ ಸರೂ, ಗಂಡ ಚಹಾ ಕುಡೀದ ಹೋದ ನೀನರ ಹೇಳಬೇಕು 'ತಪ್ಪಾತು ಚಹಾ ಕುಡದು ಹೋಗರಿ' ಅಂತ" ಎಂದು ಗಂಗಮ್ಮ ಮಗಳ ನಡತೆಯ ಬಗ್ಗೇ ಆಕ್ಷೇಪಿಸುತ್ತಾಳೆ. ತಾನೂ ನೌಕರಿ ಮಾಡಿ ಗಳಿಸಬೇಕೆಂದರೆ ಅದಕ್ಕೆ ಗಂಡ ಬೇಡವೆನ್ನುತ್ತಾನೆಂದು ಸರೋಜ ಗಂಡನ ಬಗ್ಗೆ ತಕರಾರು ಹೇಳಿದರೆ, "ಹೆಣ್ಣುಮಕ್ಕಳು ಮನೀ ಬಿಟ್ಟು ಹೊರಗ ದುಡೀಲಿಕ್ಕೆ ಹೋದರ ನಾಲ್ಕು ಮಂದಿಯೊಳಗ ಅಡ್ಡಾಡಬೇಕಾಗತದ. ಕೆಟ್ಟವರು ಯಾರು, ಛೊಲೋರು ಯಾರು ಗೊತ್ತಾಗೂದಿಲ್ಲ. ಹೆಂಡತಿ ತಮ್ಮ ಖಾಸಗಿ ಸ್ವಂತ ವಸ್ತು ಅಂತ ಅಭಿಮಾನ ಇದ್ದವರು, ಅವಳು ಗೌರವಸ್ಥವಾಗಿ ಮನಿಯೊಳಗs ಇರಬೇಕು ಅಂತ ಇಚ್ಛಾ ಮಾಡತಾರ. ತಪ್ಪೇನಲ್ಲ ಅದು" ಎಂದು ಗಂಗಮ್ಮ ಅಳಿಯನನ್ನೇ ಮೇಲುಗಟ್ಟಿ ಮಾತಾಡುತ್ತಾಳೆ.

ಇಲ್ಲಿಯ ಸಂಭಾಷಣೆ ಸಮಸ್ಯೆಯನ್ನು ಕುರಿತು ತಾಯಿ -ಮಗಳ ನಡುವಿನ ಕೇವಲ ಚರ್ಚೆಯಲ್ಲ. ವಿಶೇಷವಾಗಿ ಸರೋಜಳ ಮಾತುಗಳಲ್ಲಿ ಅವಳಿಗೆ ಗಂಡನ ಬಗ್ಗೆ ಬೇಸರವಾಗುವುದಕ್ಕೆ ಕಾರಣವಾದ ಅನೇಕ ಘಟನೆಗಳು ಬಿಚ್ಚಿಕೊಳ್ಳುತ್ತವೆ. ಅವುಗಳಿಂದ ಕಥೆಯ ಮೈ ತುಂಬಿಕೊಳ್ಳುತ್ತದೆ. ಇದು ಶಾಂತಾದೇವಿಯವರಿಗೆ ಬಹಳ ಪ್ರಿಯವಾದ ತಂತ್ರ. ಒಂದು ರೀತಿಯಲ್ಲಿ ಇದು ಫ್ಲ್ಯಾಷ್ ಬ್ಯಾಕಿಗೆ ಅವರು ಕೊಟ್ಟ ಹೊಸ ರೂಪ.

ಇತ್ತೀಚಿನ ಸ್ತ್ರೀವಾದಿ ಆಲೋಚನೆಗಳ ಹಿನ್ನೆಲೆಯಲ್ಲಿ ನೋಡಿದಾಗ, ಸರೋಜಳ ನಿಲುವು ಆಧುನಿಕ ಮಹಿಳೆಯದಾಗಿಯೂ, ಗಂಗಮ್ಮನದು ಕುಟುಂಬ ವ್ಯವಸ್ಥೆಯಲ್ಲಿ ಗಂಡಿನ ಪರಮಾಧಿಕಾರವನ್ನು ಒಪ್ಪಿಕೊಂಡ ಸಾಂಪ್ರದಾಯಿಕ ನಿಲುವೆಂದೂ ಸರಳವಾಗಿ ಕಂಡೀತು. ಆದರೆ ಗಂಗಮ್ಮ ಬದುಕನ್ನು ಕಂಡವಳು; ವ್ಯಾವಹಾರಿಕ ತಿಳುವಳಿಕೆಯುಳ್ಳವಳು; ಹೆಣ್ಣಿನ ಸ್ಥಿತಿಯನ್ನು ಅರ್ಥಮಾಡಿಕೊಂಡವಳು. ಒಂದು ಕಾಲಕ್ಕೆ ಅವಳೂ ಗಂಡ-ಅತ್ತೆಯರ ದೌರ್ಜನ್ಯಕ್ಕೆ ಬೇಸತ್ತು ತವರುಮನೆಗೆ ಹೋಗಿದ್ದಳು. ಅವಳ ತಾಯಿ ಇನ್ನೂ ಹೆಚ್ಚು ಸಾಂಪ್ರದಾಯಿಕ ರೀತಿಯಲ್ಲಿ 'ನೀನು ಅಲ್ಲೇ ಇರಬೇಕು ಗಂಗೂ. ಸತ್ತರೂ ಅಲ್ಲೇ ಸಾಯಬೇಕು. ನಿನ್ನ ಮಕ್ಕಳ ಮಾರೀ ನೋಡಿಕೊಂಡಾದರೂ ಅಲ್ಲೇ ಇರು. ತಾಳಿಕೋ ಮಂದಿಯೊಳಗ ನಮ್ಮ ಮಾನಾ ಕಳೀಬ್ಯಾಡಾ, ಗಂಡ ಬಿಟ್ಟ ಗಯ್ಯಾಳಿ ಅಂತ ಅನಿಸಿಕೋಬ್ಯಾಡಾ. ಅವನ ಬಿಟ್ಟು ಬರೂದರಿಂದ ನಿನಗs ಹಾನಿ ಅದ. ಅವನಿಗೇನು, ಮತ್ತೊಂದು ಲಗ್ನಾ ಮಾಡಿಕೋತಾನ, ಮಕ್ಕಳ್ನೂ ಕೊಡದ ನಿನ್ನ ಒದ್ದು ಹೊರಗ ಹಾಕಿದರ ನೀ ಹ್ಯಾಂಗ ಜೀವಾ ಹಿಡಕೊಂಡು ಇರತಿ?' ಎಂದು ಹೇಳಿ ತಿರುಗಿ ಕಳಿಸಿದ್ದಳು. ಗಂಗಮ್ಮ ನೆನಪಿಸಿಕೊಂಡು ಹೇಳುವ ಈ ಮಾತುಗಳು ಪರೋಕ್ಷವಾಗಿ ಆಕೆ ಮಗಳಿಗೆ ಕೊಡುವ ಎಚ್ಚರಿಕೆಯ ಮಾತುಗಳೇ ಆಗಿವೆ. ಕಾಲ ಬದಲಾಗಿರಬಹುದು; ತಾಯಿಯರು ತಮ್ಮ ಹೆಣ್ಣುಮಕ್ಕಳಿಗೆ



ಕೊಡುವ ಉಪದೇಶದಲ್ಲಿಯ ಶಬ್ದಗಳು ಬದಲಾಗಿರಬಹುದು. ಆದರೆ ಹೆಣ್ಣಿನ ಅತಂತ್ರ ಸ್ಥಿತಿ ಮಾತ್ರ ಬದಲಾಗಿಲ್ಲ; ತಲೆಮಾರಿನಿಂದ ತಲೆಮಾರಿಗೆ ಅದು ಮುಂದುವರಿದುಕೊಂಡೇ ಬಂದಿದೆ ಎಂದು ಕತೆ ಸೂಚಿಸುತ್ತದೆ.

ಗಂಗಮ್ಮ ಮತ್ತು ಸರೋಜಳ ನಡುವಿನ ಸಂಭಾಷಣೆ ಇನ್ನೊಂದು ಹಂತದಲ್ಲಿ ಮುಂದುವರಿಯುತ್ತದೆ. ಸರೋಜ ಗಂಗಮ್ಮನ ಸೊಸೆ ಮೀರಾಳ ಮಾತಿನ ಬರಿಯ ಬಗ್ಗೆ ಪ್ರಸ್ತಾಪಿಸಿದಾಗ ಗಂಗಮ್ಮ 'ಇದೆಂಥಾ ಬರಿ ಸರೋಜ. ಇದು ಬರೇ ಮಾತಿನ ಬರಿ. ಬರೆ ಬರೇವ ಬೆಂಕಿಯಿಂದ ಬರಿ ಕೊಡಿಸಿ ಕೊಂಡಾಕಿಗೆ ಇದೆಂಥಾ ಬರೀ?" ಎಂದು ತನ್ನ ಗಂಡ ತನ್ನ ತೊಡೆಯ ಮೇಲೆ ಕಾಸಿದ ಕಡಚಿಯಿಂದ ಕೊಟ್ಟ ನಿಜವಾದ ಬರಿಯನ್ನು ಮಗಳಿಗೆ ತೋರಿಸುತ್ತಾಳೆ. ಬಸಿರಿಯಾಗಿದ್ದ ಗಂಗಮ್ಮನನ್ನು ಒದ್ದು, ತನ್ನ ಹೆಂಗಸಿಗೆ ಕೊಡಲು ಕೊರಳಲ್ಲಿಯ ಪುತಳೀ ಸರವನ್ನು ಕಸಿದುಕೊಂಡು ಹೋದ ಪ್ರಸಂಗ ಇನ್ನೊಂದು ಸಂದರ್ಭದಲ್ಲಿ ಬರುತ್ತದೆ. ಇನ್ನೂ ಆಗಾಗ ಕಾಣಿಸಿಕೊಳ್ಳುವ ಆ ನೋವನ್ನು ಗಂಗಮ್ಮ ಮಗಳಿಗೆ ತೋರಿಸುತ್ತಾಳೆ. ಮೊದಲಿನ ಸಂಭಾಷಣೆ ಸರೋಜಳ ಬದುಕಿನ ಘಟನೆಗಳನ್ನು ಬಿಚ್ಚಿದ್ದರೆ, ಇಲ್ಲಿಯದು ಗಂಗಮ್ಮನ ಬದುಕಿನಲ್ಲಿ ನಡೆದುಹೋದ ಘಟನೆಗಳನ್ನು ನಿರೂಪಿಸುತ್ತದೆ. ಈ ತಂತ್ರದಿಂದ ಶಾಂತಾದೇವಿಯವರು ಸಾಧಿಸಿರುವ ಮಿತವ್ಯಯವನ್ನು ಗಮನಿಸಬೇಕು. ಹಾಗೆಯೇ, ಯಾವ ಘಟನೆಯೂ ಎಳೆದು ತಂದದ್ದು ಎನಿಸದ ಸಹಜತೆಯನ್ನೂ.

ಇಲ್ಲಿ ಸರೋಜ ಅನುಭವಿಸಿದ ನೋವು ಗಂಗಮ್ಮ ಅನುಭವಿಸಿದ ನೋವಿನೊಂದಿಗೆ ತುಲನೆಯಾಗುತ್ತದೆ. ಬಹುಶಃ ಕೆಳಮಧ್ಯಮ ವರ್ಗಕ್ಕೆ ಸೇರಿದ ಗಂಗಮ್ಮನ ಕಾಲದ ದೈಹಿಕ ಹಿಂಸೆ ಸುಶಿಕ್ಷಿತ ಮಧ್ಯಮ ವರ್ಗಕ್ಕೆ ಸೇರಿದ ಸರೋಜಳ ಕಾಲದಲ್ಲಿ ಸ್ವಲ್ಪ ಕಡಿಮೆಯಾದಂತಿದೆ. ತನ್ನ ತಂದೆ ಹೆಂಡತಿಯ ಆಜ್ಞಾಧಾರಕನಾಗಿದ್ದುದರಿಂದ ತಾಯಿ ಸಹಜವಾಗಿಯೇ ಇದ್ದಳೆಂದು ಭಾವಿಸಿದ್ದ ಸರೋಜಳಿಗೆ ನಿಜ ಸಂಗತಿ ತಿಳಿದು ಅಘಾತವಾಗುತ್ತದೆ. ಆಕೆ ಅನುಭವಿಸಿದ ನೋವಿನ ಮುಂದೆ ತನ್ನದು ಏನೂ ಅಲ್ಲ ಎನಿಸುತ್ತದೆ. ಈ ಹೊಸ ತಿಳುವಳಿಕೆಯಲ್ಲಿ, ಗಂಡನಿಂದ ಬಂದ ಪತ್ರ ಮತ್ತು ಅಣ್ಣ-ಅತ್ತಿಗೆಯರ ನಡುವೆ ನಡೆದ ಸಣ್ಣ ಜಗಳ ಮತ್ತು ಪ್ರೀತಿಯ ಮರುಹೊಂದಾಣಿಕೆಯ ಮಾತುಕತೆ ಅವಳ ಮೊದಲಿನ ನಿರ್ಧಾರವನ್ನು ಬದಲಿಸುತ್ತವೆ. ಆಕೆ ಮತ್ತೆ ಗಂಡನ ಮನೆಗೆ ತಿರುಗಿ ಹೋಗುತ್ತಾಳೆ.

ಸರೋಜಳ ಗಂಡ ಕತೆಯಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವುದು ಕತೆಯ ಕಡೆಯ ಪ್ಯಾರಾದಲ್ಲಿ ಮಾತ್ರ. ಹೆಂಡತಿಯ ಆಗಮನದಿಂದ ಅವನಿಗೆ ಸಂತೋಷವಾಗಿದೆ. ಆದರೆ ಇದು ಅವನಿಗೆ ಹೆಂಡತಿಯ ಬಗ್ಗೆ ನಿಜವಾದ ಪ್ರೀತಿಯ ಸೂಚನೆಯೊ ಅಥವಾ ಕೇವಲ ದೈಹಿಕ ಬಯಕೆಯ ಈಡೇರಿಕೆಯ ನಿರೀಕ್ಷೆಯಿಂದ ಹುಟ್ಟಿದ ಸಂತೋಷವೋ ಗೊತ್ತಾಗುವುದಿಲ್ಲ. ಮುಖ್ಯವಾದ ಸಂಗತಿಯೆಂದರೆ, ಅವನಿಗೆ ಹೆಂಡತಿಯೊಂದಿಗಿನ ತನ್ನ ನಡತೆಯ ಬಗ್ಗೆ ಏನು ಹೇಳಿಕೊಳ್ಳುವುದಕ್ಕೂ ಅವಕಾಶ ಸಿಕ್ಕುವುದಿಲ್ಲ ಅಥವಾ ಕತೆಯ ತಂತ್ರವೇ ಅವನಿಗೆ ಈ ಅವಕಾಶವನ್ನು ಕೊಡುವುದಿಲ್ಲ. ಇದರಿಂದಾಗಿ ಕತೆಯ ನಿಲುವು ಒಮ್ಮುಖವಾಗುತ್ತದೆ. ಇದು ಕತೆಯ ಮುಖ್ಯ ಮಿತಿ. ಇದು ಶಾಂತಾದೇವಿಯವರ ಇಂಥ ಅನೇಕ ಕತೆಗಳ ಪ್ರಾತಿನಿಧಿಕ ಮಿತಿಯೂ ಹೌದು.

ಈ ಕತೆಯಲ್ಲಿ ಬರುವ ಕೆಲವು ವಿವರಗಳನ್ನು ವಿಶೇಷವಾಗಿ ಎತ್ತಿತೋರಿಸಬೇಕು, ಒಂದು, ಸೊಸೆ ಮತ್ತು ಸರೋಜಳ ಚಿಕ್ಕ ಮಕ್ಕಳಾದ ವಿನಯ-ಅನು ನಡುವೆ ನಡೆಯುವ ಜಗಳ. ಅನುವಿನ ಕೈಯಲ್ಲಿದ್ದ ಆಟಿಗೆ ತನಗೆ ಬೇಕೆಂದು ವಿನಯ ಬೆನ್ನು ಹತ್ತಿ ಓಡಿಬಂದು ಅವಳನ್ನು ಹೊಡೆದು ಕೆಡವಿ ಆಟಿಗೆಯನ್ನು ಕಸಿದುಕೊಳ್ಳುತ್ತಾನೆ. ಇದನ್ನು ನೋಡಿದ ಸೊಸೆ ಮೀರಾ ಅವನನ್ನು ಹೊಡೆದು, ರಮಿಸಿ, ಆಟಿಗೆಯನ್ನು ಅನುವಿಗೆ ತಿರುಗಿ ಕೊಡಲು ಬೆಲ್ಲದ ಆಶೆ ತೋರಿಸುತ್ತಾಳೆ. ಬೆಲ್ಲದ ಆಶೆಯ ಮುಂದೆ ಆಟಿಗೆಯಲ್ಲಿ ಆಸಕ್ತಿ ಕಳೆದುಕೊಂಡ ವಿನಯ ಅದನ್ನು ಅನುವಿನ ಕಡೆಗೆ ಒಗೆದು ತಾಯಿಯ ಹಿಂದೆ ಹೊರಡುತ್ತಾನೆ. ವಿನಯನಿಗೆ ಆಸಕ್ತಿಯಿಲ್ಲದ ಆಟಿಗೆಯಲ್ಲಿ ಅನುವಿಗಾದರೂ ಹೇಗೆ ಆಸಕ್ತಿ ಉಳಿದೀತು? ಅವಳೂ ಬೆಲ್ಲ ಕೇಳಿ ಅವರನ್ನು ಹಿಂಬಾಲಿಸುತ್ತಾಳೆ. ಇನ್ನೊಂದು,



ಲಟ್ಟಿಸಿ, ಹೊರಗೆ ಒಣಹಾಕಿದ ಹಪ್ಪಳ ಮಳೆ ಬಂದು ತೊಯ್ದು ಮತ್ತೆ ಮುದ್ದೆಯಾಗುವ ಪ್ರಸಂಗ. ಮತ್ತೊಂದು, ಗಂಗಮ್ಮ ಜಳಕ ಮಾಡುವಾಗ ಸರೋಜ ಅವಳ ಮೈ ತಿಕ್ಕುವುದು. ಇಂತಹ ವಿವರಗಳನ್ನು ಬಹುಶಃ ಮಹಿಳೆ ಮಾತ್ರ ಗಮನಿಸಬಲ್ಲಳು. ಆದರೆ ಇಂಥ ವಿವರಗಳ ಅಪೂರ್ವತೆಗಿಂತ ಅವು ಕಥೆಯಲ್ಲಿ ನಿರ್ವಹಿಸುವ ಪಾತ್ರ ಮಹತ್ವದ್ದಾಗಿದೆ. ಮೊದಲನೆಯ ಪ್ರಸಂಗ, "ಅನು ಊರಿಂದ ಬಂದಾಳ. ಇನ್ನೊಂದ ನಾಕ ದಿನಕ್ಕ ಮತ್ತ ಹೋಗತಾಳ. ಆಮ್ಯಾಲೆ ಬಾ ಅಂದರೂ ಬರೂದಿಲ್ಲಾ ಇದೆಲ್ಲಾ ನಿಂದs ಅದ. ಮನೀ ನಿಂದು. ಆಟಗಿ ನಿಂದು" ಎಂಬ ಮೀರಾನ ಮಾತಿಗೆ ಕಾರಣವಾಗಿ, ಇಲ್ಲಿಯೇ ಇರಬೇಕೆಂದು ಬಂದಿರುವ ಸರೋಜಳಿಗೆ ಇಲ್ಲಿ ತನಗೆ ಜಾಗವಿಲ್ಲ. ಎಂದು ಸೂಚ್ಯವಾಗಿ ಎಚ್ಚರಿಸುತ್ತದೆ. ಹಪ್ಪಳದ ಪ್ರಸಂಗದಲ್ಲಿ ಸೊಸೆ ಗಂಗಮ್ಮನ ಬಗ್ಗೆ ತೋರಿಸುವ ಕಿರಿಕಿರಿ ಸರೋಜಳನ್ನು ಕೆರಳಿಸುತ್ತದೆ. ಗಂಗಮ್ಮನ ಜಳಕದ ಪ್ರಸಂಗ ಅವಳ ಗಂಡ ಬಸಿರಿಯನ್ನು ಒದ್ದು ಹೋದ ಘಟನೆಯನ್ನು ಹೊರಗೆ ತರುತ್ತದೆ. ಗಂಗಮ್ಮ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದಂತೆ ಪರಿಸ್ಥಿತಿಗೆ ಒಗ್ಗಿಹೋಗಿರುವುದನ್ನು ಈ ವಿವರಗಳು ಸೂಚಿಸುತ್ತವೆ. ಹೀಗೆ, ಕತೆಯ ಸಣ್ಣಪುಟ್ಟ ವಿವರಗಳನ್ನು ಅರ್ಥಪೂರ್ಣವಾಗಿ ಬಳಸಿಕೊಳ್ಳುವುದರಲ್ಲಿ ಶಾಂತಾದೇವಿ ಯಶಸ್ವಿಯಾಗಿದ್ದಾರೆ.

೪

ಶಾಂತಾದೇವಿಯವರ ಕಥಾಲೋಕದ ಮೂರನೆಯ ನೆಲೆ ಕೆಳವರ್ಗದ ಪಾತ್ರಗಳಿಗೆ ಸಂಬಂಧಿಸಿದ್ದು. ಅವರ ಒಟ್ಟು ಕತೆಗಳಲ್ಲಿ ನಾಲ್ಕೈದು ಮಾತ್ರ ಈ ಜಗತ್ತಿಗೆ ಸೇರಿವೆ. ಅವೂ ಕೂಡ ಹಿಂದೆ ಹೇಳಿದಂತೆ - ಸ್ವತಂತ್ರವಾಗಿ ನಿರೂಪಿಸಿದ ಕತೆಗಳಲ್ಲ. ಮಧ್ಯಮವರ್ಗದ ಹೆಣ್ಣುಮಕ್ಕಳ ದೃಷ್ಟಿಕೋನದಿಂದ ಚಿತ್ರಿಸಿದವು. ಈ ವರ್ಗದ ಪಾತ್ರಗಳು ಹಳ್ಳಿಗಳಿಂದ ಬಂದು ನಗರದಲ್ಲಿ ನೆಲೆಸಿದವರು. ಕೂಲಿ ಇಲ್ಲವೆ ಮನೆಗೆಲಸ ಮಾಡಿ ಬದುಕು ಸಾಗಿಸುವವರು. ಇಲ್ಲಿಯೂ ಕೌಟುಂಬಿಕ ಬಿಕ್ಕಟ್ಟೇ ಕೇಂದ್ರ ವಸ್ತು. ಆದರೆ ಈ ಬಿಕ್ಕಟ್ಟಿನ ಸ್ವರೂಪ ಗ್ರಾಮೀಣ ಹಿನ್ನೆಲೆಯ ಕತೆಗಳಲ್ಲಿಯ ಬಿಕ್ಕಟ್ಟಿಗಿಂತ ಭಿನ್ನವಾಗಿದೆ. ಇಲ್ಲಿ ಅತ್ತೆ-ಮಾವ-ನಾದಿನಿಯರಿಲ್ಲ. ಇಲ್ಲಿಯದು ಗಂಡ-ಹೆಂಡತಿಯರ ನಡುವಿನ ನೇರ ಬಿಕ್ಕಟ್ಟು. ಈ ಕತೆಗಳಲ್ಲಿ ಗಂಡ ಹೆಂಡತಿಯನ್ನು ಶೋಷಿಸುತ್ತಾನೆ. ಜಗಳ, ಹೊಡೆತ-ಬಡಿತ ದೊಡ್ಡ ವಿಷಯವೇ ಇಲ್ಲ. ಈ ಬಿಕ್ಕಟ್ಟು ಮಧ್ಯಮ ವರ್ಗದ ಕತೆಗಳಲ್ಲಿಯ ಬಿಕ್ಕಟ್ಟಿಗಿಂತಲೂ ಭಿನ್ನವಾಗಿದೆ. ಮಧ್ಯಮವರ್ಗದಲ್ಲಿಯಂತೆ ಮರ್ಯಾದೆಗೆ ಅಂಜಿ ಮುಚ್ಚಿಟ್ಟುಕೊಳ್ಳುವಂಥದು ಏನೂ ಇಲ್ಲ. ಎಲ್ಲವೂ ಬಟಾಬಯಲು, ಆದರೂ ಇಲ್ಲಿಯೂ ಕೂಡಾ, ಕುಟುಂಬ ವ್ಯವಸ್ಥೆಯಲ್ಲೇ ಹೊಂದಿಕೊಂಡು, ಎಲ್ಲವನ್ನೂ ಸಹಿಸಿಕೊಂಡು ಬದುಕಬೇಕೆಂದು ಇಲ್ಲಿಯ ಸ್ತ್ರೀ ಪಾತ್ರಗಳು ಯತ್ನಿಸುತ್ತವೆ. ಎಷ್ಟೇ ಜಗಳಾಡಿದರೂ, ಪಾಲಿಗೆ ಬಂದದ್ದು ಪಂಚಾಮೃತ ಎಂದುಕೊಂಡು ಅನುಭವಿಸುತ್ತವೆ. ಮದುವೆಯೇ ಇಲ್ಲದೆ, ಕೆಂಚಪ್ಪನೊಂದಿಗೆ ಕೂಡಿಕೊಂಡು ಬದುಕುತ್ತಿರುವ 'ಇದಕ್ಕೇನನ್ನಬೇಕು?' ("ಬಯಲು-ಆಲಯ") ಕತೆಯ ಕೆಂಚವ್ವನಿಗೆ ಕೂಡಾ ತನ್ನ 'ಗಂಡ'ನ ಕುಟುಂಬದ ಬಗ್ಗೆ ಕಾಳಜಿ ಇದೆ.

ಈ ದೃಷ್ಟಿಯಿಂದ 'ಒಂದು ಮೂಗುತಿಯ ಕಥೆ' ("ನೀಲಿಮಾ ತೀರ") ಸ್ವಲ್ಪ ವಿವರವಾಗಿ ನೋಡಬಹುದು.

ಈ ಕತೆ ಚಿತ್ರಿತವಾಗಿರುವುದು ಸುಶಿಕ್ಷಿತ ಮಧ್ಯಮ ವರ್ಗದ ಗೃಹಿಣಿ ಸುನಂದಾನ ದೃಷ್ಟಿಕೋನದಿಂದ. ಸುನಂದಾ ಮತ್ತು ಅವಳ ಗಂಡ ವಿಶ್ವನಾಥರ ಸಂಬಂಧವೇನೂ ಹಾರ್ದಿಕವಾದದ್ದಲ್ಲ. ಸುನಂದಾ ಅರ್ಥಮಾಡಿಕೊಂಡಿರುವಂತೆ ವಿಶ್ವನಾಥ ಸ್ವಾರ್ಥಿ, ತನ್ನ ಹಿತದೃಷ್ಟಿಯಿಂದ ಮಾತ್ರ ಯೋಚಿಸುವವನು. ಒಂದು ಸಲ ಅವನ ನಡತೆಯ ಬಗ್ಗೆ ಸಂದೇಹ ಬಂದಾಗ ಸುನಂದಾ ಸೂಕ್ಷ್ಮವಾಗಿ ತಕರಾರು ಮಾಡಿದ್ದಳು. ಅಷ್ಟಕ್ಕೇ ವಿಶ್ವನಾಥ 'ನಾನೇನು ಮಾಡಿದರೂ ಪ್ರಶ್ನಿಸಲು ನೀನಾರು ?' ಎಂಬ ಧ್ವನಿಯಲ್ಲಿ ದನಿ ಏರಿಸಿ ಮಾತಾಡಿದ್ದ, ಇವಳೂ ಕೂಗಾಡಿ ಮಾತು ಬಿಟ್ಟು ತವರುಮನೆಗೆ ಹೊರಟುಹೋಗಿದ್ದಳು. "ಆದರೆ ಮುಂದೆ ಆದದ್ದೇನು? ಮಗಳು ಹುಟ್ಟಿದ ಮೇಲೆ ಕರೆಯಲು ಬಂದ ಗಂಡನೊಡನೆ ಸುಮ್ಮನೆ ಬಂದುಬಿಟ್ಟಿದ್ದಳು." ಶಾಂತಾದೇವಿಯವರ ಅನೇಕ ಜನ



ನಾಯಕಿಯರಂತೆ ಸುನಂದೆಯೂ ಗಂಡನೊಂದಿಗಿನ ಅಸಮಾಧಾನವನ್ನೆಲ್ಲ ಹತ್ತಿಕ್ಕಿಕೊಂಡು ಪುರುಷಪ್ರಧಾನ ಕುಟುಂಬ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾಳೆ.

ಇಂಥ ಸುನಂದೆಯ ದೃಷ್ಟಿಕೋನದಿಂದ, ಇವರ ಮನೆಯ ಹಿಂದಿನ ಕೋಣೆಯಲ್ಲಿ ವಾಸವಾಗಿರುವ ಮಾನವ್ವ-ನಿಂಗಪ್ಪರ ಕಥೆ ನಿರೂಪಿತವಾಗಿದೆ. ನಿಂಗಪ್ಪ ಏನೂ ಕೆಲಸ ಮಾಡದೆ ಹೆಂಡತಿಯ ದುಡಿಮೆಯ ಮೇಲೆಯೇ ಬದುಕಿದ್ದು ಗಂಡನ ಅಧಿಕಾರ ನಡೆಸುವವನು. ಇಬ್ಬರ ನಡುವೆ ನಿತ್ಯ ಜಗಳ, ಈ ಜಗಳವನ್ನು ವಿಶ್ವನಾಥ, ಮಾನವ್ವನೇಕೆ ಗಂಡನಿಗೆ ಸೋಡಚೀಟಿ ಕೊಟ್ಟು ಸ್ವತಂತ್ರವಾಗಿ ಬದುಕಬಾರದು - ಎಂದು ಸರಳವಾಗಿ ಕೇಳುತ್ತಾನೆ. ಆದರೆ ಇದೇ ಸ್ಥಿತಿಯಲ್ಲಿ ಗಂಡ-ಮಾವರ ತ್ರಾಸು ಸಹಿಸಿಕೊಂಡು ಬದುಕಿರುವ ತನ್ನ ದೊಡ್ಡಮ್ಮನ ಮಗಳು ಕುಮುದಿನಿಗೆ ಅವನು ಇಂಥ ಸಲಹೆ ಕೊಡಲಾರ. 'ಕುಮುದಿನಿ ಯಾರು, ಮಾನವ್ವ ಯಾರು ?" ಎಂದು ಅಸಹನೆಯಿಂದ ಪ್ರಶ್ನಿಸುತ್ತಾನೆ. ತನ್ನ ಸ್ವಂತ ಸ್ಥಿತಿಯ ಅರಿವಿರುವ ಸುನಂದಾಳಿಗೆ ಮಾನವ್ವನ ಕಷ್ಟವೇನೆಂದು ಅರ್ಥವಾಗುತ್ತದೆ. ಆಕೆ ಮಾನವ್ವನ ಸಮಸ್ಯೆಯನ್ನು ಸಹಾನುಭೂತಿಯಿಂದ ನೋಡಬಲ್ಲವಳಾಗಿದ್ದಾಳೆ.

ನಿಂಗಪ್ಪ ಹೆಂಡತಿಯನ್ನಲ್ಲದೆ ಮಲ್ಲವ್ವನೆಂಬ ಇನ್ನೊಬ್ಬ ಹೆಂಗಸಿನೊಂದಿಗೆ ಸಂಬಂಧ ಬೆಳೆಸುತ್ತಾನೆ. ಮಾನವ್ವ, ತನ್ನ ಅವ್ವ ಕೊಟ್ಟಿದ್ದ, ತಾನು ತನ್ನ ಮಗಳಿಗೆ ಕೊಡಬೇಕೆಂದು ಜತನದಿಂದ ಕಾಯ್ದುಕೊಂಡು ಬಂದಿದ್ದ ಮೂಗುತಿಯನ್ನು ನಿಂಗಪ್ಪ ಕದ್ದು ಒಯ್ದು ತನ್ನ ಹೆಂಗಸಿಗೆ ಕೊಡುತ್ತಾನೆ. ಇದರ ಸುಳಿವು ಹಿಡಿದ ಮಾನವ್ವ ಮಲ್ಲವ್ವನನ್ನು ಹುಡುಕಿಕೊಂಡು ಹೋಗಿ, ಅವಳೊಡನೆ ಮಾರಾಮಾರಿ ನಡೆಸಿ ರಣರಂಪ ಮಾಡುತ್ತಾಳೆ. ಆದರೂ ಅವಳ ಮೂಗುತಿ ಸಿಗುವುದಿಲ್ಲ. ನಿಂಗಪ್ಪ ಅವಳ ಬ್ಯಾಂಕಿನ ಉಳಿತಾಯದಲ್ಲೂ ಮೋಸ ಮಾಡುತ್ತಾನೆ.

ಗಂಡನ ಮೇಲೆ ಸಿಟ್ಟು, ತಿರಸ್ಕಾರ ಇದ್ದರೂ ಮಾನವ್ವ ಅವನಿಂದ ಬೇರೆಯಾಗಲಾರಳು. ಅಷ್ಟೇ ಅಲ್ಲ, ಮಲ್ಲವ್ವ ಗಂಡು ಮಗುವನ್ನು ಹಡೆದು ಸತ್ತಾಗ ಆ ಮಗುವನ್ನು ತಂದು ಜೋಪಾನ ಮಾಡಲು ನಿರ್ಧರಿಸುತ್ತಾಳೆ.

ಹೀಗೆ, ಶಾಂತಾದೇವಿಯವರ ಬಹುತೇಕ ಸಣ್ಣಕತೆಗಳು ಕೌಟುಂಬಿಕ ವ್ಯವಸ್ಥೆಯ ಇಕ್ಕಟ್ಟು ಬಿಕ್ಕಟ್ಟುಗಳನ್ನು ಚಿತ್ರಿಸುತ್ತವೆ ಮತ್ತು ಈ ವ್ಯವಸ್ಥೆಯಲ್ಲಿ ಹೆಣ್ಣು ಮಾಡಿಕೊಳ್ಳಬೇಕಾದ ಹೊಂದಾಣಿಕೆಯ ಬಗ್ಗೆ ಹೇಳುತ್ತವೆ. ಈ ಸಮಸ್ಯೆಯನ್ನು ಅವರು ಬೇರೆ ಬೇರೆ ಸಂದರ್ಭಗಳಲ್ಲಿ ಇಟ್ಟು ನೋಡಿದ್ದಾರೆ. ಆದರೂ ವಸ್ತು ಒಂದೇ ಆಗಿರುವುದರಿಂದ ಕತೆಗಳಲ್ಲಿ ಒಂದು ಬಗೆಯ ಏಕತಾನತೆ ಕಾಣುತ್ತದೆ.

ಹೊಂದಾಣಿಕೆ ಗಂಡು-ಹೆಣ್ಣು ಪರಸ್ಪರ ಮಾಡಿಕೊಳ್ಳಬೇಕಾದದ್ದು, ಆದರೆ ಶಾಂತಾದೇವಿಯವರ ಕತೆಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳುವವರು ಹೆಚ್ಚಾಗಿ ಹೆಣ್ಣುಮಕ್ಕಳೇ ಆಗಿದ್ದಾರೆ. 'ಮರುವಿಚಾರ' ಕತೆಯ ಗಂಗಮ್ಮ, ಸರೋಜ ಇಬ್ಬರೂ ಹೀಗೆ ಹೊಂದಾಣಿಕೆ ಮಾಡಿಕೊಂಡಿದ್ದಾರೆ. 'ಕಿತ್ತು ಹಚ್ಚಿದ ಗಿಡ'ದ ಬಂಗಾರೆಮ್ಮ, 'ಬಯಲು -ಆಲಯ'ದ ಜಾನಕ್ಕ, 'ದಿಗಂತ'ದ ರತ್ನಮ್ಮ, 'ಮಮತೆ'ಯ ಗಿರಿಜೆ, 'ಬೀಗದ ಕೈ'ಯ ಸುಮಿತ್ರಾ, 'ಗುಟ್ಟು'ದ ಗೌರಿ, 'ಆಸರ'ದ ಮಾಂತವ್ವ, 'ಅರ್ಧಾಂಗಿ'ಯ ಸುನೀತಾ, 'ಯಾರ ಮುಂದೂ ಹೇಳಬಾರದು'ದ ವಾಸಂತಿ, 'ನಿರುತ್ತರೆ'ಯ ಗೌರಕ್ಕ, 'ಕಥೆಯಾದಳು ಹುಡುಗಿ'ಯ ಪಾರ್ವತಿ, 'ಇದಕ್ಕೇನನ್ನಬೇಕು?'ದ ಕೆಂಚವ್ವ, 'ಒಂದು ಮೂಗುತಿಯ ಕಥೆ/ಯ ಮಾನವ್ವ... ಶಾಂತಾದೇವಿಯವರ ಎಷ್ಟೊಂದು ಪಾತ್ರಗಳು ಹೀಗೆ ಗಂಡಿನ ಅಧಿಕಾರವನ್ನು ಒಪ್ಪಿಕೊಂಡು, ದೌರ್ಜನ್ಯವನ್ನು ಸಹಿಸಿಕೊಂಡು, ಕೌಟುಂಬಿಕ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬದುಕುತ್ತವೆ ಎಂದು ನೋಡಿದರೆ ಆಶ್ಚರ್ಯವಾಗುತ್ತದೆ. ಕೆಲವು ಸಂದರ್ಭಗಳಲ್ಲಿ 'ಕಳಚಿ ಬಿದ್ದ ಪೈಜಣ'ದ ಸುಮಿತ್ರೆ, 'ಮೇಣಬತ್ತಿ' ("ಜಾತ್ರೆ ಮುಗಿದಿತ್ತು)" ಉಮಾರಂಥವರು ತಮ್ಮ ಮೈ ಮಾರಿಕೊಂಡಾದರೂ ತಮ್ಮ ರೋಗಿಷ್ಠ ಗಂಡಂದಿರ ಯೋಗಕ್ಷೇಮ ನೋಡಿಕೊಳ್ಳಲು ಮುಂದಾಗುತ್ತಾರೆ; ಇದಕ್ಕೆ ಪ್ರೀತಿ ಕಾರಣವೆಂದೂ ಹೇಳುವಂತಿಲ್ಲ ಎಂದರೆ ಕುಟುಂಬ ವ್ಯವಸ್ಥೆಯ ಮರ್ಯಾದೆ ಕಾಪಾಡಲು ಇವರು ಯಾವ ತ್ಯಾಗಕ್ಕೂ ಸಿದ್ಧವಿದ್ದಾರೆ. 'ಪ್ರಮೇಯ' ("ಜಾತ್ರೆ ಮುಗಿದಿತ್ತು")ದ ನಾಗವ್ವ, ತನ್ನ ಅಕ್ಕನ ಗಂಡನೇ ತನ್ನ ಬಸಿರಿಗೆ ಕಾರಣವಾಗಿದ್ದರೂ, ತನ್ನನ್ನು ತಾಯಿಯಂತೆ



ನೋಡಿಕೊಂಡಿದ್ದ ಅಕ್ಕನ ಸಂಸಾರವನ್ನು ಉಳಿಸುವುದಕ್ಕಾಗಿ, ಗುಟ್ಟು ಬಿಟ್ಟುಕೊಡದೆ, ತನ್ನ ಬಾಳನ್ನು ಹಾಳುಮಾಡಿಕೊಳ್ಳುವ ಉದಾಹರಣೆಯೂ ಇದೆ.

ಇವರೆಲ್ಲ ಪ್ರತಿಭಟನೆಯ ಶಕ್ತಿ ಕಳೆದುಕೊಂಡವರು. ಆಗಾಗ ಸಿಡಿಮಿಡಿ ಮಾಡಿದರೂ, ಕುಟುಂಬ ವ್ಯವಸ್ಥೆಯಿಂದ ಸಿಡಿದು ಹೊರಗೆ ಬರಲಾರರು, ಅಪರೂಪಕ್ಕೆ 'ಮತ್ತದೇ ರಾಗ' ("ನೀಲಿಮಾ ತೀರ")ದ ಇಂದಿರಾ, 'ಜನರೇನು ಬಲ್ಲರು ಒಳಗಾಗೊ ಕೃತ್ಯವ' ("ಗಾಂಧಿ ಮಗಳು") ದ ಉಮಾರಂಥ ನಾಲ್ಕಾರು ಜನ ಗಂಡನಿಂದ ಸಿಡಿದು ಬಂದು ಸ್ವತಂತ್ರ ಜೀವನ ನಡೆಸಿದವರಿದ್ದಾರೆ. ಆದರೆ ಅವರ್‍ಯಾರೂ ಸುಖಿಗಳಲ್ಲ. ಗಂಡನ ದೌರ್ಜನ್ಯದಿಂದ ತಪ್ಪಿಸಿಕೊಳ್ಳಬೇಕೆಂಬುದೊಂದೇ ಅವರ ಉದ್ದೇಶ. ತಮ್ಮ ಅಸ್ಮಿತೆಯನ್ನು ಸಾಧಿಸಿಕೊಳ್ಳಬೇಕೆನ್ನುವ, ತಮ್ಮ ವೈಯಕ್ತಿಕ ಅಭಿರುಚಿ-ಮಹತ್ವಾಕಾಂಕ್ಷೆಗಳನ್ನು ಈಡೇರಿಸಿಕೊಳ್ಳಬೇಕೆನ್ನುವ, ಒಂದು ಬಗೆಯ ಆಧ್ಯಾತ್ಮಿಕವೆನ್ನಬಹುದಾದ ತುಡಿತ ಇವರಲ್ಲಿ ಕಾಣುವುದಿಲ್ಲ. ಬಹಳಷ್ಟು ಜನ ಸರಳ ಹೊಂದಾಣಿಕೆಗೇ ತಿರುಗಿ ಬರುತ್ತಾರೆ.

ಶಾಂತಾದೇವಿಯವರ ಕತೆಗಳಲ್ಲಿ ಹೆಣ್ಣು ಹೀಗೆ ಮತ್ತೆ ಹೊಂದಾಣಿಕೆ ಮಾಡಿಕೊಳ್ಳುವುದರ ಅರ್ಥವೇನು? ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿಗೆ ಇದು ಅನಿವಾರ್ಯವೆಂದೆ? ಗಂಡು ಹೇಗಾದರೂ ಇರಲಿ, ಹೆಣ್ಣು ಮಾತ್ರ ಅವನನ್ನು ಅನುಸರಿಸಿಕೊಂಡು, ತನ್ನ ತಾಳ್ಮೆ, ತ್ಯಾಗಗಳಿಂದ ಕುಟುಂಬ ವ್ಯವಸ್ಥೆಯನ್ನು ಕಾಪಾಡಬೇಕೆಂದೆ? ಈ ವ್ಯವಸ್ಥೆಯಲ್ಲಿ ಹೆಣ್ಣಿನ ಪ್ರತಿಭಟನೆಯಿಂದ ಸುಖವಿಲ್ಲವೆಂದೆ ಅಥವಾ ಅದು ವ್ಯರ್ಥವೆಂದೆ?

ಶಾಂತಾದೇವಿಯವರಿಗೆ ಕುಟುಂಬ ವ್ಯವಸ್ಥೆಯಲ್ಲಿ ಶ್ರದ್ಧೆ ಎನ್ನುವಷ್ಟರಮಟ್ಟಿನ ವಿಶ್ವಾಸವಿರುವಂತಿದೆ. ಅದರ ಗೌರವವನ್ನು ಉಳಿಸಿಕೊಳ್ಳುವತ್ತ ಅವರ ಒಲವು ಇರುವಂತಿದೆ. ದೌರ್ಜನ್ಯವನ್ನು ಸಹಿಸಿಕೊಂಡು, ಸಮಸ್ಯೆಗಳನ್ನು ಎದುರಿಸಿ, ಕುಟುಂಬವನ್ನು ರಕ್ಷಿಸಿಕೊಳ್ಳುವ ಪಾತ್ರಗಳ ಬಗ್ಗೆ ಅವರಿಗೆ ಸಹಾನುಭೂತಿ ಇರುವುದಂತೂ ಸ್ಪಷ್ಟವಾಗಿಯೇ ಕಾಣುತ್ತದೆ. ಅದರಿಂದ ಸಿಡಿದು ಹೊರಬಂದ ಪಾತ್ರಗಳು ಕೂಡ ಕುಟುಂಬದ ಮೇಲಿನ ಆಶೆಯನ್ನು ಇನ್ನೂ ಉಳಿಸಿಕೊಂಡೇ ಇವೆ.

ಗಂಡಿನ ಅಧಿಕಾರ-ದೌರ್ಜನ್ಯಗಳ ವಿರುದ್ಧ ಪ್ರತಿಭಟಿಸಬೇಕು. ಆದರೆ ಅದು ಕುಟುಂಬ ವ್ಯವಸ್ಥೆಯನ್ನೇ ಮುರಿದುಬಿಡುವಷ್ಟು ದೀರ್ಘಕ್ಕೆ ಹೋಗಬಾರದು. ಇದು ನಮ್ಮ ಸುಶಿಕ್ಷಿತ, ಮಧ್ಯಮ ವರ್ಗದ ಮಹಿಳೆಯರ ವಿಶಿಷ್ಟ ಮನೋಧರ್ಮವೇ ಆಗಿದೆಯನ್ನಬಹುದು. ಇದಕ್ಕೆ ಶಾಂತಾದೇವಿಯವರು ಅಪವಾದವಲ್ಲ. ತನ್ನ ಹಿತಕ್ಕಾಗಿ, ಮಕ್ಕಳ ಹಿತಕ್ಕಾಗಿ, ಒಟ್ಟಿನಲ್ಲಿ ಕುಟುಂಬದ ಹಿತಕ್ಕಾಗಿ ಹೆಣ್ಣು ತಾಳಿಕೊಳ್ಳುವುದು, ಹೊಂದಾಣಿಕೆ ಮಾಡಿಕೊಳ್ಳುವುದು ಅನಿವಾರ್ಯ. ಅಪೇಕ್ಷಣೀಯ ಎಂಬಂತೆ ಈ ಕತೆಗಳು ನಿರೂಪಿತವಾಗಿವೆ.

ಆದರೆ ಆ ಹೊಣೆ ಹೆಣ್ಣು ಒಬ್ಬಳದು ಮಾತ್ರವೆ? ಗಂಡಿನ ದೌರ್ಜನ್ಯವನ್ನು ಸಹಜವೆಂದು ಕ್ಷಮಿಸಿಬಿಡಬೇಕೆ? ಇಂಥ ಪ್ರಶ್ನೆಗಳನ್ನು ಶಾಂತಾದೇವಿಯವರ ಕತೆಗಳು ಎದುರಿಸುವುದಿಲ್ಲ. ಗಂಡು ಕೂಡ ಇಂಥ ಬಿಕ್ಕಟ್ಟುಗಳನ್ನು ಎದುರಿಸುವುದಿಲ್ಲವೆ? ಅವನು ಹೊಂದಾಣಿಕೆ ಮಾಡಿಕೊಳ್ಳಲಾರದೆ? 'ತೆತ್ತ ಬೆಲೆ' ('ಬಯಲು-ಆಲಯ') ಒಂದೆರಡು ಕತೆಗಳಲ್ಲಿ ಇಂಥ ಸೂಚನೆಗಳಿದ್ದರೂ ಕುಟುಂಬ ವ್ಯವಸ್ಥೆಯಲ್ಲಿಯ ಗಂಡಿನ ಸಮಸ್ಯೆಗಳು ಶಾಂತಾದೇವಿಯವರ ಕತೆಗಳಲ್ಲಿ ಪೂರ್ಣಪ್ರಮಾಣದ ಅಭಿವ್ಯಕ್ತಿ ಪಡೆದಿಲ್ಲ. ಅದೇನೇ ಇದ್ದರೂ, ಗಂಡಿನ ಕ್ರೌರ್ಯ, ದಬ್ಬಾಳಿಕೆಗಳ ವಿರುದ್ಧ ಪ್ರತಿಭಟಿಸಬೇಕೆನ್ನುವ ಈಚಿನ ಉಗ್ರ ಸ್ತ್ರೀವಾದಿ ದೃಷ್ಟಿಕೋನಕ್ಕೆ ಶಾಂತಾದೇವಿಯವರ ನಿಲುವು ಸಾಂಪ್ರದಾಯಿಕವಾಗಿ ಕಂಡರೆ ಆಶ್ಚರ್ಯವಿಲ್ಲ.

ಶಾಂತಾದೇವಿಯವರ ಸಣ್ಣಕತೆಗಳಲ್ಲಿ ಪ್ರತಿಭಟನೆ ಇಲ್ಲವೆಂದೇನೂ ಅಲ್ಲ. ಆದರೆ ಅದರ ಗುರಿ ಬೇರೆಯಾಗಿದೆ. ಹರಕೆ ("ನೀಲಿಮಾ ತೀರ") ಅಂಥ ಯಶಸ್ವಿ ಕತೆಯಲ್ಲವಾದರೂ, ಬಸವಿ ಬಿಡುವ ಮೂಢ ಸಂಪ್ರದಾಯದ ವಿರುದ್ಧ,



ಅರ್ಥಾತ್ ಅದಕ್ಕೆ ಒತ್ತಾಯಿಸುತ್ತಿರುವ ತನ್ನ ತಾಯಿಯ ವಿರುದ್ಧ ಕಮಲೆ ಉಗ್ರ ಪ್ರತಿಭಟನೆ ಮಾಡಿ ಯಶಸ್ವಿಯಾಗುತ್ತಾಳೆ. ಯಶಸ್ವಿಯಾದ ಒಂದು ಕತೆ "ದೇವಿ' ("ನೀಲಿಮಾ ತೀರ"). ಮೂಢನಂಬಿಕೆಯೊಂದಕ್ಕೆ ತಾನೇ ಶರಣಾಗಿ, ಅದರಿಂದ ಸಾಧ್ಯವಾದ ಲಾಭ ಮಾಡಿಕೊಂಡು, ಕೊನೆಗೆ ಅದರಿಂದ ಬಿಡುಗಡೆ ಪಡೆದುಕೊಳ್ಳುವ ಪಾರಕ್ಕನ ಕತೆ ಬಂಡಾಯ ಸಾಹಿತ್ಯದ ಹಿನ್ನೆಲೆಯಲ್ಲಿ ಗಂಭೀರವಾಗಿ ಪರಿಗಣಿಸಬೇಕಾದದ್ದು. ಆದರೆ ಇವು ಅವರ ವಿಶಿಷ್ಟ ಕತೆಗಳೆಂದು ಹೇಳಲು ಬರುವುದಿಲ್ಲ.

ನವೋದಯದ ದಟ್ಟ ಹಿನ್ನೆಲೆಯಲ್ಲಿ ಬರವಣಿಗೆಯನ್ನು ಆರಂಭಿಸಿದ ಶಾಂತಾದೇವಿಯವರು ನವ್ಯ ಮತ್ತು ಬಂಡಾಯ ಚಳುವಳಿಗಳನ್ನು ಹಗುರಾಗಿ ಹಾದು ಬಂದಿದ್ದರೂ, ತಮ್ಮ ಮೂಲ ದ್ರವ್ಯವನ್ನು ಕಳೆದುಕೊಂಡಿಲ್ಲ. ಹೃದಯವಂತ ಗೃಹಿಣಿಯಾಗಿ ಅವರು ಬದುಕನ್ನು ಕಂಡಿದ್ದಾರೆ ಮತ್ತು ಅದೇ ದೃಷ್ಟಿಯಿಂದ ತಮ್ಮ ಕತೆಗಳನ್ನು ಹೇಳಿದ್ದಾರೆ. ಈ ನಿಟ್ಟಿನಲ್ಲಿ ಕಲಾತ್ಮಕವಾಗಿ ಯಶಸ್ವಿಯಾದ ಮತ್ತು ಹೆಣ್ಣಿನ ಸ್ಥಿತಿಯ ಬಗ್ಗೆ ಯೋಚಿಸ ಹಚ್ಚುವ ಕೆಲವು ಕತೆಗಳನ್ನು ಕೊಟ್ಟಿದ್ದಾರೆ.

-ಗಿರಡ್ಡಿ ಗೋವಿಂದರಾಜ

# ಕೃತಜ್ಞತೆಯ ನಾಲ್ಕು ಮಾತುಗಳು

ನನ್ನ ಮೊದಲ ಕಥಾಸಂಗ್ರಹ 'ಸಂಜೆಮಲ್ಲಿಗೆ' ೧೯೬೭ರಲ್ಲಿ ಪ್ರಕಟವಾಗಿದ್ದು ಏಳನೆಯ ಸಂಕಲನ 'ಗಾಂಧೀಮಗಳು' ೧೯೯೭ರಲ್ಲಿ ಹೊರಬಂದಿತು. ಕಥಾಮಾಧ್ಯಮವನ್ನೇ ನಾನು ಹೆಚ್ಚಾಗಿ ನೆಚ್ಚಿಕೊಂಡಿದ್ದರಿಂದ ಕಳೆದ ನಾಲ್ಕೂವರೆ ದಶಕದ ಅವಧಿಯಲ್ಲಿ ಬರೆದ ಕತೆಗಳ ಸಂಖ್ಯೆ ನೂರಕ್ಕೆ ಸಮೀಪಿಸಿವೆ. ಸಂಖ್ಯೆಗಿಂತ ಗುಣಮುಖ್ಯ ಎನ್ನುವ ಅರಿವೂ ನನಗಿದೆ. ನನ್ನ ಕಥೆಗಳು ಕಡಿಮೆಯೆಂದರೆ ನಾಲ್ಕು, ಹೆಚ್ಚೆಂದರೆ ಹದಿಮೂರು ಪುಟಗಳ ಮಿತಿಗೆ ಒಳಪಟ್ಟವುಗಳೇ. ಇವುಗಳಲ್ಲಿ ಮೂರು ಸಂಕಲನಗಳಿಗೆ ಮರುಮುದ್ರಣದ ಅವಕಾಶ ಒದಗಿಬಂದಿತು. ಎಲ್ಲ ಸಂಕಲನಗಳು ಲಭ್ಯವಿಲ್ಲದ ಸಂದರ್ಭದಲ್ಲಿ ಅವುಗಳನ್ನು ಸಮಗ್ರವಲ್ಲದಿದ್ದರೂ ಒಂದು ಮೊತ್ತದಲ್ಲಿ ಕೊಟ್ಟರೆ ಓದಿಗೆ, ಅಧ್ಯಯನಕ್ಕೆ ಅನುಕೂಲವಾಗುವದೆಂಬ ಸೂಚನೆಯನ್ನು ಹಿತೈಷಿಗಳು ಕೊಟ್ಟದ್ದುಂಟು. ಅಂಥ ಸಂದರ್ಭದಲ್ಲಿ ಪ್ರಿಯದರ್ಶಿನಿ ಪ್ರಕಾಶನದ ಡಾ. ಎಸ್. ವಿದ್ಯಾಶಂಕರ ಅವರು ೨೦೦೩ರಲ್ಲಿ 'ಕಥಾಮಂಜರಿ'ಯನ್ನು ಹಾಗೂ ಎರಡು ವರ್ಷಗಳ ನಂತರ 'ಇನ್ನೊಂದು ಸಂಪುಟ'ವನ್ನು ಪ್ರಕಟಿಸಲು ಮುಂದೆ ಬಂದದ್ದರಿಂದ ಆ ವಿಚಾರ ಕೃತಿಯಲ್ಲಿ ಬರಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕೆಲವರ್ಷಗಳಲ್ಲಿ ಆ ಸಂಪುಟಗಳ ಪ್ರತಿಗಳೂ ತೀರಿದ್ದರಿಂದ ಕನ್ನಡದಲ್ಲಿ ಕಥಾಸಾಹಿತ್ಯದ ಓದುಗರ ಸಂಖ್ಯೆಗೆ ಕೊರತೆಯಿಲ್ಲದಿರುವ ಸಂಗತಿ ನನಗೆ ಸಂತೋಷವನ್ನುಂಟು ಮಾಡಿತು. ಈಗ ನನ್ನ ಸಂತೋಷವನ್ನು ಇಮ್ಮಡಿಗೊಳಿಸುವ ಸಂದರ್ಭವೊಂದು ಒದಗಿಬಂದಿದೆ. ಕರ್ನಾಟಕದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಯಾದ ಸಪ್ನ ಬುಕ್ ಹೌಸ್ ನನ್ನ ಇದುವರೆಗಿನ ಕತೆಗಳ ಸಮಗ್ರ ಸಂಪುಟವನ್ನು ಕನ್ನಡ ರಾಜ್ಯೋತ್ಸವ ಸಂದರ್ಭದ ಪ್ರಕಟಣೆಯ ವಿಶೇಷ ಯೋಜನೆಯಡಿಯಲ್ಲಿ ಪ್ರಕಟಿಸಲು ಮುಂದೆ ಬಂದಿದೆ. ಅದಕ್ಕಾಗಿ ಈ ಪ್ರಕಾಶನ ಸಂಸ್ಥೆಯ ಒಡೆಯರಾದ ಶ್ರೀ ನಿತಿನ್ ಷಾ ಅವರಿಗೂ ವ್ಯವಸ್ಥಾಪಕರಾದ ಶ್ರೀ ಆರ್. ದೊಡ್ಡೆಗೌಡ ಅವರಿಗೂ ನಾನು ತುಂಬ ಆಭಾರಿಯಾಗಿದ್ದೇನೆ.

ಚಿಕ್ಕಂದಿನಿಂದಲೂ ನನ್ನಲ್ಲಿ ಸಾಹಿತ್ಯಾಭಿರುಚಿ ಬೆಳೆಯಲು ತಕ್ಕ ವಾತಾವರಣವನ್ನು ಒದಗಿಸಿದವರು ಮನೆಯಲ್ಲಿ ದೊಡ್ಡ ಗ್ರಂಥ ಭಾಂಡಾರವನ್ನು ನಿರ್ಮಿಸಿಕೊಂಡ ನನ್ನ ಪ್ರೀತಿಯ ತಂದೆ ದಿ. ಸಿದ್ಧಬಸಪ್ಪ ಗಿಡ್ನವರ ಹಾಗೂ ಕೊನೆಯುವರೆಗೂ ಓದಿನ ಹವ್ಯಾಸವನ್ನು ಉಳಿಸಿಕೊಂಡು ಬಂದ ಕನ್ನಡ ತಾಯಿ ದಿ. ಭಾಗೀರಥಿದೇವಿಯವರು. ಕತೆ ಬರೆಯಲು ಪ್ರೇರೇಪಿಸಿ ಪ್ರೋತ್ಸಾಹ ನೀಡುತ್ತ ಬಂದವರು ಪ್ರಿಯ ಸಂಗಾತಿ ಕವಿ ಚೆನ್ನವೀರ ಕಣವಿಯವರು. ಕಥೆಗಳು ಪ್ರಕಟವಾಗುತ್ತಿದ್ದಂತೆ ಓದಿ, ಚರ್ಚಿಸಿ, ಸಂತೋಷಪಟ್ಟವರು ನನ್ನ ಐವರು ಮಕ್ಕಳು ಹಾಗೂ ಅಕ್ಕ ಶಾಂತಾದೇವಿ ಮಾಳವಾಡರನ್ನೊಳಗೊಂಡ ಅಪಾರ ಬಂಧುಬಳಗ. ಇವರೆಲ್ಲರ ಆತ್ಮೀಯತೆ ನನಗೆ ಧನ್ಯತೆಯ ಭಾವವನ್ನು ತಂದುಕೊಟ್ಟಿದೆ.

ನೆನೆದುಕೊಂಡಂತೆಲ್ಲ ಬೇಂದ್ರೆ, ಆನಂದಕಂದ, ಸಿದ್ದಯ್ಯ ಪುರಾಣಿಕ, ಬಸವರಾಜ ಕಟ್ಟೀಮನಿ, ಡಾ. ಹಾ.ಮಾ. ನಾಯಕ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಗುರುಲಿಂಗ ಕಾಪಸೆ ಮೊದಲಾದ ಹಿರಿಯ ಸಾಹಿತಿಗಳ ಮೆಚ್ಚುಗೆಯ ಮಾತುಗಳು ನೆನಪಾಗುತ್ತವೆ. ಡಾ. ಜಿ.ಎಸ್. ಆಮೂರ, ಡಾ. ಶಂಕರ ಮೊಕಾಶಿ ಪುಣೇಕರ, ಪ್ರೊ. ಎಲ್. ಎಸ್. ಶೇಷಗಿರಿರಾವ್, ಪ್ರೊ. ಕ.ವೆಂ. ರಾಜಗೋಪಾಲ ಮೊದಲಾದವರ ವಿಮರ್ಶಾತ್ಮಕ ಮುನ್ನುಡಿಗಳಿಂದ ದೊರೆತ ಮಾರ್ಗದರ್ಶನವನ್ನು ನಾನು ಮರೆಯುವಂತಿಲ್ಲ.

ಸಾಹಿತ್ಯದಲ್ಲಿ ಶ್ರದ್ಧೆ ಕಾಳಜಿಗಳು ಅಪರೂಪವಾಗುತ್ತಿರುವ ಇಂದಿನ ದಿನಮಾನಗಳಲ್ಲಿ ಪ್ರಸಿದ್ಧ ವಿಮರ್ಶಕರಾದ ಡಾ. ಗಿರಡ್ಡಿ ಗೋವಿಂದರಾಜ ಅವರು ತಮ್ಮ ಬಿಡುವಿಲ್ಲದ ಕೆಲಸಗಳಲ್ಲಿಯೂ ಈ ಕತೆಗಳನ್ನೋದುವ ಶ್ರಮ



ತೆಗೆದುಕೊಂಡದ್ದಲ್ಲದೆ ವಿಮರ್ಶಾತ್ಮಕವಾದ ಮುನ್ನುಡಿಯನ್ನೂ 'ಕಥಾಮಂಜರಿ'ಗೆ ಬರೆದು ಉಪಕರಿಸಿದ್ದರು. ಅದನ್ನೇ ಈ ಸಂಪುಟಕ್ಕೂ ಉಪಯೋಗಿಸಲು ಅನುಮತಿ ನೀಡಿದ ಅವರಿಗೆ ಅನಂತ ಕೃತಜ್ಞತೆಗಳು.

ಪ್ರೊ. ಕೀರ್ತಿನಾಥ ಕುರ್ತಕೋಟಿಯವರು ಸಂಪಾದಿಸಿದ 'ನಡೆದು ಬಂದ ದಾರಿ' ಸಂಪುಟದಲ್ಲಿ ನನ್ನ ಮೊದಲ ಕಥೆ 'ಮಂಜು ಕರಗಿತು' ಪ್ರಕಟವಾದಾಗ (೧೯೬೦) ನನ್ನಲ್ಲಿ ಒಂದು ಬಗೆಯ ಆತ್ಮವಿಶ್ವಾಸ ಕುದುರಿತು. ನಂತರ ನನ್ನಿಂದ ಕತೆಗಳನ್ನು ಬರೆಯಿಸಿ ತಮ್ಮ ವಿಶೇಷ ಸಂಚಿಕೆಗಳಲ್ಲಿ ಪ್ರಕಟಿಸುತ್ತ ಬಂದ ಪತ್ರಿಕೆಗಳ ಸಂಪಾದಕ ವರ್ಗದವರಿಗೂ ಧಾರವಾಡ ಆಕಾಶವಾಣಿಯ ಅಧಿಕಾರಿಗಳೂ ನನ್ನ ಹಾರ್ದಿಕ ವಂದನೆಗಳು ಸಲ್ಲುತ್ತವೆ. ಇದುವರೆಗೆ ಪ್ರಕಟವಾಗಿರುವ ನನ್ನ ಕಥಾಸಂಕಲನಗಳ ಎಲ್ಲ ಪ್ರಕಾಶಕರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ನಮ್ಮ ದಾಂಪತ್ಯ ಜೀವನದ ಅರುವತ್ತನೆಯ ವರ್ಷದ ಸಂದರ್ಭದಲ್ಲಿ ಈ ಕೃತಿ ಪ್ರಕಟವಾಗುತ್ತಿರುವುದು ಒಂದು ಯೋಗಾಯೋಗ. ಹಾಗೆ ನೋಡಿದರೆ ಬರವಣಿಗೆಗಿಂತ ಸಾಹಿತ್ಯದ ಓದು ನನಗೆ ಹೆಚ್ಚು ಪ್ರಿಯವಾದುದು. ಸಹೃದಯರಾದ ಓದುಗರಿಗೆ ಮತ್ತೊಮ್ಮೆ ಧನ್ಯವಾದಗಳು.

ಧಾರವಾಡ — ಶಾಂತಾದೇವಿ ಕಣವಿ

ದಿನಾಂಕ : 10-7-2012

## ಪರಿವಿಡಿ

# ಮಂಜು ಕರಗಿತು

ಊಟ ಮುಗಿಸಿಕೊಂಡು ಕೈ ತೊಳೆದು ಎದ್ದು ಕೋಣೆಗೆ ಬರುವಷ್ಟರಲ್ಲಿಯೇ ಅಡಿಕೆ ತಂದು ಗಂಡನ ಕೈಗಿತ್ತಳು ಮಾಲಾ. ಅವಳ ರಸಿಕ ಗಂಡ ಅಡಿಕೆಗೆ ಕೈ ನೀಡದೆ 'ಆ' ಎಂದು ಬಾಯ್ತೆರೆದ. ನಗುನಗುತ್ತ ಅವನ ಬಾಯಿಗೆ ಅಡಿಕೆ ಪುಡಿ ತುಂಬಿದಳು. ಅದೇ ಹೊತ್ತಿಗೆ ರಸಿಕ ದಂಪತಿಗಳ ಪುತ್ರ ಮುರಲಿ "ಅಪ್ಪಾ ನೀ ಆಪೀಚು ಹೋಗಬ್ಯಾಡಾ" ಎಂದು ರಾಗವೆಳೆಯುತ್ತ ಅಲ್ಲಿಗೆ ಬಂದ. ಅವನನ್ನೆತ್ತಿಕೊಂಡು ಮನೋಹರ "ಆಪೀಚಿಗೆ ಹೋಗದಿದ್ರೆ, ಹೆಂಗಪ್ಪಾ, ನಮ್ಮ ಚಾಹೇಬ್ರು ಬೈತಾರ" ಎಂದು ಅವನ ಭಾಷೆಯಲ್ಲಿಯೇ ಮಾತನಾಡಿದ. ಬೂಟು ಒರೆಸುತ್ತಿದ್ದ ಮಾಲೂ ಇಬ್ಬರ ಮಾತು ಕೇಳಿ ನಕ್ಕಳು. ಆದರೆ ಅದೊಂದು ಉದಾಸೀನ ನಗುವಾಗಿತ್ತು. ಅವಳ ಮುಖಕ್ಕೆ ಮ್ಲಾನತೆ ಮುಸುಕು ಹಾಕಿತ್ತು. ಮನೋಹರ ಬೂಟು ಹಾಕಿಕೊಂಡು ಹೊರಗೆ ನಡೆದ, ಮುರಲಿ ಅವನ ಕೈಯಲ್ಲಿ. ಮಾಲೂ ಗಂಡನ ಕೊಡೆ ಕೈ ಚೀಲಗಳನ್ನು ಹಿಡಿದುಕೊಂಡು ಮುರಲಿಯನ್ನು ಮಾಲೂನ ಕೈಗೆ ಕೊಟ್ಟು ಎರಡು ಚಾಕಲೇಟುಗಳನ್ನು ಅಳುತ್ತಿರುವ ಮುರಲಿಯ ಕೈಗಿಟ್ಟು ಸಮಾಧಾನಪಡಿಸಿದ. ಮಾಲೂನ ಮುಖ ದಿನದಂತೆ ಅರಳಿಲ್ಲವೆಂಬುದನ್ನು ಆಗ ಗಮನಿಸಿದ.

"ಮಾಲೂ, ಮೈಯಾಗ ಆರಾಮ ಇಲ್ಲೇನು?"

"ಏನಿಲ್ಲ, ಆರಾಮ ಇದ್ದೀನಿ."

"ಮತ್ತ ಹಂಗ್ಯಾಕ ಮುಖಾ ಸಪ್ಪಗ ಮಾಡೀದಿ, ಹೇಳು ? ನಿನಗೇನಾರ ತ್ರಾಸ ಆದರ ಹೆಚ್ಚು ಕೆಲಸಾ ಮಾಡಬ್ಯಾಡಾ ಅಂತ ಎಷ್ಟು ಸಾರೆ ಹೇಳಿಲ್ಲಾ ನಾ ನಿನಗ ?"

"ಕೆಲಸದ್ದು ಏನೂ ತ್ರಾಸ ಇಲ್ಲ, ಹಾಂಗs ಸುಮ್ಮನs....."

"ಯಾಕ ಏನು ಚಿಂತೀ ಮಾಡತೀ ? ನಿಮ್ಮ ತಾಯಿ ಜೀವ ನೆನಸ್ತದೇನು ? ಬೆಳಗಾಂವಿಗೆ ಹೋಗಿ ಬಾ ನಾಲ್ಕ ದಿನಾ. ಜೋಡಿಗೆ ಮಾಧೂನ ಕಳಿಸಿಕೊಡತೀನಿ."

"ಇಲ್ಲ. ನಾ ಊರಿಗೇನೂ ಹೋಗೂದಿಲ್ಲ. ಇಲ್ಲೇ ಇರತೀನಿ."

"ಮತ್ತ ನಿನಗೆ ಏನಾರೆ ಬೇಕಾದ್ರ ಹೇಳು, ಬರುವಾಗ ಪ್ಯಾಟ್ಯಾಗ ಹೋಗಿಬರ್ತೀನಿ. ಆಗ ತರ್ತೀನಿ."

"ನನಗ ಏನೂ ಬ್ಯಾಡ ಮಾರಾಯ್ರ. ನೀವು ಲಗೂನ ಮನೀಗೆ ಬಂದ್ರ ಸಾಕು. ಅದs ದೊಡ್ಡ ಉಪಕಾರ ಆಗ್ತದ ನನ್ನ ಮ್ಯಾಲೆ. ಮುಂಜಾನೆ ಹತ್ತೂವರಿಗೆ ಹೋದವರು ಒಮ್ಮೆಲೆ ಸಂಜೆ ಏಳಕ್ಕ ಬರಿತೀರಿ. ಅಲ್ಲೀತನಕಾ ನಿಮ್ಮನ್ನ ನೋಡದs ಹ್ಯಾಂಗ ಇರಲಿ ಅನ್ನೋದೊಂದs ಚಿಂತಿ ನನಗ. ಬೇಕಾದಷ್ಟು ಕೆಲಸ ಇರಲಿ. ಅದರಿಂದ ದೇಹಕ್ಕ ಶ್ರಮಾ ಆಗಲಿ. ಒಂದು ಸಾರೆ ನೀವು ಪ್ರೀತಿಯಿಂದ ನನ್ನ ತಲಿ ಮ್ಯಾಲೆ ಕೈಯಾಡಿಸಿ 'ಮಾಲೂ' ಅಂತ ಕರದರ ಸಾಕು. ತ್ರಾಸೆಲ್ಲಾ ಎಲ್ಲೋ ಮಾಯ ಆಗ್ತದ. ನಿಮಗ ನೋಡಿದರ ಆಫೀಸಿನ ಕೆಲಸ, ಗೆಳೆಯರ ಬಳಗ, ಇದರೊಳಗ ಅಷ್ಟಕ್ಕೂ ಪುರಸತ್ತು ಸಿಗೂದಿಲ್ಲ. ಹಿಂಗ ಯಂತ್ರದ್ಹಾಂಗ ಜೀವನ ನಡಿಸಿ ಹ್ಯಾಂಗ ನಕ್ಕೋತ ಇರಬೇಕೋ ಏನೋ... ಕಣ್ಣು ತುಂಬಿ ಬಂದವು. ಮನೋಹರ ನಕ್ಕು "ಹುಚ್ಚೀs, ಇಷ್ಟಕ್ಕೆಲ್ಲಾ ಅಳತಾರೇನ. ನಾನರೇ ಏನ ಮಾಡ್ಲಿ ? ಮುಂಜಾನಿಂದ ಸಂಜೀತನಕಾ ಆಫೀಸಿನ ಕೆಲಸಾನs ಆಗ್ತದ. ಆದಿತ್ಯವಾರ ಯಾವದರೇ ಸಿನಿಮಾಕ್ಕ ಹೋಗಿ ಬರೂಣಂತ. ನಿನಗ ಬ್ಯಾಸರಾಗಿದ್ದರ ಮಧ್ಯಾಹ್ನ ನಿನ್ನ ಗೆಳತಿ ಮನೀಗೆ ಹೋಗಿಬಾ. ನೋಡು ನಿನ್ನ ಕೂಡ ಮಾತಾಡಿಕೋತ ನಿಂತೆ. ಟೈಮ ಆಗಿಹೋಯ್ತು" ಎಂದು ಗೇಟಿಗೆ ಚಿಲಕ ಹಾಕಿ ಮುಂದೆ ನಡೆದ. ಮುರಲಿ ಬಾಯಲ್ಲಿ ಚಾಕಲೇಟು ತುಂಬಿಕೊಂಡು

ಅಪ್ಪನಿಗೆ 'ಟಾ ಟಾ' ಮಾಡಹತ್ತಿದ. ಮಾಲೂ ಗಂಡ ಹೋಗುವದನ್ನೇ ನೋಡುತ್ತ ನಿಂತಿದ್ದಳು. ಆ ರಸ್ತೆಯ ಕೊನೆಯಲ್ಲಿ ಗಂಡ ಹೊರಳಿದ ಮೇಲೆಯೇ ಈಚೆಗೆ ತಿರುಗಿದಳು. ಬಗಲಿಗೊಂದು ಚೀಲವನ್ನು ಹಾಕಿಕೊಂಡು ಹೆಗಲ ಮೇಲೆ ಮಗನನ್ನು ಕುಳ್ಳಿರಿಸಿಕೊಂಡು ಬರುತ್ತಿದ್ದ ನಿಂಗವ್ವ "ಏನ್ರೀ ಅವ್ವಾರs, ಅಪ್ಪಾ ಅವರ್ನೇಟೊತ್ತ ನೋಡಕೊಂತ ನಿಂತೀರಲ್ರಿ. ಎಂದೂ ನೋಡದವರಾಂಗ" ಎಂದು ನಕ್ಕಳು. ಮಾಲೂ ನಕ್ಕು "ಹೌದs ಈಗ ಹೋದ್ರ ಒಮ್ಮೇ ಸಂಜೀಗೆ ಬರ್ತಾರ. ಅದಕ್ಕs ನೋಡತಿದ್ದೆ. ನಿನಗೇನು, ಗಂಡ ಯಾವಾಗಲೂ ನಿನ್ನ ಬೆನ್ನಹಚ್ಚಿಕೊಂಡು ಅಡ್ಡ್ಯಾಡತಾನ. ಎಲ್ಲಿ ಅದಾನ ಫಕ್ಕೀರ ?" ಎಂದಳು.

"ಹಿಂದಿನ ಬಂಗ್ಲೇದವರ ಮನ್ಯಾಗ ಕಲಾಯಿ ಮಾಡೂವ ಅದಾsವೇನ ಕೇಳಲಿಕ್ಕೆ ಹೋಗ್ಯಾನ್ರಿ. ನಿಮ್ಮೂ ಭಾಂಡೀ ಅದಾವೇನ್ರಿ?"

"ಗಂಡನ ನೆನಪು ತೆಗೆದ ಕೂಡಲೆ ಸುದ್ದೀನs ಹಾರಿತೇನs ನಿಂಗವ್ವಾ. ನಮ್ಮೂ ಭಾಂಡಿ ಕಲಾಯಿ ಮಾಡಿ ಇನ್ನೂ ಎಂಟ ದಿನಾ ಆಗಿಲ್ಲಾ" ಎಂದು ಚೇಷ್ಟೆ ಮಾಡಿದಳು ಮಾಲೂ. ಗಂಡನ ಕೂಗು ಕೇಳಿದ ನಿಂಗವ್ವ ಪಕ್ಕದ ಮನೆಯ ಕಡೆಗೆ ಹೋದಳು.

ಮಾಲೂ ಮುರಲಿಯನ್ನೆತ್ತಿಕೊಂಡು ನಿಧಾನವಾಗಿ ಹಿಂತಿರುಗಿದಳು. ಅವಳ ಅತ್ತೆ ರೊಟ್ಟಿ ಮುಗಿಸಿ ಕೈ ತೊಳೆಯುತ್ತಿದ್ದರು. ಅವಳು ಮುರಲಿಗೆ ಅನ್ನ ಉಣ್ಣಿಸಿ ಮಲಗಿಸಿದಳು. ಅರಿವೆಗಳಿಗೆಲ್ಲ ಸಾಬೂನು ಹಚ್ಚಿ ಒಗೆದು ಹಾಕಿ ತಾನೂ ಸ್ನಾನ ಊಟ ತೀರಿಸಿ ಅಡಿಗೆ ಮನೆಯನ್ನೆಲ್ಲ ಸ್ವಚ್ಛ ಮಾಡಿ ಹೊರಗೆ ಬಂದು ಕೈಯಲ್ಲೊಂದು ಪುಸ್ತಕ ಹಿಡಿದು ಕಾಟಿನ ಮೇಲೆ ಅಡ್ಡಾದಳು. ಓದಲು ಮನಸ್ಸು ಬರಲಿಲ್ಲ, ನಿದ್ರೆಯೂ ಬರಲಿಲ್ಲ.

ಏನೋ ಒಂದು ಬಗೆಯ ಬೇಸರ ಕಾಡುತ್ತದೆ. ನೋಡಿದರೆ ತನಗಾವ ಕೊರತೆಯೂ ಇಲ್ಲ. ಸುರೂಪಿಯೂ ಸುಶಿಕ್ಷಿತನೂ ಗುಣವಂತನೂ ಆದ ಗಂಡ ಸಿಕ್ಕಿದ್ದ. ಕೈ ತುಂಬ ಸಂಬಳವಿದೆ. ತಾನು ಬೇಡಿದುದೆಲ್ಲ ಸಿಗುತ್ತದೆ. ಗಂಡು-ಹೆಣ್ಣು ಮಕ್ಕಳಾಗಿವೆ. ಅತ್ತೆ ತನಗೇನೂ ತೊಂದರೆ ಕೊಡದ ಮನೆ. ಕೆಲಸ -ಬೊಗಸೆಗಳಲ್ಲೆಲ್ಲ ನೆರವಾಗುತ್ತಾರೆ ಎಂದ ಮೇಲೆ ತನಗೆ ಈ ಅತೃಪ್ತಿ ಏಕೆ ? ನಿಧಾನವಾಗಿ ಯೋಚಿಸಿದಳು......

ಮೊದಲಿನಿಂದಲೂ ಶಾಲೆಯಲ್ಲಿ ಅವಳು ಜಾಣ ಹುಡಿಗೆ. ವಿದ್ಯಾಪ್ರಿಯರಾದ ಅವಳ ತಂದೆ ಅವಳ ಚುರುಕು ಬುದ್ಧಿಗೆ ಲಕ್ಷ್ಯಕೊಟ್ಟು ಅವಳಿಗೆ ಕಾಲೇಜು ಶಿಕ್ಷಣ ಕೊಡಿಸಬೇಕೆನ್ನುವ ಇಚ್ಛೆಯವರಿದ್ದರು. ಅದೇ ಭೂಮಿಕೆಯಲ್ಲಿಯೇ ಅವಳ ಪಾತ್ರ ರೂಪುಗೊಂಡಿತು. ಮನೆಗೆಲಸಗಳಿಗೆ ವಿಶೇಷ ಲಕ್ಷ್ಯ ಕೊಡಲಿಲ್ಲ. ದಿನ ದಿನವೂ ಪುಸ್ತಕಗಳೊಡನೆಯೇ ಮಾತನಾಡುತ್ತ ಅವುಗಳ ಒಡನಾಡಿಯಾದಳು. ಕರೆದಾಗ ಹೋಗಿ ಉಣ್ಣುವದು, ಚಹ ಕುಡಿಯುವದು, ತಂದುಕೊಟ್ಟಂಥ ಅರಿವೆ ತೊಡುವದು ಅವಳಿಗೆ ರೂಢಿಯಾಯಿತು. ತಂದೆ -ತಾಯಿ, ಅಕ್ಕ-ತಂಗಿ, ಅಣ್ಣ-ಅತಿಥಿಗಳು ಯಾರೂ ಅವಳ ಲಕ್ಷ್ಯವನ್ನು ಸೆಳೆಯಲು ಸಮರ್ಥರಾಗಲಿಲ್ಲ. ತನ್ನದೇ ದಾರಿಯಲ್ಲಿ ನಡೆಗಿದ್ದಳು. ತಾಯಿಗೆ ಅವಳದೇ ಚಿಂತೆ. ಸಂಸಾರದ ಬಗ್ಗೆ ಮಾಲೂಗೆ ಎಳ್ಳಷ್ಟೂ ಆಕರ್ಷಣೆ ಇಲ್ಲ; ಮುಂದೆ ಹೇಗೆ ? ಎಂದು ಯೋಚಿಸಿ ಹಣ್ಣಾದರು ಅವಳ ತಾಯಿ. ಪದವೀಧರಳನ್ನಾಗಿ ಮಾಡಿ ಅವಳೊಬ್ಬಳನ್ನೇ ಈ ಪ್ರಪಂಚದಲ್ಲಿ ಬಿಡಲು ತಂದೆ - ತಾಯಿಗಳಿಬ್ಬರಿಗೂ ಹೆದರಿಕೆ. ಅವಳಿಗೆ ಅನುರೂಪನಾದ ವರನನ್ನು ಹುಡುಕಲು ತಾಯಿ ಒತ್ತಾಯಿಸತೊಡಗಿದರು. ಅವರ ಸುದೈವಕ್ಕೆ ಸರಿಯಾಗಿ ಆ ಸಲ ರಜೆಗೆ ಊರಿಗೆ ಹಿಂತಿರುಗುವಾಗ ಅವಳ ಅಣ್ಣ ಮಧುಕರ ತನ್ನ ಸ್ನೇಹಿತ ಮನೋಹರನನ್ನು ಜೊತೆಗೆ ಕರೆತಂದ. ಪ್ರತಿಸಲವೂ ತನ್ನೊಡನೆ ಬರಲು ಮನೋಹರನನ್ನು ಒತ್ತಾಯಿಸುತ್ತಲೇ ಇದ್ದ ಮಧುಕರ. ಆದರೆ ಒಂದಿಲ್ಲೊಂದು ಕಾರಣದಿಂದ ಅವನು ತಪ್ಪಿಸಿಕೊಳ್ಳುತ್ತಿದ್ದ. ತನ್ನ ಊರನ್ನು ಬಿಟ್ಟು ಇನ್ನೆಲ್ಲಿಗೆ ಹೋಗುವದನ್ನೂ ಮನೋಹರ ಇಚ್ಛಿಸಲಾರ. ಮಧುಕರ ತನ್ನ ಮನೆಯವರ ಪರಿಚಯ ಮಾಡಿಕೊಡುವೆನೆಂದೂ ಬೆಳಗಾಂವಿಯ ಸುತ್ತಮುತ್ತಲಿನ ರಮ್ಯ ಸ್ಥಳಗಳಿಗೆ ಕರೆದುಕೊಂಡು ಹೋಗುವೆನೆಂದೂ ಆಸೆ ತೋರಿಸಿ ಈ ಸಲ ಅವನನ್ನು ಕರೆದುಕೊಂಡು ಬಂದಿದ್ದ.

ಬಂದು ಮರುದಿನ ಮುಂಜಾನೆ ಗೆಳೆಯರಿಬ್ಬರೂ ಸ್ನಾನ ಉಪಾಹಾರ ತೀರಿಸಿದರು. ಮಧುಕರ ಸಾಹಿತ್ಯಪ್ರಿಯರಾದ ತನ್ನ ತಂದೆಯ ಲೈಬ್ರರಿ ತೋರಿಸಲು ಮನೋಹರನನ್ನು ಕರೆದುಕೊಂಡು ಹೋದ. ಅಲ್ಲಿ ಇಬ್ಬರೂ ಪುಸ್ತಕಗಳನ್ನು ಹಳೆಯ ಪತ್ರಿಕೆಗಳ ಸಂಚಿಕೆಗಳನ್ನೂ ತಿರುವಿ ಹಾಕುತ್ತಿದ್ದರು. ಮಾಲೂ ಗಡಿಬಿಡಿಯಿಂದ ಒಳಗೆ ಬಂದಳು. ಅಂದು ಬುಧವಾರ. ಅವಳಿಗೆ 'ಪ್ರಗತಿ' ಪತ್ರಿಕೆ ಬೇಕಾಗಿತ್ತು. ಅವರು ಅಲ್ಲಿರುವುದು ಗೊತ್ತಿರದೇ ಅವಳಲ್ಲಿಗೆ ಬಂದಿದ್ದಳು. ಅವಳಿನ್ನು ತಿರುಗಿ ಹೋಗುವವಳು; ಅಷ್ಟರಲ್ಲಿ ಮಧುಕರ ಅವಳನ್ನು ನಿಲ್ಲಿಸಿ "ಇವಳು ನನ್ನ ತಂಗಿ ಮಾಲಾ, ಈ ಸಲ F.Y. Arts ಕ್ಲಾಸಿನಲ್ಲಿದ್ದಾಳೆ. ಪುಸ್ತಕಗಳೆಂದರೆ ಭಾರೀ ಹುಚ್ಚು" ಎಂದು ಪರಿಚಯ ಮಾಡಿಕೊಟ್ಟ. ಮನೋಹರ ಕೈ ಜೋಡಿಸಿ 'ನಮಸ್ಕಾರ' ಎಂದ. ಮಾಲೂ ಈಗ ಕಣ್ಣೆತ್ತಿ ನೋಡಿ ಮೌನವಾಗಿ ಕೈ ಮುಗಿದಳು. ಹೇಳಿಕೊಳ್ಳುವಂತಹ ರೂಪವತಿಯಲ್ಲದಿದ್ದರೂ ಅವಳ ಕಣ್ಣುಗಳಲ್ಲಿ ಒಂದು ತರದ ಆಕರ್ಷಣೆ ಇದ್ದಿತು. ಮುದ್ದಾದ ಮುಖ, ಚೂಪಾದ ಗದ್ದ, ಪುಟ್ಟ ಬಾಯಿ, ತೆಳ್ಳಗೆ ಮಿಂಚಿನ ಬಳ್ಳಿಯಾಗಿದ್ದಳು.

"ಮನೂ, ನಮ್ಮ ಮಾಲೂಗ ಸಾರಿಗೆ ಉಪ್ಪು ಹಾಕಬೇಕೊ ಸಕ್ಕರಿ ಹಾಕಬೇಕೊ ತಿಳೀದಿದ್ರೂ ಯಾವ ಪುಸ್ತಕ ಎಲ್ಲಿ ಇರತದ ಅನ್ನೂದು ನಿದ್ದಿಗಣ್ಣಾಗೂ ಹೇಳತಾಳ ನೋಡು" ಎಂದ. ಅಣ್ಣನ ಚೇಷ್ಟೆಗೆ ನಗುತ್ತ ಮಾಲೂ ಉತ್ತರಿಸಿದಳು:

"ಹೂಂ, ಮುಂಜಾನೆ ಉಪ್ಪಿಟ್ಟು ಯಾರು ಮಾಡಿದ್ದರಂತ ತಿಳಿದೀ ನೀನು? ಅದಕ್ಕ ನಿನ್ನ ಗೆಳೆಯರಿಂದ ಶಿಫಾರಸೂ ಸಿಕ್ಕಿತಂತ" ಎಂದಳು. ಮಧುಕರ "ಓಹೋ, ಮನೋಹರನ ಶಿಫಾರಸs ಪಾಕಶಾಸ್ತ್ರಕ್ಕs! ಇವತ್ತಿನ ಉಪ್ಪಿಟ್ಟು ಅಕ್ಕೀ ರವಾದ್ದು ಯಾರ ಮಾಡಿದ್ರೀ ? ನನಗ ಏನೇನೂ ರುಚಿ ಹತ್ತಲಿಲ್ಲ ನೋಡು" ಎಂದ ತಂಗಿಯನ್ನು ಸಿಟ್ಟಿಗೆಬ್ಬಿಸಲು.

"ನೋಡಣ್ಣಾ, ನಾ ಅಡಿಗೀ ಮನ್ಯಾಗ ಕೆಲಸಾ ಮಾಡಿಕೊಡೂದs ಒಂದು ದೊಡ್ಡ wonder ಅಂತ ತಿಳದಾಳ ಅವ್ವ. ನೀ ಹಿಂಗ ಸಿಟ್ಟಿಗೆಬ್ಬಿಸಿದೆಂದರ ನಾ ಅವ್ವನ ಮುಂದ ಹೇಳತೇನಿ" ಎನ್ನುತ್ತ ಅಲ್ಲಿಂದ ಹೊರಟಳು ಮಾಲಾ.

ಹೋಗುತ್ತ ತನ್ನಲ್ಲಿ ತಾನೇ ನಕ್ಕಳು, ಮನೋಹರನ ನೆನಪಾಗಿ. ಅಂದು ನಿಜಕ್ಕೂ ಉಪ್ಪಿಟ್ಟು ಚೆನ್ನಾಗಿರಲಿಲ್ಲ. ಎಲ್ಲರೂ ಮುಖ ಕಿವುಚಿದ್ದರು. ಮನೋಹರನೊಬ್ಬನೇ ಚೆನ್ನಾಗಿದೆ ಎಂದವನು.

ಅಂದು ರಾತ್ರಿ ಬೆಳದಿಂಗಳೂಟವಾದ ಮೇಲೆ ಮಧುಕರ ಮಾಲಾನಿಂದ ಭಾವಗೀತೆಗಳನ್ನು ಹೇಳಿಸಿದ. ಅವಳ ಮಧುರ ಕಂಠಕ್ಕೂ, ಮುಗ್ಧ ಮನಸ್ಸಿಗೂ ಮನೋಹರ ಮಾರುಹೋದ. ತಿರುಗಿ ತನ್ನೂರಿಗೆ ಹೊರಟಾಗ ಏನೋ ಕಳೆದುಕೊಂಡವನಂತೆ ಭಾರವಾದ ಹೃದಯದಿಂದ ಮರಳಿದ.

ಮಾಲಾನ ತಂದೆ ಅವಳಂತೆಯೇ ಸ್ಪಷ್ಟವಾದಿಗಳು. ಅವಳ ಲಗ್ನದ ವಿಷಯವಾಗಿ ಅವಳನ್ನೇ ಕೇಳಿದರು. ಪೂರ್ತಿ ವಿಚಾರ ಮಾಡಲು ಹದಿನೈದು ದಿನಗಳ ಅವಧಿಯನ್ನೂ ಕೊಟ್ಟರು. ಆಗ ಮಾಲಾ ಹಗಲು-ರಾತ್ರಿ ವಿಚಾರ ಮಾಡಿದ್ದೇ ಮಾಡಿದ್ದು. ಅಣ್ಣನ ಮಾತಿನಿಂದ ತನ್ನ ಹಾಗೂ ಮನೋಹರನ ಅಭಿರುಚಿ ಅಭಿಪ್ರಾಯಗಳೆಲ್ಲ ಒಂದೇ ಎಂಬುದನ್ನು ಅರಿತಿದ್ದಳು. ತಾನು ಮದುವೆಯಾಗುವುದೇ ನಿಶ್ಚಿತವಾದರೆ ಮನೋಹರನನ್ನೇ ಮಾಡಿಕೊಳ್ಳುವುದು ತನಗೆ ಶ್ರೇಯಸ್ಕರವೆಂದು ನಂಬಿದಳು. ಹಾಗೆಂದು ತಂದೆಗೂ ತಿಳಿಸಿದಳು. ಮಗಳ ವಿಚಾರಕ್ಕೆ ತಂದೆಯೂ ಒಪ್ಪಿದರು. ತಾಯಿಗಂತೂ ಅದೇ ಆಸೆಯಾಗಿತ್ತು. ಮನೋಹರನ ಒಲವನ್ನರಿತ ಮಧುಕರ ತನ್ನ ರಾಯಭಾರ ಫಲಿಸಿದ್ದನ್ನು ತಿಳಿದು ಸಂತೋಷಪಟ್ಟ.

ಸಂಸಾರದ ಬಗ್ಗೆ ಏನನ್ನೂ ತಿಳಿಯದ ತಾನು ಗೃಹಿಣಿಯಾದಳು. ಆರು ವರುಷಗಳಲ್ಲಿ ಮುರಲಿ-ಪರಿಮಳಾರ ತಾಯಿಯಾದಳು. ತನ್ನ ಸಂಸಾರಕ್ಕೆ ಯಾವ ಕೊರತೆಯೂ ಇಲ್ಲ. ಮನೆಯಲ್ಲಿ ಯಾರೂ

ಬಿರುನುಡಿಗಳನ್ನಾಡುವವರಿಲ್ಲ. ತಾನು ಬಯಸಿದುದನ್ನೆಲ್ಲ ಕೊಳ್ಳುವ ಅನುಕೂಲತೆ ತನಗಿದೆ. ಅಲ್ಲಿ ಹೋಗಬೇಕು ಇಲ್ಲಿ ಹೋಗಬಾರದು ಎನ್ನುವ ನಿರ್ಬಂಧವನ್ನೇನೂ ಯಾರೂ ತನಗೆ ಹಾಕಿಲ್ಲ. ಆದರೂ ಒಂದೊಂದು ಸಲ ಅವಳ ಮನಸ್ಸಿಗೆ ತುಂಬಾ ವ್ಯಥೆಯಾಗುತ್ತದೆ. ಯಾಕೆ ಎಂದು ಯೋಚಿಸಿ ಯೋಚಿಸಿ ನಿರಾಶಳಾಗುತ್ತಾಳೆ. ಸಣ್ಣ ಸಣ್ಣ ಕಾರಣಗಳಿಗೂ ಮನಸ್ಸು ಮುದುಡಿ ಹೋಗುತ್ತದೆ. ಹಾಗೊಂದು ದಿನ ಹೀಗೊಂದು ದಿನ ಕಳೆದು ಕಡೆಗೊಂದು ದಿನ ಬಿದ್ದು ಹೋಗುವದೇ ಜೀವನದ ಸಾರವೆಂದು ತುಂಬಾ ಜುಗುಪ್ಸೆಪಟ್ಟುಕೊಳ್ಳುತ್ತಾಳೆ. ಅಂಥ ಹೊತ್ತಿನಲ್ಲಿ ಮನೋಹರ ತನ್ನ ಕಡೆಗೆ ವಿಶೇಷ ಲಕ್ಷ್ಯ ಕೊಡದಿರಲು ಅವಳ ಸಂಕಟ ಅಸಹನೀಯವಾಗುತ್ತದೆ. ಯಾರಿಗೂ ಕಾಣದಂತೆ ಕುಳಿತು ಅತ್ತುಬಿಡುತ್ತಾಳೆ. ಏಕೆ ಈ ನೋವು ? ಈ ದುಃಖ ? ಎಂದು ಯೋಚಿಸುತ್ತಾ ಮಗ್ಗುಲಲ್ಲಿದ್ದ ಮುರಲಿಯ ಬೆನ್ನ ಮೇಲೆ ಕೈಯಾಡಿಸುತ್ತಾ ಕಿಡಕಿಯ ಕಡೆಗೆ ಹೊರಳಿದಳು...

ಎದುರಿಗೆ ಕಾಣುವ ಮನೆಯೇ ವಸುಧೆಯದು. ಬಾಗಿಲು, ಕಿಟಕಿ ಮುಚ್ಚಿದೆ. ಹೌದು, ಅವಳು ನಿನ್ನೆ ಗೇಟಿನ ಬಳಿ ಭೆಟ್ಟಿಯಾದಾಗ ಹೇಳಿದ್ದಳು: ತಾನು ಆಫೀಸಿಗೆ ಒಂದು ತಿಂಗಳು ರಜೆ ತೆಗೆದುಕೊಂಡಿರುವೆ. ಇಂದೇ ಭೆಟ್ಟಿಯಾದಾಗ ಹೇಳಿದ್ದಳು: ತಾನು ಆಫೀಸಿಗೆ ಒಂದು ತಿಂಗಳು ರಜೆ ತೆಗೆದುಕೊಂಡಿರುವೆ. ಇಂದೇ ರಾತ್ರಿ ಗಾಡಿಗೆ ಮಹಾಬಲೇಶ್ವರಕ್ಕೆ ಗೆಳತಿಯಲ್ಲಿಗೆ ಹೋಗುವೆ ಎಂದು. ಇಬ್ಬರೂ ಕೂಡಿ ಚೈನೀ ಮಾಡಿ ಬರ್ರಿ ಎಂದು ತಾನು ಚೇಷ್ಟೆ ಮಾಡಿದ್ದಳು. ಅದಕ್ಕೆ ವಸುಧಾ 'ಅವರಿಗೆ ಹೆಚ್ಚಿಗೆ ರಜೆ ಇಲ್ಲ. ಕೊನೆಯ ಹದಿನೈದು ದಿನ ಮಾತ್ರ ಅವರು ಮಹಾಬಲೇಶ್ವರಕ್ಕೆ ಬರುತ್ತಾರೆ. ಅಲ್ಲಿಯವರೆಗೆ ಇಲ್ಲಿಯೇ ಇರುತ್ತಾರೆ' ಎಂದು ಹೇಳಿದ್ದಳು. ಅವಳನ್ನು ಕಳಿಸಿ ಒಳಗೆ ಬಂದ ತಾನು ಅಂದುಕೊಂಡಿದ್ದಳು. ಟೈಪಿಸ್ಟ್ ವಸುಧಾ ಎಷ್ಟು ಸುಖಿ? ಮಹಾಬಲೇಶ್ವರಕ್ಕೆ ಹೋಗುತ್ತಾಳೆ. ಗಂಡನೊಡನೆ ಅಲ್ಲಿ ಹದಿನೈದು ದಿನ ಕಳೆಯುತ್ತಾಳೆ. ಮದುವೆಯಾದಾಗಿನಿಂದ ತಾನು ಗಂಡನೊಡನೆ ಹದಿನೈದು ದಿನ -ಬೇಡ ಎಂಟು ದಿನ -ಎಂದೂ ಪ್ರವಾಸದಲ್ಲಿ ಕಳೆದಿಲ್ಲ. ಅವರಿಗೆ ಆಫೀಸು, ತನಗೆ ಮನೆ-ಮಕ್ಕಳು, ಮನೆಗೆಲಸಗಳಿಗೆ ಗಂಟು. ಹೋಗಲಿ, ಎಲ್ಲಿಯಾದರೂ ಸಿನೇಮಾ, ಸಭೆ-ಸಮಾರಂಭಗಳಿಗೆ ಹೋಗಲಾದರೂ ಬಿಡುವರೇ ಮಕ್ಕಳು? ಅದೂ ಇಲ್ಲ. ಹೀಗಾಗಿ ಎಷ್ಟೋ ದಿನಗಳವರೆಗೆ ತನಗೆ ಮನೆ ಬಿಟ್ಟು ಹೊರಗೆ ಹೋಗಲು ಆಗುವುದೇ ಇಲ್ಲ. ಇದನ್ನೇ ವಿಚಾರ ಮಾಡುತ್ತ ನಿನ್ನೆ ಕಳೆಯಿತು. ಇಂದು ಅದಕ್ಕಾಗಿಯೇ ಅವಳ ಮುಖ ಮ್ಲಾನತೆಯ ಮುಸುಕು ತೊಟ್ಟಿದ್ದು. ವಸುಧೆಯ ಮನೆಯ ಬಾಗಿಲು ತೆಗೆದ ಸಪ್ಪಳಕ್ಕೆ ಮಾಲಾ ಆ ಕಡೆಗೆ ತಿರುಗಿದಳು. ಒಳಗಿನಿಂದ ಒಬ್ಬ ತರುಣಿ ಹೊರಗೆ ಬಂದಳು. ನೋಡಿ ಮಾಲಾಗೆ ಆಶ್ಚರ್ಯವಾಯಿತು. ಇವಳು ರೋಹಿಣಿ! ವಸುಧಾನ ಗೆಳತಿ. ಅವಳೊಡನೆ ಆಫೀಸಿನಲ್ಲಿ ಕೆಲಸ ಮಾಡುವಾಕೆ, ವಸುಧಾ ಊರಿಗೆ ಹೋದದ್ದು ಇವಳಿಗೆ ಗೊತ್ತಿಲ್ಲವೇ? ಅವಳೇ ಇಲ್ಲದಿರುವಾಗ ಅವಳ ಮನೆಗೇಕೆ ಇವಳು ಬಂದದ್ದು ಎಂದುಕೊಳ್ಳುತ್ತಿರುವಾಗಲೇ ವಸುಧಾನ ಗಂಡ ದಿನಕರ ಹೊರಗೆ ಬಂದ. ರೋಹಿಣಿ ಒಯ್ಯಾರದಿಂದ ಅವನೊಡನೆ ಏನೋ ಮಾತನಾಡುತ್ತಿದ್ದಳು. ಅವನು ಕುಲುಕುಲು ನಗುತ್ತಿದ್ದ. ಗೇಟಿನವರೆಗೆ ಬಂದು ಅವಳನ್ನು ಬೀಳ್ಕೊಟ್ಟು ಹೋದ. ಹೋಗುವಾಗ ಅವಳೂ 'ಬಾಯ್ ಬಾಯ್' ಮಾಡಿ 'ನಾಳೆ ಸಂಡೆ ಮತ್ತೆ ಬರುವೆ' ಎಂದು ಹೇಳಿ ಹೊರಟಳು. ಅದನ್ನು ನೋಡಿ ಮಾಲಾಗೆ ವಿಚಿತ್ರ ಅನುಭವವಾಯಿತು. ಅವರಿಬ್ಬರ ನಡವಳಿಕೆಯಿಂದ ಅವಳ ಮೈ ಉರಿಯಿತು. ವಸುಧಾನ ಬಗ್ಗೆ ಕನಿಕರವೂ ಹುಟ್ಟದಿರಲಿಲ್ಲ. 'ಇದೆಂಥ ಸ್ವೈರ ಸ್ವಾತಂತ್ರ್ಯ' ಎಂದು ಕಿಡಕಿಯ ಬಾಗಿಲು ದಪ್ಪನೆ ಹಾಕಿದಳು.

ಕಿಡಕಿಯನ್ನು ಹಾಕಿದ ಸಪ್ಪಳಕ್ಕೆ ತೊಟ್ಟಿಲಲ್ಲಿ ಮಲಗಿದ್ದ ಪರಿಮಳಗೆ ಎಚ್ಚರವಾಯಿತು. ಅಳಹತ್ತಿದಳು. ಮಾಲಾ ಎದ್ದು ತೊಟ್ಟಿಲು ತೂಗಿ ಮೆಲುದನಿಯಲ್ಲಿ ಜೋಗುಳ ಹಾಡಿದಳು:

ಕಟ್ಟ್ಯಾಣಿ ಕಟ್ಟ್ಯಾಳ| ಕಟ್ಟೀಮ್ಯಾಲೆ ನಿಂತಾಳ
ಬಟ್ಟಲಗಣ್ಣ ತಿರುವ್ಯಾಳ | ಪರಿಮಳ
ದಿಟ್ಟಿ ತಾಕ್ಯಾವ ಒಳಗ್ಹೋಗ

ಜೋಗುಳದ ದನಿಗೆ, ತೊಟ್ಟಿಲದ ಜೀಕಿಗೆ ಮಗು ಮತ್ತೆ ಮಲಗಿತು. ಕೈ ಮಾತ್ರ ಹಗ್ಗ ಜಗ್ಗುತ್ತಲೆ ಇತ್ತು.

ಹೊರಗೆ ಯಾವದೋ ಮಗು ಚೀರಿ ಚೀರಿ ಅಳುತ್ತಿತ್ತು. ಯಾರೋ ಜೋರಾಗಿ ಬೆದರಿಸುತ್ತಿದ್ದರು ಮಗುವನ್ನು. ಎದ್ದು ಬಾಗಿಲು ತೆಗೆದು ಹೊರಗೆ ಬಂದಳು ಮಾಲಾ. ಕಲಾಯಿ ಮಾಡುವ ಫಕೀರನ ಹೆಂಡತಿ ನಿಂಗವ್ವ ಮಗನನ್ನು ದಂಟಿನಿಂದ ಹೊಡೆಯುತ್ತಿದ್ದಳು. ಅದು ನೆಲದಲ್ಲಿ ಬಿದ್ದು ಉರುಳಾಡುತ್ತಿತ್ತು. ಮಾಲಾ ಸಿಟ್ಟಿನಿಂದಲೇ ಕೂಗಿದಳು. 'ಎ ನಿಂಗವ್ವಾs ಯಾಕ ಹೊಡಿತೀಯಾ?"

"ನೋಡ್ರಿ ಅವ್ವಾರs, ಈಗ ಲಾಲವಾಲಾ ಮಾರಾಂವಾ ಗಂಟೇ ಬಾರಿಸಿಕೋತ ಹೋದಾ. ತನಗ ಕೊಡಸಬೇಕಂತ ಅಳತಾನ. ಬಾಯಿಂದ ಬೇಡಾ ಅಂತ ಹೇಳಿದರ ಕೇಳಲಿಲ್ಲ. ಅದಕ್ಕs ಎರಡು ಹೊಡದೆ" ಎಂದಳು ನಿಂಗವ್ವ ಕೆಟ್ಟ ಮೋರೆ ಮಾಡಿ.

"ಅಲ್ಲs ನಿಂಗವ್ವಾ, ಹಾಂಗ ಹೊಡದ್ರ ಅವಗ ತಿಳೀತದೇನು? ಸುಮ್ಮನs ಅಳತಾನ. ಒಂದು ದಿವಸ ಕೊಡಿಸಿಬಿಡಲಾ ಏನಾತು?" ಎಂದಳು ಮಾಲಾ ಕನಿಕರದಿಂದ.

"ಮೊನ್ನೆ ಬೇಡಿದಾ, ಹೋಗಲಿ ಎರಡು ದುಡ್ಡ ಅಂತ ಕೊಡಿಸಿದೆ. ಹಿಂಗ ದಿನಾ ದಿನಾ ಬೇಡಿದರ ಹ್ಯಾಂಗ್ರೀ ಅವ್ವಾರ ? ಇವತ್ತ ಒಂದs ಮನೀಯವರು ಕಲಾಯಿ ಮಾಡಿಸಿದರು. ಅದs ಸವ್ವಾರೂಪಾಯಿ ತೊಗೊಂಡು ಅಂವಾ ಪ್ಯಾಟ್ಯಾಗ ಹೋದಾ. ನನ್ನ ಹತ್ರ ಏನೂ ಇಲ್ರೀ" ಎನ್ನುತ್ತಲೇ ಕಣ್ಣೀರು ತೆಗೆದಳು ನಿಂಗವ್ವ.

ಮಾಲಾಗ ಏನು ಹೇಳಲೂ ತೋಚಲಿಲ್ಲ. ಒಂದು ಕ್ಷಣ ನಿಂತು ಒಳಗೆ ಹೋಗಿ ಎರಡು ದುಡ್ಡು ತಂದು ಅವಳ ಕೈಗಿತ್ತಳು. ಮಗು ಅಳುವದನ್ನು ನಿಲ್ಲಿಸಿ ತಾಯಿಯ ಹಿಂದೆ ಓಡಿತು.

ಮಾಲಾ ಒಳಗೆ ಬಂದಾಗ ಮೇಜಿನ ಮೇಲಿಟ್ಟ ಟೈಂಪೀಸಿನಲ್ಲಿ ಐದುವರೆ ಆಗಿತ್ತು. ತಲೆ ಬಾಚಿಕೊಳ್ಳಲು ಕನ್ನಡಿ ಎದುರು ನಿಂತಳು. ಮನೋಹರ ಎರಡು ದಿನಗಳ ಹಿಂದೆಯೇ ಅವಳಿಗೊಂದು ಸ್ನೋ ಬಾಟಲಿ ತಂದಿದ್ದ. ಅದರ ಬೆಲೆ ಎರಡು ರೂಪಾಯಿ. ಅಷ್ಟು ದುಡ್ಡು ಕೊಟ್ಟು ತನಗೆಂದೇ ಗಂಡ ಕೊಂಡು ತಂದಿದ್ದ. ಪಾಪ! ನಿಂಗವ್ವನ ಹತ್ತಿರ ಎರಡು ದುಡ್ಡು ಕೂಡ ಇಲ್ಲ. ತಾನೆಷ್ಟು ಸುಖಿ ! ತನಗೆ ನಿಂಗವ್ವನಿಗಿದ್ದಂತೆ ದಾರಿದ್ರ್ಯವಿಲ್ಲ. ವಸುಧೆಗಿದ್ದಂತೆ ಗಂಡನ ವಂಚನೆಯೂ ಇಲ್ಲ. ಗಂಡನ ಪ್ರೇಮ ತನಗೇ ಮೀಸಲು. ಆಚೆಮನೆಯ ರಾಧಾಗಿದ್ದಂತೆ ಅತ್ತೆಯ ಕಾಟವೂ ಇಲ್ಲ. ತಾನು ನಗುನಗುತ್ತ ಸುಖಿಯಾಗಿದ್ದರೆ ಅತ್ತೆಗೆ ಸಂತೋಷ. ಕೆಳಗಿನ ಮನೆಯ ಗಿರಿಜಳಂತೆ ನಿತ್ಯರೋಗಿಯಾಗಿ ಔಷಧಕ್ಕೆ ಆಸ್ಪತ್ರೆಗೆ ಎಡತಾಕುವಂತಿಲ್ಲ. ಅಂದ ಮೇಲೆ ತನ್ನ ಸಂಸಾರ ಪರಿಪೂರ್ಣವಾದುದು. ತನ್ನಷ್ಟು ಸುಖಿ ಎಷ್ಟೋ ಜನರಿಗಿಲ್ಲ. ಹಾಗಾದರೆ ಈ ಉದಾಸೀನತೆ, ಈ ನಿಷ್ಕಾರಣ ಅಸಂತುಷ್ಟಿ ಎಲ್ಲಿಯವು? ತಾನೇ ಸೃಷ್ಟಿಸಿ ಕೊಂಡುದುವಲ್ಲವೇ? ಮಾಲಾನ ಮನಸನ್ನಾವರಿಸಿಕೊಂಡಿದ್ದ ಮಂಜು ಮೆಲ್ಲನೆ ಕರಗಿತು. ತಲೆ ಬಾಚಿಕೊಂಡು ಮುಖ ತೊಳೆದು ಕುಂಕುಮವಿಟ್ಟಳು. ಮನೋಹರನಿಗೆ ಪ್ರಿಯವಾದ ಆಚೀಚೆ ಎರಡು ಮಲ್ಲಿಗೆ, ನಡುವೆ ಗುಲಾಬಿಹೂ ಮುಡಿದಳು. ಮನಸ್ಸು ಹೂವಿಗಿಂತಲೂ ಹಗುರಾಗಿತ್ತು ಗಾಳಿಯಂತೆ ತೇಲುತ್ತಿತ್ತು. ಬಾಯಿ ಯಾವದೋ ಹಾಡನ್ನು ಗುಣಗುಣಿಸುತ್ತಿತ್ತು. ಬಾಗಿಲಿಗೆ ಬಂದು ನಿಂತ ಮಾಲಾ ಗೇಟು ದಾಟಿ ಒಳಗೆ ಬರುತ್ತಿದ್ದ ಗಂಡನನ್ನು ನೋಡಿ ನಸುನಕ್ಕಳು.

ಮನೆಯ ಬಾಗಿಲಿಗೆ ಬಂದ ಮನೋಹರನಿಗೆ ತನ್ನನ್ನು ಆಫೀಸಿಗೆ ಕಳಿಸಿದ ಮಾಲಾ ಇವಳಲ್ಲವೆಂದು ಹಾಯೆನಿಸಿತು.

***

■■

# ಪಂಚ ಕನ್ಯೆಯರು

"ಅಬ್ಬಾ ಏನು ಸೆಕೆ! ಈಗ ಫೆಬ್ರುವರಿ ತಿಂಗಳು ಸುರೂ ಆಗೇದ, ಈಗಲೇ ಇಷ್ಟು ಬಿಸಿಲಿನ ತಾಪ ಆದರೆ ಮೇ ತಿಂಗಳದಾಗ ಹ್ಯಾಂಗ ಇನ್ನ" ಎಂದು ಗೊಣಗುಟ್ಟುತ್ತ ಹಾಸಿಗೆಯ ಮೇಲೆ ಎದ್ದು ಕುಳಿತ ಚಂದ್ರಶೇಖರ. ಶರಟು ಬೆವರಿನಿಂದ ತೊಯ್ದಿತ್ತು. ಗಾಢವಾದ ನಿದ್ರೆಹತ್ತಿದ್ದರಿಂದ ಕೂದಲೂ ಬೆವರಿನಿಂದ ಹಸಿಯಾಗಿದ್ದವು. ಟವಲನ್ನೆಳೆದುಕೊಂಡು ಮುಖ ಒರೆಸಿಕೊಂಡು ಗಡಿಯಾರದ ಕಡೆಗೆ ನೋಡಿದ. ಗಂಟೆ ನಾಲ್ಕಾಗಿತ್ತು. "ನಾ ಮಲಕೊಂಡ ಎರಡ ತಾಸಾತೇನು ಆಗಲೇ? ಇನ್ನೂ ಚಹಾ ಯಾಕ ಮಾಡಲಿಲ್ಲಾ . ಸುಮೀ ಏ ಸುಮಿ ಚಹಾಕಿಡು."

ಒಳಗಿನಿಂದ ಉತ್ತರವೇನೂ ಬರಲಿಲ್ಲ. ಸುಮಿತ್ರಾ ಮನೆಯಲ್ಲಿ ಇಲ್ಲದಿರುವುದು ಅವನ ಜ್ಞಾಪಕಕ್ಕೆ ಬಂದಿತು. ಇಂದು ಅವರ ಗೆಳತಿಯ ಮನೆಯಲ್ಲಿ ಅರಿಶಿಣ ಕುಂಕುಮವಂತೆ; ಅದರ ಜೊತೆಗೇ ಊಟದ ಆಮಂತ್ರಣವೂ ಇತ್ತು. ಆ ಕರೆ ಬಂದಾಗ ಚಂದ್ರಶೇಖರನಿಗೆ  ಬೇಸರವಾಗಿತ್ತು. ಎಲ್ಲಿ ಹೋದರೂ ಜೊತೆಗೂಡಿ ಅಡ್ಡಾಡುತ್ತಿದ್ದ ನವದಂಪತಿಗಳವರು. ಆದರೆ ಇಂದು ಗೌರಿ ಕೂಡ್ರಿಸಿದ ಸುಮಿತ್ರೆಯ ಗೆಳತಿ ಅವಳೊಬ್ಬಳಿಗೇ ಆಮಂತ್ರಣವಿತ್ತಿದ್ದಳು. ಸುಮಿತ್ರೆ ಗಂಡನಿಗೂ ಸಿಹಿ ಅಡಿಗೆ ಮಾಡಿ ಬಡಿಸಿ ತಾನು ಸಂಜೆ ಬೇಗನೆ ಬರುವುದಾಗಿ ಹೇಳಿಹೋಗಿದ್ದಳು. ಅವಳು ಬರಲು ಇನ್ನೂ ಎರಡು ತಾಸಾದರೂ ಬೇಕು. ಈಗ ತಾನು ಎದ್ದು ಚಹ ಮಾಡಿಕೊಳ್ಳಬೇಕೆ? ಅದೇನು, ಇಲೆಕ್ಟ್ರಿಕ್ ಸ್ಟೋವಿನ ಮೇಲೆ ಒಂದು ಕಪ್ಪು ಚಹ ಮಾಡಿಕೊಳ್ಳಲು ಎರಡು ನಿಮಿಷಗಳೇ ಸಾಕು. ಆದರೆ ಇಂಥ ಬಿಸಿಲಿನಲ್ಲಿ ಚಹಕ್ಕಿಂತ ತಂಪು ಪಾನೀಯ ಹೆಚ್ಚು ಅವಶ್ಯವೆನಿಸಿತು ಚಂದ್ರಶೇಖರನಿಗೆ. ಎದ್ದು ತಣ್ಣೀರಿನಲ್ಲಿ ಮುಖ ತೊಳೆದುಕೊಂಡು ತಲೆಗಷ್ಟು ನೀರು ಬಡಿದುಕೊಂಡು ಅಡಿಗೆ ಮನೆಯಲ್ಲಿ ಹೊಕ್ಕ. ಒಂದು ಗ್ಲಾಸು ತಣ್ಣೀರಿನಲ್ಲಿ ಸೈರಪ್ ಸೇರಿಸಿ ಕುಡಿದ. ಒಣಗಿದ ಗಂಟಲು ಮಸಿ ನುಂಗಿದ ಒತ್ತುಗರಡಾಯಿತು. ಕಾದ ನೆಲದ ಮೇಲೆ ಬೀಳುವ ಮೊದಲ ಮಳೆಯಂತೆ ಎಲ್ಲವೂ ಇಂಗಿ ಹೋಯಿತು. ಸರಿ, ಇನ್ನೊಂದು ಗ್ಲಾಸು ತುಂಬಿ ಕುಡಿದ. ಸ್ವಲ್ಪ ಹಾಯೆನಿಸಿತು. ಇನ್ನೇನು ಮಾಡಬೇಕು, ಹೇಗೆ ಹೊತ್ತು ಕಳೆಯಬೇಕು ಎನ್ನುವ ಯೋಚನೆಯಲ್ಲಿ ತನ್ನ ಕೋಣೆಗೆ ಬಂದ, ಕಪಾಟಿನ ಮೇಲೆ ಇಟ್ಟ ಆಲ್ಬಂ ಕಂಡಿತು. ಅದನ್ನೇ ಕೈಗೆ ತೆಗೆದುಕೊಂಡು ಆರಾಮ ಕುರ್ಚಿಯಲ್ಲಿ ಕುಳಿತುಕೊಂಡ.

ಮೊದಲ ಪುಟದಲ್ಲಿ ತನ್ನ ಫೋಟೊ ಹೈಸ್ಕೂಲಿನಲ್ಲಿದ್ದಾಗಿನವು ಒಂದೆರಡು, ಕಾಲೇಜಿನ ಗೆಳೆಯರೊಡನೆ ಪಿಕ್‌ನಿಕ್‌ಗೆ ಹೋದಾಗಿನವು ಒಂದೆರಡು.

ಎರಡನೆಯ ಪುಟದಲ್ಲಿಯೂ ತನ್ನವೇ, ಎನ್.ಸಿ.ಸಿ. ಡ್ರೆಸ್ಸಿನಲ್ಲಿ ಒಂದು ಕ್ಯಾಬಿನೆಟ್ ಸೈಜ ಫೋಟೊ, ಇನ್ನೊಂದು ಕ್ರಿಕೆಟ್ ಆಟದ ತಂಡದವರೊಡನೆ ತೆಗೆಸಿದ್ದು.

ಮೂರನೆಯ ಪುಟದಲ್ಲಿ ತಾನು ತೆಗೆದ ಇತರರ ಫೋಟೊಗಳು. ಒಂದು ತನ್ನ ತಂದೆ-ತಾಯಿಗಳದು. ಮಗುವನ್ನೆತ್ತಿಕೊಂಡ ಅಕ್ಕನದು ಇನ್ನೊಂದು. ಕಕ್ಕನ ಮೂರು ತಿಂಗಳ ಮಗುವನ್ನು ಮಲಗಿಸಿ ತೆಗೆದ ಫೋಟೊ ಮತ್ತೊಂದು.

ಆಲ್ಬಮ್ಮಿನ ಪುಟಗಳನ್ನು ಮುಂದು ಮುಂದಕ್ಕೆ ತಿರುವಿದಂತೆ ಅವನ ವಿಚಾರ ಹಿಂದು ಹಿಂದಕ್ಕೋಡಿತು. ಎದುರಿನ ಪುಟದ ಮೇಲಿನ ಚಿತ್ರ ಬರಬರುತ್ತ ಮಸುಕಾಯಿತು. ಸಿನಿಮಾ ಮಂದಿರದಲ್ಲಿ ಚಿತ್ರ ಪ್ರಾರಂಭವಾದೊಡನೆಯೇ ಲೈಟು ಆರಿಸಿದಂತೆ ಎದುರಿಗಿರುವ ಭಾವಚಿತ್ರ ಮರೆಯಾಗಿ ಬೇರೊಂದು ಸನ್ನಿವೇಶ ಕಣ್ಣೆದುರು ಮೂಡಿತು.

.....ತಾನು ಅವರ ಮನೆಗೆ ಹೋಗಿದ್ದುದು ಆಗಲೇ ನಾಲ್ಕೈದು ವರ್ಷಗಳ ಹಿಂದೆ. ತನ್ನ ಸೋದರಮಾವನೊಡನೆ ಆ ಊರಿಗೆ ಹೋಗಿ ಈ ಕನ್ಯೆಯನ್ನು ನೋಡಿ ಬರಬೇಕೆಂದು ತಂದೆ ಪತ್ರ ಬರೆದಿದ್ದರು. ಅವರ ಮನೆ ಮೆಟ್ಟಲು ಹತ್ತಿದೊಡನೆ ಹಿರಿಯ ಮನುಷ್ಯರೊಬ್ಬರು ಹುಡುಗಿಯ ತಂದೆ-ಮುಂದೆ ಬಂದು ಕೈ ಜೋಡಿಸಿ ಆದರದ ಸ್ವಾಗತ ನೀಡಿದರು. ತಮ್ಮೊಡನೆ ಬಂದಿದ್ದ ಶಾಸ್ತ್ರಿಗಳಿಗೂ ಅವರಿಗೂ ಮೊದಲಿನಿಂದಲೂ ಪರಿಚಯವಂತೆ. ಸ್ವಲ್ಪ ಹೊತ್ತು ಮಾತುಕತೆಯಾದ ಮೇಲೆ ಉಪ್ಪಿಟ್ಟು, ರವೆ ಉಂಡಿ, ಬಾಳೆ ಹಣ್ಣು, ಚಹ ಬಂದಿತು. ಮೊದಲ ತುತ್ತು ಬಾಯಿಗಿಟ್ಟೊಡನೆ ಹುಡುಗಿಯ ತಂದೆ "ಇದು ನಮ್ಮ ಅಹಲ್ಯಾನೇ ಮಾಡಿದ್ದು. ಮನೆಯ ಕೆಲಸವನ್ನೆಲ್ಲಾ ಅಚ್ಚುಕಟ್ಟಾಗಿ ಮಾಡುತ್ತಾಳೆ. ಅಡಿಗೆಯಲ್ಲಂತೂ ಪಳಗಿದ ಕೈ" ಎಂದರು. ಶಾಸ್ತ್ರಿಗಳು ತಟ್ಟೆಯನ್ನು ಬರಿದು ಮಾಡುತ್ತಾ "ಭೇಷ್ ಎಷ್ಟು ಚೆನ್ನಾಗಿದೆ ಉಪ್ಪಿಟ್ಟು! ಉಡುಪಿ ಅಂಗಡಿಯವರೂ ಝುಕ್ಕಿಸಿದರು" ಎಂದು ಬಾಯ್ತುಂಬಾ ಹೊಗಳಿದರು. ಮನೆಯ ಯಜಮಾನರು ಸುಮ್ಮನಿದ್ದ ನನ್ನನ್ನೇ ನೋಡುತ್ತಾ "ರಾಯರಿಗೆ ಹಿಡಿಸಿತೋ ಇಲ್ಲವೋ" ಎಂದು ಅನುಮಾನ ತೋರಿದರು. "ಹಾಗೇನೂ ಇಲ್ಲ, ಬಹಳ ರುಚಿಕಟ್ಟಾಗಿದೆ" ಎಂದೆ. ರಾಯರ ಮುಖ ಅರಳಿತು. ನಿಜಕ್ಕೂ ತಿಂಡಿ ಬಹಳ ಚೆನ್ನಾಗಿತ್ತು. ದಿನವೂ ಇಂತಹ ತಿಂಡಿ ತಿನ್ನಿಸುವವಳೇ ಹೆಂಡತಿಯಾಗಿ ಬಂದರೆ - ಎಂದು ನೆನೆದುಕೊಂಡು ಮನದೊಳಗೇ ನಕ್ಕೆ.

ಯಥಾಪ್ರಕಾರ ಜರಿಯ ಸೀರೆಯನ್ನುಟ್ಟು ಹೂವಿನ ಅಲಂಕಾರ ಮಾಡಿಕೊಂಡು ಬಂದಳು ಹುಡುಗಿ. ನನ್ನ ಮಾವ ಹೆಸರು ಕೇಳಿದರು. ಹುಡುಗಿ ಮೆಲ್ಲಗೆ 'ಅಹಲ್ಯಾ' ಎಂದು ಸ್ವಲ್ಪ ಕತ್ತೆತ್ತಿದಳು. ಹಣೆಯ ಮೇಲೆ ಬೆವರ ಹನಿ ಮೂಡಿತ್ತು. ಬೆಕ್ಕಿನ ಕಣ್ಣು, ಅಗಲವಾದ ಮೂಗು, ದಪ್ಪ ತುಟಿಗಳಿಂದ ಆಕರ್ಷಕ ರೂಪು ಎಂದೇನೂ ನನಗೆನ್ನಿಸಲಿಲ್ಲ. ನನ್ನ ಮಾವ "ಓದಲು ಹೇಳಿ ಸ್ವಲ್ಪ" ಎಂದರು. ಹುಡುಗಿಯ ತಂದೆ "ಕ್ಷಮಿಸ್ರಿ, ಅವಳಿಗೆ ಓದುವ ಅಭ್ಯಾಸವೇ ಇಲ್ಲ. ಕನ್ನಡ ಎರಡು ಇಯತ್ತೆಯಲ್ಲಿಯೇ ಶಾಲೆ ಬಿಡಬೇಕಾಯಿತು. ಮನೆಯ ಕೆಲಸ, ಅಡಿಗೆ ಕೆಲಸ ಎಲ್ಲದರಲ್ಲೂ ಓದಲು ಬಿಡುವೇ ಸಿಗುವದಿಲ್ಲ. ಅಷ್ಟಾಗಿ ಹೆಣ್ಣು ಮಕ್ಕಳಿಗೆ ಓದನ್ನು ತೆಗೆದುಕೊಂಡೇನು ಮಾಡುವದಿದೆ ಹೇಳ್ರಿ, ಮನೆಗೆಲಸ, ಬಂದರೆ ಸಾಕು" ಎಂದರು. ನನ್ನ ಮಾವ, ಶಾಸ್ತ್ರಿಗಳು ಇಬ್ಬರೂ 'ಹೌದು ಹೌದು' ಎಂದು ತಲೆಹಾಕಿ "ಆಯಿತು ಇನ್ನು ಹೋಗಬಹುದಲ್ಲ" ಎಂದರು. ಅಹಲ್ಯಾ ಎದ್ದು ನಮಸ್ಕರಿಸಿ ಹೊರಟಳು. ಮತ್ತೊಮ್ಮೆ ನೋಡಬಾರದೆಂದುಕೊಂಡಿದ್ದ ನನ್ನ ನಿರ್ಧಾರ ಸಡಿಲಿಸಿ ನಾನು ಅವಳ ಬೆನ್ನನ್ನೇ ನೋಡಿದೆ. ಕಪ್ಪಾದ, ಹೊಳೆಯುವ ಉದ್ದವಾದ ಕೂದಲಿನ ಜಡೆ ಮೊಳಕಾಲನ್ನು ಮುಟ್ಟುವಂತಿತ್ತು. ಆಗ ಅದೊಂದೇ ನನ್ನನ್ನು ಆಕರ್ಷಿಸಿದ್ದು....

ಅವನಿಗರಿವಿಲ್ಲದಂತೆಯೆ ಅವನ ಕೈ ಆಲ್ಬಮ್ಮಿನ ಮತ್ತೊಂದು ಪುಟವನ್ನು ತೆರೆಯಿತು.

.....ಮನೆಯ ಒಳಕ್ಕೆ ಕಾಲಿಟ್ಟೊಡನೆ ನನಗೆ ಭ್ರಮೆಯಾಯಿತು. ನಾನು ಬಂದದ್ದು ಕನ್ಯೆಯ ಮನೆಗೋ ಅಥವಾ ಲಲಿತಕಲಾ ಪ್ರದರ್ಶನಕ್ಕೊ ತಿಳಿಯದಾಯಿತು. ಸೋಫಾ, ಕುರ್ಚಿ, ಟೇಬಲ್, ಟೀಪಾಯ್, ರೇಡಿಯೋ ಸೆಟ್ಟು ಎಲ್ಲದರ ಮೇಲೂ ಬಗೆಬಗೆಯ ಬಣ್ಣದ ಕಸೂತಿಯ ಅರಿವೆಗಳು. ಬಾಗಿಲ ಪರದೆಯಲ್ಲಿಯೂ ಕಸೂತಿ ಕೆಲಸವಿತ್ತು. ಗೋಡೆಗಳಿಗೆ ಮಖಮಲ್ಲಿನ ಮೇಲೆ ಜರದ ಹೂವು ಹಾಕಿದ ಫೋಟೋಗಳು, ನಿಸರ್ಗ ಸೌಂದರ್ಯವನ್ನೂ ಕಸೂತಿಯಲ್ಲಿಯೇ ಮೂಡಿಸಿದ ಫೋಟೋಗಳೂ ಇದ್ದವು. ಚಹ ಬಂದಿತು ತಿಂಡಿಯೊಡನೆ ಟ್ರೇದಲ್ಲಿ. ಟ್ರೇದಲ್ಲಿಯೂ ಕಸೂತಿಯ ಅರಿವೆ. ಹುಡುಗಿ ಬಂದಳು. ಅವಳ ಮೈಮೇಲೆ ಸೆರಗು, ದಡಿಗಳಲ್ಲಿ ಕಸೂತಿ ಕೆಲಸ ಮಾಡಿದ ಜಾರ್ಜೆಟ್ ಸೀರೆ, ಬ್ಲೌಜಿನ ಮೇಲೆಯೂ ಕನ್ನಡಿ ಹಚ್ಚಿ ಕಸೂತಿ ತೆಗೆಯಲಾಗಿತ್ತು. ಹುಡುಗಿಯ ಹೆಸರು ದ್ರೌಪದಿ. ವಿದ್ಯಾಭ್ಯಾಸ ಇಂಗ್ಲೀಷು ನಾಲ್ಕನೆಯ ಇಯತ್ತೆ. ಮುಂದೆ ಕಲಿಯಲು ಮನಸ್ಸಿರಲಿಲ್ಲ. ಅವಳು ಓದಿದಾಗ ಕಲಿತುದನ್ನೂ ಮರೆತಿದ್ದ ಹಾಗೆ ಕಂಡಿತು. "ನಮ್ಮ ದ್ರೌಪದಿಯ ಕಸೂತಿ ಕೆಲಸ ಬಹಳ ನಾಜೂಕು. ಕಸೂತಿ ಕ್ಲಾಸಿಗೆ ಹೋಗಿ ಎರಡು ವರ್ಷ ಕಲಿತಳು, ಪರೀಕ್ಷೆಯೊಳಗೆ ಅವಳಿಗೇ ಮೊದಲನೇ ನಂಬರು. ಇಲ್ಲಿ ವನಿತಾ ಮಂಡಲದವರು ನಡೆಸು

ಕಲಾಪ್ರದರ್ಶನದೊಳಗೆ ನಮ್ಮ ದ್ರೌಪದಿಗೆ ಮೊದಲನೇ ಬಹುಮಾನ. ಅವಳು ಹೆಣೆಯಲು ಕುಳಿತರೆ ಊಟ, ನಿದ್ರೆಗಳ ಪರಿವೆಯೂ ಇರುವುದಿಲ್ಲ. ಅಷ್ಟು ಹುಚ್ಚು ಅವಳಿಗೆ ಹೆಣಿಕೆಯದು" ಎಂದು ದ್ರೌಪದಿಯ ತಂದೆ ಮಗಳ ಕಸೂತಿ ಪುರಾಣವನ್ನು ಸಮಾಪ್ತ ಮಾಡಿದರು. ಮಧ್ಯಮ ತರಗತಿಯ ನಾನು ಇಂತಹ ಹೆಂಡತಿಗೆ ಅಡಿಗೆಯ ಆಳನ್ನು ಒದಗಿಸಿ, ಬಟ್ಟೆ ರೇಶಿಮೆಗಳನ್ನು ಕೊಂಡು ಕೊಡುವದು ಅಸಾಧ್ಯವೆಂದುಕೊಂಡೆ. ಎದ್ದು ಹೋಗುವಾಗ ದ್ರೌಪದಿ ನನ್ನನ್ನು ಒಂದು ಕ್ಷಣ ನೋಡಿ ಆಚೆಗೆ ಹೊರಳಿದಳು. ಆ ಕಣ್ಣುಗಳು!....ನಕ್ಷತ್ರದಂತೆ ಹೊಳೆಯುತ್ತಿದ್ದ ಆ ಕಣ್ಣುಗಳು ಮಾತ್ರ....

ಮತ್ತೊಂದು ಪುಟ ಮಗುಚಿಕೊಂಡಿತ್ತು.

".... ಇವಳು ನನ್ನ ಮಗಳು ಸೀತಾ. ಈ ಸಾರೆ ಇಂಟರ ಪಾಸಾಗಿ ಜ್ಯೂನಿಯರ್ ಬಿ.ಎ. ದೊಳಗೆ ಇದ್ದಾಳೆ" ಕನ್ಯೆಯ ತಂದೆ ಪರಿಚಯ ಮಾಡಿಕೊಟ್ಟರು. ಮುಂದೆ ಬಂದಿದ್ದ ಎರಡೂ ಗಿಡ್ಡ ಜಡೆಗಳನ್ನು ಹಿಂದಕ್ಕೆ ನೂಕಿ ಎರಡೂ ಕೈಗಳನ್ನೆತ್ತಿ ನಮಸ್ಕಾರ ಮಾಡಿದಳು ಸೀತಾ. ಒಂದು ಕೈಯಲ್ಲಿ ಕೈತುಂಬಾ ಬಳೆಗಳು. ಇನ್ನೊಂದು ಬರಿಗೈಯಲ್ಲಿ ರಿಸ್ಟ ವಾಚು. ಇಷ್ಟೊಂದು ಪ್ರಗತಿಶೀಲರ ಮುಂದೆ ನಾನು ಸುಮ್ಮನಿರಬಾರದೆಂದುಕೊಂಡು "ಬಿ.ಎ.ಕ್ಕೆ ಏನು ತೆಗೆದುಕೊಂಡಿದ್ದೀರಿ?" ಎಂದೆ. "ಫಿಲಾಸಫಿ ಮತ್ತು ಸೋಸಿಯಾಲಜಿ. ನಿಮ್ಮ ವಿಷಯವೇನಿತ್ತು ಎಂ.ಎ.ಗೆ ?" ಎಂದಳು ಆ ಕಾಲೇಜಕುವರಿ. "ನನ್ನದು ಎಕನಾಮಿಕ್ಸ್. ಆದರೆ ಗಂಡಸರಿಗಿಂತಲೂ ಹೆಣ್ಣುಮಕ್ಕಳು ಎಕನಾಮಿಕ್ಸ ತೆಗೆದುಕೊಂಡರೇ ಗೃಹಕೃತ್ಯದಲ್ಲಿ ಹೆಚ್ಚು ಸಹಾಯವಾಗಬಹುದಲ್ಲ" ಎಂದು ಮಾತುಹಾರಿಸಿದೆ. ಅದಕ್ಕೆ ಕೂಡಲೆ ಬಂದಿತು ಸೀತಾನಿಂದ ಮಾರುತ್ತರ: "ಅದರಲ್ಲೇನು ಬಿಡ್ರಿ. ಇಬ್ಬರೂ ಪದವೀಧರರಾಗಿ ದುಡಿದು ಸಂಬಳ ತಂದರೆ ಆಳುಗಳಿಂದ ಕೆಲಸ ಮಾಡಿಸಿಕೊಳ್ಳಬಹುದು. ಅದಕ್ಕೆಲ್ಲಾ ಎಕನಾಮಿಕ್ಸ್ ಯಾಕೆ ಬೇಕು ?" ಎಂದು ಕಾಲ ಮೇಲೆ ಕಾಲು ಹಾಕಿ ಅಲುಗಾಡಿಸುತ್ತ ಕುಳಿತಳು ಸೀತಾ. ಅವಳ ಕ್ರೇಪ್ ಸೀರೆಯ ಕೆಳಗೆ ಬಿಳಿಯ ಗಂಜಿಯ ಲಂಗದ ಮೇಲಿನ ಎಂಬ್ರಾಯ್ಡರಿ ಕೆಲಸ, ಲೇಸು ಎದ್ದು ಕಾಣುತ್ತಿದ್ದವು. ಇವಳ ಕೈ ಹಿಡಿದರೆ ತನ್ನ ಬಳಗದ ಉಪಚಾರ, ತಾಯಿ-ತಂದೆಯವರ ಸೇವೆಗೆ ತಿಲಾಂಜಲಿ ಕೊಟ್ಟಂತೆಯೇ ಎಂದು ಮನಸ್ಸು ಹೇಳಿತು. ಇನ್ನು ಬರುತ್ತೇನೆಂದು ಎದ್ದು ಕೈಮುಗಿದೆ. ತಂದೆಯೊಡನೆ ಅವಳೂ ಎದ್ದು ನಗುತ್ತ ನಮಸ್ಕಾರ ಮಾಡಿದಳು. ಆ ನಗೆ! .... ಅವಳ ಆ ತುಂಟ ನಗೆ ..... ಮುಂದಿನ ಪುಟವನ್ನು ತೆಗೆದೊಡನೆಯೆ ಕಿವಿಗೆ ವೀಣಾನಾದ ಕೇಳಿದಂತಾಯಿತು.

....ಕನ್ಯೆಯ ಮನೆಯಿಂದ ಕಾರು ಬಂದಿತ್ತು ನಮ್ಮನ್ನು ಕರೆದೊಯ್ಯಲು. ನಮ್ಮೊಡನೆ ನನ್ನ ತಾಯಿಯೂ ತಂಗಿಯೂ ಬಂದಿದ್ದರು. ಕಾರು ಸುಂದರವಾದ ಹೂದೋಟದಲ್ಲಿದ್ದ ಭವ್ಯವಾದ ಬಂಗಲೆಯ ಎದುರು ನಿಂತಿತ್ತು. ಜರಿ ಪೇಟದವರು ದೇಶಾವರಿ ನಗೆನಗುತ್ತ ಸ್ವಾಗತ ನೀಡಿದರು. ಅವರೇ ನಮ್ಮ ಮಾವ- ಅಲ್ಲಲ್ಲ ಹುಡುಗಿಯ ತಂದೆ ಇರಬಹುದೆಂದುಕೊಂಡೆ. ದೊಡ್ಡ ಹಾಲಿನಲ್ಲಿ ಕರಿಯ ಮರದ ಸುಂದರ ಸೋಫಾ ಸೆಟ್ಟು ನೆಲದ ಮೇಲೆ ಅಚ್ಚುಕಟ್ಟಾದ ಮ್ಯಾಟು, ಒಂದು ದೊಡ್ಡ ಸೆವನ್ ವಾಲ್ವವುಳ್ಳ ರೇಡಿಯೋ ಸಣ್ಣದಾಗಿ ಗುಯ್‌ಗುಡುತ್ತಿತ್ತು. ಕಣ್ಣು ಕೋರೈಸುವಂತಿತ್ತು ಮನೆಯ ಅಲಂಕಾರ. ಹೆಣ್ಣುಮಕ್ಕಳನ್ನು ಒಳಕೆ ಕರೆದುಕೊಂಡು ಹೋದರು. ಯಥಾಪ್ರಕಾರ ಚಹಾಪಾನ. ಉಳಿದವರಂತೆ ಕುಳಿತಲ್ಲಿಯೇ ಚಹ ಬರಲಿಲ್ಲ. ನಾವೇ ಡೈನಿಂಗ್ ಹಾಲಿಗೆ ಹೋಗಬೇಕಾಯಿತು. ಅಲ್ಲಿಯ ಶಿಸ್ತು ಕಾಜಿನ ಸಾಮಾನುಗಳನ್ನು ನೋಡಿ ನಾನೇ ಬೆರಗಾದೆ. ವಿಧವಿಧದ ತಿಂಡಿಯ ರುಚಿ ನೋಡುವದಾಯಿತು.

ಮತ್ತೆ ಹೊರಗಿನ ಹಾಲಿಗೆ ಬಂದೆವು. ಯಜಮಾನರು ರೇಡಿಯೋ ಬಂದುಮಾಡಿ, "ಏ ಹಣಮಾ ವೀಣೆ ತಂದು ಇಲ್ಲಿಟ್ಟು ಹೋಗಿ ಸಣ್ಣ ಅಕ್ಕಾ ಅವರು ಬರಬೇಕಂತ ಹೇಳು" ಎಂದು ಆಜ್ಞೆ ಮಾಡಿದರು. ವೀಣೆ ಬಂದಿತು ಓಂದೆಯೇ ಸರ ಸರ ಸೀರೆಯ ಸದ್ದಾಯಿತು. ಕುತೂಹಲದಿಂದ ಮೋರೆ ಮೇಲೆತ್ತಿದವನು ಹಾಗೆಯೇ ಕೆಳಗಿಳಿಸಿದೆ.

.................................................................................................................

ಚೆನ್ನಾಗಿ ಅಲಂಕೃತವಾಗಿದ್ದ ಕರಿಯ ಚಂದನದ ಗೊಂಬೆ ಕಂಡಂತಾಯ್ತು. ಮುಖದಲ್ಲಿ ಮೈಲಿಯ ಕಲೆಗಳು ಬೇರೆ. ಕರಿಯ ಬಣ್ಣದಲ್ಲಿ ಗುಲಾಬಿ ಜರದಂಚಿನ ಸಿಲ್ಕಿನ ಸೀರೆ, ಹೊಳೆಯುವ ಹರಳಿನ ಆಭರಣಗಳು ಎದ್ದು ಕಾಣುತ್ತಿದ್ದವು. ಅವಳ ಹೆಸರು ತಾರಾ. ತಾರಾನ ಮೈಮೇಲಿನ ಚಿನ್ನ, ಆ ಬಂಗಲೆ, ಆ ಕಾರು, ಆ ಶ್ರೀಮಂತಿಕೆ ಎಲ್ಲವೂ ನನಗೆ ಬರೀ ಗೋಡೆ ನಿಲ್ಲಿಸಿದಂತಾಯಿತು. ಆದರೆ, ವೀಣೆಯೊಡನೆ ಹಾಡುತ್ತಿದ್ದ ಆ ಇಂಪಾದ ಮಂಜುಳ ಧ್ವನಿ !....

ಕೊನೆಯ ಪುಟ ತನ್ನಷ್ಟಕ್ಕೆ ತಾನೇ ತೆರೆದುಕೊಂಡಿತು... ಅವಳ ಮನೆಯವರು ಸಂಪ್ರದಾಯಸ್ಥರು. ಅವಳ ತಂದೆ, ವಯಸ್ಸಾದ ಅಜ್ಜಿ, ಬಹಳ ಆಚಾರವಂತರು. ಮನೆಯಲ್ಲಿ ಮಡಿ ಮೈಲಿಗೆ, ಪೂಜೆ ಪುನಸ್ಕಾರ ಬಹಳ. ದಿನವೂ ಸಂಧ್ಯಾವಂದನೆ, ದೇವರ ಪೂಜೆ ಮಾಡಲೇಬೇಕು. ಅವಳ ಮನೆಯ ಗಂಡುಮಕ್ಕಳಿಗೆಲ್ಲ ಇದು ಕಡ್ಡಾಯ ಶಿಕ್ಷಣವಾಗಿತ್ತು. ನಾವು ಕನ್ಯೆ ನೋಡಲು ಹೋಗುವ ಮೊದಲೇ ಈ ಸಂಗತಿಗಳೆಲ್ಲ ತಿಳಿದುಬಂದವು. ಅವಳ ಮನೆಯಲ್ಲಿ ನಮಗೆ ಚಹ ಸಿಗದೆ ಪಾನಕದ ಆತಿಥ್ಯವಾಯಿತೆಂದು ಹೇಳಿದರೆ ಅವರ ಸಾಂಪ್ರದಾಯಿಕತೆಯ ಅರಿವು ಆದೀತು. ಕನ್ಯೆ ಬಂದು ದೂರದಲ್ಲಿ ಹಾಕಿದ್ದ ಮಣೆಯ ಮೇಲೆ ಕುಳಿತಳು. ನಮ್ಮೊಡನೆ ಬಂದಿದ್ದ ಶಾಸ್ತ್ರಿಗಳು ಕೇಳಿದಾಗ 'ಮಂಡೋದರಿ' ಎಂದು ಮೆಲ್ಲಗೆ ಉತ್ತರ ಬಂದಿತು. ತಾನು ತಲೆಯೆತ್ತಿ ನೋಡಿದೆ. ಅಲ್ಲಿಂದ ಕಣ್ಣು ತೆಗೆಯದಾದೆ. ಮೆಲ್ಲಗೆ ಉತ್ತರ ಬಂದಿತು. ನಾನು ತಲೆಯೆತ್ತಿ ನೋಡಿದೆ. ಅಲ್ಲಿಂದ ಕಣ್ಣು ತೆಗೆಯದಾದೆ. ಎಂಥ ಸೌಂದರ್ಯ ! ಅಬ್ಬಾ ಎನ್ನಿಸಿತು. ಮಾಟವಾದ ಹಣೆ, ತಿದ್ದಿ ತೀಡಿದ ಹುಬ್ಬು, ಉದ್ದವಾದ ಎವೆಯಿಂದ ಮುಚ್ಚಿದ ಕಪ್ಪಾದ ಕಣ್ಣುಗಳು, ನೀಳವಾದ ಮೂಗು, ಕೆಂಪಾದ ತೆಳ್ಳನೆಯ ತುಟಿಗಳು, ಸಣ್ಣ ಬಾಯಿ, ಮುಂದೆ ಚಾಚಿದ ಗದ್ದ, ಗೌರವರ್ಣ, ನನಗಂತೂ ಹುಚ್ಚೇ ಹಿಡಿದಂತೆನಿಸಿತು. ಕನ್ನಡ ನಾಲ್ಕನೆ ಇಯತ್ತೆವರೆಗೆ ವಿದ್ಯಾಭ್ಯಾಸ. ದೇವರ ಭಜನೆಯನ್ನು ಹಾಡಿದಳು. ಧ್ವನಿ ಇಂಪಾಗಿರದಿದ್ದರೂ ಆ ರೂಪವತಿಯನ್ನೇ ದಿಟ್ಟಿಸುತ್ತ ಕುಳಿತಿದ್ದೆ. ಹುಡುಗಿಗೆ ಉಡಿ ತುಂಬಲು ನಮ್ಮೊಡನೆ ಬಂದಿದ್ದ ನನ್ನ ಅಕ್ಕ ಇದುವರೆಗೂ ನನ್ನನ್ನು ಚೇಷ್ಟೆ ಮಾಡುತ್ತಾಳೆ. ನಾನೇನೋ ನುಂಗಿಬಿಡುವವನಂತೆ ದುರುದುರು ಅವಳನ್ನು ನೋಡುತ್ತಿದ್ದೆನಂತೆ. ಆದರೆ ಜಾತಕ ಕೂಡಿ ಬರಲಿಲ್ಲ. ಅವಳ ಅಜ್ಜಿ, ಸ್ವತಃ ಮನೆಯವರೆಗೆ ಬಂದು ಹೇಳಿ ವ್ಯಸನಪಟ್ಟರು. ಮಂಡೋದರಿಯ ಆ ರೂಪ!.....

ಅಹಲ್ಯಾ -ದ್ರೌಪದಿ -ಸೀತಾ -ತಾರಾ-ಮಂಡೋದರಿ ಮತ್ತೊಮ್ಮೆ ಅವರೆಲ್ಲರ ಹೆಸರನ್ನು ಚಂದ್ರಶೇಖರ ಉಚ್ಚರಿಸಿದ:

"ಪಂಚಕನ್ಯಾನ್ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ"....

ಶ್ಲೋಕ ನೆನಪಾಗಿ ಚಂದ್ರಶೇಖರನಿಗೆ ನಗೆ ಉಕ್ಕಿಬಂದಿತು. ಅವನ ನಗುವಿಗೆ ಪ್ರತಿಯಾಗಿ ಕುಲುಕುಲು ನಗುತ್ತ ಸುಮಿತ್ರಾ ಹೊರಗಿನಿಂದ ಮನೆಯೊಳಗೆ ಬಂದಳು.

ಸುಮಿತ್ರಾ ಅವನ ಸೋದರತ್ತೆಯ ಮಗಳು. ಈಗ ಅವನ ಗೃಹಲಕ್ಷ್ಮಿ.

***

# ಕಿತ್ತು ಹಚ್ಚಿದ ಗಿಡ

'ಅವ್ವಾ' ಎಂದು ಚೀರುತ್ತ ಓಡಿಬಂದಳು ಬಂಗಾರಿ ಹೊರಗಿನಿಂದ.

"ಬಂಗಿ, ಗುಂಗೀ ಹುಳಾ, ಬಂದೆ ತಡಿ ಮಾಡ್ತೀನಿ ನಿನಗ" ಎನ್ನುತ್ತ ಅವಳನ್ನು ಬೆನ್ನಟ್ಟಿ ಬಂದ ಶೇಕೂ ಬಂಗಾರಿಯ ಮನೆಯೊಳಗೆ ಹೊಕ್ಕಳು. ದನದ ಹಕ್ಕೆಯೊಳಗೆ ಬಗ್ಗಿ ಹುಡುಕಿದಳು. ಪಡಸಾಲೆಯ ಕಟ್ಟೆಯನ್ನೇರಿ ನೋಡಿದಳು. ಎಲ್ಲೂ ಬಂಗಾರಿ ಕಾಣಲಿಲ್ಲ. ಕಡೆಗೆ ಉಪಾಯಗಾಣದೆ 'ಚಿಗವ್ವಬೇ' ಎಂದು ಕೂಗಿದಳು. ಅಡಿಗೆಯ ಮನೆಯ ಬಾಗಿಲಿಗೆ ಬಂದು. ಮಜ್ಜಿಗೆ ಕಡೆಯುತ್ತಿದ್ದ ಬಸಮ್ಮ ಇವಳ ಕೂಗಿಗೆ ಕೆಲಸ ಬಿಟ್ಟು ಹೊರಗೆ ಬಂದಳು.

"ಯಾಕ ಏನಾತು ? ಜಗಳಾಡಿದಿರೇನು?" ಎನ್ನುತ್ತ ತನ್ನನ್ನು ಕಂಡು ಕಣ್ಣೀರು ಒರೆಸುತ್ತಿದ್ದ ಶೇಕೂನ ಬೆನ್ನಮೇಲೆ ಕೈಯಾಡಿಸಿದಳು ಬಸಮ್ಮ.

"ಹೌದಬೇ ಚಿಗವ್ವಾ, ನಾನು ಬಂಗಾರಿ ಆಂಡ್ಯಾಳ ಆಡತಿದ್ದಿವಿ. ಸೋಲಾಕ ಬಂದಕೂಡಲೇ ನನ್ನ ಕೈಗೆ ಕಲ್ಲೀಲೆ ಹೊಡದು ಬಳಿ ಎಲ್ಲಾ ಹೆಚ್ಚಿ ಓಡಿ ಬಂದಾಳ ನೋಡಬೇ" ಎಂದು ರಕ್ತ ಒಸರುತ್ತಿದ್ದ ತನ್ನ ಮುಂಗೈ ಚಾಚಿ ತೋರಿಸಿದಳು ಶೇಕೂ.

"ಹಿಂಗೇನು? ಭಾಳ ತಂಟೆಕಾರ್ತಿ ಆಗ್ಯಾಳ ನೋಡ ಆಕಿ ಈಗ. ಬಂಗಾರೀ" ಎಂದು ಕರೆದಳು.

ಪಡಸಾಲೆಯ ದೊಡ್ಡ ಮಾಡಿನಲ್ಲಿ ಕೂತು ಕದ ಮುಚ್ಚಿಕೊಂಡಿದ್ದ ಬಂಗಾರಿಗೆ ತಾಯಿಯ ಕರೆ ಕೇಳಿದರೂ ಓಗೊಡಲಿಲ್ಲ.

'ಬಂದರೆ ಬರ್ಲಿ ಆಕಿ ಅಡಿಗೀಮನಿಗೆ ; ಹಾಕ್ತೀನಿ ಎರಡೇಟು. ಈಗ ನೀ ಹೋಗು ನಿಮ್ಮ ಮನೆಗೆ' ಎಂದು ಶೇಕೂನನ್ನು ಕಳಿಸಿ ಅಡುಗೆ ಮನೆಯ ಕಡೆಗೆ ತಾಯಿ ಹೊರಳುವದೊಂದೇ ತಡ ಬಂಗಾರಿ ಮಾಡಿನಿಂದ ಹೊರಬಂದು ಪಡಸಾಲೆಯ ಕಟ್ಟೆಯ ಮೇಲಿಂದ ದೊಪ್ಪ ಎಂದು ಜಿಗಿದಳು....

ಬುದಿಂಗನೇ ಎದ್ದು ಕುಳಿತಳು ಬಂಗಾರೆಮ್ಮ. ದನಗಳಿಗೆ ಮೇವು ಹಾಕಲು ಬಂದಿದ್ದ ಚೆನ್ನವ್ವ ಅವಳ ತಮ್ಮನ ಹೆಂಡತಿ "ಯಾಕ್ರಿ ಚಿಗವ್ವಾರ, ಹಾಂಗ್ಯಾಕ ಎದ್ದ ಕುಂತ್ರಿ ಕನಸ -ಗಿನಸ ಬಿತ್ತೇನು" ಎಂದು ನಕ್ಕಳು.

"ಹೌದ, ಚೆನ್ನು; ಉಂಡಾಕಿನೇ ಕೈತೊಳೆದುಕೊಂಡು ಬಂದು ಮಕ್ಕೊಂಡೆ,. ಕಣ್ಣು ಜಗ್ಗಿಬಂದ್ವು, ನಾ ಸಂಣಾಕಿದ್ದಂಗ, ಆಡಿದಂಗ, ಜಗಳಾಡಿದಂಗ, ಏನೇನೋ ಕನಸ ಬಿತ್ತ ನೋಡ. ನನಗ ತಿಳಿವಳಿಕಿ ಬಂದಾಗಿನಿಂದ ಹಿಡಿದು ಲಗ್ನಾಗಿ ಗಂಡನ ಕೂಡ ಹೋಗುತನಕಾನೂ ಇದs ನಾ ಮಲಕೊಳ್ಳು ಜಾಗ. ನಿನ್ನ ಗಂಡನ ಕೂಡ ಸುದ್ದಾ ಜಗಳಾಡಿ ನಾ ಇದs ಜಾಗಾ ಹಿಡೀತಿದ್ದೆ. ಯಾರಿಗೂ ಬಿಡತಿದ್ದಿಲ್ಲಾ. ಮೂವತ್ತ ವರ್ಷ ಆದ್ವು. ಗಂಡನ ಮನೀಗೆ ಹೋಗಿ. ಒಂದು ಸಾರಿನೂ ಇಲ್ಲಿಗೆ ಕಳಿಸಲಿಲ್ಲಾ. ತಾವು ಇದ್ದವರು, ಶಹರದಾಗ ಇರವರು, ಪೋಲಿಸ ಖಾತೆದಾಗ ಇರವರು, ಪೋಲಿಸ್ ಖಾತೆದಾಗ ದೊಡ್ಡ ನೌಕರಿ ಮಾಡವರು. ಆದರ ನಮ್ಮ ತಂದೀ-ತಾಯಿ ಹಳ್ಳೀಯವರು, ಒಕ್ಕಲುತನ ಮಾಡವರು, ಬಡವರು; ಇರೂದೊಂದ ಸಣ್ಣಮನೀ, ಇಂಥವರ ಮನೀಗೆ ಕಳಿಸಿ, ಹೋಗಿ ಬಂದು ಸಂಬಂಧ ಇಟಗೊಂಡರ ತಮ್ಮ ಮಾನಕ್ಕ ಕುಂದಂತ ತಿಳೀತಿದ್ದರು ಅವರು. ನಾನೂ ಬೇಕಾದಷ್ಟು ಕೇಳಿದೆ; ಬೇಡಿಕೊಂಡೆ; ತವರ್ಮನಿಗೆ ಹೋಗ್ತೇನಿ ಅಂತ ಅತ್ತೆ. ಆದರ ಬ್ಯಾಡಾ ಅಂತ ಗಟ್ಟಿ ಹಿಡಿತಿದ್ದರು. ಅವರ ಆ ಪೋಲೀಸ ದರ್ಪಕ್ಕ ಹೆದರಿ ನಾನೂ ಹೆಚ್ಚಿಗೆ ಮಾತಾಡಾಕ ಹೋಗತಿದ್ದಿಲ್ಲಾ. ಅವ್ವನ ನೆನಪು ಎಷ್ಟಾದ್ರೂ ಒಳಗ ಮುಚ್ಚಿಟ್ಟುಕೊಂಡು ಅಳತಿದ್ದೆ. ಏನ ಮಾಡುದದ ಹೇಳು; ಎಲ್ಲಾ ನಮ್ಮ ನಶೀಬ ಖೊಟ್ಟಿ" ಎಂದು ಉಸಿರೆಳೆದಳು ಬಂಗಾರೆಮ್ಮ.

"ಅತ್ತೆವ್ವಾ, ಚೊಚ್ಚಲ ಬಾಣಂತನಕ್ಕರೇ ನಿಮ್ಮನ್ನ ತವರ್ಮನಿಗೆ ಕಳಿಸಿದರೋ ಇಲ್ಲೋ?" ಅವರ ಮಾತು ಕೇಳುತ್ತ ಅಲ್ಲಿಯೇ ಬಂದು ಕುಳಿತಿದ್ದ ಬಂಗಾರೆಮ್ಮನ ತಮ್ಮನ ಮಗಳು ಸುಲೋಚನೆ ಕೇಳಿದಳು.

"ಅದೊಂದು ದೊಡ್ಡ ಕತೀನ ಅದ ಅವಾ, ನಂದಾರ ಈಗ ಏನ್ಕೆಲಸ ? ಹೇಳ್ತಿನಿ ಕೇಳು. ಲಗ್ನಾಗಿ ಅವರ ಮನಿಗೆ ಹೋದಮ್ಯಾಲೆ ಎರಡು ವರ್ಷ ತವರ್ಮನೀ ದಾರೀ ನೋಡಿದ್ದಿಲ್ಲಾ. ಆಮ್ಯಾಲೆ ಚೊಚ್ಚಲ ಬಸರಿದ್ದಾಗ ನಾ ಭಾಳ ದುಂಬಾಲ ಬಿದ್ದು ನಮ್ಮ ಅತ್ತೆವ್ವಗ ಹೇಳಿದಾಗ ಊರಿಗೆ ಸುದ್ದೀ ಕಳಿಸಿದರು: ಕುಬಸಾ ಮಾಡಾಕ ಬರಬೇಕಂತ. ತಮಗ ಬಡತನ ಇದ್ದರೂ ಇದ್ದದ್ದರಾಗ ಥೋಲೋ ಟೋಪ ಸೆರಗಿನ ಸೀರಿ, ಕುಬಸಾ, ಸಜ್ಜಿ ರೊಟ್ಟಿ, ಕಾಯಿಪಲ್ಲೆ. ಚಟ್ನಿ, ಮಾದ್ಲಿ, ಕರಜೀಕಾಯಿ, ನನಗೆ ಪ್ರೀತಿ ಅಂತಾ ಸಜ್ಜಿ ಮಾದ್ಲಿ, ಎಲ್ಲಾ ಮಾಡಿಕೊಂಡು ಕಟಿಗೊಂಡು ಬಂದ್ಲು ನಮ್ಮ ಅವ್ವ. ಅವ್ವನ ಮಾರೀ ನೋಡಿ ಹಿಗ್ಗಿ ಇಷ್ಟಗಲಾದೆ. ಇಬ್ರೂ ಕುಂತು ನಾಲ್ಕು ಸುಖದುಃಖದ ಮಾತುಕತಿ ಆಡಿದಿವಿ. ಊರ ಕಡಿಗೆ ಹೋಗಲಾರದ ಭಾಳ ದಿನಾ ಆಗಿದ್ದುವಲ್ಲಾ, ಈ ಬಯಕಿ ಸುರು ಆದದ್ದೂ ಥೋಲೋ ಆತು ಅಂದ್ಕೊಂಡೆ. ಈ ನೆವದಿಂದಲೇ ಅವ್ವನ ಕೂಡ ಊರಿಗೆ ಹೋಗಿ ಜ್ವಾಳದ ಬಾನ, ಸಜ್ಜಿರೊಟ್ಟಿ, ಎಣೆಗಾಯಿ ಬದನೀಕಾಯಿ, ಕಲ್ಲಾನ ಖಾರ, ಕಡ್ಲಿ ಉಸುಳಿ, ಪಚಡಿ, ನನ್ನ ಪ್ರೀತಿ ಸಜ್ಜೀ ಕಡಬು, ಸಜ್ಜೀ ಮಾದ್ಲಿ ಎಲ್ಲಾ ಮಾಡಿಸಿಕೊಂಡು ಹೊಳೀಗಿ ಹೋಗಿ ಜಳಕಾಮಾಡಿ ಅಲ್ಲೇ ದೇಸಾಯರ ತ್ವಾಟದಾಗ ಪಂಕ್ತಿ ಮಾಡಸಬೇಕಂತ ಮಾಡಿದ್ದೆ. ಗೆಳತೇರ್ನ ಎಲ್ಲಾರೂ ಭೆಟ್ಟಿ ಆಗಬೇಕು. ನನ್ನ ಪ್ರೀತಿ ಆಕಳಾ ಗೌರಿ ಹೋರಿ ಕರಾ ಹಾಕಿತ್ತು, ಅದನ್ನ ನೋಡಬೇಕು, ಅಪ್ಪಗ, ನಮ್ಮ ಆಳು ಭರಮಗ ಹೊಲದಾಗ ಬುತ್ತಿರೊಟ್ಟಿ ಒಯ್ದುಕೊಟ್ಟು ನಾನೂ ಅಲ್ಲೇ ಉಂಡು ಅಂಬಲಿ ಕುಡದು ಬರಬೇಕು ಅಂತ ಏನೇನೋ ಎಷ್ಟು ಯೋಜನೀ ಮಾಡಿದ್ದೆ. ಆದರ ಮನ್ಯಾಗ ನಮ್ಮ ದೊಡ್ಡ ನಾದನೀದ ಕಾರಭಾರ. ಅತ್ತಿ ಆಕೀ ಇಬ್ಬರೂ ಕೂಡಿ ಅವ್ವ ತಂದ ಹಿಟ್ಟಕ್ಕಿ ನೋಡಿ ಮೂಗ ಮುರದು ಆಕೀಗೆ ಹೀಯಾಳಿಸಿ ಮಾತಾಡಿ ತಾವು ಮತ್ತ ಬುಂದೆ, ಖೀರು-ಪುರೆ ಮಾಡಿಸಿ ಊರಾಗ ತಮಗ ಬೇಕಾದವರಿಗೆಲ್ಲಾ ಊಟಕ್ಕ ಹೇಳಿ ಕುಬಸಾ ಮಾಡಿದರು. ಅವ್ವ ತಂದ ಟೋಪಸೆರಗಿನ ಸೀರಿ ನನಗ ಉಡಗೊಡಲಿಲ್ಲಾ.ಇಂಥಾ ದೊಡ್ಡ ಸಾಹೇಬರ ಹೆಂಡತಿ ಇಂಥಾ ಸೀರಿ ಉಟ್ಟರ ಊರ ಮಂದಿ ನಕ್ಕಾರಂತ ಹೇಳಿ ಬ್ಯಾರೆ ರೇಶಿಮಿ ಸೀರಿ ಉಡಿಸಿದರು ನನಗ. ನಾಲ್ಕು ಮಂದಿ ಮುಂದ ಅವ್ವ ತಂದ ಸೀರಿ ಆಕೀಗೆ ತಿರಿಗಿ ಕೊಟ್ಟು ಬಾಯಿಗೆ ಬಂದಾಂಗ ಮಾತಾಡಿದರು. ಇಂಥಾ ಹೊತ್ತಿನ್ಯಾಗ ನನ್ನ ಊರಿಗೆ ಕಳಸ್ರಿ ಅಂತಾ ಹ್ಯಾಂಗ ಕೇಳಲಿ. ಅವ್ವ ಅಳಕೋತ ಊರಿಗೆ ಹೋದ್ಲು. ಅದನ್ನೆಲ್ಲಾ ನೋಡಿ ನನಗ ನನ್ನ ಸಂಭ್ರಮದಕಿಂತಾ ದುಃಖಾನ ಹೆಚ್ಚಾತು. ಎಲ್ಲೇರ ಕುಂತು ಅತ್ತೇನಂದರೂ ಧೈರ್ಯಾ ಇದ್ದಿದ್ದಿಲ್ಲಾ. ಎಲ್ಲಿ ಯಾರರೇ ನೋಡಿದರ ಏನಂತಾರೋ ಅಂತ."

"ಅತ್ತೆವ್ವಾ ಇಷ್ಟೆಲ್ಲಾ ನಡದರೂ ಮಾವಾರು ಸುಮ್ಮನ ಇದ್ದರೇನ್ರಿ? ಅವರು ತಮ್ಮ ಅವ್ವಗ ಅಕ್ಕಗ ಏನೂ ಅನಲೇ ಇಲ್ಲೇನು ?" ಎಂದಳು ಸುಲೋಚನೆ ದುಗುಡದಿಂದ.

"ಇಲ್ಲವಾ, ಅವರೇನೂ ಅನಲಿಲ್ಲಾ. ಮನೀಯೊಳಗ ಏನ ನಡದರೂ ಅವರ ಮನಸ ಇದ್ರನ ನಡೀತದ ಅನ್ನೂದು ನನಗೂ ಆವಾಗ ತಿಳಿದಿತ್ತು. ಅವರು ನಮ್ಮ ತವರ್ಮನಿಯವರೂ ಅಂದರ ಕಸಕ್ಕಿಂತ ಕಡೀ ಮಾಡ್ಯಾರಾ ಅನ್ನೂದೂ ಗೊತ್ತಾಗಿತ್ತು. ಅದಕ್ಕ ನಾ ಅವರಿಗೆ ಏನೂ ಹೇಳಲಿಕ್ಕೆ ಹೋಗಲಿಲ್ಲ. ಸುಲೋಚನಾ, ಯಜಮಾನ್ರು ಇರೋತನಕಾ ನನಗೇನೂ ಕಡಿಮಿ ಮಾಡಲಿಲ್ಲ. ಸೀರಿ, ವಸ್ತ್ರಾ, ಬಂಗ್ಲೆ, ಕಾರು, ಮಕ್ಕಳು ಎಲ್ಲಾ ಸಂಪಾಗಿ ಇತ್ತು. ಆದರ ನಾ ತವರ್ಮನಿಗೆ ಹೋಗಲಿಲ್ಲ. ಸಾಯೂತನಕಾ ತಂದಿ-ತಾಯಿ ಮಾರಿ ಕಾಣಲಿಲ್ಲ ಅನ್ನೂ ಚಿಂತೀ ನನಗ ಬಹಳ ಇತ್ತು" ಬಂಗಾರೆಮ್ಮನ ಕಂಠ ಗದ್ಗದಿತವಾಯಿತು.

"ಅಜ್ಜ ತೀರಿಕೊಂಡಾಗೂ ಬರಲಿಲ್ಲೇನ್ರಿ ನೀವು " ಎಂದು ಸುಲೋಚನೆ ಮತ್ತೆ ಕೇಳಿದಳು.

"ಚೊಚ್ಚಲು ಬಾಣಂತನಕ ಕರಕೊಂಡ ಹೋಗಾಕ ಬಂದಿದ್ದ ನಮ್ಮ ಅಪ್ಪ. ಕಳಸೂದಿಲ್ಲಾ ದವಾಖಾನಿಯೊಳಗ ಹೆರಿಗಿ ಮಾಡಸ್ತೀನಿ ಅಂತ ಅವರು ಹೇಳಿದರು. ಮುಂಜಾನೆ ಬಂದಾವಾ ಒಂದು ಕಪ್ಪ ಚಾ

ಕುಡಿದು ಮಾರೀ ಸಂಣದು ಮಾಡಿಕೊಂಡು ಹಾಂಗs ಹೋದಾ. ಅಂವಗ ಊಟಕ್ಕ ನಿಂದ್ರು ಅಂತ ಸುದ್ಧಾ ಯಾರೂ ಹೇಳಲಿಲ್ಲಾ. ಹೇಳಬೇಕೂ ಅನ್ನೂ ಮನಸು ನನಗ ಇದ್ರೂ ಹೇಳೂ ಅಧಿಕಾರ ಇದ್ದಿದ್ದಿಲ್ಲಾ. ಅಂವ ಹೋದ ಮ್ಯಾಲೆ ಯಾಕೋ ಭಾಳ ಕೆಟ್ಟನ್ನಿಸಿತು. ಭಾಳ ಅತ್ತೆ. ಯಾಕ ಅಂತ ಯಾರೇ ಕೇಳಿದರೆ ಹೊಟ್ಟಿ ನೋಯ್ತದ ಅಂತ ಹೇಳತಿದ್ದೆ ಅದ ನೋಡಿದ್ದ ಕಡೇದಾತು. ಅಂವಾ ಕಟ್ಟಿನಜ್ವರಾ ಬಂದ ತೀರಿಕೊಂಡ ಸುದ್ದಿ ನನಗ ಲಗೂ ಹತ್ತಲಿಲ್ಲಾ. ಮುಂದ ದಿನಾ ಮಾಡೂ ದಿವಸ ನಾ ಬಂದು ಅವ್ವನ್ನ ಮಾತಾಡಿಸಿ ನಾನೂ ಸಾಕಷ್ಟು ಅತ್ತು ಎದಿ ಹಗರ ಮಾಡಿಕೊಂಡು ಹೋದೆ. ಅವ್ವ ಎಷ್ಟು ಚಾಲವರದ್ದು ಇನ್ನೊಂದೆರಡು ದಿನಾ ನಿಂದ್ರು ಅಂತ. ಅವ್ವನ ಮಾರೀ ನೋಡಿ ನಾಲ್ಕು ದಿನಾ ಇರಬೇಕೂ ಅಂತ ಜೀವ ತಳಮಳಿಸ್ತಿತ್ತು. ಆದರ ಸಾಹೇಬರ ಅಪ್ಪಣೆ ಆದ ದಿನಾನ ನಾ ತಿರಿಗಿ ಹೋಗಬೇಕಾಗಿತ್ತು."

ಬಂಗಾರೆಮ್ಮ ಸೆರಗನ್ನು ಕಣ್ಣಿಗೊತ್ತಿಕೊಂಡಳು.

***

"ಲಲಿತಾ" ಎಂದು ದೊಡ್ಡ ದನಿಯಲ್ಲಿ ಕರೆದರು ಸಾಹೇಬರು, ಆಫೀಸಿಗೆ ಹೊರಡಲು ತಯಾರಾಗಿದ್ದರು. ಸಿಪಾಯಿ ಬೂಟಿನ ಲೇಸು ಕಟ್ಟುತ್ತಿದ್ದ. ಲಲಿತಾ ಸುಮ್ಮನೆ ಹೊರಗೆ ಹೋಗಿ ಅವರ ಖುರ್ಚಿಯ ಬಳಿ ನಿಂತಳು. ಸಿಪಾಯಿ ತನ್ನ ಕೆಲಸ ಮುಗಿಸಿ ಎದ್ದು ಹೊರಗೆ ಹೋದ ಮೇಲೆ ಕೇಳಿದಳು:

"ಇವತ್ತ ಆ ದೇಸಾಯ್ರು ಮನೀಯವರು ಚಹಾಕ್ಕ ಕರದರಲ್ಲಾ?"

"ಹೌದ್ರಿ, ಅವರ ಮಗನ ಹುಟ್ಟಿದ ಹಬ್ಬಂತ. ನಾಲ್ಕ ಘಂಟೇಕ್ಕ ಬರಲಿಕ್ಕೆ ಹೇಳ್ಯಾರ."

"ಹೋಗಿ ಬರ್ರಿ ಹಂಗಾರ, ಅಕ್ಕ ನೀನೂ ಕೂಡಿ ಹೋಗ್ರಿ. ಸದಾಶಿವನ್ನ ಮನ್ಯಾಗ ಬಿಟ್ಟು ನಳಿನಿ ಒಬ್ಬಾಕಿನ್ನ ಕರಕೊಂಡು ಹೋಗು."

"ನಾ ಹೊರಟರ ಅವಾ ತಾನೂ ಬರ್ತೀನಂತ ಅಳ್ತಾನಲ್ರೀ"

"ಅವನ್ನ ಬಿಟ್ಟ ಹೋಗು. ಸಿಪಾಯಿ ರಾಮಚಂದ್ರ ಇರ್ತಾನ ಮನ್ಯಾಗ; ಹಾಲು ಕುಡಿಸಿ ಆಡಸ್ತಾನ. ನೀ ಚೋಲೋ ಸೀರಿ ಉಟಗೊಂಡು ಶಿಸ್ತಾಗಿ ಹೋಗು; ಟರಕನಾಂಗ ಹೋಗಬ್ಯಾಡ."

"ಅವರ ಕೂಸಿಗೆ ಹುಟ್ಟಿದ ಹಬ್ಬಕ ಏನರೇ ಒಯ್ಯಬೇಕೇನ್ರಿ" ತಗ್ಗಿದ ಧ್ವನಿಯಲ್ಲಿ ಕೇಳಿದಳು ಲಲಿತಾ. ಹಿಂದಕ್ಕೊಮ್ಮೆ ಒಬ್ಬರ ಮನೆಗೆ ಕೂಸಿಗೆ ಆರತಿ ಮಾಡಲು ಬರಿಗೈಯಲ್ಲಿ ಹೋಗಿ ನಾಲ್ಕು ಜನರಲ್ಲಿ ಅವಮಾನವಾದಂತಾಗಿತ್ತು ಅವಳಿಗೆ.

"ಏನೂ ಬ್ಯಾಡ. ನಮ್ಮಂಥ ಆಫೀಸರರು ಅವರ ಮನೀಗೆ ಹೋದರ ಅವರ ಮ್ಯಾಲೆ ದೊಡ್ಡ ಉಪಕಾರಾ ಮಾಡಿದ್ಹಾಂಗ" ಸಾಹೇಬರ ಆಜ್ಞೆಯಾಯಿತು.

ಲಲಿತೆಯ ಮುಖ ಸಪ್ಪಗಾಯಿತು. ಸಣ್ಣ ಮಗು ಸದಾಶಿವನನ್ನು ಅಳಿಸಿ ಅವನನ್ನು ಬಿಟ್ಟು ಹೋಗಬೇಕಾದರೆ ಅವಳಿಗೆ ತುಂಬಾ ಬೇಸರ. ಲಲಿತೆಯದು ನಿಜವಾದ ತಾಯಿಯ ಪ್ರೀತಿ. ತಂದೆ-ತಾಯಿಗಳನ್ನು ಅಗಲಿ ಬಂದ ಮೇಲೆ ತಿರುಗಿ ಗಂಡನ ಮನೆಯಲ್ಲಿ ಪ್ರೇಮದ ಸವಿ ಕಾಣದೆ ಇದ್ದ ಅವಳು ನಲಿನಿ-ಸದಾಶಿವರನ್ನು ತನ್ನ ಪ್ರಾಣವೆಂದೇ ತಿಳಿದುಕೊಳ್ಳುವಷ್ಟು ಪ್ರೀತಿಸುತ್ತಿದ್ದಳು. ಅವರಿಗೆ ತಾನೇ ನೀರೆರೆಯಬೇಕು, ಅರಿವೆ ತೊಡಿಸಬೇಕು, ಹಾಲು ಕುಡಿಸಬೇಕು, ಅನ್ನ ಉಣಿಸಬೇಕು, ರೊಟ್ಟಿ ಮಾಡಿ ತಿನ್ನಿಸಬೇಕು ಎಂದು ಅವಳ ಮನದಾಸೆ, ಮನೆ ಕೆಲಸ ಮಾಡುವದು ಎಂದರೆ ಅವಳಿಗೆ ಬಲು ಹುರುಪು. ತಾನು ಚಿಕ್ಕವಳಿದ್ದಾಗ ತಾಯಿಗೆ ನೆರವಾಗಲು ಚಿಕ್ಕ ಚಿಕ್ಕ ರೊಟ್ಟಿಗಳನ್ನು ಮಾಡುತ್ತಿದ್ದಳು.

ಅವು ಹಸಿಬಿಸಿಯಾಗಿ ಬೆಂದಿದ್ದರೂ, ದಪ್ಪಗಾಗಿದ್ದರೂ ಅಪ್ಪ "ಬಲು ರುಚಿಯಾಗಿದೆ ಅವ್ವಾ" ಎಂದು ನಗುತ್ತ ತಿನ್ನುತ್ತಿದ್ದುದು ನೆನಪಾಗುತ್ತಿತ್ತು ಅವಳಿಗೆ. ಈಗ ಅವಳು ತೆಳ್ಳಗೆ ಕೇದಗೆ ಗರಿಯಂಥ ರುಚಿಕರವಾದ ರೊಟ್ಟಿ ಮಾಡಬಲ್ಲಳು, ಆದರೆ ಮನೆಯಲ್ಲಿ ಅಡಿಗೆಯ ಬಸಪ್ಪನಿರುವುದರಿಂದ ರೊಟ್ಟಿ, ಅಡಿಗೆ ಮಾಡುವ ಅವಕಾಶವೇ ಆಗ ಇಲ್ಲ. ಮಾಡಲು ಯಾವ ಕೆಲಸವೂ ಇಲ್ಲದೇ ಅವಳ ಮನಸ್ಸಿಗೆ ಕಳವಳವಾಗುವದು. ಎರಡನೇಯವರ ಯ ಅಡಿಗೆಯನ್ನು ಗಂಡನಿಗೆ ಮಕ್ಕಳಿಗೆ ಉಣಿಸಬೇಕಲ್ಲಾ ಎಂದು ಅವಳಿಗೆ ಬೇಸರ. ಆದರೆ ತನ್ನ ಸಾಹೇಬರಿಗೆ ಅದೇ ಪ್ರೀತಿ, ಏಷ್ಟೋ ಸಲ ಸದಾಶಿವನಿಗೆ ರಾಮಚಂದ್ರ ಹಾಲು ಕುಡಿಸಿ ಮಲಗಿಸುತ್ತಾನೆ, ನಾವು ಹೊರಗೆ ಹೋಗಿ ಬರೋಣ ಬಾ, ಎಂದು ಅವಳನ್ನು ಸಿಂಗಾರ ಮಾಡಿಸಿ ಹೊರಗೆ ಕರೆದೊಯ್ಯುತ್ತಾರೆ ಸಾಹೇಬರು. ಆಗಂತೂ ಅವಳಿಗೆ ಎಲ್ಲಿಲ್ಲದ ಕಸಿವಿಸಿ. ದೇಹ ಹೊರಗೆ ಇದ್ದರೂ ಮನಸ್ಸೆಲ್ಲ ಮನೆಯಲ್ಲಿಯೇ ಇರುತ್ತದೆ. ಸದಾ ಹೇಗೆ ಹಾಲು ಕುಡಿಯುತ್ತಾನೋ. ನಳಿನಿ ತಿನಿಸು ತಿಂದಳೋ ಇಲ್ಲವೋ ಎನ್ನುವ ಯೋಚನೆಗಳೇ, ಎಂದಾದರೂ ಒಂದು ದಿನ ಬಸಪ್ಪನಿಗೆ ಆರಾಮವಿಲ್ಲದೆ ಸೂಟಿ ತೆಗೆದುಕೊಂಡಾಗ ಅಡಿಗೆ ಕೆಲಸ ಲಲಿತೆಗೆ ಬಂದರೆ ಅವಳಿಗೆ ಬಹಳ ಹುರುಪು. ತಾನೆ ಅಡಿಗೆ ಮಾಡಿ ಊಟಕ್ಕೆ ನೀಡಿ ಒಂದು ಬಗೆಯ ಆತ್ಮಸಂತೃಪ್ತಿಯಿಂದ ಗಂಡನನ್ನೂ ಮಕ್ಕಳನ್ನೂ ನೋಡುತ್ತಾಳೆ. ಅಂದು ಅವಳ ಮನಸ್ಸಿಗೆ ಒಂದು ತರದ ಸಮಾಧಾನ.

ಸಾಹೇಬರು ಆಗಲೇ ಆಫೀಸಿಗೆ ಹೋಗಿದ್ದರು. ಯೋಚನೆ ಮಾಡುತ್ತ ನಿಂತಿದ್ದ ಯಜಮಾನಿಯನ್ನು ಬಸಪ್ಪ ಊಟಕ್ಕೆ ಕರೆಯಲು ಬಂದ. ಊಟ ಮುಗಿಸಿ ಕೈ ತೊಳೆದ ಲಲಿತೆ ಇಂದು ದೇಸಾಯರ ಮನೆಗೆ ಹೋಗಲೇಬಾರದೆಂದು ನಿರ್ಧಾರ ಮಾಡಿದಳು. ದೇಸಾಯರ ಹೆಂಡತಿ ಕಲಿತವಳು, ಫ್ಯಾಷನ್ನಿನವಳು, ಶ್ರೀಮಂತಳು ಮೇಲಾಗಿ ಜಂಭದವಳು, ಅವಳ ಬಾಯಲ್ಲಿ ಬರೀ ದೊಡ್ಡಿಸ್ತನದ ಮಾತುಗಳೇ. ಇತರರನ್ನು ಹೀಯಾಳಿಸಿ, ಟೀಕಿಸಿ ಮಾತನಾಡುವದೆಂದರೆ ಅವಳಿಗೆ ಬಹಳ ಮೋಜು. ಅವಳ ಸ್ವಭಾವವನ್ನು ಚೆನ್ನಾಗಿ ಬಲ್ಲ ಲಲಿತೆಗೆ ಅವರ ಮನೆಗೆ ಹೋಗಲು ಮನಸ್ಸೇ ಇರಲಿಲ್ಲ. ಅಂತೇ ತಾನು ನಿರ್ಧಾರ ಮಾಡಿದಂತೆಯೇ ನಡೆಯಬೇಕೆಂದು ಈ ವಿಷಯದ ಬಗ್ಗೆ ನಾದಿನಿಗೂ ಏನೂ ಹೇಳಲಾಗಲಿಲ್ಲ.

ರಾತ್ರಿ ಊಟ ಮುಗಿಸಿ ಕೋಣೆಗೆ ಹೋದ ಸಾಹೇಬರಿಗೆ ಏನು ನೆನಪಾಯಿತೋ "ಲಲಿತಾ" ಎಂದು ಗರ್ಜಿಸಿದರು. ಊಟ ಮಾಡುತ್ತಿದ್ದವಳು ಅಷ್ಟಕ್ಕೆ ಬಿಟ್ಟು ಕೈ ತೊಳೆದು ಕೋಣೆಗೆ ಹೋದಳು.

"ಇವತ್ತ ದೇಸಾಯರ ಮನಿಗೆ ಯಾಕ ಹೋಗಲಿಲ್ಲಾ?"

ಲಲಿತೆಗೆ ಏನು ಉತ್ತರ ಕೊಡಬೇಕೋ ಬೇಗ ತಿಳಿಯಲಿಲ್ಲ. ತಡವರಿಸುತ್ತ ನಿಂತಳು. 'ಛಪ್:' ಕೆನ್ನೆಯ ಮೇಲೊಂದು ಏಟು ಬಿತ್ತು. ಬಿರುಸಾದ ಕೈಗಳು; ಕಣ್ಣಿಗೆ ಕತ್ತಲೆ ಬಂದಿತು. ಕಣ್ಣು ತೆರೆಯುವಷ್ಟರಲ್ಲಿ ಬೆನ್ನ ಮೇಲೆ ಬಡಿಗೆಯಿಂದ ಹೊಡೆತಗಳು ಒಂದರ ಮೇಲೊಂದು, ಲಿಲತೆ ಕೆಳಗೆ ಬಿದ್ದರೂ ಬಿಡಲಿಲ್ಲ ಸಾಹೇಬರು. ಬಿಡಿಸಲು ಬಂದ ನಾದಿನಿ ತಮ್ಮನ ಅವತಾರ ನೋಡಿ "ಯಾಕಪಾ ಹಾಂಗ್ಯಾಕ ಹೊಡೀತಿ. ಏನ ತಪ್ಪ ಮಾಡ್ಯಾಳ ಆಕಿ" ಎಂದಳು.

"ಇವತ್ತ ಮಧ್ಯಾಹ್ನ ದೇಸಾಯರ ಮನೀಗೆ ಅಕ್ಕನ್ನ ಕರಕೊಂಡು ಚಹಾಕ್ಕ ಹೋಗಿ ಬಾ ಅಂತ ಹೇಳಿದ್ದೆ. ಹೋಗೇ ಇಲ್ಲ. ನನ್ನ ಮಾತು ಅಂದ್ರ ನಿನಗ ದಾದ ಇಲ್ಲೇನು ? ನಾ ಹೇಳಿದ್ದು ಕೇಳಬಾರದು ಅಂತ ಆಣೀ ಹಾಕೀಯೇನು ?"

"ಇಲ್ರೀ ಇನ್ನೊಮ್ಮೆ ಹಾಂಗ ಮಾಡೂದಿಲ್ಲಾ, ನೀವು ಹೋಗು ಅಂದಲ್ಲೆ ಹೋಗತೇನಿ, ಮಾಡು ಅಂದದ್ದು ಮಾಡತೇನಿ. ನೀವು ಹೇಳಿದ್ದು ಕೇಳತೇನಿ. ನನ್ನ ಹೊಡೀಬ್ಯಾಡ್ರಿ"

"ಇನ್ನೊಮ್ಮೆ ನಾ ಹೇಳಿದ ಮಾತು ಮಿಕ್ಕಿದೀ ಅಂದರ ನೋಡು: ನಿನ್ನ ಮೈಯಾಗಿನ ಎಲಬು ಚೂರಚೂರ ಮಾಡತೇನಿ."

ಲಲಿತೆ ಥರ ಥರ ನಡುಗುತ್ತಿದ್ದಳು....

"ಇರಲಿ ಬಿಡ್ರಿ ಚಿಗವ್ವಾರ; ಹಿಂದಿಂದು ನೆನಸಿಕೊಂಡು ಅತ್ತು ಏನಾಗುದದ" ಚೆನ್ನವ್ವ ಸಮಾಧಾನ ಹೇಳಿದಳು.

"ನನ್ನ ಹೊಟ್ಟೀಯೊಳಗಿನ ಸಂಕಟ ನನಗ ಗೊತ್ತು, ಆ ಪರಮಾತ್ಮಗ ಗೊತ್ತು. ಆದರ ನೋಡಿದ ಮಂದಿ ಲಲಿತಾಬಾಯಿ ಎಷ್ಟ ದೈವಾನಿ ಇದ್ದಾಳ ಅಂತಿದ್ದರು. ಅವರ ಮಾತ ಕೇಳಿ ನಾನು ನಗಬೇಕೋ ಅಳಬೇಕೋ ತಿಳೀತಿದ್ದಿಲ್ಲಾ. ಸುಲೂ, ನಾ ಇನ್ನೊಂದು ಮಾತು ನಿನಗ ಹೇಳೂದ ಮರ್‍ತೆ ನೋಡು. ಸಾಹೇಬರು ಬಂಗಾರಿ ಅನ್ನೂ ಹೆಸರು ಛಂದ ಇಲ್ಲಾ ಅಂತ ನನಗ 'ಲಲಿತಾ' ಅಂತ ಹೆಸರ ಇಟ್ಟಿದ್ರು. ಅಲ್ಲೆ ಎಲ್ಲಾರೂ ಹಾಂಗ ಕರೀತಿದ್ದರು."

"ಅಲ್ರಿ ಚಿಗವ್ವಾರ ಇಷ್ಟೆಲ್ಲಾ ಆರಸೂ ಮಂದಿ, ಈ ಹಳ್ಳಿಗೆ ಬಂದರ ಹ್ಯಾಂಗ, ನಿಮ್ಮನ್ನ ಲಗ್ನಾ ಮಾಡಿಕೊಂಡರ ಹ್ಯಾಂಗ ಅಂತ ಸೋಜಿಗ ಆಗೇದ ನನಗ" ಚೆನ್ನವ್ವ ತನ್ನ ಮಾತನ್ನೊಂದು ಸೇರಿಸಿದಳು..

"ಅದೊಂದು ಯೋಗಾಯೋಗ ನೋಡು. ಅವರದೊಂದು ಖಟ್ಲೇದ ಕೆಲಸ ಇತ್ತಂತ ಇಲ್ಲೆ. ಆವಾಗಿನ್ನೂ ಇವರು ಫೌಜದಾರರು ಇದ್ರ ಕಾಣಸ್ತದ. ದೊಡ್ಡ ಮಂದಿ ಬಂದರ ಅವರ ವ್ಯವಸ್ಥಾ ಎಲ್ಲಾ ಗೌಡರಲ್ಲೇ ಆಗತಿತ್ತು. ನಮ್ಮೂರ ಗೌಡರು ಅವರಿಗೆ ದೂರದ ಬಳಗ ಅಂತ. ಮಾತುಮಾತಿಗೆ ಬಂದಾಗ ತಮ್ಮ ತಾಯಿ ಹಳ್ಳೀ ಕನ್ಯಾ ತಗೀಬೇಕಂತಾಳ ಅಂತ ಹೇಳಿದರಂತ ಸಾಹೇಬರು, ಆವಾಗ ಗೌಡರು ನಮ್ಮ ಅಪ್ಪನ ಹೆಸರು ಹೇಳಿ ನನ್ನ ತೋರಿಸಲಿಕ್ಕೆ ಕರಕೊಂಡು ಬಂದರು...

ಓಡುತ್ತ ಬಂದ ಗಂಗಾಧರ ಚೆನ್ನವ್ವನಿಗೆ "ಅವ್ವಾ, ಅಪ್ಪನ ಕೂಡ ಈಗ ಯಾರ್‍ಯಾರೋ ಮಂದಿ ಬರ್‍ತಾರಂತ. ಅವಲಕ್ಕಿ ಚಹಾ ಮಾಡಲಿಕ್ಕೆ ಮನ್ಯಾಗ ಹೇಳು ಅಂತ ನನ್ನ ಕಿಂವ್ಯಾಗ ಹೇಳಿದ" ಎಂದು ತೇಕುತ್ತ ಹೇಳಿದ.

"ಯಾವೂರವರೋ ಗಂಗಣ್ಣ" ಎಂದಳು ಬಂಗಾರೆಮ್ಮ.

"ಅವರ ಮಾತಿನ ಮ್ಯಾಲಿಂದ ಗದಗಿನವರು ಇರಬೇಕಂತ ನಾನ ತಿಳಕೊಂಡಿನ್ರಿ ಅತ್ತೆವ್ವಾ" ಗಂಗಾಧರ ಹೆಮ್ಮೆಯಿಂದ ತನ್ನ ಜಾಣತನವನ್ನು ಕೊಚ್ಚಿಕೊಂಡ.

"ಗದಗಿನವರ ? ಹಂಗಾರ ಸುಲೂನ್ನ ನೋಡಾಕ ಬಂದಿದ್ದಾರೇಳು. ಮೊನ್ನೆ ಹೇಳತಿದ್ದ ತಮ್ಮಣ್ಣ; ಅವರs ಇರಬೇಕು. ಛೋಲೋ ಆತ ಬಿಡು, ಹೊಂದಿತಂದರ ನಿನ್ನ ಲಗ್ನಾ ಮಾಡೇ ಊರಿಗೆ ಹೋಗತೇನಿ ಸುಲೂ" ಎಂದು ನಕ್ಕಳು ಬಂಗಾರೆಮ್ಮ.

"ಅಷ್ಟ್ಯಾಕ ಅವಸರಾ ಮಾಡತೀರಿ ನೀವು. ಅತ್ತೆವ್ವ ತೀರಿಕೊಂಡಾಗ ಮಣ್ಣಿಗೆ ಬಂದವರು ಅದರ ಮ್ಯಾಲೆ ಬಂದೇ ಇಲ್ಲ. ಆವಾಗ ನಾನೂ ಹೊಸ ಮದಲಗಿತ್ತಿ. ದುಃಖದ ಮನಿ ಬ್ಯಾರೆ. ಇಬ್ಬರೂ ಕೂಡಿ ನಿಂತಾಂಗ ಆಗಲಿಲ್ಲ. ಸುಲೂನ ಲಗ್ನ ಈಗರ ಆಗಲಿ ಮುಗಿಸೇ ಹೋಗಬೇಕು ನೀವು. ಮನಿಯೊಳಗ ನಿಮ್ಮಮ್ಮ ಬಿಟ್ರ ಹಿರೇರು ಯಾರೂ ಇಲ್ಲಾ. ನೀವಿದ್ರ ಛಂದ. ಆದರ ನಿಮ್ಮ ಬಂಗ್ಲೆ, ಕಾರು, ಆಳು, ಪಲ್ಲಂಗ, ಕುರ್ಚಿ ಇವೆಲ್ಲಾ ನಮ್ಮಲ್ಲಿ ಎಲ್ಲೀವು ಬಂದಾವು. ಹೇಳಿ ಕೇಳಿ ಒಕ್ಕಲಿಗರು ನಾವು" ಚೆನ್ನವ್ವ ಕಕುಲಾತಿಯಯಿಂದ ನುಡಿದಳು.

"ಛೀ ಹುಚ್ಚಿ, ನನ್ನ ತವರಮನಿ ಹ್ಯಾಂಗಿದ್ದರೂ ನನಗ ಛಂದ ಚೆನ್ನವ್ವಾ. ಅಂಥಾ ಒಣಾ ಡಂಭಾಚಾರದ ಶ್ರೀಮಂತಿಕೀಗಿಂತಾ ಇಷ್ಟ ಪ್ರೀತಿಲೆ ನೋಡತೀರಿ ನೀವು ನನ್ನ, ಇದ ನನಗ ದೊಡ್ಡದು. ಖರೇ ಹೇಳತೀನಿ ಚೆನ್ನೂ

ನಿನ್ನ ಮುಂದ, ಮೂವತ್ತು ವರ್ಷ ಬಾಳೇ ಮಾಡಿದೆ ಆ ಮಾರಾಯ್ರು ಕೂಡ. ಕಣ್ಣುಮುಚ್ಚಿ ಹೋದ್ರು, ಒಂದಿನಾ ಅರೆ ನನ್ನ ಮನಶ್ಯಾಳಂಗ ಕಾಣಲಿಲ್ಲ. ನನಗೂ ಮನಸ್ಸ ಅದ, ಪ್ರೀತಿ ಅದ, ಅಭಿಮಾನ ಅದ, ಆಸೇ ಅದ ಅಂತ ಒಂದು ದಿನಾನೂ ಅವರು ತಿಳಕೊಳ್ಳಲಿಲ್ಲಾ, ಅವರ ಮನೀ ತೊತ್ತು ಆಗಿದ್ದೆ ನಾನು. ಹೇಳಿದರ ಯಾರೂ ನಂಬಲಿಕ್ಕಿಲ್ಲಾ. ಇಂಥಾ ಅಡಗೀಮಾಡೂ ಅಂದರ ಮಾಡೂದು; ಇಂಥಾದ್ದು ಉಡೂ ಅಂದರ ಉಡೂದು, ಇಂಥಲ್ಲೆ ಹೋಗೂ ಅಂದರ ಹೋಗೂದು, ಇಂಥವರನ್ನ ಮಾತಾಡಸು ಅಂದರ ಮಾತಾಡಸೂದು, ಇಷ್ಟ ನಿರ್ಜೀವ ವಸ್ತು ಆಗಿದ್ದೆ ನಾನು. ಇಲ್ಲಿ ಬಂದಾಗಿಂದ ತಿರಿಗಿ ಸಣ್ಣಾಕಿ ಆದಂಗ ಆಗೇನಿ. ಎಲ್ಲಿ ಬೇಕಲ್ಲೆ ಹೋಗತೇನಿ. ಹರಟೆ ಹೊಡೀತೀನಿ. ಬೇಕಾದ್ದು ಉಣತೇನಿ, ತಿಂತೇನಿ. ಮೊನ್ನೆ ನೋಡ ತನ್ನ ಗೆಳತಿ ಶೇಕಮ್ಮ ಬಂದಾಗ ಇಬ್ರೂ ಬಚ್ಚಬಾಯಿ ಮುದುಕೇರಾದ್ರು ಎಷ್ಟೊತ್ತು ಛಕ್ಕಾ ಆಡಿದ್ವಿ. ಸುಲೂ ಕುಟ್ಟಿ ಕೊಟ್ಟ ಚಿಗಳೀ ಇಬ್ರೂ ದಂಟಿಗೆ ಹಚಿಗೊಂಡ ತಿಂದಿವಿ. ಸಂಜಿಗೆ ಹಲ್ಲು ರೊಟ್ಟೀ ತಿನ್ನಾಕ ಸುದ್ದಾ ಬರಲಿಲ್ಲಾ. ಇಲ್ಲೇ ಇರೂ ಅಂದ್ರ ಇದ್ದ ಬಿಡೂವಾಕಿ ನಾನೂ. ಆದರ ಸದಾಶಿವಗ ಬ್ಯಾರೆ ಊರಿಗೆ ವರ್ಗ ಅಗೇದಂತ. ಹೊಸಾ ಊರು ಸೊಸಿ ಒಬ್ಬಾಕೀನೆ ಮೂರ-ನಾಲ್ಕು ಮಕ್ಕಳ್ನ ಕರಕೊಂಡು ಹ್ಯಾಂಗ ಇರ್ತಾಳ. ಅದಕ್ಕ ಬಾ ಅಂತ ಹೇಳ್ಯಾನ ಹೋಗತೇನಿ ಮತ್ತ ಬರತೇನಿ" ಎಂದು ಬಂಗಾರೆಮ್ಮ ಸಮಾಧಾನಪಡಿಸಿದಳು.

ಹೊರಗೆ ಹೆಜ್ಜೆಯ ಸಪ್ಪಳವಾಯಿತು. "ಬಂದ್ರಂತ ಕಾಣ್ತದ ಹೋಗುಣು ನಡೀ ಒಳಗ. ಸುಲೂ ಒಗ್ಗರಣಿ ಅವಲಕ್ಕಿ ಇನ್ನೂ ಮಾಡ್ಯಾಳೋ ಇಲ್ಲೋ ನೋಡೂಣು" ಎನ್ನುತ್ತ ಇಬ್ಬರೂ ಎದ್ದರು.

***

ಸುಲೋಚನೆಗೆ ಲಗ್ನ ಗೊತ್ತಾಗಿತ್ತು. ಮದುವೆಯ ಮುಹೂರ್ತಕ್ಕೆ ಇನ್ನು ಎಂಟೇ ದಿನ ಉಳಿದಿದ್ದವು. ಸಾವರಿಸುವ ಕೆಲಸ ಭರದಿಂದ ಸಾಗಿತ್ತು. ಓಣಿಯೊಳಗಿನ ಹೆಣ್ಣು ಮಕ್ಕಳೂ ಕೆಲಸಕ್ಕೆ ನೆರವಾಗಲು ಬಂದಿದ್ದರು. ಅಕ್ಕಿ ಹಸನು ಮಾಡುವುದು, ಗೋದಿ ಬೀಸುವುದು, ಹಿಟ್ಟು ಹಸನು ಮಾಡುವದು ಮೊದಲಾದ ಕೆಲಸಗಳು ನಡೆದಿದ್ದವು. ಬೀಸುವ ಸಪ್ಪಳವೂ ಅದರೊಡನೆ ಹಾಡೂ ನಿಂತೊಡನೆ ಎಲ್ಲ ಕಡೆಗೂ ಮೌನವೇ ನೆಲೆಸಿತು. ಬಾಯಿ ಮುಚ್ಚಿಕೊಂಡು ಸುಮ್ಮನೇ ಕೆಲಸ ಮಾಡುವದೆಂದರೆ ಬೇಸರವಲ್ಲವೇ?

"ಅತ್ತೆವ್ವಾ ಒಂದ ಕತೀನರೇ ಹೇಳ್ರಿ" ಸುಲೋಚನೆ ಬಂಗಾರೆಮ್ಮನನ್ನು ಕೇಳಿದಳು."

"ನಾ ಎಲ್ಲೀ ಕತೀ ಹೇಳಲೆವ್ವಾ; ನಂದs ಒಂದು ಕತೀ ಆಗೇದ ನೋಡು" ಎಂದ ಬಂಗಾರೆಮ್ಮನಿಗೆ ತಾನು ಲಗ್ನಾಗಿ ಹೋದ ಹೊಸದಾಗಿಂದು ಒಂದ ಮೋಜು ನೆನಪಾಗಿ ಹೇಳಿದಳು; "ಒಂದು ದಿನಾ ಯಾಕೋ ಸಾಹೇಬರು ಒಳೇ ಖುಷಿಯೊಳಗ ಮನೀಗೆ ಬಂದು 'ಲಲಿತಾ' ಅಂದ್ರು. 'ಯಾಕ್ರೀ' ಅಂದೆ. ಅಷ್ಟೊತ್ತಿಗೆ 'ಲಲಿತಾ' ಅಂತ ಕರದರ 'ಓ' ಅನ್ನಲಿಕ್ಕೆ ರೂಡೀ ಮಾಡಿಕೊಂಡಿದ್ದೆ. ನಮ್ಮ ಸಾಹೇಬರಿಗೆ ಬಡ್ತಿ ಸಿಕ್ಕಿತಂತ ಚಾ ಪಾರ್ಟಿಗೆ ಕರದಾರ. ನಾವಿಬ್ರೂ ಹೋಗಬೇಕು. ಇಬ್ಬರೂ ಬರಬೇಕಂತ ತಿಳಿಸ್ಯಾರ. ಒಳೇ ಟಾಪ ಟೀಪಾಗಿ ಹೋಗಬೇಕ ಹಾ. ಉಳಿದವರ ಮನಿಯವರೂ ಬಂದಿರ್ತಾರ, ಅಲ್ಲೆ ಹಳ್ಳಿ ಹುಡುಗಿ ಹಾಂಗ ಹುಚ್ಚುಚ್ಚಾರ ಏನರೆ ಮಾಡಬ್ಯಾಡ. ಹೆಚ್ಚಗೀ ಮಾತಾಡಬ್ಯಾಡ ಅಂತ ಎಲ್ಲಾನು ತಿಳಿಸಿ ಹೇಳಿದರು. ಪಾರ್ಟಿ ಇದ್ದ ದಿನಾ ಅವರು ಹೇಳಿದಂಥಾ ಸೀರಿ ಉಟಕೊಂಡು ಸಿಂಗಾರಾಗಿ ಅವರ ಕೂಡ ಹೋದೆ. ಆಗಲೆ ಮತ್ತ ಭಾಳ ಮಂದಿ ಬಂದಿದ್ದರು. ಆವಾಗ ಕಲೆಕ್ಟರ ಸಾಹೇಬ್ರು ಯುರೋಪಿಯನ್ನರಾಗಿದ್ದರು. ಅವರೂ ಅವರ ಹೆಂಡ್ತಿಗೆ ಎಲ್ಲಾ ಹೆಣ್ಮಕ್ಕಳ ಗುರ್ತು ಮಾಡಿಕೊಟ್ಟರು. ಆಕಿ ಎಲ್ಲಾರದೂ ಕೈ ಹಿಡಿದು ಅಗಳಾಡಸ್ತಿದ್ಲು. ನನ್ನ ಹೆಸರ ಹೇಳಿದ ಕೂಡಲೆ ನನ್ನ ಕೈ ಹಿಡಿದೂ ಅಳಗಾಡಿಸಿದ್ಲೂ. ನಾ ಅಂತೂ ಆಕೀ ಕೆಂಪನ್ನ ಮಾರಿ ಮಿಕಿ ಮಿಕಿ ನೋಡಿಕೋತ ನಿಂತಿದ್ದೆ. ಆಮ್ಯಾಲೆ ಎಲ್ಲರೂ ಕೂಡಿ ಚಹಾಕ್ಕೆ ಹೋದವಿ. ಟೇಬಲ್ಲಿನ ಸುತ್ತ ಎಲ್ಲರೂ ನಿಂತ್ರು. ಎಲ್ಲಾರ ಮುಂದೂ ಒಂದೊಂದು, ಎರಡೆರಡು ಪ್ಲೇಟಿನ ತುಂಬ ತಿನಸು, ಚಹಾದ ಕಪ್ಪು ಇಟ್ಟಿದ್ರು. ಎಲ್ಲಾರೂ

ಸಾವಕಾಶ ಮಾತಾಡಿಕೋತ ಒಂದೊಂದ ಚಮಚೆ ಉಪ್ಪಿಟ್ಟು ತಿಂತಿದ್ರು. ಯಾವಾಗರೇ ಒಂದು ಚೂರು ಬಿಸ್ಕೀಟು ತೊಗೋತಿದ್ರು. ತುಸುಮಂದಿ ಅಂತೂ ಪ್ಲೇಟಿಗೆ ಕೈಹಚ್ಚಿದಾಂಗ ಮಾಡಿ ಅರ್ಧಾ ಕಪ್ಪು ಚಹಾ ಕುಡದು ಉಳಿದದ್ದೆಲ್ಲಾ ಹಾಂಗs ಬಿಟ್ಟ ಬಿಟ್ರು. ನನಗೆ ಅನ್ನದ ಮ್ಯಾಲೆ ಎಷ್ಟ ಸೊಕ್ಕ ಮಾಡ್ತಾರಲ್ಲಪಾ ಇವರು ಅನಿಸ್ತು. ನನ್ನ ಪ್ಲೇಟನ್ಯಾಗಿನ ಚಮಚೆ ಕೆಳಗಿಟ್ಟು ಕೈಲೆ ಪೂರ್ಣ ಎಲ್ಲಾ ತಿಂದೆ. ಚಹಾ ಭಾಳ ಸುಡ್ತಿತ್ತು. ಬಸೀಯೊಳಗ ಹಾಕ್ಕೊಂಡು ಕುಡದ ಬಿಟ್ಟೆ ಒಂದಿಬ್ಬರು ಹೆಣ್ಮಕ್ಕಳು ಪಿಸಿ ಪಿಸಿ ಏನೋ ಮಾತಾಡಿಕೊಂಡರು. ನಾ ಅತ್ಲಾಗ ಲಕ್ಷ್ಯ ಕೊಡಲಿಲ್ಲ. ಆಮೇಲೆ ಒಂದಿಬ್ಬರು ಭಾಷಣಾ ಮಾಡಿದರು. ನಮ್ಮ ಸಾಹೇಬರೂ ಮಾತಾಡಿದರು. ತಮ್ಮ ಭಾಷಣದಾಗ ಸಾಹೇಬರನ್ನ ಭಾಳ ಹೊಗಳಿದರು. ಆದರ ಮನಿಯೊಳಗ ಮಾತ್ರ ಅವನ ನೆನಪು ತೆಗೆದು ಭಾಳ ನೀಚ ಇದ್ದಾನ, ಅಂಥಾವಾ ಇಂತಾವಾ ಅಂತ ಬಯ್ಯುತಿದ್ದರು. ಆ ಮ್ಯಾಲೆ ಮನೀಗೆ ಬಂದ್ವಿ. ಅವತ್ತ ಮನೀಯೊಳಗೆ ನೋಡಬೇಕಾಗಿತ್ತು ಇವರ ಅವತಾರ. ನಾನು ಹಾಂಗ ತಿನಸೆಲ್ಲಾ ತಿಂದದ್ದು, ಬಸಿಯೊಳಗ ಚಹಾ ಹಾಕ್ಕೊಂಡು ಕುಡಿದದ್ದು ತಪ್ಪಂತ. ಹಾಂಗ ಹಳ್ಳೀ ಊರ ಹುಂಬರು ಮಾಡ್ತಾರ. ಸುಧಾರಿಸಿದ ಮಂದಿ ಮಾಡೂದಿಲ್ಲ. ಮಂದ್ಯಾಗ ತಮ್ಮ ಸುಮಾರು ಆತಂತ ಹೇಳಿ ಸಿಟ್ಟಗೆದ್ದು ನನ್ನ ಹೊಡದರು. ಅಂದನಿಂದಾ ಪಾರ್ಟಿ, ಹೊರಗ ಹೋಗೂದು ಅಂದರ ನನ್ನ ಮೈಮ್ಯಾಲೆ ಮುಳ್ಳ ಬರತಿದ್ದವು." ಬಂಗಾರೆಮ್ಮ ತನ್ನ ಜೀವನದಲ್ಲಿ ನಡೆದ ಸಂದರ್ಭವನ್ನೇ ಕತೆಮಾಡಿ ಹೇಳಿದರು.

"ಹಂಗಾರ ನೋಡಿದವರಿಗೆ ನೀವು ಸುಖದಿಂದ ಇದ್ದಂಗ ಕಂಡರೂ ನೀವೂ ಭಾಳ ತ್ರಾಸ ತೊಗೊಂಡಿರಿ" ಸುಲೋಚನೆಯ ಗೆಳತಿ ಶಾರದಾ ಸಹಾನುಭೂತಿ ತೋರಿಸಿದಳು.

ಹೌದವಾ; ನಾ ನೋಡಿದರ ಹಳ್ಳೀ ಊರೊಳಗ ಬೆಳದಾಕಿ. ಆ ಸಾಹೇಬರ ಶಿಸ್ತು ಒಗ್ಗಿಸಿಕೋಬೇಕಾದ್ರ ನನಗ ಭಾಳ ದಿನಾ ಹಿಡಿದವು. ಈಗ ನೋಡು ಒಂದ ಭೂಮಿ ಗುಣದಾಗ ಬೆಳದ ಗಿಡಾನ ಕಿತ್ತು ಬ್ಯಾರೇ ಗುಣದ ಭೂಮ್ಯಾಗ ಹಚ್ಚಿದರ ಅದ್ಯಾಂಗ ಛೊಲೊ ಬೆಳದೀತು. ನಂದೂ ಬಾಳೆ ಹಂಗ ಆತು. ಹೂವಿನ ಕುಂಡ ಎಲ್ಲಿಟ್ಟರೂ ಛಂದ ಕಾಣಸ್ತದ. ಆದರ ಮನಶ್ಯಾ ಅಂದ ಮ್ಯಾಲೆ ನೆಲದೊಳಗ ಬೇರ ಬಿಟ್ಟು ಬೆಳೀಬೇಕಾಗ್ತದ ಹೌದಲ್ಲೊ? ನಾ ಎಂದರsರೇ ಹಿಂಗ ಆರಾಮಾಗಿ ಕಾಲು ಚಾಚಿಕೊಂಡು ಕುಂತು ನಾಲ್ಕ ಮಂದೀ ಕೂಡ ಮನಸ್ಸ ಬಿಚ್ಚಿ ಸುಖಾ ದುಃಖಾ ಮಾತಾಡೇನೋ ಇಲ್ಲೋ ಅನಸ್ತಿತ್ತು ನನಗ." ಬಂಗಾರೆಮ್ಮ ಮತ್ತೆ "ಜೀವನದಾಗ ಸಂಪೂರ್ಣ ಸುಖಾ ಯಾರಿಗೂ ಸಿಗೂದಿಲ್ಲಾ ಖರೆ. ಆದರ ಗಂಡಾ ಅಂತ ಕೈ ಹಿಡಿದಾವಾ ತನ್ನ ನಂಬಿ ಬಂದ ಹೆಣ್ಣು ಒಬ್ಬಳು ಮನುಷ್ಯಳು ಅಂತ ಪ್ರೀತಿಯಿಂದ ನೋಡಿಕೊಂಡರೆ ಎಷ್ಟೋ ಸಂತೋಷ ಆಗ್ತದ, ನನಗ ಅದೇ ಸಿಕ್ಕಿದ್ದಿಲ್ಲಾ. ತಂದಿ ತಾಯಿ ಧಾರಿ ಎರೆದುಕೊಟ್ಟರು ಅಂತ ಅವರ ಮನೀಗೆ ಹೋದೆ. ನನ್ನ ಕರ್ತವ್ಯ ಮಾಡಬೇಕಾದ್ದೆಲ್ಲಾ ಮಾಡಿದೆ ಅನ್ನೂದೊಂದೇ ಸಮಾಧಾನ. ಛೊಲೋ ಗಂಡ ಸಿಗಬೇಕಾದರೆ ದೇವರಿಗೆ ಹತ್ತು ಹೂವು ಹೆಚ್ಚಿಗೆ ಏರಿಸಿ ಹುಟ್ಟಬರಬೇಕಾಗ್ತದ ಅಂತ ನಮ್ಮ ಅಮ್ಮ ಹೇಳ್ತಿದ್ದಳು. ನನಗ ಹಗಲೆಲ್ಲಾ ಅದ ನೆನಪಾಗತಿತ್ತು" ಎಂದು ನಿಟ್ಟುಸಿರು ಬಿಟ್ಟರು.

"ಸುಲೂ, ದೇವರು ನಿನಗ ಛೊಲೋ ಗಂಡನ್ನ ಕೊಡಲಿ ನಿನಗ ಸಂಸಾರದಾಗ ಸುಖಾ ಸಿಗಲಿ", ದೇವರಿಗೆ ದೀಪ ಹಚ್ಚಿ ಬಂದು ನಮಸ್ಕರಿಸಿದ ಸುಲೋಚನೆಗೆ ಬಂಗಾರೆಮ್ಮ ಹರಸಿದರು.

ಸುಲೋಚನೆಗೆ ಮದುವೆಯಾಗಿ ಗಂಡನ ಮನೆಗೆ ಹೋಗಿ ಎರಡು ದಿನಗಳಾದವು. ಇರುವೆಯ ಹುತ್ತಿನಂತೆ ಗಿಜಿಗಿಜಿಗುಟ್ಟುತ್ತಿದ್ದ ಮನೆ ಬರಿದಾಗುತ್ತಿದೆ. ಇನ್ನೂ ಒಬ್ಬಿಬ್ಬರು ಅಡ್ಡ ಬೀಗರು ಉಳಿದಿದ್ದಾರೆ. ಮಾವನ ಮಗಳ ಲಗ್ನಕ್ಕೆ ಬಂದ ಸದಾಶಿವ ಎಲ್ಲರ ಒತ್ತಾಯಕ್ಕೆ ಅವ್ವನನ್ನು ಬಿಟ್ಟು ಊರಿಗೆ ಹೋಗಿದ್ದಾನೆ.

ಬಂಗಾರೆಮ್ಮ ಸ್ನಾನ ಮುಗಿಸಿ ಬಂದು ನೋಡಿದಳು. ಅವಳ ಪೂಜೆಗೆ ತುಂಬಿದ ಕೊಡವಿರಲಿಲ್ಲ. ಗದ್ದಲದಲ್ಲಿ ಯಾರೋ ಕೊಡದಲ್ಲಿನ ನೀರು ಉಪಯೋಗಿಸಿ ಬಿಟ್ಟಿದ್ದರು. ಯಾರಿಗಾದರೂ ಹೇಳಬೇಕಂದರೆ ಯಾರೂ ಸಿಕ್ಕಲಿಲ್ಲ. ಬಂಗಾರೆಮ್ಮ ಕೊಡವನ್ನೆತ್ತಿಕೊಂಡು ಬಗಲಲ್ಲಿಟ್ಟು ತಾನೇ ಹೊಳೆಯ ಕಡೆಗೆ ನಡೆದಳು. ಯಾರು ಅವಳನ್ನು ನೋಡಲಿಲ್ಲ.

ನೋಡಿದ್ದರೆ ಬಹುಶಃ ತಡೆಯುತ್ತಿದ್ದರೇನೋ. ಬಂದ ಒಂದು ತಿಂಗಳಾದರೂ ಅವಳು ಹೊಳೆಯ ಕಡೆಗೆ ಹಾಗೆಯೇ ಒಂದೆರಡು ಸಲ ತಿರುಗಾಡಲು ಮಾತ್ರ ಹೋಗಿದ್ದಳು. ಮೂವತ್ತು ವರುಷಗಳ ಕೆಳಗೆ ತಪ್ಪದೇ ಹೊಳೆಯಿಂದ ನೀರು ತರುವ ಕೆಲಸ ಇವಳದೇ ಆಗಿದ್ದಿತಲ್ಲವೇ? ದಾರಿಯಲ್ಲಿ ಒಂದೆರಡು ಹೊಸ ಮನೆಗಳನ್ನು ಬಿಟ್ಟರೆ ಉಳಿದುದೆಲ್ಲವೂ ಹಿಂದಿನಂತೆಯೇ ಇದ್ದಿತು. ಊರ ಅಂಚಿನಲ್ಲಿ ಹೊಸದಾಗಿ ಕಟ್ಟಿದ ಶಾಲೆಗೆ ಆಟದ ಬಯಲು ಸಿದ್ಧವಾಗುತ್ತಿತ್ತು. ತಾನು ಕಲಿತ ಒಂದೆರಡು ವರ್ಗಗಳನ್ನು ಊರ ದುರಗವ್ವನ ಗುಡಿಯಲ್ಲಿಯೇ ಕಲಿತಿದ್ದಳು. ಶಾಲೆ ಬಿಟ್ಟು ಮನೆಗೆ ಬಂದು ರೊಟ್ಟಿ ತಿಂದ ಮೇಲೆ ತಾನೂ ಶೇಕೂ ಕೂಡಿ ನೀರು ತರಲು ಹೊಳೆಗೆ ಬರುತ್ತಿದ್ದರು. ಹೊಳೆಯನ್ನು ಬಂಗಾರೆಮ್ಮ ಸಮೀಪಿಸಿದಳು. ಹಾ! ಅದೇ ಕಲ್ಲಮೇಲಲ್ಲವೇ ತಾನೂ ಶೇಕೂ ಕುಳಿತು ಕೊಡಗಳನ್ನು ಬೆಳಗುತ್ತಿದ್ದುದು; ಅವ್ವನ ಮುಂದೆ ಕೊಡ ತಿಕ್ಕಲೆಂದು ಹೇಳಿ ಹುಣಸಿಹಣ್ಣು ಉಪ್ಪು ತಂದು ತಾವಿಬ್ಬರೂ ಇಲ್ಲಿ ಕುಳಿತುಕೊಂಡು ಅದನ್ನು ತಿನ್ನುತ್ತಿದ್ದುದು ಇನ್ನೂ ತನಗೆ ಜ್ಞಾಪಕವಿದೆ. ಬಂಗಾರೆಮ್ಮ ಅದೇ ಕಲ್ಲಿನ ಮೇಲೆ ಕುಳಿತುಕೊಂಡು ಉಸುಕು ಹಚ್ಚಿ ತನ್ನ ಕೊಡವನ್ನು ತಿಕ್ಕಹತ್ತಿದಳು.

"ಅವ್ವನಾರ ನೀವ ಹೊಳೀಗೆ ಬಂದೀರಲ್ರಿ ಯಾಕೊ "ನೇಕಾರರ ಕೆಂಚವ್ವ ತನ್ನ ತುಂಬಿದ ಕೊಡವನ್ನೆತ್ತಿ ಬಗಲಲ್ಲಿಟ್ಟುಕೊಳ್ಳುತ್ತ ಕೇಳಿದಳು.

"ಹೌದs; ಜಳಕಾ ಮಾಡಿದೆ. ಪೂಜೆಗೆ ನೀರು ಇದ್ದಿದ್ದಿಲ್ಲಾ. ಅದಕ್ಕ ನಾನs ಬಂದೆ" ಬಂಗಾರೆಮ್ಮ ಬಗ್ಗಿ ಕೊಡವನ್ನು ಹೊಳೆಯ ನೀರಿನಲ್ಲಿ ಮುಳುಗಿಸುತ್ತ ಹೇಳಿದಳು.

ತುಂಬಿದ ಕೊಡವನ್ನೆತ್ತಿಕೊಳ್ಳಲು ಮುಂದಿನ ಕಲ್ಲ ಮೇಲೆ ಕಾಲಿಟ್ಟಳು ಬಂಗಾರೆಮ್ಮ. ಕಾಲು ಜರ್ರನೆ ಜಾರಿತು. ಸಾವರಿಸಿಕೊಂಡು ಏಳಬೇಕೆಂದರೂ ಆಗಲಿಲ್ಲ. ಮುಳುಮುಳುಗಿ ನೀರು ಕುಡಿಯ ಹತ್ತಿದ ಬಂಗಾರೆಮ್ಮನನ್ನು ಕಂಡು ಕೆಂಚವ್ವ ತನ್ನ ಕೊಡವನ್ನು ನೆಲಕ್ಕೆ ಇಳಿಸಿದವಳೇ ಹೌಹಾರಿ ಕೂಗತೊಡಗಿದಳು. ಆಗಲೇ ಬಂಗಾರೆಮ್ಮ ಹೊಳೆಯ ಮಡಿಲನ್ನು ಸೇರಿದ್ದಳು. ಬದಿಯ ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ಜನ ಓಡಿಬರುವಷ್ಟರಲ್ಲಿ ಅವಳ ತಲೆ ಪೂರ್ತಿ ನೀರ ಕೆಳಗೆ ಬಾಗಿತು. ಅವಳ ತಮ್ಮನ ಮನೆಗೆ ಸುದ್ದಿ ಹೋಯಿತು. 'ನಾ ಇಳಿ' 'ನೀ ಇಳಿ' ಎಂದು ಬಾಯಿಮಾಡಿ ಇಬ್ಬರು ಗಂಡಾಳುಗಳು ಫರ್ಲಾಂಗು ದೂರದವರೆಗೆ ಈಸಿ ಬಂಗಾರೆಮ್ಮನ ದೇಹವನ್ನು ದಂಡೆಗೆ ತಂದರು.

ತವರುಮನೆ, ತಾಯಿನೆಲ ಎಂದರೆ ಜೀವ ಕಳೆದುಕೊಳ್ಳುತ್ತಿದ್ದ ತನ್ನ ತಾಯಿಯ ಸಮಾಧಿಯನ್ನು ಸದಾಶಿವ ಅಲ್ಲಿಯೇ ಮಾಡಿಸಿದ.

***

■■

# ಚಂದ್ರಗ್ರಹಣ

ಪಟ್...........................

ಅದಕ್ಕಿರುವುದು ಒಂದೇ ಗುಂಡಿ. ಆ ಗುಂಡಿ ಬಿಚ್ಚಿದ ಮೇಲೆ ಕುತ್ತಿಗೆಯಿಂದ ಹಾಯಿಸಿ ಕಳಚಬೇಕು. ಸುಂದರವಾದ ನೀಲಿ ಬಣ್ಣದ ಉಣ್ಣೆಯ ಮೇಲೆ ಬಿಳಿ ಬಣ್ಣದಿಂದ ಕಸೂತಿ ಕೆಲಸ ಮಾಡಿತ್ತು. ಕುತ್ತಿಗೆಯ ಹತ್ತಿರ ದುಂಡಗೆ ಕಾಲರ ಬೇರೆ ಇತ್ತು. ಅದಕ್ಕೆ ಪ್ರೆಸ್ ಬಟನ್ನಿನ ಮೇಲೆ ಬಿಳಿಯ ಶೋ ಬಟನ್ನು, ಅವಳಿಗೆ ಬಹಳ ಪ್ರೀತಿಯ ಸ್ವೆಟರು ಅದು. ಶೇಖರ ದಿಲ್ಲಿಗೆ ಹೋಗಬೇಕಾಗಿ ಬಂದಾಗ ಪ್ರೀತಿಯ ಹೆಂಡತಿಯನ್ನು ಬಿಟ್ಟು ಹೋಗಲಾರದೇ,

'ನೀನೂ ಬಾ ಮೀನಾ ಇಬ್ಬರೂ ಕೂಡಿ ಹೋಗೋಣ' ಎಂದ.

'ನನಗೂ ಬರಲಿಕ್ಕೆ ಭಾಳ ಆಸೇ ಅದs ರಿ, ಆದರ ನಾಳಿನ ರ್ಗಕ್ಕ ನನಗ ಎಂಟು ತಿಂಗಳ ತುಂಬತಾವ. ದಿಲ್ಲಿಗೆ ಎರಡು ದಿನದ ದಾರಿ. ಹೋದರ ಇಳಕೊಳ್ಳೂದು, ಇರೂದು ಎಲ್ಲಾ ತ್ರಾಸs ಅದಕ್ಕs ಏನ್ಮಾಡೂದೂ ಅಂತs.....' ಎಂದು ಸಂಶಯ ತೋರಿಸಿದ್ದಳು ಮೀನಾ.

"ಹೌದು ಅದೂ ಖರೆ. ಉದಯನೂs ಸಣ್ಣಾಂವಾ. ಅವನ್ನ ಸಂಬಾಳಿಸಿಕೊಂಡು ಹೋಗಿ ಬರಬೇಕಾದರ ಭಾಳ ತ್ರಾಸ ಆಗತದ. ಮತ್ತೊಂದು ಸಾರೆ ಎಲ್ಲಾರು ಕೂಡಿ ಹೋಗಿ ದಿಲ್ಲಿ, ಆಗ್ರಾ ಎಲ್ಲಾ ನೋಡಿ ಬರೂಣು, ಹಾ" ಎಂದು ಶೇಖರ ಅವಳನ್ನು ಸಮಮಾಧಾನಪಡಿಸಿದ್ದ. ತನ್ನ ಸಮಾಧಾನಕ್ಕಾಗಿ ಇಪ್ಪತ್ತೊಂದು ರೂಪಾಯಿ ಖರ್ಚು ಮಾಡಿ ಮೀನಾಕ್ಷಿಗೆ ಈ ನೀಲಿ ಸ್ವೆಟರು ತಂದಿದ್ದ.

ವಿಚಾರ ಮಾಡುತ್ತಲೇ ಮೀನಾಕ್ಷಿ ಸ್ವೆಟರ್ ಬಿಚ್ಚಿ ತೂಗು ಹಾಕಿ ಮಂಚದ ಮೇಲೆ ಬಂದು ಮಲಗಿ ರಗ್ಗು ಹೊತ್ತುಕೊಂಡಳು. ಅಂದು ನಾಟಕ ನೋಡಿ ಮನೆಗೆ ಬಂದಾಗಲೇ ಸರಿ ರಾತ್ರಿಯಾಗಿತ್ತು. ಹೋಗುವಾಗ ಅವಸರವಾದ್ದರಿಂದ ಹಾಲಿಗೆ ಹೆಪ್ಪು ಹಾಕಿರಲಿಲ್ಲ. ಚಿಕ್ಕಮ್ಮನಿಗೆ ಹೇಳಿ ಹೋಗಿದ್ದಳು. ರೋಹಿಣಿ ಹುಟ್ಟಿದಾಗ ತನ್ನ ಬಾಣಂತನ ಮಾಡಲು ಬಂದ ಚಿಕ್ಕಮ್ಮ ಆವಾಗಿನಿಂದಲೂ ಮೀನಾಳ ಜೊತೆಗೆ ಅವಳಲ್ಲಿಯೇ ಇದ್ದಾಳೆ. ಆಗಲೇ ಚಿಕ್ಕಮ್ಮನ ವಯಸ್ಸು ಅರವತ್ತೈದರ ಮನೆ ಮುಟ್ಟುತ್ತಿದೆ. ಮರೆವೂ ಹೆಚ್ಚಾಗುತ್ತಿದೆ. ಹಾಲು-ಗೀಲು ಸರಿಯಾಗಿ ಮುಚ್ಚಿ ಇರಿಸಿದ್ದಾಳೋ ಇಲ್ಲವೋ ಎನ್ನುವ ಸಂಶಯ ಬಂದೊಡನೆ ಮೀನಾ ಎದ್ದು ಮತ್ತೆ ಅಡಿಗೆಮನೆಗೆ ಹೋಗಿ ಎಲ್ಲವನ್ನೂ ನೋಡಿಕೊಂಡು ನೀರಿನ ತಂಬಿಗೆ ತುಂಬಿಕೊಂಡು ಕೋಣೆಗೆ ಬಂದಳು. ಅವಳು ಬಾಗಿಲು ತೆಗೆದು ಸ್ವಿಚ್ ಹಾಕಿದ ಸಪ್ಪಳಕ್ಕೆ ಶೇಖರ ಎಚ್ಚರವಾಗಿದ್ದ.

"ಇನ್ನೂ ಮಲಗಿಲ್ಲೇನು ಮೀನಾ, ಹೊತ್ತು ಭಾಳ ಆಗೇದ ಮಲಕೋ ಇನ್ನ" ಎಂದು ಮತ್ತೆ ಹೊರಳಿ ಮಲಗಿಕೊಂಡ.

ಮೀನಾ ಉದಯ ರೋಹಿಣಿಯರಿಗೆ ಸರಿಯಾಗಿ ಹೊದ್ದಿಸಿ ತಾನೂ ಬಂದು ಮಲಗಿಕೊಂಡಳು. ಅವಳಿಗೇಕೋ ನಿದ್ರೆಯೇ ಬಾರದಾಗಿತ್ತು. ನಾಟಕದ ಸನ್ನಿವೇಶ, ಕಥೆಗಳು ಅವಳ ಮನಸ್ಸಿನಲ್ಲಿ ತುಂಬಿಕೊಂಡಿದ್ದವು. ಒಳ್ಳೆಯ ಪತಿಯನ್ನು ಪಡೆದು, ಮುಂತ್ತಿನಂತಹ ಮಕ್ಕಳನ್ನು ಹಡೆದು ಮನೆಯನ್ನು ಸ್ವರ್ಗವನ್ನಾಗಿಸಬೇಕೆನ್ನುವ ಆಸೆ ಇಟ್ಟುಕೊಂಡ ಸ್ತ್ರೀಯೊಬ್ಬಳ ಜೀವನ ಕತೆಯೇ ನಾಟಕದಲ್ಲಿತ್ತು. ಅವಳಿಗೆ ಸಿಕ್ಕ ಪತಿ ಶ್ರೀಮಂತನಾದರೂ ದುರ್ಮಾರ್ಗಿ. ಇವಳೂ ಒಬ್ಬಳು ಮನುಷ್ಯಳು ಎಂದು ಅವನು ಹೆಂಡತಿಯನ್ನು ಎಂದೂ ತಿಳಿದುಕೊಳ್ಳುವುದಿಲ್ಲ. ಮಕ್ಕಳನ್ನಾದರೂ ನೋಡಿ ಸಮಾಧಾನಪಟ್ಟುಕೊಳ್ಳಬೇಕೆಂದರೆ ಅವಳ ಮಗಳು ವಿಧವೆಯಾಗಿ ಬಂದು ತವರುಮನೆ ಸೇರುತ್ತಾಳೆ. ಮಗ ಬಸ್

ಅಪಘಾತದಲ್ಲಿ ಸಿಕ್ಕು ಮರಣ ಹೊಂದುತ್ತಾನೆ. ಬಾಳಿನಲ್ಲಿ ತೃಪ್ತಿ ಕಾಣದ ಈ ಹೆಣ್ಣಿನ ಹೃದಯ ದುಃಖಿತಪ್ತವಾಗಿ ಬುದ್ಧಿ ಭ್ರಮೆಯಾಗುತ್ತದೆ. ಅವಳಿಗೆ ಸರಿಯಾದ ಚಿಕಿತ್ಸೆ ಮಾಡಿಸಲೂ ಗಂಡ ಪ್ರಯತ್ನಿಸುವುದಿಲ್ಲ. ಹುಚ್ಚಿನಲ್ಲಿಯೇ ಒಂದು ದಿನ ಮನೆ ಬಿಟ್ಟು ಹೋಗಿ ಎಲ್ಲಿಯೋ ಬಿದ್ದು ಸಾಯುತ್ತಾಳೆ. ಅದೊಂದು ದುರಂತ ನಾಟಕ.

ಇಂಥ ಕಥೆ-ಕಾದಂಬರಿ ಓದಿದೊಡನೆ, ನಾಟಕ-ಸಿನಿಮಾಗಳನ್ನು ನೋಡಿದರೆ ಮೀನಾಕ್ಷಿಯ ಮನಸ್ಸೇ ಒಂದು ತರವಾಗುತ್ತದೆ. ಒಂದೆರಡು ದಿನ ಅವಳ ಬುದ್ಧಿಗೆ ಗುಂಗು ಹಿಡಿದಂತಾಗಿರುತ್ತದೆ. ಅವಳ ಮನಸ್ಸು, ವಿಚಾರಗಳಲ್ಲೆಲ್ಲಾ ಅದೇ ವಿಷಯ ಹರಿದಾಡುತ್ತದೆ. ಏನು ಮಾಡಲೂ ಉತ್ಸಾಹವಿರುವುದಿಲ್ಲ. ಮಂಕಾಗುತ್ತಾಳೆ. ದಿನಗಳು ಕಳೆದಂತೆ ಅದನ್ನು ಮರೆಯುತ್ತಾಳೆ. ಅವಳ ಪ್ರೇಮ ಸಾಮ್ರಾಜ್ಯಕ್ಕೆ ಶೇಖರ, ಮಕ್ಕಳು ಅಧಿಪತಿಗಳು. ಅವನ ಮನೆ ನಂದನವನಕ್ಕಿಂತಲೂ ಮಿಗಿಲು. ತನ್ನ ಬಾಳಿನ ಸುಖ - ಸಂತೋಷಗಳ ಇದಿರು ಅವಳು ಸ್ವರ್ಗಕ್ಕೇ ಕಿಚ್ಚು ಹಚ್ಚೆನ್ನುವಳು. ದುಃಖವನ್ನು ಕಂಡರಿಯದ ಮೀನಾಕ್ಷಿ ದುರಂತವೆನ್ನುವ ಶಬ್ದಕ್ಕೇ ಹೆದರುತ್ತಾಳೆ. ದುರಂತ ಭೂತ ತನ್ನನ್ನು ಬೆನ್ನಟ್ಟಬಾರದೆಂದು ಸದಾ ಜಾಗ್ರತೆ ವಹಿಸಿದವಳಂತೆ ಇರುತ್ತಾಳೆ.

ನಿದ್ರೆ ಬಾರದೆ ಮೀನಾಕ್ಷಿಯ ಕಣ್ಣುಗಳು ಉರಿಯಹತ್ತಿದವು. ಎದ್ದು ತಣ್ಣೀರಿನಲ್ಲಿ ಕರವಸ್ತ್ರ ತೋಯಿಸಿ ಕಣ್ಣ ಮೇಲಿಟ್ಟು ಮಲಗಿಕೊಂಡಳು. ಎಚ್ಚರಾಗಿ ಕುಸುಕುಸು ಮಾಡುತ್ತಿದ್ದ ರೋಹಿಣಿಯನ್ನು ತಟ್ಟುತ್ತ ನಿದ್ದೆ ಹೋದಳು.

ಝಣಣಣಣ............

ಬೆಚ್ಚಿ ಎಚ್ಚೆತ್ತಳು ಮೀನಾಕ್ಷಿ ಕಿಡಿಕಿಯಿಂದ ಬಂದ ಬಿಸಿಲು ತನ್ನ ಮಂಚವನ್ನೆಲ್ಲ ಆವರಿಸಿದೆ. ಅಬ್ಬಾ ! ಎಷ್ಟು ಹೊತ್ತಾಗಿದೆ. ತನಗೇ ಎಚ್ಚರವೇ ಆಗಿಲ್ಲ. ಚಿಕ್ಕಮ್ಮ ಅಡಿಗೆ ಮನೆಯಲ್ಲಿ ಕೆಲಸ ಮಾಡುತ್ತಿರಬಹುದು. ಅವಳ ಕೈಯಿಂದ ಜಾರಿಬಿದ್ದ ಪಾತ್ರೆಯ ಸಪ್ಪಳಕ್ಕೇ ತನಗೆ ಎಚ್ಚರವಾದದ್ದು. ಶೇಖರನ ಮಂಚವೂ ಖಾಲಿಯಾಗಿದೆ. ಆಗಲೇ ಸ್ನಾನ ಮಾಡುತ್ತಿರಬಹುದು. ಹೌದು ಮರತೇ ಬಿಟ್ಟಿದ್ದಳವಳು. ಹಿಂದಿನ ದಿನ ನಾಟಕಕ್ಕೆ ಹೋಗುವ ಮೊದಲೇ ತನಗೆ ಹೇಳಿದ್ದನವ: ಕಚೇರಿಯ ಕೆಲಸಕ್ಕಾಗಿ ಮರುದಿನ ಮುಂಜಾನೆ ತನಗೆ ಹುಬ್ಬಳ್ಳಿಗೆ ಹೋಗಬೇಕಾಗಿದೆಯೆಂದು. ಗಂಡ ಊರಿಗೆ ಹೊರಡುವ ವಿಷಯ ನೆನಪಾದೊಡನೆ ಮೀನಾಕ್ಷಿ ಚಟಕ್ಕನೆ ಹಾಸಿಗೆ ಬಿಟ್ಟೆದ್ದಳು.

ಮುಖ ತೊಳೆಯಲು ವಾಸ್ ಬೇಸಿನ್ನಿನ ಎದುರು ನಿಂತವಳು ನಳ ತಿರುಗಿಸಿ ಬಗ್ಗಿ ಮುಖ ತೊಳೆದಳು. ಟಾವೆಲ್ಲು ಕೈಗೆ ಸಿಕ್ಕಲಿಲ್ಲ. ಸೀರೆಯ ಸೆರಗಿನಿಂದ ಮುಖ ಒರೆಸುತ್ತಿದ್ದ ಕೈ ಅರ್ಧಕ್ಕೆ ನಿಂತಿತು. ಎದೆ, ಕುತ್ತಿಗೆಗಳ ಮೇಲೆ ಕೈಯಾಡಿಸಿದಳು. ಕೈಗೆ ಏನೂ ತಾಕಲಿಲ್ಲ. ಕೊರಳು ಭಣ ಭಣವಾಗಿದೆ. ಮಂಗಳ ಸೂತ್ರವೆಲ್ಲಿ? ಬೆಡ್‌ರೂಮಿಗೆ ಹೋಗಿ ಹಾಸಿಗೆಯನ್ನು ಝಾಡಿಸಿದಳು. ರಗ್ಗು ಕೊಡವಿದಳು. ಮಂಚದ ಕೆಳಗೆ ಮಂಡಿಯೂರಿ ಹುಡುಕಿದಳು. ಇಲ್ಲ. ಮತ್ತೆ ತನ್ನ ಬ್ಲೌಜ, ಸೀರೆಗಳನ್ನೆಲ್ಲ ಕೊಡವಿ ಹುಡುಕಿದಳು. ಎಲ್ಲಿಯೂ ಇಲ್ಲ. ಹೋಯಿತೆಲ್ಲಿ ?

ಹಿಂದಿನ ದಿನ ಸಂಜೆ ನಾಟಕಕ್ಕೆ ತಯಾರಾಗುವಾಗ ಕನ್ನಡಿಯೆದುರು ನಿಂತು ಕುಂಕುಮ, ಕಾಡಿಗೆ, ಪೌಡರ ಎಲ್ಲ ಪ್ರಸಾಧನ ತೀರಿದ ಮೇಲೆ ಮಂಗಳ ಸೂತ್ರವನ್ನು ಎರಡೆರಡು ಸಲ ಮುಟ್ಟಿ ನೋಡಿ ಸರಿಪಡಿಸಿಕೊಂಡಿದ್ದಾಳೆ. ಆದರೆ ಈಗ ಕೊರಳು ಬರಿದಾಗಿದೆ. ಎಲ್ಲಿ ಬಿತ್ತು ? ಹರಿದು ಬೀಳುವದಂತೂ ಸಾಧ್ಯವಿಲ್ಲ. ಮೂರು ತೊಲೆ ಬಂಗಾರದಲ್ಲಿ ಗಟ್ಟಿಮುಟ್ಟಾಗಿ ಮಾಡಿಸಿದ್ದು. ಎಲ್ಲಿಯೂ ಸವೆದಿರಲಿಲ್ಲ. ಅವಳ ತಾಯಿ ತಮ್ಮ ಕಾಲದ ಹಾಗೆ ಉದ್ದವಾಗಿಟ್ಟು ಮಾಡಿಸಿದ್ದರು. ಮೀನಾಕ್ಷಿಗೆ ಆ ರೀತಿ ಮಾಡಿಸಿದ್ದು ಮನ ಒಪ್ಪದಿದ್ದರೂ ಮಂಗಳಸೂತ್ರ ಮುರಿಸಬಾರದೆನ್ನುವ ತಾಯಿ, ಚಿಕ್ಕಮ್ಮರ ಬಲವಂತಕ್ಕೆ ಸುಮ್ಮನಾಗಿದ್ದಳು. ಕುತ್ತಿಗೆಯಲ್ಲಿನ ಚೈನನ್ನಷ್ಟೇ ಮುರಿಸಿ ತೆಗೆಸಿ ಸರ ಚಿಕ್ಕದು ಮಾಡಿಸಬೇಕೆನ್ನುವ ವಿಚಾರ ಅವಳಿಗೆ ಎಷ್ಟೋ ಸಲ ಬಂದಿತ್ತು. ಆದರೆ ಅದಿನ್ನೂ ಕೃತಿಯಲ್ಲಿಳಿದಿರಿಲಿಲ್ಲ.

ಈಗ ಮೀನಾಕ್ಷಿಗೆ ಏನು ಮಾಡಬೇಕೋ ತಿಳಿಯದಾಯಿತು. ಅವಳು ಅತ್ತಿತ್ತ ಓಡಾಡುವುದನ್ನು ನೋಡಿದ ಶೇಖರ.

"ಮೀನಾ, ನನಗ ಗಾಡೀ ಹೊತ್ತ ಆಗೇದ. ನೀ ಗಡಿಬಿಡಿ ಮಾಡಿ ಏನೂ ಮಾಡಲಿಕ್ಕೆ ಹೋಗಬ್ಯಾಡ. ನಾ ಬರೇ ಹಾಲ ಅಷ್ಟs ತೊಗೊಂಡ ಹೋಗತೇನಿ" ಎಂದು ಡ್ರೆಸ್ ಮಾಡಿಕೊಳ್ಳತೊಡಗಿದ.

ಯಾವಾಗಲೂ ಗೆಲುವಿನಿಂದ ನಗುತ್ತ, ಹಾಡುತ್ತ ಓಡಾಡುತ್ತಿದ್ದ ಮೀನಾಕ್ಷಿಯ ಮುಖ ಸಪ್ಪಗಾಗಿತ್ತು. ಜೀವಕಳೆಯೇ ಇರಲಿಲ್ಲ ಆ ಮುಖದಲ್ಲಿ ಮಾತೂ ಒಮ್ಮೆ ಬಾರದಾಗಿತ್ತು. ಬಿಕ್ಕಿದಳು. ಗಾಬರಿಯಿಂದ ಶೇಖರ ಅವಳ ಹತ್ತಿರ ಬಂದು "ಯಾಕ ಮೀನಾ ಮೈಯಾಗ ಆರಾಮ ಇಲ್ಲೇನು?" ಅನ್ನ ಸಾರು ಮಾಡ್ಲಿಕ್ಕೆ ಚಿಕ್ಕಮ್ಮಗ ಹೇಳಿ ನೀ ಮಲಕೊಂಡ ಬಿಡು. ರಾತ್ರೀನೂ ನಿದ್ದಿ ಮಾಡಿಲ್ಲಾ" ಎಂದ.

ಮೀನಾಕ್ಷಿಗೆ ದುಃಖ ಒತ್ತರಿಸಿ ಬಂದಿತು. "ನನ್ನ ಕೊಳ್ಳಾಗಿನ ಮಂಗಳಸೂತ್ತಾನಾs ಇಲ್ರಿ" ಧ್ವನಿಮಾಡಿ ಅಳಹತ್ತಿದಳು.

ಒಂದು ಕ್ಷಣ ಶೇಖರನಿಗೆ ಏನೂ ತಿಳಿಯಲಿಲ್ಲ. ಅವಳ ಮಾತು ಅರ್ಥವಾಗದಂತೆ ಅವಳನ್ನೇ ದಿಟ್ಟಿಸಿ ನೋಡಿದ. ಅವಳ ಕೊರಳು ಬರಿದಾಗಿತ್ತು. "ಇಲ್ಲ ಅಂದರ ಎಲ್ಲಿ ಹೋಗತದ. ಇಲ್ಲೇ ಎಲ್ಲ್ಯರ ಬಿದ್ದಿರಬೇಕು, ಹುಡುಕಿ ನೋಡು." ತಾನು ಆಡಿದ ಮಾತು ತನಗೇ ಅರ್ಥವಾಗದಂತೆ ನುಡಿದ ಶೇಖರ ಮತ್ತೆ ಬಾಚಿಕೊಳ್ಳತೊಡಗಿದ.

"ನಾ ಎಲ್ಲಾ ಹುಡುಕಿ ನೋಡಿದೆ. ಮನ್ಯಾಗ ಎಲ್ಲೂ ಇಲ್ಲಾ. ನಿನ್ನೆ ನಾಟಕಕ್ಕೆ ಹೋಗೂ ಮುಂದ ಇತ್ತು. ದಾರ್‍ಯಾಗ ಬಿತ್ತೋ, ಥೇಟರಿನಾಗ ಬಿತ್ತೋ, ಏನ ಬಸ್ಸಿನಾಗ ಬಿತ್ತೋ ಯಾರಿಗ್ಗೊತ್ತು. ಹೊರಗ ಎಲ್ಯರ ಬಿದ್ದಿದ್ದರ ಇನ್ನ ಹ್ಯಾಂಗ ಸಿಗತದ: ಎಂದು ಮೀನಾ ಮತ್ತೆ ಅಳಹತ್ತಿದಳು.

ತಾನು ಬೆಳಿಗ್ಗೆ ಎದ್ದು ಬರುವಾಗ ಹಾಯಾಗಿ ಚಿಂತೆಯಿಲ್ಲದೆ ನಿದ್ರೆ ಮಾಡಿದ್ದವಳು ಈಗ ಎಚ್ಚರಾದ ಹತ್ತು ನಿಮಿಷಗಳಲ್ಲಿಯೇ ಹೇಗಾಗಿ ಬಿಟ್ಟಿದ್ದಾಳೆ! ಅವಳನ್ನು ನೋಡಿ ಅಯ್ಯೋ ಪಾಪ! ಅನ್ನಿಸಿತು.

"ಮನಿಯೊಳಗ ಎಲ್ಲಾ ಕಡೆ ಹುಡುಕಿ ನೋಡು. ಬಸ್‌ಸ್ಟ್ಯಾಂಡಿನ ಆಫೀಸಿನ್ಯಾಗೂ ಕೇಳತೀನಿ. ಸಿಕ್ಕರ ಛೋಲೋ ಆತು. ಇಲ್ಲ ಅಂದರ ಬ್ಯಾರೆ ಮಾಡಸೂಣಂತ ನೀ ಅಳಬ್ಯಾಡ. ಅತ್ತರ ಕಳದದ್ದು ಸಿಗತದೇನು ? ಸುಮ್ಮನ ತ್ರಾಸ ಮಾಡಿಕೋಬ್ಯಾಡ" ಹೆಂಡತಿಯ ತಲೆ ನೇವರಿಸುತ್ತ ಹೇಳಿದ ಶೇಖರ.

ಈಗಿನ ದಿನಗಳಲ್ಲಿ ಮೂರು ತೊಲೆ ಬಂಗಾರವನ್ನು ಕಳೆದುಕೊಂಡುದೇನು ಸಣ್ಣ ಹಾನಿಯ ಮಾತಾಗಿರಲಿಲ್ಲ. ಆದರೂ ಹೆಂಡತಿಯ ಸಮಾಧಾನಕ್ಕಾಗಿ ಶೇಖರ ಆ ರೀತಿ ನುಡಿದಿದ್ದ. ಮತ್ತು ಈಗ ತಾನು ಕೆಲಸದ ಗಡಿಬಿಡಿಯಲ್ಲಿರುವುದರಿಂದ ಬೇರೆ ಏನೂ ವಿಚಾರಮಾಡುವುದು ಸಾಧ್ಯವಿರಲಿಲ್ಲ.

ಗಂಡನ ಸಾಂತ್ವನಪರ ಮಾತುಗಳಿಂದ ಮೀನಾಕ್ಷಿ ದುಃಖ ಕೆಲಮಟ್ಟಿಗೆ ಕಡಿಮೆಯಾಯಿತು. ವಾಚು ನೋಡಿಕೊಳ್ಳುತ್ತ ಶೇಖರ "ನನಗ ಹೊತ್ತಾತು ಹೋಗತೇನಿ. ಕೆಲಸ ಮುಗದರ ರಾತ್ರಿ ಬರತೇನಿ. ಇಲ್ಲಾ ಅಂದರ ನಾಳೆ ಮುಂಜಾನೆ ಬರತೇನಿ. ನೀ ಮನಸ್ಸಿಗೆ ತ್ರಾಸ ಮಾಡಕೋಬ್ಯಾಡ, ಹಾ" ಎಂದು ಹೊರಟು ಹೋದ.....

ಖಟ್ ಖಟ್ ಖಟಲ್......

ಚಿಲಕ ಸಪ್ಪಳವಾಯಿತು. ಅತ್ತು ಅತ್ತು ಕಣ್ಣು ಕೆಂಪಗೆ ಮಾಡಿಕೊಂಡು ಉಪವಾಸ ಮಲಗಿದ ಮೀನಾಕ್ಷಿಗೆ ಏಳುವ ಮನಸ್ಸಾಗಲಿಲ್ಲ. ಹಾಗೆಯೇ ಹೊರಳಿ ಮಲಗಿದಳು.

.....................................................................................................

ಸುಂದರವಾದ, ಅಗಲವಾದ ಡಾಂಬರು ರಸ್ತೆಯನ್ನು ಸೀಳಿಕೊಂಡು ಬಸ್ಸು ವೇಗವಾಗಿ ಮುಂದೆ ಸಾಗಿತ್ತು. ಪ್ರಯಾಣಿಕರೆಲ್ಲ ಕಿಟಕಿಯಲ್ಲಿ ಇಣುಕಿ ನೋಡುತ್ತ ಸೃಷ್ಟಿ ಸೌಂದರ್ಯವನ್ನು ಸವಿಯುತ್ತಿದ್ದರು. ಹಸಿರು ಹಿನ್ನೆಲೆಯಲ್ಲಿ ಮಳೆ-ಹನಿಗಳು ಸೇವಿಗೆಯ ಎಳೆಗಳಂತೆ ನೇರವಾಗಿ ಸಣ್ಣಾಗಿ ಇಳಿಯುತ್ತಿದ್ದವು. ಅವುಗಳ ಮೇಲೆ ಆಗಾಗ ಸೂರ್ಯನ ಕಿರಣಗಳು ಬಿದ್ದಾಗ ಜರತಾರಿ ಎಳೆಗಳಂತೆ ಥಳ ಥಳ ಹೊಳೆಯುತ್ತಿದ್ದವು. ಕಿಟಕಿಯ ಬಳಿ ಕುಳಿತ ಮೀನಾಕ್ಷಿ ಗಂಡನಿಗೆ ಸಂಜ್ಞೆ ಮಾಡಿ ಹೊರಗೆ ತೋರಿಸುತ್ತಿದ್ದಳು. ಬಸ್ಸಿನ ರಾಗವೀಗ ಬದಲಾಯಿತು. ಧ್ವನಿ ಮಂದ್ರದಿಂದ ತಾರಕಕ್ಕೇರುತ್ತಿತ್ತು. ಬಸ್ಸು ಈಗ ಘಟ್ಟವನ್ನೇರುತ್ತಿದೆ. ತಾನು ಕುಳಿತ ಸ್ಥಳದಿಂದ ಕೆಳಗಿನ ಆ ಆಳವಾದ ಕಣಿವೆ ಎಷ್ಟು ಸುಂದರ, ಭಯಾನಕವಾಗಿ ಕಾಣುತ್ತಿದೆ ಎಂದುಕೊಂಡಳಾಕೆ. ಇನ್ನೇನು ಬಸ್ಸು ಒಂದು ತಿರುವಿನಲ್ಲಿ ಹೊರಳಿದರಾಯಿತು. ಘಟ್ಟದ ತುಟ್ಟ ತುದಿಯನ್ನು ಮುಟ್ಟಿದಂತಾಗುವುದು. ಎಲ! ಇದೇನು? ಬಸ್ಸು ಹಿಂದಕ್ಕೆ ಸರಿಯುತ್ತಿದೆಯಲ್ಲ ! ಡ್ರೈವರನ ಕೈ ಮೀರಿ ಬಸ್ಸು ಹಿಂದಕ್ಕೆ, ಕೊರಕಲಿನ ಕಡೆಗೆ ಜಾರುತ್ತಿದೆ ಆ ಪ್ರಪಾತ 'ಆ' ಎಂದು ಬಾಯ್ತೆರೆದು ನಿಂತಿದೆ ಬಸ್ಸನ್ನು ನುಂಗಲು. ಮೀನಾಕ್ಷಿಗೆ ಕಣ್ಣು ಕತ್ತಲೆ ಕಟ್ಟಿತು. ಶೇಖರನ ಆಸರೆಗಾಗಿ ಮಗ್ಗುಲಿಗೆ ಕೈ ಚಾಚಿದಳು. ಅದು ಬರಿದು, ಅಲ್ಲಿ ಶೇಖರನಿಲ್ಲವೇ ಇಲ್ಲ!! ಅಯ್ಯೋ ಅಯ್ಯಯ್ಯೋ!!!

ಚೀರಲು ಬಾಯ್ತೆರೆದ ಮೀನಾಕ್ಷಿಗೆ ಒಮ್ಮೆಲೇ ಎಚ್ಚರವಾಯಿತು. ಮೈಯೆಲ್ಲ ಬೆವತಿತ್ತು. ಗಂಟಲಿನಿಂದ ಗೊರ ಗೊರ ಶಬ್ದವಾಗುತ್ತಿತ್ತು. ತಾನು ತನ್ನ ಮನೆಯಲ್ಲಿ ಮಂಚದ ಮೇಲೆ ಮಲಗಿರುವೆಂಬುದನ್ನು ತಿಳಿಯಲು ಅವಳಿಗೆ ಇನ್ನೂ ಐದು ನಿಮಿಷ ಬೇಕಾದವು. ದಡ ದಡ ಎನ್ನುವ ಎದೆಯ ಮೇಲೆ ಕೈಯಿಟ್ಟುಕೊಂಡಳು. ಕೈಗೆ ಮಂಗಳಸೂತ್ರ ಸಿಕ್ಕಲಿಲ್ಲ. ಮೀನಾಕ್ಷಿ ಈಗ ಕೆಟ್ಟ ಕನಸಿನಿಂದ ಪೂರ್ತಿ ವಾಸ್ತವ ಜಗತ್ತಿಗೆ ಬಂದಳು. ಹಾಸಿಗೆ ಬಿಟ್ಟು ಎದ್ದು ನಿಂತಳು.

"ಮಂಗಳಸೂತ್ರ ಕಳೀಬಾರದ್ರೀ. ಇದೇನೋ ಅವಲಕ್ಷಣ, ಅಪಶಕುನದಾಂಗ ಕಾಣ್ತದರೆವಾ ನನಗಂತೂ" ಎಂದಳು ನೆರೆಮನೆಯ ರಂಗಮ್ಮ.

ಮತ್ತೆ ಮೀನಾಕ್ಷಿಯ ತಲೆತಿರುಗಿ ಕಣ್ಣಿಗೆ ಕತ್ತಲೆ ಕಟ್ಟಿತು. 'ದೊಪ್' ಎನ್ನುವ ಶಬ್ದಕ್ಕೆ ನಡುಮನೆಯಲ್ಲಿದ್ದ ರಂಗಮ್ಮ, ಚಿಕ್ಕಮ್ಮ ಓಡಿ ಬಂದರು. ಕೆಳಗೆ ಬಿದ್ದ ಮೀನಾಕ್ಷಿಯನ್ನು ಎತ್ತಿ ಮಂಚದ ಮೇಲೆ ಮಲಗಿಸಿ ನೆತ್ತಿಗೆ ನೀರು ತಟ್ಟಿ ಗಾಳಿ ಹಾಕಿದರು.

"ಮುಂಜಾನಿಂದ ಹೊಟ್ಯಾಗ ಏನೂ ಇಲ್ಲಾ. ಉಪವಾಸ ಅತಕೋತ ಮಲಕೊಂಡಬಿಟ್ಟಾಳ. ಮನಸ್ಸಿಗೆ ಭಾಳ ಹಚಿಗೊಂಡಾಳ. ಹೋಗೂದು ಹೋಗೇದ. ನಮ್ಮದಾಗಿದ್ದರ ಸಿಗತsದ ನೀ ತ್ರಾಸ ಮಾಡಕೋ ಬ್ಯಾಡಾ ಅಂತ ಎಷ್ಟ ಹೇಳಿದರೂ ಕೇಳವೊಲ್ಲಳು" ಚಿಕ್ಕಮ್ಮ ಅಳುತ್ತಲೇ ಹೇಳಿದರು ರಂಗಮ್ಮನಿಗೆ.

"ರೋಹಿಣಿ ಎಲ್ಲಿ ಅದಾಳ. ಉದಯ ಸಾಲಿಗೆ ಹೋಗ್ಯಾನ ಕಾಣಸ್ತದ." ಎಚ್ಚರಗೊಂಡ ಮೀನಾಕ್ಷಿ ಸಣ್ಣ ದನಿಯಲ್ಲಿ ಕೇಳಿದಳು.

"ನೀ ಹೊಡದದ್ದಕ್ಕ ರೋಹಿಣಿ ಇಷ್ಟೊತ್ತನಕಾ ಕುಸು ಕುಸು ಅತ್ತು. ಆಗಳೆ ನಾನs ಜುಲುಮಿ ಮಾಡಿ ಒಂದಿಷ್ಟು ಹಾಲು ಕುಡಿಸಿ ನನ್ನ ಖೋಲ್ಯಾಗ ಮಲಗಿಸಿ ಬಂದೇನಿ."

"ಚಿಕ್ಕಮ್ಮಾ, ನನ್ನ ತಲಿ ಭಾಳ ನೋಯ್ತದ. ಹೊಟ್ಯಾಗ ಸಂಕಟ ಆಗಲಿಕ್ಕೆ ಹತ್ತೇದ. ಗಂಟಲು ಆರೇದ. ನಾ ಏನ ಮಾಡ್ಲಿ" ಎಂದು ಸಣ್ಣ ಮಗುವಿನಂತೆ ಮೀನಾಕ್ಷಿ ಮತ್ತೆ ಅಳಹತ್ತಿದಳು.

"ಮೀನಾ, ನನ್ನ ಮಾತ ಕೇಳು, ಒಂದಿಷ್ಟು ಕಾಫಿ ಅರೆ ಹಾಲನರೆ ಕುಡಿ, ಸಮಾಧಾನ ಆಗ್ತದ. ಅದರ ಚಿಂತಿ ಬಿಡು. ನಿಂದಾಗಿದ್ದರ ಸಿಗ್ತದ. ಇಲ್ಲಾ ಅಂದರ ಇಲ್ಲಾ. ಸುಮ್ಮನ ಮಲಕೊ. ನಾ ಕಾಫೀ ಮಾಡಿಕೊಂಡ ಬರತೇನಿ" ಎನ್ನುತ್ತ ಚಿಕ್ಕಮ್ಮ ಅಡಿಗೆ ಮನೆಗೆ ನಡೆದದ್ದನ್ನು ನೋಡಿ ರಂಗಮ್ಮ ತನ್ನ ಮನೆಗೆ ಹೊರಟಳು.

ಚಿಕ್ಕಮ್ಮನ ಕಾಫೀ ಆಗುವದರೊಳಗೆ ಹೊರಗೆ ಬಾಗಿಲ ಸಪ್ಪಳವಾಯಿತು. ಶೇಖರ ಬಂದಿದ್ದ.

"ಮೀನಾ ನಾ ಹೋಗೂಮುಂದ ನೀ ಅಳತಿದ್ದಿ. ನನಗ ಸಮಾಧಾನs ಆಗಲಿಲ್ಲಾ ಕೆಲಸಾ ಲಗೂನs ಮುಗಿಸಿದವನs ಬಂದಬಿಟ್ಟೆ" ಎನ್ನುತ್ತ ತನ್ನ ಅರಿವೆಯನ್ನು ಕೂಡ ಬದಲಿಸದೆ ಬಂದು ಅವಳ ಹಾಸಿಗೆಯ ಮೇಲೆ ಕುಳಿತ.

ಗಂಡನನ್ನು ನೋಡಿ ಮೀನಾಕ್ಷಿ ನಕ್ಕಳು. ಚಿಕ್ಕಮ್ಮ ತಂದ ಕಾಫಿ ಕುಡಿದಳು. ಮತ್ತೆ ಏನು ನೆನಪಾಯಿತೋ ಖಿನ್ನಳಾದಳು.

"ನಾ ಒಂದ ಮಾತ ಹೇಳತೇನಿ ಕೇಳತೀರಾ" ದೀನಧ್ವನಿಯಲ್ಲಿ ಕೇಳಿದಳು ಮೀನಾಕ್ಷಿ.

"ನಿನ್ನ ಯಾವ ಮಾತ ಕೇಳಿಲ್ಲಹೇಳು. ಒಂದು ಯಾಕ ಸಾವಿರ ಮಾತ ಕೇಳತೇನಿ ಹೇಳು" ಶೇಖರ ರಮಿಸುವ ಧ್ವನಿಯಲ್ಲಿ ಹೇಳಿದ.

"ನನ್ನ ಮಂಗಳಸೂತ್ರ ಸಿಗಲಿ ಅಂತ ದೇವರಿಗೆ ಹರಕಿ ಹೊತ್ತೇನಿ."

"ನಿನ್ನಂಥಾ ಕಲಿತಾಕೀನೂ ಕೆಲಸ ಆದರ ಕಾಣಿಕಿ ಕೊಡತೇನಿ ಅಂತ ಆಸೆ ತೋರಸ್ತೀಯಾ. ಹೂಂ; ಇರ್ಲಿ ಹೇಳು ಹರಕೀ ಅರೆ ಏನ ಮಾಡಕೊಂಡೀದಿ."

"ಮಂಗಳಸೂತ್ರ ಸಿಕ್ಕಿತಂದರ ಐದು ಮಂದಿ ಮುತ್ತೈದೇರಿಗೆ ಬಾಗಿನಾ ಕೊಡಬೇಕು. ಮತ್ತ ದುರ್ಗಾದೇವಿಗೆ ಬಂಗಾರ ತಾಳಿ ಮಾಡಿಸಿಕೊಡಬೇಕು ಅಂತ."

"ಭೊಲೋ ಅದs ಅಲಾ, ಈಗ ಮುನ್ನೂರು ರೂಪಾಯಿ ಕಳೀಬೇಕಂತಿ ಹೌದಲ್ಲೋ. ಹಾ ಹಾ ಹೌದು ಈ ಹರಕಿ ನಿನ್ನ ಮಂಗಳಸೂತ್ರ ಸಿಕ್ಕಮ್ಯಾಲೆ ಹೌದಲ್ಲೋ? ಮಾಡಸೂವಂತೇಳು" ಎಂದು ನಕ್ಕ ಶೇಖರನ ಮುಗುಳ್ನಗೆ ಮೀನಾಕ್ಷಿಯ ಮುಖದ ಮೇಲೂ ಪ್ರತಿಬಿಂಬಿಸಿತು.

ಆಗಲೆ ಸಾಮಾನು ತನ್ನ ಕೈಗೆ ಸಿಕ್ಕಷ್ಟು ಸಂತೋಷವಾಯಿತವಳಿಗೆ. "ರೊಕ್ಕದ ಪ್ರಶ್ನೆ ಅಲ್ರೀ, ಇದು ತಾಳಿ ಅಂದರ ಮಾಂಗಲ್ಯದ ಸಾಮಾನು ಕಳೀಬಾರದು ಅಂತಾರ; ಅದಕ್ಕ ಈ ಹರಕಿ. ನೀವು ಅಂದ್ರೆಲ್ಲಾ ಸಾಕು, ನನಗ ಯಾಕೋ ಥಂಡಿ ಅನಸ್ತದ ಆ ಗೂಟದ ಮ್ಯಾಲಿನ ಸ್ವೆಟರ್ ಕೊಡ್ರಿಲ್ಲೆ."

ಸ್ವೆಟರು ಕೈಗೆ ತೆಗೆದುಕೊಂಡ ಶೇಖರ ಆಶ್ಚರ್ಯದಿಂದ 'ಮೀನಾ' ಎಂದು ಕೂಗಿದ. ಮತ್ತೆ ಸುಮ್ಮನಾಗಿ ಅವಳ ಹತ್ತಿರ ಬಂದು,

"ಮೀನಾ ಕಣ್ಣುಮುಚ್ಚು ಒಂದು ಮಿನಿಟು, ನಾ ಮಜಾ ತೋರಸ್ತೇನಿ" ಎಂದ.

"ಇಂಥಾ ಹೊತ್ತಿನಾಗೂ ನಿಮ್ಮದು ಹುಡುಗಾಟಕೀನs" ಎನ್ನುತ್ತ ಕಣ್ಣು ಮುಚ್ಚಿದಳು ಮೀನಾಕ್ಷಿ.

"ಹೂ ತಗೀ ಇನ್ನ. ನಿನ್ನ ಕೊರಳಾಗ ಏನದ ನೋಡಿಕೊ" ಎಂದ.

"ಅಪ್ಪಯ್ಯಾ ಮಂಗಳಸೂತ್ರಾ ! ಎಲ್ಲಿತ್ರೀ ಇದು? ನಿಮಗ ಹ್ಯಾಂಗ ಸಿಕ್ಕಿತು? ತಗದ ಇಟಕೊಂಡಿದ್ರಿ ರೇನು ಹುಡುಗಾಟಿಕೀ ಮಾಡಾಕ? ಏನ ಸುದ್ದಿ ಹೇಳ್ರೆಲಾ?" ಮೀನಾಕ್ಷಿ ಉಸಿರು ಬಿಡದೆ ಮಾತನಾಡಿದಳು.

"ಮಾತಾಡ್ಲಿಕ್ಕೆ ಪುರುಸತ್ತರೇ ಕೊಡಲಾ. ನೀನು ನಿನ್ನೆ ರಾತ್ರಿ ಮಲಗೂಮುಂದ ಸ್ವೆಟರ ತೆಗೆದು ಗೂಟಕ್ಕ ಹಾಕಿದಾಗ ಸ್ವೆಟರಿನ ಕೂಡ ಮಂಗಳಸೂತ್ರಾನೂ ಹೋಗಿ ಗೂಟಕ್ಕ ಕೂತಿತ್ತು. ಈಗ ಸ್ವೆಟರು ತಗದ ಕೂಡಲೆ ನನ್ನ ಕೈಗೆ ಬಂತು. ನೀನs ತಗದ ಗೂಟಕ್ಕೆ ಹಾಕಿ ಮತ್ತ ನನಗ ಅಂತೀಯೇನು" ಎಂದು ಮನವಾರೆ ನಕ್ಕ ಶೇಖರ.

"ಅಯ್ಯs ಹಿಂಗಾಗಿರಬೇಕು ಅಂತ ನನ್ನ ತಲ್ಯಾಗs ಬಂದಿಲ್ಲಾ. ಮುಂಜಾನಿಂದ ಮನಿಯಂತ ಮನೀ ಎಲ್ಲಾ ಹುಡುಕಿದೆ. ಇನ್ನ ಅದರ ಆಸೇನs ಬಿಟ್ಟಿದ್ದೆ. ಅಂತೂ ಸಿಕ್ಕಿತಲಾ ಮನ್ಯಾಗs ಗೂಟಕ್ಕ ಹಾಕಿ ದೇವರಿಗೆ ಹರಕಿ ಹೊತ್ತೆಲ್ಲಾ ನಾನು. ಮಜಾನs ಇದೂ ಒಂದು" ಎನ್ನುತ್ತ ಮಂಗಳಸೂತ್ರವನ್ನು ಎತ್ತಿ ಕಣ್ಣಿಗೊತ್ತಿಕೊಡಳು ಮೀನಾಕ್ಷಿ.

ಅವಳನ್ನೇ ನೋಡುತ್ತ ನಿಂತಿದ್ದ ಶೇಖರನಿಗೆ ಈ ಮಿನಾಕ್ಷಿಯ ಮುಖ ರಾಹು ಬಿಟ್ಟ ಚಂದಿರನಂತೆ ಕಂಡಿತು.

***

■■

# ಯೋಧನ ಆತ್ಮ ಸಂಚಾರ

ಓಹ್! ಈಗ ತುದಿ ಬೆರಳಿನಿಂದ ಸುರುವಾಯಿತು. ಈ ಬಂಧನ ಬಿಡಿಸಿಕೊಳ್ಳಲು ಎಷ್ಟು ಹೊತ್ತಿನಿಂದ ಒದ್ದಾಡಿದ್ದೆ. ಈಗ ನ್ನೂ ಕಾಲ ತುದಿ ಬೆರಳಿನಿಂದ ಸ್ವಲ್ಪ ಸ್ವಲ್ಪ ಸಡಿಲವಾಗ್ತಾ ಇದೆ. ಹಾಂ. ಈಗ ಮೊಣಕಾಲಿಗೆ ಬಂತು. ಅರೆ! ಹೊಟ್ಟೆಯನ್ನೂ ದಾಟಿತು. ಧಡ್ ಧಡ್‌ಡ್ ಡ್ !ಇದೇನು ವೈರಿಯ ಗುಂಡಿನ ಸಪ್ಪಳಕ್ಕೆ ಕೈ ಇನ್ನೂ ಚಲಿಸುತ್ತಿದೆಯಲ್ಲ! ಕಡೇ ಸಲ, ಮೆಶಿನ್ ಗನ್ನಿನವರೆಗೆ ಕೈ ಸರಿದು ಸರಿದು ಜರಿದೇ ಬಿಟ್ಟಿತಲ್ಲ! ಇಲ್ಲಿಂದಲೂ ಬಿಡಿಸಿಕೊಂಡ ಹಾಗಾಯಿತು. ಇದೇನು ಎದೆಯಲ್ಲವೇ. ಮಂದ ಮಂದವಾಗಿ ಬಡಿದುಕೊಳ್ಳುತ್ತಿದೆ. ಆ ಮೊದಲಿನ ಧನ್ ಧನ್ ಗುಟ್ಟುವ ತುಮುಲವಿಲ್ಲ. ಗಳಿಗೆ ಗಳಿಗೆಗೆ ಬಂಧನ ಸಡಿಲವಾಗುತ್ತ ಆಗುತ್ತ ಕಡೆಗೂ ಕಣ್ಣುಗಳಿಂದ ಈಚೆ ಬಿಡಿಸಿಕೊಂಡು ಬಂದೇಬಿಟ್ಟೆ.......

ಆಹಾ ! ಎಂಥಾ ಸುಂದರವಾದ ದೃಶ್ಯ. ಸೂರ್ಯೋದಯವಾಗುತ್ತಾ ಇದೆ. ಸೂರ್ಯನ ಕೆಂಪು ಕಿರಣಗಳಿಂದ ಪರ್ವತಶಿಖರ ಸುಂದರವಾದ ಗುಲಾಬಿ ವರ್ಣದ್ದಾಗಿದೆ. ಅಬ್ಬ! ಈ ಕಡೆಗೆ ಎಂಥ ಭೀಕರ ದೃಶ್ಯ. ಮುರಿದು ನುಗ್ಗು ನುಗ್ಗಾಗಿರುವ ಟ್ಯಾಂಕುಗಳು, ರೆಕ್ಕೆ ಕತ್ತರಿಸಿ ಬಿದ್ದ ವಿಮಾನಗಳು, ಕಿತ್ತುಹೋದ ಡೇರೆಗಳು. ಕೆಲವು ಡೇರೆಗಳು ಬೆಂಕಿ ಬಿದ್ದು ಇನ್ನೂ ಉರಿಯುತ್ತಿವೆ. ಒಳಗಿದ್ದ ಸಾಮಾನುಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಕೈಕಾಲು, ರುಂಡ, ಮುಂಡ ಬೇರೆ ಬೇರೆಯಾಗಿ ದಿಕ್ಕು ದಿಕ್ಕಿಗೆ ಬಿದ್ದಿರುವ ವೈರಿ ಸೈನಿಕರ ಹೆಣಗಳು. ಓಹೋ! ವಿಚಾರ ಮಾಡುತ್ತ ಮಾಡುತ್ತ ನನ್ನ ದೇಹದಿಂದಲೂ ಎಷ್ಟು ದೂರ ಬಂದುಬಿಟ್ಟಿರುವೆ. ಆಕಾಶದಲ್ಲಿ ಇಷ್ಟು ಎತ್ತರದಲ್ಲಿದ್ದರೂ ನನಗೆ ಎಲ್ಲವೂ ಸ್ಪಷ್ಟವಾಗಿ ಕಾಣಿಸುತ್ತಿದೆ. ಅದೋ ಅಲ್ಲಿ ಬರುತ್ತಿದೆ ರೆಡ್ ಕ್ರಾಸ್ ಸಂಸ್ಥೆಯ ವ್ಯಾನು. ಗಾಯಗೊಂಡು ನರಳುತ್ತಿರುವ ಭಾರತೀಯ ಸೈನಿಕರನ್ನು ಒಬ್ಬೊಬ್ಬರನ್ನಾಗಿ ಎತ್ತಿ ಒಯ್ಯುತ್ತಿದ್ದಾರೆ. ಒಯ್ಯಲಿ ಪಾಪ! ಶುಶ್ರೂಷೆಯಿಂದ ಆ ನನ್ನ ಸಹ ಯೋಧರು ಬದುಕಬೇಕು. ಇದೇನು ಪಾಕ್ ವಿಮಾನ ಒಂದು ಇತ್ತ ಕಡೆಗೇ ಬರುತ್ತಿದೆಯಲ್ಲ. ಅಯ್ಯೋ ಅದು ನೇರವಾಗಿ ರೆಡ್‌ಕ್ರಾಸ್ ವ್ಯಾನಿನ ಕಡೆಗೇ ಧಾವಿಸುತ್ತಿದೆ. ಅಲ್ಲೇನು ಕೆಲಸ ಇವರಿಗೆ ? ಛೀ ಛೀ ನಾಚಿಕೆಗೇಡು. ವ್ಯಾನಿನ ಮೇಲೆ ಬಾಂಬೆಸೆದು ತೀವ್ರವಾಗಿ ಪರಾರಿಯಾಗಿದೆ. ಹೆಂಬೇಡಿ ಪಾಕ್ ವಿಮಾನ. ನನ್ನ ಮೈಯ ನೆತ್ತರು ಕುದಿಯುತ್ತಿದೆ ನನ್ನ ಕೈಯಲ್ಲಿ ಏನಾದರೂ ಒಂದು ಆಯುಧವಿದ್ದರೆ ತೋರಿಸುತ್ತಿದ್ದೆ ಇವರಿಗೆ ಒಂದು ಕೈ, ಆದರೆ ಆದರೆ ....ರೆ...ರೆ...ರೆ.... ನನಗೆ ಕೈಯೇ ಇಲ್ಲ. ಅಷ್ಟೇ ಏಕೆ ದೇಹವೇ ಇಲ್ಲ.....

ಅದೋ ಅಲ್ಲಿ, ಆ ಕಂದಕದ ಏರಿಯ ಮೇಲೆ ಪಾಕ್ ಸೈನಿಕನೊಬ್ಬ ಗುಂಡು ಬಡಿಸಿಕೊಂಡು ಬಿದ್ದು ಒದ್ದಾಡುತ್ತಿದ್ದಾನೆ. ಅವನ ತುಟಿಗಳು ಏಕೋ ಅದರುತ್ತಿವೆ. ಅಹುದು. ಅವನು ಕ್ಷೀಣವಾಗಿ- ಪಾನಿ.... ಪಾನಿ- ಎನ್ನುತ್ತಿದ್ದಾನೆ. ಅಲ್ಲೊಬ್ಬ ಧಾವಿಸಿ ಬಂದ. ಅವನು ಭಾರತೀಯ ಸೈನಿಕನಂತೆ ಕಾಣುತ್ತಾನಲ್ಲ. ನಮ್ಮ ರೆಜಿಮೆಂಟಿನವನಲ್ಲ. ನನಗೆ ಮುಖ ಪರಿಚಯವೂ ಇಲ್ಲ. ಆದರೂ ವೇಷದಿಂದಲೇ ಗುರುತು ಹಿಡಿದೆ ಇವನು ನಮ್ಮವನೆಂದು. ಈಗ ಅವನು ಮೊಣಕಾಲೂರಿ ಕೂತು ತನ್ನ ನೀರಿನ ಚೀಲದ ಬಾಯಿ ಬಿಚ್ಚಿ ಪಾಕ್ ಸೈನಿಕನ ತುಟಿಯ ಮೇಲಿಟ್ಟಿದ್ದಾನೆ. ನೀರು ಗುಟುಕರಿಸಿದಂತೆ ಅವನ ಒದ್ದಾಟವೂ ಕಡಿಮೆ ಆಗುತ್ತಿದೆ. ಕೃತಜ್ಞತೆಯಿಂದ ಅವನ ಕೈ ಭಾರತೀಯ ಸೈನಿಕನ ಕೈ ಹಿಡಿಯುತ್ತಲೇ ಅವನ ಆತ್ಮವೂ ಬಂಧನದಿಂದ ಬಿಡುಗಡೆ ಹೊಂದಿತು. ಇದೆಂಥಾ ನೋಟ! ರಣರಂಗದಲ್ಲಿ ಕಾದಾಡುವಾಗ ಅವನು ವೈರಿ. ಆದರೆ ಸಾವಿನ ಬಾಗಿಲಿನಲ್ಲಿದ್ದಾಗ ಅವನೊಬ್ಬ ಮಾನವ. ಮಾನವತೆ ಇನ್ನೂ ಸತ್ತಿಲ್ಲ. ಇಲ್ಲಿ ರಣರಂಗದಲ್ಲಿಯೂ ಜೀವಂತವಾಗಿದೆ. ಅದಕ್ಕೆ ಜೀವ ಕೊಟ್ಟವರು ಭಾರತದ ವೀರ ಯೋಧರು. ಕ್ಷುದ್ರ ಕಾರಣಗಳಿಗಾಗಿ ಹೋರಾಡುವವರಲ್ಲ ನಾವು. ಮಾನವತೆಗಾಗಿ ಸ್ವಾತಂತ್ರ್ಯ ರಕ್ಷಣೆಗಾಗಿ ಕ್ಷುದ್ರ ಜಾತೀಯ ಭಾವನೆಗಳನ್ನು ಬದಿಗಿರಿಸಿ ನಮ್ಮ ಜೀವನವನ್ನೇ ಮುಡಿಪಾಗಿಡುವ ವೀರ ಯೋಧರು ನಾವು.

.........................................................................................................

"ಆಗೇ ಬಡೋssss" ಎಂದು ಕೂಗುತ್ತ ಮುನ್ನುಗ್ಗಿದ್ದ ನಮ್ಮ ಪಡೆಯ ನಾಯಕನಿಗೆ ಕೇವಲ ಇಪ್ಪತ್ತೆಂಟು ವರುಷ. ಮೈಯಲ್ಲಿ ವೈರಿ ಗುಂಡು ನೆಟ್ಟರೂ ಹಿಂತೆಗೆಯದೆ ಯುದ್ಧ ಮಾಡಿದ ವೀರ ನಾಯಕನ ಮರಣ ಬರ್ಕಿ ಕೈವಶ ಮಾಡಿಕೊಳ್ಳುವಾಗಲೇ ಆಯಿತು. ಶೆಲ್‌ಗಳ ಸುರಿಮಳೆ, ಬಾಂಬಿನ ಸಿಡಿತ, ಮೆಶಿನ್ ಗನ್ನಿನ ಆರ್ಭಟ ಇವುಗಳ ನಡುವೆಯೇ ಯುದ್ಧ ಮಾಡುತ್ತಿದ್ದ ನನಗೂ ಆಗಲೇ ಮರಣಾಂತಿಕ ಪೆಟ್ಟು ಬಿದ್ದದ್ದು. ಆದರೂ ನಮ್ಮ ಶೌರ್ಯದ ಮುಂದೆ ವೈರಿಗಳ ಆಟ ನಡೆಯದೆ ಬರ್ಕಿ ನಮ್ಮ ಕೈವಶವಾಯಿತು. ನನ್ನ ಮೈ ರೋಮಾಂಚನಗೊಳ್ಳುತ್ತಿದೆ, ಸಂತೋಷದಿಂದ, ಹೆಮ್ಮೆಯಿಂದ. ಆದರೆ .....ರೆ....ರೆ.... ನನಗೆ ಮೈಯೇ ಇಲ್ಲ. ಬರಿ ಗಾಳಿ. ಗಾಳಿ ನಾನು. ಎಲ್ಲಿ ಬೇಕಾದಲ್ಲಿ ಬೇಕಾದಷ್ಟು ದೂರ, ಬೇಕಾದ ಸ್ಥಳಕ್ಕೆ ಹೋಗಬಲ್ಲೆ ನಾನು.

ಇದೋ ಇಲ್ಲಿ.... ಪಾಕಿಸ್ತಾನದ ಹಾಳುಬಿದ್ದ ಠಾಣ್ಯದ ಹತ್ತಿರ ಬಂದಿದ್ದೇನೆ. ಎಲ್ಲಿ ಬೇಕಲ್ಲಿ ಹೆಣಗಳು ಬಿದ್ದು ಉರುಳಾಡುತ್ತಿವೆ. ಟುಕು ಟುಕು ಜೀವ ಹಿಡಿದವರೂ ಅಲ್ಲಲ್ಲಿ ಬಿದ್ದಿದ್ದಾರೆ. ಅವರಿಗೆ ಸಹಾಯ, ಶುಶ್ರೂಷೆ, ಅನುಕಂಪ, ದಯೆ, ಔಷಧಿ, ಆಹಾರ ಏನೂ ಇಲ್ಲ ಅಲ್ಲಿ. ಮಾರ್ಷಲ್ ಆಯೂಬ್ ತನಗೆ ಭಾರವಾದ ಈ ಪಾಕ್ ಪ್ರಜೆಗಳನ್ನು ನಿರ್ದಯತೆಯಿಂದ ಭಾರತ ಸೇನೆಯ ಎದುರು ನೂಕಿ ಅವರನ್ನು ಗುಂಡಿಕ್ಕಿ ಕೊಲ್ಲಿಸಿದ್ದಾನೆ ಅಷ್ಟೆ. ಅವರನ್ನು ನೋಡಿ ನನಗೆ ತುಂಬಾ ಕನಿಕರ ಬರುತ್ತದೆ. ಹಾಂ, ಇಲ್ಲಿ ಪಾಕ್ ಸೈನಿಕರ ಆತ್ಮಗಳೆರಡು ಬರುತ್ತಾ ಇವೆ. ಏನೋ ಮಾತಾಡಿಕೊಳ್ಳುತ್ತಿದ್ದಾರೆ. ತಮ್ಮಷ್ಟಕ್ಕೆ. ನಾನು ಸ್ವಲ್ಪ ಮರೆಯಾಗಿ ಕೇಳುವೆ ಅವರ ಮಾತುಗಳನ್ನು. ಪಾಕ್ ಆತ್ಮ೧: ಏನೋ ಉಸ್ಮಾನ್ ನೀನೂ ಬಂದೆಯಾ ಇಲ್ಲಿ ಅಂತೂ ಇಬ್ಬರೂ ಮತ್ತೆ ಕೂಡಿದೆವು ಅನ್ನು.

ಪಾಕ್ ಆತ್ಮ ೨ : ಹೂನಪ್ಪಾ ಅಹ್ಮದ ಬರಲೇ ಬೇಕಾಯಿತು. ಅಧ್ಯಕ್ಷ ಅಯೂಬರ ಆಜ್ಞಾ ಪಾಲಿಸಲೇಬೇಕಲ್ಲ. ಸೈನ್ಯಕ್ಕೆ ಸೇರಲೇಬೇಕು ಅಂತ ಆರ್ಡರ್ ಬಂತು, ಸೇರಿಯೇ ಬಿಟ್ಟೆ. ಇಲ್ಲದಿದ್ದರೆ ಗೊತ್ತೇ ಇದೆಯಲ್ಲ. ಅಯೂಬರ ಚಿತ್ರಹಿಂಸೆ, ಸೆರೆಮನೆವಾಸ, ಆಸ್ತಿಯ ಮುಟ್ಟುಗೋಲು. ಅದಕ್ಕೆ ಹೆದರಿ ಸೈನ್ಯಕ್ಕೆ ಸೇರಿಕೊಂಡೆ. ಯುದ್ಧ ಶುರುವಾದ ಮೇಲೆ ಭಾರತೀಯ ಸೈನಿಕರು ನಮ್ಮ ಠಾಣ್ಯಗಳ ಮೇಲೆ ಏರಿ ಏರಿ ಬಂದು ಗೆದ್ದುಕೊಂಡರಲ್ಲಾ ಆವಾಗ ಎಷ್ಟೋ ಮಂದಿ ಪಾಕ್ ಸೈನಿಕರು ಅವರಿಗೆ ಶಸ್ತ್ರಾಸ್ತ್ರ ಒಪ್ಪಿಸಿಕೊಟ್ಟು ಶರಣಾಗತರಾದರು. ಅವರು ಕೈದು ಆದರೂ ಅವರ ಜೀವ ಉಳೀತು. ನನಗೂ ಒಮ್ಮೆ ಹೀಗೇ ಮಾಡಬೇಕು ಅಂತ ಅನ್ನಿಸಿತ್ತು. ಆ ಯುದ್ಧದಾಗ ನಾನು ನನ್ನ ಬಾಲ್ಯ ಸ್ನೇಹಿತ ಗೋಪಾಲನ್ನ ನೋಡಿದೆ. ಪಾಕಿಸ್ತಾನಕ್ಕೆ ನಾವು ಬರೂದಕ್ಕಿಂತ ಮೊದಲು ನಾವಿಬ್ಬರೂ ಕೂಡಿ ಕಲೀತಿದ್ದಿವಿ. ಅವನ ಹತ್ತಿರ ಹೋಗಿ ಅಪ್ಪಿಕೋಬೇಕು ಅನ್ನೋ ಆತುರ ನನಗ ಭಾಳ ಆಗಿ ಮುಂದೆ ನುಗ್ಗಿದೆ. ಆಯ್ತು ನೇರವಾಗಿ ಗುಂಡಿನ ಗುರಿ ಇಡುವ ಭಾರತೀಯ ಸೈನಿಕ ನನ್ನ ಕೊಂದs ಬಿಟ್ಟಾ. ಇಲ್ಲಿಗೆ ಬಂದೆ, ನಿನ್ನ ಭೆಟ್ಟಿ ಆತು. ನೀ ಹ್ಯಾಂಗ ಸತ್ತಿ ಹೇಳು ಈಗ.

ಪಾಕ್ ಆತ್ಮ ೧: ಯುದ್ಧದೊಳಗ ನಾವು ಹಿಮ್ಮೆಟ್ಟಿ ಹೋಗುವಾಗ ಪಾಕಿಸ್ತಾನದ ಒಂದು ಹಳ್ಳಿಯೊಳಗ ಉಳಿದಿವಿ. ಎಲ್ಲಾರೂ ಠಾಣ್ಯಕ್ಕೆ ಹೋದರು. ಆದರ ನನಗ ಗಾಯ ಭಾಳ ಆಗಿತ್ತು ಅಂತ ಅಲ್ಲೇ ಉಳಿದೆ. ಏನು ವಿಚಿತ್ರಪಾ! ನಮ್ಮ ಪಾಕ್ ವಿಮಾನ ಆ ಹಳ್ಳೀ ಮ್ಯಾಲೆ ಬಾಂಬ ದಾಳಿ ಮಾಡಿತು. ಅಲ್ಲೇ ಸತ್ತೆ ನಾನು. ನಮ್ಮವರs ನನ್ನ ಕೊಂದರಪಾs ಕೊಂದರು....

ಪಾಕ್ ಆತ್ಮ ೨: ಬಿಡೋ ಯಾಕ ಅಳತೀ. ಒಮ್ಮೆ ಆ ನರಕದಿಂದ ಪಾರಾದಿವಿ ಅಂತ ಸಂತೋಷಪಡು. ಹೂಂ. ನಾವೇನೋ ಪಾರಾದಿವಿ. ಆದರ ಬೀಬಿ ಬಚ್ಚಾಕ್ಕ ಮಾತ್ರ ಏನೂ ಸುಖಾ ಇಲ್ಲ. ಮನಿಯೊಳಗ ದುಡಿಯೋ ಗಂಡಸರು ಇಲ್ಲಾ. ಸೈನಿಕ ಮನೀಯವರು ಅಂತ ಅವರಿಗೆ ಯಾರದೂ ಸಹಾಯ, ನೆರವು ಇಲ್ಲಾ. ಬಟ್ಟೆ, ಆಹಾರ, ಔಷಧಿ ಏನೂ ಇಲ್ಲ. ಅವರ ಗೋಳು ನೋಡಲಾಗಲಿಲ್ಲ.

ಪಾಕ್ ಆತ್ಮ ೧: ನೀನೂ ಹೋಗಿದ್ದೆಯಾ ಹಾಗಾದ್ರೆ ಊರಿಗೆ. ನೋಡಿ ಬಂದೆಯಾ ಬೀಬಿ ಬಚ್ಚಾಗಳನ್ನ. ನಮ್ಮ ಮನೆಯಲ್ಲೂ ಇದೇ ಹಾಡು, ತಂದೆ-ತಾಯಿ ಮುಪ್ಪಿನವರು. ದುಡಿಯಲಾರರು. ಇದ್ದೊಬ್ಬ ತಮ್ಮನನ್ನೂ ಹಿಡಿದು ಸೈನ್ಯಕ್ಕೆ ಸೇರಿಸಿದರು. ಈ ಪಾಕ್ ಸರಕಾರದವರು. ಬೀಬಿ ಅಂತೂ ನಾನು ಸತ್ತದ್ದಕ್ಕೆ ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಾಳೆ. ಪುಣ್ಯಕ್ಕೆ ಬಚ್ಚಾಗಳಿಲ್ಲ ನನಗೆ. ಇದ್ದರೆ ಅವೂ ಆಹಾರವಿಲ್ದೆ ಸಾಯುತ್ತಿದ್ದವೋ ಏನೋ. ಅಬ್ಬಬ್ಬಾ! ನನಗಂತೂ ಅದನ್ನೆಲ್ಲಾ ನೋಡಿ ತಳಮಳ ಆಗಿ ಅಲ್ಲಿ ನಿಲ್ಲುವುದೇ ಆಗಲಿಲ್ಲ. ಹಾಗೇ ದೂರ ಬಂದುಬಿಟ್ಟೆ ನೋಡು ಎಂಥಾ ದುರ್ದೈವಿಗಳು ನಾವು. ಇಸ್ಲಾಂ ಧರ್ಮವನ್ನು ಕಾಪಾಡಿಕೊಳ್ಳುವುದಕ್ಕೆ ಈ ಯುದ್ಧ ಎಂದು ನಮ್ಮ ನಾಯಕರು ಮೇಲಿಂದ ಮೇಲೆ ಹೇಳುತ್ತಿದ್ದರು. ಆದರೆ ಧರ್ಮ ಕಾಪಾಡುವ ರೀತಿಯೇ ಇದು. ಚರ್ಚು, ಮಸೀದಿ, ದೇವಾಲಯಗಳ ಮೇಲೆ ನಮ್ಮವರು ಬಾಂಬು ಹಾಕಿ ಬಂದರಲ್ಲ !! ಇದು ಧರ್ಮವೇ. ಛೀ. ಛೀ. ನೆನಸಬಾರದು ಅದನ್ನು. ಬಾ, ಬಾ. ಇಲ್ಲಿಂದ ದೂರ ಹೋಗೋಣ....

....ಹುಂಃ ಹೋದರು. ಇಲ್ಲಿಂದ ದೂರ ಹೋಗುತ್ತಾರಂತೆ! ಇವರ ಮಾತು ಕೇಳಿ ನನಗೆ ಸಂತೋಷವಾಗುವ ಬದಲು ದುಃಖವಾಗುತ್ತಿದೆ. ಪಾಪ! ಬದುಕಿ ಇರುವವರೆಗೂ ಸುಖಪಡಲಿಲ್ಲ. ಸತ್ತ ಮೇಲೂ ಶಾಂತಿಯಿಲ್ಲ ಇವರಿಗೆ ಹಾಂ... ಈಗ.... ನಾನೂ ನಮ್ಮೂರ ದಾರಿಯಲ್ಲಿರುವೆ. ನನ್ನ ತಂದೆ, ಹೆಂಡತಿ, ಮಗ, ಮಗಳು ಹೇಗಿದ್ದಾರೆ ನೋಡಲು ತುಂಬಾ ಆತುರವಾಗಿದೆ ನನಗೆ.

ಇದೋ ಬಂತು ನಮ್ಮೂರು., ಇದೇ ನಮ್ಮ ಮನೆ. ಸಾವಿರ ಮೈಲುಗಳಷ್ಟು ಅಂತರವನ್ನು ಎಷ್ಟು ಬೇಗ ದಾಟಿ ಬಂದಿರುವೆನಲ್ಲ. ಅಹಹಹ ! ಇದೇನು ಆಶ್ಚರ್ಯದ ಮಾತಲ್ಲ. ಈಗ ಗಾಳಿ ನಾನು. ಅಲ್ಲಿ ನೋಡಿ, ನನ್ನ ಮಗಳು ಕಮಲೆ ಶಾಲೆಗೆ ಹೊರಟಿದ್ದಾಳೆ. ಒಳ್ಳೆಯ ಬಟ್ಟೆ ತೊಟ್ಟಿದ್ದಾಳೆ. ಹೆಗಲಿಗೆ ಪಾಟಿ ಚೀಲವಿದೆ. ಅವಳ ಜೊತೆಯಲ್ಲಿರುವ ಹುಡುಗಿ ಸಾವುಕಾರ ಹನುಮಂತರಾಯರ ಮಗಳಲ್ಲವೇ? ಬಹಳ ಗರ್ವಿಷ್ಠೆ. ಬಡವರನ್ನು ಕಣ್ಣೆತ್ತಿಯೂ ನೋಡುವವಳಲ್ಲ ಎಂದೆಲ್ಲ ಕಮಲೆ ಹೆಳುತ್ತಿದ್ದಳು ಈ ಹುಡುಗಿಯ ಬಗ್ಗೆ. ಆದರೆ ಈಗ ಕಮಲೆಯ ಹೆಗಲ ಮೇಲೆ ಕೈ ಹಾಕಿಕೊಂಡು ಹಸನ್ಮುಖಿಯಾಗಿ ಹೊರಟಿದ್ದಾಳೆ. ತಿಳಿಯಿತು. ಈಗ ಕಮಲೆ ಸಾಮಾನ್ಯಳಲ್ಲ. ಯುದ್ಧದಲ್ಲಿ ಪ್ರಾಣ ಕೊಟ್ಟ ವೀರ ಯೋಧನ ಮಗಳು. ಹೀಗೆಯೇ ಸುಖಿಯಾಗಿರು ಮಗೂ. ಅದೋ ಅಪ್ಪ ಕಟ್ಟೆಯ ಮೇಲೆ ತಂಬಾಕು ತೀಡುತ್ತ ಕುಳಿತಿದ್ದಾರೆ. ಅವರ ಸುತ್ತ ಕುಳಿತವರ ಬಾಯಲ್ಲಿ ರಾಷ್ಟ್ರ ರಕ್ಷಣೆಗೆ ಪ್ರಾಣ ಕೊಟ್ಟ ನನ್ನ ಮಾತೇ ಮಾತು. ಅಪ್ಪ ಸೊರಗಿದರೂ ಹೆಮ್ಮೆಯಿಂದ ತಲೆದೂಗುತ್ತಿದ್ದಾರೆ. ಇದೇನು? ಕರಿಯ ನನ್ನ ನೆರೆಮನೆಯಲ್ಲಿರುವ ಗೆಳೆಯ ನಮ್ಮ ಎತ್ತುಗಳನ್ನು ಬಿಚ್ಚಿಕೊಂಡು ಹೊರಟಿರುವನಲ್ಲ. ನಮಗೆ ಇರುವ ಎರಡೆಕರೆ ಹೊಲವನ್ನೂ ಅವನೇ ಉತ್ತು ಬಿತ್ತುಕೊಡುವಂತೆ ಕಾಣುತ್ತದೆ. ಆಯಿತು. ಆದೂ ಒಳ್ಳಯದೇ. ತಂದೆ ವಯಸ್ಸಾದವರು, ಮಗ ಸಣ್ಣವ. ಇನ್ನಾರು ಮಾಡಬೇಕು ಕೆಲಸ ? ಹೊಸಲು ದಾಟಿ ಒಳಕ್ಕೆ ಬಂದೆ. ನಡುಮನೆಯ ಕಂಬಕ್ಕೊರಗಿ ಕುಳಿತು ನನ್ನ ಹೆಂಡತಿ ಹರಿದ ಸೀರೆಯನ್ನು ಹೊಲಿಯುತ್ತಿದ್ದಾಳೆ. ಈ ಸಲ ನಾನು ಬರುವಾಗ ಅವಳಿಗೆ ಹೊಸ ಸೀರೆ ತರುವೆನೆಂದು ಕಾಗದ ಬರೆದಿದ್ದೆ. ಈಗ ಅದು ಸಾಧ್ಯವಿಲ್ಲದ ಮಾತು. ಅವಳು ಬಹಳ ಸೊರಗಿದ್ದಾಳೆ. ಬಳೆಗಳು ಮೊಳಕೈಗೇರುತ್ತಿವೆ. ದುಃಖದೊಡನೆ ಗಾಂಭೀರ್ಯವೂ ಕೂಡಿದೆ ಮುಖದಲ್ಲಿ. ಇದೋ ಬರಿಗೊಡವನ್ನು ನಡದ ಮೇಲಿರಿಸಿ ನೀರು ತರಲು ಬಾವಿಗೆ ಹೊರಟಿದ್ದಾಳೆ. ಎಲ್ಲರೂ ಅವಳನ್ನು ಮೆಚ್ಚುಗೆಯಿಂದ ನೋಡುವವರೇ, ಅವಳು ಬಂದೊಡನೆ ಸರಿದು ಗೌರವ ತೋರುವವರೇ. ಅವಳ ಮುಖದಲ್ಲೀಗ ಹೆಮ್ಮೆ, ಗಾಂಭೀರ್ಯ ಎದ್ದು ಕಾಣುತ್ತಿದೆ. ನನ್ನ ಮಗ ಮೋಹನ ಎಲ್ಲಿ ? ಹಾಂ ಊರ ಹೊರಗೆ ಹನುಮಂತ ದೇವರ ಗುಡಿಯ ಬಯಲಿನಲ್ಲಿ ಆಟವಾಡುತಿದ್ದಾನೆ. ಹಾಹಾ ಚಿಕ್ಕ ಮಕ್ಕಳು ಯುದ್ಧದ ಆಟವನ್ನೇ ಆಡುತ್ತಿದ್ದಾರೆ. ನನ್ನ ಮಗನೇ ಗೆದ್ದ ಯುದ್ಧದಲ್ಲಿ. ಅವನನ್ನು ಹೆಗಲ ಮೇಲೆ ಹೊತ್ತು ಕುಣಿಯುತ್ತಿದ್ದಾರೆ. ಉಳಿದ ಹುಡುಗರು. ಜಯ ಜಯಕಾರ ಮಾಡುತ್ತಿದ್ದಾರೆ. ಭಲೇ ಮಗನೇ ! ಇದ್ದರೆ

ಇಂಥಾ ಮಗನಿರಬೇಕು. ನನ್ನಂತಾ ಅಪ್ಪನಿಗೆ ತಕ್ಕ ಮಗ. ಅರರೆ ಮೀಸೆಯ ಮೇಲೆ ಕೈ ಎಳೆಯುತ್ತಿದ್ದೇನೆ. ನನಗೆ ನೂಖವೂ ಇಲ್ಲ, ಮೀಸೆಯೂ ಇಲ್ಲ. ದೇಹವೂ ಇಲ್ಲ; ಗಾಳಿ. ಬರಿ ಗಾಳಿ ನಾನು.

ಹಳ್ಳಿಯಿಂದ ದಿಲ್ಲಿಗೆ ಹಾರಿದ್ದೇ ಈಗ ನಾನು. ಇದೋ ಇಲ್ಲಿ ನಡೆದಿರುವದು ಲೋಕಸಭೆ. ಅದೋ ಅಲ್ಲಿ ಮಧ್ಯದಲ್ಲಿ ಕುಳಿತಿದ್ದಾರೆ. ನಮ್ಮ ಪ್ರಧಾನ ಮಂತ್ರಿ. ನಮ್ಮ ಗುಣಗಾನ ಮಾಡುತ್ತಿದ್ದಾರೆ. ಅವರು. ವೀರ ಜವಾನರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಅವರಿಗೆ. ವೀರ ಮರಣ ಪಡೆದ ಜವಾನರ ಬಗ್ಗೆ ಹೇಳುವಾಗ ಅವರ ಧ್ವನಿ ಎಷ್ಟು ನಡಗುತ್ತಿತ್ತು. ಕಣ್ಣಲ್ಲಿ ನೀರೂ ತುಂಬಿತ್ತು. ಇಂಥ ಪ್ರಧಾನಿಯನ್ನು ಪಡೆದು ನಮ್ಮ ದೇಶ ಧನ್ಯ. ಇದೋ ಎಲ್ಲರೂ ಎದ್ದು ನಿಂತು ಮೌನವಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ. ನಮಗೆ ಅಂದರೆ ಮರಣಹೊಂದಿದ ವೀರ ಜವಾನರ ಆತ್ಮಕ್ಕೆ ಶಾಂತಿಯಾಗಲೆಂದು ದೇವರಲ್ಲಿ ಬೇಡಿಕೊಳ್ಳುತ್ತಿದ್ದಾರೆ. ದೇವರಲ್ಲಿ ನನ್ನದೂ ಒಂದು ಪ್ರಾರ್ಥನೆ. ನನ್ನನ್ನು ಜನ್ಮ ಜನ್ಮಕ್ಕೂ ಈ ಭಾರತ ದೇಶದಲ್ಲಿಯೇ ಹುಟ್ಟಿಸಬೇಕೆಂದು. ಹುಟ್ಟಬೇಕು. ಮತ್ತೆ ಸ್ವಾತಂತ್ರ್ಯ ರಕ್ಷಣೆಗೆ ಹೋರಾಡಬೇಕೆಂದು ನನ್ನ ಬಲವಾದ ಆಸೆ. ಆಯಿತು, ನನ್ನ ಆತ್ಮಕ್ಕೆ ಶಾಂತಿಯಾಯಿತು. ನನ್ನನ್ನು ನೀವಾರೂ ಕಾಣಲಾರಿರಿ. ನಮಸ್ಕಾರ. ನಾನು ದೂರ.... ದೂರ ಗಾಳಿಯಲ್ಲಿ ತೇಲಿಹೋಗುತ್ತಿರುವೆ.....ದೂ....ರ...

***

■■

# ಐದರ ನೋಟು

ಲಾಲ ಛಡೀ ಮೈದಾನ ಖಡೀ ||
ಕ್ಯಾ ಖೂಬ ಲಡೀ || ಕ್ಯಾ ಖೂಬ ಲಡೀ....||

ನೆರೆಮನೆಯ ರೇಡಿಯೋ ಕಿರುಚುತ್ತಿತ್ತು. ಬೆಳಗಾಗುತ್ತಲೇ ಸಿಲೋನ್; ಅದೇ ಅವರ ಉದಯರಾಗ, ಮುಖ ತೊಳೆದು, ಹಲ್ಲುಜ್ಜಿ, ಹಾಲು ಕುಡಿಯಲು ಬಂದ ರವಿಗೆ ಒಮ್ಮೆಲೆ ನೆನಪಾಯಿತು.

"ಅವ್ವಾ, ನಾವು ಸಿನೇಮಾಕ್ಕ ಹೋಗೂಣೆನವ್ವಾ"

"ಬ್ಯಾಡಾ, ಅದು ಅಷ್ಟ ಚಲೋ ಇಲ್ಲ"

"ಇಲ್ಲವಾ ನಮ್ಮ ಸಾಲೀ ಹುಡುಗರೆಲ್ಲಾ ನೋಡಿ ಬಂದಾರ; ಚಲೋ ಅದ ಅಂತ. ಎಲ್ಲಾರೂ ಹಾಡು ಅಂತಾರ, ಕುಣೀತಾರ. ಶಮ್ಮಿಕಪೂರ ಭಾಳ ಛಂದ ಮಾಡ್ಯಾನಂತವಾ. ಇವತ್ತು, ನಾಳೆ ಸಾಲಿ ಸೂಟಿ. ನಾಳೆ ಹೋಗೂಣೇನವಾ" ರವಿ ಮತ್ತೆ ಅಂಗಲಾಚಿದ.

"ಬ್ಯಾಡಾ ರವಿ, ನಾನು ಅದರ ವಿಮರ್ಶಾ ಓದೇನಿ ಪೇಪರಿನ್ಯಾಗ. ಕಥಿಯೊಳಗೂ ಅಂಥಾ ಸ್ವಾರಸ್ಯ ಇಲ್ಲ ಏನೂ ಇಲ್ಲ. ನಿಮ್ಮ ತಂದಿಯವರಿಗೂ ಇಂಥಾ ಪಿಕ್ಚರ್ ಸೇರೂದಿಲ್ಲ. ನೀ ಸುಮ್ಮನ ಹಿಂಗ ಹಗಲೆಲ್ಲಾ ಕೇಳಬ್ಯಾಡಾ."

"ನಮ್ಮ ಕ್ಲಾಸಿನ ಚಂದ್ರು ಮತ್ತೆ ನಾಳೆ ಹೋಗ್ತಾನಂತ. ಅವನ ಜೋಡಿ ನಾನೂ ಹೋಗಲೇನವಾ. ನೀವು ಬ್ಯಾಡಾದರ ಬಿಡ್ರಿ" ರವಿ ಮೂರನೆಯ ಸಲ ಪ್ರಯತ್ನ ಮಾಡಿ ನೋಡಿದ. ಆದರೆ ತಾಯಿ ತನ್ನ ನಿರ್ಧಾರದಿಂದ ಅಲುಗಾಡಲಿಲ್ಲ. ಸ್ವಲ್ಪ ಬೇಸರದ ಧ್ವನಿಯಲ್ಲಿ "ಇಂಥಾ ಪಿಕ್ಚರ ನಿಮ್ಮಂಥಾ ಸಣ್ಣ ಹುಡುಗರು ನೋಡಬಾರದು ರವೀ. ಅದರಿಂದ ನಿಮಗೇನೂ ಬುದ್ಧಿ ಬರೂದಿಲ್ಲ. ದೊಡ್ಡವರು ಹೇಳಿದ್ದು ಕೇಳಬೇಕು, ನೀನು ಜಾಣ, ಎದ್ದು ನಿನ್ನ ಪುಸ್ತಕ ತೊಗೋ. ಹೋಮ್ ವರ್ಕ್ ಇದ್ರ ಮಾಡು; ಆಗಲೇ ಎಂಟು ಹೊಡೀಲಿಕ್ಕೆ ಬಂತು. ನನ್ನ ಕೆಲಸ ಭಾಳ ಅದಾವ ಇನ್ನೂ" ಎನ್ನುತ್ತ ತಾಯಿ ಅದೇ ಎದ್ದು ಬಂದ ಕಲ್ಯಾಣಿಯ ಮುಖ ತೊಳೆಯಲು ಬಚ್ಚಲಿಗೆ ಹೋದಳು.

ಸಣ್ಣ ಮುಖ ಮಾಡಿಕೊಂಡ ರವಿ ಹೊರಗಿನ ಕೋಣೆಗೆ ನಡೆದ. ಅವನಿಗೆ ಮತ್ತೆ ಸೋಲಾಗಿತ್ತು. ಎರಡು ದಿನಗಳಿಂದ ತಾಯಿಯ ಒಪ್ಪಿಗೆ ಪಡೆಯಲು ಹಾತೊರೆಯುತ್ತಿದ್ದ. ಎಷ್ಟು ಅಂಗಲಾಚಿದರೂ, ಕೇಳಿದರೂ ತಾಯಿ ತನ್ನ ಉಪದೇಶ ಬಿಟ್ಟಿರಲಿಲ್ಲ.

"ನಮ್ಮಂಥಾ ಹುಡುಗರು ಸಿನೆಮಾ ನೋಡಬಾರದು ಅಂತಾಳ ಅವ್ವ. ಆದರ ನಮ್ಮ ಸಾಲೀ ಹುಡುಗರೆಲ್ಲಾ ನೋಡಿ ಬಂದಾರ. ನಾನೂ ನೋಡಿದರ ಏನಾಗ್ತದ ? ಆ ರಾಜೇಂದ್ರನಾಥ ಭಾಳ ನಗಿಸ್ಯಾನಂತ. ನಮ್ಮ ಕ್ಲಾಸಿನ ಪಾಟೀಲ ಅಂತೂ ದಿನಾs ಫಾರ್ಸ್ ಮಾಡತಾನ. ಅದನ್ನೆಲ್ಲಾ ನೋಡಿ ನನಗ ಎಷ್ಟ ಆಸೇ ಆಗಿತ್ತು. ನೋಡೇ ತೀರಬೇಕು ಅಂತ. ಅವ್ವ ಎಲ್ಲಾ ಕೆಡಿಸಿಬಿಟ್ಲು...

ಕೈಯಲ್ಲಿಯ ಪುಸ್ತಕ ಕೈಯಲ್ಲಿಯೇ ಇತ್ತು. ಒಂದು ಪುಟವನ್ನೂ ತಿರುವಿರಲಿಲ್ಲ. ರವಿಯ ಮನಸ್ಸು ಎಲ್ಲೆಲ್ಲಿಯೊ ತಿರುಗುತ್ತಿತ್ತು. ಗೆಳೆಯರೊಡನೆ ತಾನೂ ಹೋಗಿ, ಥೇಟರಿನಲ್ಲಿ ಕುಳಿತು, ಸಿನೇಮಾ ನೋಡಿ, ಕುಣಿದು ಕುಪ್ಪಳಿಸಿ ನಕ್ಕ ಮನಸಿನ ಲೋಕದಲ್ಲಿ. ಇನ್ನು ತಾನು ಸಿನೇಮಾಕ್ಕೆ ಹೋಗದೇ ಇದ್ದುದನ್ನು ಕೇಳಿ ಎಲ್ಲರೂ ಗೇಲಿ ಮಾಡುತ್ತಾರೆ. ಎಂಥಾ ಜುಗ್ಗನೋ ನೀನು ಎಂದು. ಕಡೇ ಮನಿಯ ಅಶೋಕ ಒಂದೂ ಸಿನಿಮಾ ಬಿಡುವುದಿಲ್ಲ. ಅವನು ಶ್ರೀಮಂತರ

ಮಗ, ಅಪ್ಪ, ಅವ್ವ ಅಬ್ಬರೂ ಅವನಿಗೆ ಪಾಕೆಟ್ ಮನಿ ಕೊಡ್ತಾರ. ಎಲ್ಲಾ ಚೈನೀನೂ ಮಾಡ್ತಾನ. ಆದರ ನಾನು ತಿಂಗಳಿಗೆ ಒಂದೇ ಸಿನಿಮಾ ನೋಡಬೇಕಂತ ಅವ್ವನ ಅಪ್ಪಣೆ. ಅದನ್ನs ಈಗ ನೋಡ್ತೀನಿ ಅಂದರ ಅದಕ್ಕೂ ಬೇಡ ಅಂತಾಳ. ಇನ್ನೇನು ಮಾಡಬೇಕೋ ತಿಳೀವೊಲ್ಲದು ನನಗಂತೂ.

ಎಲ್ಲೆಲ್ಲಿಯೋ ಹರಿಯುತ್ತಿದ್ದ ಮನಸ್ಸನ್ನು ಪುಸ್ತಕದಲ್ಲಿ ಕಟ್ಟಿಹಾಕಲು ಸಾಧ್ಯವಾಗದೇ ರವಿ ಸಿಟ್ಟಿನಿಂದ ಪುಸ್ತಕವನ್ನೇ ಟೇಬಲ್ಲಿಗೆ ಎಸೆದು, ಕಣ್ಣು ಮುಚ್ಚಿ ಎರಡೂ ಕೈಗಳಲ್ಲಿ ತಲೆ ಹಿಡಿದುಕೊಂಡು ಕುಳಿತ.

"ಬಾಯೀ, ಹಾಲು" ಹೊರಗೆ ಹಾಲಿನವಳ ಧ್ವನಿ.

"ಅವ್ವಾ ಹಾಲಿನ ಭಾಂಡೀ ತಾ" ಎನ್ನುತ್ತ ಒಳಗೆ ಹೋದ ರವಿ ಭಾಂಡಿ ತಂದು ಹಾಲು ಹಾಕಿಸಿಕೊಂಡು ಒಳಗೆ ಒಯ್ದು, "ಅವ್ವಾ, ಹಾಲಿನವಳಿಗೆ ರೊಕ್ಕ ಕೊಡಬೇಕಂತ" ಎಂದ.

"ಹೂs ಕೊಡ್ತೀನಿ. ನೀನು ಸ್ನಾನ ಮಾಡು ಮಾಡು ನಡೀ."

ಮಡಿ ಅರಿವೆ ಒಯ್ಯಲು ರೂಮಿಗೆ ಬಂದ ರವಿ ಬಾಯಿ ತೆರೆದು ಒಂದು ನಿಮಿಷ ಹಾಗೆಯೇ ನಿಂತ. ಹಾಲಿನವಳಿಗೆ ರೊಕ್ಕ ಕೊಡಲು ಹೋದ ಅವ್ವ ಕಪಾಟಿನ ಬಾಗಿಲು ಹಾಗೆಯೇ ತೆಗೆದಿದ್ದಳು. ಯಾವದೋ ಅವ್ಯಕ್ತ ಶಕ್ತಿಯಿಂದ ತಳ್ಳಲ್ಪಟ್ಟವನಂತೆ ರವಿ ಅಲ್ಲಿಟ್ಟ ಲಕೋಟೆಯೊಳಗಿನಿಂದ ಸರಕ್ಕನೆ ಐದರ ನೋಟೊಂದನ್ನು ಎಳೆದು ತನ್ನ ಜೇಬಿನಲ್ಲಿ ಇಟ್ಟುಕೊಂಡ. ಪಗಾರವಾಗಿ ಇನ್ನೂ ನಾಲ್ಕು ದಿನ ಕೂಡ ಆಗಿಲ್ಲ. ನೋಟಿನ ಸಂಖ್ಯೆ ಬಹಳವಿದೆ. ಇದರಲ್ಲಿ ಒಂದು ಹೋದರೆ ತಾನೇ ಅವ್ವನಿಗೆ ಹೇಗೆ ಗೊತ್ತಾಗುತ್ತದೆ. ಒಂದು ವೇಳೆ ಅವಳಿಗೆ ಗೊತ್ತಾದರೂ ನಾನೇ ತೆಗೆದದ್ದೂ ತಿಳಿಯುವುದಿಲ್ಲ. ನಾಳೆ ಮಧ್ಯಾಹ್ನ ಇಂಗ್ಲೀಷ್ ಸ್ಪೆಶಲ್ ಕ್ಲಾಸ್ ಅದೆ ಅಂತ ಹೇಳಿ ಚಂದ್ರೂನ ಕೂಡ ಸಿನಿಮಾಕ್ಕೆ ಹೋಗಿ ಬಂದಬಿಡಬೇಕು.... ಯೋಚಿಸುತ್ತಿದ್ದ ರವಿ ಅವರಸದಿಂದ ಎದುರಿಗೆ ಬಂದ ತಂದೆಗೆ ಹಾಯುತ್ತ ತನ್ನ ಕೋಣೆಗೆ ಹೋಗಿ ನೋಟನ್ನು ಮೊದಲು ಕನ್ನ ಕಂಪಾಸಿನಲ್ಲಿ ಬಚ್ಚಿಟ್ಟು ಬಂದ.

***

ಅಂದು ಮಧ್ಯಾಹ್ನ ಆಫೀಸಿಗೆ ರಜೆ. ತಂದೆ ಆರಾಮವಾಗಿ ಪೇಪರು ಓದುತ್ತ ಕುಳಿತಾಗ ತಾಯಿ ಗಾಬರಿಯಿಂದ ಬಂದಳು. "ನೀವು ರೊಕ್ಕದ ಪಾಕೀಟ ಹಿಡಿದಿದ್ದಿರೇನು ?"

"ಇಲ್ಲಾ ನಿನ್ನ ಕೈಗೆ ಪಗಾರ ಕೊಟ್ಟ ಮ್ಯಾಲ ನಾ ಯಾತಕ್ಕೂ ತೊಗೊಂಡಿಲ್ಲಾ. ಯಾಕ?"

"ನಾನು ಪೇಪರಿನವಗ, ಕಿರಾಣಿ ಅಂಗಡಿಯವಗ ನಿನ್ನೆ ಕೊಟ್ಟೆ. ಇವತ್ತು ಹಾಲಿನವಗ ಕೊಟ್ಟೆ. ಲೆಕ್ಕಾ ಮಾಡಿ ನೋಡಿದರ ಐದು ರೂಪಾಯಿ ಕಡಿಮಿ ಬೀಳತಾವ."

"ಎಲ್ಲರೆ ಇಟ್ಟಿದ್ದೀ ನೋಡು. ನೀನು ಕೆಲಸದ ಗಡಿಬಿಡಿಯೊಳಗ ಮರತಿರಬೇಕು."

"ಇಲ್ರೀ, ಎಲ್ಲಾ ನೆನಪು ಮಾಡಿಕೊಂಡೆ. ಹಾಲಿನವಗ ಕೊಡೂ ಮುಂದs ನಾನು ಕಪಾಟ ತೆಗೆದದ್ದು. ಕೆಲಸದವಳಂತೂ ಅದಕ್ಕೂ ಮೊದಲs ಬಂದ ಹೋಗಿದ್ದು. ಆಕೀ ಹ್ಯಾಂಗ ತೊಗೋತಾಳ."

"ರವೀನ್ನ ಕೇಳಿದಿಯೇನು? ನೋಡ್ಯಾನೇನಂತ. ರವೀ ಏ ರವೀ" ತಂದೆಯ ಕರೆಗೆ ಓಗೊಡಲು ರವಿ ಅಲ್ಲಿರಲಿಲ್ಲ. ತಂದೆ-ತಾಯಿಯರ ಮಾತುಗಳ ಸುಳಿವು ತಿಳಿದೇ ಅವನು ಅಲ್ಲಿಂದ ಜಾರಿಕೊಂಡಿದ್ದ.

***

ಕಂಪಾಸಿನ ಮುಚ್ಚಳವನ್ನು ಹಗುರಾಗಿ ತೆಗೆದ ರವಿ. ಅಲ್ಲಿ ಇಣುಕುತ್ತಿತ್ತು ಹಸಿರು ನೋಟು. ಮತ್ತೆ ಸಾವಧಾನವಾಗಿ ಬಾಯಿ ಮುಚ್ಚಿ ಚೀಲದಲ್ಲಿಟ್ಟು ಹಾಯಾಗಿ ಉಸಿರು ಬಿಟ್ಟ ಎದೆಯನ್ನು ಗಟ್ಟಿಯಾಗಿ ಹಿಡಿದುಕೊಂಡ. ಡಬ್ ಡಬ್ ಎನ್ನುತ್ತಿತ್ತು. ಕಾಲು ಇನ್ನೂ ಥರ ಥರ ನಡುಗುತ್ತಿದ್ದವು. ಆದರೂ ಅವನು ತನ್ನ ನಾಟಕದಲ್ಲಿ ಯಶಸ್ವಿಯಾಗಿದ್ದ. "ಕಪಾಟಿನೊಳಗಿನ ಐದರ ನೋಟು ನೀನು ನೋಡಿದ್ದೀಯಾ?" ಎಂದು ಅವ್ವ ಕೇಳಿದ್ದಕ್ಕೆ "ಇಲ್ಲವಾ, ನಾನು ನೋಡಿಲ್ಲ" ಎಂದಿದ್ದ ಮುಖ ಮೇಲೆತ್ತದೆ. ಭಯದಿಂದ ಮುಖ ಒಂದು ತರಹ ಆಗಿತ್ತು. ಪುಣ್ಯಕ್ಕೆ ಒಲೆಯ ಮೇಲೆ ಏನನ್ನೋ ತಿರುವುತ್ತಿದ್ದ ತಾಯಿ ಹೊರಳಿ ಅವನ ಮುಖ ನೋಡಿರಲಿಲ್ಲ. "ನೀನು ತೊಗೊಂಡಿದ್ದರ ಕೊಟ್ಟು ಬಿಡು. ಖರೇ ಹೇಳಬೇಕು. ಸುಳ್ಳು ಹೇಳಬಾರದು. ನಿನಗೆ ನೆಟ್ಟಗಾಗೂದಿಲ್ಲ" ತಾಯಿಯ ಧ್ವನಿ ಕಂಪಿಸಿತ್ತು. "ಇಲ್ಲವಾ, ನಾನು ಸುಳ್ಳು ಹೇಳತೀನೇನು? ನಾನು ತೊಗೊಂಡಿಲ್ಲ." ಅವಳಿಗಿಂತ ಇವನ ಧ್ವನಿಯಲ್ಲಿ ಹೆಚ್ಚು ಕಂಪನವಿತ್ತು. ಅಂಜುತ್ತ ಹೇಳಿದವನೇ ಹೊರಗಿನ ಕೋಣೆಗೆ ಓಡಿ ಬಂದಿದ್ದ.

ಮಧ್ಯಾಹ್ನ ಚಹ ಕೊಟ್ಟ ತಾಯಿಯ ಮುಖವನ್ನು ರವಿ ಅಂಜುತ್ತ ಅಂಜುತ್ತ ನೋಡಿದ. ತಾಯಿಯ ಮುಖ ಗಂಭೀರವಾಗಿತ್ತು. ಕಣ್ಣು ಕೆಂಪಗಾಗಿದ್ದವು. ದಿನದಂತೆ ಅವಳು ಹೆಚ್ಚು ಮಾತಾಡಲೇ ಇಲ್ಲ. ಅವಳ ಮನಸ್ಸು ಅಲ್ಲಿರಲಿಲ್ಲ. ಸುಮ್ಮನೆ ಯಾಂತ್ರಿಕವಾಗಿ ಕೆಲಸ ಮಾಡುತ್ತಿದ್ದಳು. ಆಗಾಗ ನಿಟ್ಟುಸಿರು ಬಿಡುತ್ತಿದ್ದಳು. ತಾಯಿಯ ಅವಸ್ಥೆ ನೋಡಿ ರವಿಯ ಮನಸ್ಸಿಗೆ ಕಳವಳವಾಯಿತು. ಇದಕ್ಕೆಲ್ಲಾ ತಾನೇ ಕಾರಣ ಅಲ್ಲವೇ. ತಾನು ಬಯಸಿದ್ದೊಂದು, ಇದು ಆದದ್ದೊಂದು, ಅಷ್ಟೊಂದು ನೋಟುಗಳಲ್ಲಿ ಒಂದು ಕಣ್ಮರೆಯಾದರೆ ತಾಯಿ ಇಷ್ಟೊಂದು ಕೊರಗುವಳೆಂದು ರವಿಗೆ ಅನಿಸಿರಲಿಲ್ಲ. ರವಿಗೆ ಚಡಪಡಿಕೆಯಾಯಿತು. ಉಸಿರು ಕಟ್ಟಿದಂತಾಯಿತು. ಇನ್ನು ಹೆಚ್ಚು ಹೊತ್ತು ಅಲ್ಲಿದ್ದರೆ ತಾನೇನು ಮಾಡುವನೋ ಅವನಿಗೇ ತಿಳಿಯದಾಯಿತು. ಸಾಧ್ಯವಾದಷ್ಟು ಬೇಗ ಅಲ್ಲಿಂದ ಹೊರಬೀಳಬೇಕೆನ್ನಿಸಿತು. "ಅವ್ವಾ ನಾನು ಆಡಲಿಕ್ಕೆ ಹೋಗಿ ಬರ್ತೀನಿ" ಎಂದ. ತಾಯಿ ಯಾಂತ್ರಿಕವಾಗಿ ಹೂಂ ಎಂದಳು ಎಂದಿನಂತೆ. ಬೇಗ ಬಾ ಕತ್ತಲಾಗುವವರೆಗೆ ಹೋಗಬೇಡ ಎಂದೂ ಹೇಳಲಿಲ್ಲ. ರವಿ ಖಿನ್ನ ಮನಸ್ಕನಾಗಿ ಹೊರಗೆ ಆಡಲು ಹೋದ.

***

ಸೊಳ್ಳೆಯ ಕಡಿತದಿಂದ ರವಿಗೆ ಎಚ್ಚರವಾಯಿತು. ಬಹಳ ನೀರಡಿಕೆಯಾಗಿತ್ತು. ಕತ್ತಲಲ್ಲಿ ಎದ್ದು ನೀರು ಕುಡಿಯಲು ರವಿಗೆ ಭಯ. ತಾಯಿಯನ್ನು ಕೇಳಿದ್ದರೆ ಸಿಗುತ್ತಿತ್ತು. ಆದರೆ ಅವಳನ್ನು ಎಬ್ಬಿಸಲು ಧೈರ್ಯಬರಲಿಲ್ಲ ಆಗ ಅವನಿಗೆ. ಸುಮ್ಮನೆ ಮಲಗಿಕೊಂಡ. ನಿದ್ರೆ ಬರಲಿಲ್ಲ. ತಾನು ಎಂದೂ ಮಾಡದ ಕಳವು ಅವನ ಮನಶ್ಶಾಂತಿಯನ್ನೇ ಕದ್ದಿತ್ತು. ನಾಳೆ ಆ ನೋಟನ್ನು ತಾನು ಹೇಗೆ ಖರ್ಚು ಮಾಡಬೇಕು ಎನ್ನುವ ವಿಚಾರ ಮಾಡಬಯಸಿದ. ಆದರೆ ಆ ದಿಕ್ಕಿನಲ್ಲಿ ಅವನ ಮನಸ್ಸು ಓಡಲೇ ಇಲ್ಲ.

ತಾಯಿ ಹೊರಳಿ ನಿಟ್ಟುಸಿರು ಬಿಟ್ಟ ಸಪ್ಪಳ ಕೇಳಿಸಿತು ಅವನಿಗೆ. ಹಾಗಾದರೆ ಅವ್ವನಿಗೆ ನಿದ್ರೆಯೇ ಬಂದಿಲ್ಲ ಎಂದುಕೊಂಡ ರವಿ.

"ಇನ್ನೂ ನಿದ್ದೀ ಮಾಡಿಲ್ಲೇನು?"

"ಇಲ್ರೀ, ನಿದ್ದೀ ಬರವೊಲ್ಲದು, ಏನೋ ಅಸಮಾಧಾನ"

"ಬಿಡು ಯಾಕ ಅಷ್ಟು ಚಿಂತೀ ಮಾಡತೀ. ರೂಪಾಯಿ ಸಲುವಾಗಿ? ಹೋದರ ಹೋಗಲಿ. ನೋಡಲಾರದ ನೀನs ನೋಟು ಒಂದಕ್ಕೊಂದು ಹತ್ತಿದ್ದು ಕೊಟ್ಟಿರಬೇಕು ಹಾಲಿನವಗ."

"ನನಗೆ ಖಾತ್ರಿ ಗೊತ್ತದ. ನಾನು ಉಗುಳು ಹಚ್ಚಿ ಸರಿಸಿ ಒಂದೊಂದೇ ನೋಟು ಎಣಿಸಿ ೩೫ ರೂ. ಕೊಟ್ಟೀನಿ. ಐದರ ನೋಟು ಎಲ್ಲಿ ಹೋತು. ಅದೇ ಕಾಳಜಿ ಆಗೇದ ನನಗ. ಮುಂಜಾನಿಯಿಂದ ಊಟ ಸವಿ

ಹತ್ತವೊಲ್ಲದು. ನಿದ್ದೀನೂ ಬರವೊಲ್ಲದು. ನಾವು ಯಾರಿಗರೇ ಕೈಯೆತ್ತಿ ಕೊಟ್ಟರ ಅದೊಂದು ಮಾತು ಬೇರೆ. ಆದರ ಕಳದರ ಅದು ನಂದ ಅಲಕ್ಷ್ಯತನಾ ಅಲ್ಲ ?"

"ಅದಕ್ಕೇನು ಮಾಡೂದದ. ಎಂಥಾವರಿಂದಲೂ ಒಮ್ಮೊಮ್ಮೆ ತಪ್ಪು ಆಗೇ ಆಗತಾವ. ಹಾಂಗಂದು ಸುಮ್ಮನಿರೂದು. ರವೀನ ಕೇಳೀದಿ ಏನು ?"

"ಕೇಳಿದೆ. ನಾ ತೊಗೊಂಡಿಲ್ಲ ಅಂತಾನ. ಸಣ್ಣವ ಇದ್ದಾಗಿನಿಂದ ನಾನು ಅವಗ ಇಷ್ಟ ಬುದ್ಧೀ ಕಲಿಸೀನಿ. ಅವ ಜಾಣ ಅದಾನ. ಅಂವಾ ನೋಟು ತೊಗೊಂಡಿರಲಿಕ್ಕೆ ಸಾಧ್ಯಾನ ಇಲ್ಲ. ಆದರೆ ಎಲ್ಲಿ ಹೋತು ಅಂತ ಕಾಳಜಿ ನನಗ ಈ ದಿನದಾಗ ಐದು ರೂಪಾಯಿ ಅಂದರ ಕಡಿಮೆ ಏನ ಅಲ್ಲ."

ತಾಯಿಯ ಧ್ವನಿ ರವಿಗೆ ಸ್ಪಷ್ಟವಾಗಿ ಕೇಳಿಸಿತು. ಅವಳ ಮಾತು ಕೇಳಿ ಅವನ ಗಂಟಲು ಮತ್ತಷ್ಟು ಒಣಗಿತು. ಹೊಟ್ಟೆಯಲ್ಲಿ ಸಂಕಟವಾಯಿತು. ಉಸಿರಾಟ ಕಷ್ಟವಾಯಿತು. ಮೂಟೆಯಂತೆ ಬಿಗಿಯಾಗಿ ಕಟ್ಟಿ ಯಾರೋ ತನ್ನನ್ನು ಆಳವಾದ ಬಾವಿಗೆ ತಳ್ಳಿದಂತಾಯಿತು. ಆ ಪ್ರಪಾತದಿಂದ ಎದ್ದು ಬರಬೇಕೆಂದು ಬಹಳ ಒದ್ದಾಡಿದ. ತನ್ನ ಸರ್ವಶಕ್ತಿಯನ್ನು ಉಪಯೋಗಿಸಿ ಆ ಬಲವಾದ ಕಟ್ಟುಗಳನ್ನು ಬಿಚ್ಚಿಕೊಂಡು ಅಲ್ಲಿಂದ ಮೇಲೆದ್ದು ಬಂದ. ಈಗ ಹಗುರಾಯಿತು ಮನಸ್ಸು. ಕಾಲುಗಳನ್ನು ನೀಳವಾಗಿ ಚಾಚಿ ಹಾಯಾಗಿ ಉಸಿರಾಡಿದ.

ಮುಂಜಾನೆ ಎಚ್ಚರವಾದಾಗ ಬಿಸಿಲು ಹೊದಿಕೆ ಅವನ ಮೈಮೇಲಿತ್ತು. ಗಡಬಡಿಸಿ ಎದ್ದು ಒಳಗೆ ಹೋದ. ತಾಯಿ ಬಚ್ಚಲು ಮನೆಯಲ್ಲಿ ಪಾತ್ರೆ ತೊಳೆಯುತ್ತಿದ್ದಳು. ಆಶ್ಚರ್ಯವಾಯಿತು ಅವನಿಗೆ. "ಯಾಕವಾ ಈರವ್ವ ಬರೂದಿಲ್ಲೇನು?" ಎಂದ. "ಇಲ್ಲಪಾ, ನಾನು ರೂಪಾಯಿ ಕಳೆದೇನಿ. ಅದಕ್ಕೆ ಈ ತಿಂಗಳು ಕೆಲಸಾ ನಾನs ಮಾಡಿಕೋತೇನಿ ಅಂದೆ." ಅಂಥ ಚಳಿಯಲ್ಲಿಯೂ ರವಿಯ ಹಣೆಯ ಮೇಲೆ ಬೆವರು ಹನಿ ಮೂಡಿದವು. ಅವಳು ಕಲ್ಲಿನಂತೆ ಸುಮ್ಮನೆ ನಿಂತ. ತಾಯಿ ಪಾತ್ರೆಗಳನ್ನೆಲ್ಲ ಅಡುಗೆ ಮನೆಗೆ ಒಯ್ದಳು. ಮುಖ ಮಾರ್ಜನ ತೀರಿಸಿ ತನ್ನ ಕೋಣೆಗೆ ಹೋಗಿ ಬಂದ ರವಿ. ತಾಯಿಯ ಎದುರಿಗೆ ಐದರ ನೋಟು ಹಿಡಿದ. ಅವಳ ಕಣ್ಣುಗಳು ಆಶ್ಚರ್ಯದಿಂದ ಅರಳಿದವು. "ನೀ ಕಳವು ಮಾಡಿದ್ದೀಯಾ? ಯಾಕ? ನಿನಗ ರೂಪಾಯಿ ಯಾತಕ್ಕ ಬೇಕಾಗಿದ್ದವು?" ತಾಯಿ ಸಿಟ್ಟಿನಿಂದ ಕೂಗಿದಳು. ಕೋಪದಿಂದ ಥರಥರ ಕಂಪಿಸುತ್ತಿದ್ದಳು. ರವಿಯ ಕೆನ್ನೆಗೆ ಜೋರಾಗಿ ಏಟು ಬಿತ್ತು. ಕಣ್ಣಲ್ಲಿ ನೀರು ತುಂಬುತ್ತಿದ್ದಾಗ ರವಿ ಧೈರ್ಯವಾಗಿ ಹೇಳಿದ. "ಸಿನಿಮಾಕ್ಕ ಹೋಗೂ ಆಸೆ ಭಾಳ ಇತ್ತವಾ, ನೀನು ಬೇಡ ಅಂದಿ. ಹುಡುಗರೆಲ್ಲಾ ಗೇಲಿ ಮಾಡ್ತಾರಂತ ನೊಡೇಬಿಡೂಬೇಕು ಅನ್ನಿಸ್ತು.. ಕಳವು ಮಾಡ್ದೆ. ಅವ್ವಾ ನಂದು ತಪ್ಪಾತು. ಇನ್ನೊಮ್ಮೆ ಎಂದೂ ಕಳುವು ಮಾಡೂದಿಲ್ಲ. ನನ್ನ ತಪ್ಪಿಗೆ ಶಿಕ್ಷಾ ಕೊಡು ಅವ್ವಾ ಹೊಡೀ ನನ್ನ" ಎನ್ನುತ್ತ ರವಿ ಅವಳೆದುರು ಬಗ್ಗಿ ನಿಂತ. ರವಿಯ ಕೆನ್ನೆಯ ಮೇಲೆ ನೀರು ಹರಿಯುತ್ತಿತ್ತು.

ಮತ್ತೆ ಹೊಡೆಯಲು ಎತ್ತಿದ ತಾಯಿಯ ಕೈ ಕೆಳಗಿಳಿಯಿತು. ಮೃದುವಾಗಿ ರವಿಯ ಕೆನ್ನೆ ನೇವರಿಸಿ ಅವನನ್ನು ಅಪ್ಪಿಕೊಂಡು ಹೇಳಿದಳು:

" ರವಿ, ಸಂಜೀ ಮುಂದ ನಾವು ಸಿನಿಮಾಕ್ಕ ಹೋಗೂಣಂತ."

***

■■

# ಅನ್ನ ದೇವರು ಬಂದ

"ಯವ್ವಾs ಒಂದು ತುತ್ತು ಅನ್ನಾ ಹಾಕ್ರೀ ಹೊಟ್ಟಿ ಹಸದೈತಿ"

ಎರಡು ಅಂತಸ್ತಿನ ದೊಡ್ಡ ಮನೆಯ ಮುಂಬಾಗಿಲಿನ ಹತ್ತಿರ ನಿಂತು ಭಿಕ್ಷುಕರ ಹುಡುಗ ಕೂಗಿದ. ಒಳಮನೆಯಿಂದ ಸವಿ ಭಕ್ಷ್ಯಗಳ ಘಮ ಘಮ ವಾಸನೆ ಹೊರಬಾಗಿಲಿನವರೆಗೆ ಬಂದಿತ್ತು. ಜೊತೆಗೆ ಸಂಡಿಗೆ ಕರಿಯುವ ಕಮರು ವಾಸನೆಯೂ ಹಿಂಬಾಲಿಸಿತ್ತು. ಮನೆಯ ಮುಂದಿನ ರಂಗವಲ್ಲಿ ಬಾಗಿಲಿಗೆ ತಳಿರು-ತೋರಣ. ಅಂದು ದೀಪಾವಳಿ ಅಮಾವಾಸ್ಯೆ ಎನ್ನುವುದನ್ನು ಹುಡುಗನಿಗೆ ನೆನಪು ಮಾಡಿಕೊಟ್ಟವು. ಹೊಟ್ಟೆ ತಾಳ ಹಾಕುತ್ತಿತ್ತು. ಹುಡುಗ ಮತ್ತೊಮ್ಮೆ ರಾಗ ತೆಗೆದ.

"ಯವ್ವಾ ಒಂದು ತುತ್ತು ಅನ್ನಾ ಹಾಕ್ರೀsss ಗಂಗಾಬಾಯಿ, ತುಂಗಾಬಾಯಿ ಶಾಂತಾಬಾಯೀ"

ಒಳಗೆ ದೇವರ ಕೋಣೆಯಿಂದ ಅಯ್ಯನವರ ಗಂಭೀರವಾಣಿ ಕೇಳಿಬಂದಿತು 'ಕರ್ಪೂರಗೌರಂ ಕರುಣಾವತಾರಂ....'

ಎರಡೂ ಕಡೆ ದಾಳಿಯಿಂದಾಗಿ ಕೋಣೆಯಲ್ಲಿ ಓದುತ್ತ ಕುಳಿತಿದ್ದ ಜಯದೇವನ ಓದು ಸಾಗದಂತಾಗಿ ಹೊರಗೆ ಎದ್ದು ಬಂದ. ಬರೀ ಎಲುಬಿನ ಹಂದರಕ್ಕೆ ಕರಿಯ ಚರ್ಮ ತೊಡಿಸಿದಂತಿದ್ದ ಭಿಕ್ಷುಕರ ಹುಡುಗ ಕೈಯಲ್ಲಿಯ ತಟ್ಟೆಯನ್ನು ಮುಂದೆ ಮಾಡಿ ಮತ್ತೆ ಕೂಗಲು ದನಿಯೆತ್ತಿದ. ಜಯದೇವ ಅವನಿಗೆ ಸುಮ್ಮನಿರಲು ಸನ್ನೆ ಮಾಡಿ ತಾನೇ ಕರೆದ 'ಗಿರಿಜಾs, ಈ ಹುಡುಗ್ಗ ಅನ್ನಾ ಹಾಕಿ ಕಳಸು'. ಮರುಕ್ಷಣದಲ್ಲಿಯೇ ಬರಿಗೈಯಲ್ಲಿಯೇ ಹೊರಗೆ ಬಂದ ಗಿರಿಜೆ ಹೇಳಿದಳು: 'ಅಣ್ಣಾs ಇನ್ನೂ ಅಯ್ಯನೋರ ಪೂಜಿ ಆಗಿಲ್ಲಂತ. ದೇವರಿಗೆ, ಅವರಿಗೆ ಎಡಿ ಮಾಡಿಲ್ಲಂತ, ಭಿಕ್ಷುಕನ್ನ ಮುಂದಕ್ಕ ಹೋಗಲಿಕ್ಕೆ ಹೇಳೂ ಅಂದ್ಲು ಅವ್ವ.' ಜಯದೇವ ಮೂಕನಾಗಿ ತನ್ನ ಕೋಣೆ ಸೇರಿದ.

ಪೊಂ ಪೊಂ ಹಾರ್ನ ಬಾರಿಸುತ್ತ ತನ್ನ ಮೇಲೆಯೇ ಜೋರಾಗಿ ಬರುತ್ತಿದ್ದ ಕಾರನ್ನು ನೋಡಿ ಭಿಕ್ಷುಕ ಹೇಳದೆ ಕೇಳದೆ ಅಲ್ಲಿಂದ ಕಾಲು ಕಿತ್ತ. ಕಾರಿನಿಂದ ಇಳಿಯುತ್ತಿದ್ದ ತಂದೆಯನ್ನೂ ಅತಿಥಿಗಳನ್ನೂ ನೋಡಿದ ಗಿರಿಜೆ ಅವ್ವನಿಗೆ ಹೇಳಲು ಒಳಗೆ ಓಡಿದಳು.

ಮಂಡಿ ಶಿವಪ್ಪನವರು ತಮ್ಮ ಜರೀ ರುಮಾಲು ಸರಿ ಮಾಡಿಕೊಂಡು ಪಂಚೆಯ ಚುಂಗನ್ನು ಕೈಯಲ್ಲಿ ಹಿಡಿದು ದೇಶಾವರಿ ನಗೆ ನಗುತ್ತ ಜನಾರ್ದನರಾಯರು, ಸುಮತೀ ಬಾಯಿಯತ್ತ ತಿರುಗಿ 'ಹಂ ಬರ್ರಿ ಬರ್ರಿ ಒಳಗೆ ದಯಮಾಡಿಸ್ರಿ' ಎನ್ನುತ್ತ ಹಾಲಿಗೆ ಕಾಲಿಟ್ಟರು. ಮೈ ತುಂಬ ಒಡವೆ ಇಟ್ಟುಕೊಂಡು ಸಿಲ್ಕು ಸೀರೆಯ ಸೆರಗು ಜಾರದಂತೆ ಬಿಗಿಯಾಗಿ ಸೆರಗು ಹೊದೆದ ಕಲ್ಯಾಣಮ್ಮ ಹಾಲಿಗೆ ಬಂದು ಸುಮತೀಬಾಯಿಯನ್ನು ಒಳಗೆ ಕರೆದೊಯ್ದರು. ಐದು ನಿಮಿಷಗಳಲ್ಲಿಯೇ ಇಬ್ಬರಿಗೂ ಸೊಗಸಾಗಿ ತಿಂಡಿ ತಿನ್ನಿಸಿಯಾಯಿತು. ಎಲೆ ಅಡಿಕೆ ಕೊಡುವಾಗ ಸುಮತೀಬಾಯಿಯವರಿಗೆ ಧರ್ಮಾವರದ ಸಿಲ್ಕ ಸೀರೆಯನ್ನೂ ರಾಯರಿಗೆ ಬೆಳ್ಳಿಯ ಎಲೆ ಅಡಿಕೆ ತಟ್ಟೆಯನ್ನೂ ಉಡುಗೊರೆಯಾಗಿ ಕೊಟ್ಟು ಅತಿಥಿಗಳನ್ನು ಬೀಳ್ಕೊಟ್ಟರು.

ಓದಿನಲ್ಲಿ ಮಗ್ನವಾಗದ ಜಯದೇವನ ಚಿತ್ತ ಈ ಘಟನೆಗಳನ್ನೆಲ್ಲ ಮೆಲುಕು ಹಾಕುತ್ತಿತ್ತು. 'ಜಯಣ್ಣಾs' ಅಜ್ಜಿಯ ಮೃದುಸ್ವರ ಕೇಳಬಂದಿತು. ಅಜ್ಜಿಯೋ ಮಡಿಯಲ್ಲಿ ಅವನ ಕೋಣೆಗೆ ಬಂದಿದ್ದಳು. 'ಜಯಣ್ಣಾss ಹಿಡೀಯಪ್ಪಾ ಪಾದೋದಕ ತಂದೀನಿ.' ಪಾದೋದಕ, ತೀರ್ಥಪ್ರಸಾದ, ನೈವೇದ್ಯದ ಮಾತೆತ್ತಿದರೆ ಸಿಡಿಮಿಡಿಯಾಗುತ್ತಿದ್ದ ಜಯಣ್ಣ ಪ್ರೀತಿಯ ಅಜ್ಜಿಯ ಮನಸ್ಸು ನೋಯಿಸಲಾರದೆ ಸುಮ್ಮನೆ ತೆಗೆದುಕೊಂಡ.

"ಅಜ್ಜೀSS" ಅವನ ದನಿ ಶಾಂತವಾಗಿರಲಿಲ್ಲ.

"ಯಾಕಪ್ಪಾS ಜಯಣ್ಣಾS" ಅಜ್ಜಿಯ ಕೋಮಲ ಕೈ ಅವನ ಬೆನ್ನ ಮೇಲಾಡಿತು. 'ದೇವರಿಗೆ ನೈವೇದ್ಯ ಹಿಡೀಲಾರದ ಏನೂ ತಿನ್ನಬಾರದು ಮಂದೀಗೆ ಕೊಡಬಾರದು. 'ಅಲ್ಲಿS' ನಡೆದ ಘಟನೆಯನ್ನು ಕುರಿತು ಅವನ ಮನಸ್ಸು ಇನ್ನೂ ಯೋಚಿಸುತ್ತಿತ್ತು. ಭಿಕ್ಷುಕನಿಗೆ ತನ್ನ ಮನೆಯಲ್ಲಿ ಒಂದು ಹಿಡಿ ಅನ್ನ ಸಿಗಲಿಲ್ಲ; ಆದರೆ ಫುಡ್ ಇನ್‌ಸ್ಪೆಕ್ಟರರಿಗೆ ಔತಣವಾಯಿತು. ಅವನ ಮನ ತೀರ ನೊಂದಿತ್ತು. ಆದರೆ ಅದರ ಸುಳಿವು ಅಜ್ಜಿಗೆ ಸಿಗಲಿಲ್ಲ.

"ಹೌದಪ್ಪಾ, ಇಂದ ಹಬ್ಬದ ಅಡಿಗಿ. ದೇವರಿಗೆ ಅಯ್ನೋರಿಗೆ ಮೀಸಲು ಇರಬೇಕು. ಎಂದಿನಿಂದೂ ನಾ ಇಷ್ಟು ನಡಿಸಿಕೊಂಡು ಬಂದೇನಿ. ನನ್ನ ಕಷ್ಟ ಕಾಲದಾಗೂ ಬಿಡಲಿಲ್ಲ. ಮೊದಲಂತೂ ದೊಡ್ಡ ವತನದಾರರು ನಿಮ್ಮ ಅಜ್ಜ. ಕಾಳಿನ ಹಗೇ ಯಾವಾಗಲೂ ತುಂಬಿರ್‍ತಿತ್ತು. ಮನ್ಯಾಗ ದನಾ-ಕರಾ ಎಲ್ಲಾ ಸಂಪಾಗಿತ್ತು. ಆಗಂತೂ ಹುಣ್ಣಿವೀಗೆ ಅಮಾಸೀಗೆ ಹನ್ನೊಂದು ಮಂದಿ ಅಯ್ನೋರ್‍ನ ಕರೀತಿದ್ರು. ನಿಮ್ಮ ಮುತ್ತಜ್ಜ ಅಂದರ ನನ್ನ ಮಾವಾ ಭಾಳ ದೊಡ್ಡ ಮನಸೇರು.ಬಡವರು ಬಗ್ಗರು ಅಂದರ ಭಾಳದಯಾ ಅಂತಃಕರಣಾ...."

ಅಜ್ಜಿಯ ಬಾಯಿಂದ ಅವರ ಮನೆತನದ ವರ್ಣನೆಯನ್ನು ಜಯಣ್ಣ ಎಷ್ಟೋ ಸಲ ಕೇಳಿಯಾಗಿತ್ತು. ಬರಗಾಲದಲ್ಲಿ ತನ್ನ ಮುತ್ತಜ್ಜ ಹಗೆ ತೆಗೆಸಿ ಊರ ಜನರಿಗೆ ಕಾಳು ಹಂಚಿದ್ದು, ತನ್ನ ಅಜ್ಜ ಇಂಗ್ಲೀಷರ ವಿರುದ್ಧ ಚಳುವಳಿ ಹೂಡಿ ಜೇಲಿಗೆ ಹೋದದ್ದು- ಸರಕಾರ ತಮ್ಮ ಜಮೀನು ವಶ ಮಾಡಿಕೊಂಡಾಗ ಅಜ್ಜಿ ಕಷ್ಟಪಟ್ಟು, ದುಡಿದು ತನ್ನ ಅಪ್ಪನ್ನ ಜೋಪಾನ ಮಾಡಿದ್ದು-ಎಲ್ಲವನ್ನೂ ಅಜ್ಜಿಯಿಂದ ಎಷ್ಟೋ ಸಲ ಕೇಳಿ ಹಿಗ್ಗಿದ್ದಾನೆ, ದುಃಖಪಟ್ಟಿದ್ದಾನೆ, ಕೋಪಗೊಂಡಿದ್ದಾನೆ. ಅವರ ರಕ್ತ ತನ್ನಲ್ಲಿ ಹರಿಯುತ್ತಿದೆ ಎಂದು ಹೆಮ್ಮೆ ಪಟ್ಟಿದ್ದಾನೆ. ಆದರೆ-? ಆದರೆ ತನ್ನ ತಂದೆ ಏಕೆ ಇವರ ಹಾಗೆ ಇಲ್ಲ? ಅವನ ಸ್ವಭಾವ ಬೇರೆಯೇ ಆಗಿದೆಯಲ್ಲ ಯಾಕೆ? ಎನ್ನುವ ಪ್ರಶ್ನೆ ಅವನನ್ನು ಎದುರಿಸುತ್ತಿದೆ. ದಿನದಿಂದ ದಿನಕ್ಕೆ ಭೂತಾಕಾರವಾಗಿ ಬೆಳೆದು ಅವನ ತಲೆಯನ್ನು ತುಂಬಿ ಕುಳಿತು ಬೇರೆ ಯೋಚನೆಗಳಿಗೆ ಆಸ್ಪದವಿಲ್ಲದಂತೆ ಮಾಡುತ್ತಿದೆ. ಏನು ಓದಿದರೂ ತಲೆಗೆ ಹತ್ತದಂತಾಗಿದೆ. ಹೀಗಾಗಿ ಅವನಲ್ಲಿ ಅತೃಪ್ತಿ, ಅಸಂತೋಷ ಹೊಗೆಯಾಡುತ್ತಿದೆ. ಅದು ಹೊರಗೆ ಬರಲು ದಾರಿ ಮಾಡಬೇಕು ತಾನು ಇಂದೇ ಈ ಹೊತ್ತೇ ಎಂದು ಯೋಚಿಸುತ್ತಿದ್ದಾನೆ.

ಅಜ್ಜಿಯ ಹತ್ತಿರ ಹೇಳಿಬಿಡಬೇಕು. ತನ್ನ ಮನಸ್ಸಿನ ಮಾತುಗಳನ್ನೆಲ್ಲ. ಅವಳು ತನ್ನ ಪ್ರೀತಿ ಅಭಿಮಾನಗಳ ಜೀವನ ಮೂರ್ತಿ. ಅಜ್ಜಿಯ ಮಾವ ಅಂದರೆ ತನ್ನ ಮುತ್ತಜ್ಜ ತೀರಿಕೊಂಡು ತನ್ನ ಅಜ್ಜ ಚಳುವಳಿ ಮಾಡಿ ಜೇಲಿಗೆ ಹೋದಾಗ ಇದ್ದ ಹೊಲಗಳನ್ನೂ ಕಳೆದುಕೊಂಡು ನಿರ್ಗತಿಕಳಾದಳು ಅಜ್ಜಿ. ತನ್ನ ತಂದೆ ಇನ್ನೂ ಚಿಕ್ಕ ಮಗು ಆಗ. ಅಜ್ಜಿಯ ತವರುಮನೆಯವರು ಮದುವೆಯಲ್ಲಿ ಅವಳಿಗೆ ಕೊಟ್ಟ ಸೇರಿನ ಸರಿಗೆಯನ್ನು ಮಾರಿ ಒಂದು ತುಂಡು ಹೊಲ ಕೊಂಡು, ಅದರಲ್ಲಿ ದುಡಿದು ಮೈ ಸವೆಸಿ ಇದ್ದೊಬ್ಬ ಮಗನನ್ನು ಬೆಳೆಸಿದಳು. ಇಷ್ಟು ಕಷ್ಟಪಟ್ಟು ಬೆಳೆಸಿದ ಮಗ ಇಂಥವನಾಗಬೇಕೆ? ಅಜ್ಜಿಗೆ ಏನು ಗೊತ್ತು ಪಾಪ ! ಈ ಮನೆಯ ನಾಲ್ಕು ಗೋಡೆಗಳ ನಡುವಿನ ಸುಖವನ್ನಷ್ಟೇ ಕಂಡುಂಡವಳು ಅವಳು. ಮಗ ದುಡಿದು ಸಂಪಾದಿಸಿ ಮತ್ತೆ ಮನೆ ಮುಂದೆ ತಂದಿದ್ದಾನೆ. ಸ್ವಾತಂತ್ರ್ಯ ಸಿಕ್ಕಮೇಲೆ ಹೋದ ಹೊಲಗಳೂ ತಿರುಗಿ ಬಂದಿವೆ. ತನ್ನ ತವರುಮನೆಯ ಸರಿಗೆ ಮತ್ತೆ ತನಗೆ ಸಿಕ್ಕಿದೆ, ಎನ್ನುವದೂ ಅವಳಿಗೆ ಒಂದು ಸಮಾಧಾನ. ಆದರೆ ಒಂದು ವಿಷಯವಂತೂ ಯಾರಿಗೂ ಗೊತ್ತಿಲ್ಲ. ಅದು ಅಜ್ಜಿಗಂತೂ ಗೊತ್ತಿರಲು ಸಾಧ್ಯವೇ ಇಲ್ಲ. ಹೊರಗೆ ಜನರು 'ಅನ್ನ' 'ಅನ್ನ' ಪೇಟೆಯಲ್ಲಿ ಅಕ್ಕಿ ಇಲ್ಲ ಎಂದು ಗೋಳಾಡುತ್ತಿರುವಾಗ ಅಪ್ಪ ತನ್ನ ವಖಾರದಲ್ಲಿ ೧೨೦ ಚೀಲ ಭತ್ತ ಮುಚ್ಚಿ ಇಟ್ಟಿದ್ದಾನೆ. ಅದನ್ನು ಗುಟ್ಟಾಗಿ ಇಡಲಿಕ್ಕೇ ಇಂದು ಜನಾರ್ದನರಾಯರಿಗೆ, ಅವರ ಹೆಂಡತಿಗೆ ಔತಣ ಹಾಕಿ ಉಡುಗೊರೆ ಕೊಟ್ಟಿದ್ದು, ಇದರ ವಿವರ ಅಜ್ಜಿಗೆ ತಿಳಿದಿರಲಾರದು. ತಿಳಿದರೆ ಬಹುಶಃ ಸುಮ್ಮನಿರಲಾರಳು. ಹೇಳಲೇ ? ಈಗಲೇ ಹೇಳಿಬಿಡಲೇ...

"ಅಣ್ಣಾS ಅಜ್ಜೀ ಊಟಕ್ಕ ಕರೀತಾಳ ಅವ್ವ ಬರಬೇಕಂತ ಎಲ್ಲಾರೂ ಬಂದಾರ."

ಮಂಪರಿನಲ್ಲಿ ಜಯದೇವ ಈಗ ಎಚ್ಚತ್ತ.

"ಅಜ್ಜೀ" ಹೊರಟು ನಿಂತಿದ್ದ ಅಜ್ಜಿಯನ್ನು ಮತ್ತೆ ಕರೆದ "ನಾ ಒಂದು ಮಾತು ಹೇಳಬೇಕಾಗೇದ ಅಜ್ಜೀ ನಿನಗ."

"ಏನಪ್ಪಾ ಜಯಣ್ಣಾ ಏನರೆ ಬೇಕೇನು?"

"ಅಜ್ಜೀ ಈ ವರ್ಷ ಮಳೀ ಬೆಳೀ ಸರಿಯಾಗಿ ಆಗಿಲ್ಲಾ ಅಲ್ಲಾಽ"

"ಹೌದು ಎಲ್ಲಾ ಕಡೇನೂ ಹಾಂಗಽ ಆಗೇದಪಾ. ನಮ್ಮ ಹೊಲದಾಗೂ ಜ್ವಾಳ ಬರಲೇ ಇಲ್ಲಾ. ವರ್ಷಾ ನೂರು ಚಿಲ ಬರತಿದ್ದು."

"ನಾವು ಇದ್ದವರು ಅಜ್ಜೀ ಶ್ರೀಮಂತರು, ಹ್ಯಾಂಗಾದರೂ ಬದುಕತೀವಿ. ಅದರ ಬಡವರೇನ ಮಾಡಬೇಕು ಪಾಪ!"

"ಹೌದಪಾ ಬಡಬಗ್ಗರು ಹೊಟ್ಟಿ ತಂಬೂದು ಕಠಿಣ ಆಗೇದ. ಈ ದಿವಸದಾಗ, ಜ್ವಾಳ, ಗೋದಿ, ಅಕ್ಕಿ ಎಲ್ಲಾ ತುಟ್ಟಿ ಆಗ್ಯಾವ. ಸರಕಾರದವರು ಏನೋ ರೇಷನ್ ಮಾಡ್ತಾರಂತ, ಕಾಳು ಕೊಂಡು ಇಟ್ಟು ತಾವಽ ಸೋಷಿ ಧಾರಣೀಗೆ ಮಾರತಾರಂತ. ಮೊನ್ನೆ ಶಿವಣ್ಣ ಹೇಳತಿದ್ದ ತಾನು ಇಪ್ಪತ್ತು ಚೀಲ ಜ್ವಾಳ ಹತ್ತು ಚೀಲ ಭತ್ತಾ ಕೊಟ್ಟನಂತ, ಪಾಪ! ಹಾಂಗ ಮಾಡಿದರಽ ಬಡವರು ಬದುಕ್ತಾರ. ಇಲ್ಲಾ ಇಂದ್ರ ಕೂಳಿಲ್ಲದಽ ಸತ್ತು ಹೋಗ್ತಾರ. ನಮ್ಮ ಕಾಲದಾಗ ಎಷ್ಟು ಸುಖಾ ಇತ್ತು ಏನು ಸುದ್ದಿ. ಈಗ ಇದನ್ನೆಲ್ಲಾ ನೋಡಿದರ ನನಗ ಅನಸ್ತದ ಪಾಪ ಹೆಚ್ಚಾಗೇದ. ಅದಕ್ಕಽ ಜನಾ ಕೂಳು ಕೂಳು ನೀರು ನೀರು ಅಂತಾರ..."

ಜಯದೇವ ಒಮ್ಮೆಲೆ ಉದ್ವಿಗ್ನನಾದ. "ಹೌದು ಅಜ್ಜೀ ಪಾಪ ಹೆಚ್ಚಾಗೇದ. ಆದ್ರ ಅದು  ಇಲ್ಲೇ ನಿನ್ನ ಮನೀಯೊಳಗಽ ಅದಽ ಅನ್ನೂದು ನಿನಗ ಗೊತ್ತದೇನು?"

"ಏನೋ .... ಏನಂದೀ ಹಿಂಗ ಮಾತಾಡಿದ್ರ....." ಅಜ್ಜಿಯ ಸಿಟ್ಟು ನೆತ್ತಿಗೇರಿತ್ತು. ಮುಂದೆ ಮಾತು ಹೊರಡಲಿಲ್ಲ.

"ಅಜ್ಜೀ ನಾ ಸುಳ್ಳು ಹೇಳೂದಿಲ್ಲ. ನನ್ನ ಮಾತು ನಂಬು. ಸರಕಾರದ ಕಣ್ಣಿಗೆ ಕಾಣದಾಂಗ ಅಪ್ಪ ತನ್ನ ವಖಾರದಾಗ ೧೨೦ ಚೀಲ ಭತ್ತ ಮುಚ್ಚಿ ಇಟ್ಟಾನ. ಮುಂದ ಲಾಭಕ್ಕ ಮಮಾರಿಕೊಳ್ಳಾವ ಅವನ್ನ. ನಾಳೆ ಮಂದಿಗೆ ಗೊತ್ತಾದರ ನಮ್ಮ ಮನೆತನಕ್ಕ ಎಂಥಾ ಅಪಮಾನ ! ಮೊದಲ ಲಗೂನಽ ಹೊರಗ ತಗೀಲಿಕ್ಕೆ ಹೇಳು. ಬಡವರ ಮ್ಯಾಲೆ ಸ್ವಲ್ಪಾನೂ ಕರುಣಾ ಇಲ್ಲ ಅಪ್ಪಗ, ರೊಕ್ಕ ಒಂದು ಸಿಕ್ಕರ ಸಾಕು ಅಂವಗ. ನೀ ಅರೆಬುದ್ಧೀ ಹೇಳು."

ಮೂಕಳಾಗಿ ನಿಂತ ಅಜ್ಜಿಯನ್ನು ನೋಡಿ ಜಯದೇವ ಮಾತು ನಿಲ್ಲಿಸಿದ. ಅವಳ ಮುಖ ಇಳಿದುಹೋಗಿತ್ತು. ಹಣೆ ನಿರಿಗೆಗಟ್ಟಿ ಸುಕ್ಕು ಸುಕ್ಕಾಗಿದ್ದ ಮುಖ ವೇದನೆಯಿಂದ ವಿಕಾರವಾಗಿತ್ತು. ಒಂದು ಕ್ಷಣ ಸುಮ್ಮನೆ ನಿಂತು ಏನೋ ನಿರ್ಧಾರಕ್ಕೆ ಬಂದವಳಂತೆ ತನ್ನ ಕೋಣೆಗೆ ಹೋಗಿ ಮಗನನ್ನು ಕರೆದಳು.

"ಶಿವಣ್ಣಾಽ"

ಅದೇ ದೇವರ ಮನೆಯಿಂದ ಹೊರಬರುತ್ತಿದ್ದ ಶಿವಣ್ಣ ತಾಯಿಯ ಕರೆ ಕೇಳಿದರು. ತಾಯಿಯನ್ನು ಕಂಡರೆ ಅವರಿಗೆ ಪ್ರೀತಿ, ಹೆಚ್ಚು ಗೌರವ, ಅದಕ್ಕೂ ಹೆಚ್ಚಾಗಿ ಭಯ. ಕೂಡಲೆ ಕೋಣೆಗೆ ಬಂದರು.

"ಯಾಕವ್ವಾ, ಊಟಕ್ಕ ನಡಿ ಹೊತ್ತು ಭಾಳ ಆತು. ಹುಡುಗರೆಲ್ಲಾ ದಾರೀ ನೋಡ್ತಾವ." ದಿನವೂ ತಾಯಿ, ಮಕ್ಕಳೊಡನೆ ಊಟ ಮಾಡುವದು ಅವರ ರೂಢಿ.

"ಬರ್ತೀನಪಾ, ಊಟಕ್ಕ. ಆದರ ಮೊದಲ ಒಂದ ಮಾತು ಕೇಳಬೇಕಾಗೇದ ನಿನ್ನ. ಅಲ್ಲಾ ಶಿವಣ್ಣಾ ನಿನ್ನಂಥಾವನೂ ಹಿಂಗ ಮಾಡಬೇಕs" ದನಿಯಲ್ಲಿ ಕಾತರವಿತ್ತು.

"ಏನವಾ ನಾ ಏನು ಮಾಡೇನಿ? ಲಗೂ ಊಟಕ್ಕ ಯಾಕ ಬರಲಿಲ್ಲಂತ ಸಿಟ್ಟೇನು?" ವಿಷಯ ತಿಳಿಯದ ಶಿವಣ್ಣ ಚೇಷ್ಟೆ ಮಾಡಿ ನಕ್ಕರು.

"ನಗೂ ಮಾತ ಅಲ್ಲಪಾ ಇದೂ, ನಿನ್ನ ವಟಾರದಾಗ ೧೨೦ ಚೀಲ ಭತ್ತಾ ಮುಚ್ಚಿ ಇಟ್ಟೀಯಂತ ಹೌದೇನು?"

ಪ್ರಶ್ನೆ ಅನಿರೀಕ್ಷಿತವಾಗಿತ್ತು. ತಾಯಿಗೆ ಈ ವಿಷಯ ತಿಳಿದದ್ದು ಹೇಗೆ ಎಂದು ಯೋಚನೆ ಅವರಿಗೆ, ಆದರೆ ಯೋಚಿಸಲೂ ಸಮಯವಿಲ್ಲ. ಪ್ರಶ್ನೆಗೆ ಉತ್ತರ ಕೂಡಲೇ ಕೊಡಬೇಕಾಗಿತ್ತು.

"ಹೌದವಾ ಇಟ್ಟೇನಿ, ನಿನ್ನ ಕಿವಿಗೂ ಈ ಸುದ್ದಿ ಬಂದು ಬಿಟ್ಟಿತs. ದೊಡ್ಡ ಕುಟುಂಬ ನಮ್ಮದು. ಕಷ್ಟ ಕಾಲಕ್ಕ ಹಣಾ ಬೇಕಾಗತದ ಅಂತ ತೆಗೆದಿಟ್ಟೆ."

"ಕಷ್ಟಕಾಲ ಅನ್ನಲಿಕ್ಕೆ ಶಿವ ಏನೂ ಕಡಿಮಿ ಮಾಡಿಲ್ಲಪಾ ನಮಗ"

"ಈಗ ಇಲ್ಲವಾ. ಆದ್ರ ಪರಿಸ್ಥಿತಿ ಹಿಂಗs ಇರತsದ ಇಲ್ಲಾs ಅನ್ನೂದು ಯಾರಿಗೆ ಗೊತ್ತು?"

"ಶಿವಣ್ಣಾ ನಿನ್ನಂಥಾ ತಿಳದಾವಗೂ ನಾ ಹೇಳಬೇಕs. ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ ಅಂತ ಬಲ್ಲವರ ಹೇಳ್ಯಾರ. ನಾವು ಕೈಯೆತ್ತಿ ಕೊಟ್ಟರೆ ಶಿವಾ ನಮಗ ಕೊಡತಾನಪಾ."

"ಅವ್ವಾ, ನನಗೂ ಗೊತ್ತದ. ಆದರ ಅದೆಲ್ಲಾ ಹಿಂದಿನ ಕಾಲದ ಮಾತಾತು. ಈ ದಿನದಾಗ ಹಣಾ ಅಂದರ ಹೆಣಾ ಸುದ್ಧಾ ಬಾಯಿ ಬಿಡತsದ. ಅದನ್ನ ಗಳಿಸಲಿಕ್ಕೆ ಎಷ್ಟೋ ದಾರಿ. ಅದರಾಗ ಇದೂ ಒಂದು."

ಊಟಕ್ಕ ಬರದ ತಂದೆ, ಅಜ್ಜಿಯರನ್ನು ಬಿಟ್ಟು ಊಟ ಮಾಡಲು ಒಪ್ಪದ ಮಕ್ಕಳು "ಅವ್ವಾs, ಅಪ್ಪಾ ಅಜ್ಜಿ ಬಂದ ಕೂಡಲೆ ನಮ್ಮನ್ನು ಊಟಕ್ಕ ಕರಿ" ಎನ್ನುತ್ತ ಆಡಲು ಹೊರಗೆ ಜಿಗಿದರು. ಕಲ್ಯಾಣಮ್ಮ ಅತ್ತೆ, ಗಂಡನ ಮಾತು ಕೇಳುವ ಆಸೆ ಇದ್ದರೂ ಒಳಗೆ ಬರಲು ಧೈರ್ಯ ಸಾಲದೇ ಹೊರಗಿನಿಂದಲೇ ಕಿವಿ ಕೊಟ್ಟರು. ತನ್ನ ಕೋಣೆಯಲ್ಲಿದ್ದ ಜಯದೇವನ ಕೈಯಲ್ಲಿ ಪುಸ್ತಕವಿದ್ದರೂ ಲಕ್ಷ್ಯವೆಲ್ಲ ತಂದೆ, ಅಜ್ಜಿಯರ ಮಾತಿನ ಕಡೆಗೇ.

ಹೊರಗೆ ಗಿರಿಜಾ ಸುಶೀಲೆಯರ ಆಟ ಭರದಿಂದ ಸಾಗಿತು.

"ಏ ಶೀಲಾ ಇಲ್ಲೇ ನೆಳ್ಳಾಗ ಮನೀ ಕೊರೀತಿನಿ. ಕುಂಟಲಿಪಿ ಆಡೂಣು ಬಾ."

"ಹೋಗs ಅಕ್ಕಾ ವಟ್ಟಪಾ ಎಲ್ಲಾ ಕಳದ ಹೋಗ್ಯಾವ ನಾ ಹ್ಯಾಂಗ ಆಡಲಿ."

"ಇಂಥಾ ರಣಾರಣಾ ಬಿಸಲಾಗ ಇನ್ನ ಏನ ಆಡೂದವಾ, ಬಾ ಹಂಗಾರ ಕಲ್ಲು ಕಟೆದು ವಟ್ಟಪಾ ಮಾಡೂನು, ಸಂಜೀ ಮುಂದ ಆಡಲಿಕ್ಕೆ ಬರತsದ."

ಟಕ್-ಟಕ್-ಟಕ್-ಟಕ್ ಒಂದೇ ಸವನೆ ಕಟೆಯ ಹತ್ತಿದರು ಇಬ್ಬರೂ. ಕಟೆದಂತೆ ಕಲ್ಲು ನುಣುಪಾಗಿ ಕಾಣಹತ್ತಿತು. ಇನ್ನೂ ಹುರುಪಿನಿಂದ ಕಟೆದರು.

ಕಟ್-ಕಟ್-ಕಟ್-ಕಟ್-

"ಎಲ್ಲಾರೂ ಗಳಸ್ತಾರ ಅಂತ ನೀನೂ ಹಣಾ ಗಳಿಸಲಿಕ್ಕೆ ಹೊರಟ್ಯಾ ಶಿವಣ್ಣಾ. ಹಣಾ ಮುಖ್ಯ ಅಲ್ಲ. ಮನುಷ್ಯಾಗ ಗುಣಾ ಮುಖ್ಯ. ನಾಳೆ ಹೋಗೂ ಮುಂದೆ ಯಾರೂ ತಾವು ಗಳಿಸಿದ ಹಣಾ ಒಯ್ಯುವುದಿಲ್ಲ. ಗುಣವಂತ ಆಗಿ ಇದ್ರ ನಾಲ್ಕು ಮಾಂದೀ ಬಾಯಾಗ ಸತ್ತರೂ ಬದಕಿ ಇರ್ತಾರ."

"ಹಣಾ ಇದ್ದರ ಸುಖಾ ಇರ್ತದ. ನನ್ನಂಥಾ ಸಂಸಾರಿಕರು ಹೆಂಡಿರು ಮಕ್ಕಳ ಸಲುವಾಗಿ ಅತೀ ಹಣ ಗಳಿಸಬೇಕಾಗ್ತದ. ನಾನು ನನ್ನ ಸುಖಕ್ಕಂತs ಮಾಡೂದಿಲ್ಲವಾ."

ಕಟ್-ಕಟ್-ಕಟ್-ಕಟ್ ಗಿರಿಜೆ ಹುರುಪಿನಿಂದ ಜಿಗಿದೆದ್ದಳು. "ಏ ಶೀಲಾ ನೋಡಿಲ್ಲೆ. ನ್ನ ವಟ್ಟಪಾ ಎಷ್ಟ ಛಂದಾಗೇದ."

"ಇಲ್ಲ ಗಿರಿಜಕ್ಕಾ. ಇಲ್ನೋಡು ಇನ್ನೂ ಮೂಲಿ ಅದಾವ ಇನ್ನೊಂದು ಸ್ವಲ್ಪ ಕಟೀ. ಅಂದರ ದುಂಡಗಾಗ್ತದ."

ಮತ್ತೆ ಟಕ್-ಟಕ್-ಟಕ್

"ಹೌದಪಾ ಶಿವಣ್ಣಾ. ನೀ ಮಾಡೂದು ಮಕ್ಕಳ ಸುಖಕ್ಕ. ಅದರ ಈ ಅನ್ಯಾಯದ ರೊಕ್ಕ ನಿನ್ನ ಮಕ್ಕಳಿಗೆ ಸುಖಾ ಕೊಡೂದಿಲ್ಲಾ ಅನ್ನೂದs ನೀನು ಮರತಬಿಟ್ಟಿ. ನೀನು ಮನೀ ಯಜಮಾನಾ. ನೀ ಒಳ್ಳೇ ದಾರಿ ಹಾಕಿಕೊಟ್ಟರ ಮಕ್ಕಳು ಮುಂದ ಹಾಂಗs ನಡೀತಾರ. ಇಲ್ಲದಿದ್ದರ ಅವರೂ ಚೈನೀ ಕಲತು ಮುಪ್ಪಿನ ಕಾಲಕ್ಕ ನಿನಗs ಜೀವಕ್ಕ ತ್ರಾಸ ಕೊಡ್ತಾರ. ಶಿವಣ್ಣಾ ನಿನ್ನ ತಂದಿ, ಅಜ್ಜ ಎಲ್ಲಾರೂ ಕೈಯೆತ್ತಿ ಕೊಟ್ಟವರs ಹೊರತು ಬಡವರ ಹೊಟ್ಟೀ ಮ್ಯಾಲೆ ಹೊಡದು ಕೆಟ್ಟವರಾಗಲಿಲ್ಲಪಾ. ನಿನ್ನ ಹಿತಕ್ಕs ನಾ ಮಾತು ಹೇಳ್ತೀನಿ. ಆ ಭತ್ತದ ಚೀಲಾ ಹೊರಗ ತಗಸಿ ಕೊಟ್ಟಬಿಡಲಾ ಸರಕಾರಕ್ಕ."

"ನೀ ಹೇಳೂವಷ್ಟು ಸರಳ ಅಲ್ಲವಾ ಈ ಕೆಲಸಾ, ಇಷ್ಟ ದಿನಾ ಮುಚ್ಚಿ ಇಟ್ಟು, ಈಗ ಹ್ಯಾಂಗ ಕೊಡಲಿ? ನನಗs ಅವಮಾನ."

"ಮುಚ್ಚಿ ಇಟ್ಟದ್ದು ನಿನ್ನ ತಪ್ಪು, ನೀನಾಗಿ ಅವರಿಗೆ ತಿಳಿಸಿದರ ಒಳ್ಳೇದು. ಅವರs ಪತ್ತೆ ಹಚ್ಚಿ ವಖಾರ ಜಪ್ತ ಮಾಡಿದರ ಇನ್ನೂ ಹೆಚ್ಚಿನ ಅಪಮಾನ ಆಗೂದಿಲ್ಲs"

ಗಿರಿಜೆ ಸುಶೀಲೆಯರ ಕಲ್ಲು ದುಂಡಗಾಗಿತ್ತು. ಇನ್ನೂ ಸ್ವಲ್ಪ ನಯ ಮಾಡುವ ಕೆಲಸ ಉಳಿದಿತ್ತು.

ಕಟ್-ಕಟ್-ಕಟ್

ಇಷ್ಟು ಹೇಳಿದ್ದರೂ ಮಗ ಇನ್ನೂ ವಿಚಾರಿಸುತ್ತಿದ್ದ. ತಾಯಿ ಚಟ್ಟನೆ ಎದ್ದವಳೇ ತನ್ನ ಉಡಿಯಲ್ಲಿದ್ದ ಸರಿಗೆಯನ್ನು ತೆಗೆದು ಮಗನ ಕೈ ಮೇಲಿಟ್ಟಳು.

"ಇದನ್ನ ನೀನs ತೊಗೋ ಶಿವಣ್ಣಾ, ನನಗ ಬೇಕಾಗಿಲ್ಲ. ಮುದುಕಿ ನಾ ಅರೆ ಇಟ್ಟುಕೊಂಡು ಏನ ಮಾಡಲಿ? ನನ್ನ ಅವ್ವನ ನೆನಪಿಗೆ ಇರ್‍ಲಿ ಅಂತ ಇಟಕೊಂಡಿದ್ದೆ. ಇನ್ನ ನೀನs ತೊಗೋ. ಆದರ ಭತ್ತಾ ಹೊರಗ ತಗದು ಕೊಟ್ಟಬಿಡು. ಇಷ್ಟs ನಾ ಹೇಳೂದು ದೇವರು ನಿನಗ, ನಿನ್ನ ಮಕ್ಕಳಿಗೆ ಕಲ್ಯಾಣ ಮಾಡಲಿ ಅಂತ ನಾ ದಿನಾ ಬೇಡಿಕೋತೀನಿ, ಇದೊಂದು ನನ್ನ ಮಾತು ನಡಸು, ಹಿರೇರ ಹಾಂಗs ಮರ್ಯಾದಿ ಉಳಸು."

ಕಲ್ಲು ದುಂಡಗಾಗಿ ನುಣುಪಾಗಿತ್ತು. ಗಿರಿಜಾ, ಸುಶೀಲೆಯರ ಹಿಗ್ಗು ಹೇಳಲಾಗಲಿಲ್ಲ.

ಶಿವಣ್ಣಾ ಎದ್ದವರೇ ಸರಿಗೆಯನ್ನು ತಾಯಿಯ ಉಡಿಯಲ್ಲಿಟ್ಟು ನಮಸ್ಕಾರ ಮಾಡಿ 'ಇಲ್ಲವಾ ನಂದು ತಪ್ಪಾತು. ನಾನು ನಾಳೇ ಭತ್ತಾ ಕೊಟ್ಟ ಬಿಡತೇನಿ. ನೀ ಮನಸೀಗೆ ಕಷ್ಟಮಾಡಿಕೋಬ್ಯಾಡಾ. ನಗನಗತ ಇರು. ನೀ ನಕ್ಕರ ಮಕ್ಕಳಿಗೆ, ನನಗ ಸುಖಾ ಆಗ್ತದ' ಅಂದರು.

"ಯವ್ವಾ ಒಂದು ತುತ್ತು ಕೂಳು ಹಾಕ್ರೀ ಹೊಟ್ಟಿ ಹಸದೈತಿ. ಪುಣ್ಯ ಬರತೈತಿ ನಿಮಗ" ಭಿಕ್ಷುಕರ ಹುಡುಗ ಮತ್ತೆ ಬಂದಿದ್ದ.

ಜಯದೇವ ಅಡಿಗೆ ಮನೆಗೆ ಹೋಗಿ ಎರಡ ಹೋಳಿಗೆ ತಂದು ನೀಡಿ ಹೇಳಿದ.

"ಹಿಡಿ, ಹೊಟ್ಟಿತುಂಬ ತಿನ್ನು."

***

■■

# 'ಎಲ್ಲರ ಮನೆ ದೋಸೆಗೂ.....

ಸೋಪು ಹಚ್ಚಿ ಮುಖ ತೊಳೆದ ಗಿರಿಜೆ ಕೋಣೆಗೆ ಬಂದು ಕನ್ನಡಿಯೆದುರು ನಿಂತಳು, ಸಡಿಲವಾಗಿ ಕೂದಲು ಬಾಚಿ ಮುಂಗುರುಳು ತೀಡಲು ಹತ್ತು ನಿಮಿಷ ಹಿಡಿಯಿತು.

ಒಳಗೆ ಅತ್ತೆಯ ನರಳುವಿಕೆ ಸಣ್ಣಾಗಿ ಕೇಳುತ್ತಿತ್ತು. ಹಿಂದಿ ದಿನ ಮಳೆಯಾಗಿತ್ತು. ಆ ತಂಪಾದ ಹವೆಯಲ್ಲಿ ಬಟ್ಟೆಗಳನ್ನು ಒಗೆದ ಅತ್ತೆಗೆ ಈ ದಿನ ವಿಪರೀತ ಥಂಡಿ, ತಲೆನೋವು, ಬೆಳಗಿನಿಂದಲೂ ಹುಂ...... ಉಂ.... ಹುಂ. ಗಾರ ಇದ್ದೇ ಇದೆ. ಕೇಳಿ ಕೇಳಿ ಗಿರಿಜಳಿಗೆ ಬೇಜಾರಾಗಿ ಮನೆ ಬಿಟ್ಟು ಕೊಂಚ ಹೊರಗೆ ಹೋಗಿ ಬರೋಣವೆಂದು ತಯಾರಾಗುತ್ತಿದ್ದಾಳೆ.

"ತಿದ್ದಿ ತೀಡಿ ಕುಂಕುಮ ಇಟ್ಟುಕೊಂಡ ಗಿರಿಜೆ ಬೇರೆ ಸೀರೆ ತರಲು ಒಳಗಿನ ಕೋಣೆಗೆ ಬಂದಳು. ಸೊಸೆಯ ಹೆಜ್ಜೆಯ ಸಪ್ಪಳ ಕೇಳಿದ ಅತ್ತೆ ಮಗ್ಗುಲಾಗಿ, "ಗಿರಿಜಾ ತಲೆನೋವು ಭಾಳ ಹೆಚ್ಚಾಗೇದ. ಸ್ವಲ್ಪ ಶುಂಠಿ ತೇಯ್ದು ಕೊಡತೀಯಾ?" ಎಂದಳು ನಡುಗುವ ದನಿಯಲ್ಲಿ.

ಗಿರಿಜಳಿಗೆ ಇದ್ದ ಬೇಸರ ಇನ್ನೂ ಹೆಚ್ಚಾಯಿತು. "ಯಾರು ಹೇಳ್ತಾರೊ ಇವರಿಗೆ ಕೆಲಸ ಮಾಡಲಿಕ್ಕೆ, ೪-೫ ರೂಪಾಯಿ ಕೊಟ್ಟರೆ ಒಕ್ಕಲಗಿತ್ತೀನೆ ಮಾಡ್ತಾಳ. ಮಾಡೋದು ಮತ್ತೆ ನರಳೋದು. ನಮಗೆ ತೊಂದರೆ ಕೊಡೋದು" ಎಂದು ಗೊಣಗುಟ್ಟುತ್ತಲೇ ಅಡಿಗೆ ಮನೆಗೆ ಹೋದವಳು ಶುಂಠಿ ತೇಯ್ದು ತಂದು ಅತ್ತೆಯ ದಿಂಬಿನ ಹತ್ತಿರ ಇಟ್ಟಳು. "ಸ್ವಲ್ಪ ಕಾಪಿ ಮಾಡ್ತೀಯ?" ಎಂದು ಕೇಳಬೇಕೆಂದುಕೊಂಡಿದ್ದ ಅತ್ತೆ ಸೊಸೆಯ ಗಂಟು ಮುಖವನ್ನು, ಗೊಣಗಾಟವನ್ನು ನೋಡಿ ಸುಮ್ಮನೆ ಎದ್ದು ಹಣೆಗೆ ಶುಂಠಿ ತೀಡಿದಳು.

ಬೇರೆ ಸೀರೆ ಉಟ್ಟುಕೊಂಡ ಗಿರಿಜೆ ಕೋಣೆಯ ಬಾಗಿಲ ಬಳಿ ನಿಂತು "ಅತ್ತೆ, ನಾನು ಉಮಾನ ಮನೆಗೆ ಹೋಗಿ ಬರ್ತೀನಿ. ಮುಂಜಾನಿಯಿಂದ ಬ್ಯಾಸರ ಆಗೇದ" ಎಂದಳು. "ವಿಶ್ವನಾಥ ಕಚೇರಿಂದ ಬರೂದರೊಳಗs ಬಂದ್ಬಿಡವ್ವಾ. ಹಸಿದು ಬಂದಿರ್ತಾನ. ತಿನ್ನಿಕ್ಕೆ ಏನಾದರೂ ಮಾಡಬೇಕು. ನನಗೂ ಆರಾಮಿಲ್ಲ" ಎಂದಳು ಅತ್ತೆ.

"ಇಲ್ಲಾ ಇವತ್ತು ಅವರು ಗೆಳೆಯರ ಮನೀಗೆ ಹೋಗ್ತಾರಂತ. ಲಗೂನ ಬರೂದಿಲ್ಲ. ನಾನು, ಉಮಾ ತಿರುಗ್ಯಾಡಿ ಬರ್ತೀವಿ. ಬಂದ ಕೂಡಲೆ ಅಡಿಗ್ಗೆ ಇಡತೀನಿ' ಎನ್ನುತ್ತ ಗಿರಿಜೆ ಬೀದಿಗಿಳಿದಳು.

"ಉಮಾ" ಎನ್ನುತ್ತ ಬಾಗಿಲು ತಟ್ಟಿದ ಗಿರಿಜೆಗೆ ಅವಳ ಅತ್ತೆಯೇ ಬಾಗಿಲು ತೆಗೆದರು. "ಉಮಾ ಹೊರಗೆ ಹೋಗ್ಯಾಳ ಬಾ" ಎಂದರು. "ಎಲ್ಲಿಗೆ ಹೋಗ್ಯಾಳ?" ಎಂದು ಗಿರಿಜೆಯ ದನಿಯಲ್ಲಿ ನಿರಾಶೆಯಿತ್ತು.

"ಎಲ್ಲಿ ಹೋಗ್ಯಾಳೋ ನನಗೇನು ಗೊತ್ತು ? ಆಕಿಯೇನ ಹೇಳಿ ಕೇಳಿ ಹೋಗ್ತಾಳ? ನನ್ನ ಕೈ ಬೆರಳಿಗೆ ಮುಳ್ಳೋ ಸಿಬಿರೋ ಏನೋ ನಟ್ಟು ನೋವಾಗೇದ. ಕೀವು ತುಂಬೇದ. ಅದರಾಗ ಬಲಗೈ, ಅದಕ್ಕ ಆಕೀಗೆ ಕೆಲಸ ಹೆಚ್ಚಾಗೇದ, ಬ್ಯಾಸರಾತೋ ಏನೋ ಮನೀ ಬಿಟ್ಟು ಎದ್ದು ಆತು. ಇರಲಿ ಬಾರಲಾ ಕೂಡ್ರು. ಯಾಕ ನಿನ್ನ ಗೆಳತಿ ಇರದಿದ್ರ ಕೂಡ್ರ ಬಾರದೇನು ?" ಎನ್ನುತ್ತ ಚಾಪೆ ಹಾಕಿದರು.

"ಇಲ್ಲಾ ಕೂಡ್ರತೀನಿ, ಹಾಂಗೇನ ತಿಳಕೋಬ್ಯಾಡ್ರಿ" ಎನ್ನುತ್ತ ಚಾಪೆಯ ಮೇಲೆ ಕುಳಿತ ಗಿರಿಜೆಯ ಸೀರೆಯನ್ನು ನೋಡಿ ಮೆಚ್ಚುಗೆಯ ದನಿಯಲ್ಲಿ ಉಮೆಯ ಅತ್ತೆ "ಸೀರಿ ಭಾಳ ಛಂದ ಅದ. ಯಾವಾಗ ತೊಗೊಂಡಿ? ಎಷ್ಟು ಬಿತ್ತು" ಎಂದರು.

ತನ್ನ ಸೀರೆಯ ಪ್ರಶಂಸೆಯಿಂದ ಮುಖವರಳಿದ ಗಿರಿಜೆ "ನಾ ತೊಗೊಂಡಿಲ್ರೀ. ನಮ್ಮ ಅಣ್ಣನ ಮದುವಿಗೆ ಹೋಗಿದ್ದೀನಲ್ಲಾ, ಆವಾಗ ತವರು ಮನಿಯವರು ಕೊಟ್ಟಾರ" ಎಂದಳು.

"ನೀ ದೈವಾನಿ ನೋಡವಾ. ತವರು ಮನಿಯವರಿಗೆ ಎಷ್ಟ ಪ್ರೀತಿ ಎಷ್ಟ ಅಕ್ಕರತಿ. ಅದನ್ನು ಬೇಡಿ ಬರಬೇಕು. ಉಮಾನ ತವರು ಮನಿಯವರಿಗೆ ಏನೂ ಇಲ್ಲ. ಚೊಚ್ಚಲು ಗಂಡು ಮೊಮ್ಮಗ ಹುಟ್ಟಿದರ ದಾರದೆಳೆಯಂಥಾ ಬಂಗಾರ ಚೈನು ಕೊಟ್ಟಾರ. ಕಾಲಾಗ ಬೆಳ್ಳಿ ಗೆಜ್ಜೆ, ಪೈಜಣ ಏನೂ ಇಲ್ಲ. ಈಗ್ಯಾರ ಹಾಕೋತಾರ ಬಿಡು ಅಂದರಂತ. ನನಗ ಸರಿ ಬರೂದಿಲ್ಲ ನೋಡವಾ ಇದು" ರಾಗವೆಳೆದರು ಉಮೆಯ ಅತ್ತೆ.

ತನ್ನ ಸೀರೆಯ, ತವರು ಮನೆಯ ಹೊಗಳಿಕೆ ಕೇಳಿ ಉಬ್ಬಿದ ಗಿರಿಜೆ ಅನುಕಂಪ ತುಂಬಿದ ದನಿಯಲ್ಲಿ "ಎಲ್ಲಿ ನಿಮ್ಮ ಕೈ ನೋಡೋಣ, ಏನಾಗೇದ? ಮುಳ್ಳು-ಗಿಳ್ಳು ಕಾಣಿಸಿದರ ತಗೀತೇನಿ. ಸೂಜಿ ಎಲ್ಲ್ಯದ ಕೊಡ್ರಿ" ಎಂದಳು.

"ಏನು ಮಾಡ್ತಿ ಬಿಡು ಸುಳ್ಳ. ಛಂದಾಗಿ ನಾಕು ಮಾತು ಕತಿ ಆಡು ಕೂತುಕೊಂಡು. ನೀ ಬಾಯ್ತುಂಬ, 'ಏನಾಗೇದ ಮುಳ್ಳು ತೆಗೀತೀನಿ!' ಅಂತ ಕೇಳಿದಿ ಅಷ್ಟs ಸಾಕು. ನನ್ನ ಉಮಾ ಎರಡು ದಿನಾ ಆತು ನೋಡೇ ನೋಡ್ತಾಳ. ಒಂದು ಮಾತರೇ ಕೇಳಲಿಲ್ಲ ನೋಡವಾ?"

"ಸೂಜಿ ಕೊಟ್ಟಬಿಡ್ರಿ. ಮುಳ್ಳ ಕಾಣಸ್ತದ ಇಲ್ಲೇ. ತಗದರ ಕೀವೂ ಹೋಗ್ತದ. ನೋವು ಕಡಿಮೆಯಾಗ್ತದ" ಎಂದ ಗಿರಿಜೆ ಎರಡು ನಿಮಿಷಗಳಲ್ಲಿ ಮುಳ್ಳು ತೆಗೆದು, ಹತ್ತಿಯಿಂದ ಕೀವು ಒರೆಸಿ, ಬೆರಳಿಗೆ ಪಟ್ಟಿ ಕಟ್ಟಿಬಿಟ್ಟಳು.

"ಪುಣ್ಯ ಬರಲೆವ್ವ ನಿನಗ. ನಿನ್ನಂಥಾ ಸೊಸಿ ಸಿಕ್ಕ ನಿಮ್ಮ ಅತ್ತೀನ ದೈವಾನಿ. ಎಲ್ಲಾದಕೂ ಬೇಡಿ ಬರಬೇಕು" ಎಂದು ಉಸಿರಗರೆದಳು.

ಉಮೆಯ ಅತ್ತೆಯಿಂದ ಕುಂಕುಮ ತೆಗೆದುಕೊಂಡ ಗಿರಿಜೆ ಮತ್ತೆಲ್ಲೂ ಹೋಗದೆ ನೇರವಾಗಿ ಮನೆಯ ದಾರಿ ಹಿಡಿದಳು.

ಮನೆಯ ಬಾಗಿಲು ತೆರೆದಿತ್ತು. ಗಿರಿಜ ಒಳಗೆ ಕಾಲಿಟ್ಟಳು. ಕಾಫಿ ಕಪ್ಪನ್ನು ಕೈಯಲ್ಲಿ ಹಿಡಿದ ಉಮಾ ಬಂದಳು. "ತಲೆ ನೋವು ಬಹಳ. ಸ್ವಲ್ಪ ಕಾಪಿ ಮಾಡಿಕೊಡು ಅಂದ್ರು ನಿಮ್ಮ ಅತ್ತೆ. ಮಾಡಿ ತಂದೆ" ಎಂದು ನಸುನಕ್ಕಳು.

ಗಿರಿಜೆ ನಗಲಿಲ್ಲ.

***

■■

# ಸ್ವರೂಪ ದರ್ಶನ

ಹೊಸ್ತಿಲ ಬಳಿ ಸರ ಸರ ಸೀರೆಯ ಸದ್ದು, ಬಳೆಗಳ ಸಪ್ಪಳವಾಯಿತು. ಸಾಲಂಕೃತ ಕನ್ಯೆಯನ್ನು ಕರೆದು ತಂದಿದ್ದರು.

ಸೋಮಶೇಖರಯ್ಯ ತಲೆ ಎತ್ತಿ ನೋಡಿ ಸೆಟೆದು ಕುಳಿತು 'ಬಾ ತಂಗೀ ಇತ್ಲಾಗ' ಎಂದರು. ಅವರ ಹೆಂಡತಿ ಗೌರಮ್ಮ ಸರಿದು ಸೋಫಾದಲ್ಲಿ ಕೂಡಲು ಹುಡುಗಿಗೆ ಸ್ಥಳ ಮಾಡಿಕೊಟ್ಟರು. ಹುಡುಗಿಯ ಕೈ ನೋಡಲು ಶಾಸ್ತ್ರಿಗಳು ಮುಂದಕ್ಕೆ ಸರಿದರು. ಚಂದ್ರಕಾಂತ ಕುಳಿತ ಸ್ಥಳದಲ್ಲಿಯೇ ಮಿಸುಕಾಡಿದ.

"ನಿನ್ನ ಹೆಸರೇನವಾ ತಂಗಿ ?"

'ಸರೋಜಿನಿ.'

'ಸಾಲಿ ಎಷ್ಟು ಕಲಿತೀಯವಾ ?"

'ಎಸ್.ಎಸ್.ಎಲ್.ಸಿ. ಆಗೇದ್ರಿ.'

'ಹಾಡ ಅನ್ನಲಿಕ್ಕೆ ಬರ್ತದೇನವಾ?'. ಇದುವರೆಗೆ ಸುಮ್ಮನೆ ಕುಳಿತ ಚಂದ್ರಕಾಂತನ ಅಕ್ಕ ಮಾತನಾಡಿದಳು.

'ನಮ್ಮ ಕುಟುಂಬ ಅಪ್ಪಟ ಮೈಸೂರಿನವರ್ರಿ. ಮಗಳಿಗೆ ಶಾಸ್ತ್ರೋಕ್ತ ಸಂಗೀತ ಹೇಳಿಸಲಿಕ್ಕೇ ಬೇಕು ಅಂತ ಅವರ ಮತ. ತಂಬೂರಿ ಮ್ಯಾಲೇ ಹಾಡು ಕಲಿತಾಳ.' ಕನ್ಯೆಯ ತಂದೆ ನೀಲಕಂಠಪ್ಪನವರು ವಿವರಣೆ ಕೊಟ್ಟು ನಕ್ಕರು- ತಮ್ಮ ಮಾತಿಗೆ ತಾವೇ.

ತಂಬೂರಿ ಶೃತಿ ಮಾಡಿಕೊಂಡು ಸರೋಜಿನಿ 'ತನುವು ನಿನ್ನದು ಮನವು ನಿನ್ನದು' ಹೇಳಿದಳು. ಅವಳು ಹಾಡುವಾಗಲೇ ಒಂದೆರಡು ಸಲ ಮಖ ನೋಡಿದ ಚಂದ್ರಾಕಂತ. ಆಮೇಲೆ ತಲೆ ಎತ್ತಲೇ ಇಲ್ಲ. ಹಣ್ಣು ಇಟ್ಟು ಕನ್ಯೆಯನ್ನು ಒಳಕ್ಕೆ ಕಳಿಸಿ ಚಹಾಪಾನ ಮುಗಿಸಿಕೊಂಡು ಕಾರು ಹತ್ತಿದರು.

ಕಾರಿನಿಂದ ಇಳಿದು ದಿವಾನಖಾನೆಯನ್ನು ಪ್ರವೇಶಿಸುತ್ತಿದ್ದಂತೆ ಚಂದ್ರಕಾಂತನ ಅಕ್ಕ 'ಹುಡುಗಿ ದನಿ ಎಷ್ಟು ಛಂದ ಅದs ಅಲ್ಲಾ' ಎಂದಳು.

'ಹೂಂ; ದನೀನೂ ಛಂದ ಅದ. ವಿನಯ ಅದ, ವಿದ್ಯಾ ಅದ' ಗೌರಮ್ಮ ದನಿಗೂಡಿಸಿದರು.

'ಯಾಕೋ ಚಂದ್ರ ನೀ ಸುಮ್ಮನs ಅದೀಯಲಾ?' ಎಂದು ಅವನಿಂದ ಉತ್ತರ ನಿರೀಕ್ಷಿಸಿದರು ಅವನ ತಂದೆ.

'ನನಗ ಹುಡುಗಿ ಏನೂ ಮನಸ್ಸಿಗೆ ಬರಲಿಲ್ಲಾ!'

'ಯಾಕೋ ಏನಾಗೇದ ? ಎಲ್ಲಾದಕ್ಕೂ ಹಿಂಗ ಹೆಸರಿಡತೀಯಪಾ ನೀನು. ಒಂದಕ್ಕ ಕಣ್ಣು ಛಂದಿಲ್ಲಾ; ಒಂದಕ್ಕ ಮೂಗು ದೊಡ್ಡದದ; ಒಂದು ಕಪ್ಪಗದ; ಒಂದು ಗಿಡ್ಡದ ಅಂತ ಹೇಳಿ ಇದು ಎಂಟನೇ ಕನ್ಯಾ ನೋಡು ನಾವು ನೋಡಿದ್ದು, ಇನ್ನೆಂಥಾ ರತಿ ಬೇಕಪಾ ನಿನಗೆ. ಸರೋಜಿನಿ ಅಪ್ಪ ದುಡ್ಡೂ ಭಾಳ ಕೊಡೂ ಹಾಂಗ ಕಾಣಸ್ತದ' ಎಂದಳು ತಾಯಿ.

'ಇಲ್ನೋಡು ಅವ್ವಾ: ನನಗ ದುಡ್ಡು ತರೂ ಹೆಂಡತಿ ಬ್ಯಾಡಾ, ಯಾಕಂದ್ರ ನಮ್ಮಪ್ಪ ಮಾಡಿದ ಆಸ್ತೀನs ರಗಡದ. ಸಂಗೀತ ಹೇಳೂವಾಕಿ ಬ್ಯಾಡಾs. ಅದೆಲ್ಲಾ ಸಿನಿಮಾ ರೇಡಿಯೋದೊಳಗ ಸಿಗ್ತದ. ಭಾಳ ಶಿಕ್ಷಣ ಇದ್ದಾಕೀನೂ ಬ್ಯಾಡಾ; ಯಾಕಂದ್ರ ಆಕಿ ಏನ್ ನೌಕರಿ ಮಾಡಬೇಕಾಗಿಲ್ಲ. ಆದ್ರ ಹುಡುಗಿ ರೂಪವತಿ ಇರಬೇಕು ಅಂತ ನನ್ನ

ಇಚ್ಛಾ. ಇಷ್ಟು ದಿನಾ ನೋಡಿದ ಯಾವ ಹುಡುಗೀಗೂ ಸೌಂದರ್ಯದ ಲಕ್ಷಣಾನs ಇದ್ದಿಲ್ಲಾ. ಇವತ್ತಿನ ಹುಡುಗೀನೂ ನನ್ನ ಮನಸ್ಸಿಗೆ ಬಂದಿಲ್ಲ. ಈ ವಿಷಯದಾಗ ನನಗ ಒತ್ತಾಯ ಮಾಡಬ್ಯಾಡ' ಎಂದು ಹೇಳಿ ಚಂದ್ರಕಾಂತ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡನು.

ರುಮಾಲು ಕಳಚುತ್ತಿದ್ದ ಸೋಮಶೇಖರಯ್ಯ ಹೆಂಡತಿಯ ಕಡೆಗೆ ತಿರುಗಿ, 'ನೋಡು ನಿನ್ನ ಅಚ್ಛಾದ ಫಲ. ನಿನ್ನ ಮಗನೇ ನಿನ್ನ ಮಾತು ಕೇಳೂದಿಲ್ಲ' ಎಂದರು.

ಸೋಫಾದಲ್ಲಿ ಒರಗಿದ್ದ ಗೌರಮ್ಮ 'ಹೌದು, ನಾನೊಬ್ಬಳs ಏನು ಅವನ್ನ ಸಾಕಿದ್ದು, ನೀವೂ ಅವ ಹೇಳಿದಾಂಗ ಕುಣಿದೀರಿ. ಕಾರು ಬೇಡಿದಾ ಕಾರು ಕೊಡಿಸಿದ್ರಿ. ರೇಡಿಯೋ ಬೇಡಿದಾ ತಂದ್ರಿ. ಮತ್ತ ಈಗ ಎಲ್ಲಾ ನನ್ನ ತಲಿಮ್ಯಾಲೇ ಹಾಕತೀರಲ್ಲ' ಎಂದರು.

ತಂದೆ-ತಾಯಿಗಳ ಮಾತು ಕೇಳುತ್ತಿದ್ದ ಅಕ್ಕಮ್ಮ 'ನೀವಿಬ್ಬರೂ ಕೂಡಿ ಪ್ರೀತಿ ಮಾಡಿದ್ದರ ಫಲ ಇದು. ನಿಮ್ಮಿಬ್ಬರಿಗೂ ಹೆದರೂದಿಲ್ಲ ಅವ. ಅವಾ ಬಯಸೂವಂಥಾ ರೂಪವತಿ ಸಿಗಬೇಕಾದ್ರ ಹಗಲು ದೀವಟಿಗೆ ಹಚ್ಚಬೇಕಾಗತದ ನೀವು' ಎಂದು ವ್ಯಂಗ್ಯವಾಗಿ ನಕ್ಕಳು.

***

ಮಲ್ಲಿಗೆ ಹೂವಿನಿಂದ ಚೆನ್ನಾಗಿ ಅಲಂಕೃತವಾಗಿದ್ದ ಮಂಚದ ಬಳಿಗೆ ತಾಂಬೂಲದ ತಟ್ಟೆ ಹಿಡಿದುಕೊಂಡು ಶಶಿ ಬಂದಳು. ಅವಳ ದಾರಿಯನ್ನೇ ಕಾಯುತ್ತಿದ್ದ ಚಂದ್ರಕಾಂತ ಎದ್ದು ಬಾಗಿಲು ಮುಚ್ಚಿದ. ಹೆಂಡತಿಯ ಮುಖವನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದುಕೊಂಡು ಒಂದೇ ಸಮನೇ ನೋಡಹತ್ತಿದ.

'ಹಾಂಗ ಯಾಕ ನೋಡತೀರಿ ನನ್ನs?'

'ಯಾಕ ? ನೋಡು ಶಶಿ, ಇಷ್ಟ ಛಂದನ್ನ ಕಣ್ಣು, ತೀಡಿದ ಹುಬ್ಬು, ನೆಟ್ಟನ್ನ ಮೂಗು ಕೆಂಪನ್ನ ತುಟಿ, ಗುಲಾಬಿ ಗಲ್ಲ, ಬಂಗಾರದ ಬಣ್ಣದ ಮೈ, ಗುಂಗುರು ಕೂದಲು ಇವೆಲ್ಲಾ ಇದ್ದಂಥಾ ಅಪ್ರತಿಮ ಸುಂದರಿ ಶಶಿ ನನ್ನಾಕಿ ಆದಳಲ್ಲಾ ಅಂತ ನೋಡತೀನಿ."

'ಹೋಗ್ರಿ, ನೀವೊಬ್ಬರು. ನಾಟಕದಾಗಿನ್ಹಾಂಗ ಮಾತಾಡತೀರಲ್ರಿ.?'

'ಇದು ನಾಟಕ ಅಲ್ಲಾ ಸಿನಿಮಾ ಅಲ್ಲಾ, ಖರೇ ಖರೇ ಅಂತs ಅಷ್ಟ ಸಂತೋಷ ಆಗೇದ ನನಗ.'

'ತೊಗೊಳ್ರಿ ಈ ಪಾನಪಟ್ಟಿ ನಿಮಗ, ಇದು ನನಗ.'

'ಈ ಕೆಂಪತುಟಿ ಕಂಡಕೂಡಲೆ ನೆನಪಾಗ್ತದ ನೋಡು: ನಾ ಸಣ್ಣಾವಿದ್ದಾಗ ನಮ್ಮ ಮನೀಗೆ ಒಬ್ಬ ಮುಸುರೀ ತಿಕ್ಕಾಕಿ ಬರತಿದ್ಲು. ಆಕಿ ಹೆಸರು ತುಳಸಿ. ನೋಡಲಿಕ್ಕೆ ಭಾಳಛಂದ ಇದ್ಲು ಆಕಿ. ಆಕೀನ್ನ ಕಂಡ ಕೂಡಲೇ ಓಡಿಹೋಗಿ ಮಾತಾಡ್ಸಿ ಅವ್ವ ಕೊಟ್ಟಿದ್ದ ತಿನಸ ಆಕಿಗೂ ಒಂದಿಷ್ಟ ಕೊಟ್ಟು ಆಕಿ ಹತ್ರ ಆಡಿ ಬರತಿದ್ದೆ. ಸ್ವಲ್ಪ ದಿನದ ಮ್ಯಾಲೆ ಆಕಿ ಟೈಫಾಯ್ಡ ಆಗಿ ಸತ್ತಳು. ಇನ್ನ ಆಕಿ ನಮ್ಮ ಮನೀಗೆ ಬರೂದಿಲ್ಲ ಅನ್ನೂದು ಕೇಳಿ ಎರಡು ದಿನ ಅತ್ತಿದ್ದೆ.'

'ದೇವರು ನಿಮ್ಮ ಮನಸ್ಸಿಗೆ ಒಪ್ಪುವಂಥಾ ನನ್ನಂಥಾಕೀನ್ನ ಹುಟ್ಟಿಸಿದಾs ಅಂತ ಲಗ್ನಾ ಮಾಡಿಕೊಂಡ್ರಿ. ಇಲ್ಲದಿದ್ರ ಬ್ರಹ್ಮಚಾರೀನ ಆಗತಿದ್ರ್ಯೋ ಏನೋ !'

'ನನ್ನ ಹುಟ್ಟಿಸಿದ ಆ ದೇವರಿಗೆ ನನ್ನ ಕಾಳಜಿ ಇರಲಿಕ್ಕೇ ಬೇಕಲ್ಲ !'

'ನನ್ನ ಯಾವ ಜನ್ಮದ ಪುಣ್ಯಾನೋ ನಿಮ್ಮಂಥ ಗಂಡನ್ನ ಆ ದೇವರು ದೊರಕಿಸಿಕೊಟ್ಟಾನ. ಆದ್ರೂ ಚೆಲುವಿಕೀ ಹುಚ್ಚು ಅತೀಯಾಗಿರಬಾರ್ದು ನೋಡ್ರಿ, ಮುಖ್ಯ ಗುಣಾ ಛೋಲೋ ಇದ್ರ ಆತು.'

'ಇರಲಿರಲಿ. ಆ ವೇಂದಾಂತ ಈಗ್ಯಾಕ' ಎನ್ನುತ್ತಲೇ ಚಂದ್ರಕಾಂತ ದೀಪ ಆರಿಸಿದ.

***

'ಅವ್ವಾ' 'ಅವ್ವಾ' ಎಂದು ಧಾವಿಸಿ ಕರೆಯುತ್ತ ಬಂದ ಚಂದ್ರಕಾಂತ.

'ಏನೋ ಚಂದ್ರೂ ಅಷ್ಟ್ಯಾಕ ಗಡಿಬಿಡಿ ?'

'ಆಕಿ ತವರ್ಮನಿಯಿಂದ ಟ್ರಂಕಾಲ್ ಬಂತು ಅಂಗಡಿಗೆ 'ಲಗೂ ಹೊರಟ ಬರ್ರಿ' ಅಂತ. ಮನೀಕಡೆ ಬರೂದೊರಳಗ ತಾರೂ ಬಂತು. ಅಪ್ಪ ತನಗ ಈಗ ಎಷ್ಟೂ ಪುರಸತ್ತಿಲ್ಲ ಅಂತಾನ. ನೀ ಬರತೀಯೇನವಾ ನನ್ನ ಕೂಡ. ಹೋಗಿಬರೂಣ ಬಾ ಏನಾಗೇದೋ ಏನೋ.'

"ಹಾಂಗ್ಯಾಕ ಗಾಬರ್ಯಾಗತೀದಿ ಬಿಡು. ಅಕ್ಕಮ್ಮಗ ಹೇಳಿಕಳಸ್ತೀನಿ ಎರಡ ದಿನ ಬಂದು ಇದ್ದು ಮನೀ ನೋಡಿಕೋ ಅಂತ. ನಾವಿಬ್ರೂ ಹೋಗೋಣ. ಶುಕ್ರವಾರ ಸಂಜೀಹೊತ್ತು-ಏನ ಸುದ್ದಿಯೋ ಏನೋ, ದೇವರ ಮುಂದ ದೀಪಾ ಹಚ್ಚಿ ಬರತೀನಿ."

"ಲಗೂನ ತಯಾರಾಗಬೇಕವಾ ; ಎಂಟೂವರಿಗೆ ಗಾಡಿ ಆದ. ನಾನೂ ಸೂಟಕೇಸಿನ ಸಾಮಾನು ತುಂಬತೇನಿ."

ಗಾಡಿಯಲ್ಲಿ ಕುಳಿತರೂ ಅದೇ ಕಳವಳ ಚಂದ್ರಕಾಂತನಿಗೆ. ಇನ್ನ ಶಶಿಗೆ ಏನಾಗಿದೆಯೊ ಏನೋ ? ಸ್ಥಳ ಸಾಕಷ್ಟಿದ್ದರೂ ಮಲಗಲು ಮನಸ್ಸು ಮಾಡಲಿಲ್ಲ. ಅವ್ವನಿಗೆ ಮಲಗಲು ಹೇಳಿ ಪೇಪರ ಓದುತ್ತ ಕುಳಿತ. ಅದೂ ಬೇಸರವಾಯಿತು, ಎದುರಿಗೆ ಕುಳಿತವರನ್ನು ಪರಿಚಯ ಮಾಡಿಕೊಂಡು ಹರಟೆ ಹೊಡೆದ. ಆದರೂ ಮನಸ್ಸು ಶಶಿಯ ಹತ್ತಿರವೇ!

ಇವರ ಆಗಮನದ ವಿಷಯ ಮೊದಲೇ ತಿಳಿದುಕೊಂಡಿದ್ದ ಮಾವನವರೇ ಸ್ವತಃ ಸ್ಟೇಶನ್ನಿಗೆ ಬಂದಿದ್ದರು. ಇಳಿದೊಡನೆಯೇ ಕೇಳಿದ ಚಂದ್ರಕಾಂತ 'ಏನು ಸಮಾಚಾರ?' ಎಂದು. ಅವರಿಂದ ಸರಿಯಾದ ಉತ್ತರ ಬರಲೇ ಇಲ್ಲ. ಕೆಮ್ಮಿ ಗಂಟಲು ಸರಿ ಮಾಡಿಕೊಂಡು 'ಮನೆಗೆ ನಡೆಯಿರಿ' ಎಂದರವರು.

ಕೋಣೆಯಲ್ಲಿ ಕಾಲಿಟ್ಟೊಡನೆಯೇ ಎದುರಿಗೆ ಕಂಡದ್ದು ಬ್ಯಾಂಡೇಜ್ ಕಟ್ಟಿದ ಶಶಿಯ ದೇಹ. ಮಂಚದ ಹತ್ತಿರ ಧಾವಿಸಿ ಹೋದ. ಅರ್ಧ ಮುಖ ಬಿಟ್ಟು ಉಳಿದರ್ಧ ಮುಖ ಬ್ಯಾಂಡೇಜಿನಲ್ಲಿ ಮುಚ್ಚಿತ್ತು. ತನ್ನ ಶಶಿ ಇವಳೇ ಹೌದೋ ಅಲ್ಲವೋ ಎಂಬ ಅನುಮಾನವಾಯಿತವನಿಗೆ. ಸಮೀಪಕ್ಕೆ ಬಗ್ಗಿ ನೋಡಿದ; ಎದೆ ಬಡಿತ ನಿಂತಂತಾಯಿತು. ಕಣ್ಣಿಗೆ ಕತ್ತಲು ಬಂದಿತು.

"ಚಕ್ಕಲೀ ಕರೀತಿದ್ದೆ, ಎಲ್ಲಾ ಮುಗದು ಕಡೇ ಒಂದು ಒಬ್ಬಿ ಉಳದಿತ್ತು-ನೋಡ್ರಿ, ಶಶಿ ತಾನೇ ಕರೀತಿನಿ ಅಂತ ಬಂದ್ಲು. ಬ್ಯಾಡ ಅಂದ್ರೂ ಕೇಳಲಿಲ್ಲ. ನನ್ನ ಎಬ್ಬಿಸಿ ತಾನೇ ಕೂತಳು. ಎರಡು ಚಕ್ಲಿ ಎಣ್ಣಿಯೊಳಗ ಹಾಕುದರೊಳಗs ಪಾಂತಿ ಬಂದಾಂಗ ಆತಂತ. ಬಚ್ಚಲಿಗೆ ಹೋಗಬೇಕು ಅಂತ ಎದ್ದು ನಿಂತಾಳ. ಕಣ್ಣಿಗೆ ಕತ್ತಲ ಬಂದ್ಹಾಂಗಾಗಿ ಎಣ್ಣಿ ಕಡಾಯಿಗೆ ತಲಿ ಬಡದು ಬಿದ್ದಳು. ಬಲಭಾಗದ ಹುಬ್ಬು, ಕಿವಿ, ಗಲ್ಲ ಕುತಿಗಿ ಎಲ್ಲಾ ಸುಟ್ಟದ." ಶಶಿಯ ತಾಯಿ ದುಃಖಿಸುತ್ತ ಕಣ್ಣೊರಸಿಕೊಂಡರು.

"ಪಾಂತಿ ಯಾಕ? ಪಿತ್ತೋ ಏನು ಏನರೇ ...." ಎಂದು ಅರ್ಧಕ್ಕೇ ನಿಲ್ಲಿಸಿದರು ಗೌರಮ್ಮ.

"ಇಲ್ರಿ, ನಿಮ್ಮಲ್ಲಿಂದ ಬಂದ ಮ್ಯಾಲೆ ಆಕಿ ತಲಿಗೆ ನೀರs ಹಾಕ್ಕೊಂಡಿಲ್ಲಾ- ಒಂದೂವರೆ ತಿಂಗಳಾಗಿತ್ತು. ದಿನಾs ವಾಂತಿಯಾಗತಿತ್ತು. ಬಯಕೀ ಅಂತs ಚಕ್ಕಲಿ ಮಾಡತಿದ್ದೆ. ಆದರೆ ಈ ಅನಾಹುತದಾಗ ಅದು ಸುಳ್ಳಾತು. ನರ್ಸ ಬಂದಿದ್ದು ಮುಂಜಾನೆ. ನಮ್ಮ ಪುಣ್ಯೇಕ ಬೆಂಕಿ ಮೈಗೆ ಹತ್ಲಿಲ್ಲಾ. ಇಲ್ಲದಿದ್ರ ಹುಡುಗಿ ಕೈಗೇ ಸಿಗತಿದ್ದಿಲ್ಲ.

ಗಂಡನ ಮುಖ ನೋಡಿದ ಶಶಿ "ಜೀವಂತ ಇರೂದಕಿಂತ ಸುಮ್ಮನs ಹೋಗಿದ್ರ ಛೋಲೋ ಇತ್ತ ನೋಡವಾ" ಎಂದಳು ಕ್ಷೀಣ ಧ್ವನಿಯಲ್ಲಿ.

"ಇರಲಿ ಬಿಡವಾ. ಇನ್ನೂ ಸಣ್ಣಾಕಿ, ಆಗೂದದ ಹೋಗೂದದ. ಹಾಂಗೆಲ್ಲ ಅಡಬಾರದು"ಎಂದರು ಗೌರಮ್ಮ.

ಶಶಿಯ ಒಂದೇ ಕಣ್ಣಿನಿಂದ ನೀರು ಸುರಿಯುತ್ತಿತ್ತು. ಇನ್ನೊಂದು ಕಣ್ಣು ಬ್ಯಾಂಡೇಜಿನಲ್ಲಿತ್ತು. ಕಡಾಯಿಯ ಮೇಲೆ ಬೀಳುವಾಗಲೇ ಕಣ್ಣು ಮುಚ್ಚಿದ್ದರಿಂದ ದೃಷ್ಟಿಗೇನೂ ಧಕ್ಕೆಯಾಗಿರಲಿಲ್ಲ. ಎವೆ, ಹುಬ್ಬು ಹಾಗೂ ಗಲ್ಲ ಸುಟ್ಟು ವಿರೂಪವಾಗಿತ್ತು.

ಚಂದ್ರಕಾಂತ ಹೆಂಡತಿಯ ಕೈಹಿಡಿದುಕೊಂಡು ಸುಮ್ಮನೇ ಕುಳಿತ. ಅವನ ಜೀವನದಲ್ಲೇ ಇದು ಮೊದಲನೆಯ ಆಘಾತ. ಮಾತನಾಡಲು ಅವನಿಗೆ ಬಾಯಿಯೇ ಬರಲಿಲ್ಲ. ಹೃದಯ ಭಾರವಾಗಿತ್ತು. ಮುಂದಿನ ಬಾಳನ್ನು ನೆನೆದು ಮನಸ್ಸು ಖಿನ್ನವಾಯಿತು. ಗೌರಮ್ಮ ಇಬ್ಬರ ಪಾಲಿನ ಮಾತುಗಳನ್ನೂ ಆಡಿ ಸೊಸೆಯನ್ನು ಸಾಂತ್ವನಗೊಳಿಸಿದರು. ಎಷ್ಟಾದರೂ ಗೌರಮ್ಮನದು ಹೆಂಗರುಳು. ಸೊಸೆಯ ದುರವಸ್ಥೆಯನ್ನು ನೆನೆದು ಅವರು ಮನ ಕಳವಳಗೊಳ್ಳುತ್ತಿತ್ತು. ಚೆಲುವೆ ಹೆಂಡತಿಯನ್ನು ಪಡೆದೆನೆಂಬ ಹೆಮ್ಮೆಯಿದ್ದ ಚಂದ್ರಕಾಂತನಿಗೆ ಮುಖ ಮುರಿದಂತಾಗಿತ್ತು. ಅವಳ ವಿರೂಪವನ್ನು ನೋಡಲು ಮನಸ್ಸಾಗದೆ ಮತ್ತೊಂದು ಸಲ ಅವಳ ಕೋಣೆಯಲ್ಲಿ ಕಾಲಿಡದೆ ಹಿಂತಿರುಗಿದ.

***

ಚಂದ್ರಕಾಂತ ನಿಲುವುಗನ್ನಡಿಯಲ್ಲಿ ನೋಡುತ್ತ ಟೈ ಬಿಚ್ಚುತ್ತಿದ್ದ.

"ಮ್ಯಾಚ ಈಗ ಮುಗಿತೇನಪಾ ಚಂದ್ರೂ, ಹೊತ್ತಾತು ಹಸಿವಿ ಆಗಿರಬೇಕಲ್ಲ?"

"ಹೌದಕ್ಕಾ, ಒಂದೂವರಿ ಹೊಡೀತು ನೋಡು. ಆದ್ರೂ ಹಸಿವಿ ಏನೂ ಆಗಿಲ್ಲಾ. ಗೆಳೆಯರು ಕೂಡಿದ್ರು. ಇಡ್ಲಿ, ದೋಸೆ ಹೊಡೆದೆವು ಹೊಟೇಲಿನಾಗ."

"ಯಾವಾಗಲೂ ಗೆಳೆಯರು, ಹೊಟೆಲ್ಲು, ಕ್ರಿಕೆಟ್ ಮ್ಯಾಚು ಇದರಾಗ ಇರತೀಯಲ್ಲಪಾ" ಸ್ವಲ್ಪ ಮನೀ ಕಡೇ ಲಕ್ಷ್ಯ ಕೊಡಲ್ಲ!"

"ಯಾಕ ? ಈಗೇನಾತು? ಅಪ್ಪ ಊರಿಗೆ, ಅದು ಹೋದಾಗ ಅಂಗಡಿ ನಾನs ನೋಡಿಕೋತಿನಲ್ಲ?"

"ಅಂಗಡಿ ಅಲ್ಲಪಾ ನಾ ಅಂದದ್ದು, ಮನೀ ಕಡೇ ಅಂದೆ. ನಾನು ಗಂಡನ ಮನೆಗೆ ಹೋದಾಗ ಅವ್ವ ಒಬ್ಬಾಕಿನs ಆಗ್ತಾಳ ಮನ್ಯಾಗ. ಶಶಿನ ತವರ್ಮನ್ಯಾಗ ಬಿಟ್ಟು ಎರಡು ವರುಷ ಆತು. ಯಾವಾಗ ಕರಸಾಂವಾ ಇನ್ನೂ?"

"ಮತ್ತ ಮತ್ತ ಆ ಮಾತು ಯಾಕ ಕೇಳತೀರಿ ನನ್ನ ? ನನಗ ಆಕೀನ್ನ ಕರಕೊಂಡ ಬರೂ ಮನಸ್ಸಿಲ್ಲಾ."

ಅವನ ನಿಷ್ಕರುಣೆಯ ನುಡಿ ಕೇಳಿ ವ್ಯಥಿತಳಾದ ಅಕ್ಕಮ್ಮ,

"ಯಾಕೆ ಚಂದ್ರೂ? ಆಕೀ ನಿನ್ನ ಎಷ್ಟ ಪ್ರೀತಿ ಮಾಡ್ತಾಳ. ನಿನಗ ಎರಡು ಮೂರು ಪತ್ರಾ ಬರದ್ಲಂತ, ನೀ ಉತ್ತರಾ ಸುದ್ಧಾ ಹಾಕಲಿಲ್ಲ. ನನಗ ಪತ್ರಾ ಬರದು ನಿನ್ನದೊಂದು ಫೋಟೋ ತರಿಸಿಕೊಂಡಾಳ. ಹಗಲು ರಾತ್ರಿ

ಅದರ ಮುಂದ ಕೂತು ನಿನ್ನ ಧ್ಯಾನ ಮಾಡೂದs ಅಕಿ ಕೆಲಸ ಅಂತ ಮೊನ್ನಿನ ಪತ್ರದಾಗ ಬರದಿದ್ಲು. ಭಾಳ ಗುಣವಂತಿ ಹುಡುಗಿ. ನೀ ಬರೂ ಮುಂದ ಆಕೀನ್ನ ಮಾತಾಡ್ಸಿ ಬರಲಿಲ್ಲಂತ. ನನಗ ಅತ್ತು ಪತ್ರಾ ಬರದಿದ್ಲು" ಎಂದಳು.

"ನೀ ಏನs ಹೇಳು, ಆ ಸುಟ್ಟ ಮಾರಿಯಾಕಿನ್ನ ತೊಗೊಂಡು ಏನ ಮಾಡ್ಲಿ ನಾನು, ಆಕೀ ಮಾರೀ ನೋಡಲಿಕ್ಕೆ ಮನಸ್ಸಾಗೂದಿಲ್ಲ."

"ಅಲ್ಲ ಚಂದ್ರೂ ಹಾಂಗನಬಾರದು ಅದು ರೀತಿ ಅಲ್ಲಾ, ಏನೋ ಕಾಡಾಟ್ಟಕ್ಕ ಹಾಂಗಾತು. ಈಗ ಎರಡು ವರ್ಷದೊಳಗ ಎಷ್ಟೋ ಸುಧಾರಿಸ್ಯಾಳಂತ; ನೀ ನೋಡಲಿಕ್ಕೆ ಹೋಗಲಿಲ್ಲ."

"ಏನು ಸುಧಾರಿಸಿದರೂ ಮೊದಲಿನ ರೂಪ ಬರೂದಿಲ್ಲ ನೋಡು."

"ರೂಪ ರೂಪ ಅಂತ ಬರೇ ಅದನ್ನs ನೋಡಿಕೋತ ಕೂತರ ಹ್ಯಾಂಗ ನೋಡು. ಹೆಣ್ಣ ಜೀವ. ತವರ್ಮನಿಯೊಳಗ ಎಷ್ಟ ದಿನಾ ಅಂತ ಕಳಿಬೇಕು. ನನಗ ಮೂರನೆಯದೂ ಹೆಣ್ಣs ಹುಟ್ಟಿದಾಗ ನಮ್ಮ ಯಜಮಾನ್ರು ಲಗೂನ ಕರೀಲಿಕ್ಕೆ ಬರಲಿಲ್ಲಾ. ಆವಾಗ ಎಲ್ಲಾ ಅನುಭೋಗಿಸೇನಿ. ಅಪ್ಪಗೂ ಅವ್ವಗೂ ನೀ ಹೀಂಗ ಮಾಡೂದು ಮನಸ್ಸಿಗೆ ಬರೂದಿಲ್ಲ."

"ಆಕೀನ್ನ ಸಾಕೂದು ಅವರಪ್ಪಗ ಒಜ್ಜೆಯಾಗಿದ್ದರ ಹೇಳ ಅನ್ನು, ಅಪ್ಪಗ ಹೇಳಿ ವರ್ಷಾ ಆಕೀ ಖರ್ಚಿಗೆ ಕೊಡಸ್ತೀನಿ."

"ಮನಿಯೊಳಗ ನಿನ್ನ ಮಾತು ನಡೀತದಂತ ಹಿಂಗೆಲ್ಲಾ ಆಡಬಾರದು. ಮುಂದ ಏನ ಮಾಡಬೇಕಂತೀ ನೀನು ? ನಿನ್ನ ವಿಚಾರ ಸಂಪೂರ್ಣ ತಿಳಕೊಳ್ಳಲಿಕ್ಕೆ ಅಪ್ಪ ಇವತ್ತ ನನ್ನ ಇಲ್ಲಿ ಕಳಿಶ್ಯಾರ."

"ಹೀಂಗs...."

"ಇಲ್ನೋಡು ಇನ್ನೊಂದು ಮಾತು: ಈ ಮಾತು ಇಷ್ಟು ಕಟ್ಟಿಗೆ ಹಚ್ಚಲಿಕ್ಕೆ ಕಾರಣಂದ್ರ ಇವತ್ತ ಮುಂಜಾನೆ ಶಶಿ ಅಪ್ಪ ಬಂದಿದ್ರು. ಅವರಂದ ಮಾತು ನಿನ್ನ ಕಿವೀಮ್ಯಾಲೆ ಇಡಬೇಕು ಅಂತ ಅನಿಸೇದ ನನಗ."

"ಏನಂದ್ರು?"

"ನಮ್ಮ ಶಶಿ ದಿನಾ ಕೊರಗೋದು ನೋಡಿದ್ರ ನಮ್ಮ ಹೊಟ್ಯಾಗ ಸಂಕಟ ಆಗ್ತದ. ಇನ್ನೊಂದು ಲಗ್ನದ ಮಾತು ನೀವೊಂದು ವ್ಯಾಳ್ಯೆ ತಗದ್ರ ನನಗ ಸಿಟ್ಟು ಬರತದ. ನಿಮ್ಮ ಚಂದ್ರಕಾಂತಗ ಏನಾರೇ ಆಘಾತ ಆಗಿ ಕುಂಟೋ ಕುರುಡೋ ಆಗಿದ್ರ ನಮ್ಮ ಶಶಿ ಅವನ್ನ ಬಿಟ್ಟು ಬ್ಯಾರೆ ಮದವಿ ಮಾಡೀಕೋತಿದ್ದಳೇನು? ನಾ ಭಾಳ ನಿಷ್ಠುರ ಆಗಿ ಮಾತಾಡತೇನಿ. ಅದಕ್ಕ ಕಾರಣ ನನ್ನ ಹೊಟ್ಟೀ ಕರುಳು ಒಣಗಲಿಕ್ಕೆ ಹತ್ತೇದ ಇಲ್ಲೆ. ನೀವು ನಿಮ್ಮ ಮಗನಿಗೆ ಸಮಾಧಾನ ಹೇಳಿ ನಿಮ್ಮ ಮನೀ ಲಕ್ಷ್ಮೀನ ಕರೆಸಿಕೋಳ್ರಿ' ಅಂತ ಹೇಳಿ ಕಣ್ಣೀರ ತೆಗೆದರು. ಅಪ್ಪಗೂ ಭಾಳ ಕೆಟ್ಟನಿಸಿತು. ನೀ ಇರಾಂವ ಒಬ್ಬ ಮಗ; ಅವರ ಮನಸ್ಸಿಗೆ ತ್ರಾಸ ಮಾಡಬಾರದಪಾ ಅಂತಾ ಹೇಳಲಿಕ್ಕೆ ಬಂದೆ. ನೀನೂ ವಿಚಾರ ಮಾಡಿ ನೋಡು' ಎಂದು ಅಕ್ಕ ಮೆಟ್ಟಿಲಿಳಿದಳು.

ಚಂದ್ರಕಾಂತನ ಕಿವಿಯಲ್ಲಿ ಇನ್ನೂ ಅಕ್ಕನ ಮಾತುಗಳೇ ಸುತ್ತುತ್ತಿದ್ದವು. ನಿಲುವುಗನ್ನಡಿಯಲ್ಲಿ ತನ್ನನ್ನೇ ನೋಡಿಕೊಂಡ. ತನಗೇನಾದರೂ ಆಗಿದ್ದರೆ ? ಕುಂಟನಾಗಿದ್ದರೆ ? ಕುರೂಪಿಯಾಗಿದ್ದರೆ ? ಆ 'ರೆ' ಸಾಮ್ರಾಜ್ಯ ತುಂಬಾ ಭಯಾನಕವಾಗಿ ಕಂಡಿತವನಿಗೆ. ತಲೆ ಹಿಡಿದುಕೊಂಡು ಕುರ್ಚಿಯಲ್ಲಿ ಕುಳಿತ. ತನಗೇನು ಆಗಿದ್ದರೂ ಶಶಿ ತನ್ನ ಕೈ ಬಿಡುತ್ತಿರಲಿಲ್ಲ. ತನ್ನ ಶಶಿ ತನ್ನ ಬಗ್ಗೆ ಸಹಾನುಭೂತಿಯನ್ನೇ ತೋರಿಸುತ್ತಿದ್ದಳು. ಆದರೆ ಈಗ ತನಗೇನೂ

ಆಗಿಲ್ಲವಲ್ಲ. ಮುಖ ಮೇಲೆತ್ತಿ ನೋಡಿದ. ತನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ತಂದೆ-ತಾಯಿಗಳ ಭಾವಚಿತ್ರ ದಿಟ್ಟಿಸಿದ. ಅವರ ಮನಸ್ಸಿಗೆ ಶಾಂತಿ ತಂದು ಕೊಡಬೇಕು, ಎಂದು ನಿಶ್ಚಯಿಸಿ ಶಶಿಯ ಮೊದಲಿನ ಭಾವಚಿತ್ರದತ್ತ ನೋಡಿ "ನಿನಗಿನ್ನೂ ನನ್ನ ಮನೆಯಲ್ಲಿ ಸ್ಥಾನವಿದೆ. ಆದರೆ ನನ್ನ ಹೃದಯದಲ್ಲಿಲ್ಲ" ಎಂದು ಮನಸ್ಸಿನಲ್ಲಿಯೇ ನುಡಿದು ಅಕ್ಕನಿಗೆ ತನ್ನ ನಿರ್ಧಾರ ತಿಳಿಸಲು ಕೆಳಗಿಳಿದು ಹೋದ.

***

"ಚಂದ್ರೂ ಒಂದು ಮಾತು ಹೇಳೂದಿತ್ತು."

"ಏನಕ್ಕಾ? ಕ್ರಿಕೆಟ್ ಮ್ಯಾಚಿಗೆ ಹೊಂಟೇನಿ, ಬರೂವಾಗ ಪ್ಯಾಟ್ಯಾಗಿಂದ ಏನರೇ ತರಬೇಕೇನು?"

"ನನಗೇನೂ ಬ್ಯಾಡಪಾ, ಶಶಿಗೆ ನಾಲ್ಕು ತಿಂಗಳು ಮುಗೀತ ಬಂತು. ಹಾಂಗ ಯಾವಾಗಲೂ ಮನಿಯೊಳಗ ಇರಬಾರದು. ಹೊರಗಿನ ಗಾಳಿ ಬೆಳಕಿಗೆ ಹೋದರ ಆಕೀ ಆರೋಗ್ಯಾನೂ ಸುಧಾರಿಸ್ತದ. ದಿನದಿನಕ್ಕೆ ಸೊರಗಲಿಕ್ಕೆ ಹತ್ಯಾಳ. ಸ್ವಲ್ಪ ಹೊರಗ ಕರಕೊಡು ಅಡ್ಡ್ಯಾಡಿ, ಹಾಂಗs ಡಾಕ್ಟರಿಗೆ ತೋರಿಸಿಕೊಂಡು ಬಾರಲ್ಲ; ನಿನ್ನ ಮ್ಯಾಚ್ ಯಾವಾಗಲೂ ಇದ್ದs ಇರ್ತದ."

"ಹೂಂ ಇದೊಂದು ಬಾಕೀ ಅದ. ಈ ಕೆಲಸ ನನ್ನಿಂದ ಆಗೂದಿಲ್ಲಾ. ಡಾಕ್ಟರರ ಹತ್ತಿರ ಬೇಕಾದರ ನೀನರ ಅವ್ವರ ಕರಕಂಡು ಹೋಗ್ರಿ. ನನ್ನ ಜೋತೀಗೆ ಬ್ಯಾಡಾ."

ಇವರ ಮಾತು ಕೇಳುತ್ತ ನಿಂತ ಶಶಿ "ನನಗೇನೂ ಆಗಿಲ್ಲಾ. ಔಷಧ ಯಾಕ ? ಡಾಕ್ಟರರು ಯಾಕ? ಏನೂ ಬ್ಯಾಡಾ. ನಿಮಗೆ ಮ್ಯಾಚಿಗೆ ಹೊತ್ತಾಗತದ ಹೋಗ್ರಿನ್ನ" ಎಂದಳು.

ಬೂಟು ಹಾಕಿಕೊಂಡು ಹೊರಡಲು ಸಿದ್ಧನಾಗಿದ್ದ ಚಂದ್ರಕಾತ 'ಮಾಮಾ' 'ಮಾಮಾ' ಎಂದು ಓಡುತ್ತ ಬಂದ ಎದುರು ಮನೆಯ ಸರಿತಾಳನ್ನು ಎತ್ತಿಕೊಂಡು ಮುದ್ದು ಕೊಟ್ಟು ಅವಳ ಕೈಯಲ್ಲಿ ಚಾಕಲೇಟನ್ನಿಟ್ಟ.

ಅದನ್ನು ನೋಡುತ್ತಿದ್ದ ಅವನ ಅಕ್ಕ, "ಮಂದೀ ಮಕ್ಕಳ್ನ ಕಂಡರ ಎಷ್ಟ ಪ್ರೀತಿ ಮಾಡತೀ ನಾಳೆ ನಿನಗೂ ಅಂಥಾ ಹುಡುಗೀನ ಹುಟ್ಟತಾಳೇಳು" ಎಂದಳು.

'ಹೂ, ಇಷ್ಟ ಛಂದನ್ನ ಹುಡುಗಿ ನನಗ ಹುಟ್ಟತದs" ಎಂದು ತಿರಸ್ಕಾರದ ನಗೆ ನಗುತ್ತ ಹೊರಗೆ ಹೋದ.

ತನ್ನ ಕಣ್ಣೀರು ನಾದಿನಿಗೆ ಕಾಣಬಾರದೆಂದು ಶಶಿ ಮುಖ ಹೊರಳಿಸಿದಳು.

***

ಶಶಿಗೆ ರಾತ್ರಿಯೇ ಹೆರಿಗೆಯಾದ ಸುದ್ದಿ ತಿಳಿದಿತ್ತು. ನೋಡಲು ಹೋಗಬಾರದೆಂದು ನಿರ್ಧಾರ ಮಾಡಿದ್ದರೂ ಕುತೂಹಲ ಕೇಳಲಿಲ್ಲ. ಬೆಳಗಾದೊಡನೆಯೇ ಆಸ್ಪತ್ರೆಗೆ ಓಡಿಬಂದಿದ್ದ ಚಂದ್ರಕಾಂತ. ಸ್ಪೆಶಲ್ ವಾರ್ಡಿನ ಕೋಣೆಯಲ್ಲಿ ಕಾಲಿಡುವಾಗ ಅವನ ಕಾಲು ನಡುಗುತ್ತಿದ್ದವು. ಎದೆಯ ಬಡಿತ ತೀವ್ರವಾಗಿತ್ತು. ಅಂಥ ಚಳಿಯಲ್ಲಿಯೂ ಹಣೆಯ ಮೇಲೆ ಬೆವರು ಹನಿ ಮೂಡಿದ್ದವು. ತೊಟ್ಟಿಲ ಹತ್ತಿರ ಬಂದು ಸೊಳ್ಳೆ ಪರದೆ ಸರಿಸಿದಾಗ ಅವಾಕ್ಕಾಗಿ ನಿಂತುಕೊಂಡ. ಎಷ್ಟು ಸುಂದರವಾದ ಮಗು ! ತನ್ನ ಕಣ್ಣುಗಳನ್ನೇ ನಂಬಲಿಲ್ಲ. ಕಣ್ಣು ಹೊರಳಿಸಿಕೊಂಡು ಮತ್ತೆ ನೋಡಿದ; ಗಂಡು ಮಗು. ಅದನ್ನು ನೋಡಿದರೆ ಎಲ್ಲೋ ಕಂಡ ಹಾಗೆ ನೆನಪು ಬರುತಿತ್ತು. ಓ! ತನ್ನ ಕೋಣೆಯಲ್ಲಿ ಮರ್ಫಿ ರೇಡಿಯೋದ ಜಾಹೀರಾತಿನ ಕ್ಯಾಲೆಂಡರೊಂದನ್ನು ಹಾಕಿದ್ದ. ಅದರಲ್ಲಿದ್ದ ಮಗುವಿನ ಹಾಗೆಯೇ ಕಾಣುತ್ತಿದೆ ತನ್ನ ಮಗು. ಅಲ್ಲ ಅಲ್ಲ; ಇದು ಶಶಿಯ ಮಗು. ಮೊದಲು ಶಶಿ ಹೀಗೆಯೇ ಇದ್ದಳು. ಅವಳದೇ ತದ್ರೂಪು. ಬಿಳಿಯ ಹೊದಿಕೆಯ

ಆವರಣದಲ್ಲಿದ್ದ ಮಗು ಹಿಮದಲ್ಲಿ ಇಟ್ಟ ಗುಲಾಬಿ ಹೂವಿನಂತೆ ಇತ್ತು. ಸುಖವಾಗಿ ನಿದ್ರಿಸುತ್ತಿತ್ತು. ನಿದ್ರೆಯ ಜೊಂಪಿನಲ್ಲಿಯೇ ಒಂದು ಸಲ ಮುಗುಳು ನಕ್ಕಿತು. ಚಂದ್ರಕಾಂತನ ಮುಖ ಅರಳಿತು. ಬಾಗಿ ಅದರ ಹಣೆಯ ಮೇಲೆ ಹಗುರಾಗಿ ಮುತ್ತಿಟ್ಟು, ಶಶಿಯೆಡೆಗೆ ಹೊರಳಿ ನೋಡಿದ. ಸೋತು ಸೊರಗಿದ ಅವಳು ಕಣ್ಣುಮುಚ್ಚಿ ಒರಗಿದ್ದಳು. ಮಂಚದ ಬದಿಗೆ ಬಂದು ಅವಳ ತಲೆಕೂದಲನ್ನು ಮೃದುವಾಗಿ ನೇವರಿಸಿದ, ಶಶಿ ಕಣ್ಣು ತೆರೆದಳು; ಕಂಬನಿ ಜಾರತೊಡಗಿದವು.

ಆ ಕಂಬನಿಗಳಲ್ಲಿ ಚಂದ್ರಕಾಂತನಿಗೆ ತನ್ನ ಹೃದಯವೇ ಪ್ರತಿಬಿಂಬಿತವಾದಂತೆ ಕಂಡಿತು. ಎಷ್ಟು ಅಗೆದರೂ ನೀರು ಬೀಳದ ಬಾವಿಯಲ್ಲಿ ಒಮ್ಮೆಲೇ ನೂರು ಸೆಲೆಗಳು ಚಿಮ್ಮಿದವು.

***

# ದೂರದ ಗುಡ್ಡ

ಟ್ರನ್ ನ್ ನ್ ನ್ ನ್ ನ್ .... .... ....

ಅಲಾರಾಂ ಹೊಡೆಯುತ್ತಲೇ ಇತ್ತು. ಸರಸೂ ನಿಧಾನವಾಗಿ ಮುಸುಕು ಸರಿಸಿ ಅದರ ಸದ್ದು ಅಡಗಿಸಿದಳು.

ಗಂಟೆ ಐದಾಗಿತ್ತು. ಹಾಸಿಗೆ ಬಿಟ್ಟೇಳಲು ಮೈ ಒಪ್ಪಲಿಲ್ಲ. ಮಗ್ಗುಲಿಗೆ ಹೊರಳಿದಳು. ಬೆನ್ನು, ನಡ, ಕೈಕಾಲು ತುಂಬಾ ನೋವು. ಈಗ ಎರಡು ಮೂರು ದಿನಗಳಿಂದ ಊಟ ಸರಿಯಾಗಿ ಮಾಡಿರಲೇ ಇಲ್ಲ. ಬೆಳಿಗ್ಗೆ ಎದ್ದೊಡನೆಯೇ ವಾಂತಿ. ಹೊಟ್ಟೆಯಲ್ಲಿ ಆಹಾರ ಹೋದರೆ ಸರಿ, ವಾಂತಿ ಸುರುವಾಗುತ್ತಿತ್ತು. ಹೀಗೇಕಾಗುತ್ತಿದೆ ಎಂಬುದು ಅವಳಿಗೆ ಗೊತ್ತು. ಅವಳೇನು ಹೊಸಬಳೇ? ಹೀಗೆ ಆಗುತ್ತಿರುವದು ಮದುವೆಯಾದ ಮೇಲೆ ಈಗ ನಾಲ್ಕನೆಯ ಸಲ ಅಲ್ಲವೆ ? ಮೂರು ಮಕ್ಕಳ ತಾಯಿಯಾಗಿ ಈಗ ನಾಲ್ಕನೆಯ ಜೀವ ಒಡಲಲ್ಲಿ ಮೂಡುತ್ತಿದೆ. ಅದಕ್ಕೇ ಈ ನೋವು; ಈ ಸಂಕಟ ಎಲ್ಲ; ಮಗ್ಗಲು ಕೋಣೆಯಿಂದ ಮಾವನವರು ಕೆಮ್ಮುವುದು ಕೇಳಿ ಬಂದಿತು.

ಗಂಟೆ ಈಗ ಐದೂವರೆ. ಈಗ ಏಳಲೇಬೇಕು. ಕುಮಾರ, ಸುಂದರಿ ಇವರಿಬ್ಬರಿಗೂ ಮುಂಜಾನೆ ಎದ್ದು ಬೇಗನೆ ನೀರೊಲೆಗೆ ಉರಿ ಹಾಕಿ ಚಹ ಮಾಡಬೇಕು. ಒಲ್ಲದ ಮನಸ್ಸಿನಿಂದಲೇ ಎದ್ದಳು. ಬಚ್ಚಲು ಮನೆಯಲ್ಲಿ ಮುಖ ತೊಳೆಯುವಾಗ ಧಡ್.... ಧಡ್.... ಧುಕ್ .... ಧುಕ್ .... ಟ್ರೇನಿನ ಸಪ್ಪಳ ಕೇಳಿಸಿತು. ಸಮೀಪದ ನಿಲ್ದಾಣದಿಂದ. ಅದು ಒಂದು ಯಂತ್ರ. ನಿತ್ಯದ ಕೆಲಸಗಳಿಗೆ ಮನಸ್ಸಿಲ್ಲದಿದ್ದರೂ ಕೈಕಾಲು ಹೇಗೆ ಓಡಾಡುತ್ತಿವೆ-ತಾನೂ ಒಂದು ಯಂತ್ರವೇ ಎಂದುಕೊಂಡಳು ಸರಸೂ.

ಶಾಲೆಗೆ ಹೊರಟ ಕುಮಾರ ತನ್ನ ಅಂಗಿ ಹರಿದಿದೆ ಎಂದು ತಕರಾರು ತೆಗೆದ. ಕಪ್ಪು ಬಸಿ ತೊಳೆಯುವುದನ್ನು ಬಿಟ್ಟು, ಬಂದು ಅವನ ಅಂಗಿಯನ್ನು ಹೊಲಿದುಕೊಟ್ಟಳು. ಸುಂದರಿ, ತನ್ನ ಅಕ್ಕಾ ಅವರು ಸೀಸ ಪೆನ್ಸಿಲ್ ತಾ ಎಂದಿದ್ದಾರೆ ಕೊಡು ಎಂದು ಜಗಳ ತೆಗೆದಳು. ಪೆನ್ಸಿಲ್ ಮಲಗುವ ಕೋಣೆಯಲ್ಲಿ ಮೇಜಿನ ಡ್ರಾದಲ್ಲಿತ್ತು. ಅದನ್ನು ತಂದು ಸುಂದರಿಗೆ ಕೊಟ್ಟು ಅದು ಅವಳ ತಂದೆಯದೆಂದೂ ಶಾಲೆಯಲ್ಲಿ ಕಳೆಯದೇ ತಿರುಗಿ ತರಬೇಕೆಂದೂ ಎಚ್ಚರಿಕೆ ಹೇಳಿದಳು ಮಗಳಿಗೆ ಸರಸೂ.

"ಒಂದು ಇನ್‌ಲ್ಯಾಂಡ್ ಲೆಟರ್ ತಂದು ಕೊಡಿ" ಸರಸೂ ಗಂಡನಿಗೆ ಕೇಳಿದ್ದಳು.

"ಯಾಕಃ? ನಿಮ್ಮ ಅಣ್ಣಗ ಬರೀತಿಯೇನು? ನಾ ಎಲ್ಲಾ ಮೊನ್ನೆ ಮೊನ್ನೆ ಬರದೀನೇಳು"

"ಅಣ್ಣಗ ಅಲ್ಲ. ನನ್ನ ಗೆಳತಿ ಶೀಲಾಗ ಬರೀಬೇಕಾಗಿತ್ತು."

"ಆಗಲಿ ತರ್‍ತೀನಿ"

ಆಗಲಿ ಎಂದಮೇಲೆ ಎರಡು ಮೂರು ದಿನ ಕಳೆದಿದ್ದವು. ತಡೆಯಲಾರದೆ ಮತ್ತೊಮ್ಮೆ ಕೇಳಿದಳು.

"ಏನು ದೊಡ್ಡ ಅರ್ಜೆಂಟ್ ಆಫೀಸ್ ಕೆಲಸ ಇದ್ದಾಂಗ ಬೆನ್ನಹತ್ತೀಯಲ್ಲಾ. ಬರಿಯೂವಂತಿ ನಾಳೆ ತರ್‍ತೀನಿ."

ಮತ್ತೆ ಎರಡು ದಿನ ಕಳೆದ ಮೇಲೆ ಇನ್‌ಲ್ಯಾಂಡ ಲೆಟರ್ ಸಿಕ್ಕಿತ್ತು ಸರಸೂಗೆ. ಒಂದು ಸಣ್ಣ ಮಾತಿಗೂ ಗಂಡನನ್ನೇ ಕೇಳಬೇಕು ತಾನು. ಗೆಳತಿ ಶೀಲಾ ತಾನೇ ದುಡಿದು ಹಣ ತರುವವಳು, ಅವಳೆಷ್ಟು ಸುಖಿ ಎಂದುಕೊಂಡಳು ಸರಸೂ.

ಹೆರಿಗೆಗೆ ತವರುಮನೆಗೆ ಬಂದ ನಾದಿನಿ ಲಲಿತಾ ಅಣ್ಣ ಎದ್ದು ಚಹ ಕುಡಿದ ಮೇಲೆಯೇ ಏಳುವವಳು. ಅವಳಿಗೆ ದಿನ ತುಂಬಿತ್ತು. ಎಷ್ಟೆಂದರೂ ಇದು ಅವಳ ತವರುಮನೆ. ಅವಳು ಸರಸೂಗೆ ಮನೆಗೆಲಸಕ್ಕೆ ನೆರವಾಗುವದಿರಲಿ, ತನ್ನ ಕೆಲಸವನ್ನೂ ಇವಳಿಂದಲೇ ಮಾಡಿಸದಿದ್ದರೆ ಅದೊಂದು ಉಪಕಾರ ಮಾಡಿದಂತಾಗುತ್ತಿತ್ತು.

ಮಾವನವರು ಎದ್ದು ಬಚ್ಚಲು ಕೋಣೆಗೆ ಹೋದದ್ದು ನೋಡಿ ಸರಸೂ ಎರಡನೆಯ ಸಲ ಚಹಕ್ಕಿಟ್ಟಳು. ತಲೆ ಬಾಚಿಕೊಳ್ಳುತ್ತಿದ್ದ ನಾದಿನಿಯನ್ನು ಕರೆಯಬಾರದೆಂದು ತಾನೇ ಒಯ್ದು ಚಹ ಕೊಟ್ಟಳು. ಮಾವನವರಿಗೆ. ಕೊಟ್ಟು ಬಂದು ಇನ್ನೂ ಅಡಿಗೆಯ ಮನೆ ಮುಟ್ಟಿರಲಿಲ್ಲ. "ಚಹಾ ಆರಿ ಹೋಗೇದ, ಒಂದಿಷ್ಟು ಕಾಸಿಕೊಡಬಾರವಾ" ಎಂದು ಕೂಗಿದ್ದು ಕಿವಿಗೆ ಬಿತ್ತು. ಯಾಂತ್ರಿಕವಾಗಿ ಮತ್ತೆ ಸರಸೂನ ಕಾಲುಗಳು ಕೋಣೆಯ ಕಡೆಗೆ ಚಲಿಸಿದವು. "ಚಹಾ ಆರಿಹೋಗೇದ" "ಜಳಕಕ್ಕ ನೀರು ಹವಣಿ ಇಲ್ಲಾ" "ನನ್ನ ಪಂಚೆ ಸ್ವಚ್ಛ ಒಗದಿಲ್ಲಾ" "ನನ್ನ ವಾಕಿಂಗ್ ಸ್ಟಿಕ್ ಹುಡುಗ್ರು ಎಲ್ಲಿಟ್ಟಾರೆ" ಮುಂತಾದವುಗಳು ಮಾವನವರ ದಿನನಿತ್ಯದ ಗೋಣಗಾಟಗಳು. ಅವುಗಳನ್ನು ಪೂರೈಸಿ ಅವರನ್ನು ಸಮಾಧಾನಪಡಿಸುವ ಹೊಣೆಯೂ ಸರಸೂಳದೆ. ಎರಡನೆಯ ಸಲ ಚಹ ಬಿಸಿ ಮಾಡಿ ಮಾವನವರಿಗೆ ಕೊಟ್ಟುಬಂದು ಒಲೆಯ ಉರಿ ಸರಿ ಮಾಡುವದರಲ್ಲಿಯೇ ಲಲಿತೆ ನಡುಮನೆಯಲ್ಲಿಯೇ ಕೂಗಿದಳು: "ಅತ್ತಿಗೀ ನನಗೊಂದು ಕಪ್ಪ ಚಹಾ ಇದ್ದರ ಕೊಡ್ರಿ; ಆಗಳೆ ಯಾಕೋ ಕುಡಿದಾಂಗs ಆಗಲಿಲ್ಲ." ತನಗಾಗಿ ಎಂದು ಹೆಚ್ಚಿಗೆ ಚಹ ಮಾಡಿಕೊಂಡದ್ದನ್ನು ನಾದಿನಿಗೆ ಕೊಟ್ಟಳು. ಇನ್ನು ಮತ್ತೆ ತನಗೆಂದು ಚಹಕ್ಕಿಡಲು ವೇಳೆಯಿಲ್ಲ. ಗಂಡನಿಗೆ ಊಟಕ್ಕೆ ಹೊತ್ತಾಗುವದು, ಸರಿ. ಮನಸ್ಸಿಗೆ ಬೇಸರವಾಯಿತು.

ಹೊರಗಿನಿಂದ ಯಾರೋ ಕೂಗಿದ ಹಾಗಾಯಿತು. "ಸುಂದರೀ" ಎಂದು. "ಯಾರವರು? ಸುಂದರಿ ಇಲ್ಲಾ ಸಾಲಿಗೆ ಹೋದ್ಲು" ಎಂದಳು ಅಡಿಗೆಯ ಮನೆಯಿಂದಲೇ.

"ನಾನ್ರೀ ಶೀಲಾ, ಸಾಲೀಗೆ ಕರೀಲಿಕ್ಕೆ ಬಂದಿದ್ದೆ ಸುಂದರೀನ. ಹೋಗ್ತೀನಿ."

ಶೀಲಾ ಎನ್ನುವ ಹೆಸರಿನ ಹಿಂದೆಯೇ ತನ್ನ ಗೆಳತಿ ಶೀಲಾನ ನೆನಪಾಯಿತು. ಸರಸೂಗೆ. ಶೀಲಾಗೆ ಇಂಥಾ ಜೊಂಜಾಟ ಇಲ್ಲಾ. ಆರಾಮ ಆಫೀಸಿಗೆ ಹೋಗಿ ದುಡದ ಬರತಾಳ, ಚೈನಿಯಿಂದ ಇದ್ದಾಳ ನೋಡು ಎಂದುಕೊಂಡಳು ಸರಸೂ.

ಗಂಡ ಆಫೀಸಿಗೆ ಹೊರಡಲು ಬೂಟು ಕಟ್ಟಿ ಹೊಸ್ತಿಲು ದಾಟಿದಾಗ 'ಪೋಸ್ಟ್' ಎನ್ನುವ ಶಬ್ದ ಕಿವಿಗೆ ಬಿತ್ತು ಸರಸೂಗೆ. ಪತ್ರವನ್ನು ಓದಿದ ಗಂಡ ಒಳಗೆ ಬಂದು "ರಾಜೂ-ರಾಜೇಶ್ವರಿ, - ಸರಸೂಗೆ ಅವಳ ಗಂಡ ಮದುವೆಯಲ್ಲಿ ಇಟ್ಟ ಹೆಸರು -ನಿನ್ನ ಅಣ್ಣನ ಲಗ್ನ ಇದೇ ೨೩ಕ್ಕೆ ಗೊತ್ತು ಮಾಡಿದ್ದಾರಂತ. ಬರಲಿಕ್ಕೇ ಬೇಕು ಅಂತ ಭಾಳ ಆಗ್ರಹ ಮಾಡಿ ಪತ್ರಾ ಬರದಾನ, ನಿನ್ನ ನಾಲ್ಕೆಂಟು ದಿನ ಮೊದಲs ಕಳಿಸಬೇಕಂತ" ತೌರಿನಿಂದ ಹರ್ಷದ ಸುದ್ದಿ ಕೇಳಿ ಸರಸೂನ ಮುಖ ಅರಳಿತು. ಗಂಡನ ಮಾತು ಮುಂದುವರಿಯಿತು. "ಆದರ ಲಲಿತಾ ಹೆರಿಗೆಗೆ ಬಂದಾಳ. ಅವಳಿಗೆ ದಿನಾ ತುಂಬ್ಯಾವ. ನಿನ್ನ ಬಿಟ್ಟರ ಈ ಮನಿಯೊಳಗ ಹೆಂಗಸರ್ಯಾರೂ ಇಲ್ಲಾ ಅನ್ನೂದು ಅವರಿಗೆ ಗೊತ್ತs ಅದ. ಅದಕ್ಕ ಈಗ ನಿನ್ನ ಕಳಸೂದು ಆಗೂದಿಲ್ಲಾ,. ರಜಾ ತೊಗೊಂಡು ಮದಿವೀ ದಿನಾ ನಾನs ಬರತೀನಿ ಅಂತ ಅವರಿಗೆ ಬರೀತೇನಿ; ಹೌದೋ ಅಲ್ಲೋ?" ಸರಸೂನ ಅರಳಿದ ಮುಖ ಮತ್ತೆ ಬಾಡಿತು. ಪರಿಸ್ಥಿತಿಯ ಅರಿವಾಗಿ "ಹೂಂ ಹಂಗs ಬರೀರಿ" ಎಂದಳು. ಹಾಗೆ ಅನ್ನದೇ ಬೇರೆ ದಾರಿಯೇ ಇರಲಿಲ್ಲ.

"ಲಲಿತಾ ಹಡೆದು ಗಂಡನ ಮನಿಗೆ ಹೋದಮ್ಯಾಲೆ ನೀನೂ ಸ್ವಲ್ಪ ದಿವಸ ತವರುಮನಿಗೆ ಹೋಗಿ ಇದ್ದ ಬರುವಂತೆ" ಅನ್ನುತ್ತ ಗಂಡ ಹೊರಟು ಹೋದ.

ಮುಂದಿನ ಮಾತು ಮುಂದೆ. ಈಗ ಅಣ್ಣನ ಲಗ್ನದಲ್ಲಿ ಓಡಾಡುವ ಸಡಗರ, ಸಂಭ್ರಮ ಆಮೇಲೆ ಸಿಕ್ಕೀತೆ? ಎಲ್ಲಾ ಬಳಗದವರೂ ಕೂಡಿರುತ್ತಾರೆ. ಮಾತು, ಹರಟೆ, ಚೇಷ್ಟೆ, ನಗೆ ಎಲ್ಲವೂ ಆಮೇಲೆ ಮತ್ತೆ ಬರುವವೆ ? ಎಂದು ಚಿಂತಿಸುತ್ತ ನಿಂತ ಸರಸೂನನ್ನು ಗಂಟೆಯ ಸದ್ದು ಎಚ್ಚರಿಸಿತು. ದೇವರ ಗಂಟೆ ಸಪ್ಪಳ ಕೇಳಿ ಮಾವನವರ ಪೂಜೆ ಮುಕ್ತಾಯವಾಯಿತೆಂದು ಅವರ ಊಟದ ಸಿದ್ಧತೆಗೆ ಅಡಿಗೆಯ ಮನೆಗೆ ನಡೆದಳು ಸರಸೂ.

ಮಾವನವರಿಗೂ, ಲಲಿತೆಗೂ ಊಟಕ್ಕೆ ನೀಡುವದರಲ್ಲಿಯೇ ಶಾಲೆಯಿಂದ ಬಂದ ಕುಮಾರ, ಸುಂದರಿಯರಿಗೂ ಉಣಬಡಿಸಿ ತಾನೂ ಊಟ ಮಾಡಿದಳು. ಮೇಲಿನ ಕೆಲಸಗಳನ್ನೆಲ್ಲ ತೀರಿಸಿ ಬಂದು ಕೋಣೆಯಲ್ಲಿ ಅಡ್ಡಾದಳು.

***

"ಯಾಕ ಲಲಿತಾ ಮಾರಿ ಸಣ್ಣ ಮಾಡೀದಿ. ಹೊಟ್ಟೆ ನೋಯ್ತದೇನು?" ಎಂದು ನೆರೆಮನೆಯ ಶ್ಯಾಮಲಾ ಬಾವಿ ಕಟ್ಟೆಯ ಮೇಲೆ ನಿಂತಿದ್ದ ಲಲಿತೆಯನ್ನು ಕಂಡು.

"ಇಲ್ರಿ ಯಾಕೂ ಇಲ್ಲಾ"

"ಮತ್ತ ಕಣ್ಣಾಗ ನೀರ್‍ಯಾಕ ಬಂದಾವ? ಹೊಟ್ಟೆ ನೋಯ್ತಿದ್ದರ ಹೇಳು; ಲಗೂನ ದವಾಖಾನಿಗೆ ಹೋಗೂವಂತೆ."

"ಇಲ್ರೀs. ಯಾಕೋ ಅವ್ವನ ನೆನಪಾಯಿತು, ಅಳು ಬಂತು. ಮೊದಲ್ನೇ ಬಾಣಂತಿತನಾ ಅವ್ವ ಇರಬೇಕಾಗಿತ್ತು ಅನ್ನಿಸ್ತು. ನನಗೇನೇನೂ ಧೈರ್ಯ ಇಲ್ಲಾ. ಅತ್ತಿಗೀಗೆ ಮನಿ ಕೆಲಸ ಮಕ್ಕಳ್ನ ನಿಭಾಯಿಸೋದs ರಗಡಾಗ್ತದs. ಇನ್ನ ನನ್ನ ಬಾಣಂತಿತನಾ ಹ್ಯಾಂಗ ಮಾಡ್ತಾರೋ ಅಂತ."

"ಹೌದವ್ವಾ ಚೊಚ್ಚಲ ಬಾಣಂತಿತನಾ, ಛೊಲೋ ಆಗಬೇಕು. ಅಂದರ ಹೆಣ್ಣುಮಕ್ಕಳ ಆರೋಗ್ಯ ಮುಂದ ನೆಟ್ಟಗಿರ್ತದ. ಇಲ್ಲಾ ಅಂದರ ಏನಕೇನರ ರೋಗ ಸೇರಿಕೊಂಡು ಕೂಡ್ತಾವ. ಸರಸಾನೂ ಹಡದಾಕಿ, ಮಾಡಿದಾಕಿ ಇದ್ದಾಳ. ಹಾಗೇನೂ ತ್ರಾಸ ಆಗಲಿಕ್ಕಿಲ್ಲಾ. ಆದರ ಯಾರ ಮಾಡಿದರೂ ತಾಯಿ ಮಾಡಿದ್ಹಾಂಗ ಆಗೂದಿಲ್ಲಾ. ಅವರೂ ಇರಬೇಕಾಗಿತ್ತು. ಆದರ ಏನ ಮಾಡೂದದ? ಮುತ್ತೈದಿ ಸಾವು ಬಂತು ಅವರಿಗೆ; ಏನಂದ್ರೂ ಅವರs ಪುಣ್ಯವಂತರು. ಬಾ ಒಳಗs ಕೂಡೋಣ"ಎಂದು ಶ್ಯಾಮಲಾಬಾಯಿ ಲಲಿತೆಯನ್ನು ಮನೆಯೊಳಗೆ ಕರೆದೊಯ್ದಳು.

ಕೋಣೆಯಲ್ಲಿ ಅಡ್ಡಾಗಿದ್ದ ಸರಸೂಗೆ ಇವರಿಬ್ಬರ ಮಾತು ಕೇಳಿಸಿತ್ತು. ಅವಳ ಮನಸ್ಸಿಗೆ ಕಳವಳವೂ ಆಯಿತು. ನಾದಿನಿಯ ಹೆರಿಗೆಗೆಂದೇ ತಾನು ತವರುಮನೆಗೆ, ಅದು ತನ್ನ ಅಣ್ಣನ ಮದುವೆಗೂ ಹೋಗುವುದನ್ನು ಬಿಟ್ಟಿದ್ದಾಳೆ. ತನ್ನ ಅನಾರೋಗ್ಯವನ್ನೂ ಲೆಕ್ಕಿಸದೇ ಮನೆಯ ಕೆಲಸಗಳೆಲ್ಲವನ್ನೂ ಮಾಡುತ್ತಿದ್ದಾಳೆ. ತನಗೂ ತನ್ನ ಮಕ್ಕಳಿಗೂ ಕಡಿಮೆ ಮಾಡಿಕೊಂಡಾದರೂ ಚೊಚ್ಚಿಲು ಗರ್ಭಿಣಿಯಾದ ನಾದಿನಿಗೆ ಊಟ ತಿಂಡಿಯ ಉಪಚಾರ ಮಾಡುತ್ತಾಳೆ. ತನ್ನ ತ್ಯಾಗ, ಪ್ರೀತಿ ಯಾವದರದೂ ಲೆಕ್ಕವೇ ಇಲ್ಲ, ಈ ಲಲಿತಾ - ಶ್ಯಾಮಲಾಬಾಯಿ ಅವರಿಗೆ. ಒಂದು ಮನೆಯ ಗೃಹಿಣಿಯಾಗಿ ಬಂದ ಮೇಲೆ ಮುಗಿಯಿತು. ಹೆಣ್ಣು ತನ್ನ ಆಸೆ, ಸಂತೋಷ ಎಲ್ಲವನ್ನೂ ಒತ್ತಟ್ಟಿಗೆ ಕಟ್ಟಿಡಬೇಕಾಗುವುದು. ಪರರ ಸುಖ- ಸಂತೋಷಗಳಲ್ಲಿಯೇ ತಾನು ಆನಂದವನ್ನು ಅನುಭವಿಸಬೇಕು. ಅದಕ್ಕೇ ಮದುವೆಯಲ್ಲಿ ಹೆಂಡತಿಗೆ ಗಂಡನು ತಾಳಿ ಕಟ್ಟುತ್ತಿರಬೇಕು. ಅವಳು ಎಷ್ಟು ತಾಳಿಕೊಂಡರೂ ಕಡಿಮೆಯೇ....

ಹೀಗೇ ಯೋಚಿಸುತ್ತ ಮಲಗಿದ್ದ ಸರಸೂನ ತಾಳ್ಮೆಯ ಒಡ್ಡು ಒಡೆಯಿತು. ಕಣ್ಣೀರು ಹೊಸ ನೀರಿನ ಪ್ರವಾಹದಂತೆ ಹರಿಯಿತು. ಆಗ ತಾನೇ ಮಾತು ಕಲಿಯುತ್ತಿದ್ದ ಲತಾ 'ವ್ಹಾವ್ಹಾ ಪ್ಹಾ ಪ್ಹಾ' ಎನ್ನುತ್ತ ಬಂದು

ತಾಯಿಯ ಕುತ್ತಿಗೆಯನ್ನಪ್ಪಿದಳು. ಕಣ್ಣೀರಿನ ಪ್ರವಾಹಕ್ಕೆ ಹೊಸತೊಂದು ಒಡ್ಡು ಹಾಕಿದಳು ಸರಸೂ. ಕರೆಯದೆಯೇ ನಗೆಯೂ ಬಂದಿತು. ಹಿಂದಿನಿಂದ, ಲತಾನನ್ನು ಮಗ್ಗುಲಲ್ಲಿ ಮಲಗಿಸಿಕೊಂಡಳು. ಕಣ್ಣಿಗೆ ಜೊಂಪೂ ಬಂದಿತು.

***

"ಅವ್ವಾ, ಅವ್ವಾ, ಪತ್ರ ಬಂದsದ" ಓಡುತ್ತ ಬಂದ ಕುಮಾರ ಅವಳ ಕೈಯಲ್ಲಿ ಪಾಕೀಟು ಕೊಟ್ಟ. "ಅವ್ವಾ ಅದರ ಮ್ಯಾಲೆ ಶ್ರೀಮತಿ ಸರಸ್ವತಿ ಅಂತ ಬರದಾರ. ನಿನಗ ಯಾರೋ ಪತ್ರಾ ಬರದಾರ. ನನಗ ಓದಲಿಕ್ಕೆ ಬರತsದ ನೋಡು ಇಗ್ಲೀಷು" ಎಂದು ತನ್ನ ಜಾಣತನವನ್ನು ಪ್ರದರ್ಶಿಸಿದ. ಶೀಲಾನ ಪತ್ರವೆಂದು ಅಕ್ಷರಗಳಿಂದಲೇ ತಿಳಿದುಕೊಂಡಿದ್ದ ಸರಸೂ ಉತ್ಸಾಹದಿಂದಲೇ ಪಾಕೀಟು ತೆರೆದಳು:

ಪ್ರಿಯ ಸರಸೂ,

ನಿನ್ನ ಕಾಗದವು ಶುಭಾಶಯಗಳೊಂದಿಗೆ ಬಂದು ಮುಟ್ಟಿತ್ತು. ಅದನ್ನೋದಿದ ಮೇಲೆಯೇ ನನಗೆ ನನ್ನ ಹುಟ್ಟುಹಬ್ಬ ಈ ತಿಂಗಳು ಆಯಿತೆಂಬುದು ಜ್ಞಾಪಕಕ್ಕೆ ಬಂದಿತು. ನಿನಗೆ ಆಶ್ಚರ್ಯವಾಯಿತೆ? ಪ್ರೀತಿಯ ಬಂಧುಗಳಿಲ್ಲದ, ಒಲಿದ ಗಂಡನಿಲ್ಲದ, ನೌಕರಿ ಹಿಡಿದು ಯಾಂತ್ರಿಕ ಜೀವನ ಸಾಗಿಸುತ್ತಿರುವ ಈ ನಿನ್ನ ಗೆಳತಿ ತನ್ನ ಹುಟ್ಟುಹಬ್ಬದ ಜ್ಞಾಪಕವಿಲ್ಲದಿರುವುದು ಅಚ್ಚರಿಯ ಸಂಗತಿ ಎಂದು ನನಗೇನೂ ಅನ್ನಿಸುವುದಿಲ್ಲ.

ಸರೂ, ನಿನ್ನ ಪತ್ರ ನನಗೆ ೨೭ ವರ್ಷ ತುಂಬಿತೆಂದು ನೆನಪು ಕೊಟ್ಟಿತು. ಇದರಿಂದ ನನಗೆ ಸಂತೋಷವಾಗಬೇಕೋ, ದುಃಖವಾಗಬೇಕೋ ಒಂದೂ ತಿಳಿಯದಾಗಿದೆ ನನಗೆ. ಎರಡನ್ನೂ ಮೀರಿ ನಿಂತ ತತ್ವಜ್ಞಾನಿಯಾಗಿದ್ದೇನೆಂದು ತಿಳಿದುಕೋ ಬೇಕಾದರೆ. ಯಾಕೆಂದರೆ ಜೀವನದಲ್ಲಿ ನಿರಾಶೆ ಹೊಂದಿದವರು ತತ್ತ್ವಜ್ಞಾನಿಗಳಾಗುತ್ತಾರೆಂದು ಹಿಂದೆಲ್ಲೋ ಓದಿದ ನೆನಪು. ಆದರೆ ಈಗ ಮಾತ್ರ ನನ್ನ ಮನಸ್ಸಿನಲ್ಲೇನೋ ಆಗುತ್ತಿದೆ. ಏನು ಎಂದು ಹೇಳಲು ಬಾರದು ನನಗೆ. ಒಂದು ರೀತಿಯ ತಳಮಳ, ಕಳವಳ ಯಾವದೂ ತಿಳಿಯದು. ನಿನಗೆ ಏನಾದರೂ ಬರೆಯಬೇಕೆನ್ನಿಸುತ್ತಿದೆ. ನನ್ನ ದಿನಚರಿಯನ್ನೇ ಬರೆಯಲೆ ?

ದಿನವೂ ಕಚೇರಿಗೆ ಹೋಗಿ ನನಗೆ ಕೊಂಚವೂ ಸಂಬಂಧವಿಲ್ಲದ ಕರಡು ಕಾಗದಗಳನ್ನು ಗೀಚಿ, ಸಂಜೆ ಮನೆಗಷ್ಟು ಹೊತ್ತು ತಂದು ನಿದ್ದೆ ಬರುವವರೆಗೂ ಅವುಗಳನ್ನೆಲ್ಲ ಬರೆದು ತುಂಬಿಸಬೇಕು. ಮರುದಿನ ಮುಂಜಾನೆ ತಲೆನೋವು ಕಟ್ಟಿಕೊಂಡೇ ಎದ್ದು, ಮುಖ ತೊಳೆದುಕೊಂಡು ಅತ್ತಿಗೆ ಹಾಕಿದ ಚಹ ಗುಟುಕರಿಸಿ, ತಲೆ ಬಾಚಿ, ಮನೆಗೆ ತರುಬರುವ ಸಾಮಾನುಗಳನ್ನು ತಿಳಿದುಕೊಂಡು ಅಣ್ಣನ ಮಗಳು ಚಿನ್ನಾಳೊಡನೆ ಆಟವಾಡಿ, ರವಿಗೆ ಮನೆಯ ಅಭ್ಯಾಸ ಹೇಳಿಕೊಟ್ಟು, ಅಡಿಗೆಯ ಕೆಲಸದಲ್ಲಿ ಸಹಾಯ ಮಾಡಿ, ಸ್ನಾನ ಮಾಡಿ ಊಟ ತೀರಿಸುವದರೊಳಗೆ ಹತ್ತು ಗಂಟೆಯಾಗುತ್ತದೆ. ಅವಸರದಿಂದ ಊಟ ಮಾಡಿ ಓಡಬೇಕು- ದೂರದ ಕಚೇರಿಗೆ. ಬಸ್ಸಿಗೇಕೆ ಹೋಗಬಾರದು; ಅವಳು ಬಲು ಜಿಪುಣೆ ಎಂದುಕೊಳ್ಳಬೇಡ! ನಾನು ದುಡಿದ ಹಣ ಮನೆಯಲ್ಲಿಯ ನಾಲ್ಕು ಜನರ ಹೊಟ್ಟೆ- ಬಟ್ಟೆ-ಹಾಲು, ಬಾಡಿಗೆ, ಡಾಕ್ಟರರ ಬಿಲ್ಲು ಎಲ್ಲಕ್ಕೂ ಖರ್ಚಾಗಿ ಅನುವು-ಆಪತ್ತಿಗೆ ಇರಲೆಂದು ತಿಂಗಳಿಗೊಮ್ಮೆ ಬ್ಯಾಂಕಿನ ಲೆಕ್ಕಕ್ಕೆ ಐದೋ ಹತ್ತೋ ಸೇರಿಸಬೇಕಾದರೆ ಆಕಾಶ -ಪಾತಾಳ ಒಂದೇ ಆಗುತ್ತದೆ.

ನೀನೂ ಒಂದು ಮನೆಯ ಯಜಮಾನಿಯಾಗಿದ್ದೀ. ನಿನಗೂ ಗೊತ್ತಿದೆಯಲ್ಲ. ಈ ಕಾಲದ ಪೇಟೆಯ ಧಾರಣೆ. ಹೊರಗೆ ಹೋಗುವಾಗ ಉಡಲು ಚಿತ್ರ - ಚಿತ್ತಾರದ ಪತ್ತಲಗಳನ್ನು ನಾನು ಮೇಲಿಂದ ಮೇಲೆ ಕೊಂಡುಕೊಳ್ಳುವುದೇ ಇಲ್ಲ. ಹೆಂಗಸರ ಫ್ಯಾಷನ್ನಿನ ಇತರ ಸಾಮಾನುಗಳಂತೂ ದೂರವೇ ಉಳಿಯಿತು. ಇಂಥ ಚೈನಿ ಸಾಮಾನುಗಳಿಗೆ ಖರ್ಚು ಮಾಡಲು ನನಗೆ ಮನಸ್ಸೂ ಇಲ್ಲ. ನನ್ನಲ್ಲಿ ಹಣವೂ ಇರುವುದಿಲ್ಲ. ಆದರೂ ನನ್ನ ಟೈಪಿಸ್ಟ ಗೆಳತಿಯರೆಲ್ಲ ನಗುತ್ತಾರೆ. "ಶೀಲಾ ಬ್ಯಾಂಕಿನ ಲೆಕ್ಕ ಏರಿಸ್ತಿದಾರ್ರೀ" ಎಂದು. ಮನೆಯಲ್ಲಿ ಅತ್ತಿಗೆಯೂ

ಆಗಾಗ ಅನ್ನುತ್ತಿರುತ್ತಾಳಂತೆ. ನೆರೆಯವರ ಮುಂದೆ "ತಾನೇ ದುಡಿದು ಪಗಾರ ತರೂವಾಕಿ. ಚೈನಿಗೆ, ಸಿನೇಮಾಕ, ಹೊಟೆಲಿಗೆ ಹೊರಗ ಎಷ್ಟುರ ಖರ್ಚು ಮಾಡತಾಳೋ ಏನೋ. ಯಾವಾಗ ಕೇಳಿದರೂ ಕೈಯಾಗ ರೊಕ್ಕs ಇಲ್ಲ ಅಂತಾಳ" ಎಂದು. ಇಂಥ ಮಾತು ಕಿವಿಗೆ ಬಿದ್ದಾಗ ಮೊದಲು ಅಳುತ್ತಿದ್ದೆ ಸರೂ. ದುಡಿಯುವ ಅಣ್ಣ ತೀರಿಹೋದಾಗಲೇ ಸಂಸಾರದ ನೊಗ ಹೊತ್ತೆ. ಅಂತಃಕರಣದ ಮಾತುಗಳನ್ನಾಡಿ ಮನಸ್ಸಿಗೆ ಸಮಾಧಾನ ಕೊಡುವ ತಾಯಿಯೂ ಹೋದಮೇಲೆ ಇನ್ನು ಅಳಬಾರದೆಂದು ಮನಸ್ಸು ಕಲ್ಲು ಮಾಡಿಕೊಂಡೆ.

ಆದರೆ ಸರಸೂ. ನೀನು ಶಿಲಾವಿಗ್ರಹವಲ್ಲ. ನೀನು ಹೆಣ್ಣು ಎಂದು ಹೆಜ್ಜೆಹೆಜ್ಜೆಗೂ ಎಚ್ಚರಿಸುತ್ತಲಿದೆ ಈ ಸುತ್ತಲಿನ ಸಮಾಜ. ಪರಪುರುಷರೊಡನೆ ಎಷ್ಟು ಒಳ್ಳೆಯ ಭಾವನೆಯಿಂದ ನಡೆದುಕೊಂಡರೂ ಮನ ನೋಯುವ ಪ್ರಸಂಗಗಳು ಮೇಲಿಂದ ಮೇಲೆ ನಡೆಯುತ್ತವೆ. ಮೊನ್ನೆ 'ವಹನೀಚ್ಯಾ ಬಾಂಗಡ್ಯಾ' ಸಿನೇಮಾ ಚೆನ್ನಾಗಿದೆ ಎಂದು ಎಲ್ಲರ ಬಾಯಲ್ಲಿ ಕೇಳಿ ಅದನ್ನು ನೋಡಲು ಹೋದೆ. ನನ್ನ ಗೆಳತಿಯರೆಲ್ಲ ಮೊದಲೇ ನೋಡಿದ್ದರಿಂದ ನಾನೊಬ್ಬಳೇ ಹೋಗಬೇಕಾಯಿತು. ಟಿಕೆಟ್ ಆಫೀಸಿನ ಹತ್ತಿರ ಹೆಂಡತಿಯೊಡನೆ ಕಾರಕೂನ ಜೋಶಿ ಭೆಟ್ಟಿಯಾದರು. ಹೆಣ್ಣುಮಕ್ಕಳ ಟಿಕೆಟ್ ಆಫೀಸಿನೆದುರು ದೊಡ್ಡ 'ಕ್ಯೂ' ಇದ್ದದ್ದರಿಂದ ನನಗೊಂದು ಟಿಕೆಟ್ ತೆಗೆಯಿಸಬೇಕೆಂದು ಜೋಶಿಗೆ ಹೇಳಿ ರೊಕ್ಕ ಮುಂದೆ ಚಾಚಿದೆ. ಹಿಂದೆ ಒಮ್ಮೆ ಕೆಲಸದಲ್ಲಿ ನನ್ನಿಂದ ಅವನಿಗೆ ಸಹಾಯವಾಗಿದ್ದ ನೆನಪಾಗಿಯೋ ಏನೋ ಅವನು ನೀವಿಬ್ಬರೂ ಅಟ್ಟದ ಮ್ಯಾಲೆ ನಡೀರಿ, ನಾ ತಿಕೀಟು ತೆಗೆಸಿಕೊಡು ಬರತೀನಿ" ಎಂದು ರೊಕ್ಕ ತೆಗೆದುಕೊಳ್ಳದೆಯೇ ಹೋಗಿಬಿಟ್ಟ.

ಅವನ ಹೆಂಡತಿಯ ಪರಿಚಯ ಮಾಡಿಕೊಳ್ಳಬೇಕೆಂದು ನಾನು ಮಕ್ಕಳೆಷ್ಟು, ಮನೆ ಎಲ್ಲಿ, ಎಂದೆಲ್ಲಾ ವಿಚಾರಿಸಿದೆ. ನನ್ನ ಪ್ರಶ್ನೆಗೆ ಉತ್ತರ ಕೊಟ್ಟಳೇ ಹೊರತು ಮರುಪ್ರಶ್ನೆ ಮಾಡಿ ನನ್ನ ಪರಿಚಯ ಮಾಡಿಕೊಳ್ಳುವ ಮನಸ್ಸು ಅವಳಿಗಿಲ್ಲವೇ ಇಲ್ಲವೆಂಬುದನ್ನು ತೋರಿಸಿಕೊಟ್ಟಳು. ಸಿನೇಮಾ ಸುರುವಾದ ಮೇಲೆಯೂ ನಮ್ಮಿಬ್ಬರ ನಡುವೆಯೇ ಕುಳಿತರೂ ಮುಖ ಅತ್ತ ತಿರುಗಿಸಿ ಗಂಡನೊಡನೆಯೇ ಮಾತನಾಡುತ್ತಿದ್ದಳೇ ಹೊರತು ನನ್ನೊಡನೆ ಒಂದು ಮಾತು ಆಡಲಿಲ್ಲ. ಅವಳೊಡನೆ ಮಾತನಾಡಲು ನಾನು ತಕ್ಕವಳಲ್ಲ ಎಂದುಕೊಂಡಳೊ ಏನೋ. ನನಗಂತೂ ಬಹಳ ಕೆಡುಕೆನಿಸಿತು.

ಸಿನೇಮಾನೂ ದುಃಖಪೂರ್ಣವಾಗಿಯೇ ಇದ್ದುದರಿಂದ ಚೆನ್ನಾಗಿ ಅತ್ತುಬಿಟ್ಟೆ. ಹೊರಗೆ ಬರುವಾಗ ಕಣ್ಣು ಕೆಂಪಾಗಿದ್ದವು. ಜೋಶಿ ನಗುತ್ತಾ "ಏನ್ರೀ, ನೀವು ಬಹಳ ಭಾವನಾ ಪ್ರಧಾನ ಕಾಣಸ್ತೀರಲ್ರಿ" ಎಂದ. "ಪರಿಸ್ಥಿತಿ ಅಳೂ ಹಾಂಗs ಇತ್ತ ಬಿಡ್ರಿ" ಎಂದೆ. ಮನೆಗೆ ಬೀಳ್ಕೊಡುವಾಗಲೂ ಅವಳೂ ನನ್ನೊಡನೆ ಏನೂ ಮಾತನಾಡಲೇ ಇಲ್ಲ. ಜೋಶಿಗೆ ಇದು ಹೊಳೆಯಿತೋ ಏನೋ ಮರುದಿನ ಕಚೇರಿಯಲ್ಲಿ ಆ ಮಾತು ಈ ಮಾತು ಆಡುತ್ತ ತನ್ನ ಹೆಂಡತಿಯ ನಡವಳಿಕೆಯ ಬಗ್ಗೆ ಕೆಡುಕೆನಿಸಿಕೊಂಡ. "ಹೋಗಲಿ ಬಿಡ್ರಿ" ಎಂದು ನಗೆಯಲ್ಲಿ ಅವನಿಗೆ ಉತ್ತರ ಹೇಳಿದೆ. ಆದರೆ ಹಿಂದಿನ ರಾತ್ರಿ ಬಹಳ ಅತ್ತಿದ್ದರಿಂದ ಕಣ್ಣೀರಿನ ಕಲೆಗಳಿದ್ದ ದಿಂಬಿನ ಚೀಲವನ್ನು ಮರುದಿನ ಸಾಬೂನು ಹಚ್ಚಿ ಒಗೆಯಬೇಕಾಯಿತು.

ಒಂದೊಂದು ಸಲ ನನಗೆ ಮದುವೆಯಾಗಿ ತಾಯಿಯಾಗಿ, ಒಂದು ಮನೆಯ ಗೃಹಿಣಿಯಾಗಿ ಸುಖವಾಗಿ ಬಾಳಬೇಕೆಂದು ಆಸೆಯಾಗುತ್ತದೆ. ಆದರೆ ಅಷ್ಟೊಂದು ರೂಪವತಿಯಲ್ಲದ, ವರದಕ್ಷಿಣೆ ಕೊಡಲು ಸಾಮರ್ಥ್ಯವಿಲ್ಲದ ನನ್ನನ್ನು ಮದುವೆಯಾಗಲು ಮುಂದೆ ಬರುವವರಾದರೂ ಯಾರು ? ಮದುವೆ ಮಾರ್ಕೆಟ್ಟಿನಲ್ಲಿ ವಯಸ್ಸಾಗುವ ಮೊದಲು ಖರ್ಚಾದವರೇ ಸುದೈವಿಗಳೆನ್ನಬೇಕು. ನನಗೋ ಮೂವತ್ತು ವರ್ಷ ಸಮೀಪಿಸಿತು. ಮದುವೆಯ ಆಶೆಯನ್ನಷ್ಟೇ ಅಲ್ಲ, ನನ್ನ ಅಣ್ಣನ ಮಕ್ಕಳಿಂದಾಗಿ ಮದುವೆಯ ಯೋಚನೆಯನ್ನೇ ಬಿಡಬೇಕಾದ ಪ್ರಸಂಗ ನನಗೆ ಬಂದಿದೆ. ಅಂದ ಮೇಲೆ ನಾನೊಂದು ಯಂತ್ರವಾಗಿರುವುದು ಸಹಜ ಅಲ್ಲವೇ?

ಸರಸೂ, ನಿನ್ನನ್ನು ಒಂದು ಪ್ರಶ್ನೆ ಕೇಳುವೆ. ಸರಿಯಾಗಿ ವಿಚಾರಿಸಿ ಉತ್ತರ ಹೇಳು. ಮದುವೆಯಾಗದೇ ಕನ್ಯೆಯಾಗಿರುವವಳಿಗೆ ಅರಿಶಿಣ-ಕುಂಕುಮ, ಹೂ-ವೀಳ್ಯ ಮೊದಲಾದ ಸೌಭಾಗ್ಯ ಸೂಚಕ ವಸ್ತುಗಳನ್ನು ಕೊಡಲು ಬರುವುದಿಲ್ಲವೇ? ಗಂಡನಿಲ್ಲದ ಮಾತ್ರಕ್ಕೆ ಅವಳು ಈ ವಸ್ತುಗಳನ್ನು ಸ್ವೀಕರಿಸಲು ಅನರ್ಹಳೇ? ಹೀಗೆ ಕೇಳಲು ಕಾರಣವೂ ಒಂದಿದೆ. ನಮ್ಮ ಆಫೀಸರರ ಹೆಂಡತಿ ಪ್ರತಿ ವರ್ಷವೂ ಗೌರಿ ಕೂಡ್ರಿಸುತ್ತಾರೆ. ಹೂ ವೀಳ್ಯಕ್ಕೆ ಎಲ್ಲ ಕಾರಕೂನರ ಮನೆಯವರನ್ನು ಕರೆದಿರುತ್ತಾರೆ. ಆದರೆ ನನಗೆ ಆಮಂತ್ರಣವಿಲ್ಲ. ಅವರ ದೃಷ್ಟಿಯಲ್ಲಿ ನಾನು ಸುಮಂಗಲೆ ಅಲ್ಲವೆಂದು ಕಾಣುತ್ತದೆ; ಅಲ್ಲವೇ ? ಸರಸೂ ಇದನ್ನೆಲ್ಲಾ ಯೋಚಿಸದೆ ಬೇಗನೆ ಮದುವೆಯಾಗಿ, ತಾಯಿಯಾಗಿ, ಗೃಹಿಣಿಯಾಗಿ ನೀನೇ ಸುಖಿ. ಸಾಕಿನ್ನು ಈ ರಗಳೆ ಓದಿದ ಮೇಲೆ ನೀನೇನು ಅಂದುಕೊಳ್ಳುವಿಯೋ.

ನಿನ್ನ ಯಜಮಾನರಿಗೂ ಮಕ್ಕಳಿಗೂ ನನ್ನ ನೆನಪು ಕೊಡು. ನಿನ್ನನ್ನು ನೋಡಿ ಬಹಳ ದಿನಗಳಾದವು. ನಿನ್ನ ಅಣ್ಣನ ಲಗ್ನ ಇದೇ ತಿಂಗಳಲ್ಲಿ ಆಗುವುದೆಂದು ನಿನ್ನ ತಂಗಿ ಹೇಳುತ್ತಿದ್ದರು. ನೀನು ತೌರಿಗೆ ಬೇಗ ಬರುವಿಯಲ್ಲವೇ? ಬರುವಾಗ ನಾಲ್ಕು ದಿನ ಹೆಚ್ಚು ರಜೆ ತೆಗೆದುಕೊಂಡು ಬಾ. ಉಳಿದುದನ್ನು ಭೆಟ್ಟಿಯಲ್ಲಿ ಮಾತನಾಡೋಣ. ಪತ್ರ ಬರೆ.

ನಿನ್ನ ಗೆಳತಿ
ಶೀಲೂ

ಕ್ಷಣ ಹೊತ್ತು ಸುಮ್ಮನೆ ತುಳಿತ ಸರಸೂನ ಮುಖದಲ್ಲಿ ವಿಷಾದ ಮಿಶ್ರಿತ ನಗೆ ಮೂಡಿತು. 'ಸ್ವಂತ ದುಡಿದು ಸ್ವತಂತ್ರವಾಗಿರುವ ಶೀಲಾ ಎಷ್ಟು ಸುಖಿ' ಎಂದು ತಾನು ಭಾವಿಸಿದ್ದಕ್ಕೆ ತನಗೆ ನಾಚಿಕೆಯೆನಿಸಿತು. ಅವಳ ಮನಸ್ಸು ಈಗ ಎಷ್ಟೋ ಹಗುರವಾಗಿತ್ತು. ತಾನು ಸದ್ಯಕ್ಕೆ ತೌರಿಗೆ ಹೋಗುವುದು ನಿಂತದ್ದರಿಂದ ಶೀಲಾಗೆ ಬೇಗನೇ ಪತ್ರ ಬರೆಯಬೇಕೆಂದು ಕೊಂಡಳು. ಅವಳಿನ್ನೂ ಕೈಯಲ್ಲಿ ಪತ್ರ ಹಿಡಿದುಕೊಂಡು ಅದೇ ಸ್ಥಳದಲ್ಲಿ ಕುಳಿತಿದ್ದಳು. ಪತ್ರದಲ್ಲಿಯ ಕೆಲವೊಂದು ಮಾತುಗಳು ಅವಳ ಮನದಲ್ಲಿ ಹರಿದಾಡುತ್ತಿದ್ದವು. ಸುಂದರಿ ಬಂದು "ಅವ್ವಾ, ನಮ್ಮ ಸಾಲ್ಯಾಗ ಡ್ರಾಯಿಂಗ್ ಬುಕ್ಕಿನ್ಯಾಗ ಚಿತ್ರಾ ತಕ್ಕೊಂಡ ಬರಲಿಕ್ಕೆ ಹೇಳ್ಯಾರ. ನಾ ಏನ ತಗೀಲೆವಾ" ಎಂದಳು.

"ನಾ ಹೇಳಿದ್ದು ತೆಗೀತಿಯಾ ? ತೆಗಿ ಹಾಂಗಾರ: ಒಂದು ಹೆಣ್ಣು ಪಕ್ಷಿ ಗಿಡದ ಮ್ಯಾಲೆ ಕೂತದ. ಈ ಗಿಡದ ಕೆಳಗ ಬೆಕ್ಕು ಪಕ್ಷೀ ಹಿಡೀಲಿಕ್ಕೆ ಜಪ್ಪಿಸಿಕೊಂಡು ಕೂತದ. ಗಿಡದ ಮ್ಯಾಲಿನ ಪಕ್ಷಿ ಮ್ಯಾಲೆ ಕಣ್ಣಿಟ್ಟುಕೊಂಡು ಒಂದು ಹದ್ದು ಹಾರಾಡ್ತದ. ಇನ್ನೊಂದು ಪಕ್ಷಿ ಎದುರಿನ ಮನಿಯೊಳಗಿನ ಪಂಜರದಾಗ ಅದ. ಪಂಜರದಾಗ ಅದಕ್ಕ ಕಾಳು, ನೀರು ಎಲ್ಲಾ ಅದ. ಗಿಡದ ಮ್ಯಾಲಿನ ಪಕ್ಷಿ ಪಂಜರದಾಗಿನ ಪಕ್ಷೀಗೆ ಅಂತsದ: "ನಿನಗ ಹೊಟ್ಟಿ ತುಂಬಾ ಊಟ ಸಿಗ್ತದ. ಮೇಲಾಗಿ ಬೆಕ್ಕು, ಹದ್ದು ಇವುಹಳ ಹೆದರಿಕಿ ನಿನಗಿಲ್ಲಾ. ನೀ ಎಷ್ಟ ಸುಖೀ ಇದ್ದೀ" ಅಂತ ಅದಕ್ಕ ಆ ಪಂಜರದಾಗಿನ ಪಕ್ಷಿ ಅಂತsದ" ಪರಾಧೀನೆ. ಸಾಕಿದವರು ಕೊಟ್ಟಾಗs ನನಗ ಆಹಾರ ಸಿಗ್ತದ ನೀ ಸ್ವತಂತ್ರ ಇದ್ದೀ, ನೀನs ಭಾಳ ಸುಖೀ ಇದ್ದಿ" ಎಂದು. ಸರಸೂ ಕನಸಿನ ಲೋಕದಲ್ಲಿದ್ದವಳಂತೆ ಹೇಳಿದಳು.

ತಾಯಿಯ ಒಗಟಿನಂತಹ ಮಾತುಗಳನ್ನು ಕೇಳುತ್ತ ಬೆರಗಾಗಿ ಕುಳಿತಿದ್ದಳು ಸುಂದರಿ.

***

# ಗೃಹಿಣಿ

'ಅನೂ......."

ಕರೆ ಕೇಳಿದ ಕಿವಿ ತಂಪಾಯಿತು.; ಕೆಂಪಗಾಯಿತು.

ಇನ್ನೊಮ್ಮೆ ಕೇಳಬೇಕೆನಿಸಿತು. ಅಡಿಗೆ ಮನೆಯಲ್ಲಿದ್ದ ಅನ್ನಪೂರ್ಣ 'ಓ' ಕೊಡಲಿಲ್ಲ.

"ಅನೂs, ಅನ್ನಪೂರ್ಣಾ"

"ಓ" ಎನ್ನುತ್ತ ಮುಂದಿನ ಕೋಣೆಗೆ ಹೋದಳು ಅನೂ. ಬಗ್ಗಿ ಬೂಟಿನ ಲೇಸು ಕಟ್ಟುತ್ತಿದ್ದ ಗಂಡ ಮೇಲೆದ್ದು ನಿಂತು ಕೇಳಿದ.

"ನಾಳೆ ಆದಿತ್ಯವಾರ. ನಾಲ್ಕಾರು ಮಂದಿ ಗೆಳೆಯರನ್ನ ಊಟಕ್ಕ ಕರೀಬೇಕಂತ ಮಾಡೇನಿ. ಕರೀಲೇನು?"

ಅನ್ನಪೂರ್ಣ 'ಯಾಕೆ' ಎನ್ನುವಂತೆ ಪ್ರಶ್ನಾರ್ಥಕವಾಗಿ ಹುಬ್ಬನ್ನೆತ್ತಿದಳು.

"ನೋಡು : ನಮ್ಮ ಮದುವೀಗೆ ಅವರಿಗೆ ಬರಲಿಕ್ಕಾಗಿದ್ದಿಲ್ಲ. ಹೊಸದಾಗಿ ಮನೀ ಮಾಡೇವಿ. ಊಟಕ್ಕ ಕರೀಬೇಕಂತ ಅನಿಸೇದ. ಅದಕ್ಕs ನಿನ್ನ ಕೇಳಿದೆ."

"ನನ್ನೇನು ಕೇಳೋದು. ಕರಿಯೂ ಮನಸ್ಸಿದ್ದರ ಕರೀರಿ."

"ಊಹೂ ಹಾಂಗಲ್ಲಾ. ನೀನು ಯಜಮಾನಿ. ಮತ್ತs ಹೊರಗಿನವರು ಊಟಕ್ಕ ಬರತಾರಂದರ ನಿನಗ ಕೆಲಸಾನೂs ಹೆಚ್ಚಿಗಿ ಬೀಳತದ. ನಿನ್ನ ಒಪ್ಪಿಗಿ ಇದ್ದರs ನಾ ಕರಿಯಾಂವಾ"

ಗಂಡ ಕೊಟ್ಟ "ಯಜಮಾನಿ" ಎನ್ನುವ ಪದವಿಗೆ ಹಿಗ್ಗಿದ ಅನ್ನಪೂರ್ಣ ನಗುನಗುತ್ತ "ಹೂ, ಕರೀರಿ" ಎಂದಳು.

ಹೆಂಡತಿಯ ಒಪ್ಪಿಗೆಯಿಂದ ಹಿಗ್ಗಿದ ಗಂಡ, "ಕಚೇರಿಯಿಂದ ಬರೂ ಮುಂದ ಕಾಯಿಪಲ್ಲೆ, ಹಣ್ಣು ಮತ್ತೇನರೆ ಸಾಮಾನು ತರಲೇನು ?" ಎಂದ.

"ನಾವಿನ್ನೂ ಮನೀ ಮಾಡಿ ಒಂದು ವಾರ ಆಗಿಲ್ಲಾ. ಈಗ ತರೂ ಸಾಮಾನು ಭಾಳ ಅದಾವು. ನಿಮಗ ತಿಳಿಯೂದಿಲ್ಲಾ. ರೂಪಾಯಿ ಇದ್ರ ತರ್‍ರಿಲ್ಲೆ. ನಾ ಎಲ್ಲಾ ತರಸ್ತೇನಿ" ಎನ್ನುತ್ತ ಕೈ ಚಾಚಿದಳು.

ಕೈ ಚಾಚಿದ ಹೆಂಡತಿಯ ಕೈಯಲ್ಲಿ ಹತ್ತರ ನೋಟನ್ನಿಟ್ಟು ಕೈ ಕುಲುಕಿಸಿ, ಸಲಾಮು ಹಾಕಿದ ಹುಡುಗತನದ ಗಂಡ. ಗಂಡನ ಚೇಷ್ಟೆಗೆ ನಗುತ್ತ ಬೈ ಬೈ ಮಾಡಿದಳು ಅನೂ.

"ಅನೂ ಇಲ್ಲಿ ಇನ್ನೊಂದಿಷ್ಟು ಪುರಿ ತಾ. ಅಲ್ಲಿ ಅವರಿಗೆ ಇನ್ನಷ್ಟು ಖೀರು ಹಾಕು. ನಿಮಗ ಇನ್ನಷ್ಟು ಕೋಸಂಬರಿ ತರಸ್ಲೇನು? ಬರೀ ವಾಂಗೀ ಭಾತಕ್ಕ ಹೊಟ್ಟೆ ತುಂಬಿತು ಅಂತೀರೆಲಾ; ಇನ್ನೂ ಸಾದಾ ಅನ್ನ ಮೊಸರು ತೋಗೋಬೇಕು" ಎಂದು ಗಂಡ ಗೆಳೆಯರಿಗೆ ಉಪಚಾರ ಮಾಡುತ್ತಿದ್ದ.

"ಅಡಿಗೀ ಭಾಳ ಚೊಲೋ ಮಾಡ್ತಾರಪಾ ನಿಮ್ಮನೀಯವರು, ಇನ್ನೇನು ಬಿಡು ತಿಂಗಳಿಗೊಮ್ಮೆ ನಾ ನಿಮ್ಮ ಮನ್ಯಾಗ ಊಟಕ್ಕ ಝಂಡಾ ಊರಾಂವ" ಒಬ್ಬ ಬಾಲ್ಯದ ಗೆಳೆಯ ಹೇಳುತ್ತಿದ್ದ ಗಂಡನಿಗೆ.

"ಇಷ್ಟು ದಿನಾ ಖಾನಾವಳಿ ಊಟಾ ಉಂಡು ಉಂಡು ಮೈಯಽ ಹಿಡಿದಿದ್ದಿಲ್ಲಾ. ಇನ್ನ ಮನೀಯವರ ಕೈಯ ಸುಗ್ರಾಸ ಭೋಜನದಿಂದ ನಿನ್ನ ತೂಕಾ ತಿಂಗಳಾ ತಿಂಗಳಾ ಏರಬೇಕು ನೋಡಪಾ." ಇನ್ನೊಬ್ಬ ಚೇಷ್ಟೆ ಮಾಡಿದ.

ಅನ್ನಪೂರ್ಣ ಊಟ ಮುಗಿಸಿ ಕೈ ತೊಳೆಯುತ್ತಿದ್ದಂತೆ ಎಲ್ಲರೂ 'ಹೋಗಿ ಬರ್‍ತೀವ್ರಿ ನಮಸ್ಕಾರ' ಎಂದು ಹೇಳುತ್ತ ಹೊರಟರು. ಗಂಡ ಸ್ವಲ್ಪ ದೂರದವರೆಗೆ ಅವರನ್ನು ಕಳಿಸಿಬರಲು ಹೋದ.

ಅನೂ ಮುಂಬಾಗಿಲು ಮುಂದೆ ಮಾಡಿ ಕೋಣೆಗೆ ಹೋದವಳೇ ಹಾಸಿಗೆಗೆ ಅಡ್ಡಾದಳು. ಕೈ, ಕಾಲು, ಬೆನ್ನು ನಡು ತುಂಬಾ ನೋಯುತ್ತಿದ್ದವು. ಯಾವಾಗ ವಿಶ್ರಾಂತಿ ಸಿಕ್ಕೀತು, ಯಾವಾಗ ನೆಲಕ್ಕೆ ಕಾಲು ಚಾಚೇನು ಎನ್ನುವಷ್ಟು ಮೈದಣಿದಿತ್ತು. ರಾತ್ರಿ ಬಹಳ ಹೊತ್ತಿನವರೆಗೆ ಕೆಲಸ ಮಾಡಿ ಮತ್ತೆ ಬೆಳಿಗ್ಗೆ ಬೇಗನೆ ಎದ್ದುದರಿಂದ ತಲೆ ನೋಯುತ್ತಿತ್ತು. ಕಣ್ಣು ರೆಪ್ಪೆಗಳು ಭಾರವಾಗಿ ನರಗಳು ಸಿಡಿಯುತ್ತಿದ್ದವು.

ಹಿಂದಿನ ದಿನ ಗಂಡ ಕಚೇರಿಗೆ ಹೋದ ಸ್ವಲ್ಪ ಹೊತ್ತಿಗೆ ತನ್ನ ಊಟ ಮುಗಿಸಿ ಕೈತೊಳೆದು ನೆರೆಮನೆಯ ಹುಡುಗಿಯನ್ನು ಜೊತೆ ಮಾಡಿಕೊಂಡು ಪೇಟೆಗೆ ಹೋಗಿ ಎಲ್ಲ ಸಾಮಾನುಗಳನ್ನೂ ತಂದಿದ್ದಳು. ಕಾಳು ಹಸನುಮಾಡಿ ಗಿರಣಿಗೆ ಹಾಕಿಸಿ, ಹಿಟ್ಟು ಸ್ವಚ್ಛಮಾಡಿಕೊಂಡು, ಕಾಯಿಪಲ್ಲೆ ಸೋಸಿ ತೊಳೆದಿಟ್ಟು, ಹೆಚ್ಚಿಗೆ ಬೇಕಾಗುವ ಕೆಲವು ಪಾತ್ರೆಗಳನ್ನು ನೆರೆಮನೆಯಿಂದ ತಂದು ಈ ಎಲ್ಲ ಕೆಲಸಗಳ ಮಧ್ಯೆ ಸಂಜೆಯ ಅಡಿಗೆಯನ್ನೂ ಮಾಡಿ ಊಟ ಮುಗಿಸಿ ಹಾಸಿಗೆಯಲ್ಲಿ ಮೈಚಾಚಿದಾಗ ಗಡಿಯಾರದ ಮುಳ್ಳು ಹನ್ನೆರಡನ್ನು ಸಮೀಪಿಸುತ್ತಿತ್ತು.

ಮತ್ತೆ ಬೆಳಗ್ಗೆ ನಾಲ್ಕೂವರೆಗೆ ಎದ್ದು ಎರಡು-ಮೂರು ವಿಧದ ಕಾಯಿಪಲ್ಲೆ, ಚಟ್ನಿ ಎರಡು ತರಹದ ಅನ್ನ, ಖೀರು ಪುರಿ ಎಲ್ಲ ಅಡಿಗೆಯನ್ನು ಮುಗಿಸಿ ಅತಿಥಿಗಳಿಗೆಲ್ಲ ತಾಟು ಮಣೆಗಳನ್ನಿಟ್ಟು ಊಟಕ್ಕೆ ನೀಡಲು ಅಣಿಯಾದಾಗಲೂ ಹನ್ನೆರಡು ಗಂಟೆ ಬಾರಿಸಿತ್ತು. ಎದ್ದಾಗಿನಿಂದ ಸ್ವಲ್ಪವೂ ಬಿಡುವಿಲ್ಲದೆ ಕೆಲಸ ಮಾಡಿದ್ದಳು. ಕೈಕಾಲು ಸೋತಿದ್ದವು. ಆದರೂ ಅಡಿಗೆಯ ಪ್ರಶಂಸೆ ಕೇಳುತ್ತಲೆ ಎರವಲು ತಂದು ಹುರುಪಿನಿಂದ ಓಡಾಡಿ ಊಟಕ್ಕೆ ಬಡಿಸಿದಳು. ಹಸಿದ ಹೊಟ್ಟೆಯ ಒಂದು ತುತ್ತು ಊಟದ ಶಾಸ್ತ್ರ ಮಾಡಿ ಬಂದು ಹಾಸಿಗೆಯಲ್ಲಿ ಒರಗಿದ್ದಳು.

"ದಡ್" ಮುಂಬಾಗಿಲು ತೆಗೆದು ಒಳಗೆ ಬಂದ ಗಂಡನ ಹೆಜ್ಜೆಯ ಸಪ್ಪಳಕ್ಕೆ ಅನೂ ಬಾಗಿಲಿಗೆ ಮುಖ ಮಾಡಿ ಹೊರಳಿ ಮಲಗಿದಳು.

"ಅನೂ".....ಎಂದು ಬಹಳ ಉತ್ಸಾಹದಿಂದ ಕೂಗುತ್ತ ಬಂದ ಗಂಡ ಮಲಗಿದ್ದ ಅನುವನ್ನು ನೋಡಿ ಗಾಬರಿಯಾಗಿ ಬಂದು ಮಂಚದ ಮೇಲೆ ಕುಳಿತ.

"ಅನೂ ಯಾಕೆ ? ಮಲಗೀದಿ?ಏನಾತು?"

"ಯಾಕೂ ಇಲ್ಲಾ, ಸುಮ್ಮನಽ"

"ಸುಮ್ಮನಽ ಯಾಕ? ಆಯಾಸ ಆಗೇದೇನು? ಕೆಲಸಾ ಭಾಳ ಮಾಡಿದಿ ಅಂತ. ಹೌದೌದು ಇರಬೇಕು. ಅದಕ್ಕಽ ನಿನ್ನೀಯಿಂದ ಒಂದಽ ಸವನಽ ದುಡೀಲಿಕ್ಕೆ ಹತ್ತೀದಿ. ಆಯಾಸ ಆಗದಽ ಏನು?" ಅನೂಽ ಬೆನ್ನು ಸವರುತ್ತ ಮತ್ತೆ "ತಲೀ ನೋಯ್ತದೇನು? ಸ್ವಲ್ಪ ನೀಲಗಿರಿ ಎಣ್ಣೀ ಹಚ್ಚಲಾ ?" ಹಣೆ, ಕೂದಲು ನೇವರಿಸುತ್ತ ಕೇಳಿದ.

ಗಂಡನ ಹಿತವಾದ ಸ್ಪರ್ಶ, ಒಲುಮೆಯ ಮಾತುಗಳೆದುರು ಅನೂನ ಆಯಾಸವೆಲ್ಲಾ ಕರಗಿ ಹೋಯಿತು ಬಿಸಿಲಿನೆದುರಿನ ಮಂಜಿನಂತೆ. ಅವನ ಒಳ್ಳೆಯ ಮಾತು ಅವಳ ರೋಗಕ್ಕೆ ಸಂಜೀವಿನಿಯಾಯಿತು. ತನ್ನ ಕೆಲಸಕ್ಕೆ ತಕ್ಕ ಬೆಲೆ ಸಿಕ್ಕಿತೆಂಬ ಆತ್ಮತೃಪ್ತಿಯಾಯಿತು.

ತಮ್ಮ ಕರ್ಮಕ್ಕೆ ತಕ್ಕ ಫಲ ಸಿಕ್ಕಿತೆಂಬ ಸಂತೋಷದಲ್ಲಿ ಆಯಾಸವನ್ನೆಲ್ಲ ಮರೆತು ಎದ್ದು ಕುಳಿತಳು ಅನ್ನಪೂರ್ಣ.

***

ಮೇಲಿನ ಘಟನೆ ನಡೆದು ಈಗ ಮೂವತ್ತು ವರ್ಷಗಳು ಕಳೆದಿವೆ.

ಅನ್ನಪೂರ್ಣೆಯ ಮನೆಗೆ ಇನ್ನೊಮ್ಮೆ ಭೆಟ್ಟಿ ಕೊಡೋಣ. ಬನ್ನಿ, ಇದೇ ಅವಳ ಮನೆಯ ಮೆಟ್ಟಿಲು. ಹೊಸಿಲುದಾಟಿ ಒಳಕ್ಕೆ ಬನ್ನಿ. ಓಹೋ ಕಿವಿಗೇನೋ ಇಂಪಾದ ಸ್ವರ ಕೇಳಿಬರುತ್ತಿದೆ.

ಕಂದ ಜೋ ಜೋ ಬೆಳಕಿನಂದ ಜೋ ಜೋ

ಕಂದ ಜೋ ಜೋ ಪೂರ್ಣಚಂದ್ರ ಜೋ ಜೋ

ಅನ್ನಪೂರ್ಣ ತನ್ನ ಮಗುವಿಗೆ ಜೋಗುಳ ಹಾಡುತ್ತಿದ್ದಾಳೆಯೇನೋ! ಅಲ್ಲ ಅಲ್ಲ ನಿಮ್ಮ ಊಹೆ ತಪ್ಪು. ಅವಳು ಈಗ ಅನ್ನಪೂರ್ಣ ಅಲ್ಲ. ತನ್ನ ಮೊಮ್ಮಗ, ಮಗನ ಮಗುವಿಗೆ ಜೋಗುಳ ಹಾಡುತ್ತಿದ್ದಾಳೆ. ಓಹೋ ಮಗು ಮಲಗಲಿಲ್ಲವೇನೋ, ಅದನ್ನೆತ್ತಿಕೊಂಡು ಹೊರಗೆ ಬರುತ್ತಿದ್ದಾಳೆ ನೋಡಿ. ವಯಸ್ಸಾದರೂ ಮುತ್ತೈದೆಯಾಗಿ ಎಷ್ಟು ಚೆನ್ನಾಗಿ ಕಾಣುತ್ತಾಳಲ್ಲವೆ? ಅವಳ ತಲೆಯ ಬಳಿ ಕೂದಲಿಗೂ, ಅವಳ ಗಂಭೀರ, ಶಾಂತ ಮುಖಕ್ಕೂ ಒಳ್ಳೆ ಜೊತೆಯಾಗಿದೆ.

ಅನ್ನಪೂರ್ಣ ಒಂದು ಕೈಯಲ್ಲಿ ಮಗುವನ್ನೂ ಇನ್ನೊಂದು ಕೈಯಲ್ಲಿ ಸ್ವೆಟರ್ ಹೆಣಿಗೆಯನ್ನು ತಂದು ಮುಂದಿಟ್ಟುಕೊಂಡು ಚಾಪೆಯ ಮೇಲೆ ಕುಳಿತಳು. ಮಗುವಿನ ಮುಂದೆ ಆಟಿಗೆಯ ಸಾಮಾನು ಇಟ್ಟಳು. ತನ್ನ ಕೈಯಲ್ಲಿಯ ಹೆಣಿಗೆ ಹಾಕಲು ತೊಡಗಿದಳು. ನಾಲ್ಕಾರು ಟಾಕೀ ಹಾಕಿದ್ದಳೋ ಇಲ್ಲವೋ ತೊಡೆಯ ಮೇಲಿದ್ದ ಉಲನ್ನಿನ ಉಂಡಿಯನ್ನು ಮೊಮ್ಮಗ ಚೆಂಡು ಮಾಡಿ ಬೀಸಿ ಎಸೆದ.

"ಏನೋ ಶಶಿ, ನಿನ್ನ ತುಂಟತನಾ ಭಾಳ ಆತಪಾ. ಅಕ್ಕೀ ಆರಸಲಿಕ್ಕೆ ಕೂತರ ಅಕ್ಕಿ ಚೆಲ್ಲಾಡಿದಿ. ಮಲಗಿಸಬೇಕಂದರ ನಿದ್ದೀ ಮಾಡಲಿಲ್ಲ. ಮತ್ತ ಈಗ ಹೆಣೀಲಿಕ್ಕು ಬಿಡೂದಿಲ್ಲ" ಎನ್ನುತ್ತ ಹೆಣಿಗೆಯನ್ನು ಕೆಳಗಿಟ್ಟು ಮಗುವನ್ನು ಮುದ್ದಾಡಿದಳು.

"ಅನ್ನಮ್ಮಾ, ಏನ್ಮಾಡ್ತೀರಿ" ಎಂದು ಕರೆಯುತ್ತ ಗೆಳತಿ ಗೌರಮ್ಮ ಒಳಗೆ ಬಂದಳು.

"ಬರ್ರಿ" ಎಂದು ಕೂದಲು ಸೆರಗು ಸರಿಪಡಿಸಿಕೊಳ್ಳುತ್ತ ಅನ್ನಮ್ಮ ಚಾಪೆಯ ಒಂದು ಬದಿಗೆ ಸರಿದಳು.

"ಶಶೀ ಕೂಡ ಆಟ ಆಡ್ತಿದ್ದಿರೇನು ? ಇವತ್ತ ಗುಡೀಗೆ ಹೋಗೂಣು ಅಂದಿದ್ರೆಲ್ಲಾ ಬರ್ತೀರೇನು ಅಂತ ಕೇಳಲಿಕ್ಕೆ ಬಂದೆ" ಎಂದಳು ಗೌರಮ್ಮ.

"ಇಲ್ರಿ ಇವತ್ತ ಗುಡೀಗೆ ಬರಲಿಕ್ಕೆ ಆಗೂದಿಲ್ಲ. ಶಶಿ ಒಬ್ಬನಃ ಆಗ್ತಾನ ಅವನ್ನ ನೋಡಿಕೊಳ್ಳಲಿಕ್ಕೆ ಮನ್ಯಾಗಃ ಇರಬೇಕಾಗತದ."

"ಯಾಕ್ರೀ ಶಶೀ ಅವ್ವ ಮನ್ಯಾಗ ಇಲ್ಲೇನು."

"ಯಾವದೋ ಛೊಲೊ ಸಿನಿಮಾ ಬಂದದ, ಇಂದಿರಾನ್ನೂ ಕರಕೊಂಡು ಹೋಗಿಬರ್ತೀನಿ ಅಂದ ಶೇಖರ. ಶಶೀ ತ್ರಾಸ ಕೊಡ್ತಾನ ಬಿಟ್ಟಃ ಹೋಗ್ರಿ ಅಂತ ಹೇಳಿ ನಾನು ಇಟ್ಟುಕೊಂಡೆ."

"ಆತ ಬಿಡ್ರಿ, ನಿಮಗಂತೂ ಮನೀ ಬಿಟ್ಟು ಹೊರಗ ಬರಲಿಕ್ಕೇ ಆಗೂದಿಲ್ಲ. ಒಂದಿನಾ ಮೊಮ್ಮಗನ್ನ ಆಡಸ್ಬೇಕು. ಒಂದಿನಾ ಸೊಸೀಗೆ ಆರಾಮಿಲ್ಲಾ. ಮತ್ತೊಂದಿನಾ ಮನೀಗೆ ಮಂದಿ ಬರ್ತಾರ, ಹಿಂಗs ದಿನಾ ಏನರೆ ಇದ್ದs ಇರತಾವ."

"ಗೌರಮ್ಮ, ಮನಿ ಅಂದಮ್ಯಾಲೆ ಇವೆಲ್ಲಾ ಇರೂವ ಅಲ್ಲಾ?"

"ಮನೀ ಕೆಲಸಾ ಅನ್ನೂದು ಎಲ್ಲಾರಿಗೂ ಇದ್ದs ಇರತದ ಬಿಡ್ರಿ. ಆದ್ರೂ ಅದರಾಗs ಸವಡು ಮಾಡಿಕೊಂಡು ಹೊರಗ ಬರಬೇಕ್ರವಾ. ನಾ ಇವತ್ತ ಗುಡೀಗೆ ಹೋಗ್ತಿನಿ ಅಂತ ಹೇಳಿ ಇವತ್ತ ಅವರು ಸೀನೆಮಾಕ್ಕ ಹೋಗೂದು ಬ್ಯಾಡ ಅನಬೇಕಾಗಿತ್ತು. ದೇವ ದರ್ಶನ ಮಾಡಿದಂಗ ಆಗ್ತಿತ್ತು."

"ಇಲ್ನೋಡ್ರಿ ಗೌರಮ್ಮ, ಇಲ್ಲೇ ಬರೂದು ನನಗ ನಿಮಗ ಜಗಳಾ. ಸಿನಿಮಾಕ್ಕ ಹೋಗ್ತೀವಿ ಅಂತ ಹುಡುಗರು ಬಾಯಿಬಿಟ್ಟು ಕೇಳೂ ಮುಂದ ನೀವು ಮನ್ಯಾಗಿರ್ರೀ ನಾ ಗುಡೀಗೆ ಹೋಗ್ತೀನಿ ಅನ್ನೂದು ಏನ ದೊಡ್ಡಿಸ್ತನಾ?"

"ನೀವು ಇಷ್ಟು ದೊಡ್ಡ ಮನಸ ಮಾಡಿದರೂ ಮಗ ಸೊಸಿ ಎಷ್ಟು ನಿಮ್ಮನ್ನ ತೂಗಮಣಿ ಮ್ಯಾಲೆ ಕೂಡ್ರಿಸಿ ತೂಗುತಾರ ನೋಡ್ರಿ, ಅನ್ನಮ್ಮ ಸುಳ್ಳs ನಾವು ಈ ಪರಿ ದಣಕೊಳ್ಳೂದು."

"ಅವರು ಕೂಡ್ರಿಸಿ ತೂಗತೀನಿ ಅಂದರೂ ತೂಗಮಣಿ ಏರಲಿಕ್ಕೆ ನಾ ತಯಾರಿಲ್ಲ. ನಾವು ಸ್ವಲ್ಪ ದೊಡ್ಡ ಮನಸು ತೋರಿಸಿದರ ಗಂಡ, ಮಗ ಸೊಸೀ, ಮೊಮ್ಮಕ್ಕಳು ಎಲ್ಲಾರಿಗೂ ಸಂತೋಷ ಆಗ್ತದ. ಎಲ್ಲಾರೂ ಸಂತೋಷದಿಂದ ಇದ್ದರ ನನ್ನ ಮನಸಿಗೂ ಸಂತೋಷ ಇರ್ತದ."

"ಇವತ್ತ ದೇವರಿಗೆ ಭಾಳ ಸಿಂಗಾರ ಮಾಡುವವರಿದ್ದರು. ಕಣ್ತುಂಬ ನೋಡಿ ಸಂತೋಷ ಪಡತಿದ್ರಿ ಅಂತ ಹೇಳಿದೆ ನಿಮಗ ಇಷ್ಟೆಲ್ಲಾ, ನೀವೇನೂ ತಿಳಕೋಬ್ಯಾಡ್ರಿ ಮತ್ತ."

" ಹೌದ್ರಿ ಅದೆಲ್ಲಾ ಖರೆ, ಆದರ ದೇವರನ್ನ ನೋಡಿ ಸಂತೋಷ ಪಡೂಹಾಂಗs ನಾನು ಈ ಶಶೀ ಕೂಡ ಆಡೂ ಮುಂದು ಸಂತೋಷಪಡ್ತೀನಿ. ಸಣ್ಣ ಮಕ್ಕಳೂನು ದೇವರs ಇದ್ದಾಂಗ. ನೀವೇನೂ ತಪ್ಪು ತಿಳಕೋಬ್ಯಾಡ್ರಿ. ನೀವು ಹೋಗಿ ಬರ್ರಿ."

"ಆಗಲಿ, ಹೋಗಿ ಬರ್ತೀನೀ", ಗೌರಮ್ಮ ಮುಂಬಾಗಿಲು ದಾಟಿದರು.

ಇವರಿಬ್ಬರ ಮಾತಿನ ಗದ್ದಲದಲ್ಲಿಯೂ ಶಶಿ ಯಾವಾಗಲೋ ಅಮ್ಮನ ತೊಡೆಯ ಮೇಲೆ ನಿದ್ರೆಮಾಡಿದ್ದ.

ಮಧ್ಯಾಹ್ನದ ನಿದ್ರೆ ಮುಗಿಸಿ ಕೈಯಲ್ಲೊಂದು ಪುಸ್ತಕ ಹಿಡಿದು ಹೊರಗೆ ಬಂದ ಅನ್ನಮ್ಮನ ಗಂಡ "ಶಶೀ ನಿದ್ದಿ ಮಾಡ್ಯಾನ. ತೊಟ್ಟಿಲದಾಗ ಮಲಗಿಸಿ ಬಾ" ಎಂದಳು.

ಅನ್ನಮ್ಮ ಮತ್ತೆ ಹೊರಗೆ ಬಂದಾಗ ಕೈಯಲ್ಲೊಂದು ಚಹದ ಕಪ್ಪು ಇತ್ತು. ಅದನ್ನು ಗಂಡನಿಗೆ ಕೊಟ್ಟು, ಮತ್ತೆ ಹೆಣಿಗೆಗೆ ಕೈಯಿಡುತ್ತ "ಇವತ್ತು ವಾಕಿಂಗಿಗೆ ಹೋಗೋದಿಲ್ಲೇನ್ರಿ" ಎಂದಳು ಗಂಡನಿಗೆ.

"ಇಲ್ಲಾ, ಇವತ್ತು ನೀನು ಒಬ್ಬಾಕೀನೇ ಇದ್ದೀ ಮನಿಯೊಳಗ. ಅದಕ್ಕ ನಾನೂ ಹೊರಗ ಹೋಗಬಾರದು ಅಂತ ಮಾಡೇನಿ."

"ಹೊರಗೆ ಅಡ್ಡಾಡಿ ಬಂದರ ರಾತ್ರಿ ಹಸಿವಿ ಆಗ್ತದ ನಿಮಗ. ನಾ ಒಬ್ಬಾಕಿ ಇದ್ರ ಏನಾತು ? ಈಗ ಬರ್ತಾರ ಇಂದಿರಾ -ಶೇಖರ ಇಬ್ರೂ. ನೀವು ಹೋಗಿ ಬರ್ರಿ; ಹುಡುಗೂರು ಸಾಲಿಯಿಂದ ಬರೂ ಹೊತ್ತೂ ಆತು."

"ಅದೆಲ್ಲಾ ಇರ್ಲಿ ಬಿಡು. ಇವತ್ತ ನನ್ನ ತಲ್ಯಾಗ ಬ್ಯಾರೇ ವಿಚಾರನs ಅದ. ನೀನು ಗೌರಮ್ಮನ ಕೂಡ ಮಾತಾಡೂ ಮುಂದs ನನಗ ಎಚ್ಚರಾತು. ನಮ್ಮ ಹಿಂದಿನ ಮೂವತ್ತು ವರುಷದ ಜೀವನಾ ನೆನೆಸಿಕೊಂಡೆ. ನಿನ್ನ ಜೀವನ ಕರ್ತವ್ಯ-ಕರ್ಮ ಅಂತ ಯಾವಾಗಲೂ ಇದರೊಳಗs ಕಳೀತು. ನಿನ್ನ ಸ್ವಂತದ ಸುಖ ನೀ ಎಂದೂ ನೋಡಿಕೊಳ್ಳಲಿಲ್ಲ..."

"ಹೌದ್ರೀ, ಮೊದಲ ಅಂದರ ಹೊಸದಾಗಿ ಲಗ್ನಾಗಿ ಬಂದಾಗ ನನ್ನ ಒಳ್ಳೇತನಕ್ಕ ನಿಮ್ಮಿಂದ ಪ್ರಶಂಸಾ ಬೇಕೂ ಅಂತರೆ ಅನ್ನಿಸ್ತಿತ್ತು. ಆದರ ವಯಸ್ಸು ಆದಂಗ ಹಾಂಗ ಅನಸೂದಿಲ್ಲಾ. ನನ್ನ ಕರ್ತವ್ಯ ನಾ ನಿಷ್ಠಾದಿಂದ ಮಾಡತೇನಿ ಅನ್ನೂ ತೃಪ್ತಿ ಅದ ಮನಸ್ಸಿಗೆ."

"ದೊಡ್ಡ ದೊಡ್ಡ ತತ್ತ್ವಜ್ಞಾನಿಗಳು, ಮಹಾ ದಾರ್ಶನಿಕರು, ಪಂಡಿತರು, ಸಾಧು-ಸಂತರು ಸುದ್ಧಾ ಈ ರೀತಿ ನಡಕೋಬೇಕೂ ಅಂತ ಸಾಧನಾ ಮಾಡ್ತಿರ್ತಾರ. ಆದರ ನೀನು ನಿನಗ ಗೊತ್ತಿಲ್ಲಾಂಗs ಅದನ್ನ ಸಾಧಿಸಿ ಬಿಟ್ಟೀ ನೋಡು. ಮೊನ್ನೆ ಶ್ರೀನಿವಾಸರಾಯರ ಮನಿಯಿಂದ ವಿನೋಬಾ ಭಾವೆಯರ 'ಗೀತಾ ಪ್ರವಚನ' ಅನ್ನೂ ಪುಸ್ತಕ ತಂದೇನಿ. ಭಗವದ್ಗೀತಾದ ಸಾರ ಎಷ್ಟ ಛಂದಾಗಿ ಅದರೊಳಗ ಹೇಳ್ಯಾರ ಅಂದೀ. ಅದನ್ನs ನಿನಗ ಓದಿ ತೋರಸ್ಬೇಕೂ ಅಂತ ತಂದೆ."

"ಓದ್ರಿ ಕೇಳ್ತಿನಿ. ಭಾಳ ದಿನಾ ಆತು ನನಗೂ ಏನೂ ಓದಲಿಕ್ಕೇ ಆಗಿಲ್ಲ."

"ಕರ್ಮ ಮಾಡುವವನ ವೃತ್ತಿ ದ್ವಿಮುಖ; ನಾವು ಕರ್ಮ ಮಾಡಿದ ಮೇಲೆ ಅದರ ಫಲವನ್ನು ನಾವೇ ಅನುಭವಿಸಬೇಕು. ಅದು ನಮ್ಮ ಹಕ್ಕು ಎಂಬುದು ಒಂದು. ತದ್ವಿರುದ್ಧವಾಗಿ ನಮಗೆ ಫಲ ಸಿಗದಿದ್ದರೆ ನಾವು ಕರ್ಮವನ್ನೇ ಮಾಡುವುದಿಲ್ಲ ಎಂಬುದು ಇನ್ನೊಂದು. ಗೀತೆ ಇವೆರಡನ್ನೂ ಬಿಟ್ಟು ಮೂರನೆಯ ವೃತ್ತಿಯನ್ನು ಹೇಳುತ್ತದೆ: 'ಕರ್ಮ ಮಾಡು ಫಲದ ಹಕ್ಕನ್ನು ಬಿಡು' ಎನ್ನುತ್ತದೆ ಗೀತೆ. ಕರ್ಮ ಮಾಡಿದವನಿಗೆ ಫಲದ ಹಕ್ಕು ಇದ್ದೇ ಇದೆ. ನೀನದನ್ನು ನೀನಾಗಿ ಬಿಟ್ಟುಕೊಡು."

ಪ್ರವಚನ ಕೇಳುತ್ತ ಅನ್ನಮ್ಮ ಅದರಲ್ಲೇ ತಲ್ಲೀನಳಾದಳು. ಹೊತ್ತು ಸರಿದುದೇ ತಿಳಿಯಲಿಲ್ಲ ಇಬ್ಬರಿಗೂ. ಕತ್ತಲಾಯಿತೆಂದು ಎದ್ದು ದೇವರೆದುರು ದೀಪ ಹಚ್ಚಿ ಬಂದು ಗಂಡನಿಗೆ ನಮಸ್ಕಾರ ಮಾಡಿದಳು ಅನ್ನಪೂರ್ಣ. ವಿದ್ಯುಚ್ಛಕ್ತಿಯ ಬೆಳಕಿನಲ್ಲಿ ಓದು ಮುಂದೆ ಸಾಗಿತು.

"ನಿಷ್ಕಾಮ ಕರ್ಮದ ಮಾತನ್ನು ಬದಿಗೆ ಸರಿಸಿದರೂ ಪ್ರತ್ಯಕ್ಷವಾಗಿ ಕರ್ಮದಲ್ಲಿ ಇರುವ ಆನಂದ ಅದರ ಫಲದಲ್ಲಿ ಇಲ್ಲ....'

ತೊಟ್ಟಿಲಲ್ಲಿ ಶಶಿ ಎದ್ದು 'ಅಮ್ಮಾ' ಎಂದ. ಅನ್ನಮ್ಮ ಕೂಡಲೇ ಎದ್ದು "ಇನ್ನು ಓದುವದು ಸಾಕು. ನೀವು ಸ್ವಲ್ಪ ಹೊರಗೆ ತಿರುಗಾಡಿ ಬರ್ರಿ" ಎಂದು ಒಳಕ್ಕೆ ಹೋದಳು.

***

■■

# ತಾಯಿ ಕಂಡ ಕನಸು

ಪುಟ್ಟ ಪುಟ್ಟ ಪಾದಗಳ ಅಸ್ಪಷ್ಟ ಚಿತ್ರ ಕೆಂಪು ಮಣ್ಣಿನಲ್ಲಿ ಮೂಡುತ್ತಿತ್ತು. ಅದರ ಹಿಂದೆಯೇ ಅದಕ್ಕಿಂತ ಸ್ವಲ್ಪ ದೊಡ್ಡ ಹೆಜ್ಜೆಗಳ ಚಿತ್ರ ಮೂಡಿ ಮುಂದಿನ ಪಾದಗಳ ಚಿತ್ರವನ್ನು ಅಳಿಸುತ್ತಿತ್ತು.

ರಪ್.... ರಪ್.... ರಪ್.... ತೀರ ಹತ್ತಿರಕ್ಕೆ ಬಂದು ಸದ್ದು ನಿಂತಿತು. ಪಡಸಾಲೆಯಲ್ಲಿ ಅಕ್ಕಿ ಆರಿಸುತ್ತ ಕುಳಿತ ತಾಯಿ ಕತ್ತೆತ್ತಿ ಮಗಳನ್ನು ನೋಡಿದಳು. ಗೌರಿ ಧಾವಿಸಿ ಬಂದು ತಾಯಿಯ ತೊಡೆಯ ಮೇಲೆ ಬಿದ್ದು ಮುಖ ಮುಚ್ಚಿಕೊಂಡಿದ್ದಳು. ಬಿಸಿಲಿನಲ್ಲಿ ಓಡಿ ಬಂದುದಕ್ಕೆ ಅವಳ ಮುಖ ಕೆಂಪಾಗಿತ್ತು. ಉಸಿರಾಟ ವೇಗವಾಗಿತ್ತು. ಮಗಳ ಬೆನ್ನ ಮೇಲೆ ಕೈಯಾಡಿಸುತ್ತ ತಾಯಿ ಪ್ರೀತಿಯಿಂದ-

"ಯಾಕs ಗೌರಿ ಹಂಗ್ಯಾಕ ಓಡಿ ಬಂದಿ? ನಾಯಿಗೀಯಿ ಬೆನ್ನ ಹತ್ತಿತೇನು"ಎಂದಳು.

ಅವಳ ಮಾತು ಮುಗಿಯುವ ಮೊದಲೇ ಒಳಗೆ ಬಂದ ಗೌರಿಯ ಗೆಳತಿ ಸರಸೂ "ನಾಯಿ ಅಲ್ರಿ ನಾನs ಬೆನ್ನ ಹತ್ತೇನಿ. ಅದಕs ಓಡಿ ಬಂದಾಳ ಗೌರಿ. ನೋಡ್ರಿ ಈಕಿ ನಮ್ಮ ತ್ವಾಟದಾಗಿನ ಕೆಂಪು ಗುಲಾಬಿ ಹೂ ಹರಕೊಂಡ ಬಂದಾಳ. ನಾ ನಿಮಗ ಹೇಳಲಿಕ್ಕೆ ಬಂದೆ" ಎಂದಳು ತೇಕುತ್ತ.

ಕೂಡಲೇ ತಾಯಿ ಗೌರಿಗೆ "ಹೌದೇನs ಗೌರೀ ಅವರ ಗಿಡದಾಗಿನ ಹೂ ಹರಿದೀಯಾ? ಎಲ್ಲ್ಯದ ಹೂ?" ಎಂದಳು ಸಿಟ್ಟಿನಿಂದ. ಅವಳ ಮುಖದಲ್ಲೀಗ ನಗು ಮಾಯವಾಗಿ ಕೋಪ ಮೂಡಿತ್ತು.

ತಾಯಿಯ ಸಿಟ್ಟಿನ ನುಡಿಗೆ ಬೆದರಿದ ಗೌರಿಯ ಕಣ್ಣುಗಳಲ್ಲಿ ನೀರು ತುಂಬಿದವು. ಅವಳು ನಿಧಾನವಾಗಿ ತನ್ನ ಮುಷ್ಟಿ ಬಿಚ್ಚಿದಳು. ಒತ್ತಿ ಹಿಡಿದಿದ್ದರಿಂದ ಗುಲಾಬಿ ಪಕಳೆಗಳೆರಡು ಅವಳ ಅಂಗಿಯ ಮೇಲೆ ಉದುರಿದವು. ತಾಯಿ ಆ ಹೂವನ್ನು ತಿರುಗಿ ಸರಸೂನ ಕೈಯಲ್ಲಿ ಕೊಟ್ಟು ಗೌರಿಯ ಕಿವಿ ಹಿಂಡಿದಳು. ಕಿವಿ ಕೆಂಪಗಾಯಿತು. ಗೌರಿಯ ಅಳುವನ್ನು ಕಂಡು ದೂರು ಹೇಳಲು ಬಂದಿದ್ದ ಸರಸೂ ಕನಿಕರದಿಂದ "ಇರಲಿ ಬಿಡ್ರಿ, ಹೊಡಿಬ್ಯಾಡ್ರಿ, ಹೂ ನನಗ ಕೊಟ್ಟಾಳಲ್ಲ" ಎಂದು ಗೆಳತಿಯ ಕೈ ಹಿಡಿದಳು.

"ನೀ ಸುಮ್ಮನಿರು ಸರಸೂ, ಮಂದಿ ಸಾಮಾನು ಮುಟ್ಟಬಾರದು, ಆಶೆ ಮಾಡಬಾರದು ಅಂತ ಎಷ್ಟೋ ಸಾರೆ ಹೇಳೇನಿ ಇಕಿಗೆ. ಆದರೂ ಇವತ್ತ ಮತ್ತ ನಿಮ್ಮ ಹೂ ಹರದಾಳ. ಇವತ್ತ ಛೋಲೋತಂಗ ಬುದ್ಧಿ ಕಲಸ್ತೇನಿ ಇಕೀಗೆ...." ಎಂದವಳೇ ತಾಯಿ ಗೌರಿಯ ಕಪಾಳಿಗೆ ಜೋರಾಗಿ ಏಟು ಕೊಟ್ಟಳು....

***

ಗಂಡ ಕೊಟ್ಟ ಏಟಿನಿಂದಾಗಿ ಗೌರಿಗೆ ತನ್ನ ಬಾಲ್ಯದಲ್ಲಿ ನಡೆದ ಘಟನೆ ತಾನಾಗಿ ಮರುಕಳಿಸಿತು.

ಗಲ್ಲದ ಮೇಲೆ ಕೈಯಾಡಿಸುತ್ತ ಕುಳಿತ ಗೌರಿ ಎಚ್ಚತ್ತಳು. ಎದ್ದು ಕನ್ನಡಿ ಎದುರು ನಿಂತಳು. ಕಣ್ಣಲ್ಲಿಯ ನೀರು ಅವಳ ಬಿಸಿ ಉಸಿರಿಗೇ ಇಂಗಿಹೋಗಿತ್ತು. ಬಿಳಿಯ ಕೆನ್ನೆಯ ಮೇಲೆ ಕೆಂಪಾಗಿ ಮೂರು ಗೆರೆ ಮೂಡಿದ್ದವು. ಗಂಡ ಮಹೇಶ ಕಚೇರಿಗೆ ಹೋಗುವಾಗ ಅವಳಿಗೆ ಕೊಟ್ಟ ಕಾಣಿಕೆ ಅವು.

"ಗೌರಿ ಆ ನೀಲಿ ಕೋಟಿನ ಕಿಸೇದಾಗ ಕರಚೀಫ್ ಅದ ತಾ ಇಲ್ಲೆ"

ಗಂಡನ ಕಿಸೇದಾಗ ಕೈ ಹಾಕಿದ ಗೌರಿಗೆ ಸಿಕ್ಕಿದ್ದು ಅವಳ ಗಂಡನ ಸೋದರತ್ತೆಯ ಮಗಳು ಕಾಶಮ್ಮ ಬರೆಸಿದ್ದ ಪತ್ರ. ಇನ್ನೊಂದು ಕಿಸೆಯಲ್ಲಿದ್ದ ಕರಚೀಫನ್ನು ಗಂಡನ ಕೈಗೆ ಕೊಟ್ಟು ಪತ್ರವನ್ನು ಓದತೊಡಗಿದಳು.

ಅದನ್ನು ಓದುತ್ತಿದ್ದಂತೆ ಅವಳ ಮುಖ ಅರಳಿತು. ಅವಳ ಮೆಲು ನಗೆಯನ್ನು ಕಂಡ ಮಹೇಶ ಸಿಟ್ಟಿನಿಂದ-

"ಅದನ್ನೇನ ಓದ್ತೀ ತಾ ಇಲ್ಲೆ. ಹರಿದು ಕಸದ ಬುಟ್ಟಿಗೆ ಹಾಕ್ತೀನಿ. ದತ್ತಕ ಸುಳ್ಳ ಮಾಡ್ತಾಳಂತ ಅದ್ಹ್ಯಾಂಗ ಮಾಡತಾಳ ನೋಡೇಬಿಡತೇನಿ."

"ಗಂಡ ಸತ್ತಮ್ಯಾಲೆ ಆಕಿ ಅಶೋಕನ್ನ ದತ್ತಕ ತೋಗೋತೀನಿ ಅಂದಾಗs ಹೇಳಿದೆ ನಾನು, ದತ್ತಕ ಕೊಡೂದು ಬ್ಯಾಡಾ ಅಂತ. ಆಸ್ತಿ ಆಸೇಕ ನೀವs ನನ್ನ ಮಾತು ಕೇಳಲಿಲ್ಲ ಈಗ ನೋಡ್ರಿ, ಆಕಿ ಮನಸ್ಸು ತಿರಿಗೇದ. ತನ್ನ ತಂಗೀ ಮಗನ್ನ ದತ್ತಕ ತಗೊಂಡು ಅಶೋಕನ ಮಗನ್ನ ಮಾಡಿಕೊಂಡದ್ದು ಸುಳ್ಳು ಮಾಡ್ತಾಳಂತ. ನಿಮ್ಮ ಕಬೂಲಿ ಕೇಳ್ಯಾಳ. ಕೊಟ್ಟ ಬಿಡ್ರಿ ಕಬೂಲಿ. ತನಗ ಬೇಕಾದವರಿಗೆ ಕೊಡವಳ್ಯಾಕ ಆಸ್ತಿ."

"ಹೂಂ.; ಭೋಲೋ ಹೇಳ್ತಿ ನೀನು. ಕಬೂಲಿ ನಾ ಯಾಕ ಕೊಡಲಿ, ಕೋರ್ಟಿಗೆ ಹೋಗಲಿ ಬೇಕಾದರ. ಕೈಗೆ ಬರೂ ಆಸ್ತೀ ಬಿಡತಾರೇನ ಯಾರರೆ ? ಅಶೋಕಗ ಆಸ್ತಿ ಸಿಕ್ಕರ ನಮಗs ಬಂದಾಂಗ ಅಲ್ಲೇನು? ನಾಲ್ಕೈದು ಮಕ್ಕಳು ನಾವು ಎಲ್ಲರೂ ಸುಖದಿಂದ ಇರತೇವಿ." ರಮಿಸುವ ಧ್ವನಿಯಲ್ಲಿ ಹೇಳಿದ ಮಹೇಶ.

"ಯಾಕ ? ಈಗ ನಿಮಗ ಬರೂ ಪಗಾರದಾಗ ಸುಖದಿಂದ ಇಲ್ಲೇನು ನಾವು ?ಸುಖ ಅನ್ನೋದು ನಾವು ತಿಳಕೊಂಡ ಹಾಂಗ ಇರತದ. ಮನಸ್ಯಾನ ಆಸೇಕ ಮಿತೀನ ಇಲ್ಲ. ನಮ್ಮ ಮನಸ್ಸಿಗೆ ಅತೃಪ್ತಿ ಇದ್ದರ ತಿಂಗಳಿಗೆ ಸಾವಿರ ರೂಪಾಯಿ ಬಂದರೂ ಸಾಲೂದಿಲ್ಲ ನಮಗ. ಇದ್ದಷ್ಟರೊಳಗs ಸುಖದಿಂದ ಇರಲಿಕ್ಕೆ ಕಲಿಬೇಕು. ಮಂದೀದಕ್ಕ ಯಾಕ ಆಸೆ ಮಾಡಬೇಕು?" ಏರು ಧ್ವನಿಯಲ್ಲಿ ತನ್ನ ಮಾತನ್ನೇ ಸಮರ್ಥಿಸಿದಳು ಗೌರಿ.

"ಸಾಕು ಬಿಡು ನಿನ್ನ ತತ್ವಜ್ಞಾನ. ಅದs ವಿಷಯ ತೊಗೊಂಡು ಬಿ.ಎ. ಪಾಸಾಗೇನಿ ನನಗs ಬುದ್ಧಿ ಹೇಳತಿಯೇನು?" ಬೇಸರದಿಂದ ಹುಬ್ಬು ಗಂಟಿಕ್ಕಿ ನುಡಿದ ಮಹೇಶ.

"ನೀವು ಬರೇ ಪುಸ್ತಕದಾಗ ತತ್ವಜ್ಞಾನ ಓದಿ ಮರತಬಿಡಬೇಕಂತ ಮಾಡೀರಿ. ಆದರ ಅದರ್ಹ್ಯಾಂಗs ಜೀವನದಾಗ ನಡೀಬೇಕು" ಗೌರಿ ಧೈರ್ಯದಿಂದ ಗಂಡನ ಎದುರಿಗೆ ನಿಂತು ಹೇಳಿದ್ದಳು.

ಮಾತು ಪೂರ್ತಿಯಾಗುವ ಮೊದಲೇ ಕೆನ್ನೆಗೆ ಏಟು ಬಿದ್ದಿತ್ತು.

ಗಂಡ ಹೋಗಿ ಎಷ್ಟೋ ಹೊತ್ತಾಗಿತ್ತು. ತನ್ನ ತಾಯಿಯಿಂದ ನಿಸ್ಪೃಹತೆಯ ಪಾಠ ಕಲಿತಿದ್ದ ಗೌರಿಗೆ ಗಂಡನ ಸ್ವಭಾವದಿಂದ ಮೈಗಿತಂಲೂ ಮನಸ್ಸಿಗೆ ಹೆಚ್ಚು ನೋವಾಗಿತ್ತು. ನಿಟ್ಟುಸಿರು ಬಿಟ್ಟು, ಹೊರಗಿನ ಬಾಗಿಲು ಮುಚ್ಚಿ ಒಳಕ್ಕೆ ನಡೆದಳು.

***

ಫಟ್.... ಫೈಲ್ ತಂದು ಗಟ್ಟಿಯಾಗಿ ಅಪ್ಪಳಿಸಿದ ಮಹೇಶ ಮೇಜಿನ ಮೇಲೆ. ಅವನು ಅಪ್ಪಳಿಸಿದ ರಭಸಕ್ಕೆ ಮೇಜಿನ ಮೇಲಿದ್ದ ಮಸಿ ಕುಡಿಕೆಯೆಲ್ಲ ಅಲ್ಲೋಲ ಕಲ್ಲೋಲವೆದ್ದಿತು -ಅವನ ತಲೆಯಲ್ಲಿಯ ವಿಚಾರಗಳ ತಾಕಲಾಟದಂತೆ. ಎರಡು ಹನಿ ಮಸಿ ಚಿಮ್ಮಿತು ಕೂಡ, ಅವನ ನೆನಪಿನ ಬುಗ್ಗೆ ಚಿಮ್ಮಿದಂತೆ....

ತಾನಿನ್ನೂ ಕನ್ನಡ ಮೂರನೆಯ ಕ್ಲಾಸಿನಲ್ಲಿ ಓದುತ್ತಿದ್ದಾಗ ನಡೆದ ಸಂಗತಿಯದು. ಶಾಲೆಯ ಆಟದ ಬಯಲಿನಲ್ಲಿ ಹುಣಸೀಮರದ ಕೆಳಗೆ ತನಗೊಂದು ಹೊಸ ಪೆನ್ಸಿಲ್ ಸಿಕ್ಕಿತು. ಅದಕ್ಕೆ ಹಿಂದೆ ರಬ್ಬರನ್ನು ಹಚ್ಚಿದ್ದರು. ಅದನ್ನು ಕಂಡು ಆಶೆಯಿಂದ ಹಾಗೆಯೇ ಮುಚ್ಚಿಕೊಂಡು ಒಬ್ಬರಿಗೂ ತೋರಿಸದೆ ಮನೆಗೆ ತಂದ. ಆದರೂ ಮನಸ್ಸಿನ ಆತುರ ತಡೆಯಲಾರದೆ ತಾಯಿಗೆ ಅದನ್ನು ತೋರಿಸಿದಾಗ ಅವಳು-

"ಸಿಕ್ಕಿತs? ಛಲೋ ಆತು, ಇಟ್ಟುಕೋ ನೀನs" ಎಂದುಬಿಟ್ಟಳು. ಆ ವಿಷಯಕ್ಕೆ ಹೆಚ್ಚು ಮಹತ್ವವನ್ನೇ ಕೊಡದೆ.

ಆದರೆ ಹಾಗೆಯೇ ಅದನ್ನು ಶಾಲೆಗೆ ಒಯ್ಯುವ ಧೈರ್ಯವಿರಲಿಲ್ಲ ತನಗೆ. ಆ ಗೇಣುದ್ದ ಹೊಸ ಪೆನ್ಸಿಲ್ಲಿನ ಮೇಲಿನ ಹೊಳಪು ಹೋಗುವಂತೆ ಮಾಡಿ ಅಲ್ಲಲ್ಲಿ ಕಚ್ಚು ಹಾಕಿ ಉಳಿದ ಹುಡುಗರು ಗುರುತು ಹಿಡಿಯದಂತೆ ಮಾಡಬೇಕಾದರೆ ತನಗೆ ಸಾಕುಸಾಕಾಗಿತ್ತು. ಆದರೂ ಆ ಪೆನ್ಸಿಲ್ ಕಳೆದುಕೊಂಡ ಹುಡುಗ ಗುರುತಿಸಿಯೇ ಬಿಟ್ಟಿದ್ದ. ಅವನೊಡನೆ ಜಗಳಾಡಿ, ಗುದ್ದಾಡಿ ಅದನ್ನು ತಮ್ಮ ಅಕ್ಕ ಕೊಡಿಸಿದ್ದಾಳೆಂದು ಸುಳ್ಳು ಹೇಳಿ ತನಗೇ ದಕ್ಕಿಸಿಕೊಂಡಿದ್ದ ಆ ಪೆನ್ಸಿಲ್‌ನ್ನು.

ಆದರೆ ಅದನ್ನು ನಂಬದ ಆ ಹುಡುಗ ತಾನು ಕಳವು ಮಾಡಿದ್ದೇ ನಿಜವೆಂದು ನಂಬಿದ್ದು ಅಷ್ಟೇ ಅಲ್ಲ ಶಾಲೆಯ ಹುಡುಗರಿಗೂ ಹೇಳಿಬಿಟ್ಟಿದ್ದ. ಅವರು ಮೇಲಿಂದ ಮೇಲೆ ತನಗೆ ಕಳ್ಳ ಕಳ್ಳ ಎಂದು ಕೂಗುವದೂ, ಅಣಕಿಸುವುದು, ತನ್ನನ್ನು ಬಿಟ್ಟು ದೂರ ಕೂಡ್ರುವದು, ಜಗಳಾಡುವುದು, ಮಾಡುವುದನ್ನು ನೋಡಿದಾಗ ತನಗೆ ಅಳುವುಕ್ಕಿ ಬರುತ್ತಿತ್ತು. ತಾನು ಯಾಕಾದರೂ ಆಶೆಗೆ ಬಿದ್ದು ಇಂಥಾ ಕಳ್ಳ ಕೆಲಸ ಮಾಡಿದೆನೋ ಎಂದು ಕಳವಳವಾಗುತ್ತಿತ್ತು. ಒಂದೊಂದು ಸಲ ಆ ಹುಡುಗನಿಗೆ ನಿಜ ಹೇಳಿ ಪೆನ್ಸಿಲ್ ಕೊಟ್ಟುಬಿಡಲೇನೋ ಎನ್ನಿಸುತ್ತಿತ್ತು. ಆದರೆ ಅದರಿಂದ ತಾನು ನಿಜವಾಗಿಯೂ ಕಳ್ಳನೆನ್ನುವುದು ಗೊತ್ತಾಗಿ ತನಗೆ ಇನ್ನಷ್ಟು ಛೀಮಾರಿ ಮಾಡುತ್ತಿದ್ದರೆಂದು ಹೆದರಿ ಆ ಕೆಲಸ ಮಾಡಿರಲಿಲ್ಲ; ಕಳ್ಳತನ ಮಾಡುವುದು ಕೆಟ್ಟ ಕೆಲಸ; ಆದಕೆ ಅದನ್ನೊಪ್ಪಿಕೊಂಡು ಪಶ್ಚಾತ್ತಾಪ ಪಡುವುದು ಒಳ್ಳೆಯ ಕೆಲಸ ಎಂದು ತನಗೆ ಮನೆಯಲ್ಲಿ ಯಾರೂ ತಿಳಿಸಿ ಹೇಳಲಿಲ್ಲ. ಯಾರು ಹೇಳಬೇಕು? ಅಪ್ಪನಿಗೆ ಹೊರಗಿನ ಕೆಲಸ, ಹೊಲದ ಕೆಲಸಗಳೇ ಬಹಳ. ಅವ್ವನಿಗಂತೂ ಮನೆಗೆಲಸಗಳಲ್ಲಿ ಬಿಡುವೇ ಸಿಕ್ಕುತ್ತಿರಲಿಲ್ಲ. ತಾನಂತೂ ಅಶಿಕ್ಷಿತಳು, ಮಗ ಶಾಲೆಗೆ ಹೋಗುತ್ತಾನೆ ಎನ್ನುವುದೊಂದೇ ಅಭಿಮಾನ ಅವಳಿಗೆ. ಮಕ್ಕಳನ್ನು ತಿದ್ದಬೇಕು ಎನ್ನುವ ಬುದ್ಧಿಯೇ ಅವಳದಲ್ಲ. ಅದಕ್ಕೇ ಮನಸ್ಸು ಅಳುಕುತ್ತಿದ್ದರೂ ಆಮೇಲೆ ಪಶ್ಚಾತ್ತಾಪವಾಗುತ್ತಿದ್ದರೂ, ದುರಾಶೆಗೆ ಬಿದ್ದು ಬೇರೆಯವರ ಪುಸ್ತಕ, ಪೆನ್ಸಿಲ್, ರಬ್ಬರು ಕದ್ದು ತನ್ನದೇ ಎಂದು ಸಾಧಿಸಿಕೊಂಡೆ. ಹಾಗೆಯೇ ಪರೀಕ್ಷೆಯ ಉತ್ತರಗಳನ್ನೂ ಕಾಫಿ ಮಾಡಿ ತೇರ್ಗಡೆ ಹೊಂದಿ ನೌಕರಿ ಪಡೆದೆ.

ಅವನಿಗರಿಯದಂತೆಯೇ ಮಹೇಶನ ಕೈ ಪೆನ್ ಎತ್ತಿಕೊಂಡು ಬ್ಲಾಟಿಂಗಿನ ಮೇಲೆ ಗೀಚುತ್ತಿತ್ತು.

"ಏನ್ರೀ ಮಹೇಶರಾವ್ ಏಳ್ರೀ ಎರಡೂವರಿ ಆತು; ಚಹಾ ಕುಡಿದು ಬರೂಣು ಬರ್ರಿ" ಮಗ್ಗಲ ಮೇಜಿನ ಶಂಕರಪ್ಪ ಕೇಳಿದರು.

ವಿಚಾರ ತಂದ್ರಿಯಿಂದ ಎಚ್ಚತ್ತ ಮಹೇಶ "ನಾ ಇವತ್ತ ಒಲ್ಲೆ, ನೀವs ಹೋಗಿಬರ್ರಿ" ಎಂದ.

"ಯಾಕ್ರೀ, ಸಾಹೇಬರ ಹತ್ತರ ಫೈಲ್ ತೊಗೊಂಡು ಹೋಗಿದ್ದಿರೆಲ್ಲಾ, ಏನರೇ ಅಂದರೇನು ? ಬಿಡ್ರೀ ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೋಬಾರದು. ನಡೀರಿ ಹೋಗೂಣು" ಶಂಕರಪ್ಪ ಒತ್ತಾಯ ಮಾಡಿದರು.

"ಪ್ಲೀಜ, ನನಗ ಬರೂ ಮನಸ್ಸಿಲ್ಲಾ, ಜುಲಮಿ ಮಾಡಬ್ಯಾಡ್ರಿ"ಎಂದ ಮಹೇಶ.

ಹೋಗುತ್ತಿದ್ದ ಶಂಕ್ರಪ್ಪನನ್ನು ನೋಡುತ್ತ ತನ್ನಷ್ಟಕ್ಕೆ "ಇವತ್ತ ಯಾವುದೋ ಛೋಲೋ ಆಸಾಮಿ ಹಿಡಿದಂಗ ಕಾಣಸ್ತದ ಶಂಕರಪ್ಪನವರು, ರೊಕ್ಕಾ ಭಾಳ ಹೊಡಿದಿರಬೇಕು" ಎಂದುಕೊಂಡು ನಸುನಕ್ಕ.

ಆದರ ಈಗ ಒಂದೆರಡು ವಾರದ ಹಿಂದೆ ಅವರು ತನ್ನ ಜೋಡಿ ಚಹಾದಂಗಡಿಗೆ ಬಂದಾಗ ಮುಖ ಸಣ್ಣದು ಮಾಡಿಕೊಂಡು ಹೇಳತಿದ್ದರು. "ನಮ್ಮ ಮನೀಯವರಿಗೆ ಕ್ಷಯಾ ಆಗೇದಂತ. ಡಾಕ್ಟರರು ಹೇಳಿದರು. ಸ್ಯಾನಿಟೋರಿಯಮ್‌ದಾಗ ಇಟ್ಟೇನಿ" ಅಂತ.

ನನಗ ಪಾಪ ಅನ್ನಿಸಿತು. ಗೌರಿ ಮುಂದ ಇವರ ಸುದ್ದೀ ಹೇಳಿದೆ. ಅದಕ್ಕ ಅವಳು "ಲಂಚದ ರೊಕ್ಕ ಅಲ್ಲೆ ಡಾಕ್ಟರರಿಗೆ ಖರ್ಚಾಗಿ ಹೋಗತದ. ಇಷ್ಟು ತಿಳಿಯೂದಿಲ್ಲೇನು?" ಅಂದಳು. ಹೌದ್ಹಾದು ಅವಳು ಅನ್ನೂದು ನಿಜ ಇರಬೇಕು. ಯಾಕಂದರ.....

ಗೌರಿ ಮೊನ್ನೆ ತನ್ನ ಕಿಸೆಗೆ ಕೈ ಹಾಕಿದಾಗ ಹತ್ತರ ಮೂರು ನೋಟು ತೆಗೆದಳು. ಅದನ್ನು ನೋಡಿ ಅವಳ ಮುಖಾ ಅರಳ್ತದ ಅಂತ ಮಾಡಿದ್ದೆ. ಎರಡು ತಿಂಗಳಿಂದ ಅವಳಿಗೊಂದು ಒಳ್ಳೆಯ ಪತ್ತಲ, ಪೋಲ್ಕಾದ ಅರಿವಿ ತೊಗೋಬೇಕಾಗಿತ್ತು, ಆದರ ಹೆಚ್ಚಿನ ಖರ್ಚಿನಿಂದ ರೊಕ್ಕ ಉಳೀತಿದ್ದಿಲ್ಲಾ. ಅದಕ್ಕs ಅವಳಿಗೆ "ಗೌರೀ ಇವತ್ತ ಸಂಜೀ ಮುಂದ ಪ್ಯಾಟ್ಯಾಗ ಹೋಗಿ ನಿನಗ ಪತ್ತಲ ಪೋಲ್ಕಾದ ಅರಿವಿ ತೊಗೊಳ್ಳೂಣು" ಅಂತ ಅಂದೆ. ಆದರ ಅವಳು ನನ್ನ ದಿಟ್ಟಿಸಿ ನೋಡಿ, "ಅಲ್ರೀ ಈ ತಿಂಗಳು ಎಲ್ಲಾರದು ಬಿಲ್ಲು ಕೊಟ್ಟು ೧೦-೧೫ ರೂಪಾಯಿ ಉಳಿದಾವು ಅಂತಿದ್ರೀ. ಬ್ರೆಡ್ಡು, ಹಣ್ಣು, ಕಾಯಿಪಲ್ಲೆ ಅಂತ್ಹೇಳಿ ಅವೂ ಖರ್ಚಾಗಿರಬೇಕು. ಇವತ್ತ ೨೭ನೆಯ ತಾರೀಖು; ಈ ಮೂವತ್ತು ರೂಪಾಯ ಎಲ್ಲಿಂದ ಬಂದವು?" ಅಂತ ಕೇಳಿದಳು.

ನಾನು ಸರಳs ಹೇಳಿಬಿಟ್ಟೆ, "ಇವತ್ತ ಒಂದ ಅರ್ಜಂಟ ಕಾಗದಾ ಸಾಹೇಬರ ಸಹೀಗೆ ಕಳಿಸಿಬಿಟ್ಟೆ. ಆ ರೈತ ಹಿಗ್ಗಿ ನನಗ ೩೦ ರೂಪಾಯಿ ಕೊಟ್ಟಬಿಟ್ಟಾ" ಅಂತ.

ಅದಕ್ಕ ಅವಳು ಮುಖಾ ಸಣ್ಣದು ಮಾಡಿ, "ನೀವು ಕೆಲಸಾ ಮಾಡಿದರ ಸರಕಾರದವರು ನಿಮಗೆ ಸಂಬಳಾ ಕೊಡತಾರ. ಆದರ ಆಶಾಕ ಬಿದ್ದು ನೀವು ಆ ರೈತನ ಕಡೀಂದ ರೊಕ್ಕಾ ಇಸಕೋ ಬಾರದಾಗಿತ್ತು. ಪಾಪ! ಅವರಿಗೆ ತ್ರಾಸೆಷ್ಟೋ, ಮಳೀ ಹ್ಯಾಂಗೋ, ಬೆಳಿ ಹ್ಯಾಂಗೋ. ಮಕ್ಕಳಿಗೆ ಮೈತುಂಬ ಅರಿವಿ ಇರೂದಿಲ್ಲ. ಹೊಟ್ಟೆ ತುಂಬ ಅನ್ನ ಇರೂದಿಲ್ಲ. ಆದರೂ ತನ್ನ ಕೆಲಸಾ ಲಗೂ ಆಗಲಿ ಅನ್ನೂ ಆಸೇಕ ನಿಮ್ಮಂಥಾವರಿಗೆ ರೊಕ್ಕ ಕೊಡತಾರ ಅವರು. ಆದರ ಒಳಗ ಅವರ ಜೀವ ಎಷ್ಟ ಮರಗತದsನೋ; ಆ ಮರುಗ ನಮಗ ಹತ್ತದs ಬಿಡೂದಿಲ್ಲ. ನನಗ ಇಂಥಾ ರೊಕ್ಕದಿಂದ ಪತ್ತಲಾ, ಅರಿವಿ ಏನೂ ಬ್ಯಾಡಾ, ನಾ ಪ್ಯಾಟ್ಯಾಗ ಬರೂದಿಲ್ಲ"ಅಂತ ಮಾರೀಮ್ಯಾಲೆ ಹೊಡದ್ಹಾಂಗ ಹೇಳಿಬಿಟ್ಟಳು.

ನನಗೂ ನಾ ಮಾಡಿದ್ದು ತಪ್ಪಾತೇನೋ ಅಂತ ಅನಿಸಿತು. ಆದರ ಕೆಲಸ ಮಿಂಚಿಹೋಗಿತ್ತು. ತೊಗೊಂಡ ರೊಕ್ಕ ತಿರುಗಿ ಕೊಡಲಿಕ್ಕೆ ಬರೂ ಹಾಂಗ ಇದ್ದಿಲ್ಲಾ. ಹಾಗೇ ಇಟಗೊಂಡಬಿಟ್ಟೆ. ಮರುದಿನಾನs ಎರಡನೆ ಮಗಳು ಅನುರಾಧಾಗ ಜ್ವರಾ ಬಂದವು. ಡಾಕ್ಟರರು ಟೈಫಾಯ್ಡ್ ಅಂತ ಹೇಳಿ ಬಿಟ್ಟರು. ಅವಳ ಆರೈಕೆಗೆ ಆ ಮೂವತ್ತು ರೂಪಾಯಿ ಅಲ್ಲದs ಪಗಾರದಾಗಿನ ನಾಲ್ವತ್ತು ರೂಪಾಯಿನೂ ಕೈಬಿಟ್ಟವು. ಆ ರೈತನ ಮರಗs ಹತ್ತಿರಬೇಕು ನಮಗ. ಗೌರಿ ಒಂದೊಂದು ಮಾತು ಎಷ್ಟು ಖರೇ ಹೇಳ್ತಾಳ ಅಂತೀರಿ....

ಸಾಹೇಬರ ಕೋಣೆಯಿಂದ ಗಂಟೆಯ ಸಪ್ಪಳ ಕೇಳಿ ಜಿಗಿದು ಬಿದ್ದ ಮಹೇಶ ವಾಸ್ತವ ಲೋಕಕ್ಕೆ ಬಂದು ಪೆನ್ನು ಕಾಗದದ ಮೇಲೆ ಓಡಿಸಿದ. ಮನೆಯಲ್ಲಿ ತಾವು ಹೊರಡುವಾಗ ನಡೆದ ಘಟನೆಯ ನೆನಪಾಗಿ ಮನಸ್ಸಿಗೆ ಕಳವಳವಾಯಿತು. ಬಂದಾಗಿನಿಂದ ವಿಚಾರಮಾಡಿ ಬೇಸತ್ತ ತಲೆ ಸಿಡಿಯತೊಡಗಿತು. ಕೈಯಲ್ಲಿಯ ಕೆಲಸ ಮುಂದೆ ಸಾಗದಾಯಿತು. ಸಾಹೇಬರ ಕೋಣೆಯಿಂದ ಹೊರಬರುತ್ತಿದ್ದ ಹೊಟೆಲ್ ಮಾಣಿಗೆ ತನಗಾಗಿ ಚಹ ತರಲು ಹೇಳಿದ.

ಸಾಹೇಬರ ಕೋಣೆಯಲ್ಲಿ ಫೋನಿನ ಗಂಟೆ ಸಪ್ಪಳವಾಯಿತು. ಸಾಹೇಬರು ಮಾತನಾಡಿದ ಅಸ್ಪಷ್ಟ ಧ್ವನಿಯೂ ಕೇಳಿತು. ಮುಂದೆ ಐದು ನಿಮಿಷಗಳಲ್ಲಿಯೆ ಸಾಹೇಬರು ಕಾರಿನಲ್ಲಿ ಮನೆಗೆ ಹೊರಟರು.

ಕೈಗೆ ಪೆನ್ನು ಎತ್ತಿಕೊಳ್ಳುತ್ತಿದ್ದಂತೆ "ಛೇ ಛೇ ಇಂಥಾ ಪ್ರಸಂಗ ಯಾರಿಗೂ ಬರಬಾರದು ನೋಡ್ರಿ". ಸಾಹೇಬರ ಪರ್ಸನಲ್ ಕ್ಲಾರ್ಕ ಕುಲಕರ್ಣಿ ತಗ್ಗು ಧ್ವನಿಯಲ್ಲಿ ಮಹೇಶನಿಗೆ ಹೇಳಿದ.

"ಯಾಕ ? ಯಾರಿಗೆ ಏನಾಯಿತು.?" ಇನ್ನೊಬ್ಬ ಕ್ಲಾರ್ಕ ಪಾಟೀಲನೂ ಕಿವಿಕೊಟ್ಟ.

"ಈಗ ಎರಡ ವರ್ಷದ ಹಿಂದ ಸಾಹೇಬರು ತಮ್ಮ ಮಗಳ ಮದಿವಿ ಮಾಡಿದ್ರಲ್ಲಾ. ಹುಡುಕೀ ಹುಡುಕೀ ಜಮೀನ್ದಾರರು, ಸುಸಂಸ್ಕೃತರು ಸುರೂಪಿ ಅಂತ ಹೇಳಿ ಕೇಳಿದಷ್ಟು ವರದಕ್ಷಿಣೆ ಕೊಟ್ಟು ಮಗಳ, ಕೊಟ್ಟರಲ್ಲ."

"ಹೌದೌದು ನಾನೂ ಮದವಿಗೆ ಹೋಗಿದ್ದೆ. ವರ ಒಳ್ಳೇ ಜಂಟಲಮೆನ್ ಇದ್ದಾಂಗ ಇದ್ದನಲ್ಲ" ಮಹೇಶ ಆಸ್ಥೆಯಿಂದ ಕೇಳಿದ.

"ಹುಂ ಆ ಜಂಟಲ್‌ಮನ್‌ನ ಬಣ್ಣಾ ಈಗ ತಿಳಿದsದ. ಅಂವಾ ಆ ಆಸ್ತೀಗೆ ದತ್ತsಕ ಹೋದಾವಾ. ಕಷ್ಟಪಡದsನ ಕೈಗೆ ಸಂಪತ್ತು ಬಂತು. ಕುಡಿಯುವದು. ಜೂಜ ಆಡೂದು ಎಲ್ಲಾ ಕಲಿತಾನಂತ. ಊರೊಳಗಿದ್ದು ಆಸ್ತೀ ಮೇಲ್ವಿಚಾರಣೆ ಮಾಡೂದು ಬಿಟ್ಟು ಹೆಂಡ್ತೀನ ಆ ಹಳ್ಳೀಯೊಳಗs ಕೊಳೀಲಿಕ್ಕೆ ಬಿಟ್ಟು ತಾನು ಬೆಂಗಳೂರಾಗ ಇರತಾನಂತ ಮಜಾ ಮಾಡಿಕೋತ. ರೊಕ್ಕ ಬೇಕಾದಾಗ ಅಷ್ಟು ಊರಿಗೆ ಬರೂದು, ಹೆಂಡತಿ ಬುದ್ಧೀ ಹೇಳಲಿಕ್ಕೆ ಬಂದರ ಅವಳನ್ನ ಹೊಡಿಯೂದು ತಾನು ರೊಕ್ಕಾ ತೊಗೊಂಡು ಹೋಗಿಬಿಡೂದು. ಹಿಂಗs ಮಾಡ್ತಿದ್ದನಂತ...."

"ಸಾಹೇಬರಿಗೆ ಗೊತ್ತಾಗಿದ್ದಿಲ್ಲೇನು ಈ ಸುದ್ದಿ ?" ನಡುವೆಯೇ ಬಾಯಿ ಹಾಕಿದ ಪಾಟೀಲ.

"ಅದನ್ನs ಹೇಳ್ತೀನಿ ಕೇಳ್ರಿ. ಅವಳಿಗೆ ಮೈಯಾಗ ಆರಾಮ ಇಲ್ಲದಿದ್ರೂ ಔಷಧ ಕೊಡಿಸಲಿಲ್ಲಂತ, ಆ ಮೇಲೆ ತಂದೆಗೆ ಪತ್ರಾ ಬರದಳಂತ. ಅವರs ಹೋಗಿ ಮೊನ್ನೆ ಆಕೀನ್ನ ಕರಕೊಂಡು ಬಂದಾರ. ಕಳಿಸಲಿಕ್ಕೂ ತಯಾರ ಇದ್ದಿದ್ದಿಲ್ಲ ಅಂತ . ಪಾಪs ಹುಡುಗೀ ಭಾಳ ಸೊರಗ್ಯಾಳಂತ ನಮ್ಮ ಮನೆಯವರು ಹೇಳತಿದ್ದರು. ಇವತ್ತ ಇಲ್ಲಿಗೆ ಬಂದು ಬಿಟ್ಟಾನಂತ ಸುದ್ದಿ ಬಂತು. ಅದಕ್ಕs ಸಾಹೇಬರು ಗಾಬರ್‍ಯಾಗಿ ಮನೀಗೆ ಹೋದರು" ಕುಲಕರ್ಣಿ ನಿಟ್ಟುಸಿರು ಬಿಟ್ಟ.

"ನೋಡ್ರಿ Mr. ಕುಲಕರ್ಣಿ ನಾ ಒಂದ ಮಾತ ಹೇಳತೇನಿ, ಹೆಣ್ಣು ಕೊಡಬೇಕಾದರ ಭಾಳ ವಿಚಾರ ಮಾಡಬೇಕಾಗತದ. ಕಷ್ಟ ಪಡದನ ಕೈಗೆ ಆಸ್ತಿ ಸಿಕ್ಕರಂತೂ ಗಂಡ ಮಕ್ಕಳು ಲಂಗು ಲಗಾಮಿಲ್ಲದs ಹಾಳ ಮಾಡಲಿಕ್ಕೆ ಕಲೀತಾರ. ಅದರಾಗ ಆ ದತ್ತsಕ ತಗೊಂಡ ಹಿರಿಯರು ಜಿಪುಣತನ ಮಾಡಿ, ಬಡ್ಡಿಗೆ ಬಡ್ಡಿ ಕೂಡಿಸಿ ಚಕ್ರಬಡ್ಡಿ ತೊಗೊಂಡು ಬಡವರ ಜೀವಾ ಅರೆದಿದ್ದರಂತೂ ದತ್ತಕ ಮಕ್ಕಳು ಆ ಆಸ್ತಿಯೆಲ್ಲಾ ಖಾತ್ರಿಯಾಗಿ ಹಾಳಾಮಾಡ್ತಾರಂತ ನನ್ನ ಅಭಿಪ್ರಾಯ ಮತ್ತು ಇಂಥಾವು ಎಷ್ಟೋ ಉದಾಹರಣೆ ನೋಡೇನಿ." "ಛೇ ಛೇ ಸಾಹೇಬರು ಆಸ್ತೀ ಆಸೇಕ ಬಿದ್ದು ಹೆಚ್ಚು ವಿಚಾರನs ಮಾಡಲಿಲ್ಲ ಕಾಣತದ, ಪಾಪ ಅಲ್ಲರೀ" ಎಂದು ಪಾಟೀಲ ಮರುಕದಿಂದ ಹೇಳಿದ.

"ಅಗದೀ ನೀವು ಹೇಳಿದ್ದಾಂಗs ಆಗೇದ ನೋಡರಿ. ಈಗ ಆ ಹುಡುಗಿ ಒಂದs ಪಾಪ ಅಲ್ಲಾ. ಅಂವಾ ತಂದೀನ್ನ, ಹಡೆದ ತಂದಿನ್ನ ಇಬ್ಬರನ್ನೂ ಮನೀಬಿಟ್ಟು ಹೊರಗ ಹಾಕ್ಯಾನಂತ" ಎಂದ ಕುಲಕರ್ಣಿ.

ಮಹೇಶನ ತಲೆ ಗಿಮಿ ಗಿಮಿ ತಿರುಗಿದಂತಾಯಿತು. ಗಟ್ಟಿಯಾಗಿ ತಲೆ ಹಿಡಿದುಕೊಂಡ. ಕಣ್ಣೀರು ತುಂಬಿಕೊಡು ಗೌರಿ ಮುಂದೆ ಬಂದು, "ನಮ್ಮ ಅಶೋಕ ನಮಗs ಇರಲಿ, ಆ ಆಸ್ತಿಯಿಂದ ನಾಳೆ ಅಂವಾ ದುರ್ವ್ಯಸನಿ ಆದರ ಅವಂದು ನಮ್ಮದು ಇಬ್ಬರ ಜೀವನಾನೂ ಹಾಳು" ಎಂದು ಬಿಕ್ಕಿದಂತಾಯಿತು.

"ಅಶೋಕ.... ನನ್ನ ಅಶೋಕ.... ಹೌದು ಗೌರೀ ಹೌದು" ಎನ್ನುತ್ತ ಮಹೇಶ ಗಟ್ಟಿಯಾಗಿ ತಲೆ ಹಿಡಿಕೊಂಡ.

"ಯಾಕ್ರೀ ಮಹೇಶ ಏನಾತು? ತಲೀ ನೋಯ್ತದೇನು? ಮುಂಜಾನೆಯಿಂದ ಯಾಕೋ ಸಪ್ಪಗsಅದೀರಿ ಐದು ಹೊಡೀಲಿಕ್ಕೆ ಬಂತು. ಮನೀಗರ ಹೋಗಿಬಿಡ್ರಿ" ಪಾಟೀಲ ಸಲಹೆಯಿತ್ತ.

ಗಂಡ ಕಚೇರಿಯಿಂದ ಯಾವಾಗ ಬರುವನೋ ಎಂದು ಕಾಯುತ್ತಿದ್ದ ಗೌರಿ ದಿನಕ್ಕಿಂತಲೂ ಬೇಗನೇ ಮನೆಗೆ ಬಂದ ಗಂಡನನ್ನು ಕಂಡು ಸಂತೋಷಪಟ್ಟಳು.

ಮುಂಜಾನೆಯಿಂದಲೂ ಮಹೇಶನ ಮನಸ್ಸಿನಲ್ಲಿ ನಡೆಯುತ್ತಿದ್ದ ಯುದ್ಧ ಈಗ ನಿಂತಿತ್ತು. ಮನಸ್ಸು ಒಂದು ಸ್ಥಿಮಿತಕ್ಕೆ ಬಂದಿತ್ತು. ಹೆಂಡತಿಯನ್ನು ಕಂಡೊಡನೆ ಅವನೂ ಮೆಲುನಗೆ ನಕ್ಕ.

"ಗೌರಿ ಪೆಟ್ಟು ಭಾಳ ಆಯ್ತೇನು?" ಎಂದು ಹೆಂಡತಿಯ ಕೆನ್ನೆಯತ್ತ ನೋಡುತ್ತ ಕನಿಕರದಿಂದ ಕೇಳಿದ.

"ಅದೇನಿಲ್ಲ ಬಿಡ್ರಿ ಈಗ. ನಾ ಒಂದು ಬೇರೆ ಸುದ್ದೀ ಹೇಳತೇನಿ ನಿಮಗ. ಅಶೋಕ ಅವರ ಸಾಲೀ ಗ್ರೌಂಡಿನ್ಯಾಗ ಥೋಲ್ಲೋ ಪಾರ್ಕರ ಪೆನ್ ಸಿಕ್ಕಿತ್ತಂತ. ಅಂವಾ ಅದನ್ನೊಯ್ದು ಮಾಸ್ತರ ಕೈಯಾಗ ಕೊಟ್ಟನಂತ, ಹೆಡ್ ಮಾಸ್ತರರು ಎಲ್ಲಾ ಹುಡುಗರನ್ನ ಕೂಡಿಸಿ ಎಲ್ಲಾರೂ ಅಶೋಕನಂತೆ ಪ್ರಾಮಾಣಿಕತನ ಕಲೀಬೇಕು ಅಂತ ಹೇಳಿ ಪುಸ್ತಕಾ ಬಹುಮಾನ ಕೊಟ್ಟರಂತ. ಪೆನ್ನು ಕಳಕೊಂಡ ಹುಡುಗ ಬಂದು ಇವನ ಗುರ್ತಾ ಮಾಡಿಕೊಂಡು ನಾಳೆ ತಮ್ಮ ಮನೀಗೆ ಚಹಾಕ್ಕ ಕರದಾನಂತ" ಗೌರಿ ಒಂದೇ ಉಸುರಿನಲ್ಲಿ ಎಲ್ಲವನ್ನೂ ಹೇಳಿ ಮುಗಿಸಿದಳು. ನಗು ಅವಳ ಮುಖದ ಮೇಲೆ ನಲಿಯುತ್ತಿತ್ತು.

"ನಿನ್ನ ಶಿಕ್ಷಣಾ ಅಂದಮ್ಯಾಲೆ ಕೇಳಬೇಕs" ಎನ್ನುತ್ತಿದ್ದ ಮಹೇಶನಿಗೆ ತಾನು ಚಿಕ್ಕವನಿದ್ದಾಗ ಸಾಲೆಯಲ್ಲಿ ಪೆನ್ಸಿಲ್ ಕದ್ದದ್ದು ನೆನಪಾಗಿ ಖಿನ್ನನಾದ.

"ಯಾಕ್ರೀ ಸಿಟ್ಟು ಬಂದsದೇನು? ಮುಂಜಾನಿ ಮಾತು ಇನ್ನೂ ಮರತಿಲ್ಲೇನು ನೀವು? ನನಗ ರೊಕ್ಕ, ಆಸ್ತಿ ಎಲ್ಲಾದಕಿಂತ ನನ್ನ ಮಕ್ಕಳು ಸತ್ಯವಂತರೂ, ಪ್ರಾಮಾಣಿಕರೂ ಆಗಬೇಕು ಅಂತ ಆಸೆ. ಅಷ್ಟಾದರ ಸಾಕು ನನಗಿನ್ನೇನೂ ಬ್ಯಾಡ" ಗೌರಿ ಆಸೆಯಿಂದ ಗಂಡನ ಮುಖದತ್ತ ನೋಡಿದಳು.

"ನನಗ ಸಿಟ್ಟು ಬಂದಿಲ್ಲ. ಮುಂಜಾನಿಯಿಂದ ಇದs ಮಾತು ವಿಚಾರ ಮಾಡಿದೆ. ನೀ ಹೇಳೂದು ಒಳ್ಳೇದs ಅಂತ ಅನ್ನಿಸಿತು ನನಗ. ನಾನೂ ಅದs ನಿರ್ಧಾರಕ್ಕs ಬಂದೇನಿ. ನೀ ಬ್ಯಾರೇ ದತ್ತಕ ತೊಗೋ, ನಮ್ಮ ಅಶೋಕ ನಮಗಿರಲಿ ಅಂತ ನಾಳೇ ಪತ್ರಾ ಬರೀತೇನಿ ಕಾಶಮ್ಮಗ" ಎನ್ನುತ್ತ ಮಹೇಶ ಅಶೋಕನನ್ನು ಹತ್ತಿರ ಕರೆದು ಬೆನ್ನು ಮೇಲೆ ಕೈಯಾಡಿಸಿದ.

ಗೌರಿಯ ಮುಖ ಇಷ್ಟಗಲ ಅರಳಿತು. ಕೆನ್ನೆಯ ಮೇಲೆ ಕೈಯಾಡಿಸಿಕೊಂಡು ನಸುನಕ್ಕಳಾಕೆ.

***

■■

# ನೀವೂ ಒಬ್ಬರೆ?

"ಸಾಧನಾಽ ಏ ಸಾಧನಾಽಽಽ"

"ಯಾಕ್ರೀ ? ಏನ ಕೆಲಸದ?'

"ಕೆಲಸ ಏನೂ ಇಲ್ಲಾ, ಆದರ ಇವತ್ತ ಸಂಜಿಮುಂದ ಪ್ರಭಾಕರ ರಾಯರ ಮನೀಗೆ ಹೋಗೂದದ. ನೆನಪದಽನೋ ಇಲ್ಲೋ ಇಂತ ಕೇಳಿದೆ."

"ಇವತ್ತ ನಾನು ಎಲ್ಲ್ಯೂ ಹೊರಗ ಬರೂದಿಲ್ಲ."

"ಯಾಕ?"

"ಯಾಕೇನು? ನನಗ ಇವತ್ತು ಹೊರಗ ಹೋಗೂ ಹಾಂಗ ಅನಿಸಿಲ್ಲ. ನಾ ಮನ್ಯಾಗ ಇರತೀನಿ."

"ಇವತ್ತ ನಾಲ್ಕೂವರೀಗೆ ನಾವಿಬ್ಬರೂ ನಿಮ್ಮ ಮನೀಗೆ ಬರತೀವಿ ಅಂತ ಅವರಿಗೆ ನಿನ್ನೆ ಹೇಳಿದ್ನೆಲ್ಲ ನಾನು."

"ನಿಮಗ ಯಾರ ಹೇಳಿದ್ರು ಹಾಂಗ ಹೇಳ್ರಿಽಽ ಅಂತ ? ನಾವಿಬ್ರೂ ಬರ್ತೀವಿ ಅಂತ ಯಾಕ ಹೇಳಿದಿರಿ? ನನ್ನ ಕೇಳಿದ್ರೇನು ಹೋಗೂಣೇನೂ ಅಂತ? ನಾ ಏನ ಬರೂದಿಲ್ಲ ನೋಡ್ರಿ. ಅವರ ಮನೀಗೆ ಇವತ್ತ, ನೀವು ಒಬ್ಬರಽ ಹೋಗ್ತಿದ್ದ್ರ ಹೋಗ್ರಿ. ನಾನು ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ."

"ಹೊರಗೆ ಹೋಗೂ ಮನಸ್ಸಿಲ್ಲ ಅಂತೀದಿ, ಮತ್ತ ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ ಅಂತೀದಿ. ಯಾಕ ? ನನ್ನ ಕೂಡ ಇವತ್ತ ಅವರ ಮನೀಗೆ ಬರಲಿಕ್ಕೇ ಬೇಕು ನೀನು."

"ನಾ ಬರೂದಿಲ್ಲ ಅಂದರ ಬರೂದಿಲ್ಲ. ನನಗ ಮನಸ್ಸಿಲ್ಲದ ಕಡೆ ಬರಲಿಕ್ಕೇ ಬೇಕು ಅಂತ ಒತ್ತಾಯ ಯಾಕ ಮಾಡ್ತೀರಿ ನೀವು?"

ಸಾಧನಾಳ ಧ್ವನಿ ತಾರಸ್ವರಕ್ಕೇರಿತ್ತು; ಮುಂದೆ ಅವಳ ಗಂಡ ಚಂದ್ರಕಾಂತನ ಧ್ವನಿ ಕೇಳಿಸಲೇ ಇಲ್ಲ.

ತಲ್ಲೀನನಾಗಿ ಓದಲು ಕುಳಿತಿದ್ದ ವಿಶ್ವನಾಥನ ಅಭ್ಯಾಸಕ್ಕೆ ನೆರೆಮನೆಯ ಗಂಡಹೆಂಡಿರ ವಾಗ್ವಾದದಿಂದ ಭಂಗ ಬಂದಿತ್ತು. ಈಗ ನಡೆಯುವದು ಇಂದೇ ಹೊಸ ಮಾತೇನಲ್ಲ. ನಿತ್ಯವೂ ಇದ್ದದ್ದೇ. ತನ್ನ ಅಭ್ಯಾಸದ ಕೋಣೆಯಲ್ಲಿ ಕುಳಿತು ದಿನಕ್ಕೊಮ್ಮೆಯಾದರೂ ಅವರ ಜಗಳ.... ಅಲ್ಲಲ್ಲ. ಸಂಭಾಷಣೆ ಕೇಳುವದು ವಿಶ್ವನಾಥನ ದಿನಚರಿಯ ಒಂದು ಭಾಗವಾಗಿತ್ತು.

ಗಂಡ ಹೇಳಿದ ಒಂದು ಮಾತಿಗೂ 'ಹೂಂ' ಎನ್ನುವದಿಲ್ಲ ಆ ಸಾಧನಾ. ಎಲ್ಲಕ್ಕೂ ವಿರೋಧವೇ. ಮನೆಗೆಲಸ ಮಾಡಿಕೊಂಡು ಮನೆಯಲ್ಲಿರುವದೆಂದರೆ ಅವಳಿಗೆ ಬೇಡ. ದಿನಕ್ಕೊಂದು ಚಂದದ ಸೀರೆ ಉಟ್ಟು, ತರತರದ ಮುಡಿ ಕಟ್ಟಿ ಗಂಡನೊಡನೆ ಹೊರಗೆ ಹೋಗುವದು ಬೇಕು. ಹೋದಲ್ಲಿಯೇ ಹೊಟ್ಟೆತುಂಬ ಉಪಾಹಾರ ಮಾಡಿ ಬಂದರೆ ತೀರಿತು. ಮನೆಗೆ ಬಂದ ಮೇಲೆ ಅಡಿಗೆ ಮನೆಗೆ ಕಾಲಿಡುವದೂ ತಪ್ಪುತ್ತದೆ ಎಂದು ಅವಳ ಎಣಿಕೆ. ಗಂಡ ಏನು ಮಾಡಿದರೂ ತನ್ನ ಅನುಮತಿಯಿಂದಲೇ ಮಾಡಬೇಕು ಎನ್ನುವ ಹಟ ಅವಳದು. ಆ ಚಂದ್ರಕಾಂತನಿಗಾದರೂ ಹೆಂಡತಿಯ ಮಾತಿಗೆ ಕಿವಿಗೊಡದಿರುವದು ಸಾಧ್ಯವೇ ಇಲ್ಲ. ಇಂದು ನಾನು ಅಡಿಗೆ ಮಾಡಲಾರೆ ಎಂದು ಅವಳೆಂದರೆ ಸಾಕು. ಖಾನಾವಳಿಯಿಂದ ಎರಡು ತಾಟು ತರಿಸಿದನೇ! ಅವಳನ್ನು ಸಿಟ್ಟಿಗೆಬ್ಬಿಸುವದೂ, ವಾದ ಹಾಕುವದೂ ಅವನಿಗೂ

ಬಹಳ ಪ್ರೀತಿ ಎಂದು ಕಾಣುತ್ತದೆ. ಒಂದೊಂದು ದಿನ ಅವಳು ಸುಮ್ಮನಿದ್ದರೂ ತಾನೇ ಮುಂದಾಗಿ ಜಗಳ ತೆಗೆಯುತ್ತಾನೆ. ತಮ್ಮಿಬ್ಬರ ಮನೆಗಳ ನಡುವೆ ಒಂದೇ ಗೋಡೆ. ಆದ್ದರಿಂದ ಅವನ ಮನೆಯ ಮಾತೆಲ್ಲ ತನ್ನ ಕಿವಿಯ ಮೇಲೆ.

ಅಬ್ಬಾ ! ಅವನ ಸಾಧನಾ ಎಷ್ಟುದ್ದ ನಾಲಿಗೆ ಹರಿಬಿಡುತ್ತಾಳೆ. ಎಷ್ಟು ತಿರುಗಿ ಉತ್ತರ ಕೊಡುತ್ತಾಳೆ! ಅವನಿಗೆ ಹೇಳಿದ ಹಾಗೆ ನನಗೇನಾದರೂ ನನ್ನ ಕುಸುಮಾ ತಿರುಗಿ ಉತ್ತರ ಹೇಳಿದ್ದರೆ ಅವಳನ್ನು ಹೀಗೇ ಜಜ್ಜಿ ಬಿಡುತ್ತಿದ್ದೆ ಎಂದುಕೊಳ್ಳುತ್ತ ವಿಶ್ವನಾಥ ಕೈಯಲ್ಲಿಯ ಪುಸ್ತಕವನ್ನು ಮೇಜಿನ ಮೇಲೆ ದೊಪ್ಪನೆ ಚೆಲ್ಲಿ ಕೈಗಡಿಯಾರ ನೋಡಿಕೊಂಡ.

ಸ್ನಾನ ಮಾಡಿ ಇನ್ನೊಮ್ಮೆ ಚಹ ಕುಡಿಯಬೇಕೆಂದು ಅಡಿಗೆಯ ಮನೆಗೆ ಹೋಗಲು ಕೋಣೆಯ ಬಾಗಿಲು ತೆರೆದು ಹೊರಗೆ ಬಂದ ವಿಶ್ವನಾಥ.

***

ಕೋಣೆಯ ಬಾಗಿಲು ತೆರೆದ ಚಂದ್ರಕಾಂತ ಮುಂದಿನ ವರಾಂಡಕ್ಕೆ ಬಂದ. ರಾತ್ರಿಯೆಲ್ಲ ಮಳೆ ಬೀಳುತ್ತಿದ್ದುದರಿಂದ ನೆಲವೆಲ್ಲ ಹಸಿಯಾಗಿತ್ತು. ಹವೆಯೂ ತಂಪಾಗಿತ್ತು. ಬೆಚ್ಚಗಿನ ರಗ್ಗು ಹೊದ್ದು ಮಲಗಿದ್ದವನಿಗೆ ಹೊರಗಿನ ಗಾಳಿಯಿಂದ ಮೈಯಲ್ಲಿ ನಡುಕವುಂಟಾಯಿತು. ಹಾಗೆಯೇ ಬಾಗಿ ಮುಂದಿನ ಅಂಗಳ ನೋಡಿದ.

ಅಲ್ಲಿ ತುಳಸೀಕಟ್ಟೆಯ ಮೇಲೆ ಪೂಜಾ ಸಾಮಗ್ರಿಗಳನ್ನೆಲ್ಲ ಇಟ್ಟುಕೊಂಡು ಭಕ್ತಿಯಿಂದ ತುಲಸಿಯನ್ನು ಪೂಜಿಸುತ್ತಿದ್ದಾಳೆ ವಿಶ್ವನಾಥನ ಹೆಂಡತಿ ಕುಸುಮಾ. ಇಷ್ಟೊಂದು ನಸುಕಿನಲ್ಲಿಯೇ ಎದ್ದು ಸ್ನಾನಮಾಡಿ ಮಡಿಯುಟ್ಟಿದ್ದಾಳೆ. ವಯಸ್ಸು ಸುಮಾರು ತನ್ನ ಸಾಧನಾಳಷ್ಟೇ ಇರಬಹುದು. ಆದರೆ ವಯಸ್ಸಿಗೆ ಮೀರಿದ ಗಾಂಭೀರ್ಯವಿದೆ ಮುಖದಲ್ಲಿ, ಹೆಚ್ಚು ಮಾತು ಕತೆ ಇಲ್ಲ. ಸ್ವಚ್ಛಂದ ನಗುವಿಲ್ಲ. ತಾನು ನೆರೆಮನೆಗೆ ಬಂದು ಇಷ್ಟು ದಿನವಾದರೂ ಅವಳು ಜೋರಾಗಿ ಮಾತನಾಡಿದ್ದು ನಕ್ಕದ್ದು ಕೇಳಿಯೇ ಇಲ್ಲ. ಗಂಡ - ಹೆಂಡಿರು ಇಷ್ಟು ದಿನವಾದರೂ ಹೊರಗೆ ಹೋಗುವುದೇ ಕಡಿಮೆ, ಎಲ್ಲೋ ಅಪರೂಪಕ್ಕೆ. ದಿನವೂ ಅವಳಾಯಿತು, ಮನೆಗೆಲಸವಾಯಿತು. ಮತ್ತೆ ಎರಡು ಮಕ್ಕಳ ಲಾಲನೆ-ಪಾಲನೆ ಬೇರೆ.

ವಿಶ್ವನಾಥ ಬಹಳ ಕೋಪಿಷ್ಠನೆಂದು ಕಾಣುತ್ತದೆ. ತನಗೆ ಆಗುವ ಸೇವೆ ಸತ್ಕಾರಗಳಿಗೆ ಸ್ವಲ್ಪವೂ ಲೋಪ ಬರಬಾರದು. ಮನೆಯಲ್ಲಿ ಆಗಾಗ ಅವನದೇ ಆರ್ಭಟ ಕೇಳಿಬರುತ್ತದೆ. ಅವನ ಜಬರ್ದಸ್ತು ನೋಡಿದರೆ ಪಾಪ ಅವಳಿಗೆ ಉಸಿರೆತ್ತಲು ಬಿಡುವುದೇ ಇಲ್ಲ ಅನಿಸುತ್ತದೆ. ಮಕ್ಕಳು ಅತ್ತರೆ ಗದ್ದಲ ಮಾಡಿದರೆ ತನಗೆ ಎಷ್ಟು ಕೆಲಸಗಳಿದ್ದರೂ ಆಯಾಸವಾಗುತ್ತಿದ್ದರೂ ಮಕ್ಕಳನ್ನು ಶಾಂತವಾಗಿ ಅವಳೇ ಸಮಾಧಾನ ಮಾಡುತ್ತಾಳೆ.

ಇವನಿಗೂ ಹೆಂಡತಿಯ ಸೌಂದರ್ಯ-ಶೃಂಗಾರ, ನಕ್ಕು ನಲಿದಾಡುವದು ಕೂಡಿ ಅಡ್ಡಾಡುವದು ಯಾವುದೂ ಬೇಡವೆಂದು ಕಾಣುತ್ತದೆ. ಅವಳೂ ಸಂಪ್ರದಾಯಸ್ಥರ ಮನೆಯವಳೆಂದು ಸಾಧನಾ ಹೇಳುತ್ತಿದ್ದಳು. ಅದಕ್ಕೇ ಈ ತುಲಸೀ ಪೂಜೆ, ಮಡಿ-ಹುಡಿ ಎಲ್ಲಾ.... ಎಂದು ವಿಚಾರಿಸುತ್ತಿದ್ದ ಚಂದ್ರಕಾಂತ. ಪ್ರದಕ್ಷಿಣೆ ಮುಗಿಸಿ ಇನ್ನೊಮ್ಮೆ ನಮಸ್ಕರಿಸುತ್ತಿದ್ದಂತೆಯೇ ಒಳಗಿನಿಂದ 'ಕುಸುಮಾ' ಎನ್ನುವ ಗಂಡನ ಕರೆ ಕೇಳಿದ ಕುಸುಮಾ ಪೂಜಾ ಸಾಮಗ್ರಿಗಳನ್ನೆತ್ತಿಕೊಂಡು ಅವಸರದಿಂದ ಒಳಗೆ ನಡೆದಳು.

"ಏನ್ರೀ" ಸಾಧನಾಳ ಮೃದುವಾದ ಕರೆ ಕೇಳಿದ ಚಂದ್ರಕಾಂತನೂ ಒಳಗೆ ನಡೆದ.

ರಾತ್ರಿ ಗಂಟೆ ಎರಡಾದರೂ ನಿದ್ರೆ ಬಾರದೆ ಹಾಸಿಗೆಯ ಮೇಲೆ ಹೊರಳುತ್ತಿದ್ದ ವಿಶ್ವನಾಥ ಸಣ್ಣ ಧ್ವನಿಯಲ್ಲಿ "ಕುಸುಮಾಽ" ಎಂದ. ಪಕ್ಕದ ಮಂಚದ ಮೇಲೆ ಮಲಗಿದ್ದ ಕುಸುಮಾಳಿಂದ ಉತ್ತರ ಬರಲಿಲ್ಲ. ಈ ಸಲ ಜೋರಾಗಿ "ಕುಸುಮಾಽಽ"ಎಂದ.

"ಓಽ ಯಾಕ?" ಎಂದಳು ಕುಸುಮಾ ನಿದ್ದೆಗಣ್ಣಿನಲ್ಲಿ.

"ನಿದ್ದಿ ಬಂದಽದೇನು? ಏನಿಲ್ಲಾ ಮಲಗಿಕೋ" ಎಂದ ವಿಶ್ವನಾಥ ನಿರುತ್ಸಾಹದಿಂದ. ಸರಿ; ಕುಸುಮಾ ಮಗ್ಗಲು ಹೊರಳಿದಳು. ಕೊಂಚ ಹೊತ್ತಿನಲ್ಲಿಯೇ ಅವಳ ಸರಾಗವಾದ ಉಸಿರಾಟ ಕೇಳಿ ಬಂದಿತು. ವಿಶ್ವನಾಥನ ಜೀವ ಚಡಪಡಿಸಿತು.

"ನನಗ್ಯಾಕ ಹೀಂಗಾಗ್ತದ? ಏನಾಗ್ತದನೋ ತಿಳೀವೊಲ್ಲದು ಏನೋ ಮನಸ್ಸಿಗೆ ಒಂದು ಥರಾಽ ಅನಸ್ತದ; ನಿದ್ದೀನೂ ಬರಲೊಲ್ಲದು. ಒಮ್ಮೆಲೆ ಕಳವಳ, ನಿರಾಶೆ ಎಲ್ಲಾ ಹುಟ್ಟಿ ಹೊರಚಲ್ಲಿದಾಂಗ ಆಗಲಿಕ್ಕೆ ಹತ್ತೇದ. ಮುಂಜಾನೆ ಎಷ್ಟ ಆರಾಮ ಇದ್ದೆ. ಈಗಽರೆ ಆರಾಮ ಇದ್ದೀನಿ, ತಲಿ ನೋವು, ನೆಗಡಿ, ಕೆಮ್ಮು ಛೆ ಛೆ ಒಂದೂ ಇಲ್ಲ. ನೋವು ಆದದ್ದು ಮೈಗೆಲ್ಲ ನನ್ನ ಮನಸ್ಸಿಗೆ ಅಂತ ಕಾಣಸ್ತದ. ಸಂಜೀಮುಂದ ವಾಕಿಂಗ್ ಹೋಗಿ ಬರೂಮುಂದ ದಾರಿಯೊಳಗ ಚಂದ್ರಕಾಂತ- ಸಾಧನಾ ಭೆಟ್ಟಿಯಾದರು. ಆವಾಗಿಂದ ಹಾಂಗಾಗಲಿಕ್ಕೆ ಹತ್ತೇದ. ಏನು ಕಾರಣ ಇರಬೇಕು?"

ಸಂಜೆಯ ಶೋ ಮತ್ತೆ ತೆರೆಯ ಮೇಲೆ ಮೂಡತೊಡಗಿತು, ಆ ಮಧ್ಯರಾತ್ರಿಯಲ್ಲಿ.

ಸಾಧನಾ ತಿಳಿ ಗುಲಾಬಿ ಹೂವಿರುವ ಬಿಳಿ ನೈಲಾನ್ ಸೀರೆ, ಹಸಿರು ಚೋಳಿ ತೊಟ್ಟಿದ್ದಾಳೆ. ಕೂದಲುಗಳನ್ನು ಎತ್ತರಿಸಿ ಕಟ್ಟಿ ತುರುಬಿಗೆ ಮಲ್ಲಿಗೆ ಮಾಲೆ ಮುಡಿದಿದ್ದಾಳೆ. ಗಂಡನೊಡನೆ ಏನೋ ಮಾತನಾಡಿ ನಕ್ಕ ನಗೆ ಅವಳ ಮುಖದ ಮೇಲೆ ಇನ್ನೂ ಇದೆ. ತನ್ನನ್ನು ದಾಟಿ ಅವರು ಮುಂದಕ್ಕೆ ಹೋಗುವಾಗ ಚಂದ್ರಕಾಂತ 'ನಮಸ್ಕಾರ' ಎನ್ನುವಂತೆ ಕೈ ಎತ್ತಿದ. ತಾನೂ ಕೈಯೆತ್ತಿದ. ನಾಲ್ಕು ಹೆಜ್ಜೆ ಮುಂದೆ ನಡೆದ ಮೇಲೆ ತನಗೆ ಏಕೋ ಇನ್ನೊಮ್ಮೆ ಆ ಜೋಡಿಯನ್ನು ನೋಡಬೇಕೆನ್ನಿಸಿ ಹೊರಳಿ ನೋಡಿದ. ಅವರಿಬ್ಬರ ಬದಲು ಆ ಸ್ಥಾನದಲ್ಲಿ ತಾನು ಕುಸುಮಾ ನಡೆದಂತೆ ಮನದಲ್ಲೇ ಚಿತ್ರಿಸಿಕೊಂಡ. ಆಗಿನಿಂದ ಹೀಗೆಽಽ.......

ವಿಶ್ವನಾಥನ ವಿಚಾರಸರಣಿ ಕುಸುಮೆಯ ಹಿಂದೆ ಓಡಿತು. ತನ್ನ ಕುಸುಮಾ ರೂಪದಲ್ಲೇನೂ ಕಡಿಮೆ ಇಲ್ಲ. ಸಾಧನಾಳಿಗೆ ಅವಳ ವಿಶಾಲವಾದ ಕಣ್ಣು ನೀಳವಾದ ಮೂಗು ನೋಡಿಯೇ ತಾನು ಅವಳನ್ನು ಮೆಚ್ಚಿ ಮದುವೆಯಾದದ್ದು. ಆದರೆ ಮದುವೆಯಾಗಿ ತನ್ನ ಮನೆಗೆ ಬಂದ ಮೇಲೆಯೇ ಇವಳು ಗೃಹಿಣಿಯಾಗುವವಳೇ ಹೊರತು ತನ್ನ ರಸಿಕತೆಗೆ ಸರಿಯಗಿ ಒಳ್ಳೆಯ ಗೆಳತಿಯಾಗಲಾರಳು ಎಂದು ತನಗೆ ತಿಳಿದದ್ದು.

ಹೊಸದಾಗಿ ಮದುವೆಯಾಗಿ ಬಂದಾಗ ಒತ್ತಾಯದಿಂದ ಇವಳನ್ನು ಸಿನಿಮಾಕ್ಕೊ, ವಾಕಿಂಗಿಗೊ ಕರೆದುಕೊಂಡು ಹೋದದ್ದು ತನಗಿನ್ನೂ ನೆನಪಿನಲ್ಲಿದೆ. ತನ್ನ ಜುಲುಮೆಗೆ ಹಿಂದೀ ಪ್ರೇಮಕತೆಗಳನ್ನೂ ಇಂಗ್ಲೀಷ ಚಿತ್ರಗಳನ್ನೂ ಒಂದೆರಡು ಸಲ ನೋಡಿದ ಕುಸುಮಾ ಅವುಗಳನ್ನು ಸೇರದೆ ಆಮೇಲೆಲ್ಲಾ ತನಗೆ ತಲೆನೋವೆಂದೂ, ಮನಯೆಲ್ಲಿ ಕೆಲಸವಿದೆಯೆಂದೂ ಏನೇನೋ ನೆವ ಹೇಳಿ ಸಿನೆಮಾ ತಪ್ಪಿಸಿಬಿಡುತ್ತಿದ್ದದ್ದು.

ಮನೆಗೆಲಸಗಳಲ್ಲಿ ಮಾತ್ರ ಬಹಳ ದಕ್ಷಳು ಕುಸುಮಾ. ಅಡಿಗೆ ತಿಂಡಿ-ತಿನಿಸು ಎಲ್ಲವನ್ನೂ ಬಹಳ ಚೆನ್ನಾಗಿ ಮಾಡುವಳು. ಯಾವ ವಿಷಯಕ್ಕೂ ಕಾಡುವುದಿಲ್ಲ, ಬೇಡುವುದಿಲ್ಲ. ತಾನು ತಂದುಕೊಟ್ಟ ಬಟ್ಟೆ-ಬರೆಗಳಲ್ಲೆ ತೃಪ್ತಿ ಅವಳಿಗೆ. ಆದರೆ, ಹೆಚ್ಚಿನ ಫ್ಯಾಶನ್ನಿನ ಪತ್ತಲ ತಂದರೆ ಮಾತ್ರ ಅದನ್ನು ಉಡಲಾರಳು. ತಾನು ದಿಲ್ಲಿಗೆ ಹೋದಾಗ ಅವಳಿಗೆ ನವೀನ ಮಾದರಿಯ ಸೆರಗು ಅಂಚುಗಳಿಲ್ಲದ ಸೀರೆಯೊಂದನ್ನು ತಂದಿದ್ದ. ಆದರೆ ಅದನ್ನಾಕೆ ಉಡದ

ಶಾಲೆಗೆ ಹೋಗುವ ತನ್ನ ತಂಗಿಗೆ ಕೊಟ್ಟುಬಿಟ್ಟಿದ್ದಳು. ಆಮೇಲೆ ತಾನು ಅಂಥ ಸೀರೆಯನ್ನು ಅವಳಿಗೆ ತರುವ ಗೋಜಿಗೇ ಹೋಗಿರಲಿಲ್ಲ.

ಸಿಟ್ಟಿನಲ್ಲೆ ಎದ್ದು ತನ್ನ ಮಂಚ ಬಿಟ್ಟು ಕುಸುಮಾಳ ಮಂಚಕ್ಕೆ ಹೋಗಿ ಮಲಗಿದ ವಿಶ್ವನಾಥ.

***

ತನ್ನ ಮಂಚಕ್ಕೆ ಹೋಗಿ ಉರುಳಿದ ಚಂದ್ರಕಾಂತ ಉಸ್ ಎಂದು ನಿಟ್ಟುಸಿರು ಬಿಟ್ಟ. ನಿದ್ರೆ ಇಲ್ಲದೆ ಅವನ ತಲೆ ನೋಯುತ್ತಿತ್ತು. ಭಾರವಾಗುತ್ತಿತ್ತು. ಉಸಿರಾಟ ವೇಗವಾಗುತ್ತಿತ್ತು. ಕಣ್ಣುಗಳೆರಡೂ ಉರಿಯುತ್ತಿದ್ದವು. ಜ್ವರ ಬಂದಿದೆಯೇನೊ ಎಂದು ಎನ್ನಿಸಿತವನಿಗೆ. ಹಣೆಯ ಮೇಲೆ ಕೈಯಾಡಿಸಿಕೊಂಡ. ಅವನ ಮನಸ್ಸು ಸಾಧನಾಳೆಡೆಗೆ ಹೊರಳಿತು.

ಹಣೆಗೆ ಅಮೃತಾಂಜನ ಹಚ್ಚಿ ಮೃದುವಾಗಿ ತಿಕ್ಕಿ ಸಾಧನಾ ತನ್ನ ಆರೈಕೆ ಮಾಡಿದ್ದರೆ ಎಷ್ಟು ಚೆನ್ನಾಗಿತ್ತು! ಎನ್ನಿಸಿತು ಅವನಿಗೆ. ಮೆಲ್ಲಗೆ "ಸಾಧನಾ" ಎಂದ. ಮಾರುತ್ತರ ಬರಲೇ ಇಲ್ಲ. ಓಹ್! ಅವಳನ್ನು ಈಗ ಕರೆದರೂ ಉಪಯೋಗವಿಲ್ಲ. ಅವಳು ಈಗ ಏಳುವುದಿಲ್ಲ ಎದ್ದರೂ ತಲೆ ಒತ್ತು ಎಂದರೆ ಮಂಚದ ಮೇಲೆಯೇ ತೂಕಡಿಸುವವಳೇ ಅವಳು. ಸಾಧನಾ ತನ್ನ ಯಾವ ಉಪಚಾರವನ್ನೂ ಮಾಡಲಾರಳು. ಹೆಚ್ಚು ತೊಂದರೆಯನ್ನೇ ಕೊಡುವವಳು.

ಮತ್ತೆ ಈಗ ತನಗೆ ತಲೆನೋವು ಬಂದದ್ದೂ ಅವಳಿಂದಲೇ. ಇಂದು ಸಂಜೆ ಪ್ರಭಾಕರರಾಯರ ಮನೆಗೆ ಹೋಗೋಣವೆಂದು ಎಷ್ಟು ಹೇಳಿದರೂ ಒಪ್ಪಲಿಲ್ಲ. ಒಲ್ಲೆ. ಎಂದುಬಿಟ್ಟಳು. ಒಂದೇ ಹಟ ಅವಳದು ಹೆಚ್ಚು ಕಡಿಮೆ ಸಿಟ್ಟು ಮಾಡಿದರೆ ಊಟ ತಿಂಡಿ ಬಿಟ್ಟು ಮುಸುಕು ಹಾಕಿ ಮಲಗಿಬಿಡುವಳು. ಇನ್ನೆಂದೂ ಅನ್ನುವದಿಲ್ಲ ಏಳು ಅನ್ನುವವರೆಗೂ ಹಾಸಿಗೆ ಬಿಟ್ಟು ಸರಿಯಲಾರಳು, ಬಹಳ ಹಠಮಾರಿ. ತವರುಮನೆಯಲ್ಲಿ ಮುದ್ದಿನ ಮಗಳು. ಮನೆಯಲ್ಲಿ ಎಲ್ಲರೂ ಇವಳ ಹಟ ನಡೆಸಿಕೊಟ್ಟವರೇ, ಇವಳ ವಿದ್ಯೆ, ರೂಪ, ಮಧುರಕಂಠಕ್ಕೆ ತಾನು ಮೆಚ್ಚಿ ಮದುವೆಯಾದೆ ಇವಳನ್ನು. ಆದರೆ ಇವಳ ಹಟಮಾರಿತನ ತನಗೆ ತಿಳಿದದ್ದು ತನ್ನ ಮನೆಗೆ ಕರೆತಂದ ಮೇಲೆಯೇ.

ಅಡಿಗೆ, ಕೆಲಸ, ಹೆಣಿಕೆ, ಹಾಡು ಎಲ್ಲವನ್ನೂ ಬಲ್ಲಳು. ಆದರೆ ತನ್ನ ಮನಸ್ಸಿಗೆ ತಿಳಿದರೆ ಮಾತ್ರ ಮಾಡುವವಳು, ಇಲ್ಲದಿದ್ದರೆ ಇಲ್ಲವೇ ಇಲ್ಲ. ಮನೆಯ ಒಳಗಿನ ಹೊರಗಿನ ಎಲ್ಲ ವಿಷಯಕ್ಕೂ ಮೊದಲು ಅವಳ ಒಪ್ಪಿಗೆ ಬೇಕು. ಇಂದು ಹಟಮಾಡಿ ಪ್ರಭಾಕರ ರಾಯರ ಮನೆಗೆ ಹೋಗುವವನನ್ನು ಬಿಡಿಸಿ ವಾಕಿಂಗಿಗೆ ಹೋಗೋಣವೆಂದಳು. ದಾರಿಯಲ್ಲಿ ವಿಶ್ವನಾಥ ಭೆಟ್ಟಿಯಾದ. ಎಷ್ಟೊಂದು ಠೀವಿಯಿಂದ ಹೊರಟಿದ್ದನವ ಮನೆಯ ಕಡೆಗೆ. ತನಗೇಕೋ ಇಂದು ಅವನನ್ನು ನೋಡಿ ಸಂಕೋಚವಾಯಿತು. ಅವನು ಮನೆಗೆ ಬರುವದರಲ್ಲಿ ಅವನ ಕುಸುಮಾ ಕೈಕಾಲು ತೊಳೆಯಲು ನೀರು ಕೊಟ್ಟು ಬಿಸಿಯಾಗಿದ್ದ ತಿನಿಸು ಚಹಾ ಕೊಡುತ್ತಾಳೆ. ರಾತ್ರಿ ಮತ್ತೆ ಅವನ ಪ್ರೀತಿಯ ಪಲ್ಯ, ಚಟ್ನಿಗಳನ್ನು ಮಾಡಿ ಊಟಕ್ಕೆ ನೀಡುತ್ತಾಳೆ. ಅವನು ತಿಂದುಂಡು ಆಫೀಸಿಗೆ ಹೋಗುತ್ತ, ಗೆಳೆಯರೊಡನೆ ಹರಟೆ, ವಾಕಿಂಗ್ ಮಾಡುತ್ತ ಸುಖವಾಗಿದ್ದಾನೆ.

ತನ್ನ ಸಾಧನಾ ಇಂದು ತನ್ನೊಡನೆ ವಾಕಿಂಗ್ ಎಂದು ಹೊರಟವಳು, ದಾರಿಯಲ್ಲಿ ಏನು ತಿಳಿಯಿತೋ 'ಓ ಕೌನಥೀ' ಸಿನಿಮಾಕ್ಕೆ ಹೋಗೋಣವೆಂದಳು. "ಬೇಡ ಅದು ಹೆದರಿಸುವ ಸಿನಿಮಾ, ನಿನ್ನಂಥಾ ಗರ್ಭಿಣಿ ಸ್ತ್ರೀಯರು ನೋಡಬಾರದು" ಎಂದರೆ ಕೇಳಲಿಲ್ಲ; ನಕ್ಕು ನನ್ನ ಮಾತು ಹಾರಿಸಿಬಿಟ್ಟಳು. ಸಿನಿಮಾ ಮುಗಿದ ಮೇಲೆ ಮನೆಗೆ ಹೋಗಿ ಅಡಿಗೆ ಮಾಡಲು ಬೇಸರ. ಇಲ್ಲೇ ಹೋಟೆಲ್‌ನಲ್ಲಿ ಏನಾದರೂ ತಿಂದು ಹೋಗೋಣವೆಂದಳು. ಸರಿ ಅದೂ ಆಯಿತು. ಅಷ್ಟರಲ್ಲಿ ಬಸ್ಸೂ ತಪ್ಪಿ ಹೋಯಿತು. ಟಾಂಗಾಕ್ಕೆ ಎರಡು ರೂಪಾಯಿ ದಂಡ ಬಡಿದು ಬಂದು

ಮನೆ ಸೇರಿದ್ದಾಯಿತು. ಇಂದು ಅವಳ ಹಟದಿಂದಾಗಿ ಏಳೆಂಟು ರೂಪಾಯಿ ಕೈಬಿಟ್ಟವು. ಅದರ ಚಿಂತೆಯೇ ಇಲ್ಲ ಅವಳಿಗೆ.

ಪ್ರಭಾಕರ ರಾಯರ ಮನೆಗೆ ಹೋಗದ್ದಕ್ಕೆ ತಾನು ನಾಳೆ ಏನಾದರೂ ಸುಳ್ಳು ಕಾರಣ ಹೇಳಬೇಕು ಅವರಿಗೆ. ಅದೇ ವಿಚಾರದಲ್ಲಿದ್ದ ತನ್ನನ್ನು ಸಂಜೆ ವಿಶ್ವನಾಥ ನೋಡಿದಾಗ ಅವನ ಮುಖದಲ್ಲಿ ನಗುವಿತ್ತು. ಯಾವಾಗಲೂ ಹೆಂಡತಿಯ ಬೆನ್ನು ಹತ್ತಿ ತಿರುಗುವನೆಂದು ತನ್ನನ್ನು ನೋಡಿ ನಗುತ್ತಿರಬಹುದು ಅವನು.

ಹೀಗಾಗಿ ಸಿನೆಮಾದಲ್ಲೂ ತನಗೆ ಆಸಕ್ತಿ ಇರಲಿಲ್ಲ. ಮನೆಗೆ ಬಂದ ಮೇಲೆ ದಣಿವಾಗಿ ಇನ್ನೇನು ಮಲಗಬೇಕೆಂದು ಲೈಟು ಆರಿಸಿದಾಗ ಸಾಧನಾ ಗಾಬರಿಯಾಗಿ ಸಿನೆಮಾದಲ್ಲಿಯ ದೃಶ್ಯ ನೆನಪಾಗಿ ತನಗೆ ಹೆದರಿಕೆಯಾಗುತ್ತದೆ, ಕತ್ತಲು ಮಾಡಬೇಡಿರಿ ನಿದ್ರೆ ಬರಲಾರದು ಎಂದಳು. ಅವಳ ಭಯ ಕಡಿಮೆ ಮಾಡುವುದಕ್ಕೆ ಇಷ್ಟು ಹೊತ್ತು ಲೈಟು ಹಚ್ಚಿ ಕೂತು ಓದಿದ್ದಾಯಿತು. ಅವಳಿಗೇನೋ ನಿದ್ರೆ ಬಂದಿತು; ಆದರೆ ತನಗೆ....

ಸಾಧನಾ ಒಮ್ಮೆಲೇ ಆಸ್ಪತ್ರೆ ...ತೊಟ್ಟಿಲು ಎಂದು ಏನೇನೋ ಬಡಬಡಿಸಿದಳು. ಅಂಥ ಸ್ಥಿತಿಯಲ್ಲೂ ಚಂದ್ರಕಾಂತನಿಗೆ ನಗೆ ಬಂದಿತು. 'ಹುಚ್ಚ ಹುಡುಗೀ' ಎಂದುಕೊಂಡ. ಮರುಕ್ಷಣವೇ ಪಕ್ಕಕ್ಕೆ ಹೊರಳಿ'ಹಾಃಃ' ಎಂದು ಸಾಧನಾ ನರಳಿದಳು.

೨

ಬಾಗಿಲವರೆಗೆ ಬಂದು ಕುಸುಮೆಯನ್ನು ಕಳಿಸಿ ಒಳಗೆ ಬಂದ ಸಾಧನಾ ನಿದ್ರೆಯಿಂದ ಎಚ್ಚತ್ತು ಅಳುತ್ತಿದ್ದ ಚೇತನಾಳನ್ನು ಎತ್ತಿಕೊಂಡು ಮತ್ತೆ ತೊಡೆಯ ಮೇಲೆ ಹಾಕಿ ತಟ್ಟತೊಡಗಿದಳು.....

ಹೊಸತಾಗಿ ತಾನು ಲಗ್ನವಾಗಿ ಬಂದಾಗ ತನ್ನ ನೆರೆಮನೆಯ ಕುಸುಮಾ ಹೇಗಿದ್ದಳು ? ಈಗ ಹೇಗಿದ್ದಾಳೆ! ಗುರುತೂ ಸಿಗದು. ಅವಳು ದಿನವೂ ಉಡುತ್ತಿದ್ದ ಅಂಚು- ಸೆರಗು ಇದ್ದ ಪತ್ತಲ, ಕಟ್ಟುವ ತುರುಬು, ದೊಡ್ಡ ಕುಂಕುಮ, ಅವಳ ನಿತ್ಯ ತುಳಸೀ ಪೂಜೆ ಎಲ್ಲವೂ ಅವಳೊಬ್ಬ ಸಂಪ್ರದಾಯಸ್ಥರ ಮನೆಯವಳು ಎನ್ನುವುದನ್ನು ತೋರಿಸುತ್ತಿದ್ದವು. ಗಂಡನೊಡನೆ ವಾಕಿಂಗ್, ಸೀನಿಮಾಕ್ಕೆ ಹೋಗುವದೂ ಮನೆಗೆ ಬಂದ ಗಂಡನ ಸ್ನೇಹಿತರೊಡನೆ ಮಾತನಾಡುವುದೂ, ಯಾವದೂ ಇಲ್ಲ. ಅಷ್ಟೇ ಏಕೆ ಅವಳು ಜೋರಾಗಿ ನಕ್ಕದ್ದೂ ಕೂಡ ತಾನು ಕೇಳಿರಲಿಲ್ಲ. ನಮ್ಮ ಒಕ್ಕಲಗಿತ್ತಿಯ ಮುಂದೆ "ಸಾಧನಾಬಾಯಿ ಭಾಳ ಬಡಿವಾರದಾಕಿ, ಆಕೀಗೆ ಮನೀ ಕೆಲಸ ಅಂದರ ಬ್ಯಾಡಾ" ಎಂದು ಅವಳು ಅಂದದ್ದು ತನಗೆ ತಿಳಿದ ಮೇಲೆ ತಾನು ಅವಳೊಡನೆ ಮಾತನ್ನೆ ಆಡಿರಲಿಲ್ಲ. ಮುಂದೆ ನಮ್ಮ ಶಾರದಾ, ಅವಳ ಮಗಳು ಶಶೀ ಕೂಡಿ ಆಡಲಿಕ್ಕೆ ಹತ್ತಿದ ಮೇಲೆ ನಮ್ಮ ಮಾತು ಸುರು ಆದವು.

ಅಂಥ ಕುಸುಮಾ ಈ ಹತ್ತು ವರ್ಷದೊಳಗೆ ಬದಲಾಯಿಸಿದ್ದಾಳೆ ! ನಂಬಲಿಕ್ಕೆ ಸಾಧ್ಯವಿಲ್ಲ. ಈಗ ವನಿತಾ ಮಂಡಳದ ಮೆಂಬರ್ ಆಗಿದ್ದಾಳೆ. ಈ ವರ್ಷದಿಂದ ಕಾರ್ಯಕಾರೀ ಮಂಡಲದೊಳಗೂ ಇದ್ದಾಳಂತೆ. ಮೀಟಿಂಗು, ಭಾಷಣ, ಮನೋರಂಜನ ಕಾರ್ಯಕ್ರಮ, ಪ್ರದರ್ಶನ ಎಂದು ತಿಂಗಳಲ್ಲಿ ಮೂರು ನಾಲ್ಕು ಸಲ ಹೊರಗೆ ಹೋಗುತ್ತಾಳೆ. ವಾರಕ್ಕೊಮ್ಮೆ ಸಿನಿಮಾಕ್ಕೂ ಹೋಗುತ್ತಾಳೆ. "ಈ ಸಾರೆ ಮೇ ತಿಂಗಳದಾಗ ಮೈಸೂರು, ಬೆಂಗಳೂರು ನೋಡಲಿಕ್ಕೆ ಹೋಗಬೇಕು ಅಂತ ಮಾಡೇವಿ, ನಮ್ಮ ಯಜಮಾನ್ರೂ ಹೂಂ ಅಂದಾರ" ಎಂದು ಮೊನ್ನೆ ಹೇಳುತ್ತಿದ್ದಳು ಕುಸುಮಾ.

ಇಂದು ಬಹಳ ಸಿಂಗಾರಾಗಿ ಬಂದು "ಏನ್ರೀ ನೀವು ಮಂಡಳದ ಮೆಂಬರ್ ಆಗೀರಿ, ಆದ್ರೂ ಒಂದು ದಿನಾನೂ ಬರೂದಿಲ್ಲ. ಇವತ್ತರೇ ಬರ್ರಿ; ಅಮೇರಿಕಾಕ್ಕೆ ಹೋಗಿಬಂದ ಅತಿಥಿಗಳು ಭಾಷಣ ಮಾಡ್ತಾರ. ಲಗೂನ ಏಳರ ಬಸ್ಸಿಗೆ ಬಂದು ಬಿಡೂಣಂತ" ಎಂದು ಕೇಳಿದಳು. ನನಗೂ ಮನೆಯೊಳಗಿದ್ದು ಬೇಸರ ಬಂದಿತ್ತು. ಅವಳ ಜೊತೆಗೆ ಹೋಗಿ ಬರಬೇಕು ಅನ್ನಿಸಿದ್ದಿತು. ಆದರೆ ಚೇತನಾ....

ಮಗುವಿನ ಹಣೆಯ ಮೇಲೆ ಕೈಯಾಡಿಸಿದಳು ಸಾಧನಾ, ಏಕೋ ಮೈ ಬಿಸಿಯಾದಂತಿತ್ತು. ನಿದ್ರೆಯ ಜೊಂಪಿನಲ್ಲಿದ್ದ ಮಗುವನ್ನು ಬೆಚ್ಚಗೆ ಮಲಗಿಸಿ, ರಗ್ಗು ಹೊದಿಸಿ, ನೀಲಗಿರಿ ಎಣ್ಣೆ ತಂದು ಹಣೆ, ಎದೆ, ಕುತ್ತಿಗೆಗಳಿಗೆ ಸವರಿದಳು. ತಾನು ಕುಸುಮೆಯ ಜೊತೆಗೆ ಹೋಗದಿದ್ದುದೆ ಒಳ್ಳೆಯದಾಯಿತು ಎಂದು ಸಮಾಧಾನದ ಉಸಿರು ಬಿಟ್ಟಳು.

***

ಚಪ್ಪಲಿ ಮೆಟ್ಟಿ, ಕೊಡೆ ಹಿಡಿದು ಹೊರಗೆ ಬಂದು ಗೇಟು ತೆರೆದು ಬಸ್ ಸ್ಟಾಪಿನೆಡೆಗೆ ನಡೆದಳು ಕುಸುಮಾ. ಒಬ್ಬಂಟಿಗಳಾಗಿ ನಡೆದ ಅವಳಿಗೆ ಬೇಸರ ಬಂದಿತು. ಸಾಧನಾ ತನ್ನ ಜೊತೆಗೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು ಎನ್ನಿಸಿತವಳಿಗೆ. ಕಣ್ಣು ಕೈಗಡಿಯಾರದೆಡೆಗೆ ಓಡಿತು. ನಾಲ್ಕೂ ಮುಕ್ಕಾಲಾಗಿತ್ತು. ಇನ್ನು ಐದು ನಿಮಿಷಗಳಿವೆ ಬಸ್ಸು ಬರುವುದಕ್ಕೆ ಎಂದುಕೊಂಡು ತನ್ನ ಬದಿಗೆ ನಿಂತ ದಂಪತಿಗಳ ಕಡೆಗೆ ದೃಷ್ಟಿ ಹೊರಳಿಸಿದಳು. ಅವರು ನವದಂಪತಿಗಳೆಂದು ಊಹಿಸಿದಳಾಕೆ. ಕೈಯಲ್ಲಿಯ ಹಸಿರು ಬಳೆ, ಹೊಸದಾಗಿ ಹಾಕಿದ್ದ ಮಾಂಗಲ್ಯ, ಕಾಲುಂಗುರ ಇವೆಲ್ಲಾ ಅವಳಿನ್ನೂ ಹೊಸ ಮದವಣಿಗಿತ್ತಿ ಎಂಬುದನ್ನು ತೋರಿಸುತ್ತಿದ್ದವು. ಗಂಡ ಅವಳ ಮುಖವನ್ನೇ ನೋಡುತ್ತ ನಗುನಗುತ್ತ ಏನೋ ಮಾತನಾಡಿಸುತ್ತಿದ್ದ. ಅವಳು ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಸಾವಕಾಶವಾಗಿ ಉತ್ತರ ಕೊಡುತ್ತಿದ್ದಳು. ಮುಗ್ಧೆ ಸಂಕೋಚದಿಂದ ತಲೆ ಎತ್ತಿ ಗಂಡನನ್ನೂ ನೋಡಲಾರದವಳಾಗಿದ್ದಳು. ಅವಳನ್ನು ನೋಡಿ ಕುಸುಮೆಗೆ ನಗು ಬಂದಿತು. ಒಂದು ಕಾಲಕ್ಕೆ ತಾನೂ ಅವಳಂತೆಯೇ.....

ಹೊಸತಾಗಿ ನಾನು ಮದುವೆಯಾಗಿ ಬಂದಾಗ ವಿಶ್ವನಾಥ ಬಹಳ ಉತ್ಸಾಹದಿಂದ ನನ್ನನ್ನು ವಾಕಿಂಗಿಗೆ, ಸಿನಿಮಾಕ್ಕೆ ಕರೆದೊಯ್ಯಲು ಪ್ರಯತ್ನಿಸುತ್ತಿದ್ದ. ಮೊದಮೊದಲು ಅವನ ಒತ್ತಾಯಕ್ಕೆ ನಾನೂ ಹೋದವಳು ಹೊರಗೆ ಹೋದರೂ ಏನೋ ಒಂದು ತರಹದ ಹೆದರಿಕೆ ಸಂಕೋಚ ನನ್ನನ್ನು ಆವರಿಸಿದಂತಾಗಿ ಮನಸ್ಸಿಗೆ ಸ್ವಸ್ಥವೆನಿಸುತ್ತಿರಲೇ ಇಲ್ಲ. ಸಂಪ್ರದಾಯಸ್ಥರ ಮನೆಯಲ್ಲಿ ಬೆಳೆದ ನನ್ನಂಥವಳಿಗೆ ಅದೆಲ್ಲಾ ಹೇಗೆ ಸೇರಬೇಕು? ಅವರೊಡನೆ -ಅದೂ ಮನೆಯಲ್ಲಿ ಮಾತ್ರ - ಗಂಟಲು ಸಡಿಲು ಬಿಟ್ಟು ಮಾತನಾಡುತ್ತಿದ್ದೆ. ಬೇರೆ ಯಾರಾದರೂ ಗಂಡಸರು ಬಂದರೆ ಮಾತನಾಡಲು ನನಗೆ ತಿಳಿಯುತ್ತಿರಲೇ ಇಲ್ಲ. ಒಂದು ಸಲವಂತೂ ಅವರು ಹೊರಗೆ ಹೋದಾಗ ಅವಳ ಗೆಳೆಯ ಶಂಕರ ಬಂದಿದ್ದರು. ಅವರು ಮನೆಯಲ್ಲಿಲ್ಲವೆಂದು ಹೇಗೋ ಗಟ್ಟಿ ಧೈರ್ಯಮಾಡಿ ಹೇಳಿ ಅವರನ್ನು ಕಳಿಸಿದೆ. ಆಮೇಲೆ ಇವರು ಬಂದ ಮೇಲೆ ಶಂಕರ ಅವರು ಬಂದಿದ್ದ ಸುದ್ದಿ ಹೇಳಿದೆ. ಅಬ್ಬಾ ಎಷ್ಟು ಸಿಟ್ಟಿಗೆದ್ದಿದ್ದವರು ಅಂದು.

ಆದರೂ ಬೇಗ ಅವರ ಇಚ್ಛೆಯಂತೆಯೇ ನಡೆಯುವುದು ನನ್ನಿಂದ ಆಗಲಿಲ್ಲ. ತನ್ನ ಮಡಿಯನ್ನೂ, ತುಳಸೀ ಪೂಜೆಯನ್ನೂ ನೋಡಿ ಹಾಸ್ಯ ಮಾಡಿ ನಗುತ್ತಿದ್ದರೂ ಅವುಗಳನ್ನು ಬಿಟ್ಟರೆ ತಪ್ಪು ಮಾಡಿದಂತೆ ಎಂದು ನನ್ನ ಭಾವನೆಯಾಗಿತ್ತು. ಆದರೆ ಆ ಭಾವನೆ ತಪ್ಪು ಎನ್ನುವುದನ್ನು ತಾಯಿ ತೋರಿಸಿಕೊಟ್ಟಳು. ಎರಡನೆಯ ಮಗ ವಿಜಯನ ಬಾಣಂತಿತನ ಮುಗಿಸಿಕೊಂಡು ಬಂದಮೇಲೆ ಅವರು ಬಹಳ ಬದಲಾದಂತೆ ಎನ್ನಿಸಿತು ನನಗೆ. ಮೊದಲಿನ ಹಾಗೆ ನಗುವಿರಲಿಲ್ಲ. ಮಾತು ಹೆಚ್ಚಾಗಿ ಆಡುತ್ತಿರಲಿಲ್ಲ. ಕೆಲಸದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು ಸಿಟ್ಟಿಗೇಳುವದು, ಒದರಾಡುವದೂ ಮಾಡುತ್ತಿದ್ದರು. ಹೆಚ್ಚು ಹೊತ್ತು ಮನೆಯ ಹೊರಗೇ ಇರುತ್ತಿದ್ದರು. ಇದನ್ನೆಲ್ಲ ನೋಡಿ ನನ್ನ ಮನಸ್ಸಿಗೆ ಕಸಿವಿಸಿ ಆಯಿತು. ಯಾರ ಮುಂದೆ ಹೇಳಬೇಕು? ಮೈಯಲ್ಲಿ ಆರಾಮ ಇಲ್ಲವೆಂದು ಕಾರಣ ಹೇಳಿ ತಾಯಿಯನ್ನು ಕರೆಸಿಕೊಂಡೆ. ಅವಳ ಮುಂದೆ ಎಲ್ಲವನ್ನೂ ಹೇಳಿ ಅತ್ತುಬಿಟ್ಟೆ. ಅದಕ್ಕೆ ಅವಳು ಬೇಗನೇ ಅವರ ಅಸಮಾಧಾನದ ಕಾರಣ ಕಂಡುಹಿಡಿದು ನನಗೆ ದಾರಿ ತೋರಿಸಿಕೊಟ್ಟಳು. "ನೀನು ಮೊದಲಿನ ಹಾಂಗs ಇರಬೇಕು ಅನ್ನೂ ಮಾತು ಮರೆತುಬಿಡು. ನಿನ್ನ ಗಂಡಗ ನೀ ಹ್ಯಾಂಗ ಇದ್ದರ ಸೇರತದ ಅನ್ನೂದು ತಿಳಕೊಂಡು ಅದರಂಗ

ನಡಿ, ಅಂದರ ಮನಸ್ಸಿಗೆ ಸಂತೋಷ ಆಗಿ ತಾವs ಸಿಟ್ಟು -ಸೆಡವು ಎಲ್ಲಾ ಬಿಡತಾರ" ಎಂದು ಹೇಳಿದ ಅವಳ ಮಾತನ್ನು ಅಕ್ಷರಶಃ ಪಾಲಿಸಿದೆ. ಅದರ ಫಲವೇ ಹೀಗಾಗಿರುವುದು ನಾನು..... ಎನ್ನುತ್ತ ತನ್ನ ನೈಲಾನ್ ಸೀರೆಯ ನಿರಿಗೆಗಳನ್ನು ಸರಿಪಡಿಸಿಕೊಂಡು, ವ್ಯಾನಿಟಿ ಬ್ಯಾಗನ್ನು ಮತ್ತೊಂದು ಕೈಗೆ ಬದಲಾಯಿಸಿ ಕೈಗಡಿಯಾರವನ್ನು ಮತ್ತೊಮ್ಮೆ ನೋಡಿದಳು ಕುಸುಮಾ.

ಬಸ್ಸು ಬರುವ ಹೊತ್ತಾಗಿತ್ತು. ಅಷ್ಟರಲ್ಲಿ ವನಿತಾಮಂಡಳದ ಕಾರ್ಯದರ್ಶಿನಿ ಇಂದುಮತಿ ಅವಸರದಿಂದ ಅವಳ ಹತ್ತಿರ ಬಂದು,

ಯಾಕ್ರೀ, ಸಾಧನಾಬಾಯಿ ಇವತ್ತೂ ಬರಲಿಲ್ಲೇನು?" ಎಂದಳು.

"ಇಲ್ರೀ, ಕರೀಲಿಕ್ಕೆ ಹೋಗಿದ್ದೆ ಅವರ ಮನೀಗೆ. ಆದರೆ ಯಾಕೋ ಒಲ್ಲೆ ಅಂದರು. ಮೊದಲ ಹುರುಪಿಲೆ ಹೊರಗ ಹೋಗೂದು ಮಾಡೂದು ಎಷ್ಟು ಮಾಡುತ್ತಿದ್ದರು. ಇತ್ತಿತ್ತಲಾಗ ಎಲ್ಲಾ ಬಿಟ್ಟ ಬಿಟ್ಟಾರ. ಮನೀ, ಮಕ್ಕಳು, ಕೆಲಸಾ ಅಂತ ಮನ್ಯಾಗs ಇರತಾರ."

"ಹಾಂಗ್ಯಾಕ ಬದಲ ಆದರು? ಏನಾರ ಕಾರಣ ಇರಬೇಕೇನು?"

"ಇರಬೇಕು ಏನರೇ, ಆದರ ನಮಗ್ಯಾಂಗ ಗೊತ್ತಾಗಬೇಕು ? ನನಗನಸ್ತದ ಅವರ ದೊಡ್ಡ ಹುಡುಗಿ ಶಾರದಾ ಹುಟ್ಟಿದ ಮ್ಯಾಲೆ ಮತ್ತೆರಡು ಹುಡುಗರಾಗಿದ್ದವು. ಅವೆರಡೂ ತೀರಿಕೊಂಡವು. ಅದನ್ನs ಮನಸ್ಸಿಗೆ ಹಚಿಗೊಂಡಾರೋ ಏನೋ. ಮಕ್ಕಳೂ ಅಂದರ ಸಾಕು, ಅಷ್ಟ ಹಚಿಗೊಂಡಾರ. ಈಗ ಚೇತನಾ ಹುಟ್ಟಿದ ಮ್ಯಾಲೆ ಅವರ ಮನಸ್ಸಿನ ದುಃಖ ಎಷ್ಟೋ ಕಡಿಮಿ ಆದಂಗ ಕಾಣ್ತದ. ಆದರೂ ಮನೀ ಬಿಟ್ಟು ಹೊರಗs ಬರಲಿಕ್ಕೆ ಒಲ್ಲರು...."

ಬಸ್ಸಿನ ಹಾರ್ನಿನ ಸಪ್ಪಳಕ್ಕೆ ಕಟ್ಟಾದ ಮಾತುಕತೆಯನ್ನು ಅಲ್ಲಿಯೆ ಬಿಟ್ಟು ಇಬ್ಬರೂ ಗೆಳತಿಯರು ಬಸ್ಸನ್ನೇರಿದರು.

***

"ಸಾಧನಾss" ಬಟ್ಟೆ ಬದಲಾಯಿಸುತ್ತ ಚಂದ್ರಕಾಂತ ಕೂಗಿದ. ಅಡಿಗೆಯ ಮನೆಯಲ್ಲಿದ್ದ ಸಾಧನಾಳಿಗೆ ಸ್ಟೋವಿನ ಸಪ್ಪಳದಲ್ಲಿ ಗಂಡನ ಕರೆ ಕೇಳಲಿಲ್ಲ. ಬಚ್ಚಲು ಮನೆಗೆ ಬಂದ ಚಂದ್ರಕಾಂತ.

"ಏs ಸಾಧನಾs ಎಷ್ಟ ಕರೀತಿನಿ ಕೇಳಿಸೋದಿಲ್ಲೇನು?" ಎಂದ.

"ಇಲ್ರೀ, ಸ್ಟೋದ ಸಪ್ಪಳದಾಗ ನೀವು ಮನೀಯೊಳಗ ಬಂದದ್ದೂ ಗೊತ್ತಿಲ್ಲ. ಕರೆದದ್ದೂ ಕೇಳಿಸಿಲ್ಲ" ಎಂದಳು ಸಾಧನಾ ಉಳ್ಳೇಗಡ್ಡಿ ಹೆಚ್ಚುತ್ತ.

"ಹೊ ಅದೆಲ್ಲಾ ಆತು. ವಾಕಿಂಗಿಗೆ ಹೋಗೂಣು ತಯಾರಾಗಿನ್ನ;ಈಗs ಆರು ಹೊಡೆದು ಹೋತು."

"ಆರು ಹೊಡಿತೇನು ಆಗಲೇ ! ಇನ್ನ ನಾ ವಾಕಿಂಗ್‌ಗೆ ಬರೂದಿಲ್ರಿ. ಶಾರದಾ ಈಗ ಸಾಲಿಯಿಂದ ಬರ್ತಾಳ. ಇವತ್ತ ದೋಸೆ ಮಾಡಿ ಕೊಡ್ತೀನಿ ಅಂತ ಆಕೀಗೆ ಆಶಾ ಹಚ್ಚೇನಿ. ಈಗ ಅದsತಯಾರಿಯೊಳಗ ಇದ್ದೀನಿ. ಇವತ್ತ ನಾ ಬರಲಿಕ್ಕೆ ಆಗೂದಿಲ್ಲ. ನೀವs ಹೋಗಿ ಬರ್ರಿ."

"ಎಲ್ಲಾ ತಯಾರಾಗೇದ. ಇನ್ನ ಬೇಯಿಸೂದ ಅಷ್ಟs ಅಲ್ಲಾ? ಲಗೂ ಲಗೂನ ಹಾಕಿಬಿಡು ಶಾರದಾಗೂ ಕೊಟ್ಟು ನಾವೂ ತಿಂದು ಹೋಗೂಣಂತ ವಾಕಿಂಗಿಗೆ."

"ನೀ ದೈವಾನಿ ನೋಡವಾ. ತವರು ಮನಿಯವರಿಗೆ ಎಷ್ಟ ಪ್ರೀತಿ ಎಷ್ಟ ಅಕ್ಕರತಿ. ಅದನ್ನು ಬೇಡಿ ಬರಬೇಕು. ಉಮಾನ ತವರು ಮನಿಯವರಿಗೆ ಏನೂ ಇಲ್ಲ. ಚೊಚ್ಚಲು ಗಂಡು ಮೊಮ್ಮಗ ಹುಟ್ಟಿದರ ದಾರದೆಳೆಯಂಥಾ ಬಂಗಾರ ಚೈನು ಕೊಟ್ಟಾರ. ಕಾಲಾಗ ಬೆಳ್ಳಿ ಗೆಜ್ಜೆ, ಪೈಜಣ ಏನೂ ಇಲ್ಲ. ಈಗ್ಯಾರ ಹಾಕೋತಾರ ಬಿಡು ಅಂದರಂತ. ನನಗ ಸರಿ ಬರೂದಿಲ್ಲ ನೋಡವಾ ಇದು" ರಾಗವೆಳೆದರು ಉಮೆಯ ಅತ್ತೆ.

ತನ್ನ ಸೀರೆಯ, ತವರು ಮನೆಯ ಹೊಗಳಿಕೆ ಕೇಳಿ ಉಬ್ಬಿದ ಗಿರಿಜೆ ಅನುಕಂಪ ತುಂಬಿದ ದನಿಯಲ್ಲಿ "ಎಲ್ಲಿ ನಿಮ್ಮ ಕೈ ನೋಡೋಣ, ಏನಾಗೇದ? ಮುಳ್ಳು-ಗಿಳ್ಳು ಕಾಣಿಸಿದರ ತಗೀತೇನಿ. ಸೂಜಿ ಎಲ್ಲ್ಯದ ಕೊಡ್ರಿ" ಎಂದಳು.

"ಏನು ಮಾಡ್ತಿ ಬಿಡು ಸುಳ್ಳ. ಛಂದಾಗಿ ನಾಕು ಮಾತು ಕತಿ ಆಡು ಕೂತುಕೊಂಡು. ನೀ ಬಾಯ್ತುಂಬ, 'ಏನಾಗೇದ ಮುಳ್ಳು ತೆಗೀತೀನಿ!' ಅಂತ ಕೇಳಿದಿ ಅಷ್ಟs ಸಾಕು. ನನ್ನ ಉಮಾ ಎರಡು ದಿನಾ ಆತು ನೋಡೇ ನೋಡ್ತಾಳ. ಒಂದು ಮಾತರೇ ಕೇಳಲಿಲ್ಲ ನೋಡವಾ?"

"ಸೂಜಿ ಕೊಟ್ಟಬಿಡ್ರಿ. ಮುಳ್ಳ ಕಾಣಸ್ತದ ಇಲ್ಲೇ. ತಗದರ ಕೀವೂ ಹೋಗ್ತದ. ನೋವು ಕಡಿಮೆಯಾಗ್ತದ" ಎಂದ ಗಿರಿಜೆ ಎರಡು ನಿಮಿಷಗಳಲ್ಲಿ ಮುಳ್ಳು ತೆಗೆದು, ಹತ್ತಿಯಿಂದ ಕೀವು ಒರೆಸಿ, ಬೆರಳಿಗೆ ಪಟ್ಟಿ ಕಟ್ಟಿಬಿಟ್ಟಳು.

"ಪುಣ್ಯ ಬರಲೆವ್ವ ನಿನಗ. ನಿನ್ನಂಥಾ ಸೊಸಿ ಸಿಕ್ಕ ನಿಮ್ಮ ಅತ್ತೀನ ದೈವಾನಿ. ಎಲ್ಲಾದಕೂ ಬೇಡಿ ಬರಬೇಕು" ಎಂದು ಉಸಿರಗರೆದಳು.

ಉಮೆಯ ಅತ್ತೆಯಿಂದ ಕುಂಕುಮ ತೆಗೆದುಕೊಂಡ ಗಿರಿಜೆ ಮತ್ತೆಲ್ಲೂ ಹೋಗದೆ ನೇರವಾಗಿ ಮನೆಯ ದಾರಿ ಹಿಡಿದಳು.

ಮನೆಯ ಬಾಗಿಲು ತೆರೆದಿತ್ತು. ಗಿರಿಜ ಒಳಗೆ ಕಾಲಿಟ್ಟಳು. ಕಾಫಿ ಕಪ್ಪನ್ನು ಕೈಯಲ್ಲಿ ಪಿಡಿದ ಉಮಾ ಬಂದಳು. "ತಲೆ ನೋವು ಬಹಳ. ಸ್ವಲ್ಪ ಕಾಪಿ ಮಾಡಿಕೊಡು ಅಂದ್ರು ನಿಮ್ಮ ಅತ್ತೆ. ಮಾಡಿ ತಂದೆ" ಎಂದು ನಸುನಕ್ಕಳು.

ಗಿರಿಜೆ ನಗಲಿಲ್ಲ.

***

# ಸ್ವರೂಪ ದರ್ಶನ

ಹೊಸ್ತಿಲ ಬಳಿ ಸರ ಸರ ಸೀರೆಯ ಸದ್ದು, ಬಳೆಗಳ ಸಪ್ಪಳವಾಯಿತು. ಸಾಲಂಕೃತ ಕನ್ಯೆಯನ್ನು ಕರೆದು ತಂದಿದ್ದರು.

ಸೋಮಶೇಖರಯ್ಯ ತಲೆ ಎತ್ತಿ ನೋಡಿ ಸೆಟೆದು ಕುಳಿತು 'ಬಾ ತಂಗೀ ಇತ್ಲಾಗ' ಎಂದರು. ಅವರ ಹೆಂಡತಿ ಗೌರಮ್ಮ ಸರಿದು ಸೋಫಾದಲ್ಲಿ ಕೂಡಲು ಹುಡುಗಿಗೆ ಸ್ಥಳ ಮಾಡಿಕೊಟ್ಟರು. ಹುಡುಗಿಯ ಕೈ ನೋಡಲು ಶಾಸ್ತ್ರಿಗಳು ಮುಂದಕ್ಕೆ ಸರಿದರು. ಚಂದ್ರಕಾಂತ ಕುಳಿತ ಸ್ಥಳದಲ್ಲಿಯೇ ಮಿಸುಕಾಡಿದ.

"ನಿನ್ನ ಹೆಸರೇನವಾ ತಂಗಿ ?"

'ಸರೋಜಿನಿ.'

'ಸಾಲಿ ಎಷ್ಟು ಕಲಿತೀಯವಾ ?"

'ಎಸ್.ಎಸ್.ಎಲ್.ಸಿ. ಆಗೇದ್ರಿ.'

'ಹಾಡ ಅನ್ನಲಿಕ್ಕೆ ಬರ್ತದೇನವಾ?'. ಇದುವರೆಗೆ ಸುಮ್ಮನೆ ಕುಳಿತ ಚಂದ್ರಕಾಂತನ ಅಕ್ಕ ಮಾತನಾಡಿದಳು.

'ನಮ್ಮ ಕುಟುಂಬ ಅಪ್ಪಟ ಮೈಸೂರಿನವರ್ರಿ. ಮಗಳಿಗೆ ಶಾಸ್ತ್ರೋಕ್ತ ಸಂಗೀತ ಹೇಳಿಸಲಿಕ್ಕೇ ಬೇಕು ಅಂತ ಅವರ ಮತ. ತಂಬೂರಿ ಮ್ಯಾಲೇ ಹಾಡು ಕಲಿತಾಳ.' ಕನ್ಯೆಯ ತಂದೆ ನೀಲಕಂಠಪ್ಪನವರು ವಿವರಣೆ ಕೊಟ್ಟು ನಕ್ಕರು-ತಮ್ಮ ಮಾತಿಗೆ ತಾವೇ.

ತಂಬೂರಿ ಶೃತಿ ಮಾಡಿಕೊಂಡು ಸರೋಜಿನಿ 'ತನುವು ನಿನ್ನದು ಮನವು ನಿನ್ನದು' ಹೇಳಿದಳು. ಅವಳು ಹಾಡುವಾಗಲೇ ಒಂದೆರಡು ಸಲ ಮುಖ ನೋಡಿದ ಚಂದ್ರಾಕಂತ. ಆಮೇಲೆ ತಲೆ ಎತ್ತಲೇ ಇಲ್ಲ. ಹಣ್ಣು ಇಟ್ಟು ಕನ್ಯೆಯನ್ನು ಒಳಕ್ಕೆ ಕಳಿಸಿ ಚಹಾಪಾನ ಮುಗಿಸಿಕೊಂಡು ಕಾರು ಹತ್ತಿದರು.

ಕಾರಿನಿಂದ ಇಳಿದು ದಿವಾನಖಾನೆಯನ್ನು ಪ್ರವೇಶಿಸುತ್ತಿದ್ದಂತೆ ಚಂದ್ರಕಾಂತನ ಅಕ್ಕ 'ಹುಡುಗಿ ದನಿ ಎಷ್ಟು ಛಂದ ಅದs ಅಲ್ಲಾ' ಎಂದಳು.

'ಹೂಂ; ದನೀನೂ ಛಂದ ಅದ. ವಿನಯ ಅದ, ವಿದ್ಯಾ ಅದ' ಗೌರಮ್ಮ ದನಿಗೂಡಿಸಿದರು.

'ಯಾಕೋ ಚಂದ್ರ ನೀ ಸುಮ್ಮನs ಅದೀಯಲಾ?' ಎಂದು ಅವನಿಂದ ಉತ್ತರ ನಿರೀಕ್ಷಿಸಿದರು ಅವನ ತಂದೆ.

'ನನಗ ಹುಡುಗಿ ಏನೂ ಮನಸ್ಸಿಗೆ ಬರಲಿಲ್ಲಾ!'

'ಯಾಕೋ ಏನಾಗೇದ ? ಎಲ್ಲಾದಕ್ಕೂ ಹಿಂಗ ಹೆಸರಿಡತೀಯಪಾ ನೀನು. ಒಂದಕ್ಕ ಕಣ್ಣು ಛಂದಿಲ್ಲಾ; ಒಂದಕ್ಕ ಮೂಗು ದೊಡ್ಡದದ; ಒಂದು ಕಪ್ಪಗದ; ಒಂದು ಗಿಡ್ಡದ ಅಂತ ಹೇಳಿ ಇದು ಎಂಟನೇ ಕನ್ಯಾ ನೋಡು ನಾವು ನೋಡಿದ್ದು, ಇನ್ನೆಂಥಾ ರತಿ ಬೇಕಪಾ ನಿನಗೆ. ಸರೋಜಿನಿ ಅಪ್ಪ ದುಡ್ಡೂ ಭಾಳ ಕೊಡೂ ಹಾಂಗ ಕಾಣಸ್ತದ ಎಂದಳು ತಾಯಿ.

'ಇಲ್ನೋಡು ಅವ್ವಾ: ನನಗ ದುಡ್ಡು ತರೂ ಹೆಂಡತಿ ಬ್ಯಾಡಾ, ಯಾಕಂದ್ರ ನಮ್ಮಪ್ಪ ಮಾಡಿದ ಆಸ್ತೀನs ರಗಡದ. ಸಂಗೀತ ಹೇಳೂವಾಕಿ ಬ್ಯಾಡಾs. ಅದೆಲ್ಲಾ ಸಿನಿಮಾ ರೇಡಿಯೋದೊಳಗ ಸಿಗ್ತದ. ಭಾಳ ಶಿಕ್ಷಣ ಇದ್ದಾಕೀನೂ ಬ್ಯಾಡಾ; ಯಾಕಂದ್ರ ಆಕಿ ಏನ್ ನೌಕರಿ ಮಾಡಬೇಕಾಗಿಲ್ಲ. ಆದ್ರ ಹುಡುಗಿ ರೂಪವತಿ ಇರಬೇಕು ಅಂತ ನನ್ನ

ಇಚ್ಛಾ. ಇಷ್ಟು ದಿನಾ ನೋಡಿದ ಯಾವ ಹುಡುಗೀಗೂ ಸೌಂದರ್ಯದ ಲಕ್ಷಣಾನs ಇದ್ದಿಲ್ಲಾ. ಇವತ್ತಿನ ಹುಡುಗೀನೂ ನನ್ನ ಮನಸ್ಸಿಗೆ ಬಂದಿಲ್ಲ. ಈ ವಿಷಯದಾಗ ನನಗ ಒತ್ತಾಯ ಮಾಡಬ್ಯಾಡ' ಎಂದು ಹೇಳಿ ಚಂದ್ರಕಾಂತ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡನು.

ರುಮಾಲು ಕಳಚುತ್ತಿದ್ದ ಸೋಮಶೇಖರಯ್ಯ ಹೆಂಡತಿಯ ಕಡೆಗೆ ತಿರುಗಿ, 'ನೋಡು ನಿನ್ನ ಅಚ್ಛಾದ ಫಲ. ನಿನ್ನ ಮಗನೇ ನಿನ್ನ ಮಾತು ಕೇಳೂದಿಲ್ಲ' ಎಂದರು.

ಸೋಫಾದಲ್ಲಿ ಒರಗಿದ್ದ ಗೌರಮ್ಮ 'ಹೌದು, ನಾನೊಬ್ಬಳೇs ಏನು ಅವನ್ನ ಸಾಕಿದ್ದು, ನೀವೂ ಅವ ಹೇಳಿದಾಂಗ ಕುಣಿದೀರಿ. ಕಾರು ಬೇಡಿದಾ ಕಾರು ಕೊಡಿಸಿದ್ರಿ. ರೇಡಿಯೋ ಬೇಡಿದಾ ತಂದ್ರಿ. ಮತ್ತ ಈಗ ಎಲ್ಲಾ ನನ್ನ ತಲಿಮ್ಯಾಲೇ ಹಾಕತೀರಲ್ಲ' ಎಂದರು.

ತಂದೆ-ತಾಯಿಗಳ ಮಾತು ಕೇಳುತ್ತಿದ್ದ ಅಕ್ಕಮ್ಮ 'ನೀವಿಬ್ಬರೂ ಕೂಡಿ ಪ್ರೀತಿ ಮಾಡಿದ್ದರ ಫಲ ಇದು. ನಿಮ್ಮಿಬ್ಬರಿಗೂ ಹೆದರೂದಿಲ್ಲ ಅವ. ಅವಾ ಬಯಸೂವಂಥಾ ರೂಪವತಿ ಸಿಗಬೇಕಾದ್ರ ಹಗಲು ದೀವಟಿಗೆ ಹಚ್ಚಬೇಕಾಗತದ ನೀವು' ಎಂದು ವ್ಯಂಗ್ಯವಾಗಿ ನಕ್ಕಳು.

***

ಮಲ್ಲಿಗೆ ಹೂವಿನಿಂದ ಚೆನ್ನಾಗಿ ಅಲಂಕೃತವಾಗಿದ್ದ ಮಂಚದ ಬಳಿಗೆ ತಾಂಬೂಲದ ತಟ್ಟೆ ಹಿಡಿದುಕೊಂಡು ಶಶಿ ಬಂದಳು. ಅವಳ ದಾರಿಯನ್ನೇ ಕಾಯುತ್ತಿದ್ದ ಚಂದ್ರಕಾಂತ ಎದ್ದು ಬಾಗಿಲು ಮುಚ್ಚಿದ. ಹೆಂಡತಿಯ ಮುಖವನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದುಕೊಂಡು ಒಂದೇ ಸಮನೇ ನೋಡಹತ್ತಿದ.

'ಹಾಂಗ ಯಾಕ ನೋಡತೀರಿ ನನ್ನs?'

'ಯಾಕ ? ನೋಡು ಶಶಿ, ಇಷ್ಟ ಛಂದನ್ನ ಕಣ್ಣು, ತೀಡಿದ ಹುಬ್ಬು, ನೆಟ್ಟನ್ನ ಮೂಗು ಕೆಂಪನ್ನ ತುಟಿ, ಗುಲಾಬಿ ಗಲ್ಲ, ಬಂಗಾರದ ಬಣ್ಣದ ಮೈ, ಗುಂಗುರು ಕೂದಲು ಇವೆಲ್ಲಾ ಇದ್ದಂಥಾ ಅಪ್ರತಿಮ ಸುಂದರಿ ಶಶಿ ನನ್ನಾಕಿ ಆದಳಲ್ಲಾ ಅಂತ ನೋಡತೀನಿ."

'ಹೋಗ್ರಿ, ನೀವೊಬ್ಬರು. ನಾಟಕದಾಗಿನ್ಹಾಂಗ ಮಾತಾಡತೀರಲ್ರಿ.?'

'ಇದು ನಾಟಕ ಅಲ್ಲಾ ಸಿನಿಮಾ ಅಲ್ಲಾ, ಖರೇ ಖರೇ ಅಂತs ಅಷ್ಟ ಸಂತೋಷ ಆಗೇದ ನನಗ.'

'ತೊಗೊಳ್ರಿ ಈ ಪಾನಪಟ್ಟಿ ನಿಮಗ, ಇದು ನನಗ.'

'ಈ ಕೆಂಪತುಟಿ ಕಂಡಕೂಡಲೆ ನೆನಪಾಗ್ತದ ನೋಡು: ನಾ ಸಣ್ಣಾವಿದ್ದಾಗ ನಮ್ಮ ಮನೀಗೆ ಒಬ್ಬ ಮುಸುರೀ ತಿಕ್ಕಾಕಿ ಬರತಿದ್ಲು. ಆಕಿ ಹೆಸರು ತುಳಸಿ. ನೋಡಲಿಕ್ಕೆ ಭಾಳಛಂದ ಇದ್ಲು ಆಕಿ. ಆಕೀನ್ನ ಕಂಡ ಕೂಡಲೇ ಓಡಿಹೋಗಿ ಮಾತಾಡ್ಸಿ ಅವ್ವ ಕೊಟ್ಟಿದ್ದ ತಿನಸ ಆಕಿಗೂ ಒಂದಿಷ್ಟ ಕೊಟ್ಟು ಆಕಿ ಹತ್ರ ಆಡಿ ಬರತಿದ್ದೆ. ಸ್ವಲ್ಪ ದಿನದ ಮ್ಯಾಲೆ ಆಕಿ ಟೈಫಾಯ್ಡ ಆಗಿ ಸತ್ತಳು. ಇನ್ನ ಆಕಿ ನಮ್ಮ ಮನೀಗೆ ಬರೂದಿಲ್ಲ ಅನ್ನೂದು ಕೇಳಿ ಎರಡು ದಿನ ಅತ್ತಿದ್ದೆ.'

'ದೇವರು ನಿಮ್ಮ ಮನಸ್ಸಿಗೆ ಒಪ್ಪುವಂಥಾ ನನ್ನಂಥಾಕೀನ್ನ ಹುಟ್ಟಿಸಿದಾs ಅಂತ ಲಗ್ನಾ ಮಾಡಿಕೊಂಡ್ರಿ. ಇಲ್ಲದಿದ್ರ ಬ್ರಹ್ಮಚಾರೀನ ಆಗತಿದ್ರ್ಯೋ ಏನೋ !'

'ನನ್ನ ಹುಟ್ಟಿಸಿದ ಆ ದೇವರಿಗೆ ನನ್ನ ಕಾಳಜಿ ಇರಲಿಕ್ಕೇ ಬೇಕಲ್ಲ !'

'ನನ್ನ ಯಾವ ಜನ್ಮದ ಪುಣ್ಯಾನೋ ನಿಮ್ಮಂಥ ಗಂಡನ್ನ ಆ ದೇವರು ದೊರಕಿಸಿಕೊಟ್ಟಾನ. ಆದ್ರೂ ಚೆಲುವಿಕೀ ಹುಚ್ಚು ಅತೀಯಾಗಿರಬಾರ್ದು ನೋಡ್ರಿ, ಮುಖ್ಯ ಗುಣಾ ಛೋಲೋ ಇದ್ರ ಆತು.'

'ಇರಲಿರಲಿ. ಆ ವೇಂದಾಂತ ಈಗ್ಯಾಕ' ಎನ್ನುತ್ತಲೇ ಚಂದ್ರಕಾಂತ ದೀಪ ಆರಿಸಿದ.

***

'ಅವ್ವಾ' 'ಅವ್ವಾ' ಎಂದು ಧಾವಿಸಿ ಕರೆಯುತ್ತ ಬಂದ ಚಂದ್ರಕಾಂತ.

'ಏನೋ ಚಂದ್ರೂ ಅಷ್ಟ್ಯಾಕ ಗಡಿಬಿಡಿ ?'

'ಆಕಿ ತವರ್ಮನಿಯಿಂದ ಟ್ರಂಕಾಲ್ ಬಂತು ಅಂಗಡಿಗೆ 'ಲಗೂ ಹೊರಟು ಬರ್ರಿ' ಅಂತ. ಮನೀಕಡೆ ಬರೂದೊರಳಗ ತಾರೂ ಬಂತು. ಅಪ್ಪ ತನಗ ಈಗ ಎಷ್ಟೂ ಪುರಸತ್ತಿಲ್ಲ ಅಂತಾನ. ನೀ ಬರತೀಯೇನವಾ ನನ್ನ ಕೂಡ. ಹೋಗಿಬರೂಣ ಬಾ ಏನಾಗೇದೋ ಏನೋ.'

"ಹಾಂಗ್ಯಾಕ ಗಾಬರ್ಯಾಗತೀದಿ ಬಿಡು. ಅಕ್ಕಮ್ಮಗ ಹೇಳಿಕಳಸ್ತೀನಿ ಎರಡ ದಿನ ಬಂದು ಇದ್ದು ಮನೀ ನೋಡಿಕೋ ಅಂತ. ನಾವಿಬ್ರೂ ಹೋಗೋಣ. ಶುಕ್ರವಾರ ಸಂಜೀಹೊತ್ತು-ಏನ ಸುದ್ದಿಯೋ ಏನೋ, ದೇವರ ಮುಂದ ದೀಪಾ ಹಚ್ಚಿ ಬರತೀನಿ."

"ಲಗೂನ ತಯಾರಾಗಬೇಕವಾ ; ಎಂಟೂವರಿಗೆ ಗಾಡಿ ಆದ. ನಾನೂ ಸೂಟಕೇಸಿನ ಸಾಮಾನು ತುಂಬತೇನಿ."

ಗಾಡಿಯಲ್ಲಿ ಕುಳಿತರೂ ಅದೇ ಕಳವಳ ಚಂದ್ರಕಾಂತನಿಗೆ. ಇನ್ನ ಶಶಿಗೆ ಏನಾಗಿದೆಯೊ ಏನೋ ? ಸ್ಥಳ ಸಾಕಷ್ಟಿದ್ದರೂ ಮಲಗಲು ಮನಸ್ಸು ಮಾಡಲಿಲ್ಲ. ಅವ್ವನಿಗೆ ಮಲಗಲು ಹೇಳಿ ಪೇಪರ ಓದುತ್ತ ಕುಳಿತ. ಅದೂ ಬೇಸರವಾಯಿತು, ಎದುರಿಗೆ ಕುಳಿತವರನ್ನು ಪರಿಚಯ ಮಾಡಿಕೊಂಡು ಹರಟೆ ಹೊಡೆದ. ಆದರೂ ಮನಸ್ಸು ಶಶಿಯ ಹತ್ತಿರವೇ!

ಇವರ ಆಗಮನದ ವಿಷಯ ಮೊದಲೇ ತಿಳಿದುಕೊಂಡಿದ್ದ ಮಾವನವರೇ ಸ್ವತಃ ಸ್ಟೇಶನ್ನಿಗೆ ಬಂದಿದ್ದರು. ಇಳಿದೊಡನೆಯೇ ಕೇಳಿದ ಚಂದ್ರಕಾಂತ 'ಏನು ಸಮಾಚಾರ?' ಎಂದು. ಅವರಿಂದ ಸರಿಯಾದ ಉತ್ತರ ಬರಲೇ ಇಲ್ಲ. ಕೆಮ್ಮಿ ಗಂಟಲು ಸರಿ ಮಾಡಿಕೊಂಡು 'ಮನೆಗೆ ನಡೆಯಿರಿ' ಎಂದರವರು.

ಕೋಣೆಯಲ್ಲಿ ಕಾಲಿಟ್ಟೊಡನೆಯೇ ಎದುರಿಗೆ ಕಂಡದ್ದು ಬ್ಯಾಂಡೇಜ್ ಕಟ್ಟಿದ ಶಶಿಯ ದೇಹ. ಮಂಚದ ಹತ್ತಿರ ಧಾವಿಸಿ ಹೋದ. ಅರ್ಧ ಮುಖ ಬಿಟ್ಟು ಉಳಿದರ್ಧ ಮುಖ ಬ್ಯಾಂಡೇಜಿನಲ್ಲಿ ಮುಚ್ಚಿತ್ತು. ತನ್ನ ಶಶಿ ಇವಳೇ ಹೌದೋ ಅಲ್ಲವೋ ಎಂಬ ಅನುಮಾನವಾಯಿತವನಿಗೆ. ಸಮೀಪಕ್ಕೆ ಬಗ್ಗಿ ನೋಡಿದ; ಎದೆ ಬಡಿತ ನಿಂತಂತಾಯಿತು. ಕಣ್ಣಿಗೆ ಕತ್ತಲು ಬಂದಿತು.

"ಚಕ್ಕಲೀ ಕರೀತಿದ್ವೆ, ಎಲ್ಲಾ ಮುಗದು ಕಡೇ ಒಂದು ಒಬ್ಬಿ ಉಳದಿತ್ತು-ನೋಡ್ರಿ, ಶಶಿ ತಾನೇ ಕರೀತಿನಿ ಅಂತ ಬಂದ್ಲು. ಬ್ಯಾಡ ಅಂದ್ರೂ ಕೇಳಲಿಲ್ಲ. ನನ್ನ ಎಬ್ಬಿಸಿ ತಾನೇ ಕೂತಳು. ಎರಡು ಚಕ್ಲಿ ಎಣ್ಣ್ಯಾಗ ಹಾಕುದರೊಳಗss ಪಾಂತಿ ಬಂದಾಂಗ ಆತಂತ. ಬಚ್ಚಲಿಗೆ ಹೋಗಬೇಕು ಅಂತ ಎದ್ದ ನಿಂತಾಳ. ಕಣ್ಣಿಗೆ ಕತ್ತಲ ಬಂದ್ಹಾಂಗಾಗಿ ಎಣ್ಣಿ ಕಡಾಯಿಗೆ ತಲಿ ಬಡದು ಬಿದ್ದಳು. ಬಲಭಾಗದ ಹುಬ್ಬು, ಕಿವಿ, ಗಲ್ಲ ಕುತಿಗಿ ಎಲ್ಲಾ ಸುಟ್ಟದ." ಶಶಿಯ ತಾಯಿ ದುಃಖಿಸುತ್ತ ಕಣ್ಣೊರಸಿಕೊಂಡರು.

"ಪಾಂತಿ ಯಾಕ? ಪಿತ್ತೋ ಏನು ಏನರೇ ...." ಎಂದು ಅರ್ಧಕ್ಕೇ ನಿಲ್ಲಿಸಿದರು ಗೌರಮ್ಮ.

"ಇಲ್ರಿ, ನಿಮ್ಮಲ್ಲಿಂದ ಬಂದ ಮ್ಯಾಲೆ ಆಕಿ ತಲಿಗೆ ನೀರs ಹಾಕ್ಕೊಂಡಿಲ್ಲಾ- ಒಂದೂವರೆ ತಿಂಗಳಾಗಿತ್ತು. ದಿನಾs ವಾಂತಿಯಾಗತಿತ್ತು. ಬಯಕೀ ಅಂತs ಚಕ್ಕಲಿ ಮಾಡತಿದ್ದೆ. ಆದರೆ ಈ ಅನಾಹುತದಾಗ ಅದು ಸುಳ್ಳಾತು. ನರ್ಸ ಬಂದಿದ್ದು ಮುಂಜಾನೆ. ನಮ್ಮ ಪುಣ್ಯೇಕ ಬೆಂಕಿ ಮೈಗೆ ಹತ್ತಿಲ್ಲಾ. ಇಲ್ಲದಿದ್ರ ಹುಡುಗಿ ಕೈಗೇ ಸಿಗತಿದ್ದಿಲ್ಲ.

ಗಂಡನ ಮುಖ ನೋಡಿದ ಶಶಿ "ಜೀವಂತ ಇರೂದಕಿಂತ ಸುಮ್ಮನs ಹೋಗಿದ್ರ ಛೋಲೋ ಇತ್ತ ನೋಡವಾ" ಎಂದಳು ಕ್ಷೀಣ ಧ್ವನಿಯಲ್ಲಿ.

"ಇರಲಿ ಬಿಡವಾ. ಇನ್ನೂ ಸಣ್ಣಾಕಿ, ಆಗೂದದ ಹೋಗೂದದ. ಹಾಂಗೆಲ್ಲ ಆಡಬಾರದು"ಎಂದರು ಗೌರಮ್ಮ.

ಶಶಿಯ ಒಂದೇ ಕಣ್ಣಿನಿಂದ ನೀರು ಸುರಿಯುತ್ತಿತ್ತು. ಇನ್ನೊಂದು ಕಣ್ಣು ಬ್ಯಾಂಡೇಜಿನಲ್ಲಿತ್ತು. ಕಡಾಯಿಯ ಮೇಲೆ ಬೀಳುವಾಗಲೇ ಕಣ್ಣು ಮುಚ್ಚಿದ್ದರಿಂದ ದೃಷ್ಟಿಗೇನೂ ಧಕ್ಕೆಯಾಗಿರಲಿಲ್ಲ. ಎವೆ, ಹುಬ್ಬು ಹಾಗೂ ಗಲ್ಲ ಸುಟ್ಟು ವಿರೂಪವಾಗಿತ್ತು.

ಚಂದ್ರಕಾಂತ ಹೆಂಡತಿಯ ಕೈಹಿಡಿದುಕೊಂಡು ಸುಮ್ಮನೇ ಕುಳಿತ. ಅವನ ಜೀವನದಲ್ಲೇ ಇದು ಮೊದಲನೆಯ ಆಘಾತ. ಮಾತನಾಡಲು ಅವನಿಗೆ ಬಾಯಿಯೇ ಬರಲಿಲ್ಲ. ಹೃದಯ ಭಾರವಾಗಿತ್ತು. ಮುಂದಿನ ಬಾಳನ್ನು ನೆನೆದು ಮನಸ್ಸು ಖಿನ್ನವಾಯಿತು. ಗೌರಮ್ಮ ಇಬ್ಬರ ಪಾಲಿನ ಮಾತುಗಳನ್ನೂ ಆಡಿ ಸೊಸೆಯನ್ನು ಸಾಂತ್ವನಗೊಳಿಸಿದರು. ಎಷ್ಟಾದರೂ ಗೌರಮ್ಮನದು ಹೆಂಗರುಳು. ಸೊಸೆಯ ದುರವಸ್ಥೆಯನ್ನು ನೆನೆದು ಅವರು ಮನ ಕಳವಳಗೊಳ್ಳುತ್ತಿತ್ತು. ಚೆಲುವೆ ಹೆಂಡತಿಯನ್ನು ಪಡೆದೆನೆಂಬ ಹೆಮ್ಮೆಯಿದ್ದ ಚಂದ್ರಕಾಂತನಿಗೆ ಮುಖ ಮುರಿದಂತಾಗಿತ್ತು. ಅವಳ ವಿರೂಪವನ್ನು ನೋಡಲು ಮನಸ್ಸಾಗದೆ ಮತ್ತೊಂದು ಸಲ ಅವಳ ಕೋಣೆಯಲ್ಲಿ ಕಾಲಿಡದೆ ಹಿಂತಿರುಗಿದ.

***

ಚಂದ್ರಕಾಂತ ನಿಲುವುಗನ್ನಡಿಯಲ್ಲಿ ನೋಡುತ್ತ ಟೈ ಬಿಚ್ಚುತ್ತಿದ್ದ.

"ಮ್ಯಾಚ ಈಗ ಮುಗಿತೇನಪಾ ಚಂದ್ರೂ, ಹೊತ್ತಾತು ಹಸಿವಿ ಆಗಿರಬೇಕಲ್ಲ?"

"ಹೌದಕ್ಕಾ, ಒಂದೂವರಿ ಹೊಡೀತು ನೋಡು. ಆದ್ರೂ ಹಸಿವಿ ಏನೂ ಆಗಿಲ್ಲಾ. ಗೆಳೆಯರು ಕೂಡಿದ್ರು. ಇಡ್ಲಿ, ದೋಸೆ ಹೊಡೆದೆವು ಹೊಟೇಲಿನಾಗ."

"ಯಾವಾಗಲೂ ಗೆಳೆಯರು, ಹೊಟೆಲ್ಲು, ಕ್ರಿಕೆಟ್ ಮ್ಯಾಚು ಇದರಾಗ ಇರತೀಯಲ್ಲಪಾ" ಸ್ವಲ್ಪ ಮನೀ ಕಡೇ ಲಕ್ಷ್ಯ ಕೊಡಲ್ಲ!"

"ಯಾಕ ? ಈಗೇನಾತು? ಅಪ್ಪ ಊರಿಗೆ, ಅದು ಹೋದಾಗ ಅಂಗಡಿ ನಾನs ನೋಡಿಕೋತಿನಲ್ಲ?"

"ಅಂಗಡಿ ಅಲ್ಲಪಾ ನಾ ಅಂದದ್ದು, ಮನೀ ಕಡೇ ಅಂದೆ. ನಾನು ಗಂಡನ ಮನೆಗೆ ಹೋದಾಗ ಅವ್ವ ಒಬ್ಬಾಕಿನs ಆಗ್ತಾಳ ಮನ್ಯಾಗ. ಶಶಿನ ತವರ್ಮನ್ಯಾಗ ಬಿಟ್ಟು ಎರಡು ವರುಷ ಆತು. ಯಾವಾಗ ಕರಸಾಂವಾ ಇನ್ನೂ?"

"ಮತ್ತ ಮತ್ತ ಆ ಮಾತು ಯಾಕ ಕೇಳತೀರಿ ನನ್ನ ? ನನಗ ಆಕೀನ್ನ ಕರಕೊಂಡ ಬರೂ ಮನಸ್ಸಿಲ್ಲಾ."

ಅವನ ನಿಷ್ಕರುಣೆಯ ನುಡಿ ಕೇಳಿ ವ್ಯಥಿತಳಾದ ಅಕ್ಕಮ್ಮ,

"ಯಾಕೆ ಚಂದ್ರೂ? ಆಕೀ ನಿನ್ನ ಎಷ್ಟ ಪ್ರೀತಿ ಮಾಡ್ತಾಳ. ನಿನಗ ಎರಡು ಮೂರು ಪತ್ರಾ ಬರದ್ಲಂತ, ನೀ ಉತ್ತರಾ ಸುದ್ಧಾ ಹಾಕಲಿಲ್ಲ. ನನಗ ಪತ್ರಾ ಬರದು ನಿನ್ನದೊಂದು ಫೋಟೋ ತರಿಸಿಕೊಂಡಾಳ. ಹಗಲು ರಾತ್ರಿ

ಅದರ ಮುಂದ ಕೂತು ನಿನ್ನ ಧ್ಯಾನ ಮಾಡೂದs ಆಕಿ ಕೆಲಸ ಅಂತ ಮೊನ್ನಿನ ಪತ್ರದಾಗ ಬರದಿದ್ಲು. ಭಾಳ ಗುಣವಂತಿ ಹುಡುಗಿ. ನೀ ಬರೂ ಮುಂದ ಆಕೀನ್ನ ಮಾತಾಡ್ಸಿ ಬರಲಿಲ್ಲಂತ. ನನಗ ಅತ್ತು ಪತ್ರಾ ಬರದಿದ್ಲು" ಎಂದಳು.

"ನೀ ಏನs ಹೇಳು, ಆ ಸುಟ್ಟ ಮಾರಿಯಾಕಿನ್ನ ತೊಗೊಂಡು ಏನ ಮಾಡ್ಲಿ ನಾನು, ಆಕೀ ಮಾರೀ ನೋಡಲಿಕ್ಕೆ ಮನಸ್ಸಾಗೂದಿಲ್ಲ."

"ಅಲ್ಲ ಚಂದ್ರೂ ಹಾಂಗನಬಾರದು ಅದು ರೀತಿ ಅಲ್ಲಾ, ಏನೋ ಕಾಡಾಟ್ಟಕ್ಕ ಹಾಂಗಾತು. ಈಗ ಎರಡು ವರ್ಷದೊಳಗ ಎಷ್ಟೋ ಸುಧಾರಿಸ್ಯಾಳಂತ; ನೀ ನೋಡಲಿಕ್ಕೆ ಹೋಗಲಿಲ್ಲ."

"ಏನು ಸುಧಾರಿಸಿದರೂ ಮೊದಲಿನ ರೂಪ ಬರೂದಿಲ್ಲ ನೋಡು."

"ರೂಪ ರೂಪ ಅಂತ ಬರೇ ಅದನ್ನs ನೋಡಿಕೋತ ಕೂತರ ಹ್ಯಾಂಗ ನೋಡು. ಹೆಣ್ಣ ಜೀವ. ತವರ್ಮನಿಯೊಳಗ ಎಷ್ಟ ದಿನಾ ಅಂತ ಕಳಿಬೇಕು. ನನಗ ಮೂರನೆಯದೂ ಹೆಣ್ಣs ಹುಟ್ಟಿದಾಗ ನಮ್ಮ ಯಜಮಾನ್ರು ಲಗೂನ ಕರೀಲಿಕ್ಕೆ ಬರಲಿಲ್ಲಾ. ಆವಾಗ ಎಲ್ಲಾ ಅನುಭೋಗಿಸೇನಿ. ಅಪ್ಪಗೂ ಅವ್ವಗೂ ನೀ ಹೀಂಗ ಮಾಡೂದು ಮನಸ್ಸಿಗೆ ಬರೂದಿಲ್ಲ."

"ಆಕೀನ್ನ ಸಾಕೂದು ಅವರಪ್ಪಗ ಒಜ್ಜೆಯಾಗಿದ್ದರ ಹೇಳ ಅನ್ನು, ಅಪ್ಪಗ ಹೇಳಿ ವರ್ಷಾ ಆಕೀ ಖರ್ಚಿಗೆ ಕೊಡಸ್ತೀನಿ."

"ಮನಿಯೊಳಗ ನಿನ್ನ ಮಾತು ನಡೀತದಂತ ಹಿಂಗೆಲ್ಲಾ ಆಡಬಾರದು. ಮುಂದ ಏನ ಮಾಡಬೇಕಂತೀ ನೀನು ? ನಿನ್ನ ವಿಚಾರ ಸಂಪೂರ್ಣ ತಿಳಕೊಳ್ಳಲಿಕ್ಕೆ ಅಪ್ಪ ಇವತ್ತ ನನ್ನ ಇಲ್ಲಿ ಕಳಿಶ್ಯಾರ."

"ಹೀಂಗs...."

"ಇಲ್ನೋಡು ಇನ್ನೊಂದು ಮಾತು: ಈ ಮಾತು ಇಷ್ಟು ಕಟ್ಟಿಗೆ ಹಚ್ಚಲಿಕ್ಕೆ ಕಾರಣಂದ್ರ ಇವತ್ತ ಮುಂಜಾನೆ ಶಶಿ ಅಪ್ಪ ಬಂದಿದ್ರು. ಅವರಂದ ಮಾತು ನಿನ್ನ ಕಿವೀಮ್ಯಾಲೆ ಇಡಬೇಕು ಅಂತ ಅನಿಸೇದ ನನಗ."

"ಏನಂದ್ರು?"

"ನಮ್ಮ ಶಶಿ ದಿನಾ ಕೊರಗೋದು ನೋಡಿದ್ರ ನಮ್ಮ ಹೊಟ್ಯಾಗ ಸಂಕಟ ಆಗ್ತದ. ಇನ್ನೊಂದು ಲಗ್ನದ ಮಾತು ನೀವೊಂದು ವ್ಯಾಳ್ಯೆ ತಗದ್ರ ನನಗ ಸಿಟ್ಟು ಬರತದ. ನಿಮ್ಮ ಚಂದ್ರಕಾಂತಗ ಏನಾರೇ ಆಘಾತ ಆಗಿ ಕುಂಟೋ ಕುರುಡೋ ಆಗಿದ್ರ ನಮ್ಮ ಶಶಿ ಅವನ್ನ ಬಿಟ್ಟು ಬ್ಯಾರೆ ಮದವಿ ಮಾಡೀಕೋತಿದ್ದಳೇನು? ನಾ ಭಾಳ ನಿಷ್ಠುರ ಆಗಿ ಮಾತಾಡತೇನಿ. ಅದಕ್ಕ ಕಾರಣ ನನ್ನ ಹೊಟ್ಟೀ ಕರುಳು ಒಣಗಲಿಕ್ಕೆ ಹತ್ತೇದ ಇಲ್ಲೆ. ನೀವು ನಿಮ್ಮ ಮಗನಿಗೆ ಸಮಾಧಾನ ಹೇಳಿ ನಿಮ್ಮ ಮನೀ ಲಕ್ಷ್ಮೀನ ಕರೆಸಿಕೋಳ್ರಿ' ಅಂತ ಹೇಳಿ ಕಣ್ಣೀರ ತೆಗೆದರು. ಅಪ್ಪಗೂ ಭಾಳ ಕೆಟ್ಟನಿಸಿತು. ನೀ ಇರಾಂವ ಒಬ್ಬ ಮಗ; ಅವರ ಮನಸ್ಸಿಗೆ ತ್ರಾಸ ಮಾಡಬಾರದಪಾ ಅಂತಾ ಹೇಳಲಿಕ್ಕೆ ಬಂದೆ. ನೀನೂ ವಿಚಾರ ಮಾಡಿ ನೋಡು' ಎಂದು ಅಕ್ಕ ಮೆಟ್ಟಿಲಿಳಿದಳು.

ಚಂದ್ರಕಾಂತನ ಕಿವಿಯಲ್ಲಿ ಇನ್ನೂ ಅಕ್ಕನ ಮಾತುಗಳೇ ಸುತ್ತುತ್ತಿದ್ದವು. ನಿಲುವುಗನ್ನಡಿಯಲ್ಲಿ ತನ್ನನ್ನೇ ನೋಡಿಕೊಂಡ. ತನಗೇನಾದರೂ ಆಗಿದ್ದರೆ ? ಕುಂಟನಾಗಿದ್ದರೆ ? ಕುರೂಪಿಯಾಗಿದ್ದರೆ ? ಆ 'ರೆ' ಸಾಮ್ರಾಜ್ಯ ತುಂಬಾ ಭಯಾನಕವಾಗಿ ಕಂಡಿತವನಿಗೆ. ತಲೆ ಹಿಡಿದುಕೊಂಡು ಕುರ್ಚಿಯಲ್ಲಿ ಕುಳಿತ. ತನಗೇನು ಆಗಿದ್ದರೂ ಶಶಿ ತನ್ನ ಕೈ ಬಿಡುತ್ತಿರಲಿಲ್ಲ. ತನ್ನ ಶಶಿ ತನ್ನ ಬಗ್ಗೆ ಸಹಾನುಭೂತಿಯನ್ನೇ ತೋರಿಸುತ್ತಿದ್ದಳು. ಅವರೆ ಈಗ ತನಗೇನೂ

ಆಗಿಲ್ಲವಲ್ಲ. ಮುಖ ಮೇಲೆತ್ತಿ ನೋಡಿದ. ತನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ತಂದೆ-ತಾಯಿಗಳ ಭಾವಚಿತ್ರ ದಿಟ್ಟಿಸಿದ. ಅವರ ಮನಸ್ಸಿಗೆ ಶಾಂತಿ ತಂದು ಕೊಡಬೇಕು, ಎಂದು ನಿಶ್ಚಯಿಸಿ ಶಶಿಯ ಮೊದಲಿನ ಭಾವಚಿತ್ರದತ್ತ ನೋಡಿ "ನಿನಗಿನ್ನೂ ನನ್ನ ಮನೆಯಲ್ಲಿ ಸ್ಥಾನವಿದೆ. ಆದರೆ ನನ್ನ ಹೃದಯದಲ್ಲಿಲ್ಲ" ಎಂದು ಮನಸ್ಸಿನಲ್ಲಿಯೇ ನುಡಿದು ಅಕ್ಕನಿಗೆ ತನ್ನ ನಿರ್ಧಾರ ತಿಳಿಸಲು ಕೆಳಗಿಳಿದು ಹೋದ.

***

"ಚಂದ್ರೂ ಒಂದು ಮಾತು ಹೇಳೂದಿತ್ತು."

"ಏನಕ್ಕಾ? ಕ್ರಿಕೆಟ್ ಮ್ಯಾಚಿಗೆ ಹೊರಟೇನಿ, ಬರೂವಾಗ ಪ್ಯಾಟ್ಯಾಗಿಂದ ಏನರೇ ತರಬೇಕೇನು?"

"ನನಗೇನೂ ಬ್ಯಾಡಪಾ, ಶಶಿಗೆ ನಾಲ್ಕು ತಿಂಗಳು ಮುಗೀತ ಬಂತು. ಹಾಂಗ ಯಾವಾಗಲೂ ಮನಿಯೊಳಗ ಇರಬಾರದು. ಹೊರಗಿನ ಗಾಳಿ ಬೆಳಕಿಗೆ ಹೋದರ ಆಕೀ ಆರೋಗ್ಯಾನೂ ಸುಧಾರಿಸ್ತದ. ದಿನದಿನಕ್ಕೆ ಸೊರಗಲಿಕ್ಕೆ ಹತ್ಯಾಳ. ಸ್ವಲ್ಪ ಹೊರಗ ಕರಕೊಡು ಅಡ್ಯಾಡಿ, ಹಾಂಗs ಡಾಕ್ಟರಿಗೆ ತೋರಿಸಿಕೊಂಡು ಬಾರಲ್ಲ; ನಿನ್ನ ಮ್ಯಾಚ್ ಯಾವಾಗಲೂ ಇದ್ದs ಇರ್ತದ."

"ಹೂಂ ಇದೊಂದು ಬಾಕೀ ಅದ. ಈ ಕೆಲಸ ನನ್ನಿಂದ ಆಗೂದಿಲ್ಲಾ. ಡಾಕ್ಟರರ ಹತ್ತಿರ ಬೇಕಾದರ ನೀನರ ಅವ್ವರ ಕರಕಂಡು ಹೋಗ್ರಿ. ನನ್ನ ಜೋತೀಗೆ ಬ್ಯಾಡಾ."

ಇವರ ಮಾತು ಕೇಳುತ್ತ ನಿಂತ ಶಶಿ "ನನಗೇನೂ ಆಗಿಲ್ಲಾ. ಔಷಧ ಯಾಕ ? ಡಾಕ್ಟರರು ಯಾಕ? ಏನೂ ಬ್ಯಾಡಾ. ನಿಮಗೆ ಮ್ಯಾಚಿಗೆ ಹೊತ್ತಾಗತದ ಹೋಗ್ರಿನ್ನ" ಎಂದಳು.

ಬೂಟು ಹಾಕಿಕೊಂಡು ಹೊರಡಲು ಸಿದ್ಧನಾಗಿದ್ದ ಚಂದ್ರಕಾತ 'ಮಾಮಾ' 'ಮಾಮಾ' ಎಂದು ಓಡುತ್ತ ಬಂದ ಎದುರು ಮನೆಯ ಸರಿತಾಳನ್ನು ಎತ್ತಿಕೊಂಡು ಮುದ್ದು ಕೊಟ್ಟು ಅವಳ ಕೈಯಲ್ಲಿ ಚಾಕಲೇಟನ್ನಿಟ್ಟ.

ಅದನ್ನು ನೋಡುತ್ತಿದ್ದ ಅವನ ಅಕ್ಕ, "ಮಂದೀ ಮಕ್ಕಳ್ನ ಕಂಡರ ಎಷ್ಟ ಪ್ರೀತಿ ಮಾಡತೀ ನಾಳೆ ನಿನಗೂ ಅಂಥಾ ಹುಡುಗೀನ ಹುಟ್ಟತಾಳೇಳು" ಎಂದಳು.

'ಹೂ, ಇಷ್ಟ ಛಂದನ್ನ ಹುಡುಗಿ ನನಗ ಹುಟ್ಟತದs" ಎಂದು ತಿರಸ್ಕಾರದ ನಗೆ ನಗುತ್ತ ಹೊರಗೆ ಹೋದ.

ತನ್ನ ಕಣ್ಣೀರು ನಾದಿನಿಗೆ ಕಾಣಬಾರದೆಂದು ಶಶಿ ಮುಖ ಹೊರಳಿಸಿದಳು.

***

ಶಶಿಗೆ ರಾತ್ರಿಯೇ ಹೆರಿಗೆಯಾದ ಸುದ್ದಿ ತಿಳಿದಿತ್ತು. ನೋಡಲು ಹೋಗಬಾರದೆಂದು ನಿರ್ಧಾರ ಮಾಡಿದ್ದರೂ ಕುತೂಹಲ ಕೇಳಲಿಲ್ಲ. ಬೆಳಗಾದೊಡನೆಯೇ ಆಸ್ಪತ್ರೆಗೆ ಓಡಿಬಂದಿದ್ದ ಚಂದ್ರಕಾಂತ. ಸ್ಪೆಶಲ್ ವಾರ್ಡಿನ ಕೋಣೆಯಲ್ಲಿ ಕಾಲಿಡುವಾಗ ಅವನ ಕಾಲು ನಡುಗುತ್ತಿದ್ದವು. ಎದೆಯ ಬಡಿತ ತೀವ್ರವಾಗಿತ್ತು. ಅಂಥ ಚಳಿಯಲ್ಲಿಯೂ ಹಣೆಯ ಮೇಲೆ ಬೆವರು ಹನಿ ಮೂಡಿದ್ದವು. ತೊಟ್ಟಿಲ ಹತ್ತಿರ ಬಂದು ಸೊಳ್ಳೆ ಪರದೆ ಸರಿಸಿದಾಗ ಅವಾಕ್ಕಾಗಿ ನಿಂತುಕೊಂಡ. ಎಷ್ಟು ಸುಂದರವಾದ ಮಗು ! ತನ್ನ ಕಣ್ಣುಗಳನ್ನೇ ನಂಬಲಿಲ್ಲ. ಕಣ್ಣು ಹೊರಳಿಸಿಕೊಂಡು ಮತ್ತೆ ನೋಡಿದ; ಗಂಡು ಮಗು. ಅದನ್ನು ನೋಡಿದರೆ ಎಲ್ಲೋ ಕಂಡ ಹಾಗೆ ನೆನಪು ಬರುತಿತ್ತು. ಓ! ತನ್ನ ಕೋಣೆಯಲ್ಲಿ ಮರ್ಫಿ ರೇಡಿಯೋದ ಜಾಹೀರಾತಿನ ಕ್ಯಾಲೆಂಡರೊಂದನ್ನು ಹಾಕಿದ್ದ. ಅದರಲ್ಲಿದ್ದ ಮಗುವಿನ ಹಾಗೆಯೇ ಕಾಣುತ್ತಿದೆ ತನ್ನ ಮಗು. ಅಲ್ಲ ಅಲ್ಲ; ಇದು ಶಶಿಯ ಮಗು. ಮೊದಲು ಶಶಿ ಹೀಗೆಯೇ ಇದ್ದಳು. ಅವಳದೇ ತದ್ರೂಪು. ಬಿಳಿಯ ಹೊದಿಕೆಯ

ಆವರಣದಲ್ಲಿದ್ದ ಮಗು ಹಿಮದಲ್ಲಿ ಇಟ್ಟ ಗುಲಾಬಿ ಹೂವಿನಂತೆ ಇತ್ತು. ಸುಖವಾಗಿ ನಿದ್ರಿಸುತ್ತಿತ್ತು. ನಿದ್ರೆಯ ಜೊಂಪಿನಲ್ಲಿಯೇ ಒಂದು ಸಲ ಮುಗುಳು ನಕ್ಕಿತು. ಚಂದ್ರಕಾಂತನ ಮುಖ ಅರಳಿತು. ಬಾಗಿ ಅದರ ಹಣೆಯ ಮೇಲೆ ಹಗುರಾಗಿ ಮುತ್ತಿಟ್ಟ, ಶಶಿಯೆಡೆಗೆ ಹೊರಳಿ ನೋಡಿದ. ಸೋತು ಸೊರಗಿದ ಅವಳು ಕಣ್ಣುಮುಚ್ಚಿ ಒರಗಿದ್ದಳು. ಮಂಚದ ಬದಿಗೆ ಬಂದು ಅವಳ ತಲೆಕೂದಲನ್ನು ಮೃದುವಾಗಿ ನೇವರಿಸಿದ, ಶಶಿ ಕಣ್ಣು ತೆರೆದಳು; ಕಂಬನಿ ಜಾರತೊಡಗಿದವು.

ಆ ಕಂಬನಿಗಳಲ್ಲಿ ಚಂದ್ರಕಾಂತನಿಗೆ ತನ್ನ ಹೃದಯವೇ ಪ್ರತಿಬಿಂಬಿತವಾದಂತೆ ಕಂಡಿತು. ಎಷ್ಟು ಅಗೆದರೂ ನೀರು ಬೀಳದ ಬಾವಿಯಲ್ಲಿ ಒಮ್ಮೆಲೇ ನೂರು ಸೆಲೆಗಳು ಚಿಮ್ಮಿದವು.

***

# ದೂರದ ಗುಡ್ಡ

ಟ್ರನ್ ನ್ ನ್ ನ್ ನ್ ನ್ .... .... ....

ಅಲಾರಾಂ ಹೊಡೆಯುತ್ತಲೇ ಇತ್ತು. ಸರಸೂ ನಿಧಾನವಾಗಿ ಮುಸುಕು ಸರಿಸಿ ಅದರ ಸದ್ದು ಅಡಗಿಸಿದಳು.

ಗಂಟೆ ಐದಾಗಿತ್ತು. ಹಾಸಿಗೆ ಬಿಟ್ಟೇಳಲು ಮೈ ಒಪ್ಪಲಿಲ್ಲ. ಮಗ್ಗುಲಿಗೆ ಹೊರಳಿದಳು. ಬೆನ್ನು, ನಡ, ಕೈಕಾಲು ತುಂಬಾ ನೋವು. ಈಗ ಎರಡು ಮೂರು ದಿನಗಳಿಂದ ಊಟ ಸರಿಯಾಗಿ ಮಾಡಿರಲೇ ಇಲ್ಲ. ಬೆಳಿಗ್ಗೆ ಎದ್ದೊಡನೆಯೇ ವಾಂತಿ. ಹೊಟ್ಟೆಯಲ್ಲಿ ಆಹಾರ ಹೋದರೆ ಸರಿ, ವಾಂತಿ ಸುರುವಾಗುತ್ತಿತ್ತು. ಹೀಗೇಕಾಗುತ್ತಿದೆ ಎಂಬುದು ಅವಳಿಗೆ ಗೊತ್ತು. ಅವಳೇನು ಹೊಸಬಳೇ? ಹೀಗೆ ಆಗುತ್ತಿರುವದು ಮದುವೆಯಾದ ಮೇಲೆ ಈಗ ನಾಲ್ಕನೆಯ ಸಲ ಅಲ್ಲವೆ ? ಮೂರು ಮಕ್ಕಳ ತಾಯಿಯಾಗಿ ಈಗ ನಾಲ್ಕನೆಯ ಜೀವ ಒಡಲಲ್ಲಿ ಮೂಡುತ್ತಿದೆ. ಅದಕ್ಕೇ ಈ ನೋವು; ಈ ಸಂಕಟ ಎಲ್ಲ; ಮಗ್ಗಲು ಕೋಣೆಯಿಂದ ಮಾವನವರು ಕೆಮ್ಮುವುದು ಕೇಳಿ ಬಂದಿತು.

ಗಂಟೆ ಈಗ ಐದೂವರೆ. ಈಗ ಏಳಲೇಬೇಕು. ಕುಮಾರ, ಸುಂದರಿ ಇವರಿಬ್ಬರಿಗೂ ಮುಂಜಾನೆ ಎದ್ದು ಬೇಗನೆ ನೀರೊಲೆಗೆ ಉರಿ ಹಾಕಿ ಚಹ ಮಾಡಬೇಕು. ಒಲ್ಲದ ಮನಸ್ಸಿನಿಂದಲೇ ಎದ್ದಳು. ಬಚ್ಚಲು ಮನೆಯಲ್ಲಿ ಮುಖ ತೊಳೆಯುವಾಗ ಧಡ್.... ಧಡ್.... ಛುಕ್ .... ಛುಕ್ .... ಟ್ರೇನಿನ ಸಪ್ಪಳ ಕೇಳಿಸಿತು. ಸಮೀಪದ ನಿಲ್ದಾಣದಿಂದ. ಅದು ಒಂದು ಯಂತ್ರ. ನಿತ್ಯದ ಕೆಲಸಗಳಿಗೆ ಮನಸ್ಸಿಲ್ಲದಿದ್ದರೂ ಕೈಕಾಲು ಹೇಗೆ ಓಡಾಡುತ್ತಿವೆ- ತಾನೂ ಒಂದು ಯಂತ್ರವೇ ಎಂದುಕೊಂಡಳು ಸರಸೂ.

ಶಾಲೆಗೆ ಹೊರಟ ಕುಮಾರ ತನ್ನ ಅಂಗಿ ಹರಿದಿದೆ ಎಂದು ತಕರಾರು ತೆಗೆದ. ಕಪ್ಪು ಬಸಿ ತೊಳೆಯುವುದನ್ನು ಬಿಟ್ಟು, ಬಂದು ಅವನ ಅಂಗಿಯನ್ನು ಹೊಲಿದುಕೊಟ್ಟಳು. ಸುಂದರಿ, ತನ್ನ ಅಕ್ಕಾ ಅವರು ಸೀಸ ಪೆನ್ಸಿಲ್ ತಾ ಎಂದಿದ್ದಾರೆ ಕೊಡು ಎಂದು ಜಗಳ ತೆಗೆದಳು. ಪೆನ್ಸಿಲ್ ಮಲಗುವ ಕೋಣೆಯಲ್ಲಿ ಮೇಜಿನ ಡ್ರಾದಲ್ಲಿತ್ತು. ಅದನ್ನು ತಂದು ಸುಂದರಿಗೆ ಕೊಟ್ಟು ಅದು ಅವಳ ತಂದೆಯದೆಂದೂ ಶಾಲೆಯಲ್ಲಿ ಕಳೆಯದೇ ತಿರುಗಿ ತರಬೇಕೆಂದೂ ಎಚ್ಚರಿಕೆ ಹೇಳಿದಳು ಮಗಳಿಗೆ ಸರಸೂ.

"ಒಂದು ಇನ್‌ಲ್ಯಾಂಡ್ ಲೆಟರ್ ತಂದು ಕೊಡಿ" ಸರಸೂ ಗಂಡನಿಗೆ ಕೇಳಿದ್ದಳು.

"ಯಾಕs? ನಿಮ್ಮ ಅಣ್ಣಾಗ ಬರೀತಿಯೇನು? ನಾ ಎಲ್ಲಾ ಮೊನ್ನೆ ಮೊನ್ನೆ ಬರದೀನೇಳು"

"ಅಣ್ಣಾಗ ಅಲ್ಲ. ನನ್ನ ಗೆಳತಿ ಶೀಲಾಗ ಬರೀಬೇಕಾಗಿತ್ತು."

"ಆಗಲಿ ತರ್ತೀನಿ"

ಆಗಲಿ ಎಂದಮೇಲೆ ಎರಡು ಮೂರು ದಿನ ಕಳೆದಿದ್ದವು. ತಡೆಯಲಾರದೆ ಮತ್ತೊಮ್ಮೆ ಕೇಳಿದಳು.

"ಏನು ದೊಡ್ಡ ಅರ್ಜೆಂಟ್ ಆಫೀಸ್ ಕೆಲಸ ಇದ್ದಾಂಗ ಬೆನ್ನಹತ್ತೀಯಲ್ಲಾ. ಬರಿಯೂವಂತಿ ನಾಳೆ ತರ್ತೀನಿ."

ಮತ್ತೆ ಎರಡು ದಿನ ಕಳೆದ ಮೇಲೆ ಇನ್‌ಲ್ಯಾಂಡ ಲೆಟರ್ ಸಿಕ್ಕಿತ್ತು ಸರಸೂಗೆ. ಒಂದು ಸಣ್ಣ ಮಾತಿಗೂ ಗಂಡನನ್ನೇ ಕೇಳಬೇಕು ತಾನು. ಗೆಳತಿ ಶೀಲಾ ತಾನೇ ದುಡಿದು ಹಣ ತರುವವಳು, ಅವಳೆಷ್ಟು ಸುಖಿ ಎಂದುಕೊಂಡಳು ಸರಸೂ.

ಹೆರಿಗೆಗೆ ತವರುಮನೆಗೆ ಬಂದ ನಾದಿನಿ ಲಲಿತಾ ಅಣ್ಣ ಎದ್ದು ಚಹ ಕುಡಿದ ಮೇಲೆಯೇ ಏಳುವವಳು. ಅವಳಿಗೆ ದಿನ ತುಂಬಿತ್ತು. ಎಷ್ಟೆಂದರೂ ಇದು ಅವಳ ತವರುಮನೆ. ಅವಳು ಸರಸೂಗೆ ಮನೆಗೆಲಸಕ್ಕೆ ನೆರವಾಗುವದಿರಲಿ, ತನ್ನ ಕೆಲಸವನ್ನೂ ಇವಳಿಂದಲೇ ಮಾಡಿಸದಿದ್ದರೆ ಅದೊಂದು ಉಪಕಾರ ಮಾಡಿದಂತಾಗುತ್ತಿತ್ತು.

ಮಾವನವರು ಎದ್ದು ಬಚ್ಚಲು ಕೋಣೆಗೆ ಹೋದದ್ದು ನೋಡಿ ಸರಸೂ ಎರಡನೆಯ ಸಲ ಚಹಕ್ಕಿಟ್ಟಳು. ತಲೆ ಬಾಚಿಕೊಳ್ಳುತ್ತಿದ್ದ ನಾದಿನಿಯನ್ನು ಕರೆಯಬಾರದೆಂದು ತಾನೇ ಒಯ್ದು ಚಹ ಕೊಟ್ಟಳು. ಮಾವನವರಿಗೆ ಕೊಟ್ಟು ಬಂದು ಇನ್ನೂ ಅಡಿಗೆಯ ಮನೆ ಮುಟ್ಟಿರಲಿಲ್ಲ. "ಚಹಾ ಆರಿ ಹೋಗೇದ, ಒಂದಿಷ್ಟು ಕಾಸಿಕೊಡಬಾರವಾ" ಎಂದು ಕೂಗಿದ್ದು ಕಿವಿಗೆ ಬಿತ್ತು. ಯಾಂತ್ರಿಕವಾಗಿ ಮತ್ತೆ ಸರಸೂನ ಕಾಲುಗಳು ಕೋಣೆಯ ಕಡೆಗೆ ಚಲಿಸಿದವು. "ಚಹಾ ಆರಿಹೋಗೇದ" "ಜಳಕಕ್ಕ ನೀರು ಹವಣ ಇಲ್ಲಾ" "ನನ್ನ ಪಂಚೆ ಸ್ವಚ್ಛ ಒಗದಿಲ್ಲಾ" "ನನ್ನ ವಾಕಿಂಗ್ ಸ್ಟಿಕ್ ಹುಡುಗ್ರು ಎಲ್ಲಿಟ್ಟಾರೆ" ಮುಂತಾದವುಗಳು ಮಾವನವರ ದಿನನಿತ್ಯದ ಗೊಣಗಾಟಗಳು. ಅವುಗಳನ್ನು ಪೂರೈಸಿ ಅವರನ್ನು ಸಮಾಧಾನಪಡಿಸುವ ಹೊಣೆಯೂ ಸರಸೂಳದೆ. ಎರಡನೆಯ ಸಲ ಚಹ ಬಿಸಿ ಮಾಡಿ ಮಾವನವರಿಗೆ ಕೊಟ್ಟುಬಂದು ಒಲೆಯ ಉರಿ ಸರಿ ಮಾಡುವದರಲ್ಲಿಯೇ ಲಲಿತೆ ನಡುಮನೆಯಲ್ಲಿಯೇ ಕೂಗಿದಳು: "ಅತ್ತಿಗೀ ನನಗೊಂದು ಕಪ್ಪು ಚಹಾ ಇದ್ದರ ಕೊಡ್ರಿ; ಆಗಳೆ ಯಾಕೋ ಕುಡಿದಾಂಗs ಆಗಲಿಲ್ಲ." ತನಗಾಗಿ ಎಂದು ಹೆಚ್ಚಿಗೆ ಚಹ ಮಾಡಿಕೊಂಡದ್ದನ್ನು ನಾದಿನಿಗೆ ಕೊಟ್ಟಳು. ಇನ್ನು ಮತ್ತೆ ತನಗೆಂದು ಚಹಕ್ಕಿಡಲು ವೇಳೆಯಿಲ್ಲ. ಗಂಡನಿಗೆ ಊಟಕ್ಕೆ ಹೊತ್ತಾಗುವದು, ಸರಿ. ಮನಸ್ಸಿಗೆ ಬೇಸರವಾಯಿತು.

ಹೊರಗಿನಿಂದ ಯಾರೋ ಕೂಗಿದ ಹಾಗಾಯಿತು. "ಸುಂದರೀ" ಎಂದು. "ಯಾರವರು? ಸುಂದರಿ ಇಲ್ಲಾ ಸಾಲಿಗೆ ಹೋದ್ಲು" ಎಂದಳು ಅಡಿಗೆಯ ಮನೆಯಿಂದಲೇ.

"ನಾನ್ರೀ ಶೀಲಾ, ಸಾಲೀಗೆ ಕರೀಲಿಕ್ಕೆ ಬಂದಿದ್ದೆ ಸುಂದರೀನ. ಹೋಗ್ತೀನಿ."

ಶೀಲಾ ಎನ್ನುವ ಹೆಸರಿನ ಹಿಂದೆಯೇ ತನ್ನ ಗೆಳತಿ ಶೀಲಾನ ನೆನಪಾಯಿತು. ಸರಸೂಗೆ. ಶೀಲಾಗೆ ಇಂಥಾ ಜೊಂಜಾಟ ಇಲ್ಲಾ. ಆರಾಮ ಆಫೀಸಿಗೆ ಹೋಗಿ ದುಡದ ಬರತಾಳ, ಚೈನಿಯಿಂದ ಇದ್ದಾಳ ನೋಡು ಎಂದುಕೊಂಡಳು ಸರಸೂ.

ಗಂಡ ಆಫೀಸಿಗೆ ಹೊರಡಲು ಬೂಟು ಕಟ್ಟಿ ಹೊಸ್ತಿಲು ದಾಟಿದಾಗ 'ಪೋಸ್ಟ' ಎನ್ನುವ ಶಬ್ದ ಕಿವಿಗೆ ಬಿತ್ತು ಸರಸೂಗೆ. ಪತ್ರವನ್ನು ಓದಿದ ಗಂಡ ಒಳಗೆ ಬಂದು "ರಾಜೂ-ರಾಜೇಶ್ವರಿ, - ಸರಸೂಗೆ ಅವಳ ಗಂಡ ಮದುವೆಯಲ್ಲಿ ಇಟ್ಟ ಹೆಸರು -ನಿನ್ನ ಅಣ್ಣನ ಲಗ್ನ ಇದೇ ೨೩ಕ್ಕೆ ಗೊತ್ತು ಮಾಡಿದ್ದಾರಂತ. ಬರಲಿಕ್ಕೇ ಬೇಕು ಅಂತ ಭಾಳ ಆಗ್ರಹ ಮಾಡಿ ಪತ್ರಾ ಬರದಾನ, ನಿನ್ನ ನಾಲ್ಕೆಂಟು ದಿನ ಮೊದಲs ಕಳಿಸಬೇಕಂತ" ತೌರಿನಿಂದ ಹರ್ಷದ ಸುದ್ದಿ ಕೇಳಿ ಸರಸೂನ ಮುಖ ಅರಳಿತು. ಗಂಡನ ಮಾತು ಮುಂದುವರಿಯಿತು. "ಆದರ ಲಲಿತಾ ಹೆರಿಗೆಗೆ ಬಂದಾಳ. ಅವಳಿಗೆ ದಿನಾ ತುಂಬ್ಯಾವ. ನಿನ್ನ ಬಿಟ್ಟರ ಈ ಮನಿಯೊಳಗ ಹೆಂಗಸರ್‍ಯಾರೂ ಇಲ್ಲಾ ಅನ್ನೂದು ಅವರಿಗೆ ಗೊತ್ತs ಅದ. ಅದಕ್ಕ ಈಗ ನಿನ್ನ ಕಳಸೂದು ಆಗೂದಿಲ್ಲಾ,. ರಜಾ ತೊಗೊಂಡು ಮದಿವೀ ದಿನಾ ನಾನs ಬರತೀನಿ ಅಂತ ಅವರಿಗೆ ಬರೀತೇನಿ; ಹೌದೋ ಅಲ್ಲೋ?" ಸರಸೂನ ಅರಳಿದ ಮುಖ ಮತ್ತೆ ಬಾಡಿತು. ಪರಿಸ್ಥಿತಿಯ ಅರಿವಾಗಿ "ಹೂಂ ಹಂಗs ಬರೀರಿ" ಎಂದಳು. ಹಾಗೆ ಅನ್ನದೇ ಬೇರೆ ದಾರಿಯೇ ಇರಲಿಲ್ಲ.

"ಲಲಿತಾ ಹಡೆದು ಗಂಡನ ಮನಿಗೆ ಹೋದಮ್ಯಾಲೆ ನೀನೂ ಸ್ವಲ್ಪ ದಿವಸ ತವರುಮನಿಗೆ ಹೋಗಿ ಇದ್ದ ಬರುವಂತೆ" ಅನ್ನುತ್ತ ಗಂಡ ಹೊರಟು ಹೋದ.

ಮುಂದಿನ ಮಾತು ಮುಂದೆ. ಈಗ ಅಣ್ಣನ ಲಗ್ನದಲ್ಲಿ ಓಡಾಡುವ ಸಡಗರ, ಸಂಭ್ರಮ ಆಮೇಲೆ ಸಿಕ್ಕೀತೆ? ಎಲ್ಲಾ ಬಳಗದವರೂ ಕೂಡಿರುತ್ತಾರೆ. ಮಾತು, ಹರಟೆ, ಚೇಷ್ಟೆ, ನಗೆ ಎಲ್ಲವೂ ಆಮೇಲೆ ಮತ್ತೆ ಬರುವವೆ ? ಎಂದು ಚಿಂತಿಸುತ್ತ ನಿಂತ ಸರಸೂನನ್ನು ಗಂಟೆಯ ಸದ್ದು ಎಚ್ಚರಿಸಿತು. ದೇವರ ಗಂಟೆ ಸಪ್ಪಳ ಕೇಳಿ ಮಾವನವರ ಪೂಜೆ ಮುಕ್ತಾಯವಾಯಿತೆಂದು ಅವರ ಊಟದ ಸಿದ್ಧತೆಗೆ ಅಡಿಗೆಯ ಮನೆಗೆ ನಡೆದಳು ಸರಸೂ.

ಮಾವನವರಿಗೂ, ಲಲಿತೆಗೂ ಊಟಕ್ಕೆ ನೀಡುವದರಲ್ಲಿಯೇ ಶಾಲೆಯಿಂದ ಬಂದ ಕುಮಾರ, ಸುಂದರಿಯರಿಗೂ ಉಣಬಡಿಸಿ ತಾನೂ ಊಟ ಮಾಡಿದಳು. ಮೇಲಿನ ಕೆಲಸಗಳನ್ನೆಲ್ಲ ತೀರಿಸಿ ಬಂದು ಕೋಣೆಯಲ್ಲಿ ಅಡ್ಡಾದಳು.

***

"ಯಾಕ ಲಲಿತಾ ಮಾರಿ ಸಣ್ಣ ಮಾಡೀದಿ. ಹೊಟ್ಟೆ ನೋಯ್ತದೇನು?" ಎಂದು ನೆರೆಮನೆಯ ಶ್ಯಾಮಲಾ ಬಾವಿ ಕಟ್ಟೆಯ ಮೇಲೆ ನಿಂತಿದ್ದ ಲಲಿತೆಯನ್ನು ಕಂಡು.

"ಇಲ್ರಿ ಯಾಕೂ ಇಲ್ಲಾ"

"ಮತ್ತ ಕಣ್ಣಾಗ ನೀರ್ಯಾಕ ಬಂದಾವ? ಹೊಟ್ಟೆ ನೋಯ್ತಿದ್ದರ ಹೇಳು; ಲಗೂನ ದವಾಖಾನಿಗೆ ಹೋಗೂವಂತೆ."

"ಇಲ್ರೀs. ಯಾಕೋ ಅವ್ವನ ನೆನಪಾಯಿತು, ಅಳು ಬಂತು. ಮೊದಲ್ನೇ ಬಾಣಂತಿತನಾ ಅವ್ವ ಇರಬೇಕಾಗಿತ್ತು ಅನ್ನಿಸ್ತು. ನನಗೇನೇನೂ ಧೈರ್ಯ ಇಲ್ಲಾ. ಅತ್ತಿಗೀಗೆ ಮನಿ ಕೆಲಸ ಮಕ್ಕಳ್ನ ನಿಭಾಯಿಸೋದs ರಗಡಾಗ್ತದs. ಇನ್ನ ನನ್ನ ಬಾಣಂತಿತನಾ ಹ್ಯಾಂಗ ಮಾಡ್ತಾರೋ ಅಂತ."

"ಹೌದವ್ವಾ ಚೊಚ್ಚಲ ಬಾಣಂತಿತನಾ, ಛೊಲೋ ಆಗಬೇಕು. ಅಂದರ ಹೆಣ್ಣುಮಕ್ಕಳ ಆರೋಗ್ಯ ಮುಂದ ನೆಟ್ಟಗಿರ್‍ತದ. ಇಲ್ಲಾ ಅಂದರ ಏನಕೇನರ ರೋಗ ಸೇರಿಕೊಂಡು ಕೂಡ್ತಾವ. ಸರಸಾನೂ ಹಡದಾಕಿ, ಮಾಡಿದಾಕಿ ಇದ್ದಾಳ. ಹಾಗೇನೂ ತ್ರಾಸ ಆಗಲಿಕ್ಕಿಲ್ಲಾ. ಆದರ ಯಾರ ಮಾಡಿದರೂ ತಾಯಿ ಮಾಡಿದ್ಹಾಂಗ ಆಗೂದಿಲ್ಲಾ. ಅವರೂ ಇರಬೇಕಾಗಿತ್ತು. ಆದರ ಏನ ಮಾಡೂದದ? ಮುತ್ತೈದಿ ಸಾವು ಬಂತು ಅವರಿಗೆ; ಏನಂದ್ರೂ ಅವರs ಪುಣ್ಯವಂತರು. ಬಾ ಒಳಗs ಕೂಡೋಣ"ಎಂದು ಶ್ಯಾಮಲಾಬಾಯಿ ಲಲಿತೆಯನ್ನು ಮನೆಯೊಳಗೆ ಕರೆದೊಯ್ದಳು.

ಕೋಣೆಯಲ್ಲಿ ಅಡ್ಡಾಗಿದ್ದ ಸರಸೂಗೆ ಇವರಿಬ್ಬರ ಮಾತು ಕೇಳಿಸಿತ್ತು. ಅವಳ ಮನಸ್ಸಿಗೆ ಕಳವಳವೂ ಆಯಿತು. ನಾದಿನಿಯ ಹೆರಿಗೆಗೆಂದೇ ತಾನು ತವರುಮನೆಗೆ, ಅದು ತನ್ನ ಅಣ್ಣನ ಮದುವೆಗೂ ಹೋಗುವುದನ್ನು ಬಿಟ್ಟಿದ್ದಾಳೆ. ತನ್ನ ಅನಾರೋಗ್ಯವನ್ನೂ ಲೆಕ್ಕಿಸದೇ ಮನೆಯ ಕೆಲಸಗಳೆಲ್ಲವನ್ನೂ ಮಾಡುತ್ತಿದ್ದಾಳೆ. ತನಗೂ ತನ್ನ ಮಕ್ಕಳಿಗೂ ಕಡಿಮೆ ಮಾಡಿಕೊಂಡಾದರೂ ಚೊಚ್ಚಿಲು ಗರ್ಭಿಣಿಯಾದ ನಾದಿನಿಗೆ ಊಟ ತಿಂಡಿಯ ಉಪಚಾರ ಮಾಡುತ್ತಾಳೆ. ತನ್ನ ತ್ಯಾಗ, ಪ್ರೀತಿ ಯಾವದರದೂ ಲೆಕ್ಕವೇ ಇಲ್ಲ, ಈ ಲಲಿತಾ - ಶ್ಯಾಮಲಾಬಾಯಿ ಅವರಿಗೆ. ಒಂದು ಮನೆಯ ಗೃಹಿಣಿಯಾಗಿ ಬಂದ ಮೇಲೆ ಮುಗಿಯಿತು. ಹೆಣ್ಣು ತನ್ನ ಆಸೆ, ಸಂತೋಷ ಎಲ್ಲವನ್ನೂ ಒತ್ತಟ್ಟಿಗೆ ಕಟ್ಟಿಡಬೇಕಾಗುವುದು. ಪರರ ಸುಖ- ಸಂತೋಷಗಳಲ್ಲಿಯೇ ತಾನು ಆನಂದವನ್ನು ಅನುಭವಿಸಬೇಕು. ಅದಕ್ಕೇ ಮದುವೆಯಲ್ಲಿ ಹೆಂಡತಿಗೆ ಗಂಡನು ತಾಳಿ ಕಟ್ಟುತ್ತಿರಬೇಕು. ಅವಳು ಎಷ್ಟು ತಾಳಿಕೊಂಡರೂ ಕಡಿಮೆಯೇ....

ಹೀಗೇ ಯೋಚಿಸುತ್ತ ಮಲಗಿದ್ದ ಸರಸೂನ ತಾಳ್ಮೆಯ ಒಡ್ಡು ಒಡೆಯಿತು. ಕಣ್ಣೀರು ಹೊಸ ನೀರಿನ ಪ್ರವಾಹದಂತೆ ಹರಿಯಿತು. ಆಗ ತಾನೇ ಮಾತು ಕಲಿಯುತ್ತಿದ್ದ ಲತಾ 'ಪ್ಪಾಪ್ಪಾ ಪ್ಪಾ ಪ್ಪಾ' ಎನ್ನುತ್ತ ಬಂದು

ತಾಯಿಯ ಕುತ್ತಿಗೆಯನ್ನಪ್ಪಿದಳು. ಕಣ್ಣೀರಿನ ಪ್ರವಾಹಕ್ಕೆ ಹೊಸತೊಂದು ಒಡ್ಡು ಹಾಕಿದಳು ಸರಸೂ. ಕರೆಯದೆಯೇ ನಗೆಯೂ ಬಂದಿತು. ಹಿಂದಿನಿಂದ, ಲತಾನನ್ನು ಮಗ್ಗುಲಲ್ಲಿ ಮಲಗಿಸಿಕೊಂಡಳು. ಕಣ್ಣಿಗೆ ಜೊಂಪೂ ಬಂದಿತು.

***

"ಅವ್ವಾ, ಅವ್ವಾ, ಪತ್ರ ಬಂದsದ" ಓಡುತ್ತ ಬಂದ ಕುಮಾರ ಅವಳ ಕೈಯಲ್ಲಿ ಪಾಕೀಟು ಕೊಟ್ಟ. "ಅವ್ವಾ ಅದರ ಮ್ಯಾಲೆ ಶ್ರೀಮತಿ ಸರಸ್ವತಿ ಅಂತ ಬರದಾರ. ನಿನಗ ಯಾರೋ ಪತ್ರಾ ಬರದಾರ. ನನಗ ಓದಲಿಕ್ಕೆ ಬರತsದ ನೋಡು ಇಗ್ಲೀಷು" ಎಂದು ತನ್ನ ಜಾಣತನವನ್ನು ಪ್ರದರ್ಶಿಸಿದ. ಶೀಲಾನ ಪತ್ರವೆಂದು ಅಕ್ಷರಗಳಿಂದಲೇ ತಿಳಿದುಕೊಂಡಿದ್ದ ಸರಸೂ ಉತ್ಸಾಹದಿಂದಲೇ ಪಾಕೀಟು ತೆರೆದಳು:

ಪ್ರಿಯ ಸರಸೂ,

ನಿನ್ನ ಕಾಗದವು ಶುಭಾಶಯಗಳೊಂದಿಗೆ ಬಂದು ಮುಟ್ಟಿತು. ಅದನ್ನೋದಿದ ಮೇಲೆಯೇ ನನಗೆ ನನ್ನ ಹುಟ್ಟುಹಬ್ಬ ಈ ತಿಂಗಳು ಆಯಿತೆಂಬುದು ಜ್ಞಾಪಕಕ್ಕೆ ಬಂದಿತು. ನಿನಗೆ ಆಶ್ಚರ್ಯವಾಯಿತೆ? ಪ್ರೀತಿಯ ಬಂಧುಗಳಿಲ್ಲದ, ಒಲಿದ ಗಂಡನಿಲ್ಲದ, ನೌಕರಿ ಹಿಡಿದು ಯಾಂತ್ರಿಕ ಜೀವನ ಸಾಗಿಸುತ್ತಿರುವ ಈ ನಿನ್ನ ಗೆಳತಿ ತನ್ನ ಹುಟ್ಟುಹಬ್ಬದ ಜ್ಞಾಪಕವಿಲ್ಲದಿರುವುದು ಅಚ್ಚರಿಯ ಸಂಗತಿ ಎಂದು ನನಗೇನೂ ಅನ್ನಿಸುವುದಿಲ್ಲ.

ಸರೂ, ನಿನ್ನ ಪತ್ರ ನನಗೆ ೨೭ ವರ್ಷ ತುಂಬಿತೆಂದು ನೆನಪು ಕೊಟ್ಟಿತು. ಇದರಿಂದ ನನಗೆ ಸಂತೋಷವಾಗಬೇಕೋ, ದುಃಖವಾಗಬೇಕೋ ಒಂದೂ ತಿಳಿಯದಾಗಿದೆ ನನಗೆ. ಎರಡನ್ನೂ ಮೀರಿ ನಿಂತ ತತ್ವಜ್ಞಾನಿಯಾಗಿದ್ದೇನೆಂದು ತಿಳಿದುಕೋ ಬೇಕಾದರೆ. ಯಾಕೆಂದರೆ ಜೀವನದಲ್ಲಿ ನಿರಾಶೆ ಹೊಂದಿದವರು ತತ್ತ್ವಜ್ಞಾನಿಗಳಾಗುತ್ತಾರೆಂದು ಹಿಂದೆಲ್ಲೋ ಓದಿದ ನೆನಪು. ಆದರೆ ಈಗ ಮಾತ್ರ ನನ್ನ ಮನಸ್ಸಿನಲ್ಲೇನೋ ಆಗುತ್ತಿದೆ. ಏನು ಎಂದು ಹೇಳಲು ಬಾರದು ನನಗೆ. ಒಂದು ರೀತಿಯ ತಳಮಳ, ಕಳವಳ ಯಾವದೂ ತಿಳಿಯದು. ನಿನಗೆ ಏನಾದರೂ ಬರೆಯಬೇಕೆನ್ನಿಸುತ್ತಿದೆ. ನನ್ನ ದಿನಚರಿಯನ್ನೇ ಬರೆಯಲೆ ?

ದಿನವೂ ಕಚೇರಿಗೆ ಹೋಗಿ ನನಗೆ ಕೊಂಚವೂ ಸಂಬಂಧವಿಲ್ಲದ ಕರಡು ಕಾಗದಗಳನ್ನು ಗೀಚಿ, ಸಂಜೆ ಮನೆಗಷ್ಟು ಹೊತ್ತು ತಂದು ನಿದ್ದೆ ಬರುವವರೆಗೂ ಅವುಗಳನ್ನೆಲ್ಲ ಬರೆದು ತುಂಬಿಸಬೇಕು. ಮರುದಿನ ಮುಂಜಾನೆ ತಲೆನೋವು ಕಟ್ಟಿಕೊಂಡೇ ಎದ್ದು, ಮುಖ ತೊಳೆದುಕೊಂಡು ಅತ್ತಿಗೆ ಹಾಕಿದ ಚಹ ಗುಟುಕರಿಸಿ, ತಲೆ ಬಾಚಿ, ಮನೆಗೆ ತರುಬರುವ ಸಾಮಾನುಗಳನ್ನು ತಿಳಿದುಕೊಂಡು ಅಣ್ಣನ ಮಗಳು ಚಿನ್ನಾಳೊಡನೆ ಆಟವಾಡಿ, ರವಿಗೆ ಮನೆಯ ಅಭ್ಯಾಸ ಹೇಳಿಕೊಟ್ಟು, ಅಡಿಗೆಯ ಕೆಲಸದಲ್ಲಿ ಸಹಾಯ ಮಾಡಿ, ಸ್ನಾನ ಮಾಡಿ ಊಟ ತೀರಿಸುವದರೊಳಗೆ ಹತ್ತು ಗಂಟೆಯಾಗುತ್ತದೆ. ಅವಸರದಿಂದ ಊಟ ಮಾಡಿ ಓಡಬೇಕು- ದೂರದ ಕಚೇರಿಗೆ. ಬಸ್ಸಿಗೇಕೆ ಹೋಗಬಾರದು; ಅವಳು ಬಲು ಜಿಪುಣೆ ಎಂದುಕೊಳ್ಳಬೇಡ! ನಾನು ದುಡಿದ ಹಣ ಮನೆಯಲ್ಲಿಯ ನಾಲ್ಕು ಜನರ ಹೊಟ್ಟೆ- ಬಟ್ಟೆ. ಹಾಲು, ಬಾಡಿಗೆ, ಡಾಕ್ಟರರ ಬಿಲ್ಲು ಎಲ್ಲಕ್ಕೂ ಖರ್ಚಾಗಿ ಅನುವು-ಆಪತ್ತಿಗೆ ಇರಲೆಂದು ತಿಂಗಳಿಗೊಮ್ಮೆ ಬ್ಯಾಂಕಿನ ಲೆಕ್ಕಕ್ಕೆ ಐದೋ ಹತ್ತೋ ಸೇರಿಸಬೇಕಾದರೆ ಆಕಾಶ -ಪಾತಾಳ ಒಂದೇ ಆಗುತ್ತದೆ.

ನೀನೂ ಒಂದು ಮನೆಯ ಯಜಮಾನಿಯಾಗಿದ್ದೀ. ನಿನಗೂ ಗೊತ್ತಿದೆಯಲ್ಲ. ಈ ಕಾಲದ ಪೇಟೆಯ ಧಾರಣೆ. ಹೊರಗೆ ಹೋಗುವಾಗ ಉಡಲು ಚಿತ್ರ - ಚಿತ್ತಾರದ ಪತ್ತಲಗಳನ್ನು ನಾನು ಮೇಲಿಂದ ಮೇಲೆ ಕೊಂಡುಕೊಳ್ಳುವುದೇ ಇಲ್ಲ. ಹೆಂಗಸರ ಫ್ಯಾಷನ್ನಿನ ಇತರ ಸಾಮಾನುಗಳಂತೂ ದೂರವೇ ಉಳಿಯಿತು. ಇಂಥ ಟೈನಿ ಸಾಮಾನುಗಳಿಗೆ ಖರ್ಚು ಮಾಡಲು ನನಗೆ ಮನಸ್ಸೂ ಇಲ್ಲ. ನನ್ನಲ್ಲಿ ಹಣವೂ ಇರುವುದಿಲ್ಲ. ಆದರೂ ನನ್ನ ಟೈಪಿಸ್ಟ ಗೆಳತಿಯರೆಲ್ಲ ನಗುತ್ತಾರೆ. "ಶೀಲಾ ಬ್ಯಾಂಕಿನ ಲೆಕ್ಕ ಏರಿಸ್ತಿದಾರ್ರೀ" ಎಂದು. ಮನೆಯಲ್ಲಿ ಅತ್ತಿಗೆಯೂ

ಆಗಾಗ ಅನ್ನುತ್ತಿರುತ್ತಾಳಂತೆ. ನೆರೆಯವರ ಮುಂದೆ "ತಾನೇ ದುಡಿದು ಪಗಾರ ತರೂವಾಕಿ. ಚೈನಿಗೆ, ಸಿನೇಮಾಕ, ಹೊಟೆಲಿಗೆ ಹೊರಗ ಎಷ್ಟುರ ಖರ್ಚು ಮಾಡತಾಳೋ ಏನೋ. ಯಾವಾಗ ಕೇಳಿದರೂ ಕೈಯಾಗ ರೊಕ್ಕs ಇಲ್ಲ ಅಂತಾಳ" ಎಂದು. ಇಂಥ ಮಾತು ಕಿವಿಗೆ ಬಿದ್ದಾಗ ಮೊದಲು ಅಳುತ್ತಿದ್ದೆ ಸರೂ. ದುಡಿಯುವ ಅಣ್ಣ ತೀರಿಹೋದಾಗಲೇ ಸಂಸಾರದ ನೊಗ ಹೊತ್ತೆ. ಅಂತಃಕರಣದ ಮಾತುಗಳನ್ನಾಡಿ ಮನಸ್ಸಿಗೆ ಸಮಾಧಾನ ಕೊಡುವ ತಾಯಿಯೂ ಹೋದಮೇಲೆ ಇನ್ನು ಅಳಬಾರದೆಂದು ಮನಸ್ಸು ಕಲ್ಲು ಮಾಡಿಕೊಂಡೆ.

ಆದರೆ ಸರಸೂ. ನೀನು ಶಿಲಾವಿಗ್ರಹವಲ್ಲ. ನೀನು ಹೆಣ್ಣು ಎಂದು ಹೆಜ್ಜೆಹೆಜ್ಜೆಗೂ ಎಚ್ಚರಿಸುತ್ತಲಿದೆ ಈ ಸುತ್ತಲಿನ ಸಮಾಜ. ಪರಪುರುಷರೊಡನೆ ಎಷ್ಟು ಒಳ್ಳೆಯ ಭಾವನೆಯಿಂದ ನಡೆದುಕೊಂಡರೂ ಮನ ನೋಯುವ ಪ್ರಸಂಗಗಳು ಮೇಲಿಂದ ಮೇಲೆ ನಡೆಯುತ್ತವೆ. ಮೊನ್ನೆ 'ವಹನೀಚ್ಯಾ ಬಾಂಗಡ್ಯಾ' ಸಿನೇಮಾ ಚೆನ್ನಾಗಿದೆ ಎಂದು ಎಲ್ಲರ ಬಾಯಲ್ಲಿ ಕೇಳಿ ಅದನ್ನು ನೋಡಲು ಹೋದೆ. ನನ್ನ ಗೆಳತಿಯರೆಲ್ಲ ಮೊದಲೇ ನೋಡಿದ್ದರಿಂದ ನಾನೊಬ್ಬಳೇ ಹೋಗಬೇಕಾಯಿತು. ಟಿಕೆಟ್ ಆಫೀಸಿನ ಹತ್ತಿರ ಹೆಂಡತಿಯೊಡನೆ ಕಾರಕೂನ ಜೋಶಿ ಭೆಟ್ಟಿಯಾದರು. ಹೆಣ್ಣುಮಕ್ಕಳ ಟಿಕೆಟ್ ಆಫೀಸಿನೆದುರು ದೊಡ್ಡ 'ಕ್ಯೂ' ಇದ್ದದ್ದರಿಂದ ನನಗೊಂದು ಟಿಕೆಟ್ ತೆಗೆಯಿಸಬೇಕೆಂದು ಜೋಶಿಗೆ ಹೇಳಿ ರೊಕ್ಕ ಮುಂದೆ ಚಾಚಿದೆ. ಹಿಂದೆ ಒಮ್ಮೆ ಕೆಲಸದಲ್ಲಿ ನನ್ನಿಂದ ಅವನಿಗೆ ಸಹಾಯವಾಗಿದ್ದ ನೆನಪಾಗಿಯೋ ಏನೋ ಅವನು ನೀವಿಬ್ಬರೂ ಅಟ್ಟದ ಮ್ಯಾಲೆ ನಡೀರಿ, ನಾ ತಿಕೀಟು ತೆಗೆಸಿಕೊಡು ಬರತೀನಿ" ಎಂದು ರೊಕ್ಕ ತೆಗೆದುಕೊಳ್ಳದೆಯೇ ಹೋಗಿಬಿಟ್ಟ.

ಅವನ ಹೆಂಡತಿಯ ಪರಿಚಯ ಮಾಡಿಕೊಳ್ಳಬೇಕೆಂದು ನಾನು ಮಕ್ಕಳೆಷ್ಟು, ಮನೆ ಎಲ್ಲಿ, ಎಂದೆಲ್ಲಾ ವಿಚಾರಿಸಿದೆ. ನನ್ನ ಪ್ರಶ್ನೆಗೆ ಉತ್ತರ ಕೊಟ್ಟಳೇ ಹೊರತು ಮರುಪ್ರಶ್ನೆ ಮಾಡಿ ನನ್ನ ಪರಿಚಯ ಮಾಡಿಕೊಳ್ಳುವ ಮನಸ್ಸು ಅವಳಿಗಿಲ್ಲವೇ ಇಲ್ಲವೆಂಬುದನ್ನು ತೋರಿಸಿಕೊಟ್ಟಳು. ಸಿನೇಮಾ ಸುರುವಾದ ಮೇಲೆಯೂ ನಮ್ಮಿಬ್ಬರ ನಡುವೆಯೇ ಕುಳಿತರೂ ಮುಖ ಅತ್ತ ತಿರುಗಿಸಿ ಗಂಡನೊಡನೆಯೇ ಮಾತನಾಡುತ್ತಿದ್ದಳೇ ಹೊರತು ನನ್ನೊಡನೆ ಒಂದು ಮಾತು ಆಡಲಿಲ್ಲ. ಅವಳೊಡನೆ ಮಾತನಾಡಲು ನಾನು ತಕ್ಕವಳಲ್ಲ ಎಂದುಕೊಂಡಳೊ ಏನೋ. ನನಗಂತೂ ಬಹಳ ಕೆಡುಕೆನಿಸಿತು.

ಸಿನೇಮಾನೂ ದುಃಖಪೂರ್ಣವಾಗಿಯೇ ಇದ್ದುದರಿಂದ ಚೆನ್ನಾಗಿ ಅತ್ತುಬಿಟ್ಟೆ. ಹೊರಗೆ ಬರುವಾಗ ಕಣ್ಣು ಕೆಂಪಾಗಿದ್ದವು. ಜೋಶಿ ನಗುತ್ತಾ "ಏನ್ರೀ, ನೀವು ಬಹಳ ಭಾವನಾ ಪ್ರಧಾನ ಕಾಣಿಸ್ತೀರಲ್ರಿ" ಎಂದ. "ಪರಿಸ್ಥಿತಿ ಅಳೂ ಹಾಂಗs ಇತ್ತ ಬಿಡ್ರಿ" ಎಂದೆ. ಮನೆಗೆ ಬೀಳ್ಕೊಡುವಾಗಲೂ ಅವಳೂ ನನ್ನೊಡನೆ ಏನೂ ಮಾತನಾಡಲೇ ಇಲ್ಲ. ಜೋಶಿಗೆ ಇದು ಹೊಳೆಯಿತೋ ಏನೋ ಮರುದಿನ ಕಚೇರಿಯಲ್ಲಿ ಆ ಮಾತು ಈ ಮಾತು ಆಡುತ್ತ ತನ್ನ ಹೆಂಡತಿಯ ನಡವಳಿಕೆಯ ಬಗ್ಗೆ ಕೆಡುಕೆನಿಸಿಕೊಂಡ. "ಹೋಗಲಿ ಬಿಡ್ರಿ" ಎಂದು ನಗೆಯಲ್ಲಿ ಅವನಿಗೆ ಉತ್ತರ ಹೇಳಿದೆ. ಆದರೆ ಹಿಂದಿನ ರಾತ್ರಿ ಬಹಳ ಅತ್ತಿದ್ದರಿಂದ ಕಣ್ಣೀರಿನ ಕಲೆಗಳಿದ್ದ ದಿಂಬಿನ ಚೀಲವನ್ನು ಮರುದಿನ ಸಾಬೂನು ಹಚ್ಚಿ ಒಗೆಯಬೇಕಾಯಿತು.

ಒಂದೊಂದು ಸಲ ನನಗೆ ಮದುವೆಯಾಗಿ ತಾಯಿಯಾಗಿ, ಒಂದು ಮನೆಯ ಗೃಹಿಣಿಯಾಗಿ ಸುಖವಾಗಿ ಬಾಳಬೇಕೆಂದು ಆಸೆಯಾಗುತ್ತದೆ. ಆದರೆ ಅಷ್ಟೊಂದು ರೂಪವತಿಯಲ್ಲದ, ವರದಕ್ಷಿಣೆ ಕೊಡಲು ಸಾಮರ್ಥ್ಯವಿಲ್ಲದ ನನ್ನನ್ನು ಮದುವೆಯಾಗಲು ಮುಂದೆ ಬರುವವರಾದರೂ ಯಾರು ? ಮದುವೆ ಮಾರ್ಕೆಟ್ಟಿನಲ್ಲಿ ವಯಸ್ಸಾಗುವ ಮೊದಲು ಖರ್ಚಾದವರೇ ಸುದೈವಿಗಳೆನ್ನಬೇಕು. ನನಗೋ ಮೂವತ್ತು ವರ್ಷ ಸಮೀಪಿಸಿತು. ಮದುವೆಯ ಆಶೆಯನ್ನಷ್ಟೇ ಅಲ್ಲ, ನನ್ನ ಅಣ್ಣನ ಮಕ್ಕಳಿಂದಾಗಿ ಮದುವೆಯ ಯೋಚನೆಯನ್ನೇ ಬಿಡಬೇಕಾದ ಪ್ರಸಂಗ ನನಗೆ ಬಂದಿದೆ. ಅಂದ ಮೇಲೆ ನಾನೊಂದು ಯಂತ್ರವಾಗಿರುವುದು ಸಹಜ ಅಲ್ಲವೇ?

ಸರಸೂ, ನಿನ್ನನ್ನು ಒಂದು ಪ್ರಶ್ನೆ ಕೇಳುವೆ. ಸರಿಯಾಗಿ ವಿಚಾರಿಸಿ ಉತ್ತರ ಹೇಳು. ಮದುವೆಯಾಗದೇ ಕನ್ಯೆಯಾಗಿರುವವಳಿಗೆ ಅರಿಶಿಣ-ಕುಂಕುಮ, ಹೂ-ವೀಳ್ಯ ಮೊದಲಾದ ಸೌಭಾಗ್ಯ ಸೂಚಕ ವಸ್ತುಗಳನ್ನು ಕೊಡಲು ಬರುವುದಿಲ್ಲವೇ? ಗಂಡನಿಲ್ಲದ ಮಾತ್ರಕ್ಕೆ ಅವಳು ಈ ವಸ್ತುಗಳನ್ನು ಸ್ವೀಕರಿಸಲು ಅನರ್ಹಳೇ? ಹೀಗೆ ಕೇಳಲು ಕಾರಣವೂ ಒಂದಿದೆ. ನಮ್ಮ ಆಫೀಸರರ ಹೆಂಡತಿ ಪ್ರತಿ ವರ್ಷವೂ ಗೌರಿ ಕೂಡ್ರಿಸುತ್ತಾರೆ. ಹೂ ವೀಳ್ಯಕ್ಕೆ ಎಲ್ಲ ಕಾರಕೂನರ ಮನೆಯವರನ್ನು ಕರೆದಿರುತ್ತಾರೆ. ಆದರೆ ನನಗೆ ಆಮಂತ್ರಣವಿಲ್ಲ. ಅವರ ದೃಷ್ಟಿಯಲ್ಲಿ ನಾನು ಸುಮಂಗಲೆ ಅಲ್ಲವೆಂದು ಕಾಣುತ್ತದೆ; ಅಲ್ಲವೇ ? ಸರಸೂ ಇದನ್ನೆಲ್ಲಾ ಯೋಚಿಸದೆ ಬೇಗನೆ ಮದುವೆಯಾಗಿ, ತಾಯಿಯಾಗಿ, ಗೃಹಿಣಿಯಾಗಿ ನೀನೇ ಸುಖಿ. ಸಾಕಿನ್ನು ಈ ರಗಳೆ ಓದಿದ ಮೇಲೆ ನೀನೇನು ಅಂದುಕೊಳ್ಳುವಿಯೋ.

ನಿನ್ನ ಯಜಮಾನರಿಗೂ ಮಕ್ಕಳಿಗೂ ನನ್ನ ನೆನಪು ಕೊಡು. ನಿನ್ನನ್ನು ನೋಡಿ ಬಹಳ ದಿನಗಳಾದವು. ನಿನ್ನ ಅಣ್ಣನ ಲಗ್ನ ಇದೇ ತಿಂಗಳಲ್ಲಿ ಆಗುವುದೆಂದು ನಿನ್ನ ತಂಗಿ ಹೇಳುತ್ತಿದ್ದರು. ನೀನು ತೌರಿಗೆ ಬೇಗ ಬರುವಿಯಲ್ಲವೇ? ಬರುವಾಗ ನಾಲ್ಕು ದಿನ ಹೆಚ್ಚು ರಜೆ ತೆಗೆದುಕೊಂಡು ಬಾ. ಉಳಿದುದನ್ನು ಭೆಟ್ಟಿಯಲ್ಲಿ ಮಾತನಾಡೋಣ. ಪತ್ರ ಬರೆ.

ನಿನ್ನ ಗೆಳತಿ<br>ಶೀಲೂ

ಕ್ಷಣ ಹೊತ್ತು ಸುಮ್ಮನೆ ತುಳಿತ ಸರಸೂನ ಮುಖದಲ್ಲಿ ವಿಷಾದ ಮಿಶ್ರಿತ ನಗೆ ಮೂಡಿತು. 'ಸ್ವಂತ ದುಡಿದು ಸ್ವತಂತ್ರವಾಗಿರುವ ಶೀಲಾ ಎಷ್ಟು ಸುಖಿ' ಎಂದು ತಾನು ಭಾವಿಸಿದ್ದಕ್ಕೆ ತನಗೆ ನಾಚಿಕೆಯೆನಿಸಿತು. ಅವಳ ಮನಸ್ಸು ಈಗ ಎಷ್ಟೋ ಹಗುರವಾಗಿತ್ತು. ತಾನು ಸದ್ಯಕ್ಕೆ ತೌರಿಗೆ ಹೋಗುವುದು ನಿಂತದ್ದರಿಂದ ಶೀಲಾಗೆ ಬೇಗನೇ ಪತ್ರ ಬರೆಯಬೇಕೆಂದು ಕೊಂಡಳು. ಅವಳಿನ್ನೂ ಕೈಯಲ್ಲಿ ಪತ್ರ ಹಿಡಿದುಕೊಂಡು ಅದೇ ಸ್ಥಳದಲ್ಲಿ ಕುಳಿತಿದ್ದಳು. ಪತ್ರದಲ್ಲಿಯ ಕೆಲವೊಂದು ಮಾತುಗಳು ಅವಳ ಮನದಲ್ಲಿ ಹರಿದಾಡುತ್ತಿದ್ದವು. ಸುಂದರಿ ಬಂದು "ಅವ್ವಾ, ನಮ್ಮ ಸಾಲ್ಯಾಗ ಡ್ರಾಯಿಂಗ್ ಬುಕ್ಕಿನ್ಯಾಗ ಚಿತ್ರಾ ತಕ್ಕೊಂಡ ಬರಲಿಕ್ಕೆ ಹೇಳ್ಯಾರ. ನಾ ಏನ ತಗೀಲೆವಾ" ಎಂದಳು.

"ನಾ ಹೇಳಿದ್ದು ತೆಗೀತಿಯಾ ? ತೆಗಿ ಹಾಂಗಾರ: ಒಂದು ಹೆಣ್ಣು ಪಕ್ಷಿ ಗಿಡದ ಮ್ಯಾಲೆ ಕೂತದ. ಈ ಗಿಡದ ಕೆಳಗ ಬೆಕ್ಕು ಪಕ್ಷೀ ಹಿಡೀಲಿಕ್ಕೆ ಜಪ್ಪಿಸಿಕೊಂಡು ಕೂತದ. ಗಿಡದ ಮ್ಯಾಲಿನ ಪಕ್ಷಿ ಮ್ಯಾಲೆ ಕಣ್ಣಿಟ್ಟುಕೊಂಡು ಒಂದು ಹದ್ದು ಹಾರಾಡ್ತದ. ಇನ್ನೊಂದು ಪಕ್ಷಿ ಎದುರಿನ ಮನಿಯೊಳಗಿನ ಪಂಜರದಾಗ ಅದ. ಪಂಜರದಾಗ ಅದಕ್ಕ ಕಾಳು, ನೀರು ಎಲ್ಲಾ ಅದ. ಗಿಡದ ಮ್ಯಾಲಿನ ಪಕ್ಷಿ ಪಂಜರದಾಗಿನ ಪಕ್ಷೀಗೆ ಅಂತsದ: "ನಿನಗ ಹೊಟ್ಟಿ ತುಂಬಾ ಊಟ ಸಿಗ್ತದ. ಮೇಲಾಗಿ ಬೆಕ್ಕು, ಹದ್ದು ಇವುಹಳ ಹೆದರಿಕಿ ನಿನಗಿಲ್ಲಾ. ನೀ ಎಷ್ಟ ಸುಖೀ ಇದ್ದೀ" ಅಂತ ಅದಕ್ಕ ಆ ಪಂಜರದಾಗಿನ ಪಕ್ಷಿ ಅಂತsದ" ಪರಾಧೀನೆ. ಸಾಕಿದವರು ಕೊಟ್ಟಾಗs ನನಗ ಆಹಾರ ಸಿಗ್ತದ ನೀ ಸ್ವತಂತ್ರ ಇದ್ದೀ, ನೀನs ಭಾಳ ಸುಖೀ ಇದ್ದಿ" ಎಂದು. ಸರಸೂ ಕನಸಿನ ಲೋಕದಲ್ಲಿದ್ದವಳಂತೆ ಹೇಳಿದಳು.

ತಾಯಿಯ ಒಗಟಿನಂತಹ ಮಾತುಗಳನ್ನು ಕೇಳುತ್ತ ಬೆರಗಾಗಿ ಕುಳಿತಿದ್ದಳು ಸುಂದರಿ.

***

# ಗೃಹಿಣಿ

'ಅನೂ......."

ಕರೆ ಕೇಳಿದ ಕಿವಿ ತಂಪಾಯಿತು.; ಕೆಂಪಗಾಯಿತು.

ಇನ್ನೊಮ್ಮೆ ಕೇಳಬೇಕೆನಿಸಿತು. ಅಡಿಗೆ ಮನೆಯಲ್ಲಿದ್ದ ಅನ್ನಪೂರ್ಣ 'ಓ' ಕೊಡಲಿಲ್ಲ.

"ಅನೂs, ಅನ್ನಪೂರ್ಣಾ"

"ಓ" ಎನ್ನುತ್ತ ಮುಂದಿನ ಕೋಣೆಗೆ ಹೋದಳು ಅನೂ. ಬಗ್ಗಿ ಬೂಟಿನ ಲೇಸು ಕಟ್ಟುತ್ತಿದ್ದ ಗಂಡ ಮೇಲೆದ್ದು ನಿಂತು ಕೇಳಿದ.

"ನಾಳೆ ಆದಿತ್ಯವಾರ. ನಾಲ್ಕಾರು ಮಂದಿ ಗೆಳೆಯರನ್ನ ಊಟಕ್ಕ ಕರೀಬೇಕಂತ ಮಾಡೇನಿ. ಕರೀಲೇನು?"

ಅನ್ನಪೂರ್ಣ 'ಯಾಕೆ' ಎನ್ನುವಂತೆ ಪ್ರಶ್ನಾರ್ಥಕವಾಗಿ ಹುಬ್ಬನ್ನೆತ್ತಿದಳು.

"ನೋಡು : ನಮ್ಮ ಮದುವೀಗೆ ಅವರಿಗೆ ಬರಲಿಕ್ಕಾಗಿದ್ದಿಲ್ಲ. ಹೊಸದಾಗಿ ಮನೀ ಮಾಡೇವಿ. ಊಟಕ್ಕ ಕರೀಬೇಕಂತ ಅನಿಸೇದ. ಅದಕ್ಕs ನಿನ್ನ ಕೇಳಿದೆ."

"ನನ್ನೇನು ಕೇಳೋದು. ಕರಿಯೂ ಮನಸ್ಸಿದ್ದರ ಕರೀರಿ."

"ಊಹೂ ಹಾಂಗಲ್ಲಾ. ನೀನು ಯಜಮಾನಿ. ಮತ್ತs ಹೊರಗಿನವರು ಊಟಕ್ಕ ಬರತಾರಂದರ ನಿನಗ ಕೆಲಸಾನೂs ಹೆಚ್ಚಿಗಿ ಬೀಳತದ. ನಿನ್ನ ಒಪ್ಪಿಗಿ ಇದ್ದರs ನಾ ಕರಿಯಾಂವಾ"

ಗಂಡ ಕೊಟ್ಟ "ಯಜಮಾನಿ" ಎನ್ನುವ ಪದವಿಗೆ ಹಿಗ್ಗಿದ ಅನ್ನಪೂರ್ಣ ನಗುನಗುತ್ತ "ಹೂ, ಕರೀರಿ" ಎಂದಳು.

ಹೆಂಡತಿಯ ಒಪ್ಪಿಗೆಯಿಂದ ಹಿಗ್ಗಿದ ಗಂಡ, "ಕಚೇರಿಯಿಂದ ಬರೂ ಮುಂದ ಕಾಯಿಪಲ್ಲೆ, ಹಣ್ಣು ಮತ್ತೇನರೆ ಸಾಮಾನು ತರಲೇನು ?" ಎಂದ.

"ನಾವಿನ್ನೂ ಮನೀ ಮಾಡಿ ಒಂದು ವಾರ ಆಗಿಲ್ಲಾ. ಈಗ ತರೂ ಸಾಮಾನು ಭಾಳ ಅದಾವು. ನಿಮಗ ತಿಳಿಯೂದಿಲ್ಲಾ. ರೂಪಾಯಿ ಇದ್ರ ತರ್‍ರಿಲ್ಲೆ. ನಾ ಎಲ್ಲಾ ತರಸ್ತೇನಿ" ಎನ್ನುತ್ತ ಕೈ ಚಾಚಿದಳು.

ಕೈ ಚಾಚಿದ ಹೆಂಡತಿಯ ಕೈಯಲ್ಲಿ ಹತ್ತರ ನೋಟನ್ನಿಟ್ಟು ಕೈ ಕುಲುಕಿಸಿ, ಸಲಾಮು ಹಾಕಿದ ಹುಡುಗತನದ ಗಂಡ. ಗಂಡನ ಚೇಷ್ಟೆಗೆ ನಗುತ್ತ ಬೈ ಬೈ ಮಾಡಿದಳು ಅನೂ.

"ಅನೂ ಇಲ್ಲಿ ಇನ್ನೊಂದಿಷ್ಟು ಪುರಿ ತಾ. ಅಲ್ಲಿ ಅವರಿಗೆ ಇನ್ನಷ್ಟು ಖೀರು ಹಾಕು. ನಿಮಗ ಇನ್ನಷ್ಟು ಕೋಸಂಬರಿ ತರಸ್ಲೇನು? ಬರೀ ವಾಂಗೀ ಭಾತಕ್ಕ ಹೊಟ್ಟೆ ತುಂಬಿತು ಅಂತೀರೆಲಾ; ಇನ್ನೂ ಸಾದಾ ಅನ್ನ ಮೊಸರು ತೋಗೋಬೇಕು" ಎಂದು ಗಂಡ ಗೆಳೆಯರಿಗೆ ಉಪಚಾರ ಮಾಡುತ್ತಿದ್ದ.

"ಅಡಿಗೀ ಭಾಳ ಚೊಲೋ ಮಾಡ್ತಾರಪಾ ನಿಮ್ಮನೀಯವರು, ಇನ್ನೇನು ಬಿಡು ತಿಂಗಳಿಗೊಮ್ಮೆ ನಾ ನಿಮ್ಮ ಮನ್ಯಾಗ ಊಟಕ್ಕ ಝುಂಡಾ ಊರಾಂವ" ಒಬ್ಬ ಬಾಲ್ಯದ ಗೆಳೆಯ ಹೇಳುತ್ತಿದ್ದ ಗಂಡನಿಗೆ.

"ಇಷ್ಟ ದಿನಾ ಖಾನಾವಳಿ ಊಟಾ ಉಂಡು ಉಂಡು ಮೈಯs ಹಿಡಿದಿದ್ದಿಲ್ಲಾ. ಇನ್ನ ಮನೀಯವರ ಕೈಯ ಸುಗ್ರಾಸ ಭೋಜನದಿಂದ ನಿನ್ನ ತೂಕಾ ತಿಂಗಳಾ ತಿಂಗಳಾ ಏರಬೇಕು ನೋಡಪಾ." ಇನ್ನೊಬ್ಬ ಚೇಷ್ಟೆ ಮಾಡಿದ.

ಅನ್ನಪೂರ್ಣ ಊಟ ಮುಗಿಸಿ ಕೈ ತೊಳೆಯುತ್ತಿದ್ದಂತೆ ಎಲ್ಲರೂ 'ಹೋಗಿ ಬರ್ತೀವ್ರಿ ನಮಸ್ಕಾರ' ಎಂದು ಹೇಳುತ್ತ ಹೊರಟರು. ಗಂಡ ಸ್ವಲ್ಪ ದೂರದವರೆಗೆ ಅವರನ್ನು ಕಳಿಸಿಬರಲು ಹೋದ.

ಅನೂ ಮುಂಬಾಗಿಲು ಮುಂದೆ ಮಾಡಿ ಕೋಣೆಗೆ ಹೋದವಳೇ ಹಾಸಿಗೆಗೆ ಅಡ್ಡಾದಳು. ಕೈ, ಕಾಲು, ಬೆನ್ನು ನಡು ತುಂಬಾ ನೋಯುತ್ತಿದ್ದವು. ಯಾವಾಗ ವಿಶ್ರಾಂತಿ ಸಿಕ್ಕೀತು, ಯಾವಾಗ ನೆಲಕ್ಕೆ ಕಾಲು ಚಾಚೇನು ಎನ್ನುವಷ್ಟು ಮೈದಣಿದಿತ್ತು. ರಾತ್ರಿ ಬಹಳ ಹೊತ್ತಿನವರೆಗೆ ಕೆಲಸ ಮಾಡಿ ಮತ್ತೆ ಬೆಳಿಗ್ಗೆ ಬೇಗನೆ ಎದ್ದುದರಿಂದ ತಲೆ ನೋಯುತ್ತಿತ್ತು. ಕಣ್ಣು ರೆಪ್ಪೆಗಳು ಭಾರವಾಗಿ ನರಗಳು ಸಿಡಿಯುತ್ತಿದ್ದವು.

ಹಿಂದಿನ ದಿನ ಗಂಡ ಕಚೇರಿಗೆ ಹೋದ ಸ್ವಲ್ಪ ಹೊತ್ತಿಗೆ ತನ್ನ ಊಟ ಮುಗಿಸಿ ಕೈತೊಳೆದು ನೆರೆಮನೆಯ ಹುಡುಗಿಯನ್ನು ಜೊತೆ ಮಾಡಿಕೊಡು ಪೇಟೆಗೆ ಹೋಗಿ ಎಲ್ಲ ಸಾಮಾನುಗಳನ್ನೂ ತಂದಿದ್ದಳು. ಕಾಳು ಹಸನುಮಾಡಿ ಗಿರಣಿಗೆ ಹಾಕಿಸಿ, ಹಿಟ್ಟು ಸ್ವಚ್ಛಮಾಡಿಕೊಂಡು, ಕಾಯಿಪಲ್ಲೆ ಸೋಸಿ ತೊಳೆದಿಟ್ಟು ಹೆಚ್ಚಿಗೆ ಬೇಕಾಗುವ ಕೆಲವು ಪಾತ್ರೆಗಳನ್ನು ನೆರೆಮನೆಯಿಂದ ತಂದು ಈ ಎಲ್ಲ ಕೆಲಸಗಳ ಮಧ್ಯೆ ಸಂಜೆಯ ಅಡಿಗೆಯನ್ನೂ ಮಾಡಿ ಊಟ ಮುಗಿಸಿ ಹಾಸಿಗೆಯಲ್ಲಿ ಮೈಚಾಚಿದಾಗ ಗಡಿಯಾರದ ಮುಳ್ಳು ಹನ್ನೆರಡನ್ನು ಸಮೀಪಿಸುತ್ತಿತ್ತು.

ಮತ್ತೆ ಬೆಳಗ್ಗೆ ನಾಲ್ಕೂವರೆಗೆ ಎದ್ದು ಎರಡು-ಮೂರು ವಿಧದ ಕಾಯಿಪಲ್ಲೆ, ಚಟ್ನಿ ಎರಡು ತರಹದ ಅನ್ನ, ಖೀರು ಪುರಿ ಎಲ್ಲ ಅಡಿಗೆಯನ್ನು ಮುಗಿಸಿ ಅತಿಥಿಗಳಿಗೆಲ್ಲ ತಾಟು ಮಣೆಗಳನ್ನಿಟ್ಟು ಊಟಕ್ಕೆ ನೀಡಲು ಅಣಿಯಾದಾಗಲೂ ಹನ್ನೆರಡು ಗಂಟೆ ಬಾರಿಸಿತ್ತು. ಎದ್ದಾಗಿನಿಂದ ಸ್ವಲ್ಪವೂ ಬಿಡುವಿಲ್ಲದೆ ಕೆಲಸ ಮಾಡಿದ್ದಳು. ಕೈಕಾಲು ಸೋತಿದ್ದವು. ಆದರೂ ಅಡಿಗೆಯ ಪ್ರಶಂಸೆ ಕೇಳುತ್ತಲೆ ಎರವಲು ತಂದು ಹುರುಪಿನಿಂದ ಓಡಾಡಿ ಊಟಕ್ಕೆ ಬಡಿಸಿದಳು. ಹಸಿದ ಹೊಟ್ಟೆಯ ಒಂದು ತುತ್ತು ಊಟದ ಶಾಸ್ತ್ರ ಮಾಡಿ ಬಂದು ಹಾಸಿಗೆಯಲ್ಲಿ ಒರಗಿದ್ದಳು.

"ದಡ್" ಮುಂಬಾಗಿಲು ತೆಗೆದು ಒಳಗೆ ಬಂದ ಗಂಡನ ಹೆಜ್ಜೆಯ ಸಪ್ಪಳಕ್ಕೆ ಅನೂ ಬಾಗಿಲಿಗೆ ಮುಖ ಮಾಡಿ ಹೊರಳಿ ಮಲಗಿದಳು.

"ಅನೂ".....ಎಂದು ಬಹಳ ಉತ್ಸಾಹದಿಂದ ಕೂಗುತ್ತ ಬಂದ ಗಂಡ ಮಲಗಿದ್ದ ಅನುವನ್ನು ನೋಡಿ ಗಾಬರಿಯಾಗಿ ಬಂದು ಮಂಚದ ಮೇಲೆ ಕುಳಿತ.

"ಅನೂ ಯಾಕೆ ? ಮಲಗೀದಿ?ಏನಾತು?"

"ಯಾಕೂ ಇಲ್ಲಾ, ಸುಮ್ಮನs"

"ಸುಮ್ಮನs ಯಾಕ? ಆಯಾಸ ಆಗೇದೇನು? ಕೆಲಸಾ ಭಾಳ ಮಾಡಿದಿ ಅಂತ. ಹೌದೌದು ಇರಬೇಕು. ಅದಕ್ಕs. ನಿನ್ನೀಯಿಂದ ಒಂದs ಸವನs ದುಡೀಲಿಕ್ಕೆ ಹತ್ತೀದಿ. ಆಯಾಸ ಆಗದs ಏನು?" ಅನೂs ಬೆನ್ನು ಸವರುತ್ತ ಮತ್ತೆ "ತಲೀ ನೋಯ್ತದೇನು? ಸ್ವಲ್ಪ ನೀಲಗಿರಿ ಎಣ್ಣೀ ಹಚ್ಚಲಾ ?" ಹಣೆ, ಕೂದಲು ನೇವರಿಸುತ್ತ ಕೇಳಿದ.

ಗಂಡನ ಹಿತವಾದ ಸ್ಪರ್ಶ, ಒಲುಮೆಯ ಮಾತುಗಳೆದುರು ಅನೂನ ಆಯಾಸವೆಲ್ಲಾ ಕರಗಿ ಹೋಯಿತು ಬಿಸಿಲಿನೆದುರಿನ ಮಂಜಿನಂತೆ. ಅವನ ಒಳ್ಳೆಯ ಮಾತು ಅವಳ ರೋಗಕ್ಕೆ ಸಂಜೀವಿನಿಯಾಯಿತು. ತನ್ನ ಕೆಲಸಕ್ಕೆ ತಕ್ಕ ಬೆಲೆ ಸಿಕ್ಕಿತೆಂಬ ಆತ್ಮತೃಪ್ತಿಯಾಯಿತು.

ತಮ್ಮ ಕರ್ಮಕ್ಕೆ ತಕ್ಕ ಫಲ ಸಿಕ್ಕಿತೆಂಬ ಸಂತೋಷದಲ್ಲಿ ಆಯಾಸವನ್ನೆಲ್ಲ ಮರೆತು ಎದ್ದು ಕುಳಿತಳು ಅನ್ನಪೂರ್ಣ.

***

ಮೇಲಿನ ಘಟನೆ ನಡೆದು ಈಗ ಮೂವತ್ತು ವರ್ಷಗಳು ಕಳೆದಿವೆ.

ಅನ್ನಪೂರ್ಣೆಯ ಮನೆಗೆ ಇನ್ನೊಮ್ಮೆ ಭೆಟ್ಟಿ ಕೊಡೋಣ. ಬನ್ನಿ, ಇದೇ ಅವಳ ಮನೆಯ ಮೆಟ್ಟಿಲು. ಹೊಸಿಲುದಾಟಿ ಒಳಕ್ಕೆ ಬನ್ನಿ. ಓಹೋ ಕಿವಿಗೇನೋ ಇಂಪಾದ ಸ್ವರ ಕೇಳಿಬರುತ್ತಿದೆ.

ಕಂದ ಜೋ ಜೋ ಬೆಳಕಿನಂದ ಜೋ ಜೋ

ಕಂದ ಜೋ ಜೋ ಪೂರ್ಣಚಂದ್ರ ಜೋ ಜೋ.

ಅನ್ನಪೂರ್ಣ ತನ್ನ ಮಗುವಿಗೆ ಜೋಗುಳ ಹಾಡುತ್ತಿದ್ದಾಳೆಯೇನೋ! ಅಲ್ಲ ಅಲ್ಲ ನಿಮ್ಮ ಊಹೆ ತಪ್ಪು. ಅವಳು ಈಗ ಅನ್ನಪೂರ್ಣ ಅಲ್ಲ. ತನ್ನ ಮೊಮ್ಮಗ, ಮಗನ ಮಗುವಿಗೆ ಜೋಗುಳ ಹಾಡುತ್ತಿದ್ದಾಳೆ. ಓಹೋ ಮಗು ಮಲಗಲಿಲ್ಲವೇನೋ, ಅದನ್ನೆತ್ತಿಕೊಂಡು ಹೊರಗೆ ಬರುತ್ತಿದ್ದಾಳೆ ನೋಡಿ. ವಯಸ್ಸಾದರೂ ಮುತ್ತೈದೆಯಾಗಿ ಎಷ್ಟು ಚೆನ್ನಾಗಿ ಕಾಣುತ್ತಾಳಲ್ಲವೆ ? ಅವಳ ತಲೆಯ ಬಳಿ ಕೂದಲಿಗೂ, ಅವಳ ಗಂಭೀರ, ಶಾಂತ ಮುಖಕ್ಕೂ ಒಳ್ಳೆ ಜೊತೆಯಾಗಿದೆ.

ಅನ್ನಪೂರ್ಣ ಒಂದು ಕೈಯಲ್ಲಿ ಮಗುವನ್ನೂ ಇನ್ನೊಂದು ಕೈಯಲ್ಲಿ ಸ್ವೆಟರ್ ಹೆಣಿಗೆಯನ್ನು ತಂದು ಮುಂದಿಟ್ಟುಕೊಂಡು ಚಾಪೆಯ ಮೇಲೆ ಕುಳಿತಳು. ಮಗುವಿನ ಮುಂದೆ ಆಟಿಗೆಯ ಸಾಮಾನು ಇಟ್ಟಳು. ತನ್ನ ಕೈಯಲ್ಲಿಯ ಹೆಣಿಗೆ ಹಾಕಲು ತೊಡಗಿದಳು. ನಾಲ್ಕಾರು ಟಾಕೀ ಹಾಕಿದ್ದಳೋ ಇಲ್ಲವೋ ತೊಡೆಯ ಮೇಲಿದ್ದ ಉಲನ್ನಿನ ಉಂಡಿಯನ್ನು ಮೊಮ್ಮಗ ಚೆಂಡು ಮಾಡಿ ಬೀಸಿ ಎಸೆದ.

"ಏನೋ ಶಶಿ, ನಿನ್ನ ತುಂಟತನಾ ಭಾಳ ಆತಪಾ. ಅಕ್ಕೀ ಆರಸಲಿಕ್ಕೆ ಕೂತರ ಅಕ್ಕಿ ಚೆಲ್ಲಾಡಿದಿ. ಮಲಗಿಸಬೇಕಂದರ ನಿದ್ದೀ ಮಾಡಲಿಲ್ಲ. ಮತ್ತ ಈಗ ಹೆಣೀಲಿಕ್ಕು ಬಿಡೂದಿಲ್ಲ" ಎನ್ನುತ್ತ ಹೆಣಿಗೆಯನ್ನು ಕೆಳಗಿಟ್ಟು ಮಗುವನ್ನು ಮುದ್ದಾಡಿದಳು.

"ಅನ್ನಮ್ಮಾ, ಏನ್ಮಾಡ್ತೀರಿ" ಎಂದು ಕರೆಯುತ್ತ ಗೆಳತಿ ಗೌರಮ್ಮ ಒಳಗೆ ಬಂದಳು.

"ಬರ್ರಿ" ಎಂದು ಕೂದಲು ಸೆರಗು ಸರಿಪಡಿಸಿಕೊಳ್ಳುತ್ತ ಅನ್ನಮ್ಮ ಚಾಪೆಯ ಒಂದು ಬದಿಗೆ ಸರಿದಳು.

"ಶಶೀ ಕೂಡ ಆಟ ಆಡ್ತಿದ್ದಿರೇನು ? ಇವತ್ತ ಗುಡೀಗೆ ಹೋಗೂಣು ಅಂದಿದ್ರೆಲ್ಲಾ ಬರ್ತೀರೇನು ಅಂತ ಕೇಳಲಿಕ್ಕೆ ಬಂದೆ" ಎಂದಳು ಗೌರಮ್ಮ.

"ಇಲ್ರಿ ಇವತ್ತ ಗುಡೀಗೆ ಬರಲಿಕ್ಕೆ ಆಗೂದಿಲ್ಲ. ಶಶಿ ಒಬ್ಬನs ಆಗ್ತಾನ ಅವನ್ನ ನೋಡಿಕೊಳ್ಳಲಿಕ್ಕೆ ಮನ್ಯಾಗs ಇರಬೇಕಾಗತದ."

"ಯಾಕ್ರೀ ಶಶೀ ಅವ್ವ ಮನ್ಯಾಗ ಇಲ್ಲೇನು."

"ಯಾವದೋ ಛೊಲೊ ಸಿನಿಮಾ ಬಂದsದ, ಇಂದಿರಾನ್ನೂ ಕರಕೊಂಡು ಹೋಗಿಬರ್ತೀನಿ ಅಂದ ಶೇಖರ. ಶಶೀ ತ್ರಾಸ ಕೊಡ್ತಾನ ಬಿಟ್ಟು ಹೋಗ್ರಿ ಅಂತ ಹೇಳಿ ನಾನು ಇಟ್ಟುಕೊಂಡೆ."

"ಆತ ಬಿಡ್ರಿ, ನಿಮಗಂತೂ ಮನೀ ಬಿಟ್ಟು ಹೊರಗ ಬರಲಿಕ್ಕೇ ಆಗೂದಿಲ್ಲ. ಒಂದಿನಾ ಮೊಮ್ಮಗನ್ನ ಆಡಸ್ಬೇಕು. ಒಂದಿನಾ ಸೊಸೀಗೆ ಆರಾಮಿಲ್ಲಾ. ಮತ್ತೊಂದಿನಾ ಮನೀಗೆ ಮಂದಿ ಬರ್‍ತಾರ, ಹಿಂಗs ದಿನಾ ಏನರ ಇದ್ದs ಇರತಾವ."

"ಗೌರಮ್ಮ, ಮನಿ ಅಂದಮ್ಯಾಲೆ ಇವೆಲ್ಲಾ ಇರೂವ ಅಲ್ಲಾ?"

"ಮನೀ ಕೆಲಸಾ ಅನ್ನೂದು ಎಲ್ಲಾರಿಗೂ ಇದ್ದs ಇರತದ ಬಿಡ್ರಿ. ಆದ್ರೂ ಅದರಾಗs ಸವಡು ಮಾಡಿಕೊಂಡು ಹೊರಗ ಬರಬೇಕ್ರೆವಾ. ನಾ ಇವತ್ತ ಗುಡೀಗೆ ಹೋಗ್ತಿನಿ ಅಂತ ಹೇಳಿ ಇವತ್ತ ಅವರು ಸೀನೆಮಾಕ್ಕ ಹೋಗೂದು ಬ್ಯಾಡ ಅನಬೇಕಾಗಿತ್ತು. ದೇವ ದರ್ಶನ ಮಾಡಿದಂಗ ಆಗ್ತಿತ್ತು."

"ಇಲ್ನೋಡ್ರಿ ಗೌರಮ್ಮ, ಇಲ್ಲೇ ಬರೂದು ನನಗ ನಿಮಗ ಜಗಳಾ. ಸಿನಿಮಾಕ್ಕ ಹೋಗ್ತೀವಿ ಅಂತ ಹುಡುಗರು ಬಾಯಿಬಿಟ್ಟು ಕೇಳೂ ಮುಂದ ನೀವು ಮನ್ಯಾಗಿರ್ರೀ ನಾ ಗುಡೀಗೆ ಹೋಗ್ತೀನಿ ಅನ್ನೂದು ಏನ ದೊಡ್ಡಿಸ್ತನಾ?"

"ನೀವು ಇಷ್ಟ ದೊಡ್ಡ ಮನಸ ಮಾಡಿದರೂ ಮಗ ಸೊಸಿ ಎಷ್ಟ ನಿಮ್ಮನ್ನ ತೂಗಮಣಿ ಮ್ಯಾಲೆ ಕೂಡ್ರಿಸಿ ತೂಗುತಾರ ನೋಡ್ರಿ, ಅನ್ನಮ್ಮ ಸುಳ್ಳs ನಾವು ಈ ಪರಿ ದಣಕೊಳ್ಳೂದು."

"ಅವರು ಕೂಡ್ರಿಸಿ ತೂಗತೀನಿ ಅಂದರೂ ತೂಗಮಣಿ ಏರಲಿಕ್ಕೆ ನಾ ತಯಾರಿಲ್ಲ. ನಾವು ಸ್ವಲ್ಪ ದೊಡ್ಡ ಮನಸು ತೋರಿಸಿದರ ಗಂಡ, ಮಗ ಸೊಸೀ, ಮೊಮ್ಮಕ್ಕಳು ಎಲ್ಲಾರಿಗೂ ಸಂತೋಷ ಆಗ್ತದ. ಎಲ್ಲಾರೂ ಸಂತೋಷದಿಂದ ಇದ್ದರ ನನ್ನ ಮನಸಿಗೂ ಸಂತೋಷ ಇರ್‍ತದ."

"ಇವತ್ತ ದೇವರಿಗೆ ಭಾಳ ಸಿಂಗಾರ ಮಾಡುವವರಿದ್ದರು. ಕಣ್ತುಂಬ ನೋಡಿ ಸಂತೋಷ ಪಡತಿದ್ರಿ ಅಂತ ಹೇಳಿದೆ ನಿಮಗ ಇಷ್ಟೆಲ್ಲಾ, ನೀವೇನೂ ತಿಳಕೋಬ್ಯಾಡ್ರಿ ಮತ್ತ."

" ಹೌದ್ರಿ ಅದೆಲ್ಲಾ ಖರೆ, ಆದರ ದೇವರನ್ನ ನೋಡಿ ಸಂತೋಷ ಪಡೂಹಾಂಗs ನಾನು ಈ ಶಶೀ ಕೂಡ ಆಡೂ ಮುಂದು ಸಂತೋಷಪಡ್ತೀನಿ. ಸಣ್ಣ ಮಕ್ಕಳೂನು ದೇವರs ಇದ್ಹಾಂಗ. ನೀವೇನೂ ತಪ್ಪು ತಿಳಕೋಬ್ಯಾಡ್ರಿ. ನೀವು ಹೋಗಿ ಬರ್‍ರಿ."

"ಆಗಲಿ, ಹೋಗಿ ಬರ್‍ತೀನೀ", ಗೌರಮ್ಮ ಮುಂಬಾಗಿಲು ದಾಟಿದರು.

ಇವರಿಬ್ಬರ ಮಾತಿನ ಗದ್ದಲದಲ್ಲಿಯೂ ಶಶಿ ಯಾವಾಗಲೋ ಅಮ್ಮನ ತೊಡೆಯ ಮೇಲೆ ನಿದ್ರೆಮಾಡಿದ್ದ.

ಮಧ್ಯಾಹ್ನದ ನಿದ್ರೆ ಮುಗಿಸಿ ಕೈಯಲ್ಲೊಂದು ಪುಸ್ತಕ ಹಿಡಿದು ಹೊರಗೆ ಬಂದ ಅನ್ನಮ್ಮನ ಗಂಡ "ಶಶೀ ನಿದ್ದಿ ಮಾಡ್ಯಾನ. ತೊಟ್ಟಿಲದಾಗ ಮಲಗಿಸಿ ಬಾ" ಎಂದಳು.

ಅನ್ನಮ್ಮ ಮತ್ತೆ ಹೊರಗೆ ಬಂದಾಗ ಕೈಯಲ್ಲೊಂದು ಚಹದ ಕಪ್ಪು ಇತ್ತು. ಅದನ್ನು ಗಂಡನಿಗೆ ಕೊಟ್ಟು ಮತ್ತೆ ಹೆಣಿಗೆಗೆ ಕೈಯಿಡುತ್ತ "ಇವತ್ತು ವಾಕಿಂಗಿಗೆ ಹೋಗೋದಿಲ್ಲೇನ್ರಿ" ಎಂದಳು ಗಂಡನಿಗೆ.

"ಇಲ್ಲಾ, ಇವತ್ತು ನೀನು ಒಬ್ಬಾಕೀನೇ ಇದ್ದೀ ಮನಿಯೊಳಗ. ಅದಕ್ಕ ನಾನೂ ಹೊರಗ ಹೋಗಬಾರದು ಅಂತ ಮಾಡೇನಿ."

"ಹೊರಗೆ ಅಡ್ಡಾಡಿ ಬಂದರ ರಾತ್ರಿ ಹಸಿವಿ ಆಗ್ತದ ನಿಮಗ. ನಾ ಒಬ್ಬಾಕಿ ಇದ್ರ ಏನಾತು ? ಈಗ ಬರ್‍ತಾರ ಇಂದಿರಾ -ಶೇಖರ ಇಬ್ರೂ. ನೀವು ಹೋಗಿ ಬರ್‍ರಿ; ಹುಡುಗೂರು ಸಾಲಿಯಿಂದ ಬರೂ ಹೊತ್ತೂ ಆತು."

"ಅದೆಲ್ಲಾ ಇರ್ಲಿ ಬಿಡು. ಇವತ್ತ ನನ್ನ ತಲ್ಯಾಗ ಬ್ಯಾರೇ ವಿಚಾರನs ಅದ. ನೀನು ಗೌರಮ್ಮನ ಕೂಡ ಮಾತಾಡೂ ಮುಂದs ನನಗ ಎಚ್ಚರಾತು. ನಮ್ಮ ಹಿಂದಿನ ಮೂವತ್ತು ವರುಷದ ಜೀವನಾ ನೆನೆಸಿಕೊಂಡೆ. ನಿನ್ನ ಜೀವನ ಕರ್ತವ್ಯ-ಕರ್ಮ ಅಂತ ಯಾವಾಗಲೂ ಇದರೊಳಗs ಕಳೀತು. ನಿನ್ನ ಸ್ವಂತದ ಸುಖ ನೀ ಎಂದೂ ನೋಡಿಕೊಳ್ಳಲಿಲ್ಲ..."

"ಹೌದ್ರೀ, ಮೊದಲ ಅಂದರ ಹೊಸದಾಗಿ ಲಗ್ನಾಗಿ ಬಂದಾಗ ನನ್ನ ಒಳ್ಳೇತನಕ್ಕ ನಿಮ್ಮಿಂದ ಪ್ರಶಂಸಾ ಬೇಕೂ ಅಂತರೆ ಅನ್ನಿಸ್ತಿತ್ತು. ಆದರ ವಯಸ್ಸು ಆದಂಗ ಹಾಂಗ ಅನಸೂದಿಲ್ಲಾ. ನನ್ನ ಕರ್ತವ್ಯ ನಾ ನಿಷ್ಠಾದಿಂದ ಮಾಡತೇನಿ ಅನ್ನೂ ತೃಪ್ತಿ ಅದ ಮನಸ್ಸಿಗೆ."

"ದೊಡ್ಡ ದೊಡ್ಡ ತತ್ತ್ವಜ್ಞಾನಿಗಳು, ಮಹಾ ದಾರ್ಶನಿಕರು, ಪಂಡಿತರು, ಸಾಧು-ಸಂತರು ಸುದ್ದಾ ಈ ರೀತಿ ನಡಕೋಬೇಕೂ ಅಂತ ಸಾಧನಾ ಮಾಡ್ತಿರ್ತಾರ. ಆದರ ನೀನು ನಿನಗ ಗೊತ್ತಿಲ್ದಾಂಗs ಅದನ್ನ ಸಾಧಿಸಿ ಬಿಟ್ಟೀ ನೋಡು. ಮೊನ್ನೆ ಶ್ರೀನಿವಾಸರಾಯರ ಮನಿಯಿಂದ ವಿನೋಬಾ ಭಾವೆಯರ 'ಗೀತಾ ಪ್ರವಚನ' ಅನ್ನೂ ಪುಸ್ತಕ ತಂದೇನಿ. ಭಗವದ್ಗೀತಾದ ಸಾರ ಎಷ್ಟ ಛಂದಾಗಿ ಅದರೊಳಗ ಹೇಳ್ಯಾರ ಅಂದೀ. ಅದನ್ನs ನಿನಗ ಓದಿ ತೋರಸ್ಬೇಕೂ ಅಂತ ತಂದೆ."

"ಓದ್ರಿ ಕೇಳ್ತಿನಿ. ಭಾಳ ದಿನಾ ಆತು ನನಗೂ ಏನೂ ಓದಲಿಕ್ಕೇ ಆಗಿಲ್ಲ."

"ಕರ್ಮ ಮಾಡುವವನ ವೃತ್ತಿ ದ್ವಿಮುಖ; ನಾವು ಕರ್ಮ ಮಾಡಿದ ಮೇಲೆ ಅದರ ಫಲವನ್ನು ನಾವೇ ಅನುಭವಿಸಬೇಕು. ಅದು ನಮ್ಮ ಹಕ್ಕು ಎಂಬುದು ಒಂದು. ತದ್ವಿರುದ್ಧವಾಗಿ ನಮಗೆ ಫಲ ಸಿಗದಿದ್ದರೆ ನಾವು ಕರ್ಮವನ್ನೇ ಮಾಡುವುದಿಲ್ಲ ಎಂಬುದು ಇನ್ನೊಂದು. ಗೀತೆ ಇವೆರಡನ್ನೂ ಬಿಟ್ಟು ಮೂರನೆಯ ವೃತ್ತಿಯನ್ನು ಹೇಳುತ್ತದೆ: 'ಕರ್ಮ ಮಾಡು ಫಲದ ಹಕ್ಕನ್ನು ಬಿಡು' ಎನ್ನುತ್ತದೆ ಗೀತೆ. ಕರ್ಮ ಮಾಡಿದವನಿಗೆ ಫಲದ ಹಕ್ಕು ಇದ್ದೇ ಇದೆ. ನೀನದನ್ನು ನೀನಾಗಿ ಬಿಟ್ಟುಕೊಡು."

ಪ್ರವಚನ ಕೇಳುತ್ತ ಅನ್ನಮ್ಮ ಅದರಲ್ಲೇ ತಲ್ಲೀನಳಾದಳು. ಹೊತ್ತು ಸರಿದುದೇ ತಿಳಿಯಲಿಲ್ಲ ಇಬ್ಬರಿಗೂ. ಕತ್ತಲಾಯಿತೆಂದು ಎದ್ದು ದೇವರೆದುರು ದೀಪ ಹಚ್ಚಿ ಬಂದು ಗಂಡನಿಗೆ ನಮಸ್ಕಾರ ಮಾಡಿದಳು ಅನ್ನಪೂರ್ಣ. ವಿದ್ಯುಚ್ಛಕ್ತಿಯ ಬೆಳಕಿನಲ್ಲಿ ಓದು ಮುಂದೆ ಸಾಗಿತು.

"ನಿಷ್ಕಾಮ ಕರ್ಮದ ಮಾತನ್ನು ಬದಿಗೆ ಸರಿಸಿದರೂ ಪ್ರತ್ಯಕ್ಷವಾಗಿ ಕರ್ಮದಲ್ಲಿ ಇರುವ ಆನಂದ ಅದರ ಫಲದಲ್ಲಿ ಇಲ್ಲ....'

ತೊಟ್ಟಿಲಲ್ಲಿ ಶಶಿ ಎದ್ದು 'ಅಮ್ಮಾ' ಎಂದ. ಅನ್ನಮ್ಮ ಕೂಡಲೇ ಎದ್ದು "ಇನ್ನು ಓದುವದು ಸಾಕು. ನೀವು ಸ್ವಲ್ಪ ಹೊರಗೆ ತಿರುಗಾಡಿ ಬರ್‍ರಿ" ಎಂದು ಒಳಕ್ಕೆ ಹೋದಳು.

***

## ತಾಯಿ ಕಂಡ ಕನಸು

ಪುಟ್ಟ ಪುಟ್ಟ ಪಾದಗಳ ಅಸ್ಪಷ್ಟ ಚಿತ್ರ ಕೆಂಪು ಮಣ್ಣಿನಲ್ಲಿ ಮೂಡುತ್ತಿತ್ತು. ಅದರ ಹಿಂದೆಯೇ ಅದಕ್ಕಿಂತ ಸ್ವಲ್ಪ ದೊಡ್ಡ ಹೆಜ್ಜೆಗಳ ಚಿತ್ರ ಮೂಡಿ ಮುಂದಿನ ಪಾದಗಳ ಚಿತ್ರವನ್ನು ಅಳಿಸುತ್ತಿತ್ತು.

ರಪ್.... ರಪ್.... ರಪ್.... ತೀರ ಹತ್ತಿರಕ್ಕೆ ಬಂದು ಸದ್ದು ನಿಂತಿತು. ಪಡಸಾಲೆಯಲ್ಲಿ ಅಕ್ಕಿ ಆರಿಸುತ್ತ ಕುಳಿತ ತಾಯಿ ಕತ್ತೆತ್ತಿ ಮಗಳನ್ನು ನೋಡಿದಳು. ಗೌರಿ ಧಾವಿಸಿ ಬಂದು ತಾಯಿಯ ತೊಡೆಯ ಮೇಲೆ ಬಿದ್ದು ಮುಖ ಮುಚ್ಚಿಕೊಂಡಿದ್ದಳು. ಬಿಸಿಲಿನಲ್ಲಿ ಓಡಿ ಬಂದುದಕ್ಕೆ ಅವಳ ಮುಖ ಕೆಂಪಾಗಿತ್ತು. ಉಸಿರಾಟ ವೇಗವಾಗಿತ್ತು. ಮಗಳ ಬೆನ್ನ ಮೇಲೆ ಕೈಯಾಡಿಸುತ್ತ ತಾಯಿ ಪ್ರೀತಿಯಿಂದ-

"ಯಾಕs ಗೌರಿ ಹಂಗ್ಯಾಕ ಓಡಿ ಬಂದಿ? ನಾಯಿಗೀಯಿ ಬೆನ್ನ ಹತ್ತಿತೇನು"ಎಂದಳು.

ಅವಳ ಮಾತು ಮುಗಿಯುವ ಮೊದಲೇ ಒಳಗೆ ಬಂದ ಗೌರಿಯ ಗೆಳತಿ ಸರಸೂ "ನಾಯಿ ಅಲ್ರಿ ನಾನs ಬೆನ್ನ ಹತ್ತೇನಿ. ಅದಕs ಓಡಿ ಬಂದಾಳ ಗೌರಿ. ನೋಡ್ರಿ ಈಕಿ ನಮ್ಮ ತ್ವಾಟದಾಗಿನ ಕೆಂಪು ಗುಲಾಬಿ ಹೂ ಹರಕೊಂಡ ಬಂದಾಳ. ನಾ ನಿಮಗ ಹೇಳಲಿಕ್ಕೆ ಬಂದೆ" ಎಂದಳು ತೇಕುತ್ತ.

ಕೂಡಲೇ ತಾಯಿ ಗೌರಿಗೆ "ಹೌದೇನs ಗೌರೀ ಅವರ ಗಿಡದಾಗಿನ ಹೂ ಹರಿದೀಯಾ? ಎಲ್ಲ್ಯದ ಹೂ?" ಎಂದಳು ಸಿಟ್ಟಿನಿಂದ. ಅವಳ ಮುಖದಲ್ಲೀಗ ನಗು ಮಾಯವಾಗಿ ಕೋಪ ಮೂಡಿತ್ತು.

ತಾಯಿಯ ಸಿಟ್ಟಿನ ನುಡಿಗೆ ಬೆದರಿದ ಗೌರಿಯ ಕಣ್ಣುಗಳಲ್ಲಿ ನೀರು ತುಂಬಿದವು. ಅವಳು ನಿಧಾನವಾಗಿ ತನ್ನ ಮುಷ್ಟಿ ಬಿಚ್ಚಿದಳು. ಒತ್ತಿ ಹಿಡಿದಿದ್ದರಿಂದ ಗುಲಾಬಿ ಪಕಳೆಗಳೆರಡು ಅವಳ ಅಂಗಿಯ ಮೇಲೆ ಉದುರಿದವು. ತಾಯಿ ಆ ಹೂವನ್ನು ತಿರುಗಿ ಸರಸೂನ ಕೈಯಲ್ಲಿ ಕೊಟ್ಟು ಗೌರಿಯ ಕಿವಿ ಹಿಂಡಿದಳು. ಕಿವಿ ಕೆಂಪಗಾಯಿತು. ಗೌರಿಯ ಅಳುವನ್ನು ಕಂಡು ದೂರು ಹೇಳಲು ಬಂದಿದ್ದ ಸರಸೂ ಕನಿಕರದಿಂದ "ಇರಲಿ ಬಿಡ್ರಿ, ಹೊಡಿಬ್ಯಾಡ್ರಿ, ಹೂ ನನಗ ಕೊಟ್ಟಾಳಲ್ಲ" ಎಂದು ಗೆಳತಿಯ ಕೈ ಹಿಡಿದಳು.

"ನೀ ಸುಮ್ಮನಿರು ಸರಸೂ, ಮಂದಿ ಸಾಮಾನು ಮುಟ್ಟಬಾರದು, ಆಶೆ ಮಾಡಬಾರದು ಅಂತ ಎಷ್ಟೋ ಸಾರೆ ಹೇಳೇನಿ ಇಕಿಗೆ. ಆದರೂ ಇವತ್ತ ಮತ್ತ ನಿಮ್ಮ ಹೂ ಹರದಾಳ. ಇವತ್ತ ಛೋಲೋತಂಗ ಬುದ್ಧಿ ಕಲಸ್ತೇನಿ ಇಕೀಗೆ...." ಎಂದವಳೇ ತಾಯಿ ಗೌರಿಯ ಕಪಾಳಿಗೆ ಜೋರಾಗಿ ಏಟು ಕೊಟ್ಟಳು....

***

ಗಂಡ ಕೊಟ್ಟ ಏಟಿನಿಂದಾಗಿ ಗೌರಿಗೆ ತನ್ನ ಬಾಲ್ಯದಲ್ಲಿ ನಡೆದ ಘಟನೆ ತಾನಾಗಿ ಮರುಕಳಿಸಿತು.

ಗಲ್ಲದ ಮೇಲೆ ಕೈಯಾಡಿಸುತ್ತ ಕುಳಿತ ಗೌರಿ ಎಚ್ಚತ್ತಳು. ಎದ್ದು ಕನ್ನಡಿ ಎದುರು ನಿಂತಳು. ಕಣ್ಣಲ್ಲಿಯ ನೀರು ಅವಳ ಬಿಸಿ ಉಸಿರಿಗೇ ಇಂಗಿಹೋಗಿತ್ತು. ಬಿಳಿಯ ಕೆನ್ನೆಯ ಮೇಲೆ ಕೆಂಪಾಗಿ ಮೂರು ಗೆರೆ ಮೂಡಿದ್ದವು. ಗಂಡ ಮಹೇಶ ಕಚೇರಿಗೆ ಹೋಗುವಾಗ ಅವಳಿಗೆ ಕೊಟ್ಟ ಕಾಣಿಕೆ ಅವು.

"ಗೌರಿ ಆ ನೀಲಿ ಕೋಟಿನ ಕಿಸೇದಾಗ ಕರಚೀಫ್ ಅದ ತಾ ಇಲ್ಲೆ"

ಗಂಡನ ಕಿಸೇದಾಗ ಕೈ ಹಾಕಿದ ಗೌರಿಗೆ ಸಿಕ್ಕಿದ್ದು ಅವಳ ಗಂಡನ ಸೋದರತ್ತೆಯ ಮಗಳು ಕಾಶಮ್ಮ ಬರೆಸಿದ್ದ ಪತ್ರ. ಇನ್ನೊಂದು ಕಿಸೆಯಲ್ಲಿದ್ದ ಕರಚೀಫನ್ನು ಗಂಡನ ಕೈಗೆ ಕೊಟ್ಟು ಪತ್ರವನ್ನು ಓದತೊಡಗಿದಳು.

ಅದನ್ನು ಓದುತ್ತಿದ್ದಂತೆ ಅವಳ ಮುಖ ಅರಳಿತು. ಅವಳ ಮೆಲು ನಗೆಯನ್ನು ಕಂಡ ಮಹೇಶ ಸಿಟ್ಟಿನಿಂದ-

"ಅದನ್ನೇನ ಓದ್ತೀ ತಾ ಇಲ್ಲೆ. ಹರಿದು ಕಸದ ಬುಟ್ಟಿಗೆ ಹಾಕ್ತೇನಿ. ದತ್ತಕ ಸುಳ್ಳ ಮಾಡ್ತಾಳಂತ ಅದ್ಹ್ಯಾಂಗ ಮಾಡತಾಳ ನೋಡೇಬಿಡತೇನಿ."

"ಗಂಡ ಸತ್ತಮ್ಯಾಲೆ ಆಕಿ ಅಶೋಕನ್ನ ದತ್ತಕ ತೋಗೋತೀನಿ ಅಂದಾಗೂ ಹೇಳಿದೆ ನಾನು, ದತ್ತಕ ಕೊಡೂದು ಬ್ಯಾಡಾ ಅಂತ. ಆಸ್ತಿ ಆಸೇಕ ನೀವೂ ನನ್ನ ಮಾತು ಕೇಳಲಿಲ್ಲ ಈಗ ನೋಡ್ರಿ, ಆಕಿ ಮನಸ್ಸು ತಿರಿಗೇದ. ತನ್ನ ತಂಗೀ ಮಗನ್ನ ದತ್ತಕ ತಗೊಂಡು ಅಶೋಕನ ಮಗನ್ನ ಮಾಡಿಕೊಂಡದ್ದು ಸುಳ್ಳು ಮಾಡ್ತಾಳಂತ. ನಿಮ್ಮ ಕಬೂಲಿ ಕೇಳ್ಯಾಳ. ಕೊಟ್ಟ ಬಿಡ್ರಿ ಕಬೂಲಿ. ತನಗ ಬೇಕಾದವರಿಗೆ ಕೊಡವಳ್ಯಾಕ ಆಸ್ತಿ."

"ಹೂಂ.; ಭೋಲೋ ಹೇಳ್ತಿ ನೀನು. ಕಬೂಲಿ ನಾ ಯಾಕ ಕೊಡಲಿ, ಕೋರ್ಟಿಗೆ ಹೋಗಲಿ ಬೇಕಾದರ. ಕೈಗೆ ಬರೂ ಆಸ್ತೀ ಬಿಡತಾರೇನ ಯಾರರೆ ? ಅಶೋಕಗ ಆಸ್ತಿ ಸಿಕ್ಕರ ನಮಗೂ ಬಂದಾಂಗ ಅಲ್ಲೇನು? ನಾಲ್ಕೈದು ಮಕ್ಕಳು ನಾವು ಎಲ್ಲರೂ ಸುಖದಿಂದ ಇರತೇವಿ." ರಮಿಸುವ ಧ್ವನಿಯಲ್ಲಿ ಹೇಳಿದ ಮಹೇಶ.

"ಯಾಕ ? ಈಗ ನಿಮಗ ಬರೂ ಪಗಾರದಾಗ ಸುಖದಿಂದ ಇಲ್ಲೇನು ನಾವು ?ಸುಖ ಅನ್ನೋದು ನಾವು ತಿಳಕೊಂಡ ಹಾಂಗ ಇರತದ. ಮನಸ್ಸ್ಯಾನ ಆಸೇಕ ಮಿತೀನ ಇಲ್ಲ. ನಮ್ಮ ಮನಸ್ಸಿಗೆ ಅತೃಪ್ತಿ ಇದ್ದರ ತಿಂಗಳಿಗೆ ಸಾವಿರ ರೂಪಾಯಿ ಬಂದರೂ ಸಾಲೂದಿಲ್ಲ ನಮಗ. ಇದ್ದಷ್ಟರೊಳಗೂ ಸುಖದಿಂದ ಇರಲಿಕ್ಕೆ ಕಲಿಬೇಕು. ಮಂದೀದಕ್ಕ ಯಾಕ ಆಸೆ ಮಾಡಬೇಕು?" ಏರು ಧ್ವನಿಯಲ್ಲಿ ತನ್ನ ಮಾತನ್ನೇ ಸಮರ್ಥಿಸಿದಳು ಗೌರಿ.

"ಸಾಕು ಬಿಡು ನಿನ್ನ ತತ್ವಜ್ಞಾನ. ಅದೂ ವಿಷಯ ತೊಗೊಂಡು ಬಿ.ಎ. ಪಾಸಾಗೇನಿ ನನಗೂ ಬುದ್ಧಿ ಹೇಳತಿಯೇನು?" ಬೇಸರದಿಂದ ಹುಬ್ಬು ಗಂಟಿಕ್ಕಿ ನುಡಿದ ಮಹೇಶ.

"ನೀವು ಬರೇ ಪುಸ್ತಕದಾಗ ತತ್ವಜ್ಞಾನ ಓದಿ ಮರತಬಿಡಬೇಕಂತ ಮಾಡೀರಿ. ಆದರ ಅದರ್ಹಾಂಗೂ ಜೀವನದಾಗ ನಡೀಬೇಕು" ಗೌರಿ ಧೈರ್ಯದಿಂದ ಗಂಡನ ಎದುರಿಗೆ ನಿಂತು ಹೇಳಿದ್ದಳು.

ಮಾತು ಪೂರ್ತಿಯಾಗುವ ಮೊದಲೇ ಕೆನ್ನೆಗೆ ಏಟು ಬಿದ್ದಿತ್ತು.

ಗಂಡ ಹೋಗಿ ಎಷ್ಟೋ ಹೊತ್ತಾಗಿತ್ತು. ತನ್ನ ತಾಯಿಯಿಂದ ನಿಸ್ಪೃಹತೆಯ ಪಾಠ ಕಲಿತಿದ್ದ ಗೌರಿಗೆ ಗಂಡನ ಸ್ವಭಾವದಿಂದ ಮೈಗಿತಂಲೂ ಮನಸ್ಸಿಗೆ ಹೆಚ್ಚು ನೋವಾಗಿತ್ತು. ನಿಟ್ಟುಸಿರು ಬಿಟ್ಟು ಹೊರಗಿನ ಬಾಗಿಲು ಮುಚ್ಚಿ ಒಳಕ್ಕೆ ನಡೆದಳು.

***

ಫಟ್.... ಫೈಲ್ ತಂದು ಗಟ್ಟಿಯಾಗಿ ಅಪ್ಪಳಿಸಿದ ಮಹೇಶ ಮೇಜಿನ ಮೇಲೆ. ಅವನು ಅಪ್ಪಳಿಸಿದ ರಭಸಕ್ಕೆ ಮೇಜಿನ ಮೇಲಿದ್ದ ಮಸಿ ಕುಡಿಕೆಯೆಲ್ಲ ಅಲ್ಲೋಲ ಕಲ್ಲೋಲವೆದ್ದಿತು -ಅವನ ತಲೆಯಲ್ಲಿಯ ವಿಚಾರಗಳ ತಾಕಲಾಟದಂತೆ. ಎರಡು ಹನಿ ಮಸಿ ಚಿಮ್ಮಿತು ಕೂಡ, ಅವನ ನೆನಪಿನ ಬುಗ್ಗೆ ಚಿಮ್ಮಿದಂತೆ....

ತಾನಿನ್ನೂ ಕನ್ನಡ ಮೂರನೆಯ ಕ್ಲಾಸಿನಲ್ಲಿ ಓದುತ್ತಿದ್ದಾಗ ನಡೆದ ಸಂಗತಿಯದು. ಶಾಲೆಯ ಆಟದ ಬಯಲಿನಲ್ಲಿ ಹುಣಸೀಮರದ ಕೆಳಗೆ ತನಗೊಂದು ಹೊಸ ಪೆನ್ಸಿಲ್ ಸಿಕ್ಕಿತು. ಅದಕ್ಕೆ ಹಿಂದೆ ರಬ್ಬರನ್ನು ಹಚ್ಚಿದ್ದರು. ಅದನ್ನು ಕಂಡು ಆಶೆಯಿಂದ ಹಾಗೆಯೇ ಮುಚ್ಚಿಕೊಂಡು ಒಬ್ಬರಿಗೂ ತೋರಿಸದೆ ಮನೆಗೆ ತಂದ. ಆದರೂ ಮನಸ್ಸಿನ ಆತುರ ತಡೆಯಲಾರದೆ ತಾಯಿಗೆ ಅದನ್ನು ತೋರಿಸಿದಾಗ ಅವಳು-

"ಸಿಕ್ಕಿತs? ಛಲೋ ಆತು, ಇಟ್ಟುಕೋ ನೀನs" ಎಂದುಬಿಟ್ಟಳು. ಆ ವಿಷಯಕ್ಕೆ ಹೆಚ್ಚು ಮಹತ್ವವನ್ನೇ ಕೊಡದೆ.

ಆದರೆ ಹಾಗೆಯೇ ಅದನ್ನು ಶಾಲೆಗೆ ಒಯ್ಯುವ ಧೈರ್ಯವಿರಲಿಲ್ಲ ತನಗೆ. ಆ ಗೇಣುದ್ದ ಹೊಸ ಪೆನ್ಸಿಲ್ಲಿನ ಮೇಲಿನ ಹೊಳಪು ಹೋಗುವಂತೆ ಮಾಡಿ ಅಲ್ಲಲ್ಲಿ ಕಚ್ಚು ಹಾಕಿ ಉಳಿದ ಹುಡುಗರು ಗುರುತು ಹಿಡಿಯದಂತೆ ಮಾಡಬೇಕಾದರೆ ತನಗೆ ಸಾಕುಸಾಕಾಗಿತ್ತು. ಆದರೂ ಆ ಪೆನ್ಸಿಲ್ ಕಳೆದುಕೊಂಡ ಹುಡುಗ ಗುರುತಿಸಿಯೇ ಬಿಟ್ಟಿದ್ದ. ಅವನೊಡನೆ ಜಗಳಾಡಿ, ಗುದ್ದಾಡಿ ಅದನ್ನು ತಮ್ಮ ಅಕ್ಕ ಕೊಡಿಸಿದ್ದಾಳೆಂದು ಸುಳ್ಳು ಹೇಳಿ ತನಗೇ ದಕ್ಕಿಸಿಕೊಂಡಿದ್ದ ಆ ಪೆನ್ಸಿಲ್‌ನ್ನು.

ಆದರೆ ಅದನ್ನು ನಂಬದ ಆ ಹುಡುಗ ತಾನು ಕಳವು ಮಾಡಿದ್ದೇ ನಿಜವೆಂದು ನಂಬಿದ್ದು ಅಷ್ಟೇ ಅಲ್ಲ ಶಾಲೆಯ ಹುಡುಗರಿಗೂ ಹೇಳಿಬಿಟ್ಟಿದ್ದ. ಅವರು ಮೇಲಿಂದ ಮೇಲೆ ತನಗೆ ಕಳ್ಳ, ಕಳ್ಳ ಎಂದು ಕೂಗುವದೂ, ಅಣಕಿಸುವುದು, ತನ್ನನ್ನು ಬಿಟ್ಟು ದೂರ ಕೂಡ್ರುವದು, ಜಗಳಾಡುವುದು, ಮಾಡುವುದನ್ನು ನೋಡಿದಾಗ ತನಗೆ ಅಳುವುಕ್ಕಿ ಬರುತ್ತಿತ್ತು. ತಾನು ಯಾಕಾದರೂ ಆಶೆಗೆ ಬಿದ್ದು ಇಂಥಾ ಕಳ್ಳ ಕೆಲಸ ಮಾಡಿದೆನೋ ಎಂದು ಕಳವಳವಾಗುತ್ತಿತ್ತು. ಒಂದೊಂದು ಸಲ ಆ ಹುಡುಗನಿಗೆ ನಿಜ ಹೇಳಿ ಪೆನ್ಸಿಲ್ ಕೊಟ್ಟುಬಿಡಲೇನೋ ಎನ್ನಿಸುತ್ತಿತ್ತು. ಆದರೆ ಅದರಿಂದ ತಾನು ನಿಜವಾಗಿಯೂ ಕಳ್ಳನೆನ್ನುವುದು ಗೊತ್ತಾಗಿ ತನಗೆ ಇನ್ನಷ್ಟು ಛೀಮಾರಿ ಮಾಡುತ್ತಿದ್ದರೆಂದು ಹೆದರಿ ಆ ಕೆಲಸ ಮಾಡಿರಲಿಲ್ಲ; ಕಳ್ಳತನ ಮಾಡುವುದು ಕೆಟ್ಟ ಕೆಲಸ; ಆದಕೆ ಅದನ್ನೊಪ್ಪಿಕೊಂಡು ಪಶ್ಚಾತ್ತಾಪ ಪಡುವುದು ಒಳ್ಳೆಯ ಕೆಲಸ ಎಂದು ತನಗೆ ಮನೆಯಲ್ಲಿ ಯಾರೂ ತಿಳಿಸಿ ಹೇಳಲಿಲ್ಲ. ಯಾರು ಹೇಳಬೇಕು? ಅಪ್ಪನಿಗೆ ಹೊರಗಿನ ಕೆಲಸ, ಹೊಲದ ಕೆಲಸಗಳೇ ಬಹಳ. ಅವ್ವನಿಗಂತೂ ಮನೆಗೆಲಸಗಳಲ್ಲಿ ಬಿಡುವೇ ಸಿಕ್ಕುತ್ತಿರಲಿಲ್ಲ. ತಾನಂತೂ ಅಶಿಕ್ಷಿತಳು, ಮಗ ಶಾಲೆಗೆ ಹೋಗುತ್ತಾನೆ ಎನ್ನುವುದೊಂದೇ ಅಭಿಮಾನ ಅವಳಿಗೆ. ಮಕ್ಕಳನ್ನು ತಿದ್ದಬೇಕು ಎನ್ನುವ ಬುದ್ಧಿಯೇ ಅವಳದಲ್ಲ. ಅದಕ್ಕೇ ಮನಸ್ಸು ಅಳುಕುತ್ತಿದ್ದರೂ ಆಮೇಲೆ ಪಶ್ಚಾತ್ತಾಪವಾಗುತ್ತಿದ್ದರೂ, ದುರಾಶೆಗೆ ಬಿದ್ದು ಬೇರೆಯವರ ಪುಸ್ತಕ, ಪೆನ್ಸಿಲ್, ರಬ್ಬರು ಕದ್ದು ತನ್ನದೇ ಎಂದು ಸಾಧಿಸಿಕೊಂಡೆ. ಹಾಗೆಯೇ ಪರೀಕ್ಷೆಯ ಉತ್ತರಗಳನ್ನೂ ಕಾಫಿ ಮಾಡಿ ತೇರ್ಗಡೆ ಹೊಂದಿ ನೌಕರಿ ಪಡೆದೆ.

ಅವನಿಗರಿಯದಂತೆಯೇ ಮಹೇಶನ ಕೈ ಪೆನ್ ಎತ್ತಿಕೊಂಡು ಬ್ಲಾಟಿಂಗಿನ ಮೇಲೆ ಗೀಚುತ್ತಿತ್ತು.

"ಏನ್ರೀ ಮಹೇಶರಾವ್ ಏಳ್ರೀ ಎರಡೂವರಿ ಆತು; ಚಹಾ ಕುಡಿದು ಬರೂಣು ಬರ್ರೀ" ಮಗ್ಗಲ ಮೇಜಿನ ಶಂಕರಪ್ಪ ಕೇಳಿದರು.

ವಿಚಾರ ತಂದ್ರಿಯಿಂದ ಎಚ್ಚತ್ತ ಮಹೇಶ "ನಾ ಇವತ್ತ ಒಲ್ಲೆ, ನೀವs ಹೋಗಿಬರ್ರೀ" ಎಂದ.

"ಯಾಕ್ರೀ, ಸಾಹೇಬರ ಹತ್ತರ ಫೈಲ್ ತೊಗೊಂಡು ಹೋಗಿದ್ದಿರೆಲ್ಲಾ, ಏನರೇ ಅಂದರೇನು ? ಬಿಡ್ರೀ ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೋಬಾರದು. ನಡೀರಿ ಹೋಗೂಣು" ಶಂಕರಪ್ಪ ಒತ್ತಾಯ ಮಾಡಿದರು.

"ಪ್ಲೀಜ, ನನಗ ಬರೂ ಮನಸ್ಸಿಲ್ಲಾ, ಜುಲಮಿ ಮಾಡಬ್ಯಾಡ್ರಿ"ಎಂದ ಮಹೇಶ.

ಹೋಗುತ್ತಿದ್ದ ಶಂಕ್ರಪ್ಪನನ್ನು ನೋಡುತ್ತ ತನ್ನಷ್ಟಕ್ಕೆ "ಇವತ್ತ ಯಾವುದೋ ಭೋಲೋ ಆಸಾಮಿ ಹಿಡಿದಂಗ ಕಾಣಸ್ತದ ಶಂಕರಪ್ಪನವರು, ರೊಕ್ಕಾ ಭಾಳ ಹೊಡಿದಿರಬೇಕು" ಎಂದುಕೊಂಡು ನಸುನಕ್ಕ.

ಆದರ ಈಗ ಒಂದೆರಡು ವಾರದ ಹಿಂದೆ ಅವರು ತನ್ನ ಜೋಡಿ ಚಹಾದಂಗಡಿಗೆ ಬಂದಾಗ ಮುಖ ಸಣ್ಣದು ಮಾಡಿಕೊಂಡು ಹೇಳತಿದ್ದರು. "ನಮ್ಮ ಮನೀಯವರಿಗೆ ಕ್ಷಯಾ ಆಗೇದಂತ. ಡಾಕ್ಟರರು ಹೇಳಿದರು. ಸ್ಯಾನಿಟೋರಿಯಮ್‌ದಾಗ ಇಟ್ಟೇನಿ" ಅಂತ.

ನನಗ ಪಾಪ ಅನ್ನಿಸಿತು. ಗೌರಿ ಮುಂದ ಇವರ ಸುದ್ದೀ ಹೇಳಿದೆ. ಅದಕ್ಕ ಅವಳು "ಲಂಚದ ರೊಕ್ಕ ಅಲ್ಲೆ ಡಾಕ್ಟರರಿಗೆ ಖರ್ಚಾಗಿ ಹೋಗತದ. ಇಷ್ಟು ತಿಳಿಯೂದಿಲ್ಲೇನು?" ಅಂದಳು. ಹೌದ್ಹೌದು ಅವಳು ಅನ್ನೂದು ನಿಜ ಇರಬೇಕು. ಯಾಕಂದರ.....

ಗೌರಿ ಮೊನ್ನೆ ತನ್ನ ಕಿಸೆಗೆ ಕೈ ಹಾಕಿದಾಗ ಹತ್ತರ ಮೂರು ನೋಟು ತೆಗೆದಳು. ಅದನ್ನು ನೋಡಿ ಅವಳ ಮುಖಾ ಅರಳ್ತದ ಅಂತ ಮಾಡಿದ್ದೆ. ಎರಡು ತಿಂಗಳಿಂದ ಅವಳಿಗೊಂದು ಒಳ್ಳೆಯ ಪತ್ತಲ, ಪೋಲ್ಕಾದ ಅರಿವಿ ತೊಗೋಬೇಕಾಗಿತ್ತು, ಆದರ ಹೆಚ್ಚಿನ ಖರ್ಚಿನಿಂದ ರೊಕ್ಕ ಉಳೀತಿದ್ದಿಲ್ಲಾ. ಅದಕ್ಕs ಅವಳಿಗೆ "ಗೌರೀ ಇವತ್ತ ಸಂಜೀ ಮುಂದ ಪ್ಯಾಟ್ಯಾಗ ಹೋಗಿ ನಿನಗ ಪತ್ತಲ ಪೋಲ್ಕಾದ ಅರಿವಿ ತೊಗೊಳ್ಳೂಣು" ಅಂತ ಅಂದೆ. ಆದರ ಅವಳು ನನ್ನ ದಿಟ್ಟಿಸಿ ನೋಡಿ, "ಅಲ್ರೀ ಈ ತಿಂಗಳು ಎಲ್ಲಾರದು ಬಿಲ್ಲು ಕೊಟ್ಟು ೧೦-೧೫ ರೂಪಾಯಿ ಉಳಿದಾವು ಅಂತಿದ್ರೀ. ಬ್ರೆಡ್ಡು, ಹಣ್ಣು, ಕಾಯಿಪಲ್ಲೆ ಅಂತ್ಹೇಳಿ ಅವೂ ಖರ್ಚಾಗಿರಬೇಕು. ಇವತ್ತ ೨೭ನೆಯ ತಾರೀಖು; ಈ ಮೂವತ್ತು ರೂಪಾಯ ಎಲ್ಲಿಂದ ಬಂದವು?" ಅಂತ ಕೇಳಿದಳು.

ನಾನು ಸರಳs ಹೇಳಿಬಿಟ್ಟೆ, "ಇವತ್ತ ಒಂದ ಅರ್ಜಂಟ ಕಾಗದಾ ಸಾಹೇಬರ ಸಹೀಗೆ ಕಳಿಸಿಬಿಟ್ಟೆ. ಆ ರೈತ ಹಿಗ್ಗಿ ನನಗ ೩೦ ರೂಪಾಯಿ ಕೊಟ್ಟಬಿಟ್ಟಾ" ಅಂತ.

ಅದಕ್ಕ ಅವಳು ಮುಖಾ ಸಣ್ಣದು ಮಾಡಿ, "ನೀವು ಕೆಲಸಾ ಮಾಡಿದರ ಸರಕಾರದವರು ನಿಮಗೆ ಸಂಬಳಾ ಕೊಡತಾರ. ಆದರ ಆಶಾಕ ಬಿದ್ದು ನೀವು ಆ ರೈತನ ಕಡೀಂದ ರೊಕ್ಕಾ ಇಸಕೋ ಬಾರದಾಗಿತ್ತು. ಪಾsಪ! ಅವರಿಗೆ ತ್ರಾಸೆಷ್ಟೋ, ಮಳೀ ಹ್ಯಾಂಗೋ, ಬೆಳಿ ಹ್ಯಾಂಗೋ. ಮಕ್ಕಳಿಗೆ ಮೈತುಂಬ ಅರಿವಿ ಇರೂದಿಲ್ಲ. ಹೊಟ್ಟಿ ತುಂಬ ಅನ್ನ ಇರೂದಿಲ್ಲ. ಆದರೂ ತನ್ನ ಕೆಲಸಾ ಲಗೂ ಆಗಲಿ ಅನ್ನೂ ಆಸೇಕ ನಿಮ್ಮಂಥಾವರಿಗೆ ರೊಕ್ಕ ಕೊಡತಾರ ಅವರು. ಆದರ ಒಳಗ ಅವರ ಜೀವ ಎಷ್ಟ ಮರಗತದsನೋ; ಆ ಮರುಗ ನಮಗ ಹತ್ತದs ಬಿಡೂದಿಲ್ಲ. ನನಗ ಇಂಥಾ ರೊಕ್ಕದಿಂದ ಪತ್ತಲಾ, ಅರಿವಿ ಏನೂ ಬ್ಯಾಡಾ, ನಾ ಪ್ಯಾಟ್ಯಾಗ ಬರೂದಿಲ್ಲ"ಅಂತ ಮಾರೀಮ್ಯಾಲೆ ಹೊಡದ್ಹಾಂಗ ಹೇಳಿಬಿಟ್ಟಳು.

ನನಗೂ ನಾ ಮಾಡಿದ್ದು ತಪ್ಪಾತೇನೋ ಅಂತ ಅನಿಸಿತು. ಆದರ ಕೆಲಸ ಮಿಂಚಿಹೋಗಿತ್ತು. ತೊಗೊಂಡ ರೊಕ್ಕ ತಿರುಗಿ ಕೊಡಲಿಕ್ಕೆ ಬರೂ ಹಾಂಗ ಇದ್ದಿಲ್ಲಾ. ಹಾಗೇ ಇಟಗೊಂಡಬಿಟ್ಟೆ. ಮರುದಿನಾನs ಎರಡನೆ ಮಗಳು ಅನುರಾಧಾಗ ಜ್ವರಾ ಬಂದವು. ಡಾಕ್ಟರರು ಟೈಫಾಯ್ಡ್ ಅಂತ ಹೇಳಿ ಬಿಟ್ಟರು. ಅವಳ ಆರೈಕೆಗೆ ಆ ಮೂವತ್ತು ರೂಪಾಯಿ ಅಲ್ಲದs ಪಗಾರದಾಗಿನ ನಾಲ್ವತ್ತು ರೂಪಾಯಿನೂ ಕೈಬಿಟ್ಟವು. ಆ ರೈತನ ಮರಗs ಹತ್ತಿರಬೇಕು ನಮಗ. ಗೌರಿ ಒಂದೊಂದು ಮಾತು ಎಷ್ಟು ಖರೇ ಹೇಳ್ತಾಳ ಅಂತೀರಿ....

ಸಾಹೇಬರ ಕೋಣೆಯಿಂದ ಗಂಟೆಯ ಸಪ್ಪಳ ಕೇಳಿ ಜಿಗಿದು ಬಿದ್ದ ಮಹೇಶ ವಾಸ್ತವ ಲೋಕಕ್ಕೆ ಬಂದು ಪೆನ್ನು ಕಾಗದದ ಮೇಲೆ ಓಡಿಸಿದ. ಮನೆಯಲ್ಲಿ ತಾವು ಹೊರಡುವಾಗ ನಡೆದ ಘಟನೆಯ ನೆನಪಾಗಿ ಮನಸ್ಸಿಗೆ ಕಳವಳವಾಯಿತು. ಬಂದಾಗಿನಿಂದ ವಿಚಾರಮಾಡಿ ಬೇಸತ್ತ ತಲೆ ಸಿಡಿಯತೊಡಗಿತು. ಕೈಯಲ್ಲಿಯ ಕೆಲಸ ಮುಂದೆ ಸಾಗದಾಯಿತು. ಸಾಹೇಬರ ಕೋಣೆಯಿಂದ ಹೊರಬರುತ್ತಿದ್ದ ಹೊಟೆಲ್ ಮಾಣಿಗೆ ತನಗಾಗಿ ಚಹ ತರಲು ಹೇಳಿದ.

ಸಾಹೇಬರ ಕೋಣೆಯಲ್ಲಿ ಫೋನಿನ ಗಂಟೆ ಸಪ್ಪಳವಾಯಿತು. ಸಾಹೇಬರು ಮಾತನಾಡಿದ ಅಸ್ಪಷ್ಟ ಧ್ವನಿಯೂ ಕೇಳಿತು. ಮುಂದೆ ಎದು ನಿಮಿಷಗಳಲ್ಲಿಯೆ ಸಾಹೇಬರು ಕಾರಿನಲ್ಲಿ ಮನೆಗೆ ಹೊರಟರು.

ಕೈಗೆ ಪೆನ್ನು ಎತ್ತಿಕೊಳ್ಳುತ್ತಿದ್ದಂತೆ "ಛೇ ಛೇ ಇಂಥಾ ಪ್ರಸಂಗ ಯಾರಿಗೂ ಬರಬಾರದು ನೋಡ್ರಿ". ಸಾಹೇಬರ ಪರ್ಸನಲ್ ಕ್ಲಾರ್ಕ ಕುಲಕರ್ಣಿ ತಗ್ಗು ಧ್ವನಿಯಲ್ಲಿ ಮಹೇಶನಿಗೆ ಹೇಳಿದ.

"ಯಾಕ ? ಯಾರಿಗೆ ಏನಾಯಿತು.?" ಇನ್ನೊಬ್ಬ ಕ್ಲಾರ್ಕ ಪಾಟೀಲನೂ ಕಿವಿಕೊಟ್ಟ.

"ಈಗ ಎರಡ ವರ್ಷದ ಹಿಂದ ಸಾಹೇಬರು ತಮ್ಮ ಮಗಳ ಮದಿವಿ ಮಾಡಿದ್ರಲ್ಲಾ. ಹುಡುಕೀ ಹುಡುಕೀ ಜಮೀನ್ದಾರರು, ಸುಸಂಸ್ಕೃತರು ಸುರೂಪಿ ಅಂತ ಹೇಳಿ ಕೇಳಿದಷ್ಟು ವರದಕ್ಷಿಣೆ ಕೊಟ್ಟು ಮಗಳ, ಕೊಟ್ಟರಲ್ಲ."

"ಹೌದೌದು ನಾನೂ ಮದವಿಗೆ ಹೋಗಿದ್ದೆ. ವರ ಒಳ್ಳೇ ಜಂಟಲಮೆನ್ ಇದ್ದಾಂಗ ಇದ್ದನಲ್ಲ" ಮಹೇಶ ಆಸ್ಥೆಯಿಂದ ಕೇಳಿದ.

"ಹುಂ ಆ ಜಂಟಲ್‌ಮನ್‌ನ ಬಣ್ಣಾ ಈಗ ತಿಳಿದsದ. ಅಂವಾ ಆ ಆಸ್ತೀಗೆ ದತ್ತsಕ ಹೋದಾವಾ. ಕಷ್ಟಪಡದsನ ಕೈಗೆ ಸಂಪತ್ತು ಬಂತು. ಕುಡಿಯುವದು. ಜೂಜ ಆಡೂದು ಎಲ್ಲಾ ಕಲಿತಾನಂತ. ಊರೊಳಗಿದ್ದು ಆಸ್ತೀ ಮೇಲ್ವಿಚಾರಣೆ ಮಾಡೂದು ಬಿಟ್ಟು ಹೆಂಡ್ತೀನ ಆ ಹಳ್ಳೀಯೊಳಗs ಕೊಳೀಲಿಕ್ಕೆ ಬಿಟ್ಟು ತಾನು ಬೆಂಗಳೂರಾಗ ಇರತಾನಂತ ಮಜಾ ಮಾಡಿಕೋತ. ರೊಕ್ಕ ಬೇಕಾದಾಗ ಅಷ್ಟು ಊರಿಗೆ ಬರೂದು, ಹೆಂಡತಿ ಬುದ್ಧೀ ಹೇಳಲಿಕ್ಕೆ ಬಂದರ ಅವಳನ್ನ ಹೊಡಿಯೂದು ತಾನು ರೊಕ್ಕಾ ತೊಗೊಂಡು ಹೋಗಿಬಿಡೂದು. ಹಿಂಗs ಮಾಡ್ತಿದ್ದನಂತ...."

"ಸಾಹೇಬರಿಗೆ ಗೊತ್ತಾಗಿದ್ದಿಲ್ಲೇನು ಈ ಸುದ್ದಿ ?" ನಡುವೆಯೇ ಬಾಯಿ ಹಾಕಿದ ಪಾಟೀಲ.

"ಅದನ್ನs ಹೇಳ್ತೀನಿ ಕೇಳ್ರಿ. ಅವಳಿಗೆ ಮೈಯಾಗ ಆರಾಮ ಇಲ್ಲದಿದ್ರೂ ಔಷಧ ಕೊಡಿಸಲಿಲ್ಲಂತ, ಆ ಮೇಲೆ ತಂದೆಗೆ ಪತ್ರಾ ಬರದಳಂತ. ಅವರs ಹೋಗಿ ಮೊನ್ನೆ ಆಕೀನ್ನ ಕರಕೊಂಡು ಬಂದಾರ. ಕಳಿಸಲಿಕ್ಕೂ ತಯಾರ ಇದ್ದಿದ್ದಿಲ್ಲ ಅಂತ . ಪಾಪs ಹುಡುಗೀ ಭಾಳ ಸೊರಗ್ಯಾಳಂತ ನಮ್ಮ ಮನೆಯವರು ಹೇಳತಿದ್ದರು. ಇವತ್ತ ಇಲ್ಲಿಗೆ ಬಂದು ಬಿಟ್ಟಾನಂತ ಸುದ್ದಿ ಬಂತು. ಅದಕ್ಕs ಸಾಹೇಬರು ಗಾಬರ್‍ಯಾಗಿ ಮನೀಗೆ ಹೋದರು" ಕುಲಕರ್ಣಿ ನಿಟ್ಟುಸಿರು ಬಿಟ್ಟ.

"ನೋಡ್ರಿ Mr. ಕುಲಕರ್ಣಿ ನಾ ಒಂದ ಮಾತ ಹೇಳತೇನಿ, ಹೆಣ್ಣು ಕೊಡಬೇಕಾದರ ಭಾಳ ವಿಚಾರ ಮಾಡಬೇಕಾಗತದ. ಕಷ್ಟ ಪಡದನ ಕೈಗೆ ಆಸ್ತಿ ಸಿಕ್ಕರಂತೂ ಗಂಡ ಮಕ್ಕಳು ಲಂಗು ಲಗಾಮಿಲ್ಲದs ಹಾಳ ಮಾಡಲಿಕ್ಕೆ ಕಲೀತಾರ. ಅದರಾಗ ಆ ದತ್ತಕ ತಗೊಂಡ ಹಿರಿಯರು ಜಿಪುಣತನ ಮಾಡಿ, ಬಡ್ಡಿಗೆ ಬಡ್ಡಿ ಕೂಡಿಸಿ ಚಕ್ರಬಡ್ಡಿ ತೊಗೊಂಡು ಬಡವರ ಜೀವಾ ಅರೆದಿದ್ದರಂತೂ ದತ್ತಕ ಮಕ್ಕಳು ಆ ಆಸ್ತಿಯೆಲ್ಲಾ ಖಾತ್ರಿಯಾಗಿ ಹಾಳಾಮಾಡ್ತಾರಂತ ನನ್ನ ಅಭಿಪ್ರಾಯ ಮತ್ತು ಇಂಥಾವು ಎಷ್ಟೋ ಉದಾಹರಣೆ ನೋಡೇನಿ." "ಛೇ ಛೇ ಸಾಹೇಬರು ಆಸ್ತೀ ಆಸೇಕ ಬಿದ್ದು ಹೆಚ್ಚು ವಿಚಾರನs ಮಾಡಲಿಲ್ಲ ಕಾಣತದ, ಪಾಪ ಅಲ್ಲರೀ" ಎಂದು ಪಾಟೀಲ ಮರುಕದಿಂದ ಹೇಳಿದ.

"ಅಗದೀ ನೀವು ಹೇಳಿದ್ಹಾಂಗs ಆಗೇದ ನೋಡರಿ. ಈಗ ಆ ಹುಡುಗಿ ಒಂದs ಪಾಪ ಅಲ್ಲಾ. ಅಂವಾ ತಂದೀನ್ನ, ಹಡೆದ ತಂದಿನ್ನ ಇಬ್ಬರನ್ನೂ ಮನೀಬಿಟ್ಟು ಹೊರಗ ಹಾಕ್ಯಾನಂತ" ಎಂದ ಕುಲಕರ್ಣಿ.

ಮಹೇಶನ ತಲೆ ಗಿಮಿ ಗಿಮಿ ತಿರುಗಿದಂತಾಯಿತು. ಗಟ್ಟಿಯಾಗಿ ತಲೆ ಹಿಡಿದುಕೊಂಡ. ಕಣ್ಣೀರು ತುಂಬಿಕೊಡು ಗೌರಿ ಮುಂದೆ ಬಂದು, "ನಮ್ಮ ಅಶೋಕ ನಮಗs ಇರಲಿ, ಆ ಆಸ್ತಿಯಿಂದ ನಾಳೆ ಅಂವಾ ದುರ್ವ್ಯಸನಿ ಆದರ ಅವಂದು ನಮ್ಮದು ಇಬ್ಬರ ಜೀವನಾನೂ ಹಾಳು" ಎಂದು ಬಿಕ್ಕಿದಂತಾಯಿತು.

"ಅಶೋಕ.... ನನ್ನ ಅಶೋಕ.... ಹೌದು ಗೌರೀ ಹೌದು" ಎನ್ನುತ್ತ ಮಹೇಶ ಗಟ್ಟಿಯಾಗಿ ತಲೆ ಹಿಡಿಕೊಂಡ.

"ಯಾಕ್ರೀ ಮಹೇಶ ಏನಾತು? ತಲೀ ನೋಯುತ್ತದೇನು? ಮುಂಜಾನೆಯಿಂದ ಯಾಕೋ ಸಪ್ಪಗsಅದೀರಿ ಐದು ಹೊಡೀಲಿಕ್ಕೆ ಬಂತು. ಮನೀಗೆ ಹೋಗಿಬಿಡ್ರಿ" ಪಾಟೀಲ ಸಲಹೆಯಿತ್ತ.

ಗಂಡ ಕಚೇರಿಯಿಂದ ಯಾವಾಗ ಬರುವನೋ ಎಂದು ಕಾಯುತ್ತಿದ್ದ ಗೌರಿ ದಿನಕ್ಕಿಂತಲೂ ಬೇಗನೇ ಮನೆಗೆ ಬಂದ ಗಂಡನನ್ನು ಕಂಡು ಸಂತೋಷಪಟ್ಟಳು.

ಮುಂಜಾನೆಯಿಂದಲೂ ಮಹೇಶನ ಮನಸ್ಸಿನಲ್ಲಿ ನಡೆಯುತ್ತಿದ್ದ ಯುದ್ಧ ಈಗ ನಿಂತಿತ್ತು. ಮನಸ್ಸು ಒಂದು ಸ್ಥಿಮಿತಕ್ಕೆ ಬಂದಿತ್ತು. ಹೆಂಡತಿಯನ್ನು ಕಂಡೊಡನೆ ಅವನೂ ಮೆಲುನಗೆ ನಕ್ಕ.

"ಗೌರಿ ಪೆಟ್ಟು ಭಾಳ ಆಯ್ತೇನು?" ಎಂದು ಹೆಂಡತಿಯ ಕೆನ್ನೆಯತ್ತ ನೋಡುತ್ತ ಕನಿಕರದಿಂದ ಕೇಳಿದ.

"ಅದೇನಿಲ್ಲ ಬಿಡ್ರಿ ಈಗ. ನಾ ಒಂದು ಬೇರೆ ಸುದ್ದೀ ಹೇಳತೇನಿ ನಿಮಗ. ಅಶೋಕ ಅವರ ಸಾಲೀ ಗ್ರೌಂಡಿನ್ಯಾಗ ಥೋಲೋ ಪಾರ್ಕರ ಪೆನ್ ಸಿಕ್ಕಿತ್ತಂತ. ಅಂವಾ ಅದನ್ನೊಯ್ದು ಮಾಸ್ತರ ಕೈಯಾಗ ಕೊಟ್ಟನಂತ, ಹೆಡ್ ಮಾಸ್ತರರು ಎಲ್ಲಾ ಹುಡುಗರನ್ನ ಕೂಡಿಸಿ ಎಲ್ಲಾರೂ ಅಶೋಕನಂತೆ ಪ್ರಾಮಾಣಿಕತನ ಕಲೀಬೇಕು ಅಂತ ಹೇಳಿ ಪುಸ್ತಕಾ ಬಹುಮಾನ ಕೊಟ್ಟರಂತ. ಪೆನ್ನು ಕಳಕೊಂಡ ಹುಡುಗ ಬಂದು ಇವನ ಗುರ್ತಾ ಮಾಡಿಕೊಂಡು ನಾಳೆ ತಮ್ಮ ಮನೀಗೆ ಚಹಾಕ್ಕ ಕರದಾನಂತ" ಗೌರಿ ಒಂದೇ ಉಸುರಿನಲ್ಲಿ ಎಲ್ಲವನ್ನೂ ಹೇಳಿ ಮುಗಿಸಿದಳು. ನಗು ಅವಳ ಮುಖದ ಮೇಲೆ ನಲಿಯುತ್ತಿತ್ತು.

"ನಿನ್ನ ಶಿಕ್ಷಣಾ ಅಂದಮ್ಯಾಲೆ ಕೇಳಬೇಕs" ಎನ್ನುತ್ತಿದ್ದ ಮಹೇಶನಿಗೆ ತಾನು ಚಿಕ್ಕವನಿದ್ದಾಗ ಸಾಲೆಯಲ್ಲಿ ಪೆನ್ಸಿಲ್ ಕದ್ದದ್ದು ನೆನಪಾಗಿ ಖಿನ್ನನಾದ.

"ಯಾಕ್ರೀ ಸಿಟ್ಟು ಬಂದsದೇನು? ಮುಂಜಾನಿ ಮಾತು ಇನ್ನೂ ಮರತಿಲ್ಲೇನು ನೀವು? ನನಗ ರೊಕ್ಕ, ಆಸ್ತಿ ಎಲ್ಲಾದಕಿಂತ ನನ್ನ ಮಕ್ಕಳು ಸತ್ಯವಂತರೂ, ಪ್ರಾಮಾಣಿಕರೂ ಆಗಬೇಕು ಅಂತ ಆಸೆ. ಅಷ್ಟಾದರ ಸಾಕು ನನಗಿನ್ನೇನೂ ಬ್ಯಾಡ" ಗೌರಿ ಆಸೆಯಿಂದ ಗಂಡನ ಮುಖದತ್ತ ನೋಡಿದಳು.

"ನನಗ ಸಿಟ್ಟು ಬಂದಿಲ್ಲ. ಮುಂಜಾನಿಯಿಂದ ಇದs ಮಾತು ವಿಚಾರ ಮಾಡಿದೆ. ನೀ ಹೇಳೂದು ಒಳ್ಳೇದs ಅಂತ ಅನ್ನಿಸಿತು ನಗಗ. ನಾನೂ ಅದs ನಿರ್ಧಾರಕ್ಕs ಬಂದೇನಿ. ನೀ ಬ್ಯಾರೇ ದತ್ತಕ ತೊಗೋ, ನಮ್ಮ ಅಶೋಕ ನಮಗಿರಲಿ ಅಂತ ನಾಳೇ ಪತ್ರಾ ಬರೀತೇನಿ ಕಾಶಮ್ಮಗ" ಎನ್ನುತ್ತ ಮಹೇಶ ಅಶೋಕನನ್ನು ಹತ್ತಿರ ಕರೆದು ಬೆನ್ನು ಮೇಲೆ ಕೈಯಾಡಿಸಿದ.

ಗೌರಿಯ ಮುಖ ಇಷ್ಟಗಲ ಅರಳಿತು. ಕೆನ್ನೆಯ ಮೇಲೆ ಕೈಯಾಡಿಸಿಕೊಂಡು ನಸುನಕ್ಕಳಾಕೆ.

***

■■

# ನೀವೂ ಒಬ್ಬರೆ?

"ಸಾಧನಾs ಏ ಸಾಧನಾsss"

"ಯಾಕ್ರೀ ? ಏನ ಕೆಲಸದ?'

"ಕೆಲಸ ಏನೂ ಇಲ್ಲಾ, ಆದರ ಇವತ್ತ ಸಂಜಿಮುಂದ ಪ್ರಭಾಕರ ರಾಯರ ಮನೀಗೆ ಹೋಗೂದದ. ನೆನಪದsನೋ ಇಲ್ಲೋ ಇಂತ ಕೇಳಿದೆ."

"ಇವತ್ತ ನಾನು ಎಲ್ಲ್ಯೂ ಹೊರಗ ಬರೂದಿಲ್ಲ."

"ಯಾಕ?"

"ಯಾಕೇನು? ನನಗ ಇವತ್ತು ಹೊರಗ ಹೋಗೂ ಹಾಂಗ ಅನಿಸಿಲ್ಲ. ನಾ ಮನ್ಯಾಗ ಇರತೀನಿ."

"ಇವತ್ತ ನಾಲ್ಕೂವರೀಗೆ ನಾವಿಬ್ಬರೂ ನಿಮ್ಮ ಮನೀಗೆ ಬರತೀವಿ ಅಂತ ಅವರಿಗೆ ನಿನ್ನೆ ಹೇಳಿದ್ನೆಲ್ಲ ನಾನು."

"ನಿಮಗ ಯಾರ ಹೇಳಿದ್ರು ಹಾಂಗ ಹೇಳ್ರಿss ಅಂತ ? ನಾವಿಬ್ರೂ ಬರ್ತೀವಿ ಅಂತ ಯಾಕ ಹೇಳಿದಿರಿ? ನನ್ನ ಕೇಳಿದ್ರೇನು ಹೋಗೂಣೇನೂ ಅಂತ? ನಾ ಏನ ಬರೂದಿಲ್ಲ ನೋಡ್ರಿ. ಅವರ ಮನೀಗೆ ಇವತ್ತ, ನೀವು ಒಬ್ಬರs ಹೋಗ್ತಿದ್ದರ ಹೋಗ್ರಿ. ನಾನು ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ."

"ಹೊರಗೆ ಹೋಗೂ ಮನಸ್ಸಿಲ್ಲ ಅಂತೀದಿ, ಮತ್ತ ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ ಅಂತೀದಿ. ಯಾಕ ? ನನ್ನ ಕೂಡ ಇವತ್ತ ಅವರ ಮನೀಗೆ ಬರಲಿಕ್ಕೇ ಬೇಕು ನೀನು."

"ನಾ ಬರೂದಿಲ್ಲ ಅಂದರ ಬರೂದಿಲ್ಲ. ನನಗ ಮನಸ್ಸಿಲ್ಲದ ಕಡೆ ಬರಲಿಕ್ಕೇ ಬೇಕು ಅಂತ ಒತ್ತಾಯ ಯಾಕ ಮಾಡ್ತೀರಿ ನೀವು?"

ಸಾಧನಾಳ ಧ್ವನಿ ತಾರಸ್ವರಕ್ಕೇರಿತ್ತು; ಮುಂದೆ ಅವಳ ಗಂಡ ಚಂದ್ರಕಾಂತನ ಧ್ವನಿ ಕೇಳಿಸಲೇ ಇಲ್ಲ.

ತಲ್ಲೀನನಾಗಿ ಓದಲು ಕುಳಿತಿದ್ದ ವಿಶ್ವನಾಥನ ಅಭ್ಯಾಸಕ್ಕೆ ನೆರೆಮನೆಯ ಗಂಡಹೆಂಡಿರ ವಾಗ್ವಾದದಿಂದ ಭಂಗ ಬಂದಿತ್ತು. ಈಗ ನಡೆಯುವದು ಇಂದೇ ಹೊಸ ಮಾತೇನಲ್ಲ. ನಿತ್ಯವೂ ಇದ್ದದ್ದೇ. ತನ್ನ ಅಭ್ಯಾಸದ ಕೋಣೆಯಲ್ಲಿ ಕುಳಿತು ದಿನಕ್ಕೊಮ್ಮೆಯಾದರೂ ಅವರ ಜಗಳ.... ಅಲ್ಲಲ್ಲ. ಸಂಭಾಷಣೆ ಕೇಳುವದು ವಿಶ್ವನಾಥನ ದಿನಚರಿಯ ಒಂದು ಭಾಗವಾಗಿತ್ತು.

ಗಂಡ ಹೇಳಿದ ಒಂದು ಮಾತಿಗೂ 'ಹೂಂ' ಎನ್ನುವದಿಲ್ಲ ಆ ಸಾಧನಾ. ಎಲ್ಲಕ್ಕೂ ವಿರೋಧವೇ. ಮನೆಗೆಲಸ ಮಾಡಿಕೊಂಡು ಮನೆಯಲ್ಲಿರುವದೆಂದರೆ ಅವಳಿಗೆ ಬೇಡ. ದಿನಕ್ಕೊಂದು ಚಂದದ ಸೀರೆ ಉಟ್ಟು, ತರತರದ ಮುಡಿ ಕಟ್ಟಿ ಗಂಡನೊಡನೆ ಹೊರಗೆ ಹೋಗುವದು ಬೇಕು. ಹೋದಲ್ಲಿಯೇ ಹೊಟ್ಟೆತುಂಬ ಉಪಾಹಾರ ಮಾಡಿ ಬಂದರೆ ತೀರಿತು. ಮನೆಗೆ ಬಂದ ಮೇಲೆ ಅಡಿಗೆ ಮನೆಗೆ ಕಾಲಿಡುವದೂ ತಪ್ಪುತ್ತದೆ ಎಂದು ಅವಳ ಎಣಿಕೆ. ಗಂಡ ಏನು ಮಾಡಿದರೂ ತನ್ನ ಅನುಮತಿಯಿಂದಲೇ ಮಾಡಬೇಕು ಎನ್ನುವ ಹಟ ಅವಳದು. ಆ ಚಂದ್ರಕಾಂತನಿಗಾದರೂ ಹೆಂಡತಿಯ ಮಾತಿಗೆ ಕಿವಿಗೊಡದಿರುವದು ಸಾಧ್ಯವೇ ಇಲ್ಲ. ಇಂದು ನಾನು ಅಡಿಗೆ ಮಾಡಲಾರೆ ಎಂದು ಅವಳೆಂದರೆ ಸಾಕು, ಖಾನಾವಳಿಯಿಂದ ಎರಡು ತಾಟು ತರಿಸಿದನೇ! ಅವಳನ್ನು ಸಿಟ್ಟಿಗೆಬ್ಬಿಸುವದೂ, ವಾದ ಹಾಕುವದೂ ಅವನಿಗೂ

ಬಹಳ ಪ್ರೀತಿ ಎಂದು ಕಾಣುತ್ತದೆ. ಒಂದೊಂದು ದಿನ ಅವಳು ಸುಮ್ಮನಿದ್ದರೂ ತಾನೇ ಮುಂದಾಗಿ ಜಗಳ ತೆಗೆಯುತ್ತಾನೆ. ತಮ್ಮಿಬ್ಬರ ಮನೆಗಳ ನಡುವೆ ಒಂದೇ ಗೋಡೆ. ಆದ್ದರಿಂದ ಅವನ ಮನೆಯ ಮಾತೆಲ್ಲ ತನ್ನ ಕಿವಿಯ ಮೇಲೆ.

ಅಬ್ಬಾ ! ಅವನ ಸಾಧನಾ ಎಷ್ಟುದ್ದ ನಾಲಿಗೆ ಹರಿಬಿಡುತ್ತಾಳೆ. ಎಷ್ಟು ತಿರುಗಿ ಉತ್ತರ ಕೊಡುತ್ತಾಳೆ! ಅವನಿಗೆ ಹೇಳಿದ ಹಾಗೆ ನನಗೇನಾದರೂ ನನ್ನ ಕುಸುಮಾ ತಿರುಗಿ ಉತ್ತರ ಹೇಳಿದ್ದರೆ ಅವಳನ್ನು ಹೀಗೇ ಜಜ್ಜಿ ಬಿಡುತ್ತಿದ್ದೆ ಎಂದುಕೊಳ್ಳುತ್ತ ವಿಶ್ವನಾಥ ಕೈಯಲ್ಲಿಯ ಪುಸ್ತಕವನ್ನು ಮೇಜಿನ ಮೇಲೆ ದೊಪ್ಪನೆ ಚೆಲ್ಲಿ ಕೈಗಡಿಯಾರ ನೋಡಿಕೊಂಡ.

ಸ್ನಾನ ಮಾಡಿ ಇನ್ನೊಮ್ಮೆ ಚಹ ಕುಡಿಯಬೇಕೆಂದು ಅಡಿಗೆಯ ಮನೆಗೆ ಹೋಗಲು ಕೋಣೆಯ ಬಾಗಿಲು ತೆರೆದು ಹೊರಗೆ ಬಂದ ವಿಶ್ವನಾಥ.

***

ಕೋಣೆಯ ಬಾಗಿಲು ತೆರೆದ ಚಂದ್ರಕಾಂತ ಮುಂದಿನ ವರಾಂಡಕ್ಕೆ ಬಂದ. ರಾತ್ರಿಯೆಲ್ಲ ಮಳೆ ಬೀಳುತ್ತಿದ್ದುದರಿಂದ ನೆಲವೆಲ್ಲ ಹಸಿಯಾಗಿತ್ತು. ಹವೆಯೂ ತಂಪಾಗಿತ್ತು. ಬೆಚ್ಚಗಿನ ರಗ್ಗು ಹೊದ್ದು ಮಲಗಿದ್ದವನಿಗೆ ಹೊರಗಿನ ಗಾಳಿಯಿಂದ ಮೈಯಲ್ಲಿ ನಡುಕವುಂಟಾಯಿತು. ಹಾಗೆಯೇ ಬಾಗಿ ಮುಂದಿನ ಅಂಗಳ ನೋಡಿದ.

ಅಲ್ಲಿ ತುಳಸೀಕಟ್ಟೆಯ ಮೇಲೆ ಪೂಜಾ ಸಾಮಗ್ರಿಗಳನ್ನೆಲ್ಲ ಇಟ್ಟುಕೊಂಡು ಭಕ್ತಿಯಿಂದ ತುಲಸಿಯನ್ನು ಪೂಜಿಸುತ್ತಿದ್ದಾಳೆ ವಿಶ್ವನಾಥನ ಹೆಂಡತಿ ಕುಸುಮಾ. ಇಷ್ಟೊಂದು ನಸುಕಿನಲ್ಲಿಯೇ ಎದ್ದು ಸ್ನಾನಮಾಡಿ ಮಡಿಯುಟ್ಟಿದ್ದಾಳೆ. ವಯಸ್ಸು ಸುಮಾರು ತನ್ನ ಸಾಧನಾಳಷ್ಟೇ ಇರಬಹುದು. ಆದರೆ ವಯಸ್ಸಿಗೆ ಮೀರಿದ ಗಾಂಭೀರ್ಯವಿದೆ ಮುಖದಲ್ಲಿ, ಹೆಚ್ಚು ಮಾತು ಕತೆ ಇಲ್ಲ. ಸ್ವಚ್ಛಂದ ನಗುವಿಲ್ಲ. ತಾನು ನೆರೆಮನೆಗೆ ಬಂದು ಇಷ್ಟು ದಿನವಾದರೂ ಅವಳು ಜೋರಾಗಿ ಮಾತನಾಡಿದ್ದು ನಕ್ಕದ್ದು ಕೇಳಿಯೇ ಇಲ್ಲ. ಗಂಡ - ಹೆಂಡಿರು ಇಷ್ಟು ದಿನವಾದರೂ ಹೊರಗೆ ಹೋಗುವುದೇ ಕಡಿಮೆ, ಎಲ್ಲೋ ಅಪರೂಪಕ್ಕೆ. ದಿನವೂ ಅವಳಾಯಿತು, ಮನೆಗೆಲಸವಾಯಿತು. ಮತ್ತೆ ಎರಡು ಮಕ್ಕಳ ಲಾಲನೆ-ಪಾಲನೆ ಬೇರೆ.

ವಿಶ್ವನಾಥ ಬಹಳ ಕೋಪಿಷ್ಠನೆಂದು ಕಾಣುತ್ತದೆ. ತನಗೆ ಆಗುವ ಸೇವೆ ಸತ್ಕಾರಗಳಿಗೆ ಸ್ವಲ್ಪವೂ ಲೋಪ ಬರಬಾರದು. ಮನೆಯಲ್ಲಿ ಆಗಾಗ ಅವನದೇ ಆರ್ಭಟ ಕೇಳಿಬರುತ್ತದೆ. ಅವನ ಜಬರ್ದಸ್ತು ನೋಡಿದರೆ ಪಾಪ ಅವಳಿಗೆ ಉಸಿರೆತ್ತಲು ಬಿಡುವುದೇ ಇಲ್ಲ ಅನಿಸುತ್ತದೆ. ಮಕ್ಕಳು ಅತ್ತರೆ ಗದ್ದಲ ಮಾಡಿದರೆ ತನಗೆ ಎಷ್ಟು ಕೆಲಸಗಳಿದ್ದರೂ ಆಯಾಸವಾಗುತ್ತಿದ್ದರೂ ಮಕ್ಕಳನ್ನು ಶಾಂತವಾಗಿ ಅವಳೇ ಸಮಾಧಾನ ಮಾಡುತ್ತಾಳೆ.

ಇವನಿಗೂ ಹೆಂಡತಿಯ ಸೌಂದರ್ಯ-ಶೃಂಗಾರ, ನಕ್ಕು ನಲಿದಾಡುವದು ಕೂಡಿ ಅಡ್ಡಾಡುವದು ಯಾವುದೂ ಬೇಡವೆಂದು ಕಾಣುತ್ತದೆ. ಅವಳೂ ಸಂಪ್ರದಾಯಸ್ಥರ ಮನೆಯವಳೆಂದು ಸಾಧನಾ ಹೇಳುತ್ತಿದ್ದಳು. ಅದಕ್ಕೇ ಈ ತುಲಸೀ ಪೂಜೆ, ಮಡಿ-ಹುಡಿ ಎಲ್ಲಾ.... ಎಂದು ವಿಚಾರಿಸುತ್ತಿದ್ದ ಚಂದ್ರಕಾಂತ. ಪ್ರದಕ್ಷಿಣೆ ಮುಗಿಸಿ ಇನ್ನೊಮ್ಮೆ ನಮಸ್ಕರಿಸುತ್ತಿದ್ದಂತೆಯೇ ಒಳಗಿನಿಂದ 'ಕುಸುಮಾ' ಎನ್ನುವ ಗಂಡನ ಕರೆ ಕೇಳಿದ ಕುಸುಮಾ ಪೂಜಾ ಸಾಮಗ್ರಿಗಳನ್ನೆತ್ತಿಕೊಂಡು ಅವಸರದಿಂದ ಒಳಗೆ ನಡೆದಳು.

"ಬನ್ರೀs" ಸಾಧನಾಳ ಮೃದುವಾದ ಕರೆ ಕೇಳಿದ ಚಂದ್ರಕಾಂತನೂ ಒಳಗೆ ನಡೆದ.

ರಾತ್ರಿ ಗಂಟೆ ಎರಡಾದರೂ ನಿದ್ರೆ ಬಾರದೆ ಹಾಸಿಗೆಯ ಮೇಲೆ ಹೊರಳುತ್ತಿದ್ದ ವಿಶ್ವನಾಥ ಸಣ್ಣ ಧ್ವನಿಯಲ್ಲಿ "ಕುಸುಮಾಃ" ಎಂದ. ಪಕ್ಕದ ಮಂಚದ ಮೇಲೆ ಮಲಗಿದ್ದ ಕುಸುಮಾಳಿಂದ ಉತ್ತರ ಬರಲಿಲ್ಲ. ಈ ಸಲ ಜೋರಾಗಿ "ಕುಸುಮಾಃಃ"ಎಂದ.

"ಓಃ ಯಾಕ?" ಎಂದಳು ಕುಸುಮಾ ನಿದ್ದೆಗಣ್ಣಿನಲ್ಲಿ.

"ನಿದ್ದಿ ಬಂದಃದೇನು? ಏನಿಲ್ಲಾ ಮಲಗಿಕೋ" ಎಂದ ವಿಶ್ವನಾಥ ನಿರುತ್ಸಾಹದಿಂದ. ಸರಿ; ಕುಸುಮಾ ಮಗ್ಗಲು ಹೊರಳಿದಳು. ಕೊಂಚ ಹೊತ್ತಿನಲ್ಲಿಯೇ ಅವಳ ಸರಾಗವಾದ ಉಸಿರಾಟ ಕೇಳಿ ಬಂದಿತು. ವಿಶ್ವನಾಥನ ಜೀವ ಚಡಪಡಿಸಿತು.

"ನನಗ್ಯಾಕ ಹೀಂಗಾಗ್ತದ? ಏನಾಗ್ತದನೋ ತಿಳೀವೊಲ್ಲದು ಏನೋ ಮನಸ್ಸಿಗೆ ಒಂದು ಥರಾಃ ಅನಸ್ತದ; ನಿದ್ದೀನೂ ಬರಲೊಲ್ಲದು. ಒಮ್ಮೆಲೆ ಕಳವಳ, ನಿರಾಶೆ ಎಲ್ಲಾ ಹುಟ್ಟಿ ಹೊರಚಲ್ಲಿದಾಂಗ ಆಗಲಿಕ್ಕೆ ಹತ್ತೇದ. ಮುಂಜಾನೆ ಎಷ್ಟ ಆರಾಮ ಇದ್ದೆ. ಈಗಃರೆ ಆರಾಮ ಇದ್ದೀನಿ, ತಲಿ ನೋವು, ನೆಗಡಿ, ಕೆಮ್ಮು ಛೆ ಛೆ ಒಂದೂ ಇಲ್ಲ. ನೋವು ಆದದ್ದು ಮೈಗೆಲ್ಲ ನನ್ನ ಮನಸ್ಸಿಗೆ ಅಂತ ಕಾಣಸ್ತದ. ಸಂಜೀಮುಂದ ವಾಕಿಂಗ್ ಹೋಗಿ ಬರೂಮುಂದ ದಾರಿಯೊಳಗ ಚಂದ್ರಕಾಂತ- ಸಾಧನಾ ಭೆಟ್ಟಿಯಾದರು. ಆವಾಗಿಂದ ಹಾಂಗಾಗಲಿಕ್ಕೆ ಹತ್ತೇದ. ಏನು ಕಾರಣ ಇರಬೇಕು?"

ಸಂಜೆಯ ಶೋ ಮತ್ತೆ ತೆರೆಯ ಮೇಲೆ ಮೂಡತೊಡಗಿತು, ಆ ಮಧ್ಯರಾತ್ರಿಯಲ್ಲಿ.

ಸಾಧನಾ ತಿಳಿ ಗುಲಾಬಿ ಹೂವಿರುವ ಬಿಳಿ ನೈಲಾನ್ ಸೀರೆ, ಹಸಿರು ಚೋಳಿ ತೊಟ್ಟಿದ್ದಾಳೆ. ಕೂದಲುಗಳನ್ನು ಎತ್ತರಿಸಿ ಕಟ್ಟಿ ತುರುಬಿಗೆ ಮಲ್ಲಿಗೆ ಮಾಲೆ ಮುಡಿದಿದ್ದಾಳೆ. ಗಂಡನೊಡನೆ ಏನೋ ಮಾತನಾಡಿ ನಕ್ಕ ನಗೆ ಅವಳ ಮುಖದ ಮೇಲೆ ಇನ್ನೂ ಇದೆ. ತನ್ನನ್ನು ದಾಟಿ ಅವರು ಮುಂದಕ್ಕೆ ಹೋಗುವಾಗ ಚಂದ್ರಕಾಂತ 'ನಮಸ್ಕಾರ' ಎನ್ನುವಂತೆ ಕೈ ಎತ್ತಿದ. ತಾನೂ ಕೈಯೆತ್ತಿದ. ನಾಲ್ಕು ಹೆಜ್ಜೆ ಮುಂದೆ ನಡೆದ ಮೇಲೆ ತನಗೆ ಏಕೋ ಇನ್ನೊಮ್ಮೆ ಆ ಜೋಡಿಯನ್ನು ನೋಡಬೇಕೆನ್ನಿಸಿ ಹೊರಳಿ ನೋಡಿದ. ಅವರಿಬ್ಬರ ಬದಲು ಆ ಸ್ಥಾನದಲ್ಲಿ ತಾನು ಕುಸುಮಾ ನಡೆದಂತೆ ಮನದಲ್ಲೇ ಚಿತ್ರಿಸಿಕೊಂಡ. ಆಗಿನಿಂದ ಹೀಗೆss.......

ವಿಶ್ವನಾಥನ ವಿಚಾರಸರಣಿ ಕುಸುಮೆಯ ಹಿಂದೆ ಓಡಿತು. ತನ್ನ ಕುಸುಮಾ ರೂಪದಲ್ಲೇನೂ ಕಡಿಮೆ ಇಲ್ಲ. ಸಾಧನಾಳಿಗೆ ಅವಳ ವಿಶಾಲವಾದ ಕಣ್ಣು ನೀಳವಾದ ಮೂಗು ನೋಡಿಯೇ ತಾನು ಅವಳನ್ನು ಮೆಚ್ಚಿ ಮದುವೆಯಾದದ್ದು. ಆದರೆ ಮದುವೆಯಾಗಿ ತನ್ನ ಮನೆಗೆ ಬಂದ ಮೇಲೆಯೇ ಇವಳು ಗೃಹಿಣಿಯಾಗುವವಳೇ ಹೊರತು ತನ್ನ ರಸಿಕತೆಗೆ ಸರಿಯಗಿ ಒಳ್ಳೆಯ ಗೆಳತಿಯಾಗಲಾರಳು ಎಂದು ತನಗೆ ತಿಳಿದದ್ದು.

ಹೊಸದಾಗಿ ಮದುವೆಯಾಗಿ ಬಂದಾಗ ಒತ್ತಾಯದಿಂದ ಇವಳನ್ನು ಸಿನಿಮಾಕ್ಕೊ, ವಾಕಿಂಗಿಗೊ ಕರೆದುಕೊಂಡು ಹೋದದ್ದು ತನಗಿನ್ನೂ ನೆನಪಿನಲ್ಲಿದೆ. ತನ್ನ ಜುಲುಮೆಗೆ ಹಿಂದೀ ಪ್ರೇಮಕತೆಗಳನ್ನೂ ಇಂಗ್ಲೀಷ ಚಿತ್ರಗಳನ್ನೂ ಒಂದೆರಡು ಸಲ ನೋಡಿದ ಕುಸುಮಾ ಅವುಗಳನ್ನು ಸೇರದೆ ಆಮೇಲೆಲ್ಲಾ ತನಗೆ ತಲೆನೋವೆಂದೂ, ಮನಯೆಲ್ಲಿ ಕೆಲಸವಿದೆಯೆಂದೂ ಏನೇನೋ ನೆವ ಹೇಳಿ ಸಿನೆಮಾ ತಪ್ಪಿಸಿಬಿಡುತ್ತಿದ್ದದ್ದು.

ಮನೆಗೆಲಸಗಳಲ್ಲಿ ಮಾತ್ರ ಬಹಳ ದಕ್ಷಳು ಕುಸುಮಾ. ಅಡಿಗೆ ತಿಂಡಿ-ತಿನಿಸು ಎಲ್ಲವನ್ನೂ ಬಹಳ ಚೆನ್ನಾಗಿ ಮಾಡುವಳು. ಯಾವ ವಿಷಯಕ್ಕೂ ಕಾಡುವುದಿಲ್ಲ, ಬೇಡುವುದಿಲ್ಲ. ತಾನು ತಂದುಕೊಟ್ಟ ಬಟ್ಟೆ-ಬರೆಗಳಲ್ಲೇ ತೃಪ್ತಿ ಅವಳಿಗೆ. ಆದರೆ, ಹೆಚ್ಚಿನ ಫ್ಯಾಶನ್ನಿನ ಪತ್ತಲ ತಂದರೆ ಮಾತ್ರ ಅದನ್ನು ಉಡಲಾರಳು. ತಾನು ದಿಲ್ಲಿಗೆ ಹೋದಾಗ ಅವಳಿಗೆ ನವೀನ ಮಾದರಿಯ ಸೆರಗು ಅಂಚುಗಳಿಲ್ಲದ ಸೀರೆಯೊಂದನ್ನು ತಂದಿದ್ದ. ಆದರೆ ಅದನ್ನಾಕೆ ಉಡದ

ಶಾಲೆಗೆ ಹೋಗುವ ತನ್ನ ತಂಗಿಗೆ ಕೊಟ್ಟುಬಿಟ್ಟಿದ್ದಳು. ಆಮೇಲೆ ತಾನು ಅಂಥ ಸೀರೆಯನ್ನು ಅವಳಿಗೆ ತರುವ ಗೋಜಿಗೇ ಹೋಗಿರಲಿಲ್ಲ.

ಸಿಟ್ಟಿನಲ್ಲೆ ಎದ್ದು ತನ್ನ ಮಂಚ ಬಿಟ್ಟು ಕುಸುಮಾಳ ಮಂಚಕ್ಕೆ ಹೋಗಿ ಮಲಗಿದ ವಿಶ್ವನಾಥ.

***

ತನ್ನ ಮಂಚಕ್ಕೆ ಹೋಗಿ ಉರುಳಿದ ಚಂದ್ರಕಾಂತ ಉಸ್ ಎಂದು ನಿಟ್ಟುಸಿರು ಬಿಟ್ಟ. ನಿದ್ರೆ ಇಲ್ಲದೆ ಅವನ ತಲೆ ನೋಯುತ್ತಿತ್ತು. ಭಾರವಾಗುತ್ತಿತ್ತು. ಉಸಿರಾಟ ವೇಗವಾಗುತ್ತಿತ್ತು. ಕಣ್ಣುಗಳೆರಡೂ ಉರಿಯುತ್ತಿದ್ದವು. ಜ್ವರ ಬಂದಿದೆಯೇನೊ ಎಂದು ಎನ್ನಿಸಿತವನಿಗೆ. ಹಣೆಯ ಮೇಲೆ ಕೈಯಾಡಿಸಿಕೊಂಡ. ಅವನ ಮನಸ್ಸು ಸಾಧನಾಳೆಡೆಗೆ ಹೊರಳಿತು.

ಹಣೆಗೆ ಅಮೃತಾಂಜನ ಹಚ್ಚಿ ಮೃದುವಾಗಿ ತಿಕ್ಕಿ ಸಾಧನಾ ತನ್ನ ಆರೈಕೆ ಮಾಡಿದ್ದರೆ ಎಷ್ಟು ಚೆನ್ನಾಗಿತ್ತು! ಎನ್ನಿಸಿತು ಅವನಿಗೆ. ಮೆಲ್ಲಗೆ "ಸಾಧನಾ" ಎಂದ. ಮಾರುತ್ತರ ಬರಲೇ ಇಲ್ಲ. ಓಹ್! ಅವಳನ್ನು ಈಗ ಕರೆದರೂ ಉಪಯೋಗವಿಲ್ಲ. ಅವಳು ಈಗ ಏಳುವುದಿಲ್ಲ ಎದ್ದರೂ ತಲೆ ಒತ್ತು ಎಂದರೆ ಮಂಚದ ಮೇಲೆಯೇ ತೂಕಡಿಸುವವಳೇ ಅವಳು. ಸಾಧನಾ ತನ್ನ ಯಾವ ಉಪಚಾರವನ್ನೂ ಮಾಡಲಾರಳು. ಹೆಚ್ಚು ತೊಂದರೆಯನ್ನೇ ಕೊಡುವವಳು.

ಮತ್ತೆ ಈಗ ತನಗೆ ತಲೆನೋವು ಬಂದದ್ದೂ ಅವಳಿಂದಲೇ. ಇಂದು ಸಂಜೆ ಪ್ರಭಾಕರರಾಯರ ಮನೆಗೆ ಹೋಗೋಣವೆಂದು ಎಷ್ಟು ಹೇಳಿದರೂ ಒಪ್ಪಲಿಲ್ಲ. ಒಲ್ಲೆ.ಎಂದುಬಿಟ್ಟಳು. ಒಂದೇ ಹಟ ಅವಳದು ಹೆಚ್ಚು ಕಡಿಮೆ ಸಿಟ್ಟು ಮಾಡಿದರೆ ಊಟ ತಿಂಡಿ ಬಿಟ್ಟು ಮುಸುಕು ಹಾಕಿ ಮಲಗಿಬಿಡುವಳು.ಇನ್ನೆಂದೂ ಅನ್ನುವದಿಲ್ಲ ಏಳು ಅನ್ನುವವರೆಗೂ ಹಾಸಿಗೆ ಬಿಟ್ಟು ಸರಿಯಲಾರಳು, ಬಹಳ ಹಠಮಾರಿ. ತವರುಮನೆಯಲ್ಲಿ ಮುದ್ದಿನ ಮಗಳು. ಮನೆಯಲ್ಲಿ ಎಲ್ಲರೂ ಇವಳ ಹಟ ನಡೆಸಿಕೊಟ್ಟವರೇ, ಇವಳ ವಿದ್ಯೆ, ರೂಪ, ಮಧುರಕಂಠಕ್ಕೆ ತಾನು ಮೆಚ್ಚಿ ಮದುವೆಯಾದೆ ಇವಳನ್ನು. ಆದರೆ ಇವಳ ಹಟಮಾರಿತನ ತನಗೆ ತಿಳಿದದ್ದು ತನ್ನ ಮನೆಗೆ ಕರೆತಂದ ಮೇಲೆಯೇ.

ಅಡಿಗೆ, ಕೆಲಸ, ಹೆಣಿಕೆ, ಹಾಡು ಎಲ್ಲವನ್ನೂ ಬಲ್ಲಳು. ಆದರೆ ತನ್ನ ಮನಸ್ಸಿಗೆ ತಿಳಿದರೆ ಮಾತ್ರ ಮಾಡುವವಳು, ಇಲ್ಲದಿದ್ದರೆ ಇಲ್ಲವೇ ಇಲ್ಲ. ಮನೆಯ ಒಳಗಿನ ಹೊರಗಿನ ಎಲ್ಲ ವಿಷಯಕ್ಕೂ ಮೊದಲು ಅವಳ ಒಪ್ಪಿಗೆ ಬೇಕು. ಇಂದು ಹಟಮಾಡಿ ಪ್ರಭಾಕರ ರಾಯರ ಮನೆಗೆ ಹೋಗುವವನನ್ನು ಬಿಡಿಸಿ ವಾಕಿಂಗಿಗೆ ಹೋಗೋಣವೆಂದಳು. ದಾರಿಯಲ್ಲಿ ವಿಶ್ವನಾಥ ಭೆಟ್ಟಿಯಾದ. ಎಷ್ಟೊಂದು ಠೀವಿಯಿಂದ ಹೊರಟಿದ್ದನವ ಮನೆಯ ಕಡೆಗೆ. ತನಗೇಕೋ ಇಂದು ಅವನನ್ನು ನೋಡಿ ಸಂಕೋಚವಾಯಿತು. ಅವನು ಮನೆಗೆ ಬರುವದರಲ್ಲಿ ಅವನ ಕುಸುಮಾ ಕೈಕಾಲು ತೊಳೆಯಲು ನೀರು ಕೊಟ್ಟು ಬಿಸಿಯಾಗಿದ್ದ ತಿನಿಸು ಚಹಾ ಕೊಡುತ್ತಾಳೆ. ರಾತ್ರಿ ಮತ್ತೆ ಅವನ ಪ್ರೀತಿಯ ಪಲ್ಯ, ಚಟ್ನಿಗಳನ್ನು ಮಾಡಿ ಊಟಕ್ಕೆ ನೀಡುತ್ತಾಳೆ. ಅವನು ತಿಂದುಂಡು ಆಫೀಸಿಗೆ ಹೋಗುತ್ತ, ಗೆಳೆಯರೊಡನೆ ಹರಟೆ, ವಾಕಿಂಗ್ ಮಾಡುತ್ತ ಸುಖವಾಗಿದ್ದಾನೆ.

ತನ್ನ ಸಾಧನಾ ಇಂದು ತನ್ನೊಡನೆ ವಾಕಿಂಗ್ ಎಂದು ಹೊರಟವಳು, ದಾರಿಯಲ್ಲಿ ಏನು ತಿಳಿಯಿತೋ 'ಓ ಕೌನಥೀ' ಸಿನಿಮಾಕ್ಕೆ ಹೋಗೋಣವೆಂದಳು. "ಬೇಡ ಅದು ಹೆದರಿಸುವ ಸಿನಿಮಾ, ನಿನ್ನಂಥಾ ಗರ್ಭಿಣಿ ಸ್ತ್ರೀಯರು ನೋಡಬಾರದು" ಎಂದರೆ ಕೇಳಲಿಲ್ಲ; ನಕ್ಕು ನನ್ನ ಮಾತು ಹಾರಿಸಿಬಿಟ್ಟಳು. ಸಿನಿಮಾ ಮುಗಿದ ಮೇಲೆ ಮನೆಗೆ ಹೋಗಿ ಅಡಿಗೆ ಮಾಡಲು ಬೇಸರ. ಇಲ್ಲೇ ಹೋಟೆಲ್‌ನಲ್ಲಿ ಏನಾದರೂ ತಿಂದು ಹೋಗೋಣವೆಂದಳು. ಸರಿ ಅದೂ ಆಯಿತು. ಅಷ್ಟರಲ್ಲಿ ಬಸ್ಸೂ ತಪ್ಪಿ ಹೋಯಿತು. ಟಾಂಗಾಕ್ಕೆ ಎರಡು ರೂಪಾಯಿ ದಂಡ ಬಡಿದು ಬಂದು

ಮನೆ ಸೇರಿದ್ದಾಯಿತು. ಇಂದು ಅವಳ ಹಟದಿಂದಾಗಿ ಏಳೆಂಟು ರೂಪಾಯಿ ಕೈಬಿಟ್ಟವು. ಅದರ ಚಿಂತೆಯೇ ಇಲ್ಲ ಅವಳಿಗೆ.

ಪ್ರಭಾಕರ ರಾಯರ ಮನೆಗೆ ಹೋಗದ್ದಕ್ಕೆ ತಾನು ನಾಳೆ ಏನಾದರೂ ಸುಳ್ಳು ಕಾರಣ ಹೇಳಬೇಕು ಅವರಿಗೆ. ಅದೇ ವಿಚಾರದಲ್ಲಿದ್ದ ತನ್ನನ್ನು ಸಂಜೆ ವಿಶ್ವನಾಥ ನೋಡಿದಾಗ ಅವನ ಮುಖದಲ್ಲಿ ನಗುವಿತ್ತು. ಯಾವಾಗಲೂ ಹೆಂಡತಿಯ ಬೆನ್ನು ಹತ್ತಿ ತಿರುಗುವನೆಂದು ತನ್ನನ್ನು ನೋಡಿ ನಗುತ್ತಿರಬಹುದು ಅವನು.

ಹೀಗಾಗಿ ಸಿನೆಮಾದಲ್ಲೂ ತನಗೆ ಆಸಕ್ತಿ ಇರಲಿಲ್ಲ. ಮನೆಗೆ ಬಂದ ಮೇಲೆ ದಣಿವಾಗಿ ಇನ್ನೇನು ಮಲಗಬೇಕೆಂದು ಲೈಟು ಆರಿಸಿದಾಗ ಸಾಧನಾ ಗಾಬರಿಯಾಗಿ ಸಿನೆಮಾದಲ್ಲಿಯ ದೃಶ್ಯ ನೆನಪಾಗಿ ತನಗೆ ಹೆದರಿಕೆಯಾಗುತ್ತದೆ, ಕತ್ತಲು ಮಾಡಬೇಡಿರಿ ನಿದ್ರೆ ಬರಲಾರದು ಎಂದಳು. ಅವಳ ಭಯ ಕಡಿಮೆ ಮಾಡುವುದಕ್ಕೆ ಇಷ್ಟು ಹೊತ್ತು ಲೈಟು ಹಚ್ಚಿ ಕೂತು ಓದಿದ್ದಾಯಿತು. ಅವಳಿಗೇನೋ ನಿದ್ರೆ ಬಂದಿತು; ಆದರೆ ತನಗೆ....

ಸಾಧನಾ ಒಮ್ಮೆಲೇ ಆಸ್ಪತ್ರೆ ...ತೊಟ್ಟಿಲು ಎಂದು ಏನೇನೋ ಬಡಬಡಿಸಿದಳು. ಅಂಥ ಸ್ಥಿತಿಯಲ್ಲೂ ಚಂದ್ರಕಾಂತನಿಗೆ ನಗೆ ಬಂದಿತು. 'ಹುಚ್ಚ ಹುಡುಗೀ' ಎಂದುಕೊಂಡ. ಮರುಕ್ಷಣವೇ ಪಕ್ಕಕ್ಕೆ ಹೊರಳಿ'ಹಾಽಽ' ಎಂದು ಸಾಧನಾ ನರಳಿದಳು.

೨

ಬಾಗಿಲವರೆಗೆ ಬಂದು ಕುಸುಮೆಯನ್ನು ಕಳಿಸಿ ಒಳಗೆ ಬಂದ ಸಾಧನಾ ನಿದ್ರೆಯಿಂದ ಎಚ್ಚತ್ತು ಅಳುತ್ತಿದ್ದ ಚೇತನಾಳನ್ನು ಎತ್ತಿಕೊಂಡು ಮತ್ತೆ ತೊಡೆಯ ಮೇಲೆ ಹಾಕಿ ತಟ್ಟತೊಡಗಿದಳು.....

ಹೊಸತಾಗಿ ತಾನು ಲಗ್ನವಾಗಿ ಬಂದಾಗ ತನ್ನ ನೆರೆಮನೆಯ ಕುಸುಮಾ ಹೇಗಿದ್ದಳು ? ಈಗ ಹೇಗಿದ್ದಾಳೆ! ಗುರುತೂ ಸಿಗದು. ಅವಳು ದಿನವೂ ಉಡುತ್ತಿದ್ದ ಅಂಚು- ಸೆರಗು ಇದ್ದ ಪತ್ತಲ, ಕಟ್ಟುವ ತುರುಬು, ದೊಡ್ಡ ಕುಂಕುಮ, ಅವಳ ನಿತ್ಯ ತುಳಸೀ ಪೂಜೆ ಎಲ್ಲವೂ ಅವಳೊಬ್ಬ ಸಂಪ್ರದಾಯಸ್ಥರ ಮನೆಯವಳು ಎನ್ನುವುದನ್ನು ತೋರಿಸುತ್ತಿದ್ದವು. ಗಂಡನೊಡನೆ ವಾಕಿಂಗ್, ಸೀನಿಮಾಕ್ಕೆ ಹೋಗುವದೂ ಮನೆಗೆ ಬಂದ ಗಂಡನ ಸ್ನೇಹಿತರೊಡನೆ ಮಾತನಾಡುವುದೂ, ಯಾವದೂ ಇಲ್ಲ. ಅಷ್ಟೇ ಏಕೆ ಅವಳು ಜೋರಾಗಿ ನಕ್ಕದ್ದೂ ಕೂಡ ತಾನು ಕೇಳಿರಲಿಲ್ಲ. ನಮ್ಮ ಒಕ್ಕಲಗಿತ್ತಿಯ ಮುಂದೆ "ಸಾಧನಾಬಾಯಿ ಭಾಳ ಬಡಿವಾರದಾಕಿ, ಆಕೀಗೆ ಮನೀ ಕೆಲಸ ಅಂದರ ಬ್ಯಾಡಾ" ಎಂದು ಅವಳು ಅಂದದ್ದು ತನಗೆ ತಿಳಿದ ಮೇಲೆ ತಾನು ಅವಳೊಡನೆ ಮಾತನ್ನೆ ಆಡಿರಲಿಲ್ಲ. ಮುಂದೆ ನಮ್ಮ ಶಾರದಾ, ಅವಳ ಮಗಳು ಶಶೀ ಕೂಡಿ ಆಡಲಿಕ್ಕೆ ಹತ್ತಿದ ಮೇಲೆ ನಮ್ಮ ಮಾತು ಸುರು ಆದವು.

ಅಂಥ ಕುಸುಮಾ ಈ ಹತ್ತು ವರ್ಷದೊಳಗೆ ಬದಲಾಯಿಸಿದ್ದಾಳೆ ! ನಂಬಲಿಕ್ಕೆ ಸಾಧ್ಯವಿಲ್ಲ. ಈಗ ವನಿತಾ ಮಂಡಳದ ಮೆಂಬರ್ ಆಗಿದ್ದಾಳೆ. ಈ ವರ್ಷದಿಂದ ಕಾರ್ಯಕಾರೀ ಮಂಡಲದೊಳಗೂ ಇದ್ದಾಳಂತೆ. ಮೀಟಿಂಗು, ಭಾಷಣ, ಮನೋರಂಜನ ಕಾರ್‍ಯಕ್ರಮ, ಪ್ರದರ್ಶನ ಎಂದು ತಿಂಗಳಲ್ಲಿ ಮೂರು ನಾಲ್ಕು ಸಲ ಹೊರಗೆ ಹೋಗುತ್ತಾಳೆ. ವಾರಕ್ಕೊಮ್ಮೆ ಸಿನಿಮಾಕ್ಕೂ ಹೋಗುತ್ತಾಳೆ. "ಈ ಸಾರೆ ಮೇ ತಿಂಗಳದಾಗ ಮೈಸೂರು, ಬೆಂಗಳೂರು ನೋಡಲಿಕ್ಕೆ ಹೋಗಬೇಕು ಅಂತ ಮಾಡೇವಿ, ನಮ್ಮ ಯಜಮಾನ್ರೂ ಹೂಂ ಅಂದಾರ" ಎಂದು ಮೊನ್ನೆ ಹೇಳುತ್ತಿದ್ದಳು ಕುಸುಮಾ.

ಇಂದು ಬಹಳ ಸಿಂಗಾರಾಗಿ ಬಂದು "ಏನ್ರೀ ನೀವು ಮಂಡಳದ ಮೆಂಬರ್ ಆಗೀರಿ, ಆದ್ರೂ ಒಂದು ದಿನಾನೂ ಬರೂದಿಲ್ಲ. ಇವತ್ತರೇ ಬರ್ರಿ; ಅಮೇರಿಕಾಕ್ಕೆ ಹೋಗಿಬಂದ ಅತಿಥಿಗಳು ಭಾಷಣ ಮಾಡ್ತಾರ. ಲಗೂನ ಏಳರ ಬಸ್ಸಿಗೆ ಬಂದು ಬಿಡೂಣಂತ" ಎಂದು ಕೇಳಿದಳು. ನನಗೂ ಮನೆಯೊಳಗಿದ್ದು ಬೇಸರ ಬಂದಿತ್ತು. ಅವಳ ಜೊತೆಗೆ ಹೋಗಿ ಬರಬೇಕು ಅನ್ನಿಸಿದ್ದಿತು. ಆದರೆ ಚೇತನಾ....

ಮಗುವಿನ ಹಣೆಯ ಮೇಲೆ ಕೈಯಾಡಿಸಿದಳು ಸಾಧನಾ, ಏಕೋ ಮೈ ಬಿಸಿಯಾದಂತಿತ್ತು. ನಿದ್ರೆಯ ಜೊಂಪಿನಲ್ಲಿದ್ದ ಮಗುವನ್ನು ಬೆಚ್ಚಗೆ ಮಲಗಿಸಿ, ರಗ್ಗು ಹೊದಿಸಿ, ನೀಲಗಿರಿ ಎಣ್ಣೆ ತಂದು ಹಣೆ, ಎದೆ, ಕುತ್ತಿಗೆಗಳಿಗೆ ಸವರಿದಳು. ತಾನು ಕುಸುಮೆಯ ಜೊತೆಗೆ ಹೋಗದಿದ್ದುದೆ ಒಳ್ಳೆಯದಾಯಿತು ಎಂದು ಸಮಾಧಾನದ ಉಸಿರು ಬಿಟ್ಟಳು.

***

ಚಪ್ಪಲಿ ಮೆಟ್ಟಿ, ಕೊಡೆ ಹಿಡಿದು ಹೊರಗೆ ಬಂದು ಗೇಟು ತೆರೆದು ಬಸ್ ಸ್ಟಾಪಿನೆಡೆಗೆ ನಡೆದಳು ಕುಸುಮಾ. ಒಬ್ಬಂಟಿಗಳಾಗಿ ನಡೆದ ಅವಳಿಗೆ ಬೇಸರ ಬಂದಿತು. ಸಾಧನಾ ತನ್ನ ಜೊತೆಗೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು ಎನ್ನಿಸಿತವಳಿಗೆ. ಕಣ್ಣು ಕೈಗಡಿಯಾರದೆಡೆಗೆ ಓಡಿತು. ನಾಲ್ಕೂ ಮುಕ್ಕಾಲಾಗಿತ್ತು. ಇನ್ನು ಐದು ನಿಮಿಷಗಳಿವೆ ಬಸ್ಸು ಬರುವುದಕ್ಕೆ ಎಂದುಕೊಂಡು ತನ್ನ ಬದಿಗೆ ನಿಂತ ದಂಪತಿಗಳ ಕಡೆಗೆ ದೃಷ್ಟಿ ಹೊರಳಿಸಿದಳು. ಅವರು ನವದಂಪತಿಗಳೆಂದು ಊಹಿಸಿದಳಾಕೆ. ಕೈಯಲ್ಲಿಯ ಹಸಿರು ಬಳೆ, ಹೊಸದಾಗಿ ಹಾಕಿದ್ದ ಮಾಂಗಲ್ಯ, ಕಾಲುಂಗುರ ಇವೆಲ್ಲಾ ಅವಳಿನ್ನೂ ಹೊಸ ಮದವಣಗಿತ್ತಿ ಎಂಬುದನ್ನು ತೋರಿಸುತ್ತಿದ್ದವು. ಗಂಡ ಅವಳ ಮುಖವನ್ನೇ ನೋಡುತ್ತ ನಗುನಗುತ್ತ ಏನೋ ಮಾತನಾಡಿಸುತ್ತಿದ್ದ. ಅವಳು ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಸಾವಕಾಶವಾಗಿ ಉತ್ತರ ಕೊಡುತ್ತಿದ್ದಳು. ಮುಗ್ಧೆ ಸಂಕೋಚದಿಂದ ತಲೆ ಎತ್ತಿ ಗಂಡನನ್ನೂ ನೋಡಲಾರದವಳಾಗಿದ್ದಳು. ಅವಳನ್ನು ನೋಡಿ ಕುಸುಮೆಗೆ ನಗು ಬಂದಿತು. ಒಂದು ಕಾಲಕ್ಕೆ ತಾನೂ ಅವಳಂತೆಯೇ.....

ಹೊಸತಾಗಿ ನಾನು ಮದುವೆಯಾಗಿ ಬಂದಾಗ ವಿಶ್ವನಾಥ ಬಹಳ ಉತ್ಸಾಹದಿಂದ ನನ್ನನ್ನು ವಾಕಿಂಗಿಗೆ, ಸಿನಿಮಾಕ್ಕೆ ಕರೆದೊಯ್ಯಲು ಪ್ರಯತ್ನಿಸುತ್ತಿದ್ದ. ಮೊದಮೊದಲು ಅವನ ಒತ್ತಾಯಕ್ಕೆ ನಾನೂ ಹೋದವಳು ಹೊರಗೆ ಹೋದರೂ ಏನೋ ಒಂದು ತರಹದ ಹೆದರಿಕೆ ಸಂಕೋಚ ನನ್ನನ್ನು ಆವರಿಸಿದಂತಾಗಿ ಮನಸ್ಸಿಗೆ ಸ್ವಸ್ಥವೆನಿಸುತ್ತಿರಲೇ ಇಲ್ಲ. ಸಂಪ್ರದಾಯಸ್ಥರ ಮನೆಯಲ್ಲಿ ಬೆಳೆದ ನನ್ನಂಥವಳಿಗೆ ಅದೆಲ್ಲಾ ಹೇಗೆ ಸೇರಬೇಕು? ಅವರೊಡನೆ -ಅದೂ ಮನೆಯಲ್ಲಿ ಮಾತ್ರ - ಗಂಟಲು ಸಡಿಲು ಬಿಟ್ಟು ಮಾತನಾಡುತ್ತಿದ್ದೆ. ಬೇರೆ ಯಾರಾದರೂ ಗಂಡಸರು ಬಂದರೆ ಮಾತನಾಡಲು ನನಗೆ ತಿಳಿಯುತ್ತಿರಲೇ ಇಲ್ಲ. ಒಂದು ಸಲವಂತೂ ಅವರು ಹೊರಗೆ ಹೋದಾಗ ಅವಳ ಗೆಳೆಯ ಶಂಕರ ಬಂದಿದ್ದರು. ಅವರು ಮನೆಯಲ್ಲಿಲ್ಲವೆಂದು ಹೇಗೋ ಗಟ್ಟಿ ಧೈರ್ಯಮಾಡಿ ಹೇಳಿ ಅವರನ್ನು ಕಳಿಸಿದೆ. ಆಮೇಲೆ ಇವರು ಬಂದ ಮೇಲೆ ಶಂಕರ ಅವರು ಬಂದಿದ್ದ ಸುದ್ದಿ ಹೇಳಿದೆ. ಅಬ್ಬಾ ಎಷ್ಟು ಸಿಟ್ಟಿಗೆದ್ದಿದ್ದವರು ಅಂದು.

ಆದರೂ ಬೇಗ ಅವರ ಇಚ್ಛೆಯಂತೆಯೇ ನಡೆಯುವುದು ನನ್ನಿಂದ ಆಗಲಿಲ್ಲ. ತನ್ನ ಮಡಿಯನ್ನೂ, ತುಳಸೀ ಪೂಜೆಯನ್ನೂ ನೋಡಿ ಹಾಸ್ಯ ಮಾಡಿ ನಗುತ್ತಿದ್ದರೂ ಅವುಗಳನ್ನು ಬಿಟ್ಟರೆ ತಪ್ಪು ಮಾಡಿದಂತೆ ಎಂದು ನನ್ನ ಭಾವನೆಯಾಗಿತ್ತು. ಆದರೆ ಆ ಭಾವನೆ ತಪ್ಪು ಎನ್ನುವುದನ್ನು ತಾಯಿ ತೋರಿಸಿಕೊಟ್ಟಳು. ಎರಡನೆಯ ಮಗ ವಿಜಯನ ಬಾಣಂತಿತನ ಮುಗಿಸಿಕೊಂಡು ಬಂದಮೇಲೆ ಅವರು ಬಹಳ ಬದಲಾದಂತೆ ಎನ್ನಿಸಿತು ನನಗೆ. ಮೊದಲಿನ ಹಾಗೆ ನಗುವಿರಲಿಲ್ಲ. ಮಾತು ಹೆಚ್ಚಾಗಿ ಆಡುತ್ತಿರಲಿಲ್ಲ. ಕೆಲಸದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು ಸಿಟ್ಟಿಗೇಳುವದು, ಒದರಾಡುವದೂ ಮಾಡುತ್ತಿದ್ದರು. ಹೆಚ್ಚು ಹೊತ್ತು ಮನೆಯ ಹೊರಗೇ ಇರುತ್ತಿದ್ದರು. ಇದನ್ನೆಲ್ಲ ನೋಡಿ ನನ್ನ ಮನಸ್ಸಿಗೆ ಕಸಿವಿಸಿ ಆಯಿತು. ಯಾರ ಮುಂದೆ ಹೇಳಬೇಕು? ಮೈಯಲ್ಲಿ ಆರಾಮ ಇಲ್ಲವೆಂದು ಕಾರಣ ಹೇಳಿ ತಾಯಿಯನ್ನು ಕರೆಸಿಕೊಂಡೆ. ಅವಳ ಮುಂದೆ ಎಲ್ಲವನ್ನೂ ಹೇಳಿ ಅತ್ತುಬಿಟ್ಟೆ. ಅದಕ್ಕೆ ಅವಳು ಬೇಗನೇ ಅವರ ಅಸಮಾಧಾನದ ಕಾರಣ ಕಂಡುಹಿಡಿದು ನನಗೆ ದಾರಿ ತೋರಿಸಿಕೊಟ್ಟಳು. "ನೀನು ಮೊದಲಿನ ಹಾಂಗs ಇರಬೇಕು ಅನ್ನೂ ಮಾತು ಮರೆತುಬಿಡು. ನಿನ್ನ ಗಂಡಗ ನೀ ಹ್ಯಾಂಗ ಇದ್ದರ ಸೇರತದ ಅನ್ನೂದು ತಿಳಕೊಂಡು ಅದರಂಗ

ನಡಿ, ಅಂದರ ಮನಸ್ಸಿಗೆ ಸಂತೋಷ ಆಗಿ ತಾವs ಸಿಟ್ಟು -ಸೆಡವು ಎಲ್ಲಾ ಬಿಡತಾರ" ಎಂದು ಹೇಳಿದ ಅವಳ ಮಾತನ್ನು ಅಕ್ಷರಶಃ ಪಾಲಿಸಿದೆ. ಅದರ ಫಲವೇ ಹೀಗಾಗಿರುವುದು ನಾನು..... ಎನ್ನುತ್ತ ತನ್ನ ನೈಲಾನ್ ಸೀರೆಯ ನಿರಿಗೆಗಳನ್ನು ಸರಿಪಡಿಸಿಕೊಂಡು, ವ್ಯಾನಿಟಿ ಬ್ಯಾಗನ್ನು ಮತ್ತೊಂದು ಕೈಗೆ ಬದಲಾಯಿಸಿ ಕೈಗಡಿಯಾರವನ್ನು ಮತ್ತೊಮ್ಮೆ ನೋಡಿದಳು ಕುಸುಮಾ.

ಬಸ್ಸು ಬರುವ ಹೊತ್ತಾಗಿತ್ತು. ಅಷ್ಟರಲ್ಲಿ ವನಿತಾಮಂಡಳದ ಕಾರ್ಯದರ್ಶಿನಿ ಇಂದುಮತಿ ಅವಸರದಿಂದ ಅವಳ ಹತ್ತಿರ ಬಂದು,

ಯಾಕ್ರೀ, ಸಾಧನಾಬಾಯಿ ಇವತ್ತೂ ಬರಲಿಲ್ಲೇನು?" ಎಂದಳು.

"ಇಲ್ರೀ, ಕರೀಲಿಕ್ಕೆ ಹೋಗಿದ್ದೆ ಅವರ ಮನೀಗೆ. ಆದರೆ ಯಾಕೋ ಒಲ್ಲೆ ಅಂದರು. ಮೊದಲ ಹುರುಪಿಲೆ ಹೊರಗ ಹೋಗೂದು ಮಾಡೂದು ಎಷ್ಟು ಮಾಡುತ್ತಿದ್ದರು. ಇತ್ತಿತ್ತಲಾಗ ಎಲ್ಲಾ ಬಿಟ್ಟ ಬಿಟ್ಟಾರ. ಮನೀ, ಮಕ್ಕಳು, ಕೆಲಸಾ ಅಂತ ಮನ್ಯಾಗs ಇರತಾರ."

"ಹಾಂಗ್ಯಾಕ ಬದಲ ಆದರು? ಏನಾರ ಕಾರಣ ಇರಬೇಕೇನು?"

"ಇರಬೇಕು ಏನರೇ, ಆದರ ನಮಗ್ಯಾಂಗ ಗೊತ್ತಾಗಬೇಕು ? ನನಗನಸ್ತದ ಅವರ ದೊಡ್ಡ ಹುಡುಗಿ ಶಾರದಾ ಹುಟ್ಟಿದ ಮ್ಯಾಲೆ ಮತ್ತೆರಡು ಹುಡುಗರಾಗಿದ್ದವು. ಅವೆರಡೂ ತೀರಿಕೊಂಡವು. ಅದನ್ನs ಮನಸ್ಸಿಗೆ ಹಚಿಗೊಂಡಾರೋ ಏನೋ. ಮಕ್ಕಳೂ ಅಂದರ ಸಾಕು, ಅಷ್ಟ ಹಚಿಗೊಂಡಾರ. ಈಗ ಚೇತನಾ ಹುಟ್ಟಿದ ಮ್ಯಾಲೆ ಅವರ ಮನಸ್ಸಿನ ದುಃಖ ಎಷ್ಟೋ ಕಡಿಮಿ ಆದಂಗ ಕಾಣ್ತದ. ಆದರೂ ಮನೀ ಬಿಟ್ಟು ಹೊರಗs ಬರಲಿಕ್ಕೆ ಒಲ್ಲರು...."

ಬಸ್ಸಿನ ಹಾರ್ನಿನ ಸಪ್ಪಳಕ್ಕೆ ಕಟ್ಟಾದ ಮಾತುಕತೆಯನ್ನು ಅಲ್ಲಿಯೆ ಬಿಟ್ಟು ಇಬ್ಬರೂ ಗೆಳತಿಯರು ಬಸ್ಸನ್ನೇರಿದರು.

***

"ಸಾಧನಾsss" ಬಟ್ಟೆ ಬದಲಾಯಿಸುತ್ತ ಚಂದ್ರಕಾಂತ ಕೂಗಿದ. ಅಡಿಗೆಯ ಮನೆಯಲ್ಲಿದ್ದ ಸಾಧನಾಳಿಗೆ ಸ್ಟೋವಿನ ಸಪ್ಪಳದಲ್ಲಿ ಗಂಡನ ಕರೆ ಕೇಳಲಿಲ್ಲ. ಬಚ್ಚಲು ಮನೆಗೆ ಬಂದ ಚಂದ್ರಕಾಂತ.

"ಏs ಸಾಧನಾs ಎಷ್ಟ ಕರೀತಿನಿ ಕೇಳಿಸೋದಿಲ್ಲೇನು?" ಎಂದ.

"ಇಲ್ರೀ, ಸ್ಟೋದ ಸಪ್ಪಳದಾಗ ನೀವು ಮನೀಯೊಳಗ ಬಂದದ್ದೂ ಗೊತ್ತಿಲ್ಲ. ಕರೆದದ್ದೂ ಕೇಳಿಸಿಲ್ಲ" ಎಂದಳು ಸಾಧನಾ ಉಳ್ಳೇಗಡ್ಡಿ ಹೆಚ್ಚುತ್ತ.

"ಹೊ ಅದೆಲ್ಲಾ ಆತು. ವಾಕಿಂಗಿಗೆ ಹೋಗೂಣು ತಯಾರಾಗಿನ್ನ;ಈಗs ಆರು ಹೊಡೆದು ಹೋತು."

"ಆರು ಹೊಡಿತೇನು ಆಗಲೇ ! ಇನ್ನ ನಾ ವಾಕಿಂಗ್‌ಗೆ ಬರೂದಿಲ್ರಿ. ಶಾರದಾ ಈಗ ಸಾಲಿಯಿಂದ ಬರ್ತಾಳ. ಇವತ್ತ ದೋಸೆ ಮಾಡಿ ಕೊಡ್ತೀನಿ ಅಂತ ಆಕೀಗೆ ಆಶಾ ಹಚ್ಚೇನಿ. ಈಗ ಅದsತಯಾರಿಯೊಳಗ ಇದ್ದೀನಿ. ಇವತ್ತ ನಾ ಬರಲಿಕ್ಕೆ ಆಗೂದಿಲ್ಲ. ನೀವs ಹೋಗಿ ಬರ್ರಿ."

"ಎಲ್ಲಾ ತಯಾರಾಗೇದ. ಇನ್ನ ಬೇಯಿಸೂದ ಅಷ್ಟs ಅಲ್ಲಾ? ಲಗೂ ಲಗೂನ ಹಾಕಿಬಿಡು ಶಾರದಾಗೂ ಕೊಟ್ಟು ನಾವೂ ತಿಂದು ಹೋಗೂಣಂತ ವಾಕಿಂಗಿಗೆ ."

"ಇವತ್ತ ಮಧ್ಯಾಹ್ನದಿಂದ ಚೇತನಾ ಮೆತ್ತಗಾಗ್ಯಾಳ, ನೆಗಡಿ ಹೆಚ್ಚಾಗೇದ. ಗಾಳ್ಯಾಗ ಹ್ಯಾಂಗ ಕರಕೊಂಡ ಹೋಗೋದು. ಆಕೀ ಸಲುವಾಗಿ ನಾ ಮನಿಯೊಳಗs ಇರಬೇಕು.

"ಈಗ ಮಲಕೊಂಡಾಳಲ್ಲ. ನಿದ್ದಿ ಹತ್ತೇದ. ಶಾರದಾ ನೋಡ್ತಿರ್ತಾಳ. ಚೇತನಾನ ಮನ್ಯಾಗs ಬಿಟ್ಟು ಹೋಗೂಣು."

"ಛೆ ಛೇ ನಾ ಒಲ್ರಿ. ಪಾಪ ಶಾರದಾ ಹತ್ತು ವರುಷದ ಹುಡುಗಿ. ಆದ್ರೂ ನನಗ ಇನ್ನೂ ಸಣ್ಣಾಕೀನs ಆಕೀ ಕೈಯಾಗ ಕೂಸಿನ್ನ ಕೊಟ್ಟು ಮನಿ ನೋಡಲಿಕ್ಕೆ ಆಕೀನ್ನ ಬಿಟ್ಟು ನಾವು ಅಡ್ಡಾಡಲಿಕ್ಕೆ ಹೋಗೂದು ನನಗ ಸೇರೂದಿಲ್ಲ ನೋಡ್ರಿ. ಆಕೀನೂ ಸಾಲಿಂದ ಬಂದಿರ್ತಾಳ ದಣಿದು. ಆಟಾ ಆಡ್ಲಿ, ಓದಿಕೊಳ್ಳಿ. ನಾ ಮನ್ಯಾಗs ಇರ್ತೀನಿ. ನೀವ ಹೋಗಿ ಬರ್ರಿ."

"ಹೂಂ ಛಲೋ ಆತು; ನಾವಿಬ್ರೂ ಕೂಡಿ ತಿರಗ್ಯಾಡಲಿಕ್ಕೆ ಹೋಗದ ಎಷ್ಟು ದಿನ ಆತು ಅಂತ ಕರೆದರs ನೀ ದಿನಾ ಒಂದು ನೆವಾ ಹೇಳ್ತೀದಿ. ಶಾರದಾ ಹುಟ್ಟೂದಕಿಂತ ಮೊದಲೆ ನಾವು ಅಡ್ಡ್ಯಾಡಿದ್ದು, ಮಾಡಿದ್ದು ಎಲ್ಲಾ. ಈಗ ಅದೆಲ್ಲಾ ಕನಸೇನೋ ಅಂತ ಅನಸ್ಲಿಕ್ಕೆ ಹತ್ತೇದ ನನಗ" ಚಂದ್ರಕಾಂತನ ಧ್ವನಿಯಿಂದ ಬೇಸರ ಹಣಿಕಿಕ್ಕಿತು.

"ದಿನಾಲೂ ತಿರುಗಾಡಲು ಹೋಗಲಿಕ್ಕೆ ನಾವೇನು ಸಣ್ಣವರ ? ಇನ್ನೂ ಹೊಸತಾಗಿ ಮದುವಿ ಆದವರ? ಅಳಿಯ ಬರೂ ದಿವಸಾದವು. ಇನ್ನರೇ ಬಿಡ್ರಿ ನಿಮ್ಮ ಹುಡುಗತನಾ ಎಂದು ನಗುತ್ತಾ ಸಾಧನಾ ಬಿಸಿಬಿಸಿ ದೋಸೆಯೊಡನೆ ಬೆಣ್ಣೆಯನ್ನಿಟ್ಟು ಪ್ಲೇಟನ್ನುಅವರ ಮುಂದೆ ಇಟ್ಟಳು.

ತಿಂದು ಮುಗಿಸಿದ ಮೇಲೆ ಚಂದ್ರಕಾಂತ ಬಟ್ಟೆ ಬದಲಾಯಿಸಿ, ಚಪ್ಪಲಿ ಮೆಟ್ಟಿ, ಹೊರಗೆ ಬಂದು ಬಾಗಿಲು ಮುಚ್ಚಿಕೊಂಡ.

***

ಹೊರಗಿನಿಂದ ಜೋರಾಗಿ ಬಾಗಿಲನ್ನು ನೂಕಿದ ವಿಶ್ವನಾಥ. ಅದು ತನ್ನಷ್ಟಕ್ಕೆ ತೆರೆದುಕೊಂಡಿತು. ನಡುಮನೆಯಲ್ಲಿ ಕಿರಿಯ ಮಗ ಅರುಣ ಅಳುವದು ಕೇಳುತ್ತಿತ್ತು.

ಬಟ್ಟೆ ಬದಲಾಯಿಸುತ್ತ "ಕುಸುಮಾ" ಎಂದ. ಮಾರುತ್ತರ ಬರಲಿಲ್ಲ. ಜೋರಾಗಿ "ಕುಸುಮಾ" ಎಂದ. ಶೀಲಾ ಕೈಯಲ್ಲಿ ಆಯೋಡಿನ್ ಬಾಟ್ಲೀ ಹಿಡಿದುಕೊಂಡೇ ಹೊರಗೆ ಬಂದವಳು, "ಅಪ್ಪಾ ಅವ್ವ ಹೊರಗೆ ಹೋಗ್ಯಾಳ" ಎಂದು ವರದಿ ಮಾಡಿದಳು.

"ಎಲ್ಲೆ?" ಎಂದು ಹುಬ್ಬುಗಂಟಿಕ್ಕಿದ ವಿಶ್ವನಾಥ.

"ವನಿತಾಮಂಡಳಕ್ಕ. ನಮ್ಮ ಸಾಲಿ ಐದನೇ ಪಿರಿಯಡ್ಡಿಗೆ ಬಿಟ್ಟಿತು. ನಾ ಮನೀಗೆ ಬಂದಮ್ಯಾಲೆ ಅವ್ವ ನನಗ ಹೇಳಿ ಹೋದ್ಲು."

"ಮತ್ತ ನಿನ್ನೆ ಹೋಗಿದ್ದಲ್ಲಾ, ಮತ್ಯಾಕ ಇವತ್ತು ಹೋದ್ಲು?" ಅಸಮಾಧಾನದಿಂದ "ದಣಿದು ಆಫೀಸಿನಿಂದ ಮನೀಗೆ ಬಂದರ ಮನ್ಯಾಗs ಇರೂದಿಲ್ಲಾ. ಸಮಾಜಸೇವಾ ಮಾಡ್ತಾಳಂತ ಸಮಾಜಸೇವಾ" ಎಂದು ಗೊಣಗುಟ್ಟಿದ.

"ನಿನ್ನೆ ಪಿಕ್‌ನಿಕ್ ಇತ್ತಂತ. ಇವತ್ತ ಯಾರದೊ ಭಾಷಣಾ ಅದs ಅಂತ. ಸಂಜೀಗೆ ಲಗೂನs ಬರ್ತೀನಿ ಅಂತ ಹೇಳ್ಯಾಳ."

"ವಿಜಯಾ ಸಾಲಿಂದ ಇನ್ನೂ ಬಂದಿಲ್ಲೇನು? ಅರುಣ ಯಾಕ ಅಳಲಿಕ್ಕೆ ಹತ್ಯಾನ ? ಸಣ್ಣ ಹುಡುಗನ್ನ ಮನ್ಯಾಗ ಬಿಟ್ಟು, ನಿನ್ನ ಮ್ಯಾಲೆ ಮನೀ ಬಿಟ್ಟು ಈಗ ಹೋಗೂದು ಏನು ಹರಕತ್ತಾಗಿತ್ತೋ ಏನೋ!" ಎಂದ.

"ವಿಜಯ ಸಾಲಿಂದ ಬಂದು ಆಡಲಿಕ್ಕೆ ಹೋಗ್ಯಾನ. ಅರುಣ ಅಂಗಳದಾಗ ಬಿದ್ದಾನ. ಮಂಡಿಗಾಲು ಕೆತ್ತಿ ರಕ್ತ ಬಂದಽದ. ಅವಗ ಅಯಡಿನ್ ಹಚ್ಚಿದೆ, ಅದಕ್ಕ ಅಳ್ತಾನ. ಬಂದಮ್ಯಾಲೆ ನಿಮಗ ಚಹಾ ಮಾಡಿಕೊಡು ಅಂದಾಳ ಅವ್ವ,. ಮಾಡಿಕೊಡ್ಲೇನು? ತಿನ್ನಲಿಕ್ಕೆ ಹಚ್ಚಿದ ಅವಲಕ್ಕೀನು ಅವ" ಹೆದರುತ್ತ, ತಂದೆಯ ಮುಖ ನೋಡುತ್ತಾ ಹೇಳಿದಳು ಶೀಲಾ.

ಮಗಳು ಚಹಾ ಮಾಡುವವರೆಗೆ ಅರುಣನನ್ನು ಸಮಾಧಾನಪಡಿಸಿದ ವಿಶ್ವನಾಥ. ಚಹ ಕುಡಿದು ಅರಿವೆ ಹಾಕಿಕೊಂಡು, "ನಾನು ಹೊರಗ ಹೋಗ್ತೀನಿ ಬಾಗಿಲು ಮುಚ್ಚಿಕೋ" ಎಂದು ಶೀಲಾಗೆ ಹೇಳಿ ಚಪ್ಪಲಿ ಮೆಟ್ಟಿ ಹೊರಗೆ ಬಂದು ಬಾಗಿಲು ಮುಚ್ಚಿಕೊಂಡ.

ತಿರುಗಾಡಲು ಹೊರಟ ಚಂದ್ರಕಾಂತ-ವಿಶ್ವನಾಥರು ಮನೆಯ ಮುಂದಿನ ಗೇಟಿನ ಬಳಿ ಭೆಟ್ಟಿಯಾಗಿ ತಡೆದು ನಿಂತರು. 'ನೀವೂ ಒಬ್ಬರೇ' 'ನೀವೂ ಒಬ್ಬರೇ' ಎನ್ನುವಂತೆ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ತಾವಿಬ್ಬರೂ ಸಮಾನ ದುಃಖಿಗಳು ಎನ್ನುವ ಮಾತನ್ನು ಇಬ್ಬರ ಕಣ್ಣುಗಳೂ ತಮ್ಮಷ್ಟಕ್ಕೇ ಹೇಳಿದವು. ಸ್ನೇಹ ಹಸ್ತಗಳು ಮುಂಚಾಚಿದವು, ಹೆಣೆದುಕೊಂಡವು. ಗೇಟು ತೆರೆದು ಇಬ್ಬರೂ ಒಂದೇ ದಿಕ್ಕಿಗೆ ಹೆಜ್ಜೆ ಹಾಕಿದರು.

***

■■

# ಸಂಜೆ ಮಲ್ಲಿಗೆ

"ರಮೀs ಏ ರಮೀsss..."

ಶೀಲಳ ಕೈಯಲ್ಲಿದ್ದ ಸೀರೆ ಜರ್ರನೆ ಜಾರಿತು.

ಥೂ! ಎಂಥ ಜಾರ್ಜೆಟ್ ಸೀರೆ ಇದು. ಜಾರಿಜಾರಿ ಬೀಳುತ್ತದೆ. ಬೇಗ ಮಡಿಚಲು ಬರುವದೇ ಇಲ್ಲ. ಮತ್ತೆ ಮತ್ತೆ ಜಾರಿ ಹೋಗುತ್ತದೆ.

ಬಗ್ಗಿ ಕೆಳಗೆ ಬಿದ್ದಿದ್ದ ಸೀರೆಯನ್ನು ಎತ್ತಿಕೊಂಡು ಮತ್ತೆ ಮಡಚತೊಡಗಿದಳಾಕೆ.

"ರಮೀss ಎಲ್ಲಿ ಹೋದ್ಯೋ ಬಾರೋ ಇಲ್ಲೆ...."

ಎಷ್ಟು ಗಟ್ಟಿಯಾಗಿ ಹಿಡಿದಿದ್ದರೂ ಮತ್ತೆ ಸರ್ರನೆ ಜಾರಿ ಕೆಳಗೆ ಬಿತ್ತು ಸೀರೆ.

ಈ ಸಲ ಬಗ್ಗಿ ಸೀರೆಯನ್ನೆತ್ತಿಕೊಳ್ಳುವ ಗೋಜಿಗೆ ಹೋಗದೆ ಶೀಲಾ ಕಿಡಕಿಯ ಹತ್ತಿರ ಹೋಗಿ ಹೊರಗೆ ಹಣಿಕಿದಳು. ಧಾವಿಸಿ ಬಂದಿದ್ದ ನೆರೆ ಮನೆಯ ಹುಡುಗ ರಮೇಶ ತೇಕುತ್ತ ತನ್ನ ತಾಯಿಯ ಸೊಂಟವನ್ನಪ್ಪಿ ಹಿಡಿದಿದ್ದ. ಕಿಡಕಿಯಲ್ಲಿ ಶೀಲಳ ಮುಖ ಕಂಡ ರಮೇಶನ ತಾಯಿ ಅವಳನ್ನು ನೋಡಿ ನಕ್ಕು ಸುಳ್ಳು ಕೋಪದಿಂದ 'ಎಲ್ಲಿ ಹೋಗಿದ್ಯೋ ಇಷ್ಟೊತ್ತನಾ ಎಷ್ಟು ಕರೀಬೇಕು ನಿನ್ನ' ಎನ್ನುತ್ತ ಮಗನ ಕಿವಿ ಹಿಂಡಿದಳು.

ಶೀಲ ಹೊಟ್ಟೆಯಲ್ಲಿ ಸಂಕಟವಾಯಿತು. ಇನ್ನೇನು ಕಣ್ಣಲ್ಲಿ ನೀರು ಚಿಮ್ಮುವುದಿತ್ತು. ಕಣ್ಣೊರೆಸಿಕೊಂಡು ಮತ್ತೆ ನೋಡಿದಾಗ ತಾಯಿ ಮಗನ ನೆತ್ತಿ ಮೂಸಿ ಮುತ್ತಿಡುತ್ತಿದ್ದಳು. ಶೀಲ ತೃಪ್ತಿಯಿಂದ ನಕ್ಕು ಹಿಂದೆ ಸರಿದಳು.

ಈ ಸಲ ಗಟ್ಟಿಯಾಗಿ ಸೀರೆಯ ನಾಲ್ಕೂ ಪದರುಗಳನ್ನು ಹಿಡಿದು ಸುಕ್ಕು ಸರಿಮಾಡಿ ನೀಟಾಗಿ ಮಡಿಚಿ ತನ್ನ ಸೂಟಕೇಸಿನಲ್ಲಿ ಇಟ್ಟು ಮತ್ತೊಮ್ಮೆ ಇಣಿಕಿದಳು. ನಾಲ್ಕೆಂಟು ಸೀರೆ-ಕುಪ್ಪಸಗಳು, ಲಂಗ-ಬಾಡೀ, ಟಾವೆಲ್ಲು, ಪೇಸ್ಟು-ಬ್ರಶ್ಶು ಸೋಪು ಎಲ್ಲಾ ಇಟ್ಟಾಗಿತ್ತು. ಹುಂ ಇನ್ನು ಟಾಯಲೆಟ್ ಬಾಕ್ಸ್ ಇಡಬೇಕು. ಹಾಗೇ ಗಂಡನಿಂದ ಕೇಳಿ ಒಂದೆರಡು ಒಳ್ಳೆಯ ಕಾದಂಬರಿಗಳನ್ನೊಯ್ಯಬೇಕು. ಪ್ರವಾಸದಲ್ಲಿ ಹೇಗೂ ಒಬ್ಬಳೇ. ಪುಸ್ತಕಗಳಿದ್ದರೆ ಬೇಸರವಾಗುವುದಿಲ್ಲ. ಹೋಗುವಾಗ ಇನ್ನೊಮ್ಮೆ ಪ್ರಸಾಧನವಾದ ಮೇಲೆ ಟಾಯ್‌ಲೆಟ್ ಬಾಕ್ಸ ಪ್ಯಾಕ್ ಮಾಡಬೇಕು. ಇನ್ನೂ ತನ್ನ ಪ್ರಯಾಣಕ್ಕೆ ನಾಲ್ಕು ತಾಸುಗಳಿವೆ ಎಂದು ಶೀಲ ಯೋಚಿಸುತ್ತಿರುವಾಗಲೇ

ಕಟ್.... ಕಟ್....

ಬೇಗನೆ ಸೂಟಕೇಸಿನ ಬಾಯಿ ಮುಚ್ಚಿ ಭದ್ರಮಾಡಿ, ಸೆರಗು ಮುಚ್ಚುವಂತೆ ಮೈ ತುಂಬ ಹೊದೆದು ಬಂದು ಬಾಗಿಲು ತೆಗೆದಳು ಶೀಲ.

ಪ್ಯಾಂಟಿನ ಕಿಸೆಗಳಲ್ಲಿ ಕೈಗಳನ್ನಿಟ್ಟು ನಿಂತಿದ್ದ ಅವಳ ಗಂಡ ಅಶೋಕ ಕಿಸೆಯಿಂದ ಒಂದು ಟೆಲಿಗ್ರಾಮನ್ನೆತ್ತಿ ಅವಳ ಕೈಗೆ ಕೊಟ್ಟ. ಕೈ ಮತ್ತೆ ಕಿಸೆಯಲ್ಲಿ ಸೇರಿದವು.

Arriving by Mail, Come to station - Ramesh.

ಟೆಲಿಗ್ರಾಂ ಹಿಡಿದ ಶೀಲಳ ಕೈ ನಡುಗಿತು. ಎದೆ ಡವಗುಟ್ಟಿತು. ಕಾಗದ ಕೈ ಜಾರಿ ಕೆಳಗೆ ಬಿತ್ತು. ಸೆರಗು ಸಾವರಿಸಿ ಗಟ್ಟಿಯಾಗಿ ಹಿಡಿದು ಎದೆಯನ್ನು ಪೂರ್ತಿ ಮುಚ್ಚಿದ್ದಳು. ಬಗ್ಗಿ ಕಾಗದ ಹೆಕ್ಕುವಾಗ ಅವಳಿಂದ ನಿಟ್ಟುಸಿರೊಂದು ಹೊರಬಿತ್ತು.

"ನನ್ನ ಬಾಲ್ಯದ ಗೆಳೆಯ ರಮೇಶ ಈಗ ಮುಂಬೈದಾಗ ಡಾಕ್ಟರ ಆಗ್ಯಾನ. ಇವತ್ತ ಬರತಾನಂತ ಬಹುಶಃ ಇವತ್ತ ನೀ ಊರಿಗೆ ಹೋಗೂದು ಆಗಲಿಕ್ಕಿಲ್ಲ. ಅಂವಾ ಬಂದು ಹೋದಮ್ಯಾಲೆ ಹೋಗೂವಂತೆ."

"ಹೌದು ಮನೀಗೆ ಅವರು ಬರೂ ಮುಂದ ನಾ ಊರಿಗೆ ಬೋಗೂದು ಛಂದ ಕಾಣಸೂದಿಲ್ಲ ಅಲ್ಲಾs ಆಗಲಿ ಬಿಡ್ರಿ. ಎರಡು ದಿನಾ ತಡಾ ಆದ್ರ ಏನಾತು." ರಮೇಶ ಎನ್ನುವ ಹೆಸರು ಅವಳ ಮನ ಸೆಳೆದಿತ್ತು. ಈ ಹೆಸರಿನ ಮಾಲಿಕನನ್ನು ನೋಡಬೇಕೆನ್ನುವ ಕುತೂಹಲ ಅವಳ ಪ್ರಯಾಣವನ್ನು ಸಂತೋಷದಿಂದಲೇ ರದ್ದು ಮಾಡಿಸಿತ್ತು.

ಪ್ರಯಾಣ ನಿಲ್ಲಿಸಲು ಹೇಳಿದರೆ ಹೆಂಡತಿ ಏನನ್ನುವಳೋ ಎನ್ನುವ ಕಳವಳದಿಂದಲೇ ಬಂದಿದ್ದ ಅಶೋಕನಿಗೆ ಹೆಂಡತಿಯ ವರ್ತನೆ ಸಂತೋಷ ತಂದಿತು. ಹೆಂಡತಿಯ ಮುಖ ನೋಡಿ ನಸುನಕ್ಕು,

"ನಾನು ಸ್ಟೇಶನ್‌ಕ ಹೋಗತೇನಿ ಈಗ. ನೀನು ಮುಂದಿನ ವ್ಯವಸ್ಥಾ ಮಾಡು. ಸ್ನಾನ ಊಟದ್ದು ಎಲ್ಲಾs"

ಕಿಸೆಯಲ್ಲಿ ಕೈ ಇಳಿಬಿಟ್ಟು ತಲೆತಗ್ಗಿಸಿ ಹೊರಟಿದ್ದ ಅಶೋಕನ ಬೆನ್ನನ್ನೇ ನಿಟ್ಟಿಸಿದಳು ಶೀಲ.

ಮದುವೆಯಾಗಿ ಬಂದು ಎರಡು ವರ್ಷಗಳಾದರೂ ಗಂಡ ಇದೇ ರೀತಿ ನಡೆಯುತ್ತಿದ್ದುದನ್ನು ನೋಡಿದ್ದಳಾಕೆ. ಕೈ ಯಾವಾಗಲೂ ಕಿಸೆಯಲ್ಲಿಯೇ. ಚೇಷ್ಟೆ ಮಾಡುತ್ತ ಒಂದು ಸಲ ಕೇಳಿದ್ದಳು. 'ನೀವು ಹಾಗೇಕೆ ನಡೆಯುತ್ತೀರಿ' ಎಂದು. ಆ ಪ್ರಶ್ನೆ ಕೇಳಿ ಹುಬ್ಬು ಗಂಟು ಹಾಕಿದ್ದ ಅಶೋಕ ಮರುಕ್ಷಣದಲ್ಲಿ 'ನನಗ ಹೆಸರು ಇಡತೀ. ನೀ ಹಾಂಗ ಯಾಕ ಎದಿಮ್ಯಾಲೆ ಸೆರಗು ಬಿಗೀ ಹಿಡಿದು ಅಡ್ಡಾಡತೀ. ಇದು ನನ್ನ ಸ್ಟೈಲು, ಅದು ನಿನ್ನ ಸ್ಟೈಲು' ಎಂದು ನಕ್ಕಿದ್ದ ಅಶೋಕ.

ಆ ಮಾತು ಕೇಳಿ ಶೀಲಳಿಗೆ ನಗು ಬಂದಿರಲಿಲ್ಲ. ಬದಲು ಬೆವತಿದ್ದಳು ಗಾಬರಿಯಿಂದ.

ನಾಲ್ಕು ತಿಂಗಳಿಂದ ತನ್ನ ನೆರೆಮನೆಗೆ ಇರಲು ಬಂದಿದ್ದ ಮನೆಯ ಹುಡುಗನ ಹೆಸರು ರಮೇಶ. ಇಂದು ಬರುತ್ತಿರುವ ಗಂಡನ ಗೆಳೆಯನ ಹೆಸರು ರಮೇಶ- ಮತ್ತು ತನ್ನ ತನ್ನ ರಮೀ .... ಬಾಲ್ಯದಲ್ಲಿ ನೆರೆಮನೆಯಲ್ಲಿದ್ದ ಹುಡುಗ, ಗೆಳತಿ ಸುಮಾನ ಅಣ್ಣ, ಯೌವನ ಕಾಲಿಟ್ಟು ಮಧುರವಾದ ಕನಸುಗಳನ್ನು ಇನ್ನೂ ಕಾಣುತ್ತಿರುವಾಗಲೇ ಮಾಯವಾದವನೂ ರಮೇಶನೇ. ಈಗ ಎಲ್ಲಿದ್ದಾನೋ ? ಕೈ ಊಟದ ಮೇಜನ್ನು ಅಣಿಮಾಡುತ್ತಿತ್ತು. ಮನಸ್ಸು ಹಿಂದಿನ ಮೋಜನ್ನು ಹುಡುಕಿ ಹೊರಟಿತ್ತು.

ಹಾಲಿನಲ್ಲಿ ಸಪ್ಪಳವಾಯಿತು. ಆಳು ಸಾಮಾನು ಒಳಗೆ ತಂದಿಟ್ಟ. ಗೆಳೆಯರಿಬ್ಬರು ಒಬ್ಬರೊಬ್ಬರ ಹೆಗಲ ಮೇಲೆ ಕೈ ಹಾಕಿ ಒಳಗೆ ಬಂದರು. ರಮೇಶ ಏನೋ ಹೇಳಿ ಹಾಹಾಹಾ ಎಂದು ಅಟ್ಟಹಾಸದಿಂದ ನಗುತ್ತಿದ್ದ. ಶೀಲ ಬಾಗಿಲ ಪರದೆ ಸರಿಸಿ ಹಾಲಿಗೆ ಇಣಿಕಿದಳು....

ಪರಿಚಿತ ಮುಖ ಮುಗುಳ್ನಕ್ಕಂತಾಯಿತು. ಅವನು ಹಲ್ಲು ಕಾಣುವಂತೆ ನಗುವದೇ ಅಪರೂಪ. ಅವನ ತಂಗಿ ಸುಮಾನೊಡನೆ ಹರಟೆ ಹೊಡೆಯಲು, ಆಟವಾಡಲು ಅವರ ಮನೆಗೆ ಹೋದಾಗ ಅವನ ಭೆಟ್ಟಿಯಾಗುತ್ತಿತ್ತು. ಸುಕುಮಾರ ದೇಹ, ಚೂಪಾದ ಮೂಗು, ಮಿಂಚುವ ಕಣ್ಣುಗಳು, ಅಲೆಅಲೆಯಾಗಿದ್ದ ಕ್ರಾಪು, ಚಿಗುರು ಮೀಸೆಯ ಯುವಕ. ಅವನ ತುಟಿಗಳ ಮೇಲೆ ತನ್ನನ್ನು ಕಂಡಾಗೊಮ್ಮೆ ಮುಗುಳ್ನಗು ಮೂಡುತ್ತಿದ್ದುದನ್ನು ತಾನು ಗಮನಿಸಿ ಮನಸ್ಸಿಗೆ ತಂದುಕೊಂಡಿದ್ದಳು. ಸುಮಾನೊಡನೆ ಬ್ಯಾಡ್ಮಿಂಟನ್ ಆಟವಾಡುವಾಗ ಒಮ್ಮೊಮ್ಮೆ ಆಟದಲ್ಲಿ ಅವನೂ ಭಾಗವಹಿಸುತ್ತಿದ್ದ. ಅವನು ಹೊಡೆದ ಹೂವು ನೇರವಾಗಿ ಬಂದು ತನ್ನ ಎದೆಗೆ ತಾಕಿದಾಗ, ಹಲ್ಲು ಕಾಣುವಂತೆ ದೊಡ್ಡದಾಗಿ ನಗುತ್ತಿದ್ದ. ತನ್ನ ಮುಖ ನಾಚಿಕೆಯಿಂದ ಕೆಂಪಾಗುತ್ತಿತ್ತು.

ಹೊರಗಿನ ಬೀಸುಗಾಳಿಗೆ ಪಡದೆ ಭರ್‍ರನೆ ಹಾರಿತು. ಎರಡು ಹೆಜ್ಜೆ ಮುಂದೆ ಬಂದಿದ್ದಳು. 'ರಮೀ, ನನ್ನ ಹೆಂಡತಿ ಶೀಲ.'

ಬೊಜ್ಜು ಮೈ, ಅಲ್ಲಲ್ಲಿ ಮಿಂಚುತ್ತಿದ್ದ ಬೆಳ್ಳಿಗೂದಲಿನ ಕ್ರಾಪು, ಮಿಂಚುಗಣ್ಣಿಗೆ ಅಡ್ಡವಾಗಿದ್ದ ಕನ್ನಡಕ, ಬೋಳು ಮೀಸೆಯ ರಮೇಶ ದೇಶಾವರಿ ನಗೆನಗುತ್ತ ಹೇಳಿದ "ಆಶಾ, ನಿನ್ನ ಹೆಂಡತಿ ನನಗ ಹೊಸಬಳಲ್ಲ. ನನ್ನ ತಂಗಿ ಸುಮಾನ ಗೆಳತಿ ಇವರ ನೆರೆಮನಿಯೊಳಗ  ಒಂದೆರಡು ವರ್ಷ ಇದ್ವಿ ನಾವು. ಹೆಸರು ಸುಶೀಲಾ. ಇನ್ನೂ ನೆನಪದ ನನಗ. ಈಗ ನನ್ನ ಅತ್ತಿಗಿ. ಅತ್ತಿಗೀ ಎಲ್ಲಾ ಆರಾಮ?"

ಶೀಲಳ ಎದೆಯ ಒಂದೆರಡು ಬಡಿತ ತಪ್ಪಿದ್ದವು. ಹಣೆಯ ಮೇಲೆ ಬೆವರು ಹನಿ ಸಾಲುಗಟ್ಟಿತು. ಮೈಯಲ್ಲಿ ನಡುಕ ಹುಟ್ಟಿ ಹೊಟ್ಟೆಯೊಳಗಿಂದ ಹಾಯ್ದು ಕುತ್ತಿಗೆಯವರೆಗೆ ಬಂದಿತು. ಕೈ ನಡುಗಿ ಸೆರಗು ಜಾರಿತು. ಅದನ್ನೆತ್ತಿ ಎದೆ ಮುಚ್ಚಿ ಬಿಗಿ ಹಿಡಿದುಕೊಳ್ಳುವ ಸಾಹಸಕ್ಕೆ ಶೀಲ ಹೋಗಲಿಲ್ಲ. ( ಆ ಹಿಂದಿನ ರಮೇಶ ಇವರೇ ಏನು ?  ನಾ ..... ನಾನು ಇಷ್ಟು ದಿನ ಇವರನ್ನೇ ಎದೆಯಲ್ಲಿ ಮುಚ್ಚಿ ಬಿಗಿಯಾಗಿ ಹಿಡಿದಿದ್ದೆನೆ?  ಛೇ.... ಛೇ ಇದು ಸುಳ್ಳು. ನಾ ತಿಳಿದದ್ದು ತಪ್ಪು. ಇವರು ನನ್ನೆದೆಯಲ್ಲಿ ಕುಳಿತಿರಲೇ ಇಲ್ಲ. ನಾನೇಕೆ ಹಾಗೆ ತಿಳಿದುಕೊಂಡೆ ! ಎಂಥ ಹುಚ್ಚಿ ನಾನು! ಅಬ್ಬ ! ಈಗಲಾದರೂ ಬುದ್ಧಿ ಬಂದಿತಲ್ಲ ತನಗೆ. ದೇವರ ದಯ. ಇವರಿಗೆ ನಾನು ಅತ್ತಿಗೆಯಾಗಬೇಕು. ಹಂ, ಹೌದು ಇವರ ಹೆಂಡತೀನ್ನ ನಾ ಯಾಕೆ ಅತ್ತಿಗೀ ಅನ್ನಬಾರದು ಹಾಗನ್ನೂದೇ ಬರೋಬರಿ.)

"ನಮಸ್ಕಾರ್ರೀ, ಎಲ್ಲಾ ಆರಾಮ, ಅತ್ತಿಗಿ ಹ್ಯಾಂಗಿದ್ದಾರ ? ಮಕ್ಕಳು ಎಷ್ಟು ?"

(ಹೌದು, ಸರಿಯಾಗಿ ಉತ್ತರ ಕೊಟ್ಟೆ ಅವರ ಮಾತಿಗೆ ಇದೇ ಸರಿಯಾದ ಉತ್ತರ.  ಸಂತೋಷದಿಂದ ಶೀಲಾ ತನ್ನ ಹಾರಾಡುತ್ತಿದ್ದ ಸೆರಗು ಹಿಡಿದು ಅದರ ಅಂಚು ತೀಡಿದಳು.)

ಹಗುರಾದ ಮನಸ್ಸಿನಿಂದ ಮೈಯೆಲ್ಲಾ ಹಗುರಾಗಿ, ಸೆರಗು ಸೊಂಟಕ್ಕೆ ಸಿಕ್ಕಿಸಿ, ಹಾರಾಡುವ ಮುಂಗುರುಳನ್ನು ಹಿಂದಕ್ಕೆ ಸರಿಸುವ ಗೋಜಿಗೆ ಹೋಗದೆ, ಸಂಭ್ರಮದಿಂದ ಓಡಾಡಿ ಊಟಕ್ಕೆ ನೀಡಿದಳು ಶೀಲ.

"ರೇಖಾ ಮೊದಲ್ನೇ ಹೆರಿಗಿಗೆ ತವರ್ಮನಿಗೆ ಹೋಗ್ಯಾಳ. ಗಂಡು ಮಗ ಹುಟ್ಯಾನ. ಈಗ ಕರಕೊಂಡು ಬರಲಿಕ್ಕೇ ಊರಿಗೆ ಹೊರಟೇನಿ."

"ಭಪ್ಪರೆ ಬಹಾದ್ದೂರಾ. ಗಂಡು ಮಗನ ತಂದಿಯಾದಿ, ತಗೋ ನನ್ನ ಶಾಭಾಷ್"ಅಶೋಕ ರಮೇಶನ ಬೆನ್ನು ಚಪ್ಪರಿಸಿದ ಜೋರಾಗಿ.

"ಯಾಕ? ನಿನ್ನ ಲಗ್ನಾಗಿ ಎರಡು ವರ್ಷಾತು. ಇನ್ನೂ ಏನೂ ಪ್ರೊಗ್ರೆಸ್ ಆಗಿಲ್ಲಾ. ಅತ್ತಿಗೀಗೆ ಏನರೆ ವೀಕ್‌ನೆಸ್ ಅದ ಏನು?"

"ಏನಿಲ್ಲಾ ಆರಾಮ ಇದ್ದಾಳ. ಈಗ ಎಂಟ್ಹತ್ತು ದಿವಸದಿಂದ ಆರಾಮ ಇಲ್ಲಾ ಅಂತಿದ್ಳು. ಇವತ್ತ ತವರ್ಮನಿಗೆ ಹೋಗತಿದ್ಳು. ನೀ ಬಂದಿ ಅಂತs ನಿಂತಳು."

ಪಾಯಸದ ಬಟ್ಟಲ ಹಿಡಿದು ಶೀಲ ಬಂದಳು.

"ಓ ಸ್ವೀಟ್ ಮಾಡೀರೇನು ? ಆದರ ನಂದೊಂದು ಕರಾರು. ಮುಂದಿನ ಸಾರೆ ನಾ ಬರೂದರೊಳಗs ನಿಮ್ಮ ಮಗನ ಸ್ವೀಟ್ ಬೇಕು ನನಗ. ತಿಳೀತೇನು ಅತ್ತಿಗೀ. ಯಾಕೋ ಆಶಾ."

ನಾಚಿ ಕೆಂಪಾದ ಶೀಲಾ ಅಲ್ಲಿ ನಿಲ್ಲದೇ ಇನ್ನಷ್ಟು ನೀರು ತರಲು ಅಡಿಗೆ ಮನೆಗೆ ಹೋದಳು.

"ಶೀಲಾ ಪಾಯಸ ಆತು, ಅನ್ನ ತೊಗೊಂಡು ಬಾ. ಬರೂ ಮುಂದ ಹಪ್ಪಳಾನೂ ತೊಗೊಂಡು ಬರಬೇಕು. ರಮೀಗ ಉದ್ದಿನ ಹಪ್ಪಳ ಅಂದ್ರ ಭಾಳ ಪ್ರೀತಿ."

"ಆಶಾ, ನಾವಿಬ್ಬರೂ ಸಣ್ಣವರಿದ್ದಾಗಿನ ಮಾತು ಎಷ್ಟು ನೆನಪಿಟ್ಟೆಯಲ್ಲೋ ನೀನು. ಗೆಳೆಯ ಅಂದ್ರ ಹಿಂಗಿರಬೇಕು. ಹಂ ಅಂದ್ಹಾಂಗs ಮೊನ್ನೆ ನಿನ್ನ ಮನೋನ ತಮ್ಮ ಭೆಟ್ಟಿ ಆಗಿದ್ನಪಾ."

ಆಶ್ಚರ್ಯ ಸೂಚಿಸುತ್ತ ಅಶೋಕ ಮೆಲುದನಿಯಲ್ಲಿ ಅಂದ 'ಯಾವ ಮನೋ? ಯಾರ ಸುದ್ದಿ ನೀ ಹೇಳೂದು?' ಅವನ ಒಂದು ಕಣ್ಣು ಅಡಿಗೆ ಮನೆಯ ಕಡೆಗಿತ್ತು.

ತನ್ನ ಎಂಜಲು ಕೈಯಿಂದಲೇ ಪ್ಯಾಂಟಿನ ಕಿಸೆಯೊಳಗಿದ್ದ ಅಶೋಕನ ಎಡಗೈ ಹೊರಗೆ ಎಳೆದು ಹಿಚುಕುತ್ತ ರಮೇಶ ಹೇಳಿದ. "ಬಿಡೋ ನಿನ. ನನಗ ಗೊತ್ತಿಲ್ಲೇನು? ನಿಮ್ಮ ಪ್ರೇಮ ಪ್ರಕರಣ. ಆ ಮನೋರಮಾನ್ನs ಮದುವಿ ಆಗಲಿಕ್ಕೂ ತಯಾರಾಗಿದ್ದೆಪಾ ನೀನು. ಆಂ, ಉಂ. ಅಂದರ ಸಾರಿ ಅಪಾ. ನಿನಗ ಒಂದು ಕೆಟ್ಟ ಸುದ್ದಿ ಹೇಳಬೇಕಾಗೇದ ನಾನು."

"ಏನದು? ಏನ ಕೆಟ್ಟ ಸುದ್ದಿ?" ಅಶೋಕನ ಎಡಗೈ ನೀರಿನ ಗ್ಲಾಸು ಹಿಡಿದಿತ್ತು.

"ಮನೋನ ತಮ್ಮ ಹೇಳಿದಾ. ಮುಂಬೈಗೆ ಹೋದ ಮ್ಯಾಲೆ ಅವಳಿಗೆ ಹೊಟ್ಟಿ ಕಡತ ಬರತಿತ್ತಂತ ಆಪರೇಷನ್ ಆಯ್ತಂತ, ಯಶಸ್ವಿ ಆಗಲಿಲ್ಲಂತ. ಆಕಿ ಸತ್ತು ಆಗಲೇ ಎರಡು ವರುಷ ಆಗಲಿಕ್ಕೆ ಬಂತು ಅಂತ ಹೇಳಿದ."

ಗ್ಲಾಸು ಎತ್ತಿ ಗಳಗಳನೆ ನೀರು ಕುಡಿದ ಅಶೋಕ ನೀರಿನೊಡನೆ ಮನೋನ ನೆನಪನ್ನೂ ನುಂಗಿಬಿಟ್ಟ. ಗ್ಲಾಸು ಕೆಳಗಿಟ್ಟು ಹುಂss ಎಂದು ಉಸಿರ್ಗರೆದ. ಏನೂ ಮಾತನಾಡಲಿಲ್ಲ. ಅವನ ಸುಂದರ ನೀಳ ಬೆರಳುಗಳು ಗ್ಲಾಸಿನೊಡನೆ ಆಟವಾಡುತ್ತಿದ್ದವು.

ಶೀಲ ಸರಸರನೆ ಒಲೆಯಲ್ಲಿನ ಕೆಂಡಗಳನ್ನು ಹೊರಗೆಳೆದಳು. ಅವುಗಳನ್ನು ಮೇಲಾಡಿಸಿ, ಹೊರಳಿಸಿ ಹಪ್ಪಳ ಸುಟ್ಟಳು. ಅಬ್ಬಾ! ಎಷ್ಟೊಂದು ತಾಪ. ಈ ಕೆಂಡಗಳಿಂದ ಝಳ ತಾಕಿ ಮುಖವೆಲ್ಲ ತಾಮ್ರದಂತೆ ಕೆಂಚಗೆ ಮಿಂಚುತ್ತಿದೆ, ಉರಿಯುತ್ತಿದೆ. ಈ ಬಿಸಿಯನ್ನು ಆರಿಸಿ ತಂಪು ಮಾಡಿದಾಗ ಹಾಯಾಗಿರುತ್ತದೆ ಅಲ್ಲವೇ? ನೀರು ತೆಗೆದುಕೊಂಡು ಎಲ್ಲ ಕೆಂಡಗಳಿಗೂ ಚಿಮುಕಿಸಿ ಆರಿಸಿ ತಂಪು ಮಾಡಿದಳು. ಝಳ ಕಡಿಮೆಯಾಗಿ ಮನಸ್ಸಿಗೆ ಹಾಯೆನಿಸಿತು. ಮುತ್ತಿನ ಸರದಂತೆ ಹಣೆಯ ಮೇಲೆ ನಿಂತಿದ್ದ ಬೆವರು ಹನಿಗಳನ್ನೊರೆಸಿಕೊಂಡು ಅನ್ನದ ತಟ್ಟೆಯನ್ನೆತ್ತಿಕೊಂಡು ಹಾಲಿಗೆ ಬಂದಳು.

ತಲೆಯೆತ್ತಿ ನೀಳವಾದ ಬೆರಳುಗಳಿಂದ ಚಮಚ ಗ್ಲಾಸುಗಳೊಡನೆ ಆಟವಾಡುತ್ತಿದ್ದ ಅಶೋಕ ಎರಡು ವರ್ಷದಿಂದ ಈ ಭೂಮಿಯ ಮೇಲೆ ಇಲ್ಲದ ಮನೋರಮಾ ತಮ್ಮ ತಲಿಮ್ಯಾಲೆ, ಎದಿಮ್ಯಾಲೆ ಭಾರ ಆಗಿ ಕೂತಿದ್ಲು. ಈಗ ಹಗುರಾತು ತಲಿ. ಗಂಡನ ಸುಂದರವಾದ ಬೆರಳುಗಳನ್ನು ಅಪರಿಚಿತಳಂತೆ ದಿಟ್ಟಿಸಿದ ಶೀಲಾ ಹೇಳಿದಳು.

"ಅನ್ನಾ ತರೂದು ತಡಾ ಆತು. ಬರೇ ನೀರು ಕುಡದು ಹೊಟ್ಟಿ ತುಂಬಿಸಿಕೋ ಬ್ಯಾಡ್ರಿ."

ಊಟವಾದ ಮೇಲೆ ವಿಶ್ರಾಂತಿಗಾಗಿ ಕಾಲು ಚಾಚಿ, ಬೇಸರ ಕಳೆಯಲು ಮತ್ತೊಮ್ಮೆ ಚಹ ಕುಡಿದು ಅದೇ ಸಂಜೆಗೆ ಊರಿಗೆ ಹೊರಟ ರಮೇಶ.

ಸ್ಟೇಶನ್ನಿನಲ್ಲಿ ರಮೇಶನನ್ನು ಬೀಳ್ಕೊಟ್ಟ ಅಶೋಕ, ಶೀಲಾ ಮನೆಗೆ ನಡೆದರು. ದಾರಿ ನೇರವಾಗಿ ಸರಳವಾಗಿತ್ತು. ಅಶೋಕ ಪ್ಯಾಂಟಿನ ಕಿಸೆಯಲ್ಲಿಯ ಕೈತೆಗೆದು ತಲೆಯೆತ್ತಿ ನಡೆಯುತ್ತಿದ್ದ. ಶೀಲಳ ಸೆರಗು ಸಂಜೆಯ ಸುಳಿಗಾಳಿಗೆ ಫಡ ಫಡ ಹಾರುತ್ತಿತ್ತು!

ಸುಳಿಗಾಳಿಯಲ್ಲಿ ಸಂಜೆ ಮಲ್ಲಿಗೆಯ ಕಂಪು ತೇಲಿ ಬರುತ್ತಿತ್ತು. ಹೆಂಡತಿಯ ಕಡೆಗೆ ನೋಡಿ ನಸುನಕ್ಕು ಕೇಳಿದ ಅಶೋಕ "ಶೀಲ ತವರ್ಮನಿಗೆ ನಾಳೆs ಹೋಗ್ತೀಯೇನು?"

"ನೋಡೋಣ, ಸದ್ಯಕ್ಕೆ ಯೋಚನೆಯಿಲ್ಲ" ಎಂದಳು. ಶೀಲ ಶಾಂತವಾಗಿ.

ನೆಲದ ಮೇಲೆ ನಡೆಯುತ್ತಿದ್ದರೂ ಸಂಜೆಯ ಸುಳಿಗಾಳಿಯಲ್ಲಿ ತೇಲಿ ಬರುತ್ತಿರುವಂತೆ ಇಬ್ಬರಿಗೂ ಅನಿಸಿತು.

***



# ಬಯಲು - ಆಲಯ

ಜೋರಾಗಿ ಬಿಕ್ಕಿದಳು. ಹೊಟ್ಟೆಯೊಳಗಿನ ದುಃಖವೆಲ್ಲ ಮೇಲೆದ್ದು ಬಾಯಿಗೆ ಬಂದಂತೆ ಬಿಕ್ಕಿದಾಗ ಅದರೊಡನೆಯೇ ಕಣ್ಣೀರೂ ಹರಿದು ತಲೆದಿಂಬು ತೊಯ್ದಿತು. ಭೋರೆಂದು ಬೀಸುತ್ತಿದ್ದ ಬಿರುಗಾಳಿಗೆ ತನ್ನ ಮನೆಗೆ ಆಸರೆಯಾಗಿದ್ದ ಚಪ್ಪರವೇ ದಿಕ್ಕಾಪಾಲಾಗಿ ಹಾರಿಹೋಗಿದೆ. ಮನೆಗೆ ಮರೆಯಿಲ್ಲದೆ ಚಳಿ, ಗಾಳಿ, ಮಳೆ, ಧೂಳು ಮನೆಯ ಒಳಗೆಲ್ಲ ತುಂಬಿ ತಾನು ಮನೆಯಲ್ಲಿಲ್ಲದೆ ಬಯಲಿನಲ್ಲಿ ನಿಂತಂತಾಗಿದೆ. ಮೇಲೆ ವಿಸ್ತಾರವಾದ ಆಕಾಶ. ಅದರ ಕೆಳಗೆ ಇದ್ದ ತಾನು ಏಕಾಕಿ, ತನಗೆ ಯಾರೂ ದಿಕ್ಕಿಲ್ಲ. ಇರಲು ಆಸರವೂ ಇಲ್ಲ ಎನ್ನಿಸಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಗಂಟಲಿನಿಂದ ಅಸ್ಪಷ್ಟವಾದ ಚೀತ್ಕಾರ ಹೊರಬಿದ್ದಾಗ ತಟ್ಟನೆ ಎಚ್ಚರವಾಯಿತು.

ನೋಡಿದರೆ ನಿಜವಾಗಿಯೂ ತಾನು ಅತ್ತ ಸಾಕ್ಷಿ ತಲೆದಿಂಬಿನಲ್ಲಿ ಮೂಡಿದೆ. ಎದೆ ಇನ್ನೂ ಡಬಡಬ ಎನ್ನುತ್ತಿದೆ. ಕನಸನ್ನು ನೆನೆದು ನಡುಗಿ ನಿಜವಾಗಿಯೂ ಚಪ್ಪರ ಹಾರಿಹೋಗಿದೆಯೋ ಎನ್ನುವಂತೆ ಅಸಹಾಯಳಾಗಿ ತಲೆ ಎತ್ತಿ ನೋಡಿದಳು. ತನ್ನ ಮೂರ್ಖತನಕ್ಕೆ ತಾನೇ ನಕ್ಕು ಹಗಲು ಮಲಗಿದರೆ ಹೀಗೇ ಏನೇನಾದರೂ ಕನಸು ಬೀಳುತ್ತವೆ ಎಂದುಕೊಳ್ಳುತ್ತ, ಹಾಸಿಗೆ ಸುತ್ತಿಡುತ್ತ, ಮಲಗುವ ಮುಂಚೆ ಏನೇನು ಮಾತು ನಡೆದಿತ್ತು ಎನ್ನುವುದನ್ನು ಜ್ಞಾಪಿಸಿಕೊಂಡಳು.

ಗಿರಣಿಯ ಕೆಲಸಕ್ಕೆ ಹೊರಡಲು ತಯಾರಾಗುತ್ತ ವೆಂಕಣ್ಣ ಎಂದಿದ್ದ. "ಅವ್ವಾಃ ಲಗ್ನಪತ್ರಾ ಯಾರ ಹೆಸರಲೆ ಮಾಡಿಸಬೇಕು?" ಮಾತು ಅಂಜಂಜುತ್ತ ಬಂದಂತಿತ್ತು.

ತಟ್ಟನೆ ತಾನು ಹೇಳಿದ್ದಳು, "ನಿನ್ನ ದೊಡ್ಡಪ್ಪ ಇದ್ದಾರಲ್ಲ ಗೋಪಣ್ಣ, ಅವರ ಹೆಸರಲೆ ಮಾಡಿಸೂವಂತೆ. ನಾಳೆ ನಾನಃ ಅವರ ಮನಿಗೆ ಹೋಗಿ ಅನಸಕ್ಕನ್ನ ಕೇಳಿ ಬರತೇನಿ. ಇಲ್ಲಾ ಅನಲಿಕ್ಕಿಲ್ಲ. ನಮಗರೆ ಇನ್ನಾರಿದ್ದಾರ ದಿಕ್ಕು, ಅವರನ್ನ ಬಿಟ್ಟರ", ಎಂದು. ವೆಂಕಣ್ಣ ಗೋಣು ಹಾಕಿ ಹೊರ ಬಿದ್ದಿದ್ದ. ತಾನು ಅಡಿಗೆಮನೆ ಕೆಲಸ, ಕಸ-ಮುಸುರೆ ಮುಗಿಸಿ ಒಂದು ಗಳಿಗೆ ಅಡ್ಡಾಗಿದ್ದಳು ಅಷ್ಟೆ. ಆಗಲೇ ಈ ಕನಸು.

ಸಾಲೆ ಬಿಟ್ಟು ಬಂದ ಭೀಮಣ್ಣನ ಮಕ್ಕಳು ಗೋಲಿ ಆಡುತ್ತ ಜಗಳಾಡಿದಾಗ ಅತ್ತ ಲಕ್ಷ್ಯ ಹೋಯಿತು. ಆಗಲೇ ವೆಂಕಣ್ಣ ಬರುವ ಹೊತ್ತಾಯಿತು. ಬೇಗ ಸಂಜೆಯ ಅಡಿಗೆ ಮಾಡಬೇಕು, ಎಂದುಕೊಂಡು ಎದ್ದು ಅಡಿಗೆಮನೆಗೆ ಹೋಗಿ ಅಕ್ಕಿಡಬ್ಬಿ ತೆಗೆದಳು, ಬರಿದಾಗಿತ್ತು. ಹೋಗಲಿ ಬಿಸಿರೊಟ್ಟಿ ಬದನೆಕಾಯಿ ಪಲ್ಯ ಮಾಡಿಬಿಡುವೆ ಎನ್ನುತ್ತ ಹಿಟ್ಟಿನ ಡಬ್ಬಿ ತೆಗೆದಾಗ ಅದರಲ್ಲೇನಿದೆ? ಮೂಲೆಯಲ್ಲಿದ್ದ ಮುಷ್ಟಿ ಹಿಟ್ಟು ಇಬ್ಬರಿಗೆ ಹೇಗೆ ಸಾಕಾಗಬೇಕು? ಅಕ್ಕಿ ಹಿಟ್ಟು ಎರಡೂ ಡಬ್ಬಿ ಖಾಲಿಯಾದರೂ ತಾನು ಹೇಗೆ ನೋಡಲಿಲ್ಲ? ಇತ್ತಿತ್ತಲಾಗಿ ಎಲ್ಲ ಕಡೆಗೂ ಲಕ್ಷ್ಯವಿಡುವುದು ತನ್ನಿಂದ ಆಗುತ್ತಿಲ್ಲ. ಇದುವರೆಗೆ ಎಂದೂ ಹೀಗಾದದ್ದಿಲ್ಲ. ಯಾವಾಗಲೂ ಸಾಮಾನು ತುಂಬಿ ಸಜ್ಜಾಗಿ ಇಟ್ಟಿರುತ್ತಿದ್ದೆ. ಈಗ ಎಲ್ಲಾ ಚಿತ್ರ ವಿಚಿತ್ರ, ಒಂದಿತ್ತು ಒಂದಿಲ್ಲಾ ಎನ್ನುವಂತೆ ನಡೆದಿದೆ. ಎಲ್ಲಾ ಬರಿದು, ತೆರವು. ಭಣ ಭಣ ಎನ್ನುತ್ತಿದೆ. ಮನಸ್ಸಿಗೆ ಕೆಲವು ದಿನಗಳಿಂದ -ತಲೆಗೆ ಕೈಹಚ್ಚಿ ಕುಳಿತೇಬಿಟ್ಟಳು. ತನಗೆ ಏನೋ ಆಗುತ್ತಿದೆ. ಏನೆಂದು ತಿಳಿಯಲೊಲ್ಲದು. ಅಸಹಾಯವಾದ ಮನಸ್ಸು ವಿಲಿ ವಿಲಿ ಒದ್ದಾಡಿತು. ಆಯಾಸ ತಡೆಯದೆ ಗೋಡೆಗೆ ಒರಗಿ ಕಣ್ಣುಮುಚ್ಚಿದಳು.

ತಿರುಗಿ ಕಣ್ಣು ಬಿಟ್ಟಾಗ ಮಸಕು ಕತ್ತಲೆ ಕೋಣೆಯನ್ನು ತುಂಬಿದ್ದಂತೆ ಅನಿಸಿ, ಭಯವಾಗಿ ನೆಟ್ಟಗೆ ಎದ್ದು ದೀಪ ಹಚ್ಚಿದಳು; ಪಕ್ಕದ ಮನೆಯ ಬಾಗಿಲು ತಟ್ಟಿ "ಗೋದಕ್ಕ ಇದ್ದಾರೇನು?" ಅಂದಳು.

ಬಾಗಿಲು ತೆಗೆದು ಭೀಮಣ್ಣ, "ಇದ್ದಾಳ ಬರ್ರಿ, ಒಳಗ ಬರ್ರಿ, ಏಃ ಜಾನಕ್ಕ ಬಂದಾರ ನೋಡು" ಎಂದ. ಅವನು ಬದಿಗೆ ಸರಿದರೂ ತುಂಬಿದ ಹಾಗಿದ್ದ ಆ ಮನೆಯಲ್ಲಿ ಕಾಲಿಡಲು ಸ್ಥಳವೇ ಇಲ್ಲದಂತೆ ಹೊರಗೇ ನಿಂತು

ಹಿಟ್ಟು ಕಡ ತಂದಳು. ಒಳಗೆ ಬರುತ್ತ ತುಂಬ ಬಯಲು ಬಯಲಾಗಿದ್ದಂತೆ ಅನಿಸುವ ತನ್ನ ಎರಡು ಕೋಣೆಗಳ ಮನೆಯ ವಿಸ್ತಾರವನ್ನೂ ಅಳೆದಳು.

ಬದನೆಕಾಯಿ ಪಲ್ಯ ಒಗ್ಗರಣೆ ಹಾಕಿದ ಮೇಲೆ, ಜಿಗುಟು ತಿರುವಲು ಎಸರಿಟ್ಟು ಹಿಟ್ಟು ಸಾಣಿಸುತ್ತ ಅದನ್ನೇ ದಿಟ್ಟಿಸಿದಳು. ನೋಡು ನೋಡುತ್ತಲೆ ಸಾಣಿಗೆ ಬರಿದಾಗುತ್ತಿತ್ತು. ತನ್ನ ಕಳೆದುಹೋದ ದಿನಗಳಂತೆಯೇ ಸಾಣಿಗೆಯಿಂದ ಇಳಿದ ಹಿಟ್ಟು ಪರಾತದ ಮೇಲೆ ಬೀಳುತ್ತಿತ್ತು. ಬೆಳಿಗ್ಗೆ ಊಟ ಮಾಡಿಹೋದ ವೆಂಕಣ್ಣ ಹಸಿದು ಬಂದಾಗ ಊಟಕ್ಕೆ ಅನ್ನ ಇಲ್ಲವಲ್ಲ ಎಂದು ಮನಸ್ಸು ಚಿಂತಿಸಿತು. ಕೈಯಲ್ಲಿ ಹಣವಿದ್ದರೂ ತನ್ನ ಅಲಕ್ಷ್ಯತನದಿಂದಾಗಿ ಅನ್ನವಿಲ್ಲದ ಹಾಗಾಯಿತಲ್ಲ. ಆದರೆ ಅದಕ್ಕಾಗಿ ವೆಂಕಣ್ಣನೇನೂ ವ್ಯಥೆಪಡುವವನಲ್ಲ ಎಂದು ನೆನಪಾಗಿ ಮನಸ್ಸಿಗೆ ಎಷ್ಟೋ ಸಮಾಧಾನವೆನಿಸಿತು. ಅವನು ಸಣ್ಣವನಿದ್ದಾಗಿನಿಂದಲೂ ಅಷ್ಟೆ. ಯಾವದಕ್ಕೂ ಹಟಮಾಡಿದವನಲ್ಲ. ಅಂಥಿಂಥದಕ್ಕೆ ಆಸೆಪಟ್ಟು ತನಗೆ ತೊಂದರೆಕೊಟ್ಟವನಲ್ಲ. ತಾನೇನು ಕೊಡುತ್ತೇನೋ ಏನು ಮಾಡುತ್ತೇನೋ ಅದರಲ್ಲೆ ತೃಪ್ತಿ ಅವನಿಗೆ - ಇಂಥ ಸ್ವಭಾವದ ಹುಡುಗನೆಂತಲೇ ಒಳ್ಳೆಯದಾಯಿತು. ಇಲ್ಲದಿದ್ದರೆ ಈ ಇಪ್ಪತ್ತು ವರ್ಷಗಳ ಒಂಟಿ ಜೀವನದಲ್ಲಿ ಶಾಲೆಯಲ್ಲಿ ಮಾಸ್ತರಿಕೆ ಮಾಡಿ ಮನೆಗೆಲಸ ಮಾಡಿ, ಅವನನ್ನು ಚೆನ್ನಾಗಿ ಬೆಳೆಸುವುದು ತನ್ನಿಂದ ಸಾಧ್ಯವಿತ್ತೇ? ಯಾವಾಗಲೂ ತನ್ನ ಆಯವ್ಯಯಕ್ಕೆ ಹೊಂದಿಕೊಂಡು ನಡೆಯುವ ಹುಡುಗನೆಂದೇ ಮ್ಯಾಟ್ರಿಕ್‌ವರೆಗೆ ಓದಿಸಿ, ಕೆಲಸ ಕೊಡಿಸುವುದು ಸಾಧ್ಯವಾಯಿತು. ತನಗೆ, ದುಡಿಯಹತ್ತಿದ ಮೇಲೆ ಮದುವೆಯ ಯೋಚನೆ ಮಾಡಿದಾಗ, "ಈಗಲೇ ಏನು ಅವಸರ ಅವ್ವ", ಎಂದು ಮುಂದೂಡುತ್ತಲೇ ಎರಡು ವರ್ಷ ಕಳೆದಿದ್ದ. ಇಬ್ಬರ ದುಡಿಮೆಯಿಂದಲೂ ಸಾಕಷ್ಟು ಹಣ ಕೂಡಿಬಿದ್ದ ಮೇಲೆ ಮದುವೆಗೆ ಒತ್ತಾಯಮಾಡಿದ್ದಳು ತಾನು. ಈಗ ಅದು ಅವಶ್ಯ ಎನಿಸಿದಾಗ, ಆಗ ಅವನೆಂದ ಮಾತು ಕೇಳಿ ಆಶ್ಚರ್ಯವಾಗಿತ್ತು ತನಗೆ.

'ಅವ್ವ, ಎಲ್ಲಾದರೂ ಹುಡುಗೀ ನೋಡಿ ಇಟ್ಟಿದ್ದೀಯಾ ನನಗೆ?" ಎಂದಿದ್ದ ನಗುತ್ತ.

"ಹುಡುಗಿಯರ ಶಾಲೆಯ ಅಕ್ಕವರು ಅಂತ ಹೀಗೆ ಕೇಳ್ತಿಯೇನೋ?" ಎಂದಿದ್ದಳು ತಾನೂ ನಗುತ್ತ.

"ಹೌದವ್ವ, ದಿನಾಲು ನೀನು ನೂರಾರು ಹುಡುಗಿಯರನ್ನ ನೋಡ್ತೀದಿ, ಮಾತಾಡ್ತೀದಿ ಮತ್ತು ಕಲಸ್ತೀದಿ. ಅವರೊಳಗ ಯಾರರೇ ಒಬ್ಬರನ್ನ ಆರಿಸಿದರಾಯಿತು. ಮತ್ಯಾಕ ನೋಡಲಿಕ್ಕೆ ಹೋಗಬೇಕು ಹಣ್ಣು ತೊಗೊಂಡು?" ಎಂದಾಗ ಅವನ ಮಾತು ಸ್ವಲ್ಪ ಗಂಭೀರವಾಗಿತ್ತು. ಸರಕ್ಕನೆ ತನಗೂ ಹೊಳೆದಿತ್ತು, ಇವನು ಯಾರನ್ನೋ ಮನಸ್ಸಿನಲ್ಲಿ ಇಟ್ಟೇ ಮಾತಾಡ್ತಿದ್ದಾನೆ ಅಂತ.

ಯಾರಿರಬೇಕು ಅವಳು? ತನ್ನ ಕೈಯಲ್ಲಿ ಕಲಿತ ಹುಡುಗಿಯರಲ್ಲಿ ಕೆಲವರು ಆಗಾಗ ತಿಳಿಯದ ಅಭ್ಯಾಸವನ್ನು ಹೇಳಿಸಿಕೊಳ್ಳಲಿಕ್ಕೆ ಎಂದೋ, ಅಕ್ಕವರಿಗೆ ಮನೆಗೆಲಸದಲ್ಲಿ ಸಹಾಯಮಾಡಲಿಕ್ಕೆ ಎಂದೋ ಮನೆಗೆ ಬರುತ್ತಿದ್ದುದು ನಿಜ. ಅಂಥ ಹುಡುಗಿಯರೆಲ್ಲ ಕಣ್ಮುಂದೆ ಸುಳಿದುಹೋದರು. ಅವರೆಲ್ಲರಲ್ಲಿ ಇದ್ದುದರಲ್ಲಿ ಸ್ವಲ್ಪ ಚೆನ್ನಾಗಿರುವವಳು ಎಂದರೆ ಶಕುಂತಲಾನೇ. ತಂದೆ ಇಲ್ಲದ ಹುಡುಗಿ, ತಾಯಿ ಬೀಡಿ ಕಟ್ಟುವ ಕಾರಖಾನೆಯಲ್ಲಿ ಕೆಲಸ ಮಾಡುತ್ತ ಮಗಳನ್ನು ಓದಿಸುತ್ತಿದ್ದಳು. ಬಡತನದಲ್ಲಿ ಬೆಳೆದ ಹುಡುಗಿಗೆ ವಿನಯ, ಗಾಂಭೀರ್ಯ ಸಹಜವಾಗಿದ್ದವು.

"ಅವ್ವಾs. ಸುಮ್ಮನ ಕೂತಿಯಲ್ಲ. ನಾ ಹೇಳಿದ್ದು ಮನಸ್ಸಿಗೆ ಬರಲಿಲ್ಲೇನು?" ವೆಂಕಣ್ಣ ಮತ್ತೊಮ್ಮೆ ಕೇಳಿದಾಗ ತನಗೆ ಗುಂಗಿನಿಂದ ಎಚ್ಚರವಾಗಿತ್ತು.

"ವೆಂಕಣ್ಣ, ನಿನ್ನ ಮನಸ್ಸಿನ್ಯಾಗ ಏನದ ಸ್ಪಷ್ಟ ಹೇಳಿಬಿಡಲ್ಲ. ನನ್ನ ಮುಂದ ಯಾಕ ಮುಚ್ಚಿ ಇಡತಿ ?" ಎಂದು ಚಿಗುರು ಮೀಸೆಯ ಮರೆಯಲ್ಲಿ ನಗುತ್ತಿದ್ದ ಮಗನನ್ನೇ ದಿಟ್ಟಿಸಿ ನೋಡಿದ್ದಳು. ತಾನು. ಮಗನ ಮನಸ್ಸಿನಲ್ಲಿ ಏನಿದೆ ಎಂದು ತಿಳಿಯಲು.

"ನಿನ್ನ ಮುಂದೆ ಹೇಳದೆ ಇನ್ನು ಯಾರ ಮುಂದೆ ಹೇಳಲಿ. ಆಗ ಮನೀಗೆ ಬರುತ್ತಿದ್ದಳಲ್ಲ ಶಕುಂತಲಾ, ನಿನ್ನ ವಿದ್ಯಾರ್ಥಿನಿ. ಆಕಿ ನಿನ್ನ ಸೊಸಿ ಆಗಲಿಕ್ಕೆ ನಿನ್ನ ಒಪ್ಪಿಗೆ ಬೇಕಾಗೇದ ನನಗೆ" ಎಂದಿದ್ದ. ಮಾತು ತಾನು ನಿರೀಕ್ಷಿಸಿದಂತೆಯೇ ಇತ್ತು.

"ಆಕಿ ಸಾಲೀ ಬಿಟ್ಟು ಎರಡು ಮೂರು ವರ್ಷ ಆಗಿಹೋಯಿತಲ್ಲಪ್ಪಾ. ಮದವಿ ಆಯಿತೋ ಏನೋ" ಎಂದಿದ್ದಳು ತಾನು ಅನುಮಾನಿಸುತ್ತ.

"ಇಲ್ಲವ್ವಾ, ಈ ವರ್ಷ ಮ್ಯಾಟ್ರಿಕ್ ಪರೀಕ್ಷಾಕ ಕೂಡ್ರತಾಳಂತ, ನಾನು ಗಿರಣೀಗೆ ಹೋಗೂ ಹಾದಿ ಅವರ ಮನಿ ಹತ್ತಿರನs ಅಲ್ಲ. ಯಾವಾಗರೆ ಭೆಟ್ಟಿ ಆಗತಿರತಾಳ," ಎಂದು ವೆಂಕಣ್ಣನೆಂದಾಗ ಹೃದಯಕ್ಕೆ ನೋವಾಗಿತ್ತು. ಒಂದು ಮೂಲೆಯಲ್ಲಿ ಎಲ್ಲೋ ಅಳುಕಿದಂತೆ ಭಾಸವಾಗಿ ಮುಖ ಬಾಡಿತ್ತು. ಏನು ಕಾರಣವೆಂದು ತನಗೆ ತಿಳಿಯದೇ ಇರಲಿಲ್ಲ. ತನಗೆ ತಿಳಿಯದಂತೆ ವೆಂಕಣ್ಣ ಆಗಾಗ ಶಕೂನ್ನ ಭೆಟ್ಟಿ ಆಗತಿರತಾನ ಎಂದರೆ ತಾನೇಕೆ ಮನಸ್ಸು ಸಣ್ಣದು ಮಾಡಿಕೊಳ್ಳಬೇಕು. ಛೇ! ಎಂದುಕೊಂಡು ಮಗನನ್ನೇ ನೋಡಿದಾಗ ವೆಂಕಣ್ಣ ಉತ್ಸುಕತೆಯಿಂದ, ಅದಕ್ಕೂ ಹೆಚ್ಚಾಗಿ ಕಾತರತೆಯಿಂದ ತನ್ನನ್ನೇ ನೋಡುತ್ತಿದ್ದ. ಅವನ ನಗೆ ಇನ್ನೂ ಮಾಯವಾಗಿರಲಿಲ್ಲ. ಅದು ಹಾಗೆಯೇ ಇರಬೇಕು ಯಾವ ಕಾಲಕ್ಕೂ ಎಂದಿತು ಮನಸ್ಸು. ಅವನು ಸುಖವಾಗಿ ಇರಬೇಕು ಎಂದಲ್ಲವೆ ತಾನು ಎಲ್ಲವನ್ನೂ ಮಾಡುವುದು ಎನ್ನಿಸಿ, ತಕ್ಷಣ ಶಕು ತನ್ನ ಸೊಸೆಯಾಗಲು ತನ್ನ ಅಡ್ಡಿ ಇಲ್ಲವೆಂದು ತಿಳಿಸಿದ್ದಳು. ಈ ಎರಡು ವರ್ಷಗಳ ಅವಧಿಯ ಪರಿಚಯದಲ್ಲಿ ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದುಕೊಂಡಿರಬಹುದು ಎನ್ನುವ ಸಮಾಧಾನವೂ ಇತ್ತು ತನಗೆ. ಹಾಗೆಯೇ ಮದುವೆಯ ಮಾತು ಮುಂದುವರೆದು ಮಹೂರ್ತ ಗೊತ್ತು ಮಾಡಿಯೂ ಆಗಿತ್ತು.

ಇದ್ದೊಬ್ಬ ಮಗನ ಮದುವೆಗೆ ಸಂಭ್ರಮಪಡಬೇಕಾದ ಹೊತ್ತಿನಲ್ಲಿ ತನಗೇಕೆ ಹೀಗೆ ಆಗುತ್ತಿದೆ? ತಿಳಿಯದೆ ಜೀವ ಚಡಪಡಿಸಿತು. ಕೈ ರೊಟ್ಟಿ ಬಡಿಯುತ್ತಿತ್ತು, ಮನಸ್ಸು ತನ್ನ ಪಾಡಿಗೆ ತಾನು ಚಿಂತಿಸುತ್ತಿತ್ತು. ಹೊರಗಿನಿಂದ ಬಂದ ಮಗ ಕೈಕಾಲು ತೊಳೆದುಕೊಂಡು ತಾಟು ಹಿಡಿದು ಒಲೆಯ ಹತ್ತಿರ ಬಂದು ಕುಳಿತಾಗಲೇ ತನಗೆ ಎಚ್ಚರ.

"ಯಾಕವ್ವ, ಆರಾಮ ಅದೀ ಇಲ್ಲೋ? ಮುಖಾ ಸಣ್ಣದಾಗೇದ," ಕಳಕಳಿಯಿಂದ ಕೇಳಿದ ವೆಂಕಣ್ಣ.

"ಯಾಕೂ ಇಲ್ಲಪ್ಪಾ, ತಲೀ ನೋಯುತ್ತಿತ್ತು ಸ್ವಲ್ಪ." ಏನೆಂದು ಹೇಳುವದು ಅವನ ಮುಂದೆ?

"ಚಹಾ ಮಾಡಿಕೊಡಲೇನು ಸ್ಟೋವ್‌ದ ಮ್ಯಾಲೆ?"

"ಈಗs ಬ್ಯಾಡಾ. ಊಟ ಆದ ಮ್ಯಾಲೆ ಒಂದು ಅನಾಸಿನ್ ಗುಳಿಗಿ ನುಂಗಿ ಬಿಸಿ ಚಹಾ ಕುಡಿ; ತಾನs ಕಡಿಮೆ ಆಗ್ತದ. ಕೆಲಸ ಭಾಳ ಆಯಿತು, ಒಬ್ಬಾಕೀಗೇ ಬ್ಯಾಸರ ಆಗಿರಬೇಕು. ಇನ್ನೇನು ಬಿಡು, ಶಕೂ ಬಂದ ಮ್ಯಾಲೆ ಮನೀ ಕೆಲಸಕ್ಕೆ ಪೆನ್ಶನ್ ಆಗ್ತದ ನಿನಗ. ಸಾಲೀ ಕೆಲಸ ಒಂದs ಇನ್ನ ಮಾಲೆ," ಖುಶಿಯಿಂದ ವೆಂಕಣ್ಣನ ಮುಖ ಅರಳಿತ್ತು. ಆ ಮಾತು ಕೇಳಿ ನಗು ಬರದಿದ್ದರೂ ಒತ್ತಾಯದಿಂದ ನಕ್ಕಳು ಮಗನಿಗಾಗಿ.

"ವೆಂಕಣ್ಣಾs" ಭೀಮಣ್ಣನ ಕೂಗಿಗೆ ವೆಂಕಣ್ಣ ಎದ್ದ. ಇನ್ನು ಇಬ್ಬರೂ ಕೂಡಿ ಬೀಡಿ ಸೇದಿ ಹರಟೆ ಹೊಡೆದು ಬರಬೇಕಾದರೆ ತಾಸು ಕಳೆಯುತ್ತದೆ ಎಂದು ತಿಳಿದಿದ್ದ ತಾನು, "ಲೈಟ್ ಆರಿಸಿ ಬಾಗಿಲು ಮುಂದೆ ಮಾಡಿಕೊಂಡು ಹೋಗು ವೆಂಕೂ, ನಾ ಇನ್ನ ಮಲಕೋತೀನಿ," ಎಂದಳು.

ಕೋಣೆಯಲ್ಲಿ ಕತ್ತಲು ಆವರಿಸಿದೊಡನೆ ಮಲಗಲು ಅನುವಾಗಿ ಕಾಲುಗಳ ಮೇಲೆ ಚಾದರ ಎಳೆದುಕೊಂಡು ಬಲಗೈಯಿಂದ ಮಂಗಳಸೂತ್ರವನ್ನೆತ್ತಿ ಕಣ್ಣು, ಹಣೆಗಳಿಗೆ ಒತ್ತಿಕೊಂಡಳು. ಯಾಂತ್ರಿಕವಾಗಿತ್ತು ಆ ಕೆಲಸ. ಇಪ್ಪತ್ತೆರಡು ವರ್ಷಗಳ ಹಿಂದೆ ಆ ಸೂತ್ರ ಕೊರಳಿಗೆ ಬಿದ್ದಂದಿನಿಂದ ನಿತ್ಯದ ರೂಢಿಯಾಗಿತ್ತು ಈ ಕೆಲಸ. ಅದೇಕೋ ಇಂದು ಆ ಸೂತ್ರವನ್ನು ಬಂಧಿಸಿದವನ ನೆನಪು ಬೆನ್ನಟ್ಟಿತು.

ತಮ್ಮಿಬ್ಬರ ಮದುವೆ ನಡೆಯುವುದಕ್ಕೆ ಮುಖ್ಯ ಕಾರಣವಾದದ್ದು ತಮ್ಮ ಪ್ರೇಮ. ತನ್ನ ಮನೆಯ ಎದುರಿನಲ್ಲೇ ಆಫೀಸಿನ ಕಟ್ಟಡವನ್ನು ಕಟ್ಟಿಸುತ್ತಿದ್ದ ಕೆಲಸಕ್ಕೆ ಮೇಸ್ತ್ರಿಯಾಗಿ ಬಂದಿದ್ದರು ಅವರು. ತಾನು ಕೆಲಸವಿಲ್ಲದಾಗ ಕಿಟಕಿಯಲ್ಲಿ ನಿಂತು ಅವರೆಲ್ಲ ಮಾಡುತ್ತಿದ್ದ ಕೆಲಸವನ್ನೇ ನೋಡುತ್ತಿದ್ದಳು. ಅವರು ಆಗಾಗ ಅತ್ತಿತ್ತ ಓಡಾಡುತ್ತ ಗಂಡಾಳುಗಳನ್ನು ಗದ್ದರಿಸಿದಾಗ, ಹೆಣ್ಣಾಳುಗಳೊಡನೆ ನಕ್ಕಾಗ ತನ್ನ ಲಕ್ಷ್ಯ ಅವರತ್ತ ಹೋಗುತ್ತಿತ್ತು. ತನ್ನ ಗಮನ ಸೆಳೆಯಲೆಂದೇ ಅವರು ಹಾಗೆ ಮಾಡುತ್ತಿದ್ದರೆನ್ನುವುದು ತನಗಿನ್ನೂ ತಿಳಿದಿರಲಿಲ್ಲ.

ಮುಂದೆ ಒಂದು ದಿನ ಇಪ್ಪತ್ನಾಲ್ಕು ಗಂಟೆಯೂ ತುಂಬಿರುತ್ತಿದ್ದ ಆ ಕಟ್ಟಡದ ಹೌದಿನ ನೀರು ತುಂಬಿಕೊಂಡು ಬರಲೆಂದು ಹೋದಾಗ ತಾವೇ ಬಗ್ಗಿ ಕೊಡ ತುಂಬಿಟ್ಟು ಕೊಟ್ಟಿದ್ದರು. ಬೇಕಾದಾಗ ಬಂದು ನೀರು ಒಯ್ಯಲು ಅನುಮತಿಯನ್ನು ಕೊಟ್ಟಿದ್ದರು. ಪಾತಾಳದಂಥ ಬಾವಿಯಿಂದ ನೀರು ಜಗ್ಗುತ್ತಿದ್ದ ತಮ್ಮ ಮನೆಯವರಿಗೆಲ್ಲ ಇದು ಸಂತೋಷದ ಮಾತಾಗಿತ್ತು. ದಿನವೂ ಅವರೊಡನೆ ಭೆಟ್ಟಿ, ಮಾತು, ನಗು ಮುಂದುವರೆದಂತೆ ಅವರ ಆಕರ್ಷಣೆ ಹೆಚ್ಚಾಗುತ್ತ ನಡೆದಿತ್ತು ತನಗೆ. ಒಂದು ದಿನವೂ ಅವರನ್ನು ನೋಡದಿದ್ದರೆ ಸಮಾಧಾನವಿರುತ್ತಿರಲಿಲ್ಲ. 'ಫ್ಲೂ' ಬಂದು ನಾಲ್ಕು ದಿನ ಅವರು ಕೆಲಕ್ಕೆ ಬರುವುದನ್ನೇ ಬಿಟ್ಟಾಗಲಂತೂ ತನ್ನ ಅವಸ್ಥೆ ಹುಚ್ಚು ಹುಚ್ಚಾಗಿತ್ತು. ಆ ಕಟ್ಟಡದ ಕೆಲಸ ಮುಗಿದು ಅವರು ಬೇರೆ ಕಡೆಗೆ ಹೋಗಬೇಕಾಗಿ ಬಂದಾಗ ತಾವಿಬ್ಬರೂ ಒಂದು ನಿರ್ಧಾರಕ್ಕೆ ಬಂದಿದ್ದರು. ಮದುವೆಯ ಮಾತು ಬಂದಾಗ ತನ್ನ ಸಂತೋಷಕ್ಕೆ ಪಾರವಿರಲಿಲ್ಲ. "ಮನೆಯವರನ್ನು ಕೇಳಬೇಕು ನೀವು" ಎಂದಿದ್ದಳು ನಗುತ್ತ. ತನ್ನ ಮಾತಿಗೆ ಮನ್ನಣೆ ಕೊಟ್ಟು ಅವರು ಮನೆಯವರನ್ನು ಕೇಳಿದಾಗ ಅಲ್ಲಿ ನಕಾರಾತ್ಮಕ ಉತ್ತರ ಸಿದ್ಧವಾಗಿತ್ತು. ತನ್ನ ಹಟ, ಅಳು ಯಾವದೂ ಫಲ ಕೊಟ್ಟಿರಲಿಲ್ಲ. ಅವರದು ಒಂದೇ ಹಟ. "ನಮಗೆ ಮೇಸ್ತ್ರಿ ಕೆಲಸದ ಅಳಿಯ ಬೇಡ. ಅಲ್ಲದೇ ಜಾತಿ ಸ್ವಲ್ಪ ಬೇರೆ, ನಾವು ಬೇರೆ ಉತ್ತಮ ವರ ನೋಡುತ್ತೇವೆ" ಎಂದು.

ತನ್ನ ಮುಂದಿನ ಬದುಕಿನ ಪ್ರಶ್ನೆಯನ್ನು ಬಿಡಿಸುವ ಹೊಣೆ ತನ್ನ ಮೇಲೆಯೇ ಬಿದ್ದಿತ್ತು. ಆಗ ಅವರು ಹೇಳಿದ್ದು ಒಂದೇ ಮಾತು. "ನಾನು ಜೀವಕ್ಕಿಂತ ಹೆಚ್ಚು ನಿನ್ನನ್ನು ಪ್ರೀತಿಸುತ್ತೇನೆ. ನಿನಗೆ ನಾನು ಯೋಗ್ಯ ಅಂತ ಕಂಡುಬಂದರೆ ನನ್ನೊಡನೆ ಬಾ. ಮದುವೆಯಾಗಿ ಸುಖವಾಗಿ ಇರುವೆ," ಎಂದು. ಆ ಮಾತಿನಿಂದಾಗಿ ತವರಿನವರ ಅಗಲಿಕೆಯ ನೋವು ಸಹಿಸುವುದು ತನ್ನಿಂದ ಸಾಧ್ಯವಾಗಿತ್ತು. ಮದುವೆಯಾಗಿ ಸುಖವಾಗಿ ರಾಣಿಯಂತೆ ಬಾಳಿದ್ದಳು ತಾನು-

ಬಾಗಿಲು ದಡಕ್ಕೆಂದಿತು. ಬೆಳಕು ಕೋಣೆಯನ್ನು ತುಂಬಿತು.

"ಅವ್ವ, ಕುಳಿತೇ ಇದ್ದೀಯಲ್ಲ, ನಿದ್ದೆ ಬರಲಿಲ್ಲೇನು?" ಎಂದ ಮಗ ಅಚ್ಚರಿಯಿಂದ.

"ಇಲ್ಲಪ್ಪಾ, ಮಲಗಿಕೊಂಡೆ ನೋಡು" ಚಾದರದ ಮುಸುಕು ಎಳೆದಿದ್ದಳು, ಎಷ್ಟು ಮುಸುಕು ಎಳೆದು ಎಳೆದು ಒಳಕ್ಕೆ ದಬ್ಬಿದರೂ ಮತ್ತೆ ಮತ್ತೆ ಎದ್ದು ಬರುತ್ತವಲ್ಲ ಈ ನೆನಪುಗಳು. ಆದರೂ ಈಗ ಬರಿದಾಗಿದ್ದ ತನ್ನ ಮನಸ್ಸು ಈ ನೆನಪುಗಳಿಂದ ತುಂಬಿಕೊಳ್ಳುತ್ತಿದೆ. ಅದರಿಂದ ಮನಸ್ಸಿಗೆ ಒಂದು ರೀತಿಯ ಹಿತವಾದ ನೋವು, ಸುಖ ಕೊಡುವ ನೋವು.

ರಾಣಿಯ ಹಾಗಿದ್ದಳು ತಾನು ಯಾರನ್ನೂ ಲೆಕ್ಕಿಸದೆ. ತನ್ನನ್ನು ಸುಖವಾಗಿಡಲು ದಿನವೂ ಹೆಚ್ಚು ಹೆಚ್ಚು ದುಡಿಯುತ್ತಿದ್ದ ಅವರ ಕಾರ್ಯಕ್ಷೇತ್ರ ವಿಸ್ತಾರವಾಗತೊಡಗಿತ್ತು. ಅದರೊಡನೆಯೇ ಹಣವೂ ಬರುತ್ತಿತ್ತು ತಮ್ಮ ಸುಖವನ್ನು ಹೆಚ್ಚಿಸಲು. ಆ ಹಣವನ್ನು ವ್ಯಯಿಸಲು ಇನ್ನಾರಿದ್ದರು! ಚಿಕ್ಕಂದಿನಲ್ಲೇ ತಂದೆ-ತಾಯಿಯರನ್ನು ಕಳೆದುಕೊಂಡ ಅವರಿಗೆ ಬಳಗವಿಲ್ಲ. ತಾನು ಇದ್ದ ಬಳಗವನ್ನೆಲ್ಲ ಬಿಟ್ಟು ಬಂದವಳು. ಅವರು ರಾಜ, ತಾನು ರಾಣಿ, ತಮ್ಮ ಮನೆಯೇ ಸಾಮ್ರಾಜ್ಯ. ಅವರ ಕೆಲಸ ಹೆಚ್ಚಾದಂತೆಲ್ಲ ವಿರಹದ ದಿನಗಳೇ ಹೆಚ್ಚಾಗಿದ್ದವು. ತನ್ನ ಪಾಲಿಗೆ ಇಂದು ಈ

ಊರು, ಇನ್ನಂದು ದಿನ ಮತ್ತೊಂದು, ಹೀಗೆ ಊರು ಊರು ತಿರುಗುತ್ತಿದ್ದವರು ಮನೆಗೆ ಹಿಂತಿರುಗಿದಾಗ ತನಗಾಗುವ ಸಂತೋಷ ಹೇಳತೀರದು. ಮೊದಮೊದಲು ಬಾಧಿಸುತ್ತಿದ್ದ ಅಗಲಿಕೆಯ ನೋವು ವೆಂಕಣ್ಣ ಹುಟ್ಟಿದ ಮೇಲೆ ಕಡಿಮೆಯಾಗಿತ್ತು. ಮಗನ ಮತ್ತು ಮನೆಯ ಕೆಲಸ, ನೆರೆಯವರೊಡನೆ ಮಾತು- ಹರಟೆಯಲ್ಲಿ ದಿನ ಕಳೆದು ಹೋಗುತ್ತಿದ್ದವು. ಪ್ರೇಮದ ಉದ್ವೇಗ ಕಡಿಮೆಯಾಗಿ, ಸಂಯಮ ನೆಲೆಸಿ, ಮೆಲುನಗೆ ಹಿತವಾದ ಮಾತಿಗೆ ಬದಲಿಸಿದ್ದವು. ಅವರನ್ನು ಕಣ್ಣಿಂದ ನೋಡಿದರೇ ಸಾಕು ಮನಸ್ಸಿಗೆ ತೃಪ್ತಿ. ಎರಡು ಒಳ್ಳೆಯ ಮಾತು ಆಡಿ ನಕ್ಕರೆ ಸಂತೋಷದಿಂದ ಹೃದಯ ಬಿರಿಯುತ್ತಿತ್ತು.

ಆಗಾಗ ಕೇಳುತ್ತಿದ್ದರವರು, "ನೀನು ಈಗ ಮೊದಲಿನ ಹಾಗೆಯೇ ಸುಖವಾಗಿ ಇದ್ದೀಯಾ? ನಾನು ಊರೂರು ತಿರುಗಿದರೆ ಮನಸ್ಸಿಗೆ ಬೇಸರವಾಗುವದಿಲ್ಲವೆ?" ಎಂದು.

ಅವರಿಗೆ ತನ್ನ ಮನಸ್ಸಿನ ಸ್ಥಿತಿಯನ್ನು ಹೇಗೆ ವರ್ಣಿಸಿ ಹೇಳಬೇಕೋ ತಿಳಿಯದೆ ಸುಮ್ಮನೆ ನಕ್ಕು ಅವರ ಮಗನನ್ನೇ ತೋರಿಸಿ, "ಇವನು ಇದ್ದಾನಲ್ಲ ನಿಮ್ಮನ್ನು ಮರೆಸಲು!" ಎನ್ನುತ್ತಿದ್ದಳು ತಾನು. ಆದರೂ ಅವರಿಗೆ ಸಂದೇಹವೇನೋ. "ನೀನು ಮೊದಲಿನ ಹಾಗೆ ಇಲ್ಲ. ಬದಲಾಗುತ್ತಿದ್ದೀ ಎನಿಸುತ್ತಿದೆ ನನಗೆ" ಎನ್ನುತ್ತ ಮಗನೆಡೆಗೆ ಕೈ ಚಾಚುತ್ತಿದ್ದರು.

ವೆಂಕೂಗೆ ಕಾಲು ಬಂದಾಗಿನಿಂದ ಹೊರಗೆ ತಿರುಗಲು ಹೋಗಿ ಬರುತ್ತಿದ್ದ. ಅವನ ಹಿಂದೆ ಓಡಿ ಓಡಿ ಹಿಡಿದು ತರಬೇಕಾಗುತ್ತಿತ್ತು ಅವನನ್ನು. ಹಾಗೆ ಒಮ್ಮೆ ಬೀದಿಗೆ ಇಳಿದಾಗ ಸೈಕಲ್‌ಗೆ ಸಿಗುತ್ತಿದ್ದ ವೆಂಕುವನ್ನು ಮನೆಗೆ ಕರೆತಂದವನು ಶಂಕರ.

"ಜಾನಕ್ಕ ನನ್ನ ಗುರುತು ಹತ್ತಿತೇನು, ನಿಮ್ಮ ಹುಡುಗ ಸೈಕಲ್ಲಿಗೆ ಸಿಗತಿದ್ದ" ಎಂದ. ಶಂಕರ ನನ್ನ ತಮ್ಮ ಸುರೇಶನ ಗೆಳೆಯ. ಆಗಾಗ ತಮ್ಮ ಮನೆಗೆ ಬರುತ್ತಿದ್ದಾಗ ಸಲಿಗೆಯಿಂದ ಮಾತಾನಾಡುತ್ತಿದ್ದ. ಈ ಅವಧಿಯಲ್ಲಿ ಎತ್ತರವಾಗಿ ಬೆಳೆದು ಚಿಗುರು ಮೀಸೆಯ ಯುವಕನಾಗಿದ್ದ.

"ಬಾ, ಕೂಡ್ರು, ಗುರುತು ಹತ್ತದಽ ಏನು. ಎಲ್ಲಾ ಆರಾಮ? ಎಂದು ಕೂಡ್ರಿಸಿ ಚಹಾ ಕೊಟ್ಟು ಉಪಚರಿಸಿದಳು ತಾನು. ಪರ ಊರಿನಲ್ಲಿದ್ದ ತನಗೆ ತವರಿನ ಸುದ್ದಿಯನ್ನೆಲ್ಲ ಹೇಳಿದ್ದರಿಂದ ಸ್ವಲ್ಪ ಹೊತ್ತಿನಲ್ಲಿಯೇ ಹೆಚ್ಚು ಆತ್ಮೀಯನಾಗಿದ್ದ. ತನ್ನವರೆನ್ನುವವರು ಹತ್ತಿರವಿಲ್ಲದಿದ್ದಾಗ ಅವನ ಮಾತುಕತೆ ಹಿತವಾಗಿದ್ದವು. ಮೇಲಿಂದ ಮೇಲೆ ಊಟಕ್ಕೆ ಆಮಂತ್ರಣವನ್ನು ಕೊಡುತ್ತಿದ್ದಳು. ವೆಂಕಣ್ಣನೂ ತುಂಬಾ ಹಚ್ಚಿಕೊಂಡಿದ್ದ ಶಂಕರನನ್ನು.

ಒಂದು ದಿನ ಅವನು ಊಟಕ್ಕೆ ನಿಂತ. ಸಂಜೆ ಮಳೆ ಹೊಡೆಯಲು ಸುರುವಾದದ್ದು ರಾತ್ರಿ ಹನ್ನೊಂದು ಹೊಡೆದರೂ ನಿಲ್ಲಲಿಲ್ಲ. ಒಂದೇ ಸಮನೇ ಸುರಿಯುತ್ತಿತ್ತು ಮಳೆ. "ಇನ್ನೇನು ಮನೆಗೆ ಹೋಗುತ್ತೀ, ಇಲ್ಲೇ ನಿಂತುಬಿಡು," ಎಂದಿದ್ದಳು ತಾನು-ಅವನಿಗೆ ಉಪಕಾರ ಮಾಡುತ್ತಿರುವವಳಂತೆ. ರಾತ್ರಿ ಎರಡು ಗಂಟೆಯ ಹೊತ್ತಿಗೆ ಬಾಗಲು ಸಪ್ಪಳವಾಗಿತ್ತು. ಪರಿಚಿತ ತಟ್ಟುವಿಕೆ, ನಿದ್ದೆಗಣ್ಣಿನಲ್ಲಿ ಎದ್ದು ಬಾಗಿಲು ತೆರೆದಿದ್ದಳು. ಅಸ್ತವ್ಯಸ್ತವಾಗಿದ್ದ ಸೀರೆ, ಕೂದಲುಗಳನ್ನು ಗಮನಿಸದೇ ಅವರು ಒಳಗೆ ಬಂದವರೇ ಹೊರ ಕೋಣೆಯಲ್ಲಿ ಮಲಗಿದ್ದ ಶಂಕರನನ್ನು ನೋಡಿ "ಯಾರವನು?" ಎಂದು ಗರ್ಜಿಸಿದ್ದರು. ಆಗ ತನಗೆ ಪೂರ್ತಿ ಎಚ್ಚರವಾಗಿತ್ತು.

"ನಮ್ಮ ಶಂಕರ, ಸುರೇಶನ ಗೆಳೆಯ ಅಂತ ಹೇಳತಿದ್ದೆನಲ್ಲ." ಇಷ್ಟರಲ್ಲಿ ಶಂಕರ ಎಚ್ಚತ್ತಿದ್ದ. ಅವನ ಮುಂದೆ ಹೆಚ್ಚು ಮಾತು ಬೇಡವೆಂದು ಒಳಗೆ ಬರಲು ಅವರಿಗೆ ಸನ್ನೆ ಮಾಡಿದರೂ ಅದರ ಕಡೆಗೆ ನೋಡದೇ, ಯಾವ ಸುರೇಶ, ಯಾವ ಶಂಕರ, ಇಲ್ಲಿ ಯಾಕ ಬಂದಾನ, ಏನು ತಿಳಿವೊಲ್ಲದು ನನಗ" ಎಂದಿದ್ದರು ತನ್ನ ಕಡೆಗೆ ಸಂದೇಹದಿಂದ ನೋಡುತ್ತ. ಆ ಮಾತು ಮನಸ್ಸಿಗೆ ನಾಟಿ, "ನನ್ನ ತಮ್ಮನ ಗೆಳೆಯಾ - ಹೆಚ್ಚು ಪರಿಚಯ ಆಗೇದ. ಇಲ್ಲೇ ಊಟಾ ಮಾಡು ಅಂದೆ...."

"ಇಲ್ಲೇ ಮಲಗಲಿಕ್ಕೂ ಹೇಳಿದಿ. ನಾ ಬರೂದಿಲ್ಲ ಅನ್ನೂದು ಗೊತ್ತs ಇತ್ತು. ನನ್ನ ಗರಜರೆ ಏನು ನಿನಗ ಇಷ್ಟು ಮಂದಿ ಗೆಳೆಯರು ಸಿಗೂ ಮುಂದ" ಎಂದು ವಿಕಟವಾಗಿ ನಕ್ಕರು.

ಹೆಡೆ ತುಳಿಸಿಕೊಂಡ ಹಾವಿನಂತಾಗಿತ್ತು ನನ್ನ ಸ್ಥಿತಿ. ಅವರ ಮಾತಿನ ಹಿಂದಿನ ಉದ್ದೇಶ ತಿಳಿದು ಅದಕ್ಕೆ ತನ್ನ ಆತ್ಮಸ್ಥೈರ್ಯ ಕಳೆದುಕೊಂಡೇ ಕೂಗಿದ್ದಳು. "ಏನು ಮಾತಾಡ್ತೀರಿ, ಎಚ್ಚರ ಅದs ಏನು ಮೈಮ್ಯಾಲೆ? ಏನು ಕುಡಿದು-ಗಿಡದು ಬಂದೀರೋ?"

"ನಾ ಏನು ಕುಡಿದಿಲ್ಲ. ಎಲ್ಲಾ ತಿಳೀತದ ನನಗ, ಕಣ್ಣು, ಕಿವಿ ತೆರೆದ ಇಟ್ಟಿರತೇನಿ ನಾನು ಊರೂರು ತಿರುಗತೇನಿ ಅಂತ ನಿನ್ನ ಚೆಲ್ಲಾಟ ನಡೀತದ. ದುಡಿದು ಹೆಣಾ ಆಗಿ ತಂದು ಹಾಕುವವ ನಾನು. ನೀನು ನಿನಗೆ ಬೇಕಾದವರನ್ನ ಎಲ್ಲಾ ಮನಿಯೊಳಗ ಕರಕೊಂಡು ಚಕ್ಕಂದಾ ಹೊಡಿ." ಅವರ ಮಾತುದಾರಿ ತಪ್ಪುತ್ತಿತ್ತು. ಪಿಶಾಚಿ ಸಂಚಾರವಾದಂತಿತ್ತು ಅವರಲ್ಲಿ.

ತಾನೇನೂ ಕಡಿಮೆಯಾದವಳಲ್ಲ. "ನನ್ನ ಅಂದರ ಏನಂತ ತಿಳಕೊಂಡೀರಿ! ನೀವು ಅಂದದ್ದು ಅನಿಸಿಕೊಂಡು ಬೀಳೂ ತೊತ್ತಲ್ಲ!" ಮನಸ್ಸಿನ ಉದ್ವೇಗ ತಡೆಯಲಾರದೆ ಕೂಗಿದ್ದಳು. ತಮ್ಮಿಬ್ಬರ ಅಬ್ಬರದಲ್ಲಿ ಶಂಕರ ಯಾವಾಗಲೋ ಮನೆ ಬಿಟ್ಟು ಹೋಗಿದ್ದ.

"ನೀನು ಯಾರು ಅನ್ನೂದು ನನಗೆ ಗೊತ್ತಿಲ್ಲೇನು? ಮನೀ ಬಿಟ್ಟು ಓಡಿ ಬಂದಾಕಿ. ನಾನು ಕರೆದೆ ನನ್ನ ಹಿಂದೆ ಬಂದಿ. ಇನ್ನು ಯಾರು ಕರೀತಾರೋ ಅವರ ಹಿಂದೆ ಓಡಿ ಹೋಗೂವಾಕಿ ನನ್ನ ಮನೀ ಬಿಟ್ಟು." ಅವರು ಒಂದೇ ಮಾತಿನಲ್ಲಿ ತಮ್ಮ ಸಂಬಂಧವನ್ನು ಅಳಿಸಿಬಿಟ್ಟಿದ್ದರು. ತನ್ನ ಸಿಟ್ಟು ಹುಚ್ಚೆದ್ದು ಕುಣಿದಿತ್ತು. ಏನು ಮಾಡಲೋ ಏನು ಬಿಡಲೋ ಎಂದು ವಿಚಾರಿಸುವಷ್ಟು ವಿವೇಕ ಉಳಿದಿದ್ದಿಲ್ಲ. ಯಾರ ಪ್ರೀತಿಗಾಗಿ ತಾನು ಎಲ್ಲವನ್ನೂ ಬಿಟ್ಟು ಬಂದೆ. ಅಂಥವರಿಂದ ಇಂಥ ಮಾತು ಕೇಳಿದರೂ ತನಗೆ ಅಳು ಬರಲಿಲ್ಲ. ತನ್ನ ಸಿಟ್ಟಿಗೆ ಅವು ತಾವೇ ಇಂಗಿಹೋಗಿದವು. ಆ ಕಾವಿನಲ್ಲಿ ಹೊರಗೆ ಬಂದಿದ್ದ ಅವಾಚ್ಯ ಮಾತುಗಳು ಮಾತ್ರ-

"ತಿಂಗಳಾನುಗಟ್ಟಲೆ ಹೊರಗೆ ಇದ್ದಾಗ ಹಾಂಗs ಇರಲಿಕ್ಕೆ ಶುಕಮುನಿಗಳೇನು ನೀವು? ಕೂಲಿ ಹೆಂಗಸರ ಸಹವಾಸಾ ನೀವು ಮಾಡಿದಾಂಗ ನಾನೂ ಕಾಲು ಜಾರತೀನಂತ ತಿಳಿದೀರೇನು ?" ಮನಸ್ಸಿನಲ್ಲೂ ಮೂಡಿಬರದ ವಿಚಾರಕ್ಕೆ ಮಾತಿನ ರೂಪ ಕೊಟ್ಟಿದ್ದಳು.

ಕಪಾಳಕ್ಕೆ ಒಂದೇಟು ಬಿಗಿದು, "ನಾನು ಗಂಡಸು, ಏನು ಮಾಡಿದರೂ ನಡೀತದ. ನೀ ಯಾರು ನನ್ನ ಕೇಳಲಿಕ್ಕೆ?" ಎಂದಿದ್ದರವರು ತಪ್ತರಾಗಿ.

"ನಮ್ಮ ಸಂಬಂಧ ಇಷ್ಟು ಸುಲಭವಾಗಿ ಹರೀತೀರಿ ಅಂತ ತಿಳಿದಿದ್ದಿಲ್ಲಾ ನನಗೆ. ಇನ್ನು ನನ್ನ ದಾರಿ ನನಗ, ನಿಮ್ಮದು ನಿಮಗ," ಎಂದು ವಾದಕ್ಕೆ ವಿರಾಮ ಹಾಕಿದ್ದಳು ತಾನು. ರಾತ್ರಿ ಕಳೆದು ಬೆಳಗಾದಾಗ ವೆಂಕಣ್ಣನನ್ನು ಬಗಲಲ್ಲಿಟ್ಟು ಹೊರಬಿದ್ದಿದ್ದಳು. "ವೆಂಕಣ್ಣನನ್ನು ಒಯ್ಯಬೇಡ," ಎಂದವರಿಗೆ ಅಷ್ಟೇ ನಿಷ್ಠುರವಾಗಿ, ತನ್ನ ರಕ್ತ, ಮಾಂಸದ ತುಣುಕು ಈ ಕೂಸು. ಅದನ್ನು ತಾನು ಒಯ್ಯುವವಳೇ, ತಮಗೆ ಬೇಕಿದ್ದರೆ ಹಟ ಸಾಧಿಸಿ ಕೋರ್ಟಿನ ಮೂಲಕ ಪಡೆಯಬಹುದು ಎಂದು ಹೇಳಿದ್ದಳು.

ತವರಿನವರ ಮನಸ್ಸಿನ ವಿರುದ್ಧ ಮದುವೆಯಾಗಿ ಇಂಥ ಪರಿಸ್ಥಿತಿಯಲ್ಲಿ ಮತ್ತೆ ಅಲ್ಲಿಗೆ ಹೋಗಲು ಸ್ವಾಭಿಮಾನ ಒಪ್ಪಲಿಲ್ಲ. ತಾನು ಮಗನೊಡನೆ ಒಬ್ಬರಿಗೆ ಭಾರವಾಗಿ ಬದುಕುವುದಕ್ಕಿಂತ ತನ್ನ ಅನ್ನ ತಾನು ದುಡಿಯಬೇಕು ಎಂದು ಸಂಕಲ್ಪಮಾಡಿ ಅಕ್ಕ ಅನುಸೂಯಳ ಮನೆಗೆ ಹೋಗಿದ್ದಳು. ತನ್ನ ಮೈಮೇಲಿನ ಬಂಗಾರವನ್ನು ಮಾರಿಸಿ, ಬರುವ ಹಣದಿಂದ ತನಗೆ ಟ್ರೇನಿಂಗ್ ಕಾಲೇಜು ಸೇರಲು ಅನುಕೂಲ ಮಾಡಿಕೊಡಬೇಕೆಂದು ಭಾವನನ್ನು

ಬೇಡಿಕೊಂಡಿದ್ದಳು. ಗೋಪಣ್ಣನ ಸಹಾಯದಿಂದ ಟ್ರೇನಿಂಗ್ ಮುಗಿದು ಮಾಸ್ತರಿಕೆ ಸಿಕ್ಕು ತನಗೂ ವೆಂಕಣ್ಣನಿಗೂ ಜೀವನಾಧಾರ ದೊರಕಿತ್ತು. ಯಾರ ಹಂಗೂ ಇಲ್ಲದೆ ಇರುವೆನೆಂಬ ಹೆಮ್ಮೆ ಉಳಿದೆಲ್ಲ ನೋವನ್ನೂ ದೂರಮಾಡಿತ್ತು. ಗಂಡನ ನೆನಪು ಆಗಾಗ ಕಾಡಿದರೂ ಅವರು ಅಂದ ಮಾತುಗಳು ಬೆಂಬತ್ತಿ ಬಂದು ತಮ್ಮಿಬ್ಬರ ಅಂತರವನ್ನು ಹೆಚ್ಚು ಹೆಚ್ಚು ಮಾಡುತ್ತಿದ್ದವು.

ಈ ವಿರಸವನ್ನು ಮರೆಯಬೇಕೆಂದು ಎಷ್ಟೋ ಜನ ತನಗೆ ಬುದ್ಧಿ ಹೇಳಿದ್ದರು. ಒಡೆದ ಕನ್ನಡಿಯಂತಾಗಿದ್ದ ಮನಸ್ಸು ಆ ಮಾತುಗಳಿಗೆ ಬಾಗದಷ್ಟು ಬಿರುಸಾಗಿತ್ತು. ಅವರಿವರಿಂದ ಹೇಳಿಸಿದ. ಮೇಲೆ ಗಂಡ ಒಂದೆರಡು ಕಾಗದಗಳನ್ನೂ ಬರೆದಿದ್ದರು. ಅವುಗಳಲ್ಲಿ ಪ್ರೀತಿಯ ಆಹ್ವಾನವಿರದೆ ಬರುವ ಮನಸ್ಸಿದ್ದರೆ ತಿರುಗಿ ಬಾ ಎನ್ನುವ ಅರ್ಥದಲ್ಲಿದ್ದವು. ಆ ಮಾತುಗಳಿಗೆ ತನ್ನನ್ನು ಸೆಳೆದುಕೊಳ್ಳುವ ಶಕ್ತಿ ಇಲ್ಲವೆನ್ನುವದನ್ನು ಕಂಡು ತಾನು ಸುಮ್ಮನಿದ್ದುಬಿಟ್ಟಿದ್ದಳು. ಉತ್ತರ ಬರೆಯುವ ಗೋಜಿಗೇ ಹೋಗಲಿಲ್ಲ. ಕೆಲಸ ಮಾಡಹತ್ತಿದ ಮೇಲೆ ಒಂದೆರಡು ಸಲ ತಾನಿದ್ದ ಊರಿಗೆ ತನ್ನನ್ನು ಹುಡುಕಿಕೊಂಡು ಗಂಡ ಬಂದಿದ್ದ ಸಂದರ್ಭಗಳೂ ಇದ್ದವು. ಆಗಲೂ ತಾನು ಅಷ್ಟೇ. ಅಪರಿಚಿತರನ್ನು ಕಂಡ ಹಾಗೆ ಅವರೊಡನೆ ಒಂದೆರಡು ಮಾತನಾಡಿ ಕಳಿಸಿಬಿಟ್ಟಿದ್ದಳು. ಆಮೇಲೆ ತನ್ನ ನಿಷ್ಠುರತೆಗೆ ತಾನೇ ಅಚ್ಚರಿಪಟ್ಟಿದ್ದಳು ಕೂಡ. ತಮ್ಮಿಬ್ಬರ ಖರ್ಚಿಗೆ ಅವರು ಕಳುಹಿಸಿದ ಹಣ ಕೂಡ ಮುಟ್ಟದೆ ಹಿಂದಿರುಗಿಸಿಬಿಟ್ಟಿದ್ದಳು. ನಿಷ್ಠುರವಾಗಿ ನಡೆದುಕೊಂಡವಳಿಗೆ ಗಂಡನ ಬಗ್ಗೆ ಕನಿಕರ ಮೂಡಿದ್ದು ಅವರು ಕುಡಿಯಲು ಕಲಿತಿದ್ದಾರೆಂದು ತಿಳಿದಾಗ ಮಾತ್ರ ತನ್ನದಾದ ವಸ್ತುವಿಗೆ ಏನೋ ಕೆಡುಕಾಗಿದೆ ಎನಿಸಿ ಎರಡು ದಿನ ಅತ್ತಿದ್ದಳು.

ವೆಂಕಣ್ಣನ ಲಾಲನೆ-ಪಾಲನೆ, ವಿದ್ಯಾಭ್ಯಾಸ, ಪರೀಕ್ಷೆಗಳು, ತನ್ನ ಶಾಲೆಯ ಕೆಲಸ, ಮನೆಕೆಲಸಗಳಲ್ಲಿ ಮನಸ್ಸು ನೆಟ್ಟು ಎಲ್ಲವನ್ನೂ ಹಿಂದೆ ನೂಕಿ, ಕಳೆದ ಇಪ್ಪತ್ತು ವರುಷಗಳನ್ನು ಕಳೆದಾಕೆಗೆ ಇತ್ತಿತ್ತಲಾಗಿ ಏಕೆ ಹೀಗೆ ನೆನಪಾಗುತ್ತಿದೆ, ಮನಸ್ಸು ಭಣಗುಡುತ್ತದೆ ಎನ್ನುವದು ತಿಳಿಯದಾಗಿತ್ತು. ಆಗಾಗ ವೆಂಕಣ್ಣ ಮನೆಯಲ್ಲಿಲ್ಲದಾಗ ಟ್ರಂಕಿನ ತಳದಲ್ಲಿದ್ದ ಅವರ ಪತ್ರಗಳನ್ನು ಮತ್ತೆ ಮತ್ತೆ ತೆರೆದು ಓದಿದಾಗಲೇ ಮನಸ್ಸಿಗೇನೋ ಸಮಾಧಾನ, ತೃಪ್ತಿ. ಕೈಯಲ್ಲಿ ಹಿಡಿದು, ಮಾಸಿ ಆ ಕಾಗದಗಳು ಹರಿದಿದ್ದರೂ ತಾನೂ ಇನ್ನೂ ಅವುಗಳನ್ನು ಏಕೆ ಇಟ್ಟುಕೊಂಡಿದ್ದೇನೆ ಎನ್ನುವುದು ತನಗೇ ತಿಳಿಯದು.

ವೆಂಕಣ್ಣನ ಮದುವೆಯಾಗಿ ಸೊಸೆ ಬರುತ್ತಾಳೆ. ಶಕೂ ತಮ್ಮ ಸೇವೆ, ಮನೆಕೆಲಸ ಚೆನ್ನಾಗಿ ನಿರ್ವಹಿಸಿಕೊಂಡು ಹೋಗುತ್ತಾಳೆ. ಮಗ ಸುಖವಾಗಿರುತ್ತಾನೆ ಎನ್ನುವುದು ಗೊತ್ತಿದ್ದರೂ ಮನಸ್ಸು ಏಕೋ ಸಂತೋಷ ಪಡುತ್ತಿಲ್ಲ. ತನ್ನದಾಗಿದ್ದ ವಸ್ತುವೊಂದನ್ನು ಕಳೆದುಕೊಂಡು ತಾನೀಗ ಬಾಯಿ ಬಾಯಿ ಬಿಡುತ್ತಿರುವ ಹಾಗಾಗಿದೆ. ಅದೇ ತನ್ನ ಸರ್ವಸ್ವ, ಅದೂ ಕಡಿದು ಹೋದರೆ ತನಗಿನ್ನೇನೂ ಇಲ್ಲೆನ್ನುವ ಭಾವನೆ ಉಕ್ಕಿ ಉಕ್ಕಿ ಬಂದು ದುಃಖವಾಗುತ್ತಿದೆ. ತಾನು ಕಣ್ಣೀರು ಹಾಕಿದರೆ ಮಗ ಏನು ತಿಳಿದುಕೊಂಡಾನು ಎನ್ನುವ ಭಯದಿಂದ ಅಳುವುದನ್ನೂ ಹತ್ತಿಕ್ಕಬೇಕಾಗಿದೆ. ಮನಸ್ಸೀ ಅಳಲು ಸ್ವಾತಂತ್ರ್ಯವಿಲ್ಲ ತನಗೆ. ತನ್ನ ಮನೆಯಲ್ಲೇ ತನಗೆ ಸ್ವಾತಂತ್ರ್ಯವಿಲ್ಲದಿದ್ದರೆ ತಾನೆಲ್ಲಿಗೆ ಹೋಗಬೇಕು? ಈ ಸ್ವಾತಂತ್ರ್ಯ ಬಿಟ್ಟು ಮತ್ತೆ ಬಂಧನಕ್ಕೆ ಹೋಗಬೇಕೆ? ಇಂಥ ಸ್ವಾತಂತ್ರ್ಯಕ್ಕಿಂತ ಆ ಬಂಧನವೇ ಹೆಚ್ಚು ಪ್ರಿಯವಾಗುತ್ತದೆ ತನಗೆ.

ಇದರ ಅರ್ಥ ಏನು ಎನ್ನುವುದು ತಿಳಿಯುವ ಮೊದಲೇ ಸಪ್ಪಳ ಮಾಡದಂತೆ ಎದ್ದು ಲೈಟು ಹಚ್ಚಿ ಸಾವಕಾಶವಾಗಿ ಟ್ರಂಕು ತೆಗೆದು ಹರಿದಿದ್ದ ಕಾಗದವನ್ನು ಎತ್ತಿ ಬಿಡಿಸಿದಳು. 'ಪ್ರಿಯ ಜಾನೂ' ಕಣ್ಣೀರಿನಿಂದ ಅಕ್ಷರಗಳು ಕಲಸಿದವು. ಕಾಗದವನ್ನೆತ್ತಿ ಹಣೆಗೊಯ್ದು ನಮಿಸಿ, "ನಿನ್ನ ಮಾಧವ" ಎಂದಿದ್ದಲ್ಲಿ ಮುತ್ತಿಟ್ಟಳು.

***

■■

# ತ್ರಿದಳ

## ಅಜ್ಜಿ

ಹೊರಲಾರದೆ ಹೊತ್ತುಕೊಂಡು ತಂದ ಹಲಸಿನ ಹಣ್ಣನ್ನು ಪಡಸಾಲೆಯಲ್ಲಿ ಇಟ್ಟುಕೊಂಡು ಗೋಡೆಗೊರಗಿ ಕುಳಿತರು ಗೌರಮ್ಮ. ಮತ್ತೆ ಏನೇನು ಸಾಮಾನು ಬೇಕಾಗಿತ್ತೆನ್ನುವದನ್ನು ನೆನಪು ಮಾಡಿಕೊಂಡು.

"ಸುಶೀಲಾಽ, ಒಂದು ದೊಡ್ಡ ಪೇಪರು, ಕುಡಗೋಲು, ಕೊಬ್ಬರಿ ಎಣ್ಣೆ ಬಟ್ಟಲು ತಾರವ್ವ" ಎಂದರು.

ತಾಯಿಯ ಹಿಂದೆಯೇ ಬಂದ ಮಂಜುಳಾ ಅಜ್ಜಿಯ ಮಗ್ಗುಲಲ್ಲೇ ಪದ್ಮಾಸನ ಹಾಕಿ ಕುಳಿತೇಬಿಟ್ಟಳು, ಅಂಗಿ ಕಾಲತುಂಬ ಮುಚ್ಚಿಕೊಂಡು.

"ಹಲಸಿನ ತೊಳೆ ಬೇಕೇನು ನಿನಗ. ಕೊಡ್ತೀನಿ ತಡಿ" ಎನ್ನುತ್ತ ಕಾಲುಗಳು ಹಾಗೂ ಅಂಗೈಯಿಂದ ಗಟ್ಟಿಯಾಗಿ ಹಿಡಿದಿದ್ದ ಹಣ್ಣನ್ನು ಎರಡು ಭಾಗ ಮಾಡಲು ಏಟು ಹಾಕಿದರು ಗೌರಮ್ಮ. ನಾಲ್ಕಾರು ಏಟು ಹಾಕಿದ ಮೇಲೆ ಇಬ್ಭಾಗವಾದ ಹಲಸಿನ ಹಣ್ಣನ್ನು ನೋಡಿ, ಮುಳ್ಳುಗಳು ಚುಚ್ಚಿ ಉರಿಯುತ್ತಿದ್ದ ಅಂಗೈಯನ್ನು ಬಾಯಿ ಹತ್ತಿರ ತಂದು ಊದಿಕೊಂಡು,

"ಅಬ್ಬಾ! ಏನ ಒರಟು ಇದರ ಸಿಪ್ಪಿ. ಮೈಮ್ಯಾಲೆ ಮುಳ್ಳೆಷ್ಟು? ದಿಂಡು, ಬಿಳಿ ಬಿಳಿ ಎಸಳು, ಬೀಜ ಎಲ್ಲಾ ತೆಗೀಬೇಕಾದರೆ ಒಂದು ಯುದ್ಧಾ ಮಾಡಿದಾಂಗ ಆಗ್ತದ. ಆಗ ಸಿಗತದ ಒಳಗಿನ ಮೆತ್ತಗಿನ ರೇಶಿಮೆ ಹಾಂಗ ಹೊಳಿಯೂ ತೊಳಿ. ಸೀ ಅಂದರ ಸಕ್ಕರಿ ಕಲಿಸಿದಷ್ಟು ಸೀ!" ಅರ್ಧ ತಮಗೆ, ಅರ್ಧ ಮೊಮ್ಮಗಳಿಗೆ ಹೇಳುತ್ತಲೇ ದಿಂಡು ಎಸಳುಗಳಿಂದ ತೊಳೆ ಬೇರೆ ಮಾಡಲು ಬೆರಳುಗಳಿಂದ ತಿವಿಯುತ್ತ ತಿಣಿಕಿದರು ಗೌರಮ್ಮ.

"ಮಂಜೂ, ನೀರು ಕಾದಾವ ಲಗೂನೆ ಬಾ, ತಲೆಗೆ ನೀರು ಹಾಕ್ತೀನಿ, ಆಮೇಲೆ ಅಡಿಗ್ಗೆ ಹೊತ್ತಾಗ್ತದ ನನಗ." ಸುಶೀಲಾನ ಕೂಗಿಗೆ ಮಂಜು ಮಿಸುಕಲಿಲ್ಲ. "ಇಲ್ಲಾ ಬರೂದಿಲ್ಲಾ ನಾ ಹಲಸಿನ ತೊಳಿ ತಿನ್ನುವಾಕಿ. ನಂಗ ಎರಿಯೂದು ಬ್ಯಾಡಾ" ಎಂದು ಕುಳಿತದಲ್ಲಿಂದಲೇ ಕೂಗಿ ಉತ್ತರ ಕೊಟ್ಟಳು ಮಂಜೂ.

ಹೆಂಡತಿಯ ಹೇಳಿಕೆಯಂತೆ ಚಂದೂ ಬಂದು ಅನಾಮತ್ತಾಗಿ ಅವಳನ್ನು ಎತ್ತಿ ಒಳಗೆ ಒಯ್ಯುವಾಗ ಕಾಲು ರಪ ರಪ ಬಡಿದು ಒದ್ದಾಡಿದಳು. ಬಚ್ಚಲ ಮನೆಗೆ ಹೋದ ಮೊಮ್ಮಗಳ ಹಿಂದೆಯೆ ಗೌರಮ್ಮನ ನೆನಪೂ ಓಡಿತು. ಕೈ ನಿಧಾನವಾಗಿ ಹಣ್ಣನ್ನು ಕೆದಕುತ್ತಿತ್ತು.

ಈ ನಾಲ್ಕು ವರ್ಷದ ಮಂಜೂ ಮಾಡುವ ಹಾಗೇ ನಮ್ಮ ಉಮ್ಮಿ ಹತ್ತು ವರ್ಷದವಳಾಗುವವರೆಗೂ ಮಾಡ್ತಿದ್ದಳು. ಅಪರೂಪದ ಮಗಳು ಏನು ಮಾಡಿದರೂ ಚೆಂದ. ಕೂತರೂ ಚೆಂದ, ನಿಂತರೂ ಚೆಂದ. ಅಷ್ಟು ಸಲಿಗೆ ಅವಳಿಗೆ. ಹುಟ್ಟಿ ಹತ್ತು ವರ್ಷ ಆಗೋವರೆಗೂ ತಮ್ಮ- ತಂಗಿ ಯಾರೂ ಸಿಕ್ಕದ್ದರಿಂದಲೋ ಏನೋ ಮನೆಯೊಳಗೆಲ್ಲಾ ಅವಳದೇ ಕಾರುಭಾರು. ಕನ್ನಡ ಕಲಿಸೋ ಮಾಸ್ತರರಿಗೆ ರಾಮಾಯಣ, ಮಹಾಭಾರತ ಅಂದರೆ ಬಹಳ ಪ್ರೀತಿ. ರಾಮಾಯಣದ ಊರ್ಮಿಳೆಯನ್ನು ಸಹಾ ನೆನಪಿನಲ್ಲಿ ಇಡಬೇಕೆಂದೇ ಇವರು ಊರ್ಮಿಳಾ ಎಂದು ಹೆಸರು ಇಟ್ಟಿದ್ದು, ಕರೆಯೋದು ನನಗೆ ಕಷ್ಟವಾಗ್ತದೆ ಅಂದರೂ ಕೇಳಲಿಲ್ಲ. ಅವಳ ತ್ಯಾಗ, ಪ್ರೇಮ, ದೊಡ್ಡ ಗುಣ ಇವಳಿಗೆ ಬರಬೇಕು. ಅದಕ್ಕೆ ಆ ಹೆಸರೇ ಇರಲಿ ಅಂತಾ ಇದ್ದರು. ಹುಂ ಇವಳಿಗೂ ಬಂತಲ್ಲ ತ್ಯಾಗ, ಪ್ರೇಮ ಇವೆಲ್ಲ. ತಂದೆ ತಾಯಿಗಳನ್ನು ತ್ಯಜಿಸಿ ಪ್ರೇಮಿಸಿದವನ ಕೈ ಹಿಡಿದು ನಮ್ಮನ್ನ ತೊರೆದೇ ಬಿಟ್ಲು. ಇಷ್ಟು ಪ್ರೀತಿಯಿಂದ ಸಾಕಿ, ಸಲಹಿ, ದೊಡ್ಡವಳನ್ನ ಮಾಡಿ, ವಿದ್ಯಾವಂತಳಾಗಿಸಿದ್ದಕ್ಕೆ ಸರಿಯಾಗಿ ನಡೆದುಕೊಂಡಳು.

ಹೆಣ್ಣುಮಗಳಿಗೆ ಇಷ್ಟು ಸಲಿಗೆ ಕೊಡುವದು ಒಳ್ಳೇದಲ್ಲ ಅಂತ ಸರೀಕರು, ನೆರೆಯವರು ಯಾರು ಎಷ್ಟು ಹೇಳಿದರೂ ನಾವೂ ಕೇಳಲಿಲ್ಲ. ನಮ್ಮ ಮಗಳ ಗುಣ ಬಂಗಾರದಂತಾದ್ದು ಅಂತ ನಾವಿಬ್ಬರೂ ಅವಳ ಭವಿಷ್ಯದ ಕನಸು ಕಾಣುವಾಗಲೇ ನಾವು 'ಬೇಡ' ಎಂದವನ ಜೊತೆಗೆ ಲಗ್ನ ಮಾಡಿಕೊಂಡು ಸರೀಕರಲ್ಲಿ ತಲೆ ಎತ್ತದ ಹಾಗೆ ಮಾಡಿಬಿಟ್ಟಳಲ್ಲ. ಬಿ. ಎ. ಓದಿ ಕೆಲಸ ಮಾಡುವವರೆಲ್ಲ ಹೀಗೇ ಮಾಡ್ತಾರೇನು? ಅವಳ ಸಂಬಳದಿಂದ ಮನೆಗೂ ಚಂದೂನ ಓದಿಗೂ ಎಷ್ಟೋ ಅನುಕೂಲ ಆಗ್ತಿತ್ತು ಅಂತ ಕೆಲಸಕ್ಕೆ ಸೇರಲು ಒಪ್ಪಿಗೆ ಕೊಟ್ಟಿದ್ದು. ಇನ್ನೊಂದೆರಡು ವರ್ಷ ಬಿಟ್ಟು ಯೋಗ್ಯ ವರ ಹುಡುಕಿ ಮದುವೆ ಮಾಡಬೇಕು ಅನ್ನೋವಾಗ ತನ್ನ ದಾರೀ ತಾನೇ ನೋಡಿಕೊಂಡುಬಿಟ್ಟಳು. ಅವಳೇನೋ ರಾಜೀವನ ಮದುವೆ ಮಾಡಿಕೊಳ್ಳೋ ವಿಷಯ ನಮ್ಮನ್ನ ಕೇಳಿದ್ದಳು. ಆದರೆ ಹೇಗೆ ಹೂಂ ಅನ್ನೋದು. ಅವನೂ ಅವಳಷ್ಟೇ ಕಲಿತವನು, ಮನೆಯಿಂದ ಆಸ್ತಿ-ಪಾಸ್ತಿ ಏನೂ ಇಲ್ಲ. ಮೇಲಾಗಿ ಬೇರೆ ಜಾತಿ. ಇಷ್ಟೆಲ್ಲಾ ಇರೋವಾಗ ಮುದ್ದಾಗಿ ಬೆಳೆಸಿದ ಹುಡುಗೀನ್ನ ಅಂತಹವನಿಗೆ ಕೊಟ್ಟರೆ ಜನ ಏನಂದಾರು. ಆದರೆ ಕಡೆಗೂ ಜನ ನಮ್ಮನ್ನು ಆಡಿಕೊಂಡು ನಗುವ ಹಾಗೇ ಮಾಡಿಬಿಟ್ಟಳು. ಅವಳು 'ನಮ್ಮ ಮದುವೆ ಆಯಿತು. ರಾಜೀವನ ಜೊತೆ ಮನೆಗೆ ಬರಲೇ" ಅಂತ ತಾರು ಕೊಟ್ಟಾಗ ಅಬ್ಬ! ನನ್ನ ಸಂಕಟ ದೇವರೇ ಬಲ್ಲ., ಆ ಕಸಿವಿಸಿ, ದುಃಖ, ಎಲ್ಲಾ ತಾಳಿಕೊಂಡು ಅವಳಿಗೆ ಬಾ ಅಂತ ಹೇಳೋದಕ್ಕೆ ಮನಸ್ಸೇ ಬರಲಿಲ್ಲ. 'ಇನ್ನು ನಮ್ಮ ಪಾಲಿಗೆ ಮಗಳು ಸತ್ತಳು' ಅಂತ ಉತ್ತರಾ ಬರೆಸಿದೆ. ಇವರಿಗೂ ಬಹಳ ಕಷ್ಟ ಆಯ್ತು. ಆದರೂ ಅವರು ಗಂಡಸರು, ಎಲ್ಲಾ ಒಳಗೇ ನುಂಗಿಕೊಂಡರು. ನನಗೆ ಮಾತ್ರ ಆರುತಿಂಗಳು ಮನೆಬಿಟ್ಟು ಹೊರಗೆ ಹೋಗೋದಕ್ಕೆ ಮನಸ್ಸು ಬರಲಿಲ್ಲ. ಹೊಟ್ಟೆ ಉರೀತಿತ್ತು.

"ಅಜ್ಜೀ ನನಗೊಂದೆರಡು ತೊಳೆ ಕೊಡು" ಮಂಜು ಕೈಚಾಚಿದಳು. "ಯಾಕಜ್ಜೀ ಅಳತೀ ಕೈ ನೋವಾಯಿತೇನು? ತಾ ಇಲ್ಲೆ, ನಾ ಬಿಚ್ತೀನಿ."

"ಇಲ್ಲವ್ವಾ, ಅಳೂದಿಲ್ಲ. ಕಣ್ಣಾಗ ಕಸಾ ಬಿತ್ತು" ಕಣ್ಣೊರಸಿಕೊಂಡರು ಗೌರಮ್ಮ. "ಪಾಪ, ಈ ಕಂದನಿಗೇನು ಗೊತ್ತು ಅಜ್ಜೀ ಕಷ್ಟ, ತನಗೊಬ್ಬ ಅತ್ತೆ ಇದ್ದಾಳ ಅನ್ನೋದು ಗೊತ್ತಿಲ್ಲ ಈ ಕೂಸಿಗೆ. ಅಷ್ಟs ಯಾಕ ಸುಶೀಲಾಗೂ ಗೊತ್ತಿಲ್ಲ" ಮನದಲ್ಲೆ ಮಾತನಾಡಿಕೊಂಡರು.

ಅವರ ಕೈಯನ್ನೇ ದಿಟ್ಟಿಸುತ್ತ ಕುಳಿತಿದ್ದ ಮಂಜೂ "ಅಜ್ಜಿ, ಅವ್ವಾನ ಕೈಯಾಗ ಬಂಗಾರದ ಬಳಿ ಅದಾವ. ನೀ ಯಾಕ ಹಾಕಿಕೊಂಡಿಲ್ಲ."

"ನನಗ ಯಾರು ಮಾಡಿಸಿಕೊಡಬೇಕವ್ವ. ನಿನ್ನ ಅವ್ವನಿಗೆ ಅವಳ ಗಂಡ ಮಾಡಿಸಿ ಕೊಟ್ಟಾನ" ಗೌರಮ್ಮ ನಗುತ್ತ ನುಡಿದರು.

"ಹುಂ, ಹಿಂಗೇನು ತಡೀ ಅಜ್ಜಾಗ ಹೇಳ್ತೀನಿ, ಅಜ್ಜಿಗೂ ಬಂಗಾರದ ಬಳಿ ಮಾಡಿಸಿಕೊಡು ಅಂತ." ಮಂಜೂ ಅಲ್ಲಿಂದ ಸರ್ರನೆ ಓಡಿದಳು.

ಗೌರಮ್ಮ ತಮ್ಮ ಬರಿಗೈ ನೋಡಿಕೊಂಡರು. ಮತ್ತೆ ಬೆರಳುಗಳಿಂದ ಒತ್ತಿ ಒತ್ತಿ ಬಿಳಿ ಎಸಳುಗಳನ್ನು ಸರಿಸಿ ತೊಳೆಯನ್ನು ಹಿಡಿಯಲೆತ್ನಿಸಿದರು. ಉಹುಂ, ಕೈ ಜಾರುತ್ತಿತ್ತು. ಇನ್ನೂ ಆಳವಾಗಿ ಮೀಟಿದರು.

"ಊರ್ಮಿಳಾನ ಪರೀಕ್ಷೇಕ್ಕ ಫೀ ತುಂಬಬೇಕಲ್ಲ" ಅವಳ ತಂದೆ ಚಿಂತೆಯಿಂದ ನುಡಿದರು.

"ಎಷ್ಟು ರೂಪಾಯಿ ಬೇಕಾದಾವು?"

"ದೊಡ್ಡ ಪರೀಕ್ಷೆ, ಫೈನಲ್ ಇಯರ್, ನೂರು-ನೂರಾ ಐವತ್ತು ರೂಪಾಯಿ ಬೇಕು."

"ಎಲ್ಲೆರೆ ಕೈಗಡ ಸಿಕ್ಯಾವೇನು?"

"ಈಗ ಎರಡು ಮೂರು ದಿನದಿಂದ ಎಲ್ಲಾ ಕಡೆ ಕೇಳಿ ನೋಡಿದೆ. ಎಲ್ಲಾ ತಮ್ಮ ಅಡಚಣೇನs ಹೇಳತಾರ. ಇನ್ನು ಹ್ಯಾಂಗ ಮಾಡೂದು?"

"ನನ್ನ ಕೈಯಾಗಿನ ಬಂಗಾರ ಬಳಿ ಮಾರಿದರ ಅಷ್ಟು ರೊಕ್ಕ ಸಿಗ್ತಾವಲ್ಲ"

"ಸಿಗ್ತಾವ, ಆದರ ನಿನಗೆ ಬಳೀ ಬೇಕಲ್ಲ. ಇದ್ದ ಬಂಗಾರ ಮಾರಿದರ ಹ್ಯಾಂಗ ?"

"ಅಯ್ಯ s, ಅವಳು ಪರೀಕ್ಷಾ ಪಾಸಾದರ ನನಗ ಬಂಗಾರ ಸಿಕ್ಕಾಂಗs. ಮುಂದ ಅನುಕೂಲ ಆದರ ಮತ್ತ ಮಾಡಿಸಿದರಾತು. ಮಕ್ಕಳು ಮುಂದ ಬಂದರ ಸಾಕಲ್ಲ" ಶಾಲೆಯಿಂದ ಬಂದ ಚಂದೂನಿಗೆ ಊಟಕ್ಕೆ ನೀಡುತ್ತ ಹೇಳಿದ್ದರು ಗೌರಮ್ಮ.

ಆಗಿನಿಂದ ಇಂದಿನವರೆಗೂ ಗೌರಮ್ಮನದು ಬರಿಗೈಯೇ.

"ಅವ್ವಾs ಊಟಾ ಮಾಡು ಏಳವ್ವಾ. ಹೊತ್ತು ಬಹಾಳ ಆತು" ಚಂದೂ ಬೂಟು ಹಾಕಿಕೊಂಡು ಕಚೇರಿಗೆ ಹೊರಡುತ್ತ ಹೇಳಿದ.

"ಈಗ ಹೋಗ್ತೀನಪ್ಪಾ. ಇನ್ನೊಂದು ಅರ್ಧ ಹಣ್ಣು ಅದ. ಬಿಡಿಸಿ ಹೋಗ್ತೀನಿ. ಹಗಲೆಲ್ಲಾ ಕೈ ಎಲ್ಲಿ ಜಿಡ್ಡು ಮಾಡಿಕೊಳ್ಳಿ. "

ಚಂದು ಸುಮ್ಮನೆ ಹೊರಗೆ ಹೋದ. ಗೌರಮ್ಮ ಮತ್ತೆ ಹಣ್ಣು ಚುಚ್ಚಿದರು. ಊರ್ಮಿಳಾ ಮನೆ ಬಿಟ್ಟು ಹೋದಾಗ ಚಂದೂಗಿನ್ನೂ ಹತ್ತು- ಹನ್ನೆರಡು ವರ್ಷ. ಹೆಚ್ಚು ಮಾತಿಲ್ಲ. ಹಟ ಇಲ್ಲ. ಗದ್ದಲ ಇಲ್ಲ. ಬಾಳ ಶಾಂತ ಗುಣ. ಜಾಣ. ಹೈಸ್ಕೂಲ್ ನೊಳಗ ಕಲಿಯೂವಾಗ ಇವರಿಗಿನ್ನೂ ನೌಕರಿ ಇತ್ತು. ಆದರ ಕಾಲೇಜಿಗೆ ಹೋದಾಗ ಅವರಿಗೆ ಪೆನ್ಸನ್ ಆಗಿದ್ದಕ್ಕೆ ಹಣಕ್ಕ ಭಾಳ ತಾಪತ್ರಯಪಡಬೇಕಾಯ್ತು. ಅವನ ವಿದ್ಯಾಭ್ಯಾಸಕ್ಕ ಇದ್ದ ಸ್ವಂತ ಮನೀನ ಒತ್ತೀ ಇಟ್ಟು ಹಣಾ ಒದಗಿಸಿದ್ದಾಯ್ತು. ಹುಡುಗ ಕಷ್ಟಪಟ್ಟು ಬಿ.ಇ. ಓದಿ ಒಂದು ನೌಕರಿಗೆ ಹತ್ತೂದರೊಳಗ ಮನೆ ಕೈಬಿಟ್ಟು ಹೋಯ್ತು. ಆದರೂ ಮನಸ್ಸಿಗೆ ದುಃಖ ಆಗಲಿಲ್ಲ. ಮಗಾ ಹಾದಿಗೆ ಹತ್ತಿದ ಅಂತ ಸಮಾಧಾನ ಆಯ್ತು. ಆದರ ಮಗಳಿಗೆ ಕಡೆಗೂ ತಾನು ಮಾಡಿದ್ದು ತಪ್ಪಾಯಿತು ಅಂತ ತಿಳೀಲಿಲ್ಲ.

ನಿಟ್ಟುಸಿರು ಬಿಟ್ಟರು ಗೌರಮ್ಮ. 'ಥೂs, ನನಗೇನಾಗೇದ ಇವತ್ತು. ಅವಳ ನೆನಪು ಬಹಾಳ ಆಗಲಿಕ್ಕೆ ಹತ್ತೇದ ಹೋಗ್ಲಿ, ಅವಳ ನೆನಪು ಮಾಡಿಕೊಂಡು ನಾಯಾಕ ದುಃಖ ಮಾಡಲಿ, ಮಗನ ಬಂಗಾರದಂತಾ ಸಂಸಾರ ನೋಡಿಕೋತ ಸಂತೋಷದಿಂದ ಇರ್ತೇನಿ.'

"ಅಜ್ಜೀs ನೀ ಒಂನು ತಿನ್ನು ಅಜ್ಜೀs ಎಷ್ಟು ರುಚಿ ಅದ ನೋಡು." ಮಂಜು ತೊಳೆಯನ್ನು ಅಜ್ಜಿಯ ಬಾಯಿಗೇ ಒಯ್ದಳು. ಅಜ್ಜಿ 'ಆs' ಎಂದಾಗ ಬಾಯಲ್ಲಿಟ್ಟಳು. ಅರ್ಧಮರ್ಧ ಹಲ್ಲುಗಳಿಂದ ಗೌರಮ್ಮ ಕೊಳೆಯನ್ನು ಜಗಿದು ನುಂಗಲು ನೋಡಿದರು. ನುಂಗಲೂ ಬರದೆ ಹೊರಗೆ ಉಗುಳಲೂ ಆಗದೆ ಚಡಪಡಿಸಿದರು.

***

ಮಗಳು

"ಬಹಾಳ ನೋವಾತೇನು ನಿಮ್ಮೀs, ರಕ್ತ ಭಾಳ ಸೋರಿದಾಂಗ ಕಾಣತದ." ಈಳಿಗೆಯಿಂದ ಹೆಚ್ಚಿದ ಹೆಂಡತಿಯ ಬೆರಳಿಗೆ ಪಟ್ಟಿ ಸುತ್ತುತ್ತ ರಾಜೀವ ಕೇಳಿದ್ದ. ಗಂಡನ ಪ್ರೀತಿಯ ಮಾತು ನೆನಪಿಸಿಕೊಳ್ಳುತ್ತ, ನೋವಾಗಿದ್ದ ಬೆರಳನ್ನು ಮತ್ತೆ ಮತ್ತೆ ಮುಟ್ಟಿ ನೋಡಿಕೊಳ್ಳುತ್ತ ರೇಡಿಯೋ ಟ್ಯೂನ್ ಮಾಡಿದಳು ನಿರ್ಮಲಾ.

"ಇದುವರೆಗೂ ನೀವು ಕೇಳಿದ ನಾಟಕ 'ಊರ್ಮಿಳೆ' ಬರೆದವರು...."

ನಿರ್ಮಲೆ ಬೆಚ್ಚಿದಳು. ಕೈ ಸೋಫಾದ ಮೂಲೆಗೆ ಬಡಿದು ಮತ್ತೆ ನೋವಾಯಿತು. ರಕ್ತ ಚಿಲ್ಲೆಂದು ಚಿಮ್ಮತೊಡಗಿತು. ಕಟ್ಟಿದ್ದ ಪಟ್ಟಿಯನ್ನು ತೂರಿ ಹೊರಗೆ ಬಂದಿತು ರಕ್ತ. 'ಅಯ್ಯೋ ಅವ್ವಾs' ಎಂದು ಚೀರಬೇಕೆಂದುಕೊಂಡವಳು ಕಷ್ಟಪಟ್ಟು ನುಂಗಿಕೊಂಡಳು. ಕಣ್ಣಲ್ಲಿ ನೀರು ಒಸರಿತು. ನೋವು, ದುಃಖ ಹಾಗೂ ಬಹಳ ಸಂತೋಷವಾದಾಗ, ಹೊಟ್ಟೆ ಹುಣ್ಣಾಗುವಂತೆ ನಗುವಾಗ 'ಅಯ್ಯಪ್ಪಾ, ಅಯ್ಯೋ ಅವ್ವಾ!' ಎನ್ನುವುದು ಎಲ್ಲರಿಗೂ ಸಾಮಾನ್ಯವಾದ ರೂಢಿ. ಆದರೆ ಊರ್ಮಿಳೆ ಮನೆ ಬಿಟ್ಟು ರಾಜೀವನ ಮನೆಗೆ ಬಂದವಳು ಮತ್ತೆ ಅವ್ವನ ನೆನಪು ತೆಗೆಯುವಂತಿಲ್ಲ. ಪ್ರೀತಿಯ ತಂದೆ-ತಾಯಿಗಳು ತನ್ನ ಬಾಳಸಂಗಾತಿಯನ್ನು ತಾನೇ ಆರಿಸಿಕೊಂಡುದನ್ನು ಕ್ಷಮಿಸಿರಲಿಲ್ಲ. 'ನೀನು ನಮ್ಮ ಪಾಲಿಗೆ ಸತ್ತಂತೆ' ಎನ್ನುವ ಉತ್ತರ ಊರ್ಮಿಳೆಯ ಮನವನ್ನೇ ಕಲಕಿ, ಕಣ್ಣೀರು ಧಾರೆಯಾಗಿ ಹರಿಸಿದ್ದಳು. ಅವಳ ಕಣ್ಣೀರು ಒರೆಸುತ್ತ ರಾಜೀವ, "ನೀನಿನ್ನು ಊರ್ಮಿಳಾ ಅಲ್ಲ.ನಿನ್ನ ಹೆಸರು ನಿರ್ಮಲಾ, ನನ್ನ ಪ್ರೀತಿಯ ನಿಮ್ಮಿ. ನಿನ್ನ ಅಪ್ಪ ಅವ್ವನಕ್ಕಿಂತಲೂ ನಿನ್ನ ಹೆಚ್ಚು ಪ್ರೀತಿ ಮಾಡ್ತೀನಿ, ನೋಡು" ಎಂದಿದ್ದ.

ತವರು ಮನೆಯ ಸಂಸಾರಕ್ಕೆ ಸ್ವಲ್ಪವಾದರೂ ಸಹಾಯ ಆಗಬೇಕು ಎನ್ನುವ ಇಚ್ಛೆಯಿಂದ ಗಂಡನ ಸಮ್ಮತಿ ಪಡೆದು ತನ್ನ ತಿಂಗಳ ಸಂಬಳ ಬಂದ ಕೂಡಲೆ ಊರಿಗೆ ಎಂ.ಓ. ಮಾಡಿದ್ದಳು. ಆದರೆ ಅದು ತಿರುಗಿ ಬಂದಾಗ ತಾಯಿ-ತಂದೆಯರ ಮನಸ್ಸು ಎಷ್ಟು ಕಠೋರವಾಗಿದೆ ಎನ್ನುವುದರ ಕಲ್ಪನೆ ಅವಳಿಗೆ ಬಂದಿತ್ತು. ಅಂದಿಗೆ ಅವರ ಸಂಪರ್ಕ ಕಡಿದಿತ್ತು.

ರಾಜೀವನ ಪ್ರೀತಿಯ ಪ್ರವಾಹದಲ್ಲಿ ಮೀಯುತ್ತ ಹೊಸ ದಾಂಪತ್ಯ ಜೀವನದಲ್ಲಿ ಒಂದೆರಡು ವರ್ಷ ಕಳೆದಾಗ ತಂದೆ-ತಾಯಿಯರ ಪ್ರೀತಿಯ ಚಿತ್ರ ಮಸುಕುಮಸುಕಾಗಿತ್ತು. ತಾನೇ ತಾಯಿ ಆಗುವ ಸಂದರ್ಭ ಒದಗಿದಾಗ ತನ್ನ ತಾಯಿಯ ನೆನಪು ಮೂಡಿಬಂದದ್ದು ಸಹಜವೇ. ಮಗಳು ಗರ್ಭಿಣಿ ಎನ್ನುವ ವಿಷಯ ತಿಳಿದಾಗ ಅವ್ವನ ಪ್ರೀತಿಯ ಬುಗ್ಗೆ ಮತ್ತೆ ಚಿಮ್ಮಬಹುದೇನೋ ಎನ್ನುವ ಆಶೆ ಊರ್ಮಿಳೆಗೆ.

"ಒಂದೆರಡು ದಿವಸ ಊರಿಗೆ ಹೋಗಿ ಬರೋಣೇನು? ಈ ಸ್ಥಿತಿಯೊಳಗ ನನ್ನ ನೋಡಿದರ ಅವ್ವ ಅಪ್ಪನ ಮನಸ್ಸು ಬದಲು ಆಗಬಹುದೋ ಏನೊ ಅಂತ."

"ಮನಸ್ಸು ಒಮ್ಮೆ ಒಡೆದು ಹೋದ ಮ್ಯಾಲೆ ಬದಲು ಆದರೂ ಏನು ಉಪಯೋಗ ನಿಮ್ಮಿ? ನಾನು ತಮಗೆ ತಕ್ಕ ಅಳಿಯ ಅಲ್ಲ ಅಂತ ಅವರು ಎಂದು ಅಂದರೋ ಅವತ್ತೆ ನನ್ನ ಮನಸ್ಸು ಮುರಿದುಹೋಯ್ತು. ನಿನಗೆ ಇಲ್ಲಿ ಏನರೆ ಕಡಿಮೆ ಆಗೇದ ಏನು?"

"ಇಲ್ಲಾs ನನಗೇನು ಕಡಿಮೆ ಆಗೇದ ಇಲ್ಲಿ? ಆದರೂ ಯಾಕೊ ಅವ್ವನ...."

"ಅವ್ವನ ನೆನಪು ಆಗುತ್ತಿದ್ದರ ನೀ ಒಬ್ಬಾಕೀನ ಹೋಗಿ ಬಾ. ಅವರು ಕರಿದಿದ್ರೂ ಹೋಗಲಿಕ್ಕೆ ನನಗ ಮಾನಾ-ಅಪಮಾನಾ ಏನೂ ಇಲ್ಲೇನು? ನಾ ಮಾತ್ರ ಬರೂದಿಲ್ಲ ನೋಡು ನಿಮ್ಮಿs. ನೀ ಬೇಕಾದರ ಹೋಗಿ ಬಾ. "

ತಂದೆ-ತಾಯಿಗಳ ಅಸಮಾಧಾನಕ್ಕೆ ಕಾರಣವಾದ ತಾನು ಈಗ ತವರಿಗೆ ಹೋಗಿ ಗಂಡನಿಗೆ ಅಸಮಾಧಾನ ಮಾಡುವುದು ಸರಿ ತೋರಲಿಲ್ಲ ಊರ್ಮಿಳೆಗೆ. ಹೊಟ್ಟೆಯಲ್ಲಿ ಮಗುವನ್ನು ಬಚ್ಚಿಟ್ಟುಕೊಂಡಂತೆ ಈ ಆಸೆಯನ್ನೂ ಹುದುಗಿಸಿಕೊಂಡಳು.

ಲೇಬರ ವಾರ್ಡಿನ ಮೇಜಿನ ಮೇಲೆ ಮಲಗಿ ಸಹಿಸಲಾರದ ನೋವು, ಯಾತನೆ ಅನುಭವಿಸುತ್ತ ಮೈ ಕುಲುಕಿದಳು ಊರ್ಮಿಳೆ. ಹೊಟ್ಟೆಗೆ, ನಡಕ್ಕೆ ಸುತ್ತಿಗೆಯಿಂದ ಮತ್ತೆ ಮತ್ತೆ ಹೊಡೆದಂತಾಗುತ್ತಿತ್ತು. ನೋವು

ಅಸಹನೀಯವೆನಿಸಿದಾಗ ಚಿಟ್ಟನೆ ಚೀರಿ ಮೈ ತುಂಬ ಬೆವೆತಳು. "ಸಮಾಧಾನ ತಾಳಿಕೋಮ್ಮಾ" ಮೃದುವಾದ ಸ್ಪರ್ಶ ತನ್ನ ಹಣೆಯ ಮೇಲೆ. "ಅಮ್ಮಾ" ಎನ್ನುತ್ತ ಆಸೆಯಿಂದ ಕಣ್ತೆರೆದಾಗ ನಿರಾಶೆಯೇ ಕಾದಿತ್ತು ಅಲ್ಲಿ. ವೃದ್ಧ ನರ್ಸೊಬ್ಬಳು ಊರ್ಮಿಳೆಯ ಬೆವರು ಒರೆಸುತ್ತಿದ್ದಳು. ಕಣ್ಣಲ್ಲಿ ನೀರು ಸುರಿಸುತ್ತಿದ್ದ ಊರ್ಮಿಳೆಯನ್ನು ನೋಡಿ, "ಇನ್ನೇನು ತಡವಿಲ್ಲ, ಐದು ಮಿನೀಟನೊಳಗ ಹೆರಿಗೆ ಆಗ್ತದ" ಎಂದು ಹಣೆಯ ಮೇಲೆ ಕೈ ಇಟ್ಟಳು. ಅವಳ ಕೈಯನ್ನೇ ಗಟ್ಟಿಯಾಗಿ ಹಿಡಿದುಕೊಂಡು "ಅಮ್ಮಾ" ಎನ್ನುತ್ತ ಬಿಕ್ಕಿದಳು ಊರ್ಮಿಳೆ.

ಸುಜಾತಾ ಹುಟ್ಟಿದ ಮೇಲೆ ತನ್ನ ಒಳಗುದಿ ಮರೆಯುವುದಕ್ಕೆ ಮಗಳ ಮೇಲೆ ಪ್ರೀತಿಯ ಮಳೆಗರೆದಳು ಊರ್ಮಿಳೆ. ಮಗಳಿಗೆ ಅನಾನುಕೂಲವೆಂದು ಕೆಲಸಕ್ಕೆ ರಾಜೀನಾಮೆ ಕೊಟ್ಟು ಮನೆಯಲ್ಲೇ ಉಳಿದಳು. ಅಷ್ಟರಲ್ಲಿ ರಾಜೀವನಿಗೂ ದೊಡ್ಡ ಕೆಲಸವಾಗಿತ್ತು. ಮಗಳಿಗೆ ಎಷ್ಟು ಆರೈಕೆ, ಉಪಚಾರ, ಶೃಂಗಾರ ಮಾಡಿದರೂ ಅವಳಿಗೆ ಕಡಿಮೆಯೇ.

ಆಗಾಗ ರಾಜೀವ "ನನಗೆ ಸೂಜೀನ್ನ ಕಂಡರೆ ಹೊಟ್ಟೆಕಿಚ್ಚು. ಈಗ ನಿನ್ನ ಸಮಯವೆಲ್ಲಾ ಅವಳ ಉಪಚಾರದಲ್ಲೇ ಕಳೀತದ. ನನ್ನನ್ನು ಬಿಟ್ಟು ಅವಳನ್ನೇ ಮುದ್ದು ಮಾಡುತ್ತೀ" ಎಂದು ಚೇಷ್ಟೆ ಮಾಡುತ್ತಿದ್ದ.

"ನಮ್ಮ ಪ್ರೀತಿಗೆ ಸಾಕ್ಷಿ ಅಲ್ಲವೇ ಅವಳು? ನಿಮ್ಮ ಪ್ರೀತಿಯ ಭಾಗ ನಿಮಗಿದ್ದೇ ಇದೆ. ಅದು ಹೇಗೆ ಕಡಿಮೆಯಾಗ್ತದ ?" ಎನ್ನುತ್ತಿದ್ದ ಊರ್ಮಿಳೆಗೆ ಮತ್ತೆ ಐದು ವರ್ಷಗಳಲ್ಲಿ ಕಿರಣ, ಅರುಣರ ತಾಯಿ ಆದಾಗ ಮೊದಲಿನಷ್ಟು ಸಂಕಟ, ದುಃಖ ಇರಲಿಲ್ಲ.

ಗೃಹಕೃತ್ಯ, ಮಕ್ಕಳ ಲಾಲನೆಯಲ್ಲಿ ದಿನ ಕಳೆದುಹೋದದ್ದೇ ಗೊತ್ತಾಗುತ್ತಿರಲಿಲ್ಲ. ಕ್ಲಾಸಿಗೆ ಮೊದಲನೆಯ ರ್‍ಯಾಂಕ್ ಪಡೆದು ಬಂದ ಮಗಳನ್ನು ಕಂಡಾಗಲೆಲ್ಲಾ ಅವಳಿಗೆ ಒಂದೇ ಆಸೆ. ಅವಳನ್ನು ಬಹಳಷ್ಟು ಓದಿಸಬೇಕು. ನೋಡಿದವರೆಲ್ಲರೂ ಎಷ್ಟು ಜಾಣೆ ನಿಮ್ಮ ಸುಜಾತ ಎನ್ನುತ್ತಿರಬೇಕು. ಅವಳ ಬುದ್ಧಿವಂತಿಕೆಗೆ ಪ್ರೊಫೆಸರು ಪಂಡಿತರು ಎಲ್ಲ ತಲೆದೂಗಬೇಕು. ಅವಳಿಗೆ ಓದಿನೊಡನೆ ನೃತ್ಯದಲ್ಲೂ ಆಸಕ್ತಿ. ಊರ್ಮಿಳೆಗೆ ನೃತ್ಯದಲ್ಲಿ ಆಸಕ್ತಿ ಇಲ್ಲದಿದ್ದರೂ ಮಗಳ ಆಸೆ ಮೊಟಕು ಮಾಡಬಾರದು ಎಂದೇ ಅವಳನ್ನು ನೃತ್ಯ ಕಲಿಯಲು ಕಳಿಸಿದ್ದು. ಬಣ್ಣದಲ್ಲಿ ತನ್ನನ್ನೇ ಹೋಲುತ್ತಿದ್ದರೂ ಕಣ್ಣು, ಮೂಗು ಎಲ್ಲ ರಾಜೀವನದೇ ಸುಜಾತಾಳಿಗೆ. ತನ್ನ ಮಗಳು ದೊಡ್ಡವಳಾದಾಗ ರೂಪಸಿ ಆಗುವಳೆನ್ನುವ ಭರವಸೆ ತನಗಿದ್ದೇ ಇತ್ತು. ಇಷ್ಟು ಈ ರೂಪ, ಬುದ್ಧಿವಂತಿಕೆ, ಗುಣಕ್ಕೆ ತಕ್ಕ ಗಂಡನನ್ನು ಈಗಿನಿಂದಲೇ ಹಾಗೇ ನೋಡಿ ಇಟ್ಟಿರಬೇಕು, ಯಾರಾದರೂ ಪರಿಚಿತರಲ್ಲೇ ಆದರೆ ಇನ್ನೂ ಒಳ್ಳೆಯದು....

"ಅವ್ವಾ ನಾನು ತಯಾರಾದೆ. ಗೆಳತಿಯರೆಲ್ಲ ಆಗಲೇ ಸ್ಟೇಷನ್ನಿಗೆ ಬಂದಿರ್‍ತಾರ. ಈಗ ಎರಡೂವರೆಗೆ ಒಂದು ಬಸ್ಸು ಅದ. ಅದಕ್ಕ ಹೋಗತೇನಿ" ಮುಂಗೈ ವಾಚು ನೋಡಿಕೊಳ್ಳುತ್ತ ಬೆಡ್‌ರೂಮಿನಿಂದ ಹೊರ ಬಂದಳು ಸುಜಾತಾ.

ಫುಲ್ ವಾಯಿಲ್ ಉಟ್ಟು ಹಿಂದೊಂದು ಮುಂದೊಂದು ಜಡೆ ಇಳಿಬಿಟ್ಟು ಕಿಟ್‌ಬ್ಯಾಗ್ ಹೆಗಲಿಗೇರಿಸಿ ಸೋಫಾದ ಹತ್ತಿರ ಬಂದು ನಿಂತ ಮಗಳನ್ನು ಮೇಲಿನಿಂದ ಕೆಳಗೆ ಮತ್ತೆ ಮತ್ತೆ ನೋಡಿದಳು ಊರ್ಮಿಳೆ. ಹದಿನೆಂಟು ವರುಷ ಎಷ್ಟು ಬೇಗ ಜಾರಿದವು ಎಂದುಕೊಂಡಳು. "ಆದಷ್ಟು ಬೇಗ ಬರ್‍ರಿ ಟ್ರಿಪ್ಪು ಮುಗಿಸಿಕೊಂಡು. ಯಾರೂ ಹೇಳುವವರು ಕೇಳುವವರು ಇಲ್ಲಂತ, ಸಿಕ್ಕ ಹಾಂಗ ತಿಂದು, ತಿರುಗಾಡಿ, ನಿದ್ದಿಗೆಟ್ಟು ಆರೋಗ್ಯ ಕೆಡಿಸಿಕೊಂಡೀ, ಜೋಪಾನದಿಂದ ಹೋಗಿ ಬಾ. ನಿನಗೆ ಏನೂ ತಿಳಿಯೂದಿಲ್ಲ."

ಸುಜಾತಾ ಗೇಟಿನ ಹತ್ತಿರ ಹೋಗಿ ನಿಂತು ಮತ್ತೊಮ್ಮೆ ಹೊರಳಿ ಬಾಗಿಲಲ್ಲಿ ನಿಂತಿದ್ದ ತಾಯಿಗೆ "ಟಾಟಾ" ಮಾಡಿ ಬಳುಕುತ್ತ ನಡೆದಳು.

ಮಗಳ ನಡಿಗೆ ಕಂಡಾಗ ಊರ್ಮಿಳೆ ಅಂದುಕೊಂಡಳು. "ಸುಜಿ ದೊಡ್ಡವಳಾದಳು. ಬೇಗ ಮದುವೆ ಮಾಡಬೇಕು."

ಮತ್ತೆ ಸೋಫಾದಲ್ಲಿ ಒರಗಿದ ಊರ್ಮಿಳೆಯ ತಲೆ ಮಗಳ ಮದುವೆಯ ವಿಚಾರವನ್ನೇ ಮೆಲುಕುಹಾಕಿತು. ಮದುವೆ ಎಂದ ಮೇಲೆ ಬಂಧು ಬಳಗ ಎಲ್ಲ ಕೂಡಬೇಕು. ಅಪ್ಪ-ಅವ್ವನ್ನ ಕರೆಯಬೇಕು. ಮೊಮ್ಮಗಳ ಮದುವೆಗೂ ಬಾರದೆ ಇರಲಿಕ್ಕಿಲ್ಲ. ಅಂತೂ ಇದೇ ಊರಿನಲ್ಲಿ ಇದ್ದಾರಲ್ಲ ಈಗ. ಅದು ತನಗೆ ತಿಳಿದದ್ದೂ ಒಂದು ಆಕಸ್ಮಿಕ.

ಮರುದಿನದ ಹಬ್ಬಕ್ಕೆ ಬೇಕಾಗಿದ್ದ ಸಾಮಾನುಗಳನ್ನೆಲ್ಲಾ ಕೊಂಡುಕೊಂಡು ರಿಕ್ಷಾ ಸ್ಟ್ಯಾಂಡಿಗೆ ಬಂದಳು ಊರ್ಮಿಳೆ. ತಲೆಯ ಕೂದಲೆಲ್ಲ ಬಿಳಿ ರೇಶಿಮೆ ಬಣ್ಣಕ್ಕೆ ತಿರುಗಿದ ಬೊಜ್ಜು ಮೈಯ ಮುದುಕಿಯೊಬ್ಬರು ರಿಕ್ಷಾದವನೊಡನೆ ಮಾತಾಡುತ್ತಾ ಇದ್ದರು. ಅವರ ಕಿರುಬೆರಳು ಹಿಡಿದು ಪುಟ್ಟ ಹುಡುಗಿಯೊಬ್ಬಳು ನಿಂತಿದ್ದಳು. ಆ ಸ್ಟ್ಯಾಂಡಿನಲ್ಲಿ ನಿಂತದ್ದು ಅದೊಂದೇ ರಿಕ್ಷಾ. ತಾನು ಸಮೀಪ ಹೋದಾಗ ಆ ಮುದುಕಿ ಇತ್ತ ತಿರುಗಿದಳು. ಊರ್ಮಿಳೆಗೆ ಆಶ್ಚರ್ಯದಿಂದ ಕಿರುಚುವಂತಾಯಿತು. "ಅವ್ವಾಽ" ಎಂದು ಕೂಗಿಯೇ ಬಿಟ್ಟಿದ್ದಳು. ಕನ್ನಡಕದ ಕಣ್ಣುಗಳು ಕ್ಷಣಹೊತ್ತು ಅವಳನ್ನೇ ದಿಟ್ಟಿಸಿ ಮತ್ತೆ ಬೇರೆ ಕಡೆಗೆ ಹೊರಳಿದ್ದವು. ಅಷ್ಟರಲ್ಲೇ ಕಣ್ಣು ತುಂಬಿದ್ದರಿಂದ ಮಂಜಾಗಿ ಏನೂ ಕಾಣಿಸದೆ ಕನ್ನಡಕ ತೆಗೆದು ಒರೆಸಿಕೊಂಡಿದ್ದರು ಗೌರಮ್ಮ. "ಅವ್ವಾ ಆರಾಮ ಇದ್ದೀಯಾ. ಎಷ್ಟು ವರ್ಷಾತು ನಿನ್ನ ನೋಡಿ."

"ಆರಾಮ ಇದ್ದೀನವಾ ಹಿಂಗ. ಸಾಯಲಿಕ್ಕೂ ಒಲ್ಲೆ, ಬದುಕಲಿಕ್ಕೂ ಒಲ್ಲೆ." ಅವ್ವನ ಕಣ್ಣಲ್ಲಿ ಮತ್ತೆ ನೀರು ಜಿನುಗಿದ್ದು ನೋಡಿ ಸಂಕಟವಾಗಿತ್ತು ಊರ್ಮಿಳೆಗೆ.

"ಅವ್ವಾಽ ಇಷ್ಟು ವರ್ಷವಾದರೂ ಇನ್ನೂ ಅಳತೀಯಲ್ಲಾ ನೀನು. ಚಂದು ಏನ್ಮಾಡ್ತಾನ ಈಗ? ದೊಡ್ಡವ ಆಗಿರಬೇಕು. ಅಪ್ಪ ಹ್ಯಾಂಗದಾರ?"

"ಚಂದೂನ ಮಗಳು ಇವಳು ಮಂಜುಳಾ. ಅವನಿಗೆ ಇಲ್ಲೇ ಅಸಿಸ್ಟಂಟ ಎಂಜಿನಿಯರ ಅಂತ ಕೆಲಸ ಆಗೇದ. ಶುಕ್ರವಾರ ಪೇಟೆಯೊಳಗ ಮನೀ ಹಿಡದಾನ. ಅವರು ನಾನು ಮಗನ ಹತ್ತಿರ ಇದ್ದೇವಿ."

"ಚಂದೂನ ಲಗ್ನ ಆದದ್ದು ನನಗ ಗೊತ್ತಽ ಇಲ್ಲ. ಅವನ್ನ ಅವನ ಹೆಂಡತೀನ್ನ ನೋಡಬೇಕು. ಅಪ್ಪನ್ನ ನೋಡಬೇಕು ಅಂತ ಮನಸ್ಸಾಗೇದ ನಿನ್ನ ಜೋಡಿ ಇದಽ ರಿಕ್ಷದೊಳಗ ಮನಿಗೆ ಬರಲೇನು?" ಅಂಗಲಾಚಿದಳು ಊರ್ಮಿಳೆ.

"ಚಂದೂನ ಹೆಂಡತಿಗೆ ತನಗೊಬ್ಬ ನಾದಿನಿ ಇದ್ದಾಳ ಅನ್ನೋದ ಸಹಿತ ಗೊತ್ತಿಲ್ಲ. ಈಗ ಏನಂತ ಅವಳಿಗೆ ಮುಖಾ ತೋರಿಸ್ತೀ." ಗೌರಮ್ಮನ ಗಂಟಲು ಬಿಗಿದಿತ್ತು.

"ಮುಖಾ ತೋರಿಸದ ಇರೂ ಅಂಥಾ ತಪ್ಪು ನಾ ಏನು ಮಾಡೇನಿ ಅವ್ವಾ ? ನಾನು ಎಲ್ಲಾರ ಹಂಗ ಮದುವೆ ಮಾಡಿಕೊಂಡು ಸುಖದಿಂದ ಅದೇನಿ. ರಾಜೀವ ನನಗ ಏನೂ ಕಡಿಮೆ ಮಾಡಿಲ್ಲವಾ. ನಾನು ಭಾಳ ಸುಖದಿಂದ ಇದ್ದೇನಿ" ಊರ್ಮಿಳೆ ಆವೇಶದಿಂದ ಹೇಳಿದ್ದಳು.

"ಹೌದವ್ವಾ, ಹೆತ್ತ ಹೊಟ್ಟೆ ಉರಿಸಿ ಅವನ ಮನೀಗೆ ಬೆಳಕು ಮಾಡಿದಿ. ನಿನ್ನ ಸುಖ ನೀ ನೋಡಿಕೊಂಡಿ ಒಳ್ಳೆದಾಯ್ತು. ನಾ ಇನ್ನ ಬರ್ತೀನಿ" ಮೊಮ್ಮಗಳ ಕೈ ಹಿಡಿದು ದುಡು ದುಡು ನಡೆದೇ ಬಿಟ್ಟರು ಗೌರಮ್ಮ.

ಊರ್ಮಿಳೆ ಕಣ್ಣುಬಿಟ್ಟಾಗ ಸಂಜೆಯಾಗಿತ್ತು. ಶಾಲೆಗೆ ಹೋಗಿದ್ದ ಹುಡುಗರು ಮನೆಗೆ ಬಂದರು. ರಾಜೀವ ಆಫೀಸಿನಿಂದ ಬರುವಾಗಲೇ ತಿಂಡಿ ಕಟ್ಟಿಸಿಕೊಂಡು ಬಂದು ಚಹಾ ಮಾಡಿ ಎಲ್ಲರಿಗೂ ತಿಂಡಿ ಚಹಾ ಹಂಚಿದ.

"ನೀ ಏನು ಅಡಿಗೀ ಮಾಡಲಿಕ್ಕೆ ಹೋಗಬೇಡ ಕೈ ನೋವು ಮಾಡಿಕೊಂಡು. ಊಟದ ಡಬ್ಬಿ ಹೇಳಿ ಬಂದೇನಿ. ಇನ್ನೊಂದು ತಾಸಿಗೆ ಬರ್ತದ" ಎಂದ ರಾಜೀವ ಹೆಂಡತಿಗೆ.

"ಸುಜೀ ಮನಿಯೊಳಗ ಇದ್ದರ ಅನ್ನಾ ಸಾರು ಮಾಡಿ ನೀಡುತ್ತಿದ್ದಳು" ಎಂದು ಊರ್ಮಿಳೆ ಅಭಿಮಾನದಿಂದ ಅಂದಾಗ. "ಹೂಂ ನಿನ್ನ ಸುಜೀ ಟಾಪ್ ಟೀಪ್ ಆಗಿ ತಯಾರ ಮಾಡಿಕೊಂಡು ಕುಣಕೋತ ಓಡಾಡಲಿಕ್ಕೆ ಸೈ" ಎಂದು ಮಗಳನ್ನು ಟೀಕಿಸಿ ಹೆಂಡತಿಯನ್ನು ರೇಗಿಸಿದ.

ಕಿರಣ ಓದುವ ಕೋಣೆಗೆ ಹೋದವ ತಿರುಗಿಬಂದು "ಅವ್ವಾs ಇಲ್ಲೊಂದು ಪತ್ರ ಅದ ನೋಡು. ಅಕ್ಕನ ಅಕ್ಷರ ಕಾಣ್ತಾವ" ಎಂದು ಊರ್ಮಿಳೆಯ ಕೈಗಿತ್ತ.

***

ಮೊಮ್ಮಗಳು

ಪ್ರೀತಿಯ ಅವ್ವ,

ನಾನು ನಮ್ಮ ಡಾನ್ಸ ಮಾಸ್ತರ ಗೋಪಾಲಬಾಬು ಅವರನ್ನ ಪ್ರೀತಿಸ್ತೇನೆ. ಅವರೂ ಅಷ್ಟೆ ನಾವಿಬ್ಬರೂ ಲಗ್ನವಾಗಬೇಕೆಂದೇ ಇಂದು ಹೊರಟಿದ್ದು. ಟ್ರಿಪ್ಪು ಇಲ್ಲ, ಗೆಳತಿಯರೂ ಇಲ್ಲ. ನಮಗೆ ನಿಮ್ಮ ಆಶೀರ್ವಾದವಿರಬೇಕು.

ನಿನ್ನ

ಸುಜೀ.

ಊರ್ಮಿಳೆಯ ಮುಖ ಬಿಳಿಚಿಕೊಂಡಿತು. ತುಟಿ ಥರ ಥರ ನಡುಗುತ್ತಿದ್ದವು. ಹೆಂಡತಿಯ ಅವಸ್ಥೆ ನೋಡಿದ ರಾಜೀವ ಗಾಬರಿಯಿಂದ ಕಾಗದ ಕಸಿದು ಓದಿದ. ಸಿಟ್ಟಿನಿಂದ ಕಾಗದ ಮುದ್ದೆ ಮಾಡಿ "ಡ್ಯಾಮ್ ಇಟ್!" ಎಂದು ನೆಲಕ್ಕಪ್ಪಳಿಸಿದ.

***

ಊರ್ಮಿಳೆಯ ಹೊಟ್ಟೆಯಲ್ಲಿ ಲಾವಾರಸ ಕುದಿಯುತ್ತಿತ್ತು. ತಾಳಲಾರದ ಬೇಗೆ, ರಸ ಕುದ್ದು ಕುದ್ದು ಎಲ್ಲ ಅಂಗಾಂಗಗಳಿಗೂ ಪಸರಿಸಿತು. ಚಡಪಡಿಸತೊಡಗಿದಳು. 'ನೀರು, ನೀರು' ಎಂದು ಬಾಯಿ ಬಿಟ್ಟಳು. ಉರಿ ಮೈಯನ್ನೆಲ್ಲ ವ್ಯಾಪಿಸಿತು. ಏರುತ್ತ ಏರುತ್ತ ಕುತ್ತಿಗೆಯವರೆಗೂ ಬಂದಿತ್ತು. ಕುತ್ತಿಗೆ ಹಿಚುಕಿದ ಹಾಗಾಗಿ ವಿಲಿವಿಲಿ ಒದ್ದಾಡಿದಳು. ಒತ್ತರಿಸಿ ಬಂದಿತು ಉರಿ ಇನ್ನೇನು ಬುಗ್ಗೆಯಂತೆ ಚಿಮ್ಮಬೇಕು.

ತಟ್ಟನೆ ಎದ್ದು ನಿಂತು "ನನ್ನ ಜೊತೆಗೆ ಬರ್ತೀರೇನು?" ಎಂದಳು ಗಂಡನಿಗೆ.

"ಎಲ್ಲಿಗೆ" ಎಂದು ಹೆಂಡತಿಯನ್ನು ನೋಡಿ ಗಾಬರಿಯಾಗಿದ್ದ ರಾಜೀವ.

"ಶುಕ್ರವಾರ ಪೇಟೆಗೆ. ಅವ್ವ-ಅಪ್ಪ ಇದ್ದಾರ ಅಲ್ಲೆ. ನಾನು ಈಗ ಅವ್ವನ ತೊಡೆಯ ಮೇಲೆ ತಲೆ ಇಟ್ಟು ಅಳಬೇಕು. ಬರ್ರಿ" ಎಂದವಳೇ ಹೊರಗೆ ನಡೆದಳು. ರಾಜೀವ ಹಿಂಬಾಲಿಸಿದ.

***

■■

# ಕಾಮನ ಬಿಲ್ಲು

ಬಿಸಿಲ ಕೋಲು ಕಿಟಕಿಯ ಕಾಜಿನಿಂದ ಕೈ ಚಾಚಿ ಕಣ್ಣು ತಿವಿಯಿತು. ನಿದ್ದೆಯಿಂದ ಎಚ್ಚರಾದರೂ ಕಣ್ಣು ಬಿಡಲಿಲ್ಲ. ಕತ್ತಲು ಕೋಣೆಯಲ್ಲಿ ತೆರೆಯ ಮೇಲೆ ಸರಿಯುವ ಸಿನಿಮಾದಂತಿದ್ದ ಕನಸು, ಎವೆಗಳ ಮೇಲೆ ಬಿದ್ದ ಬೆಳಕಿನಿಂದ ಮಾಯವಾಗಿತ್ತು. ಕಣ್ಣು ಮುಚ್ಚಿಕೊಂಡೇ ಮತ್ತೊಮ್ಮೆ ಕನಸನ್ನು ಕಣ್ಣಮುಂದೆ ತಂದ. ತಾನೊಬ್ಬನೇ ಊರು ಬಿಟ್ಟು ದೂರದಲ್ಲಿ ಎಲ್ಲಿಯೋ ವಾಕಿಂಗ್ ಹೊರಟಿದ್ದಾನೆ. ನಡೆದು ನಡೆದು ಆಯಾಸವಾಗಿದೆ. ಗಂಟಲು ಒಣಗಿ ಬಾಯಾರಿಕೆಯಾಗಿದೆ. ಏನಾದರೂ ಕುಡಿಯಬೇಕೆನಿಸುತ್ತದೆ. ಹತ್ತಿರ ಒಂದು ತೋಟ ಕಾಣುತ್ತದೆ. ತೋಟದಲ್ಲಿ ಬಾವಿಯಿದೆ. ಆದರೂ ಬಾವಿಯ ನೀರಿಗಿಂತ ತೆಂಗಿನ ಎಳನೀರು ಕುಡಿಯಬೇಕು ಎನಿಸುತ್ತದೆ. ನಾಲ್ಕು ಹೆಜ್ಜೆ ಮುಂದೆ ನಡೆದಾಗ ತೆಂಗಿನ ಮರಗಳ ಸಾಲು ಕಣ್ಣಿಗೆ ಬೀಳುತ್ತದೆ. ಆದರೆ ಕಾಯಿ ಮರದ ತುತ್ತತುದಿಯಲ್ಲಿ. ಕಾಯಿ ಕೈಗೆ ತೆಗೆದುಕೊಂಡೇತೀರಬೇಕು ಎನ್ನುವ ಹುಮ್ಮಸ್ಸಿನಿಂದ ಚಪ್ಪಲಿ ಕಳಚಿ ಮರ ಏರತೊಡಗುತ್ತೇನೆ, ಅರ್ಧ ಏರಿರಬೇಕು. ಕಾಲ ಕೆಳಗಿನ ಭೂಮಿ ಕಂಡು ಅಬ್ಬ ! ಎಷ್ಟು ಮೇಲೇರಿ ಬಂದಿದ್ದೇನೆ ಎಂದು ನಡುಕ ಹುಟ್ಟಿ, ತಲೆ ತಿರುಗಿದಂತಾಗಿ ಮರ ಹಿಡಿದಿದ್ದ ಕೈ ಜಾರಿಹೋಗುತ್ತದೆ. ಇನ್ನೇನು ನೆಲಕ್ಕೇ ಬೀಳುವವನು ಅಷ್ಟರಲ್ಲೇ ಥಕ್ಕನೆ ಎಚ್ಚರವಾಗಿದೆ.

ಕಣ್ಣು ತೆರೆದು ಸುತ್ತ ನೋಡಿದೆ. ಬಿಸಿಲು ಪೂರ್ತಿ ತನ್ನ ಹಾಸಿಗೆಯನ್ನು ಮುಚ್ಚಿದೆ. ಸೆಕೆಯಿಂದಲೋ, ಕನಸಿನಲ್ಲಿ - ಮರದ ಮೇಲಿನಿಂದ ಬಿದ್ದ ಭಯದಿಂದಲೋ ಬೆವರಿನಿಂದ ಮೈ, ಷರಟು ಕೂದಲು ಎಲ್ಲ ಒದ್ದೆಯಾಗಿ ಹೋಗಿವೆ. ಹಾಸಿಗೆಬಿಟ್ಟೆದ್ದು ಬಚ್ಚಲು ಮನೆಗೆ ಹೋಗುತ್ತ ಕೈಗಡಿಯಾರ ನೋಡಿಕೊಂಡೆ. ಆಗಲೇ ಎರಡೂವರೆ ತಾಸು. ಮಲಗಿ ಎರಡು ತಾಸಾಯಿತೇ? ಇನ್ನು ತಡಮಾಡಬಾರದು. ಶಂಕರರಾಯರ ಮನೆಗೆ ಮೂರು ಗಂಟೆಗೆ ಹೋಗಬೇಕು. ಅರ್ಜೆಂಟಾಗಿ ಬರಲೇಬೇಕು ಎಂದಿದ್ದಾರೆ. ಹಿಂದೊಮ್ಮೆ ಅವರು ಕರೆದಿದ್ದಾಗ ಆಗಲಿ ಎಂದು ಹೇಳಿ ಕೊನೆಗೆ ತಪ್ಪಿಸಿ ಮ್ಯಾಟನಿಗೆ ಹೋಗಿದ್ದೆ. ಮರುದಿನ ಆಫೀಸಿನಲ್ಲಿ ಅವರು ನಗುತ್ತಲೇ 'ನಿನ್ನೆ ನಿಮ್ಮ ದಾರಿ ಬಹಳ ನೋಡಿದೆವು. ಚಹಾಕ್ಕೆ ಬರಲು ಹೇಳಿದ್ದೆ. ಮರೆತೇಬಿಟ್ಟರೇನು' ಎಂದಿದ್ದರು. ನಾನು ಏನೋ ಹೇಳಿ ಪಾರಾಗಿದ್ದೆ.

ಕೋಟು ಹಾಕಿಕೊಂಡು ಕಿಸೆಯಲ್ಲಿ ಕೈಚಾಚಿದಾಗ ಮುಂಜಾನೆ ಬಂದ ಅಣ್ಣನ ಪತ್ರ ಕೈಗೆ ಸಿಕ್ಕಿತು. ಮತ್ತೊಮ್ಮೆ ಓದಿದೆ. 'ಶಂಕರರಾಯರು ಒಳ್ಳೆಯವರು. ನಿನಗೆ ನೌಕರಿ ಕೊಡಿಸಿ ನಿನ್ನ ಶ್ರೇಯಸ್ಸಿಗೆ ಕಾರಣರಾಗಿದ್ದಾರೆ. ಅವರ ಮನಸ್ಸು ನೋಯಿಸಬೇಡ. ಅವರು ಕರೆದರೆ ಹೋಗಿ ಬಾ. ಅವರಿಗೆ ಅಸಮಾಧಾನ ಆಗುವ ಹಾಗೆ ಮಾಡಿದರೆ ನಿನ್ನ ಭವಿಷ್ಯ ಒಳ್ಳೆಯದಾಗಲಿಕ್ಕಿಲ್ಲ., ಅದಕ್ಕೇ ಹೀಗೆ ಬರೆದಿದ್ದೇನೆ. ಅಪ್ಪನದೂ ಇದೇ ಅಭಿಪ್ರಾಯ ಎಂದು ಬೇರೆ ಹೇಳಬೇಕಾಗಿಲ್ಲ.' ಅದೊಂದು ಒಗಟು ಆಯಿತು ನನಗೆ. ಶಂಕರರಾಯರು ನನ್ನನ್ನ ಯಾಕೆ ಊರಿಗೆ ಕರೆದುಕೊಂಡು ಹೋಗಬೇಕು ಎನ್ನುತ್ತಾರೆ ಎನ್ನುವ ಕಾರಣ ಅಣ್ಣನಿಗೆ ಗೊತ್ತಿದೆ. ಆದರೆ ಅದನ್ನ ಸ್ಪಷ್ಟ ಬರೆದಿಲ್ಲ. ಇದೇನು ಎಂದು ವಿಚಾರಮಾಡುವಷ್ಟರಲ್ಲಿ ಪ್ಯೂನ್ ಶಂಕರರಾಯರ ಚೀಟಿ ತಂದುಕೊಟ್ಟ. ಮಧ್ಯಾಹ್ನ ಮೂರು ಗಂಟೆಗೆ ತಮ್ಮ ಮನೆಗೆ ಬರಲಿಕ್ಕೆ ಬರೆದಿದ್ದರು. ವಿಚಾರ ಮಾಡುವಾಗಲೇ ಹೊರಗೆ ಹೊರಡಲಿಕ್ಕೆ ತಯಾರಾಗಿದ್ದೆ. ಮತ್ತೆ ಬಾಯಾರಿಕೆ. ಮಣ್ಣಿನ ಹೂಜಿಯಿಂದ ನೀರು ಬಗ್ಗಿಸಿಕೊಂಡು ಕುಡಿದೆ. ಗಂಟಲು ಒತ್ತು ಕರಡಾಗಿತ್ತು. ಮತ್ತೆರಡು ಗ್ಲಾಸು ನೀರು ಹೀರಿದ ಮೇಲೆ ಸ್ವಲ್ಪ ತಂಪು ಎನಿಸಿತ್ತು. ಗಂಟಲು ತಂಪಾದರೂ ತಲೆ ಕಾಯ್ದಿತ್ತು. ಹಾಗೇ ಹೊರಬಿದ್ದೆ.

'ಓಹೋಹೋ ಬರ್ರಿ ಬರ್ರಿ. ವೇಳೆಗೆ ಸರಿಯಾಗಿ ಬಂದಿರಿ. ಮೊದಲು ಚಹಾ ಕುಡಿಯೋಣ.' ಒಳಗೆ ಕರೆದೊಯ್ದರು ಶಂಕರರಾಯರು. ಇಂದಿರಮ್ಮ ಮೇಜಿನ ಮೇಲೆ ತರತರದ ತಿಂಡಿ-ತಿನಿಸು ತಂದಿಟ್ಟರು, ಚಹದ ಕಪ್ಪು ಎತ್ತಿ ಬಾಯಿಗೆ ಹಿಡಿದಾಗ ತುಟಿ ಚುರಕ್ಕೆಂದಿತು., ಅಷ್ಟು ಬಿಸಿ! ಹೊರಗೆ ಅಷ್ಟೊಂದು ಸೆಕೆ, ಮತ್ತೆ ಈ ಬಿಸಿ

ಚಹಾ. ಬಸಿಗೆ ಸುರುವಿ ಆರಿಸಿ ಕುಡಿದರೂ ನಾಲಿಗೆ ಉರಿಯಿತು. ಅಡಿಕೆ ಹಾಕುತ್ತ ಕುಳಿತಾಗ ಶಂಕರರಾಯರು ಪತ್ರದ ವಿಷಯ ತೆಗೆದರು. 'ನಿಮ್ಮ ಅಣ್ಣನಿಗೆ ಪತ್ರ ಬರೆದಿದ್ದೆ, ಇಂದೇ ಅವರದೂ ಉತ್ತರ ಬಂತು. ನಿಮ್ಮನ್ನ ಕರಕೊಂಡು ಹೋಗಲಿಕ್ಕೆ ಒಪ್ಪಿಗೆ ಕೊಟ್ಟಾರ. ಕಾರಣ ಅಂದರ ನಮ್ಮ ಇಂದಿರಾಳ ತಂಗೀನ್ನ ನಿಮಗೆ ತೋರಿಸಬೇಕು ಅಂತ. ಹುಡುಗಿ ಜಾಣ ಇದ್ದಾಳ. ಗುಣ ಒಳ್ಳೇದು, ಅದಕ್ಕೆ...' ಇಂದಿರಮ್ಮ ನಡುವೆ ಬಾಯಿ ಹಾಕಿದಳು. 'ಇರಲಿ ಬಿಡ್ರಿ. ಬಹಳ ಹೇಳಬಾರದು. ತಾವs ನೋಡ್ತಾರಲ್ಲ ನಾಳೆ.' 'ಹಾಂ ಹೌದು, ನೀ ಅನ್ನೂದು ನಿಜ. ನಮ್ಮ ವಸ್ತು ನಾವs ಹೊಗಳಿಕೋಬಾರದು ಅಲ್ಲs. ನಾಳೆ ತಾವs ನೋಡ್ತಾರಲ್ಲ' ಎಂದು ನಕ್ಕರು ರಾಯರು. ಮೊದಲೇ ಬಹಳ ಜಾಣತನದಿಂದ ಹಾಕಿದ ಬಲೆಯೊಳಗೆ ನಾನು ಸಂಪೂರ್ಣ ಸಿಕ್ಕುಬಿದ್ದೆ ಎನಿಸಿತು. ಇಂದಿರಮ್ಮನ ತಂಗಿ ಅಂದಮೇಲೆ ಅವರದೇ ಪಡಿಯಚ್ಚು. ರೂಪ, ಬಣ್ಣ, ಹಲ್ಲು, ಆಕಾರ ಎಲ್ಲಾ. ಮುಖವೆತ್ತಿ ಮತ್ತೊಮ್ಮೆ ಇಂದಿರಮ್ಮನನ್ನು ನೋಡುವ ಧೈರ್ಯವೂ ಆಗಲಿಲ್ಲ. ಹಾಗೆ ಮುಖ ಕೆಳಗೆ ಮಾಡಿ ನಿಂತೆ. 'ಆಯಿತು, ನಾಳೆ ಮಧ್ಯಾಹ್ನ ಮೂರು ಗಂಟೆಗೆ ಕಾರು ತಕ್ಕೊಂಡು ನಾನು, ಇಂದಿರಾ ನಿಮ್ಮ ರೂಮಿಗೆ ಬರ್ತೀವಿ. ತಯಾರಾಗಿರ್ರಿ. ವಸುಂಧರಾ, ಲೀಲಾ ಮನಿಯೊಳಗ ಇರ್ತಾರ. ನಾವು ಮೂರೇ ಜನ ಕಾರಿನೊಳಗೆ ಹೋಗಿ ಬರೋಣು'. ಮಾತಾಡಲು ಬಾಯೇ ಬರಲಿಲ್ಲ. 'ಹೂಂ' ಎಂದು ಕೋಲೆತ್ತಿನ ಹಾಗೆ ಗೋಣು ಹಾಕಿ ಹೊರಬಿದ್ದೆ. ಹೊರಗೆ ಬಿಸಿಲು ಕಣ್ಣು ಕುಕ್ಕಿ ಬಿಡುತ್ತಿತ್ತು. ಛತ್ರಿ ತಂದಿರಲಿಲ್ಲ. ನೆತ್ತಿ ಚುರುಗುಟ್ಟಿತು. ತಂಪಾದ ಸ್ಥಳ ಎಲ್ಲಿಯೂ ಸಿಗಲಾರದೇ ಎನ್ನಿಸಿತು. ಬಯಲು ಸೀಮೆಯ ಪಟ್ಟಣದ ಬೀದಿಗೆ ಮರಗಳ ನೆರಳಾದರೂ ಎಲ್ಲಿಂದ ಬರಬೇಕು? ಬೀದಿಯಲ್ಲಿ ಹೆಚ್ಚು ಜನರೂ ಇರಲಿಲ್ಲ. ಒಬ್ಬ ಹುಡುಗ ಒಂದು ನಾಯಿಯನ್ನು ಹಿಡಿದುಕೊಂಡು ಬರುತ್ತಿದ್ದ. ಬೆಳ್ಳನ್ನ ಮೈಯಲ್ಲಿ ಅಲ್ಲೊಂದು ಇಲ್ಲೊಂದು ಕಪ್ಪು ಚುಕ್ಕಿ, ಹೊಳೆಯುವ ಕಣ್ಣು, ಹೊಟ್ಟೆತುಂಬ ಕೂಳು ಇದ್ದುದರಿಂದ ದುಂಡದುಂಡಗೆ ನೋಡಲು ಚೆನ್ನಾಗಿತ್ತು. ಆದರೇನು ಕೊರಳಲ್ಲೊಂದು ಪಟ್ಟಿ. ಅದಕ್ಕೆ ಕಬ್ಬಿಣದ ಸರಪಳಿ. ಅದರ ಇನ್ನೊಂದು ತುದಿ ಹುಡುಗನ ಕೈಯಲ್ಲಿ. ಸಾಕಿದ ನಾಯಿದು. 'ಬೌ'ಎನ್ನುವ ಸ್ವಾತಂತ್ರ್ಯವೂ ಇಲ್ಲ ಅದಕ್ಕೆ, ಎಂದು ವಿಚಾರ ಮಾಡುತ್ತಲೇ ನನ್ನ ರೂಮು ದಾಟಿ ನಾಲ್ಕು ಹೆಜ್ಜೆ ಮುಂದೆ ಹೋಗಿದ್ದೆ. ಮತ್ತೆ ತಿರುಗಿ ಬಂದು ಬಾಗಿಲು ತೆರೆದೆ, ಹೂಜಿಯ ನೀರು ನನ್ನನ್ನು ಕರೆಯಿತು.

**ಕವಿದ ಮೋಡ**

ರಾತ್ರಿಯೆಲ್ಲಾ ಸೆಕೆಯಿಂದ ನಿದ್ದೆ ಬರದೆ ಹಾಸಿಗೆಯಲ್ಲಿ ಹೊರಳಾಡಿದ್ದೆ. ಚಿಕ್ಕ ಬೀಸಣಿಗೆ ಎಷ್ಟೆಂದು ತಂಪು ಗಾಳಿ ಕೊಟ್ಟೀತು. ಬೀಸಿ ಬೀಸಿ ಕೈ ಸೋತುಹೋಗಿತ್ತು. ಅಂದು ಹೇಗಿದ್ದರೂ ಆಫೀಸಿಗೆ ರಜಾ. ಶಂಕರರಾಯರು ಬರುವುದು ಮೂರು ಗಂಟೆಗೆ. ಹೊಟೇಲಿನಲ್ಲಿ ಊಟ ಮಾಡಿ ಬಂದವನೇ ಅಡ್ಡಾಗಿದ್ದೆ. ಜೊಂಪು ಹಿಡಿದಿತ್ತು, ಎದ್ದಾಗ ಎರಡು ಗಂಟೆ. ರೂಮಿನಲ್ಲಿ ಕತ್ತಲೆಕತ್ತಲೆಯಾಗಿತ್ತು. ಇದೇನು ಎಂದು ಗಾಬರಿಯಾಗಿ ಕಿಟಕಿ ತೆರೆದೆ. ಆಕಾಶದ ತುಂಬೆಲ್ಲ ಮೋಡ ಕವಿದಿತ್ತು. ಹಿಂದಿನ ದಿನ ದಾಳಿಮಾಡಿದ್ದ ಸೂರ್ಯ ಇಂದು ಸುಸ್ತಾಗಿ ಹಿಂದೆ ಸರಿದಿದ್ದ. ಶತ್ರುಗಳು ಒಬ್ಬೊಬ್ಬರಿದ್ದರೆ ಅವನೇನು ಅಂಜುತ್ತಿರಲಿಲ್ಲ. ಆದರೆ ಎಲ್ಲ ದಿಕ್ಕಿನಿಂದಲೂ ಬಂದು ಒಟ್ಟುಗೂಡಿದ್ದ ಶತ್ರುಗಳ ಎದುರು ಸೂರ್ಯ ಮಂಕಾದ. ಕೊನೆಗೆ ಸೋತು ಮರೆಯಾದ.

ಸೂಟುಕೇಸಿಗೆ ಕಪ್ಪನೆಯ ಸೂಟು ಹಾಕಿದೆ. ಅದರೊಡನೆಯೇ ಟೈ ಬೇಕಲ್ಲ. ಈಗಲೇ ಒಂದನ್ನು ಕುತ್ತಿಗೆಗೆ ಬಿಗಿದರಾಯಿತು. ಮತ್ತೆ ಬೇರೆ ಬೇಡ ಎಂದುಕೊಂಡು ಟವೆಲ್ಲು, ನೈಟ್‌ಸೂಟು, ಶೇವಿಂಗ್ ಸೆಟ್, ಸ್ವೆಟರು ಹಾಕಿ ಬ್ಯಾಗಿನ ಬಾಯಿ ಮುಚ್ಚಿದೆ. ಅರಿವೆ ಬದಲಾಯಿಸಿ ಬಂದು ಕನ್ನಡಿಯ ಮುಂದೆ ನಿಂತು ಟೈ ಬಿಗಿದಾಗ ಎನಿಸಿತು ಶಂಕರರಾಯರ ಸಹವಾಸ ನನ್ನ ಹೀಗೆ ಬಿಗೀತಾ ಇದೆ ಅಂತ. ಹುಡುಗಿ ನೋಡಬೇಕು ಅಂತ ನನ್ನ ಮನಸ್ಸಿನಲ್ಲಿ ಇಲ್ಲವೇ ಇಲ್ಲ. ಅಕ್ಕನನ್ನು ನೋಡಿದ್ದೇನಲ್ಲ. ತಂಗಿಯೂ ಹೀಗೆ ಇದ್ದಾಳು. ಅವಳನ್ನು ನೋಡುವುದಾದರೂ ಯಾಕೆ. ನನಗೆ ಮನವಿಲ್ಲದಿದ್ದರೂ ಈಗ ಅವರ ಜತೆಗ್ಹೋಗಲೇಬೇಕು. ನೋಡಬೇಕು ಮನಸ್ಸು ಇಲ್ಲದಿದ್ದರೂ. ಅವರಿಗೆ

ಅಸಮಾಧಾನವಾಗಬಾರದು ಎಂದು ಒಪ್ಪಬೇಕು. ಇದು ಹೀಗೆ ಎಲ್ಲಿಗೆ ಹೋಗಿ ಮುಟ್ಟುತ್ತದೆಯೋ. ಟೈ ಹಿಡಿದು ಎಳೆದ, ಓ ಗಂಟು ಕಗ್ಗಂಟೇ ಆಯ್ತು ಕಾಣ್ತದ. ಹೊರಗೆ ಹಾರ್ನ್ ಆಯಿತು. ಬೇಗ ಹೋಗಿ ಬಾಗಿಲು ತೆಗೆದೆ. ಗಂಟಿಕ್ಕಿದ ಮುಖದಲ್ಲಿ ಮುಗುಳ್ನಗೆ ಎಳೆದು ತಂದೆ. ನಾನು ಎತ್ತಿದ ಸೂಟಕೇಸಿಗೂ ಕೈ ಹಾಕಿದರು ಶಂಕರರಾಯರು, ಬೇಡ ಬೇಡ ನಾನೇ ತರ್ತೀನಿ ಎಂದು ಬಾಗಿಲಿಗೆ ಬೀಗ ತಗುಲಿಸಿ ಬ್ಯಾಗಿನೊಡನೆ ಕಾರಿನ ಹತ್ತಿರ ಬಂದು ಹಿಂದಿನ ಸೀಟಿನಲ್ಲಿ ಕುಳಿತೆ. ಮುಂದೆ ಕುಳಿತ ಇಂದಿರಮ್ಮ ಹೊರಳಿ ನೋಡಿ ನಕ್ಕರು. ಸಂತೋಷದಿಂದ ಕಣ್ಣು ಮಿಂಚುತ್ತಿದ್ದವು. ಆ ಬಿಳಿಯ ಸಿಲ್ಕಿನಲ್ಲಿ ಕಪ್ಪು ಮೈಬಣ್ಣ ಒಡೆದು ಕಾಣುತ್ತಿತ್ತು. ಪಾಪ! ಶಂಕರರಾಯರು ಅಂದುಕೊಂಡೆ. ಅವರ ಹಾಗೇ ಕಾರಿನ ಬಲೆಯಲ್ಲಿ ಬಿದ್ದ ನಾನು ಕಣ್ಣುಮುಚ್ಚಿ ಸೀಟಿಗೊರಗಿದೆ.

ಕಾರು ಮುಂದೆ ಮುಂದೆ ಓಡಿದಾಗ ಮನಸ್ಸು ಹಿಂದಕ್ಕೋಡಿತು. ನಮ್ಮ ದೊಡ್ಡಣ್ಣನ ಮದುವೆಯಲ್ಲಿ ನಾನಿನ್ನೂ ಸಣ್ಣವನು. ಕನ್ನಡ ಶಾಲೆಗೆ ಹೋಗುತ್ತಿದ್ದೆ. ಅತ್ತಿಗೆ ಮೊದಲಗಿತ್ತಿಯಾಗಿ ನಮ್ಮ ಮನೆಗೆ ಬಂದಾಗ ಅವಳ ಜೊತೆ ಅವಳ ತಾಯಿ ಬಂದಿದ್ದರು. ಅವರ ಕಂಕುಳಲ್ಲಿ ಎರಡು ವರ್ಷದ ಹೆಣ್ಣು ಕೂಸಿತ್ತು. ಅತ್ತಿಗೆಯ ತಂಗಿ ವಿಮಲ. ಒಂದು ದಿನ ಅತ್ತಿಗೆ ಚೇಷ್ಟೆ ಮಾಡುತ್ತ' ಆನಂದ ಇವಳನ್ನ ನಿನಗs ಕೊಡೋದು. ನಿನ್ನ ಹೆಂಡತಿನ್ನ ಈಗಿನಿಂದs ಮನ್ಯಾಗ ಇಟ್ಟುಕೊಂಡುಬಿಡು' ಅಂದಳು.

ವಿಮಲನ ಮುಖಾ ನೋಡಿದೆ. ನನಗೆ ಬಹಳ ಸಿಟ್ಟು ಬಂದಿತು. ಆ ಕೂದಲು, ಮೂಗಿನೊಳಗಿನ ಸಿಂಬಳಾ. ಬರೀ ಬಣ್ಣ, 'ಥೂs ಇದನ್ಯಾರು ಮಾಡಿಕೊಂಡಾರು ಕರೀ ಕೋತೀನ್ನ, ಹಳ್ಳೀ ಊರ ಹುಂಬಗ ಕೊಡ್ರಿ. ನಾನು ಕುಲಕರ್ಣಿ ಕಲಾವತಿಯ ಹಾಂಗ ಛಂದಾಗಿ ಇರುವಾಕಿನ್ನ ಲಗ್ನಾ ಮಾಡಿಕೋತೀನಿ. ಕರ್ಪೂರದ ಗೊಂಬಿ ಅಂಥಾಕಿನ್ನ ಮಾಡಿಕೋತೀನಿ' ಅಂತ ಹೇಳಿದ್ದೆ. ಆ ಮಾತು ನೆನಪಿಟ್ಟು ಅತ್ತಿಗೆ ಇಷ್ಟು ವರ್ಷ ಆದ ಮೇಲೆ ಇನ್ನೂ ಹಂಗಿಸತಾಳ 'ನಿನ್ನ ಕರ್ಪೂರದ ಗೊಂಬಿ ಅಂಥಾ ಹೆಂಡತೀನ್ನ ನಾವು ಯಾವಾಗ ನೋಡಬೇಕಪಾ' ಅಂತ. ವಿಚಾರಗಳ ನಡುನಡುವೆ ಶಂಕರರಾಯರ ಮಾತಿಗೆ ಉತ್ತರ ಕೊಡುತ್ತಿದ್ದೆ. ಮೂರು ನಾಲ್ಕು ಊರು ದಾಟಿರಬೇಕು. ಹೊರಗೆ ಹಸಿರು ಹುಲ್ಲು, ಮರ, ಗಿಡ ಹೆಚ್ಚಾದವು. ಒಂದು ನದಿಯ ಹತ್ತಿರ ಬಂದಾಗ ಇಂದಿರಮ್ಮ ಕಾರು ನಿಲ್ಲಿಸಲು ಹೇಳಿದರು. ಏನೇನೋ ತಿಂಡಿ, ಥರ್ಮಾಸಿನಲ್ಲಿ ಕಾಫಿ ತಂದಿದ್ದರು. ನದಿಯ ಹತ್ತಿರ ಉಸುಕಿನ ಮೇಲೆ ಒಂದು ಮರದ ನೆರಳಿನಲ್ಲಿ ಕುಳಿತು ತಿಂಡಿ, ಕಾಫಿ ಮುಗಿಸಿದೆವು. ಆ ಹಸುರಿನ ವೈಭವ, ನದಿಯ ದಂಡೆ ನೋಡಿ ನನಗೆ ಆ ಜಾಗ ಬಿಟ್ಟೇಳಲು ಮನಸ್ಸೇ ಇರಲಿಲ್ಲ. ಇಂದಿರಮ್ಮ 'ನದೀ ನೋಡಿ ನೀವು ಇಷ್ಟು ಹುಚ್ಚಾದರ ನಮ್ಮ ಸಮುದ್ರ ನೋಡಿಬಿಟ್ಟು ಬರಲಿಕ್ಕೆ ಒಲ್ಲೇ ಅಂದೀರಿ' ಎಂದು ನಕ್ಕರು. ಕಾರು ಹೊರಟಿತು. ಮೋಡ ದಟ್ಟವಾಗಿದ್ದರಿಂದ ಹೆಚ್ಚು ಬೆಳಕು ಇರಲಿಲ್ಲ. ಮತ್ತೆ ಸುತ್ತು ಗಿಡ ಮರಗಳ ಗುಂಪು, ಮೋಡ ಇಕ್ಕಟ್ಟಾದ ದಾರಿ. ಕಾರು ಸಾವಕಾಶ ಹೊರಟಿತು. ಬಿಸಿಲು ಇಲ್ಲದಿದ್ದರೂ ದಪ್ಪ ಹಚ್ಚಡ ಹೊದಿಸಿದ ಹಾಗೆ ಮೋಡ ಮುಸುಕಿದ್ದರಿಂದ ಸೆಕೆ ಹೆಚ್ಚಾಗಿತ್ತು. ಎಲ್ಲರಿಗೂ ಬಾಯಾರಿಕೆ. ಒಂದು ಊರಿನ ಸ್ಟ್ಯಾಂಡಿನಲ್ಲಿ ಕಾರು ನಿಲ್ಲಿಸಿ ಶಂಕರರಾಯರು ಎಳನೀರು ಕೇಳಿದರು. ಇಂದಿರಮ್ಮ 'ನಿಮಗೆ ತಿಳಿಯೂದಿಲ್ಲ, ತಡೀರಿ ಸ್ವಲ್ಪ' ಎಂದು ಹೇಳಿ ತಾವೇ ಇಳಿದು ಬೆಲೆ ಚೌಕಾಸಿ ಮಾಡಿ ಎಳನೀರು ಕೊಂಡು, ಕೆತ್ತಿಸಿ, ಕುಡಿಯಲಿಕ್ಕೆ ನನ್ನ ಕೈಗೊಂದು ಕಾಯಿ ಕೊಟ್ಟರು. ನನಗೆ ಹಿಂದಿನ ದಿನದ ಕನಸು ನೆನಪಾಗಿ ನಗೆ ಬಂದಿತು. ಇಂದಿರಮ್ಮನ ಸೂಕ್ಷ್ಮ ಕಣ್ಣಿಗೆ ಕಂಡಿರಬೇಕು. 'ಯಾಕೆ ನಗ್ತೀರಿ' ಎಂದರು. ನನ್ನ ಕನಸು ಹೇಳಿ, ಬಯಲುಸೀಮೆಯವನಾದ ನಾನು ಕುಡಿಯಲಿಕ್ಕೆ ಬಾವಿ ನೀರು ಇದ್ದರೂ ಎಳನೀರಿಗೆ ತೆಂಗಿನ ಗಿಡ ಹತ್ತಲು ಹೋಗಿದ್ದೆ, ಈಗ ಹೆಚ್ಚು ತೊಂದರೆ ಇಲ್ಲದs ಎಳನೀರು ಸಿಕ್ಕಿತು' ಎಂದೆ. 'ನೀವು ಅದೃಷ್ಟವಂತರು ಆನಂದರಾವ್' ಎಂದು ನಕ್ಕರು ಶಂಕರರಾಯರು, ಕಾರು ಮುಂದೆ ಹೊರಟಿತು. ಕಾರಿನ ಸ್ಟಿಯರಿಂಗ್ ಶಂಕರರಾಯರು ಹಿಡಿದಿದ್ದರೂ ಅದನ್ನು ನಡೆಸುವವರು ಇಂದಿರಮ್ಮನೇ ಎಂದು ಅನಿಸಿತು ನನಗೆ. ಥಕ್ಕನೆ ಒಂದು ಮಾತು ನೆನಪಾಯಿತು. ಇಂದಿರಮ್ಮನ್ನ ಕೇಳಿದೆ: 'ಅಕ್ಕಾ ನೀವು ಡ್ರೈವಿಂಗ್ ಯಾಕೆ ಕಲೀಲಿಲ್ಲ.'

ಶಂಕರರಾಯರು 'ಓಹೋ ಅವಳು ಡ್ರೈವಿಂಗ್ ಕಲಿತರೆ ನನ್ನ ಮತ್ತು ಮಕ್ಕಳ ಗತಿಯೇನು' ಎಂದು ನಕ್ಕರು. ಇಂದಿರಮ್ಮ 'ನನ್ನ ಮೈ ಹೊತ್ತು ಅಡ್ಡಾಡುವುದೇ ನನಗೆ ತೊಂದರೆ. ಇನ್ನು ಡ್ರೈವಿಂಗ್ ಯಾವಾಗ ಕಲಿಯಲಿ? ಮೀನಾಗ ಇಂಥಾದ್ದರೊಳಗ ಬಹಳ ಹುರುಪು ನೋಡ್ರಿ' ಅಂದರು. 'ಮೀನಾ ಯಾರು?' ಅಂದೆ. ಅಯ್ಯ ನಾನು ಮರೆತೇ ಬಿಟ್ಟಿದ್ದೆ, ನನ್ನ ತಂಗೀ ಹೆಸರು ಮೀನಾಕ್ಷಿ ಅಂತ ಆಕೀ ಕಣ್ಣು ಬಹಳ ಛಂದ ಅದಾವ ಅಂದರು.

ನಾನು ಕಣ್ಣುಮುಚ್ಚಿ ಅಕ್ಕನ ರೂಪವನ್ನೇ ಹೋಲುವ, ಆದರೆ ಸುಂದರ ಕಣ್ಣಿನ ಸಣ್ಣ ಪಡಿಯಚ್ಚು ಕಣ್ಮುಂದೆ ತಂದೆ. ಮನಸ್ಸಿಗೇನೂ ಸೊಗಸೆನಿಸಲಿಲ್ಲ. ನಾನು ಮರೆಯಬೇಕು ಎಂದಷ್ಟು ಇವರು ಚುಚ್ಚಿ ಮತ್ತೆ ಮತ್ತೆ ನೆನಪು ಮಾಡಿಕೊಡುತ್ತಾರಲ್ಲೆಂದು ಬೇಸರವಾಯಿತು. ಕಾರು ಆಗಲೇ ಘಟ್ಟದ ತುದಿಯಲ್ಲಿತ್ತು. 'ನೋಡ್ರಿ ಎಷ್ಟು ಛಂದ ಅದ ಆ ದೃಶ್ಯ' ಅಂದರು ಶಂಕರರಾಯರು. ನಾನು ಕಣ್ಣು ಬಿಟ್ಟು ಹೊರಗೆ ಇಣಕಿದೆ. ದೂರ ದೂರ ಕಣ್ಣು ಕಾಣುವವರೆಗೂ ಕಪ್ಪು ಹಸಿರು ನೆಲ ಮಲಗಿತ್ತು. ನೂರಾರು ಅಡಿ ಎತ್ತರದಲ್ಲಿ ನಾವು. ಸೂರ್ಯನ ಬೆಳಕಿಲ್ಲದೆ ಮೋಡ ಕವಿದಿದ್ದರಿಂದ ಒಂದು ತರಹದ ಮಬ್ಬು ಮಬ್ಬಾಗಿತ್ತು ಪ್ರಕೃತಿ. ಕಾರು ಹೊರಳಿ ಹೊರಳಿ ಘಟ್ಟವನ್ನಿಳಿಯುತ್ತಿತ್ತು. ಕಾರು ಹೀಗೆ ಮಗುಚಿ ಬಿದ್ದು ಮಕ್ಕಳು ಜಾರುಗುಪ್ಪೆ ಆಡುವ ಹಾಗೆ ಹೋಗಿ ನೆಲ ಮುಟ್ಟಬೇಕು ಎನ್ನಿಸಿತು. ಕಿಟಕಿಯಿಂದ ಹಾರಿ ನಾನೇ ಹೊರಗೆ ಜಿಗಿದು ಗುಡ್ಡದಿಂದ ಜಾರಲೇ ಎಂದುಕೊಂಡೆ. ಸೂಟು ಹಾಕಿ ಟೈ ಬಿಗಿದಿದ್ದರಿಂದ ಬೆವರಿನಿಂದ ಮೈ ಎಲ್ಲ ಅಂಟಂಟಾಗಿತ್ತು. ಕೋಟು ಕಳೆದಿಟ್ಟು ಸೀಟಿಗೆ ಒರಗಿ ಕಾಲು ಚಾಚಿದೆ. ತಂಗಾಳಿಗೆ ಮೈ ಬಾಯಿ ಬಾಯಿ ಬಿಟ್ಟಿತು.

**ಸುರಿದ ಮಳೆ**

ಮೊದಲ ಸಲ ಶಂಕರರಾಯರಿಗೆ ನನ್ನ ಪರಿಚಯವಾದ ದಿನ ನೆನಪಾಯಿತು.

ಅದೇ ಹೊಸದಾಗಿ ಎಂ.ಎ. ಮುಗಿಸಿ ನೌಕರಿ ಹುಡುಕುತ್ತಿದ್ದೆ. ಸುಮಾರು ಈಗ ಒಂದು ವರುಷದ ಹಿಂದೆ, ನನ್ನ ದೊಡ್ಡಣ್ಣ, ಶಂಕರರಾಯರು ಹೈಸ್ಕೂಲಿನಲ್ಲಿರುವಾಗ ಕೂಡಿ ಕಲಿತರವಂತೆ. ಅವರೀಗ ದೊಡ್ಡ ಆಫೀಸರರಾಗಿದ್ದಾರೆ. ಅವನಿಗೆ ಪತ್ರ ಕೊಡ್ತೇನೆ, ನಿನಗೆ ನೌಕರಿ ಸಿಗಲಿಕ್ಕೆ ಸಹಾಯ ಮಾಡ್ತಾರೆ. ಅವರಲ್ಲಿ ಹೋಗು ಅಂದಿದ್ದ ಅಣ್ಣ, ಅಪ್ಪನೂ ಅದನ್ನೇ ಮತ್ತೆ ಮತ್ತೆ ಹೇಳಿ ಒತ್ತಾಯಮಾಡಿದ್ದರಿಂದ ಕೊನೆಗೊಮ್ಮೆ ಅವನಿಂದ ಪತ್ರ ತೆಗೆದುಕೊಂಡು ಆಫೀಸಿಗೆ ಹೋಗದೆ ಶಂಕರರಾಯರ ಮನೆಗೇ ಬಂದು ಭೆಟ್ಟಿಯಾಗಿದ್ದೆ. ನಾನು ಹೋಗಿ ಕೇಳಿ ಹದಿನೈದು ನಿಮಿಷವಾದ ಮೇಲೆ ಹೊರಗೆ ಬಂದು ಗಂಭೀರವಾಗಿ 'ಏನು ಬೇಕು' ಎಂದು ಕೇಳಿದರು. ಅಲ್ಲಿಯವರೆಗೆ ನಾನು ನಿಂತೇ ಇದ್ದೆ. ಅಣ್ಣನ ಪತ್ರ ಕೊಟ್ಟೆ. ಅದನ್ನೋದಿದ ಮೇಲೆ ನನ್ನನ್ನೊಮ್ಮೆ ಅಪಾದಮಸ್ತಕ ನೋಡಿ ಮತ್ತೊಮ್ಮೆ ಹೆಸರು, ವಯಸ್ಸು ವಿದ್ಯಾಭ್ಯಾಸ ಎಲ್ಲ ಕೇಳಿ ಕೂಡ್ರಲು ಹೇಳಿದರು. ಅನಂತರ ಅವರ ಮುಖಚಹರೆ, ಧ್ವನಿ, ಮಾತನಾಡಿಸುವ ಪದ್ಧತಿ ಎಲ್ಲ ಬದಲಿಯಾಗಿತ್ತು. ಒಳಗೆ ಹೋಗಿ ಚಹಾ ತರಲು ಹೇಳಿ ಬಂದರು. ನನಗೋ ನೌಕರಿ ಸಿಗುವುದೋ ಇಲ್ಲವೋ ಎನ್ನುವ ಆತುರ. ಕೇಳಿಯೇ ಬಿಟ್ಟೆ. 'ಒಂದೆರಡು ಜಾಗ ತುಂಬಬೇಕಾಗೇದ ಮೇಲಿನವರಿಗೆ ಹೇಳಿ ನಿಮ್ಮನ್ನೇ ತೆಗೆದುಕೊಳ್ಳುವ ಹಾಗೆ ಪ್ರಯತ್ನಮಾಡ್ತೀನಿ' ಅಂದರು. ಚಹಾ ಬಂದ ಮೇಲೆ 'ಮದುವಿ ಆಗೇದೇನು?' ಎಂದರು. ಇದೇ ವರ್ಷ ಎಂ.ಎ. ಆದೆ. ಮದುವೆ ಮಾಡಿಕೊಳ್ಳುವ ವಿಚಾರ ಈಗ ಇಲ್ಲ. ಒಂದೆರಡು ವರ್ಷ ನೌಕರಿ ಮಾಡಬೇಕು ಆಮೇಲೆ ಮದುವೆ ಅಂದೆ. 'ಎಲ್ಯಾರ ನೋಡಿರೇನು?' ಅಂದರು. 'ಇಲ್ಲ' ಅಂದೆ., 'ನೌಕರಿ ಸಿಕ್ಕರ ಆಯಿತಲ್ಲ. ಮುಂದೆ ನೋಡಬಹುದು. ಶುಭಸ್ಯ ಶೀಘ್ರಂ' ಅಂದು ನಕ್ಕರು. ಏನೂ ಉತ್ತರ ಹೇಳದೇ ನಾನೂ ನಕ್ಕುಬಿಟ್ಟೆ. ನನಗೆ ನೌಕರಿ ಸಿಕ್ಕಿತು.

ರೂಮು ಹಿಡಿದು ದಿನಚರಿನೂ ಸುರುವಾಯಿತು. ಆಗಾಗ ಶಂಕರರಾಯರು ಮನೆಗೆ ಕರೀತಾ ಇದ್ದರು. ಒಮ್ಮೆ ಹೋದಾಗ ಹೆಂಡತಿಯ ಪರಿಚಯ ಮಾಡಿಕೊಟ್ಟರು. ಸ್ಥೂಲದೇಹ, ಕಪ್ಪು ಬಣ್ಣ, ಉಬ್ಬು ಹಲ್ಲು, ಕಣ್ಣು ಮೂಗು

ಸಾಧಾರಣ, ಗಳಿಬಿಳಿ ಸ್ವಭಾವ, ಮಾತು ಹೆಚ್ಚು. ನನ್ನ ಜೊತೆಗೆ ಮಾತಾಡ್ತಾ ನನ್ನ ಮನೆ, ಅಪ್ಪ, ಅವ್ವ, ಅಣ್ಣ, ತಮ್ಮ, ಅಕ್ಕ, ತಂಗಿ ಆಸ್ತಿ ಎಲ್ಲ ವಿಷಯ ತಿಳಿದುಕೊಂಡರು. ತಮ್ಮ ಮನೆಯ ವಿಷಯ ಹೇಳಿದರು. ಅವರ ತವರ್ಮನೆ ಘಟ್ಟದ ಕೆಳಗೆ. ಸಮುದ್ರ ದಂಡೆಯೂರು. ಅಪ್ಪ ಅವ್ವ ಇದ್ದಾರ. ಅಣ್ಣನ ಮದುವಿ ಆಗಿದೆ. ಇಬ್ಬರು ತಮ್ಮಂದಿರು ಕಲೀತಾರ. ತಂಗಿಯ ಮದುವೆ ಇನ್ನೂ ಆಗಬೇಕಾಗಿದೆ. ತಮ್ಮ ತೋಟ ಸಮುದ್ರ ಎಲ್ಲದರ ಬಗ್ಗೆ ಮಾತಾಡಿದರು. 'ನಿಮ್ಮ ಕಡೆಯ ಜೀವನಾ ನಾವು ಕಾರಂತರ ಕಾದಂಬರಿಯೊಳಗ ಓದಿ ಅನುಭವಿಸ್ತೇವಿ' ಅಂದೆ. ನಕ್ಕರು. 'ನೀವೂ ಒಮ್ಮೆ ನಮ್ಮ ಊರು ನೋಡಲಿಕ್ಕೆ ಬರ್ರಿ' ಅಂದರು.

ಅದಕ್ಕೇ ಈಗ ಅವರೊಡನೆ ಊರು, ಮನೆ, ತೋಟ, ಸಮುದ್ರ ಹುಡುಗಿ ಎಲ್ಲ ನೋಡಲಿಕ್ಕೆ ಹೊರಟಿದ್ದು. ಎಲ್ಲಾ ಚನ್ನಾಗಿದ್ದು ಹುಡುಗೀನೇ ಚೆನ್ನಾಗಿಲ್ಲದಿದ್ದರೆ ಏನು ಮಾಡೋದು. ಹೊರಗಿನ ಚಳಿಗಾಳಿಯಿಂದ ಮೈ ನಡುಗಿತು.

ಗುಡ್ಡವನ್ನಿಳಿದ ಕೆಲಹೊತ್ತಿನಲ್ಲೇ 'ಇನ್ನೇನು ನಮ್ಮೂರು ಬಂತು' ಅಂದರು. ಗೋಣು ಚಾಚಿದೆ. ಗಾಳಿ ಸಮುದ್ರದ ನೀಲಿ ನೀರನ್ನು ಹಿಡಿದು ಅಲ್ಲಾಡಿಸುತ್ತಿತ್ತು. ಎಲ್ಲಿಂದ ಬಂತಿದು ಗಾಳಿ ಎಂದು ಆಕಾಶ ನೋಡಿದೆ. ಕಪ್ಪಾದ ಮೋಡಗಳು ತೇಲಿ ತೇಲಿ ಬರುತ್ತಿದ್ದವು. ಎಲ್ಲಿಯೋ ದೂರದಿಂದ ಮಣ್ಣಿನ ವಾಸನೆ ಬಂದು ಮೂಗಿಗೆ ಬಡಿಯಿತು. ಕಣ್ಣು ಪೂರ್ತಿ ತೆರೆದು ಕುಳಿತೆ. ರಸ್ತೆಯ ಒಂದು ಕಡೆಗೆ ಓಡುತ್ತಿರುವ ಸಮುದ್ರ ಮತ್ತು ತೆಂಗಿನ ಗಿಡಗಳು. ಇನ್ನೊಂದು ಬದಿಗೆ ಬತ್ತದ ಗದ್ದೆಗಳು. ಅವುಗಳ ನಡುವೆ ಅಲ್ಲೊಂದು ಇಲ್ಲೊಂದು ಮನೆ. ಅವು ಒಂದೊಂದು ಹಳ್ಳಿ ಎಂದು ಇಂದಿರಮ್ಮ ನನಗೆ ಹೇಳಿದಾಗ ಬಹಳ ಆಶ್ಚರ್ಯವಾಯಿತು.

'ನಾವು ಬರುವದು ಅವರಿಗೆ ಗೊತ್ತಿಲ್ಲ, ಅಲ್ದೇ ಇಂದಿರಾ?' 'ಮೊನ್ನಿನ ಕಾಗದದಲ್ಲಿ ಬರೋವವರಿದ್ದೀವಿ ಅಂತ ಅಷ್ಟೇ ತಿಳಿಸಿದ್ದೆ ಎಂದು ಅನ್ನೋದು ಬರೆದಿಲ್ಲ.' 'ಹಾಗಾದ್ರೆ ನಾವೀಗ ಹೋಗುವುದು ಅವರಿಗೆ ಸರ್‌ಪ್ರೈಜ್' ಅಂದರು ಶಂಕರರಾಯರು. ಗಾಳಿಯ ವೇಗ ಈಗ ಎಲ್ಲರ ಗಮನಕ್ಕೂ ಬರುವ ಹಾಗಿತ್ತು. 'ಅಂತೂ ಬೇಗ ಬಂದೆವು. ಮಳೆಯಲ್ಲಿ ಸಿಕ್ಕಲಿಲ್ಲ. ಮನೆ ಬಂದೇ ಬಿಟ್ಟಿತು. ' ನೀವು ಕಾರು ಡ್ರೈವಿಂಗ್ ಮಾಡಿದರೆ ಕೇಳೋದೇನು. ನನಗೆ ಗೊತ್ತಿತ್ತು. ಕತ್ತಲಾಗೋದರೊಳಗೆ ನಾವು ಮನೆ ಮುಟ್ತೇವಿ ಅಂತ. ಅಪ್ಪ ತೋಟಕ್ಕೆ ಹೋಗಿರಬೇಕು. ಅಗೋ ಮೀನಾ ಬಾಗಿಲಿಗೇ ಬಂದಳು'. ನಾನು ಬಾಗಿಲನ್ನೇ ದಿಟ್ಟಿಸಿದೆ. ಕಾರು ಮನೆ ಮುಂದೆ ನಿಂತಿತು. ಬಂಗಾರದ ಮೈಬಣ್ಣ. ಮೋಡದ ಹಾಗೆ ದಟ್ಟವಾಗಿದ್ದ ಕಪ್ಪು ಕೂದಲು, ಉದ್ದ ರೆಪ್ಪೆಗೂದಲಿನ ಮಿಂಚುವ ಕಣ್ಣುಗಳು. ಕಣ್ಣು ಮಂಜಾಯಿತು. ಹೊಸಕಿ ಮತ್ತೆ ನೋಡೋದರಲ್ಲಿ ಥಟ್ಟನೆ ಮಿಂಚಿ ಮಾಯಾವಾಗಿದ್ದಳು ಹುಡುಗಿ. ಇಂದಿರಮ್ಮ ಇಳಿದು ಒಳಗೆ ಹೋಗಿದ್ದರು. ಕಾರಿನಿಂದ ಇಳಿಯುವಷ್ಟರಲ್ಲಿ ಜೋರಾಗಿಗಾಳಿ ಬೀಸಿ ಟಪಟಪ ಮಳೆ ಹನಿ ಬೀಳತೊಡಗಿದವು. ಸೂಟಕೇಸು ಎತ್ತಿಕೊಳ್ಳಲು ಹುಡುಗನೊಬ್ಬ ಮುಂದೆ ಬಂದ. ಬಾಗಿಲಿಗೆ ಬರುವ ವೇಳೆಗೆ ತಲೆ ಪೂರ್ಣ ತೋಯ್ದಿತ್ತು. ಇಳಿವಯಸ್ಸಿನವರೊಬ್ಬರು ಬಂದು 'ಬರ್ರಿ ಒಳಗೆ ಬರ್ರಿ, ಮಳೆಯಲ್ಲಿ ನೆಂದಿರಾ?' ಎಂದರು. ಇಲ್ಲ ಆನಂದದಲ್ಲಿ ಮಿಂದೆ ಎನ್ನಬೇಕೆನಿಸಿತು. ಚಿಕ್ಕ ಹುಡುಗನೊಬ್ಬ 'ಅಜ್ಜಾ ಅಲ್ನೋಡು ಆಕಾಶದಾಗ' ಎಂದ ಹೊರಳಿದೆ, ಕಾಮನಬಿಲ್ಲು ಮೂಡಿತ್ತು.

***

■■

## ದಿಗಂತ

ಸೊಸೆಯ ರವಿಕೆಗೆ ಗುಂಡಿ ಹಚ್ಚುತ್ತಿದ್ದಳು. ಶಾಲೆಗೆ ಹೊತ್ತಾಗಿದೆಯೆಂದು ಚಡಪಡಿಸುತ್ತಿದ್ದ ಮಧುಮತಿಗೆ ಪುಸ್ತಕಗಳನ್ನು ತೆಗೆದುಕೊಂಡು ಸಿದ್ಧಳಾಗಿ ಬರಲು ತಿಳಿಸಿ ತಾನು ಬೇಗ ಬೇಗ ಸೂಜಿ ಚುಚ್ಚುತ್ತಿದ್ದಳು. ಕೊನೆಯ ಸಲ ಗಂಟುಹಾಕಿ ಬಿರುಸಿನಿಂದ ಎಳೆದಾಗ ತೋರುಬೆರಳಿಗೆ ಚುಚ್ಚಿತು ಸೂಜಿ. 'ಹಾ....' ಎಂದವಳೇ ರವಿಕೆಯನ್ನಲ್ಲೇ ಬಿಟ್ಟು ಕಿಟಕಿಯ ಹತ್ತಿರ ಹೋದಳು ಬೆರಳನ್ನೇ ನೋಡುತ್ತ. ಕ್ಷಣದಲ್ಲೇ ಗಾಯದಿಂದ ಸಣ್ಣದಾಗಿ ಬಂದ ರಕ್ತ, ಬೆರಳಿನ ಮೇಲೆ ದೊಡ್ಡದಾಗಿ ಕೆಂಪು ಮಾಣಿಕದಂತೆ ಕೂತಿದ್ದು, ಇನ್ನೇನು ಉರುಳಿಬೀಳುವುದರಲ್ಲಿತ್ತು. ಅಷ್ಟರಲ್ಲಿ ಸರಕ್ಕನೆ ಬೆರಳು ಬಾಯಲ್ಲಿಟ್ಟಳು ರತ್ನಮ್ಮ.

ಛೀ ! ಎಂತಹ ಸ್ವಾರ್ಥಿ ತಾನು. ತನ್ನ ಒಂದೇ ಒಂದು ಕರುಳಿನ ಚೂರಾಗಿದ್ದ ವಿಶ್ವನಾಥನನ್ನೇ ಸಾವಿರಾರು ಮೈಲಿಗಳಾಚೆ ವಿದೇಶಕ್ಕೆ ಕಳಿಸಿ ಹಗಲು ರಾತ್ರಿ ಚಡಪಡಿಸುತ್ತಿರುವ ತಾನು ಹನಿ ರಕ್ತ ಹೊರಗೆ ಬೀಳಗೊಡಲಿಲ್ಲವಲ್ಲ. ಚ್ಚು, ಚ್ಚು ನಿರಾಶೆಯ ನಗೆ ಮುಖದ ತುಂಬ ಹರಡಿಕೊಂಡಾಗ ಮಧು ಓಡೋಡಿ ಬಂದಳು. "ಅತ್ತೇ ಗುಂಡಿ ಹಚ್ಚಿ ಆಯಿತೇ"? ಎಂದವಳೇ ಬಿರುಗಾಳಿಯಂತೆ ಹೊರಗೆ ಓಡಿದಳು.

ಕಿಟಕಿಗೆ ಒರಗಿ ನಿಂತ ರತ್ನಮ್ಮ ಎದುರಿನ ಬೋಳು ಮರವನ್ನೇ ದಿಟ್ಟಿಸಿದಳು. ಚಳಿಗಾಲ ಸುರು ಆದೊಡನೆ ದಿನದಿನವೂ ಎಲೆಗಳೆಲ್ಲ ಉದುರಿ, ಉದುರಿ, ಈಗ ಚಿಕ್ಕ ಮಕ್ಕಳು ಬರೆದ ಚಿತ್ರದಂತೆ ತೋರುತ್ತಿತ್ತು. ತನ್ನಂತೆಯೇ ಬರಡಾಗಿತ್ತು, ಬಡವಾಗಿತ್ತು. ಮರಕ್ಕೇನೋ ಮತ್ತೆ ವಸಂತಕಾಲ ಬಂದೇಬರುತ್ತದೆ. ಆದರೆ - ತನಗೆ ? ಗಂಡ ವಿದೇಶಕ್ಕೆ ಹೊರಡುವ ಮುಂಚಿನ ಎರಡು ವರ್ಷಗಳು ತನ್ನ ಬದುಕಿನ ವಸಂತಕಾಲ. ಅವರು ಹೊರಟಾಗ ವಿಶ್ವ ಇನ್ನೂ ಗರ್ಭದಲ್ಲಿದ್ದ. ಮನಸ್ಸಿಗೆ ಭಣ ಭಣ ಎನಿಸಿದರೂ ಹೇಗಿದ್ದರೂ ಎರಡು ಮೂರು ವರ್ಷದಲ್ಲಿ ತಿರುಗಿ ಬರುತ್ತಾರಲ್ಲ ಎನ್ನುವ ಸಮಾಧಾನದೊಡನೆ, ಹದಿನೈದು ದಿನಗಳಿಗೊಮ್ಮೆ ಅವರಿಂದ ಬರುತ್ತಿದ್ದ ಕಾಗದಗಳ ಪ್ರತೀಕ್ಷೆಯಲ್ಲಿ ಕಾಲ ಹೇಗೋ ಕಳೆಯುತ್ತಿತ್ತು. ಮುಂದೆ ವಿಶ್ವ ಹುಟ್ಟಿದ ಮೇಲೆ ಅವನ ಲಾಲನೆ ಪಾಲನೆಗಳಲ್ಲಿ ಎರಡು ವರುಷ ಹೇಗೆ ಕಳೆದವೋ ಗೊತ್ತಾಗಲಿಲ್ಲ. ಎಲ್ಲ ಪರೀಕ್ಷೆಗಳಲ್ಲಿಯೂ ಒಳ್ಳೆಯ ರೀತಿಯಿಂದ ಪಾಸಾಗಿ ಬರುವ ಗಂಡನನ್ನು ಎದುರುಗೊಳ್ಳಲು ಮನಸ್ಸು ಕುಣಿಯುತ್ತಿತ್ತು. ಗಂಡ ಸಾವಿರಾರು ರೂಪಾಯಿಗಳ ನೌಕರನಾಗಬೇಕು ಎಂದು ತಾನೆಂದರೆ, ಅಪ್ಪ, 'ಅಣ್ಣಾ ನಿನ್ನ ಗಂಡ ಗುಲಾಮಗಿರಿ ಮಾಡುವುದು ಬೇಡ. ಹೇಗೂ ನಿನ್ನ ಪಾಲಿನ ಆಸ್ತಿಯಿದೆ. ಅದರಿಂದಲೇ ಅವರಿಗೆ ಆಸ್ಪತ್ರೆ ಕಟ್ಟಿಸಿಕೊಡೋಣ' ಎನ್ನುತ್ತಿದ್ದರು. ಅವರೊಡನೆ ವಾದಿಸಿ, ಅತ್ತಿಗೆಯವರಿಂದ ಚೇಷ್ಟೆ ಮಾಡಿಸಿಕೊಂಡಾಗ ತಾನು ತುಂಬು ಸುಖಿ. ಒಬ್ಬಳೇ ಇದ್ದಾಗ ತನ್ನ ಭಾವೀ ಜೀವನದ ಬಗ್ಗೆ, ಮಗನ ಭವಿಷ್ಯದ ಬಗ್ಗೆ ಕನಸು ಕಾಣುತ್ತಿದ್ದಳು. 'ಬೇಗ ಬನ್ನಿ' ಎಂದು ಪ್ರತಿಯೊಂದು ಕಾಗದದಲ್ಲೂ ಬರೆಯುತ್ತಿದ್ದಳು. ಐದನೆಯ ವರುಷ ಮುಗಿದರೂ ಗಂಡ ತಿರುಗಿ ಬರುವ ಸೂಚನೆ ಕಾಣದಿದ್ದಾಗ ಹೌಹಾರಿದ ಅವಳು ಕೊನೆಯದಾಗಿ 'ನೀವು ಬಂದೇತೀರಬೇಕು, ಇಲ್ಲವೇ ತನ್ನನ್ನಾದರೂ ಅಲ್ಲಿಗೆ ಕರೆಸಿಕೊಳ್ಳುವ ವ್ಯವಸ್ಥೆ ಮಾಡಬೇಕು' ಎಂದು ತನ್ನೆಲ್ಲ ದುಃಖ ತೋಡಿಕೊಂಡು ಬರೆದಿದ್ದಳು. ಅಲ್ಲಿಯವರೆಗೆ ವಿದೇಶಕ್ಕೆ ಹೋಗಿ ಬಂದವರಿಂದ ಏನೇನೋ ಹಾರಿಕೆಯ ಸುದ್ದಿ ಕೇಳಿ ಅವಳ ಜೀವ ತಲ್ಲಣಿಸಿತ್ತು. ಅವಳ ಪತ್ರಕ್ಕೆ ಅಲ್ಲಿಂದ ಚುಟುಕಾದ ಉತ್ತರ ಬಂದಿತ್ತು. ಅದು ಅವಳ ಜೀವನದ ದಿಕ್ಕನ್ನೇ ಬದಲಿಸಿತ್ತು.

ಕಿಟಕಿಯಿಂದ ಸರಿದ ರತ್ನಮ್ಮ ತನಗೆ ತಿಳಿಯದೆ ಡ್ರೆಸಿಂಗ್ ಟೇಬಲ್ಲಿನ ಡ್ರಾ ಎಳೆದಿದ್ದಳು. ಶೃಂಗಾರನ ಪೆಟ್ಟಿಗೆಯಲ್ಲಿಟ್ಟುಕೊಂಡಿದ್ದ ಪಾಕೀಟನ್ನು ತೆಗೆದು ನಡುಗುತ್ತಿದ್ದ ಬೆರಳುಗಳಿಂದ ಬಿಡಿಸಿ, ಮತ್ತೊಮ್ಮೆ ಓದಿದಳು. ಕಣ್ಣಾಲಿಗಳು ತುಂಬಿ ಬಂದವು. ಟಪಟಪ ಹನಿಗುಳುದುರಿದವು.

"ಅತ್ತೇಽ ಅಪ್ಪಾ ಕರೀತಾರ, ಮಾಮಾನಿಂದ ಕೇಬಲ್ ಬಂದಽದಂತೆ" ಅಣ್ಣನ ಮಗ ಕಿರಣ ಬಾಗಿಲಿಗೆ ಬಂದು ಕೂಗಿದವನೇ ಮತ್ತೆ ಓಡಿಹೋದ. ರತ್ನಮ್ಮ ಅವನ ಹಿಂದೆಯೇ ಧಾವಿಸಿದಳು.

"ವಿಶ್ವ ಲಂಡನ್ ಮುಟ್ಟಿದ ಕೂಡಲೇ ಕೇಬಲ್ ಕಳಿಸ್ಯಾನವ್ವ. ಆರಾಮ ಇದೀನಿ. ಏನೂ ಕಾಳಜಿ ಮಾಡಬ್ಯಾಡ್ರಿ ಅಂತ ಬರದಾನ." ಕೇಬಲ್ ವಿಷಯ ಕೇಳಲು ಬಂದಿದ್ದ ಮನೆಯವರೆಲ್ಲ ಚದುರಿದರೂ ರತ್ನಮ್ಮ ಮೌನವಾಗಿ ನಿಂತೇ ಇದ್ದಳು. ತಂಗಿಯ ಕೈಯಲ್ಲಿದ್ದ ಪತ್ರವನ್ನು ನೋಡಿದ ಅಣ್ಣ, ತಂಗಿಯ ಮೂಕ ಶೋಕವನ್ನು ಅರಿತ. ಹತ್ತಿರ ಬಂದು ತಗ್ಗಿದ ದನಿಯಲ್ಲಿ ಕೇಳಿದ.

"ರತ್ನಾಽ ಆ ಪತ್ರಾ ಸುಟ್ಟುಬಿಡಬಾರದಾ. ಇನ್ನೂ ಯಾಕ ಇಟಕೊಂಡೀದಿ ?"

"ಅವರು ಎಂದೋ ನನ್ನ ಪಾಲಿಗೆ ಇಲ್ಲ ಆಗ್ಯಾರ ಅಣ್ಣಾಽ. ಆದರ ಈ ಕಡೀ ಪತ್ರದ ಮೋಹ ಇನ್ನೂ ಬಿಡುವೊಲ್ಲದಾಗೇದ ನನ್ನ" ರತ್ನಮ್ಮ ನಿಟ್ಟುಸಿರುಬಿಟ್ಟಳು. ಅಣ್ಣ ಪ್ರೀತಿಯಿಂದ ಅವಳ ತಲೆ ಸವರಿ ಹೊರಟುಹೋದ. ತನ್ನ ಮನದ ಕೋಲಾಹಲವನ್ನು ಅರಿತವ ಅವನೊಬ್ಬನೆ. ತಂದೆ-ತಾಯಿ ತೀರಿದ ಮೇಲೆ ಅವನೇ ತನಗೆ, ತನ್ನ ಮಗನಿಗೆ ಪ್ರೀತಿಯ ರಕ್ಷಣೆ ಕೊಟ್ಟಿದ್ದಾನೆ. ಸೋದರಳಿಯನನ್ನು ಮಗನಂತೆಯೇ ಬೆಳೆಸಿ ಉಚ್ಚ ಶಿಕ್ಷಣಕ್ಕೆ ವಿದೇಶಕ್ಕೆ ಕಳುಹಿಸಿದ್ದಾನೆ.

ವಿಶ್ವ ವಿದೇಶಕ್ಕೆ ಹೋಗುವ ಮಾತು ಮೊದಲನೆಯ ಸಲ ಮನೆಯಲ್ಲಿ ಬಂದಾಗ ತಾನು ಬೆಚ್ಚಿದ್ದಳು ಊಟ ಮಾಡಲಿಲ್ಲ. ಹಾಸಿಗೆ ಬಿಟ್ಟು ಏಳಲಿಲ್ಲ. ಯಾರೊಡನೆಯೂ ಮಾತನಾಡಲಿಲ್ಲ. ಆಗ ಅಣ್ಣನೇ ಚಹದ ಕಪ್ಪು ಹಿಡಿದು ತನ್ನ ಕೋಣೆಗೆ ಬಂದಿದ್ದ. ಮುಸುಕು ತೆಗೆದು ಪ್ರೀತಿಯಿಂದ ತಲೆಸವರಿ ಚಹ ಕುಡಿಸಿದ. ಆಮೇಲೆ ಹೇಳಿದ.

'ರತ್ನಾಽ ನಿನ್ನ ಮಗಾ ಶಾಣ್ಯಾ ಅದಾನ. ಅವನಿಗೆ ಪರದೇಶಕ್ಕೆ ಹೋಗಿ ಕಲೀಬೇಕು ಅಂತ ಆಸೆ ಅದ. ಒಪ್ಪಿಗೆ ಕೊಡು. ಹೋಗಿ ಕಲತು ಬರಲಿ. ನಿನ್ನ ಸ್ವಾರ್ಥಕ್ಕೆ ಅವನ ಯಶಸ್ಸಿಗೆ ಅಡ್ಡ ಬರಬ್ಯಾಡಾ ನೋಡು, ನಿನ್ನ ಮಗನಿಗೆ ಒಳ್ಳೆಯದಾಗಲಿ ಅಂತ ಆಶೀರ್ವಾದ ಮಾಡಿ ಕಳಿಸಿಕೊಡು. ಹೂಂ, ಅನ್ನು" ಎಂದು ಅಳಿಯನ ಪರವಾಗಿ ಅಂಗಲಾಚಿದ್ದ. ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುವ ಅಣ್ಣನ ಉದಾರ ಬುದ್ಧಿಗೆ ತನ್ನನ್ನು ಸಂತಸದಲ್ಲಿಡುವಂತೆ ಮಾಡುವ ಅವನ ಪ್ರಯತ್ನಕ್ಕೆ ಮಣಿದು, ತಾನು ಒಪ್ಪಿಗೆ ಕೊಟ್ಟಿದ್ದಳು. ಅವನ ಪ್ರೇಮದ ನೆರಳಿನಲ್ಲಿ ಬಾಳುವ ತಾನು ವಿಶ್ವನಂತೆ ಮಧು, ಕಿರಣ ಮತ್ತು ಮನೆಯ ಉಳಿದ ಮಕ್ಕಳೂ ತನ್ನವರೇ ಎನ್ನುವಂತೆ ನಡೆಯುವ ಮನಸ್ಸು ಮಾಡಿದ್ದಳು. ಮನಸ್ಸು ವಿಶಾಲವಾದಷ್ಟು ಹೃದಯಗಳು ಹತ್ತಿರವಾಗುತ್ತಿದ್ದವು.

ವಿಶ್ವ ಹೋಗುವಾಗ ಕೋಣೆಯಲ್ಲಿ ಬಂದು ಪಾದ ಮುಟ್ಟಿ ನಮಸ್ಕಾರ ಮಾಡಿದ. ಏನು ಮಾತಾಡಲೂ ತನಗೆ ತಿಳಿಯಲಿಲ್ಲ. ಒಂದು ಮುಚ್ಚಿದ ಕವರನ್ನು ಅವನ ಕೈಯಲ್ಲಿಟ್ಟು ಹೇಳಿದಳು. "ಲಂಡನ್ನಿಗೆ ಹೋದ ಮೇಲೆ ಈ ವಿಳಾಸ ಹುಡುಕಿಕೊಂಡು ಹೋಗಿ ಭೆಟ್ಟಿ ಆಗಿ ಆ ಪತ್ರಾ ಅವರಿಗೆ ಕೊಡು. ಅವರು ನಮ್ಮ ಗುರ್ತಿನವರು" ಗಂಟಲು ಕಟ್ಟಿತು. ಮಾತು ಹೊರಡಲಿಲ್ಲ.

ವಿಶ್ವನಾಥ ಕೈಯಲ್ಲಿ ಕವರು ತೆಗೆದುಕೊಂಡು ಓದಿದ. ಡಿ. ಆನಂದರಾವ್ F.R.C.S. ಎಂದು.

***

ಪತ್ರ ಓದುತ್ತಿದ್ದ ಆನಂದರಾವ್ ಮುಖ ಮೇಲೆತ್ತಿ ಮುಂದೆ ಕುಳಿತ ಯುವಕನನ್ನೊಮ್ಮೆ ನೋಡಿದರು. ಅವನು ಅವರ ಸ್ಟಡೀರೂಮು ಬೆರಗಾಗಿ ನೋಡುತ್ತಿದ್ದ. ಗೋಡೆಗಳಲ್ಲಿ ಗಾಜಿನ ಕಪಾಟುಗಳಲ್ಲಿ ತುಂಬ ದೊಡ್ಡ

ದೊಡ್ಡ ಹೊಳೆಯುವ ಅಕ್ಷರಗಳ ಕೆಂಪು ರಟ್ಟಿನ ಪುಸ್ತಕಗಳು. ಕಿಟಕಿ ಬಾಗಿಲುಗಳಿಗೆಲ್ಲ ತಿಳಿ ನೀಲಿ ಪರದೆ, ನಸುಗೆಂಪು ಬಣ್ಣದ ಅಂಗುಲ ದಪ್ಪ ಹಾಸು ಗಂಬಳಿ ಕೋಣೆಯ ನೆಲವನ್ನಲಂಕರಿಸಿತ್ತು. ಸೂಕ್ಷ್ಮ ಕೆತ್ತನೆ ಕೆಲಸ ಮಾಡಿದ ಸಣ್ಣ ಸಣ್ಣ ಟೀಪಾಯ್‌ಗಳ ಮೇಲೆ ಬಿಳಿಯ ಕಲ್ಲಿನ ವಿಗ್ರಹಗಳು, ಸುಂದರವಾಗಿ ಜೋಡಿಸಿಟ್ಟ ಹೂಗೊಂಚಲು. ಒಟ್ಟಿನಲ್ಲಿ ಅಧ್ಯಯನ ಮಾಡಲು ಶಾಂತ, ಸುಂದರ ವಾತಾವರಣ. ಕೋಣೆ ಪರೀಕ್ಷೆ ಮಾಡಿ ಮುಗಿದ ಮೇಲೆ ಎದುರಿಗೆ ಕುಳಿತು ಆ ಪತ್ರದಲ್ಲೇ ತಲ್ಲೀನರಾಗಿದ್ದ ಆನಂದರಾವರನ್ನು ನೋಡಿದ. ಎದ್ದು ನಿಂತು ತನ್ನ ಕೈ ಕುಲುಕುವಾಗ ನೋಡಿದ್ದ, ತನಗಿಂತ ಗೇಣು ಎತ್ತರವಾಗಿದ್ದರು. ಕೆಂಪು ಮಿಶ್ರಿತ ಬಿಳಿಯ ಬಣ್ಣ, ಕರಿ ಬಿಳಿ ಕೂಡಿದ ಗುಂಗುರು ಕೂದಲಿನ ಕ್ರಾಪು, ಅಗಲ ಎದೆ. ಚೂಪು ಮೂಗು, ದೊಡ್ಡ ಹಣೆಯಿಂದ ಬಹಳ ಬುದ್ಧಿವಂತರೆನಿಸಿಕೊಳ್ಳುವ ಲಕ್ಷಣಗಳೆಲ್ಲ ಇದ್ದವು. ಅವರನ್ನೇ ದಿಟ್ಟಿಸುತ್ತಿದ್ದ ಆನಂದರಾವ್ ಇನ್ನೂ ಪತ್ರ ಓದುತ್ತಲೇ ಇದ್ದರು.

ದುಂಡುದುಂಡಗಿನ ಆ ನಾಲ್ಕು ಸಾಲುಗಳ ಪತ್ರವನ್ನು ಮೂರು ನಾಲ್ಕು ಸಲ ಓದಿದರು. ಸಾಲುಗಳ ನಡುವೆ ಶಬ್ದಗಳ ಹಿಂದೆ ದುಂಡು ಮುಖದ, ವಿಶಾಲ ಕಣ್ಣಿನ, ದೃಢವಾದ ಚೂಪು ಗದ್ದದ ಸುಂದರ ಮುಖ ತೇಲಿಬಂದಿತು. ಅದನ್ನೇ ಎಷ್ಟು ಹೊತ್ತು ದಿಟ್ಟಿಸುತ್ತಿದ್ದರೋ ಎದುರಿಗಿನ ಯುವಕ ಸಣ್ಣದಾಗಿ ಉಸಿರುಬಿಟ್ಟ. ಕೋಣೆ ತುಂಬ ನಿಶ್ಶಬ್ದವಾಗಿದ್ದಿತು. ಸರ್ಜನ್ ಕೂಡಲೆ ಎಚ್ಚೆತ್ತರು. ಈ ಸಲ ಕನ್ನಡಕದ ಹಿಂದಿನಿಂದ ಬಂದ ಆ ದೃಷ್ಟಿ ತನ್ನನ್ನೇ ಒಳಹೊಕ್ಕು ನೋಡುವಷ್ಟು ತೀಕ್ಷ್ಣವಾಗಿದೆ ಎನಿಸಿತು ವಿಶ್ವನಿಗೆ.

"ಮಿ. ವಿಶ್ವನಾಥ."

"Yes Sir".

"ನೀನು ಇಲ್ಲಿಗೆ ಬಂದು ಎಷ್ಟು ದಿನಗಳಾದುವು ?" ವಿಶ್ವನಾಥನಿಗೆ ಅಚ್ಚರಿಯಾಯಿತು. ಕಣ್ಣುಗಳನ್ನು ಅರಳಿಸಿದ.

ಹೌದು ಅವೇ ಕಣ್ಣುಗಳು, ಏನೂ ವ್ಯತ್ಯಾಸವಿಲ್ಲ. ದೃಷ್ಟಿಯೂ ಅದೇ.

"ಯಾಕೆ ? ನಾನು ಕನ್ನಡ ಮಾತನಾಡಿದ್ದಕ್ಕೆ ಆಶ್ಚರ್ಯವಾಯಿತೇ ?" ಹೌದೆನ್ನುವಂತೆ ತಲೆ ಆಡಿಸಿದ ವಿಶ್ವ.

"ನಾನು ಭಾರತೀಯ ಅಷ್ಟೇ ಅಲ್ಲ. ನಾನು ಕನ್ನಡಿಗ" ಗ್ರಾಂಥಿಕ ಭಾಷೆಯಲ್ಲಿ ಆನಂದರಾವ್ ತಡೆತಡೆದು ಮಾತನಾಡುತ್ತಿದ್ದರು.

"ನೀವು ಇಲ್ಲಿಗೆ ಬಂದು ಭಾಳ ವರ್ಷ ಆತೇನ್ರಿ?"

ಮೇಜಿನ ಮೇಲೆ ಕೈ ಚಾಚಿ ಏನನ್ನೋ ಹುಡುಕಾಡುತ್ತಾ ಅವನನ್ನು ನೋಡದೇ ಉತ್ತರ ಕೊಟ್ಟರು. "ಹೂಂ ಇಪ್ಪತ್ತೂರು ವರ್ಷಗಳಾದುವು. ಆಗ ನೀನಿನ್ನೂ ಹುಟ್ಟಿರಲಿಲ್ಲವೆಂದು ಕಾಣುತ್ತದೆ." ನಗೆಯಲ್ಲಿ ವಿಷಾದದ ಛಾಯೆಯಿತ್ತು.

"ಆದರೂ ನೀವು ಕನ್ನಡ ಮರೆತಿಲ್ರೀ" ತನ್ನ ಮಾತೃಭಾಷೆಯಲ್ಲೇ ಮಾತನಾಡಿದ ಆನಂದರಾವ್ ತುಂಬ ಆತ್ಮೀಯರೆನಿಸಿದ್ದರು ವಿಶ್ವನಾಥನಿಗೆ. ಮೆಚ್ಚುಗೆಯಿಂದ ಮುಗುಳು ನಗೆ ನಕ್ಕ.

ಆ ತುಟಿಗಳಲ್ಲಿ ಅರಳುವ ನಗೆ, ಮುತ್ತಿನಂಥ ಹಲ್ಲುಗಳ ಅಂದ ಎಲ್ಲ ಹಾಗೆಯೇ. ಒಂದು ಕ್ಷಣ ಅವನ ಮುಖವನ್ನೇ ನೋಡುತ್ತ ಮೈಮರೆತರು.

"ವಿಶ್ವನಾಥ ನಿಮ್ಮ ತಾಯಿ ಹೇಗಿದ್ದಾರೆ ?"

"ನಾ ಬರೂ ಮುಂದ ಬಹಳ ಮನಸಿಗೆ ಹಚ್ಚಿಕೊಂಡಿದ್ದರು. ನಾನು ಪರದೇಶಕ್ಕೆ ಹೋಗಲಿಕ್ಕೇ ಮೊದಲ ಒಪ್ಪಿಗೆ ಕೊಡ್ಲಿಲ್ಲ. ನನ್ನ ಸೋದರಮಾವ ನನ್ನ ತಂದೆಯವರು ತೀರಿದ ಮ್ಯಾಲೆ ಅವರೇ ನನ್ನ ಗಾರ್ಡಿಯನ್ನು ಅವರು."... ಅವನ ಮಾತಿನಿಂದ ಹಾವು ಮೆಟ್ಟಿದವರಂತೆ ತಟ್ಟನೆ ತಲೆ ಎತ್ತಿ ಕೇಳಿದರು.

"ನಿನ್ನ ತಂದೆ ಯಾವಾಗ ತೀರಿದರು ?"

"ನಾನು ಹುಟ್ಟೂದಕ್ಕಿಂತ ಮೊದಲs ತೀರಿಕೊಂಡರಂತ. ಪರದೇಶದೊಳಗ ಎಕ್ಸಿಡೆಂಟ್ ಆತಂತ. ನನ್ನ ತಾಯಿಗೆ ನಾನೊಬ್ಬನೇ ಮಗ. ಹೋಗ ಬ್ಯಾಡಾ ಅಂತಿದ್ರು. ಬಾಳ ಒತ್ತಾಯ ಮಾಡಿ ನನ್ನ ಮಾವ ಅವರನ್ನ ಒಪ್ಪಿಸಿದರು." ಮೇಜಿನ ಮೇಲಿನ ಚಿತ್ರವನ್ನೇ ನೋಡುತ್ತ ಮಾತನಾಡುತ್ತಿದ್ದ ವಿಶ್ವನಾಥ ತಟಕ್ಕನೆ ಮಾತು ನಿಲ್ಲಿಸಿದ. ಆನಂದರಾವ್ ಕುರ್ಚಿಯಲ್ಲಿರಲಿಲ್ಲ. ಅತ್ತಿತ್ತ ನೋಡಿದ. ಬಗ್ಗಿ ಮ್ಯಾಟಿನ ಮೇಲಿಂದ ಏನನ್ನೋ ಹೆಕ್ಕಿ ತೆಗೆಯುತ್ತಿದ್ದರವರು. ಅದು ತಾನು ತಂದ ಪತ್ರ. ಕನ್ನಡಕವನ್ನೆತ್ತಿ ಕಣ್ಣು ಒರೆಸಿ ಕೊಂಡರು. ಮೆತ್ತಗೆ ಹೇಳಿದರು.

"ನಿನ್ನ ತಂದೆ, ನಾನು ಮೊದಲಿನಿಂದಲೂ ಕ್ಲಾಸುಮೇಟ್ಸು. ಅವರ ಮದುವೆಗೂ ನಾನು ಹೋಗಿದ್ದೆ. ಅವರು ತೀರಿಕೊಂಡದ್ದು ನನಗೆ ಗೊತ್ತಿರಲಿಲ್ಲ. ಕ್ಷಮಿಸು" ಗಂಟಲು ಗೊಗ್ಗರಾಗಿತ್ತು.

ಮೇಜಿನ ಮೇಲಿದ್ದ ಗಂಟೆ ಒತ್ತಿ ಕೆಲಸದಾಳು ಒಳಗೆ ಬಂದೊಡನೆ "ಎರಡು ಕಾಫಿ, ಬಿಸ್ಕತ್ತು ತಾ. ಹಾಗೆಯೇ Mrs. ಆನಂದರಾವ್‌ಗೆ ಬಿಡುವಿದ್ದರೆ ನನ್ನ ಸ್ಟಡಿ ರೂಮಿಗೆ ಬರಬೇಕೆಂದು ವಿನಂತಿಸಿಕೊ" ಎಂದರು.

ಐದು ನಿಮಿಷಗಳಲ್ಲಿ ಕಾಫಿ ಬಂತು. ಅದರೊಡನೆ Mrs. ಆನಂದರಾವ್‌ಗೆ ಬಿಡುವಿಲ್ಲ. ಅತಿಥಿಗಳು ಬಂದಿದ್ದಾರೆ ಕ್ಷಮಿಸಬೇಕು ಎನ್ನುವ ಸಂದೇಶವೂ ಬಂದಿತು. ವಿಶ್ವನಾಥ ಎದ್ದು ಬರುತ್ತಿರುವಾಗ ಗಟ್ಟಿಯಾಗಿ ಕೈ ಕುಲುಕಿದ್ದಲ್ಲದೇ, ಹೆಗಲಮೇಲೆ ಕೈ ಹಾಕಿ ಆತ್ಮೀಯತೆಯಿಂದ ಹತ್ತಿರ ಎಳೆದುಕೊಂಡು ತಿಂಗಳಿಗೊಮ್ಮೆಯಾದರೂ ತಮ್ಮನ್ನು ಭೇಟಿಯಾಗಬೇಕೆಂದು ಹೇಳಿದರು.

ಅದರಂತೆ ಮೊದಲಿನ ವರ್ಷ ವಿಶ್ವನಾಥ ತಿಂಗಳಿಗೊಮ್ಮೆ ಭೆಟ್ಟಿಯಾದ. ಅವನ ಅಭ್ಯಾಸದ ಬಗ್ಗೆ ವಿಚಾರಿಸಿ ಊರಿನಿಂದ ಬಂದ ಕಾಗದಗಳ ಬಗ್ಗೆ ಕೇಳುತ್ತಿದ್ದರು. ಒಂದು ದಿನ ರಾತ್ರಿಯ ಊಟಕ್ಕೆ ಆಮಂತ್ರಿತನಾಗಿ ಹೋದಾಗ ಆಂಗ್ಲ ಮಹಿಳೆ Mrs. ಆನಂದರಾವ್ ಅವರ ಪರಿಚಯವಾಯಿತು. ಯುವತಿಯಾಗಿದ್ದಾಗ ತುಂಬ ಸುಂದರಿಯಾಗಿದ್ದಿರಬೇಕು. ಗಂಭೀರ ಸ್ವಭಾವದವರು. ಠೀವಿ ಹೆಚ್ಚು ಎನ್ನಿಸಿತು ವಿಶ್ವನಿಗೆ. ಅವರ ಮಕ್ಕಳು ವಿಲಿಯಂ ಇಪ್ಪತ್ತು ಮರುಷದವ.. ಹೆಲೆನ್ ಹದಿನೈದು ವರ್ಷದವಳು. ಅವರ ಪರಿಚಯದಲ್ಲಿ ಒಣ ಶಿಷ್ಟಾಚಾರವಿತ್ತು. ಆತ್ಮೀಯತೆಯೇನೂ ಇರಲಿಲ್ಲ. ತನಗಾಗಿ ಆನಂದರಾವ್ ಪೂರಿ, ಪಲ್ಯ, ಖೀರು, ಅನ್ನ ಸಾರು ಮಾಡಿಸಿದ್ದರು. ಜೊತೆಗೆ ಉಪ್ಪಿನಕಾಯಿ, ಹಪ್ಪಳಗಳೂ ಇದ್ದವು. ಒತ್ತಾಯ ಮಾಡಿ ಊಟ ಮಾಡಿಸಿದರು. ಪ್ರೀತಿಯಿಂದ. ಆದರೆ ಆ ಬಿಗುವಿನ ವಾತಾವರಣದಿಂದ, ಅವರ ಹೆಂಡತಿ ಮಕ್ಕಳ ವರ್ತನೆಯಿಂದ ವಿಶ್ವ ತುಂಬಾ ಸಂಕೋಚಪಟ್ಟುಕೊಂಡ.

ಆ ರಾತ್ರಿ ಬಹಳ ಚಳಿಯಿತ್ತು. ಚಳಿಗೆ ಹೊಸಬನಾದ ಅವನೊಬ್ಬನನ್ನೇ ಅವನ ರೂಮಿಗೆ ಕಳಿಸಲು ಒಪ್ಪದೆ ಆನಂದರಾವ್ ತಾನೇ ಅವನನ್ನು ಬಿಡಲು ಕಾರು ತೆಗೆದುಕೊಂಡು ಬಂದರು. ಲಂಡನ್ನಿನ ವಾತಾವರಣಕ್ಕೆ ಹೊಂದಿಕೊಳ್ಳುತ್ತಿದ್ದ ವಿಶ್ವನಾಥ ಕಾರಿನಿಂದ ಇಳಿಯುವಾಗ ಸ್ಪಷ್ಟವಾಗಿ ಹೇಳಿದ, ಇನ್ನು ಮೇಲೆ ನನ್ನನ್ನು ಮನೆಗೆ ಊಟಕ್ಕೆ ಕರೆಯೂ ತೊಂದರೆ ತಗೋಬ್ಯಾಡ್ರಿ. ನಾ ನಿಮ್ಮನ್ನು ಆಸ್ಪತ್ರೆಯೊಳಗ ಭೆಟ್ಟಿ ಆಗ್ತೇನಿ.

"ವಿಶ್ವ ಲಂಡನ್ನಿಗೆ ಹಳಬನಾದಂತೆ ಅವರಿಬ್ಬರ ಭೆಟ್ಟಿಯ ಅಂತರ ಹೆಚ್ಚಾಗುತ್ತ ನಡೆದಿತ್ತು. ವಿಶ್ವನಾಥ ಅವರಿಗೆ ಎರಡು ಮೂರು ಸಲ ಮಾತ್ರ ಭೆಟ್ಟಿಯಾಗಿದ್ದ. ಅದೂ ಥಿಯೇಟರಿನಲ್ಲಿ, ಬಾರಿನಲ್ಲಿ, ಜೊತೆಗೆ ಒಬ್ಬ

ಚೆಲುವೆಯೂ ಇರುತ್ತಿದ್ದಳು. ಆಂಗ್ಲ ಮಹಿಳೆಯನ್ನು ಮದುವೆಯಾಗಿ ಅಲ್ಲಿಯೇ ನೆಲೆಸಿದ ಆನಂದರಾವ್ ಎದುರು ವಿಶ್ವನಾಥ ನಿಸ್ಸಂಕೋಚವಾಗಿ ತನ್ನ ಗೆಳತಿಯ ಪರಿಚಯ ಮಾಡಿಸಿದ. ಮೂರನೆಯ ವರುಷ ಕಳೆದಾಗ ಅವನ ವಿದ್ಯಾಭ್ಯಾಸ ಮುಕ್ತಾಯವಾಗಿತ್ತು. ಅದನ್ನೇ ಕಾಯುತ್ತಿದ್ದರೇನೋ ಎನ್ನುವಂತೆ ಆನಂದರಾವ್ ಅವನಿಗೆ ಸಂತೋಷ ಕೂಟವನ್ನು ಏರ್ಪಡಿಸಿದರು. ವಿಶ್ವನಾಥ ಒಪ್ಪಿಕೊಂಡ. ಆದರೆ ಆ ಕೂಟದಲ್ಲಿ ತಾವಿಬ್ಬರೇ ಇರಬೇಕೆಂದು ಅವರು ಕರಾರು ಹಾಕಿದ್ದು ವಿಚಿತ್ರವೆನಿಸಿತ್ತು ವಿಶ್ವನಿಗೆ.

ಸೊಗಸಾದ ಭೋಜನ ತಯಾರಿತ್ತು ಮೇಜಿನ ಮೇಲೆ. ಮಾತು ಸಾಗಿತ್ತು. ತಟಕ್ಕನೆ ಮಧ್ಯೆ ಆನಂದರಾವ್ ಕೇಳಿದರು.

"ವಿಶ್ವನಾಥ, ನೀನು ಯಾವಾಗ ಇನ್ನು ತಿರುಗಿ ಹೊರಡೋದು"?"

"ಸಧ್ಯಕ್ಕೆ ಆ ವಿಚಾರ ಬಿಟ್ಟಿದ್ದೀನಿ ಅಂಕಲ್, ಇಲ್ಲೇ ಇನ್ನೆರಡು ವರ್ಷ ಕೆಲಸಾ ಮಾಡಬೇಕಂತೇನಿ."

ಸಿಡಿಲೆರಗಿದಂತಾಗಿತ್ತು ಅವರಿಗೆ. ಕೈಯ ಫೋರ್ಕು ಒಮ್ಮೆಲೇ ಕೆಳಗೆ ಬಿದ್ದಿತ್ತು. ಹತ್ತಿರ ನಿಂತಿದ್ದ ವೇಟರ ಮತ್ತೊಂದನ್ನು ತಂದುಕೊಟ್ಟ. ತೊಡೆಯ ಮೇಲಿನ ನ್ಯಾಪಕಿನ್ ಎತ್ತಿ ಮುಖ ಒರೆಸಿಕೊಂಡ ಆನಂದರಾವ್ ಹೇಳಿದರು.

"ಬೇಡ ವಿಶ್ವನಾಥ, ಇಲ್ಲಿ ನಿಲ್ಲೋದು ಬೇಡ, ಊರಿಗೆ ತಿರುಗಿ ಹೋಗು, ಇಲ್ಲಿಯ ವ್ಯಾಮೋಹಕ್ಕೆ ಸಿಲುಕಬೇಡ." ಅವರ ಧ್ವನಿಯಲ್ಲಿ ನಿರ್ಧಾರವಿತ್ತು.

"ಇಲ್ಲಾ ಅಂಕಲ್, ಇಲ್ಲೇ ಕೆಲಸಾ ಮಾಡಿ ಅನುಭವಪಡೀಬೇಕಂತೇನಿ. ಜೊತೆಗೆ ರೊಕ್ಕಾನೂ ಕೈತುಂಬ ಸಿಗ್ತದ. ನಾ ಆಗಲೇ ನಿರ್ಧಾರ ಮಾಡೇನಿ. ನಾಳೆ ನಮ್ಮ ತಾಯಿಗೆ ಪತ್ರಾ ಬರೀತೇನಿ."

"ನಾನು ನಿನಗಿಂತ ವಯಸ್ಸಿನೊಳಗ ದೊಡ್ಡವ, ಅನುಭವಿಕ. ಅದಕ್ಕಾದರೂ ನನ್ನ ಮಾತು ಕೇಳು. ಹಣಾಗಳಿಸೂ ಮೋಹಕ್ಕ ಬೀಳಬೇಡ. ನಿನ್ನ ಊರು, ದೇಶ, ನಿನ್ನ ಜನ, ನಿನ್ನ ತಾಯೀನ್ನ ಮರೀಬೇಡ" ಕಳಕಳಿಯಿಂದ ಹೇಳಿದರು ಆನಂದರಾವ್.

ಅವರ ಉಪದೇಶಕ್ಕೆ, ತಿರುಗಿ ದೇಶಕ್ಕೆ ಹೋಗು ಎನ್ನುವ ಒತ್ತಾಯಕ್ಕೆ ಸಿಟ್ಟೂ ಬಂದಿತು ವಿಶ್ವನಿಗೆ. "ಅಂಕಲ್, ನೀವು ನಿಮ್ಮ ಊರು, ದೇಶ, ಜನ, ಬಂಧು-ಬಳಗ ಎಷ್ಟು ನೆನಪು ಇಟ್ಟೀರಿ? ನಿಮ್ಮ ಮನಸ್ಸು ನೋಯಿಸಿದ್ದರ ಕ್ಷಮಿಸಬೇಕು. ನಾನಂತೂ ಇನ್ನೂ ಎರಡು ವರ್ಷ ಹೋಗೂದಿಲ್ಲಾ. ನನ್ನ ಭವಿಷ್ಯ ನನ್ನ ಕೈಯೊಳಗ ಅದ."

"ನಾನು ಮಾಡಿದ ತಪ್ಪು ನೀನೂ ಮಾಡಬಾರದು ಅಂತ ಹೇಳಿದೆ. ನಾನು ಇಲ್ಲಿಯ ಚೆಲ್ವಿಕೆಗೆ, ಸಂಪತ್ತಿಗ ಮರುಳಾದೆ. ಇಲ್ಲೇ ಉಳಿದೆ. ಯೌವನದೊಳಗೆ ನಾನು ಮಾಡಿದ ತಪ್ಪು ನನಗೆ ತಿಳೀಲಿಲ್ಲಾ. ಆದರ ಈಗ ಗೊತ್ತಾಗ್ತದ. ನಾನು ಎಷ್ಟು ಹಣಾ ಗಳಿಸಿದರೂ ನನ್ನವರು ಅನ್ನೂವವರು ಯಾರೂ ಇಲ್ಲಾ. ನನಗ ಯಾರೂ ಇಲ್ಲಾ. ನಾನು ಏಕಾಂಗಿ ಅಂತ ಅನಸ್ತದ. ನಾನು ಬಡವ. ದಿಕ್ಕಿಲ್ಲದವ ಅಂತ ಅನಸ್ತದ..." ಊಟ ನಿಲ್ಲಿಸಿ ಫೋರ್ಕು ಚಮಚ ಕ್ರಾಸ್ ಮಾಡಿಟ್ಟ ಆನಂದರಾವ್ ಕರವಸ್ತ್ರದಿಂದ ಕಣ್ಣಿ ಗೊತ್ತಿಕೊಂಡರು.

ವಿಶ್ವನಾಥ ಅವರನ್ನು ನೋಡಿ ತಬ್ಬಿಬ್ಬಾದ. ಲಗುಬಗೆಯಿಂದ ಊಟ ಮುಗಿಸಿ, ಬಿಲ್ ಕೊಟ್ಟು ಅವರ ಕೈ ಹಿಡಿದು ಹೊರಗೆ ಕರೆತಂದು ಕಾರಿನಲ್ಲಿ ಕೂಡ್ರಿಸಿದ. ಅಷ್ಟರಲ್ಲಿ ಸಮಾಧಾನಗೊಂಡಿದ್ದರು ಆನಂದರಾವ್. ಅವನ ರೂಮಿನ ಹತ್ತಿರ ಕಾರು ನಿಲ್ಲಿಸಿ ಇಳಿದ ಮೇಲೆ ಮತ್ತೊಮ್ಮೆ ಕೇಳಿದರು.

"ನಿನ್ನ ನಿರ್ಧಾರ ಏನು ? ಕೊನೆಯ ಬಾರಿ ಹೇಳಿಬಿಡು."

"ವಿಚಾರಮಾಡಿ ಹೇಳ್ತೇನಿ. ಆದರೂ ನೀವು ನನಗ ಯಾಕ ಒತ್ತಾಯ ಮಾಡ್ತೀರಿ, ತಿಳಿವೊಲ್ಲದಾಗೇದ."

ಕಾರಿನಿಂದ ಗೆಳಗಿಳಿದ ಆನಂದರಾವ್ ಅವನ ಹತ್ತಿರ ಬಂದು ತಮ್ಮ ಜೇಬಿನಿಂದ ಒಂದು ಫೋಟೋ ತೆಗೆದು ಅವನ ಕೈಯಲ್ಲಿಟ್ಟರು. ಅವನು ಅದನ್ನು ನೋಡಿ ಸ್ತಬ್ಧನಾಗಿ ಅವರ ಮುಖ ನೋಡುತ್ತಿದ್ದಂತೆ ಅದನ್ನು ಸರಕ್ಕನೆ ಕಿತ್ತುಕೊಂಡವರೇ ಕಾರು ಹತ್ತಿ ವೇಗವಾಗಿ ಹೊರಟುಹೋದರು. ಅವರನ್ನು ಹಿಂಬಾಲಿಸಿಬೇಕೆಂದುಕೊಂಡ ವಿಶ್ವ. ಆದರೆ ಕೈಲಾಗದೆ ಕಲ್ಲಿನಂತೆ ನಿಂತುಬಿಟ್ಟ.

***

ಹಡಗಿನ ಡೆಕ್ಕಿನ ಮೇಲೆ ಬಂದು ನಿಂತು ನೀರನ್ನೇ ದಿಟ್ಟಿಸುತ್ತಿದ್ದಾನೆ ವಿಶ್ವನಾಥ. ಎಲ್ಲಿಯವರೆಗೆ ನೋಡಿದರೂ ನೀಲಿ ನೀರು, ಆಕಾಶ ನೀಲಿ, ಸಮುದ್ರದ ನೀರೂ ನೀಲಿ, ಎರಡೂ ಒಂದಾಗುವಲ್ಲಿ ಎಲ್ಲಿಯೋ ದಿಗಂತದ ಅಂಚು ಮಸಕುಮಸಕಾಗಿ ಗೆರೆಯಂತೆ ಕಾಣುತ್ತಿದೆ.

ಹಡಗು ಹತ್ತಿ ಹೊರಟು ಹದಿನೈದು ದಿನಗಳಾದರೂ ಅವನ ಕಣ್ಣ ಮುಂದೆ ಲಂಡನ್ನಿನ ನೆನಪು ಕೊಡುತ್ತಿರುವ ಚಿತ್ರವೆಂದರೆ ಆ ಭಾವಚಿತ್ರವೊಂದೇ. ನವದಂಪತಿಗಳ ಚಿತ್ರವದು. ಅಪರೂಪದ ಜೋಡಿ. ಮಂದಹಾಸ ಮುಖದ ಮೇಲೆ ಅರಳಿದೆ. ಕೊರಳಲ್ಲಿ ಹಾರ ಹಾಕಿಕೊಂಡು, ಕೈಕೈ ಹಿಡಿದು ನಿಂತಿದ್ದಾರೆ. ಸದಾನಂದರಾವ್ - ರತ್ನ ಎಂದು ಕೆಳಗೆ ಬರೆದಿತ್ತು. ಅದನ್ನು ಕಣ್ಣು ಬಿಟ್ಟು ತಾನು ನೋಡುತ್ತಿರುವಾಗಲೇ ಅವರು ಹೋರಟುಹೋಗಿದ್ದರು. ಮರುದಿನ ಮುಂಜಾನೆ ತಾನು ಅವರನ್ನು ಭೆಟ್ಟಿಯಾಗಲು ಹೋದಾಗ, ಅವರ ಆಳು ಅವರು ಎರಡು ತಿಂಗಳು ರಜೆ ಹಾಕಿ ಯುರೋಪ್ ಪ್ರವಾಸಕ್ಕೆ ಹೋಗಿದ್ದಾರೆ. ಮನೆಯವರೆಲ್ಲ ಮುಂಚಿತವಾಗಿಯೇ ಹೋಗಿ ಇವರಿಗಾಗಿಯೇ ಕಾಯುತ್ತಿದ್ದರು ಎಂದು ಹೇಳಿ ಇವನಿಗೆ ಒಂದು ಕವರು ಕೊಟ್ಟ. ಅದರಲ್ಲಿ ಇದ್ದದ್ದು ಇಷ್ಟೇ.

ಪ್ರಿಯ ವಿಶ್ವ-

ನಿನ್ನನ್ನು ನನ್ನ ಮಗನೆಂದು ಎದೆಗಪ್ಪಿಕೊಳ್ಳಬೇಕೆಂದು ಎಷ್ಟು ಮನಸ್ಸಾದರೂ ಸಂಯಮವನ್ನು ತಂದುಕೊಂಡೆ. ಮಾರ್ಗರೇಟಳ ಚೆಲುವಿನ ಮೋಹ, ಇಲ್ಲಿಯ ಸಂಪತ್ತಿನ ಆಸೆಗೆ ಬಲಿಯಾದಾಗಲೇ ನಿನ್ನ ತಾಯಿಗೆ ಪತಿಯಾಗಿರುವ ಯೋಗ್ಯತೆಯನ್ನು ನಾನು ಕಳೆದುಕೊಂಡೆ. ಅದಕ್ಕೇ ಅವಳು ವಿಧವೆಯ ಜೀವನ ನಡೆಸುತ್ತಿದ್ದಾಳೆ. ಆದರೆ ಸುಖ ನನಗೆ ಮರೀಚಿಕೆ. ನನ್ನ ಆತ್ಮಕ್ಕೆ ಪ್ರಿಯಳಾಗಿದ್ದ ಹೆಂಡತಿಯ ಹತ್ತಿರ ಹೋಗಲಾರೆ. ಮಗನನ್ನು ಮಗನೇ ಎಂದು ಕರೆಯಲಾರೆ. ನನ್ನ ಎದೆಯ ಕೋಲಾಹಲ, ಹೃದಯದ ಉರಿ, ನೋವು, ಸಂಕಟ ನನಗೇ ಗೊತ್ತು. ನನ್ನ ವೃತ್ತಿ ನನಗೆ ಸ್ವಲ್ಪ ಶಾಂತಿ ಕೊಟ್ಟದ್ದುಂಟು. ನೀನು ಇಲ್ಲಿದ್ದಷ್ಟು ದಿನ ಸ್ವಲ್ಪ ನೆಮ್ಮದಿ ಸಿಕ್ಕಿತ್ತು. ಈಗ ಅದೂ ಇಲ್ಲ. ಇದು ನಾನೇ ನಿರ್ಮಿಸಿಕೊಂಡ ಅಗ್ನಿಕುಂಡ. ಇದರಲ್ಲಿ ನೀನೂ ಬೇಯಬಾರದು ಎಂದು ನಾನು ನಿಜವನ್ನು ತಿಳಿಸಬೇಕಾಯಿತು. ಮನುಷ್ಯನ ಮನಸ್ಸೇ ಅಷ್ಟೊಂದು ದುರ್ಬಲ ಮತ್ತು ಚಂಚಲ. ಯಾವ ಹೊತ್ತಿನಲ್ಲಿ ಏನಾಗುವುದೋ ಹೇಳಬರುವುದಿಲ್ಲ. ನೀನು ನಿನಗಾಗಿ ಕಾಯುತ್ತಿರುವ ತಾಯಿಯ ಹತ್ತಿರ ಹೋಗುತ್ತೀ ಎನ್ನುವ ನಂಬಿಕೆ ನನಗಿದೆ. ನಿನ್ನ ತಾಯಿಗೆ ನನ್ನನ್ನು ಕ್ಷಮಿಸಲು ಹೇಳು. ಅವಳಿಗೆ ನನ್ನ ನೆನಪುಕೊಡು, ಮುತ್ತುಗಳೊಂದಿಗೆ.

ನಿನ್ನ ತಂದೆ

ಸದಾನಂದರಾವ್

ತಾಯಿಗೆ ನೆನಪು ಕೊಡಬೇಕಂತೆ, ಇವರ ನೆನಪಿನಿಂದಲೇ ದಿನವೂ ದಹಿಸುತ್ತಿದ್ದಾಳೆ ಅವಳು. ಅವಳು ಅಲ್ಲಿ ... ಇವರು ಇಲ್ಲಿ ..... ಯಾವ ಕಾಲಕ್ಕೂ ಒಂದುಗೂಡಲಾರದು. ಭೂಮಿ ಆಕಾಶದ ನಡುವೆ ತಾನು ದಿಗಂತವಾಗಿದ್ದೇನೆ.

ವಿಶ್ವನ ಕಣ್ಣುಗಳಿಂದ ಉದುರಿದ ಎರಡು ಹನಿ ಅಗಾಧ ಜಲರಾಶಿಯಲ್ಲಿ ಸೇರಿ ಹೋದವು.

■■

# ತೆತ್ತ ಬೆಲೆ

ದವಾಖಾನೆಯಿಂದ ಮನೆಗೆ ಸ್ನೇಹಿತರ ಕಾರಿನಲ್ಲಿ ಬಂದು ಮನೆ ನಿಶ್ಶಬ್ದವಾಗಿದ್ದುದನ್ನು ಕಂಡೆ. ಸಿದ್ದ ಓಡಿ ಬಂದು ನನ್ನ ಕೈಯಲ್ಲಿಯ ಬ್ಯಾಗ್ ಇಸಿದುಕೊಂಡು ಇನ್ನೊಂದು ಕೈಯಿಂದ ಹ್ಯಾಟು ತೆಗೆದುಕೊಂಡ.

"ಎಲ್ಲಿ ಹೋಗ್ಯಾರೋ ಎಲ್ಲಾರೂ?"

"ಊರಿನಿಂದ ಶಶಿಕಲಾ ಬಾಯೇರು ಬಂದಾರ್ರಿ. ಅವ್ವಾ ಅವರು, ಅವರು, ಆನಂದಪ್ಪನೋರು, ಹುಡುಗರು ಎಲ್ಲಾರು ಕೂಡಿ ಸಿನೇಮಕ ಹೋಗ್ಯಾರ್ರಿ."

ಕರುಳುಬೇನೆಯ ಶಸ್ತ್ರಚಿಕಿತ್ಸೆಯನ್ನು ನನ್ನಿಂದಲೇ ಮಾಡಿಸಿಕೊಂಡಿದ್ದ ಆನಂದ - ನನ್ನ ಹೆಂಡತಿಯ ತಮ್ಮ - ಈಗ ತಾನೇ ಚೇತರಿಸಿಕೊಳ್ಳುತ್ತಿದ್ದ. ಅವನು ಬಂದು ತಿಂಗಳಾಗಿತ್ತು. ಕೆಲವು ದಿನ ಅವನ ಹೆಂಡತಿ ಶಶಿಕಲೆ, ಸಣ್ಣ ಮಗು ಕೂಡ ಇಲ್ಲಿಯೇ ಇದ್ದರು. ಮನೆ ಬಿಟ್ಟು ಬಹಳ ದಿನಗಳಾದುವೆಂದು ಊರಿಗೆ ಹೋಗಿದ್ದ ಅವನ ಹೆಂಡತಿ ಗಂಡನನ್ನು ಕರೆದೊಯ್ಯಲು ಮತ್ತೆ ಬಂದಿದ್ದಳು. ಅದಕ್ಕೇ ಶಾರದಾ ದವಾಖಾನೆಗೆ ಫೋನು ಮಾಡಿ ನನ್ನ ಕಾರು ತರಿಸಿಕೊಂಡಿದ್ದು ಈಗ ನೆನಪಾಯಿತು ನನಗೆ.

"ಅಪ್ಪಾ ಅವರS, ಊಟಾS ಮಾಡ್ತೀರೇನ್ರಿ? ಗಂಗಮ್ಮ ಕೇಳ ಅಂದಳ್ರಿ."

ಅರಿವೆ ಬದಲಿಸಿ ಸೋಫಾದ ಮೇಲೆ ಅಡ್ಡಾದವನು ಗೋಡೆಯ ಮೇಲಿನ ಗಡಿಯಾರ ನೋಡಿದೆ. "ಈಗ ಒಂಬತ್ತು ಗಂಟೆ ಇನ್ನ ಅರ್ಧತಾಸಿಗೆ ಅವರೆಲ್ಲಾ ಬರ್ತಾರS, ಅವರ ಕೂಡ ಊಟಾ ಮಾಡ್ತೀನಿ. ಈಗ ಒಂದು ಲೋಟ ಹಾಲು ಕೊಟ್ಟುಬಿಡು ನನಗ"ಎಂದೆ.

ಮತ್ತೆ ಗಡಿಯಾರ ನೋಡಿದೆ. ಮಿನಿಟಿನ ಮುಳ್ಳು ಮುಂದೆ ಮುಂದೆ ಓಡುತ್ತಿತ್ತು. ತಾಸಿನ ಮುಳ್ಳು ನಿಂತಲ್ಲಿಯೇ ನಿಂತಿದೆಯೇನೋ ಎನ್ನುವ ಸ್ಥಿತಿಯಲ್ಲಿತ್ತು. ಶಾರದಾ ಮಿನಿಟಿನ ಮುಳ್ಳಾದರೆ ನಾನು ತಾಸಿನ ಮುಳ್ಳು, ಅವಳ ಜೋರಿಗೆ ಓಡಲಾರೆ. ಓಡದೆ ಬಿಡಲೂ ಆರೆ. ನಾನು ಒಂದೊಂದು ಅಂಕಿಯನ್ನು ದಾಟಿದ ಹಾಗೆಲ್ಲ ಒಂದೊಂದು ತಾಪತ್ರಯ, ತೊಂದರೆಗಳನ್ನು ದಾಟುತ್ತಿದ್ದೆ. ಕಟ್ಟಿಕೊಂಡ ತಪ್ಪಿಗೆ ಕೈಡಿದವಳನ್ನು ಹಿಂಬಾಲಿಸಲೇಬೇಕಲ್ಲ. ಗಾಣದ ಎತ್ತು ತಿರುಗಿದಂತೆ ಎಲ್ಲ ಅಂಕೆಗಳನ್ನು ತಿರುಗಿ ದಿನ ಕಳೆಯುತ್ತಿದ್ದೆ.

ಹಾಲು ತಂದ ಸಿದ್ಧ ಜೊತೆಗೆ ಟಪಾಲು ತಂದುಕೊಟ್ಟ. ಮುಕುಂದನ ಪತ್ರವನ್ನೇ ಮೊದಲು ಕೈಗೆತ್ತಿಕೊಂಡೆ. ಹಾಲಿನ ಕಪ್ಪು ಒಯ್ಯುತ್ತ ಸಿದ್ಧ ಗುಣುಗುಟ್ಟಿದ. "ಮುಕುಂದಪ್ಪನೋರ ಪತ್ರ ಬಂದಾಂಗ ಕಾಣತೈತಿ. ಅವ್ವಾರು ಹೊರಗ ಹೋದಮ್ಯಾಲೇ ಟಪಾಲು ಬಂತ್ರಿ. ಅಕ್ಷರದ ಮ್ಯಾಲಿಂದ ನಾನS... ಗುರುತಾ ಹಿಡಿದೆ."

ಆ ಪತ್ರದೊಂದಿಗೆ ನಾನು ಮಹಡಿಯ ಮೇಲಿನ ನನ್ನ ಕೋಣೆಗೆ ಹೋದೆ. ಪ್ರೀತಿಯ ಮಗನ ಪತ್ರವನ್ನು ಸಾರ್ವಜನಿಕ ಸ್ಥಳದಂತಿದ್ದ ಆ ಹಾಲಿನಲ್ಲಿ ಕುಳಿತು ಓದಲು ಮನಸ್ಸು ಬರಲಿಲ್ಲ. ನನಗೆ ಏಕಾಂತ ನನ್ನ ಕೋಣೆಯಲ್ಲೇ ಸಿಗುತ್ತಿತ್ತು. ಅದೂ ಸಿನಿಮಾದಿಂದ ಅವರೆಲ್ಲ ತಿರುಗಿ ಬರುವವರೆಗೆ ಮಾತ್ರ. ಬಹಳ ಸಂತೋಷದಿಂದಲೇ ಪತ್ರ ಒಡೆದೆ. ಆದರೆ ಓದಿದ ಮೇಲೆ ಮೊದಲಿನ ಸಂತೋಷ ಉಳಿಯಲಿಲ್ಲ. ವಿಷಯವೇ ಹಾಗಿತ್ತು. ಮೇಜಿನ ಡ್ರಾದಿಂದ ಡಾಯರಿಯೊಂದನ್ನು ತೆಗೆದು ಮೊದಲು ಅದರ ಜಾಕೇಟಿನಲ್ಲಿದ್ದ ಮುಕುಂದನ ಬಾಲ್ಯದ ಫೋಟೋ ನೋಡಿದೆ. ಅವನ ಅಕ್ಷರಗಳಂತೆಯೇ ಅವನ ಮುಖ, ಕಣ್ಣು, ಗಲ್ಲ ಎಲ್ಲ ದುಂಡು ದುಂಡಗೆ ಮುದ್ದಾಗಿದ್ದ. ಎಲ್ಲ ಅವನ ತಾಯಿಯ ಹಾಗೆಯೇ. ಕೈ ಯಾಂತ್ರಿಕವಾಗಿ ಡಾಯರಿಯ ಇನ್ನೊಂದು ಬದಿಯ ಜಾಕೆಟ್ಟಿನಲ್ಲಿದ್ದ ಫೋಟೋ

ತೆಗೆಯಿತು. ನನ್ನ ಮೀನಾಕ್ಷಿ ಅಲ್ಲಿದ್ದಳು. ನನ್ನ ಪ್ರಿಯ ಪತ್ನಿ. ಮುಕುಂದನ ತಾಯಿ. ಕಣ್ತುಂಬ ಆ ರೂಪವನ್ನು ತುಂಬಿಕೊಂಡೆ. ಮದುವೆಯಾದ ಐದು ವರುಷಗಳಲ್ಲಿ ನನ್ನನ್ನು ಹಾಲ್ಜೇನಿನಲ್ಲಿ ಮೀಯಿಸಿದ್ದಳು ಮೀನಾ. ಮಗು ಇನ್ನೂ ಚಿಕ್ಕದಿರುವಾಗಲೇ ನಮ್ಮಿಬ್ಬರನ್ನು ಬಿಟ್ಟು ತೆರಳಿದ್ದಳು. ಅವಳು ತೀರಿಹೋಗಿ ಇಪ್ಪತ್ತು ವರುಷಗಳಾದರೂ ಆ ಪ್ರೀತಿಯ ಮೆಲುಮಾತು, ಕಣ್ಣೋಟ ಮರೆಯಲಾರೆ. ನೋಡನೋಡುತ್ತ ಕಣ್ಣು ತುಂಬ ಹತ್ತಿದ್ದವು. ಒರೆಸಿಕೊಂಡು ಡಯರಿಯ ಪುಟ ಬಿಡಿಸಿ ಪೆನ್ನು ಕೈಗೆತ್ತಿಕೊಂಡೆ....

ಮುಕುಂದನ ಪತ್ರ ಬಂದಿದೆ ಇಂದು ಮತ್ತೆ. ಹಿಂದಿನ ಪತ್ರದಲ್ಲಿ 'ಅಭ್ಯಾಸ ಚೆನ್ನಾಗಿ ಮಾಡುತ್ತಿರುವೆ. ಇದು ಕೊನೆಯ ವರುಷವಾದುದರಿಂದ ಅಭ್ಯಾಸ ಹೆಚ್ಚೂ ಆಗಿದೆ. ಲಕ್ಷ್ಯ ಕೊಟ್ಟು ಓದಿ ಈ ಸಲವೂ ಫಸ್ಟ್‌ಕ್ಲಾಸ್ ಬಂದೇ ತೀರುವೆನೆನ್ನುವ ಭರವಸೆ ನಿಮಗೆ ಕೊಡುವೆ. ನನಗಾಗಿ ಕಾಳಜಿ ಮಾಡಬಾರದು ಎಂದು ಬರೆದಿದ್ದ. ಆದರೆ ಈ ಪತ್ರ ಮಾತ್ರ ಕಾಳಜಿ ಮಾಡುವ ವಿಷಯವನ್ನೇ ಹೊತ್ತುತಂದಿದೆ. ಕೆಲವು ದಿನಗಳ ಹಿಂದೆ ಪ್ರಯೋಗಶಾಲೆಯಲ್ಲಿ ಪ್ರಯೋಗ ಮಾಡುತ್ತಿರುವಾಗ ಸೂಕ್ಷ್ಮದರ್ಶಕ ಯಂತ್ರವೊಂದು ಇವನ ಕೈಯಿಂದ ಜಾರಿಬಿದ್ದು ಒಡೆಯಿತಂತೆ, ಅಲ್ಲಿ. ಡೆಮಾನ್‌ಸ್ಟ್ರೇಟರ್ ಇವನ ಜೊತೆ ಅಷ್ಟೊಂದು ಸರಿಯಾಗಿಲ್ಲದ ಕಾರಣ ಪೂರ್ತಿ ನಷ್ಟ ಇವನು ತನ್ನ ಕೈಯಿಂದಲೇ ತುಂಬಬೇಕು ಎನ್ನುವ ಹಾಗೆ ಮೇಲಿನಿಂದ ನೋಟೀಸು ಕೊಡಿಸಿದ್ದಾನಂತೆ. ಆದ್ದರಿಂದ ಪಾರಾಗುವ ಎಲ್ಲ ರೀತಿಯ ಪ್ರಯತ್ನ ಮಾಡಿದರೂ ಏನೂ ಸಾಧ್ಯವಾಗಲಿಲ್ಲ. ಆದ್ದರಿಂದ ಈಗ ಅಗತ್ಯವಾಗಿ ೫೦೦ ರೂ. ಗಳು ಬೇಕಾಗಿವೆ. "ನಿಮ್ಮ ಪ್ರ್ಯಾಕ್ಟೀಸು ಚೆನ್ನಾಗಿಲ್ಲದಿದ್ದರೂ ಹಿಡಿತವಿಲ್ಲದ ಚಿಕ್ಕಮ್ಮನ ಕೈಯಿಂದ ಉಳಿತಾಯ ಸಾಧ್ಯವಿಲ್ಲ. ಒಂದು ವೇಳೆ ಉಳಿದರೂ ಅದರಲ್ಲಿ ನನಗೆ ಪಾಲಿಲ್ಲ. ನಿಮ್ಮ ಕಷ್ಟಗಳೆಲ್ಲ ನನಗೆ ಗೊತ್ತು. ಆದರೂ ಉಪಾಯವಿಲ್ಲದೇ ನಿಮ್ಮನ್ನೇ ಕೇಳಬೇಕಾಗಿದೆ. ಇನ್ನು ಹದಿನೈದು ದಿನಗಳಲ್ಲಿ ನನಗೆ ಹಣ ಬೇಕು. ನಾನು ಇದುವರೆಗೂ ನಿಮಗೆ ಭಾರವಾಗಿಲ್ಲ. ನನ್ನ ಸ್ಕಾಲರ್‌ಶಿಪ್ ಹಣದ ಮೇಲೆ ಕಲಿತಿದ್ದೇನೆ. ಇದು ಕೊನೆಯ ವರುಷವಾದುದರಿಂದ ಇನ್ನು ಮುಂದೆಯೂ ಕೇಳುವುದಿಲ್ಲ. ಆದ್ದರಿಂದ ದಯವಿಟ್ಟು ಹೇಗಾದರೂ ಮಾಡಿ ೫೦೦ ರೂ. ಕಳಿಸಬೇಕು": ಎಂದು ಬರೆದಿದ್ದಾನೆ.

ಅವನ ಪತ್ರದಿಂದ ಅವನ ಅಸಹಾಯಕ ಪರಿಸ್ಥಿತಿಯ ಅರಿವಾಯಿತು ನನಗೆ. ಶಾರದಾ ಸರಿಯಾಗಿ ಹಾಲು ತಿಂಡಿ ಕೊಡದೆ ನಿಷ್ಕಾಳಜಿಯಿಂದ ಅವನ ಪಾಡಿಗೆ ಅವನನ್ನು ಬಿಟ್ಟಾಗ ಸುಮ್ಮನೆ ಪೆಚ್ಚು ಮುಖ ಹಾಕಿ ತಿರುಗಾಡುತ್ತಿದ್ದನವ. ಅದೇ ಮುಖ ಈಗ ಕಣ್ಣ ಮುಂದೆ ತೇಲಿತು. ನನ್ನ ಮಗನಿಗೆ ಹಣದ ಅವಶ್ಯಕತೆ ಇದೆ. ತಂದೆಯಾದ ನಾನು ಕಳಿಸಲೇಬೇಕು. ಆದರೆ ಏನು ಮಾಡಬೇಕು ನನಗಂತೂ ತೋಚಲೊಲ್ಲದು. ಹೋದ ವರ್ಷ ಕಾರು ತೆಗೆದುಕೊಂಡ ಮೇಲೆ ಒಂದೆರಡು ಸಾವಿರ ಬ್ಯಾಂಕಿನಲ್ಲಿ ಉಳಿದಿತ್ತು. ಹಿಂದಿನ ವರ್ಷ ಶಾರದಾ ತನ್ನ ತಂಗಿಯ ಬಾಣಂತನ ಇಲ್ಲಿಯೇ ಮಾಡಿಸಿದಳು. ಉಪಚಾರಕ್ಕೆ ಹೆಚ್ಚಿನ ಹಣ ಬ್ಯಾಂಕಿನಿಂದ ತೆಗೆದೆ. ಈ ವರ್ಷ ತನ್ನ ತಮ್ಮನ ಶಸ್ತ್ರ ಚಿಕಿತ್ಸೆ ಇಲ್ಲಿಯೇ ಆಗಬೇಕೆಂದು ಹಟ ತೊಟ್ಟು ಅವನನ್ನೂ ಅವನ ಮನೆಯವರನ್ನೂ ತಿಂಗಳು ಮೊದಲೇ ತಂದಿಟ್ಟುಕೊಂಡಳು. ಸರಿ, ಹೆಚ್ಚಿನ ಖರ್ಚಿನ ಹಣಕ್ಕೆ ಮತ್ತೆ ಬ್ಯಾಂಕಿನಿಂದ ತೆಗೆದೆ. ಇವಳು ತವರುಮನೆಯವರಿಗೆ ಬೇರೆ ಡಾಕ್ಟರೇ ಸಿಗುವುದಿಲ್ಲವೇ ? ಹಾಗೆಂದು ಆಕೆಯನ್ನು ಕೇಳುವವರು ಯಾರು ? ಆಕಸ್ಮಾತ್ ಅಂಥ ಮಾತು ಕಿವಿಗೆ ಬಿದ್ದರೆ ಸಾಕು ಹುಲಿಯ ಹಾಗೆ ಎಗರಿಬೀಳುತ್ತಾಳೆ. ಆ ಜಗಳದ ಗೊಡವೆ ಬೇಡವೆಂದೇ ಬಾಯಿ ಮುಚ್ಚಿಕೊಂಡು ತೆಪ್ಪಗಿದ್ದೇನೆ. ತೆಪ್ಪಗಿರದೆ ಇನ್ನೇನು ಮಾಡಬಲ್ಲೆ. ಮೀನಾಕ್ಷಿಯ ಸಾವಿನ ದುಃಖ ಆರುತ್ತಾಬಂದಾಗ ದೇಹದ ಹಸಿವೆ ಹೆಚ್ಚಿದಂತೆ ಮುಕುಂದನನ್ನು ನೋಡಿಕೊಳ್ಳಲು ತಾಯಿಯೊಬ್ಬಳು ಬೇಕು ಎನ್ನುವ ನೆಪಮಾಡಿ ಇವಳನ್ನು ಕಟ್ಟಿಕೊಂಡೆ, ಆದರೆ ಈಗ ಅನಿಸುತ್ತದೆ, ನಾನು ಮದುವೆಯಾಗಿದ್ದು ಶಾರದಾ ಒಬ್ಬಳನ್ನೇ ಅಲ್ಲ ಅವಳ ತವರನ್ನೇ ಎಂದು. ಮೊದಲೆರಡು ವರ್ಷ ಮುಕುಂದ ಸಾಧಾರಣ ಸುಖವಾಗಿದ್ದ. ಆಮೇಲೆ ಇವಳಿಗೇ ಮೂರು ಮಕ್ಕಳಾದ ಮೇಲೆ ಮುಕುಂದನನ್ನು ಕಾಲಕಸವಾಗಿ ಕಂಡಳು. ಉಳಿದ ಮಕ್ಕಳು

ನನ್ನವರೇ ಆದರೂ ಮುಕುಂದನ ಮೇಲೆಯೇ ನನಗೆ ಹೆಚ್ಚು ಪ್ರೀತಿ. ಇಷ್ಟು ಮನಸ್ಸಿಗೆ ಹಚ್ಚಿಕೊಂಡು ಹಣ ಬೇಕೆಂದು ಬರೆದಾಗ ಈಗಲೇ ಕಳಿಸಿಯೇ ತೀರಬೇಕೆಂದು ಮನಸ್ಸು ಹುಚ್ಚೆದ್ದು ಹರಿಯುವುದು. ಆದರೆ ಹೇಗೆ ಕಳಿಸಲಿ? ಈ ಪತ್ರದ ವಿಷಯ ಶಾರದಾಗೆ ತಿಳಿದರೆ ನನ್ನ ಮೇಲೆಯೇ ಹರಿಹಾಯುತ್ತಾಳೆ. ಅವಳ ಕಿವಿಗೆ ಬೀಳದಂತೆ ಹಣ ದೊರಕಿಸಿ ಕಳಿಸಬೇಕು. ಈಗ ನನಗೆ ಬಾಕಿ ಬರಬೇಕಾದ ಹಣ ಯಾರಿಂದಲೂ ಇಲ್ಲ. ಯಾರನ್ನಾದರೂ ಕೈಗಡ ಕೇಳಬೇಕಂದರ ಮಹಡಿ ಮನೆ, ಕಾರು ಇಟ್ಟುಕೊಂಡು ೫೦೦ ರೂ. ಕೇಳುತ್ತಾರೆ ಎಂದು ನಕ್ಕಾರಲ್ಲ ಎಂದು ನಾಚಿಕೆ. ಅದರಲ್ಲೂ ಶಾರದಾನ ದುಂದುವೆಚ್ಚ ನೋಡಿದವರು ಡಾಕ್ಟರರು ಬಹಳ ಮಾಡಿರಬೇಕೆಂದು ತಿಳಿಯುತ್ತಾರೆ. ನಾನೇ ದುಡಿದು ಹಣ ದೊರಕಿಸಬೇಕು. ಯಾಕೋ ಮನಸ್ಸಿಗೆ ಬೇಡವಾಗಿ ಹಿಂದೊತ್ತಿಬಿಟ್ಟ ವಿಚಾರ ಹಾತೊರೆದು ಮೇಲೆದ್ದು ಬರುತ್ತಾ ಇದೆ. ಇವತ್ತು ವಕೀಲ ರಂಗರಾಯರ ಫೋನು ಬಂದಿತ್ತು. 'ಸ್ವಲ್ಪ ಅರ್ಜೆಂಟ್ ಮಾತಾಡುವದಿದೆ, ನಮ್ಮ ಕಚೇರಿಗೆ ಬರ್ರೀ' ಎಂದರು. 'ಈಗ ದವಾಖಾನೆ ಬಿಟ್ಟು ಬರುವ ಹಾಗೆಯೇ ಇಲ್ಲ. ಇಲ್ಲಿಯೇ ಹೇಳಿರಿ. ಏನು ಕೆಲಸ?' ಎಂದೆ. 'ನನ್ನ ಸ್ನೇಹಿತರ ಮಗಳೊಬ್ಬಳು ಗರ್ಭಿಣಿಯಾಗಿದ್ದಾಳೆ. ಸಣ್ಣ ಹುಡುಗಿ. ನೀವು ಔಷಧಿ ಕೊಡಬೇಕು' ಎಂದರು ಯಾಕೆ ? ಏನಾದರೂ ರೋಗವಿದೆಯೇ ? ಅಶಕ್ತಳೇ?' ಎಂದೆ, ಕ್ಷಣ ಹೊತ್ತು ತಡೆದು 'ಅಲ್ಲ ಅವಳು ಕುಮಾರಿ, ಇನ್ನೂ ಲಗ್ನವಾಗಿಲ್ಲ' ಎಂದರು. ನನಗೆ ಸಿಟ್ಟು ಬಂದಿತು. 'ಕ್ಷಮಿಸಬೇಕು. ನಾನು ಎಂದೂ ಇಂಥಾ ಕೆಲಸ ಮಾಡಿಲ್ಲ' ಎಂದರು. ಅದು ನನಗೆ ಗೊತ್ತು. ಆದ್ರೂ ಇದೊಂದು ಸಲ ಔಷಧಿ ಕೊಟ್ಟು ಉಪಕಾರ ಮಾಡಿರಿ. ಅವರೂ ನನ್ನ ಸ್ನೇಹಿತರು, ದೊಡ್ಡ ಮನುಷ್ಯರು ಈ ಅಪಮಾನ ತಾಳಲಾರರು. ನನಗೆ ನಿಮ್ಮ ಮೇಲೆ ನಂಬಿಕೆಯಿತ್ತು. ಒಪ್ಪೀರಿ ಅಂತ. ನಿಮಗೆ ಎಷ್ಟು ದುಡ್ಡು ಬೇಕೋ ಕೊಡಸ್ತೀನಿ' ಎಂದರು. 'ನನ್ನಿಂದ ಸಾಧ್ಯವಿಲ್ಲ ಕ್ಷಮಿಸಿ' ಎಂದು ಫೋನು ಇಟ್ಟೆ.

ಮನುಷ್ಯರಿಗೆ ಎಲ್ಲರಿಗೂ ಸಂಕಟಗಳು ಬಂದೇ ಬರುತ್ತವೆ. ಮನುಷ್ಯನಿಗೆ ಬರದೆ ಮರಕ್ಕೆ ಬರ್ತಾವೆಯೆ ತೊಂದರೆಗಳು? ನನಗೆ ಮಗನಿಗೆ ಹಣ ಕಳುಹಿಸೋ ಚಿಂತೆ ಹ್ಯಾಗೆ ಹತ್ತಿದೆಯೋ ಹಾಗೇನೆ ಅವರಿಗೂ ಮಗಳ, ತಮ್ಮ ಮರ್ಯಾದೆ ಚಿಂತೆ ಹತ್ತಿರಬಹುದು. ಅವರಿಗೆ ಸಹಾಯ ಮಾಡಿದರೆ ನನಗೆ ದುಡ್ಡು ಸಿಗುತ್ತದೆ. ಇಬ್ಬರ ಚಿಂತೆ ಪರಿಹಾರವಾಗುತ್ತದೆ. ಆದರೆ ಈ ಕೆಲಸ ತಾನು ಮಾಡಿದರೆ ಅನೀತಿಗೆ ಅವಕಾಶ ಮಾಡಿಕೊಟ್ಟ ಹಾಗೆ ಆಗುತ್ತದೆಯೇನೋ ಎಂದು ಮನಸ್ಸು ಭಯಪಡುತ್ತದೆ. ಒಳ್ಳೆಯ ಮನೆತನದ ಒಳ್ಳೆಯ ಹುಡುಗಿ ಆಗಿದ್ದರೆ ಒಮ್ಮೆ ಕಾಲು ಜಾರಿದ ಮಾತ್ರಕ್ಕೆ ಅವಳ ಜೀವನವೇ ಹಾಳಾಗಬಾರದು ಅಲ್ಲವೇ. ನನ್ನ ಸಹಾಯದಿಂದ ಅವಳಿಗೆ ಮದುವೆ ಮಾಡಿಕೊಳ್ಳಲು ಹೊಸದಾರಿ ಹಾಕಿಕೊಟ್ಟ ಹಾಗಾಗುತ್ತದೆ. ಅಪಮಾನ ತಡೆಯಲಾರದೆ ಆ ಹುಡುಗಿ ಆತ್ಮಹತ್ಯೆ ಮಾಡಿಕೊಂಡರೆ ಒಂದು ಜೀವಕ್ಕೆ ಒಳ್ಳೆಯದು ಮಾಡುವ ಅವಕಾಶ ನಾನೇ ಕಳಕೊಂಡ ಹಾಗೆ ಆಗುತ್ತದೆ. ಮತ್ತೆ ಹಣವೂ ಸಿಗೋದಿಲ್ಲ. ಈ ಕೆಲಸಕ್ಕೆ ನಾನು ಒಪ್ಪಿಕೊಂಡರೆ ಅದರಲ್ಲಿ ಬರೀ ನನ್ನ ಸ್ವಾರ್ಥವೇನೂ ಇಲ್ಲ. ಇಬ್ಬರ ಹಿತಕ್ಕಾಗಿಯೇ...

ಕಾರು ಮನೆಯ ಮುಂದೆ ನಿಂತಿತು. ಚಪ್ಪಲಿ ಸಪ್ಪಳವಾಯಿತು. ಡಾಯರಿ ಮುಚ್ಚಿಟ್ಟು ಮಹಡಿ ಇಳಿದು ಬಂದು ನಾನು ಗೋಡೆಯ ಗಡಿಯಾರ ನೋಡಿದೆ. ಅತ್ತಿತ್ತ ತೂಗಾಡುವ ಪೆಂಡ್ಯುಲಂ ಒಂದೇ ನನಗೆ ಕಂಡುದು.

***

ದವಾಖಾನೆಗೆ ಹೋಗುವಾಗಲೇ ಶಾರದ 'ಇಂದು ಅವರೆಲ್ಲ ಊರಿಗೆ ಹೋಗುತ್ತಾರೆ ಬೇಗ ಮನೆಗೆ ಬರ್ರಿ' ಎಂದಿದ್ದಳು. 'ನೋಡುತ್ತೇನೆ' ಎಂದಿದ್ದೆ. ಅರ್ಜೆಂಟ್ ಇದ್ದ ಕೇಸುಗಳಿಗೆಲ್ಲ ಔಷಧಿ ಕೊಟ್ಟು ಕಳುಹಿಸಿ ರಂಗರಾಯರ ಕಚೇರಿಗೆ ಹೋದೆ, ಅವರ ಮುಖ ಅರಳಿತು. ನನ್ನನ್ನು ಕಂಡು ಅರ್ಧ ಕೆಲಸ ಹಗುರಾದಂತೆ ಎನಿಸಿರಬೇಕು ಅವರಿಗೆ. ತಮ್ಮ ಸ್ನೇಹಿತರು ಸುದ್ದಿಯನ್ನೆಲ್ಲ ವಿವರವಾಗಿ ಹೇಳಿದರು. ಜನ ಒಳ್ಳೆಯವರು, ನೀತಿವಂತರು, ಮಗಳೂ

ಒಳ್ಳೆಯವಳೇ. ಬೇರೆ ಊರಲ್ಲಿ ಕಾಲೇಜು ವಿದ್ಯಾಭ್ಯಾಸಕ್ಕೆ ಹೋದವಳು ಹೀಗೆ ಮಾಡಿಕೊಂಡುಬಿಟ್ಟಿದ್ದಾಳೆ. ಎಲ್ಲೋ ಒತ್ತಾಯದಿದಂಲೇ ಹೀಗಾಗಿರಬೇಕು. ತಂದೆ-ತಾಯಿ ತಲೆ ಕೆಟ್ಟು ಕುಳಿತಿದ್ದಾರೆ. ನಿಮ್ಮಿಂದ ಸಹಾಯವಾಗಲೇ ಬೇಕೆಂದು ಹೇಳಿ ನನ್ನನ್ನು ಅವರ ಮನೆಗೆ ಕರೆದೊಯ್ದರು. ಸ್ಥಿತಿವಂತರೆಂದೇ ಹೇಳಬೇಕು. ಒಪ್ಪ ಓರಣವಾಗಿದ್ದ ಮಹಡಿ ಮನೆ, ಮನೆಯ ಜನರೂ ಒಳ್ಳೆಯವರೇ. ಯಜಮಾನ ಸದಾಶಿವರಾಯರು ಹೆಚ್ಚು ಮಾತಾಡಲೇ ಇಲ್ಲ. ಒಳಮನೆಗೆ ಕೈತೋರಿಸಿದರು. ಹುಡುಗಿ, ಹುಡುಗಿಯ ತಾಯಿ ಅಲ್ಲಿದ್ದರು. ಆ ವಿಷಯ ಮಾತನಾಡುವದೇ ನಾಚಿಕೆಗೇಡು ಎನ್ನುವಂತಿತ್ತು ಅವರ ವರ್ತನೆ. ತೆಳ್ಳಗೆ ಬೆಳ್ಳಗೆ ಸುಂದರವಾದ ಹುಡುಗಿ. ನಿಷ್ಕಲ್ಮಷ ಮುಖ. ಆದರೂ ನಾಚಿಕೆಯಿಂದ ಕಣ್ಣೀರು ತುಂಬಿತು. ಅವಳಿಗೆ ಒಂದು ತಿಂಗಳ ಮೇಲೆ ನಾಲ್ಕೆಂಟು ದಿನವಾಗಿತ್ತಷ್ಟೆ. ಆದರೆ ಆಗಲೇ ಅವಳಿಗೆ ವಾಂತಿ ಸುರುವಾಗಿತ್ತು. ಅದಕ್ಕೇ ಹೆದರಿಕೆ ಅವರಿಗೆ, ಜನರಿಗೆಲ್ಲ ತಿಳಿಯುತ್ತದೆಯೋ ಎಂದು. ದೇಹ ಲಕ್ಷಣಗಳ ಮೇಲಿಂದ ಗರ್ಭಿಣಿ ಎನ್ನುವುದನ್ನು ಸ್ಥಿರಮಾಡಿಕೊಂಡೆ. ನನ್ನ ಮನವೇಕೋ ಮಂಕಾಯಿತು. ಅವಳ ತಾಯಿ ಸ್ವಲ್ಪ ಅತ್ತ ಸರಿದಾಗ ಮೆಲುವಾಗಿ ಹೇಮಲತೆಯನ್ನೇ ಕೇಳಿದೆ 'ಇದಕ್ಕೆ ಯಾರು ಕಾರಣದು ಎನ್ನುವದನ್ನು ತಂದೆಗೆ ಹೇಳಿ ಅವರನ್ನೇ ಮದುವೆಯಾದರೆ ಒಳ್ಳೆಯದಲ್ಲವೆ? ಎಂದು. 'ನನಗೂ ಅದೇ ಆಸೆ. ಆದರೆ ನನ್ನ ಮಾತು ಕೇಳಲು ಈಗ ಅಪ್ಪ-ಅವ್ವ ಇಬ್ಬರೂ ಸಿದ್ಧರಿಲ್ಲ. ಅವರಿಗೆ ಮರ್ಯಾದೆಯೇ ದೊಡ್ಡದು'. ಇಷ್ಟು ಹೇಳುವುದರಲ್ಲಿ ಅವಳ ಕಣ್ಣೀರು ಕೆನ್ನೆಯ ಮೇಲೆ ಹರಿದಿದ್ದವು. ಅವಳ ಜೀವ ಮುದುಡಿತ್ತು. ಆದರೂ ಅವಳಿಗೆ ಧೈರ್ಯ ಹೇಳಿದೆ. 'ಕ್ಷಣಿಕ ತಪ್ಪಿಗೆ ಈ ದೊಡ್ಡ ದಂಡ ನೀನೀಗ ತೆರಲೇಬೇಕಾಗಿದೆ' ಎಂದು ಇಂಜೆಕ್ಷನ್ ಕೊಟ್ಟು ಬಂದೆ.

.... ನಾನು ಕೊಟ್ಟ ಇಂಜೆಕ್ಷನ್‌ಗಳಿಂದಲೂ ಏನೂ ಪರಿಣಾಮವಾಗಲಿಲ್ಲ ಅವಳ ಗರ್ಭದ ಮೇಲೆ. ಅದಕ್ಕೊಂದು ಸಣ್ಣ ಆಪರೇಶನ್ ಆಗಬೇಕು ಎಂದೆ ಅವರಿಗೆ. ಅವಳು ಅದಕ್ಕೂ ಸಿದ್ಧವಾಗಿದ್ದರು. ಕೊನೆಗೆ ನನ್ನ ನರ್ಸಿನ ಸಹಾಯದಿಂದ ಅವರ ಮನೆಯಲ್ಲೇ ಆಪರೇಶನ್ ಮಾಡಿದೆ ಅವಳಿಗೆ. ರಕ್ತಸ್ರಾವದಿಂದ ಹುಡುಗಿ ಬಳಲಿದಳು. ಅವಳ ತಾಯಿಗೆ ಅವಳ ಆರೈಕೆಯನ್ನು ಚೆನ್ನಾಗಿ ನೋಡಿಕೊಳ್ಳಲು ಹೇಳಿ ಹೊರಗೆ ಬಂದೆ. ಸದಾಶಿವರಾಯರು ೫೦೦ ರೂ. ನನ್ನ ಕೈಯಲ್ಲಿಟ್ಟು ಕೈಮುಗಿದರು. ಕೃತಜ್ಞತೆ ಅವರ ಕಣ್ಣಲ್ಲಿ ತುಂಬಿತು. ಹೆಚ್ಚು ಮಾತಾಡಲಿಲ್ಲ. ಅವರ ಸ್ವಭಾವವೇ ಹಾಗೇನೋ ಎಂದುಕೊಂಡು ಮನೆಗೆ ಬಂದು ಕೈಕಾಲು ತೊಳೆದುಕೊಂಡು ದೇವರಮನೆಗೆ ಹೋಗಿ ಕೈ ಜೋಡಿಸಿ ಬೇಡಿಕೊಂಡೆ. 'ದೇವರೇ ಎಲ್ಲವೂ ನಿನ ಇಚ್ಛೆಯಂತೆಯೇ ನಡೆಯುತ್ತದೆ ಎನ್ನುತ್ತಾರೆ ತಿಳಿದವರು. ನನ್ನಿಂದ ಈ ಕೆಲಸ ಆಗಬೇಕಾಗಿತ್ತೋ ಇಲ್ಲವೋ ನನಗೆ ತಿಳಿಯದು. ನನ್ನ ತಪ್ಪಿದ್ದರೆ ಕ್ಷಮಿಸು' ಎಂದು ಮನಸ್ಸು ಸ್ವಲ್ಪ ಹಗುರಾಯಿತು.

ಕೆಳಗೆ ಶಾರದೆಯ ಧ್ವನಿ ಕೇಳಿತು. ಪೆನ್ನು ಕೆಳಗಿಟ್ಟು ಡಾಯರಿ ಮುಚ್ಚಿಟ್ಟು ಕೆಳಿಗಿಳಿದು ಹಾಲಿಗೆ ಬಂದೆ. ಶಾರದಾ 'ಊಟಕ್ಕೇಳುವದಿಲ್ಲವೆ' ಎನ್ನುತ್ತಿದ್ದಳು. ಗೋಡೆ ಗಡಿಯಾರ ನೋಡಿದೆ. ೯.೧೫ ಆಗಿತ್ತು. ಸರಿ ನಿನ್ನ ಮುಖ ಆ ದಿಕ್ಕು, ನನ್ನ ಈ ದಿಕ್ಕು ಎಂದುಕೊಂಡೆ.

***

ಇಂದು ನನಗೆ ಬಹಳ ಸಂತೋಷದ ದಿನ. ಕಾರಣ ಮುಕುಂದ ಮನೆಗೆ ಬಂದಿದ್ದಾನೆ. ನನ್ನ ಮೀನಾಕ್ಷಿಯ ಮುದ್ದು ಮಗ ಪದವೀಧರನಾಗಿದ್ದಾನೆ. ಪರೀಕ್ಷೆಯ ಪರಿಣಾಮ ತಿಳಿದುಕೊಂಡೇ ಬಂದಿದ್ದಾನೆ. ವಿಶ್ವವಿದ್ಯಾಲಯಕ್ಕೆ ಎರಡನೆಯ ರ್‍ಯಾಂಕು ಎಂದ. ಆದರೆ ಮೊದಲಿಗ ಯಾಕೆ ಆಗಲಿಲ್ಲವೋ ತಿಳಿಯಲಿಲ್ಲ ನನಗೆ. ಕೇಳಿದರೆ ಆಮೇಲೆ ಹೇಳ್ತೀನಿ ಎಂದ. ಓದಿ ಓದಿ ಸೊರಗಿದ್ದಾನೆ. ಆದರೆ ಮುಖದ ಕಳೆ ಮಾತ್ರ ಇನ್ನೂ ಹೆಚ್ಚಾಗಿದೆ. ಹಿರಿಯ ಮಗ ಪರೀಕ್ಷೆ ಪಾಸಾಗಿ ಬಂದಿದ್ದಾನೆ ಎಂದರೆ ಒಂದು ಸಿಹಿ ಊಟ ಮಾಡಿಸಬಾರದೆ ಶಾರದಾ. ಊಟಕ್ಕೆ ಕುಳಿತಾಗ ಕೇಳಿದರೆ 'ಇರಲಿ ಬಿಡ್ರಿ ನಾಳೆ ಮಾಡ್ತೀನಿ' ಎಂದಳು ಮುಖ ದಪ್ಪಗೆ ಮಾಡಿಕೊಂಡು. ಅವಳಿಗೆ ನನ್ನ ಸಂತೋಷದ

ಅರಿವೇ ಇಲ್ಲ. ಅದೇ ತನ್ನ ಮಗ ರಮೇಶ ಪಿ.ಯು.ಸಿ. ಪಾಸಾದರೆ ಎಲ್ಲರಿಗೂ ಪೇಢೆ ಹಂಚಿದಳು ಈ ಹೊತ್ತಿನಲ್ಲಿ ಮೀನಾಕ್ಷಿ ಇದ್ದಿದ್ದರೆ ಎಷ್ಟು ಸಂಭ್ರಮ ಪಡುತ್ತಿದ್ದಳೋ. ತಾಯಿ ಇಲ್ಲದ ಮಗು ಮುಕುಂದ ಸುಖ ಕಾಣಲೇ ಇಲ್ಲ. ಇನ್ನಾದರೂ ಸುಖವಾಗಿರಬೇಕು ಅವನು. ಮೀನಾಕ್ಷಿಯನ್ನು ನೋಡಬೇಕೆನ್ನಿಸಿತು. ಡಾಯರಿ ತೆಗೆದು ಅವಳ ಚಿತ್ರವನ್ನೇ ನೋಡುತ್ತಿದ್ದೆ. ಬಾಗಿಲು ತೆರೆದು ಮುಕುಂದ ಒಳಗೆ ಬಂದು ಕೋಣೆಯ ಬಾಗಿಲು ಮತ್ತೆ ಮುಚ್ಚಿ ನನ್ನೆದುರು ಬಂದು ಕುಳಿತ. ಊಟವಾದ ಮೇಲೆ ತಮ್ಮ - ತಂಗಿಯರೊಡನೆ ಸ್ವಲ್ಪ ಹೊತ್ತು ಆಟವಾಡುತ್ತಿದ್ದನೇನೋ. ಶಾರದಾ ಭೇದಭಾವ ತೋರಿದರೂ ಮುಕುಂದನ ಮನಸ್ಸು ನಿಷ್ಕಲ್ಮಷ. ಆ ಮಕ್ಕಳು ಬೇರೆ, ತಾನು ಬೇರೆ ಎಂದು ಅವನು ತಿಳಿದಿಲ್ಲ. ಅವರೂ ಅಷ್ಟೆ. ಅವನು ರಜೆಗೆ ಊರಿಗೆ ಬಂದರೆ ಸಾಕು. ಅಣ್ಣ ಅಣ್ಣ ಎಂದು ಅವನನ್ನು ಮುತ್ತಿಕೊಂಡು ಕುಣಿಯುತ್ತಾರೆ. ಇವರ ಪ್ರೀತಿ, ಒಲವುಗಳೇ ನನ್ನ ಬರಡು ಜೀವಕ್ಕೆ ಹರುಷ ತುಂಬುತ್ತಿವೆ ಎನ್ನುವ ಮಾತೂ ಅಷ್ಟೇ ಸತ್ಯ. ಯಾವಾಗಲೂ ನಗುತ್ತ ಹರಟುತ್ತ ಇರುವ ಮುಕುಂದ ಏತಕ್ಕೋ ಗಂಭೀರನಾಗಿದ್ದ.

'ಯಾಕಪ್ಪಾ ಸುಮ್ಮನs ಇದ್ದೀ. ಏನೋ ವಿಚಾರ ಮಾಡತಿದ್ದಿಯಲ್ಲ?'

'ಹೌದಪ್ಪಾಜಿ, ಅದನ್ನ ನಿಮ್ಮ ಕೂಡ ಮಾತಾಡಬೇಕು ಅಂತ ಬಂದೆ. ಪರೀಕ್ಷೆದ್ದು...'

'ಎರಡನೇ ರ್‍ಯಾಂಕು ಬಂದದ್ದ ಹೌದಲ್ಲೊ, ಇರಲಿ ಬಿಡು, ಆಗಿಹೋಯಿತಲ್ಲ. ಇನ್ನ ಚಿಂತೀ ಮಾಡಿ ಫಲ ಏನು ? ಮೊದಲು ಅಭ್ಯಾಸ ಚೆನ್ನಾಗಿ ಮಾಡಬೇಕಾಗಿತ್ತು.'

'ಮಾಡಿದ್ದೆ ಅಪ್ಪಾ, ಅಭ್ಯಾಸ ಚೆನ್ನಾಗೆ ಆಗಿತ್ತು. ಆ ಸೂಕ್ಷ್ಮದರ್ಶಕ ಯಂತ್ರ ಒಡೆದು, ನಿಮಗ ತೊಂದರೆ ಕೊಟ್ಟು ಹಣಾ ತರಿಸಿಕೊಂಡು ತುಂಬಿದ ಮೇಲೆ ನನ್ನ ಮನಸ್ಸು ಸ್ಥಿಮಿತದೊಳಗ ಉಳೀಲಿಲ್ಲ'

'ಅದನ್ನ ಅಷ್ಟ ಯಾಕ ಮನಸ್ಸಿಗೆ ಹಚ್ಚಿಕೊಂಡಿ. ಕೈತಪ್ಪಿ ಬಿದ್ದು ಒಡೆದಿರಬೇಕು. ಒಂದೊಂದು ಸಲ ಹೀಗೇ ಕೈತಪ್ಪಿ ಮನುಷ್ಯನಿಂದ ತಪ್ಪು ಆಗ್ತಾವ.

'ಹೌದಪ್ಪಾ, ಅದನ್ನs. ಅದನ್ನs ನಿಮಗೆ ಹೇಳಬೇಕು. ನನ್ನಿಂದ ಎಂಥಾ ದೊಡ್ಡ ತಪ್ಪು ಆಗೇದ ಅನ್ನೂದನ್ನ ಹೇಳಬೇಕು ಅಂದರ ನನಗ ಇನ್ನೂ ಧೈರ್ಯ ಬರಲೊಲ್ಲದು.' ಆವೇಶದಿಂದ ಮಾತನಾಡಿದ ಮುಕುಂದ. ಅವನ ಮುಖವನ್ನೇ ಸುಮ್ಮನೇ ದಿಟ್ಟಿಸಿದೆ ಹುಚ್ಚುಹುಚ್ಚಾಗಿ, ಕೆಂಪೇರಿದ ಮುಖದಿಂದ ನನ್ನನ್ನು ನೋಡುವ ಧೈರ್ಯವಿಲ್ಲದೇ ನೆಲವನ್ನೇ ನೋಡುತ್ತ ಮಾತು ಮುಂದುವರಿಸಿದ ಮುಕುಂದ. 'ಅಪ್ಪಾಜಿ ನಿಮ್ಮ ಹೊರತು ನನಗೆ ಇನ್ನಾರೂ ಇಲ್ಲ. ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡವ ನಾನು. ಚಿಕ್ಕಮ್ಮ ಮನೆಗೆ ಬಂದರೂ ಅವಳ ಪ್ರೀತಿ ವಾತ್ಸಲ್ಯ ನನಗೆ ಸಿಗಲಿಲ್ಲ ಎನ್ನುವುದು ನಿಮಗೂ ಗೊತ್ತಿದೆ. ಹೆಣ್ಣಿನ ಮಾರ್ದವತೆಯನ್ನೇ ಅರಿಯದ ನಾನು ಕಾಲೇಜಿನ ಹುಡುಗಿಯೊಬ್ಬಳ ಸ್ನೇಹವನ್ನು ಸಂಪಾದಿಸಿದೆ. ಬಹಳ ಒಳ್ಳೆಯ ಹುಡುಗಿ. ಸುಂದರಿಯೂ ಹೌದು, ನಾವಿಬ್ಬರೂ ಪ್ರೀತಿಸಿದೆವು.'

'ಸಿನಿಮಾ ನೋಡಿ ನೋಡಿ ಈಗಿನ ಕಾಲೇಜು ಹುಡುಗರೆಲ್ಲ ಅದನ್ನೇ ಕಲಿತಿದ್ದಾರಲ್ಲ. ನೀನೂ ಪ್ರೇಮ ಮಾಡಿದಿಯಾ?' ಎಂದೆ, ವ್ಯಂಗ್ಯವಾಗಿ.

'ಇಲ್ಲ ಅಪ್ಪಾಜಿ, ನೀವು ನನ್ನ ಪ್ರೇಮಾನ ಅಪಹಾಸ್ಯ ಮಾಡಬೇಡಿರಿ. ನಾನು ನಿಜವಾಗಿಯೂ ಅವಳನ್ನೇ ಪ್ರೀತಿಸುತ್ತೇನೆ. ಬಹಾಳ ಬಹಾಳ ಪ್ರೀತಿಸ್ತೇನೆ. ಎಂದೆಂದಿಗೂ ಅವಳನ್ನೇ ಪ್ರೀತಿಸ್ತೇನೆ. ನಿಮಗೆ .... ನಿಮಗೆ ಹೇಗೆ ಹೇಳಬೇಕೋ ಗೊತ್ತಾಗಲೊಲ್ಲದು ನನಗೆ' ಮುಕುಂದ ಗಟ್ಟಿಯಾಗಿ ತಲೆಹಿಡಿದುಕೊಂಡು ಕುಳಿತ.

ತಬ್ಬಲಿ ಎಂದುಕೊಂಡಿದ್ದ ಮಗ ತಾರುಣ್ಯಕ್ಕೆ ಬಂದು ಹೆಣ್ಣಿನ ಪ್ರೀತಿಯನ್ನ ಸಂಪಾದಿಸಿದ್ದಾನೆ. ಕೋಪದ ಬದಲು ಅದೇಕೋ ಸಂತೋಷವಾಯಿತು ನನಗೆ. ತಲೆ ತಗ್ಗಿಸಿ ಕುಳಿತ ಅವನನ್ನು ಕಂಡು ಮರುಕವಾಯಿತು.

"ಒಳ್ಳೇದಾಯ್ತು ಬಿಡು. ನಿನ್ನ ಇಚ್ಛೆ ಎದ್ದರೆ ಅವಳನ್ನೇ ಲಗ್ನ ಆಗುವಿಯಂತೆ. ಯಾರ ಹುಡುಗಿ, ಹೆಸರೇನು? ಈ ಲಗ್ನಕ್ಕೆ ಅವಳ ತಂದೆ-ತಾಯಿ ಒಪ್ತಾರೆಯೇ. ಇದೂ ಮುಖ್ಯ."

'ಈ ಲಗ್ನಕ್ಕೆ ಅವರು ಒಪ್ಪಲೇಬೇಕಾಗಿದೆ ಅಪ್ಪಾಜಿ. ಅಂಥ ಪ್ರಸಂಗವೇ ಬಂದಿದೆ.' ಮತ್ತೆ ತಲೆತಗ್ಗಿಸಿದ. ನನಗೇನೋ ಷಾಕ್ ಹೊಡೆದಂತಾಯಿತು. 'ಏನಂದೆ ? ಏನಾಯಿತು?' ಎಂದು ಜೋರಾಗಿಯೇ ಕೂಗಿದೆ.

ಹೌದು. ನೀವು ಊಹಿಸಿದ್ದು ಸರಿ. ಅವಳೀಗ ಗರ್ಭಿಣಿ. ನಾವೆಲ್ಲ ಟೂರಿಗೆ ಹೋಗಿದ್ದಾಗ ಬೆಳದಿಂಗಳ ರಾತ್ರಿಯಲ್ಲಿ ತಿರುಗಾಡಲು ಹೋದ ಸಂದರ್ಭದಲ್ಲಿ ನಮ್ಮ ಎಚ್ಚರ ತಪ್ಪಿತು. ನಿಶ್ಚಿಂತವಾಗಿದ್ದೆ ಅಪ್ಪಾಜಿ, ನೀವು ನಂಬುತ್ತೀರೋ ಇಲ್ಲವೋ. ನಿಮ್ಮ ಮಗ ಕೆಟ್ಟವನಲ್ಲ. ಆದರೆ ಆ ಹೊತ್ತಿನಲ್ಲಿ ದೌರ್ಬಲ್ಯದ ಕೈ ಮೇಲಾಯಿತು. ಕ್ಷಮಿಸಬೇಕು ಮಾಡಬಾರದ ಕೆಲಸ ಮಾಡಿಬಿಟ್ಟೆ ನಾನು.' ಕುರ್ಚಿಯಿಂದ ಕೆಳಗಿಳಿದು ಬಂದು, ಕಾಲ ಹತ್ತಿರ ಕುಳಿತು ನನ್ನ ತೊಡೆಯ ಮೇಲೆ ತಲೆಯಿಟ್ಟು ಬಿಕ್ಕಿದ ಮುಕುಂದ.

ನನಗೆ ಮಾತೇ ಬರಲಿಲ್ಲ. ಹಾಗೆ ಅವನ ತಲೆಯ ಮೇಲೆ ಕೈಯಾಡಿಸುತ್ತ ಕೇಳಿದೆ. 'ಈಗ ಅವಳೆಲ್ಲಿ? ಅದೇ ಊರಲ್ಲಿಯೇ ಇದ್ದಾಳೆಯೇ?'

'ಅವಳ ತಂದೆ ಸರ್ವೆ ಖಾತೆಯಲ್ಲಿ ಅಧಿಕಾರಿಗಳು. ಅವರಿಗೆ ಈ ಊರಿಗೆ ವರ್ಗವಾಗಿತ್ತು. ಅವಳನ್ನ ಹಾಸ್ಟೆಲಿನಲ್ಲಿ ಬಿಟ್ಟು ಬಂದಿದ್ದರು. ಟೂರಿನಿಂದ ಅವಳು ಇಲ್ಲಿಗೇ ಬಂದಳು. ಗರ್ಭಿಣಿಯಾದ ಲಕ್ಷಣ ಕಂಡೊಡನೆ ನನಗೆ ತನ್ನ ಸ್ಥಿತಿಯನ್ನು ತಿಳಿಸಿ ಪತ್ರವನ್ನು ಬರೆದಿದ್ದಳು. ಅದೇ ಹೊತ್ತಿನಲ್ಲಿ ಸೂಕ್ಷ್ಮದರ್ಶಕಯಂತ್ರ ಬಿದ್ದು ಒಡೆದದ್ದು, ನಾನು, ಪರೀಕ್ಷೆ ಮುಗಿದ ತಕ್ಷಣ ಬರ್ತೇನೆ, ನಿನ್ನ ತಂದೆ ನನ್ನ ತಂದೆ ಕೂಡಿ ಮದುವೆಯ ವಿಚಾರ ಮಾತಾಡುವಂತೆ ಒಲಿಸುತ್ತೇನೆ. ಏನೂ ಕಾಳಜಿ ಮಾಡಬೇಡ. ಅಂಥ ಕಠಿಣ ಪ್ರಸಂಗ ಏನಾದರೂ ಬಂದರೆ ನನಗೆ ಮತ್ತೆ ಬರೆ' ಎಂದು ಬರೆದಿದ್ದೆ. ಅದಕ್ಕೆ ಅವಳಿಂದ ಏನೂ ಉತ್ತರ ಬರಲಿಲ್ಲ. ಬಹುಶಃ ಪರೀಕ್ಷೆಯ ಗಲಾಟೆಯಲ್ಲಿರುವ ನನಗೆ ತೊಂದರೆ ಯಾಕೆ ಎಂದು ಸುಮ್ಮನಿರಬೇಕು ಅಲ್ಲವೇ ? ನೀನು ನಮ್ಮ ಮದುವೆಗೆ ಆಶೀರ್ವಾದ ಮಾಡಬೇಕು ಅಪ್ಪಾಜಿ.'

'ಅದೆಲ್ಲಾ ಸರಿ, ಆದರೆ ಅವಳು ಯಾರ ಹುಡುಗಿ ಅನ್ನೋದೇ ಹೇಳಲಿಲ್ಲ ನೀನು ?'

'ಹೇಮಲತಾ ಅವಳ ಹೆಸರು. ಜಿ. ಸದಾಶಿವರಾಯರು ಅವಳ ತಂದೆ. ಇಲ್ಲಿಯೇ ವಿಜಯನಗರದಲ್ಲಿ ಇದ್ದಾರಂತೆ. ನಾಳೆ ಬೆಳಿಗ್ಗೆ ಅವರ ಮನೆಗೆ ಹೋಗೋಣವೇ ಅಪ್ಪಾಜಿ? ನೀವು ದೊಡ್ಡ ಮನಸ್ಸು ಮಾಡಬೇಕು.' ಮೃದುವಾಗಿ ನನ್ನ ಕಾಲು ಸವರಿದ ಮುಕುಂದ.

ಕುಳಿತಲ್ಲಿಯೇ ಗಡಗಡ ನಡುಗಿದೆ. ಮೈಯೆಲ್ಲ ಕಂಪನ. ಕಾಣದ ಕೈ ನನ್ನನ್ನೇ ಕೈ ಹಿಡಿದು ಅಲ್ಲಾಡಿಸುವಂತಿತ್ತು. ಹಾಗೇ ಕಣ್ಣು ಮುಚ್ಚಿದೆ. ಕಣ್ಣೀರು ಘಳ ಘಳ ಹೊರಗೆ ಹರಿದವು. ಮಾತನಾಡದೆ ಕುಳಿತ ನನ್ನ ಮುಖ ನೋಡಲು ಮುಖವೆತ್ತಿದ ಮುಕುಂದ ಕಣ್ಣೀರು ನೋಡಿ ಅಚ್ಚರಿಪಟ್ಟ. 'ಅಪ್ಪಾಜಿ, ನಿಮಗೆ ಯಾಕೆ ಇಷ್ಟು ದುಃಖ? ಕಾಣದ ಹುಡುಗಿಯಂತಲೋ ? ಆದರೆ ಹುಡುಗಿ ಬಹಳ ಚೆನ್ನಾಗಿದ್ದಾಳೆ. ನೀವು ನೋಡಿದ ಮೇಲೆ ಒಪ್ಪಿಯೇ ಒಪ್ತೀರಿ. ಅಷ್ಟು ಚೆನ್ನಾಗಿದ್ದಾಳೆ ನನ್ನ ಹೇಮ.' ಪ್ರೀತಿ ಅವನ ಕಣ್ತುಂಬಿ ಹೊರ ಚೆಲ್ಲುತ್ತಿತ್ತು.

'ನಾನು ನಿನ್ನ ಹೇಮಳನ್ನು ನೋಡಿದ್ದೇನಪ್ಪಾ. ಚಿನ್ನದಂಥಾ ಹುಡುಗಿ., ಅವಳಿಗೆ ಇಬ್ಬರಿಂದಲೂ ಅನ್ಯಾಯವಾಯಿತಲ್ಲ ಮುಕುಂದಾ. ಅದಕ್ಕ ಇಷ್ಟು ಸಂಕಟ ನನಗೆ.

'ಅಪ್ಪಾಜಿ ಒಗಟು ಮಾತಾಡಬೇಡಿ, ಹೇಳಿ ಏನಾಯಿತು ? ನೀವೆಲ್ಲಿ ನೋಡಿದಿರಿ ಅವಳನ್ನ ? ನಿಮ್ಮಿಂದ ಹೇಗೆ ಅನ್ಯಾಯವಾಯಿತು ಅವಳಿಗೆ' ಉದ್ವೇಗದಿಂದ ನನ್ನ ಕಾಲು ಹಿಡಿದು ಅಲುಗಿಸಿದ.

ಕ್ಷಣ ಹೊತ್ತು ಸುಮ್ಮನಿದ್ದು ಅವನಿಗೆ ೫೦೦ ರೂ. ಕಳುಹಿಸಿದ ಸಂದರ್ಭದಲ್ಲಿ ನಡೆದದ್ದೆಲ್ಲವನ್ನೂ ಹೇಳಿದೆ. ಕೆಳಗೆ ಮುಖ ಹಾಕಿ ಸುಮ್ಮನೆ ಕುಳಿತಿದ್ದ ಮುಕುಂದ. ಆಡಾಡುತ್ತಿದ್ದ ಹಾಗೆ ಎಂಥೆಂಥ ಅನಾಹುತಗಳೆಲ್ಲ ಜರುಗಿಹೋಗಿದ್ದವು. ನಾನು ನನ್ನ ಅಂಗೈಗಳನ್ನೇ ದಿಟ್ಟಿಸಿ ನೋಡಿದೆ. ನನ್ನ ಮೊಮ್ಮಗು ಆಗಬೇಕಾಗಿದ್ದ ಮಗುವಿನ ಕುತ್ತಿಗೆ ನಾನೇ ಹಿಚುಕಿದ್ದೆ. ಕೊಲೆಪಾತಕಿಗಳ ಕೈಗಳಂತೆ ಇನ್ನೂ ಅಲ್ಲಲ್ಲಿ ರಕ್ತದ ಕಲೆ ಹತ್ತಿದಂತೆ ಕಂಡಿತು. ಅದರ ಹಿಂದೆ ಹೇಮಲತೆಯ ನಿರ್ದೋಷಪೂರ್ಣ ಮುಖ! ನಿಸ್ಸಹಾಯಕ ಮಗುವಿನಂತೆ ಕುಳಿತ ಮುಕುಂದನ ತಲೆ ನೇವರಿಸಿ ಹೇಳಿದೆ, 'ಮಗು, ನಾಳೆ ಸದಾಶಿವರಾಯರ ಮನೆಗೆ ಹೋಗೋಣ."

***

■■

# ಪರಿಮಳದ ಸುಳಿಯಲ್ಲಿ

ಆಫೀಸಿಗೆ ತಡವಾಗಿತ್ತು. ನನ್ನ ಕಾರು ಕೆಟ್ಟು ರಿಪೇರಿಗೆ ಹೋಗಿದ್ದರಿಂದ ಬಸ್ಸು ಹಿಡಿಯಲು ಸ್ಟಾಪಿಗೆ ಓಡಬೇಕಾಗಿತ್ತು. ನಾಲ್ಕಾರು ದಿನ ಗೆಳೆಯ ರಮೇಶ ತನ್ನ ಸ್ಕೂಟರ್ ಮೇಲೆ ಕರೆದೊಯ್ದಿದ್ದ. ಇಂದು ಅವನೂ ಊರಲ್ಲಿ ಇರಲಿಲ್ಲ. ಅವಸರದಲ್ಲಿ ಟೈ ಗಂಟು ಹಾಕುತ್ತಿದ್ದೆ.

"ಇವತ್ತು ಸ್ವಲ್ಪ ಲಗೂನ ಬರ್ರಿ ಆಫೀಸಿನಿಂದ" ಸರೂ ಹೇಳಿದಳು.

"ಯಾಕ ಏನರೆ ಕೆಲಸ ಅದ ಏನು ?"

"ಮರತಬಿಟ್ಟರೇನು, ಹದಿನೈದು ದಿವಸಾತು ಹೇಳ್ತೀನಿ 'ಆರಾಧನಾ' ಸಿನಿಮಾಕ್ಕೆ ಹೋಗೋಣ ಅಂತ" ಅಸಮಾಧಾನ ಹೊರಚೆಲ್ಲಿದಳು ದನಿಯಲ್ಲಿ.

"ಕಾರು ಬರಲಿಯಲ್ಲ, ರಿಪೇರಿಗೆ ಹೋಗೇದ" ಪ್ರೋಗ್ರಾಂ ಮುಂದೂಡುವ ವಿಚಾರದಿಂದ ಹೇಳಿದೆ.

"ಕಾರಿನ ಸಲುವಾಗಿ ಕಾಯ್ದರ ಸಿನಿಮಾ ಹೋಗಿ ಬಿಡತದ. ಇವತ್ತ ಹೋಗಲಿಕ್ಕೆ ಬೇಕು" ಮೆಟ್ಟಿಲ ಮೇಲೆ ನಿಂತು ಹೇಳಿದಳು ಸರೂ.

"ಹೂಂ" ಎಂದೆ ನಾನು. ಗೇಟು ಹಾಕುತ್ತ ಮನೆಯ ಕಡೆಗೆ ನೋಡಿದೆ. ಅಲ್ಲಿ ಸರೋಜ ಇರಲಿಲ್ಲ. ಸಮಾಧಾನವಾಯಿತು. ಸಿಳ್ಳು ತಾನೇ ಬಾಯಿಂದ ಹೊರಬಿತ್ತು. ಸ್ಕೂಲಿಗೆ ಹೋಗುವ ಹುಡುಗನೊಬ್ಬ ನನ್ನನ್ನೇ ದಿಟ್ಟಿಸಿ ನೋಡಿದ್ದರಿಂದ ಎಚ್ಚರಗೊಂಡೆ. ಸಿನಿಮಾಕ್ಕೆ ಸರೂಳ ಜೊತೆ ಹೋಗಲು ಒಪ್ಪಿಕೊಳ್ಳಲೇಬೇಕಾಗಿತ್ತು. ಒಪ್ಪದಿದ್ದರೆ ಮುಂದಿನ ಪರಿಣಾಮ ಏನೆಂಬುದನ್ನು ಅವಳ ಸಹವಾಸದ ಮೂರು ವರ್ಷಗಳ ಅವಧಿಯಲ್ಲಿ ಅರಿತೇ ಇದ್ದೆ. ಮದುವೆಯಾದ ಹೊಸದರಲ್ಲಿ ಸರೂಳ ಸಿನೇಮಾ ಹುಚ್ಚನ್ನು ಉತ್ಸಾಹದಿಂದಲೇ ಪ್ರೋತ್ಸಾಹಿಸಿದ್ದೆ. ಅವಳು ಹಳಬಳಾದಂತೆ ಅವಳ ಸಿನಿಮಾ ಹುಚ್ಚು ಅಸಹನೀಯವಾಗಿತ್ತು ನನಗೆ. ಮೂರು ತಾಸು ಥೇಟರಿನಲ್ಲಿ ವೇಳೆ ಕಳೆದು ಹಣ ಹಾಳು ಮಾಡಿಕೊಳ್ಳುವುದು ನನಗಿಷ್ಟವಿಲ್ಲ ಎಂದು ಅವಳಿಗೆ ಸ್ಪಷ್ಟವಾಗಿಯೇ ಹೇಳಿಬಿಟ್ಟೆ. ನಿನಗೆ ಬೇಕಾದರೆ ಹೋಗಿ ನೋಡಬಹುದು ಎನ್ನುವಷ್ಟು ಸ್ವಾತಂತ್ರ್ಯ ಕೊಟ್ಟೆ. ಎರಡು ದಿನ ಜಗಳವಾಡಿ ಮಾತು ಬಿಟ್ಟರೂ ಆಮೇಲೆ ನೆರೆಮನೆಯ ಗೆಳತಿಯೊಡನೆ ಹೋಗಿ ಸಿನಿಮಾ ನೋಡಿಬಂದಳು. ಅಲ್ಲಿಯ ಸಮತಾವಾದ ಅವಳಿಗೆ ಹಿಡಿಸಲಿಲ್ಲ. ಅವಳ ಮಾಜೀ ಮುಸುರೆ ತಿಕ್ಕುವವಳು ಅವಳ ಪಕ್ಕದಲ್ಲೇ ಕುಳಿತಿದ್ದಳಂತೆ. ಮನೆಗೆ ಬಂದು ನನ್ನ ಹತ್ತಿರ ತನ್ನ ಗೌರವ ಮುಕ್ಕಾದುದನ್ನು ತೋಡಿಕೊಂಡಳು. ಹೋಗಲಿ, ದುಡ್ಡು ಖರ್ಚಾದರೂ ಚಿಂತೆಯಿಲ್ಲ ಲೇಡಿಜ ಸೀಟು ಬಿಟ್ಟು ಬಾಲ್ಕನಿಗೆ ಹೋಗು ಎಂದು ಸಲಹೆ ಮಾಡಿದೆ. ಜೊತೆಗೆ ಯಾರೂ ಸಿಕ್ಕದೆ ಒಮ್ಮೆ ಒಬ್ಬಳೇ ಬಾಲ್ಕನಿಗೆ ಕುಳಿತುಕೊಳ್ಳಲು ಹೋದಾಗ ಭಯಂಕರ ಸುದ್ದಿ ತಂದಳು. ಪಕ್ಕದಲ್ಲಿ ಕುಳಿತ ಸಭ್ಯ(!) ತರುಣ ಕತ್ತಲಾದಾಗ ಅವಳ ಕೈ ಚಿಟುಕಿದನಂತೆ. ಮತ್ತೊಮ್ಮೆಯಂತೂ ಭುಜದ ಮೇಲೆ ಕೈ ಹಾಕಲು ಬಂದನಂತೆ. ಹೆಂಡತಿಯ ಮಾನ ಕಾಯುವುದು, ಮನೆಯ ಶಾಂತಿ ಕಾಯುವುದು ಗಂಡನ ಧರ್ಮವಲ್ಲವೆ? ಸರಿ. ಆಮೇಲೆ ಅವಳು ಹೇಳಿದ ಸಿನಿಮಾಕ್ಕೆ ಅವಳ ಬಾಡಿಗಾರ್ಡ ಆಗಿ ಹೋಗಿ ಬರತೊಡಗಿದೆ. ಎರಡು ತಾಸು ಚೆನ್ನಾಗಿ ನಿದ್ದೆ ಮಾಡುತ್ತಿದ್ದವನನ್ನು ಆಗಾಗ ಜೋರಾಗಿ ಹಾಡಿದ ಪ್ರಣಯಗೀತೆಗಳು ಎಚ್ಚರಿಸುತ್ತಿದ್ದವು. ನನ್ನ ಅವಸ್ಥೆಯನ್ನು ಕಂಡೂ ಅವಳಿಗೆ ನನ್ನ ಮೇಲೆ ಕನಿಕರ ಬರಲಿಲ್ಲ. ಒಮ್ಮೆಯೂ, ನಿಮಗೆ ಸಿನಿಮಾ ಹಿಡಿಸದಿದ್ದರೆ ಹೋಗುವುದು ಬಿಡೋಣ ಎನ್ನಲಿಲ್ಲ ಮಹಾರಾಯತಿ.

ನಿಧಾನವಾಗಿದ್ದ ನಡಿಗೆಯನ್ನು ಜೋರು ಮಾಡಿದೆ. ಬಸ್ಸು ಬರಲು ಇನ್ನೂ ಸಮಯವಿತ್ತು. ಅಲ್ಲಿ ನಿಂತಿದ್ದ ಹೆಚ್ಚಿನ ಜನ ಒಬ್ಬರಿಗೊಬ್ಬರು ಪರಿಚಿತರಿದ್ದರೂ ದಿನವೂ ಕಾರಿನಲ್ಲಿ ಹೋಗುವ ನನಗೆ ಅವರೆಲ್ಲ ಅಪರಿಚಿತರೇ.

ಅವರಲ್ಲೇ ಒಬ್ಬರು "ನಮಸ್ಕಾರ" ಎಂದರು. "ನಿಮ್ಮ ಸುರೇಶ ನನ್ನ ಕ್ಲಾಸಮೇಟ್. ನಾನು ಆಗಾಗ ನಿಮ್ಮ ಮನೆಗೆ ಬರುತ್ತಿದ್ದೆ. ನೀವು ಮರೆತಿದ್ದೀರಿ"ಎನ್ನುತ್ತ ನಕ್ಕರು. ಒಬ್ಬ ಪರಿಚಯದವರಾದರೂ ಸಿಕ್ಕರಲ್ಲ ಎನ್ನುವ ಸಮಾಧಾನದಿಂದ ಮಾತಿಗೆ ತೊಡಗಿದೆ. ಸುರೇಶನ ಯೋಗಕ್ಷೇಮ ವಿಚಾರಿಸಿದರು. ರಾಂಚಿಯಲ್ಲಿ ಎಂಜಿನಿಯರ ಆಗಿದ್ದ ಸುರೇಶ ವರುಷದ ಹಿಂದೆ ಬಂದಾಗ ಅವನಿಗೂ ಅವನ ಹೆಂಡತಿಗೂ ಸರೂ ತೋರಿದ ಅನಾದರ ಕಂಡು ಈ ಸಲ ಅವನಿಗೆ ಆಮಂತ್ರಣ ಕೊಡುವ ಧೈರ್ಯ ಮಾಡಿರಲಿಲ್ಲ. ನಾನು ಆಗೀಗ ಪತ್ರ ಬರೆಯುತ್ತಿದ್ದ. ನೂರಾರು ಮೈಲು ದೂರದಲ್ಲಿದ್ದರೇನಾಯಿತು? ಅಣ್ಣ ತಮ್ಮಂದಿರು ಸುಳ್ಳೇ? ಕರುಳು ಮಿಡಿಯುತ್ತಿತ್ತು. ಇದನ್ನೆಲ್ಲ ಅವರ ಮುಂದೆ ಹೇಗೆ ಹೇಳುವುದು? "ಬಸ್ಸು ಬಂತು ಸರ್" ಎಂದರು.

ಟೇಬಲ್ಲಿನ ಮೇಲೆ ಕಾಗದಪತ್ರಗಳ ರಾಶಿ ಬಿದ್ದಿತ್ತು. ಕೆಲಸ ಕೈ ಮಾಡಿ ಕರೆಯುತ್ತಿತ್ತು. ಬೆಲ್ ಬಾರಿಸಿ ಒಳಗೆ ಪ್ಯೂನನಿಗೆ ಸ್ಟೆನೋನ್ನ ಕರೆಯಲು ಹೇಳಿ ಕಣ್ಣು ಮುಚ್ಚಿದೆ.

ಹೌದು ನಾನು ಕಾಂತಾಳನ್ನು ಬೇರೆಯವರ ಮುಂದೆ ಎಂದೂ ಹೆಸರು ಹಿಡಿದು ಕರೆಯುವುದಿಲ್ಲ. ಅವಳು ಅದೇ ಹೊಸದಾಗಿ ಕೆಲಸಕ್ಕೆ ಸೇರಿದಾಗಿನ ಮಾತು, ನನ್ನ ಸೆಕ್ರೆಟರಿ ಪಾಟೀಲ ಆರೋಗ್ಯ ಚೆನ್ನಾಗಿಲ್ಲವೆಂದು ಆರು ತಿಂಗಳು ರಜೆ ಹಾಕಿದ್ದ. ಹೆಡ್ ಕ್ಲಾರ್ಕ್ ಅವಳನ್ನು ನನ್ನ ರೂಮಿಗೆ ಕರೆ ತಂದಾಗ ಬೆಚ್ಚಿ ನಾನೇ ಎದ್ದು ನಿಂತೆ. ಅವಳು ಕಣ್ಣೆತ್ತಿ ಸುಮ್ಮನೆ ನನ್ನನ್ನು ನೋಡುತ್ತಿದ್ದಳು ಅಷ್ಟೇ. ಆ ನೋಟದಲ್ಲೇನು ಮೋಡಿಯಿತ್ತೋ, ನಾನು ಏನೂ ಮಾತನಾಡದೆ ಗಂಭೀರವಾಗಿ ಸುಮ್ಮನೆ ಕುಳಿತೆ. ಹೆಡ್‌ಕ್ಲಾರ್ಕ್ ಪರಿಚಯದ ಶಾಸ್ತ್ರ ಮಾಡಿ ಹೊರಗೆ ಹೋದ ಮೇಲೆ ಮೂಕನಾಗಿ ಅವಳಿಗೆ ಕುಳಿತುಕೊಳ್ಳಲು ಸನ್ನೆ ಮಾಡಿದೆ.

"ನನ್ನನ್ನು ಇಲ್ಲಿ ನೋಡಿ ನಿಮಗೆ ಆಶ್ಚರ್ಯ ಆಗೇದ ಅಲ್ಲ ?"

"ಹೌದು, ಆಶ್ಚರ್ಯ ಅಷ್ಟೇ ಇಲ್ಲ, ಗಾಬರಿನೂ ಆಗೇದ. ನಿಮಗೆ ಮದುವೆ ಆಯಿತು. ಅಂತ ಸರೂ ಹೇಳಿದ್ದಳು."

"ಅಂತೂ ನನ್ನ ನೆನಪು ಅದ ನಿಮಗ."

"ನಿಮ್ಮನ್ನು ಮರೆಯೋದು ಎಂದರೆ ಅದು ಹ್ಯಾಂಗೆ ಸಾಧ್ಯ?" ಕಾಂತಾಳ ಮುಖ ಕೆಂಪೇರಿದ್ದನ್ನು ನೋಡಿ ನಾನೇ ಮಾತು ಮುಂದುವರಿಸಿದೆ; "ನನ್ನ ಹೆಂಡತಿಯ ಬಾಲ್ಯದ ಗೆಳತಿ ಅಲ್ಲ ನೀವು ?"

ಸಮಾಧಾನದ ಉಸಿರು ಬಿಟ್ಟು ಕಾಂತಾ ಹೇಳಿದಳು. "ನನ್ನ ಮ್ಯಾಟ್ರಿಕ್ ಮುಗಿದ ಮೇಲೆ ಮದುವೆ ಆಯ್ತು. ಯಜಮಾನರು ಖಾದಿ ಬೋರ್ಡಿನೊಳಗೆ ಕೆಲಸ ಮಾಡ್ತಾರ, ಮಗಳೂ ಹುಟ್ಯಾಳ, ಅವರ ಸಂಬಳ ಸಂಸಾರಕ್ಕ ಸಾಲದು ಅಂತ ನನ್ನ ಈ ಕೆಲಸಕ್ಕೆ ಕಳಿಸಿದರು" ಎಂದಿದ್ದಳಾಕೆ. ಅಂದರೆ ತನ್ನ ಇಷ್ಟದಿಂದಲೇ ದುಡಿಯಲು ಬಂದಿಲ್ಲ ಎಂದು ಅರ್ಥವಾಯಿತು. ಒಂದು ಗಳಿಗೆ ಸಮಾಧಾನವಾಯಿತು. ಅದೇಕೋ ಹೆಣ್ಣುಮಕ್ಕಳು ಹೊರಗೆ ದುಡಿಯಲು ಹೋಗುವದು ನನಗಿಷ್ಟವಿಲ್ಲದ ಮಾತು. ಆದರೆ ಇಲ್ಲಿ ಕಾಂತಾ ತನ್ನ ಗಂಡನ ಇಷ್ಟದಂತೆ ನಡೆಯಬೇಕಲ್ಲ.

"ಟೈಪಿಂಗ್ ಯಾವಾಗ ಕಲಿತಿರಿ?"

"ಕೆಲಸಕ್ಕ ಸೇರಲೇಬೇಕು ಅನ್ನೂ ನಿರ್ಧಾರ ಮಾಡಿದ ಮ್ಯಾಲೆ ಟೈಪಿಂಗ್ ಕಲಿತು ಪರೀಕ್ಷೆಯನ್ನು ಪಾಸಾದೆ."

"ಮಗಳನ್ನು ಯಾರು ನೋಡಿಕೊಳ್ಳೋರು ನೀವಿಬ್ಬರೂ ಕೆಲಸಕ್ಕೆ ಹೋದಾಗ ?"

"ನಮ್ಮ ತಂದಿ ತೀರಿಕೊಂಡ ಮ್ಯಾಲೆ ತಾಯಿ ಇಲ್ಲೇ ಇದ್ದಾರ ನನ್ನ ಹತ್ತಿರ." ಆಯಿತು, ಕೇಳುವ ಪ್ರಶ್ನೆಗಳೆಲ್ಲ ಮುಗಿದುವಲ್ಲ. "ಸರಿ, ಒಂದು ಲೆಟರ ಡಿಕ್ಟೇಟ್ ಮಾಡ್ತೀನಿ ಬರಕೊಳ್ರಿ..."ಎಂದೆ...

"ನಾನು ಸಿದ್ಧವಾಗಿ ಕುಳಿತು ಬಹಳ ಹೊತ್ತಾಯಿತು ಸರ್" ಎಂದಳು ಕಾಂತಾ. ಕಣ್ಣು ತೆರೆದು ನೋಡಿದೆ. ಡಿಕ್ಟೇಶನ್‌ಗೆ ಕಾಂತಾ ಸಿದ್ಧವಾಗಿದ್ದಳು. ಆದರೆ ನಾನು ಸಿದ್ಧನಾಗಿರಲಿಲ್ಲ. ನನ್ನ ಮೌನ ನೋಡಿ "ಯಾಕ ಸಪ್ಪಗಿದ್ದೀರಿ, ಆರಾಮ ಇಲ್ಲೇನು?" ಎಂದಳು ಮೆಲುದನಿಯಲ್ಲಿ, ನನಗಷ್ಟೇ ಕೇಳಿಸುವಂತೆ.

"ಕಾಂತಾ, ನಿನ್ನ ಮಗಳು ಹ್ಯಾಂಗ ಅದಾಳ ? ಜ್ವರಾ ಕಡಿಮಿ ಆಗ್ಯಾವೇನು ?" ಈ ಐದಾರು ತಿಂಗಳ ಅವಧಿಯಲ್ಲಿ ಏಕವಚನದಲ್ಲಿ ಮಾತನಾಡುವಷ್ಟು ಕಾಂತಾ ನನ್ನ ಹತ್ತಿರ ಬಂದಿದ್ದಳು. ಅವಳು ಮುಡಿಯುತ್ತಿದ್ದ ಮಲ್ಲಿಗೆಯ ಪರಿಮಳ ದಿನವೂ ನನ್ನ ಸುತ್ತ ಸುಳಿದಾಡುತ್ತ ಮನಸ್ಸನ್ನು ಪ್ರಸನ್ನಗೊಳಿಸುತ್ತಿತ್ತು.

"ಇವತ್ತ ಆರಾಮ ಇದ್ದಾಳ ವೀಣಾ. ನಾನು ಆಫೀಸಿಗೆ ಬರೂ ಮುಂದ ೧೦೦ ಡಿಗ್ರಿತನಾ ಜ್ವರಾ ಇದ್ದವು." ಕಾಂತಾಳ ಧ್ವನಿಯಲ್ಲಿ ಕೃತಜ್ಞತೆ ತುಂಬಿತ್ತು. "ನಿನ್ನೆ ಬಹಳ ಹೆದರಿಬಿಟ್ಟಿದ್ದೆ" ಎಂದಾಗ ನನ್ನ ಮನಸ್ಸು ನಿನ್ನೆಗೋಡಿತ್ತು. ಹಿಂದಿನ ದಿನ ಕಾಂತಾ ಫೈಲು ಹಿಡಿದು ನನ್ನ ಹತ್ತಿರ ಬಂದಾಗ ಅವಳ ಕಣ್ಣು ನೋಡಿಯೇ ತಿಳಿದುಕೊಂಡೆ - ಅವಳು ದಿನದಂತೆ ಇಲ್ಲವೆನ್ನುವದು. ಅವಳು ಟೇಬಲ್ಲಿನ ಹತ್ತಿರ ಬಂದಾಗ ನನಗೆ ತಡೆಯುವದಾಗಲಿಲ್ಲ. ಉದ್ವೇಗದಿಂದ ಅವಳ ಕೈ ಹಿಡಿದು ಕಾರಣ ಕೇಳಿದೆ.

"ನನ್ನ ವೀಣಾಗ ಜ್ವರಾ ಬಹಾಳ ಬಂದಾವ. ನಾನು ಬರೂಮುಂದ 'ಅವ್ವಾ ಅವ್ವಾ' ಅಂತ ಕರೀತಿದ್ದಳು. ಆಕಿನ್ನ ಬಿಡಲಾರದ ಬಿಟ್ಟು ಆಫೀಸಿಗೆ ಬಂದೆ."

"ನಿನ್ನ ಯಜಮಾನರು ಊರೊಳಗ ಇಲ್ಲೇನು ?"

"ಇಲ್ಲಾ, ಅವರು ಟೂರಿಗೆ ಹೋಗಿ ಮೂರು ನಾಲ್ಕು ದಿವಸಾದವು. ತಾಯಿ ಒಬ್ಬಾಕೀನ ಇದ್ದಾಳ ಮನಿಯೊಳಗ, ವೀಣಾನ ಮುಖಾನಃ ಕಣ್ಣಮುಂದ ಕಟ್ಟಿದಾಂಗ ಆಗೇದ" ಕಣ್ಣಿನಿಂದ ಪಟಪಟನೆ ಹನಿ ಉದುರಿದವು. ನನಗೆ ಬೇಸರವಾಯಿತು.

"ರಜಾ ಹಾಕಿ ಮನಿಯೊಳಗ ಇರಬೇಕಾಗಿತ್ತು. ಅವಳನ್ನ ಯಾಕ ಬಿಟ್ಟು ಬಂದಿ ?" ಎಂದೆ.

"ಹೋದ ತಿಂಗಳು ಅವ್ವನ ಕಾಲಿಗೆ ನೋವಾತು ಅಂತ ರಜಾ ತೊಗೊಂಡೆ. ನನ್ನ ರಜಾ ಎಲ್ಲಾ ತೀರಿ ಹೋಗ್ಯಾವ" ಕಾಂತಾ ಬಿಕ್ಕಿದಳು.

"ಇರಲಿ, ಈಗ ಮನೆಗೆ ಹೋಗು, ಇವತ್ತಿನ ಕೆಲಸಾ ನಾನು ಮಾಡಿಸಿಕೋತೀನಿ. ನಾಳೆ ವೀಣಾಗೆ ಆರಾಮ ಇದ್ದರ ಮಾತ್ರ ಆಫೀಸಿಗೆ ಬಾ" ಎಂದೆ. ಅಳುತ್ತ ಬಗ್ಗಿದ್ದ ಅವಳ ತಲೆ ನೇವರಿಸಿದ್ದೆ.

ಇಂದು ಅವಳೇ ಖುಷಿಯಿಂದ ಮಗಳು ಚೆನ್ನಾಗಿದ್ದಾಳೆಂದು ಹೇಳುವವರೆಗೆ ನನ್ನ ಮನಸ್ಸು ತಳಮಳಿಸುತ್ತಿತ್ತು. ಅವಳು ನನಗೇನೂ ಆಗಬಾರದು. ಹೊರಿಗನವರ ಕಣ್ಣಿಗೆ ಅವಳೊಬ್ಬ ಟೈಪಿಸ್ಟು ಅಷ್ಟೆ. ಆದರೂ ಅವಳ ಸಣ್ಣ ದುಃಖಕ್ಕೆ ನನ್ನ ಮನ ಆಳುತ್ತಿತ್ತು. ಇದಾವ ಜನ್ಮದ ನಂಟೋ ದೇವರಿಗೆ ಗೊತ್ತು.

"ಸರ್" ಎಂದಳು ಕಾಂತಾ ಮತ್ತೆ. ಯಾಕೆ ಎನ್ನುವಂತೆ ಹುಬ್ಬೆತ್ತಿದೆ.

"ನಿಮಗೆ ಆರಾಮ ಇದ್ದಾಂಗ ಕಾಣೂದಿಲ್ಲ. ಜ್ವರಾ ಗಿರಾ ಬಂದಾವೇನು ? ಮುಕಾ ಬಾಡೇದ."

"ಇಲ್ಲಾ ಏನಿಲ್ಲಾ ಆರಾಮ ಇದ್ದೀನಿ. ಬಿಸಲಾಗ ಬಸ್ಸಿಗೆ ಕ್ಯೂ ನಿಂತು ಬಂದೆ. ಅದಕ್ಕ ಹಾಂಗ ಅನಿಸೇದ ನಿನಗ."

"ತಡೀರಿ ಕಾಫಿ ಹೇಳ್ತೀನಿ" ಹೊರಗೆ ಹೋದಳು ಕಾಂತಾ. ಅವಳ ಧ್ವನಿಯಲ್ಲಿ ಪ್ರೀತಿ ಅನುಕಂಪ, ಆತ್ಮೀಯತೆ ಎಲ್ಲವೂ ಇದ್ದವು. ನನಗೆ ತಲೆ ನೋವೇನೋ ಹಿಂದಿನ ದಿನ ರಾತ್ರಿಯಿಂದಲೇ ಸುರುವಾಗಿತ್ತು. ಸರೂನ ಗೊರಕೆಯಿಂದ ಬೇಗ ನಿದ್ದೆಯೂ ಬಂದಿರಲಿಲ್ಲ.

ಬಾಗಿಲು ಕಿರ್ರೆಂದಿತು. ಆಳು ಕಾಫಿಯೊಡನೆ ಎರಡು ಅನಾಸಿನ್ ಗುಳಿಗೆ ತಂದಿಟ್ಟು ಹೋದ. ಹಿಂದಿನಿಂದ ಕಾಂತಾ ಬಂದಳು. ಅವಳು ಬರುವುದನ್ನು ನೋಡುತ್ತಿದ್ದರೂ ಮನಸ್ಸು ಬೇರೇನೋ ಯೋಚಿಸುತ್ತಿತ್ತು. ಇವಳು ಹೊರಗಿನಿಂದ ಬರಲು ನನ್ನನ್ನು ಬಿಟ್ಟು ಯಾವಾಗ ಹೋಗಿದ್ದಳು. ಯಾವಾಗಲೂ ನನ್ನಲ್ಲೇ ಇರುವವಳು ಹೊರಗೆ ಹೇಗೆ ಬಂದಳು. ಭುಜ ಹಿಡಿದು ಕೈ ಅಲುಗಿಸಿದಂತಾಯಿತು. ಮುಖವೆತ್ತಿದೆ. ಅದೆ ಪರಿಚಿತ ಮುಖ. ಎರಡು ಗುಳಿಗೆ ಅಂಗೈಯಲ್ಲಿಟ್ಟು ಮುಂದೆ ಮಾಡಿದಳು. ನುಂಗಿದೆ. ಕಾಫೀ ಕಪ್ ಬಾಯಿಗೆ ಹಿಡಿದಳು. ಅವಳ ಕೈ ಹಿಡಿದುಕೊಂಡೇ ಗುಟುಕರಿಸಿದೆ. ಗುಟುಕು ಹೊಟ್ಟೆಗೆ ಇಳಿದಂತೆ ಮನಸ್ಸು ತುಂಬಿ ಬಂದಿತು. ಎರಡು ಹನಿ ಕಣ್ಣೀರು ಕಾಫಿ ಕಪ್ಪಿಗೆ ಉರುಳಿದವು. 'ಸರ್' ಎಂದು ನನ್ನ ತಲೆಗೂದಲಮೇಲೆ ಕೈಯಾಡಿಸಿ ಹಣೆ ಸವರಿದಳು ಕಾಂತಾ. ಹಾಯೆನಿಸಿತು. ಅದುವರೆಗೆ ಮನದಲ್ಲಿ ಕುದಿಯುತ್ತಿದ್ದ ಕಹಿಯನ್ನು ಹೊರಗೆ ಹಾಕಿದೆ.

"ಕಾಂತಾ, ನನಗೆ ಇಲ್ಲಿಂದ ವರ್ಗ ಆಗೂ ಸಂಭವ ಅದ." ಕಾಂತಾ ಏನೂ ಉತ್ತರ ಕೊಡಲಿಲ್ಲ. "ನನಗೆ ಪ್ರಮೋಶನ್ ಕೊಡತಾರಂತ" ಎಂದೆ.

"ಸಂತೋಷ"

"ಯಾಕ ನಾನು ಹೋಗೋದು ನಿನಗ ಸಂತೋಷ ಆಯ್ತೇನು?" ಆಗಲೂ ಅವಳಿಂದ ಉತ್ತರ ಬರಲಿಲ್ಲ. ಸುಮ್ಮನೆ ಮುಖವೆತ್ತಿ ನೋಡಿದಳು ಅಷ್ಟೆ. ಕಣ್ಣು ತುಂಬಿ ಹನಿ ಹೊರಗ ಉರುಳುತ್ತಿತ್ತು. "ಕಾಂತಾ, ಈ ಮಾತು ನಿನಗೆ ಸಂತೋಷ ಕೋಡೋದಿಲ್ಲ ಅನ್ನೂದು ನನಗ ಗೊತ್ತ ಇತ್ತು. ಆದರೂ ನನಗಾದ ದುಃಖದಿಂದ ಹೀಗೆ ಮಾತಾಡಿದೆ. ಕ್ಷಮಿಸು ನನ್ನ. ಆದರ ನಾವೀಗ ಅಗಲತೀವಿ ಅಂತ ನೀನು ಅಳಬಾರದು. ಖರೇನ ಹೇಳಬೇಕಂದರ ನಮ್ಮ ಲಗ್ನದಾಗ ಸರೂ ಮೊದಲನೇ ಸಾರಿ ನಿನ್ನ ನನಗ ಗುರ್ತಾ ಮಾಡಿಕೊಟ್ಟ ದಿನಾನs ನೀನು ನನಗ ಆತ್ಮೀಯಳಾದಿ. ಇದು ಬರೇ ಮ್ಯಾಲಿನ ಮಾತಲ್ಲ. ಆತ್ಮೀಯ ಅಂದರ ನನ್ನ ಆತ್ಮಕ್ಕೆ ಅಷ್ಟು ಸಮೀಪದವಳಾದಿ. ಆವಾಗಿನಿಂದ ನೀನು ಇಲ್ಲಿಗೆ ಬರೂವರೆಗೂ ನಾನು ನಿನ್ನ ಮರೆತಿದ್ದೇ ಇಲ್ಲ."

"ನಿನ್ನಲ್ಲಿ ಏನು ನೋಡಿ ಇಷ್ಟು ನನ್ನ ಹಚ್ಚಕೊಂಡಿರಿ?"

"ನೀನು ಸರೂನಷ್ಟು ಚಂದ ಇಲ್ಲದಿದ್ರೂ, ನಿನ್ನ ಕಣ್ಣೊಳಗಿನ ಒಂದು ಶಕ್ತಿ ನನ್ನನ್ನ ಆಕರ್ಷಿಸಿತು. ನನ್ನದೇ ಒಂದು ಭಾಗ ನೀನು ಅಂತ ನನ್ನ ಮನಸ್ಸಿಗೆ ಗಟ್ಟಿಮಾಡಿಕೊಂಡೇನಿ. ನೀ ಇಲ್ಲಿ ಬಂದಾಗಿನಿಂದ ನಿನ್ನ ಹೆಜ್ಜಿ ಸಪ್ಪಳ, ನಿನ್ನ ಬಳೆಯ ಕಿಣಿ ಕಿಣಿನಾದ, ನಿನ್ನ ಧ್ವನಿ ಎಲ್ಲಾನು ಇಲ್ಲೇ ನನ್ನ ಮೈಯೊಳಗ, ನನ್ನ ಮನಸ್ಸಿನೊಳಗ ಬೇರೂರಿಬಿಟ್ಟಾವ, ಅದು ಎಷ್ಟು ಆಳವಾಗಿ ಬೇರೂರೇದ ಅಂದರ, ನೀನು ಪ್ರತ್ಯಕ್ಷ ಇಲ್ಲದಿದ್ದರೂ ನಡೀತದ" ಬಡಬಡ ಎಲ್ಲ ಮಾತುಗಳನ್ನು ಹೇಳಿ ಬೆವರೊರೆಸಿಕೊಂಡೆ.

ಕಾಂತಾ ಕಣ್ಣೊರೆಸುತ್ತ ಕಪ್ಪು ಜಡೆ ಅತ್ತಿತ್ತ ಹೊಯ್ದಾಡುವಂತೆ ಬಳಕುತ್ತ ಅವಸರದಿಂದ ನಡೆದು ಹೊರಗೆ ಹೋದಳು.

ಆಫೀಸಿನಿಂದ ಮನೆಗೆ ಬರುವಾಗ ತಲೆನೋವು ಪೂರ್ತಿ ಮರೆಯಾಗಿತ್ತು ಗೇಟಿಗೆ ಬಂದೆ. ಬಾಗಿಲಲ್ಲಿ ಸರೂ ನಿಂತಿದ್ದಳು. ಅಡಿಯಿಂದ ಮುಡಿಯವರೆಗೆ ಅಲಂಕಾರ ಮಾಡಿಕೊಂಡು ಅಪರಿಚಿತನಂತೆ ಅವಳನ್ನೇ ದಿಟ್ಟಿಸಿದೆ.

"ಗುರ್ತ ಹತ್ತವೊಲ್ಲದು, ಮರೆತು ಬ್ಯಾರೆ ಯಾರದರೆ ಮನೀಗೆ ಬಂದಿನೇನು ? ಸದಾನಂದ ಕುಲಕರ್ಣಿಯವರು ಮನೀ ಇದ ಹೌದೇನು?"

"ನಿಮ್ಮದೊಂದು ಚ್ಯಾಷ್ಟೀನ. ಸಿನಿಮಾಕ್ಕ ಹೊತ್ತಾಗ್ತದ. ನಡೀರಿನ್ನ ತಯಾರಾಗರಿ ಲಗೂನ" ಒಳಗೆ ನಡೆದಳು ಸರೂ.

ನಾನು ಕುರಿಯಂತೆ ಹಿಂಬಾಲಿಸಿದೆ.

***

ಬೆಳಗಿನ ಸೂರ್ಯಕಿರಣಗಳು ಅದೇ ತಾನೆ ಮನೆಯ ಮುಂದಿನ ಅಂಗಳವನ್ನು ತುಂಬುತ್ತಿದ್ದವು. ಚಹಾ ಕುಡಿದು ಪಾರಿಜಾತ ಗಿಡದ ಕೆಳಗೆ ಬೆತ್ತದ ಕುರ್ಚಿ ಹಾಕಿ ಕುಳಿತುಕೊಂಡೆ. ಕಂಪೌಂಡಿನಲ್ಲಿಯ ಗಿಡಗಂಟಿಯ ಮೇಲೆಲ್ಲ ಹೊಂಗಿರಣಗಳು ಮೂಡಿ ಫಲಿಸುತ್ತಿದ್ದವು. ಅರಳಿದ ಪಾರಿಜಾತ ಹೂವು ಒಂದೊಂದಾಗಿ ಗಿಡದಿಂದ ಉದುರಿ ಉದುರಿ ನೆಲದ ಮೇಲೂ ಹರಡುತ್ತಿದ್ದವು. ವಿಶ್ರಾಂತಿವೇತನ ಪಡೆಯುತ್ತ, ಮಾಡಲು ಏನೂ ಕೆಲಸವಿಲ್ಲದೆ ಸೋಮಾರಿಯಂತೆ ಕುಳಿತಿದ್ದ ನನ್ನನ್ನೂ ಚೇತರಿಸಿತು. ಆ ಆಹ್ಲಾದಕರ ವಾತಾವರಣ. ನನ್ನ ಉಡಿಯ ಮೇಲೆಯೇ ಬಿದ್ದ ಪಾರಿಜಾತವನ್ನೆತ್ತಿ ಮೂಗಿಗೊಯ್ದೆ. ಎಲ್ಲೋ ಸ್ವಲ್ಪ ಕಂಪು, ಮೃದುವಾದ ಪಕಳೆಗಳು, ಹವಳದ ಬಣ್ಣದ ದೇಟು ನೋಡಲು ಆಕರ್ಷಕ, ಸುಂದರ. ಆದರೂ ಕಂಪು ಬೀರದ ಈ ಸೌಂದರ್ಯ ಕ್ಷಣಿಕ. ಬಿದ್ದು ಹರಡಿದ ಈ ಹೂವುಗಳು ಇನ್ನೊಂದು ತಾಸಿನಲ್ಲಿ ಬಾಡಿ ಹುಡುಗೂಡಿ ಹೋಗುವವು. ಕೈಯಲ್ಲಿದ್ದ ಪಾರಿಜಾತವನ್ನು ಹಾಗೆಯೇ ತಿರುಗಿಸುತ್ತಿದ್ದೆ.

"ನೀರು ಕಾಯ್ದು ಆರಿ ಹೋಗ್ತಾವ. ಇನ್ನು ನಿಮ್ಮ ಅಜ್ಜಗ ಸ್ನಾನಕ್ಕ ಏಳೂಂತ ಹೇಳೋ ರವೀ" ಸರೂ ಒಳಗಿಂದ ಕೂಗಿದಳು. ಅಡಿಗೆಮನೆಯಿಂದ ಕೋಣೆಯಲ್ಲಿದ್ದ ರವಿಗೆ ಹೇಳಿದ. ಅವಳ ಮಾತು ಅಂಗಳದಲ್ಲಿದ್ದ ನನ್ನನ್ನು ಸಹಜವಾಗಿ ಸೇರಿತ್ತು. ಅವಳ ಗಂಟಲು ಅಷ್ಟು ದೊಡ್ಡದು. ಇಷ್ಟು ಬೇಗ ಸ್ನಾನ ಮಾಡಲು ಮನ ಒಪ್ಪದೆ ನಾನು ಕುಳಿತ ಕುರ್ಚಿಯಲ್ಲಿಯೇ ಮಿಸುಕಾಡಿದೆ. ಆ ಸುಂದರವಾದ ಅಂಗಳದಲ್ಲಿದ್ದ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟು ಮನೆಯ ಗೋಡೆಗಳ ಒಳಗೆ ಬಂಧಿತನಾಗುವುದು ನನಗೆ ಆಗ ಇಷ್ಟವಿರಲೂ ಇಲ್ಲ. ಕೇಳಲು ಬಂದ ರವಿಗೆ ಅದನ್ನೇ ಹೇಳಿದೆ. ಅವನು ಒಳಗೆ ಹೋಗಿ ಅಜ್ಜಿಗೆ ವರದಿ ಒಪ್ಪಿಸಿದ.

"ನಿನಗ ಗೊತ್ತ ಆದ, ಸ್ನಾನಾ, ದೇವರ ಪೂಜಿ ಅಂದರ ಅವರಿಗೆ ಅಷ್ಟಪ್ರೀತಿ. ಇಷ್ಟು ವರ್ಷ ಸಂಸಾರ ಮಾಡಿದರೂ ಒಂದು ದಿನಾನೂ ಮನಸಾ ದೇವರ ಪೂಜಿ ಮಾಡಲಿಲ್ಲ ಅವರು. ಶಕೂ, ನನ್ನದು, ನಿನ್ನದು ಸ್ನಾನ ಆಗೇದ ಅಂತ ಹೇಳಿ ವಿಜಯನ್ನsರೇ ಎಬ್ಬಿಸು. ಅವನಿಗೆ ಆಫೀಸಿಗೆ ಹೊತ್ತಾಗತದ. ಚಹಾ ಕುಡಿದು ಸ್ನಾನಾ ಊಟ ಮಾಡಲಿ. ಅವರಿಗೇನು ಕೆಲಸ ಇಲ್ಲಾ, ಬೊಗಸಿ ಇಲ್ಲಾ ಕೂತಿರವಲ್ಲರ‍್ಯಾಕ ಇನ್ನಷ್ಟು ಹೊತ್ತು ಹಾದ್ಯಾಗ ಹೋಗೋವರನ್ನ ಬರವರನ್ನ ನೋಡಿಕೋತ." ಇದೆಲ್ಲವೂ ನನಗೆ ಕೇಳಿಸಿತ್ತು. ಇಂಥ ಮಾತು ನನ್ನ ಕಿವಿಗಳಿಗೆ ರೂಢಿಯೂ ಆಗಿತ್ತು. ಅತ್ತೆಯ ಪೂರ್ಣವಿರಾಮವಿಲ್ಲದ ಮಾತು ಶಕೂಗೂ ಅಭ್ಯಾಸವಾಗಿರಬೇಕು. ಅವಳ ಮಾತಿನ ನಡುವೆ ಎರಡು ಸಲ ಆಡಿದ ಶಕೂನ ಮೆತ್ತಗಿನ ಮಾತು ಅವಳ ಕಿವಿಗೆ ಬೀಳದೆ ಹೋಯಿತು.

"ಅವರು ಲಗೂನ ಎದ್ದು ಚಹಾ ಕುಡಿದು ಸ್ಟೇಶನ್ನಿಗೆ ಹೋಗ್ಯಾರ. ಯಾರೋ ಗೆಳೆಯರು ಊರಿಗೆ ಹೋಗುತ್ತಿದ್ದರಂತೆ. ಅವರನ್ನು ಕಳಿಸಲಿಕ್ಕೆ ಹೋಗ್ಯಾರ" ಕೊನೆಗೊಮ್ಮೆ ಶಕೂ ವಿಜಯ ಸ್ನಾನಕ್ಕೆ ಬಾರದ ಕಾರಣ ಹೇಳಿದಳು.

"ಅಯ್ಯ, ಆವಾಗಿನಿಂದ ವಿಜಯನ್ನ ಕರಿ, ವಿಜಯನ್ನ ಕರಿ ಅಂದs ಅಂತೇನಿ. ನೀನರೆ ಹೇಳಬಾರದ ಮನ್ಯಾಗಿಲ್ಲ ಅಂತ. ಸುಮ್ಮನ ಅದೀಯಲ್ಲ" ಸೊಸೆಯೊಡನೆ ಮಾತು ಮುಂದುವರೆಯಿತು. ವಿಜಯ ಹುಟ್ಟಿ ಸ್ವಲ್ಪ

ದೊಡ್ಡವನಾಗುವವರೆಗೆ ಸರೂನ ಮಾತಿಗೆ ಏಕಮಾತ್ರ ಗುರಿ ನಾನೇ ಆಗಿದ್ದೆ. ಅದೇ ದಿನಗಳಲ್ಲಿ ನಾನು ಹೆಚ್ಚು ಹೊತ್ತು ಆಫೀಸಿನಲ್ಲಿ ಕೆಲಸ ಮಾಡಿ ದಕ್ಷ ಕೆಲಸಗಾರ ಅನ್ನಿಸಿಕೊಂಡೆ. ಸಾಕಷ್ಟು ಪರಿಚಿತರನ್ನು, ಗೆಳೆಯರನ್ನು ಸಂಪಾದಿಸಿಕೊಂಡೆ. ಅವಳ ಬಾಯಿಗೆ ನಾನಾಗ ತುಂಬಾ ಹೆದರುತ್ತಿದ್ದೆ. ಆದರೆ ಈಗ ಅವಳ ಗಂಟಲು ಎಷ್ಟೇ ದೊಡ್ಡದಾದರೂ ತಮಾಷೆ ಮಾಡಿಕೊಂಡಿರುತ್ತೇನೆ. ಮನೆಯಲ್ಲಿ ವಿಜಯ, ಶಕೂ, ರವಿ ಇದ್ದಾರೆ. ಅವಳ ಮಾತಿಗೆ ಪ್ರತ್ಯುತ್ತರ ಕೊಡುತ್ತಾರೆ. ಹೂಂಗುಟ್ಟುತ್ತಾರೆ. ನನ್ನ ಮನಸ್ಸಿಗೆ, ಕಿವಿಗೆ ಎಷ್ಟೋಮಟ್ಟಿಗೆ ವಿರಾಮ ಸಿಕ್ಕು ಹಾಯಾಗಿದ್ದೇನೆ. ಮನೆಯಲ್ಲೇ ಇದ್ದು ನನ್ನ ಸ್ವಂತ ಮನೆಯ ಮುಂದಿನ ಕೈತೋಟದಲ್ಲಿ ಕೆಲಸ ಮಾಡಲು, ಬಾರದ ಮೊಮ್ಮಗಳೊಡನೆ ಆಟವಾಡಲು ಇಚ್ಛಿಸುತ್ತೇನೆ. ಒಟ್ಟಾರೆ ಹೋಮ್‌ಸಿಕ್ ಆಗಿದ್ದೇನೆ. ಆದರೆ ನನ್ನ ಸ್ನೇಹಿತರು ಹೇಳಿಕೊಳ್ಳುವದೇ ಬೇರೆ. ಸದಾನಂದ ನಿವೃತ್ತಿ ಪಡೆದ ಮೇಲೆ ಬದುಕಿನಲ್ಲಿ ನಿರಾಶೆಗೊಂಡು ತತ್ತ್ವಜ್ಞಾನಿಯಾಗಿದ್ದಾನೆ ಎಂದೆಲ್ಲ ಹೇಳ್ತಾರೆ. ಆದರೆ ಅದೆಲ್ಲ ಶುದ್ಧ ಸುಳ್ಳು. ನಾನು ಈಗಲೇ ಬದುಕನ್ನು ಚೆನ್ನಾಗಿ ಪ್ರೀತಿಸುತ್ತಿದ್ದೇನೆ. ಹೀಗೆ ಶಾಂತವಾಗಿ ಯಾವ ಚಿಂತೆಯೂ ಇಲ್ಲದೆ, ಕಣ್ಣುಮುಚ್ಚಿಕೊಂಡು ಗಿಡದ ಕೆಳಗೆ ಕಳೆದು ಹೋದ ಜೀವನದ ನೆನಹುಗಳನ್ನು ಜ್ಞಾಪಿಸಿಕೊಳ್ಳುತ್ತ, ವೇಳೆ ಕಳೆಯುತ್ತಿದ್ದರೆ, ಹೊತ್ತು ಕಳೆದದ್ದೇ ಗೊತ್ತಾಗುವುದಿಲ್ಲ.

"ಏನ್ರೀ ಖುರ್ಚಿಯ ಮ್ಯಾಲೆ ಕೂತು ನಿದ್ದೀ ಮಾಡ್ತೀರಿ. ಪೇಪರು ಎದಿ ಮ್ಯಾಲೆ ಇಟಕೊಂಡು ನಿದ್ದಿ ಮಾಡೂ ಬದಲೀ ಇನ್ನಷ್ಟು ಹಾಸಿಗಿಯೊಳಗ ಮಲಗಿರಬೇಕಾಗಿತ್ತು. ನಿಮ್ಮದರೇ ಏನು ಕೆಲಸದ ಈಗ." ಸರೂ ಹತ್ತಿರವೇ ಬಂದು ನಿಂತಿದ್ದಳೀಗ. ನನ್ನ ಕಿವಿಯಲ್ಲಿ ಕಹಳೆಯೂದಿದಂತಾಯಿತು. ನೆನಪಿನ ಹಕ್ಕಿಗಳೆಲ್ಲ ಹಾರಿಹೋದವು. ಇಂತ ಬೇಟೆಗಾರ ಸನಿಹದಲ್ಲಿದ್ದಾಗ ಅವು ತಿರುಗಿ ಬರುವುದೂ ಸಾಧ್ಯವಿರಲಿಲ್ಲ.

"ಹೊತ್ತು ಬಾಳ ಆತೇನು?" ಏನಾದರೂ ಮಾತನಾಡಬೇಕೆಂದು ಕೇಳಿದೆ.

"ಹೂಂ. ಹನ್ನೊಂದು ಹೊಡೀಲಿಕ್ಕೆ ಬಂತು. ಲಗೂನ ಸ್ನಾನಾ, ಪೂಜಿ, ಊಟ ಮುಗಿಸಿದರ ನಾವೂ ಸ್ವಲ್ಪ ಹೊತ್ತು ವಿಶ್ರಾಂತಿ ತೋಗೋತೀವಿ. ಸಂಜೀಮುಂದ ನಾನು, ಶಕೂ ಸಿನಿಮಾಕ್ಕ ಹೋಗ್ತೀವಿ. ರವಿ, ಪಾಪೂನೂ ಬರ್‍ತಾರ, ಕುಕ್ಕರ ಇಟ್ಟ ಹೋಗ್ತೀವಿ. ನೀವ ಇಳಿಸಿ ಬಿಡ್ರಿ. ವಿಜಯ ಎಲ್ಲೋ ಡಿನ್ನರಿಗೆ ಹೋಗ್ತಾನಂತ."

"ಹೋದ ವಾರ ಯಾವ ಸಿನಿಮಾಕ್ಕ ಹೋಗಿದ್ರಿ ಮತ್ತ...."

"ಹೌದ್ರಿ ಮಾರಾಯ್ರ ಹೋಗಿದ್ದಿ. ಈಗ ಹೊಸಾದು ಬಂದದ. ಛಂದದ ಅಂತ. ವಿಮರ್ಶಾನೂ ಓಕೆ. ಹೇಳ್ಯಾಳ ಶಕೂ, ಅದಕ್ಕ ಹೋಗ್ತೀನಿ, ನಿಮಗೊಂದು ನೋಡೂ ಆಸೆ ಇರದಿದ್ರ ಬಿಡ್ರಿ, ನಾವಾದ್ರೂ ಹೋಗ್ತೀವಿ."

"ಹೋಗಿ ಬರ್ರಿ, ಬೇಕುಶಾಲ್ ಹೋಗಿಬರ್ರಿ, ನಾ ಯಾವಾಗ ಬ್ಯಾಡ ಅಂದೇನಿ" ಸ್ನಾನದ ಕೋಣೆಯತ್ತ ಹೋಗುತ್ತಲೇ ಹೇಳಿದೆ. ಇಷ್ಟು ವರ್ಷಗಳು ಕಳೆದರೂ ಸರೂನ ಸಿನಿಮಾದ ಹುಚ್ಚು ಇನ್ನೂ ಹಚ್ಚ ಹಸುರಾಗಿತ್ತು. ಈಗ ಮಗ ಸೊಸೆಯರ ಬೆಂಬಲ ಬೇರೆ. ಇಷ್ಟು ದೀರ್ಘಾವ ಧಿಯ ನಂತರವೂ ಅವಳು ಇದ್ದಲ್ಲಿಯೇ ಇದ್ದಳು. ಅವಳನ್ನೂ ಜೊತೆಗೆ ಕರೆದುಕೊಂಡು ಮುನ್ನುಗ್ಗಬೇಕೆಂಬ ನನಗೆ ಯಶ ಸಿಕ್ಕಿರಲಿಲ್ಲ. ಕೊನೆಗೆ ನಿರ್ವಾಹವಿಲ್ಲದೆ ಒಬ್ಬಂಟಿಗನಾಗಿ ಮುಂದುವರೆದಿದ್ದೆ. ಆಂತರಿಕವಾಗಿ ಎಷ್ಟೇ ಹೋರಾಟ ನಡೆಸಿದರೂ ಹೊರಗಿನ ಬದುಕಿನಲ್ಲಿ ಒಳ್ಳೆಯ ಪತಿಯಾಗಿರಲು ಶ್ರಮಪಟ್ಟು ಸಾಧಿಸಿದ್ದೆ. ಎಷ್ಟೇ ಕಠಿಣಪ್ರಸಂಗದಲ್ಲಿಯೂ ತಾಳ್ಮೆ ಸಂಯಮ ತಂದುಕೊಂಡಿದ್ದೆ. ಹೊರಗೆ ನೋಡುವವರ ಕಣ್ಣಿಗೆ ಆದರ್ಶ ಸಂಸಾರವೆನ್ನುವಂತೆ ನಡೆದುಕೊಂಡಿದ್ದೆ. ಅಧಿಕಾರ, ಅಂತಸ್ತು, ಆಸ್ತಿ ಮಕ್ಕಳು ನೆಮ್ಮದಿಯ ಜೀವನ ಎಲ್ಲವೂ ಇತ್ತು ನನಗೆ. ಒಳಗೆ ಆಂತರಿಕವಾಗಿ ನಾನು ಪ್ರೀತಿಸುವ ವ್ಯಕ್ತಿಯ ಪ್ರೇಮದ ಬೆಂಬಲವಿತ್ತು. ಒಟ್ಟಿನಲ್ಲಿ ಎಲ್ಲವೂ ಬಹಳ ಸುಂದರವಾಗಿತ್ತು. ದೇವರ ಕೋಣೆಯಲ್ಲಿ ಘಂಟಾನಾದ ಅಂತರ್ಮಥನ ನಡೆಯುತ್ತಿತ್ತು.

"ಅದೇನೋ ಇವತ್ತು ಎಷ್ಟು ಹೊತ್ತು ಪೂಜಿ ಮಾಡ್ತೀರಲ್ರಿ. ಯಾವ ದೇವರು ಬುದ್ಧಿ ಕೊಟ್ಟಾ. ಈಗೇನು ಪ್ರಮೋಶನ್ ಇಲ್ಲಾ, ಗಿಮೋಶನ್ ಇಲ್ಲಾ. ಅಂದಮ್ಯಾಲೆ ಇಷ್ಟೊತ್ತ್ಯಾಕೆ ದೇವರು ಧ್ಯಾನಾ ಅಂತೀನಿ" ಸರೂ ತನ್ನ ಕತ್ತಿವರಸೆ ತೋರಿಸಿದಳು. ಪ್ರಮೋಶನ್‌ಗಾಗಿ ದೇವರ ಪೂಜೆ ಮಾಡುವವನು ನಾನು ಅಲ್ಲ ಅನ್ನೋದನ್ನ ನನ್ನ ಹೆಂಡತಿಯೇ ತಿಳಿದುಕೊಂಡಿರದಿದ್ದುದಕ್ಕೆ ಮನಸ್ಸಿಗೆ ವ್ಯಥೆಯಾಯಿತು. ಸುಮ್ಮನೆ ಎದ್ದು ಊಟದ ಮನೆಗೆ ಬಂದೆ.

"ಚಪಾತಿ ಜೋಡಿ ಮಡಕಿಕಾಳು ಉಸಳಿ ರುಚಿ ಆಗೂದಿಲ್ಲಾ ಅಂತ ಎಷ್ಟು ಸಾರೆ ಹೇಳತೇನಿ ಮತ್ತೂ ಅದನ್ನ ಮಾಡ್ತೀಯಲ್ಲ" ಧ್ವನಿಯನ್ನು ಎಷ್ಟು ಹಿಡಿತದಲ್ಲಿಟ್ಟುಕೊಳ್ಳಬೇಕೆಂದರೂ ಕಾವು ಏರಿತ್ತು.

ನಿಮಗೆ ಸೇರತಿರಲಿಕ್ಕಿಲ್ಲಾ, ನಮಗ ಸೇರತದ ಅಂತ ಮಾಡಿದೆ, ಬೇಕಾದರ ಊಟಾ ಮಾಡಿರಿ. ಬ್ಯಾಡಾದರ ಮೊಸರು ಚಟ್ನಿ ಹಾಕ್ಕೊಂಡು ತಿನ್ರಿ" ದನಿಯಲ್ಲಿ ಅಸಡ್ಡೆಯಿತ್ತು.

"ನೀ ಮಾಡಿದ್ದು ಊಟಾ ಮಾಡೂದಂತೂ ಅದs ಅದ. ಇಷ್ಟು ವರ್ಷಾತು, ನನಗ ಯಾವದು ಪ್ರೀತಿ ಯಾವದು ಇಲ್ಲಾ ಅನ್ನೂದು ಎಂದsರೆ ಕೇಳಿ ಏನು ನೀನು ?"

"ಹೌದು, ಹೌದು, ನಿಮಗ ಬೇಕಾದ್ದ ಆಗಬೇಕು ಎಲ್ಲಾ. ನಮ್ಮ ರುಚಿಗೆ, ಆಸೇಕ ಬೆಲೇನ ಏನೂ ಇಲ್ಲಾ. ನಿಮಗೇನು ಮನ್ಯಾಗ ಸಿಗದಿದ್ದರ ಹೊರಗ ಹೋಟಲ್ಲಿನಾಗರೆ ತಿಂದು ಬರ್ತೀರಿ. ನಮಗೆಲ್ಲಿ ಅದ ಅಷ್ಟು ಸ್ವಾತಂತ್ರ್ಯ. ಒಂದು ಮನಿ ಯಜಮಾನಿ ಆಗಿ, ಸೊಸಿ ಬಂದು ಮೊಮ್ಮಕ್ಕಳನ್ನು ಕಂಡರೂ ನನಗ ಬೇಕಾದ್ದು ಅಡಿಗಿ ಮಾಡೂ ಸ್ವಾತಂತ್ರ್ಯಾನ ಇಲ್ಲಾ; ಖೋಡಿ ಹೆಣ್ಣಿನ ಜನ್ಮಾನs ಇಷ್ಟು" ಸರೂ ಮುಖಕ್ಕೆ ಸೆರಗು ಹಚ್ಚಿದಳು.

ಅವಳು ಸೊಸಿ, ಮೊಮ್ಮಕ್ಕಳು ಎಂದೊಡನೆ ಎಚ್ಚರಾದೆ. ಇನ್ನೂ ಬದುಕಿ ಬಾಳುವ ಆ ಪುಟ್ಟ ಜೀವಿಗಳ ಮುಂದೆ ನಮ್ಮ ಬಾಳಿನ ವಿರಸವನ್ನು ತೋರಗೊಡಬಾರದೆಂದು ಸುಮ್ಮನೆ ಊಟ ಮಾಡಿದೆ. ಎದ್ದು ಬರುವಾಗ ಸರೂನೊಡನೆ ಸರಸವಾಡಲೂ ಪ್ರಯತ್ನಿಸಿದೆ.

"ನೀನು ಶಕೂ ಊಟಕ್ಕ ಕೂಡ್ರಿ ಇನ್ನ ನಾನು ನೀಡ್ತೀನಿ. ನನಗರೆ ಏನು ಕೆಲಸದ ಹ್ಯಾಂಗೂ ಪೆನ್ಶನ್ ಆಗೇದ. ನಿನ್ನ ಕೈಯಾಗ ಅಸಿಸ್ಟೆಂಟ ಆಗ್ತೀನಿ.

"ಸುಮ್ಮಗ ಹೊರಗ ಹೋಗ್ರಿ. ಎಲಿ ಅಡಿಕಿ ತಂದು ಕೊಡ್ತಾನ ರವಿ ಹಾಕ್ಕೊಳ್ರಿ" ಗೆದ್ದ ಖುಷಿಯಿಂದ ನಕ್ಕಳು ಸರೂ. ಮಲಗುವ ಕೋಣೆಗೆ ಬರುವ ಮೊದಲು ಅಂಗಳಕ್ಕೆ ಹಾಯ್ದೆ. ಪಾರಿಜಾತ ಬಾಡಿ ಬಸವಳಿದು ಬಿದ್ದಿದ್ದವು. ನಿಟ್ಟುಸಿರು ಬಿಟ್ಟು ಬಂದು ಹಾಸಿಗೆಯಲ್ಲಿ ಅಡ್ಡಾದೆ.

***

ನಾನು ಎಚ್ಚರವಾದಾಗ ಎಲ್ಲರೂ ಸಿನಿಮಾಕ್ಕೆ ಹೋಗಿದ್ದರು. ಥರ್ಮಾ ಫ್ಲಾಸ್ಕಿನಲ್ಲಿದ್ದ ನನ್ನ ಪಾಲಿನ ಚಹ ಕುಡಿದು ಅಂಗಳಕ್ಕೆ ಬಂದೆ. ತೋಟದಲ್ಲಿ ಅಡ್ಡಾಡುತ್ತ ಮನೆಯ ಹಿಂಭಾಗಕ್ಕೆ ಬಂದೆ. ಸೊಂಪಾಗಿ ಬೆಳೆದು ನಳನಳಿಸುತ್ತಿದ್ದ ಮಲ್ಲಿಗೆ ಬಳ್ಳಿಯ ಕೆಳಗಿನ ಕಲ್ಲಿನಮೇಲೆ ಕುಳಿತೆ. ಬೆಳಗಿನ ಹಾಗೆಯೇ ಸಂಜೆಯ ಸೃಷ್ಟಿಯೂ ಆನಂದದಾಯಕವಾಗಿತ್ತು. ಈ ಮಲ್ಲಿಗೆ ಬಳ್ಳಿಯ ಕೆಳಗೆ ಕುಳಿತಾಗಲಂತೂ ನನ್ನ ಆನಂದ ಉಕ್ಕಿ ಹರಿಯುತ್ತದೆ. ಅದೇನು ಕಾರಣವೋ ತಿಳಿಯದು. ಆ ಸುಖಾನುಭವದಿಂದ ಕಣ್ಣುಮುಚ್ಚಿದೆ. "ಅಪ್ಪಾ" ಎಂದ ವಿಜಯ. "ನಾನು ಡಿನ್ನರಿಗೆ ಹೊರಟೇನಿ. ಬರೂದು ತಡಾ ಆಗ್ತದ. ಬಾಗಿಲಾ ಹಾಕ್ಕೊಳ್ರಿ" ಸೊಗಸಾದ ಸೂಟು ಟೈಗಳಿಂದ ಅಲಂಕೃತವಾಗಿ ಸೆಂಟಿನ ಪರಿಮಳ ಬೀರುತ್ತಿದ್ದ ವಿಜಯ ಹೋಗುವುದನ್ನೇ ನೋಡುತ್ತಿದ್ದೆ. ಎರಡು ಮಕ್ಕಳ ತಂದೆಯಾದರೂ ಒಳ್ಳೇ ಮದುವಣಿಗನಂತೆ ಕಾಣುತ್ತಿದ್ದ. ಮೊದಲಿನಿಂದಲೂ ಶೋಕಿ ಹುಡುಗ. ಬುದ್ಧಿವಂತನೂ ಕೂಡ. ಸರೂ ಆಗಾಗ ಹಾಸ್ಯ ಮಾಡುತ್ತಾಳೆ; ವಿಜಯ ತನ್ನ ಹಾಗಿದ್ದಾನೆಂದು, ಅವಳ ಪುಣ್ಯಕ್ಕೆ ಅವನು ನನ್ನನ್ನು ಹೋಲಲಿಲ್ಲವಂತೆ. ವಿಜಯ ಶೋಕಿಯಲ್ಲೇನೋ ಅವಳ

ಹಾಗಿರಬಹುದು. ಆದರೆ ಬುದ್ಧಿಯಲ್ಲಿ ಅಲ್ಲವೆನ್ನುವದು ನನಗೆ ಗೊತ್ತಿದೆ. ಸರೂನ ಬುದ್ಧಿ ಇಷ್ಟು ವರ್ಷಗಳಲ್ಲಿ ಸಾಕಷ್ಟು ಸುಪರಿಚಿತವಾಗಿದೆ. ವಿಜಯನ ವಯಸ್ಸಿನಲ್ಲಿ ನಾನಿದ್ದಾಗ, ಅಂದರ ಇನ್ನೂ ಯುವಕನಾಗಿದ್ದಾಗ ಸರೂನಲ್ಲಿ ಏನನ್ನು ಕಂಡು ಮೆಚ್ಚಿಕೊಂಡೆ ಎನ್ನುವುದನ್ನು ನಾನೀಗ ಹೇಳಲು ಸಾಧ್ಯವಿಲ್ಲ. ಆಗಿನ ಸರೂನನ್ನು, ನಮ್ಮ ಮದುವೆಯನ್ನು ನೆನೆಯುತ್ತ ಸುಮ್ಮನೆ ಕುಳಿತಿದ್ದೆ.

ಕಾಂತಾ ನನ್ನ ಬಾಳಿನಲ್ಲಿ ಪ್ರವೇಶ ಮಾಡಿದ್ದು ನಮ್ಮ ಮದುವೆಯ ದಿನದಿಂದಲೇ ಎನ್ನಬೇಕು. ಒಂದು ವಿಧದಲ್ಲಿ ಸರೂ, ಕಾಂತಾ ಇಬ್ಬರೂ ಒಂದೇ ದಿನ ಬಂದರು. ಕಾಂತಾ ನನ್ನ ಟೈಪಿಸ್ಟ ಆಗಿದ್ದಾಗ ಒಮ್ಮೆ ವಿಜಯನ ಹುಟ್ಟುಹಬ್ಬದ ಆರತಿಗೆಂದು ನಮ್ಮ ಮನೆಗೆ ಬಂದಿದ್ದಳು. ಹೆಂಗಳೆಯರ ಹಾಡಿನ ಸಂಭ್ರಮದಲ್ಲಿ ಅವಳೂ ಹಾಡಲೇಬೇಕೆಂದು ಒತ್ತಾಯ ಬಂದಾಗ ಅವಳು ಹಾಡಿದ್ದು ಒಂದು ದಾಸರ ಪದ: 'ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರಿ' ಎನ್ನುವದು. ಮರುದಿನ ಆಫೀಸಿನಲ್ಲಿ ನಾನು ಚೇಷ್ಟೆಗೆ ಕೇಳಿದೆ. "ಶ್ರೀಹರಿ ನಿನ್ನ ಹೃದಯದೊಳಗ ಬಂದ್ನೇನು." ತಟ್ಟನೆ ಬಂದಿತು ಉತ್ತರ: "ನನ್ನ ಹೃದಯದಲ್ಲಿ ವಾಸ ಮಾಡಿದ್ದು ಶ್ರೀಹರಿ ಅಲ್ಲ; ಸದಾ ಅಂತ" ಪುಳಕಿತನಾದೆ. ಮರುಕ್ಷಣದಲ್ಲಿ ಕಾಂತಾ ಅಲ್ಲಿರಲೇ ಇಲ್ಲ. ನಾವು ಆ ಊರು ಬಿಟ್ಟು ಬಂದರೂ ಸರೂಗೆ ಅವಳು ಬರೆಯುತ್ತಿದ್ದ ಕಾಗದಗಳಿಂದ ಅವಳ ಯೋಗಕ್ಷೇಮ ತಿಳಿಯುತ್ತಿದ್ದ. "ಸರೂ, ನಾನೀಗ ಕೆಲಸ ಬಿಟ್ಟುಬಿಟ್ಟೆ. ನನ್ನ ಯಜಮಾನರಿಗೆ ಪ್ರಮೋಷನ್ ದೊರಕಿತು. ಈಗ ನಾನು ದುಡಿಯುವ ಅವಶ್ಯಕತೆಯೂ ಅಷ್ಟಾಗಿಲ್ಲ. ಅಲ್ಲದೆ ಇನ್ನೊಂದು ಮುಖ್ಯ ಕಾರಣವೂ ಇದೆ. ನಿನ್ನ ಯಜಮಾನರಂತಹ ಒಳ್ಳೆಯ ಅಧಿಕಾರಿಯ ಕೆಳಗೆ ಕೆಲಸ ಮಾಡಿದ ನನಗೆ ಬೇರೆಯವರ ಕೈಕೆಳಗೆ ದುಡಿಯುವದು ಸರಿ ಕಾಣಲಿಲ್ಲ. ನೀನು ಪುಣ್ಯವಂತೆ ಸರೂ" ಎಂದು ಅವಳಿಂದ ಕಾಗದ ಬಂದ ದಿನ ಸರೂ ಊಟದಲ್ಲಿ ನನಗೆ ಹೆಚ್ಚಾಗಿ ಉಪಚಾರ ಮಾಡಿದಂತೆ ಕಂಡುಬಂದಿತು. ನಾನಂತೂ ನೆಲದ ಮೇಲೆ ಇರಲಿಲ್ಲ.

ಗೇಟಿನ ಸದ್ದು ನನ್ನ ಯೋಚನೆಗಳನ್ನು ಕಡಿದುಹಾಕಿತ್ತು. ಹಾಲಿನವ ಬಂದಿದ್ದ. ಹಾಲು ಕಾಯಿಸಿ ಕೆಳಗಿಳಿಸಿದ ಮೇಲೆ ತುಂಬಿ ತಯಾರಾಗಿದ್ದ ಪ್ರೆಶರ್ ಕುಕ್ಕರ್ ಸ್ಟೋವ್ ಮೇಲಿಟ್ಟು ಅದರ ಸಿಳ್ಳು ಕೇಳುವಂತೆ ಅಡುಗೆ ಮನೆಯ ಕಿಟಕಿ ತೆರೆದಿಟ್ಟು ಮತ್ತೆ ಬಳ್ಳಿಯ ಕೆಳಗೆ ಬಂದು ಕುಳಿತೆ.

ಹಾಲಿನಂತಿದ್ದ ಕಾಂತಾನ ಸಂಸಾರಕ್ಕೆ ವಿಧಿ ಹುಳಿ ಹಿಂಡಿತ್ತು. ಅವಳ ಗಂಡ ಆಕಸ್ಮಿಕವಾಗಿ ಚಿಕ್ಕ ಹೆಂಡತಿಯನ್ನೂ ಪುಟ್ಟ ಮಗಳನ್ನೂ ಬಿಟ್ಟು ತೀರಿ ಹೋಗಿದ್ದರು. ಸರೂ ಈ ಸುದ್ದಿ ಹೇಳಿದ ದಿನ ನನ್ನ ಮನಸ್ಸು ಎಷ್ಟು ನೊಂದಿತು, ಬೆಂದಿತು ಎನ್ನವುದು ನನಗೇ ಗೊತ್ತು. ಬೇರೊಬ್ಬರಿಗೆ ಅದನ್ನು ತಿಳಿಯಪಡಿಸುವದು ವಿವೇಕದ ಮಾತಾಗಿರಲೂ ಇಲ್ಲ. ಸರೂ ಅವಳಿಗೆ ಸಾಂತ್ವನಪರ ಕಾಗದ ಬರೆದು ಪೋಸ್ಟ್ ಮಾಡಲು ನನ್ನ ಕೈಗೆ ಕೊಟ್ಟಾಗ ಮಾತ್ರ ಜೀವ ತಡೆಯಲಿಲ್ಲ. ಯಾವದೇ ರೀತಿಯಿಂದ ನನ್ನ ದುಃಖವನ್ನು ಹೊರಗೆಡಹಬೇಕಾಗಿತ್ತು. ಎರಡು ಸಾಲು ಬರೆದು ಸಹಿ ಮಾಡುವಾಗ ಕಣ್ಣೀರಿನಿಂದ ಅಕ್ಷರಗಳು ಕಲಸಿಹೋಗಿದ್ದವು. ಮುಂದೆ ಕೆಲವು ತಿಂಗಳು ಕಳೆದ ಮೇಲೆ ಕಾಂತಾ ಉಪಾಧ್ಯಾಯಿನಿಯಾಗಿ ಮಗಳನ್ನೂ, ತಾಯಿಯನ್ನೂ ಸಾಕಲು ದುಡಿಯುತ್ತಿದ್ದಾಳೆ ಎನ್ನುವ ಸುದ್ದಿ ಕೇಳಿದೆ. ಸರೂನ ತಮ್ಮನ ಮದುವೆಗೆ ಅವಳ ತವರುಮನೆಗೆ ಹೋದಾಗ ಸರೂನೊಡನೆ ಕಾಂತಾನ ಮನೆಗೂ ಭೇಟಿ ಕೊಟ್ಟಿದ್ದೆ. ಗೆಳತಿಯ ಗಂಡನೆಂದು ಆದರಿಸಿದ ಅವಳೊಡನೆ ಯೋಗಕ್ಷೇಮ ವಿಚಾರಿಸಿದ್ದೆ. ಬದುಕಿನ ಕಷ್ಟ ಅವಳ ಮುಖದ ಮೇಲೆ ಆಳವಾಗಿ ಗೆರೆಗಳನ್ನೆಳೆದಿತ್ತು. ಕಪ್ಪುಕೂದಲು ಅಲ್ಲಲ್ಲಿ ಬಿಳಿಯದಾಗುತ್ತಿತ್ತು. ಆದರೂ ಕಣ್ಣುಗಳಲ್ಲಿ ಮಾತ್ರ ಇನ್ನೂ ಚುಂಬಕ ಶಕ್ತಿಯಿತ್ತು. ಅದಕ್ಕೇ ನಾನು ಮಾರುಹೋಗಿದ್ದೆ. ಆಗ ಕೊಟ್ಟ ನನ್ನ ಹೃದಯವನ್ನು ಇನ್ನು ತಿರುಗಿ ಪಡೆಯುವುದು ಸಾಧ್ಯವಾಗಲಿಲ್ಲ.

ಮತ್ತೆ ಗೇಟಿನ ಸದ್ದಾಯಿತು. ಯಾರೋ ಹಿಂಭಾಗಕ್ಕೆ ನಡೆದು ಬರುತ್ತಿರುವದು ತಿಳಿಯಿತು. ಹೆಜ್ಜೆ ಸಪ್ಪಳ ಕೇಳಿ ನನ್ನೆದೆ ಢವಢವ ಎಂದಿತು. ಕಾಂತಾ ಮೆಲ್ಲಗೆ ನಾನು ಕುಳಿತಿದ್ದೆಡೆಗೆ ನಡೆದು ಬರುತ್ತಿದ್ದಳು. ಉಮಾ ಲಗ್ನವಾಗಿ

ಗಂಡನ ಮನೆಗೆ ಹೋದಮೇಲೆ ಕಾಂತಾಗೆ ಇದೇ ಊರ ಶಾಲೆಗೆ ವರ್ಗವಾಗಿತ್ತು. ಆಗಾಗ ನಮ್ಮ ಮನೆಗೆ ಬರುತ್ತಿದ್ದಂತೆ ಇಂದೂ ಬಂದಿದ್ದಳು.

"ಬರ್ರಿ ಬರ್ರಿ ಭಾಳ ತಡಾ ಮಾಡಿದ್ರೆಲಾ" ನಗುತ್ತ ಕೇಳಿದೆ.

"ಮತ್ತ ಯಾಕೆ ಸುರು ಮಾಡಿದಿರಿ ಈ ಬಹುವಚನಾ" ನಸುಕೋಪದಿಂದ ಕೇಳಿದಳು ಕಾಂತಾ. ಕೊನೆಯ ಪಕ್ಷ ನಾವಿಬ್ಬರೇ ಇದ್ದಾಗಲಾದರೂ ಉಪಚಾರದ ಮಾತು ಬೇಡವೆಂದಿದ್ದಳು, ಅವಳು.

"ಓ ಮರತಬಿಟ್ಟಿದ್ದೆ, ಸರೂ ಶಕೂ ಎಲ್ಲಾರೂ ಸಿನಿಮಾಕ್ಕ ಹೋಗ್ಯಾರ."

"ಹೌದೇನು? ಮನೀ ಬಾಗಿಲಾ ಹಾಕಿದ್ದು ನೋಡಿದಾಗ ಅನ್ನಿಸ್ತು ನನಗ ಯಾರೂ ಇಲ್ಲಾ ಅಂತ. ಆದರೂ ಹಿಂದೆ ಯಾರೋ ಇದ್ದಾರಂತ ನನ್ನ ಮನಸ್ಸು ಹೇಳಿತು. ಅದಕ್ಕ ಹಿಂದ ಬಂದೆ. "

"ಎಷ್ಟು ಕತ್ತಲಿ ಆಯ್ತಲ್ಲ ಬರಲಿಕ್ಕೆ?"

"ಹೌದ್ರೀ ಲಗೂನ ಹೊರಟಿದ್ದೆ. ಟ್ಯೂಶನ್ನದ ಹುಡುಗಿಯರು ಬಂದರು, ತಡಾ ಆಯಿತು. ಉಮಾ ಹೆರಿಗೆಗೆ ಬಂದಾಳ. ಅದಕ್ಕ ನಾವೆಲ್ಲಾ ಕೂಡಿ ಒಮ್ಮೆ ಸೀ ಊಟ ಮಾಡಬೇಕು ಅಂತ ಅನಿಸ್ತು. ಈ ಬರೂ ಆದಿತ್ಯವಾರ ನೀವೆಲ್ಲಾ ಸರೂ, ಶಕೂ, ವಿಜಯ ಎಲ್ಲರೂ ಊಟಕ್ಕ ಬರಬೇಕು. ವಿಜಯಗ ತಪ್ಪಸ ಬ್ಯಾಡಾ ಅನ್ರಿ. ಅವನ ಸಲುವಾಗಿ ಆದಿತ್ಯವಾರ ಕರದೇನಿ."

"ನಾನು ಬರಬೇಕೇನು? ನನ್ನ ಹೆಸರು ಹೇಳಲೆ ಇಲ್ಲಾ" ಕಾಂತಾನ ಎದುರು ನನ್ನ ವಯಸ್ಸನ್ನು ಮರೆತು ಹುಡುಗನಂತಾಡುತ್ತಿದ್ದೆ.

"ಅವತ್ತು ಅಡಗೀ ಏನು ಮಾಡ್ತಿ?"

"ನಿಮಗ ಪ್ರೀತೀದು, ಖೀರು ಪುರಿ, ಮಸಾಲಿ ಅನ್ನ" ಕಾಂತಾಳ ಮುಖದ ಕೆಂಪು ಇನ್ನೂ ಕಡಿಮೆಯಾಗಿರಲಿಲ್ಲ. ನನ್ನ ಹೃದಯ, ನನ್ನ ರುಚಿ, ನನ್ನ ಸಂತೋಷವನ್ನೇ ಬಯಸುವ ಆ ಜೀವಕ್ಕೆ ನಾನು ಕೊಟ್ಟಿದ್ದೇನು ಎಂದು ನೆನೆಸಿಕೊಂಡೆ. ಮನಸ್ಸು ಖಿನ್ನವಾಯಿತು.

"ಮಲ್ಲಿಗೀ ಹೂವು ಎಷ್ಟು ವಾಸನಿ ಬರ್ತಾವ ಅಲ್ಲ" ಕತ್ತೆತ್ತಿ ಬಳ್ಳಿ ನೋಡುತ್ತ ಕಾಂತಾ ಕೇಳಿದಳು. ತಟ್ಟನೆ ಎದ್ದವನೇ ಹೂವು ತೆಗೆದು ಅವಳ ಕೈಗೆ ಕೊಟ್ಟೆ ಇಬ್ಬರೂ ಎಷ್ಟೋ ಹೊತ್ತು ಸುಮ್ಮನೆ ಕುಳಿತಿದ್ದೆವು. ಮಾತು ಇಬ್ಬರಿಗೂ ಬೇಕಿರಲಿಲ್ಲ. ತನ್ನ ಕೈಯಲ್ಲಿಯ ಒಂದೆರಡು ಹೂವನ್ನು ನನ್ನ ಕೈಗಿತ್ತು ಕಾಂತಾ ಹೇಳಿದಳು "ನಾನಿನ್ನು ಬರ್ತೀನಿ."

ಗೇಟಿನ ಸದ್ದಿನ ಜೊತೆಗೆ ಸರೂ, ಶಕೂನ ಮಾತೂ ಕೇಳಿ ಬಂದವು. ಎದ್ದು ಮನೆಯ ಮುಂಭಾಗಕ್ಕೆ ಬಂದೆ. ರವಿಯ ಕೈ ಹಿಡಿದು ಮನೆಯೊಳಕ್ಕೆ ಅವರನ್ನು ಹಿಂಬಾಲಿಸಿದೆ. ಜೇಬಿನಲ್ಲಿದ್ದ ಮಲ್ಲಿಗೆಯ ಪರಿಮಳ ನನ್ನ ಜೊತೆಗೇ ಬಂದಿತು.

***

■■

# ತಾಯ್ತನ

ಇವತ್ತು ಬೆಳಗಿನಿಂದಲೂ ಮೈ ಸ್ವಸ್ಥವೆನಿಸಲಿಲ್ಲ. ಏನೋ ಅಸ್ತವ್ಯಸ್ತತೆ ನಡೆದಿದೆ ದೇಹದಲ್ಲಿ. ಆದರೆ ಏನನ್ನೂ ಹೊರಗೆ ತೋರಗೊಡದೆ, ಯಾರಿಗೂ ತಿಳಿಸದೆ ಮಧ್ಯಾಹ್ನದವರೆಗೆ ಕೋಣೆಯಲ್ಲಿ ಒಬ್ಬಳೇ ಕಾಲ ನೂಕಿದ್ದೆ.

ಆ ಕೋಣೆಗೆ, ಮಂಚಕ್ಕೆ, ಹಾಸಿಗೆಗೆ ತಾನು ಅಂಟಿಕೊಂಡು ನಾಲ್ಕು ತಿಂಗಳು ಕಳೆಯಲು ಬಂದಿತು. ತನಗೆ ದೇಹಾಲಸ್ಯ ಕಂಡುಬರುತ್ತಲೇ ಗಂಡ ಡಾಕ್ಟರರೆಡೆಗೆ ಕರೆದುಕೊಂಡು ಹೋಗಿದ್ದರು. ತನ್ನ ಸಂಕಟ, ಸುಸ್ತು, ವಾಂತಿ ಎಲ್ಲ ವಿವರವನ್ನೂ, ಮುಂಬೈ ಯಾತ್ರೆಯ ವಿಷಯವನ್ನೂ ಕೇಳಿದ ಡಾಕ್ಟರರು ಗರ್ಭ ನಿಂತಿದೆ ಎಂದು ಹೇಳಿದರು. ಆದರೆ ಹೆರಿಗೆಯ ಅವಧಿಯವರೆಗೆ ಸಂಪೂರ್ಣ ವಿಶ್ರಾಂತಿ ಪಡೆಯಬೇಕೆಂದು ಕಟ್ಟುನಿಟ್ಟಾಗಿ ಹೇಳಿದ್ದರು. "ಓಹೋ- ಅವಳಿಗೆ ಒಂದಿಷ್ಟೂ ತ್ರಾಸಾಗದ ಹಾಗೆ ನೋಡಿಕೋತೀನಿ ಡಾಕ್ಟರರೇ, ಅವಳಿನ್ನು ನಿಮ್ಮಲ್ಲಿ ಬರುವಹಾಗಿಲ್ಲ. ನೀವೇ ಆಗಾಗ ಬಂದು ಅವಳನ್ನು ನೋಡಿಕೊಂಡು ಹೋಗಬೇಕೆಂದು" ಹೇಳಿ ತನಗೆ ಆಸರೆ ಕೊಡುವವರ ಹಾಗೆ "ಮೆಲ್ಲಗೆ ನಡೆ, ಆಯಾಸ ಮಾಡಿಕೋಬ್ಯಾಡ" ಎಂದು ಭುಜ ಹಿಡಿದು ಕರೆದುತಂದು, ಕಾರಿನಲ್ಲಿ ಕುಳ್ಳಿಸಿದ್ದರು. ಬರುವಾಗ ಮುಂದುಗಡೆ ಅವರ ಜೊತೆಗೇ ಕುಳಿತು ಬಂದಿದ್ದಳು ತಾನು. ಆದರೆ ಈಗ "ಇಲ್ಲಿ ಬೇಡ, ಹಿಂದೆ ಆರಾಮವಾಗಿ ಒರಗಿ ಕೂತಕೋ" ಎಂದು ಕೂಡ್ರಿಸಿ ನಿಧಾನವಾಗಿ ಕಾರು ಬಿಟ್ಟುಕೊಂಡು ಮನೆಗೆ ಕರೆತಂದು, "ಮಹಡಿ ಹತ್ತೋದು ಬೇಡ. ಕೆಳಗಿನ ಕೋಣೆಯಲ್ಲೇ ಮಲಗು" ಎಂದು ತಾವೇ ನಿರ್ಧಾರಮಾಡಿ, ಅತಿಥಿಗಳ ಕೋಣೆಯಲ್ಲಿ ತನಗಾಗಿ ಎಲ್ಲವನ್ನೂ ಸಿದ್ಧಪಡಿಸಿ ಕರೆತಂದು ಮಲಗಿಸಿದ್ದರು. "ಇನ್ನೇನೂ ಚಿಂತೆ ಮಾಡಬೇಡ ಪಾರೂ. ಇನ್ನು ಎಂಟು ತಿಂಗಳಿಗೆ ತಾಯಿಯಾಗುತ್ತೀ. ಇಷ್ಟು ವರ್ಷದ ಕೊರಗೆಲ್ಲ ಕಳೆದು ಹೋಯ್ತಲ್ಲ. ನನಗೆ ಬಹಳ ಸಂತೋಷವಾಗಿದೆ." ಎಂದು ತನ್ನ ಮುಂಗುರುಳು ನೇವರಿಸಿದ್ದರು.

ಅಂದಿನಿಂದ ತಾನು ಪಂಜರದ ಅರಗಿಣಿ, ಅಡಿಗೆಗೆ ಆಳು, ಮೇಲು ಕೆಲಸಕ್ಕೆ ಹೆಣ್ಣಾಳು, ತೋಟದಲ್ಲಿ ಮಾಲಿ ಇದ್ದಾರೆ. ಇವರೆಲ್ಲರ ಮೇಲ್ವಿಚಾರಣೆಗೆ ತಮ್ಮ ಚಿಕ್ಕಮ್ಮನನ್ನೇ ಕರೆಯಿಸಿಕೊಂಡಿದ್ದಾರೆ ಅವರು. ತನಗೆ ಕೆಲಸ, ಹೊಣೆಗಾರಿಕೆ ಯಾವುದೂ ಇಲ್ಲ. ಏಳು ಮಲ್ಲಿಗೆ ಹೂವಿನ ತೂಕದ ರಾಜಕುಮಾರಿಯ ಹಾಗೆ ಆರಾಮವಾಗಿ ಹಾಯಾಗಿ ಮೆತ್ತನೆ ಹಾಸಿಗೆ, ಒರಗುದಿಂಬುಗಳ ಮೇಲೆ ಮಲಗಿರುತ್ತೇನೆ, ಅಲ್ಲಿಯೇ ಸ್ಪಂಜ್ ಸ್ನಾನ, ತಿಂಡಿ-ತಿನಿಸು, ಚಹಾ, ಊಟ ಇತರ ವಿಧಿಗಳನ್ನೂ ಮುಗಿಸುತ್ತಿದ್ದೇನೆ, ಹೊರಗಿನ ವ್ಯಾಪಾರ ವ್ಯವಹಾರಗಳಿಂದ ಬಿಡುಗಡೆಯಾದಾಗಲೆಲ್ಲ ಅವರು ತನ್ನ ಬಳಿಯೇ ಕುಳಿತು ಹರಟುವರು, ಟ್ರಾನ್ಸಿಸ್ಟರ್ ಹಚ್ಚುವರು, ತನ್ನೊಡನೆ ಇಸ್ಪೀಟು, ಚದುರಂಗ ಆಡುವರು, ಓದಲು ಕಥೆ ಕಾದಂಬರಿಗಳನ್ನು ತಂದು ಕೊಡುವರು. ರಾತ್ರಿಯ ಊಟವನ್ನು ತನ್ನ ಕೋಣೆಯಲ್ಲಿ ತನ್ನೊಡನೆಯೇ ತೀರಿಸಿ, ಹಣೆಯ ಮೇಲೆ ಮುತ್ತಿಟ್ಟು "ಮಲಗು ಚಿನ್ನಾ" ಎಂದು ತಮ್ಮ ಕೋಣೆಗೆ ಹೋಗುವರು....

ಉಫ್! ಯೋಚಿಸುತ್ತ ಎಷ್ಟೋ ಹೊತ್ತು ಅಂಗಾತ ಮಲಗಿದ್ದೆ. ಮಲಗಿ ಮಲಗಿ ಬೆನ್ನು ನೋಯುತ್ತಿದೆ. ಮಗ್ಗಲು ಬದಲಿಸಿ ಕಿಟಕಿಯ ಹೊರಗೆ ದೃಷ್ಟಿ ಹರಿಸಿದೆ. ಅಲ್ಲಲ್ಲಿ ಎತ್ತರವಾಗಿ ಬೆಳೆದು ತಲೆದೂಗುವ ಕಾಸ್‌ಮಸ್ ಹೂವಿನ ಗಿಡಗಳು, ಮಲ್ಲಿಗೆ ಬಳ್ಳಿ ಅರ್ಧ ಭಾಗ, ನೀಲಿ ಆಕಾಶ, ತೇಲುವ ಮೋಡಗಳು, ಆಕಾಶವನ್ನೇ ಸೀಳಿಕೊಂಡು ಹೊರಟಂತೆ ಬೆಳೆದು ನಿಂತ ಪಪ್ಪಾಯಿ ಗಿಡಗಳು, ಇಷ್ಟೇ ತನಗೆ ಕಾಣುವದು. ಕಿಟಕಿಯತ್ತ ಯಾವಾಗ ಹೊರಳಿದರೂ ಇವನ್ನೇ ಕಾಣಬೇಕು ಮತ್ತೆ ಮತ್ತೆ. ಪಪ್ಪಾಯಿ ಗಿಡದ ಮೇಲಿನ ಕಾಗೆ ಒಂದೇ ಸವನೆ ಕ್ರಾ ಕ್ರಾ ಎಂದು ಕೂಗುತ್ತಿದೆ. ಹಣ್ಣಿಗೆ ಬಣ್ಣ ಬಂದಿದೆಯೇನೋ. ಇನ್ನು ಎಲ್ಲ ಕಾಗೆಗಳೂ ಕೂಡಿ ಕುಕ್ಕಿ, ಹಣ್ಣು ಹಾಳು ಮಾಡಿಬಿಡುತ್ತವೆ. ಅದೇಕೆ ಚಿಕ್ಕತ್ತೆ ಸುಮ್ಮನಾಗಿದ್ದಾರೋ ಎಂದು ಯೋಚಿಸುವಷ್ಟರಲ್ಲಿ ಅತ್ತೆಯ ಮಾತು ತನ್ನ ಕಿವಿಗೆ ಬಿದ್ದಿತು.

"ಮಲ್ಲವ್ವಾ -ಮಾಲಿ ಅದಾನೇನೋ ನೋಡು. ಪಪ್ಪಾಯಿ ಗಿಡಾಹತ್ತಿ ಹಣ್ಣು ಹರೀಬೇಕು."

"ಅಮ್ಮಾರ, ಊಟಕ್ಕೆ ಹೋದ ಮಾಲಿ ಇನ್ನೂ ಬಂದಿಲ್ರಿ" ಮಲ್ಲಮ್ಮನ ಮಾತು ಮುಗಿಯವಷ್ಟರಲ್ಲಿ ಎಳೆಯ ಕಂಠ ಕೇಳಿಸಿತ್ತು.

"ಅವ್ವಾs ಮಾಲಿ ಇರದಿದ್ದರ ಭೋಲೋ ಆತು. ನಾನs ಗಿಡಾ ಹತ್ತಿ ಹರೀತೀನಿ. ನನಗೂ ಬರ್ತದ" ಮಲ್ಲವ್ವನ ಮಗ ರಂಗ ಅರ್ಧ ಗಿಡಕ್ಕೆ ಏರಿದಾಗ ನನಗೆ ಕಿಟಕಿಯಿಂದಲೇ ಕಾಣುತ್ತಿದ್ದ. ಅವನು ಏರುತ್ತಿದ್ದಂತೆ ಗಿಡ ಅತ್ತಿತ್ತ ತೂಗಾಡುತ್ತಿತ್ತು. ಅದು ಅಲುಗಾಡುವುದನ್ನು ನೋಡಿ ತನಗೂ ಭಯವಾಗಹತ್ತಿತ್ತು. ಕೆಳಗೆ ಗಿಡ ಹಿಡಿದು ನಿಂತ ಮಲ್ಲವ್ವ ಚೀರುತ್ತಿದ್ದಳು. "ಸಾಕು ಇಳಿಯೋ ರಂಗಾ, ಬಿದ್ದು-ಗಿದ್ದು ಕಾಲ ಮುರಕೊಂಡೀ. ಅವು ಭಾಳ ಘಳ್ಳ ಗಿಡಾ. ನೀ ಯಾಕ ಹತ್ತಿದ್ಯೋ" ಎಂದು ಅವಳು ಕೂಗುವುದನ್ನು ನೋಡಿ ಚಿಕ್ಕತ್ತೆಯೂ ಬಾಯಿಮಾಡುತ್ತಿದ್ದರು. "ನಿನಗ್ಯಾರು ಹೇಳಿದರೋ ಈ ಕಾರಾಭಾರಾ ಮಾಡಾಕ" ಎಂದು ಹುಡುಗನಿಗೆ ಏನಾದರೂ ಆದರೆ ಮಲ್ಲವ್ವ ಅಳುತ್ತಾಳೆ, ಅವಳಿಗೆ ದುಃಖವಾಗುತ್ತದೆ. ತಾಯಿಯ ಕರುಳಲ್ಲವೇ? ತಾನೂ ಉಸಿರು ಬಿಗಿಹಿಡಿದು ನೋಡುತ್ತಿದ್ದಂತೆ ರಂಗ ಗಿಡದ ತುದಿ ಮುಟ್ಟಿ, ಅಲ್ಲಿಂದಲೇ ಕಾಯಿ ಎಸೆದಿದ್ದ ಅವ್ವನ ಕೈಗೆ. ಸರಸರನೆ ಇಳಿದು ಬಂದ ಅವನಿಗೆ ಕೈಕೊಟ್ಟು ಇಳಿಸಿಕೊಂಡಿದ್ದ ಮಲ್ಲವ್ವ ಮೆತ್ತಗೆ ಅವನಿಗೊಂದು ಏಟುಕೊಟ್ಟು "ಏನು ಕಿಡಿಗೇಡಿ ಅದೀಯೋ ನೀನು, ನೀ ಗಿಡಾ ಹತ್ತಿದ್ದು ನೋಡಿ ನನ್ನ ಜೀವ ಹಾರಿಹೋಗಿತ್ತು" ಎನ್ನುತ್ತ ನಕ್ಕಳು. ಇದೇ ಮಲ್ಲವ್ವ ಎರಡು ದಿನದ ಹಿಂದೆ ರಂಗ ಏನನ್ನೋ ಕೊಡಿಸಿಕೊಡೆಂದು ಕಾಡಿದನೆಂದು ಮೈಮುರಿ ಹೊಡೆದು, "ಮಣ್ಣಾಗ ಇಡ್ಲಿ ಇವನ್ನ, ಎಷ್ಟ ಕಾಡತಾನ ನನ್ನ" ಎಂದು ಶಪಿಸಿದ್ದು ನೆನಪಾಗಿ ತನಗೇಕೋ ಹೊಟ್ಟೆಯಲ್ಲಿ ಕಲಮಲವಾಯಿತು.

ಹೊಟ್ಟೆಯಲ್ಲಿ ಏನೋ ಒಂದು ತರದ ಸಣ್ಣ ನೋವು. ಅದರ ಜೊತೆಗೇ ಸುಸ್ತು ಸಂಕಟ. ಇದನ್ನು ಯಾರ ಹತ್ತಿರವೂ ಹೇಳಬಾರದೆನ್ನುವ ಮೊಂಡು ಧೈರ್ಯದಿಂದ, ಹಲ್ಲು ಕಚ್ಚಿ ಸಹಿಸಿಕೊಂಡಿದ್ದಳು ಬೆಳಗಿನಿಂದ ಮಧ್ಯಾಹ್ನದ ವರೆಗೆ. ಇದಕ್ಕೆ ಕಾರಣ? ಕಾರಣ ತನಗೆ ತಿಳಿಯದ್ದೇ? ಅದೇ - ಅದೇ ಇರಬಹುದಲ್ಲವೇ ಈಗ ಎಂಟು ದಿನದ ಹಿಂದಿನಿಂದ ಪ್ರಾರಂಭವಾಗಿದೆಯಲ್ಲ- ಅದೇ ಅವತ್ತು.

ಮಲ್ಲವ್ವ ತಿಂಡಿ, ಚಹಾ ತೆಗೆದುಕೊಂಡು ಬಂದು ತನಗೆ ಎದ್ದು ದಿಂಬಿಗೆ ಒರಗಿ ಕೂಡ್ರಲು ಸಹಾಯ ಮಾಡಿದ್ದಳು.

ತಾನು "ಅತ್ತೆಯವರನ್ನು ಕರಿ ಮಲ್ಲವ್ವಾ" ಎಂದಾಗ ಅವಳು ಹೋಗಿ ಅವರನ್ನು ಕರೆತಂದಿದ್ದಳು. ತನ್ನ ಆಸೆಯನ್ನೆಲ್ಲ ಧ್ವನಿಯಲ್ಲಿ ತುಂಬಿಕೊಂಡು,

"ಅತ್ತೆವ್ವಾ ಪಪ್ಪಾಯ ಹಣ್ಣು ತಿನ್ನೂ ಹಾಂಗ ಆಗೇದರಿ. ಹೆಚ್ಚಿಕೊಡ್ರಿ" ಎಂದಿದ್ದಳು ತಾನು.

"ಪಾರಕ್ಕಾs, ಎರಡು ದಿನಾ ಆಯ್ತು ಕೇಳೆ ಕೇಳ್ತಿದಿ, ಆದರ ನನಗ ಕೊಡೂ ಧೈರ್ಯ ಆಗವೊಲ್ಲದು. ಬಸಿರಿ ಹೆಣ್ಣುಮಕ್ಕಳು ಅದನ್ನು ತಿನ್ನಬಾರದು ಅಂತಾರ. "

"ಅದಕ್ಕೇನೂ ಆಗೂದಿಲ್ಲಂತ್ರಿ. ನಾನೂ ಪುಸ್ತಕದಾಗ ಓದೇನಿ. ಪಕ್ವ ಆಗಿದ್ದ ಹಣ್ಣು ಸ್ವಲ್ಪ ತಿಂದರೆ ಏನೂ ಆಗೂದಿಲ್ಲ. ನೀವು ತಪ್ಪು ತಿಳಕೊಂಡೀರಿ. ಬಸಿರಿ ಹೆಣ್ಣಮಕ್ಕಳ ಬಯಕೆ ತೀರಿಸಲಿಕ್ಕೇ ಬೇಕು ಅನ್ನೂದು ನಿಮಗ ಗೊತ್ತs ಇರಬೇಕಲ್ಲ" ಎಂದು ಒತ್ತಾಯಿಸಿದ್ದಳು ತಾನು. ಈ ವಿಷಯ ಗಂಡನ ಕಿವಿಯವರೆಗೂ ಹೋಗಿತ್ತು. ಅವರೂ ಡಾಕ್ಟರರನ್ನು ಕೇಳಿಕೊಂಡು ಬಂದು ಸ್ವಲ್ಪ ಹಣ್ಣು ತಿನ್ನು ಪಾರೂ, ಅಷ್ಟು ಆಸೆ ಆದರ, ಐದನೇ ತಿಂಗಳು ನಡೀತದ. ಅಷ್ಟೇನು ಹೆದರಿಕೆ ಇಲ್ಲಾ ಅಂದರು ಡಾಕ್ಟರರು" ಎಂದಿದ್ದರು. ತಿನ್ನುವುದನ್ನು ಬಿಟ್ಟರೇ ಒಳ್ಳೆಯದೆನ್ನುವ ಭಾವನೆಯಿತ್ತು ಅವರ ಧ್ವನಿಯಲ್ಲಿ. ಆದರೆ ತಾನು ಅವರು ಹೇಳಿದ ಸ್ವಲ್ಪವನ್ನೇ ಎಂಟು ದಿನಗಳಲ್ಲಿ ಹೆಚ್ಚು

ಮಾಡಿದ್ದಳು. ಮಲ್ಲವ್ವನಿಗೆ ಹೇಳಿ, ಅತ್ತೆಗೆ ತಿಳಿಯದಂತೆ ದಿನವೂ ಹೆಚ್ಚಿಸಿಕೊಂಡು ತಿಂದಿದ್ದಳು. ಅದನ್ನು ತಿಂದಾಗಲೆಲ್ಲ ಮನಸ್ಸಿಗೇನೋ ತೃಪ್ತಿ ಸಮಾಧಾನ, ಒಬ್ಬಳೇ ಇದ್ದಾಗಲೆಲ್ಲಾ ಇದನ್ನೇ ಯೋಚಿಸುತ್ತ ಕೋಣೆಯಲ್ಲೆಲ್ಲಾ ಅಡ್ಡಾಡಿ ಆಯಾಸ ಪಟ್ಟುಕೊಂಡಿದ್ದಳು. ತನ್ನ ಮಂಚದ ಬದಿಯಲ್ಲಿನ ಮೇಜಿನ ಮೇಲೆ ದ್ರಾಕ್ಷಿ, ಕಿತ್ತಳೆ, ಸೇಬು ಎಲ್ಲ ಹಣ್ಣು ಇರುವಾಗ ಎಲ್ಲ ಬಿಟ್ಟು ಪಪ್ಪಾಯಿ ಹಣ್ಣನ್ನೇ ಬಯಸುತ್ತಿದ್ದೇನಲ್ಲ ಎಂದು ನೆನಪಾಗಿ ನಡುಗಿದ್ದಳು ತಾನು. ತಾನು ಬಯಸುತ್ತಿರುವುದಾದರೂ ಏನು? ತನಗಾದರೂ ಅರ್ಥವಾಗಿದೆಯಲ್ಲವೇ ತನ್ನ ಮನದ ಬಯಕೆ? ಛೀ ತಾಯಿಯಾಗುವವಳು ತಾನು. ಮಗುವನ್ನು ನೋಡಿ ನಕ್ಕು ನಲಿದು ಲಾಲಿಸಿ, ಪಾಲಿಸಿ, ಬೆಳೆಸಬೇಕಾದವಳು ತಾನು. ಆದರೆ ತಾನು ಯಾರೂ ಮಾಡದಂತಹ ಬೇರೇನನ್ನೋ ಮಾಡಹೊರಟಿರುವೆನಲ್ಲ ಯಾಕೆ ? ಯಾಕೆ ಎನ್ನುವುದು ತನ್ನ ಹೊಟ್ಟೆಯೊಳಗಿನ ಗುಟ್ಟು- ಈಚೆಗೆ ಸರಿದು ಹೊರಳುತ್ತಲೇ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು.

ಉಬ್ಬುತ್ತಿದ್ದ ಹೊಟ್ಟೆಯ ಮೇಲೆ ಕೈಯಾಡಿಸಿದಾಗಲೆಲ್ಲ ಏನೋ ಒಂದು ಹಿತವಾದ ಅನುಭವ, ಪುಸ್ತಕಗಳಲ್ಲಿ ನೋಡಿದ, ಗರ್ಭಕೋಶದಲ್ಲಿ ಹುದುಗಿದ, ಮುದುಡೆಯಾಗಿ ಮಲಗಿದ ಮಗುವಿನ ಚಿತ್ರ ಮನದಲ್ಲಿ ಮೂಡುವದು, ಇಲ್ಲಿ ತಲೆ ಇರಬಹುದು. ಇಲ್ಲಿ ಮೈ ಇದ್ದೀತು. ಇಲ್ಲಿ ಕೈಕಾಲು ಹೀಗೆ ಮಡಿಚಿರಬಹುದು. ಕೂಸಿಗೆ ಕೂದಲು, ಉಗುರು ಮೂಡಿರಬಹುದೇ? ಮಗು ಎಂಥದಿರಬಹುದು. ಹೆಣ್ಣೋ-ಗಂಡೋ ? ಯಾರ ಹಾಗಿರಬಹುದು ? ತನ್ನ ಹಾಗೆಯೇ ಅಥವಾ ಅವರ ಹಾಗೆಯೋ ತನ್ನ ಹಾಗಿರಬಹುದು. ಆದರೆ ಅವರ ಹಾಗೆ ಇರುವದಂತೂ ಶಕ್ಯವಿಲ್ಲ. ಛೇ ಅವರ ಹಾಗೆ ಹೇಗಿದ್ದಿತು? ತನಗೆ ಗೊತ್ತೇ ಇದೆಯಲ್ಲ ಇದು ಅವರ ಮಗು ಅಲ್ಲವೆಂದು. ಮತ್ತೆ ಯಾರದೋ ಮಗು, ಯಾರದೋ ಯಾರಿಗೆ ಗೊತ್ತು. ಒಟ್ಟಿನಲ್ಲಿ ತಮಗೊಂದು ಮಗು ಬೇಕಿತ್ತು. ಬೇಕೇ ಬೇಕಿತ್ತು. ಇಷ್ಟೊಂದು ಆಸ್ತಿ, ಜಮೀನು, ಬ್ಯಾಂಕಿನಲ್ಲಿ ಹಣ, ಮನೆ, ಕಾರು ಎಲ್ಲ ಇರುವಾಗ ಇವಕ್ಕೆಲ್ಲ ಬಾಧ್ಯಸ್ಥನಾಗಿ ಅಥವಾ ಬಾಧ್ಯಸ್ಥಳಾಗಿ ಒಂದು ಮಗು ಬೇಡವೇ? ಹೌದು ಬೇಕು. ತನಗೆ ಬರೀ ಆಸ್ತಿಗೋಸ್ಕರವಲ್ಲ. ಪ್ರೀತಿಸೋದಕ್ಕೆ. ತನ್ನ ಹಾಲು ಕುಡಿಸಿ ಜೋಪಾನ ಮಾಡುವುದಕ್ಕೆ ತನ್ನಲ್ಲಿರುವ ಮಮತೆಯನ್ನೆಲ್ಲ ಎರೆಯುವದಕ್ಕೆ ಒಂದು ಮಗು ಬೇಕಾಗಿತ್ತು. ಆದರೆ ಆಗಲಿಲ್ಲ. ಮೊದಲು ಎರಡು ಮೂರು ವರುಷ ಅದೊಂದು ಕೊರತೆ ಎನಿಸಲಿಲ್ಲ. ಆದರೆ ಕಾಲ್ತೊಡಕು ಎನ್ನುವ ಕಾಲವದು. ಏಳು ವರುಷ ಕಳೆಯಿತು. ಮಕ್ಕಳಾಗಲಿಲ್ಲ. ಹತ್ತು ಕಳೆದಾಗ ಮಾತ್ರ ತಾನು ಗಾಬರಿಯಾಗಿದ್ದಳು. ಎಲ್ಲ ಪಂಡಿತರು, ಡಾಕ್ಟರರು, ವೈದ್ಯರು ಎಲ್ಲರಿಗೂ ತೋರಿಸಿಯಾಗಿತ್ತು. ಜಾತಕ ತೋರಿಸಿ, ಭವಿಷ್ಯ ಕೇಳಿ, ಕೈತೋರಿಸಿಯಾಗಿತ್ತು. ಎಲ್ಲರೂ ಭರವಸೆ ಹುಟ್ಟಿಸಿ ದುಡ್ಡು ಕೀಳುವವರೇ.

ಕೊನೆಗೆ ಮುಂಬೈಗೆ ಹೋಗಿ ತಾವಿಬ್ಬರೂ ಪರೀಕ್ಷಿಸಿಕೊಂಡಾಗ ತಿಳಿಯಿತು, ಈ ಜನ್ಮದಲ್ಲಿ ತಾನು ತಾಯಿಯಾಗವುದು ಸಾಧ್ಯವಿಲ್ಲವೆಂದು. ಅದಕ್ಕೆ ಕಾರಣ ಇವರೇ ಎಂದು. ಹೋಟಲಿನಲ್ಲಿ ಆ ದಿನ ರಾತ್ರಿ ತಾವಿಬ್ಬರೂ ಕಣ್ಣಿಗೆ ಕಣ್ಣು ಹಚ್ಚಿರಲಿಲ್ಲ. ಇಬ್ಬರಿಗೂ ಬಹು ದುಃಖವಾಗಿತ್ತು. ತಾನಂತೂ ಅತ್ತಿದ್ದೇ ಅತ್ತಿದ್ದು. ತಾನು ಹುಟ್ಟಿದ್ದು ಸಾರ್ಥಕವಾಗಲಿಲ್ಲವೆಂದು ಹೇಳಿಕೊಂಡು ಅತ್ತಾಗ ಅವರ ಮುಖ ಕಪ್ಪಿಟ್ಟಿತ್ತು. ಅಷ್ಟರಲ್ಲೇ ತಾನು ಎಚ್ಚೆತ್ತುಕೊಂಡಿದ್ದಳು. ಅಳು ಕಡಿಮೆ ಮಾಡಿ ಅವರಿಗೇ ಸಮಾಧಾನ ಹೇಳಿದ್ದಳು. ಛೇ, ಪಾಪ ಅವರದೇನು ತಪ್ಪು? ಎಂದಿತ್ತು ಅವಳ ಒಳ ಮನಸ್ಸು. ಎಲ್ಲ ತನ್ನ ದುರಾದೃಷ್ಟ ಎಂದು ಹೇಳಿಕೊಂಡು ಸುಮ್ಮನಾಗಿದ್ದಳು. ತಾನು ಇದರ ಬಗ್ಗೆ ಹೆಚ್ಚು ದುಃಖ ಪಟ್ಟರೆ ಅವರ ಮನಸ್ಸಿಗೆ ನೋವು ಉಂಟಾಗುತ್ತದೆನ್ನುವದನ್ನು ಅರಿತು ಅವರ ತೋಳ್ತೆಕ್ಕೆಯಲ್ಲಿ ಸುಮ್ಮನೆ ಮಲಗಿದ್ದಳು. ಬೆಳಗಾದರೂ ಇಬ್ಬರಿಗೂ ಕಣ್ಣಿಗೆ ಕಣ್ಣು ಕೂಡಿರಲಿಲ್ಲ. ಮರುದಿನ ತಿರುಗಿ ಊರಿಗೆ ಹೊರಡುವದಿತ್ತು. ಹಾಸಿಗೆ ಬಿಟ್ಟೇಳುವ ಮೊದಲು ಅವರು ತನ್ನ ಕೂದಲು ನೇವರಿಸುತ್ತ ಹೇಳಿದ್ದರು, "ಪಾರೂ- ಈ ವಿಷಯ ಯಾರ ಮುಂದೂ ಹೇಳಬ್ಯಾಡ, ಡಾಕ್ಟರರು ಮಕ್ಕಳು ಆಗ್ತಾವಂತ ಭರವಸೆ ಕೊಟ್ಟಾರ. ಔಷಧಿ, ಇಂಜೆಕ್ಷನ್ನು ಸುರೂ ಅವ ಅಂತ ಹೇಳು" ಎಂದು. ತಾನಾದರೂ ಅವರನ್ನು ಯಾಕೆ ಬಿಟ್ಟುಕೊಡಬೇಕು? ಬೇರೆಯವರ ಎದುರು ತನ್ನ ಮಾನ, ಅವರ ಮಾನ ಒಂದೇ ಅಲ್ಲವೇ ಎಂದು ಸುಮ್ಮನಾಗಿದ್ದಳು.

ಮತ್ತೆ ನಾಲ್ಕಾರು ವರ್ಷ ಕಳೆದಿದ್ದವು. ಏಕಾಕಿತನ ಬೇಸರವಾಗಿ ತಂಗಿಯ ಮಕ್ಕಳಲ್ಲಿ ಯಾರನ್ನಾದರೂ ತಂದು ಜೋಪಾನ ಮಾಡಬೇಕೆನ್ನುವ ಮನಸ್ಸು ಮಾಡಿ ಕೇಳಿದ್ದಳು. ಆದರೆ ತಂಗಿಗೆ, ಅವಳ ಗಂಡನಿಗೆ ಮಕ್ಕಳನ್ನು ಬಿಟ್ಟಿರಲು ಮನಸ್ಸಿರಲಿಲ್ಲ. ಬೇರೆ ಯಾರ ಮಗುವನ್ನಾದರೂ ದತ್ತು ತೆಗೆದುಕೊಳ್ಳೋಣವೆಂದರೆ "ಈಗೇನಂಥಾ ಮಹಾ ವಯಸ್ಸಾಗಿದೆ. ಆಗಲೇ ಮುದುಕಿ ಆಗಿಹೋದೆಯಾ? ಇಂದಿಲ್ಲಾ ನಾಳೆ ಆಗಿಯೇ ಆಗ್ತವೆ. ಅವಸರ ಮಾಡಬೇಡ" ಎಂದು ಹಿರಿಯರು ಬುದ್ಧಿವಾದ ಹೇಳಿದರು. ವಸ್ತುಸ್ಥಿತಿ ಅವರಿಗೇನು ಗೊತ್ತು ಪಾಪ. ಒಳಗಿನ ಗುಟ್ಟು ತನ್ನೊಬ್ಬಳನ್ನೇ ಸುಡುತ್ತಿತ್ತು. ಇವರಿಗೆ ಮಾತ್ರ ಅದರ ಯೋಚನೆಯೇ ಇದ್ದಂತಿರಲಿಲ್ಲ. ಮುಂದೆಯೂ ಆಗದಿದ್ದರೆ ದತ್ತು ತೆಗೆದುಕೊಳ್ಳಬೇಕೆನ್ನುವ ಆಸೆಯಲ್ಲಿದ್ದ ತನಗೆ ತವರಿನಿಂದ ಬಂದಿದ್ದ ತಮ್ಮ ಹೇಳಿದ್ದ ಸುದ್ದಿ ದಿಕ್ಕುಗೆಡಿಸಿತ್ತು. ತಮ್ಮ ನೆರೆಮನೆಯಲ್ಲಿದ್ದ ಗೌರಮ್ಮನಿಗೆ ದತ್ತು ಮಗನಿದ್ದ. ಹೇಳಿಕೊಳ್ಳುವಂಥ ಆಸ್ತಿ ಇರದಿದ್ದರೂ ಸತ್ತಾಗ ನೀರು ಬಿಡಲು, ಮುಂದೆ ಮನೆಯ ದೀಪ ಹಚ್ಚಲು ಇರಲೆಂದು ಸಂಬಂಧದಲ್ಲಿಯ ಹುಡುಗನನ್ನು ದತ್ತುಮಾಡಿಕೊಂಡಿದ್ದಳು, ದತ್ತು ಮಗನಿಗೆ ಎಲ್ಲಿಯ ಪ್ರೀತಿ ತಾಯಿಯ ಮೇಲೆ? ಹೆಂಡತಿ ಬಂದ ಮೇಲೆ ಮುದುಕಿಗೆ ಹೊಟ್ಟೆತುಂಬ ಊಟ ಹಾಕುವದಂತೂ ದೂರ ಉಳಿಯಿತು. ಹೊಡೆದು ಬಡಿದು ಮುದುಕಿಯ ಕಾಲೂ ಮುರಿದಿದ್ದ ಬಾಡಿಗೆಯ ಮಗ. ಅದೇ ನೋವಿನಲ್ಲಿ ಗೌರಮ್ಮ ಸತ್ತು ಹೋಗಿದ್ದಳು. ಈ ಸುದ್ದಿ ತನ್ನ ಗಾಯದ ಮೇಲೆ ಬರೆ ಎಳೆದಿತ್ತು.

ನಿರಾಸಕ್ತಿಯಿಂದ ಬೇಸರದ ಜೀವನ ಕಳೆಯುತ್ತಿತ್ತು. ತನ್ನ ಕೊರಗು ನೋಡಿ ಇವರು ಕೆಲವು ದಿನ ಪ್ರವಾಸ ಹೋಗುವ ತಯಾರಿ ಮಾಡಿದ್ದರು. "ಒಂದು ತಿಂಗಳು ವ್ಯವಹಾರ ಎಲ್ಲಾ ನೋಡಿಕೊಳ್ಳಿಕ್ಕೆ ಶೇಷಪ್ಪಗ ಹೇಳೇನಿ. ನಾವಿಬ್ಬರೂ ಆರಾಮವಾಗಿ ದಕ್ಷಿಣ ಹಿಂದುಸ್ತಾನ ಎಲ್ಲಾ ಅಡ್ಡಾಡಿ ಬರೂಣ" ಎಂದಿದ್ದರು. ತನಗೂ ಬದಲಾವಣೆ ಹಿತವಾಗಿತ್ತು. ಕೆಲವು ದಿನ ಸಂತೋಷವಾಗಿ ಕಳೆದಿದ್ದವು. ಹೊಸ ಹೊಸ ಜನ, ಹೊಸ ಊರು. ಬೇರೆ ರುಚಿ, ಸೃಷ್ಟಿ ಸೌಂದರ್ಯ, ಪುಣ್ಯಕ್ಷೇತ್ರಗಳು ಎಲ್ಲ ಹರ್ಷದಾಯಕವಾಗಿದ್ದವು. ಜೀವನವನ್ನೆಲ್ಲ ಹೀಗೆ ಕಳೆಯಬೇಕು ಎಂದು ಬಯಸಿದ್ದಳು ತಾನು. ತನ್ನ ಬಾಳಿನ ಕೊರತೆಯನ್ನೇ ಮರೆಯಿಸಿಟ್ಟಿತ್ತು ಈ ಪ್ರವಾಸ. ಇಂಥ ಗಳಿಗೆಯಲ್ಲಿಯೇ ತನ್ನ ಮನಸ್ಸು ದುರ್ಬಲವಾಗಿ ಅವರ ಮಾತಿಗೆ ಒಪ್ಪಿಕೊಂಡಿದ್ದಿತಲ್ಲ! ಅವರು ಇಂಥ ಯೋಜನೆಯನ್ನಿಟ್ಟುಕೊಂಡೇ ಈ ಪ್ರವಾಸಕ್ಕೆ ತನ್ನನ್ನು ಹೊರಡಿಸಬಹುದೆಂದು ತನಗೆ ಕನಸು ಮನಸ್ಸಿನಲ್ಲೂ ಎನಿಸಿರಲಿಲ್ಲ. ಮಕ್ಕಳಿಲ್ಲ, ಆಗುವ ಸಾಧ್ಯತೆಯೂ ಇಲ್ಲವೆಂದ ಮೇಲೆ, ಮುಂದುವರೆದ ವಿಜ್ಞಾನದ ಉಪಯೋಗ ಮಾಡಿಕೊಂಡು ಯಾಕೆ ಮಕ್ಕಳನ್ನು ಪಡೆಯಬಾರದೆನ್ನುವ ಯೋಚನೆ ಇವರನ್ನು ಕಾಡಿರಬೇಕು. ತನ್ನೊಂದಿಗೆ ಒಂದೆರಡು ಸಲ ಆ ವಿಷಯವಾಗಿ ಮಾತೆತ್ತಿದ್ದರು. ಆದರೆ ಯಾರದೋ ಬೇರೆಯವರ ಮಗುವನ್ನು ತನ್ನ ಗರ್ಭದಲ್ಲಿ ಬೆಳೆಸಲು ತನ್ನ ಮನಸ್ಸು ಒಪ್ಪುತ್ತಿರಲಿಲ್ಲ. ಅದಕ್ಕೇ ತಾನು ಪ್ರತಿಭಟಿಸಿದ್ದಳು. ಅವರು ಸಲಸಲಕ್ಕೂ ದೃಢವಾಗಿ ಅದನ್ನೇ ಪುಷ್ಟೀಕರಿಸುತ್ತಿದ್ದರು. ಮೈಸೂರಿನಲ್ಲಿದ್ದಾಗ ಒಂದು ರಾತ್ರಿ ತನ್ನನ್ನು ತಮ್ಮ ಎದೆಗೆ ಒರಗಿಸಿಕೊಂಡು "ಪಾರೂ, ಮಕ್ಕಳಿಲ್ಲ ಅಂತ ಮನಸ್ಸಿನಾಗs ನೀ ಭಾಳ ಕೊರಗ್ತಿದ್ದೀ ಅನ್ನೂದು ನನಗ ಗೊತ್ತದ. ನೀನು ತಾಯಿಯಾದರ ನಿನ್ನ ಮನಸ್ಸಿಗೆ ಶಾಂತಿ ಸಿಗತದ. ಗಟ್ಟಿ ಮನಸ್ಸು ಮಾಡಿ ನನ್ನ ಮಾತಿಗೆ ಒಪ್ಪಿಕೋ, ನಿನ್ನ ಆಸೇನೂ ಈಡೇರತದ. ನನ್ನ ಆಸ್ತೀಗೆ ವಾರಸುದಾರರೂ ಸಿಗ್ತಾರ. ನೋಡು, ದತ್ತು ಮಕ್ಕಳಿಗಿಂತಾ ನಿನ್ನ ಹೊಟ್ಟೆಯಿಂದ ಹುಟ್ಟಿದಮಗಾ ಇದ್ದರೆ ಒಳ್ಳೇದಲ್ಲs" ಎಂದು ಕಳಕಳಿಯಿಂದ ಕೇಳಿದ್ದರು.

ಅವರ ಮಾತಿಗೆ ಮರುಳಾಗಿದ್ದಳು ತಾನು. "ಮಗಾನs ಆಗ್ತಾನಂತ ಹ್ಯಾಂಗ ಹೇಳ್ತೀರಿ. ಮಗಳಾದರ?"

"ನನಗ ಯಾರ ಆದರೂ ಅಷ್ಟs ಮಗಾನs ಬೇಕು ಅಂತ ಏನಿಲ್ಲ. ನಿನ್ನಂಥ ಮಗಳು ಆದರ ಹೂವಿನಾಂಗ ಜೋಪಾನ ಮಾಡ್ತೀನಿ" ಎಂದು ವಿಜಯದ ನಗೆ ನಕ್ಕಿದ್ದರು. ತನ್ನ ಮಾತಿನಲ್ಲಿಯೇ ಅವರಿಗೆ ತನ್ನ ಒಪ್ಪಿಗೆ ತಿಳಿದುಬಿಟ್ಟಿತ್ತು. ತಮ್ಮ ಯಾತ್ರೆ ಮುಂಬೈವರೆಗೂ ಬೆಳೆದಿತ್ತು.

ಗರ್ಭಿಣಿಯಾದಾಗಿನಿಂದ ತನಗೆ ರಾಜೋಪಚಾರ ನಡೆಯುತ್ತಿದೆ. ಆದರೆ ಈ ಐದು ತಿಂಗಳಲ್ಲಿ ದಿನದಿಂದ ದಿನಕ್ಕೆ ತನ್ನ ಮನಸ್ಥಿತಿ ಮಾತ್ರ ವಿಚಿತ್ರವಾಗುತ್ತಿದೆ. ಏನೋ ಯಾತನೆ, ತೊಳಲಾಟ, ಮಥನ ದಿನವೂ ನಡೆಯುತ್ತಿದೆ. ದೇಹ ಪುಷ್ಟವಾಗುತ್ತಿದ್ದಂತೆ ಮನ ಸವೆಯುತ್ತ ನಡೆದಿದೆ. ತನ್ನ ಹೊಟ್ಟೆಯಲ್ಲಿ ಮೂಡಿ ಬೆಳೆಯುತ್ತಿರುವ ಮಗು ಹೇಗೆ ಬೆಳೆಯುತ್ತದೆ? ನೋಡಲು ಹೇಗಿರಬಹುದು ಎನ್ನುವ ಕುತೂಹಲ ಇದೆಯೇ ಹೊರತು ಅದರ ಬಗ್ಗೆ ಪ್ರೀತಿ, ಮಮತೆ, ಹುಟ್ಟಲೊಲ್ಲದು. ಇದು ತನ್ನ ಕರುಳಿನ ಚೂರು, ತನ್ನ ರಕ್ತ ಹಂಚಿಕೊಂಡು ಬೆಳೆಯುತ್ತಿದೆ, ತನ್ನ ಕಣ್ಮಣಿ ಕಂದ ಎನ್ನುವ ಭಾವನೆಯೇ ತನಗೆ ಬರಲೊಲ್ಲದು. ಈ ಕಂದ ಕಾಣದ ಜನ್ಮದಾತನ ಭೂತ ತನ್ನನ್ನು ಬೆನ್ನಟ್ಟಿ ಕಾಡುತ್ತಿದೆ. ಈ ಭಯ ತನ್ನ ಪ್ರೀತಿಯ ಕತ್ತು ಹಿಚುಕುತ್ತಿದೆ. ತನ್ನನ್ನು ಹೋಲದ ಅವರನ್ನು ಹೋಲದ ಬೇರೆ ಯಾವುದೋ ಒಂದು ರೂಪವನ್ನು ಹೊರಬಹುದಾದ ಮಗು ತನ್ನ ಹೊಟ್ಟೆಗೆ ಭಾರವಾಗುತ್ತಿದೆ. ತಾಯಿಯಾಗುವ ತನಗೇ ಇಲ್ಲದ ಮಮತೆ, ಪ್ರೀತಿ, ಆ ಮಗುವಿನ ಬಗ್ಗೆ ಇವರಲ್ಲಿ ಬಹಳ ಇದೆ. ತನ್ನೊಡನೆ ಹೆಚ್ಚಾಗಿ ಅವರು ಮಾತನಾಡುವದು ಮಗುವಿನ ವಿಷಯವನ್ನು ಕುರಿತೇ ಅದಕ್ಕೆ ಏನು ಹೆಸರಿಡಬೇಕು ? ಅದರ ವಿದ್ಯಾಭ್ಯಾಸ, ಪಾಲನೆ ಪೋಷಣೆ ಎಲ್ಲವನ್ನೂ ಸಂತೋಷವಾಗಿ ಚರ್ಚಿಸುವರು.

ಇದು ನಿಜವಾದ ಪ್ರೀತಿಯೋ, ಅದೇಕೋ ನನ್ನ ಸಂಶಯ ದಿನದಿನಕ್ಕೆ ಬಲವಾಗುತ್ತಿದೆ. ಅಲ್ಲ, ಅದು ನಿಜವಾದ ಪ್ರೀತಿಯಲ್ಲ, ನಾಟಕವಿರಬೇಕು ಎಂದು ನನ್ನ ಒಳ ಮನಸ್ಸು ಚೀರುತ್ತದೆ. ಇರಬಹುದು, ಇದು ತನ್ನ ದೋಷವನ್ನು ಮುಚ್ಚಿಟ್ಟುಕೊಳ್ಳಲು ಅವರು ನಡೆಸಿರುವ ನಾಟಕವೇ ಇರಬೇಕು ಎಂದಾಗ ತನ್ನಲ್ಲಿ ದ್ವೇಷ ಉಕ್ಕಿ ಹರಿಯುತ್ತದೆ. ಈ ನಾಟಕದಲ್ಲಿ ತಾನೂ ಒಂದು ಪಾತ್ರವಾಗಿದ್ದೇನೆ. ಬೇಕೂ ಬೇಡದ ಪಾತ್ರವಿದು. ಆದರೆ ತನ್ನ ಆಪ್ತೇಷ್ಟರ, ನೆರೆಹೊರೆಯವರ ಕಣ್ಣಿಗೆ ತಾನೊಬ್ಬ ಮಹಾರಾಣಿ, ಸಿರಿ ಸಂಪತ್ತು, ಪ್ರೀತಿಸುವ ಗಂಡ, ಇನ್ನು ಹುಟ್ಟುವ ಮಗು ಹೀಗೆ ಎಲ್ಲವನ್ನೂ ಪಡೆದು ಬಂದ ಅದೃಷ್ಟವಂತರು. ತನ್ನನ್ನು ಭೆಟ್ಟಿಯಾಗಲು ಬಂದಾಗಲೆಲ್ಲ ಅವರೆಲ್ಲಾ ಹೊಗಳಿದ್ದೇ ಹೊಗಳಿದ್ದು. ತನ್ನ ವಯಸ್ಸಿನ ಗೆಳತಿಯರಿಗಂತೂ ಮೇಲೆ ಸಂತೋಷದ ಮುಖವಾಡ ಒಳಗೆ ಹೊಟ್ಟೆಕಿಚ್ಚು. ಹೊಟ್ಟೆತುಂಬ ಕಿಚ್ಚು-

ಉಫ್! ಈ ಹೊಟ್ಟೆಯೊಳಗಿನ ಕಿಚ್ಚು ತನ್ನನ್ನೇ ಸುಡುತ್ತಿದೆಯಲ್ಲ. ಮತ್ತೆ ಮಗ್ಗಲು ಬದಲಿಸಿದಾಗ ಹೊಟ್ಟೆನೋವು ಹೆಚ್ಚಾಗಿತ್ತು. ಅದು ಹೊಟ್ಟೆಯಿಂದ ಪ್ರಾರಂಭವಾಗಿ ಬೆನ್ನು ಸುತ್ತುವರಿಯುತ್ತಿತ್ತು. ಕಾಲುಗಳೆರಡನ್ನೂ ಮಡಿಚಿ, ಮೈ ಬಿಗಿಹಿಡಿದು ಮಲಗಿದ್ದಳು. ಗಳಿಗೆ ಗಳಿಗೆಗೆ ಆಚೀಚೆ ಹೊರಳಾಡಿದಳು. ಹಲ್ಲುಕಚ್ಚಿ ಸಹಿಸಿದಳು. ಬರಬರುತ್ತ ನೋವು ಹೆಚ್ಚಾಯಿತು. ಕೋಣೆಯಲ್ಲಿ ಮಬ್ಬುಗತ್ತಲೆ ಕವಿಯುತ್ತಿತ್ತು. ಕಷ್ಟಪಟ್ಟು ಸರಿದು ಟೇಬಲ್ ಮೇಲೆ ಗಂಟೆ ಬಡಿದಳು. ನುಲ್ಲವ್ವನಿಂದ ಅತ್ತೆಯನ್ನ ಕರೆಯಿಸಿ ತನ್ನ ದೇಹಸ್ಥಿತಿ ತಿಳಿಸಿದಳು. ಗಾಬರಿಯಾಗಿ ಧಾರವಿದ ಅತ್ತೆ ಇವರಿಗೆ ಫೋನ್ ಮಾಡುತ್ತಿದ್ದುದು ಕೇಳಿಸುತ್ತಿತ್ತು.

"ಹೂಂ ಹೂನಪ್ಪಾ. ಲಗೂ ಲಗೂನ ಬಾ. ಇನ್ನೇನು ಕೂಸು ತಡಿಯುಹಾಂಗ ಕಾಣೂದಿಲ್ಲ ಡಾಕ್ಟರರನ್ನ ಕರಕೊಂಡು ಬಾ"

ತನ್ನ ಅರಿವಿಲ್ಲದೆ ದಿಂಬಿನ ಮೇಲೆ ಕಂಬನಿ ಧಾರೆ ಹರಿದಿತ್ತು.

***

■■

# ಲೋಲಾಕು

ಗೋದ್ರೆಜ್ ಕಪಾಟಿನ ಬಾಗಿಲು ತೆರೆದ ಭಾರತಿ ಉಗುರು ಕಚ್ಚುತ್ತ ಒಂದು ಕ್ಷಣ ಹ್ಯಾಂಗರಿನಲ್ಲಿ ತೂಗುಬಿದ್ದ ಸೀರೆಗಳನ್ನೇ ದಿಟ್ಟಿಸಿದಳು. ತಯಾರಾಗಿ ಎರಡೂವರೆ ಬಸ್ಸಿಗೆ ಹೊರಡಲು ಇನ್ನೂ ಸಾಕಷ್ಟು ಸಮಯವಿದೆ ಎಂದುಕೊಳ್ಳುತ್ತ ತನ್ನನ್ನೇ ನೋಡಿಕೊಂಡಳು. ತೋಳು ಚಾಚಿ ಕೈಗಳನ್ನೇ ನೋಡಿಕೊಂಡು ತನ್ನ ಮೈ ಬಣ್ಣಕ್ಕೆ ಒಪ್ಪುವ ಸೀರೆ ಯಾವುದು ಯೋಚಿಸಿದಳು. ಮಧ್ಯಾಹ್ನದ ಉರಿಬಿಸಿಲಿನಲ್ಲೂ ಚೆನ್ನಾಗಿ ಕಂಡಿರಬೇಕು. ನಿರಿಗೆಗಳನ್ನೆಲ್ಲ ಒಂದೇ ಸಮನಾಗಿ ಹಿಡಿದು ಸಿಕ್ಕಿಸಿ ಪಿನ್ನು ಹಾಕಿ, ನಿರಿಗೆ ಚಿಮ್ಮುತ್ತ ನಡೆದರೆ ಅವು ತಮ್ಮಷ್ಟಕ್ಕೆ ತಾವೇ ನವಿಲಿನ ಗರಿಯ ತರಹ ಹರಡಿಕೊಳ್ಳಬೇಕು. ಹಾಗೆ ಸೀರೆ ಉಡುವದೂ ಒಂದು ಕಲೆ. ಅದಕ್ಕೇ ಅಲ್ಲವೇ ಆಚೆ ಮನೆ ಸರೋಜಾ ತಾನು ಸೀರೆ ಉಟ್ಟಿದ್ದನ್ನು ಮೆಚ್ಚುಗೆಗಣ್ಣುಗಳಿಂದ ನೋಡುವದು. ಅವಳು ಒಬ್ಬಳೆ ಏನು, ತನ್ನ ಉಡುಪನ್ನು ಕೇಶಾಲಂಕಾರವನ್ನು ಮುಖದ ಅಲಂಕಾರವನ್ನು ಎಲ್ಲರೂ ಮೆಚ್ಚಿಯೇ ಮೆಚ್ಚುತ್ತಾರೆ. ಮೆಚ್ಚದೆ ಏನು, ತನ್ನ ಎತ್ತರ, ತನ್ನ ಬಂಗಾರ ಮೈಬಣ್ಣ, ಕಪ್ಪು ಗುಂಗುರು ಕೂದಲು ಇವೆಲ್ಲಾ ಯಾರಿಗಿವೆ. ಇಲ್ಲಿಯವರಲ್ಲಿ? ತನ್ನ ಮೂಗು ಸ್ವಲ್ಪ ಮೊಂಡು ಆದರೂ ಪರವಾಗಿಲ್ಲ. ಇವರು ಹೇಳುತ್ತಾರಲ್ಲ ತನ್ನ ದುಂಡು ಮುಖಕ್ಕೆ ಇಂಥಾ ಮೂಗು ಒಪ್ಪುತ್ತದೆ ಎಂದು ಸಾಕಲ್ಲ, ತನಗೇನು ಮಾಡಬೇಕಾಗಿದೆ. ಉದ್ದ ಮೂಗು ತೆಗೆದುಕೊಂಡು. ಕ್ಲಿಯೋಪಾತ್ರಳಂತೆ ತಾನು ಯಾವ ಸಾಮ್ರಾಜ್ಯ ಹಾಳುಮಾಡಬೇಕಾಗಿದೆ. ?

ಸುತ್ತುಮುತ್ತಿನ ಜನ, ಪೇಟೆಯ ಜನ, ಸಭೆಗೆ ಹೋದರೆ ಅಲ್ಲಿಯ ಜನ, ಸಿನಿಮಾ ಥಿಯೇಟರಿನ ಮುಂದಿನ ಜನರ ಕಣ್ಣೂ ತನ್ನ ಮೇಲೆಯೆ. ಮುಂದೆ ಕುರ್ಚಿಯ ಮೇಲೆ ಕುಳಿತಿದ್ದರೂ ಕತ್ತು ಹೊರಳಿಸಿ ನೋಡುವದನ್ನೂ ಲೆಕ್ಕಿಸದೆ ಹಿಂದಿನ ಸಾಲಿನಲ್ಲಿದ್ದ ತನ್ನನ್ನು ನೋಡುವ ಆಸೆ ಈ ಜನರಿಗೆ. ಅಷ್ಟೊಂದು ಜೊತೆ ಕಣ್ಣುಗಳು ತನ್ನನ್ನು ನೋಡುವಾಗ ತಾನು ಅವುಗಳನ್ನು ತಂಪಾಗಿಸಲು ಆದಷ್ಟು ರಮಣೀಯವಾಗಿ ಕಾಣಬೇಡವೇ? ಅದಕ್ಕೇ ತಾನು ಅಷ್ಟೊಂದು ಕಷ್ಟಪಟ್ಟು ಮುಖದ ಅಲಂಕಾರ ಮಾಡಿಕೊಂಡರೆ ಈ ಹೆಂಗಸರಿಗೇನು ಹೊಟ್ಟೆಕಿಚ್ಚು! ಪಕ್ಕದ ಮನೆ ಪಾರ್ವತಮ್ಮ ಪರಿಚಯದವರೊಡನೆ ಹೇಳುತ್ತಾರೆ: 'ಭಾರತೀ ಬಾಯಿಗಂತೂ ಮಕ್ಕಳಿಲ್ಲ ಮರಿಯಿಲ್ಲ. ಕೆಲಸ - ಬೊಗಸೆ ಇಲ್ಲಾ. ಗಂಡ ಹೆಂಡತಿ ಇಬ್ಬರ ಕೆಲಸಾ ಎಷ್ಟ ಹೊತ್ತಿಂದು. ಅದಕ್ಕs ಕನ್ನಡಿ ಮುಂದ ಕೂತುಕೊಂಡು ತಾಸುಗಟ್ಟಲೆ ವ್ಯಾಳ್ಯಾ ಕಳೀತಾಳ' ಅಂತ. ಮದುವೆಯಾಗಿ ನಾಲ್ಕು ವರ್ಷಗಳಾದರೂ ಮಕ್ಕಳಿಲ್ಲದಿದ್ದುದು ತನ್ನ ತಪ್ಪೇ? ಮೊದಮೊದಲು ಹಾಗೆ ತಿಳದದ್ದುಂಟು. ಆದರೆ ಡಾಕ್ಟರರ ಔಷಧಿ, ಇಂಜೆಕ್ಷನ್ನು ಎಲ್ಲ ಮುಗಿದ ಮೇಲೆ ತಿಳಿಯಿತು ತನ್ನಲ್ಲೇನೂ ದೋಷವಿಲ್ಲ ಎಂದು. ಇನ್ನು ಪರೀಕ್ಷಿಸಿಕೊಳ್ಳಬೇಕಾದವರು ಅವರೇ ಅಲ್ಲವೇ? ಆದರೆ ಅವರಿಗೇಕೋ ಡಾಕ್ಟರರ ಹತ್ತಿರ ಹೋಗುವ ಮನಸ್ಸಿದ್ದ ಹಾಗೆ ಕಾಣುವದಿಲ್ಲ. ಹೋಗುವದನ್ನು ಮುಂದು ಮುಂದಕ್ಕೆ ತಳ್ಳುತ್ತಿದ್ದಾರೆ. ಅವರಿಗೆ ಭಯವೋ, ನಾಚಿಗೆಯೊ ತಿಳಿಯದು. ತಾನೂ ಈ ವಿಷಯದಲ್ಲಿ ಒತ್ತಾಯ ಮಾಡುವಂತಿಲ್ಲ. ಮಕ್ಕಳು ಅಗುವುದು ಸಾಧ್ಯವೇ ಇಲ್ಲ ಎಂದು ಉತ್ತರ ಕೇಳಲು ಸಿದ್ಧಳಿಲ್ಲ ತಾನು. ಇಂದಿಲ್ಲ ನಾಳೆ ಆದಾವು ಎನ್ನುವ ಭರವಸೆ ಇಟ್ಟುಕೊಳ್ಳುವುದೇ ಒಳ್ಳೆಯದಲ್ಲವೇ ?

ಇರುವವರೇ ಇಬ್ಬರು. ಇಬ್ಬರ ಅಡಿಗೆ, ತಿಂಡಿ ಎಲ್ಲವನ್ನೂ ಗ್ಯಾಸಿನಲ್ಲಿ ಮಾಡಿ ಮುಗಿಸುವುದು ಎಷ್ಟು ಹೊತ್ತಿನ ಮಾತು. ಉಳಿದ ಹೊತ್ತೆಲ್ಲಾ ಬೇಜಾರು. ಕೆಲವು ದಿನ ಕತೆ-ಕಾದಂಬರಿಗಳನ್ನು ಓದಿ ಕಳೆದದ್ದಾಯಿತು; ಹೆಣಿಕೆ, ಕಸೂತಿ ಮಾಡಿದ್ದಾಯಿತು. ಆದರೆ ಇವೆಲ್ಲಾ ತನ್ನ ಕಪ್ಪು ಕಣ್ಣುಗಳನ್ನು ಕೆಡಿಸಿಯಾವೇ ಎನ್ನುವ ಹೆದರಿಕೆ ತನಗೆ. ಈ ಕಣ್ಣುಗಳ ಮಿಂಚಿನ ಗೊಂಚಲಲ್ಲಿ ಯಾವ ಭ್ರಮರವನ್ನಾದರೂ ಸೆರೆಹಿಡಿಯಬಲ್ಲವಳು ತಾನು. ಹೋಗಹೋಗುತ್ತ ಒಮ್ಮೆ ದಿಟ್ಟಿಸಿದರೆ ಸಾಕು, ತನ್ನನ್ನು ನೋಡಿದ ತರುಣ ತತ್ತರಿಸಿಬಿಡುತ್ತಾನೆ ಎನ್ನುವುದು ಅನುಭವಕ್ಕೆ ಬಂದ ಮಾತು.

ಆವತ್ತೂ ಹೀಗೇ ಹೊತ್ತು ಹೋಗದೆ ಮಧ್ಯಾಹ್ನ ಸಿನಿಮಾಕ್ಕೆ ಹೊರಟಿದ್ದಳು ತಾನು. ಅವರಿಗೆ ಪುರಸೊತ್ತು ಸಿಕ್ಕಿದಾಗೆಲ್ಲ ಒಬ್ಬಳೇ ಸಿನಿಮಾಕ್ಕ ಹೋಗುವಷ್ಟು ಸ್ವಾತಂತ್ರ್ಯವನ್ನವರು ತನಗೆ ಕೊಟ್ಟಿದ್ದಾರೆ. ಪಾಪ ಮನೆಯಲ್ಲಿ ಒಬ್ಬಳಿಗೇ ಬೇಜಾರು ಎಂದು ದೊಡ್ಡ ಮನಸ್ಸು ತೋರಿಸಿದ್ದಾರೆ. ತುಂಬಾ ಒಳ್ಳೆಯವರು ಅವರು. ಆದರೆ ಅವತ್ತು ಅಷ್ಟು ಆಸೆಯಿಂದ ಅಲಂಕರಿಸಿಕೊಂಡು ಸಿನಿಮಾಕ್ಕೆ ಹೋದರೆ ಟಿಕೆಟ್ಟೇ ಸಿಗಲಿಲ್ಲ. ಮನಸ್ಸಿಗೆ ತುಂಬಾ ಬೇಜಾರಾಯಿತು. ಹೋಗಲಿ, ಮ್ಯಾನೇಜರನನ್ನಾದರೂ ಕೇಳೋಣ ಎಂದು ಹೋದರೆ ಅಲ್ಲಿ ಅವರ ಮಗನೋ, ಸಂಬಂಧಿಯೋ ತುರಣನೊಬ್ಬನಿದ್ದ. ತನ್ನ ತೊಂದರೆಯನ್ನು ಹೇಳಿ ಪ್ಲೀಜ್ ಎಂದು ಒಮ್ಮೆ ಅವನನ್ನೇ ಆಸೆಕಣ್ಣುಗಳಿಂದ ನೋಡಿದೆ. ಅವನು ಅಲ್ಲಿ ನಿಲ್ಲಲಾರದವನಂತೆ ಚಡಪಡಿಸಿ ತಕ್ಷಣ ಎದ್ದು ಹೊರಟುಹೋಗಿ ಟಿಕೆಟ್ಟು ಸಂಪಾದಿಸಿ ತಂದುಕೊಟ್ಟ. ದುಡ್ಡು ಕೊಡ ಹೋದರೆ ತೆಗೆದುಕೊಳ್ಳಲೂ ಇಲ್ಲ. ಅವನ ಅವಸ್ಥೆಗೆ ಮುಗುಳ್ನಕ್ಕಿದ್ದಳು ತಾನು. ತನಗಿಂತಲೂ ಮುಂಚೆ ಅವನೇ ಥ್ಯಾಂಕ್ಸ್ ಹೇಳಿದ್ದ. ಆವತ್ತಿನ ಚಿತ್ರ ದುರಂತವಾಗಿದ್ದರೂ ತನ್ನ ಕಣ್ಣಲ್ಲಿ ನೀರೇ ಬರದೆ ತುಂಬಾ ಸಂತೋಷವಾಗಿತ್ತು, ಅದೇಕೊ. ಥೀಯೇಟರನಿಂದ ಬಸ್ ಸ್ಟ್ಯಾಂಡಿನವರೆಗೂ ಮಹಾರಾಣಿಯಂತೆ ದೃಢವಾಗಿ ಹೆಜ್ಜೆ ಇಟ್ಟು ನಡೆದು ಬಂದಿದ್ದಳು. ಬೆಲ್ ಹೊಡೆದು ಬಸ್ ಬಿಟ್ಟಿದ್ದ ಡ್ರೈವರ್ ತನ್ನನ್ನು ನೋಡಿ ನಿಲ್ಲಿಸಿದ್ದ. ಮನೆಗೆ ಬಂದು ಅವರೊಡನೆ ತುಂಬಾ ಮಾತನಾಡಿದ್ದಳು. ಟಿಕೆಟ್ ದೊರಕಿಸಿಕೊಂಡಿದ್ದ ವಿಷಯವೊಂದನ್ನು ಬಿಟ್ಟು ಉಳಿದೆಲ್ಲವನ್ನೂ ಹೇಳಿದ್ದಳು. ಸಿನಿಮಾದ ಕತೆ ಹೇಳಿದ್ದಳು. ಹಾಡು ಹೇಳಿದ್ದಳು. ಅಂದು ರಾತ್ರಿ ಕೂಡ ಅವರು 'ಅದೇಕೊ ಇಂದು ಬಹಳ ಖುಷಿಯಲ್ಲಿರುವೆಯಲ್ಲ?' ಎಂದಿದ್ದರು.

ಓದೋದನ್ನು ಹೆಣೆಯೋದನ್ನು ಬಿಟ್ಟಮೇಲೆ ಇನ್ನೇನು ತಾನೆ ಮಾಡಬೇಕು? ಕನ್ನಡಿಯ ಮುಂದೆ ಕುಳಿತು ತನ್ನ ಮೈಕಟ್ಟು, ಮುಖ, ಮೂಗು, ಕಣ್ಣು, ತುಟಿ, ತೋಳುಗಳ ಅಂದ ಚೆಂದ ನೋಡಿಕೊಂಡು ಕಾಲ ಕಳೆಯೋದು. ಅವುಗಳು ಮಾಸದ ಹಾಗೆ, ಕೆಡದ ಹಾಗೆ ಎರಡನೆಯವರಿಗೆ ಅಂದವಾಗಿ ಕಾಣುವ ಹಾಗೆ ಇರಿಸಿಕೊಳ್ಳುವದೇ ತನ್ನ ಕೆಲಸ. ತನ್ನನ್ನು ಕಾಣುವ ಗಂಡಸರ ಕಣ್ಣುಗಳಲ್ಲಿ ಮೆಚ್ಚುಗೆಯನ್ನು ಕಾಣುವಷ್ಟೇ ಸಹಜವಾಗಿ ಹೆಂಗಸರ ಕಣ್ಣುಗಳಲ್ಲಿ ಈರ್ಷೆ, ತಿರಸ್ಕಾರವನ್ನೇ ತಾನು ನೋಡುವುದು. ಇವರು ಆಗಾಗ ಹೇಳುತ್ತಿರುತ್ತಾರೆ. ಹೆಣ್ಣಿನ ಇನ್ನೊಂದು ಹೆಸರು ಚಂಚಲತೆ ಎಂದು ಶೇಕ್‌ಸ್ಪಿಯರ್ ಬರೆದಿದ್ದಾನಂತೆ. ಆದರೆ ಹಾಗಲ್ಲ. ಹೆಣ್ಣಿನ ಇನ್ನೊಂದು ಹೆಸರು ಹೊಟ್ಟೆಕಿಚ್ಚು ಅಂತ ನನ್ನ ಭಾವನೆ. ನಿಜವಾಗಿ ನೋಡಿದರೆ ಗಂಡಸಿನ ಮನಸ್ಸೇ ಚಂಚಲ. ಅದನ್ನು ಎಲ್ಲ ಹೆಂಡತಿಯರೂ ಕಂಡುಹಿಡಿದಿದ್ದಾರೆ. ಅದಕ್ಕೇ ತನ್ನ ಅಲಂಕಾರ ಮತ್ತು ಸಲೀಸಾಗಿ ಸಂಭಾಷಿಸುವ ತನ್ನ ಗುಣಕ್ಕೆ ತಮ್ಮ ಗಂಡಂದಿರು ಮಾರು ಹೋದಾರು ಎನ್ನುವ ಭಯ ಅವರಿಗೆ. ಅದಕ್ಕೇ ಅವತ್ತು ರಜನಿ ಹಾಗೆ ಮಾಡಿದ್ದು. ಪೇಟೆಗೆ ಹೋಗಬೇಕೂಂತ ಬಸ್ಸಿಗೆ ಕಾಯ್ತಾ ನಿಂತಿದ್ದಳು ತಾನು. ತನ್ನ ಬಾಲ್ಯದ ಗೆಳತಿ ರಜನಿ, ಅವಳ ಗಂಡ ಬಂದರು ಅದೇ ಸ್ಟಾಪಿಗೆ. ಗಂಡನ ಕೈಯಲ್ಲಿ ಅವಳ ಕೈ ಮಗು ಇತ್ತು. ಅವಳನ್ನು ನೋಡಿ ನಕ್ಕೆ. ಆಗ ಅವಳೇ ತನ್ನ ಗಂಡನ ಪರಿಚಯ ಮಾಡಿಸಿದಳು. ತಾನು ಅವನ ಕಣ್ಣುಗಳನ್ನೇ ದಿಟ್ಟಿಸಿ ನೋಡಿ 'ನಮಸ್ಕಾರ' ಎಂದು ಮಗೂನ ಗಲ್ಲ ಹಿಂಡಿದ್ದಳು. ಒಂದೆರಡು ನಿಮಿಷ ಮಾತನಾಡುತ್ತಿದ್ದ ರಜನಿ ಅಲ್ಲಿಗೆ ಬಂದಿದ್ದ ಆಟೋರಿಕ್ಷಾ ಕರೆದು, 'ನಾವು ಬೇಗ ಹೋಗ್ಬೇಕು, ಸಾರಿ, ಇನ್ನೊಂದು ಸಾರಿ ಭೆಟ್ಟಿಯಾಗ್ತೀವಿ' ಎಂದು ಗಂಡನನ್ನು ಎಳೆದುಕೊಂಡೇ ಹತ್ತಿದ್ದಳು ರಿಕ್ಷಾ. ತನಗೆ ಗೊತ್ತಾಗಿತ್ತು ಅವಳ ಗಡಿಬಿಡಿಗೆ ಕಾರಣ. ರಜನಿಯ ಬಡಕಲು ದೇಹ, ಉದುರಿದ ಕೂದಲು, ಒಣಗಿದ ಮೈ ತನ್ನ ಕಣ್ಣ ಮುಂದೆ ಕಟ್ಟಿದ್ದವು. ಒಂದೇ ಹೆರಿಗೆಗೆ ಹೇಗಾಗಿದ್ದಾಳೆ ರಜನಿ! ಅವಳ ಗಂಡ ರಿಕ್ಷಾ ಹತ್ತಿ ಕೂತ ಮೇಲೆ ಹಿಂದಿನಿಂದ ಹೆಂಡತಿಗೆ ತಿಳಿಯದ ಹಾಗೆ ತನ್ನನ್ನು ಆಸೆಗಣ್ಣುಗಳಿಂದ ನೋಡಿದ್ದ. ವಿಜಯದ ನಗು ನಕ್ಕಿದ್ದಳು ತಾನು.

ರಜನಿಯ ನೆನಪಿನೊಡನೆ ತನ್ನ ಬಾಲ್ಯವೂ ನೆನಪಾಗುತ್ತದೆ. ಎಂಟು ಮಕ್ಕಳಿರುವ ದೊಡ್ಡ ಕುಟುಂಬದಲ್ಲಿ ಹುಟ್ಟಿದವಳು ತಾನು. ಗುಮಾಸ್ತ ತಂದೆ ತರುವ ಸಂಬಳ ಸಂಸಾರಕ್ಕೇ ಸಾಲುತ್ತಿರಲಿಲ್ಲ. ನಾಲ್ಕನೆಯವಳಾಗಿ ತಾನು ಹುಟ್ಟಿದಾಗ ಅಪ್ಪ ಕಣ್ಣೀರು ಹಾಕಿದ್ದಳಂತೆ, ಮತ್ತೂ ಹೆಣ್ಣೇ ಹುಟ್ಟಿತು ಎಂದು ಮೊದಲಿನ ಮೂವರು ಅಕ್ಕಂದಿರಿಗಿಂತ

ತಾನು ಚೆಲುವೆ ಅನ್ನೋದನ್ನ ಕಂಡಾಗ, 'ಹೋಗಲಿ, ಹುಡುಗಿ ಚೆಂದಾಗಿದ್ದರೆ ಬೇಗ ಮದುವೆಯಾದರೂ ಆಗುತ್ತದೆ' ಎಂದುಕೊಂಡು ಸಮಾಧಾನಪಟ್ಟಿದ್ದರಂತೆ. ನಾಲ್ಕು ಜನ ಗಂಡುಮಕ್ಕಳಲ್ಲಿ ಇಬ್ಬರು ಸತ್ತುಹೋಗಿ ಇಬ್ಬರು ಮಾತ್ರ ಉಳಿದಿದ್ದರು. ಅವರಿಬ್ಬರೇ ತಮ್ಮ ಸ್ವಂತ ಮಕ್ಕಳು, ಉಳಿದವೆಲ್ಲಾ ಪರರವು ಎನ್ನುವಂತಿತ್ತು ನಮ್ಮ ಅಜ್ಜಿಯ ನಡವಳಿಕೆ. ಅಜ್ಜಿಯ ಆಡಳಿತದಲ್ಲೇ ಮನೆಯು ನಡೆಯುತ್ತಿದ್ದದ್ದು. ಅವಳ ಕೈ ಬಿಗಿ, ಅವಳಾದುದರಿಂದ ಇಷ್ಟು ದೊಡ್ಡ ಸಂಸಾರ ಇಷ್ಟು ಸಂಬಳದಲ್ಲಿ ನಡೆಸ್ತಾಳೆ ಅಂತ ಅಪ್ಪ ಆಗಾಗ ಹೇಳುತ್ತಿದ್ದರು. ತಮಗೆ ವರ್ಷಕ್ಕೆ ಒಂದೇ ಸಲ ಬಟ್ಟೆ ಹೊಲಿಸೋದು. ಅದೂ ದೀಪಾವಳಿಗೆ. ತಾನೇ ಎಲ್ಲರಿಗಿಂತ ಚಿಕ್ಕವಳಾಗಿದ್ದರಿಂದ ಉಟ್ಟುಬಿಟ್ಟ ಬಟ್ಟೆ ತಾನು ತೊಡಬೇಕು. ತಾನು ಆಟದಲ್ಲಿ ಕಾಜಿನ ಬಳೆ ಒಡೆದುಕೊಳ್ಳುತ್ತಿದ್ದದ್ದು ಬಹಳ. ಅದಕ್ಕೆ ಅಜ್ಜಿ ಜಾಣತನದಿಂದ ನಾಲ್ಕು ನಾಲ್ಕು ಕರ್ಪೂರದ ಬಳೆ ಹಾಕಿಸುತ್ತಿದ್ದದ್ದು. ಅದೂ ವರ್ಷಕ್ಕೊಮ್ಮೆ ರಜನಿ ತನ್ನ ಜೊತೆಯವಳೇ ಆಗಿದ್ದರೂ ಅನುಕೂಲವಂತರ ಮಗಳು. ಬಿಟ್ಟು ಉಡೋದಕ್ಕೆ ಬಣ್ಣ ಬಣ್ಣದ ಅಂಗಿ ಪರಕಾರಗಳಿದ್ದವು. ಆಗಾಗ ಅವಳ ಅಣ್ಣ ತಲೆಗೆ ಬಣ್ಣದ ಹೇರ್‌ಪಿನ್ನು, ರಿಬ್ಬನ್ನು, ಪ್ಲಾಸ್ಟಿಕ್ ಹೂವುಗಳನ್ನು ಕೊಂಡುತರುತ್ತಿದ್ದ. ಕೊರಳಿಗೆ ಬಣ್ಣದ ಮಣಿಗಳ ಸರ, ಕೈಗೆ ನಾನಾತರದ ಬಳೆಗಳು. ಇವುಗಳನ್ನೆಲ್ಲ ಅವಳು ಉಟ್ಟು ತೊಟ್ಟು ತನ್ನ ಮುಂದೆ ಬೇಕೆಂದೇ ಮೆರೆಯುತ್ತಿದ್ದಳು. ಎಲ್ಲವುಗಳಿಂಗಿಂತ ಹೆಚ್ಚಾಗಿ ಅವಳ ಕಿವಿಯ ಲೋಲಾಕು ತಾನು ಒಮ್ಮೆ ಹಾಕಿಕೋಬೇಕೆಂದು ತುಂಬಾ ಆಸೆಪಟ್ಟಿದ್ದಳು. ರಜನಿ ತನಗೂ ಒಮ್ಮೆ ಕೊಡಬಹುದೇನೋ ಎನ್ನುವ ಆಸೆಯಿಂದ ಅವಳನ್ನೇ ಕೇಳಿದ್ದಳು. ಅದಕ್ಕೆ ರಜನಿ ಉಬ್ಬಿ ಗೋಣು ಅಲುಗಾಡಿಸುತ್ತ 'ಉಹುಂ, ನನ್ನ ಲೋಲಾಕು ಯಾರಿಗೂ ಕೊಡೂದಿಲ್ಲ, ನಮ್ಮ ತಾಯಿ ಬೈಯ್ತಾರ' ಎಂದಿದ್ದಳು. ಆಗ ತೂಗುತ್ತಿದ್ದ ಲೋಲಾಕುಗಳನ್ನೇ ಹಿಡಿದು ಜಗ್ಗಿ ಬಿಡಲೋ ಎನ್ನುವಷ್ಟು ಸಿಟ್ಟು ಬಂದಿತು ತನಗೆ. ಆದರೆ ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿರಲಿಲ್ಲ. ಅದೇ ರಜನಿ ಬಸ್ ಸ್ಟಾಪಿನಲ್ಲಿ ತನ್ನ ಬಂಗಾರದ ಲೋಲಾಕುಗಳನ್ನೇ ದಿಟ್ಟಿಸಿ ನೋಡುತ್ತಿದ್ದಳಲ್ಲ. ಆಗ ಹಂಗಿಸಬೇಕೆನ್ನುವ ಮನಸ್ಸಾಗಿತ್ತು ತನಗೆ. ತನ್ನ ತುಟಿಗಳ ಮೇಲಿನ ವ್ಯಂಗ್ಯವನ್ನು ನೋಡಿಯೋ ಅಥವಾ ಲೋಲಾಕು ಕೇಳಿದಂತೆಯೇ ಅವಳ ಗಂಡನನ್ನೂ ತಾನು ಕೇಳುವೆನೆನ್ನುವ ಭಯದಿಂದಲೋ ಅಷ್ಟು ಬೇಗ ಪಲಾಯನ ಮಾಡಿದ್ದಳು ರಜನಿ.

ರಜನಿಯ ಗಂಡನನ್ನು ತಾನು ಆಸೆ ಪಡುತ್ತೇನೆಯೇ? ಅವನ ದಪ್ಪ ಹೊಟ್ಟೆಯೋ, ಆ ಮೀಸೆಯೋ, ಕನ್ನಡಕದ ಕಣ್ಣುಗಳೋ ಒಂದೂ ಹಿಡಿಸಲಿಲ್ಲ ತನಗೆ. ತಾನು ಯಾಕೆ ಬೇರೆಯವರ ಗಂಡಂದಿರನ್ನು ಆಸೆಪಡಬೇಕು? ಈ ಹೆಂಗಸರಿಗೆಲ್ಲಾ ಇದೊಂದು ಹುಚ್ಚು. ತನ್ನ ಅಲಂಕಾರಕ್ಕೆ ಸ್ವತಂತ್ರ ನಡವಳಿಕೆಗೆ ಇವರೆಲ್ಲ ಕೂಡಿ ಮಾಡುವ ಅಪಾರ್ಥ ಇದು. ಸುಮ್ಮನೆ ಏನೋ ನಾಲ್ಕು ಜನರಲ್ಲಿ ಚೆನ್ನಾಗಿ ಕಾಣಬೇಕು ಎನ್ನುವ ಆಸೆಯಿಂದ ಚಿಕ್ಕಂದಿನ ಬಡತನದಲ್ಲಿ ಈಡೇರದ ಆಸೆಗಳನ್ನು ಈಗ ಪೂರೈಸಿಕೊಳ್ಳಬೇಕು ಎನ್ನುವ ಛಲದಿಂದ ತಾನು ಅಲಂಕರಿಸಿಕೊಂಡರೆ ಇವರು ತಮ್ಮ ಗಂಡಂದಿರನ್ನು ಬುಟ್ಟಿಗೆ ಹಾಕಿಕೊಳ್ಳೋದಕ್ಕೆ ಇವಳು ಹೀಗೆಲ್ಲ ಮಾಡೋದು ಎಂದು ತಿಳೀತಾರಲ್ಲ, ಗುರುತಾದಾಗ ನಾಲ್ಕು ದಿನ ಚೆನ್ನಾಗಿ ನಡೆದುಕೋತಾರೆ. ಆ ಮೇಲೆ ತನ್ನನ್ನು ಕಂಡೂ ಕಾಣದವರ ಹಾಗೆ ಅಡ್ಡಾಡೋದು, ಎಲ್ಲಿ ಹೋದರೂ ತನ್ನ ಜೊತೆಗೆ ತಿರುಗಾಡೋದಕ್ಕೆ ಹೆದರೋದು ಸುರುಮಾಡ್ತಾರೆ. ತನ್ನನ್ನು ದೂರವಿಡ್ತಾರೆ. ಆ ಕಸ್ತೂರಿ ಹೊಸತಾಗಿ ಗುರುತಾದಾಗ ಎಷ್ಟು ಪ್ರೀತಿಯಿಂದ ಇದ್ದಳು. ಮನೆಗೆ ಬರೋದು ಹೋಗೋದು ಮಾಡ್ತಾ ಇದ್ದಳು. ತನ್ನಲ್ಲಿದ್ದ ಎಂಬ್ರಾಯಡರಿ ಡಿಜಾಯಿನ್ ಬರೆದುಕೊಂಡಳು. ತನ್ನಿಂದ ಬಟ್ಟೆ ಮೇಲೆ ಪೇಂಟ್ ಮಾಡೋದು ಕೂಡ ಕಲಿತಳು. ಆದರೆ ಇತ್ತಿತ್ತ ಬರೋದು ಬಿಟ್ಟಳು. ಕಂಡರೆ ಮಾತಾಡಿಸೋದೂ ಇಲ್ಲ. ಒಂದು ದಿನ ತಾನೇ ಅವಳ ಮನೆಗೆ ಹೋದರೆ ಸರಿಯಾಗಿ ಮಾಡನಾಡಲೂ ಇಲ್ಲ. ತಾನೆಲ್ಲೋ ಹೊರಗೆ ಹೋಗಬೇಕೂಂತ ತನ್ನನ್ನ ಎಬ್ಬಿಸಿ ಮನೆಗೆ ಬೀಗ ಹಾಕಿ ಮಗೂನ ಎತ್ತಿಕೊಂಡು ಹೊರಟೇ ಬಿಟ್ಟಳು. ಬಹಳ ದಿನ ಇವಳು ಯಾಕೆ ಹೀಗೆ ಮಾಡ್ತಾಳೆ ಅಂತ ಕಾರಣ ತಿಳೀಲಾರದೆ ಮನಸ್ಸಿನಲ್ಲೇ ಒದ್ದಾಡ್ತಿದ್ದೆ. ಅವಳನ್ನೇ ಕೇಳೋದಕ್ಕೆ ಬಿಗುಮಾನ. ಕೊನೆಗೆ ಕಸ್ತೂರಿಯ ನಾದಿನಿ ಯಾರ ಹತ್ತಿರವೋ ಹೇಳಿದಳಂತೆ, 'ನಮ್ಮಣ್ಣ ಅತ್ತಿಗೇನ ಬಯ್ದರು.

'ನೋಡು ಭಾರತೀ ಬಾಯಿನ ನೋಡಿ ಕಲಿತ್ಕೋ ನೀಟಾಗಿರೋದನ್ನ. ನೀನೋ ಮನೇಲಿ ಮುಸುರೆ ತಿಕ್ಕೋಳಹಾಗಿರ್ತಿ,' ಅಂತ, ಅವರು ಹಾಗೆಂದರೆ ತನ್ನದೇನು ತಪ್ಪೂಂತ ತಿಳೀಲಿಲ್ಲ. ಅಲಂಕಾರ ಹ್ಯಾಗೆ ಮಾಡ್ಕೊಳ್ಳೋದು ಅಂತ ತನ್ನ ಕೇಳಿದ್ದರೆ ತಾನೇ ಹೇಳಿಕೊಡುತ್ತಿದ್ದಳು. ತನ್ನನ್ನ ಕೇಳಲೇ ಇಲ್ಲ. ಅದು ಬಿಟ್ಟು ಹೀಗೆ ಗುರ್ರ್ ಅಂತಿದ್ದರೆ ತಾನೇನು ಮಾಡಬೇಕು? ಮತ್ತೇನು ಮಾಡೋದು, ಅವತ್ತು ಇನ್ನಷ್ಟು ಚೆನ್ನಾಗಿ ಅಲಂಕಾರ ಮಾಡಿಕೊಂಡು ಗೇಟಿನ ಹತ್ತಿರ ನಿಂತಳು. ಕಸ್ತೂರಿಯ ಗಂಡ ಬೀದೀಲಿ ಹೋಗುವಾಗ ಬರುವಾಗಲೆಲ್ಲ ತನ್ನ ಮನೆ ಕಡೆಗೆ ಹೊರಳಿ ನೋಡದೆ ಮುಂದೆ ಹೋಗುವದಿಲ್ಲ ಅನ್ನೋದು ತನಗೆ ಗೊತ್ತಾಗಿ ಬಿಟ್ಟಿದೆ. ಒಮ್ಮೊಮ್ಮೆ ಹೊರಗಿದ್ದು ಅವರ ಕಣ್ಣಿಗೆ ಬೀಳ್ತಾಳೆ. ಒಮ್ಮೊಮ್ಮೆ ಒಳಗೇ ಇದ್ದು ಹಜಾರದಿಂದಲೋ, ಅಡುಗೆ ಮನೆ ಕಿಟಕಿಯಿಂದಲೋ ಅವರನ್ನ ನೋಡ್ತಾಳೆ. ಒಳಗೇ ಇದ್ದು ಅವರನ್ನ ಚಿಟುಕುಮುಳ್ಳಾಡಿಸ್ತಾಳೆ. ತಾನು ಹೊರಗೆ ಕಾಣದೆ ಇದ್ದಾಗ ಅವರ ಮುಖ ಬಾಡಿ ಹೋಗುತ್ತದೆ. ಆಗ ತುಂಬಾ ಸಂತೋಷ ತನಗೆ, ಗೆಲುವಿನ ನಗು ನಗುತ್ತಾಳೆ.

ಆದರೆ ಕಸ್ತೂರಿಯೊಡನೆ ಅವಳ ಗಂಡ ತುಂಬಾ ಜಗಳ ಮಾಡಿ ಅವಳ್ನ ತೌರುಮನೆಗೆ ಕಳಿಸಿಬಿಟ್ಟಿದ್ದಾರೆ ಅಂತ ಕೆಲಸದ ಗೋದುಬಾಯಿ ಹೇಳಿದಾಗಿನಿಂದ ತನ್ನ ಚೆಲ್ಲಾಟ ಬಹಳವಾಯಿತೇನೋ ಎನ್ನಿಸಿತ್ತು ತನಗೆ. ಆದರೆ ಅವಳು ಹೋಗುವಾಗ ಆಡಿದ ಮಾತು ಕೇಳಿದರೆ ತನ್ನ ಮೈ ಉರಿಯುತ್ತದೆ. ತಾನೇನೋ ನಡತೆ ಇಲ್ಲದವಳಂತೆ. ಗಂಡನಿಂದ ಸುಖವಿಲ್ಲ ಅಂತ ಬೇರೆ ಗಂಡಸರ ಗೆಳೆತನ ಮಾಡ್ತಾಳಂತೆ. ಮನಸ್ಸು ಮುರಿದು ಹೋಗಿತ್ತು. ತಾನು ನಡತೆ ಕೆಟ್ಟವಳೇ? ಚೆನ್ನಾಗಿ ಅಲಂಕಾರ ಮಾಡಿಕೊಂಡರೆ ಸೂಳೆ ಹಾಗೆ ಮೆರಿತಾಳೆ ಅಂತಾರೆ. ಯಾಕೆ, ಗೃಹಿಣಿಯಾದವಳು ಅಲಂಕಾರ ಮಾಡಿಕೋಬಾರದು ಎಂದು ಯಾವ ಶಾಸ್ತ್ರದಲ್ಲಿ ಹೇಳಿದೆ? ಗಂಡಸರನ್ನ ನೋಡಿದರೆ, ಮಾತನಾಡಿಸಿದರೆ, ಧೈರ್ಯವಾಗಿ ಅವರಿಗೆ ಉತ್ತರ ಕೊಟ್ಟರೆ ಎಲ್ಲರೂ ಇವಳ ಗೆಳೆಯರೇ ಎಂದು ಆಡಿಕೊಳ್ತಾರೆ., ಆಡಿಕೊಳ್ಳೋದಕ್ಕೆ ಇವರದೇನು ಗಂಟು ಹೋದೀತು. ದೇವರು ಚುರುಕಾದ ನಾಲಿಗೆ ಕೊಟ್ಟಿದ್ದಾನೆ. ಆಡ್ತಾರೆ. ತಾನು ಹೇಗಿದ್ದರೆ ಇವರಿಗೇನು? ತಾನು ಎಂಥವಳಿದ್ದೇನೆ ಎನ್ನೋದು ತನಗೆ ಗೊತ್ತಿದೆ. ತನ್ನ ಗಂಡ ತನ್ನೊಡನೆ ಪ್ರೀತಿಯಿಂದ ಇದ್ದರೆ ಸಾಕು. ಸಾಕೇ? ಸಾಕಲ್ಲ ಉಹುಂ ಸಾಕಾಗೊಲ್ಲ. ಗಂಡ ಪ್ರೀತಿಯಿಂದ ಏನೋ ಇದ್ದಾರೆ. ಆದರೆ ಒಂದು ಮಗು ಆದರೂ ಆಗಲೊಲ್ಲದಲ್ಲ. ತನ್ನ ವೇಳೆಗೆ ಕೆಲಸಗಳಿಗೆ ಒಂದು ಕೇಂದ್ರಬಿಂದು ಸಿಗುತ್ತದೆ ಆಗ. ಈಗ ಒಂದೆರಡು ತಿಂಗಳಿಂದ ಇದೇ ಮಾತು ಕೊರೀತಾ ಇದೆ ಎದೆಯಲ್ಲಿ. ಹೊರಗೆಲ್ಲಾ ಮಹಾರಾಣಿಯಂತೆ ಮೆರೆದು ಬಂದರೂ ಮನೆ ಮಾತ್ರ ಬಿಕೋ ಎನ್ನುತ್ತದೆ ತನಗೆ. ರಾಣಿ, ಆಳು, ದಾಸಿ ಎಲ್ಲವೂ ತಾನೇ ಆಗ. ಈ ಏಕಾಕಿತನ ಬೇಸರವಾಗಿ ಚೆನ್ನಾಗಿ ಅತ್ತುಬಿಡ್ತಾಳೆ ಆಗಾಗ. ಮನಸ್ಸಿನ ಸಮಾಧಾನಕ್ಕೆ ಮತ್ತೆ ಮತ್ತೆ ಓದತೊಡಗಿದ್ದಳು ತಾನು. ಮಹಾಭಾರತ ಓದಬೇಕೆಂದು ಕುಳಿತರೆ ತನ್ನ ಕಳ್ಳ ಮನಸ್ಸು ಉಳಿದೆಲ್ಲ ಕಥೆಯನ್ನು ಬಿಟ್ಟು ಮತ್ತೆ ಮತ್ತೆ ಅಂಬಿಕೆ, ಅಂಬಾಲಿಕೆ, ಕುಂತಿಯರ ಕಥೆಗೇ ಹೊರಳುತ್ತದೆ. ಅಂಬಿಕೆ, ಅಂಬಾಲಿಕೆಯರು ಸಂತಾನವಿಲ್ಲದ ವಿಧವೆಯರು. ಪಟ್ಟಕ್ಕೆ ಬಾಧ್ಯಸ್ಥರಿಲ್ಲ. ಸರಿ ಅತ್ತೆಯ ಆಜ್ಞೆಯಂತೆ ಅವರಿಬ್ಬರೂ ದ್ವೈಪಾಯನನಿಂದ ಮಕ್ಕಳನ್ನು ಪಡೆದರು. ಪಾಂಡುವಿಗೆ ಮುನಿಯ ಶಾಪ. ಇನ್ನು ಮಕ್ಕಳಾಗುವ ಸಾಧ್ಯತೆ ಇಲ್ಲ ಸರಿ. ಅವಳೂ ದೇವತೆಗಳ ವರಗಳಿಂದ ಮಕ್ಕಳನ್ನು ಪಡೆದಳು. ಮಹಾಭಾರತದ ಕಾಲದಲ್ಲಿ ಇದು ನಡೆಯಬಹುದಾದರೆ ಇಂದಿನ ಕಲಿಯುಗದಲ್ಲಿ ಯಾಕೆ ನಡೆಯಬಾರದು? ತನ್ನ ಮನಸ್ಸು ಹೊಯ್ದಾಡುತ್ತಲೇ ಇದೆ. ತಾನು ಒಳ್ಳೆಯವಳು, ಸಾಧ್ವಿ ಎಂದರೆ ಈ ಹೆಂಗಸರು ನಂಬುವಹಾಗಿಲ್ಲ. ತನಗೆ ಕೆಟ್ಟ ಹೆಸರಿಟ್ಟು ನಗುತ್ತಾರೆ. ಹಿಂದೆಮುಂದೆ ಪಿಸಿಪಿಸಿಗುಡ್ತಾರೆ. ಯಾರ ಯಾರ ಜತೆಗೋ ತನ್ನ ಹೆಸರು ಸೇರಿಸಿಮಾತಾಡ್ತಾರೆ. ಆ ಎಂಜಿನೀಯರು ಶ್ರೀನಿವಾಸ ತನ್ನ ಅಣ್ಣನ ಗೆಳೆಯ, ಅವ ನಾಲ್ಕಾರು ಸಲ ಜೀಪು ತಕ್ಕೊಂಡು ತಮ್ಮ ಮನೆಗೆ ಬಂದ. ಸರಿ, ಸುರುವಾಯಿತು ಇವರ ಗಾಸಿಪ್. ಆ ಪ್ರಲ್ಹಾದ ಅವರ ಆಫೀಸಿನಲ್ಲೇ ಕೆಲಸ ಮಾಡೋರು. ಅವರು ತನ್ನ ಜತೆಗೆ ನಗನಗ್ತಾ ಮಾತಾಡಿದ್ದಕ್ಕೆ ಅವರಿಗೂ ನನಗೂ ಗಂಟು ಹಾಕಿದರು. ಇನ್ನು ಪ್ರಭಾಕರ ... ಛಛ್. ಗೋಡೆಯ ಮೇಲಿನ ಗಡಿಯಾರದೆಡೆಗೆ ನೋಡಿದಳು ಭಾರತಿ. ಅಬ್ಬಾ! ಆಗಲೇ ಎರಡೂವರೆ, ಪ್ರಭಾಕರ ತನಗಾಗಿ

ಕಾಯ್ತಿರ್ತಾರೆ. 'ವೇಳೆಗೆ ಸರಿಯಾಗಿ ಬರ್ತೀನಿ. ಶೋ ಮುಗಿಸಿಕೊಂಡು ಎಲ್ಲಿಯಾದರೂ ಹೋಗೋಣ ಎಂದಿದ್ದಳು ತಾನು.

ಗಡಿಬಿಡಿಯಲ್ಲಾದರೂ ಒಣ ಕೂದಲುಗಳನ್ನು ಮೇಲೆ ಎತ್ತಿ ಕಟ್ಟಿ ದೊಡ್ಡ ಗಂಟು ಹಾಕಿದಳು. ತಿಳಿ ಹಳದಿ ಬಣ್ಣದ ಶಿಫಾನ್ ಸೀರೆ ಉಟ್ಟು ಕರಿ ಚೋಲಿ ಹಾಕಿಕೊಂಡಳು. ಮುಖಾಲಂಕಾರ ಮೊದಲೇ ಮುಗಿದಿತ್ತು. ಕೆಂಪುಹರಳಿನ ಲೋಲಾಕು ಹಾಕಿಕೊಂಡರೆ ತನ್ನ ಅಲಂಕಾರ ಮುಗಿಯಿತು. ಆ ಲೋಲಾಕು ತಮ್ಮ ಮುಖಕ್ಕೆ ಬಹಳ ಚೆನ್ನಾಗಿ ಒಪ್ಪುತ್ತದೆ ಎಂದ ಹಿಂದಿನ ದಿನ ಪ್ರಭಾಕರ ಹೇಳಿ ದೂರದಿಂದಲೇ ಅವುಗಳಿಗೆ ಕೈ ಹಚ್ಚಿ ಮುತ್ತಿಟ್ಟಿದ್ದರು. 'ನೀನು ಒಪ್ಪಿದರೆ... ಎಂದು ಆಸೆಗಣ್ಣುಗಳಿಂದ ತನ್ನ ಕೆನ್ನೆಗಳನ್ನೇ ದಿಟ್ಟಿಸಿದ್ದರು. ತಾನು ಒಪ್ಪಿದ್ದರೆ... ರೆ ಅಥವಾ ತಾನು ಇವತ್ತಾದರೂ ಒಪ್ಪಿದರೆ....

ಎಂದೊಡನೆ ಯಾಕೋ ತಲೆ ಸುತ್ತುವಂತಾಯಿತು. ಬೆಳಿಗ್ಗೆಯೂ ವಾಂತಿ ಆಗಿತ್ತು. ಪಿತ್ತವಾಗಿರಬೇಕೆಂದು ಗಂಡನಿಗೆ ಹೇಳದೆ ಹಾಗೆಯೇ ಅಡಿಗೆ ಮಾಡಿ ಮುಗಿಸಿ, ಊಟ ಹಾಕಿ, ತಿಂಡಿಯ ಡಬ್ಬಿ ಕೊಟ್ಟು ಕಳಿಸಿದ್ದಳು. ತನಗೆ ಊಟವೇನೋ ಸೇರಿರಲಿಲ್ಲ. ಭಾರತಿ ಮತ್ತೆ ಬಚ್ಚಲಿಗೆ ಓಡಿದಳು. ಯಾಕೆ ಹೀಗಾಗುತ್ತದೆ ? ಯೋಚಿಸುತ್ತ ಭಾರತಿ ಕ್ಯಾಲೆಂಡರ್ ದಿಟ್ಟಿಸಿದಳು.

ಮುಖ ಅರಳಿತು. ಗಂಡನ ಭುಜಕ್ಕೆ ಒರಗಬೇಕೆನ್ನುವ ಬಯಕೆಯಾಯಿತು. ಹೊಯ್ದಾಡುವ ಲೋಲಾಕುಗಳನ್ನು ಕಳಚಿ ಇಟ್ಟು ಹಾಗೆಯೇ ಹಾಸಿಗೆಯ ಮೇಲೆ ಒರಗಿದಳು.

***

■■

## ನಿರೀಕ್ಷೆ

ಹಾವು ದೊಡ್ಡ ಕಪ್ಪೆಯೊಂದನ್ನು ನಿಧಾನವಾಗಿ ನುಂಗುತ್ತಿರುವಂತೆ, ಸಂಜೆಯ ಮಬ್ಬುಗತ್ತಲೆ ಸ್ವಲ್ಪಸ್ವಲ್ಪವಾಗಿ ಆ ಹಳ್ಳಿಯನ್ನು ಆವರಿಸುತ್ತಿತ್ತು. ಅದು ನಿಧಾನವಾದರೂ ಅಷ್ಟೆ, ಅವಸರವಾದರೂ ಅಡ್ಡಿಯಿಲ್ಲ ಎನ್ನುವಂತಿತ್ತು ಆ ಹಳ್ಳಿಗರ ವರ್ತನೆ. ಜೀವವಿದ್ದ ಶವಗಳಂತೆ ಚಲಿಸುತ್ತಿದ್ದರವರು. ಹೆಚ್ಚು ಕತ್ತಲು ಆವರಿಸುವ ಮೊದಲು ಎಲ್ಲರೂ ಮನೆಗಳಿಗೆ ಹೊಕ್ಕು ಬಾಗಿಲು ಜಡಿದು ಮಲಗಬೇಕೆನ್ನುವ ಹಂಚಿಕೆಯಯಲ್ಲಿದ್ದರು. ಎಲ್ಲಿಯೂ ಜೋರಾಗಿ ಮಾತನಾಡುವ ಧ್ವನಿ, ಹೆಣ್ಣುಮಕ್ಕಳ ಕಿಲಕಿಲ ನಗು, ಮಕ್ಕಳ ಕಿರುಚಾಟ ಕೇಳಿ ಬರದೆ ಹಳ್ಳಿ ಸ್ಮಶಾನ ಮೌನ ತಾಳಿತ್ತು.

ಹಿತ್ತಿಲ ಬಾಗಿಲ ಹತ್ತಿರ ಕಟ್ಟಿದ ಆಡನ್ನು ತಂಗಿ ಹಿಂಡಿಕೊಂಡ ಮೇಲೆ ರಹೀಮ ಅದನ್ನು ಒಳಗೆ ತಂದು ಚಾವಣಿಯಲ್ಲಿ ಕಟ್ಟಿದ. ಬಾಗಿಲು ಭದ್ರ ಮಾಡಿ, ಅಗ್ಗಿಷ್ಟಿಕೆಯ ಮೇಲೆ ಹಾಲು ಕಾಸುತ್ತ ಕುಳಿತ ತಂಗಿಯ ಹತ್ತಿರ ಬಂದು ಕುಳಿತು, ಕೆಂಡದ ಮೇಲೆ ಕೈಚಾಚಿ ಕೋಣೆಯ ಕಡೆಗೆ ನೋಡಿದ. ಕೋಣೆಯ ಬಾಗಿಲು ಮುಚ್ಚಿದ್ದರೂ ಆಗಾಗ ಸಣ್ಣಾಗಿ ನರಳುವ, ಅಳುವ ಧ್ವನಿ ಕೇಳಿಬರುತ್ತಿತ್ತು. ಅಣ್ಣನ ದೃಷ್ಟಿಯನ್ನನುಸರಿಸಿ ನೋಡಿದ ಫಾತಿಮಾ ಪಿಸುಗುಟ್ಟಿದಳು.

"ಹುಡುಗಿ ಹೆದರಿ ಕಂಗಾಲ ಆಗ್ಯಾಳ, ಎಷ್ಟು ಸಮಾಧಾನ ಹೇಳಿದರೂ ಕಣ್ಣೀರು ತಪ್ಪಲೊಲ್ಲವು."

"ಹೆದರದ ಏನ್ಮಾಡ್ತಾಳವಾ ಹೂವಿನಾಂಗ ಬೆಳದಾಕಿ, ತಾಯಿ ಸತ್ತಾಗಿಂದ ಅಂಗೈಮ್ಯಾಲೆ ಇಟಗೊಂಡು ಬೆಳಸೇನಿ ನೋಡೀಯಲ್ಲಾ. ಅಂಥಾ ಹೂವಿನ್ನ ಕಾಲಾಗ ಹಾಕಿ ತುಳದರ ಏನ ಮಾಡ್ಯಾಳು?" ನಿಟ್ಟುಸಿರಿನೊಂದಿಗೆ ರಹೀಮನ ಕಣ್ಣು ತುಂಬಿ ಬಂದವು.

"ಏನ ಮಾಡೋದು ಕೆಟ್ಟ ಕಾಲಾ. ಅಂಥಾ ಹೊತ್ತು ಬಂದsದ. ಈ ಯುದ್ಧ ಸುರು ಆದಾಗಿಂದ ಎಲ್ಲಾರು ಎಷ್ಟು ಕಷ್ಟ ಅನುಭವಿಸ್ತಾರ ನೋಡ್ತೀವಲ್ಲ ನಾವs.ಎಲ್ಲಾರದೂ ಇದs ಹಾಡsರೊಕ್ಕಾ, ಪ್ರಾಣಾ, ಮರ್ಯಾದಿ ಯಾವುದೂ ಉಳೀದಾಂಗ ಆಗೇದ. ಆ ಚೌದರಿ ಸೊಸಿ ರಜಿಯಾ ಎಷ್ಟು ಛಂದ ಇದ್ಲು. ಚಂದ್ರ ಆಗಿದ್ಲು ಹುಣ್ಣಿವಿ ಚಂದ್ರ. ಆಕಿನ್ನ ಹೊತ್ತು ಕೊಂಡ ಹೋಗಿ ಬಿಟ್ಟಾರಂತ -ಆ ರಾಕ್ಷಸರು. ಪಾsಪ ಪುಣ್ಯೇಕ ನಮ್ಮ ಹುಡುಗಿ ನಮ್ಮಲ್ಲೇ ಅದಾಳ. ಅದಕ್ಕರೆ ಸಮಾಧಾನ ಮಾಡಿಕೋ."

"ನಿನ್ನ ಗಂಡೆದಿ ನನಗ ಇಲ್ಲ ಫಾತಿಮಾs. ನಾ ಯಾವಾಗ್ಲೂ ಹಿಂಗs ಕಷ್ಟಾ, ದುಃಖಾ ನೋಡಿದರ ನನ್ನ ಕಣ್ಣೀರು ಕಪಾಳಕ್ಕ ಬರತಾವ.ಅದರಾಗ ನನ್ನ ಕಣ್ಣ ಮುಂದs... ನನ್ನ ಮಗಳ್ನ...." ರಹೀಮ ಬಿಕ್ಕಿದ.

"ನೀ ಹೀಂಗ ಅತ್ತರ ಆ ಹುಡುಗಿ ಮತ್ತಿಷ್ಟು ಕೈಕಾಲು ಕಳಕೋತಾಳ. ಈಗ ಆಕಿನ್ನ ಹಿಡಿಯೂsದ ರಗಡ ಆಗೇದ ನನಗ. ಮೂರ ದಿನಾ ಆತು, ಹೊಟ್ಟಿ ನೆಲಕ್ಕೆ ಹಚ್ಚಿ ಬಿದ್ದಾಕಿ ಮ್ಯಾಲೆ ಎದ್ದಿಲ್ಲ. ಅಂಥಾಕಿ ನಿನ್ನೆ ರಾತ್ರಿ ಹಿತ್ತಲ ಬಾಗಿಲು ತಗದು ತೂರ್ಯಾಡಿಕೋತ ಹೊಂಟಿದ್ಲು ಬಾವೀ ಬೀಳ್ಲಿಕ್ಕೆ. ನಾನs ಹಿಡದು ಎಳಕೊಂಡು ಬಂದೆ.":

"ತೋಬಾ ತೋಬಾ ಯಾ ಅಲ್ಲಾs ನಾ ಇನ್ನೂ ಏನೇನ ನೋಡಬೇಕಪ್ಪಾ. ಕಾಶೀಮ ಎಷ್ಟು ದಿನ ಆತು ಬಂದೇ ಇಲ್ಲಾ. ಅಂವಾ ಬಂದು ಮಾರಿ ತೋರಿಸಿದರ ನನಗ ಎಷ್ಟೋ ಧೈರ್ಯಾ" ಕಣ್ಣೀರು, ಸಿಂಬಳ ದೋತರದಿಂದ ತಿಕ್ಕಿದ ರಹೀಮ.

"ಬಂದಾನು ಇವತ್ತಿಲ್ಲ ನಾಳೆ, ಪುರಸತ್ತು ಆಗಬೇಕಲ್ಲ. ತಂಗೀ ಸುದ್ದೀ ಕೇಳಿ ಎಷ್ಟು ಹಲ್ಲು ಕಡೀತಾನೋ ಏನೋ..."

"ಢಂ .... ಢಮಾರ್.... ಢಂ"

ರಹೀಮ ದಡಕ್ಕನೆ ಮತ್ತೆ ಮತ್ತೆ ಬಾಗಿಲು ಚಿಲಕ ಮುಟ್ಟಿ ನೋಡಿದ ತಂಗಿಯ ಕಡೆಗೆ ಹೊರಳಿದ. ಫಾತಿಮಾ ಏನೂ ಮಾತನಾಡದೆ ಕೋಣೆಯಲ್ಲಿ ಚೀರುತ್ತಿದ್ದ ಸಲೀಮಾಳತ್ತ ಎದ್ದು ಹೋದಳು.

ಧಪ್.... ಧಪ್.... ಧಪ್ ಬೂಟುಗಾಲುಗಳು ಓಡಾಡಿದ ಸದ್ದು, 'ಪಡಕೋರೆ', ' ಮಾರರೆ' ಎನ್ನುವ ಕಿರುಚಾಟಗಳಿಂದ ಬೀದಿಯಲ್ಲಿ ಗದ್ದಲವಾಗುತ್ತಿತ್ತು. ಬೂಟಿನ ಸಪ್ಪಳ ಹತ್ತಿರ ಹತ್ತಿರ ಬಂದು ಬಾಗಿಲಿಗೇ ನಿಂತಿತು. ರಹೀಮ ಉಸಿರು ಬಿಗಿಹಿಡಿದು ಬಾಗಿಲ ಕಡೆಗೇ ನೋಡುತ್ತಿದ್ದ. ಅವನ ಎದೆ ಬಡಿತ ಅವನಿಗೇ ಕೇಳುವಷ್ಟು ಜೋರಾಗಿತ್ತು. ಬಂದೂಕಿನ ಹಿಡಿಯಿಂದ ಯಾರೋ ಬಾಗಿಲು ಕುಟ್ಟುತ್ತಿದ್ದರು.

"ಬಾಗಲಾ ತಗೀರಿ... ಏಽ ಬಾಗಲಾ ತಗಿರ್ರ್ಯೋ ಯಾರರೆ ಆದೀರೊ ಇಲ್ಲೋ ಮನ್ಯಾಗ?" ಏಮ ಸತ್ತೀರ್ರ್ಯೋಽ" ಹೊರಗಿನವ ಚೀರಿದ. ಸತ್ತಿದ್ದರೆ ಚೆನ್ನಾಗಿತ್ತು ಎಂದು ಕೊಂಡ ರಹೀಮ ಸಾವಕಾಶವಾಗಿ ಎದ್ದು ಚಿಲಕ ಮುಟ್ಟಿದ.

"ತಗಿತೀಯೋ ಇಲ್ಲೋ ಮಗನ ಏನು ಒದೀಲ್ಯೋ?" ಎನ್ನುತ್ತಲೇ ಒಬ್ಬ ಸೈನಿಕ ಒಳಹೊಕ್ಕು, ಬಾಗಿಲು ಮುಚ್ಚಿ ಚಿಲಕ ಹಾಕಿ ಬಾಗಿಲಿಗೊರಗಿ ನಿಂತ, ಕತ್ತಲಲ್ಲಿ ಸರಿಯಾಗಿ ಏನೂ ಕಾಣದೆ ಕಿಸೆಯಲ್ಲಿ ಕಡ್ಡೀಪೆಟ್ಟಿಗೆ ಎತ್ತಿ ರಹೀಮನತ್ತ ಒಗೆದು,

"ದೀಪಾ ಹಚ್ಚೋಽಽ,ಹಾಂಗ ಏನ ನೋಡಿಕೋತ ನಿಂತೀ ಬಾಯಿ ತಕ್ಕೊಂಡು? ಸಮಾಧಾನದಿಂದ ಮಾತನಾಡುವುದೇ ಗೊತ್ತಿರಲಿಲ್ಲವೇನೋ ಆ ರಾಕ್ಷಸನಿಗೆ. ನಡಗುವ ಕೈಗಳಿಂದ ರಹೀಮ ಕಡ್ಡಿ ಗೀರಿದ. ತಾಳ್ಮೆ ಕಳೆದುಕೊಂಡ ಸೈನಿಕ ತಾನೇ ಮುನ್ನುಗ್ಗಿ ಬಂದು ದೀಪ ಹಚ್ಚಿದ. ಆಡಿನ ಹಿಕ್ಕಿ, ಸಾರಿಸಿದ ನೆಲ, ಕಸ ಕಡ್ಡಿಗಳಿಂದ ತುಂಬಿದ ಜಾಗದಲ್ಲಿ ಕುಳಿತು ಕೊಳ್ಳಲು ಮನಸ್ಸಾಗದೆ, ತನ್ನ ಬೂಟು ಕಳಚಿದ ಸೈನಿಕ ಕೋಣೆಯತ್ತ ರಹೀಮನಿಗೆ ಆಜ್ಞೆ ಮಾಡಿದ.

"ಲಗೂನ ಒಂದಿಷ್ಟು ಚಾ ಮಾಡಿಕೊಡು. ಹೆಂಗಸರ ಯಾರರೆ ಅದಾರೊ ಇಲ್ಲೋ ಈ ಮನ್ಯಾಗ, ಹೊಟ್ಟಿ ಹಸದೈತಿ. ಒಂದಿಷ್ಟು ತಿನ್ನಾಕೂ ಕೊಡು."

ಅಲ್ಲಿಯವರೆಗೆ ಸುಮ್ಮನಿದ್ದ ರಹೀಮ ಅವನ ಹತ್ತಿರ ಬಂದು ನಡುಗುವ ಧ್ವನಿಯಲ್ಲಿ "ಸಿಪಾಯೀ ಸಾಬ, ಚಾ ತಿನಿಸು ಎಲ್ಲಾ ಕೊಡ್ತೀನಿ. ನೀವು ಕೂಡ್ರಿ ಇಲ್ಲೆ" ಎನ್ನುತ್ತ ಕಂಬಳಿ ಎತ್ತಿ ಜಾಡಿಸಿದ.

"ಹೋಗೊ ಮಗನಽ, ಆ ಹೊಲಸು ನಾತ ಮೂಗಿನ್ಯಾಗ ತುಂಬತದ. ಅಲ್ಯಾರು ಕೂತಾರು, ನಾ ಒಳಗಿರ್ತೀನಿ" ಎಂದು ಅತ್ತ ತಿರುಗಿದ. ಮುಖ ಕಾಣಿಸದಂತೆ ಸೆರಗೆಳೆದುಕೊಂಡು ಒಳಗಿನಿಂದ ಬಂದ ಫಾತಿಮಾ ಕಟ್ಟೆಯ ಮೇಲಿನ ಅಗ್ಗಿಷ್ಟಿಕೆಯಲ್ಲಿ ಕೆಂಡ ತುಂಬಿ ಚಹಕ್ಕೆ ಎಸರಿಟ್ಟಳು. ಅವಳ ನಿರಿಗೆಗಟ್ಟಿದ ಮುದಿಕೈ ನೋಡಿದ ರಹೀಮ ಕೋಣೆಯೊಳ ಹೊಕ್ಕ. ಕಣ್ಣಿಗೆ ಏನೂ ಕಾಣದಿದ್ದರೂ ಉಸಿರಾಟ ಅಲ್ಲಿ ಇನ್ನೊಬ್ಬ ವ್ಯಕ್ತಿ ಇರುವುದನ್ನು ತೋರುತ್ತಿತ್ತು. ಇವನು ಒಳಗೆ ಕಾಲಿಟ್ಟೊಡನೆ ಅವಳು ಹೊರಗೋಡಲು ಹವಣಿಸಿದಳು. ಆದರೆ ರಾಕ್ಷಸ ಸೈನಿಕ ಬಾಗಿಲ ತುಂಬ ನಿಂತಿದ್ದ, ಕಡ್ಡೀಗೀರಿದ. ಎದುರಿಗೆ ಮುಖಕ್ಕೆ ಪರದೆ ಎಳೆದುಕೊಂಡ ಕೆಂಪು ಮೈಯ ಹುಡುಗಿ ಥರ ಥರ ನಡುಗುತ್ತ ನಿಂತಿದ್ದನ್ನು ಕಂಡ. ಅಲ್ಲಿಂದಲೇ ಬಗ್ಗಿ ಮಾಡದಲ್ಲಿದ್ದ ಗುಬ್ಬೀ-ಚಿಮಣಿ ಹಚ್ಚಿ ಹೊರಳಿ ನಿಂತು ಬಾಗಿಲು ಚಿಲಕ ಹಾಕಿದ. ಕೈಯಿಂದ ಮುಖ ಮುಚ್ಚಿಕೊಂಡ ಹುಡುಗಿ ಬಿಕ್ಕುತ್ತ ಮೂಲೆಯಲ್ಲಿ ಕುಸಿದಳು. ಅವಳನ್ನೇ ನೋಡುತ್ತ ಸೈನಿಕ ಕಂಬಳಿಯ ಮೇಲೆ ಕಾಲುಚಾಚಿ ಗೋಡೆಗೊರಗಿ ಕುಳಿತು, ಹಾಯಾಗಿ ಉಸಿರುಬಿಟ್ಟ. ರಾಕ್ಷಸ, ಏನು ಮಾಡುವನೋ ಎಂದುಕೊಂಡಿದ್ದ ಹುಡುಗಿ, ಬೆರಳು ಸಂದಿನಿಂದ ಹಣಿಕಿ, ಕಣ್ಣುಮುಚ್ಚಿ ಕುಳಿತವನನ್ನೇ ದಿಟ್ಟಿಸಿದಳು. ಆಯಾಸಗೊಂಡಿದ್ದ ಮುಖ ಏನೋ ಯೋಚನೆ ಮಾಡುತ್ತಿದ್ದಂತಿತ್ತು.

ಅತ್ತೆ ಬಾಗಿಲು ತಟ್ಟಿ ಭಯಮಿಶ್ರಿತ ಧ್ವನಿಯಲ್ಲಿ "ಸಲೀಮಾ ಚಾ ಆಗೇದ" ಎಂದಳು. ಸೈನಿಕ ಚಟಕ್ಕನೆ ಎದ್ದು ಬಾಗಿಲು ತೆಗೆದ. ಇಬ್ಬರಿಗೂ ಚಾ ತಿನಿಸು, ತಂದಿದ್ದಳು. ಬೆದರಿ ಮೂಲೆಯಲ್ಲಿ ಕುಳಿತ ಸೊಸೆಯ ಮುಂದೆ ತಟ್ಟೆಯನ್ನಿಟ್ಟು "ಸಲೀಮಾ ಎಷ್ಟು ದಿನ ಅಂತ ಉಪಾಸ ಇರತೀ, ಆದದ್ದಾಗಿ ಹೋತು, ಏಳು ಸಮಾಧಾನ ಮಾಡಿಕೊ ಚಾ ಕುಡಿ, ಬ್ರೆಡ್ ತಿನ್ನು. ನೀ ಹೀಂಗ ಅತ್ತರ ನಿಮ್ಮ ಅಪ್ಪ ಎದೀ ಒಡಕೊಂತಾನು" ಎಂದಳು ಅವಳ ತಲೆ ನೇವರಿಸುತ್ತ, ಸೀಮಾ ಅವಳ ತೆಕ್ಕೆ ಬಿದ್ದು, "ಅತ್ತೀ ನನ್ನ ಇಲ್ಲಿಂದ ಕರಕೊಂಡು ಹೋಗು" ಎನ್ನುತ್ತ ಅವಳನ್ನು ಹಿಂಬಾಲಿಸಿ ಎದ್ದಳು. ಒಂದು ಕೈಯಲ್ಲಿ ಚಹದ ಕಪ್ಪು ಹಿಡಿದ ಸೈನಿಕ ಇನ್ನೊಂದರಿಂದ ಅವಳನ್ನು ಎಳೆದುಕೊಂಡು ಬಾಗಿಲು ಹಾಕಿ, ತನ್ನ ತಿನಿಸು ಮುಗಿಸಿದ. ಜೋರಾಗಿ ಬಿಕ್ಕಿ-ಬಿಕ್ಕಿ ಅಳಲೂ ಹೆದರುವ ಹುಡುಗಿಯತ್ತ ನೋಡಿ ಮೆದುವಾಗಿ "ಸಲೀಮಾ ಹೆದರಬ್ಯಾಡಾ, ಬ್ರೆಡ್ಡು ತಿಂದ ಚಾ ಕುಡೀ" ಎಂದ. ಅವಳು ಆಶ್ಚರ್ಯದಿಂದ ಅವನನ್ನೇ ದಿಟ್ಟಿಸಿದಳು. ಅವಳಿಗೆ ಅಲ್ಲಿ ರಾಕ್ಷಸನ ಬದಲು ಮನುಷ್ಯ ಕಂಡ. ಮೂರು ದಿನದಿಂದ ಉಪವಾಸವಿದ್ದ ಹುಡುಗಿ ಧೈರ್ಯ ತಂದುಕೊಂಡು ಬ್ರೆಡ್ಡಿಗೆ ಕೈ ಹಚ್ಚಿದಳು. ಒಂದು ಮೂಲೆಯಲ್ಲಿ ಮಲಗಲು ಅವಳು ಹವಣಿಕೆ ಮಾಡಿಕೊಳ್ಳುವಷ್ಟರಲ್ಲಿ ಸೈನಿಕನ ಗೊರಕೆ ಕೇಳತೊಡಗಿತ್ತು.

***

ಹಳ್ಳಿಯನ್ನು ಕೊಳ್ಳೆ ಹೊಡೆದು ಸೂರೆಗೊಂಡ ಸೈನಿಕರೆಲ್ಲ ಅಂದು ರಾತ್ರಿ ಅಲ್ಲಿಂದ ಹೊರಡಬೇಕಿತ್ತು. ಸಂಜೆಯಾಗುತ್ತಿದ್ದಂತೆ ಸೈನಿಕ ಅಸ್ವಸ್ಥನಾಗುತ್ತಿದ್ದ. ಕತ್ತಲೆಯಾದ ಮೇಲೆ ಅವನು ಮೊದಲಬಾರಿ ಮನೆ ಬಿಟ್ಟು, ಹೊರಗೆ ಹೋದ. ರಹೀಮ, ಫಾತಿಮಾ ಬಿಡುಗಡೆಯ ಉಸಿರೆಳೆದರು. ಬೇರೆ ಬೇರೆ ಸೈನಿಕರು ಅವರ ಮನೆಗೆ ದಾಳಿ ಇಟ್ಟಿದ್ದರೂ ಅವರ ಎದುರಿಗೆ ಏನೇನೋ ನೆವ ಹೇಳಿ ಅಲ್ಲಿಂದ ದಾಟಿಸಿದ್ದನವ. ಈ ಸೈನಿಕನ ವರ್ತನೆಯೊಂದು ಸಮಸ್ಯೆಯಾಗಿತ್ತು. ಸಲೀಮಾಳಿಗೆ. ಅವಳ ಮುಖದಲ್ಲಿ ಮಾತ್ರ ಮೊದಲಿನಂತೆ ದುಃಖವಿರದೆ, ಅಚ್ಚರಿ ಮೂಡಿತ್ತು. ಆದರೆ ಮುಂದೆ ತಾಸೆರಡು ತಾಸು ಕಳೆದು ಸೀಟಿ ಸಪ್ಪಳ ಸೈನಿಕರ ಬೂಟುಗಾಲಿನ ಸದ್ದು, ಎಲ್ಲಾ ಮರೆಯಾದ ಮೇಲೆ ಅವನು ಮತ್ತೆ ಮನೆಗೆ ಬಂದಾಗ ಸಾದಾ ವೇಷದಲ್ಲಿದ್ದ. ಈಗ ಮಾತ್ರ ಏನೋ ಕೇಡುಗಾಲ ಬಂತೆಂದೇ ತಿಳಿದಳು ಸಲೀಮಾ.

ಅವಳಿಂದ ಎರಡು ಮೊಳ ಅಂತರದ ಮೇಲೆ ತಲೆದಿಂಬಿಗೆ ಬಂದೂಕನ್ನಿಟ್ಟುಕೊಂಡು ನಿರಾತಂಕವಾಗಿ, ನಿದ್ದೆ ಮಾಡುತ್ತಿದ್ದ ಅವನನ್ನು ನೋಡಿ ತಾನೇ ಆ ಬಂದೂಕನ್ನು ಎತ್ತಿ ಅವನ ತಲೆ ಒಡೆಯಬೇಕೆಂದುಕೊಂಡಳು ಆಕೆ. ಬಂದೂಕನ್ನು ಎರಡೂ ಕೈಗಳಿಂದ ಅವಳು ಎತ್ತುವಷ್ಟರಲ್ಲಿಯೇ ಚಟುಕ್ಕನೆ ಎದ್ದು ಕುಳಿತು ಅವಳ ಕೈ ಹಿಡಿದಿದ್ದನವ. ಮೆಲ್ಲಗೆ ಕೇಳಿದ, "ಸಲೀಮಾಽ, ನನ್ನ ಕೊಲ್ಲತೀಯಾ ? ಯಾಕ? ನಾ ಏನ ಮಾಡಿದೆ ನಿನಗ?" ಸಿಕ್ಕಿಬಿದ್ದ ಸಲೀಮಾ ರೋಷದಿಂದ ಬಸುಗುಟ್ಟಿದಳು.

"ಇನ್ನೂ ಏನು ಉಳದಽದ ನೀವು ಮಾಡೂದು? ರಾಕ್ಷಸರ ಅದೀರಿ ನೀವು, ನನ್ನ ಮರ್ಯಾದೀ ಹಾಳ ಮಾಡಿದಿರಿ" ರೋಷ ದುಃಖವಾಗಿ ಮಾರ್ಪಟ್ಟಿತು.

ಸೈನಿಕ ಕೈ ಬಿಟ್ಟು ಅವಳ ಕೂದಲು ನೇವರಿಸುತ್ತ ಮೃದುವಾಗಿ ಕೇಳಿದ. "ನಾ ಹಾಂಗ ಮಾಡೀನೇನು ಸಲೀಮಾ? ನಿನಗ ಗೊತ್ತ ಅದ. ನಾ ನಿನಗ ಏನೂ ಕೆಡಕು ಮಾಡಿಲ್ಲಾ ಹೌದಲ್ಲೊ ?"

"ನೀನು ಮಾಡಿಲ್ಲಾ, ಆದರ ನಿಮ್ಮವರು ರಾಕ್ಷಸರು.. ಆ ರಾಕ್ಷಸರು ನನ್ನೇನ ಮಾಡಿಬಿಟ್ಟರು?" ಅಸಹಾಯಕತೆಯಿಂದ ಬಿಕ್ಕಿದಳು ಸಲೀಮಾ.

"ನಮ್ಮ ಸೈನಿಕರು ತಪ್ಪು ಮಾಡ್ಯಾರ. ಭಾಳ ತಪ್ಪು ಮಾಡ್ಯಾರ. ಅವರು ಮಾಡೂದೆಲ್ಲಾ ನೋಡಿ ನನಗ ಕಸಿವಿಸಿ ಆಗಿತ್ತು. ಸಂಕಟ ಆಗ್ತಿತ್ತು. ಆದರ ನಾನು ಪರಾಧೀನ ಆಗಿದ್ದೆ. ಅದಕ್ಕಽ ಅವರು ಹೋಗೂತನಾ ಅವರ್ಹಾಂಗ

ನಾಟಕ ಮಾಡಿದೆ, ಇಲ್ಲಾಂದರ ನಾ ವಿದ್ರೋಹಿ ಅಂತ ತಿಳಿದು ಅಲ್ಲೇ ಕೊಂದsಬಿಡುತ್ತಿದ್ದರು ನನ್ನ. ನಾನು ಅವರ ಹಾಂಗ ಯಾಕ ಮಾಡ್ಲಿಲ್ಲಾ ಗೊತ್ತದ ಏನು? ನಾನು ರಾಕ್ಷಸ ಅಲ್ಲ, ಮನುಷ್ಯಾ ಅದೇನಿ. ನನಗೂ ಹೃದಯ ಅದ. ಮನಸ್ಸು ಅದ, ಯುದ್ಧದ ಹೆಸರಲೆ ಅವರು ಮಾಡೂ ಅನ್ಯಾಯಾ ನೋಡಿ ನೋಡಿ ನನಗ ಹೇಸಕಿ ಬಂತು. ಅದಕ್ಕs ಆ ಪಶುಗಳ ಕೂಡ ಹೋಗೋದು ಬಿಟ್ಟುಬಿಟ್ಟೆ. ನಾ ಅವರ ಸೈನ್ಯಾ ಬಿಟ್ಟುಬಿಟ್ಟೆ ನಾ ಸ್ವತಂತ್ರ ಆದೆ" ಸಂತೋಷ ಅವನ ಮುಖದಲ್ಲಿ ಕುಣಿಯುತ್ತಿತ್ತು.

"ಅದ್ಹ್ಯಾಂಗ ಬಿಟ್ಟೆ? ನಿನ್ನ ಮ್ಯಾಲೆ ಅವರಿಗೆ ಸಂಶಯ ಬರೂದಿಲ್ಲೇನು?"

"ನಾನು ಸಂಜೀ ಮುಂದ ಹೊರಗ ಹೋದಾಗ ನನ್ನ ಸೈನಿಕ ಡ್ರೆಸ್ಸು, ಬಿಲ್ಲಾ ಎಲ್ಲಾ ಒಂದು ಹೆಣಕ್ಕ ತೊಡಿಸಿ ಬಂದೆ. ಆ ಹೆಣಾ ಛಿದ್ರ-ಛಿದ್ರ ಆಗಿತ್ತು. ಅವರು ಗುರುತು ಹಿಡಿಯೂದೇ ಇಲ್ಲಾ. ನಾನs ಸತ್ತೆ ಅಂತ ತಿಳಕೊಂಡುಬಿಡತಾರ."

"ಯಾ ಅಲ್ಲಾ, ಯಾ ಖುದಾ" ಗಲ್ಲ ಗಲ್ಲ ಬಡಿದುಕೊಂಡಳು ಸಲೀಮಾ, ಎಷ್ಟೋ ಹೊತ್ತು ಮೂಕಳಾಗಿ ಕುಳಿತ ಅವಳನ್ನು ಕಂಬಳಿಯ ಮೇಲೆ ಮಲಗಿಸಿ ಚಾದರ ಹೊಚ್ಚಿದ. ಹಂಚಿನ ಕಿಂಡಿಗಳಿಂದ ಚಳಿಗಾಳಿ ನುಗ್ಗಿ ಮೈ ನಡುಗಿಸುತ್ತಿತ್ತು. ಹೊದೆಯಲು ಚಾದರವಿಲ್ಲದೆ ತನ್ನ ಓವರಕೋಟನ್ನೇ ಹೊತ್ತುಕೊಂಡು, ಕಾಲು ಮುದುರಿ, ಕಂಬಳಿಯ ಮತ್ತೊಂದು ತುದಿಗೆ ಮಲಗಿದ್ದ ಅಪರಿಚಿತ ಯುವಕನನ್ನು ನೋಡುತ್ತಿದ್ದ ಸಲೀಮಾಳ ಹತ್ತಿರ ನಿದ್ರೆ ಸುಳಿಯಲಿಲ್ಲ. ಅತ್ತಿತ್ತ ಹೊರಳಾಡಿ ಹೊತ್ತು ಕಳೆದ ಸಲೀಮಾ ತಟ್ಟನೆ ಕೇಳಿದಳು.

"ನಿಮ್ಮ ಹೆಸರೇನು ?"

"ಹಮೀದ ಅಂತ. ನಮ್ಮ ಅಜ್ಜಾನೂ ಮೊದಲ ಇಲ್ಲಿಯವರ ಅಂತ. ಆದರ ನಾ ಮಾತ್ರ ಪಶ್ಚಿಮ ಪಾಕಿಸ್ತಾನದೊಳಗ ಹುಟ್ಟೇನಿ."

"ನಿಮ್ಮ ಮನಿಯೊಳಗ ಯಾರ್‍ಯಾರ ಅದೀರಿ?" ಅವನಿಗೆ ಮದುವಿಯಾಗಿದೆ ಏನೋ ತಿಳಿದುಕೊಳ್ಳುವ ಕುತೂಹಲವಿತ್ತು ಧ್ವನಿಯಲ್ಲಿ.

"ಅಪ್ಪ - ಅವ್ವ ಸತ್ತು ಹೋಗ್ಯಾರ, ಅಣ್ಣ, ಭಾಭಿ, ಅಣ್ಣನ ಮಕ್ಕಳು ಅದಾರ. ಅವರಿಗೂ ನನಗೂ ಅಷ್ಟಕ್ಕಷ್ಟs" ಅವಳ ಕುತೂಹಲವನ್ನರಿತೇ ಮರೆಯಾಗಿಸಿ ಉತ್ತರ ಕೊಟ್ಟ ಹಮೀದ ತುಂಟತನದಿಂದ.

"ಮದುವಿ ಆಗಿರಬೇಕಲ್ಲ. ಹೇಣ್ತಿ, ಮಕ್ಕಳು....." ಈ ಸಲ ಅಡಗಿಸದೇ ಸ್ಪಷ್ಟವಾಗಿ ಕೇಳಿದಳು ನಾಚಿಕೆಬಿಟ್ಟು.

"ಛೇ ಮದುವಿ ಎಲ್ಲೀದು ? ಅಪ್ಪ-ಅವ್ವ ಇಲ್ಲಾ ಅಂದಮ್ಯಾಲೆ ನನ್ನ ಮದುವಿ ಮಾಡುವರ್‍ಯಾರು? ನಮ್ಮ ಮಿಲಿಟ್ರಿ ಸರಕಾರದಾಗ ಇಪ್ಪತ್ತು ವರ್ಷ ಆದ ಹುಡುಗರು ಸೈನ್ಯಾ ಸೇರಬೇಕಂತ ಹುಕುಂ ಅದ. ಅಣ್ಣಾ ನನ್ನ ಈ ನರಕಕ್ಕ ಹಾಕಿ ತಾ ಕೈ ತೊಳಕೊಂಡಾ ಆತು." ಬೇಸರವಿತ್ತು ದನಿಯಲ್ಲಿ.

"ಮುಂದ ಏನ ಮಾಡುವವರೂ? ಎಲ್ಲಿ ಇರೂವವರು ? ವಿಚಾರ ಮಾಡೀರೇನು ?"

"ಇನ್ನೂ ಈಗ ಸೈನ್ಯ ಊರು ಬಿಟ್ಟು ಹೋಗೇದ. ವಿಚಾರ ಮಾಡಲಿಕ್ಕೆ ಪುರುಸತ್ತರ ಎಲ್ಲಿ ಅದ ? ಎರಡ ದಿನಾ ಆ ಪಶುಗಳ, ಆ ನರಕಾನ ಮರತು ಆರಾಮಾಗಿ ಇರ್ತೇನಿ. ಸದ್ಯಕ್ಕಂತೂ ಇಲ್ಲೇ ಅದೇನಿ. ಇದs ನನ್ನ ಮನಿ ಅಂತ ತಿಳಕೊಂತೇನಿ. ನಿಮಗೂ ಅಷ್ಟಿಷ್ಟು ಸಹಾಯ ಮಾಡ್ತೇನಿ. ನಾ ನಿಮಗ ಭಾರ ಆಗ್ತೇನೇನು ?" ಬೇಡಿಕೆ ಇತ್ತು ಸ್ವರದಲ್ಲಿ.

"ಛೇ ಭಾರ ಯಾಕ ಆಗ್ತೀರಿ. ನಮ್ಮನ್ನು ಕಾಡಿಸಿ ಪೀಡಿಸಿದರ ನಮಗ ತ್ರಾಸ ಆಗ್ತದ. ನಮ್ಮವರಾಗಿ ಬಂದರ ನಮಗೂ ಸಂತೋಷಾನs. ಇದ್ದ ಅನ್ನದೊಳಗ ನಿಮಗೊಂದ ತುತ್ತು ಕೊಡ್ತೀವಿ" ಕತ್ತಲೆಯಲ್ಲೂ ಸಲೀಮಾಳ ಕೆನ್ನೆ ಕೆಂಪಾಗಿತ್ತು.

"ನಂದೊಂದು ದೊಡ್ಡ ಚಿಂತಿ ಪರಿಹಾರ ಆತು. ತಲೀಮ್ಯಾಲಿನ ಭಾರ ಇಳಿದಾಂಗ ಆತು. ನೀವು ನನ್ನ ನಂಬತೀರೋ ಇಲ್ಲೊ ಅಂತ ಮಾಡಿದ್ದೆ. ನಾ ಇನ್ನ ನಿಶ್ಚಿಂತಿ ಅದೆ. ಸೈನ್ಯದೊಳಗ ಸೇರಿದರೂ ನಾ ನಿರಪರಾಧಿ ಇದ್ದೀನಿ. ಅವಶ್ಯಕತಾದಕಿಂತ ಜಾಸ್ತಿ ಗುಂಡು ಹಾರಿಸಿಲ್ಲಾ. ಯಾರ್ನೂ ಸುಲಿದಿಲ್ಲಾ, ಬಲತ್ಕಾರ ಮಾಡಿಲ್ಲಾ. ಸಲೀಮಾs ನಾ ಹಂಗೆಲ್ಲಾ ಒಳ್ಳೇಂವ ಅದೀನಿ. ನೀ ನಂಬತೀಯೋ ಇಲ್ಲೊ. ನಾಹ್ಯಾಂಗ ಹೇಳಲಿ ನಿನಗ " ಕಾತರತೆ ಇತ್ತು ದನಿಯಲ್ಲಿ.

"ನಾ ನಂಬತೀನಿ ಹಮೀದ. ನಾನು ನಿಮ್ಮನ್ನ ನಂಬ್ತೀನಿ. ನೀವು ಪಶು ಅಲ್ಲಾ ಮನುಷ್ಯಾರs ಅದೀರಿ. ಇಷ್ಟು ದಿನಾ ನಾ ಬರೇ ರಾಕ್ಷಸರನ್ನs ನೋಡಿದ್ದೆ. ಜೀವ ಬ್ಯಾಸರಾಗಿತ್ತು. ಸಾಯೂ ಸಂಕಟದಾಗ ಇದ್ದಾಕೀಗೆ ಮತ್ತ ಬದಕೂ ಆಶಾ ಹುಟ್ಟಸೇರಿ. ನಾಳೆ ಅಪ್ಪಗ ಅತ್ತಿಗೆ ಹೇಳ್ತೀನಿ ಈಗ ನಿಮ್ಮನ್ನ ನಂಬಿ ನಿಶ್ಚಿಂತ ಆಗಿ ನಿದ್ದೀ ಮಾಡ್ತೀನಿ" ಎಂದಳು ಸಲೀಮಾ, ಅಚಾನಕವಾಗಿ ಹಮೀದನ ಹಣೆಗೆ ಮುತ್ತಿಟ್ಟು ತನ್ನ ಹಾಸಿಗೆ ಸೇರಿದಳು.

ಇನ್ನೂ ಚುಮು ಚುಮು ಬೆಳಕು ಹರಿಯುತ್ತಿತ್ತು., ಹೊರಗೆ ಅಪ್ಪ, ಅತ್ತೆ. ಅತ್ತೆಯೊಡನೆ ಯಾರೋ ಮಾತನಾಡುತ್ತಿದ್ದುದು ಸಲೀಮಾನ ಕಿವಿಗೆ ಬಿದ್ದಿತು. ಮಗುವಿನಂತೆ ಮಲಗಿ ನಿದ್ರಿಸುತ್ತಿದ್ದ ಹಮೀದನ ಕಡೆಗೊಮ್ಮೆ ನೋಡಿ, ಬಾಗಿಲು ತೆರೆದು ಮೆತ್ತಗೆ ಹೊರಗೆ ಕಾಲಿಟ್ಟಳು.

ಹಂಚಿನ ಸಂದಿಯಿಂದ ತೂರಿಬಂದ ಸೂರ್ಯಕಿರಣ ಹಮೀದನ ಕಣ್ಣುಚುಚ್ಚಿ ಎಬ್ಬಿಸಿತು. ಎದ್ದು ಬಾಗಿಲು ತೆರೆದು ಹೊರಗೆ ಬಂದವನನ್ನು ಕಠೋರ ಧ್ವನಿಯೊಂದು ಸ್ವಾಗತಿಸಿತು. "ನಿಲ್ಲು ಮಗನs ಮುಂದ ಹೆಜ್ಜೀ ಇಡಬ್ಯಾಡಾ. ಗ್ವಾಡಿಗೇ ಒರಗಿ ನಿಲ್ಲು. ಕೈ ಮ್ಯಾಲೆತ್ತು. ಈ ಚೂರಿಯಿಂದ ನಿನ್ನ ಕತ್ತು ಕತ್ತರಿಸ್ತೀನಿ " ಕಾಶೀಮ ಚೂರಿ ಎತ್ತಿದ.

ಸಲೀಮಾ ದೈನ್ಯದಿಂದ "ಭೈಯ್ಯಾ" ಎಂದಳು.

"ನೀ ಸುಮ್ಮನಿರು ಇವನ ಮಾತು ನಂಬತಾರೇನು ಯಾರರೆ? ದ್ರೋಹಿ ಅದಾನ ಇಂವಾ. ತಮ್ಮ ಸೈನ್ಯಾ ಬಿಟ್ಟು ನಮ್ಮ ಬಾಂಗ್ಲಾದೇಶದಾಗ ಇರತಾನಂತ, ಇಂಥಾ ಪಶುಗಳನ್ನ ಸಾಕೂಣೇನು ನಾವು ?" ಕಾಶೀಮ ಗದ್ದರಿಸಿದ.

ಹಮೀದ ತಲೆ ಎತ್ತಿ ನೋಡಿದ. ಮುಖ ಬಿಳುಪೇರಿತ್ತು. ಕಣ್ಣುಗಳಲ್ಲಿ ಧೈರ್ಯ-ಭೀತಿಗಳ ಸಮ್ಮಿಶ್ರ ಭಾವ. ರಹೀಮ ಆಡಿನ ಮೈಮೇಲೆ ಕೈಯಾಡಿಸುತ್ತಿದ್ದ. ಫಾತಿಮಾ ಅಲ್ಲಿರಲಿಲ್ಲ. ಸಲೀಮಾಳ ಕಣ್ಣು ತುಂಬಿ ಬಂದದ್ದು ಕಾಣಲಿಲ್ಲ ಅವನಿಗೆ, ತಲೆ ತಗ್ಗಿಸಿದಳಾಕೆ. ಕೂಡಲೇ ಧೈರ್ಯಗೊಂಡು ಮೃದುವಾಗಿ "ಸಲೀಮಾ" ಎಂದ. "ಏನು ಎನ್ನುವಂತೆ ತಲೆ ಎತ್ತಿದಳಾಕೆ. "ನಿನ್ನ ಅಣ್ಣಾ ನನ್ನ ಕೊಲ್ಲತಾರಂತ. ಕೊಲ್ಲಲಿಬಿಡು. ನಾನು ಸೈನಿಕ, ಯುದ್ಧದೊಳಗ ಸಾಯೂ ಬದಲಿ ಇಲ್ಲಿ ಸಾಯತೀನಿ ಅಷ್ಟ., ಆದರ ಆ ಚೂರಿಲೆ ನನ್ನ ಕೊಲ್ಲೂದು ಬ್ಯಾಡಾ. ಒಳಗಹೋಗಿ ನನ್ನ ಬಂದೂಕು ತಂದು ಕೊಡು ಅವರ ಕೈಗೆ. ನನ್ನ ಶಸ್ತ್ರ ಅವರ ಕೈಗೆ ಹೋದಮ್ಯಾಲೆ ನಾನು ಶರಣಾಗತ. ಕೊಲ್ಲೂದು ಬಿಡೂದು ಅವರ ಇಚ್ಛಾ. ಎಂದ ಹಮೀದ. ಸಲೀಮಾ ತಳ್ಳಲ್ಪಟ್ಟವರಂತೆ ಕೋಣೆಗೆ ಹೋಗಿ ಬಂದೂಕು ತಂದು ಅಣ್ಣನ ಕೈಗಿತ್ತಳು. ಹಮೀದ ಕಿಸೆಗೆ ಕೈ ಹಾಕಿ ಗುಂಡು ತೆಗೆದುಕೊಟ್ಟ. ಗುಂಡು ಎತ್ತಿಕೊಂಡು ಕಾಶೀಮ ನಿರ್ವಿಕಾರಭಾವದಿಂದ ಬಂದೂಕಿಗೆ ತುಂಬಿ ಅವನತ್ತ ಗುರಿ ಹಿಡಿದ. ಹಮೀದ ಎದೆಯೊಡ್ಡಿ ಕಣ್ಣುಮುಚ್ಚಿದ. ಸಲೀಮಾ ತೊಡೆಯ ಮೇಲೆ ತಲೆ ಇಟ್ಟು ಬಿಕ್ಕಿದಳು.

ಒಂದು .... ಎರಡು... ಮೂರು ಗುಂಡು ಹಾರಲೇ ಇಲ್ಲ. ಹಮೀದ ಕಣ್ಣು ತೆರೆದ. ಬಂದೂಕನ್ನು ಕೆಳಗೆ ಹಾಕಿದ ಕಾಶೀಮ ಭರದಿಂದ ಬಂದು ಅವನನ್ನಪ್ಪಿದ, ಇಬ್ಬರ ಕಣ್ಣಲ್ಲೂ ನೀರು.

"ವಾಹ! ಮೇರೆಯಾರ್, ಖರೇನ ಶೂರ ನೀನು, ಸೀಮಾ ಹೇಳಿದ್ದಳು. ಆದರೂ ನಾ ನಿನ್ನ ಪರೀಕ್ಷಾ ಮಾಡಿದೆ. ಮುಕ್ತಿ ಪೌಜಿನಾಗ ಸೇರಿ ನಾನೂ ಎಷ್ಟೋ ಸೈನಿಕರನ್ನು ಕೊಂದೆ. ಆದರs ಸಾವನ್ನ ಹಿಂಗ ಎದುರಿಸಿದವರು ನನಗ ಒಬ್ಬರೂ ಸಿಗಲಿಲ್ಲ. ಶೂರ ಅಂದರ ನೀನು. ನೀನು ನಮ್ಮ ಜೋಡಿ ಕೂಡಲಿಕ್ಕೇ ಬೇಕು. ನಾವಿಬ್ಬರೂ ಜೀವದ ಆಶೆ ಬಿಟ್ಟು ಹೋರಾಡೂನು ಆ ರಾಕ್ಷಸರ ಜೋಡಿ." ಕಾಶೀಮ ಮತ್ತೆ ಮತ್ತೆ ಅಪ್ಪಿಕೊಂಡ ಹಮೀದ ಹೆಮ್ಮೆಯಿಂದ ಸಲೀಮಾಳತ್ತ ನೋಡಿದ. ಅವಳು ಕಣ್ಣೀರಿನಲ್ಲೂ ಮುಗುಳ್ನಗೆ ನಕ್ಕಳು.

ಅದೇ ಸಂಜೆ ಕಾಶೀಮ, ಹಮೀದ ಇಬ್ಬರೂ 'ಮುಕ್ತಿ ಪೌಜಿ'ನವರೊಡನೆ ಹೋದರು. ದಿನ ಕಳೆದು ಸಂಜೆಯಾಗುತ್ತದೆ. ರಾತ್ರಿ ಕಳೆದು ಬೆಳಗಾಗುತ್ತದೆ. ಸಲೀಮಾ ದಿನವೂ ಬಾಗಿಲಿಗೆ ಬಂದು ನಿಂತು, ಬರುವವರ ದಾರೀ ಕಾಯುತ್ತಾಳೆ. ಹುಬ್ಬುಗೈ ಹಚ್ಚಿ ಕ್ಹಾಲೆತ್ತರಸಿ, ಅತ್ತಿತ್ತ ನೋಡೇ ನೋಡುತ್ತಾಳೆ.

"ಇವತ್ತೂ ಬರಲಿಲ್ಲ" ಎಂದು ನಿಟ್ಟುಸಿರಿಟ್ಟು ಒಳಗೆ ಹೋಗುತ್ತಾಳೆ.

ಅವರು ಬರುವರೋ, ಇಲ್ಲವೋ ಯಾರು ಹೇಳಬೇಕು?

***

■■

# ಮಮತೆ

ಅನ್ನ, ಪಲ್ಯಗಳ, ಹಾಲು ಮೊಸರಿನ ಪಾತ್ರೆಗಳು ಒಂದೆಡೆ, ಹಿಟ್ಟು ಸಾಣಿಸಿದ ಸಾಣಿಗೆ, ಚಟ್ನಿ ಕಲ್ಲುಗಳು ಇನ್ನೊಂದೆಡೆ, ನೀಡುವಾಗ ಕಂಠದವರೆಗೆ ಹನಿಯಾಗಿ ಸೋರಿ ಗಟ್ಟಿಗೊಂಡ ತುಪ್ಪದ ಮೇಲೆ ಕುಳಿತ ಗಿಂಡಿ ಮತ್ತೊಂದೆಡೆ. ಸುತ್ತೆಲ್ಲ ಗಂಡ ಮಕ್ಕಳು ಉಂಡ ಎಂಜಲು ತಟ್ಟೆಗಳು, ಅವುಗಳ ಸುತ್ತ ಚೆಲ್ಲಿದ ಮುಸುರೆ ನೊಣಗಳಿಗೆ ಆಹ್ವಾನವೀಯುತ್ತಿತ್ತು. ಎಲ್ಲ ಕಡೆಗೂ ಹರಡಿದ ಸಾಮಾನುಗಳಿಂದಾಗಿ ಅಡಿಗೆಮನೆಯಲ್ಲಿ ಕಾಲಿಡಲು ಸ್ಥಳವೇ ಇಲ್ಲದಂತಾಗಿತ್ತು. ಎಲ್ಲಿ ನೋಡಿದರೂ ಅವ್ಯವಸ್ಥೆಯ ಮೊಟ್ಟೆ, ಅಸ್ತವ್ಯಸ್ತದ ಸಾಮ್ರಾಜ್ಯ.

ಸೋತ ಕಣ್ಣುಗಳಿಂದ ಎಲ್ಲವನ್ನೂ ನೋಡುತ್ತಿದ್ದ ಗಿರಿಜೆ ಒಮ್ಮೆಲೇ ಹೊಟ್ಟೆ ಹಿಚುಕಿಕೊಂಡು ಮುಖ ಕಿವುಚಿದಳು. ಸರಿ -ಶುರುವಾಯಿತು. ಈ ಹೊಟ್ಟೆನೋವು ಮತ್ತೆ. ತಾಂ ಧಿತ್ ತಾಂ ಎಂದು ರಿಂಗಣಗುಣಿತ ನಡೆದಿದೆ ಹೊಟ್ಟೆಯಲ್ಲಿ, ಸೂಕ್ಷ್ಮಾತಿಸೂಕ್ಷ್ಮ ಅವಯವಗಳನ್ನೂ ಹಿಚುಕಿ ಹಿಪ್ಪೆ ಮಾಡುವಂತಿದೆ. ಅಡಿಗೆಮನೆಯಂತೆಯೇ ತನ್ನ ಹೊಟ್ಟೆಯಲ್ಲಿಯೂ ಅವ್ಯವಸ್ಥೆಯ ಆಡಳಿತ ಕಂಡು ಕಣ್ಣುಮುಚ್ಚಿ ಕುಳಿತ ಗಿರಿಜೆಯ ಕಣ್ಣಿನಿಂದ ಹನಿಯೊಂದು ಜಾರಿ ಅವಳು ಊಟ ಮಾಡುತ್ತಿದ್ದ ತಟ್ಟೆಯಲ್ಲಿ ಬಿತ್ತು. ಇನ್ನು ಅಲ್ಲಿ ಕುಳಿತಿರಲಾರದೆ ಎದ್ದು ಮಲಗುವ ಕೋಣೆಗೆ ಬಂದಳು. ಶುಭ್ರವಾಗಿದ್ದ ಮಂಚದ ಮೇಲಿನ ಬೆಡ್‌ಶೀಟ್ ಮಕ್ಕಳ ಕಾಲ್ತುಳಿತಕ್ಕೆ ಸಿಕ್ಕು ಸುಕ್ಕುಸುಕ್ಕಾಗಿ ಬಣ್ಣಗೆಟ್ಟಿತ್ತು. ಬೆನ್ನು ಮೇಲಾಗಿ ಹಾಗೆಯೇ ಹಾಸಿಗೆಯ ಮೇಲೆ ಹೊರಳಿದಳು. ಈಚೀಚೆಗೆ ಬಹಳ ಹೆಚ್ಚಾಗಿದೆ ಈ ನೋವು. ಮೊದಲು ಯಾವಾಗಲಾದರೊಮ್ಮೆ ಬರುತ್ತಿದ್ದದ್ದು ಈಗ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತಿದೆ. ನಿನ್ನೆಯಿಂದಂತೂ ಈ ಹೊಟ್ಟೆ ನೋವಿನಿಂದಾಗಿ ಅವಳಿಗೆ ರಾತ್ರಿಯೆಲ್ಲಾ ಸರಿಯಾಗಿ ನಿದ್ರೆಯೇ ಇಲ್ಲ. ಅಷ್ಟಲ್ಲದೆ ಬೆಳಿಗ್ಗೆ ಐದು ಗಂಟೆಗೇ ಚಿಕ್ಕ ಅರುಣ ಕಕ್ಕಸಿಗೆ ಹೋಗಬೇಕೆಂದು ಅವಳನ್ನು ಎಬ್ಬಿಸಿದ್ದ. ನಿರ್ವಾಹವಿಲ್ಲದೆ ಎದ್ದವಳು ಹಾಗೆಯೆ ಕೆಲಸಕ್ಕೆ ತೊಡಗಿದ್ದಳು. ಇಲ್ಲದಿದ್ದರೆ ಹತ್ತುಗಂಟೆಯ ಬಸ್ಸಿಗೆ ಫ್ಯಾಕ್ಟರಿಗೆ ಹೋಗುವ ಶೇಖರನಿಗೆ ಅಡಿಗೆಯಾಗಬೇಕಲ್ಲ. ಸಾಲೆಗೆ ಹೋಗುವ ಮಕ್ಕಳು ತಂದೆಯ ಊಟವಾದ ಮೇಲೆ ಕೂಡುವವರು. ಆಮೇಲೆ ತನ್ನ, ಶಿಶುವಿಹಾರಕ್ಕೆ ಹೋಗುವ ಅರುಣನ ಊಟ. ಊಟವೆಲ್ಲಿಯದು? ಎರಡು ದಿನದಿಂದ ಅವಳ ಹೊಟ್ಟೆಗೆ ಸರಿಯಾಗಿ ಆಹಾರವೇ ಸೇರಿರಲಿಲ್ಲ. ಒಂದೆರಡು ತುತ್ತು ತಿನ್ನುವದರಲ್ಲಿಯೇ ಈ ನೋವಿನ ಸಂಕಟ ಸುರುವಾಗಿ ತಟ್ಟೆ ಬಿಟ್ಟು ಎದ್ದು ಬಂದರೆ ಸಾಕಪ್ಪಾ ಎನ್ನಿಸಿತ್ತು.

ಗಿರಿಜೆ ಊಟಮಾಡಲಿಲ್ಲವೆಂದು ಗೊತ್ತಾದಾಗ ರಾತ್ರಿ ಶೇಖರ ಹೇಳಿದ್ದ. ನೀನು ಊಟಾನs ಮಾಡಲಿಲ್ಲಾ, ಹಾಲು ಕುಡಿ, ಸಂಕಟ ಕಡಿಮೆ ಆಗ್ತದ. ಹೊಟ್ಟೆಯೊಳಗ ಏನೂ ಇಲ್ಲದಿದ್ದರ ಅಶಕ್ತತನಾ ಹೆಚ್ಚಾಗ್ತದ'. ಹಾಲು ಕುಡಿದರೆ ಅವಳ ಸಂಕಟವೇನೋ ಕಡಿಮೆಯಾಗಬಹುದು. ಆದರೆ ಬೆಳಿಗ್ಗೆ ಚಹಾಕ್ಕೆ, ಅರುಣನಿಗೆ ಹಾಲು ಉಳಿಯುವದೇ ಇಲ್ಲವಲ್ಲ. ಆ ಯೋಚನೆಯಿಂದ ಅವಳು ಹಾಲು ಕುಡಿದಿರಲಿಲ್ಲ. ಕುಡಿದಿಲ್ಲವೆಂದರೆ ಗಂಡನಿಗೆ ಅಸಮಾಧಾನ ಯಾಕೆ? ಏನು - ಕಡಿಮೆ ಬಿದ್ದರೆ ಇನ್ನಷ್ಟು ತಗೋಬೇಕು, ಹಾಗೆ, ಹೀsಗೆ ಎಂದು ಮಾತು ಶುರುವಾಗುವುದು. ಈ ಮಾತುಗಳ ಹಿಂದೆಯೇ ಮನೆಯ ಖರ್ಚು ವೆಚ್ಚದ, ಶೇಖರನ ಇಸ್ಪೀಟಾಟದ ಮಾತು ಹೊರಬರುವವು. ಸರಸ ಹೋಗಿ ವಿರಸ ಕಾಣುವದರಲ್ಲಿ ಸಂಶಯವೇ ಇಲ್ಲ. ಮತ್ತೆ ಮಾತು ಬೆಳಸುವ ಸ್ಥಿತಿಯಲ್ಲಿ ಇರದ ತಾನು 'ಕುಡದೇನಿ' ಎಂದಿದ್ದಳು. ಆಯಿತು ಇನ್ನು ಹೆಂಡತಿ ಸುಖವಾಗಿ ಮಲಗುತ್ತಾಳೆ ಎನ್ನುವ ಭರವಸೆಯಿಂದ ನಿಶ್ಚಿಂತನಾಗಿ ನಿದ್ದೆ ಹೋಗಿದ್ದ ಗಂಡ.

'ಬೆಳಿಗ್ಗೆ ಎದ್ದು ಚಹಾ ಕುಡಿಯಬೇಡ. ಚೊಚ್ಚಿಲು ಬಸಿರು, ಬಯಕೀ ಕಾಟ ಬಹಳ. ಊಟಾ ಮಾಡಿದ್ರೂ ಪಕ್ಕೂವಿಲ್ಲ. ವಾಂತಿಯಾಗ್ತದ. ದಿನಕ್ಕ ಮೂರು-ನಾಲ್ಕು ಸಾರೆ ಆದ್ರೂ ಹಾಲು ಕುಡಿ. ಹಾಲು ಸೇರದಿದ್ರ ಬೋರ್ನವಿಟಾ

ಕುಡಿ !' ಎಂದು ಹೇಳಿದ್ದಳು ದೊಡ್ಡಮ್ಮ. ತಾಯಿಯಿಲ್ಲದ ತನಗೆ ದೊಡ್ಡಮ್ಮನೇ ತಾಯಿ. ಆಗ ಬಸಿರಿನ ಮೊದಲ ದಿನಗಳಲ್ಲಿ ತಾನು ಹಾಲು ಕುಡಿಯುತ್ತಿದ್ದಳು. ಒಂದೊಂದು ದಿನ ತಾನು ಕುಡಿಯದಿದ್ದರೆ ಶೇಖರನೇ ಮುಂದೆ ನಿಂತು ಕುಡಿಸಿ ಹೊರಗೆ ಹೋಗುತ್ತಿದ್ದ. ಅದನ್ನು ನೋಡಿದ ದೊಡ್ಡಮ್ಮನಿಗೆ ಸಂತೋಷದಿಂದ ಕಣ್ಣೀರು ಉಕ್ಕಿದವು. ತಾಯಿಯಿಲ್ಲದ ಗಿರಿಜೆಗೆ ಬಂಗಾರದಂತಾ ಗಂಡ ಸಿಕ್ಕ ಎಂದು ಆಡಿಯೂ ತೋರಿಸಿದ್ದರು.

ಆ ನೆನಪಿನೊಡನೆಯೇ ಬಿಕ್ಕಿದಳು ಗಿರಿಜೆ. ನೋವು ಮತ್ತೆ ಹೆಚ್ಚಾಯಿತು. ನೋವನ್ನು ತಡೆಯದೆ ಹಲ್ಲು ಕಚ್ಚಿ ಅನುಭವಿಸುತ್ತ ದಿಂಬು ತೋಯಿಸಿದ್ದಳು. ನಿದ್ದೆ ಬಾರದೆ ಮಾಳಿಗೆ ನೋಡುತ್ತ ಮಲಗಿದಾಗ ಗೋಡೆಯ ಮೇಲಿನ ಹಲ್ಲಿಯೊಂದು ಟಣ್ಣನೆ ಜಿಗಿದು ಚಪಲತೆಯಿಂದ ದೀಪದ ಹುಳವನ್ನು ಹಿಡಿದು ನುಂಗಿತು. ಹುಳದ ಹಿಂದನ ಹಲ್ಲಿಯಂತೆ ಸಾವು ತನ್ನ ಹಿಂದೆಯೇ ಹೊಂಚು ಹಾಕುತ್ತಿದೆ ಎನ್ನಿಸಿ ತಾನು ಬೆಳಗು ನೋಡಲಾರೆನೆಂದುಕೊಳ್ಳುತ್ತಲೇ ನಿದ್ದೆ ಹೋಗಿದ್ದಳು.

ಮುಂಜಾನೆಯ ಚಹವಾದ ಮೇಲೆ ಎದ್ದ ಶೇಖರ ಚಹ ಕುಡಿದು ಸ್ನಾನ ಮಾಡಲು ಹೋಗುತ್ತಿದ್ದಂತೆ ಹೆಂಡತಿಗೆ ಹೇಳಿದ. "ಹೆಚ್ಚಿಗೆ ತ್ರಾಸ ತೊಗೋಬ್ಯಾಡ ಹಾಂ, ಬರೇ ಅನ್ನ ಸಾರು ಮಾಡು, ತಿಳೀತಿಲ್ಲೊ" ಹೇಗೋ ಕಷ್ಟಪಟ್ಟು ಕಾಲೆಳೆಯುತ್ತ ಅಡಿಗೆ ಮಾಡಿದಳು. ಗಿರಿಜಾ, ನೀಲಾ, ಚಂದ್ರ ದೊಡ್ಡವರು. ತಮ್ಮಷ್ಟಕ್ಕೆ ತಾವು ಸ್ನಾನ ಮಾಡಬಲ್ಲರು. ಆದರೆ ನಾಲ್ಕು ವರುಷದ ಅರುಣನಿಗೆ ತಾನೇ ಸ್ನಾನ ಮಾಡಿಸಬೇಕು. "ನೀಲಾ ನಿಮ್ಮ ಅಪ್ಪನ್ನ ಕರಿ, ಅರುಣಗ ಸ್ನಾನಾ ಮಾಡಸಲಿ" ಎಂದಳು.

ಸ್ನಾನ ಮಾಡಿ ಮಡಿ ಬಟ್ಟೆ ತೊಟ್ಟು, ತಲೆ ಬಾಚಿಕೊಳ್ಳುತ್ತಿದ್ದ ನೀಲಾ "ಅವ್ವಾ, ಅಪ್ಪ ಆಗಳೇನs ಕೋಟ ಹೆಗಲಿಗೆ ಹಾಕಿಕೊಂಡು ಎಲ್ಲೋ ಹೊರಗ ಹೋದರು" ಎಂದಳು. ಅವಳ ಕೂದಲು ಹಿಡಿತಕ್ಕೆ ಸಿಕ್ಕದೆ ಸಿಕ್ಕು ಸಿಕ್ಕಾಗಿತ್ತು. ಆದರೂ ಅವ್ವನ ಸಪ್ಪೆ ಮುಖ ನೋಡಿ ನೋವಿನಿಂದ ನರಳುವವಳಿಗೆ ತೊಂದರೆ ಕೊಡಲು ಮನಸ್ಸು ಬಾರದ ನೀಲಾ ಹಣಿಗೆಯೊಡನೆ ಗುದ್ದಾಡಿದಳು.

"ಇನ್ನೆಲ್ಲಿ ಹೋಗ್ತಾರ, ಪಾಟೀಲನ ಮನಿಗೆ ಇಸ್ಪೀಟು ಆಡಲಿಕ್ಕೆ ಹೋಗಿದ್ದಾರು. ಮಾಡಿಕೊಂಡ ಹೆಂಡಿರು ಮಕ್ಕಳನ್ನು ಸುದ್ಧಾ ಮರಸೂವಂಥಾ ಚಟಾ ಬಿದ್ದsದಲ್ಲಾ ನಮ್ಮ ಹಣೇಬರಕ್ಕ. ಇನ್ನೇನು ಊಟದ ಹೊತ್ತಿಗೆ ಬರ್ತಾರ ಅವರು. ಗಿರಿಜೆಯ ಬಾಯಿಂದ ನಿಟ್ಟುಸಿರು ತಾನಾಗಿಯೇ ಹೊರಬಿದ್ದಿತ್ತು. ಅರುಣನ ಮೈತೊಳೆಯುತ್ತಿದ್ದ ಹಾಗೆ ಮನಸ್ಸು ಹಿಂದಕ್ಕೋಡಿತ್ತು...

ಆಗ ಇನ್ನೂ ನೀಲಾ ಬಸಿರಿನಲ್ಲಿದ್ದಾಗ ಒಮ್ಮೆ-

"ನೀನು ಹಾಸಿಗೆ ಬಿಟ್ಟು ಏಳುವುದೇ ಬೇಡ. ಮುಂಜಾನೆ ತಿಂದ ಬ್ರೆಡ್ಡು ಕೂಡ ದಕ್ಕಲಿಲ್ಲ. ಸ್ವಲ್ಪ ಹೊತ್ತು ಮಲಗಿಕೋ. ಇವತ್ತು ನಾನs ಅಡಿಗೆ ಮಾಡ್ತೀನಿ" ಎಂದ ಶೇಖರ.

"ಮತ್ತ ಫ್ಯಾಕ್ಟರೀs" ತನ್ನ ಮಾತು ಮುಗಿಯುವುದರೊಳಗೇ ಹೇಳಿದ 'ಇವತ್ತ ಒಂದು ದಿನಾ ರಜಾ ತೊಗೋತೀನಿ. ನಮ್ಮ ರಾಣಿಯವರಿಗೆ ಆರಾಮ ಇಲ್ಲಾ ಅಂದಮ್ಯಾಲೆ ಈ ಸೇವಕ ಸ್ವಲ್ಪಾರೆ ಚಾಕರೀ ಮಾಡಬಾರದ ಅಂ. ಹೇಳು ಏನು ಮಾಡಬೇಕು, ಈಗ ಅಕ್ಕಿ, ಬ್ಯಾಳಿ ಎಷ್ಟೆಷ್ಟು ಕುದೀಲಿಕ್ಕೆ ಹಾಕಲಿ ? ಎರಡೂ ಕೂಡಿಯೇ ಹಾಕಲೇನು ಮತ್ತs?' ಗಂಡನ ಮಾತಿಗೆ ತಾನು ಮನವಾರೆ ನಕ್ಕಿದ್ದಳು. ಇಂದು ಮತ್ತೆ ನಸುನಗೆ ತುಟಿಗಳ ಮೇಲೆ ನಲಿದಾಡುವಾಗಲೇ ಮೈಮರೆತಳು ಗಿರಿಜೆ.

"ಅವ್ವಾ ಏsss ಅವ್ವಾs ನೀರು ಚುಡತಾವ. ಹಾಯ್. ಹಾs ನಾ ಸಾನಕ್ಕ ಒಲ್ಲೇs" ಅರುಣನ ರಾಗದಿಂದ ಎಚ್ಚತ್ತ ಗಿರಿಜಾ ಸುಡುತ್ತಿದ್ದ ನೀರಿಗೆ ತಣ್ಣೀರು ತೋಡುತ್ತ ಮಗನನ್ನು ರಮಿಸಿದ್ದಳು.

(ಅಕ್ಕಿ ಹೆಣ್ಣು, ಬೇಳೆ ಗಂಡು, ಅಕ್ಕಿ ಮೃದು, ಬೇಗ ಕುದೀತದೆ. ಆದರೆ ಬೇಳೆ ಬೇಗ ಕುದಿಯೋದಿಲ್ಲ. ಎರಡೂ ಕೂಡಿಸಿ ಕುದಿಯೋಕೆ ಹಾಕಿದರೆ ಕಿಚಡಿ ಆಗ್ತದ. ನಮ್ಮ ಜೀವನಾಽನೂ ಹಾಗೇ ಆಗೇದಲ್ಲ.)

ಅಂದು ಒತ್ತಾಯ ಮಾಡಿ ಅವಳಿಂದ ಹೇಳಿಸಿಕೊಂಡು ಅಡಿಗೆ ಮಾಡಿ ಹೆಂಡತಿಗೆ ಉಣಿಸಿದ ಶೇಖರ ಇಂದು ಗೆಳೆಯನ ಮನೆಯಿಂದ ಬಂದವನೇ ಊಟ ಮುಗಿಸಿ ಫ್ಯಾಕ್ಟರಿಗೆ ಹೊರಟುಹೋಗಿದ್ದ. ಹೆಂಡತಿಯ ಆರೋಗ್ಯ ವಿಚಾರಿಸುವಷ್ಟೂ ಪುರಸೊತ್ತು ಇರಲಿಲ್ಲ ಅವನಿಗೆ.

ಹಿಂದಿನ ದಿನಗಳ ಮೆಲುಕು ಹಾಕುತ್ತಿದ್ದ ಗಿರಿಜೆಗೆ ಗಂಟೆ ಎರಡು ಹೊಡೆದದ್ದೂ ತಿಳಿಯಲಿಲ್ಲ. ಶಿಶುವಿಹಾರ ಮುಗಿಸಿ ಮನೆಗೆ ಬಂದ ಅರುಣನಿಗೆ ಅಡಿಗೆ ಮನೆಗೆ ಹೋಗಿ ಬಾಳೆಹಣ್ಣು ತಿನ್ನಲು ಹೇಳಿ ಮಗ್ಗಲು ಬದಲಿಸಿದಳು ಗಿರಿಜೆ.

ನೆರೆಮನೆ ಪಾರ್ವತಮ್ಮ ಸೊಸೆಗೆ ಹೇಳುತ್ತಿದ್ದರು. "ಅರಿವಿಯೊಳಗ ನೀರು ಬಿಡಬ್ಯಾಡ ಲಗೂ ಒಣಗೂದಿಲ್ಲ. ನುರಿಽಯಾಗಿ ಹಿಂಡು. ಹೊಡಮಳಿಸಿ ತಿರುವಿ ತಿರುವಿ ಹಿಂಡು."

ತನ್ನ ಹೊಟ್ಟೆಯಲ್ಲಿಯೂ ಯಾರೋ ಕೈಯಿಟ್ಟು ತಿರುವಿ ಹಿಂಡುತ್ತಿದ್ದರು. ಹೊಟ್ಟೆಯಲ್ಲಿ ಹಿಂಡಿದಂತೆ ಕಣ್ಣಲ್ಲಿ ಹನಿಹನಿಯಾಗಿ ನೀರು ಸೋರಿ ದಿಂಬಿನಲ್ಲಿ ಇಂಗುತ್ತಿತ್ತು. ಕಣ್ಣು ಕತ್ತಲೆ ಕಟ್ಟುತ್ತಿತ್ತು. ಕತ್ತಲೆಯಲ್ಲಿ ಯಾರ ಯಾರ ಮುಖಗಳೋ ಮಿಂಚಿ ಮಾಯವಾಗುತ್ತಿದ್ದವು. ತನ್ನ ಮದುವೆಗೆ ಕೆಲದಿನ ಮೊದಲು ತೀರಿಕೊಂಡ ತಾಯಿ, ಕ್ಷಯದಿಂದ ನರಳಿ ತೀರಿಕೊಂಡ ತನ್ನ ನಾದಿನಿ, ತನ್ನ ಚಿಕ್ಕಂದಿನಲ್ಲೇ ತೀರಿಹೋಗಿದ್ದ ಸೋದರತ್ತೆ, ಎಲ್ಲ ಚಿತ್ರಗಳು ಅಸ್ಪಷ್ಟ ಮಸುಕು ಮಸುಕು ಛಾಯೆಗಳು ಮಾತ್ರ. ತಾನು ಯಾವ ಲೋಕದಲ್ಲಿದ್ದಳೋ- ಆಗಾಗ ಬರುತ್ತಿದ್ದ ಹೊಟ್ಟೆನೋವು ಮಾತ್ರ ತಾನು ಇನ್ನೂ ಬದುಕಿರುವೆನೆನ್ನುವ ಎಚ್ಚರ ಕೊಡುತ್ತಿತ್ತು.

ಶಾಲೆಯಿಂದ ನೀಲಾ, ಚಂದ್ರ ಬಂದರು. ಇದುವರೆಗೆ ಅವ್ವನನ್ನು ಕಾಡಿಸದೇ ಒಬ್ಬನೇ ಆಡಿಕೊಂಡಿದ್ದ ಅರುಣ ಈಗ ಅವರನ್ನು ಕೂಡಿಕೊಂಡ. ಚಂದ್ರ "ಅವ್ವಾಽ. ನನಗೆ ಹಸಿವಿ ಆಗೇದ" ಎಂದ.

"ಏ ಅಪ್ಪೂಽ ಬಾಯಿಲ್ಲೆ. ನಾವಿಬ್ಬರೂ ಬಾಳಿ ಹಣ್ಣು ತಿನ್ನೋಣು. ಹಾಲು ಕಾಸ್ತೀನಿ. ಕುಡಿಯೋಣಂತ ಬರ್‍ರಿಲ್ಲೆ ಅಡಿಗೆ ಮನೀಗೆಽ" ತಾಯಿಯ ಅನಾರೋಗ್ಯ ನೋಡಿದ ನೀಲಾ ತಾನೇ ಹಿರಿಯಕ್ಕನಾದಳು.

ಮತ್ತೆ ಬಂದು "ಅನ್ನಕ್ಕ ಇಡಲ್ಯಾ, ಅಕ್ಕಿ ಎಷ್ಟು ತೊಳೀಲಿ? ಶೇಗಡೀ ಹೊತ್ತಿಸಲ್ಯಾ" ಎಂದು ಎಲ್ಲವನ್ನೂ ವಿವರವಾಗಿ ಕೇಳಿ ತಿಳಿದುಕೊಂಡು ಅಡಿಗೆ ಮನೆಗೆ ಹೋದಳು.

"ಅಕ್ಕಾಽ, ಉರಿ ಹಚ್ಚೊ್ಚ ಮುಂದ ನಿನಗೆ ಹೆದರಿಕೆ ಆಗೂದಿಲ್ಲೇನು?" ಅಡಿಗೆ ಮನೆಯಲ್ಲಿ ಅಕ್ಕ-ತಮ್ಮನ ಸಂವಾದ ನಡೆದಿತ್ತು.

"ಹೆದರಿಕಿ ಬರ್‍ತಽದಪಾ. ಆದರೂ ಎಚ್ಚರಿಕೆಯಿಂದ ಮಾಡ್ತೀನಿ. ನೋಡು ಪಾಽಪ ಅವ್ವ. ಮಲಕೊಂಡಽ ಬಿಟ್ಟಾಳ. ಆಕೀಗೆ ಆರಾಮಿಲ್ಲಾ. ಮತ್ತ ಯಾರ ಮಾಡಬೇಕು, ಆಕಿ ಆರಾಮ ಇದ್ದಾಗ ನಮ್ಮ ಸಲುವಾಗಿ ಎಷ್ಟು ಕೆಲಸಾ ಮಾಡ್ತಾಳ. ಈಗ ನಾನಽ ಮಾಡಲಿಕ್ಕೆ ಕಲಕೋತೀನಿ." ಗಿರಿಜೆಯ ಕಣ್ಣಿನಿಂದ ಬಿದ್ದ ಸಂತೋಷದ ಹನಿ ದಿಂಬಿನಲ್ಲಿ ಇಂಗಿತು. ಹೊರಗೆ ಬಾಗಿಲು ಸಪ್ಪಳವಾಯಿತು. 'ಅಪ್ಪಾಽ, ಅವ್ವ ಮಲಗೇಬಿಟ್ಟಾಳ. ಆರಾಮ ಆಗಿಲ್ಲಪಾ ಆಕೀಗೆ" ಅರುಣನ ಮಾತು ಕೇಳಿದ ಶೇಖರ ಕೋಣೆಗೆ ಬಂದ. "ಯಾಕ ಇನ್ನೂ ಕಡಿಮೆ ಆಗಿಲ್ಲೇನು ನೋವು ?"

"ಇಲ್ಲಾ ಹಾಂಗಽ ಅದ. ಇನ್ನೂ ಹೆಚ್ಚೆಚ್ಚು ಆಗಲಿಕ್ಕೆ ಹತ್ತೇದ. ಏಳಲಿಕ್ಕೆ ಆಗವೊಲ್ಲದು. ಸ್ಟೋವ್ ಹೊತ್ತಿಸಿಕೊಂಡು ಚಹಾ ಮಾಡಕೋತೀರೇನು, ನೀಲಾ ಸಹಾಯ ಮಾಡ್ತಾಳ ಎಂದಳು ಗಿರಿಜೆ ನರಳುವ ದನಿಯಲ್ಲಿ.

"ಇಲ್ಲಾ ಹೊರಗ ಹೋಗಿ ಬರ್ತೀನಿ, ಚಹಾ ಬೇಕಾದರ ಅಲ್ಲೇ ಕುಡೀತಿನಿ" ಎಂದು ಹೊರಗೆ ಹೋದ ಶೇಖರ ಡಾಕ್ಟರರೊಡನೆಯೇ ಮನೆಗೆ ಬಂದ.

ಎಲ್ಲವನ್ನೂ ಚೆನ್ನಾಗಿ ಪರೀಕ್ಷಿಸಿದ ಡಾಕ್ಟರರು ತಮ್ಮ ಬ್ಯಾಗಿನಿಂದ ಒಂದೆರಡು ಮಾತ್ರೆಗಳನ್ನು ತೆಗೆದುಕೊಟ್ಟು "ಈಗ ಸದ್ಯಕ್ಕ ಇವನ್ನ ಕೊಡ್ರಿ. ತುರ್ತು ನೋವು ಕಡಿಮಿ ಆಗ್ತದ. ನನ್ನ ಜೋಡಿ ಬರ್ರಿ. ಔಷಧಿ ಕೊಡ್ತೀನಿ" ಎಂದು ಎದ್ದರು. ಹೋಗುವಾಗ ನೀವೇನೂ ಕಾಳಜೀ ಮಾಡಬ್ಯಾಡ್ರಿ. ಆರಾಮ ಆಗ್ತದ. ನಾ ಹೇಳಿದ್ಹಾಂಗ ಪತ್ತೆ ಮಾಡ್ರಿ. ಸರಿಯಾಗಿ ವಿಶ್ರಾಂತಿ ತಗೊಳ್ರಿ. ಎಲ್ಲಾ ಕಡಿಮಿ ಆಗ್ತದ" ಎಂದು ಗಿರಿಜೆಗೂ ಹೇಳಿದರು.

ಅವರ ಹೇಳಿಕೆಗೆ ತಲೆ ಅಲುಗಿಸಿದ ಗಿರಿಜೆಯ ಕಣ್ಣಿನಿಂದ ಪಳಕ್ಕನೆ ನೀರುರುಳಿದವು.ಮೂರು ಮಕ್ಕಳು, ಗಂಡನಿಗೆ ಊಟ ಉಪಚಾರ ಮಾಡಬೇಕಾದ ತನಗೆ ವಿಶ್ರಾಂತಿ ಹೇಗೆ ಸಾಧ್ಯ ? ತನ್ನನ್ನು ಮಲಗಿಸಿ ಉಪಚಾರ ಮಾಡುವ ಬಂಧುಗಳಾದರೂ ಯಾರಿದ್ದಾರೆ? ತಾವು ತಬ್ಬಲಿ ! ಗಂಡನ ಅಣ್ಣ -ಅತ್ತಿಗೆಯರಿದ್ದರೂ ಅವರ ಸಂಸಾರವೇ ಅವರಿಗೆ. ಇನ್ನು ಗಂಡನ ಪ್ರೀತಿ ಸಹಾನುಭೂತಿಗಳ ಕೊರತೆಯನ್ನು ದಿನಾಲೂ ಅನುಭವಿಸುತ್ತಲೇ ಇದ್ದೇನೆ. ತನಗಿಂತಲೂ ಇಸ್ಪೀಟಾಟವೇ ಹೆಚ್ಚಾಗಿದೆ ಅವರಿಗೆ. ಗಂಡನಿಗೆ ಬೇಡಾದ ಮೇಲೆ ಗುಂಡುಕಲ್ಲಿಗೂ ಬೇಡವಂತೆ. ಇನ್ನು ಜೀವದಿಂದ ಇರಬೇಕಾದರೂ ಯಾಕೆ? ಹೀಗೆ ಸಂಕಟಪಡುತ್ತ, ನರಳುತ್ತ ಉದಾಸೀನ ಮಾಡುವ ಗಂಡನ ನೆರಳಿನಲ್ಲಿ ತಾನು ಬದುಕುವುದು ಯಾತಕ್ಕೆ?

"ಅವ್ವಾ, ಅಪ್ಪಾಜಿ ಆ ಔಷಧಿ ಬ್ರೆಡ್ಡು ತಂದುಕೊಟ್ಟು ಮತ್ತ ಎಲ್ಲೋ ಹೋದರು. ಈಗ ಒಂದು ಡೋಜು ತೊಗೋಬೇಕಂತ" ಚಂದ್ರ ಹೇಳಿದ. ಹಿಂದಿನಿಂದ ನೀಲಾ ಕಪ್ಪು, ನೀರು ತಂದಳು. ಗಿರಿಜೆ ಮುಖ ತಿರುಗಿಸಿ "ಅಲ್ಲೇ ಇಟ್ಟುಬಿಡು" ಎಂದು ಕಣ್ಣು ಮುಚ್ಚಿದಳು.

ಯಾವದೋ ಹೋರಾಟ ನಡೆದಿದೆ ತನ್ನ ಮನಸ್ಸಿನಲ್ಲಿ. ಆ ಮಾನಸಿಕ ಯಾತನೆ ಹೊಟ್ಟೆಯ ನೋವನ್ನು ಹೆಚ್ಚು ಹೆಚ್ಚು ಮಾಡುತ್ತಿದೆ. ಬಿರುಗಾಳಿ ಬೀಸಿ ಬೀಸಿ ಹೊಡೆಯುತ್ತಿರುವಾಗ, ದೊಡ್ಡ ಗಾತ್ರದ ಹನಿಗಳಿಂದ ರಮ್ಮೆಂದು ಹೊಯ್ಯುತ್ತಿರುವ ಮಳೆ ಮೇಲೆ, ಕೆಳಗೆ ಒಡಲಲ್ಲಿದ್ದುದನ್ನೆಲ್ಲ ಹೊಲಚೆಲ್ಲುವಂತೆ ಅಲ್ಲೋಲ ಕಲ್ಲೋಲವಾಗಿರುವ, ಭೋರ್ಗರೆಯುವ ಸಾಗರ ಇವುಗಳ ನಡುವೆ ಎಲ್ಲೋ ಚಿಕ್ಕದೊಂದು ದೋಣಿ ತನ್ನ ಈ ಜೀವ. ಈ ಪ್ರಳಯ ಕೊನೆಗೊಂಡಾಗಲೇ ತನ್ನ ದೋಣಿಗೆ ಸ್ಥಿರತೆ. ಇದು ಯಾವಾಗ ಕೊನೆಗೊಂಡೀತು, ದೋಣಿಯನ್ನು ಮುಳುಗಿಸಿಯೇ ಶಾಂತವಾಗುವುದೋ ಏನೋ...

ಕಾಲುಗಳ ಮೇಲೆ ಏನೋ ಭಾರವಾಗಿರುವಂತೆ ಭಾಸವಾಯಿತು. ಗಿರಿಜೆಗೆ. ಕಣ್ಣುತೆರೆದು ಅರುಣ ಕಾಲಮೇಲೆ ಮಲಗಿಕೊಂಡು ಹಿತವಾಗಿ ಕೈಯಾಡಿಸುತ್ತಿದ್ದಾನೆ. ಉಳಿದಿಬ್ಬರು ಹಾಲಿನ ದೀಪದಲ್ಲಿ ಮೌನವಾಗಿ ಓದಿಕೊಳ್ಳುತ್ತಿದ್ದಾರೆ. ಮೂವರು ಚಿಕ್ಕಮಕ್ಕಳಿರುವ ಮನೆಯಲ್ಲಿ ಇಂಥ ಮೌನವೇ ? ಸ್ಮಶಾನ ಮೌನ. ಸ್ಮಶಾನದ ನೆನಪಿನಿಂದಲೇ ಬೆಚ್ಚಿ ತಾನೇ ಮಾತನಾಡಿದಳು.

"ಅರುಣಾ ಏಳಪ್ಪಾ, ನಿದ್ದಿ ಬಂತೇನೋ, ಒಳಗ ಹೋಗು, ನೀಲಕ್ಕ ಅನ್ನಾ ನೀಡತಾಳ ಉಂಡು ಮಲಕೋ. ಉಪವಾಸ ಮಲಗಬ್ಯಾಡ."

"ನಾ ಒಲ್ಲೆ ಅವ್ವಾ. ನನಗ ಅಡಿಗೀ ಮನಿಯೊಳಗ ಹೋಗು ಹಾಂಗ ಆಗವೊಲ್ಲದು. ನನಗ ಹಸಿವಿ ಆಗಿಲ್ಲಾ. ನಾ ಇಲ್ಲೆ ಮಲಗತೀನಿ ನಿನ್ನ ಕಾಲ ಮ್ಯಾಲೆ. ಅವ್ವಾ ನಾ ನಿನ್ನ ಕಾಲು ಒತ್ತಲ್ಯಾ. ಅಂದರ ನಿನಗ ಆರಾಮ ಆಗ್ತದ."

"ಹೂಂ ಒತ್ತಪಾ. ದೇವರ ನಿನಗ ಭೋಲೋ ಬುದ್ಧಿ ಕೊಟ್ಟಾನಪಾ."

"ಅವ್ವಾ, ನಿನಗ ಆಗಳೆ ನಿದ್ದಿ ಹತ್ತಿತ್ತು. ನೀಲಕ್ಕ ಹೇಳಿದ್ಲು. 'ನಾವು ದೇವರಿಗೆ ಪ್ರಾರ್ಥನೆ ಮಾಡೋಣು. ನಮ್ಮ ಅವ್ವಗ ಆರಾಮ ಮಾಡು ಅಂತ ಹೇಳಿ' ಅಂದಳು, ನಾವು ಮೂರು ಮಂದಿ ಮುಖ ತೊಳೆದುಕೊಂಡು ಊದಿನಕಡ್ಡಿ ಹಚ್ಚಿ ವಿಭೂತಿ ಹಚ್ಚಿಕೊಂಡು ಪ್ರಾರ್ಥನಾ ಮಾಡಿದಿವಿ. ಇನ್ನಮ್ಯಾಲೆ ನಿನಗ ಆರಾಮ ಆಗ್ತದ. ಹೌದಲ್ಲೊ ಅವ್ವಾ ? ನಾನ ನಿನ್ನ ಹತ್ರ ಕೂಡ್ರತೇನಿ ಅವ್ವಾ, ಬ್ಯಾಡ ಅನಬ್ಯಾಡಾ."

ಮಾತುಗಳು ಗಿರಿಜೆಯ ನರನರಗಳನ್ನೇ ನೇವರಿಸಿದವು. ಮೈಯಲ್ಲಿ ಹಿತವಾದ ಹೊಳೆ ಹರಿಯಿತು. ಮಳೆಯ ಹೊಡೆತ, ಅಲೆಗಳ ಅಬ್ಬರವನ್ನೇ ಎದುರಿಸುವ ಶಕ್ತಿ ಅವಳಿಗೆ ದಕ್ಕಿತು. ಹತ್ತಿರ ಕರೆದು ಅರುಣನ ಗಲ್ಲ ನೇವರಿಸಿ, ಮುಖದ ಮೇಲೆಲ್ಲ ಕೈಯಾಡಿಸಿ, ನೆತ್ತಿ ಮೂಸಿ ಎದೆಗೆ ಅವಚಿದಳು.

ತಾಯಿಯ ಧ್ವನಿ ಕೇಳಿ ಎದ್ದು ಬಂದ ನೀಲಕ್ಕ, ಚಂದ್ರರೂ ಹಾಸಿಗೆಯ ಬಳಿ ಬಂದರು. ಕಪ್ಪಿನಲ್ಲಿ ಔಷಧಿ ಹಾಕಿ ತಾಯಿಯ ಕೈಗೆ ಕೊಟ್ಟಳು ನೀಲಾ. ಚಂದ್ರ ನೀರು ಕೊಟ್ಟ. ಹೊರಗೆ ಬಾಗಿಲು ಸಪ್ಪಳವಾಯಿತು. ಕೋಣೆಯ ಬಾಗಿಲಿಗೆ ಬಂದ ಗಂಡನನ್ನು ನೋಡಿ ಗಿರಿಜೆ ನಿಧಾನವಾಗಿ ಕಪ್ಪಿನಲ್ಲಿದ್ದ ಔಷಧಿಯನ್ನು ನುಂಗಿ ನೀರು ಕುಡಿದಳು.

***

# ಇದಕ್ಕೇನನ್ನಬೇಕು ?

"ಕೆಂಚವ್ವಾ ಏ ಕೆಂಚವ್ವಾಽಽ" ಗಡಿಬಿಡಿಯಲ್ಲಿದ್ದ ನಾನು ಅಡಿಗೆ ಮನೆಯಿಂದಲೇ ಕೂಗಿದೆ.

"ಇನ್ನೂ ಬಂದಿಲ್ಲವ್ವಾ ಕೆಂಚವ್ವ" ಕಿರಿಯ ಮಗ ಕರುಣ ಉತ್ತರಿಸಿದ.

"ಒಂಬತ್ತು ಹೊಡದರೂ ಇನ್ನೂ ಬರಲಿಲ್ಲವಲ್ಲ ಇವಳು. ದಿನಾಲೂ ಎಂಟು-ಎಂಟೂವರೆ ಒಳಗೇ ಬರುವವಳು. ಇಂದೇನಾಯಿತು ಇವಳಿಗೆ ಧಾಡಿ" ಎಂದು ಬಯ್ದುಕೊಳ್ಳುತ್ತಲೇ ತಾಟು, ಸವುಟು, ತೆವಿ ಎಲ್ಲ ತಿಕ್ಕಿ ತೊಳೆದುಕೊಂಡೆ.

ಎಲ್ಲರ ಊಟ ಮುಗಿದು ಹನ್ನೆರಡು ಹೊಡೆದರೂ ಕೆಂಚವ್ವನ ಸುಳಿವೇ ಇಲ್ಲ. ತಿಂಗಳಲ್ಲಿ ಎರಡು ಮೂರು ಸಲವಾದರೂ ಅವಳು ತಡಮಾಡಿ ಬರುವದೂ, ತಪ್ಪಿಸುವದೂ, ನಾನು ನಿನ್ನನ್ನು ಬಿಡಿಸುತ್ತೇನೆಂದು ಬೆದರಿಸುವುದೂ, ಅವಳು ಕೊಡುವ ಕಾರಣಗಳನ್ನು ಕೇಳಿ 'ಹೋಗಲಿ ಬಿಡು, ಪಾಽಪ' ಎಂದು ಮನದಲ್ಲಿಯೇ ಮರುಗಿಕೊಳ್ಳುವುದೂ ಇದ್ದೇ ಇರುತ್ತಿತ್ತು. ಆದರೂ ಇವತ್ತು ಅದೇಕೋ ಮನಸ್ಸು ಬಹಳ ಕೆಟ್ಟುಹೋಗಿತ್ತು. ತಲೆ ಚಿಟ್ಟು ಹಿಡಿದಿತ್ತು. ಅಡಿಗೆಮನೆ ಕೆಲಸ ಯಾವಾಗ ಮುಗಿದೀತೋ ಯಾವಾಗ ವಿಶ್ರಾಂತಿ ತೆಗೆದುಕೊಳ್ಳುವೆನೋ ಎನ್ನುವಷ್ಟು ಶರೀರ ದಣಿದಿತ್ತು. ನೆಪಮಾತ್ರಕ್ಕೆ ಪುಸ್ತಕವಿದ್ದರೂ ಕಣ್ಣು ಯಾವಾಗಲೋ ಮುಚ್ಚಿದ್ದವು.

ಟ್ರನ್.... ಟ್ರನ್... ಟ್ರನ್....'

ನಿದ್ರೆ ಅರ್ಧ ತುಂಡಾಯಿತು. ಚಟಕ್ಕನೆ ಎದ್ದು ಕೂತೆ. ಎದ್ದ ರಭಸಕ್ಕೋ ಏನೋ ಮೈ ಎಲ್ಲ ಬೆವತು ಎದೆ ಡವಡವ ಹೊಡೆದುಕೊಳ್ಳುತ್ತಿತ್ತು. ಸ್ವಲ್ಪ ಸುಧಾರಿಸಿಕೊಳ್ಳುತ್ತಿರುವಾಗಲೇ ಮತ್ತೆ ಟ್ರನ್ ಪ್ರಾರಂಭ. ಹಾಗೇ ಎದ್ದು 'ಯಾರು ವಕ್ರಿಸಿದರಪ್ಪ ಈ ಹೊತ್ತಿನಲ್ಲಿ' ಎಂದುಕೊಳ್ಳುತ್ತಲೇ ಬಾಗಿಲು ತೆಗೆದೆ. ಕೆಂಚವ್ವ ನಿಂತಿದ್ದಳು. ಕುಂಕುಮವಿರಲಿಲ್ಲ. ಕೂದಲೆಲ್ಲ ಕೆದರಿ ಹೋಗಿತ್ತು. ಉಟ್ಟ ಸೀರಿಯೆಲ್ಲಾ ಕೊಳೆಯಾಗಿ ಅಲ್ಲಲ್ಲಿ ಹರಿದುಹೋಗಿತ್ತು. ಮುಖವಂತೂ, ಸುಟ್ಟ ಬದನೆಕಾಯಿಯಂತಿತ್ತು. ಬೆಳಗಿನಿಂದ ಆದ ತೊಂದರೆಯನ್ನೆಲ್ಲಾ ನೆನೆಸಿಕೊಂಡು ಸಿಟ್ಟು ತಂದುಕೊಂಡೇ ಕೇಳಿದೆ. " ಮುಂಜಾನೆ ಯಾಕ ಬರಲಿಲ್ಲಾ? ನಿನ್ನ ದಾರೀ ನೋಡಿ ನೋಡಿ ಸಾಕಾಗಿ ಹೋಯಿತು. ಏನಾಗಿತ್ತು ಧಾಡಿ ನಿನಗೆ ? ಎಲ್ಲ ಕೆಲಸ ಮುಗಿದ ಮ್ಯಾಲೆ ಯಾಕ ಬಂದಿ? ಎಷ್ಟು ಹೇಳಿದರೂ ನಿನ್ನ ಚಟಾ ಬಿಡೂದಿಲ್ಲ ನೀನು. ಈ ತಿಂಗಳು ಮುಗಿದ ಮ್ಯಾಲೆ ನಾನು ಬ್ಯಾರೆ ಕೆಲಸದಾಕಿನ್ನ ಇಟ್ಟಕೊಳ್ಳತೇನಿ. ನೀನು ಏನು ಬರೂದು ಬ್ಯಾಡ ಹೋಗು" ಎಂದವಳೇ ಬಾಗಿಲು ಮುಚ್ಚಿದೆ. "ನನ್ನ ಗಂಡಗ ನನಗ ಒಂದಿಟು ಜಗಳಾ ಆತ್ರಿ" ಅಂತ ಅವಳು ಗೋಣಗಿದ್ದು ಕೇಳಿದರೂ, "ಯಾವಾಗಲೂ ನಿಂದು ಇದೇ ಹಾಡಾಯಿತು. ಹಾಳಾಗಿ ಹೋಗು" ಎಂದು ಕೊಂಡೇ ಒಳಗೆ ಬಂದು ಮಲಗಿದೆ. ನಾನು ಏನೇನು ಅನ್ನಬೇಕೆಂದು ಬೆಳಗಿನಿಂದ ಮನಸ್ಸಿನಲ್ಲಿ ಅಂದುಕೊಂಡಿದ್ದೆನೋ ಎಲ್ಲವನ್ನೂ ಅಂದು ಮುಗಿಸಿದ್ದೆ. ಇನ್ನ ಕೆಂಚವ್ವ ನಮ್ಮ ಮನೆಗೆಲಸಕ್ಕೆ ಬರುವುದಿಲ್ಲ ಎಂದುಕೊಂಡೆ. ಒಳಗೆ ಚುರುಚುರು ಎನ್ನುತ್ತಿತ್ತು. 'ಬಿಡು ಇವಳಿಲ್ಲದಿದ್ದರೆ ಇನ್ನೊಬ್ಬಳು. ರೊಕ್ಕ ಕೊಟ್ಟರೆ ಸಿಕ್ಕೇ ಸಿಗುತ್ತಾಳೆ. ಅದಕ್ಕೆ ಯಾಕೆ ಇಷ್ಟು ಹಳಹಳಿಸಬೇಕು' ಎನ್ನುತ್ತ ಮತ್ತೆ ಮುಸುಕು ಎಳೆದೆ.

ಟ್ರನ್... ಟ್ರನ್... ಈ ಸಲ ಮೊದಲಿನ ಹಾಗಾಗಲಿಲ್ಲ. ನಿದ್ರೆಯ ಮಂಪರು ಪೂರ್ತಿ ಹೋಗಿತ್ತು. ನಾಲ್ಕು ಹೊಡೆಯಲು ಬಂದಿತ್ತು. ಬಾಗಿಲು ತೆಗೆದೆ. ಕೆಂಚವ್ವ ಇನ್ನೂ ಅಲ್ಲಿಯೇ ಇದ್ದಳು. ರಣಗುಡುವ ಬಿಸಿಲಿನಲ್ಲಿ ಅವಳು ಅಷ್ಟು ಹೊತ್ತಿನಿಂದಲೂ ಅಲ್ಲೇ ಕುಳಿತಿದ್ದಾಳೆ ಎನ್ನುವ ಸಂಗತಿ ಮನಸ್ಸಿನಲ್ಲಿ ಮೂಡಿತು.

"ಇಲ್ಲಿ ಯಾಕ ಕೂತೀಯ ಕೆಂಚವ್ವಾಽ!"

"ಮತ್ತೇನ ಮಾಡ್ಲಿರಿ, ಅವ್ವಾರs. ನೀವು ಸಿಟ್ಟಿಗೆದ್ದು ಬಾಗಿಲು ಮುಚ್ಚಿಕೊಂಡು ಹೋದ್ರಿ ಇಲ್ಲೇ ಕೂತೆ. ಕೆಲಸಕ್ಕೂ ಬರಬ್ಯಾಡ ಅಂತೀರಲ್ಲ. ನಾ ಏನು ಮಾಡಿದೆ ಅಂಥಾದ್ದು?"

"ಅಲ್ಲ ಮತ್ತ ನಮಗ ಕಸಾ-ಮುಸುರೆ ಮಾಡೂದು ಆಗುದಿಲ್ಲಾಂತ ನಿನ್ನ ಹಚ್ಚೂದವ್ವಾ. ಹೊತ್ತಿಗೆ ಸರಿಯಾಗಿ ಬರದಿದ್ರ ಏನು ಮಾಡಬೇಕು ನಿನ್ನ ತೊಗೊಂಡು. ನಾವೂ ರೊಕ್ಕಾ ಕೊಡತೀವಿ, ಹುಣಿಸೇ ಪಕ್ಕಾ ಅಲ್ಲಾ. ನಿನ್ನ ಬಿಟ್ಟರ ಇನ್ನೊಬ್ಬಾಕಿ ಸಿಗತಾಳ ಹೋಗು ಅಂದೆ."

"ನೀವು ಹೇಳಿದ ಕೆಲಸ ಎಲ್ಲಾ ಮಾಡತೀನಲ್ರೀ. ಯಾವುದೂ ಇಲ್ಲಾ ಅನ್ನೂದಿಲ್ಲ. ಯಾವಾಗರೆ ಆಟsಟು ತಡ ಆದರೆ ಹೊಟ್ಟ್ಯಾಗ ಹಾಕ್ಕೊಳ್ರಿ. ಸಿಟ್ಟು ಮಾಡಬ್ಯಾಡ್ರಿ ಬಡವಿ ನಾನು. ಕೆಲಸ ಬಿಡಿಸಬ್ಯಾಡ್ರಿ" ಅಂಗಲಾಚಿದಳು ಕೆಂಚವ್ವ.

"ಅದೆಲ್ಲಾ ಇರಲಿ, ಇವತ್ತ ಯಾಕ ಬರಲಿಲ್ಲ ಹೇಳು. ನಿನ್ನ ಅವತಾರ ಯಾಕ ಹಿಂಗ ? ಕುಂಕುಮ ಇಲ್ಲ, ತಲಿ ಬಾಚಿಲ್ಲ, ಬಳೆ ಒಡಕೊಂಡೀರಿ. ಜಗಳ ಯಾಕ ಮಾಡಿದಿ ?"

"ಅದೆಲ್ಲಾ ದೊಡ್ಡ ಕತಿ ಐತೇಳ್ರಿ ಅವ್ವಾರs. ನೀವೊಟು ಪುರಸತ್ತು ಮಾಡಿಕೊಂಡು ಕುಂತರ ಹೇಳತೀನಿ". ಸೆರಗು ಸರಿಮಾಡಿಕೊಳ್ಳುತ್ತ ಒಳಗೆ ಬಂದು "ಅಪ್ಪಾರು ಇಲ್ಲ ಹೌದಲ್ರೀ" ಪಿಸುಗುಟ್ಟಿದಳು. "ಇಲ್ಲ"ವೆಂದು ಗೋಣುಹಾಕುತ್ತ ಆರಾಮವಾಗಿ ಕುಳಿತುಕೊಳ್ಳುವಾಗ ಕೆಂಚವ್ವ ತೊಟ್ಟ ಜರದಂಚಿನ ಕುಬಸದ ಮೇಲೆ ದೃಷ್ಟಿ ಬಿತ್ತು.

"ಕೆಂಚವ್ವಾ ಜರದ ಕುಬಸಾ ಯಾವಾಗ ಹೊಲಿಸಿದಿ?"

ಹರಿದ ಸೆರಗನ್ನೇ ಎಳೆದು ಮುಚ್ಚಿಕೊಳ್ಳುತ್ತ ನಾಚುತ್ತ ಎಂದಳು. "ಹಟ್ಟೀ ಹಬ್ಬದಾಗ ತೋಪ ಸೆರಗಿನ ಸೀರಿ ಕೊಡಿಸಿದ್ದನಲ್ರಿ. ಆಗs ಹೊಲಿಸಿದ್ದ ಇದನ್ನ."

ಹೌದು, ದೀಪಾವಳಿಗೆ ಪರಾಸ್ಪೇಟನ ಅಂಚಿನ ಕರಿ ಚಂದ್ರಕಾಳಿಯ ಸೀರೆ ತಂದು ತೋರಿಸಿದ್ದಳು. ಕೆಂಚಪ್ಪ ತಂದಿದ್ದಾನೆಂದು. ನಾನೇ ಮರೆತಿದ್ದೆ. "ಇಸ್ಪೀಟು ಆಡಿ ಎಲ್ಲೋ ರೊಕ್ಕಾ ಗೆದ್ದಾನ ಕಾಣತದ. ನಿನಗೆ ಸೀರಿ ತಂದಾನ ಕೆಂಚಪ್ಪ. ನಸೀಬ ತಗೀತು ಬಿಡು ನಿಂದೂ. ಪ್ಯಾಟ್ಯಾಗ ಹೋದಾಗ ಚಾದ ಅಂಗಡಿಗೆ ಹೋಗಿದ್ದಿರಿ ಇಲ್ಲೋ" ಎಂದಿದ್ದೆ ನಗುತ್ತ. ಗಂಡ ಸಿನಿಮಾಕ್ಕೆ ಕರಕೊಂಡು ಹೋದದ್ದು, ಚಹದ ಅಂಗಡಿಯೊಳಗ ತಿನಿಸಿದ್ದು, ಸಣ್ಣಕ್ಕಿ ತಂದದ್ದು, ಸಕ್ರಿ ಚಹಾ ಕುಡಿಸಿದ್ದು ಹೇಳುತ್ತಿದ್ದಳು ಕೆಂಚವ್ವ ಆಗಾಗ ನನ್ನ ಮುಂದೆ. ಅಂದೂ ಹೊಸ ಮದುವಣಗಿತ್ತಿಯಂತೆ ನಾಚುತ್ತ ಹೇಳಿದಳು.

"ಆ ಬ್ರಾಂಬರ ಚಾದ ಅಂಗಡಿಗೆ ಕರಕೊಂಡು ಹೋಗಿದ್ದನ್ರಿ. ಖಾರಾ, ಸೀ ಸೀ ಗುಂಲಾಬ ಜಾಮೂನು, ಚಾ ಕೊಡಿಸಿದ. ಹಾಂಗs ಮೂಲಿ ಥೇಟರಿನ್ಯಾಗ ಅದೇನೋ 'ಮಿಲನ' ಅಂತ ಸಿನಿಮಾನೂ ತೋರಿಸಿದಾ." ಖುಷಿಯಲ್ಲಿದ್ದಳು ಕೆಂಚವ್ವ.

ಅದೆಲ್ಲಾ ನನಪಾಗಿ ಚೇಷ್ಟೆ ಮಾಡಿದೆ. 'ಚೈನೀ ಹೊಡೀ ಕೆಂಚವ್ವಾs ಚೈನೀ ಹೊಡಿ. ರೊಮ್ಯಾಂಟಿಕ್ ಗಂಡ ಸಿಕ್ಕಾನ. ಇವತ್ತು ಜರದ ಕುಬಸಾ, ನಾಳೆ ಜರದ ಚಪ್ಪಲೀ ಎಲ್ಲ ಕೊಡಸತಾನ ಕೆಂಚಪ್ಪ. ದುಡಿಯಾಕ ಘಟ್ಟಿ ಅದಾನ. ಮಕ್ಕಳು ಇಲ್ಲ ಮರೀ ಇಲ್ಲ. ಎಲ್ಲಾ ನಿಂದs ರಾಜ್ಯ. ಆದರ ಚೈನೀ ಹೊಡೆಯೋದರಾಗ ನಮ್ಮ ಮನೀ ಕೆಲಸಾ ಮಾತ್ರ ಮರೀಬ್ಯಾಡಾ ಆಯ್ತ."

"ನಿಮ್ಮ ಮನೀಕೆಲಸ ಮರತು ಏನ ಮಾಡ್ಲೀರೀ ಅವ್ವಾರs. ಅಲ್ರೀ ಅದೇನೋ ಅಂದ್ರಲ್ಲ ರಾಮಾಟಿಕ್ ಅಂತ. ಹಾಂಗಂದ್ರ ಏನ್ರೀ. ನನಗ ಒಂದೀಟು ತಿಳಿಯೂ ಹಾಂಗ ಹೇಳ್ರಲಾ" ಗಾಬರಿಯ ದನಿಯಲ್ಲಿ ಕೆಂಚವ್ವ ಕೇಳಿದಳು.

"ಯಾಕs ನೀನೂ ಇಂಗ್ರೇಜಿ ಮಾತಾಡ್ತೀಯಲ್ಲ. ಇನ್‌ಕುರಿ (ಇನ್‌ಕ್ವೈರಿ) ಇನ್‌ಸೆರ್ಟ (ಇನ್‌ಸಲ್ಟ್) ಅಂತೆಲ್ಲಾ ಹೇಳತಿರತೀಯಲ್ಲ. ರೊಮ್ಯಾಂಟಿಕ್ ಅಂದರ ಸರಸಿ ಇದ್ದಾನ ಅಂತ. ಎಷ್ಟು ಪ್ರೀತಿ ಮಾಡ್ತಾನ ನೋಡು. ಎಷ್ಟು ಸುಖದಿಂದ ಇಟ್ಟಾನ ನಿನ್ನ. ಏನ ಕಡಮೆ ಆಗೇದ ನಿನಗ? ಬೇಡಿದ್ದು ತಂದು ಕೊಡ್ತಾನ ಕೆಂಚಪ್ಪ."

"ಅಪ್ಪಾರs. ಪಿರೀತಿ ಮಾಡೋದೂ ಆಟs ಹೇಳತೀರಿ ನೀವು. ಕುಡದು ಬಂದು ದನಾ ಬಡದಂಗ ಬಡೀತಾನಲ್ರೀ. ಅದಕ್ಕೇನಂತಿರಿ. ನಾ ಅಂತ ತಡಕೊಂಡೀನಿ. ಇನ್ನೊಬ್ಬಾಕಿ ಆಗಿದ್ದರ ಇವನ ಕೈಯಾಗ ಇರದ ಓಡಿ ಹೋಗುತ್ತಿದ್ದಳು."

"ಕುಡಿಯೂದೊಂದು, ಇಸ್ಪೇಟು ಆಡುದೊಂದು ಇವೆರಡು ಚಟಾನs ಬಿದ್ದಾವ ಅವಗ. ಅವಾ ನಿಶೇದಾಗ ಇದ್ದಾಗ ನೀ ತಿರಗಿ ಉತ್ತರಾ ಯಾಕ ಕೊಡತಿ ? ಆಗ ಪೂರ್ವಕ್ಕ ಪಶ್ಚಿಮ ಅಂದರೂ ಹೌದ ಅನಬೇಕು ನೀನು. ನೀ ಎದುರು ಉತ್ತರ ಕೊಟ್ಟಕೂಡಲೇ ಹಿಡಿದು ಬಡಿತಾನ. ಆದರ ಮರುದಿನಾ ಎಣ್ಣೀ ಹಚ್ಚಿ ತಿಕ್ಕಿ ಎರಿತಾನ ಹೌದಲ್ಲೊ?"

"ಹೌದು ಬಿಡ್ರಿ, ನೀವು ಹೇಳೋದು ಖರೇವೈತಿ. ಆದರ ಇವೆಡ್ಡೊ ಚಟದ ಕೂಡ ಇನ್ನೊಂದು ಗಂಟ ಬಿದ್ದsದಲ್ರೀ ಅಪ್ಪಾರ. ಅದs ಹೊಟ್ಟಿಬ್ಯಾನಿ ಹತ್ತೇತಿ ನನಗ. ಈಗ ಮೂರೊರಸದ ಹಿಂದ ನವಲಗುಂದಕ್ಕ ಕೆಲಸಕ್ಕ ಅಂತ ಹೋದಾಂವ ಅಲ್ಲೇ ಒಬ್ಬಾಕಿನ್ನ ಗಂಟು ಹಾಕ್ಕೊಂಡಿದ್ದ. ನೆನಪಾದಾಗ ನನ್ನಲ್ಲೇ ಬರಾಂವಾ. ಪಗಾರ ತಂದ ಕೊಡಾಂವಾ. ಆಕಿನ್ನ ಬಿಡಿಸಬೇಕಾದರ ನನಗ ಕುರಿ ಕ್ವಾಣ ಬಿದ್ದುಹೋದ್ವು. ಈಗ ಮತ್ತೊಬ್ಬಾಕಿ ಗಂಟ ಬಿದ್ದಾಳ್ರಿ."

"ಎಲ್ಲಿಯಾಕಿ ?"

"ಈಗ ಎಡ್ಡ ತಿಂಗಳ ಹಿಂದ ಗೌಂಡೀ ಕೆಲಸಕ್ಕಂತ ಅಳ್ನಾವರಕ್ಕ ಹೋದನ್ರಿ. ದಿನಾ ಯಾಕ ಹೋಗೋದು ಬರೂದು ಸುಮ್ಮಕ ಗಾಡೀ ಖರ್ಚು ಅಂತ ಹೇಳಿ ಅಲ್ಲೇ ಇರತಿದ್ದಾ. ನಾನs ಓಣ್ಯಾಗಿನವರ ಕೂಡ ಬುತ್ತೀ ಕಳಸತಿದ್ದೆ. ಮಂಗಳವಾರಕ್ಕೊಮ್ಮೆ ಬರತಿದ್ದಾ. ಪಗಾರ ಕೊಟ್ಟರ ಕೊಟ್ಟಾ, ಬಿಟ್ಟರ ಬಿಟ್ಟಾ ಮಾಡಾಕ ಹತ್ತಿದಾ."

"ನೀನು ಏನೂ ಕೇಳಿಲಿಲ್ಲೇನು?"

"ನಾ ಯಾಕ ಬಿಟ್ಟೇನ್ರಿ, ದೋತರಾ ಹಿಡಿದು ಕೇಳತಿದ್ದೆ ಪಗಾರ ಕೊಡು ಅಂತ. ಅಲ್ಲಿ ಕಳದ ಬರತಿದ್ನೋ, ಕುಡಿಯಾಕ ಹಾಕತಿದ್ನೋ ನನ್ನ ಮುಂದ ಮಾತ್ರ ಸಾವಕಾರ ರೊಕ್ಕಾ ಕೊಟ್ಟೇ ಇಲ್ಲಾ ಅಂತಿದ್ದ. ಮುಂದ ಒಂದು ಮಂಗಳವಾರ ನಾನs ಸಾವಕಾರ ಕಡೀಗೇ ಹ್ವಾದೆ. ಪಗಾರ ಎಲ್ಲಾ ಕೊಟ್ಟೆನವ್ವಾ ಕೆಂಚಪ್ಪನ ಕಡೀಗೆ ಅಂದ್ರು. ಅವತ್ತ ಸಿಟ್ಟು ಬಂದು ಮಾಡಿದ ಅಡಗಿ ನಾನs ಉಂಡಬಿಟ್ಟೆ ಅವ ಬರೋದರಾಗs. ಊಟಕ್ಕ ಯಾಕ ಹಾಕಲಿಲ್ಲ ಅಂತ ಅಂದು ರಾತ್ರಿ ಪಸಂದ ಬಡದ ನೋಡ್ರಿ ನನ್ನs. ರಾತ್ರಿ ಎಲ್ಲಾ ಹಾಂಗs ನೆಳ್ಳಕೋತ ಬಿದ್ದಿದ್ದೆ. ಮಿಟ್ಟನ ಮಿಸಕಲಿಲ್ಲ. ಬೆಳಿಗ್ಗೆ ನೆರಿಮನಿ ಕಾಶೀಮಬೀ ಬಂದು ನೋಡಿ ನೀಲಗಿರಿ ಎಣ್ಣೆ ಹಚ್ಚಿ ತಿಕ್ಕಿ, ನೀರು ಕಾಸಿ ಕಾವು ಕೊಟ್ಟಳ್ರೀ."

"ಅದs ಹೋದ ತಿಂಗಳು ಬುಧವಾರ ನೀ ಕೆಲಸಕ್ಕs ಬರಲಿಲ್ಲ. ಯಾವ ಕಾಶೀಮಬೀ ? ಆಕೀ ಕೂಸಿಗೆ ಆರಾಮ ಇಲ್ಲಾಂತ ಡಾಕ್ಟರಿಗೆ ತೋರಸಾಕ ನೀ ಒಯ್ದಿದ್ದೆಲ್ಲಾ ಆಕೀನ ಹೌದಲ್ಲೋ?"

"ಹೂನ್ರಿ, ಆಕೀನ, ಓಣ್ಯಾಗಿರವರನ್ನ ಹಚ್ಚಿಕೊಂಡೇನ್ರಿ. ನನ್ನ ಮನೀ ಬಾಗಿಲಿಗೆ ಯಾವ ಪರದೇಶಿ ಮಕ್ಕಳು ಬಂದರೂ ನನ್ನ ರೊಟ್ಟ್ಯಾಗಿಂದು ಒಂದು ತುತ್ತು ಕೊಡತೇನ್ರಿ ಅವರಿಗೆ. ಮನಶ್ಯಾಗ ಮನಶ್ಯಾ ಆಗದಿದ್ದರ ಏನ ಮರಾ ಆಗತಾವ್ರೇ. ಮಂದೀ ದುಕ್ಕಾ ನೋಡಿ ಸುಮಾಕ ಕೂಡ್ರುದು ಆಗೂದಿಲ್ಲ ನನ್ನ ಕಡಿಂದ."

"ಆಮ್ಯಾಲೆ ಏನಾಯ್ತು ?"

"ಆಮ್ಯಾಗ ಎಡ್ಡವಾರ ಮನೀಗೇ ಬರಲಿಲ್ರಿ. ನನ್ನ ಪಗಾರ ಏಟ ದಿನಾ ಸಾಲತದರೀ ಅವ್ವಾರ. ಮನ್ಯಾಗಿನ ಕಾಳು ಮುಗದ ಕೂಡ್ಲೆ ನಾನೂ ಬುತ್ತಿ ಕಳಸೂದು ಬಿಟ್ಟ ಬಿಟ್ಟೆ. ಅಲ್ರೀ ದುಡದದ್ದು ತಂದು ನನ್ನ ಕೈಯಾಗ ಕೊಟ್ಟರ ನಾ ಅಡಿಗಿ ಮಾಡ್ತೀನ್ರಿ. ಇಲ್ಲಾಂದರ ನಾ ಹ್ಯಾಂಗ ಮಾಡಲಿ?"

"ಮತ್ತ ನಿನ್ನ ಹೊಟ್ಟೆಗೆ ಏನು ಮಾಡಿದಿ?"

"ನೀವು ಕೊಟ್ಟ ರೊಟ್ಟಿ ತಿಂತಿದ್ದಿನ್ರಿ. ಮನೀಗೆ ಹ್ವಾದಮ್ಯಾಲೆ ಯಾರ ಕಡಿಂದರ ಒಂದಿಷ್ಟ ಕಡಾ ತಂದು ತನ್ನ ಪೂರ್ತೇಕ ಅಡಿಗಿ ಮಾಡುಕೋತಿದ್ದೆ. ಒಂದು ದಿನ ಮಾಡಿದ್ರ ಎರಡ ದಿನಾ ತಿಂತಿದ್ದೆ. ಕಡೀಕ ಒಂದು ದಿನ ಬಂದನ್ರಿ."

"ಅದs ನಿಮ್ಮ ಅತ್ತಿ ಸತ್ತಾಗ ಬಂದ್ನೇನು?"

"ಇಲ್ರಿ ಆವಾಗೆಲ್ಲಿ ಬಂದಾನವ. ನಮ್ಮತ್ತಿ ಬಾವನ ಮನ್ಯಾಗs ಇದ್ದಳ್ರಿ. ಅಲ್ಲೇ ಸತ್ತಳು. ಇಂವಾ ಅಂತೂ ಬರಲೇ ಇಲ್ಲಾ. ಸುಮ್ಮಕ ಇರಲಾರದ ನಾನs ನಿಮ್ಮ ಕಡೀಂದ ರೊಕ್ಕ ಇಸಕೊಂಡು ಹೋಗಿ ದಿನಕರ್ಮಾ ಮಾಡಾಕ ಕೊಟ್ಟೆನ್ರಿ. ಆಮ್ಯಾಲೆ ಓಣ್ಯಾಗಿನವರು ಛೀ ಅಂದಮ್ಯಾಲೆ ದಿನಾ ಮಾಡೂದಿವ್ಸ ಬಂದಾ. ಹಾಂಗs ಮನೀಗೂ ಬಂದ. '

"ನೀ ಜಗಳಾ ತಗದಿರಬೇಕಲ್ಲ" ಎಂದೆ ನಗುತ್ತ.

"ಅಲ್ರೀ ನಾ ಉಪವಾಸ ಇದ್ರೂ ಇವನ ಅವ್ವಗ ದಿನಾ ಮಾಡಾಕ ಮುಂಗಡ ರೊಕ್ಕಾ ಇಸಕೊಂಡು ಓದ ಕೊಟ್ಟೆ. ಮಗಾ ಆಗಿ ಇಂವಾ ಏನೂ ಮಾಡಲಿಲ್ಲಾ. ನಾ ಸುಮ್ಮನs ಬಿಟ್ಟೇನೇನ್ರಿ ಇವನ್ನ. ಅಂವಗ ಅಳ್ನಾವರದಾಗ ಗೆಣತಿ ಒಬ್ಬಾಕಿ ಸಿಕ್ಕಾಳ ಅಂತ ಸುದ್ದೀ ಬ್ಯಾರೆ ಕೇಳಿದ್ದೆ. ಹೊಟ್ಯಾಗ ಬೆಂಕಿ ಬಿದ್ದಿತ್ತು. ಬಂದಕೂಡಲೇ ಸುರೂನs ಮಾಡಿಬಿಟ್ಟೆ."

"ಏನಂದಿ?"

"ಎಲ್ಲಿ ಹೋಗಿದ್ಯೋ ಗೆಣಿಯಾ ಈಟ ದಿನಾ. ಇಲ್ಲಿ ನಾ ಉಪವಾಸ ಸಾಯ್ತೀನಿ ಅನ್ನೂದು ಗ್ಯಾನಕ್ಕ ಬರಲಿಲ್ಲೇನು ನಿನಗ? ಅಲ್ಲೇ ಗೆಣತಿ ಕೂಡ ಚಕ್ಕಂದಾ ಹೊಡಿತೀದಿ. ಮನೀ ಖರ್ಚಿಗೆ ತಂದ ಕೊಡಾಂಗಿಲ್ಲ. ಅಂಥವಾ ನನ್ನ ಮಾಡಿಕೊಂಡು ಯಾಕ ಬಂದಿ? ಈಗ ಮನೀಗೆ ಯಾಕ ಬರತೀದಿ? ಒಳಗೆ ಬಂದರೆ ಬಾ. ನೋಡ್ತೀನಿ ನಿನ್ನ, ಅಂದೆ."

"ಒಳ್ಳೆ ಗಟ್ಟಿವಾಣಿ ನೀನೂ. ಮನೀ ಯಜಮಾನಾ ಅವಗs ಮನೀಗೆ ಬರಬ್ಯಾಡಾ ಅಂದ್ಯಾ?"

"ಅವ್ವಾರs ಯಜಮಾನ ಅಂದಮ್ಯಾಲೆ ಹಾಂಗ ಇರಬೇಕೊ ಬ್ಯಾಡೋ? ದಿನಕ್ಕೊಂದ ಹೆಣ್ಣಿನ ಹಿಂದ ಹೋಗುವವಗ ಏನು ಅನಬೇಕು?"

"ಅದಕ್ಕೇನು ಅಂದ?"

"ಅದಕ್ಕೊಂದು ಅಡ್ಡಮಾತs ತಗದನ್ರಿ. ನನ ಮಾಡಿಕೊಂಡು ಇಷ್ಟವರಸ ಆದರೂ ಮಕ್ಕಳಾಗಲಿಲ್ಲಂತ್ರಿ. ಇವನ ಐಸೂರಕ್ಕ ಮಕ್ಕಳ ಬೇಕಂತ್ರಿ. ಅದಕ್ಕs ಅಳ್ನಾವರದಾಕಿನ್ನ ಮಾಡಿಕೊಂಡು ತಂದು ನನ್ನ ಜೋಡಿ ಇಡತಾನಂತ್ರೀ."

"ಬರೋಬ್ಬರಿ ಅದs ಅವಂದು. ನೀ ಏನು ಅಂದಿ?" ಅವಳನ್ನು ಸಿಟ್ಟಿಗೆಬ್ಬಿಸಲು ಬೇಕಂತಲೇ ಹೇಳಿದೆ.

"ಅಲ್ರೀ, ಅವ್ವಾರs ನೀವೂ ಹಾಂಗs ಅಂತೀರಲ್ರಿ. ಈಗ ಮೂರು ವರುಸದ ಹಿಂದ ಅಪ್ಪ ಹಾವಿ ಹಿಡಿದಾಗ ಹಿಂಗs ಅಂದಾ, ಅವಾಗ ಹೇಳಿದ್ದೆ ನಾನು 'ದೇವರು ನನಗಂತೂ ಮಕ್ಕಳ ಫಲ ಕೊಡಲಿಲ್ಲಾ. ನಿನ್ನ ಅಣ್ಣನ ಮಗನ್ನ

ತಂದು ಜ್ವಾಕಿ ಮಾಡೋಣು. ಅವನ್ನs ಮಗಾ ಅಂತ ತಿಳಕೊಳ್ಳೋಣು" ಅಂತ. ಆದರ ಅದೆಲ್ಲಿ ಬೇಕಾಗೈತಿ ಅಂವಗ. ಹೆಣ್ಣಿನ ಕೂಡ ಮಜಾ ಮಾಡೂದು ಬೇಕು ಅಂವಗ. ಆಗ ಸುಮ್ಮನಾದಾ. ಈಗ ಮತ್ತ ಅದನ್ನs ತಗದಾನ ನಾ ಸಪ್ಪೈ ಹೇಳಿಬಿಟ್ಟೆ: 'ಆಕೀನ್ನ ತಂದರ ನಾನು ಮನೀ ಒಳಗ ಕಾಲು ಹಾಕಗೊಡಾಕಿ ಅಲ್ಲಾ. ಈ ಮನ್ಯಾಗ ನಾನರೆ ಇರಬೇಕು, ಇಲ್ಲಾ ಆಕಿ ಇರಬೇಕು. ನಿನಗ ಆಕೀನs ಬೇಕಾದರ ಹೋಗು ಅಕೀ ಹಿಂದs. ನನ್ನ ಅನ್ನಾ ನಾ ದುಡುಕೊಂಡು ತಿಂತೇನಿ" ಅಂತ.

"ಆವಾಗ ಏನಂದಾ ? "

"ಮಾತಾಡಾಕ ದಾರಿ ಇಲ್ಲದಾಂಗ ಆದ ಕೂಡ್ಲೆ ಬಡೀತಾನ್ರಿ. ನಿನ್ನೇ ಇದೆಲ್ಲಾ ನಡದದ್ದು. ದನಾ ಬಡದಾಂಗ ಬಡದ ನೋಡ್ರಿ. ಮೈಮಾರಿ ಏನೂ ನೋಡಲಿಲ್ಲಾ. ಕುಬಸಾ ಹರದು ಹೋತು. ಅದಕ್ಕ ಇವತ್ತ ಜರದ ಕುಬಸಾ ತೊಟ್ಟುಕೊಂಡೆ. ಕಡೀಕ ತಾಳಲಾರದs ನಾನು ಚೀರಿದೆ. 'ಒಮ್ಮೆಗೇ ಹೊಡೆದು ಕೊಂದಬಿಡು ನನ್ನ. ನಿರಂಬಳ ಆಗ್ತೀನಿ' ಅಂತ. ಆಗ ಬಿಟ್ಟಾ. ಮೈ ಎಲ್ಲಾ ನೂಸತೈತ್ರಿ. ಅದಕ್ಕs ಗಡಾನs ಎದ್ದು ಬರಾಕ ಆಗಲಿಲ್ರಿ. ನೀವು ಸಿಟ್ಟಿಗೆದ್ದು ಬಿಟ್ರಿ. ಹಾಂಗ ಮಾಡಬ್ಯಾಡ್ರಿ ಅವ್ವಾರs. ದಿಕ್ಕಿಲ್ಲದ ಹೆಂಗಸು ನಾನು. ನಿಮ್ಮಂಥವರs ತಂದೀ ತಾಯಿ ನನಗ. ನನ್ನ ಬಿಡಬ್ಯಾಡ್ರಿ" ಮಾತಿನ ಕೊನೆಗೆ ಸೆರಗು ಕಣ್ಣಿಗೊತ್ತಿಕೊಂಡು ಅಳುತ್ತಿದ್ದ ಕೆಂಚವ್ವನನ್ನು ನೋಡಿ ಮರುಕ ಉಕ್ಕಿತು.

ಟ್ರನ್.... ಈ ಸಲ ಪೋಸ್ಟ್‌ಮನ್ ವಿದೇಶದ ಕವರೊಂದು ಕೊಟ್ಟುಹೋದ. ನೀಲಗಿರಿ ಎಣ್ಣೆಯಲ್ಲಿ ತೊಯ್ದ ಅರಳಿ ತಂದು ಕೆಂಚವ್ವನ ಕೈಗೆ ಕೊಟ್ಟು ಪತ್ರ ಒಡೆದೆ. ನನ್ನವರ ಗೆಳೆಯ ಚಂದ್ರಕಾಂತನದು. ಚಂದ್ರಕಾಂತನ ಪತ್ರವನ್ನು ಓದುವಷ್ಟು ಸ್ವಾತಂತ್ರ್ಯ ನನ್ನವರು ನನಗೆ ಕೊಟ್ಟಿದ್ದರು. ಪತ್ರ ಓದತೊಡಗಿದೆ.

ಪ್ರಿಯ ಶಿವನಾಥ,

ನಾನು ಚಿಕಾಗೋಕ್ಕೆ ಬಂದ ವಿಷಯ ನಿನಗೆ ಗೊತ್ತಿರಲಿಕ್ಕಿಲ್ಲ. ನನ್ನ ನಿನ್ನ ನಡುವಿನ ಪತ್ರವ್ಯವಹಾರ ನಿಂತು ಬಹಳ ದಿನಗಳಾದುವಲ್ಲವೇ? ಕರ್ನಾಟಕದಿಂದ ಗುಜರಾತಕ್ಕೆ ನನಗೆ ವರ್ಗವಾಗಿ ಹೋದಮೇಲೆ ಬಹಳ ದೂರವಾಗಿಬಿಟ್ಟೆ. ಈಗ ಆರು ತಿಂಗಳ ಹಿಂದೆ ನಮ್ಮ ಡಿಪಾರ್ಟ್‌ಮೆಂಟಿನವರು ನನ್ನನ್ನು ಇಲ್ಲಿಗೆ ಟ್ರೇನಿಂಗ್‌ಗಾಗಿ ಡೆಪ್ಯೂಟ್ ಮಾಡಿದರು. ನಮ್ಮ ಒಕ್ಕಲುತನ ಇಲಾಖೆಗೆ ಸಂಬಂಧಪಟ್ಟ ವಿಷಯವಾದ ಆಹಾರ ರಕ್ಷಣೆಯನ್ನು ಕುರಿತ ನಾನು ಇಲ್ಲಿ ಅಭ್ಯಾಸಮಾಡುತ್ತಿದ್ದೇನೆ.

ಮನೆಯಲ್ಲಿ ಹುಡುಗರು, ಲೀಲಕ್ಕ ಹೇಗಿದ್ದಾರೆ? ಸೌಖ್ಯವೇ? ನೀನಂತೂ ಅಮೇರಿಕೆಗೆ ಬರುವ ಮನಸ್ಸು ಮಾಡುವವನಲ್ಲ. ನಿನ್ನ ಅರುಣನನ್ನಾದರೂ ಅಲ್ಲಿಗೆ ಕಳಿಸಲು ಪ್ರಯತ್ನ ಮಾಡು. ಜಗತ್ತನ್ನು ನೋಡಿದಷ್ಟು ಜ್ಞಾನ ವೃದ್ಧಿಯಾಗುತ್ತದೆಂದು ನನ್ನ ನಂಬಿಕೆ. ಅವನು ಬಹಳ ಬುದ್ಧಿವಂತ. ಅಂಥ ಮಕ್ಕಳನ್ನು ಕಂಡರೆ ನನಗೆ ಸಂತೋಷ. ಅವನ ತಂದೆ ಎನಿಸಿಕೊಂಡ ನೀನೇ ಭಾಗ್ಯಶಾಲಿ, ನನಗೇನಿದೆ? ನೆಟ್ಟಗೆ ಸಂಸಾರಸುಖವನ್ನು ನನ್ನ ಹಣೆಯಲ್ಲಿ ಬರೆಯಲಿಲ್ಲ ಬ್ರಹ್ಮ. ಲಗ್ನವಾದ ಆರುತಿಂಗಳಲ್ಲಿಯೇ ನನಗೆ ನರಕದರ್ಶನ ಮಾಡಿಸಿಬಿಟ್ಟಳು ನನ್ನ ಸುಮಾ. ಶ್ರೀಮಂತ ಕುವರಿ, ಮುದ್ದಿನ ಮಗಳು, ಗ್ರಾಜ್ಯುಯೇಟ್ ಬೇರೆ. ಟಿಪ್ ಟಾಪ್ ಡ್ರೆಸ್ಸು. ಹೆಚ್ಚಾಗಿ ಇಂಗ್ಲೀಷಿನಲ್ಲೇ ಸಂಭಾಷಣೆ. ಎಲ್ಲ ನೋಡಿ ಮರುಳಾಗಿಬಿಟ್ಟೆ. ಆದರೆ ಆಮೇಲೆ ತಿಳಿಯಿತು. ಇದೊಂದು ನಿರ್ಗಂಧ ಸುಮ ಎಂದು. ಸ್ವಲ್ಪವಾದರೂ ವಿನಯವಿಲ್ಲ. ದೊಡ್ಡ ಮನಸ್ಸಿಲ್ಲ. ನನ್ನ ೫೦೦ ರೂ. ಸಂಬಳ ಅವಳಿಗೆ ಇಬ್ಬರ ಮನೆ ವೆಚ್ಚಕ್ಕೆ ಸಾಲಲಿಲ್ಲ. ತನ್ನ ಶೃಂಗಾರಸಾಧನಗಳು, ಸಿನಿಮಾ-ನಾಟಕಗಳು, ಹೊಟೇಲ್‌ಗಳಿಗೆ ಮನಬಂದಂತೆ ವೆಚ್ಚ ಮಾಡುವವಳು. ಅದೇ ಹಳ್ಳಿಯಲ್ಲಿದ್ದ ನನ್ನ ತಂದೆ-ತಾಯಿಯರಿಗೆ ಯಾವಾಗಲಾದರೂ ಅಷ್ಟಿಷ್ಟು ಹಣ ಕಳಿಸೋಣವೆಂದರೆ ಒಪ್ಪಿದವಳಲ್ಲ.

ತಮ್ಮನನ್ನು ನಮ್ಮಲ್ಲಿಟ್ಟುಕೊಂಡು ಓದಿಸೋಣವೆಂದರೆ ಬಂದವರಿಗೆಲ್ಲ ಮಾಡಿಹಾಕಲು ನಾನೇನು ನಿಮ್ಮ ಮನೆ ಆಳಲ್ಲ ಎಂದುಬಿಟ್ಟಳು. ಸ್ವಾರ್ಥಿ ಎಂದರೆ ಅಂತಾ ಸ್ವಾರ್ಥಿ ಅವಳು. ಅವಳಿಗೆ ತನ್ನ ಸುಖದ ಮುಂದೆ ನಾನು, ನನ್ನ ಆಶೆ, ಭಾವನೆ ರುಚಿ ಒಂದೂ ಕಾಣುತ್ತಿರಲಿಲ್ಲ. ಇಂಥವಳೊಡನೆ ಹೇಗೆ ಸಂಸಾರ ಮಾಡಿದೆನೋ ದೇವರಿಗೇ ಗೊತ್ತು. ಒಪ್ಪವಾಗಿ ಸಂಸಾರ ಮಾಡುವ, ಒಳ್ಳೆಯ ಗೃಹಿಣಿಯಾದ ಲೀಲಕ್ಕನಂಥ ಹೆಂಡತಿಯನ್ನು ಪಡೆದ ನಿನಗೆ ಈ ನರಕದ ಕಲ್ಪನೆಯೂ ಬರಲಿಕ್ಕಿಲ್ಲ. ಡಾಕ್ಟರೇಟ್ ತೆಗೆದುಕೊಳ್ಳುವವರೆಗೆ ಮದುವೆ ಆಗಬಾರದೆಂದು ಬಿಟ್ಟು ಆಮೇಲೆ ಹುಡುಕಿ ಹುಡುಕಿ ಮದುವೆಯಾದರೆ ನನ್ನ ಗ್ರಹಚಾರಕ್ಕೆ ಇಂಥವಳು ಸಿಕ್ಕಳು. ಗಂಟು ಬಿದ್ದಿದ್ದಾಳೆ ಹೇಗಾದರೂ ಸಹಿಸಿಕೊಳ್ಳಬೇಕೆಂದು ಸುಮ್ಮನಿದ್ದೆ. ಬೇಸರವಾಯಿತೇನಪ್ಪಾ ನಿನಗೆ ? ಆದರೂ ಅಡ್ಡಿಯಿಲ್ಲ ಮುಂದೆ ಓದು.

ಮನೆಯ ಖರ್ಚಿಗೆ ಅರ್ಥಾತ್ ತನ್ನ ಚೈನೀಗೆ ಹಣ ಸಾಲದೆಂದು ತಾನೂ ನೌಕರಿ ಮಾಡುತ್ತೇನೆ ಎಂದಳು. ತಾನು ದುಡಿಯುವ ಹಣದಲ್ಲಿ ತನ್ನ ಮನಸ್ಸಿಗೆ ಬಂದ ಹಾಗೆ ಖರ್ಚು ಮಾಡಬಹುದು ಎನ್ನುವ ಮನೋಭಾವ ಅವಳದು. ಇಲ್ಲದ ಹಗರಣ ಬೇಡವೆಂದು ಅದಕ್ಕೂ ಹೂಂ ಎಂದೆ. ಆಮೇಲೆ ನೋಡಬೇಕಿತ್ತು ಅವಳ ಹಾರಾಟವನ್ನ. ಮನೆಯಲ್ಲಿ ಹೊತ್ತಿಗೆ ಸರಿಯಾಗಿ ಎಂದೂ ಚಹಾ, ಊಟ ಆಗುತ್ತಿದ್ದಿಲ್ಲ. ಅವಳೂ ನಾನೂ ಇಬ್ಬರೂ ದುಡಿಯಲು ಹೋಗುವವರು. ಅಡಿಗೆ ಮಾಡುವವರು ಯಾರು? ಅದಕ್ಕೇನು ಎಂದು ಖಾನಾವಳಿಯಿಂದ ತಾಟು ತರಿಸತೊಡಗಿದಳು. ನನಗೆ ಮೊದಲಿನಿಂದಲೂ ಹೊಟ್ಟೆನೋವು ಇದ್ದದ್ದು ನಿನಗೆ ಗೊತ್ತೇ ಇದೆ. ನನಗೆ ಆ ಗುಜರಾತಿಗಳ ಊಟ ಬಗೆಹರಿಯಲಿಲ್ಲ. ಇಷ್ಟಕ್ಕೂ ಬಿಡದೆ ಹೊರಗೆ ಸಹದ್ಯೋಗಿಗಳೊಡನೆ ಸಿನಿಮಾ, ಪಾರ್ಕು. ಪಾರ್ಟಿ ಎಂದು ಅಡ್ಡಾಡತೊಡಗಿದಳು. ನನಗೂ ತಡೆಯಲಿಲ್ಲ. ಮನುಷ್ಯನ ಸಹನೆಗೂ ಒಂದು ಮಿತಿ ಇರುತ್ತದೆ ಅಲ್ಲವೆ ? ಅದನ್ನು ಮಿಕ್ಕಿದರೆ ಅವನೆಂಥ ಕಟುಹೃದಯಿ ಆಗಬಲ್ಲ ಅನ್ನೋದನ್ನ ತೋರಿಸಿಕೊಟ್ಟಿದ್ದೇನೆ. ಈಗ ಅವಳು ತಿದ್ದುತ್ತಾಳೇನೋ ನೋಡೋಣ ಎಂದು ಒಂದು ವರ್ಷ ತವರುಮನೆಯಲ್ಲಿ ಬಿಟ್ಟು ಮತ್ತೆ ಕರೆದುಕೊಂಡು ಬಂದೆ. ಆದರೆ ಏನೂ ಪ್ರಯೋಜನವಿಲ್ಲ. ನಾಯಿಯ ಬಾಲ ಡೊಂಕು ಎನ್ನುವ ಹಾಗೆ ಅವಳ ಸ್ವಭಾವ ಹಾಗೇ. ಕಡೆಗೆ ಕೊನೆಯದಾಗಿ ತವರು ಮನೆಗೆ ಕಳಿಸಿ ನನ್ನ ನಿನ್ನ ಸಂಬಂಧ ಮುಗಿಯಿತು. ಕಾನೂನಿನ ಪ್ರಕಾರ ಮುಗಿಯಲು ಇನ್ನೂ ಕೆಲವು ವರ್ಷ ಕಾಯಬೇಕು ಎಂದು ಪತ್ರ ಬರೆದು ಚಿಕಾಗೋಕ್ಕೆ ಹಾರಿದೆ.

ಅಬ್ಬಾ ! ತಲೆ ತುಂಬಾ ಭಾರವಾಗಿತ್ತು. ಈಗ ಸ್ವಲ್ಪ ಹಗುರಾಯಿತು. ನನ್ನ ದುಃಖವನ್ನು ನಿನ್ನೊಡನೆ ಹಂಚಿಕೊಳ್ಳದೆ ಹೇಗಿರಲಿ? ಆದರೆ ಈಗ ಇಲ್ಲಿ ಪಂಜರ ಬಿಟ್ಟು ಬಂದ ಹಕ್ಕಿಯಂತೆ ಹಾಯಾಗಿ ಮೋಜು ಮಾಡುತ್ತ ಕಾಲ ಕಳೆಯುತ್ತಿದ್ದೇನೆ. ಇಂದಿಗೆ ಸುಖವಾಗಿದ್ದೇನೆ ಸಾಕು. ಮುಂದಿನ ಚಿಂತೆ ಈಗ ನನಗೆ ಬೇಡ. ಉಮರಖಯ್ಯಾಮನ ಭಕ್ತನಾಗಿದ್ದೇನೆಂದು ನಗಬೇಡ ಮತ್ತೆ. ಹುಡುಗರಿಗೆ ಲೀಲಕ್ಕನಿಗೆ ನೆನಪು ಕೊಡು. ಪತ್ರ ಬರೆಯುತ್ತಿರು.

ನಿನ್ನ
ಚಂದ್ರಕಾಂತ

ಪತ್ರ ಮುಗಿಸಿದೊಡನೆಯೆ ನನಗೆ ತಿಳಿಯದಂತೆಯೆ ದೀರ್ಘವಾಗಿ ಉಸಿರುಬಿಟ್ಟೆ. ಬಾಯಿ ತೆಗೆದು ನನ್ನನ್ನೇ ನೋಡುತ್ತಿದ್ದ ಕೆಂಚವ್ವ ಕೇಳಿದಳು.

"ಯಾರದ್ರೀ ಅವ್ವಾರ ಪತ್ರಾ ?"

"ಇವರ ಗೆಳೆಯರದು. ಪರದೇಶದಿಂದ ಬರದಾರ."

ಪತ್ರವನ್ನೆತ್ತಿ ರೇಡಿಯೋದ ಮೇಲಿಡಲು ಹೋದೆ. ನೆನಪಾಯಿತು. ಕೆಂಚವ್ವ ಕೆಳಗಿನ ಜಾತಿಯವಳು. ಗಂಡನಿಂದ ಸೋಡಚೀಟಿ ಪಡೆಯುವದು ಕೀಳಾದ ಮಾತಲ್ಲ ಅವಳ ಸಮಾಜದಲ್ಲಿ. ಅವಳನ್ನೇ ಕೇಳಿದೆ.

"ಕೆಂಚವ್ವಾs, ನೀ ಹ್ಯಾಂಗೂ ಹೊಟ್ಟೆ ತುಂಬಿಸಿಕೋತೀದಿ. ಗಂಡನ ಕೂಡ ಹಿಂಗ ಬಡಿದಾಡಿಕೋತ ಇರೂದಕ್ಕಿಂತ ತವರುಮನೀಗೆ ಯಾಕ ಹೋಗಿ ಇರಬಾರದು? ಎಲ್ಲಿ ದುಡಿದರೂ ನಿನ್ನ ಹೊಟ್ಟೆ ತುಂಬುತದ."

"ಅವ್ವಾರs ನೀವು ದೇವರಂಥಾ ಮನಿಶ್ಯಾರು. ನಿಮ್ಮ ಮುಂದ ನಾಯಾಕ ಸುಳ್ಳ ಹೇಳಲ್ರಿ; ಕರಿಮಣಿ ನೋಡಿ ನಂದು ಮದಿವಿ ಆಗ್ಯೆತಿ ಅಂತ ನೀವು ತಿಳಕೋಂಡೀರಿ ಕಾಣ್ತದ. ಆದರ ನಾ ಇವನ ಕೂಡ ಓಡಿ ಬಂದೀನ್ರಿ. ನಮ್ಮದು ಮದಿವಿ ಆಗಿಲ್ಲ. ತವರುಮನೀಯವರ್ನ ಬಿಟ್ಟು ಓಡಿಬಂದೇನಿ. ಅವಂದು ನಂದೂ ಜಾತೀನೂ ಬ್ಯಾರೆ."

"ಎಷ್ಟು ವರ್ಷಾತು?" ದಂಗುಬಡಿದು ಕೇಳಿದೆ.

"ಹದ್ನೆಂಟು ವರ್ಷಾತ್ರಿ. ಇಂವಾ ಗೌಂಡೇರ ಕೆಲಸ ಮಾಡಲಿಕ್ಕೆ ನಮ್ಮ ಊರ ಕಡೆ ಬಂದಿದ್ವಾ. ನಾ ಇಟ್ಟಂಗಿ ಹೊರಾಕ ಹೋಗತಿದ್ನೆ. ಆಗs ಗುರುತಾತು. ನನ್ನ ಕರಕೊಂಡು ಬಂದಾ."

"ಅವಾಗ ಗೊತ್ತಾಗಲಿಲ್ಲೇನು ನಿನಗ, ಇವಗ ಕೆಟ್ಟ ಚಟಾ ಎಲ್ಲಾ ಅದಾವ ಅಂತ?"

"ಮನೀಗೆ ಬಂದು ಆರು ತಿಂಗಳದಾಗs ಇವನ ಐದೇಶಿ ಎಲ್ಲಾ ಗೊತ್ತಾತ್ರಿ. ಆದರ ಏನ ಮಾಡೋದು. ಒಮ್ಮೆ ಗಂಟ ಬಿದ್ದೈತಿ ಅಂದಮ್ಯಾಲೆ ಮುಗದ ಹೋತು. ಇವನ್ನ ಬಿಡೂದು ನನ್ನ ದರಮ ಅಲ್ಲ ಅನಿಸಿತ್ರಿ. ಜೀವಮಾನ ಇರೋತನಕಾ ಇವನ ಕೂಡ ಗುದ್ದ್ಯಾಡೂದು ನನ್ನ ಹಣೇಬರದಾಗ ಇರಬೇಕು. ಹೌದಲ್ಕೀ ಅವ್ವಾರs ಸುಳ್ಳಂತೀರೋ ಕರೇವು ಅಂತೀರೋ?"

ಏನು ಎನ್ನಬೇಕು ನನಗೆ ತಿಳಿಯಲಿಲ್ಲ.

***

■■

# ಹರಿದು ಹಾಕಿದ ಪುಟಗಳು

ನಾನೀಗ ಬರೆಯುತ್ತಿರುವುದು ನನ್ನ ಸ್ವಂತ ಅನುಭವಗಳನ್ನೇ. ಅದನ್ನೂ ಡಾಕ್ಟರರ ಹೇಳಿಕೆಯ ಮೇರೆಗೆ ಬರೆಯುತ್ತಿದ್ದೇನೆ. ಕೆಲವು ದಿನಗಳಿಂದ ಪ್ರಾರಂಭವಾಗಿರುವ ನನ್ನ ದೈಹಿಕ ಅಸ್ವಾಸ್ಥ್ಯಕ್ಕೆ ಕಾರಣ ನನ್ನ ಮಾನಸಿಕ ತುಮುಲ ಎಂದು ಅವರು ಹೇಳಿದರು. "ನಿಮ್ಮ ಹೃದಯ ಏನನ್ನೋ ಹೊತ್ತಿದೆ. ಅದು ತುಂಬಾ ಭಾರವಾಗಿದೆ. ಅದರ ಭಾರವನ್ನು ಹೆಚ್ಚು ಹೊರಲು ನಿಮ್ಮ ಹೃದಯಕ್ಕೆ ಸಾಧ್ಯವಿಲ್ಲ. ಅದು ಯಾವಾಗ ಕುಸಿಯುತ್ತದೆಯೋ ಹೇಳ ಬರುವುದಿಲ್ಲ. ಆ ಭಾರವನ್ನು ನಿಮಗೆ ನೀವೇ ಕಡಿಮೆ ಮಾಡಿಕೊಳ್ಳಬೇಕು. ನೆಪಮಾತ್ರಕ್ಕೆ ನಾನು ಔಷಧಿ ಕೊಡುತ್ತೇನೆ. ನನ್ನ ಹತ್ತಿರ ಹೇಳಿ, ನಿಮ್ಮ ಒಬ್ಬಳೇ ಮಗಳು ಭಾರತಿಯ ಹತ್ತಿರ ಹೇಳಿ. ನಾವಿಬ್ಬರೂ ಬೇಡವೆಂದರೆ ನಿಮ್ಮ ಆಪ್ತಸ್ನೇಹಿತರು ಯಾರಾದರೂ ಇದ್ದರೆ ಅವರ ಹತ್ತಿರ ಹೇಳಿ, ಹಗುರ ಮಾಡಿಕೊಳ್ಳಿ ಅದೂ ಸಾಧ್ಯವಿಲ್ಲವೆಂದಾದರೆ ಮನಸ್ಸಿನ ಸಂಕಟವನ್ನೆಲ್ಲ ಬರೆದು ಇಳಿಸಿ ಹಾಯಾಗಿರಿ" ಎಂದರು. ನನಗೂ ಇದೇ ಸರಿ ಎನ್ನಿಸಿತು.

ಒಂದಾನೊಂದು ಊರಿನಲ್ಲಿ ರಾಜರಾಣಿಯರಿದ್ದರಂತೆ. ಅವರಿಗೊಬ್ಬ ಮಗ. ಹೀಗೆ ಹೇಳುವ ಅಡಗೂಲಜ್ಜಿಯ ಕತೆಯ ಹಾಗೆ ನನ್ನ ಕತೆ ಪ್ರಾರಂಭವಾಗುತ್ತದೆ. ಒಂದಾನೊಂದು ಕಾಲದಲ್ಲಿ ಎಂದು ನನಗೀಗ ತೋರುವ ಹಾಗೆ ಈಗ ಇಪ್ಪತ್ತನಾಲ್ಕು ವರ್ಷಗಳ ಹಿಂದೆ ನಾನು ನನ್ನ ಸಿರಿವಂತ ತಂದೆತಾಯಿಗಳಿಗೆ ಒಬ್ಬನೇ ಮಗನಾಗಿದ್ದೆ. ವತ್ಸಲೆಯೊಬ್ಬಳೇ ನನಗೆ ತಂಗಿ. ಅವಳಿಂದಲೆ ನನ್ನ ಕತೆ ಬೆಳೆದದ್ದು. ಯಾಕೆಂದರೆ ವತ್ಸಲೆಯ ಗೆಳತಿಯಾಗಿದ್ದ ಪಂಜಾಬಿ ಹುಡುಗಿ 'ಸಂತೋಷ' ನಮ್ಮ ಮನೆಗೆ ಬರಲು ಪ್ರಾರಂಭ ಮಾಡಿದ್ದರಿಂದಲೇ ನನ್ನದು ಒಂದು ಕತೆಯಾಯಿತು. ತಂಗಿಯ ಗೆಳತಿಯೆಂದು ಅವಳೊಡನೆ ಆಗೊಂದು ಈಗೊಂದು ಮಾತನಾಡುತ್ತಿದ್ದೆ. ಸಂತೋಷಳ ಚೆಲುವು, ಗುಣ ಕ್ರಮವಾಗಿ ನನಗೇ ತಿಳಿಯದಂತೆ ನನ್ನ ಮನಸ್ಸನ್ನು ಅಪಹರಿಸಿದ್ದವು. ದಿನವೂ ಅವಳು ನಗುವುದನ್ನು ನೋಡಬೇಕು. ಅವಳ ಮಧುರ ಮಾತುಗಳನ್ನು ಕೇಳಬೇಕು ಎನ್ನುವ ಅದಮ್ಯ ಆಸೆ ಬೆಳೆಯುತ್ತಲೇ ಹೋಯಿತು. ಅವಳು ಎಷ್ಟೊಂದು ನನ್ನ ಮನಸ್ಸನ್ನು ಅಪಹರಿಸಿಬಿಟ್ಟಳೆಂದರೆ ಅವಳಿಲ್ಲದಿದ್ದಾಗಲೂ ಅವಳ ರೂಪ ನೋಡುತ್ತಿದ್ದೆ. ಧ್ವನಿಯನ್ನು ಕೇಳುತ್ತಿದ್ದೆ. ರಾಜರಾಣಿಯ ಕತೆಗಳಲ್ಲಿ ಬರುವ ಸಖಿ, ವಿದೂಷಕರ ಹಾಗೆ, ಇಲ್ಲಿ ವತ್ಸಲೆಯೊಬ್ಬಳಿದ್ದಳು. ಅವಳ ಸಂಧಾನದಿಂದಲೇ ನಮ್ಮ ಭೇಟಿ ಮಾತುಕತೆ ಎಲ್ಲ ನಡೆಯುತ್ತಿತ್ತು. ಇತ್ತ ಬಾಲ್ಯವೂ ಅಲ್ಲ, ಅತ್ತ ಯೌವನವೂ ಅಲ್ಲದ ಪ್ರಾಯದಲ್ಲಿ ನಮಗೆ ಪ್ರೇಮ ಸಾಕ್ಷಾತ್ಕಾರವಾಗಿತ್ತು. ಒಂದೆರಡು ವರುಷದ ಆ ಅನುಭವವನ್ನೇ ಇಲ್ಲಿಯವರೆಗೂ ಮೆಲುಕುಹಾಕುತ್ತಾ ದಿನ ಕಳೆಯುತ್ತಿದ್ದೇನೆ.

ಹೀಗೆ ಬರೆಯಲು ನನಗೆ ಒಮ್ಮೊಮ್ಮೆ ಅಚ್ಚರಿ ಆಗುತ್ತದೆ. ಎಲ್ಲಿಯೋ ಹುಟ್ಟಿ, ಎಲ್ಲಿಯೋ ಬೆಳೆದು ಈ ಹುಡುಗಿ ನನ್ನೊಡನೆ ಇಷ್ಟು ತಾದಾತ್ಮ್ಯ ಹೊಂದಬೇಕಾದರೆ ಇದಕ್ಕೆ ಏನು ಕಾರಣ ಎನ್ನುವುದನ್ನು ಹುಡುಕುವುದರಲ್ಲಿಯೇ ನನ್ನ ಆಯಸ್ಸು ಕಳೆಯುತ್ತಿದೆ. ಬಹುಶಃ ಆ ಮೂಲಕಾರಣವನ್ನು ಹುಡುಕುವುದು ಈ ಜನ್ಮದಲ್ಲಿ ಸಾಧ್ಯವಾಗದೆ ನಾನು ಇನ್ನೂ ಎಷ್ಟೆಷ್ಟು ಜನ್ಮ ತಳೆಯಬೇಕಾಗುವುದೋ ಏನೋ.

ಸಂತೋಷಳ ಧ್ಯಾನದಲ್ಲಿದ್ದ ನಾನು ಆ ಸಲದ ಪರೀಕ್ಷೆಯಲ್ಲಿ ಫೇಲಾಗುವುದು ನಿಶ್ಚಿತವಾದಂತಿತ್ತು. ಅದರಂತೆ ಆಗಿಯೂ ಬಿಟ್ಟೆ. ಅಪ್ಪ ಕರೆದು ಹೇಳಿದರು: "ಏನೂ ನಷ್ಟವಾಗಲಿಲ್ಲ ಇನ್ನೊಮ್ಮೆ ಛಾನ್ಸಿಗೆ ಪ್ರಯತ್ನ ಮಾಡಿ ನೋಡು"ಎಂದು. ನಾನು ಸುಮ್ಮನಾಗಿದ್ದೆ. ಯಾಕೆಂದರೆ ನಾನು ಇನ್ನೊಂದು ಸೋಲನ್ನೂ ಎದುರಿಸಬೇಕಾಗಿತ್ತು. ಆ ಸಲದ ರಜೆಯಲ್ಲಿ ಸಂತೋಷ ಬೆಂಗಳೂರಿಗೆ ಹೊರಟುಹೋಗಿದ್ದಳು. ಹೋಗುವಾಗ ವತ್ಸಲೆಯೊಡನೆ ಹೇಳಿದ್ದಳು: 'ಮನೆಯವರು ತನ್ನ ಮದುವೆ ನಿಶ್ಚಯ ಮಾಡುವ ಪ್ರಯತ್ನ ಮಾಡುತ್ತಿದ್ದಾರೆ. ಅದಕ್ಕೇ ಬೆಂಗಳೂರಿಗೆ ಕರೆದೊಯ್ಯುತ್ತಿದ್ದಾರೆ,' ಎಂದು ಇದನ್ನು ನಾನು ನಿರೀಕ್ಷಿಸಿಯೇ ಇದ್ದವನಂತೆ ವತ್ಸಲೆಗೆ ಹೇಳಿದ್ದೆ. 'ಸಂತೋಷ ಊರಿಂದ

ಬಂದ ಮೇಲೆ ಅವಳಿಗೊಮ್ಮೆ ನನ್ನ ಭೇಟಿ ಮಾಡಿಸು' ಎಂದು. ನನ್ನ ಪ್ರತಿಕ್ರಿಯೆ ಏನಾಗುವುದೋ ಎಂದು ಗಾಬರಿಯಾಗಿದ್ದ ವತ್ಸಲಾ ಇಷ್ಟೇನೇ ಎನ್ನುವಂತೆ ಸಮಾಧಾನದ ಉಸಿರು ಹಾಕಿದ್ದಳು.

ವತ್ಸಲೆಗೆ ಗಂಡು ಗೊತ್ತು ಮಾಡಲು ಅಪ್ಪ ಅಮ್ಮ ಇಬ್ಬರೂ ಊರಿಗೆ ಹೋಗಿದ್ದ ಒಂದು ದಿನ ವತ್ಸಲೆ ನನ್ನ ಸಂತೋಷಳ ಭೇಟಿ ಮಾಡಿಸಿದ್ದಳು. ಆ ಭೇಟಿಯಲ್ಲಿ ನಾವು ಹೆಚ್ಚಿಗೇನೂ ಮಾತಾಡಿರಲಿಲ್ಲ. ನಮ್ಮಿಬ್ಬರಲ್ಲಿ ಪ್ರೀತಿಯೇನೂ ಕಡಿಮೆಯಿರಲಿಲ್ಲ. ಆದರೆ ಮದುವೆಯಾಗುವುದು ಅಸಾಧ್ಯವಾದ ಮಾತೆಂಬುದುನ್ನು ಮನಗಂಡ ನಾವು ದೈಹಿಕವಾಗಿ ದೂರವಾಗಿದ್ದರೂ ನಮ್ಮಿಬ್ಬರ ಆತ್ಮ ಒಂದೇ . ಒಂದೇ ಆತ್ಮದ ಎರಡು ತುಣುಕುಗಳು ನಾವು ಎನ್ನುವ ತಿಳುವಳಿಕೆ ತಂದುಕೊಂಡು ಸಮಾಧಾನದಿಂದ ಜೀವ ಮಾನವೆಲ್ಲ ಒಬ್ಬರು ಇನ್ನೊಬ್ಬರ ನೆನಪಿನಲ್ಲಿ ಕಾಲ ಕಳೆಯಬೇಕೆಂದು ನಿರ್ಧರಿಸಿ ಕಣ್ಣೀರು ಮತ್ತು ಮುಗುಳ್ನಗೆಯಲ್ಲಿ ಒಬ್ಬರನ್ನೊಬ್ಬರು ಬೀಳ್ಕೊಟ್ಟಿದ್ದೆವು. ಹೊರಡುವಾಗ ಸಿಲ್ಕಿನ ನೀಲಿ ಕರವಸ್ತ್ರವೊಂದನ್ನು ನನ್ನ ಕೈಗಿತ್ತ ಸಂತೋಷಳಿಗೆ ನಾನೇನು ಕೊಡಬೇಕೋ ತೋಚಲೇ ಇಲ್ಲ. ಅವಳ ಕೈಗೆ ಮುತ್ತನ್ನಿತ್ತು ಇದು ನನ್ನ ಕಾಣಿಕೆ ಎಂದೆ.

ವತ್ಸಲೆಯ ಮದುವೆಯಾಗಿ ಗಂಡನ ಮನೆಗೆ ಹೊರಟುಹೋದಳು. ಸಂತೋಷಳ ಮನೆಯವರೆಲ್ಲ ಬೆಂಗಳೂರಿಗೇ ಇರಲು ಹೋದರು. ಅವಳು ಅಲ್ಲಿಂದಲೇ ಲಗ್ನಪತ್ರಿಕೆಯೊಂದನ್ನು ವತ್ಸಲೆಯ ಹೆಸರಿಗೆ ಕಳಿಸಿದ್ದಳು. ಮನೆಯಲ್ಲಿ ವತ್ಸಲೆಯ ಸ್ಥಳವನ್ನು ತುಂಬಲು ನನಗೆ ಸೊಸೆಯ ಅವಶ್ಯಕತೆ ಇದೆ ಎಂದಳು ತಾಯಿ. ತಂದೆ ಸೈ ಎಂದರು. ಇಬ್ಬರಿಗೂ ಒಪ್ಪಿಗೆಯಾದ ಹುಡುಗಿ ಹೆಂಡತಿಯಾಗಿ ನನ್ನ ಮನೆಗೆ ಬಂದಳು. "ಇನ್ನೇಕೆ ಓದು ? ಹೊಲ, ಮನೆ ಅಂಗಡಿಗಳ ವ್ಯವಹಾರವೆಲ್ಲ ನಾನೇ ನೋಡಿಕೊಳ್ಳುತ್ತೇನೆ" ಎಂದೆ ತಂದೆಗೆ. ಅವರಿಗೆ ತುಂಬಾ ಸಂತೋಷವಾಗಿತ್ತು. ಅಂದೇ ತಾಯಿಗೆ ಹೇಳಿದರು. "ನೋಡು ನನ್ನ ಭಾರ ಮಗ ಹಂಚಿಕೊಂಡ. ನಿನ್ನ ಭಾರವನ್ನಷ್ಟು ಸೊಸೆಗೆ ಹೊರಿಸಿಬಿಡು" ಎಂದರು. ಸಂಸಾರದ ಸುಂದರ ಚಿತ್ರವಾಗಿತ್ತುನಮ್ಮ ಮನೆ.

ದೊಡ್ಡ ಮನೆಯ ಆಳುಕಾಳು, ಕೆಲಸ, ಅತಿಥಿಗಳು, ಬಂಧುಗಳು ಎಲ್ಲವನ್ನೂ ನೋಡಿಕೊಳ್ಳುವ ಹೊಣೆ ಸುಶೀಲೆಯ ಮೇಲೆ ಬಿದ್ದರೂ ಅವಳು ಜಾಣೆ. ಎಲ್ಲರಿಂದಲೂ ಸೈ ಎನಿಸಿಕೊಂಡಳು. ತಂದೆ, ತಾಯಿ ವತ್ಸಲೆ ಎಲ್ಲರ ಮನಸ್ಸನ್ನೂ ತಮ್ಮ ಗುಣದಿಂದ, ರೂಪದಿಂದ ಬೇಗ ಗೆದ್ದುಕೊಂಡಳು. ನನ್ನ ಮನೆಯ ಬಾಗಿಲಿಗೆ ಬಂದವಳು ಮನದ ಬಾಗಿಲಿಗೂ ಬಂದಳು. ಆದರೆ ಅದರ ಬಾಗಿಲು ಹಾಕಿದ್ದರಿಂದ ಅವಳಿಗೆ ಒಳಗೆ ಪ್ರವೇಶವಿರಲಿಲ್ಲ. ಹಾಗೆಂದು ನಾನು ಅವಳಿಗೆಂದೂ ಎರಡು ಬಗೆಯಲಿಲ್ಲ. ಅವಳಿಗೆ ಎಲ್ಲ ಸುಖವನ್ನೂ ಕೊಟ್ಟೆ. ತುಂಬ ಪ್ರೀತಿಯಿಂದ ಅಂತಃಕರಣದಿಂದ ಅವಳನ್ನು ನೋಡಿಕೊಂಡೆ. "ನಿಮ್ಮಂಥವರ ಕೈ ಹಿಡಿದದ್ದು ನನ್ನ ಭಾಗ್ಯ" ಎಂದು ಮೊದಲನೆಯ ದಿನವೇ ಅವಳು ನನ್ನ ಕಾಲಿಗೆ ಎರಗಿದಾಗ ಅವಳ ತಲೆ ನೇವರಿಸಿ ಎದೆಗೆ ಒತ್ತಿಕೊಂಡೆ. ಹೆಜ್ಜೆ ಹೆಜ್ಜೆಗೂ ಸಂತೋಷಳ ನೆನಪು ಬರುತ್ತಿದ್ದರೂ ಸುಶೀಲೆಯಲ್ಲೇ ಸಂತೋಷಳನ್ನು ಕಾಣುವ ಪ್ರಯತ್ನ ಮಾಡುತ್ತಿದ್ದೆ. ಆ ಪ್ರಯತ್ನ ಯಶಸ್ವಿಯಾದಾಗ ನನ್ನ ಮನಸ್ಸಿಗಾಗುವ ಹಿಗ್ಗು ಅಷ್ಟಿಷ್ಟಲ್ಲ. ಯಾವಾಗಲೂ ಸುಶೀಲೆಯ ಸ್ಥಳದಲ್ಲಿ ಸಂತೋಷಳನ್ನು ಕಾಣುತ್ತಿದ್ದೆ. ಆರಾಧಿಸುತ್ತಿದ್ದೆನೆಂದೇ ಅವಳೊಂದಿಗೆ ಕೂಡಿ ಬಾಳುವುದು ನನ್ನಿಂದ ಸಾಧ್ಯವಾಗಿತ್ತು. ಅವಳೊಡನೆ ಎಷ್ಟೊಂದು ಸರಸವಾಗಿ ಇರುತ್ತಿದ್ದೆನೆಂದರೆ ಯಾರಿಗೂ ನನ್ನ ಮನಸ್ಸಿನಲ್ಲಿ ನಡೆಯುವ ತುಮುಲದ ಕಲ್ಪನೆ ಬರುವದು ಸಾಧ್ಯವೇ ಇರಲಿಲ್ಲ.

ಎಲ್ಲವೂ ಗೊತ್ತಿದ್ದ ವತ್ಸಲೆ ಕೂಡ ನನ್ನನ್ನು ನಂಬಿಬಿಟ್ಟಳು. ನಾನು ನನ್ನ ಹಿಂದಿನ ಪ್ರೇಮವನ್ನು ಮರೆತುಬಿಟ್ಟೆನೆಂದೇ ಭಾವಿಸಿ ಆಗಾಗ ತವರು ಮನೆಗೆ ಬಂದಾಗ ಅವಳು ಸಂತೋಷಳ ಪತ್ರ ಬಂದ ವಿಷಯ ಹೇಳುತ್ತಿದ್ದಳು. ಅವಳಿಗೆ ಗಂಡುಮಗ ಹುಟ್ಟಿದ್ದ ವಿಷಯ ಹೇಳಿದ್ದಳು. ಇವುಗಳನ್ನೆಲ್ಲ ನಾನು

ನಿರ್ವಿಕಾರಭಾವನೆಯಿಂದಲೇ ಕೇಳುತ್ತಿದ್ದೆನೆಂದು ಅವಳ ಭಾವನೆ. ಆದರೆ ಅವಳ ನೆನಪು, ನೆನಪಿನ ಕುರುಹಾಗಿದ್ದ ನೀಲಿ ಕರವಸ್ತ್ರವನ್ನು ಯಾವಾಗಲೂ ಅಗಲಿರಲಿಲ್ಲವೆನ್ನುವದು ವತ್ಸಲೆಗೆ ಗೊತ್ತೇ ಇರಲಿಲ್ಲ ಪಾಪ!

ವತ್ಸಲೆ ಏನು, ನಾಲ್ಕು ದಿನ ಇಲ್ಲಿದ್ದು ಹೋಗಿಬಿಡುವವಳು. ಅವಳಿಂದ ನನ್ನ ಮನಸ್ಸನ್ನಳೆಯುವುದು ಸಾಧ್ಯವಿರಲಿಲ್ಲ. ಆದರೆ ಸುಶೀಲೆ ನನ್ನ ಕೈ ಹಿಡಿದವಳು. ನನ್ನ ಅರ್ಧಾಂಗಿ. ನನ್ನ ಸುಖ ದುಃಖಗಳಲ್ಲಿ ಪಾಲುಗಾರ್ತಿ. ದಿನದ ಹೆಚ್ಚು ಹೊತ್ತು ನನ್ನೊಡನೆ ಕಳೆಯುವಳು. ನನ್ನ ಈ ದ್ವಿಪಾತ್ರವನ್ನು ಅವಳಿಂದ ಎಷ್ಟು ದಿನ ಮುಚ್ಚಿಡುವದು ಸಾಧ್ಯ? ಬರಬರುತ್ತ ನಾನು ಸೋಲತೊಡಗಿದೆ. ಸೋಲು ನನ್ನ ತಾಳ್ಮೆ. ನೆಮ್ಮದಿಯನ್ನು ಕೆಡಿಸತೊಡಗಿದಂತೆ ಮನೆಯಲ್ಲಿ ಅದರಲ್ಲೂ ಸುಶೀಲೆಯ ಮೇಲೆ ಸಿಟ್ಟು ಹೆಚ್ಚಾಗತೊಡಗಿತ್ತು. ಸಣ್ಣ ಸಣ್ಣ ಮಾತಿಗೂ ಕೋಪ ಭುಗಿಲ್ಲೆನ್ನುತ್ತಿತ್ತು. ಮಾನಸಿಕ ವೇದನೆಯನ್ನು ತಾಳಲಾರದೆಯೋ ಏನೋ ಜ್ವರದಿಂದ ಮಲಗಿದೆ. ಡಾಕ್ಟರರು ಟೈಫಾಯ್ಡ್ ಎಂದರು.

ಸುಶೀಲೆ ತುಂಬಿದ ಗರ್ಭಿಣಿಯಾಗಿದ್ದರೂ ತವರಿಗೆ ಹೋಗದೆ ಇಲ್ಲೇ ನಿಂತು ಮನಃಪೂರ್ವಕವಾಗಿ ನನ್ನ ಶುಶ್ರೂಷೆ ಮಾಡಿದಳು. ಅವಳ ಪ್ರೀತಿಗೆ, ತಾಳ್ಮೆಗೆ, ನನಗೆ ಅವಳು ಮಾಡಿದ ಸೇವೆಗೆ ನನ್ನ ಅಂತಃಕರಣ ತೆರೆಯತೊಡಗಿತ್ತು. ನಾನು ಹಾಸಿಗೆ ಬಿಟ್ಟೇಳುವುದರಲ್ಲಿ ಭಾರತಿ ಹುಟ್ಟಿದಳು. ಹುಡುಗಿ ಅದೇ ಅರಳಿದ ಗುಲಾಬಿ ಹೂವಾಗಿದ್ದಳು. ಭಾರತಿ ಹೇಗೆ ಬೆಳೆಯಬೇಕು, ಏನು ಕಲಿಯಬೇಕು ಅವಳ ಭವಿಷ್ಯ ಹೇಗೆ ಸುಂದರವಾಗಿರಬೇಕು- ಎಂದೆಲ್ಲ ಮಕ್ಕಳ ಬಗ್ಗೆ ಸುಶೀಲೆ ನನ್ನೊಡನೆ ಮಾತುಕತೆ ಆಡುತ್ತಿದ್ದಳು.

ಭಾರತಿ ಬೆಳೆದಂತೆ ಸುಶೀಲೆ ಸೊರಗುತ್ತಾ ನಡೆದಿದ್ದಳು. ಡಾಕ್ಟರರ ಔಷಧಿ ಉಪಚಾರದಿಂದ ಪರಿಣಾಮವೇನೂ ಆಗಲಿಲ್ಲ. ಆಗ ಅವಳು ಮಾನಸಿಕ ವೇದನೆಯಿಂದ ಬಳಲುತ್ತಿರಬಹುದೆನ್ನುವ ಸಂಶಯದಿಂದಲೆ ನಾನೇ ಅವಳನ್ನು ವಿಶ್ವಾಸದಿಂದ ವಿಚಾರಿಸಿದೆ. ಅದಕ್ಕೆ ಅವಳ ಅಳುವಿನ ವಿನಾ ಬೇರೆ ಉತ್ತರವೇ ಇರಲಿಲ್ಲ. ಅತ್ತಿಗೆಯನ್ನು ನೋಡಲು ಬಂದ ವತ್ಸಲೆ ಅತ್ತಿಗೆಯ ದೇಹಸ್ಥಿತಿ ನೋಡಿ ಗಾಬರಿಯಾಗಿ ಅಪ್ಪಿಕೊಂಡು ಅತ್ತಳು. ಸಮಾನ ವಯಸ್ಕಳಾದ ನಾದಿನಿಯ ಮುಂದೆ ಸುಶೀಲೆಗೆ ತನ್ನ ಹೃದಯವೇದನೆಯನ್ನು ಬಚ್ಚಿಡುವುದು ಸಾಧ್ಯವಾಗಲಿಲ್ಲವೆಂದು ಕಾಣುತ್ತದೆ.

ವತ್ಸಲೆ ನನ್ನನ್ನು ನೋಡಲು ಕೋಣೆಗೆ ಬಂದಾಗ ತುಂಬ ದುಃಖದಲ್ಲಿದ್ದಳು. "ಅಣ್ಣಾ ನೀನು ಸಂತೋಷಳನ್ನು ಪ್ರೀತಿಸಿದ್ದು, ಅತ್ತಿಗೆಗೆ ಗೊತ್ತಾಗಿಹೋಗಿದೆ. ನೀವು ಜ್ವರದಲ್ಲಿ ಮಲಗಿದ್ದಾಗ ಯಾವಾಗಲೂ ಅವಳ ಹೆಸರನ್ನೇ ಬಡಬಡಿಸುತ್ತಿದ್ದೆಯಂತೆ. ಅದೇ ಅವಳಿಗೆ ಆಘಾತವಾದ ಹಾಗೆ. ಈಗಲೂ ನೀನು ಅದೆಲ್ಲ ಮರೆತುಹೋದ ಕತೆಯೆಂದು ಹೇಳಿ ಅವಳನ್ನು ಉಳಿಸಿಕೊಳ್ಳುವುದು ಸಾಧ್ಯವಿದೆ. ಅಣ್ಣಾ ನೋಡು, ಇನ್ನಾದರೂ ಪ್ರಯತ್ನ ಮಾಡು" ಎಂದಾಗ ನನಗೆ ದೊಡ್ಡದೊಂದು ಭಾರವಿಳಿದ ಹಾಗಾಗಿತ್ತು.

ನಾನು ಸಂತೋಷಳನ್ನು ಪ್ರೀತಿಸುತ್ತೇನೆ ಎನ್ನುವ ವಿಷಯ ಸುಶೀಲೆಗೆ ತಿಳಿದುಹೋಯಿತಲ್ಲ ಎಂಬುದರಿಂದ ಆನಂದವಾಗಿತ್ತು.

ಆಗ ವತ್ಸಲೆ ವಿಚಾರ ಮಾಡಿದ್ದೇ ಬೇರೆ. ನಾನು ಮಾಡಿದ್ದೇ ಬೇರೆ, ಕೂಡಲೇ ಅವಳು ಮಲಗಿದ್ದ ಕೋಣೆಗೆ ಹೋಗಿ 'ಸುಶೀ, ನೀನು ನನ್ನ ಕೈ ಹಿಡಿದ ಹೆಂಡತಿ. ಆದ್ದರಿಂದ ನಾನು ನಿನ್ನ ಸುಖಕ್ಕೇನೂ ಕಡಿಮೆ ಮಾಡಿಲ್ಲ. ನಿನ್ನ ಆಸೆ ಆಕಾಂಕ್ಷೆಗಳನ್ನೆಲ್ಲ ಪೂರೈಸುವ ಶಕ್ತಿ ದೇವರು ನನಗೆ ಕೊಟ್ಟಿದ್ದಾನೆ. ಆದರೆ ನನ್ನ ಹೃದಯದಲ್ಲಿ ಸ್ಥಾನ ಇರುವದು ಸಂತೋಷಳಿಗೆ ಮಾತ್ರ ಎನ್ನುವುದನ್ನು ನಿನಗೆ ಹೇಗೆ ತಿಳಿಸಬೇಕು ಎಂದು ಚಿಂತೆಯಾಗಿತ್ತು ನನಗೆ. ಈಗ ನಿನಗೆ ತಿಳಿದಿದೆ, ನನಗೆ ಬಹಳ ಹಿಗ್ಗು. ನೀನು ಕೊರಗಬಾರದು. ನಾನು ಒಳ್ಳೆಯ ಡಾಕ್ಟರರಿಂದ ಶುಶ್ರೂಷೆ ಮಾಡಿಸುತ್ತೇನೆ. ನಿನಗೆ ಬೇಗ ಗುಣವಾಗುತ್ತದೆ. ಚಿಂತೆ ಮಾಡಬೇಡ" ಎಂದೆ. ಅವಳ ಕಣ್ಣಿನಿಂದ ಸುರಿದ ನೀರನ್ನು ಒರೆಸಿ ಹಣೆಗೆ ಮುತ್ತಿಟ್ಟೆ.

ಈ ಸಂಗತಿ ನಡೆದ ಮೇಲೆ ಸುಶೀಲೆ ಆರು ತಿಂಗಳು ಕೂಡ ಬದುಕಲಿಲ್ಲ. ಡಾಕ್ಟರು ಕ್ಷಯವೆಂದರು. ಉಳಿಸಿಕೊಳ್ಳಲು ಮಾಡಬೇಕಾದ ಪ್ರಯತ್ನವನ್ನೆಲ್ಲ ಮಾಡಿದೆ. ಆದರೆ ಭಾರತಿಯನ್ನು ನನ್ನ ಕೈಯಲ್ಲಿಟ್ಟು "ನೀವು ಇವಳ ಸುಖಕ್ಕೇನೂ ಕಡಿಮೆ ಮಾಡುವುದಿಲ್ಲವೆನ್ನುವ ಭರವಸೆ ನನಗಿದೆ. ಇನ್ನು ನನಗೆ ಅಪ್ಪಣೆ ಕೊಡಿ" ಎಂದು ಕಣ್ಣುಮುಚ್ಚಿದಳು.

ಭಾರತಿ ಬೆಳೆಯುತ್ತಾ ಇದ್ದಳು. ತಂದೆ-ತಾಯಿ ಸುಶೀಲೆ ತೀರಿಹೋಗಿ ಬರಿದಾಗಿದ್ದ ಮನೆಗೆ ಭಾರತಿಯೇ ಬೆಳಕು. ಅವಳ ಆಟ-ಪಾಠ ವಿದ್ಯಾಭ್ಯಾಸ ಇವುಗಳತ್ತಲೇ ಲಕ್ಷ್ಯ ಕೊಟ್ಟ ನನಗೆ ಇನ್ನೊಂದು ಮದುವೆಯಾಗು ಎಂದು ಉಪದೇಶಿಸುವ ಹಿತೈಷಿಗಳಿಗೇನೂ ಕೊರತೆ ಇರಲಿಲ್ಲ. ಆದರೆ ಆ ದುಃಸಾಹಸಕ್ಕೆ ನಾನಿಳಿಯಲಿಲ್ಲ. ಉಪಜೀವನಕ್ಕೆ ವ್ಯಾಪಾರವಿತ್ತು. ಸಮಾಜದಲ್ಲಿ ಒಳ್ಳೆಯ ಸ್ಥಾನವಿತ್ತು. ಬೇಸರ ಕಳೆಯಲು ಸ್ನೇಹಿತರಿದ್ದರು. ಮನೆಯಲ್ಲಿ ಜೀವಂತಗೊಂಬೆಯಾಗಿ ಭಾರತಿ ಇದ್ದಳು. ದಿನಗಳು ಜಾರಿಹೋಗುತ್ತಿದ್ದುದೇ ತಿಳಿಯುತ್ತಿರಲಿಲ್ಲ. ಭಾರತಿ ಎತ್ತರವಾಗಿ ಬೆಳೆದು ಸುಂದರ ಯುವತಿಯಾಗುತ್ತಿದ್ದಂತೆ ನನ್ನ ದೇಹ ಜೀರ್ಣವಾಗುತ್ತಿತ್ತು.

ಪದವೀಧರೆಯಾದ ಭಾರತಿ ತಾನು ಎಂ.ಎ. ಓದಬೇಕೆಂದಳು. ಮಗಳನ್ನು ಬೆಂಗಳೂರಿಗೆ ಕಳುಹಿಸಲು ಇಷ್ಟವಿಲ್ಲ. ಅವಳನ್ನು ಬಿಟ್ಟು ನಾನೊಬ್ಬನೇ ಹೇಗಿರಲಿ ಎನ್ನುವ ಚಿಂತೆ. ಆದರೆ ನಾಳೆ ಅವಳೇ ಗಂಡನ ಮನೆಗೆ ಹೊರಟು ಹೋದಾಗಲಾದರೂ ನಾನೊಬ್ಬನೇ ಇರಲೇಬೇಕಲ್ಲ. ಅದರ ಅಭ್ಯಾಸ ಈಗಲೇ ಆಗುತ್ತದೆ ಎಂದು ಯೋಚಿಸಿ ಅವಳ ಮನಸ್ಸು ನೋಯಿಸಲು ಇಷ್ಟ ಪಡದೆ ಬೆಂಗಳೂರಿನ ಹಾಸ್ಟೆಲಿಗೆ ಕಳುಹಿಸಿದೆ. ಅವಳು ಜಾಣೆ. ವಿದ್ಯಾಭ್ಯಾಸದಲ್ಲಿ ಆಸಕ್ತಿಯುಳ್ಳವಳು. ಎಂ.ಎಂ. ಮುಗಿದ ಮೇಲೆ ಅವಳಿಗೊಬ್ಬ ತಕ್ಕ ವರನನ್ನು ಹುಡುಕಿ ಮದುವೆ ಮಾಡಿಬಿಟ್ಟರೆ ನನ್ನ ಜವಾಬ್ದಾರಿ ಕಳೆಯುತ್ತದೆ ಎಂದು ಯೋಚಿಸುತ್ತಿದ್ದೆ. ನನ್ನಿಂದಾಗಿ ಸುಶೀಲೆ ಕೊರಗಿ ತೀರಿಕೊಂಡರೂ ಅವಳ ಮಗಳಿಗೆ ನಾನೇನೂ ಕಡಿಮೆ ಮಾಡಲಿಲ್ಲವೆನ್ನುವ ಸಮಾಧಾನವಿತ್ತು ಮನಸ್ಸಿಗೆ.

ಒಂಟಿ ಜೀವನ ಬೇಸರವಾದಾಗಲೆಲ್ಲ ನಾನೂ ಬೆಂಗಳೂರಿಗೆ ಹೋಗಿ ಭಾರತಿಯನ್ನು ಕಂಡು ಮಾತನಾಡಿ ನಾಲ್ಕು ದಿನವಿದ್ದು ಬರುತ್ತಿದ್ದೆ. ಹಾಗೆ ಹಿಂದಿನ ಸಲ ಹೋದಾಗ ಭಾರತಿಯಲ್ಲಿ ಏನೋ ಬದಲಾವಣೆ ಕಂಡಿತು, ನನ್ನ ಸೂಕ್ಷ್ಮ ಕಣ್ಣಿಗೆ. ಮೇಲುನೋಟಕ್ಕೆ ನಗುತ್ತಿದ್ದರೂ, ಮಾತನಾಡುತ್ತಿದ್ದರೂ ಏನೋ ಇದೆ ಇವಳ ಮನಸ್ಸಿನಲ್ಲಿ, ಕೇಳಿ ತಿಳಿದುಕೊಳ್ಳಲೇಬೇಕು ಎನ್ನುವ ಹಟ ಹುಟ್ಟಿತು ನನಗೆ. ಕೇಳಿದೆ. ಅವಳು ಬೇಗ ಹೇಳಲಿಲ್ಲ. ನನ್ನ ಅವಳನ್ನು ಬಿಟ್ಟರೆ ಇನ್ನಾರೂ ಇಲ್ಲ. ಅವಳ ಕಲ್ಯಾಣವನ್ನೇ ಬಯಸುವ ನನಗೆ ಹೇಳದೆ ಯಾರಿಗೆ ಹೇಳುತ್ತಾಳೆ. ಎಷ್ಟು ದಿನ ಮುಚ್ಚಿಡುತ್ತಾಳೆ. ಹೇಳಲೇಬೇಕು ಎಂದು ಒತ್ತಾಯ ಮಾಡಿದಾಗ "ಅಪ್ಪಾ, ನೀವು ನನ್ನನ್ನು ತುಂಬಾ ಪ್ರೀತಿಸುತ್ತೀರಿ, ಗೊತ್ತಿದೆ. ನಾನು ನಿಮ್ಮ ಒಬ್ಬಳೇ ಮಗಳು. ನನ್ನ ಹಿತಾಹಿತವೆಲ್ಲ ನಿಮ್ಮ ಕೈಯಲ್ಲಿ. ಆದರೆ ನಾನು ಇಲ್ಲಿ ಒಬ್ಬರನ್ನು ಪ್ರೀತಿಸುತ್ತಿದ್ದೇನೆ. ಅದನ್ನು ನಿಮ್ಮೆದುರು ಹೇಳುವುದಕ್ಕೆ ಧೈರ್ಯವಿಲ್ಲ ನನಗೆ" ಎಂದಳು ಮುಖ ಕೆಳಗೆ ಹಾಕಿ.

"ಅವಳು ಯಾರು ಹೇಳು, ಅವರನ್ನು ತೋರಿಸಿದರೆ ವಿಚಾರ ಮಾಡಲು ಬರುತ್ತದೆ. ಹಾಗೆಯೇ ನಾನೇನು ಹೇಳಲಿ" ಎಂದಾಗ ಅವಳಿಗೆ ಸ್ವಲ್ಪ ಧೈರ್ಯ ಬಂದಿತೆಂದು ಕಾಣುತ್ತದೆ.

"ಅವರನ್ನು ರೂಪ, ಗುಣ ಎಲ್ಲದರಲ್ಲಿಯೂ ತುಂಬಾ ಮೆಚ್ಚಿದ್ದೇನೆ ನಾನು. ಆದರೆ...."

"ಆದರೆ ....ಏನು " ಎಂದೆ ಅಧೀರನಾಗಿ.

"ಅವರು ಪಂಜಾಬಿಗಳು. ಜಯವಂತ ಎಂದು ಅವರ ಹೆಸರು. ಡಾಕ್ಟರ್ ಪರೀಕ್ಷೆಗೆ ಓದುತ್ತಿದ್ದಾರೆ."

ಪಂಜಾಬಿ ಎಂದೊಡನೆ ನನ್ನ ಹೃದಯ ಸ್ತಬ್ಧವಾಯಿತು. ಮಾತು ಬೇಗ ಹೊರಡಲಿಲ್ಲ. ಆದರೂ ಭಾರತಿ ನನ್ನನ್ನೇ ಎವೆಯಿಕ್ಕದೆ ನೋಡುತ್ತಿದ್ದುದರಿಂದ "ಅವರ ಮನೆಯಲ್ಲಿ ಒಪ್ಪುತ್ತಾರೆಯೋ ಇಲ್ಲವೋ ಕೇಳಬೇಕು. ಜಯವಂತರನ್ನು ನನಗೆ ಭೇಟಿ ಮಾಡಿಸು" ಎಂದೆ.

"ಈಗಲೇ ಅವರಿಗೆ ಫೋನ್ ಮಾಡ್ತೇನೆ ಅಪ್ಪಾಜಿ. ಅವರಿಗೆ ತಂದೆಯಿಲ್ಲ ತಾಯಿ ಒಬ್ಬರೇ. ಅವರು ಖಂಡಿತ ಒಪ್ತಾರ ಅಂತ ಹೇಳುತ್ತಿದ್ದರು. ಇವತ್ತು ಸಾಧ್ಯವಾದರೆ ಅವರ ಮನೆಗೇ ಹೋಗೋಣ" ಎಂದವಳೇ ಕುಣಿತದ ನಡಿಗೆಯಲ್ಲಿ ಎದ್ದು ಓಡಿಯೇ ಬಿಟ್ಟಿದ್ದಳು.

ಜಯವಂತ ಬಹಳ ಸುಂದರ ತರುಣ. ದೃಢಕಾಯ. ಭಾರತಿಗೆ ತಕ್ಕ ವರ. ನಾನು ಪ್ರೀತಿಸಿದ ಪಂಜಾಬಿ ಹುಡುಗಿ ನನಗೆ ಸಿಕ್ಕದೆ ಇಪ್ಪತ್ತುನಾಲ್ಕು ವರ್ಷ ಕಳೆದಿದೆ. ಈಗ ಕಾಲ ಬದಲಾಗಿದೆ. ಅಷ್ಟಕ್ಕೂ ನನ್ನ ಮಗಳೂ ಭಗ್ನ ಪ್ರೇಮಿಯಾಗಬಾರದು ಎನ್ನುವ ಆಸೆ ನನ್ನ ಮನದಲ್ಲಿ ಹುದುಗಿದೆ. ಜಯವಂತನ ತಾಯಿ ಒಪ್ಪುವುದಾದರೆ ನನ್ನ ಅಡ್ಡಿಯಿಲ್ಲವೆಂದು ಹೇಳಲೇ ಎಂದು ಕೊಂಡವನು ಮತ್ತೆ ಮನಸ್ಸಿಗೆ ಲಗಾಮು ಹಾಕಿದೆ. ಅವನ ಮನೆಗೆ ಹೋದ ಮೇಲೆಯೇ ಮಾತಾಡೋಣ ಎಂದು.

ಸುಸಜ್ಜಿತವಾದ ಡ್ರಾಯಿಂಗ್ ರೂಮಿನೊಳಗೆ ಪ್ರವೇಶ ಮಾಡಿದ ನಮ್ಮನ್ನು ಜಯವಂತನ ತಾಯಿ ಸ್ವಾಗತಿಸಿದಳು. ಅವಳನ್ನು ನೋಡಿದಾಗ ನನ್ನ ಹೃದಯದ ಬಡಿತವೇ ನಿಂತುಹೋದಂತೆ ಆಯಿತು. ಇಷ್ಟು ವರ್ಷಗಳ ಮೇಲೆ ಈಗ ನನ್ನ ಸಂತೋಷಳನ್ನು ಕಾಣುತ್ತಿದ್ದೆ. ಕುಂಕುಮ ಸಿಂಧೂರ ಲಿಪ್‌ಸ್ಟಿಕ್ ಏನೂ ಇಲ್ಲದೆ ಬೋಳುಬೋಳಾಗಿ ಸ್ಥೂಲಕಾಯಳಾಗಿದ್ದಳು. ನಮ್ಮನ್ನು ಕೂರಲು ಹೇಳಿದವಳೇ ಸರಕ್ಕನೆ ಒಳಗೆ ಹೋಗಿಬಿಟ್ಟಳು. ಬಹುಶಃ ಕಣ್ಣೀರು ಒರೆಸಿಕೊಳ್ಳಲು ಹೋಗಿರಬಹುದೆಂದುಕೊಂಡೆ. ಅವಳು ಆಳಿನ ಕೈಯಲ್ಲಿ ತಿಂಡಿ ಚಹಾ ತರಿಸಿಕೊಂಡು ಮತ್ತೊಮ್ಮೆ ಬಂದಾಗ ನಾನು ನೀಲಿ ಕರವಸ್ತ್ರದಿಂದ ಮುಖದ ಬೆವರನ್ನು ಒರೆಸಿಕೊಳ್ಳುತ್ತಿದ್ದೆ. ಚಹ ಹಾಕುತ್ತಿದ್ದ ಅವಳ ಕೈ ನಡುಗುತ್ತಿದ್ದುದು ನನ್ನ ಸೂಕ್ಷ್ಮ ದೃಷ್ಟಿಗೆ ಕಂಡು ಭಾರತಿಗೆ ಸನ್ನೆ ಮಾಡಿದೆ. ಅವಳು ಎದ್ದು "ಇಲ್ಲಿ ತನ್ನಿ" ಎಂದು ಚಹಾ ಹಾಕಿ ಎಲ್ಲರಿಗೂ ಕೊಟ್ಟಳು.

ಭಾವನೆಗಳನ್ನು ಹತ್ತಿಕ್ಕಲು ಹೋರಾಡುತ್ತಿದ್ದಳು ಆಕೆ. ಅದೇ ಅವಸ್ಥೆಯಾಗಿತ್ತು. ಆ ಸ್ಥಿತಿಯಲ್ಲಿ ನಾವು ಮಾತನಾಡಿದ್ದು ಕೇವಲ ಮಾತುಗಳು. "ನಮ್ಮ ಭಾರತಿಯನ್ನು ನಿಮ್ಮ ಸೊಸೆಯಾಗಿ ಮಾಡಿಕೊಂಡರೆ ನನಗೆ ಬಹಳ ಸಂತೋಷ" ನಾನೆಂದಿದ್ದೆ ವ್ಯಾವಹಾರಿಕವಾಗಿ.

"ಇಂಥ ಸೊಸೆ ಸಿಗುವದು ನಮ್ಮ ಭಾಗ್ಯ" ಎಂದು ಅವಳೂ ಅಷ್ಟೇ ಕುಶಲತೆಯಿಂದ ನುಡಿದಿದ್ದಳು.

ಹೆಚ್ಚಿಗೇನೂ ಮಾತನಾಡುವದು ಸಾಧ್ಯವಾಗಿರಲಿಲ್ಲ. ಆಗ ಅದು ಉಚಿತವೂ ಆಗಿರಲಿಲ್ಲ. ಇಬ್ಬರ ಪರೀಕ್ಷೆ ಮುಗಿದ ಮೇಲೆ ಮದುವೆ ಮಾಡುವದೆಂದು ಮಾತನಾಡಿ ಭಾರತಿಗೆ ಚೆನ್ನಾಗಿ ಓದಲು ಹೇಳಿ ಊರಿಗೆ ಬಂದೆ.

ತಿರುಗಿ ಬಂದಾಗಿನಿಂದಲೂ ಯಾವಾಗಲೂ ಆನಂದದ ಹೊಳೆ ಮೈ ತುಂಬ ಹರಿಯುತ್ತಿರುವಂತೆ ಭಾಸವಾಗುತ್ತದೆ. ಏನು ಮಾಡುವುದಕ್ಕೂ ತೋಚುವುದಿಲ್ಲ. ಮದುವೆಯ ಕೆಲಸ ಬೇಕಾದಷ್ಟಿವೆ. ದಿನ ಲೆಕ್ಕ ಹಾಕುತ್ತಿರುತ್ತೇನೆ. ಮನಸ್ಸಿನ ತುಂಬ ಮೈತುಂಬ ಕೆಲಸವಿದ್ದರೂ ಏನನ್ನು ಮಾಡಲೂ ಸಾಧ್ಯವಾಗದಷ್ಟು ದಣಿವಾಗುತ್ತಿದೆ. ಮುಪ್ಪು ಆಗಲೇ ಅಡರಿ ಬಂದಂತಿದೆ. ನಾನೇನು ಸಾವಿಗೆ ಹೆದರುವವನಲ್ಲ. ಆದರೆ ಭಾರತಿಯ ಮದುವೆಯಾಗುವವರೆಗಾದರೂ ನಾನು ಗಟ್ಟಿಯಾಗಿರಬೇಕು. ಅದಕ್ಕೇ ಡಾಕ್ಟರ ಹತ್ತಿರ ಹೋಗಿದ್ದೆ. ಅವರು ಎಲ್ಲ ವಿಧದಿಂದಲೂ ನನ್ನನ್ನು ಪರೀಕ್ಷೆ ಮಾಡಿದರು. ನನ್ನ ದೇಹಕ್ಕೆ ಯಾವುದೇ ರೋಗವಿಲ್ಲವಂತೆ. ಆದ್ದರಿಂದ ನನ್ನನ್ನು ಮಾನಸಿಕ ರೋಗಿಯಾಗಿ ಪರಿಗಣಿಸಿದ್ದಾರೆ.

ಅವರು ಹೇಳಿದ್ದು ನಿಜವೆಂದು ಕಾಣುತ್ತದೆ. ನನ್ನ ಎದೆ ಈಗ ಹಗುರಾಗಿದೆ. ಎಷ್ಟು ಹಗುರ ಆಗಿದೆ ಎವರೆ ಜೋಲಿ ಹೊಡೆದು ನಾನೇ ಬಿದ್ದು ಹೋಗುವೆನೋ ಎನ್ನುವಷ್ಟು ಹಗುರಾಗಿದೆ. ಕೈಯಲ್ಲಿಯ ಶಕ್ತಿ ಕುಂಠಿತವಾಗುತ್ತಿದೆ.

ಅತ್ತಿತ್ತ ಕೆಲವು ಪುಟಗಳನ್ನು ತಿರುಗಿಸಿ ಮತ್ತೆ ಓದಿದಳು ಭಾರತಿ. ಕೊನೆಗೂ ಭಾರತಿ ಜಯವಂತನನ್ನು ಮದುವೆಯಾಗಲು ಒಪ್ಪಲಿಲ್ಲ. ಅವಳನ್ನು ಒಪ್ಪಿಸಲು ಬೇಕಾದಷ್ಟು ಪ್ರಯತ್ನಿಸಿದೆ. ಒಲ್ಲೆ ಎಂದು ಬಿಟ್ಟಳು. ಅದಕ್ಕೆ ಕಾರಣ ತಿಳಿಯದೆ ಚಡಪಡಿಸಿದೆ. ಅವಳು ಸುಖಿಯಾಗಿದ್ದರೆ ಸಾಕು ಎಂದುಕೊಂಡು ಹೆಚ್ಚು ಒತ್ತಾಯ ಮಾಡಲು ಹೋಗಲಿಲ್ಲ. ನಾನೇ ಆರಿಸಿದ ಸುಶಿಕ್ಷಿತ, ಸುಂದರ ವರನೊಡನೆ ಅವಳ ಮದುವೆ ಮಾಡಿ ಗಂಡನ ಮನೆಗೆ ಕಳಿಸಿ ಮತ್ತೆ ಒಂಟಿಯಾಗಿದ್ದೇನೆ. ಭಾರತಿಯಿಂದ ಬರುವ ಕಾಗದಗಳಲ್ಲಿ ಬರೀ ಸುಖವೇ ತುಂಬಿರುತ್ತದೆ. ಅವಳು ನಿಜವಾಗಿಯೂ ಸುಖವಾಗಿದ್ದಾಳೆಯೆ ಎನ್ನುವ ಸಂದೇಹ ನನಗೆ. ಈ ಸಂದೇಹ ನನ್ನ ಅಂತ್ಯಕಾಲದವರೆಗೂ ನನ್ನೊಡನೆ ಬದುಕಿರುವಂತೆ ಕಾಣುತ್ತದೆ.

ಮತ್ತೆ ಮತ್ತೆ ಓದಿ ಹಳೆಯದಾಗಿದ್ದ ಪುಟಗಳ ಮೇಲೆ ಭಾರತಿಯ ಕಣ್ಣೀರು ಪಟ ಪಟ ಬಿದ್ದವು. ತಂದೆಯ ಪ್ರೇಮಪ್ರಕರಣದ ಸುದ್ದಿ ತನಗೆ ತಿಳಿದೇ ತಾನು ಜಯವಂತನನ್ನು ನಿರಾಕರಿಸಿದ ಗುಟ್ಟನ್ನು ಕೊನೆಯವರೆಗೂ ಕಾಪಾಡಿಕೊಂಡು ಬಂದಿದ್ದಾಳೆ. ಆ ಗುಟ್ಟು ಜ್ವಾಲಾಮುಖಿಯಾಗಿ ತನ್ನೆದೆಯನ್ನು ಸುಡುತ್ತಿದೆ. ಅದಕ್ಕೆ ಸಾಕ್ಷಿಯಾಗಿ ಈ ಚಿಕ್ಕ ಪುಸ್ತಕ, ನೀಲಿ ಕರವಸ್ತ್ರ ನಿಂತಿವೆ.

ದೃಢ ನಿರ್ಧಾರಕ್ಕೆ ಬಂದ ಭಾರತಿ ಒಲೆಯ ಹತ್ತಿರ ಬಂದು ಒಂದೊಂದೆ ಪುಟ ಹರಿದು ಒಲೆಗೆ ಹಾಕಿದಳು. ನೀಲಿ ಕರವಸ್ತ್ರವನ್ನು ಉರಿಗೆ ಹಿಡಿದು ಅದರಿಂದ ಹೊರಡುವ ಬಣ್ಣ ಬಣ್ಣದ ಜ್ವಾಲೆಗಳನ್ನು ನೋಡುತ್ತ ತೀರಿ ಹೋಗಿದ್ದ ತಂದೆಯನ್ನು ನೆನೆದು ಸಂಕಟಪಟ್ಟಳು. ಇನ್ನೇನು ದುಃಖದ ಬುಗ್ಗೆ ಒಡೆದು ಚಿಲ್ಲನೆ ಚಿಮ್ಮಬೇಕು. ಪುಟ್ಟ ಮಗುವೊಂದು ಓಡಿಬಂದು ತೆಕ್ಕೆ ಬಿದ್ದು "ಅವ್ವಾಃ" ಎಂದು ಗಲ್ಲಕ್ಕೆ ಮುತ್ತುಕೊಟ್ಟಿತು.

"ಜಯೂ ನನ್ನ ಚಿನ್ನ" ಎಂದು ಅದಕ್ಕೆ ಪಟಪಟನೆ ಮುತ್ತು ಕೊಟ್ಟು ಎದೆಗೆ ಅವಚಿಕೊಂಡಳು.

***

■■

# ಬೀಗದ ಕೈ

ಸುಮಿತ್ರಾ ಕತ್ತೆತ್ತಿ ವಿಶ್ವನಾಥ ಕುಳಿತುಹೋಗಿದ್ದ ಕುರ್ಚಿಯನ್ನೇ ದಿಟ್ಟಿಸಿದಳು. ಅವನು ಕುಳಿತಿದ್ದ ಗುರುತು ದಿಂಬಿನ ಮೇಲೆ ಮೂಡಿ ತಗ್ಗು ಬಿದ್ದಿತ್ತು. ಕೋಣೆಯಲ್ಲಿ ಸಿಗರೇಟಿನ ವಾಸನೆ ಇನ್ನೂ ಸುಳಿದಾಡುತ್ತಿತ್ತು. ಅಂದು ಸಂಜೆ ನಾವು ಇಬ್ಬರೂ ಕೂಡಿ, ಸುತ್ತಾಡಿ ತನ್ನ ಮನೆಗೆ ಬಂದು ಚಹ ಕುಡಿದಾದ ಮೇಲೆ ಸಿಗರೇಟು ಹೊತ್ತಿಸಿ ಹೊಗೆಯನ್ನು ತಡೆತಡೆದು ಬಿಟ್ಟಂತೆ ಇಷ್ಟುದಿನ ಮನದಲ್ಲಿಟ್ಟುಕೊಂಡಿದ್ದ ಮಾತನ್ನು ತಡೆತಡೆದು ಹೊರಗೆಡಹಿದ್ದ ವಿಶ್ವನಾಥ. ಸಿಗರೇಟಿನ ಬೂದಿಯನ್ನು ಚಿಟಿಕೆಯಿಂದ ಹಾರಿಸಿ, ಪತ್ರಿಕೆಯತ್ತ ಕಣ್ಣಾಡಿಸುತ್ತಿದ್ದ ತನಗೆ,

" ಸುಮಿತ್ರಾs ನಮ್ಮ ಮದುವೆಗಿಂತ ಮೊದಲೇ ನೀವು ಕೆಲಸಕ್ಕೆ ರಾಜೀನಾಮೆ ಕೊಡಬೇಕಾಗ್ತದ ಅಲ್ಲ?" ಎಂದಿದ್ದ.

ಅವನ ಅನಿರೀಕ್ಷಿತ ಪ್ರಶ್ನೆಯಿಂದ ತಾನು ಬೆಚ್ಚಿದ್ದರೂ ದೃಢವಾದ ದನಿಯಿಂದ ಉತ್ತರಿಸಿದ್ದಳು. "ಇಲ್ಲಾs ರಾಜೀನಾಮೆ ಕೋಡೋ ವಿಚಾರ ಇಲ್ಲ ನನಗ. ಈಗಿನ ಹಾಗೇ ಮುಂದೆ ಕೂಡಾ ಕೆಲಸಕ್ಕೆ ಹೋಗಲಿಕ್ಕೆ ಅನಾನುಕೂಲ ಏನೂ ಇಲ್ವಲ್ಲಾs."

"ಅನುಕೂಲ ಇರಬಹುದು ಸುಮಿತ್ರಾ. ಆದರ.... ಆದರ ನೀನು ನೌಕರಿ ಮಾಡುವದು ನನಗೆ ಸೇರೋದಿಲ್ಲಲ್ಲ.

"ನಿಮಗ ಸೇರಲಿಕ್ಕಿಲ್ಲ. ಆದರ ಕೆಲಸಾ ಮಾಡಬೇಕು ಅನ್ನುವ ಪ್ರೀತಿ ನನಗ ಅದ ಅಲ್ಲ. ಅಷ್ಟಕ್ಕೂ ಹದಿನೈದು ವರ್ಷಗಳ ಸರ್ವೀಸದ, ಕೈ ತುಂಬ ಪಗಾರ ಬರೂ ಕೆಲಸ ಇರೋವಾಗ ಬಿಟ್ಟುಬಿಡೋದು ಮೂರ್ಖತನ ಅನಸ್ತದ ನನಗ".

"ಸಂಬಳ ಬೇಕಾದಷ್ಟು ಬರಲಿ ಬಿಡಲಿ, ಅದರ ಚಿಂತಿ ಇಲ್ಲ ನನಗ. ನಾನು ಈಗ ಮತ್ತೊಮ್ಮೆ ಮದುವೆಯಾಗೋದು ನನಗ ಗೃಹಿಣಿ ಬೇಕು ಅಂತ. ನನ್ನ ಶೀಲಾ, ಅರುಣ ಇಬ್ಬರೂ ಸಣ್ಣವರಿದ್ದಾರ. ತಬ್ಬಲಿ ಮಕ್ಕಳು. ಅಕ್ಕನ ಮನಿಯಿಂದ ಕರಕೊಂಡು ಬರ್ತೇನಿ ಅವರನ್ನ ಮನೆಯನ್ನ ಎಲ್ಲಾ ಚೆನ್ನಾಗಿ ನೋಡಿಕೋಬೇಕಲ್ಲ.ಇಂತಾದರೊಳಗ ನೀವು ನೌಕರಿಗೆ ಹೋದರ ಇದೆಲ್ಲಾ ಹೇಗೆ ಸಾಧ್ಯ ಆಗ್ತದ ಹೇಳು."

"ಇಷ್ಟೇsನs ಎಲ್ಲಾ ನೋಡಿಕೊಂಡೂ ಕೆಲಸಕ್ಕೆ ಹೋಗಬಲ್ಲೆ ಅನ್ನುವ ಭರವಸೆ ನನಗದ. ನೀವ್ಯಾಕ ಕಾಳಜಿ ಮಾಡತೀರಿ. ನಮ್ಮಿಬ್ಬರ ಸಂಬಳಾನೂ ಚೆನ್ನಾಗಿ ಬರತದ. ಅಡಿಗೆಗೆ ಆಳು ಇಟ್ಟರಾತು. ಒಟ್ಟಿನ ಮೇಲೆ ಈಗಿದ್ದ ಕೆಲಸ ಬಿಡೂ ಮನಸ್ಸಿಲ್ಲ ನನಗ. "

"ಸುಮಿತ್ರಾ, ನನ್ನ ಮನಸ್ಸಷ್ಟು ಅರ್ಥ ಮಾಡಿಕೋ. ನೀ ಹೇಳೂವಂಥಾ ಸಂಸಾರ ನನಗ ಸೇರೂದಿಲ್ಲ. ಇಬ್ಬರೂ ದುಡಿಯುವ ಮನಿಯೊಳಗ ಶಾಂತಿ ಸಹನೆ ಕಡಿಮಿ ಅನ್ನೂದು ನನಗೆ ಕಂಡು ಬಂದsದ. ನನ್ನ ನೌಕರಿಯಿಂದs ನೀವೆಲ್ಲಾ ಸುಖವಾಗಿರೋದು ಸಾಧ್ಯ ಇರೋವಾಗ ನೀ ದುಡಿಯುವ ಅವಶ್ಯಕತೆ ಆದರೂ ಏನದ? ಇಷ್ಟು ದಿನದ ಮಾತ ಬೇರೆ ಇತ್ತು. ತಂಗಿ, ತಮ್ಮ ಇವರನ್ನ ಸಾಕುವ ಜವಾಬ್ದಾರಿ ಇತ್ತು. ಈಗ ನೀನು ಒಬ್ಬಳೇ ಅಲ್ಲ, ಸುಮ್ಮನೆ ನೀನು ಒಳಗೂ ಹೊರಗೂ ದುಡಿದು ಆಯಾಸ ಯಾಕ ಮಾಡಿಕೊ ಬೇಕು?"

"ನನಗೆ ಆಯಾಸ ಇಲ್ಲಾ ಏನಿಲ್ಲ. ಇಷ್ಟು ದಿವಸ ಮಾಡಿದೆನಲ್ಲ. ತಂಗಿ, ತಮ್ಮನ್ನು ನೋಡಿಕೊಂಡು ಹಾಗೇ ಮುಂದೂ ಶೀಲಾ ಅರುಣರನ್ನೂ ನೋಡಿಕೊಂಡೇ ನೌಕರಿ ಮಾಡ್ತೇನಿ. ನನಗೆಲ್ಲಾ ರೂಢಿ ಅದ."

"ನಿನಗೆಲ್ಲಾ ರೂಢಿ ಅದ. ಆದರ ಈ ದುಡಿಯೂ ಹೆಂಗಸರನ್ನ ಕಂಡರ ನನಗ ಅಷ್ಟೊಂದು ಗೌರವ ಭಾವನಾ ಇಲ್ಲ. ನೀ ತಪ್ಪು ತಿಳಿಕೋಬೇಡ ಹಾಂ. ಮತ್ತ ಅದಕ್ಕs ನನ್ನ ಹೆಂಡತಿಯಾಗಿ ನೀನು ನೌಕರಿ ಮಾಡಬಾರದು ಅಂತ ಸಲಹಾ ಕೊಟ್ಟೆ. "

"ನಿಮ್ಮ ಹೆಂಡತಿಯಾದೆ ಅಂದಷ್ಟಕ್ಕs ನನ್ನ ಮನಸ್ಸು, ಪ್ರೀತಿ ಇವಕ್ಕೇನೂ ಬೆಲೆ ಇಲ್ಲೇನು ಮಿ. ವಿಶ್ವನಾಥ ನಿಮ್ಮ ದೃಷ್ಟಿಯೊಳಗ? ನಾನು ನೌಕರಿ ಮಾಡೂದರಿಂದ ನಿಮಗ ಲಾಭ ಅದ. ಹಾನಿ ಏನೂ ಇಲ್ಲ. ನಾನಂತೂ ನೌಕರಿ ಬಿಡೂದಿಲ್ಲ. ಇದು ನನ್ನ ನಿರ್ಧಾರ."

"ಸುಮಿತ್ರಾs ವಿಚಾರ ಮಾಡಿ ನೋಡು. ನನ್ನ ಮನಿಯೊಳಗ ನಿನಗೆ ಏನೂ ಕೊರತಿ ಆಗೂದಿಲ್ಲ. ಅಷ್ಟಕ್ಕೂ ನೀನು ಕೆಲಸಾ ಮಾಡಿಯೇ ತೀರುವಾಕಿ ಅಂದರ ನನಗ ಈ ಮದುವಿ ಇಷ್ಟ ಇಲ್ಲಾ ಅಂತ ಹೇಳಬೇಕಾಗ್ತದ. ಇದೂ ನನ್ನ ನಿರ್ಧಾರ, ಎಂದಾದರೂ ಬದಲು ಮಾಡಿದರ ದಯವಿಟ್ಟು ನನಗ ತಿಳಿಸು. ಬರ್‍ತೇನಿ. ನಮಸ್ಕಾರ" ಚಟ್ಟನೆ ಎದ್ದುಹೋಗಿಬಿಟ್ಟಿದ್ದ ವಿಶ್ವನಾಥ.

ಎಷ್ಟು ಅನಿರೀಕ್ಷಿತವಾಗಿ ತನ್ನ ಜೀವನದಲ್ಲಿ ಬಂದಿದ್ದನೋ ಅಷ್ಟೇ ಅಕಸ್ಮಾತ್ತಾಗಿ ಹೋಗಿಬಿಟ್ಟಿದ್ದ. ಅವನು ಬಂದಿದ್ದ ಎನ್ನುವುದಕ್ಕೆ ಅಲ್ಲಲ್ಲಿ ಬಿದ್ದಿದ್ದ ಸಿಗರೇಟಿನ ಬೂದಿ, ವಾಸನೆ, ಎದುರು ಕುರ್ಚಿಯ ದಿಂಬು, ಕಿವಿಯಲ್ಲಿ ಭೋರ್ಗರೆಯುವ ಮಾತುಗಳು.

"ವಿಚಾರ ಮಾಡಿ ನೋಡು" ಎಂದಿದ್ದ. ಹೌದು, ವಿಚಾರ ಮಾಡಬೇಕಾದಂಥ ವಿಷಯವೇ. ತನ್ನ ನೀರಸ ಬಾಳಿಗೊಂದು ಹೊಸ ಮೆರುಗು ಕೊಡಲಿದ್ದ ತನ್ನ ಮದುವೆಯ ವಿಷಯ ಅಲ್ಲವೇ. ಈ ಹದಿನೈದು ವರ್ಷಗಳಲ್ಲಿ ಅದರ ಬಗ್ಗೆ ಯೋಚಿಸುವುದಕ್ಕೆ ತನಗೆ ವೇಳೆ ಎಲ್ಲಿತ್ತು. ದುಡಿಯುವ ಗಾಣದ ಎತ್ತಾಗಿದ್ದಳು ತಾನು. ಹದಿನೈದು ವರ್ಷದ ಹಿಂದೆ ಒಮ್ಮೆ ತಾನಿನ್ನೂ ಬಿ.ಎಸ್‌ಸಿಯಲ್ಲಿ ಇದ್ದಾಗ ತನ್ನ ಮದುವೆಯ ಮಾತು ಬಂದಿತ್ತು. ಆಗ ತಾನೇನೂ ಯೋಚಿಸಿರಲಿಲ್ಲ. ತಂದೆ ಇದ್ದರು. ಕನ್ಯಾರ್ಥಿಯಾಗಿ ಬಂದವರಿಗೆ ಮಗಳನ್ನು ತೋರಿಸಿ ಯೋಗ್ಯನನ್ನು ಹುಡುಕಿ ಮಾಡಿಕೊಡುವ ಹೊಣೆ ಅವರದೇ ಅಲ್ಲವೇ? ಆಗ ನಾನು ಯೋಚಿಸಬೇಕಾದ ಪ್ರಮೇಯವೇ ಇರಲಿಲ್ಲ. ಹದಿನೈದು ವರ್ಷದ ಹಿಂದೆ ಇದೇ ವಿಶ್ವನಾಥ ತನ್ನನ್ನು ಒಪ್ಪಿದ್ದರಿಂದ ಮದುವೆಯೂ ನಿಶ್ಚಯವಾಗಿತ್ತು. ತನ್ನ ಪರೀಕ್ಷೆ ಮುಗಿದ ಮೇಲೆ ಮದುವೆಯ ಮುಹೂರ್ತ ಗೊತ್ತು ಮಾಡುವದು ಎಂದು ಮಾತುಕತೆಯೂ ಮುಗಿದಿತ್ತು.

ತಾಯಿ ಇಲ್ಲದ ಮನೆ, ತಂಗಿ, ತಮ್ಮ, ತಂದೆ, ಮನೆಕೆಲಸ ಎಲ್ಲ ನೋಡಿಕೊಂಡು ಡಿಗ್ರಿ ಪರೀಕ್ಷೆಗೆ ಅಭ್ಯಾಸ ಮಾಡುವದು ಸಾಮಾನ್ಯ ಮಾತಾಗಿರಲಿಲ್ಲ. ಯಾವ ಯೋಚನೆಗಳಿಗೂ ಬಿಡುವಿರಲಿಲ್ಲ. ಎಲ್ಲವನ್ನೂ ತಂದೆ ಮಾಡುತ್ತಾರೆಂದು ನಿಶ್ಚಿಂತಳಾಗಿದ್ದಳು. ಆದರೆ ಒಂದು ಮಧ್ಯಾಹ್ನ ಕೋರ್ಟಿನಿಂದ ಮನೆಗೆ ಬಂದ ತಂದೆಯ ಶವ ನೋಡಿದಾಗ ತಾನು ದಿಕ್ಕು ತಪ್ಪಿದ್ದಳು. ತಂದೆಗಾಗಿದ್ದ ಹೃದಯಾಘಾತಕ್ಕಿಂತಲೂ ಹೆಚ್ಚಿನ ಆಘಾತವಾಗಿತ್ತು ತನಗೆ. ಇದ್ದೊಬ್ಬ ಸೋದರಮಾವ ಮಿಲಿಟರಿಯಲ್ಲಿದ್ದ. ತಂದೆಯ ಕಡೆಯ ಬಳಗದ ಸಹಾಯವೂ ಸಿಗದೆ ಸಂಕಟಪಡುತ್ತಿದ್ದ ಸಮಯದಲ್ಲಿ ತಮ್ಮ ನೆರವಿಗೆ ಬಂದವರು ತಂದೆಯ ಗೆಳೆಯ ವಕೀಲ ಮಾಧವರಾಯರು. ಅವರ ಸಹಾಯದಿಂದಲೇ ಅಂತ್ಯಸಂಸ್ಕಾರವನ್ನೆಲ್ಲ ಮುಗಿಸಿದ್ದಳು ಗಂಡುಮಗನಂತೆ ತಾನೇ ಮುಂದೆ ನಿಂತು. ಕುಸುಮ, ಶ್ರೀಧರ ಇಬ್ಬರೂ ಚಿಕ್ಕವರು, ಅವರ ಹೊಣೆ ಹೊರಲು ಇನ್ನು ಹಿರಿಯಳಾದ ತಾನೇ ಸಿದ್ಧಳಾಗಬೇಕು ಎನ್ನುವ ನಿರ್ಧಾರಕ್ಕೆ ಬಂದಾಗ ಮಾಧವರಾಯರ ಮಧ್ಯಸ್ಥಿಕೆಯಿಂದ ತನ್ನ ಮನೆಯ ಪರಿಸ್ಥಿತಿಯ ವಿವರ ಬರೆಸಿ ಇನ್ನು ತನ್ನ ಮದುವೆ ಸಾಧ್ಯವಿಲ್ಲ ಎನ್ನುವ ಮಾತನ್ನು ವಿಶ್ವನಾಥನಿಗೆ ತಿಳಿಸಿದ್ದಳು.

ವಿಶ್ವನಾಥ ಅವನ ತಂದೆ ಕೂಡಿ ಮಾಧವರಾಯರೊಡನೆ ಮನೆಯವರೆಗೆ ಬಂದು ತನಗೆ ಅನುಕಂಪದ ಮಾತು ಹೇಳಿ ಹೋಗಿದ್ದರು. ಆಮೇಲೆ ತಾನು ಮೂರು ತಿಂಗಳು ಮತ್ತೆ ಕಾಲೇಜಿಗೆ ಹೋಗಿ ಡಿಗ್ರಿ ಪಡೆದಮೇಲೆಯೇ

ಮಾಧವರಾಯರ ಸಹಾಯದಿಂದ ಕೆಲಸ ಹಿಡಿದು ಮನೆಯ ಸೂತ್ರವನ್ನೆಲ್ಲ ಕೈಗೆ ತೆಗೆದುಕೊಂಡದ್ದು. ದಿನದ ಇಪ್ಪತ್ತನಾಲ್ಕು ಗಂಟೆ ಸಾಲುತ್ತಿರಲಿಲ್ಲ ತನಗೆ. ಅಡಿಗೆ ಮಾಡಿ ಹುಡುಗರಿಗೂ ಬಡಿಸಿ, ಪಾತ್ರೆ ತೊಳೆದಿಟ್ಟು ಇಬ್ಬರು ಹುಡುಗರೂ ಶಾಲೆಗೆ ತಯಾರಾಗುವ ಹೊತ್ತಿಗೆ ಸರಿಯಾಗಿ ತಾನೂ ಸಿದ್ಧಳಾಗಿ ಮನೆಗೆ ಬೀಗ ಹಾಕಿ ಸಂಜೆ ಬರುವದು ತಡವಾದೀತೆಂದು ನೆರೆಮನೆಯಲ್ಲಿ ಹಾಲಿನ ಪಾತ್ರೆ ಕೊಟ್ಟು,

'ಅವ್ವಾರs ಹಾಲು ತೊಗೊಳ್ರೀsss"

ತೆರೆದ ಬಾಗಿಲಿನಿಂದ ಹಾಲಿನ ಹುಡುಗಿ ಒಳಗೇ ಬಂದಿದ್ದಳು. ಸುಮಿತ್ರಾ ಯಾಂತ್ರಿಕವಾಗಿ ಎದ್ದು ಹೋಗಿ ಪಾತ್ರೆ ತಂದು ಒಂದು ಪಾವು ಹಾಲು ಹಾಕಿಸಿ ಕೊಂಡೊಯ್ದಳು. ಸಾಕಲ್ಲ ಒಂದು ಪಾವು ಹಾಲು. ತನಗೊಬ್ಬಳಿಗೆ ಇನ್ನೆಷ್ಟು ಬೇಕು? ರಾತ್ರಿ ಅನ್ನಕ್ಕಿಷ್ಟು ಹಾಕಿಕೊಂಡು ಬೆಳಗಿನ ಚಹಕ್ಕೆ ಉಳಿದರೆ ಸಾಕು. ಒಮ್ಮೊಮ್ಮೆ ಅನ್ನ ಮಾಡಿಕೊಳ್ಳಲೂ ಬೇಜಾರಾಗಿ ಎದುರು ಅಂಗಡಿಯಿಂದ ಬ್ರೆಡ್ಡು ತಂದು ಹಾಲು ಬ್ರೆಡ್ಡು ತಿಂದು ಮಲಗಿದ್ದುಂಟು. ಹಿಂದಿನ ರಜದಲ್ಲಿ ಗಂಡನ ಮನೆಯಿಂದ ಕುಸುಮ ಬಂದಾಗ ಅಂದಿದ್ದಳು.

" ಎಷ್ಟು ಸೊರಗೀಯಲ್ಲs ಅಕ್ಕಾ. ಚೆನ್ನಾಗಿ ಹಾಲು ಹಣ್ಣು ತೊಗೋ ಬಾರದs."

"ಬಿಡs ನನಗೇನಾಗೇದ ಸೊರಗಲಿಕ್ಕೆ. ಹಾಲು ಕುಡೀಲಿಕ್ಕೆ ನಾ ಏನು ಇನ್ನೂ ದೀಪ್ತಿs ಏನು" ಎನ್ನುತ್ತ ಪುಟ್ಟ ದೀಪ್ತಿಯನ್ನೆತ್ತಿ ಲೊಟಲೊಟ ಮುತ್ತಿಕ್ಕಿದಳು. ತಾನು ಚಿಕ್ಕ ಮಕ್ಕಳನ್ನು ಎತ್ತಿ ಆಡಿಸಲು, ಕುಣಿದಾಡಿಸಲು ತನಗೆ ಮೊದಲಿನಿಂದಲೂ ಪ್ರೀತಿ. ಗೊಂಬೆ ಆಡೋ ತನ್ನ ಹುರುಪು ನೋಡಿ ಅವ್ವ "ನಮ್ಮ ಸುಮ್ಮಿ ಹತ್ತು ಮಕ್ಕಳ ತಾಯಾಗ್ತಾಳ ನೋಡ್ರಿ" ಎಂದು ಚೇಷ್ಟೆ ಮಾಡಿದ್ದು ಇನ್ನೂ ನೆನಪಿದೆ ತನಗೆ.

ದೀಪ್ತಿಯ ಅಣ್ಣ ಸಂಜಯನಿಗೆ ಇದನ್ನು ನೋಡಿ ಹೊಟ್ಟೆಕಿಚ್ಚಾಯಿತೋ ಏನೋ, 'ದೊಡ್ಡಮ್ಮಾ' ಎಂದು ಬೆನ್ನಿಗೆ ಅವಚಿಕೊಂಡು ನಿಂತು ತನ್ನ ತಲೆ ಹಿಡಿದು 'ದೊಡ್ಡಮ್ಮ ನೀನು ಅಗಳಾಡಬ್ಯಾಡ ಹಾಂ. ಸುಮ್ಮನ ಕೂಡು. ನಾ ನಿನ್ನ ತಲ್ಯಾಗಿನ ಕೂದಲ ಎಣಿಸತೇನಿ' ಎಂದ. ಅದಕ್ಕೆ ಕುಸುಮ "ಹೋಗೋ ಮಂಗಾs, ಕೂದಲಾ ಎಂದsರೆ ಎಣಿಸಲಿಕ್ಕೆ ಬರ್ತಾವೇನು? ನೀನು ಅಕ್ಕನ ಕೂದಲಾ ಎಳೆದು ನೋಯಿಸಬ್ಯಾಡಾ. ಏಳು ಅಲ್ಲಿಂದ ಇಲ್ಲಾಂದರ ಹೊಡೀತೀನಿ ನೋಡು ನಾನು" ಎಂದು ಕೈ ಎತ್ತಿದಾಗಲೇ ಏನೋ ಆಶ್ಚರ್ಯ ಕಂಡವನಂತೆ 'ಅವ್ವಾs ಇಲ್ನೋಡು ದೊಡ್ಡವ್ವ ಕೂದಲಿಗೆ ಬಿಳೇ ಬಣ್ಣ ಹಚ್ಚ್ಯಾಳ. ಬೆಳ್ಳೀ ಬೆಳ್ಳೀ ಹಾಂಗ ಆಗ್ಯಾವ ಆಕೀ ಕೂದಲಾ ಎಷ್ಟು ಛಂದ ಕಾಣತದ. ಅವ್ವಾs ನೀನೂ ಹಚ್ಚಿಕೋ ಹಾಂಗ ಬಣ್ಣಾ" ಎಂದ ಸಂಜಯನ ಮಾತು ಕೇಳಿ ಹೊಟ್ಟೆ ತುಂಬ ನಕ್ಕಿದ್ದಳು ತಾನು. "ಹುಚ್ಚಾ, ಬಣ್ಣಾ ಹಚ್ಚಿಲ್ಲೋ ನಾನು. ಮುದುಕಿ, ಮುದುಕಿ ಆಗೇನಿ, ಅದಕ್ಕs ಹಾಂಗ ಬೆಳ್ಳಗ ಆಗ್ಯಾವ ಕೂದಲಾ. ನಾಳೆ ಮುದುಕ ಆದಮ್ಯಾಲೆ ನಿನ್ನೂ ಹಾಂಗs ಆಗ್ತಾವ" ಎನ್ನುತ್ತ ತಾನು ನಕ್ಕಾಗ ಕುಸುಮ ಕಣ್ಣೊರೆಸಿಕೊಳ್ಳುತ್ತ ಎದ್ದು ಹೋಗಿದ್ದಳು.

ಹೌದು, ನಾನು ಮುದುಕಿಯಾಗುತ್ತಿದ್ದೇನೆ ಎಂದರೆ ಕುಸುಮ ಯಾಕೆ ಅಳಬೇಕು ? ಮೂವತ್ತೈದರ ಮೇಲಾಯಿತು ತನಗೆ. ತಾನೇನು ಇನ್ನೂ ಚಿಕ್ಕವಳೇ? ವರುಷಗಳು ಉರುಳಿದಂತೆ ಕೂದಲ ಬಣ್ಣವೂ ತಿರುಗುತ್ತದೆ. ಮೈಯೂ ಸುಕ್ಕುಗಟ್ಟುತ್ತದೆ. ಇದು ಪ್ರಕೃತಿಯ ನಿಯಮ. ಇದರಲ್ಲಿ ಅಳುವ ಮಾತೇನಿದೆ? ಕುಸುಮ ಮೃದು ಮನಸ್ಸಿನವಳು. ನೀರು ಅವಳ ಕಣ್ಣ ತುದಿಯಲ್ಲೇ ನಿಂತಿರುತ್ತದೆ. ಹೂಂ ಅನ್ನುವಲ್ಲಿ ಹಾಂ ಅಂದರೆ ಸಾಕು. ಧುಮ್ಮಿಕ್ಕುತ್ತದೆ. ಸುರೇಶನಂಥ ಒಳ್ಳೆಯ ಗಂಡ ಸಿಕ್ಕಿದ್ದಾನೆಂದೇ ಎಲ್ಲಾ ಚೆನ್ನಾಗಿದೆ. ಅವಳನ್ನು ಕಂಡರೆ ಎಷ್ಟು ಪ್ರೀತಿ ಅವನಿಗೆ. ಅದೇ ಆವತ್ತು ನೋಡಿದೆನಲ್ಲ-

ಕುಸುಮ ದೀಪ್ತಿಯನ್ನು ಆಸ್ಪತ್ರೆಯಲ್ಲಿ ಹೆತ್ತು ಮನೆಗೆ ಬಂದಿದ್ದಳು. ರಜೆ ಸಿಗಲಿಲ್ಲ ಎಂದು ಹದಿನೈದು ದಿನ ಕಳೆದಮೇಲೆ ಹೆಂಡತಿ ಮಗಳನ್ನು ನೋಡಲು ಬಂದ ಸುರೇಶ. ಕುಸುಮಳಿಗೆ ಸಿಟ್ಟು ಮೂಗಿನ ತುದಿಗೇ.

ಸುರೇಶ ಬಾಣಂತಿಯ ಕೋಣೆಗೆ ಬಂದಾಗ ಮಗಳನ್ನು ಅವನ ತೊಡೆಯ ಮೇಲಿಟ್ಟು "ಅಂತೂ ನೆನಪಾಯಿತಲ್ಲಾ ಹೆಂಡತಿ ಮಕ್ಕಳ ಇದ್ದಾರ ಅನ್ನೂದು. ಅದೇ ನನ್ನ ಪುಣ್ಯ" ಎಂದು ಮೂದಲಿಸಿದ್ದಳು. "ರಜಾ ಬೇಗ ಸಿಗಲಿಲ್ಲ. ಅದಕ್ಕೆ ಬರಲಿಲ್ಲ ನಾನು ಅಲ್ಲಿದ್ರೂ ನನ್ನ ಜೀವ ಇಲ್ಲೇ ಇತ್ತಲ್ಲ" ಎನ್ನುತ್ತ ಅವಳ ಕೆನ್ನೆ ತಟ್ಟುತ್ತಿದ್ದ ಸುರೇಶ. ಹಾಲಿನ ಲೋಟ ತೆಗೆದುಕೊಂಡು ಕೋಣೆಗೆ ಕಾಲಿಟ್ಟವಳು ತಾನು ಹಿಂದಕ್ಕೆ ತಿರುಗಿದ್ದಳು.

ಊರಿಗೆ ಹೋದ ಮೇಲೆಯೂ ತಪ್ಪದೆ ವಾರಕ್ಕೊಂದು ಕಾಗದ ಬರೆಯುತ್ತಿದ್ದ. ಅವನ ಕಾಗದ ಬಂದ ದಿನ ಹಿಗ್ಗು ಅವಳ ಮುಖದ ತುಂಬ ತುಂಬಿ ಹೊರಚೆಲ್ಲುತ್ತಿತ್ತು. ಅಂಥ ಯಾವ ಸುಖವಿರುತ್ತಿತ್ತೋ ಆ ಕಾಗದದಲ್ಲಿ, ಓದಿದ್ದನ್ನೇ ಮತ್ತೆ ಮತ್ತೆ ಓದುತ್ತಿದ್ದಳಾಕೆ. ಅವಳ ತನ್ಮಯತೆ ಕಂಡು ತನಗೂ ಹುಚ್ಚು ಎದ್ದಿತ್ತು. ಅಂಥ ಕಾಗದವನ್ನು ತಾನೂ ಒಮ್ಮೆ ಓದಲೇಬೇಕೆಂದು. ಅದರಲ್ಲೇನು ಇತ್ತು? ಇವಳಿಲ್ಲದೆ ಅವನ ಮನೆ ಭಣ ಭಣ ಎನ್ನುತ್ತಿದೆ. ರಾತ್ರಿ ಸರಿಯಾಗಿ ನಿದ್ದೆ ಬರುವದಿಲ್ಲ. ಕನಸಿನಲ್ಲೂ ಇವಳೇ ಕಾಣಿಸುತ್ತಾಳೆ. ಹೆಜ್ಜೆ ಹೆಜ್ಜೆಗೂ ಇವಳ ನೆನಪು ಕಾಡುತ್ತದೆ. ತೋಟದಲ್ಲಿ ಅರಳಿದ ಗುಲಾಬಿ ಹೂ ನೋಡಿದಾಗ ಕುಸುಮಳಿಗೆ ಯಾವಾಗ ಮುಡಿಸಲಿ ಎಂದು ಹಾತೊರೆಯುತ್ತದೆ ಅವನ ಜೀವ. ನೀನಿನ್ನೂ ಯಾವಾಗ ಬರುವಿ ಎಂದು ಕೇಳಿದ್ದ ಕಾಗದ ಕದ್ದು ಓದುತ್ತ ಓದುತ್ತ ತನ್ನ ಮೈ ಬೆವತಿತ್ತು. ಕೈ ಥರಥರ ನಡುಗುತ್ತಿದ್ದವು.

ನಡುಗುತ್ತಿದ್ದ ಕೈಗಳಿಂದ ತನ್ನ ಮುಡಿ ನೇವರಿಸಿಕೊಂಡಳು ಸುಮಿತ್ರಾ. ಅಲ್ಲಿದ್ದ ಮಲ್ಲಿಗೆ ಮಾಲೆ ಘಮ್ಮೆಂದಿತು. ಸ್ವಲ್ಪ ಹೊತ್ತಿಗೆ ಮೊದಲು ಅಡ್ಡಾಡಲು ಹೋದಾಗ ವಿಶ್ವನಾಥ ಅದನ್ನು ಕೊಂಡು ತನ್ನ ಕೈಗಿತ್ತು,

"ನಿನ್ನ ಜಡೆಗೆ ಇಡಲು ಇನ್ನೂ ಅಧಿಕಾರವಿಲ್ಲವಲ್ಲ ಸುಮಿತ್ರಾ" ಎಂದು ನಸುನಕ್ಕಿದ್ದ. ಆಗ ತನಗೆ ನಾಚಿಕೆಯಾಗಿತ್ತು. ತನ್ನ ಬತ್ತಿದ ಕೆನ್ನೆಯೂ ಕೆಂಪಾಗಿತ್ತೋ ಏನೋ ತಾನುಟ್ಟ ಸೀರೆಯಂತೆಯೇ.

ಹಾಂ. ಸೀರೆ ಎಂದೊಡನೆ ನೆನಪಾಯಿತು. ಈಗ ಆರು ತಿಂಗಳ ಕೆಳಗೆ ತಾನೊಂದು ದಿನ ಆಫೀಸಿಗೆ ಹೋಗುವಾಗ ಹೊಸ ಟೆರಿಕಾಟ್ ಸೀರೆ ಉಟ್ಟಿದ್ದಳು. ಸಹೋದ್ಯೋಗಿ ಜೋಷಿ ತನ್ನನ್ನು ದಿಟ್ಟಿಸಿ ನೋಡಿದೊಡನೆ ಕೇಳಿದ್ದರು; "ಸುಮಿತ್ರಾಃ ಈ ಸೀರೆ ಎಲ್ಲಿ ಕೊಂಡುಕೊಂಡಿರಿ, ಎಷ್ಟು ಬಿತ್ತು?" ಎಂದು. ತಾನು ಅಂಗಡಿ, ಬೆಲೆ ಹೇಳಿದ ಮೇಲೆ "ಛಂದ ಅದಽರಿ, ಸೀರಿ. ನನ್ನ ಹೆಂಡತೀಗೆ ಒಪ್ಪತದ ಅನ್ನಿಸಿತು. ತೊಗೋಬೇಕು ಅಂತ ಕೇಳಿದೆ." ಎಂದು ಜೋಷಿ ಹೇಳಿದಾಗ ತನ್ನ ಮುಖವೇಕೋ ಜೋಲು ಬಿದ್ದಿತು. ಮಧ್ಯಾಹ್ನದಿಂದ ಸಪ್ಪಗಿದ್ದ ತನ್ನನ್ನು ನೋಡಿ ಮೋಹಿನಿ "ಸುಮಿತ್ರಾ, ಯಾಕೋ ಸಪ್ಪಗಿದ್ದೀರಿ, ಬೇಜಾರಾಗೇದೇನು? ನಡೀರಿ. ಇವೊತ್ತೊಂದು ಸಿನಿಮಾ ನೋಡಿ ಮನೀಗೆ ಹೋಗೂಣಾಂತ" ಎಂದು ಒತ್ತಾಯ ಮಾಡಿ ಥಿಯೇಟರಿಗೆ ಕರೆತಂದು ಟಿಕೆಟು ತೆಗೆಸಿದ್ದಳು.

ಬೇಜಾರಾದಾಗ ಆಗಾಗ ತಾವಿಬ್ಬರೂ ಸಿನಿಮಾ ನೋಡುವ ಪ್ರೋಗ್ರಾಂ ಹಾಕುತ್ತಿದ್ದುದುಂಟು. ಲೈಟು ಆರಿ ನ್ಯೂಸ್ ರೀಲ್ ಶುರು ಆದ ಮೇಲೆ ಯಾರೋ ಗಂಡಸು ತಮ್ಮನ್ನು ದಾಟಿ ಬಂದು ತನ್ನ ಮಗ್ಗುಲ ಖಾಲಿ ಕುರ್ಚಿಗೆ ಕುಳಿತಿದ್ದ. ಬೇರೆಡೆ ಎಲ್ಲೂ ಜಾಗವಿರಲಿಲ್ಲ. ಮೇಲಾಗಿ ತಾವು ಗಂಡಸರ ಸರಿಸಮಾನರಾಗಿ ದುಡಿಯುವ ಹೆಂಗಸರು. ಅಂದಮೇಲೆ ಆಕ್ಷೇಪಣೆ ಎತ್ತುವ ಹಾಗೇ ಇರಲಿಲ್ಲ. ಮಧ್ಯಂತರದಲ್ಲಿ ದೀಪದ ಬೆಳಕಿನಲ್ಲಿ ತನ್ನ ಮಗ್ಗುಲಲ್ಲಿ ಯಾರಿರಬಹುದು ಎನ್ನುವ ಕುತೂಹಲದಿಂದ ಅವನತ್ತ ನೋಡಿದಾಗ ಅವನೂ ತನ್ನನ್ನೇ ನೋಡುತ್ತಿದ್ದವ ಆಶ್ಚರ್ಯಪಟ್ಟವನಂತೆ "ನಿಮ್ಮ ಹೆಸರು ಸುಮಿತ್ರಾ ಏನು?" ಎಂದಾಗ ತನಗೂ ಅವನು ವಿಶ್ವನಾಥ ಎನ್ನುವ ಗುರುತು ಸಿಕ್ಕಿತು. ಹದಿನೈದು ವರ್ಷಗಳ ಮೇಲೆ ಭೇಟಿಯಾಗಿದ್ದಿತಲ್ಲ. ಆದರೆ ಮಾತಿಗೆ ಅವಕಾಶವಿಲ್ಲದೆ ಸುಮ್ಮನಾಗಿದ್ದರು ತಾವಿಬ್ಬರೂ, ಸಿನಿಮಾ ಮುಗಿದ ಮೇಲೆ ಬಸ್‌ಸ್ಟಾಪಿನವರೆಗೂ ಜೊತೆಗೇ ಬಂದ ವಿಶ್ವನಾಥ. ತನ್ನ ಸುದ್ದಿಯನ್ನೆಲ್ಲ ಚುಟುಕಾಗಿ ಹೇಳಿ ಮುಗಿಸಿ ತನ್ನದನ್ನೂ ಕೇಳಿಕೊಂಡಿದ್ದ.

ಅಂದು ಪ್ರಾರಂಭವಾದ ತಮ್ಮ ಪರಿಚಯ ಹೆಜ್ಜೆಹೆಜ್ಜೆಗೆ ಬೆಳೆಯುತ್ತಾ ಬಂದು ಈ ಎರಡು ದಿನಗಳ ಹಿಂದೆ ಇಬ್ಬರೂ ಮದುವೆಯಾಗಬೇಕು ಎನ್ನುವ ಮಾತಿಗೆ ಬಂದಿತ್ತು. ತಾನು ಮದುವೆಯಾಗದ ಪ್ರೌಢೆ. ಅವನು ವಿಧುರ, ಇಬ್ಬರೂ ನಿಧಾನವಾಗಿಯೇ ಮುನ್ನಡೆದಿದ್ದರು. ದೇಹದ ಬಯಕೆಗಿಂತ ಮಿಗಿಲಾಗಿ ಒಂಟಿತನ ಬೇಡವಾಗಿತ್ತು ಇಬ್ಬರಿಗೂ, ಆದರೆ ಇಂದು - ಇಂದೇನು ಆಯಿತು?

ವಿಚಾರದ ಆಯಾಸದಿಂದ ತಲೆ ಭಾರವಾಗಿ ಸುಮಿತ್ರಾ ದಿಂಬಿನ ಮೇಲೊರಗಿ ತಲೆ ವಾಲಿಸಿದಳು. ಅಲ್ಲಿ ಕಿಟಕಿಯ ದಂಡೆಯ ಮೇಲೆ ಹುಲ್ಲುಕಡ್ಡಿ, ಕಸ ಧೂಳು, ಅರಳೆಯ ಚೂರು ಸಾಕಷ್ಟು ಬಿದ್ದಿತ್ತು. ಕಿಟಕಿಯ ಮೇಲಿನ ಫೋಟೋದ ಹಿಂದೆ ಗುಬ್ಬಿ ಗೂಡು ಕಟ್ಟಿ ಮೊಟ್ಟೆ ಇಟ್ಟಿತ್ತು. ಈಗ ಹದಿನೈದು ದಿನಗಳ ಹಿಂದೆ ಗಂಡು ಹೆಣ್ಣು ಗುಬ್ಬಚ್ಚಿಗಳೆರಡೂ ಗೂಡಿಗಾಗಿ ಹುಲ್ಲು ಕಡ್ಡಿ ತರುತ್ತಲೇ ಇದ್ದವು. ತಾನು ನೋಡಿದಾಗಲೆಲ್ಲಾ ಕೈ ಮಾಡಿ ಹುಶ್ ಎಂದು ಓಡಿಸಿದ್ದಳು. ಆದರೆ ಅವು ಕೇಳಬೇಕಲ್ಲ. ತನ್ನ ಬೆದರಿಕೆಗೆ ಮಣಿಯದೆ ಬೆಳಗಿನಿಂದ ಸಂಜೆಯವರೆಗೂ ಸಾಮಗ್ರಿ ತಂದು ತಂದು ಭದ್ರವಾಗಿ ಗೂಡು ಕಟ್ಟಿದ್ದವು.

ಈಗ ಎರಡು ದಿನಗಳಿಂದ ಸಣ್ಣದಾಗಿ ಚಿಂವ್ ಚಿಂವ್ ಎನ್ನುವ ಧ್ವನಿಯೂ ಕೇಳುತ್ತಿದೆ. ಮೊಟ್ಟೆ ಮರಿಯಾಗಿರಬೇಕು. ತಾಯಿ ತಂದೆ ಗುಬ್ಬಚ್ಚಿಗಳು ಗಳಿಗೆಗೊಮ್ಮೆ ಹೊರಗೆ ಹಾರಿ ಮತ್ತೆ ಮತ್ತೆ ಗೂಡಿಗೆ ಬರುತ್ತವೆ. ಮರಿಗಳಿಗೆ ಗುಟುಕು ಕೊಡುತ್ತಿರಬಹುದು. ನೋಡಬೇಕೆಂದು ಫೋಟೋದ ಸಮೀಪ ಹೋಗಿ ನಿಂತರೆ ಸಾಕು. ತಾಯಿ -ತಂದೆ ಗುಬ್ಬಿಗಳೆರಡೂ ಫೋಟೋದ ಕಟ್ಟಿನ ಮೇಲೆ ಕುಳಿತು ಚಿಂವ್ ಚಿಂವ್ ಎಂದು ಜೋರಾಗಿ ಅರಚುತ್ತವೆ ತನ್ನನ್ನು ಬೆದರಿಸುವಂತೆ. ತನಗೆ ಅದೊಂದು ತಮಾಷೆಯ ಮಾತಾಗಿದೆ. ಬೇಕೆಂದೆ ಹೋಗಿ ಅಲ್ಲಿ ನಿಂತು ಅವು ಮಾಡುವುದನ್ನೆಲ್ಲಾ ನೋಡಿ ಅಚ್ಚರಿಪಟ್ಟಿದ್ದಳು. ವಿಶ್ವನಾಥನಿಗೂ ತೋರಿಸಿದ್ದಳು. ಅವನು "ಗುಬ್ಬಚ್ಚಿಗೂ ಗೂಡಿದೆ, ನೆಲೆಯಿದೆ ಸುಮಿತ್ರಾ, ಆದರೆ ನನಗಿಲ್ಲ ನೋಡು" ಎಂದು ವಿಷಾದದಿಂದ ನಕ್ಕಿದ್ದ. ಅವನ ಭುಜ ಹಿಡಿದು ಸಂತೈಸಬೇಕೆನ್ನುವ ಆಸೆ ತನಗಾದರೂ ಲಜ್ಜೆಯಿಂದ ಸುಮ್ಮನಿದ್ದಳು. ವಿಶ್ವನಾಥನಿಗೆ ಮಕ್ಕಳನ್ನು ಕಂಡರೆ ತುಂಬಾ ಪ್ರೀತಿ. "ತಬ್ಬಲಿ ಮಕ್ಕಳನ್ನು ನೀನು ಚೆನ್ನಾಗಿ ನೋಡಿಕೊಳ್ಳಬಲ್ಲೆ ಸುಮಿತ್ರಾ; ನಿನ್ನ ಮೇಲೆ ತುಂಬಾ ಭರವಸೆ ಇದೆ ನನಗೆ" ಎಂದಿದ್ದ ಒಮ್ಮೆ. "ಅದ್ಹೇಗೆ ? ನಾನು ಅವರಿಗೆ ಮಲತಾಯಿ ಆಗೋದಿಲ್ಲವೇ?" ಎಂದಾಗ ತಬ್ಬಲಿ ತಂಗಿ, ತಮ್ಮಂದಿರನ್ನು ಸಾಕುವುದಕ್ಕೇ ನಿನ್ನ ಆಯುಷ್ಯ ಸವೆಸಿದ್ದೀಯಲ್ಲ. ನಿನ್ನ ಗುಣ ನನಗೆ ಗೊತ್ತಿದೆ. ನನ್ನ ಮನೆ ನಿನ್ನಿಂದಲೇ ಬೆಳಕು ಕಾಣೋದು ಸಾಧ್ಯ" ಎಂದಿದ್ದ. ಆಗ ಹಾಗೆಲ್ಲ ಹೇಳಿದ್ದ ವಿಶ್ವನಾಥ ಈಗ ಹೀಗೆಂದು ಹೋಗಿಬಿಟ್ಟನಲ್ಲ.

ಒಳಗೆ ಪಾತ್ರೆ ಉರುಳಿದ ಸಪ್ಪಳವಾಯಿತು. ಸುಮಿತ್ರಾ ಧಾವಿಸಿದಳು. ಬೆಕ್ಕು ಹಾಲಿಗೆ ಬಾಯಿ ಇಟ್ಟಿತ್ತು. ಆಯಿತು ಬಿಡು, ಒಲೆ ಹೊತ್ತಿಸಿ ಹಾಲು ಕಾಸುವ ಕೆಲಸವೂ ತಪ್ಪಿತು ಎಂದುಕೊಳ್ಳುತ್ತ ಹೊರಗೆ ಬಂದವಳಿಗೆ ಮಧ್ಯಾಹ್ನ ಬಂದ ಶ್ರೀಧರನ ಪತ್ರ ಕಂಡಿತು. ವಿಶ್ವನಾಥನೊಡನೆ ಹೊರಗೆ ಹೊರಡುವ ತಯಾರಿಯಲ್ಲಿದ್ದವಳಿಗೆ ಅದನ್ನು ಒಡೆದು ಓದಲಾಗಿರಲಿಲ್ಲ. ತಮ್ಮ ಎಮ್. ಇ. ಮುಗಿದ ಮೇಲೆ ಸ್ಟೇಟ್ಸ್‌ಗೆ ಹೋಗಲು ಸ್ಕಾಲರ್‌ಷಿಪ್ ಸಿಗುವ ಭರವಸೆ ಸಿಕ್ಕಿದೆ. ತುಂಬ ಸಂತೋಷದ ವಿಷಯ ತಿಳಿಸುತ್ತಿದ್ದೇನೆ ಎಂದು ಬರೆದಿದ್ದ. ಯಥಾ ಪ್ರಕಾರ ಅಕ್ಕನ ಕ್ಷೇಮ ಸಮಾಚಾರ ವಿಚಾರಿಸಿ ಪತ್ರ ಮುಗಿಸಿದ್ದ. ಕುಸುಮ ಗಂಡನ ಮನೆಗೆ ಹೋದಳು. ಶ್ರೀಧರ ವಿದೇಶಕ್ಕೆ ಹೊರಟ. ತಾನು -ತಾನೆಲ್ಲಿಗೆ ಹೋಗುವುದು ? ಈ ಮನೆಗೂ ತನಗೂ ಗಂಟು. ಇನ್ನು ಸಾಯುವವರೆಗೆ ತಾನೊಬ್ಬಳೇ ಇರಬೇಕು. ಈ ಮನೆಯಲ್ಲಿ ಗಾಣದ ಎತ್ತಿನಂತೆ ತಿರುಗುತ್ತ. ತನಗೆ ಬಿಡುಗಡೆಯೇ ಇಲ್ಲ ಈ ಬಂಧನದಿಂದ. ಇದು ತನಗೆ ಬಂಧನವೇ ಅಲ್ಲ. ಅಲ್ಲವೇ ಅಲ್ಲ. ಬಂಧನವೆಲ್ಲಿದೆ ಇಲ್ಲಿ? ಸ್ವಾತಂತ್ರ್ಯ, ಸಂಪೂರ್ಣ ಸ್ವಾತಂತ್ರ್ಯವಿದೆಯಲ್ಲ ತನಗೆ. ಆದರೂ ಯಾಕೋ ತನಗಿದು ಇಷ್ಟವಿಲ್ಲ. ಇಷ್ಟ, ಹೌದು, ತನ್ನ ಇಷ್ಟಾನಿಷ್ಟಗಳೇನು ಎಂದು ಕೇಳುವವರಾದರೂ

ಯಾರು ಇಲ್ಲಿ? ಇನ್ನು ಯಾರಿದ್ದಾರೆ ತನಗೆ? ತನ್ನವರೆನ್ನುವವರು ಯಾರು ಇಲ್ಲ. ಯಾರೂ ಇಲ್ಲ ತನಗೆ. ತಾನು ಏಕಾಕಿ ಎಂದು ಮನಸ್ಸು ಚೀರಿಚೀರಿ ಹೇಳುತ್ತಿತ್ತು. ಹೃದಯ ಅಳುತ್ತಿತ್ತು. ಅದರ ಒಂದೆರಡು ಹನಿ ಕಣ್ಣುಗಳಲ್ಲಿ ತುಳುಕಿದ್ದವು.

ಹೆಜ್ಜೆ ಸಪ್ಪಳವಾಯಿತು. ತೆರೆದ ಬಾಗಿಲಿನಲ್ಲಿ ವಿಶ್ವನಾಥ ನಿಂತಿದ್ದ. ಅವಳನ್ನೇ ನೋಡುತ್ತ ಕ್ಷಮೆ ಯಾಚಿಸುವ ದನಿಯಲ್ಲಿ "ಕ್ಷಮಿಸು ಸುಮಿತ್ರ. ನನ್ನ ಬೀಗದ ಕೈ ಇಲ್ಲೇ ಮರೆತುಹೋಗಿದ್ದೆ ಒಯ್ಯಲಿಕ್ಕೆ ಬಂದೆ" ಎಂದ.

"ಬನ್ನಿ ವಿಶ್ವನಾಥ, ಒಳಗೆ ಬನ್ನಿ" ಎಂದು ಕಣ್ಣೀರಿನಲ್ಲೇ ನಸುನಕ್ಕಳಾಕೆ. ಮುಂದೆ ಬಂದ ವಿಶ್ವನಾಥ ಅವಳ ಕಣ್ಣಿನಲ್ಲಿ ತನ್ನ ಪ್ರತಿಬಿಂಬ ಕಂಡ.

***

■■

# ಹುತ್ತದಿಂದ ಹೊರಗೆ

"ಅಬ್ಬಾ ಕೊನೆಗೂ ಬಂದ್ರ್ಯಾ, ಎಷ್ಟೋತ್ನಿಂದ ಕಾಯ್ತಿದ್ದೀನಿ." ಕತ್ತು ಕೊಂಕಿಸಿ ಕಣ್ಣೋಟದಿಂದ ತಿವಿಯುತ್ತ ಚಂದ್ರಣ್ಣನನ್ನು ಸ್ವಾಗತಿಸಿದಳು ಸಾವಿತ್ರಿ. ಅವಳನ್ನು ನೋಡಿ ಆತನಿಗೆ ಸಂತೋಷವೂ ದುಃಖವೂ ಒಟ್ಟಿಗೇ ಆಯಿತು. ನಿತ್ಯದಂತೆ ಸಂಜೆಯ ಹೊತ್ತಿನಲ್ಲಿ ಸಾವಿತ್ರಿ ಪಕ್ಕದ ಮನೆಯ ಪದ್ಮಕ್ಕನವರ ಮನೆಯಲ್ಲಿರದೆ ಬಾಗಿಲಿನಲ್ಲಿಯೇ ಎದುರುಗೊಂಡುದಕ್ಕೆ ಸಂತೋಷ. ಇಷ್ಟೊದು ಅಲಂಕರಿಸಿಕೊಂಡು ದಾರಿ ಕಾಯಬೇಕಾದರೆ ತಿಂಗಳ ಕೊನೆಯಲ್ಲಿ ಅಳಿದುಳಿದ ಸಂಬಳದ ಹಣಕ್ಕೆ ಖೋತಾಯಿದೆ ಎಂದು ದುಃಖ.

"ನಮ್ಮ ಸಾಹೇಬ್ರು ಹೆಚ್ಚಿಗೆ ಕೆಲಸಾ ಹೇಳಿದ್ರು. ಅದನ್ನು ಮುಗಿಸಿ ಬಂದೆ. ಅಲ್ಲದೆ ಬಸ್ಸಿಗೂ ಭಯಂಕರ ಗಲಾಟೆ ಇದ್ದುದರಿಂದಲೂ ತಡಾ ಆಯ್ತು!"

ಸಾವಿತ್ರಿಯ ಮುಖ ಸೊಟ್ಟಗಾಯಿತು. ಅದಕ್ಕೆ ಕಾರಣ ಗೊತ್ತವನಿಗೆ ! ತುಂಗಭದ್ರಾ ನದಿಯ ಆಚೆಯ ದಂಡೆಗೆ ಅವಳ ತವರೂರು. ಈಚೆಯ ದಂಡೆಗೆ ಅವನ ಊರು. ಆತನ ಮಾತಿನಲ್ಲಿಯ ಅಗದಿ, ಬಾಳ, ಭಯಂಕರ, ಹಿಂದಾಗಡೆ ಇವೆಲ್ಲ ಅವಳಿಗೆ ಜೀರ್ಣವಾಗುತ್ತಿರಲಿಲ್ಲ. "ನಿಮ್ಮ ಮಾತು ಬಹಳೇ ಒರಟು, ಇನ್ಮೇಲಾದ್ರೂ ನನ್ಜೊತೆ ಸ್ವಲ್ಪ ನಾಜೋಕು ಕಲೀರಿ" ಎಂದು ಅವಳ ಸಲಹೆ. ಆದರೆ ಅದಕ್ಕೆ "ನಾವು ಉತ್ತರ ಕರ್ನಾಟಕದವರು. ಮಾತಿನಲ್ಲಿ ಒರಟಾಗಿದ್ದರೂ ಮೃದು ಮನಸ್ಸಿನವರು. ವಿಶಾಲ ಹೃದಯಿಗಳು" ಎಂದು ಅವನ ಖಂಡಿತವಾದ ಉತ್ತರ.

"ಆಯಿತು, ಒಳಗೆ ಬನ್ನಿ" ಎಂದು ಅವನಿಗೆ ಬೆನ್ನು ತೋರಿಸಿದವಳು, ತಿಂಡಿಯ ತಟ್ಟೆಗಳನ್ನೇ ಹೊತ್ತು ತಂದಾಗ ಆತನಿಗೆ ನಿಜವಾಗಿಯೂ ಮೂರ್ಛೆ ಬರುವಂತಾಯಿತು. ತಟ್ಟೆ ತುಂಬ ಬಿಸಿ ಬಿಸಿ ಬಜಿ, ಕಂಪು ಬೀರುವ ಸಿರಾ ! ಕಣ್ಣು ಕಣ್ಣು ಬಿಟ್ಟ.

"ನಿಮಗೆ ಆಶ್ಚರ್ಯ ಆಗಿದೆಯಾ ಇದೆಲ್ಲ ಹೇಗೆ ಮಾಡಿದೇಂತ? ರವೆ, ಸಕ್ಕರೆ, ತುಪ್ಪ, ಕಡ್ಲೆಹಿಟ್ಟು ಪದ್ಮಮ್ಮನವರ ಮನೆಯಿಂದ ಕಡ ತಂದಿದೀನಿ ಕಣ್ರೀ. ಈರುಳ್ಳಿ ಎಣ್ಣೆ ಅಷ್ಟೇ ನಮ್ಮನೇದು" ಎಂದಳು. ಬಾಯಲ್ಲಿದ್ದ ಸಿರಾ ಒಳಗೆ ಇಳಿಯಲೋಬೇಡವೋ ಎಂದು ಅನುಮಾನಿಸಿತು. ಪದ್ಮಮ್ಮನ ಪತಿಯಾಗಿ ಇನ್‌ಕಮ್ ಟ್ಯಾಕ್ಸ್ ಕಛೇರಿಯ ಕಾರಕೂನನಾಗಿದ್ದ ಪಶುಪತಿ ರಾಯರ ಸ್ಕೇಲು ೧೫೦-೧೦-೩೦೦ ಎಂದು ಅವನಿಗೆ ಗೊತ್ತು. ಅಂದರೆ ಅವನಿಗಿಂತಲೂ ಕಡಿಮೆ. ಆದರೂ ತಿಂಗಳ ಕೊನೆಯಲ್ಲಿ ತಮ್ಮ ಮನೆಯ ತಿಂಡಿಗೆ ಅವನ ಮನೆಯ ಸಾಮಾನೇ ಗತಿ. ಅದರ ಉಗಮಸ್ಥಾನ ಎಲ್ಲಿ ಎನ್ನುವುದೂ ಅವನಿಗೆ ತಿಳಿಯದ ಸಂಗತಿಯೇನಲ್ಲ! ಅದಕ್ಕೇ ಆ ತಿಂಡಿ ತಿನ್ನಲೋ ಬೇಡವೋ ಎಂದು ಅನುಮಾನಿಸಿದ್ದು. ಆದರೂ ಸಂಬಳವಾದೊಡನೆಯೇ ಅವನ ಕಡ ತಿರುಗಿ ಮುಟ್ಟಿಸುತ್ತೇನೆಂಬ ಭರವಸೆಯಿಂದ ತಿಂಡಿಯೆಲ್ಲವನ್ನೂ ಹಸಿದ ಹೊಟ್ಟೆಗೆ ಹಾಕಿದ. ಚಹಾದ ಕಪ್ಪನ್ನು ಆತನ ಬಾಯಿಗಿರಿಸುತ್ತ ಸಾವಿತ್ರಿ "ರ್‍ರೀ ಬೇಗ ಡ್ರೆಸ್ ಮಾಡಿಕೊಳ್ಳಿ. ಈಗ ಏಳು ಗಂಟೆಯಾಗಿದೆ. ಸ್ವಲ್ಪ ಪೇಟೆ ಕಡೆಗೆ ಹೋಗಿ ಬರೋಣ. ಹೊಸದಾಗಿ ಪ್ರೆಶರ್ ಕುಕರ್ ಬಂದಿದೆಯಂತೆ. ನೋಡಿಕೊಂಡು ಹಾಗೇ ತರಕಾರಿನೂ ತಕ್ಕೊಂಡು ಬರೋಣ" ಎಂದು ಅನುನಯದ ಆಜ್ಞೆಮಾಡಿದಳು. ಆಗಲೇ ಅವನು ಊಹಿಸಿದ್ದ ಸನ್ನಿವೇಶ ಬಂದಿತ್ತು. "ಈಗ ಏನು ಕೆಲಸ ಅದ ಪ್ಯಾಟ್ಯಾಗ, ಪಲ್ಯ ಗಿಲ್ಯ ಏನೂ ಬ್ಯಾಡಾ. ಈಗ ಹೊಟ್ಟೆ ತುಂಬೇದ, ಒಂದಿಷ್ಟು, ಅನ್ನ-ಸಾರು ಮಾಡಿ ಬಿಡು ಸಾಕು, ಆರಾಮ ಮನ್ಯಾಗ ಕೂಡ್ರೋಣಲ್ಲ" ಎಂದುಬಿಟ್ಟ ಚಂದ್ರಣ್ಣ.

"ನನಗೆ ಗೊತ್ತಿತ್ತು. ನೀವು ಹೀಗೇ ಅಂತೀರಿ ಅಂತಾ. ಪದ್ಮಮ್ಮನವರು ಪ್ರೆಶರ್ ಕುಕರ್ ತಂದು ಆರು ತಿಂಗಳಾಯ್ತು. ನಾನೂ ಎಷ್ಟೋ ದಿನದಿಂದ ಹೇಳ್ತಾನೇ ಇದೀನಿ, ನಾವೂ ಒಂದು ತಕ್ಕೊಳ್ಳೋಣ ಅಂತ. ನೀವು ಕಿವಿಗೇ ಹಾಕ್ಕೋಳ್ಳೋದಿಲ್ಲ. ಏನಾದರೂ ನೆವ ಹೇಳ್ತೀರಿ."

"ಹಾಗೇನಿಲ್ಲ. ನಮಗ್ಯಾತಕ್ಕ ಬೇಕು ಆ ಕುಕ್ಕರು. ಈಗ ಅದು ಇಲ್ಲದೇ ಎಷ್ಟು ರುಚಿಯಾಗಿ ಅಡಿಗಿ ಮಾಡಿ ಹಾಕ್ತೀದಿ. ಸುಮ್ನೆ ಅದಕ್ಕೆ ನೂರು-ದೀಡ ನೂರು ರೂಪಾಯಿ ಬಡೀಲಿಕ್ಕೆ ನನ್ನ ಹತ್ರ ಈಗ ರೊಕ್ಕ ಆರೆ ಎಲ್ಲೇ ? ಅಂದ ಹಾಂಗ ನನ್ನ ಪಗಾರ ಎಲ್ಲದಕ್ಕೂ ಸಾಲುವಷ್ಟಿದ್ರ ಈ ತಿನಿಸಿಗೆ ಮಂದೀ ಮನಿಯಿಂದ ಕಡಾ ಯಾಕ ತರತಿದ್ವಿ ? ಸ್ವಲ್ಪ ವಿಚಾರ ಮಾಡಲ್ಲಾ" ಎಂದು ಕಲಿಸುವ ಧಾಟಿಯಲ್ಲಿ ಹೇಳಿದ ಚಂದ್ರಣ್ಣ.

"ಅಲ್ಲಾರೀ, ಈಗ ನಮ್ಮ ಹತ್ತಿರ ಹಣ ಇಲ್ಲಾ ನನಗೂ ಗೊತ್ತು. ಆದ್ರೆ ಆ 'ಜೀವನಕಲಾ ಸ್ಟೋರ್ಸ್'ನಲ್ಲಿ ಕಂತಿನ ಮೇಲೆ ಹಣ ತುಂಬುವಂತೆ ಯೋಜನೆಯಿದೆಯಂತೆ. ಪದ್ಮಮ್ಮನವರು ರೋಖು ಎಲ್ಲವನ್ನೂ ಕೊಟ್ಟು ತಂದ್ರಂತೆ. ಅವರೇನು ? ಪ್ರತಿ ತಿಂಗಳೂ ಒಂದೊಂದು ಸಾಮಾನು ತಂದೇ ತರುತ್ತಾರೆ. ಒಮ್ಮೆ ಸಿಲ್ಕ್ ಸೀರೆ, ಮತ್ತೊಮ್ಮೆ ಟ್ರಾನ್ಸಿಸ್ಟರ್ ಮಗದೊಮ್ಮೆ ಮಗಳಿಗೆ ಕಾಫೀ ಬೀಜದ ಸರ, ಸ್ಟೀಲಿನ ಪಾತ್ರೆಗಳು....'

"ಹೌದೌದು, ಸೋಫಾಸೆಟ್, ಹಾಗೇ ಮಗಳಿಗೆ ರಿಸ್ಟ್‌ವಾಚ್, ಮೂಗು ಒರೆಸಲೂ ಬಾರದ ಮಗನಿಗೆ ಕ್ರಿಕೆಟ್ ಬ್ಯಾಟ್... ಸಾಕೇ ? ಮತ್ತೂ ಅದೇ ಅದೇ ಕೇಳಿ ಕೇಳಿ ಕಿವಿ ಕಿವುಡಾಗಿ ಹೋಯ್ತು" ಮಾತು ಖಾರವಾಗಿತ್ತು.

ಅದಕ್ಕೆ ಸಾವಿತ್ರಿಯ ಕಣ್ಣಲ್ಲಿ ನೀರಾಡಿತು. "ನೀವು ಹೀಗಂತೀರಿ ಅಂತ ನನಗೂ ಗೊತ್ತು ಏನ್ಮಾಡೋಕಾಗುತ್ತೆ? ನಾವು ಬೇಡಿ ಬಂದದ್ದೇ ಇಷ್ಟು. ತಲೆಗಿದ್ದರೆ ಕಾಲಿಗಿಲ್ಲ, ಕಾಲಿಗಿದ್ದರೆ ತಲೆಗಿಲ್ಲ. ಸರೀಕದವರಲ್ಲಿ ಸದರವಾಗಿ ನಡೆಯೋಹಾಗಿಲ್ಲ. ನಿಮಗಿಂತ ಕಡಿಮೆ ಸಂಬಳದವರು ಎಷ್ಟು ಚೆನ್ನಾಗಿ ಜೀವನಾ ಮಾಡ್ತಾರೆ. ಕೈಲಾಗದವರು ನೀವು" ಎಂದಾಗ ಆತನಿಗೆ ಸಾವಿತ್ರಿಯ ಮೇಲೆ ಕೋಪದ ಬದಲು ಕನಿಕರ ಹುಟ್ಟಿತು.

"ಏ ಸಾವಿತ್ರಿ, ಆ ಪಶುಪತಿರಾಯ ಹಾವಿನ ಗೆಳೆತನ ಮಾಡಿ ಹುತ್ತಿನೊಳಗ ಕೈ ಇಟ್ಟಾನ. ಈಗೇನೋ ನಾಗರಾಜ ರತ್ನಾ ಕೊಟ್ಟಾನ. ಆದ್ರ ಯಾವಾಗ ಕಡಿತಾನೋ ಹೇಳಲಿಕ್ಕೆ ಬರೂದಿಲ್ಲ. ನಮಗೆ ಮಾತ್ರ ಆ ಹೆದರಿಕೀನ ಇಲ್ಲ. ನಮಗಿಷ್ಟು ಸಾಕು ನೋಡು. "

ಸಾವಿತ್ರಿಯ ಅಳು ಅವಳ ಸಿಂಗಾರವನ್ನೆಲ್ಲ ಕೆಡಿಸಿತು. ಅಡಿಗೆಮನೆ ಸೇರಿದ ಅವಳನ್ನು ಹಿಂಬಾಲಿಸದೆ ಚಂದ್ರಣ್ಣ ಹೊರಗಿನ ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡ. ರಾತ್ರಿ ಇಬ್ಬರೂ ಊಟ ಮಾಡಲಿಲ್ಲ.

* * *

ದೊಡ್ಡ ಸಾಹೇಬರಿಂದ ಮಂಗಳಾರತಿ ಮಾಡಿಸಿಕೊಂಡು ಸಪ್ಪೆ ಮುಖದಿಂದ ಹೊರಬಂದ ಚಂದ್ರಣ್ಣನ ಭುಜ ತಟ್ಟಿದರು ಹೆಡ್ ಕ್ಲಾರ್ಕ್ ಹನುಮಂತಪ್ಪನವರು. "ಯಾಕ್ರೀ ದೇಸಾಯರ, ಹಿಂಗ್ಯಾಕ ಮಾರೀ ಮಾಡೀರಿ? ಸಾಹೇಬರು ಅಂದದ್ದೆಲ್ಲಾ ಮನಸ್ಸಿಗೆ ಅಷ್ಟು ಹಚ್ಚಿಕೋಬಾರದ್ರಪಾ."

"ಇಲ್ರೀ, ಅದನೇನಷ್ಟ ಸೀರಿಯಸ್ ತಗೊಂಡಿಲ್ಲ ನಾನು. ಯಾಕೋ ಮುಂಜಾನಿಯಿಂದ ತಲಿ ನೋಯ್ತಿತ್ತು; ಮನಸಿಗನೂ ಅಷ್ಟು ಸ್ವಸ್ಥ ಇಲ್ಲಾ."

"ನೆಗಡಿ, ಕೆಮ್ಮು ಏನರೆ ಸುರು ಆಗ್ತದೊ ಏನೊ. ತಲೆನೋವಿನ ಗುಳಿಗೀ ತರಸ್ತೀನಿ ಬರ್ರೀ; ಚಹಾ ಕುಡಿದು ಬರೋಣ" ಎಂದವರೇ ತಲೆಯಮೇಲೆ ಟೊಪ್ಪಿಗೆಯನ್ನು ಧರಿಸಿ ಕುರ್ಚಿಗೆ ತಗುಲಿಸಿದ ಕೋಟನ್ನು ಹೆಗಲಿಗೇರಿಸಿದರು.

ಬಿಸಿ ಬಿಸಿ ಚಹದೊಡನೆ ಅವರ ಸರಸದ ಮಾತುಕತೆಯೂ ಸೇರಿ ಚಂದ್ರಣ್ಣನ ಮನಕ್ಕೆ ಹರ್ಷವಾಯಿತು. "ನೋಡ್ರೆಪಾ, ಈಗ ಹಣೀಗಂಟು ಬಿಚ್ಚಿದಿರಿ, ನಿಮ್ಮ ತಲೆನೋವೆಲ್ಲಾ ಸುಳ್ಳು ಅಂತ ನನಗನಸ್ತದ. ನೀವೇನೋ ಚಿಂತಿ ಮಾಡ್ಲಿಕ್ಹತ್ತೀರಿ ಅಂತ ಕಾಣಿಸ್ತದೆ. ನಮಗಷ್ಟು ಹೇಳ್ರೆಲಾ, ಏನದು ವಿಷಯಾ ?"

"ಏನಿಲ್ಲಾ, ಹೀಂಗs ಏನೊ ತಾಪತ್ರಯಾ."

"ಬಿಡ್ರೀ, ಇಷ್ಟಕ್ಕೆಲ್ಲಾ ವೀವು ಹೆದರೋವ್ರಲ್ಲ; ನನಗೆ ಗೊತ್ತಿಲ್ಲೇನು ನಿಮ್ಮ ಸ್ವಭಾವ ? ಇನ್ನೂ ಮಕ್ಕಳಾಗಲಿಲ್ಲಂತ ಕಾಳಜೀ ಮಾಡ್ತೀರೇನು? ಆಗ್ತಾವೇಳ್ರಿ ಇನ್ನೊಂದೆರಡು ವರ್ಷ ಆರಾಮ ಇರ್ರೀ. ಆದರ ನಮ್ಮ್ಹಂಗ ದಡ್ಡರಾಗ ಬ್ಯಾಡ್ರೆಪಾ. ಮಿತ ಕುಟುಂಬ ಸಾಧಿಸಿ ಸುಖದಿಂದ ಇರ್ರಿ" ಎನ್ನುತ್ತ ಖೊಳ್ಳನೇ ನಕ್ಕರು ಹನುಮಂತಪ್ಪ.

ಅವರ ವಿಚಾರದ ಧಾಟಿ ನೋಡಿ ಚಂದ್ರಣ್ಣನಿಗೆ ನಗು ಬಂದಿತಾದರೂ ಇದ್ದೊಬ್ಬ ಹೆಂಡತಿಯನ್ನು ಸಮಾಧಾನಪಡಿಸುವ ಚಿಂತೆಯೇ ತನಗೆ ಹತ್ತಿರುವಾಗ ಇನ್ನು ಮಕ್ಕಳಾದರೆ ಗತಿಯೇನು ? ಎಂದು ಯೋಚಿಸಿ ಮತ್ತೆ ಖಿನ್ನನಾದ.

"ನೋಡ್ರಿ ಮತ್ತ ಮುಖಾ ಸಪ್ಪಗಾತು. ಏನಾಗೇದರ ಹೇಳಬಾರ್ದ. ನನ್ನ ಮುಂದ ಹೇಳ್ದ ಯಾರ ಮುಂದ ಹೇಳ್ತೀರಿ? ಆಂ .... ಆಂ... ಮನೆಯೊಳಗೇನರೆ ಜಗಳ-ಗಿಗಳ ಆಗೇದೇನು ಮತ್ತ? ಹೇಳ್ರಿ ನೋಡೋಣ, ನಿಮ್ಮ ಚಿಂತೆಗೆ ಏನಾದ್ರೂ ಪರಿಹಾರ ಇದ್ರ ಹುಡುಕೋಣ" ಎಂದರು. ವಾತ್ಸಲ್ಯದ ದನಿಯಲ್ಲಿ.

ಅವರ ಪ್ರೀತಿಗೆ ಕಟ್ಟುಬಿದ್ದು, ಹಿಂದಿನ ದಿನ ಸಾವಿತ್ರಿಗೂ ತನಗೂ ಆದ ಮನಸ್ತಾಪದ ಬಗ್ಗೆ ಹೇಳಿದ. "ಹೀಂಗ ಮ್ಯಾಲಿಂದ ಮ್ಯಾಲೆ ಜಗಳಾ ಮಾಡಿದರೆ ನಾ ಏನು ಮಾಡಬೇಕೋ ತಿಳೀವೊಲ್ಲದು. ಅವಳು ಹೇಳಿದಾಂಗ ಹಣಾ ಗಳಿಸಲಿಕ್ಕೆಅಡ್ಡದಾರಿ ಹಿಡೀಲಿಕ್ಕೆ ನನ್ನ ಮನಸ್ಸು ಒಪ್ಪುತ್ತಿಲ್ಲ. ಮನಿಯೊಳಗ ರಸಕಸಿ ಇದ್ರ ಮನಸಿಗೆ ಸಮಾಧಾನ ಇರೋದಿಲ್ಲ. ಆಫೀಸ ಕೆಲಸ ಆಗೂದಿಲ್ಲ ಮತ್ತೇನು? ಸಾಹೇಬರಿಂದ ಬೈಗಳಾ ತಿನ್ನಬೇಕು. ಕೆಲ್ಸ ಕೆಟ್ರ ನನಗ ಪ್ರಮೋಶನ್ನಾದ್ರೂ ಹೆಂಗ ಸಿಗತದ? ಇದ್ಯಾವ್ದೂ ಸಾವಿತ್ರಿಗೆ ತಿಳಿಯೋದೇ ಇಲ್ಲ. ಏನ ಮಾಡ್ಲಿ ನಾನರೆ ?" ಕೊನೆಯ ಮಾತುಗಳು ಬಹಳ ಬೇಸರದಿಂದ ಬಂದಿದ್ದವು.

"ನಿಮ್ಮ ಹೆಂಡತಿ ಉಳಿದ ಎಲ್ಲಾ ವಿಷಯದೊಳಗ ಹ್ಯಾಂಗರಿ ?"

"ಭೇ ಬಾರೀ ಒಳ್ಳೇಯವಳು ಬಿಡ್ರಿ. ಆದ್ರ ಸರೀಕದವರ್ಹ್ಹಂಗ ತಾನೂ ಮಾಡಬೇಕು ಅನ್ನೋ ಹುಚ್ಚು ಒಂದದ ನೋಡ್ರಿ. ಅದರಿಂದ ಇಷ್ಟೆಲ್ಲಾ...."

"ಹಟಮಾರಿತನಾನೂ ಭಾಳೇನ್ರಿ ಮತ್ತೆ ?"

"ಹಂಗೇನೀಲ್ರಿ, ನಾನು ಸ್ವಲ್ಪ ಕಠಿಣ ಆಗಿ ಮಾತಾಡಿದ್ರೆ ಸಾಕು ಕಣ್ಣೀರ ಹಾಕ್ತಾಳ. ನನಗ ಭಾಳ ಕೆಟ್ಟ ಅನಿಸತದೆ ನೋಡ್ರಿ.. ಆಕಿ ಹೇಳಿದ್ದು ತಂದು ಕೊಡ್ಲಿಕ್ಕೆ ನನಗಾಗೂದಿಲ್ಲಲ್ಲಾ ಅಂತ. ಆದ್ರೂ ನಾನೇನೂ ಆಕಿಗೆ ಕಡಿಮಿ ಮಾಡಿಲ್ಲಾ ಮಾಡೋದೂ ಇಲ್ಲಾ."

ಚಹ ಗುಟುಕರಿಸುತ್ತಿದ್ದ ಹನುಮಂತಪ್ಪನವರು ಸಮಸ್ಯೆ ಬಗೆಹರಿದಂತೆ ಚಟ್ಟನೇ ಇದ್ದರು.

* * *

"ಏಳು ಗಂಟೆ ಆಗಿಹೋಯ್ತು ಇನ್ನೂ ಬರಲಿಲ್ಲವಲ್ಲಾ ಇವರು, ಯಾಕಿಷ್ಟು ಲೇಟ್ ಮಾಡಿದರೊ ? ಬೆಳಿಗ್ಗೆ ಸರಿಯಾಗಿ ಊಟಾನೂ ಮಾಡಿಲ್ಲ. ನಾನೂ ಸರಿಯಾಗಿ ಮಾತಾಡ್ಲೂ ಇಲ್ಲ. ನಿನ್ನೆ ರಾತ್ರಿಯಿಂದ ಇಬ್ಬರಿಗೂ ಮಾತೇ ಇಲ್ಲ. ಇಬ್ಬರ ಮುಖವೂ ಒಂದೊಂದು ದಿಕ್ಕಿಗೆ ಆದಹಾಗೆ ಆಗಿದೆ. ನಾನಾದರೂ ಏನು ಮಾಡಲಿ ? ಪದ್ಮಮ್ಮ ಇಷ್ಟೆಲ್ಲಾ ಸಿಂಗಾರ ಮಾಡ್ಕೊಂಡು ನಮ್ಮುಂದ ಮೆರೆದಾಡುವಾಗ ನಾನೂ ಒಂದೆರಡಾದರೂ ಕೇಳಬಾರದಾ?" ಯೋಚಿಸುತ್ತ ಬಾಗಿಲಲ್ಲೇ ನಿಂತು ನಿಂತು ಸಾವಿತ್ರಿಯ ಕಾಲು ಸೋತು ಹೋದವು. ಬೇರೆ ಯಾರೋ ನಮ್ಮನೆಗ ಬರ್ತಿದ್ದಾರಲ್ಲ. ಪರಿಚಯವಿಲ್ಲದವರು! ಎಂದುಕೊಳ್ಳುತ್ತ ಒಳಕ್ಕೆ ಸರಿದ ಸಾವಿತ್ರಿ,

"ಬನ್ನಿ ಅವರು ಅನ್ನೂ ಆಫೀಸಿನಿಂದ ಬಂದೇ ಇಲ್ಲ. ನೀವು.....?' ಎಂದಳು.

"ನನ್ನ ಹೆಸರು ಹನುಮಂತಪ್ಪ. ನಿಮ್ಮವರ ಆಫೀಸಿನೊಳಗ ಕೆಲಸಾ ಮಾಡ್ತೀನಿ ನಾನು."

"ಬನ್ನಿ ಕುತ್ಕೊಳ್ಳಿ. ಈಗ ಬರ್ತಾರ, ಅವರು. ಸ್ವಲ್ಪ ಟೀ ಮಾಡ್ತೀನಿ."

"ಬ್ಯಾಡ್ರಿ ಈಗೇನೂ ಚಹಾ ಬ್ಯಾಡ. ನಿಮಗೊಂದು ಮಾತು ಹೇಳೋದಿತ್ತು,. ಅದಕ್ಕೆ ಬಂದೆ."

"ಹೇಳ್ರಿ, ಏನದು? ಹೇಳ್ರಿ. ಅವರೂ ಬಂದಿದ್ರೇ ಚೆನ್ನಾಗಿತ್ತು, ಇವತ್ತೇ ಯಾಕೋ ಲೇಟ್ ಮಾಡಿದ್ರು."

"ನಿಮ್ಮ ಹೆಸರು ಸಾವಿತ್ರಿ ಅಂತ ಯಜಮಾನ್ರು ಹೇಳತಿದ್ರು..... ಅಲ್ರಿ ಸಾವಿತ್ರಕ್ಕಾ ನಿಮ್ಮ ಯಜಮಾನರು...."

"ಹೇಳ್ರಿ ಏನಾತು ಬೇಗ ಹೇಳ್ರಿ" ಆತಂಕದಿಂದ ಕೇಳಿದಳು ಸಾವಿತ್ರಿ.

"ನಿಮ್ಮ ಯಜಮಾನರು ಇವತ್ತು ಮನೀಗೆ ಬರೋದಿಲ್ಲಾ!"

"ಯಾಕ ಏನಾಯ್ತು? ಯಾಕ ಬರೋದಿಲ್ಲಾ ? ಟೂರಿಗೇನಾದ್ರೂ ಹೋದ್ರೇನು ? ಅಯ್ಯೋ ನಾನೆಷ್ಟು ಗಾಬರಿಯಾಗಿದ್ದೆ?" ಎಂದಳು ಸಾವಿತ್ರಿ ನಗುತ್ತ.

"ಅವರು ಟೂರಿಗೆ ಹೋಗಿಲ್ಲ. ಅಂ.... ಹುಂ.... ನಾ ಹ್ಯಾಂಗ ಹೇಳಲಿ ಅದನ್ನ?"

"ಮತ್ತೆ ಎಲ್ಲಿ ಇದ್ದಾರೆ ಹೇಳ್ರಿ. ಅವರು? ನನ್ನ ಮನಸ್ಸಿನಲ್ಲಿ ಹ್ಯಾಗ್ಯಾಗೋ ಆಗ್ತಾ ಇದೆ. ಬೇಗ ಹೇಳಿ" ಒತ್ತಾಯಿಸಿದಳು.

"ಅವರು ಇವತ್ತ ಮಧ್ಯಾಹ್ನ ಆಫೀಸಿನ್ಯಾಗ ಒಬ್ಬರ ಕಡೆಯಿಂದ ೫೦ ರೂಪಾಯಿ ಲಂಚ ತಗೊಳ್ಳೋ ಮುಂದೆ ಸಿಕ್ಕಿಬಿದ್ದರು. ಲಂಚನಿರೋಧ ಶಾಖೆಯವರು ಅವರನ್ನ ಹಿಡಿದ್ರು. ಈಗವರು ಪೋಲಿಸರ ತಾಬೇದೊಳಗ ಇದ್ದಾರ."

"ಅಯ್ಯೋ ಇದೇನಾತ್ರಿ... ಅವರು ಎಂದೂ ಲಂಚಾ ಮುಟ್ಟೋವ್ರಲ್ಲಾ. ಅವರೆಂದೂ ತಗೊಳ್ಳೊ ಮುಂದೆ ಸಿಕ್ಕಿಬಿದ್ದು. ಲಂಚನಿರೋಧ ಶಾಖೆಯವರು ಅವರನ್ನ ಹಿಡಿದ್ರು. ಈಗವರು ಪೋಲೀಸರ ತಾಬೇದೊಳಗ ಇದ್ದಾರ".

"ಅಯ್ಯೋ ಇದೇನಾಯಿತ್ರಿ ,,,, ಅವರು ಎಂದೂ ಲಂಚಾ ಮುಟ್ಟೋವ್ರಲ್ಲಾ, ಅವರೆಂದೂ ಹಾಗೆ ಮಾಡೋವ್ರಲ್ಲಾ, ದೇವರಾಣೆಗೂ ತಪ್ಪು ತಿಳಿದು ಹಿಡಿದಿರಬೇಕು ಅವರನ್ನು."

"ಇಲ್ರಿ, ದೇಸಾಯರು ಲಂಚಾ ತೊಗೊಳ್ಳೋ ಮುಂದೆ ಸಿಕ್ಕಾರ. ಅದಕ್ಕ ನಮ್ಮ ಸಾಹೇಬರು ಅವರ ಮನೀಗೆ ಹೋಗಿ ಹೇಳಿಬರ್ರಿ ಅಂದ್ರು, ಆಯ್ತು ನಾನಿನ್ನು ಹೊರಡ್ತೀನಿ."

"ನಿಲ್ರಿ ಸ್ವಲ್ಪ ಹೋಗಬ್ಯಾಡ್ರಿ. ನೀವು ನನಗಿಂತ್ಲೂ ಹಿರಿಯರು. ನನಗೆ ಅಣ್ಣನ ಸಮಾನ. ಅವರನ್ನ ದಯವಿಟ್ಟು ಬಿಡಿಸಿಕೊಂಡು ಬರ್ರಿ. ನನಗೆ ಇದೊಂದು ದೊಡ್ಡ ಉಪಕಾರ ಮಾಡ್ರಿ" ಅಂಗಲಾಚಿದಳು ಸಾವಿತ್ರಿ.

"ನಮಗೆ ಹಾಂಗೆಲ್ಲಾ ಮಾಡಲಿಕ್ಕೆ ಬರೂದಿಲ್ರೆವಾ; ದೇಸಾಯರು ಒಪ್ಪಿಕೊಂಡು ಬಿಟ್ಟಾರ ನನ್ನ ಹೆಂಡ್ತಿ ಸಾಮಾನು ಬೇಕು, ವಸ್ತ್ರ ಬೇಕು, ಸೀರೆ ಬೇಕು ಅಂತ ಹಗಲೆಲ್ಲಾ ಜಗಳಾಡುತ್ತಿದ್ದಳು. ನನ್ನ ಸಂಬಳ ಇದಕ್ಕೆಲ್ಲಾ ಸಾಲತಿದ್ದಿಲ್ಲ. ಅದರ ಸಲುವಾಗೇ ನಾನು ಲಂಚಾ ತೊಗೊಂಡೆ, ಅಂತ. ಇವರೊಳಗ ನಾವೇನು ಮಾಡಲಿಕ್ಕೆ ಬರತದ ನೋಡ್ರಿ?" ನಿಟ್ಟುಸಿರುಬಿಟ್ಟರು ಹನುಮಂತಪ್ಪನವರು.

"ಹೌದ್ರೀ, ನಂದೇ ತಪ್ಪು. ಅವರು ದೇವರಂಥವರು. ಬಹಳ ಒಳ್ಳೇಯವರು. ನಾನೇ ಅದು ಬೇಕು, ಇದು ಬೇಕು ಅಂತ ಆಸೆಪಟ್ಟವಳು. ಅವರು ಇರೊದರಲ್ಲೇ ತೃಪ್ತಿಯಿಂದಿರಬೇಕು ಅನ್ನುವವರು. ನಾನೇ ಅವರನ್ನ ಹಣಕ್ಕೆ ಪೀಡಿಸಿದೆ. ದೇವರು ನನಗೆ ಶಿಕ್ಷೆ ಕೊಟ್ಟ. ನಾನೇನು ಮಾಡ್ಲೀಗ? ಸತ್ಯವಂತರನ್ನ ಜೇಲಿಗೆ ಅಟ್ಟೋ ಹಾಗೆ ಆಯ್ತಲ್ಲ. ನಂದೇ ತಪ್ಪು. ಇನ್ನೊಮ್ಮೆ ಎಂದೂ ಹೀಗೆಲ್ಲ ಮಾಡೋಲ್ಲ." ಬಿಕ್ಕಿ ಬಿಕ್ಕಿ ಅಳಹತ್ತಿದಳು ಸಾವಿತ್ರಿ.

ಒಂದೆರಡು ನಿಮಿಷ ಅವಳನ್ನೇ ನೋಡುತ್ತಿದ್ದ ಹನುಮಂತಪ್ಪ ಮರುಕದಿಂದ,

"ತಂಗೀ ಅಳಬ್ಯಾಡ್ರಿ. ಸಮಾಧಾನ ತೊಗೊಳ್ರಿ. ಇನ್ನೂ ಮಾತು ಮಿಕ್ಕಿಲ್ಲ. ಏನರೆ ಪ್ರಯತ್ನ ಮಾಡೋಣ. ನೀವು ಹೆಣ್ಣುಮಕ್ಕಳು. ಹೊರಗೆ ಬರೋದು ಛಲೋ ಅಲ್ಲ. ಇಲ್ಲಿಂದಲೇ ದೊಡ್ಡ ಸಾಹೇಬರಿಗೆ ವಿನಂತಿ ಮಾಡಿಕೊಂಡು ಒಂದ ಕಾಗದಾ ಬರದ ಕೊಡ್ರಿ. ನಾನು ಸಿಪಾಯಿ ಸಿದ್ದನ ಕೈಲೆ ಆಫೀಸರರಿಗೆ ಕಳಸ್ತೀನಿ. ಅವರಿಗೆ ದೇಸಾಯರ ಬಗ್ಗೆ ಛಲೋ ಅಭಿಪ್ರಾಯ ಅದ. ಇದ ಮೊದಲ್ನೇ ಸಾರೆ ಲಂಚ ತೆಗೆದುಕೊಂಡಿದ್ದು ಅನ್ನೋ ಕಾರಣದಿಂದ ಲಂಚನಿರೋಧ ಶಾಖೆಯವರಿಗೆ ಹೇಳಿ ನಿಮ್ಮ ಯಜಮಾನರನ್ನ ಬಿಡುಗಡೆ ಮಾಡಿಸಿ ಕಳಸ್ತಾರ. ಲಗೂ ಪತ್ರಾ ಬರೀರಿ" ಎಂದರು.

"ತಗೊಳ್ರಿ, ಬರೆದುಕೊಡ್ತೀನಿ. ಅವರು ತಿರುಗಿ ಮನೆಗೆ ಬಂದರೆ ಸಾಕು. ನನ್ನ ಹೋದ ಜೀವ ಬಂದ್ಹಾಗೆ ಆಗುತ್ತೆ. ನೀವು ದೇವರ ಹಾಗೆ ಬಂದು ಕಾಪಾಡಿದಿರಿ. ಅವರನ್ನು ಇನ್ನುಮೇಲೆ ಎಂದೂ ಕಾಡುವುದಿಲ್ಲ."

ಸಿದ್ದ ಕಾಗದ ಒಯ್ದ ಮೇಲೆ "ಈಗ ಬರ್ತಾರೆ ನಿಮ್ಮ ಯಜಮಾನರು. ನೀವು ಮುಖಾ ತೊಳೆದುಕೊಂಡು ಚಹಾಕ್ಕಿಡ್ರಿ. ಇನ್ನು ಕುಡದೇ ಹೋಗ್ತೀನಿ, ನಾನೂ" ಎಂದು ಮೀಸೆಯಲ್ಲೇ ನಕ್ಕರು ಹನುಮಂತಪ್ಪ.

"ಬರ್ರೀ ದೇಸಾಯರs ಬರ್ರಿ" ಚಂದ್ರಣ್ಣನನ್ನು ಸ್ವಾಗತಿಸಿದರು ಹನುಮಂತಪ್ಪ. ಸಾವಿತ್ರಿ ಮುಖ ತೊಳೆದು ಬಂದಿದ್ದರೂ ಅವನನ್ನು ನೋಡಿದೊಡನೆಯೇ ಮತ್ತೆ ಕಣ್ಣುತುಂಬಿ ಬಂತು. ಕಣ್ಣೀರು ಒರೆಸುತ್ತ ಸಾವಿತ್ರಿ ಚಹಾ ತರಲು ಒಳಗೆ ನಡೆದಳು.

"ನಾಟಕದ ಯಶಸ್ಸಿಗೆ ಅಭಿನಂದನೆಗಳು" ಎಂದು ಹೇಳಿ ಚಂದ್ರಣ್ಣ ಹನುಮಂತಪ್ಪನವರ ಕೈ ಹಿಡಿದುಕೊಂಡ ತುಂಬು ಹೃದಯದಿಂದ.

* * *

# ಸತ್ಕಾರ

ನಾಲ್ಕಾರು ದಿನಗಳಿಂದ ನನ್ನ ನಾಲ್ಕನೆಯ ಮಗನಿಗೆ ಜ್ವರ ಬರುತ್ತಿತ್ತು. ಹತ್ತಿರ ಕರೆದುಕೊಂಡರೆ ಮೈ ಎಲ್ಲಾ ಕೆಂಡ ಮುಟ್ಟಿದಂತಾಗುತ್ತಿತ್ತು. ನೆರೆಮನೆ ಅಜ್ಜಿ ನಾಲ್ಕನೆಯ ದಿನ ಅವನ ಮುಖ ನೋಡಿ ಹೇಳಿದ್ದಳು; 'ಗೊಬ್ಬರ ಏಳ್ತದ' ಎಂದು ಗೊಬ್ಬರಕ್ಕ ಔಷಧಿ ಯಾಕೆ ಎಂದು ನಾನೂ ಸುಮ್ಮನಾದೆ. ಆ ರಾತ್ರಿ ನನ್ನ ಗರ್ಭಿಣಿ ಹೆಂಡತಿಗೆ ಸಹಾಯವಾಗಿ ನಾನೂ ಎಚ್ಚತ್ತಿದ್ದು ಅವನನ್ನು ನೋಡಿಕೊಂಡೆ. ರಾತ್ರಿ ನಿದ್ದೆ ಇರಲಿಲ್ಲ. ಬೆಳಿಗ್ಗೆ ಬೇಗ ಎದ್ದು ಸಹೇಬರ ಮನೆಗೆ ಹೋಗಬೇಕಾಗಿತ್ತು. ತಡವಾಗಿ ಎದ್ದೆ. ಅವಸರದಲ್ಲಿ ಚಹವನ್ನೂ ಕುಡಿಯದೆ ಸಾಹೇಬರ ಮನೆಗೆ ಓಡಿದೆ. ಗ್ಯಾರೇಜಿನ ಕೀಲಿಕೈ ಇಸಿದುಕೊಂಡು ಬೇಗ ಬೇಗ ಕಾರು ಒರೆಸಿ ತಂದು ಮನೆಯ ಮುಂಬಾಗಿಲಿಗೆ ನಿಲ್ಲಿಸಿದೆ. ನನ್ನ ಮೊದಲನೆಯ ಕೆಲಸ ಸಾಹೇಬರ ಪುಟ್ಟ ಮಗಳು ರಾಣಿಯನ್ನು ಕಾನ್ವೆಂಟಿಗೆ ಕರೆದೊಯ್ಯುವದು. ದಿನವೂ ನನ್ನಿಂದಲೇ ಶೂ ಹಾಕಿಸಿಕೊಳ್ಳುತ್ತಿದ್ದ ರಾಣಿ ಇಂದು ತಡವಾದುದಕ್ಕೆ ಎಲ್ಲ ತಯಾರಾಗಿ ಪಾಟಿಚೀಲ ಹೆಗಲಿಗೇರಿಸಿ ನಿಂತಿದ್ದಳು. ಹಿಂದಿನ ಬಾಗಿಲು ತೆರೆದು ಅವಳನ್ನು ಕೂಡಿಸಿ ನನ್ನ ಸೀಟಿಗೆ ಬಂದು ಕುಳಿತೆ. ರಾಣಿ ಕೂಡಲೆ ಮುಂದೆ ಬಾಗಿ ನನ್ನ ಬೆನ್ನಮೇಲೊಂದು ಗುದ್ದಿ,

"ಏ ಬಾಬೂ, ಎಷ್ಟೊತ್ತು ಮಾಡಿದೆ ಬರೋಕೆ? ಸ್ಕೂಲಿಗೆ ಲೇಟಾಯ್ತು ನಿದ್ದೆ ಮಾಡ್ತಿದ್ದೇನು ?" ಎಂದಳು.

"ಇಲ್ರೀ ಬೇಬಿಽಽ, ನನ್ನ ಮಗನಿಗೆ ಜ್ವರ ಬಂದಿತ್ತು. ರಾತ್ರಿ ಎಲ್ಲಾ ನಿದ್ದೀ ಮಾಡಿದ್ದಿಲ್ಲಾ ಅದಕ್ಕಽ ಮುಂಜಾನೆ ಲಗೂನ ಎಚ್ಚರಾಗಲಿಲ್ಲ."

"ಅಯ್ಯಽ ಪಾಪಽ. ಜ್ವರಾ ಬಂದಿತ್ತಾಽ. ಔಷಧಾ ತಂದು ಕುಡಿಸು. ಕಮ್ಮಿ ಆಗ್ತದ. ಆದರ ಪೆಪ್ಪರಮೆಂಟು ತಿನಿಸು, ಅಂದರಽ ಪಾಪ ಔಷಧ ಕುಡೀತದ. ಬೇಕಾದರ ನಾ ಕೊಡ್ತೀನಿ ಹಿಡಿ ಇಲ್ಲೆ. ಮಮ್ಮಿ ನನಗ ಕೊಟ್ಟಾಳ." ಚೀಲ ಬಿಚ್ಚುತ್ತಿದ್ದ ರಾಣಿಯನ್ನು ನೋಡಿ ನನ್ನ ಗಂಟಲು ಹಿಡಿಯಿತು. ಮಾತೇ ಬರಲಿಲ್ಲ. ಅವಳು ಕೊಟ್ಟ ಪೆಪರಮೆಂಟು ಇಸಿದುಕೊಂಡು ಕಾನ್ವೆಂಟ್ ಗೇಟಿನ ಮುಂದೆ ಕಾರು ನಿಲ್ಲಿಸಿದೆ.

"ಬರೋಬರಿ ೧೨ ಗಂಟೇಕ್ಕ ಬಾ. ಹೋಗು ಇನ್ನ . ಬೈ ಬೈ."

ಮಧ್ಯಾಹ್ನ ಮನೆಗೆ ಹೋಗಲೂ ಪುರುಸೊತ್ತು ಸಿಗಲಾರದಷ್ಟು ಕೆಲಸ. ಬೆಳಿಗ್ಗೆ ತಡವಾಗಿ ಬಂದುದಕ್ಕೆ ಸಾಕಷ್ಟು ಬೈಗಳು ತಿಂದೆ. ಈಗ ಕೆಲ ದಿನಗಳಿಂದಲೂ ಸಾಹೇಬರಿಗೆ, ಅಮ್ಮಾವರಿಗೆ ವಿಪರೀತ ಕೆಲಸ. ಮನೆಯಲ್ಲಿರಲು ಬಿಡುವೇ ಇಲ್ಲ. ದಿನವೂ ಹೊರಗೆ ಹೋಗುವುದು ಬರುವದು ನಡೆದೇ ಇತ್ತು. ಒಂದೊಂದು ದಿನ ಮೂರು-ನಾಲ್ಕು ಮನೆಗಳಿಂದ ಆಮಂತ್ರಣ. ಚಹ ಅಥವಾ ಭೋಜನಕೂಟ, ಸತ್ಕಾರ, ಭಾಷಣಗಳ ಸುರಿಮಳೆ. ಅವರು ವಿದೇಶ ಪ್ರಯಾಣ ಹೊರಡುವ ದಿನ ಸಮೀಪಿಸಿತ್ತು. ಪೇಟೆಗೆ ಹೋಗುವದು, ಬಟ್ಟೆ-ಬರೆ ಹೊಲಿಯಲು ಹಾಕುವುದು, ಬೇಕಾದ ಪದಾರ್ಥಗಳನ್ನು ಕೊಳ್ಳುವದು, ಸ್ನೇಹಿತರನ್ನು ಭೇಟ್ಟಿಯಾಗುವುದು, ಬಂಧು-ಬಳಗದವರು ಊರಿಂದ ಬರುವುದು, ಹೋಗುವುದು ಗದ್ದಲ ಅಂದರೆ ಅಸಾಧ್ಯ ಗದ್ದಲ. ಮನೆಯ ಆಳುಕಾಳುಗಳಿಗೆ ಒಂದು ನಿಮಿಷವೂ ಪುರುಸೊತ್ತಿಲ್ಲದಷ್ಟು ಕೆಲಸ. ಮನೆಯವರಿಗೇನೋ ಸಂಭ್ರಮ ಸಡಗರ. ಆದರೆ ಮನೆಯಲ್ಲಿ ಜ್ವರದಿಂದ ಮಲಗಿರುವ ಮಗನ ನೆನಪಾದೊಡನೆ ನನ್ನ ಹೊಟ್ಟೆಯಲ್ಲಿ ಕಸಿವಿಸಿ. ಸಂಬಳಕ್ಕೆ ಕೆಲಸ ಮಾಡುವ ಬಡವ ನಾನು. ಏನಾದರೇನು ಅವರು ಹೇಳಿದಷ್ಟು ಹೊತ್ತು ಅವರ ಮನೆ ಬಾಗಿಲುಕಾಯುತ್ತ ಬಿದ್ದಿರಬೇಕಲ್ಲ. ಇಂದು ಊಟಕ್ಕೂ ಬಿಡಲಿಲ್ಲ. ಬೆಳಿಗ್ಗೆ ಏನೂ ತಿನ್ನದೇ ಬಂದಿದ್ದೆ. ಹೊಟ್ಟೆ ಚುರುಗುಟ್ಟುತ್ತಿತ್ತು. ಮಧ್ಯಾಹ್ನ ಒಂದು ಗಂಟೆಗೆ ಅಡಿಗೆಯವ ಕರೆದು ಊಟಕ್ಕೆ ಹಾಕಿದಾಗ ಎಲೆಯಲ್ಲಿ ಒಂದು ಅಗಳೂ ಬಿಡದಂತೆ ಊಟ ಮಾಡಿದೆ. ಒಂದು ಬೀಡಿ ಹಚ್ಚಿ ಹಾಽಗೇ

ಮರದ ನೆರಳಿನಲ್ಲಿ ಅಡ್ಡಾಗಿದ್ದೆ. ಮತ್ತೆ ಸಾಹೇಬರಿಂದ ಬುಲಾವು ಬಂತು. 'ಅಮ್ಮಾ ಅವರ ಅಣ್ಣಾ ಊರಿಗೆ ಹೋಗ್ತಾರೆ. ಬಸ್‌ಸ್ಟ್ಯಾಂಡಿಗೆ ಹೋಗಿ ಬಾ' ಎಂದರು. ಅವರನ್ನು ಕಾರಿನಲ್ಲಿ ಕರೆದುಕೊಂಡು ಹೊರಬಿಟ್ಟು ಬರುವಷ್ಟರಲ್ಲಿ ಸಾಹೇಬರೂ ಅಮ್ಮಾ ಅವರೂ ತಯಾರಾಗಿ ಬಂದರು. ಮೊದಲು ಒಂದೆರಡು ಕಡೆಗೆ ಉಪಾಹಾರ, ಮಾತುಕತೆಯಾದ ಮೇಲೆ ಸಭಾಸ್ಥಾನಕ್ಕೆ ಕಾರು ಬಿಡಲು ಹೇಳಿದರು. ಜನಸಂದಣಿ ಸಾಕಷ್ಟಿತ್ತು. ಕಾರುಗಳೂ ಇದ್ದವು.

ಚರ್ಮದ ಚೀಲ ಹಿಡಿದ ಸೂಟುಧಾರಿಗಳೊಬ್ಬರು ಅವಸರದಿಂದ ಓಡಿ ಬಂದು ಸಾಹೇಬರನ್ನು ಅಮ್ಮಾವರನ್ನೂ ಸ್ವಾಗತಿಸಿ ಸಭಾಭವನಕ್ಕೆ ಕರೆದುಕೊಂಡು ಹೋದರು. ನಾನೂ ಒಳಗೆ ಇಣುಕಿದೆ. ಮುಚ್ಚುಕೋಟಿನ ದಪ್ಪನೆಯ ಮನುಷ್ಯರೊಬ್ಬರು ನಡುವಿನ ಕುರ್ಚಿಯಲ್ಲಿ ಹಿಡಿಸಲಾರದಂತೆ ಕುಳಿತಿದ್ದರು. ಅವರೇ ಅಧ್ಯಕ್ಷರಿರಬೇಕೆಂದುಕೊಂಡೆ. ಅವರ ಪಕ್ಕದಲ್ಲಿ ತಮ್ಮ ಸಾಹೇಬರೂ, ಅಮ್ಮಾವರೂ ಕುಳಿತರು. ಸ್ವಾಗತ ಮಾಡಿದ ಸೂಟುಧಾರಿಗಳೊಡನೆ ಸಾಹೇಬರ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಅಸಿಸ್ಟೆಂಟ್ ಮ್ಯಾನೇಜರರೂ ವೇದಿಕೆಯ ಮ್ಯಾಲೆ ಇದ್ದರು. ಸೂಟುಧಾರಿ ಎಲ್ಲರಿಗೂ ಮಾಲೆ ಹಾಕಿ, ತುರಾಯಿ ನೀಡಿ ಭಾಷಣ ಶುರುಮಾಡಿದ.

ಹಣಿಕಿಹಾಕಿದ ಗೋಣು ನೋಯಹತ್ತಿತ್ತು. ಹಾಗೆ ಹಿಂದೆ ಬಂದು ಕಟ್ಟೆಯ ಮೇಲೆ ಕುಳಿತು ಕಾಲು ಚಾಚಿ ಬೀಡಿ ಬಾಯಲ್ಲಿಟ್ಟು ಕಡ್ಡಿ ಕೊರೆದೆ. ಯಾರೋ ಭುಜ ತಟ್ಟಿದರು. ಹೊರಳಿದಾಗ ಬೀಡಿ ಬಾಯಲ್ಲಿಟ್ಟು ನಿಂತಿದ್ದವನು ಸನ್ನೆ ಮಾಡಿದ, ಅವನ ಬೀಡಿನೂ ಹೊತ್ತಿಸಿದೆ. ಬಂದು ನನ್ನ ಜೊತೆಗೇ ಕುಳಿತ.

"ನಮ್ಮ ಸಾವಕಾರ್ರು ಸಭಾಕ ಬಂದಾರ."

"ನಮ್ಮ ಸಾಹೇಬ್ರು, ಅಮ್ಮಾವ್ರು ಇಬ್ರೂ ಬಂದಾರ. ಮ್ಯಾಲೆ ಕುಂತಾರ ನೋಡು ಅವರs."

"ನಮ್ಮ ಸಾಹುಕಾರ್ರು ನಡುವ ಕುಂತಾರ ನೋಡು. ಅವರ ಡ್ರೈವರ ನಾನು. ನನ್ನ ಹೆಸ್ರು ಬೈರಪ್ಪ!"

"ನನ್ನ ಹೆಸರು ಬಾಬುರಾವ. ಸಾಹೇಬ್ರ ಮನ್ಯಾಗೆಲ್ಲಾ ಡ್ರೈವರ ಬಾಬು ಅಂತಾರ. ಸರಕಾರೀ ನೌಕರೀ ನಂದು. ಅವರು ಹೋದಲ್ಲೆ ಬಂದಲ್ಲೆ ಕಾರು ತಗೊಂಡು ಹೋಗೂದು ನನ್ನ ಕೆಲಸಾ."

"ನಮ್ಮ ಸಾವುಕಾರ್ರು ಭಾಳ ಶ್ರೀಮಂತ್ರು.ದೊಡ್ಡ ಬಂಗಲೆ ಕಟ್ಟಿಸ್ಯಾರ. ಕಂಪೌಂಡು ತ್ವಾಟ ಎಲ್ಲಾ ಅದ. ನಮ್ಮ ಅಪ್ಪ ಬಾಳ ವರ್ಷ ಅವರ ತ್ವಾಟದಾಗ ಮಾಲಿ ಕೆಲಸಾ ಮಾಡ್ಯಾನ. ಕಾರು ಕೊಂಡಮ್ಯಾಲೆ ನನಗ ಡ್ರೈವಿಂಗ್ ಕಲಿಸಿದ್ರು. ಎರಡೂ ಹೊತ್ತು ಊಟಾ, ಈ ಡಿರೆಸ್ಸು ಕೊಟ್ಟು, ಮತ್ತ ಮ್ಯಾಲೆ ಬೀಡಿಗೆ ಅದಕ್ಕs ಇದಕ್ಕs....."

"ಅಂದರs"

"ಕುಡಿಯಾಕ, ತಿನ್ನಾಕs. ಅಷ್ಟೂ ತಿಳಿಯೂದಿಲ್ಲೇನು. ಯಾಕ ನೀ ಕುಡಿಯೂದಿಲ್ಲೇನು?"

"ಛೇ ಛೇ ದೇವರಾಣಿ ನಾ ಎಂದೂ ಕುಡಿದಿಲ್ಲಪ್ಪಾ. ನಮ್ಮ ಸಾಹೇಬರ ಮನ್ಯಾಗ ಪಾರ್ಟಿ ಗೀರ್ಟಿ ಆದಾಗ ಬಾಟ್ಲಿಗೆ ಬಾಟ್ಲೀನೇ ಖಲಾಸ ಆಗತಾವ ನೋಡೇನಿ. ಭಾಳ ಕೆಟ್ಟ ಚಟಾನೋ ಅದು. ಒಮ್ಮೆ ಹತ್ತಿತಂದರ ಮನಿಶ್ಯಾ ಸಾಯೂತನಾ ಬಿಡಾಂಗಿಲ್ಲ. ನಮಗ ಹ್ಯಾಂಗ ಪೂರೈಸೀತಪಾ ಅದೆಲ್ಲಾ. ಹೆಂಡ್ರು, ನಾಕು ಮಕ್ಕಳು ಇದ್ದಾಂವಾ ಐದನೇದು ಬಸರ ಅದಾಳ ನನ್ನ ಹೇಣ್ತಿ."

"ಶ್ರೀಮನ್ ರಾಮನಾಥರಾಯರು ಬಹಳ ಸಜ್ಜನರು, ಸದ್ಗೃಹಸ್ಥರು. ಸತ್ಯವಾಗಿಯೂ ಹೇಳಬೇಕಂದರೆ ಇವರೇ ಶ್ರೀರಾಮನ ಅವತಾರಾ ಅನ್ನಬಹುದು. ಇವರ...."

ನನ್ನ ಮಾತು ಭೈರಪ್ಪನಿಗೆ ಕೇಳದಷ್ಟು ಜೋರಾಗಿ ಮೈಕಿನಿಂದ ಧ್ವನಿ ಹೊರಬಿತ್ತು. ಒಳಗೆ ಹಣಿಕಿದೆ ಇನ್ನೂ ಸೂಟುಧಾರಿಗಳೇ ಮಾತಾಡುತ್ತಿದ್ದರು.

"ಇವರ ಕರ್ತವ್ಯನಿಷ್ಠೆ ಎಷ್ಟು ಅಂದರೆ ಅದನ್ನ ಬಾಯಿಂದ ಹೇಳುವುದೇ ಸಾಧ್ಯವಿಲ್ಲ. ಇಷ್ಟೊಂದು ದಕ್ಷತೆ ತೋರಿಸಿದ್ದರಿಂದಲೇ ಅವರಿಗೆ ವಿದೇಶ ಪ್ರಯಾಣಕ್ಕೆ ಈಗ ಹೋಗೋದು ಸಾಧ್ಯವಾಗಿದೆ. ಇವರು ಹಗಲು ರಾತ್ರಿ ನಾಡಿಗಾಗಿ, ದೇಶಕ್ಕಾಗಿ ದುಡಿದು ದುಡಿದು ಸಣ್ಣಾಗ್ತಾ ಇದ್ದಾರೆ..."

"ನಿಮ್ಮ ಸಾಹೇಬ್ರು ಡಬ್ಬಲ್ ಸೀಟು, ಇವರು ಸಣ್ಣಾಗ್ಯಾರ ಅಂತಾರಲ್ಲೋ" ನನ್ನ ಹಿಂದಿನಿಂದ ಹಣಿಕಿದ ಬೈರಪ್ಪ ಕಿಸಕ್ಕನೆ ನಕ್ಕ.

'ಶೂ' ಬಾಯಿ ಮೇಲೆ ಬೆರಳಿಟ್ಟು ಸುಮ್ಮನಿರುವಂತೆ ಸನ್ನೆ ಮಾಡಿ ಪಿಸುದನಿಯಲ್ಲಿ ನುಡಿದೆ. 'ಮೊದ ಮೊದಲು ತೆಳ್ಳಗಿದ್ದರಂತ.ನಾನೂ ಫೋಟೋದಾಗ ನೋಡೇನಿ. ಈಗ ಹಿಂಗ ಮೈ ಬಿಟ್ಟಾರೋ.'

"ಬಿಡೋ ಎಲ್ಲಾ ಗೊತ್ತೈತಿ. ಬಾಟ್ಲಿ ರುಚಿ ಹತ್ತಿದವರೆಲ್ಲಾ ಹಿಂಗs. ಕಂಟಮಟಾ ಕುಡಿದು ಕುತಿಗಿಮಟಾ ತಿನ್ನೂದು, ಮೈ ಬೆಳೀದs ಏನ್ಮಾಡ್ತತಿ. ನಮ್ಮ ಸಾವುಕಾರ್ರದೂ ಅದs ಗತೀನs. ಮತ್ತ ಮ್ಯಾಲೆ ಏದಿನೂವು ಅಂತ ಒದ್ದಾಡೂದು. ಚೂಜಿ ಚುಚ್ಚಿಸಿಕೊಳ್ಳೂದು, ಗುಳಿಗೀ ನುಂಗೂದು ಎಲ್ಲಾ ನಡಿಯೂದs..."

> "ರಾಮನಾಥ'ರಾಯರು ಇನ್ನೂ ಕಾಲೇಜಿನಲ್ಲಿದ್ದಾಗಲೇ ಗಾಂಧೀಜಿಯವರ ಕರೆಗೆ ಓಗೊಟ್ಟು ಅಸಹಕಾರ ಚಳುವಳಿಯಲ್ಲಿ ಧುಮುಕಿದರು. ಮಹಾತ್ಮಾಜಿಯವರು ಹಾಕಿಕೊಟ್ಟ ಹಾದಿಯಲ್ಲಿ ನಡೆಯುವುದೇ ಅವರ ಬಾಳಿನ ಗುರಿ. ಗುರು-ಹಿರಿಯರೆಂದರೆ ಪ್ರೀತಿ, ಗೌರವ. ಸತ್ಯದ ಆರಾಧಕರು. ಇಷ್ಟೊಂದು ದೊಡ್ಡ ಪದವಿಗೆ ಏರಿದರೂ ನಿರಹಂಕಾರಿ, ಬಡವರ ಆಧಾರಿ, ಕರುಣಾಳು."

ನಮ್ಮಿಬ್ಬರ ಮಾತು ಮೆಟ್ಟಿ ಮೈಕಿನ ಕಹಳೆ ಊದುತ್ತಿತ್ತು. ಮತ್ತೆ ಒಳಗೆ ನೋಡಿದೆ. ಈಗ ಮಾತಾಡುತ್ತಿದ್ದವರು ಅಸಿಸ್ಟೆಂಟ ಮ್ಯಾನೇಜರರು.

"ಇಂಥಾ ಸಾಹೇಬರ ಕೈಯಾಗ ಕೆಲಸಾ ಮಾಡಾಕೂ ಪುಣ್ಯ ಬೇಕ ನೋಡಪಾ. ನಮ್ಮ ಸಾವಕಾರ ನಿಷ್ಠೂರ ಅಂದ್ರ ನಿಷ್ಠೂರ. ದಯಾ ಮಯಾ ಏನೂ ಕೇಳಬ್ಯಾಡ. ಮೊನ್ನೆ ಕುಡದು ಅಮಲಿನ್ಯಾಗ ತೂರಾಡಿಕೋತ ಬಂದು ಕಾರಿನಾಗ ಬಿದ್ದರು. ಸೀಟು ತಲೀಗೆ ಬಡದು ಸ್ವಲ್ಪ ಪೆಟ್ಟಾತು. ಮನೀಗೆ ಬರಾಣಾ ಅದs ಸಿಟ್ಟು ನನ್ನ ಮ್ಯಾಲೆ ತಗದು ಸ್ಟಿಕ್‌ಲೆ ನನ್ನ ಹಾಕ್ಕೊಂಡು ಹಣದರಪಾ. ಮೈಯೆಲ್ಲಾ ಹಸರ ಆಗಿತ್ತು ನೋಡು" ಬೈರಪ್ಪ ಬೆನ್ನು ಸವರಿಕೊಂಡ.

'ಅಲ್ಲೋ ಎಂಥಾ ಮಳ್ಳ ಅದೀಯೋ ನೀನು. ಇವರ ಏನು ಹೇಳಿದ್ರು ಎಲ್ಲಾ ಮಾತು ಖರೇ ಅಂತ ತಿಳಿದೀ ಏನು? ನೋಡಪಾ, ಈಗ ಮಾತಾಡೂವವಾ ನಮ್ಮ ಸಾಹೇಬ್ರ ಕೈಯಾಗ ಕೆಲಸಾ ಮಾಡಾಂವಾ. ಅಂದ ಮ್ಯಾಲೆ ನೀನs ಇಂದ್ರ, ನೀನs ಚಂದ್ರ ಅಂತ ಅನ್ನಾಕ ಬೇಕಲ್ಲಾ. ಇದ್ದದ್ದು ಇಲ್ಲದ್ದು ಹೇಳಿ ಹೊಗಳಾಕ ಬೇಕಲ್ಲ. ಇಲ್ಲಾಂದರ ನಾಳೆ ಅವರ ನೌಕರೀ ಹೋದರೆ ಗತೀ ಏನು. ಹೊತ್ತು ಬಂದಾಗ ಕತ್ತೀ ಕಾಲು ಹಿಡಿಯಾಕs ಬೇಕು. ಅದೂ ಒದ್ದರೂ ಹಿಡೀಬೇಕು. ಹಾಂ ಅಂದಾಂಗ ಒಮ್ಮೆ ಹಿಂಗಾತು ನೋಡು. ನಾನs ಕಣ್ಣಾರ ನೋಡಿದ್ದು ಹೇಳತೇನಿ, ಖರೇವಂದ್ರೂ ಹಾಂ ಮತ್ತ.

"ಇರಲಿ ಹೇಳೋ ಲಗೂನ. ನೀ ಯಾಕ ಸುಳ್ಳ ಹೇಳತೀ. ಏನಾತು ಒಮ್ಮೆ?"

"ದಿನಾ ಕಚೇರಿ ಬಿಡೂ ಮುಂದ ದಣಿವು ಆಗಿರತದ ಅಂತ್ಹೇಳಿ ಬಾರಿಗೆ ಹೋಗಿ ಒಂದೆರಡು ಬಾಟ್ಲಿ ಇಳಿಸೇ ಮನೀ ಕಡೆ ಹೋಗೋದು ರೂಢಿ ಏನಪಾ ನಮ್ಮ ಸಾಹೇಬ್ರಿಗೆ. ಹಾಂಗs ಒಂದಿನಾ ಬಾರ್ ಬಿಟ್ಟು ಹೊರಗ ಬಂದ್ರು. ಇನ್ನೇನು ಬಂದು ಕಾರಿನ್ಯಾಗ ಕೂಡವರs ಇದ್ದರು. ನಮ್ಮ ಆಫೀಸಿನ ಕಾರಕೂನ ಹನುಮಂತಪ್ಪ ಬಂದು ಕೈ ಮುಗದಾ. 'ಏನೋ' ಅಂದ್ರು. 'ಬಡತಿ ಕಾಗದ ಬರೂದೈತಿ ಸಾಹೇಬರs. ನೀವು ಅದಕ್ಕ ಸಿಫಾರಸು 'ಮಾಡಬೇಕು''

ಅಂದಾ. 'ಅದ್ಯಾಂಗ ನಿಮಗ ಕೊಡಾಕ ಬರತೈದ. ಆಗಲೇ ನಾವು ವಾಸಂತಿ ಹೆಸರು ಬರದೇನಿ' ಅಂತ ಅಂದ್ರು, ಸಾಹೇಬ್ರು. ಅಂವಾ ಥರಾ ಥರಾ ನಡಗಕೋತ ಕಾಲು ಹಿಡಿದಾ. 'ಬಡವನ ಹೊಟ್ಟೀ ಮ್ಯಾಲೆ ಹೊಡೀಬ್ಯಾಡ್ರಿ ಸಾಹೇಬರ. ಹದಿನೈದು ವರ್ಷ ಸರ್ವೀಸ್ ಮಾಡೇನಿ. ನಿಮ್ಮ ಕಾಲಿಗೆ ಬೀಳತೇನಿ' ಅಂತ ಬಗ್ಗಿದಾ. "ಹೋಗೋ ... ಮಗನ ಹಾಳಾಗಿ ಹೋಗು' ಅಂತ ಕಾಲು ಝಾಡಿಸಿ ಕಾರು ಹತ್ತಿದರು. 'ಬಿಡೋ ಬಾಬು ಗಾಡೀ ಸ್ಟೇಶನ್ ಕಡೆ ಅಂದರು...."

"ಯಾಕ ಸ್ಟೇಶನ್ ಕಡೆ ಯಾಕ?" ಮಾತು ಮುಗಿಯುವ ಮೊದಲೇ ಬೈರಪ್ಪ ಅಡ್ಡಬಾಯಿ ಹಾಕಿದ.

"ಯಾಕಂದ್ರ ವಾಸಂತಿ ಮನೀಗೆ ಹೋಗಾಕ. ವಾಸಂತಿನೂ ಅವರ ಕೈಯಾಗಿನ ಕಾರಕೂನತಿ. ಲಗ್ನಾಗದ ಹುಡುಗಿ. ಕಣ್ಣುಮೂಗಿಲೇ ಚೆಲುವಿ. ಸಾಹೇಬರನ್ನ ಬುಟ್ಟಿಗೆ ಹಾಕ್ಕೊಂಡಿದ್ದಳು. ಅದಕs ಅಷ್ಟ ಪಿರೀತಿಯಿಂದ ಕೆಲಸಕ ಬಂದ ವರ್ಷದಾಗ ಬಡತಿ ಕೊಟ್ಟರು ಆಕೀಗೆ. ಆಕೀನ ಕರಕೊಂಡು ಸಿನೇಮಕ ಹೋಗವರೂ, ಅಲ್ಲೇ ಇಲ್ಲೇ ಅಡ್ಡ್ಯಾಡಾಕ ಹೋಗಾವರೂ-ಅಂದರ ಕಾರಿನ್ಯಾಗ ಹಾಂ ಮತ್ತ. ಆಕೀಗೂ ಚೈನಿ ಬೇಕು. ಇಬ್ಬರೂ ನಕ್ಕೋತ ಕೆಲಕೋತ ಕಾರಿನ್ಯಾಗ ಕೂತಾಗ ನನ್ನ ಮೈ ಉರೀತಿತ್ತು. ಮತ್ತ...."

> "ಶ್ರೀಮತಿ ವೀಣಾದೇವಿ ಅವರು ರಾಮನಾಥ - ರಾಯರಿಗೆ ತಕ್ಕ ಪತ್ನಿ. ಸುಶಿಕ್ಷಿತರು. ಸುಸಂಸ್ಕೃತ ಮನೆತನದಲ್ಲಿ ಹುಟ್ಟಿ ಬೆಳೆದವರು. ಒಳ್ಳೆಯ ಗೃಹಿಣಿ, ಮನೆ ಮಕ್ಕಳು, ಅತಿಥಿ-ಅಭ್ಯಾಗತರನ್ನು ಅವರು ಹೇಗೆ ನೋಡಿಕೊಂಡು ಹೋಗ್ತಾರ ಅನ್ನೊದನ್ನ ಅವರ ಮನೆಗೆ ಹೋಗಿ ನೋಡಿದರೆ ತಿಳೀತದೆ."

ಮನೆಮನೆಯಂತ ಬರೀ ಮನೆಯಲ್ಲೇ ಕುಳಿತುಕೊಳ್ಳುವ ಕೂಪ ಮಂಡೂಕ ಸ್ವಭಾವದವರಲ್ಲ ಇವರು. ಮಹಿಳಾ ಸಂಘ, ಭಗಿನಿ ಸಮಾಜ, ಶಿಶುವಿಹಾರ ಎಲ್ಲದರಲ್ಲೂ ಮುಂದಾಗಿ ಕೆಲಸ ಮಾಡಿದ್ದಾರೆ; ಇನ್ನೂ ಮಾಡುತ್ತಿದ್ದಾರೆ. ಇವರಿಗೆ ಸಾಗರವೂ ಸಣ್ಣದೇ. ಅದಕ್ಕೇ ಈಗ ಪತಿದೇವರೊಡನೆ ಸಾಗರದಾಚೆಯ ಪಾಶ್ಚಿಮಾತ್ಯ ದೇಶಗಳಿಗೆ ಭೆಟ್ಟಿ ಕೊಡಲು ಹೋಗುತ್ತಿದ್ದಾರೆ. ಅಲ್ಲಿಗೆ ಹೋಗಿ ಬಂದ ಅವರ ಅನುಭವದ ಲಾಭವನ್ನು ನಮ್ಮ ಮಹಿಳೆಯರೆಲ್ಲ ಪಡೆಯುತ್ತಾರೆಂದು ನನ್ನ ಭಾವನೆ. ಅವರ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ....."

ಸತ್ಕಾರ ಭಾಷಣ ಕಿವಿಗೆ ಬಡಿಯುತ್ತಿತ್ತು.

'ಇಂಥಾ ಸೀತಮ್ಮನಂಥಾ ಹೇಣ್ತಿ ಇದ್ದರೂ ಹೊರಗಿನ ಚಾಳಿ ಏನು ನಿನ್ನ ಸಾಹೇಬಗ' ಕಡ್ಡಿ ಪೆಟ್ಟಿಗೆಗೆ ಕೈಯೊಡ್ಡುತ್ತ ಬೈರಪ್ಪ ಹೇಳಿದ.

'ಹುಚ್ಚಗೊಟ್ಟೇs, ಎಲ್ಲಿ ಸೀತಮ್ಮನೋ. ಎಂಥಾ ರಾಮ ಅಂಥಾ ಸೀತಾ' ತಿರಸ್ಕಾರದಿಂದ ನಕ್ಕ ಅವನ ಮೂಢತನಕ್ಕೆ.

'ಅಂದರ' ಬಾಯಿ ತೆಗೆದ ಬೈರಪ್ಪನ ಬಾಯಲ್ಲಿದ್ದ ಬೀಡಿ ಕೆಳಗೆ ಬೀಳುವದರಲ್ಲಿತ್ತು.

'ಅಂದರs ಏನು ? ಗಂಡ ಮೂರು ಮೊಳ ಅಂದರ ಹೆಂಡತಿ ಆರು ಮೊಳ ಅಂತಾಳ. ವಾಸಂತಿ ಕೂಡ ಗಂಡನ ಗೆಣೆತನಾ ಅದ ಅನ್ನೂದು ಎಲ್ಲಾ ತಿಳಕೊಂಡು ಬಿಟ್ಟಾಳ, ನಾ ಏನ ಕಮ್ಮಿ ಅಂತ ತಾನೂ ಒಬ್ಬನ್ನ ಆರಿಸಿಕೊಂಡಾಳ. ಹೆಂತಾದೋ ವಕೀಲ ಅಂತಾರ. ಅವನ ಸಂಗತೀ ಅಡ್ಡಾಡಿಕೋತ ಸಮಾಜ ಸುಧಾರಣಾ ಮಾಡ್ತೀನಿ ಅಂತ ಹೊರಗs ತಿರಗತಾಳ. ತಾನೂ ಚೈನಿ ಹೊಡೀತಾಳ. ಕಾರಿನ್ಯಾಗ ಎಷ್ಟೋ ಸಾರೆ ಅವರಿಬ್ಬರನೂ ನೋಡೇನಿ. ಗಂಡನ ಗುಣಾ ಗೊತ್ತಾಗೇ ಈಗ ತಾನೂ ಪರದೇಶಕ್ಕ ಅವನ ಬೆನ್ನು ಹತ್ಯಾಳ. ಹೆಂಡತಿನ್ನ ಕರಕೊಂಡು ಹೋಗೂ

ಮನಸ್ಸು ಸಾಹೇಬಗೂ ಇದ್ದಿದ್ದಿಲ್ಲಾ. ಆದರ ಇಕೀ ಬಿಟ್ಟಪ್ಪನ ಮಗಳಲ್ಲ. ಒಮ್ಮೆ ಕಾರಿನ್ಯಾಗ ಸುರು ಆತು ಇಬ್ಬರದೂ ವಾದ. ಅಲ್ಲಲ್ಲ ಜಗಳ. ಏನ ಹೇಳಿದರೂ ಆಕಿ ಹಿಂದ ಸರೀಲಿಲ್ಲ. ನೀ ಅಂದರ ನಿಮ್ಮಪ್ಪ ಅಂದಳು. ಕಡೀಗೆ ಸಾಹೇಬನ ತೆಪ್ಪಗಾದ.....

ಚಪ್ಪಾಳೆಯ ಕಡಕಡಾಟದಲ್ಲಿ ನನ್ನ ಕೊನೆಯ ಮಾತು ಬೈರಪ್ಪನಿಗೆ ಕೇಳಿತೋ ಇಲ್ಲವೋ ಇಬ್ಬರೂ ಬಾಗಿಲಿನಿಂದ ಸ್ವಲ್ಪ ದೂರ ನಿಂತು ಗೋಣು ಚಾಚಿ ಹೊರಗೆ ಬರುವವರನ್ನೇ ನೋಡುತ್ತಿದ್ದೆವು. ಧೋತರ, ಸೂಟು ಪಾಯಿಜಾಮ. ಫಿಟ್‌ಪ್ಯಾಂಟಿನ ಗಂಡಸರೂ, ಬಣ್ಣಬಣ್ಣದ ಸೀರೆಯ, ಬೇರೆ ಬೇರೆ ವಿಧದಲ್ಲಿ ಕೇಶ ಸಿಂಗರಿಸಿಕೊಂಡಿದ್ದ ಹೆಣ್ಣುಮಕ್ಕಳೂ ಹೊರಗೆ ಬಂದು ಮರೆಯಾಗುತ್ತಿದ್ದರು. ಕೊನೆಗೆ ನಮ್ಮ ಸಾಹೇಬರ ಹಿಂದೆ ಬಂದ ಸೂಟುಧಾರಿಗಳ ಕೈಯಲ್ಲಿದ್ದ ಎರಡು ಮಾಲೆಗಳನ್ನು ನಾನು ತೆಗೆದುಕೊಂಡೆ. ಇನ್ನೊಂದಕ್ಕೆ ಬೈರಪ್ಪ ಕೈ ಚಾಚಿದ. ಮರುದಿನ ತಮ್ಮ ಮನೆಗೇ ಊಟಕ್ಕೆ ಬರುವಂತೆ ಅಧ್ಯಕ್ಷರು ಸಾಹೇಬರಿಗೆ ಹೇಳಿದ ಮೇಲೆ ಕಾರು ಹೊರಡಿಸಿದೆ.

ಕುಲುಕುಲು ನಗುತ್ತ ಮೈ ಕುಲುಕುತ್ತಿದ್ದ ಅಮ್ಮಾವರು 'ಏ ಬಾಬು, ಕಾರು ಆ ಪಾಟೀಲರ ಮನೆಗೆ ಬಿಡು, ರಾಣಿ ಅವರ ಮನೀಗೆ ಮಾಲಿನಿ ಹುಟ್ಟುಹಬ್ಬಕ್ಕೆ ಹೋಗ್ಯಾಳ. ನಾವೂ ಸಭಾ ಮುಗಿಸಿ ಬರೂ ಮುಂದ ಕರಕೊಂಡು ಬರತೇವಿ ಅಂತ ಹೇಳೇನಿ' ಅಂದರು.

ಥಳಥಳಿಸುವ ಜರದ ಅಂಗಿ ಕೊಟ್ಟುಕೊಂಡು ಕೂದಲಿಗೆ ಕೆಂಪು ರಿಬ್ಬನ್ ಕಟ್ಟಿದ ರಾಣಿ ಬಹಳ ಚೆಂದ ಕಾಣುತ್ತಿದ್ದಳು. ಗೆಳತಿಗೆ 'ಟಾ ಟಾ' ಹೇಳಿ ಬಂದು ಕಾರಿನಲ್ಲಿ ಕುಳಿತಳು.

ರಾಣಿಯನ್ನು ನೋಡಿದೊಡನೆ ಅವಳು ಬೆಳಿಗ್ಗೆ ಕೊಟ್ಟ ಪೆಪ್ಪರಮೆಂಟಿನ ನೆನಪಾಯಿತು. ಎದೆಯ ಮೇಲಿನ ಕಿಸಿಯಲ್ಲಿತ್ತದು. ಅದರೊಡನೆ ಮಗನ ಬಾಡಿದ ಮುಖ ಕಣ್ಣ ಮುಂದೆ ಕಟ್ಟಿತು. ಬೆಳಿಗ್ಗೆಯಿಂದ ನೋಡಿಯೇ ಇಲ್ಲ ಅವನನ್ನು. ಎಷ್ಟು ನರಳುತ್ತಿದ್ದಾನೋ ಅವನು, ಕರುಳು ಚುರ್ ಎಂದಿತು. ಎರಡು ತಾಸು ಈ ಸಭೆಯ ಹೊರಗೆ ಕಾದು ಕುಳಿತಿರುವ ಬದಲು ಮನೆಗಾದರೂ ಹೋಗಿದ್ದರೆ ಒಳ್ಳೆಯದಿತ್ತು ಎನಿಸಿತು. ಆದರೆ ಸಾಹೇಬರು ಅಪ್ಪಣೆ ಕೊಡಬೇಕಲ್ಲ. ಅಷ್ಟೊಂದು ದಯೆ ಅವರಿಗೆ ಇದ್ದರೆ ನನ್ನ ಮನಸ್ಸೇಕೆ ಹೀಗೆ ಒದ್ದಾಡುತ್ತಿತ್ತು. ಇಂಥವರನ್ನೂ ಕರುಣಾಳು, ರಾಮಚಂದ್ರನ ಅವತಾರ ಹಾಗೆ ಹೀಗೆ ಎಂದು ಹೊಗಳುವವರು ಇದ್ದಾರಲ್ಲ ನಗು ಬಂತು.

ಎದುರಿನ ಕನ್ನಡಿಯಲ್ಲಿ ನನ್ನ ಮುಖವನ್ನೇ ನೋಡುತ್ತಿದ್ದರೇನೋ ಅಮ್ಮಾವರು ತಟ್ಟನೇ ಕೂಗಿದರು. 'ನಗ್ತಿಯೇನೋ ಬಾಬೂ, ನೋಡಲ್ಲೆ ಎದುರಿಗೆ ಟ್ರಕ್ಕು ಬರ್ತದ, ಸೈಡಿಗೆ ತೊಗೋ ಮೈಮ್ಯಾಲೆ ಎಚ್ಚರದನೋ ಇಲ್ಲೋ.'

ಮಬ್ಬಿನಲ್ಲಿದ್ದ ನಾನೀಗ ಎಚ್ಚರವಾಗಿದ್ದೆ. ಯಮದೂತನಂತೆ ಟ್ರಕ್ಕು ಮೈಮೇಲೆಯೇ ಬಂದಿತ್ತು. ಅದೇನಾದರೂ ಹಾಯ್ದಿದ್ದರೆ ನಮ್ಮ ಕಾರು ಪುಡಿಪುಡಿಯಾಗುತ್ತಿತ್ತು. ಯಾರೂ ಉಳಿಯುವಂತಿರಲಿಲ್ಲ. ಗರಗರ ಸ್ಟೀರಿಂಗ್ ವೀಲ್ ತಿರುಗಿಸಿದೆ. ಕೂದಲೆಳೆಯಷ್ಟರಲ್ಲಿ ನಾವು ಅಪಘಾತದಿಂದ ಪಾರಾಗಿದ್ದೆವು. ನನ್ನ ಮೈ ಕೈ ಇನ್ನೂ ಥರಥರ ನಡುಗುತ್ತಿದ್ದವು.

'ಮಮ್ಮೀಽ ನಂಗೆ ನಿದ್ದೆ ಬಂತು' ರಾಣಿಯ ದನಿ ಕಿವಿಗೆ ಬಿತ್ತು. ಆಗ ಪೂರ್ತಿ ಎಚ್ಚರಾಗಿ ಕಣ್ಣು ತೆರೆದು ಸಿಧಾನವಾಗಿ ಕಾರನ್ನು ಓಡಿಸಿದೆ. ಹಿಂದಿನಿಂದ ಸಾಹೇಬರು ಅಮ್ಮಾವರು ಬೈಯುತ್ತಿದ್ದ ಬೈಗಳು ನನ್ನ ಕಿವಿಗೇ ಬೀಳಲಿಲ್ಲ. ರಾಣಿಯ ಮಂಜುಳ ದನಿಯೊಂದೇ ಕಿವಿಯಲ್ಲಿ ಮೊರೆಯುತ್ತಿತ್ತು.

***

■■

## ಪ್ರೇಮಪತ್ರ

ಗಂಟೆ ಐದೂ ಹದಿನೈದು ಆದಮೇಲೆ ನಳಿನಿ ಮೂರನೆಯ ಬಾರಿ ಹೊರ ಬಾಗಿಲಿಗೆ ಬಂದು ಇಣಿಕಿ ಅತ್ತ ಇತ್ತ ನೋಡಿದಳು. ಮೂಲೆಯ ತಿರುವಿನಲ್ಲಿ ಇನ್ನೊಂದು ಕ್ಷಣಕ್ಕೆ ಸ್ಕೂಟರು ಕಂಡುಬಂದೀತೆಂದು ಎರಡು ನಿಮಿಷ ಅಲ್ಲೇ ನಿಂತು ದಿಟ್ಟಿಸಿದಳು. ಉಹುಂ, ಗಂಡ ಇನ್ನೂ ಬರಲಿಲ್ಲ. ಆಫೀಸಿಗೆ ಹೋಗುವಾಗ ತಾವೇ ಹೇಳಿದ್ದರು. 'ನೀನು ಇಷ್ಟಪಟ್ಟ ಪಿಕ್ಚರ್ರಿಗೆ ಇವತ್ತು ಹೋಗೋಣ. ಐದು ಗಂಟೆಗೇ ಬಂದುಬಿಡುತ್ತೇನೆ. ತಯಾರಾಗಿರು, ಹೋಟೆಲಿನಲ್ಲಿ ತಿಂಡಿ ತಿನ್ನೋಣ' ಎಂದು. ಮದುವೆಯಾದ ಮೂರು ತಿಂಗಳಲ್ಲಿ ಇಂಥಲ್ಲಿ ಕರೆದುಕೊಂಡು ಹೋಗುತ್ತೇನೆ ಎಂದು ಹೇಳಿದವರು ಎಂದೂ ತಪ್ಪಿಸಿದವರಲ್ಲ. ಅವರಾದರೂ ಏಕೆ ತಪ್ಪಿಸುತ್ತಾರೆ ಹೊಸ ಹುಡುಗಿಯೊಡನೆ ಚೆಲ್ಲಾಟವಾಡುತ್ತ ಸಂತೋಷವಾಗಿ ಕಾಲಕಳೆಯುವ ಪ್ರೀತಿ ಅವರಿಗಿಲ್ಲವೇ? ಎಷ್ಟೊಂದು ಉತ್ಸಾಹದಿಂದ ಸಂತೋಷದಿಂದ ತಾವು ತಯಾರಾಗಿ, ತನಗೂ ನೀನು ಇಂಥದೇ ಬಣ್ಣದ ಸೀರೆ ಉಟ್ಟುಕೋ, ಇಂಥದೇ ಬ್ಲೌಜು ತೊಡು, ನಿನಗೆ ಎರಡು ಜಡೆ ಚೆನ್ನಾಗಿ ಒಪ್ಪುತ್ತದೆ. ಹಳೇ ಕಾಲದ ಹಾಗೆ ಬಾಚಬೇಡ. ಮೊಗ್ಗಿನ ಮಾಲೆ ಹೀಗೆ ಮುಡಿದುಕೊ ಎಂದೆಲ್ಲ ಹೇಳುತ್ತಿದ್ದರು. ತಯಾರಾದ ಮೇಲೆ ನೋಡಿ ಸಂತೋಷಪಟ್ಟು ಉಡುಗೊರೆ ಕೊಡುತ್ತಿದ್ದರು. ಇವತ್ತು ಯಾಕೆ ತಡವಾಯಿತೋ ತಿಳಿಯದು. ಬಾಸ್ ಬೇಗ ಬಿಡಲಿಲ್ಲವೋ ಅಥವಾ ಪ್ರೋಗ್ರಾಂ ಮರೆತೇಬಿಟ್ಟರೋ, ಚಿಂತೆಯಿಂದ ಇನ್ನೊಮ್ಮೆ ಅತ್ತಿತ್ತ ನೋಡಿದಾಗ ಕಿವಿಯಲ್ಲಿಯ ಝುಮಕಿ ಜೋಕಾಲಿಯಾಡಿದವು. ಮರುಕ್ಷಣ ಬಲಗಡೆ ತಿರುವಿನಲ್ಲಿ ಕಂಡಿತು ಸ್ಕೂಟರ್. ಅರಳಿದ ಮುಖವನ್ನು ಗಂಟಿಕ್ಕಿಸಿದಳು. ಹೌದು, ತಡಮಾಡಿದ್ದಕ್ಕೆ ತನಗೆ ಸಿಟ್ಟು ಬಂದಿದೆ ಎನ್ನುವುದನ್ನು ತೋರಿಸಬೇಕಲ್ಲ. ಇನ್ನು ಅಲ್ಲಿ ನಿಂತರೆ ಅವರ ಮುಖ ಕಂಡೊಡನೆ ತನ್ನ ಸಿಟ್ಟು ಎಲ್ಲೋ ಹಾರಿಹೋಗಿ ನಕ್ಕುಬಿಟ್ಟೇನೆಂದು ಹೆದರಿ ಒಳ ಕೋಣೆಗೆ ಹೋಗಿ ಸೀರೆಯ ನಿರಿಯನ್ನು ತೀಡತೊಡಗಿದಳು.

ಪಡಸಾಲೆಯಲ್ಲಿ ಬೂಟ್ಸಿನ ಸದ್ದಾಯಿತು. ಯಾಕೋ ಆ ಸದ್ದು ಕೇಳಿಯೇ ಮನಸ್ಸು ಬೆದರಿ ಅಂಜಂಜುತ್ತ ಬಾಗಿಲ ಬಳಿ ಬಂದಾಗ ಮತ್ತೊಂದು ಬೂಟನ್ನು ಬೀಸಿ ಮೂಲೆಗೊಗೆದ. ಬೆಚ್ಚಿದ ನಳಿನಿ ಗಂಡನ ಮುಖ ನೋಡಿ ಹೆದರಿ ತಣ್ಣಗಾದಳು. ಗಂಡನ ಈ ಅವತಾರವನ್ನು ಅವಳು ಕಂಡಿರಲೇ ಇಲ್ಲ. ಸಿಟ್ಟಿನಿಂದ ಕೆಂಪಾಗಿ ಬಿಗಿದಿದೆ ಮುಖ. ಜೋರಾಗಿ ಸ್ಕೂಟರಿನಲ್ಲಿ ಬಂದಿದ್ದರಿಂದಲೋ ಏನೋ ಇನ್ನೂ ತೇಕುತ್ತಿದ್ದಾನೆ. ಒಂದು ನಿಮಿಷ ಸುಧಾರಿಸಿಕೊಳ್ಳಲಿ ಎಂದು ಸುಮ್ಮನೆ ನಿಂತಳು ನಳಿನಿ. ಅವಳು ಅಲ್ಲಿ ಬಂದು ನಿಂತದ್ದು ಗೊತ್ತಾಗಿದ್ದರೂ ಹೊರಳಿ ನೋಡಿರಲಿಲ್ಲ ನಾಗರಾಜ. ಸೋತ ನಳಿನಿ ಕೊನೆಗೆ ತಾನೇ ಹತ್ತಿರ ಹೋಗಿ ಭುಜದ ಮೇಲೆ ಕೈ ಇಟ್ಟು "ಯಾಕ ತಡಮಾಡಿದ್ರಿ? ನಾನು ಎಷ್ಟು ಹೊತ್ನಿಂದ ದಾರಿ ನೋಡ್ತಿದ್ದೆ, ಕಛೇರಿಯೊಳಗ ಕೆಲಸ ಬಹಾಳ ಇತ್ತೇನು?" ಎನ್ನುತ್ತ ಮಗುವನ್ನು ರಮಿಸುವಂತೆ ಕುತ್ತಿಗೆ ಬೆನ್ನು, ಸವರಿದಳು.

ಸರಕ್ಕನೆ ಹೊರಳಿದ ನಾಗರಾಜ ಬೆನ್ನಮೇಲಿದ್ದ ಅವಳ ಕೈ ಕಿತ್ತೆಸೆದು ಮತ್ತೆ ಸುಮ್ಮನೆ ಕುಳಿತ. 'ಬಾಸ್ ಏನಾದರೂ ಅಂದರೇನು?' ಮೆಲುದನಿಯಲ್ಲಿ ಮತ್ತೆ ಕೇಳಿದ ನಳಿನಿ ಗಂಡನ ಕೋಟು ಕಳಚಲು ಕೈ ಚಾಚಿದಳು.

"ನಾನೆಲ್ಲಾ ತಗೀತೀನಿ ಬಿಡು. ನಿನ್ನ ಸಹಾಯ ಬೇಡ" ಎಂದು ಕೈ ಕೊಡವಿ 'ಇವತ್ತ ನಾನು ಆಫೀಸಿಗೆ ಹೋಗೇ ಇಲ್ಲ' ಎಂದು ಬುಸುಗುಟ್ಟಿದ.

ಗಂಡ ಮಾತನ್ನಾದರೂ ಆಡಿದನಲ್ಲ ಎಂದು ಉತ್ತೇಜನಗೊಂಡ ನಳಿನಿ "ಮತ್ತ ಇಷ್ಟೊತ್ತನಾ ಎಲ್ಲಿದ್ದಿರಿ? ಮುಂಜಾನೆ ಮನೀ ಬಿಟ್ಟು ಹೋದವರು? ಚ್ಯಾಷ್ಟೀ ಮಾಡತೀರೇನು ನನ್ನ ಕೂಡ. ಇವತ್ತು ಸಿನಿಮಾ ಪ್ರೋಗ್ರಾಂ ಇದ್ದದ್ದು ಮರತುಬಿಟ್ಟಿರೇನು?" ನಸುನಗುತ್ತ ಗಂಡನ ಮುಖದಲ್ಲಿ ಆದರ ನೆಳಲು ಹುಡುಕಿದಳು.

"ನೀ ಹೋಗಬೇಕು ಅಂದ ಸಿನಿಮಾ 'ಆದಮಿ' ಅಲ್ಲs. ಯಾರು ಅದರ ಹೀರೋ ?"

"ದಿಲೀಪಕುಮಾರ್ ಹೀರೋ, ವಹೀದಾ ಹೀರೋಯಿನ್. ಅಲ್ಲದ ಮನೋಜ ಕುಮಾರನೂ ಅದಾನ" ಗಾಡಿ ಮತ್ತೆ ಹಳಿಯ ಮೇಲೆ ಬಂದಿತೆನ್ನುವ ಭಾವನೆಯಿಂದ ಉತ್ಸಾಹಿತಳಾದಳು ನಳಿನಿ.

"ಹೂಂ, ಅದಕ್ಕs ಮತ್ತ ನೀ 'ಆದಮಿ' ನೋಡಬೇಕು ಅಂತ ಹಟ ಹಿಡದದ್ದು. ಇವತ್ತ ಗೊತ್ತಾತು ನನಗ, ನಿನಗ ದಿಲೀಪ ಅಷ್ಟ ಯಾಕ ಸೇರತಾನ ಅನ್ನೋದು". ಮಾತಿನ ಕೊನೆಗೆ ಕಿಸೆಯಲ್ಲಿನ ಪಾಕೀಟು ತೆಗೆದೊಗೆದ ಅವಳ ಮುಂದೆ. ಗಂಡನ ಸಿಟ್ಟಿಗೆ ಕಾರಣ ಆ ಕಾಗದ ಎನ್ನುವದನ್ನು ತಿಳಿದ ನಳಿನಿ ನಡುಗುವ ಕೈಗಳಿಂದಲೇ ಅದನ್ನು ಎತ್ತಿಕೊಂಡಳು. ಮೇಲಿನ ಕೈಬರಹ ಅಪರಿಚಿತವೆನಿಸಿದ್ದರಿಂದ ಕುತೂಹಲದಿಂದ ಗುಲಾಬಿ ಬಣ್ಣದ ತೆಳು ಕಾಗದ ಹೊರತೆಗೆದು ಓದತೊಡಗಿದಳು.

ಪ್ರಿಯ ನೂಲೂ,

ನಾನು ಟೂರಿಗೆ ಹೋಗಿದ್ದಾಗ ನಿನ್ನ ಮದುವೆಯಾದ ಸುದ್ದಿ ತಿಳಿದು ಬಂದಿತು. ನನ್ನ ಪಾಲಿಗೆ ಪ್ರಪಂಚ ಮುಳುಗಿಯೇ ಹೋಯಿತು. ಅಲ್ಲಿಯೇ ಡ್ಯಾಮ್‌ನಲ್ಲಿ ಧುಮುಕಿ ಜೀವನ ಕೊನೆಗಾಣಿಸಬೇಕೆಂದವನು ಇನ್ನೂ ಭೂಮಿಯ ಋಣ ತೀರಲಿಲ್ಲವೆಂದು ಕಾಣುತ್ತದೆ. ಅದು ಹೇಗೋ ತಿರುಗಿ ಬಂದೆ. ನೀನು ಇದೇ ಊರಿನಲ್ಲಿ ಇರುವ ಸುದ್ದಿ, ವಿಳಾಸ ಕಷ್ಟಪಟ್ಟು ಪತ್ತೆ ಮಾಡಿದೆ. ನಿನಗೆ ನನ್ನ ಮೇಲೆ ಪ್ರೀತಿ ಇರಲಿಲ್ಲವೇ? ನನಗೆ ಯಾಕೆ ಮೋಸಮಾಡಿದೆ ? ತಿಳಿಯಲಿಲ್ಲ ನನಗೆ. ನಿನ್ನ ಇಷ್ಟದಿಂದಲೇ ಮದುವೆಯಾದೆಯೋ ಅಥವಾ ಒತ್ತಾಯಕ್ಕೆ ಕಟ್ಟುಬಿದ್ದೆಯೋ ತಿಳಿಯಬೇಕೆಂದೇ ನಿನಗೆ ಈ ಪತ್ರ ಮನೆಯ ವಿಳಾಸಕ್ಕೆ ಬರೆಯುತ್ತಿದ್ದೇನೆ. ನನ್ನ ಜೀವ ತಳಮಳಿಸುತ್ತಿದೆ. ನಿನ್ನೆದುರು ಹೇಗೆ ತೋಡಿಕೊಳ್ಳಲಿ? ಯಾರ ಹತ್ತಿರ ಹೇಳಿಕೊಳ್ಳಲಿ? ನಿನ್ನ ಉತ್ತರಕ್ಕಾಗಿ ಕಾಯುತ್ತಿದ್ದೇನೆ.

ನಿನ್ನ

ದಿಲೀಪ

ಒಮ್ಮೆ ಓದಿ ಮುಗಿಸಿದ ನಳಿನಿ ಏನೂ ತಿಳಿಯದವಳಂತೆ ಮತ್ತೆ ಮತ್ತೆ ಓದಿದಳು. ಇನ್ನೂ ತಿಳಿಯಲಿಲ್ಲ ಅವಳಿಗೆ. ಮತ್ತೊಮ್ಮೆ ಓದತೊಡಗಿದಳು. ತೊಳೆದ ಕಾಲು ಟವಲಿನಿಂದ ಒರೆಸುತ್ತ ಬಂದ ನಾಗರಾಜ ಹೆಂಡತಿ ಇನ್ನೂ ಕೈಯಲ್ಲಿ ಕಾಗದ ಹಿಡಿದು ಓದುತ್ತಿರುವುದನ್ನು ಕಂಡು ತಾಳ್ಮೆಗೆಟ್ಟು ಕೂಗಿದ.

"ಆಮೇಲೆ ಪಾರಾಯಣ ಮಾಡುವಂತೆ ಆ ಪ್ರೇಮಪತ್ರಾ. ನನಗೆ ತಿನ್ನಲಿಕ್ಕೆ ಕೊಡು ಮೊದಲು" ಆ ತಿರಸ್ಕಾರದ ತಿವಿತದಿಂದ ಬೆವೆತ ನಳಿನಿ ತೊದಲಿದಳು.

"ಯಾರು ಈ ಕಾಗದಾ ಬರೆದವರು? ಯಾರು ಈ ದಿಲೀಪ... ನನಗ... ನನಗ ಏನೂ ಗೊತ್ತಿಲ್ಲ."

"ಓಹೋಹೋ ಏನೂ ಗೊತ್ತಿಲ್ಲದs ನಿನ್ನ ಹೆಸರು, ನನ್ನ ಅಡ್ರೆಸ್ಸು ಎಲ್ಲಾ ಸ್ಪಷ್ಟಾಗಿ ಛಂದಾಗಿ ಬರದಾನ, ನಾನು ಆಫೀಸಿಗೆ ಹೋದಮ್ಯಾಲೆ ನಿನಗೆ ಸಿಗಲಿ ಅಂತ ಮನೀ ಅಡ್ರೆಸ್ಸಿಗೇ ಬರದಾ. ಆದರ ದುರ್ದೈವ ನಂದೋ ನಿಂದೋ ಇವತ್ತ ಆಫೀಸಿಗೆ ಹೋಗೂ ಮುಂದ ದಾರಿಯೊಳಗs ಪೋಸ್ಟ್‌ಮನ್ ಭೆಟ್ಟಿಯಾಗಿ ಈ ಪತ್ರಾ ನನ್ನ ಕೈಯ್ಯಾಗs ಕೊಟ್ಟ. ಸಾರಿ ಹಾಂ ಮತ್ತ ನಿನ್ನ ಕೇಳದs ನಿನಗ ಬಂದ ಪತ್ರಾ ನಾ ಒಡದು ಓದಿಬಿಟ್ಟೆ, ನನ್ನ ತಲೀ ಕೆಟ್ಟುಹೋಯ್ತು. ಸುಮ್ಮಸುಮ್ಮನs ಸಂಜೀತನಾs ಅಲ್ಲೆs ಇಲ್ಲೆs ಸುತ್ತಾಡಿ ಈಗ ಮನೀಗ ಬಂದೆ. ಬರದs ಅತ್ಲಾಗ ಹಾಳಾಗಿಹೋಗಿದ್ದರ ಛಲೋ ಆಗ್ತಿತ್ತೋ ಏನೋ" ಮನಸ್ಸಿನಲ್ಲಿಯ ಸಿಟ್ಟನ್ನೆಲ್ಲ ಬಡಬಡ ಕಾರಿಕೊಂಡ ನಾಗರಾಜ.

ನಳಿನಿ ಪ್ರಪಂಚವೇ ಮುಳುಗಿಹೋದವರ ಹಾಗೆ ಎತ್ತಲೋ ದಿಟ್ಟಿಸುತ್ತ ಕುಳಿತಿದ್ದಳು. ಗಂಡನ ಒಂದೊಂದು ಮಾತೂ ಇರಿಯುತ್ತಿದ್ದವು. ಚುಚ್ಚಿ ಚುಚ್ಚಿ ಮೈಯ ರಕ್ತವೆಲ್ಲ ಬಸಿದುಹೋದಂತಾಗಿ ಮುಖ ಬೆಳ್ಳಗಾಗಿತ್ತು. ಗಂಡನ ಮಾತಿಗೆ ಏನು ಉತ್ತರ ಕೊಡಬೇಕೋ ತಿಳಿಯಲಿಲ್ಲ. ಹೇಳಿದರೂ ಗಂಡ ವಿಶ್ವಾಸವಿಡುವ ಸ್ಥಿತಿಯಲ್ಲಿ ಇಲ್ಲ ಎನ್ನುವದು ಖಚಿತವಾಗಿತ್ತು. ಯಾರಿರಬಹುದು ಈ ದಿಲೀಪ ? ತನ್ನ ಎರಡು ವರ್ಷಗಳ ಕಾಲೇಜು ಜೀವನದಲ್ಲಿ ಯಾವ ಗೆಳೆಯನಿಂದಲೂ ಪ್ರೇಮಪತ್ರ ಬಂದಿರಲಿಲ್ಲ. ಆಗ ಬಂದಿದ್ದರೆ ಓದಿ ಖುಷಿಪಡುತ್ತಿದ್ದಳೋ ಏನೋ. ಆದರೆ ಲೀನಾ. ಸುಷಮಾ ರಂಥ ಬ್ಯೂಟಿ ಕ್ವೀನ್‌ಗಳು ಕಾಲೇಜಿನಲ್ಲಿರುವಾಗ ಎದ್ದುಕಾಣವ ರೂಪವಿರದ ತನ್ನಂಥವಳಿಗೆ ಪ್ರೇಮಪತ್ರ ಬರೆಯುವವರಾದರೂ ಯಾರು ? ಆಗ ಬಯಸಿದರೂ ಬಾರದ ಪ್ರೇಮಪತ್ರ ಈಗ ಬಂದು ತನ್ನ ಜೀವನವನ್ನೇ ಹಾಳು ಮಾಡುತ್ತಿದೆ. ಏನು ಮಾಡಲಿ? ಯಾರ ಮುಂದೆ ತೋಡಿಕೊಳ್ಳಲಿ. ಅವ್ವನಿಗೆ ತಿಳಿದರೆ ಎದೆ ಒಡೆದುಕೊಂಡಾಳು. ದೂರದ ಊರಿನಲ್ಲಿರುವ ಅಣ್ಣನಿಗೆ ಹೇಳಿದರಾದರೂ ಏನು ಪ್ರಯೋಜನ. ಅವನು ಯಾವ ರೀತಿ ತನಗೆ ಸಹಾಯ ಮಾಡಬಲ್ಲ? ಯೋಚಿಸಿದಷ್ಟು ತಲೆಸಿಡಿತ ಹೆಚ್ಚಾಯಿತೇ ಹೊರತು ಯಾವ ದಾರಿಯೂ ಸಿಗಲಿಲ್ಲ. ತನ್ನದೇ ಸತ್ವಪರೀಕ್ಷೆ. ತಾನೇ ಸ್ವತಃ ಎದುರಿಸಬೇಕು. ಇದನ್ನು ಹೇಗಾದರೂ ಶತಪ್ರಯತ್ನ ಮಾಡಿ ಈ ಕಲಂಕವನ್ನು ಹೋಗಲಾಡಿಸಿಕೊಂಡು ಗಂಡನ ಪ್ರೀತಿ ವಿಶ್ವಾಸ ಮತ್ತೆ ಗಳಿಸಬೇಕೆನ್ನುವ ದೃಢನಿರ್ಧಾರಕ್ಕೆ ಬಂದಾಗ ಹೊರಗೆ ಬಾಗಿಲು ಸದ್ದಾಯಿತು. ಹಾಲು ಬಂದಿತ್ತು. ಮನೆ ಎಲ್ಲ ಕತ್ತಲೆಯಲ್ಲಿ ಮುಳುಗಿತ್ತು. ಗಂಡ ಮನೆಯಲ್ಲಿರಲಿಲ್ಲ. ಎದ್ದು ದೀಪ ಹಚ್ಚಿ ದೇವರಿಗೆ ಕೈ ಮುಗಿದು ಹಾಲು ಕಾಯಿಸಿ ಅನ್ನ ಮಾಡಿದಳು.

"ತಾಟು ಹಾಕೀನಿ. ಊಟಾ ಮಾಡಬರ್ರಿ" ಹೊರಗಿನಿಂದ ಬಂದ ಗಂಡನಿಗೆ ಕಂಪಿಸುವ ಧ್ವನಿಯಲ್ಲಿ ಕರೆದಳು ನಳಿನಿ.

"ನಾ ಖಾನಾವಳಿಯೊಳಗ ಊಟಾ ಮಾಡಿ ಬಂದೆ. ನೀ ಮಾಡಿದ್ದು ಬೇಕಾದರ ನೀನಽ ತಿನ್ನು ಹೋಗು" ಕೆನ್ನೆಗೆ ಎರಡೇಟು ಹೊಡೆದಿದ್ದರೂ ಪೆಟ್ಟಾಗುತ್ತಿರಲಿಲ್ಲ ನಳಿನಿಗೆ. ಮನಸ್ಸಿಗೆ ತುಂಬಾ ನೋವಾಯಿತು. ಬಿಕ್ಕಿ ಬಿಕ್ಕಿ ಅಳುತ್ತ ಗಂಡನ ಕಾಲು ಹಿಡಿದಳು.

"ನೀವು ಹೀಗೆ ತಪ್ಪು ತಿಳಿಕೋಬ್ಯಾಡ್ರಿ. ನಾನು ಯಾರನ್ನೂ ಪ್ರೀತಿ ಮಾಡಿಲ್ಲ; ನಿಮ್ಮನ್ನು ಬಿಟ್ಟು. ಈ ದಿಲೀಪ ಯಾರೋ ನನಗ ಗೊತ್ತೇ ಇಲ್ಲ. ನನ್ನ ಮಾತು ನಂಬಿರಿ. ನಾನು ನಿಮ್ಮ ಕೈಹಿಡಿದ ಹೆಂಡತಿ. ನೀವಽ ನನಗ ದೇವರು...."

"ಛೀ ಇಂಥಾ ಯೂಸಲೆಸ್ ಆರ್ಗ್ಯುಮೆಂಟ್ಸ್ ಎಲ್ಲಾ ಕಟ್ಟಿಡು. ಈಗ ಮೂರು ತಿಂಗಳಾತು ನಿನ್ನ ಗುರುತಾಗಿ. ಮೊದಲ ಯಾರ್‍ಯಾರ್‍ನ ಪ್ರೀತಿ ಮಾಡಿದ್ಯೋ ಯಾರ್‍ಯಾರ ಕೂಡ ಅಡ್ಡಾಡಿದ್ಯೋ ಯಾರಿಗೆ ಗೊತ್ತು. ಈಗ ಇಲ್ಲದ್ದಽ ಸೋಗು ಮಾಡಬ್ಯಾಡಾ."

ದುಃಖದಿಂದ ಗಂಟಲು ಕಟ್ಟಿದ ನಳಿನಿ ಮತ್ತೆ ತಡವರಿಸಿದಳು. ಮಾತನಾಡಲು ಶಬ್ದ ಸಿಗದೆ ಒದ್ದಾಡಿದಳು. ಬಿಕ್ಕುಗಳ ಮಧ್ಯೆ ಬಾಯಿಬಿಟ್ಟಳು.

"ನಾನು ನಿರಪರಾಧಿ ಅನ್ನೋದು ನನ್ನ ದೇವರಿಗೇ ಗೊತ್ತು. ನಿಮಗೆ ಹೇಗೆ ನಂಬಿಕೆಯಾದೀತು. ಏನು ಮಾಡಲಿ ಅದಕ್ಕೆ ನಾನು. ಏನು ಬೇಕಾದರೂ ಮಾಡಿಯೇನು? ಆದರೆ ಈ ಕಲಂಕ ಹೋರೋದು ನನ್ನಿಂದ ಸಾಧ್ಯವಿಲ್ಲ. ಯಾರೋ ಈ ದಿಲೀಪ... ಯಾರಿರಬಹುದು...?" ಎನ್ನುತ್ತಿದ್ದಂತೆ ಅವಳ ಮುಖದಲ್ಲಿ ಆಶ್ಚರ್ಯ ಮಿಂಚಿತು. "ಹಾಂ. ಹಾಂ. ಇವನು ಯಾರು ಅನ್ನೋದನ್ನ ನಾನು ಪತ್ತೇ ಹಚ್ಚತೀನಿ. ಅವನು ಯಾರು ಎಂಥಾವನು ಅನ್ನೋದನ್ನ ನಾನೂ ನೋಡಬೇಕಲಾ. ಆದರ... ಆದರಽ ನೀವು ?"

"ಏನದು, ಆದರೆ?"

"ಆದರೆ ಒಂದು ಮಾತು, ನೀವು ಈಗಿನಿಂದ ಇಷ್ಟು ಸಿಟ್ಟಿಗೆದ್ದು ಒದರ್ಯಾಡಿ ನನ್ನ ಕೈಕಾಲು ಕೆಡಿಸಬ್ಯಾಡರಿ. ನನಗ ಒಂದು ಉಪಾಯ ಹೊಳದsದ. ಅವನ್ನ ಕಂಡುಹಿಡೀತೀನಿ. ಯಾರೂ ಅನ್ನೂದನ್ನ ನಿಮಗ ತೋರಿಸತೇನಿ. ಆದರ ಅವನ್ನ ಬಲಿಯೊಳಗ ಹಾಕೋಬೇಕಾದರ ನಾನು ಅವಗ ಒಂದು ಪ್ರೇಮ ಪತ್ರಾ ಬರೀಬೇಕಾಗತದ. ನನ್ನ ನಂಬಿರಿ ನೀವು. ನಾನು ಏನೂ ತಪ್ಪು ಮಾಡಿಲ್ಲಾ ಅದಕ್ಕ..." ನಿಂತುಬಿಟ್ಟಿತು ನಳಿನಿಯ ನಾಲಿಗೆ.

"ಹಾಳಾಗಿ ಹೋಗು, ನನ್ನ ತಲೀನ ಕೆಟ್ಟುಹೋಗೇದ. ಆ ಸುದ್ದಿ ನೆನಪಾದರ ನನ್ನ ತಲೀ ಕಾಯ್ತದ. ಬಾಯ್ಮುಚ್ಚಿಕೊಂಡು ಬೀಳು ಹೋಗು".

ಒಂದು ಸಲ ನಿರ್ಧಾರ ಮಾಡಿದ ನಳಿನಿ ಗಂಡನ ಮಾತುಗಳಿಗೆ ಮತ್ತೆ ಅಳಲಿಲ್ಲ. ಎದೆ ಕಲ್ಲು ಮಾಡಿಕೊಂಡು ಹೇಳಿದಳು.

"ಇದು ನನ್ನ ಮರ್ಯಾದೆ ಪ್ರಶ್ನೆ. ಯಾರ ಮುಂದೂ ಹೇಳಬ್ಯಾಡ್ರಿ. ನಿಮ್ಮ ಕಾಲು ಬೀಳತೀನಿ. ನನಗ ಹದಿನೈದು ದಿನ ಅವಧಿ ಕೊಡ್ರಿ. ನಾನು ನಿರಪರಾಧಿ ಅನ್ನೂದು ನಿಮಗ ತೋರಿಸಿಕೊಡ್ತೀನಿ. ನೀವು ಮೊದಲಿನಾಂಗs ಇರ್ರಿ. ನನ್ನ ದೂರ ಮಾಡಬ್ಯಾಡ್ರೀ" ನಳಿನಿಯ ಕೆನ್ನೆಯ ಮೇಲೆ ಕಣ್ಣೀರು ಹರಿಯುತ್ತಿದ್ದರೂ ಅವಳತ್ತ ಲಕ್ಷ್ಯ ಕೊಡದೆ 'ನಾನು ಈಗ ಮಲಕೋತೀನಿ. ಕಾಡಬ್ಯಾಡ ನನ್ನ ಎದ್ದು ಹೋಗು ಇಲ್ಲಿಂದ' ಎಂದು ಕೈಯಲ್ಲಿಯ ಸಿಗರೇಟು ಆರಿಸಿ ಒಗೆದು ಮುಸುಕು ಎಳೆದು ಮಲಗಿದ ನಾಗರಾಜ.

ಹತ್ತು ದಿನಗಳ ಮೇಲೆ ಒಂದು ಸಂಜೆ ಮನೆಗೆ ಬಂದ ಗಂಡನ ಕೈಯಲ್ಲೊಂದು ಪಾಕೀಟನ್ನಿಟ್ಟಳು ನಳಿನಿ. ನಾಗರಾಜ ಸಿಟ್ಟಿನಿಂದಲೇ ಅದನ್ನು ಒಡೆದ. ಸಣ್ಣ ಫೋಟೋ ಒಂದಿತ್ತು ಅದರಲ್ಲಿ ಪತ್ರ ಓದುವ ಮೊದಲು ಒಮ್ಮೆ ಕೆಕ್ಕರಗಣ್ಣಿನಿಂದ ಅದನ್ನು ದಿಟ್ಟಿಸಿದ ನಾಗರಾಜ ಮುಷ್ಟಿಯಲ್ಲಿ ಹಿಚುಕಿ ಮುದ್ದೆ ಮಾಡುವವನಿದ್ದ, ನಳಿನಿ ಉಪಾಯವಾಗಿ ಅವನ ಕೈಯಲ್ಲಿ ಪತ್ರ ಕೊಟ್ಟು ಫೋಟೋ ಬಿಡಿಸಿಕೊಂಡಳು. ಹಣೆ ಮುಚ್ಚುವಂತೆ ಕೂದಲು ಬೆಳೆಸಿ ಜರ್ಕಿನ್ ಹಾಕಿದ್ದ ತಲವಾರ ಮೀಸೆಯ ಯುವಕ ನೋಡಲು ಪಕ್ಕಾ ರೌಡಿಯ ಹಾಗಿದ್ದ. ನಳಿನಿಯ ಮೈಯೆಲ್ಲ ಕುದಿಯಿತು. ತನ್ನ ಸುಂದರವಾದ ಬಾಳನ್ನೇ ಹೊಸಕಿ ಹಾಕುತ್ತಿದ್ದಾನಲ್ಲ ಇವ. ತನ್ನ ಪಾಲಿನ ಯಮದೂತ.

ಪತ್ರದಲ್ಲಿ ಇವಳ ಉತ್ತರಕ್ಕೆ ಸಂತೋಷಪಟ್ಟು ಸ್ವರ್ಗ ಸಿಕ್ಕಿದವರಂತೆ ವರ್ಣಿಸಿದ್ದ,. ಅವಳ ಕೋರಿಕೆಯಂತೆ ಫೋಟೋ ಕಳಿಸಿದ್ದ. ಸಾಧ್ಯವಿದ್ದಷ್ಟು ಬೇಗ ಎಲ್ಲಿಯಾದರೂ ಭೆಟ್ಟಿಯಾಗೋಣವೆಂದು ಸೂಚಿಸಿದ್ದ. ಮೈ ಉರಿಯುತ್ತಿದ್ದರೂ ಉತ್ತರ ಬರೆದಳು ನಳಿನಿ.

ಪ್ರಿಯ ದಿಲೀಪ,

ನಿನ್ನ ಪತ್ರ ಫೋಟೋ ತಲುಪಿದವು. ತುಂಬಾ ಥ್ಯಾಂಕ್ಸ್. ನಿನ್ನನ್ನು ಕಣ್ಣಾರೆ ಕಂಡಷ್ಟು ಸಂತೋಷವಾಯಿತು ನನಗೆ. ಸ್ವರ್ಗ ಮೂರೇ ಬೆರಳು ಉಳಿದಿದೆ. ನಿನ್ನನ್ನು ಯಾವಾಗ ಕಾಣುವೆನೋ ಎಂದು ಹೃದಯ ಹಾತೊರೆಯುತ್ತಿದೆ. ಬರುವ ಶನಿವಾರ ೫.೩೦ ಗಂಟೆಗೆ 'ಪಾರ್ಕ ಕ್ಯಾಂಟೀನ್' ತೋಟದಲ್ಲಿ ಭೆಟ್ಟಿಯಾಗೋಣ. ಅಂದು ನನ್ನ ಗಂಡ ಟೂರಿಗೆ ಹೋಗುವವರಿದ್ದಾರೆ. ಒಪ್ಪಿಗೆ ತಾನೇ? ಮರೆಯಬೇಡ. ಶನಿವಾರ ಸಂಜೆ. ಅಲ್ಲಿಯವರೆಗೆ ಬಾಯ್ ಬಾಯ್.

ನಿನ್ನ

ನಲೂ

ಸಹಿ ಮಾಡಿ ಮುಗಿಸುತ್ತಿದ್ದಂತೆ ನಳಿನಿಯ ಕೆನ್ನೆಗೊಂದು ಏಟು ಬಿತ್ತು. ಮೈಯ ಕಸುವನ್ನೆಲ್ಲ ಹಾಕಿ ಹೊಡೆದಿದ್ದ ನಾಗರಾಜ. ಸಿಟ್ಟು ಅದುಮಿಡಲು ಸಾಧ್ಯವಾಗದೆ. ಥರಥರ ನಡುಗುತ್ತಿದ್ದ. ಕೂಡಲೇ ನಳಿನಿ ಕೆನ್ನೆ ಸವರಿಕೊಳ್ಳುತ್ತ "ನೀವು ಸ್ವಲ್ಪ ಸಮಾಧಾನ ತೊಗೊಳ್ರಿ. ಹಾಂಗ ಮಾಡತಿದ್ದರ ಈ ಪತ್ರಾ ಬರದು ನಿಮಗ ಯಾಕ ತೋರಸತಿದ್ದೆ. ನಿಮಗ ತಿಳಿಯೂ ಹಾಂಗ ಯಾಕ ಬರಿತಿದ್ದೆ. ನಾನು ಅವನ್ನ ಭೆಟ್ಟಿಯಾಗತೇನಿ. ಆದರ ಒಬ್ಬಾಕೀನs ಅಲ್ಲ, ನಿಮ್ಮ ಜೋಡೀನs ಭೆಟ್ಟಿಯಾಗತೇನಿ."

ಹೆಂಡತಿಯ ದೈನ್ಯಾವಸ್ಥೆಗೋ, ಏನಾಗುವದೋ ನೋಡೋಣ ಎನ್ನುವ ಕುತೂಹಲದಿಂದಲೋ ನಾಗರಾಜ ಅರೆಮನಸ್ಸಿನಿಂದ 'ಹೂಂ'ಗುಟ್ಟಿದ. ಮೇಲೆ ನೋಡುವುದಕ್ಕೆ ಶಾಂತವಾಗಿದ್ದರೂ ನಳಿನಿಯ ಎದೆ ಶನಿವಾರ ಬೆಳಗಿನಿಂದಲೂ ಡವಗುಟ್ಟುತ್ತಿತ್ತು. ಹೇಗೆ ಮನೆಗೆಲಸ ಮಾಡಿದಳೋ ಹೇಗೆ ತಯಾರಾದಳೋ ಗಂಟುಮುಖದ ಗಂಡನನ್ನು ತಯಾರುಮಾಡಿ ಹೇಗೆ ಐದು ಗಂಟೆಗೇ 'ಪಾರ್ಕ ಕ್ಯಾಂಟೀನ್'ಗೆ ಹೊರಟಳೋ ದೇವರಿಗೆ ಗೊತ್ತು. ಸುಮ್ಮನೆ ಕೂಡ್ರುವ ಬದಲು ಚಹಾ ಹೇಳಿದ್ದಾಯ್ತು. ತಿನಿಸು ಇಬ್ಬರ ಗಂಟಲಲ್ಲೂ ಇಳಿಯುವ ಹಾಗಿರಲಿಲ್ಲ. ಹತ್ತು ಹದಿನೈದು ನಿಮಿಷಗಳನ್ನು ಮುಳ್ಳಿನ ಮೇಲೆ ಕುಳಿತಂತೆ ಕಳೆದಳು ನಳಿನಿ. ನಾಗರಾಜ ಸಿಗರೇಟು ಹಚ್ಚಿ ಎತ್ತಲೋ ನೋಡುತ್ತ ಹೊಗೆ ಕಾರುತ್ತಿದ್ದ. ನಳಿನಿ ತಿವಿದು ಗಂಡನಿಗೆ ಸನ್ನೆ ಮಾಡಿದಳು.

ಕೆಂಪು ಪಟ್ಟೆಯ ಉದ್ದ ತೋಳಿನ ಅಂಗಿಯಿಂದ ಅರ್ಧ ಎದೆ ಹೊರಗೆ ಕಾಣುತ್ತಿತ್ತು. ಮೈ ತೊಗಲಿಗೆ ಹತ್ತಿಕೊಂಡಂತಿದ್ದ ಕರಿ ಪ್ಯಾಂಟು, ಹಣೆಯ ಮೇಲೆ ಕೂದಲು, ಕೈಯಲ್ಲಿ ಉರಿಯುವ ಸಿಗರೇಟು, ತುಟಿಗಳ ಮೇಲೆ ವಂಚನೆಯ ನಗೆ. ಅತ್ತಿತ್ತ ನೋಡುತ್ತ ಎಲ್ಲರನ್ನೂ ದಾಟಿ ಹೆಚ್ಚು ಜನರಿಲ್ಲದ ಜಾಗದಲ್ಲಿದ್ದ ಇವರ ಮಗ್ಗುಲಿನ ಟೇಬಲ್ಲಿಗೇ ಬಂದು ಕುಳಿತ. ನಿಮಿಷಗಳ ಮೇಲೆ ನಿಮಿಷಗಳು ಕಳೆದವು. ಯಾರಿಂದಲೂ ಯಾವ ಮಾತೂ ಇಲ್ಲ. ನಳಿನಿಯ ತುಟಿಗಳ ಮೇಲೆ ನಗು ಅರಳುತ್ತಿತ್ತು. ನಾಗರಾಜನಿಗೆ ಸುಮ್ಮನಿರಲಾಗಲಿಲ್ಲ. ಹುಬ್ಬೇರಿಸಿ ಪ್ರಶ್ನಿಸುವಂತೆ ಹೆಂಡತಿಯನ್ನು ನೋಡಿದ. ಅವಳು ಬಗ್ಗಿ ತೀರಾ ಮೆಲ್ಲಗೆ ಪಿಸುಮಾತಿನಲ್ಲಿ ಹೇಳಿದಳು. "ನಾನೇ ನಳಿನಿ ಎನ್ನುವದು ಅವನಿಗೆ ಗೊತ್ತೇ ಇಲ್ಲ. ಕಾರಣ ಅವನು ನನ್ನನ್ನು ಮೋಡಿಯೇ ಇಲ್ಲ. ಇನ್ನು ಸ್ವಲ್ಪ ಹೊತ್ತು ಸುಮ್ಮನs ಕೂಡ್ರಿ, ನೋಡೋಣ ಮಜಾ."

ಅಸ್ವಸ್ಥನಾದವನಂತೆ ದಿಲೀಪ ಅತ್ತಿತ್ತ ನೋಡುತ್ತಲೇ ಇದ್ದ. ಯಾರಾದರೂ ಹೆಣ್ಣುಮಕ್ಕಳು ಕಂಡಕೂಡಲೇ ದಿಟ್ಟಿಸಿ ನೋಡಿ ಮುಗುಳುನಗಲು ಪ್ರಯತ್ನಿಸಿ ಅವರಿಂದ ಪ್ರತಿಕ್ರಿಯೆ ಬರದೆ ಸುಮ್ಮನಾಗುತ್ತಿದ್ದ. ಹದಿನೈದು ನಿಮಿಷ ಕಳೆಯುವಷ್ಟರಲ್ಲಿ ನಾಗರಾಜ ಮತ್ತೆ ಕಾಫಿ ತರಿಸಿದ್ದ.

ದಿಲೀಪನಂಥದೇ ವೇಷಭೂಷಣದ ಇನ್ನೊಬ್ಬ ಬಂದು ಹಲ್ಲು ಕಿರಿದು ಬೆನ್ನು ಚಪ್ಪರಿಸಿ ಅವನ ಬದಿಗೇ ಕುಳಿತ. "ಏನೋ ದಿಲ್ಯಾs, ಇಲ್ಲೇನು ನಡಸೀದಿ ಒಬ್ಬನs ಹೊಸಾ ಬ್ಯಾಟಿ ಹಿಡಿದಿಯೇನು ?" ಇಬ್ಬರೂ ಅಸಹ್ಯ ನಗೆ ನಕ್ಕರು.

ನಳಿನಿ ನಾಗರಾಜ ಅವರ ಮಾತಿನತ್ತ ಕಿವಿಕೊಟ್ಟರು.

"ಅರೆ ಯಾರ? ಹೊಸಾ ಬ್ಯಾಟೇನೆ ಮತ್ತ. ಈ ದಿಲೀಪ ಹಳೇ ಹಳೇ ಮಾಲು ನೋಡೂವವ ಅಲ್ಲೋ ಖಾನ್ಯಾ, ಮಜಾ ಮಾಡಬೇಕು. ಹೊಸಾ ಹೊಸಾ ಮಾಲಿನ ಕೂಡs ಮತ್ತ."

"ಯಾರಪಾ ಆಕಿ. ಹೊಸಾ ಮಾಲು ನಿನ್ನ ಬಲ್ಯಾಗ ಬಿದ್ದಾಕಿ ? ಹೆಸರರ ಹೇಳಲ್ಲ. ನಾವು ಜಿಗರಿ ದೋಸ್ತರಲ್ಲೇನು? ನಮ್ಮ ಮುಂದೆ ಹೇಳದ ಯಾರಿಗೆ ಹೇಳತೀದಿ."

"ಇದು ಅಂಥಾ ಇಂಥಾ ಮಾಲು ಅಲ್ಲೋ. ಮಿಸ್ ಅಲ್ಲ ಮಿಸೆಸ್. ಆದರ ನಾನs ಇನ್ನೂ ನೋಡಿಲ್ಲ ಆಕಿನ್ನ. ಹೀಂಗ ಒಬ್ಬರ ಮನ್ಯಾಗ ಲಗ್ನಪತ್ರ ಸಿಕ್ಕಿತುs. ಹೆಸರು ಗೊತ್ತಾತು. ಮಜಾ ಮಾಡಬೇಕು ಅನಿಸಿತು. ಗೆಳೆಯನ ತಂಗಿಯಿಂದ ಗಂಡನ ಮನೀ ಅಡ್ರೆಸ್ಸೂ ಪತ್ತೆಹಚ್ಚಿದೆ. ಭೂಪಾ! ಪ್ರೇಮ ಪತ್ರಾ ಬರದs ಬಿಟ್ಟೆ. ಗಂಡ ಬಕರಾ ಕಾಣ್ತದ. ಹೆಂಡತಿ ತಿರುಗಿ ಪತ್ರಾ ಬರೆದು ಫೋಟೋ ತರಿಸಿಕೊಂಡಳು. ಇವತ್ತ ಇಲ್ಲೆ ಕೂಡೂಣು ಅಂತ ಡೇಟು ಕೊಟ್ಟಾಳ. ಅದಕ್ಕs ದಾರೀ ನೋಡಿಕೋತ' ಕೂತೇನಿ. ಏನು ಅಡಚಣೆ ಆಯ್ತೋ ಏನೋ, ಹಕ್ಕಿ ಇನ್ನೂ ಬರಲಿಲ್ಲ."

"ಇನ್ನೇನು ಬಿಡು. ಹಕ್ಕಿ ಕೈಯಾಗ ಸಿಕ್ಕಮ್ಯಾಲೆ ಬ್ಲ್ಯಾಕ್‌ಮೇಲೂ ಮಾಡತಿ ಬಿಡಪಾ ನೀನು. ಪರೀಕ್ಷೆದಾಗ ಲಾಗ ಒಗೀತಿದ್ರೂ ಇಂಥಾದ್ದರಾಗ ಬೇಕಾದಷ್ಟು ಉಪಾಯ ಹೋಳೀತಾವ ನಿನ್ನ ತಲೀಗೆ, ಹೊಡೀ ಮಜಾ ಹೊಡೀ..... ಮಗನs."

ಸಿಟ್ಟಿನಿಂದ ಕೆಂಪಡರುತ್ತಿದ್ದ ಗಂಡನ ಮುಖ ನೋಡಿ ಇನ್ನೇನು ಗದ್ದಲವಾಗುವದೋ ಎಂದು ಹೆದರಿದ ನಳಿನಿ ಮೃದುವಾಗಿ ಗಂಡನ ಕೈಹಿಡಿದು ಎಬ್ಬಿಸಿ ಕ್ಯಾಂಟೀನ್‌ನೊಳಗಿನ ಫ್ಯಾಮಿಲಿ ರೂಮಿಗೆ ಕರೆದೊಯ್ದಳು.

"ಅವನ್ನ, ಆ ಬದ್ಮಾಷನ್ನ ಅಲ್ಲೇ ಹಿಚಿಕಿಬಿಡ್ತಿದ್ದೆ. ನಲಿನಿ ನೀ ಯಾಕ ನನ್ನ ಬಿಡಲಿಲ್ಲ. ಬಿಡು ನನ್ನ ನೋಡ್ತೀನಿ ಅವನ್ನ ಒಂದು ಕೈ."

ಮೆತ್ತಗೆ ಗಂಡನ ಕೈ ಸವರುತ್ತ ಕಂಪಿಸುವ ಧ್ವನಿಯಲ್ಲಿ-

"ಇದು ನನ್ನ ಮಾನದ ಪ್ರಶ್ನೆ ಅದ ಹೌದಲ್ಲೊ. ಅವಗ ಬುದ್ಧೀ ಕಲಿಸೂದು ನಮ್ಮ ಕೆಲಸಲ್ಲ. ನಿಮ್ಮ ಪ್ರೀತಿ ನನಗ ತಿರುಗಿ ಸಿಕ್ಕರ ಸಾಕು...." ಮಾತಿನ ಕೊನೆಗೆ ನಳಿನಿಯ ಕಣ್ಣೀರು ಉಕ್ಕಿ ಹರಿಯಿತು.

ಹೆಂಡತಿಯ ಕಣ್ಣೀರು ಒರೆಸುತ್ತ "ನನ್ನ ಕ್ಷಮಿಸು ನಳಿನೀ. ನಿನಗೆ ಭಾಳ ತ್ರಾಸ ಕೊಟ್ಟೆ" ಎಂದ ನಾಗರಾಜ. ಬಾಗಿಲಿಗೆ ಬಂದ ಮಾಣಿಗೆ ಹೇಳಿದ-

"ಗುಲಾಬ ಜಾಮೂನು, ಜಿಲೇಬಿ, ಮೈಸೂರುಪಾಕು."

***

■■

# ಬಕ್ತ್ಯಾವರ

ಬಕ್ತ್ಯಾವರ ಸೈಫುಲ್ಲಾನನ್ನು ಮದುವೆಯಾದ ದಿನ ಎಲ್ಲ ಸಾಮಾನ್ಯ ದಿನಗಳಂತೆಯೇ ಇತ್ತು. ಮದುವೆಯ ಶುಭಕಾರ್ಯಗಳೆಲ್ಲ ನೀರಸವಾಗಿ ನಡೆದವು. ಎಲ್ಲ ಮದುವೆಯ ಸಮಾರಂಭಗಳಲ್ಲಿಯಂತೆ ಇಲ್ಲಿ ವಾದ್ಯ ಬಾರಿಸುವವರೂ ಇರಲಿಲ್ಲ. ಆನಂದೋಲ್ಲಾಸಕ್ಕೆ ಅಸ್ಪದವೇ ಇರಲಿಲ್ಲ.

ಗಂಡನೊಡನೆ ಹೊರಡುವ ಮೊದಲು ಪಾಶಾಳ ಕಾಲ ಮೇಲೆ ಬುಡ ಕಡಿದ ಬಳ್ಳಿಯಂತೆ ಬಿದ್ದು ಹೊರಳಾಡಿ ಬಕ್ತ್ಯಾವರ ಅತ್ತಳು. ಸೈಫುಲ್ಲಾ ಕೊರಳಲ್ಲೊಂದು ಮಲ್ಲಿಗೆಯ ಮಾಲೆಯಿಂದ ಅಲಂಕೃತನಾಗಿ ಅಪರಾಧಿಭಾವದಿಂದ ದೃಷ್ಟಿಸಿದಳು. ಅವನು ತನ್ನ ದೃಷ್ಟಿ ನೆಲದಲ್ಲಿಟ್ಟು, ತಲೆಯನ್ನು ಬಗ್ಗಿಸಿ ಮೃದುವಾಗಿ 'ಹುಜೂರ, ನಾನು ಆಜನ್ಮಪರ್ಯಂತ ನಿಮ್ಮ ಪಾದಸೇವಕನಾಗಿಯೇ ಉಳಿಯುವೆ' ಎಂದ.

ಪಾಶಾ ತನ್ನ ಪಾನದಾನ ತೆಗೆದು ನೂರರ ನೋಟೊಂದನ್ನು ತೆಗೆದು ಸೈಫುಲ್ಲಾನಿಗೆ ಕೊಟ್ಟು ಸುಮ್ಮನೆ ಒಳಕ್ಕೆ ಹೋರಟು ಹೋದಳು.

ಪಾಶಾಳ ಇಂಗಿತವನ್ನರಿತ ಅವಳ ವೃದ್ಧ ದಾಸಿ-ಜಹೂರಬೀ ಹೊರಗೆ ಅಲಂಕೃತವಾಗಿ ಮುಸುಕುಹಾಕಿದ ಟಾಂಗಾದ ಬಳಿ ಬಕ್ತ್ಯಾವರಳನ್ನು ಕರೆದುಕೊಂಡು ಬಂದು ಸೈಫುಲ್ಲಾನ ಮಗ್ಗುಲಿಗೆ ಕೂಡ್ರಿಸಿದಳು. ಟಾಂಗಾವಾಲಾ ಚಬಕ ಝಾಡಿಸಿದೊಡನೆ ಕುದುರೆ ನಾಗಾಲೋಟದಿಂದ ಓಡಿತು.

ಒಡಲಲ್ಲಿ ಹೂವಿದ್ದ ಕೆಂಪು ರೇಷ್ಮೆ ಸೀರೆಯಿಂದ ಅಲಂಕೃತಳಾದ ಬಕ್ತ್ಯಾವರಳ ಕಪ್ಪು ಬಣ್ಣ ಇನ್ನಷ್ಟು ಒಡೆದು ಕಾಣುವಂತಿತ್ತು. ಜಹೂರಬೀಯ ಮಗಳು ಸಲಾಮತ್ 'ಹಸೀನಾ ಹೇರ್ ಆಯಿಲ್' ಪೂಸಿ ಅವಳಿಗೆ ಸುಂದರವಾಗಿ ಜಡೆ ಹೆಣೆದಿದ್ದಳು. ಅವಳ ಪುಟ್ಟ ಕರಿಯ ಪಾದಗಳನ್ನು ಕೆಂಪು ಮಖಮಲ್ಲಿನ ಚಪ್ಪಲಿ ಬಳಸಿದ್ದವು.

ಟಾಂಗಾ ಹೊರಟೊಡನೆ ಸೈಫುಲ್ಲಾ ಅವಳ ಕೈಗಳನ್ನು ಹಿಡಿದುಕೊಂಡು ಮಾತನಾಡದೆ ಅವಳನ್ನೇ ದಿಟ್ಟಿಸಿದ. ತನ್ನ ವಿಚಾರಗಳಲ್ಲೇ ಮುಳುಗಿ ಏಳುತ್ತಿದ್ದ ಬಕ್ತ್ಯಾವರ ಅತ್ತ ಕಡೆಗೆ ಅಲಕ್ಷ್ಯದಿಂದಿದ್ದಳು. ಸೈಫುಲ್ಲಾನ ಹಸಿದ ಕಣ್ಣುಗಳಿಗೆ ಆಹಾರವಾಗದಂತೆ ಅಡಗಿಕೊಳ್ಳಲು ಇಂದು ಅವಳು ಯಾವ ಕಂಬದ ಆಶ್ರಯವನ್ನೂ ಕೋರುವಂತಿರಲಿಲ್ಲ. ಅವನ ಮೃದುಸ್ಪರ್ಶದಿಂದಲೂ ಅವಳು ಚೇತರಿಸಿಕೊಳ್ಳಲಿಲ್ಲ. ಅವಳ ಚೂಪುಗದ್ದ ಹಿಡಿದು ಹಗುರಾಗಿ ಮುಖಮೇಲೆತ್ತಿದ ಸೈಫುಲ್ಲಾ. ಮುಸುಕು ಅವಳ ನುಣುಪಾದ ತಲೆಯಿಂದ ಜಾರಿ ಹೆಗಲನ್ನು ಆಶ್ರಯಿಸಿತು. ಕಪ್ಪು ಆಕಾಶದಲ್ಲಿ ಸಾವಿರ ಚುಕ್ಕೆಗಳು ಪಳಕ್ಕನೆ ಮಿನುಗಿದಂತೆ ಅವ ಕಪ್ಪುಕೂದಲಿಗೆ ಸಿಂಪಡಿಸಿದ ಬೆಳ್ಳಿಯ ಚಿಮುಕು ಥಳ ಥಳ ಹೊಳೆಯಿತು. ಈಗ ಬಕ್ತ್ಯಾವರ ಅವನೆಡೆಗೆ ನೋಡಿದಳು. ತಮ್ಮಿಬ್ಬರ ನೋಟ ಕೂಡಿದೊಡನೆ ಪರವಶಳಾದಂತೆ ಕಣ್ಣು ಕೆಳಕ್ಕಿಳಿಸಿದಳು. ಅವನ ವಿಶಾಲ ವಕ್ಷಸ್ಥಳದ ಮೇಲೆ ತನ್ನ ತಲೆಯನ್ನೊರಗಿಸಿ ಕಣ್ಣು ಮುಚ್ಚಿದಳು. ಆದರೂ ಅವಳ ಮನಸ್ಸಿಗೆ ಶಾಂತಿ ಸಿಗಲಿಲ್ಲ. ಟಾಂಗಾದ ಟಕ್ ಟಕ್ ಸದ್ದು ಸೈಫುಲ್ಲಾನ ಎಡೆಬಡಿತದೊಡನೆ ಕೂಡಿಕೊಂಡು ತಾನು ಒಂದು ದೊಡ್ಡ ಉಕ್ಕಿನ ಕಾರಖಾನೆಯಲ್ಲಿರುಂತೆ ತೋರಿತವಳಿಗೆ. ಸುತ್ತಿಗೆಯ ಏಟು ತಾಳಬದ್ಧವಾಗಿ ತನ್ನ ತಲೆಯ ಮೇಲೆ ಬೀಳುತ್ತಿರುವಂತೆ ಭಾಸವಾಯಿತು. ಈ ತೊಡಕಿನ ಹಾದಿಯಲ್ಲಿ ತಾನೊಬ್ಬಳೇ ಇಲ್ಲ ಎಂದೂ ಎನ್ನಿಸಿತು. ಕೋಮಲ ಶರೀರದ ಮಂದಸ್ಮಿತ ಮುಖವೊಂದು ಈ ಚಕ್ರದಲ್ಲಿ ಪಿಶಾಚಿಯಂತೆ ತನ್ನನ್ನು ಹಿಂಬಾಲಿಸುತ್ತಿದೆ ಎಂದುಕೊಂಡಳು ಬಕ್ತ್ಯಾವರ.

ಸಂಕಟದಿಂದ ಒದ್ದಾಡುತ್ತಿದ್ದ ಬಕ್ತ್ಯಾವರ ಸೈಫುಲ್ಲಾನ ಎದೆಯ ಮೇಲೆ ಹೊರಳಾಡುತ್ತ ಚೀರಿದಳು. 'ನನ್ನ ಪಾಡಿಗೆ ನನ್ನನ್ನು ಬಿಡು. ನನ್ನೊಬ್ಬಳನ್ನೇ ಬಿಟ್ಟುಬಿಡು.' ಇವನು ಅವಳನ್ನು ಇನ್ನಷ್ಟು ಅವಚಿಕೊಂಡು ಹೇಳಿದ: 'ಸ್ವಲ್ಪ ಸಮಾಧಾನ ತಾಳು ಬಕ್ತು. ಇನ್ನೇನು ಬಂದೇಬಿಟ್ಟಿತು ನಮ್ಮ ಮನೆ. ತುಂಬಾ ಆಯಾಸವಾಗಿದೆಯೇ?'

ಇಲ್ಲ, ಅವಳಿಗೇನೂ ಆಯಾಸವಿಲ್ಲ. ಹಾಸುಗಲ್ಲಿನ ಮೇಲೆ ನಡೆದ ಟಾಂಗಾದಲ್ಲಿ ಕುಳಿತ ಅವಳು ತನ್ನ ಹಗಲುಗನಸಿನಲ್ಲೇ ಮುಳುಗಿದ್ದಳು. ಆ ಮುಖವನ್ನೂ, ನಗುವನ್ನೂ ಚೆನ್ನಾಗಿ ಬಲ್ಲಳು ಅವಳು. ಅವಳ ಹೆಸರೂ ಗೊತ್ತಿದೆ. ಅವಳೇ ನವಾಬ ವ್ಹಿಕಾರ್ ಜಂಗ್‌ರ ಮಗಳು ತಾಹಜೀಬ್ ಸಾಹಿಬ್ ಜಾದಿ. ತಾಹಜೀಬ್ ಮತ್ತು ಬಕ್ತ್ಯಾವರ ಕೂಡಿಯೇ ಬೆಳೆದವರು. ಮೊದಲಿನವಳು ತೋಟದಲ್ಲಿ ಬೆಳೆಸಿದ ಸುಂದರ ಗುಲಾಬಿ ಹೂವಿನಂತಿದ್ದರೆ ಬಕ್ತ್ಯಾವರ ಕಾಡು ಮಲ್ಲಿಗೆಯಂತೆ. ಇಬ್ಬರೂ ತಮ್ಮ ತಮ್ಮ ರೀತಿಯಲ್ಲಿ ಮೋಹಕವಾಗಿಯೂ ಇದ್ದರು.

ನವಾಬ ವ್ಹಿಕಾರ ಜಂಗ್‌ರ ಗುಮಾಸ್ತನಾಗಿ ಸೈಫುಲ್ಲಾ ಕೆಲಸಕ್ಕೆ ಸೇರಿದ ಮೇಲೆ ಬಕ್ತ್ಯಾವರ ಅವನ ಕಣ್ಣಿಗೆ ಬಿದ್ದ ದಿನವೇ ಅವಳನ್ನು ಪ್ರೇಮಿಸತೊಡಗಿದ. ಮೊದಲ ನೋಟದ ಪ್ರೇಮವಾಗಿತ್ತದು. ಈ ಹೊಸ ಅನುಭವದಿಂದ ರೋಮಾಂಚನಗೊಂಡಿತು ಅವಳ ಮನ. ಈ ಗುಟ್ಟನ್ನು ಮುಚ್ಚಿಡಲಾರದೆ ಒಳ್ಳೆಯ ಅವಕಾಶ ಸಿಕ್ಕಾಗ ತಾಹಜೀಬ್‌ಳ ಎದುರು ರಟ್ಟು ಮಾಡಿದಳು. ಮುಕ್ತಮನಸ್ಸಿನಿಂದ ನಗುತ್ತಾ ಬಕ್ತ್ಯಾವರಳ ಜಡೆಯೆಳೆದು ಮೆತ್ತಗೆ ಏಟು ಕೊಟ್ಟಳು. ಅವಳ ಬೆನ್ನ ಮೇಲೆ ತಾಹಜೀಬ್. ತಾನೂ ಇಂತಹ ಪ್ರಸಂಗದಲ್ಲಿ ಸಿಕ್ಕವಳೇ. ರಶೀದ ನವಾಬನೊಡನೆ ತಾನು ಮದುವೆಯಾಗಲಿರುವವಳಲ್ಲವೇ.

ತನ್ನ ಜೀವನದ ಮಹತ್ತ್ವದ ಈ ದಿನ ಗತಜೀವನದ ವಿವರನೆಲ್ಲ ಬಕ್ತ್ಯಾವರಳ ಕಣ್ಣಮುಂದೆ ಸರಿಯಿತು. ನವಾಬ ವ್ಹಿಕಾರ ಜಂಗ್‌ರ ಭವ್ಯ ಅರಮನೆಯ ಒಂದು ಭಾಗದ ಸುಸಜ್ಜಿತ ಮನೆಯಲ್ಲಿ ಕಳೆದ ಆ ಕ್ಷಣಗಳನ್ನು ಮರೆಯುವದು ಸಾಧ್ಯವೇ? ಈಗ ಅಮೇರಿಕಾದಲ್ಲಿರುವ ಛೋಟೆ ನವಾಬನಿಂದ ಚಿಕ್ಕವಳಿರುವಾಗ ತಾನು ತಿನ್ನುತ್ತಿದ್ದ ಹೊಡೆತಗಳನ್ನು ನೆನೆಸಿ ನಡುಗಿದಳು.. ಅಂತಹ ಪ್ರಸಂಗಗಳಲ್ಲೆಲ್ಲ ತಾಹಜೀಬ್ ತಪ್ಪದೆ ನಡುವೆ ಬಂದು ತನ್ನನ್ನು ಬಿಡಿಸುತ್ತಿದ್ದಳು. ಜಹೂರಜೀ ಛೋಟೆ ನವಾಬನಿಗೆ ಅಂಗಲಾಚುತ್ತಿದ್ದಳು 'ನವಾಬ ಸಾಹೇಬ್ ದಯಮಾಡಿ ಹೊಡಿಬೇಡಿರಿ ಅವಳನ್ನ. ನಿಮ್ಮ ಅಂತಃಪುರದ ಮೂಲೆಯಲ್ಲಿ ಬದುಕೋ ಅಲ್ಪ ಜೀವಿ ಅದು' ಎಂದು. ಇದನ್ನು ಕೇಳಿ ಛೋಟೆ ನವಾಬ ಬಕ್ತ್ಯಾವರಳಿಗೆ "ತಡೆ, ಇನ್ನೊಂದು ಸಲ ಸಿಕ್ಕಾಗ ಮಾಡ್ತೀನಿ ನಿನಗೆ" ಎಂದು ಕ್ರಿಕೆಟ್ ಬ್ಯಾಟ್ ಬೀಸುತ್ತಾ ಹೊರಗೆ ಹೋಗುತ್ತಿದ್ದ.

ಬಿಡುಗಡೆ ಹೊಂದಿದ ಬಕ್ತ್ಯಾವರ ಸಂತೋಷದಿಂದ ಓಡಿ ಹೋಗಿ ತಾಹಜೀಬ್‌ಳ ಕಾಲ ಬಳಿ ಕುಳಿತುಕೊಳ್ಳುವಳು. ಅವಳ ಮನಸ್ಸಿಗೆ ಆಗ ತುಂಬ ತೃಪ್ತಿ, ಸ್ವರ್ಗಸುಖ.

ಛೋಟೆ ನವಾಬ ಮತ್ತು ತಾಹಜೀಬ್‌ರಿಗೆ ಕುರಾನ ಕಲಿಸಲು ಮೌಲವಿಯೊಬ್ಬರು ಬರುತ್ತಿದ್ದರು. ಅವರಿಬ್ಬರೂ ಮೌಲವಿಯನ್ನು ತುಂಬ ಛೇಡಿಸಿದರೂ ಬೇಸರಗೊಂಡ ಅವರು ತಕರಾರು ಮಾಡದೆ ಸುಮ್ಮನಿರುತ್ತಿದ್ದರು. ಪಾಶಾಳ ಆಜ್ಞೆಯಂತೆ ಮೌಲವಿ ಭಕ್ತ್ಯಾವರಳಿಗೂ ಕುರಾನ ಕಲಿಸಲು ಆರಂಭ ಮಾಡಿದರು. ಎಲ್ಲರೂ ಆಶ್ಚರ್ಯಪಡುವಂತೆ ಛೋಟೆನವಾಬ ಮತ್ತು ತಾಹಜೀಬ್‌ರು ಇನ್ನೂ ಅರ್ಧ ಪುಸ್ತಕ ಓದಿದಾಗ ಇವಳು ಪೂರ್ತಿ ಕುರಾನ ಪಾಠ ಮುಗಿಸಿದ್ದಳು.

ಬಕ್ತ್ಯಾವರಳಿಗೆ ತನ್ನ ತಂದೆ-ತಾಯಿಗಳ ಬಗ್ಗೆ ಯಾವ ವಿಷಯವೂ ಗೊತ್ತಿರಲಿಲ್ಲ. ಗೊತ್ತುಮಾಡಿಕೊಳ್ಳುವ ಆಸ್ಥೆಯೂ ಅವಳಲ್ಲಿರಲಿಲ್ಲ. ಅಲ್ಪಸ್ವಲ್ಪ ತಿಳಿದಿದ್ದರೆಂದರೆ ತಾನು ಆರು ತಿಂಗಳ ಮಗುವಾಗಿದ್ದಾಗ ಒಂದು ದಿನ ತಾಯಿ ತನ್ನನ್ನು ಅಂತಃಪುರಕ್ಕೆ ಮಾರಿ ರಾತ್ರಿಯ ಕತ್ತಲೆಯಲ್ಲಿ ಕರಗಿ ಹೋಗಿದ್ದಳು ಎನ್ನುವುದು. ಅಂದಿನಿಂದ ಇಂದಿನವರೆಗೆ ನವಾಬರ ಮನೆಯೇ ತನ್ನ ಮನೆ. ಆ ಮನೆಯವರೇ ತನ್ನ ಒಡೆಯರೆಂದು ಭಾವಿಸಿ ಬೆಳೆದಿದ್ದಳು. ಆ ವಾತಾರವಣದಲ್ಲಿಯೇ ಅಖಂಡವಾಗಿ ಹೊಂದಿಕೊಂಡಿದ್ದಳು. ತನ್ನ ದೇಹದೊಳಗಿನ ಆತ್ಮ ಜಗದ್ವಂದ್ಯ ಅಲ್ಲಾ ಇರಿಸಿದ್ದಾದರೂ ತನ್ನ ದೇಹ, ರಕ್ತ ಮಾಂಸವೆಲ್ಲ ನವಾಬರ ಮನೆಯವರಿಗೇ ಮೀಸಲು ಎಂದು ನಂಬಿದ್ದಳು. ಈ ಭಾವನೆಯಿಂದಲೇ ಛೋಟೆ ನವಾಬನ ಹೊಡೆತಗಳನ್ನಾಗಲೀ, ಪಾಶಾಳ ಬೈಗುಳಗಳನ್ನಾಗಲೀ ಅವಳು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಪಾಶಾಳ ಕಾಲು ಒತ್ತುವುದು, ನವಾಬ ಸಾಹೇಬರ ಗುಡಗುಡಿ ತುಂಬಿಕೊಡುವದು,

ಹೂದಾನಿಗಳಲ್ಲಿ ಹೂಗಳನ್ನಿಡುವದು, (ತೋಟಿಗರಿಗೆ ಅಂತಃಪುರಕ್ಕೆ ಪ್ರವೇಶ ವಿಲ್ಲದ್ದರಿಂದ) ತಾಹಜೀಬ್‌ಳ ಕೋಣೆ ಚೊಕ್ಕಟ ಮಾಡುವದು ಇಂಥ ಚಿಲ್ಲರೆ ಕೆಲಸಗಳಿಂದಲೇ ಅವಳ ದಿನ ಕಳೆಯುತ್ತಿದ್ದವು. ದಿನ ಕಳೆಯುತ್ತಲೇ ಬಾಲೆ ಹೋಗಿ ತರುಣಿಯಾಗಿದ್ದಳು. ಒಂದು ದಿನ ಜಹೂರಬೀ 'ಇನ್ನು ಮೇಲೆ ನೀನು ಕುದುರೆಯಂತೆ ಕುಣಿಯುತ್ತಾ ನವಾಬ ಸಾಹೇಬರ ಕೋಣೆಗೆ ಹೋಗಬೇಡ. ಅವರ ಸೇವಕ ಕರೀಮಬಕ್ಷ ಇದ್ದಾನೆ ಆ ಕೆಲಸಕ್ಕೆ, ಇತ್ತಿತ್ತ ಅವನು ತುಂಬ ಸೋಮಾರಿಯಾಗಿದ್ದಾನೆ' ಎಂದು ಬುದ್ಧಿ ಹೇಳಿದ್ದಳು. ಅವರ ಮಾತು ಕೇಳುತ್ತ ಸಮೀಪದಲ್ಲೇ ನಿಂತಿದ್ದ ಕರೀಮಬಕ್ಷ ಜಹೂರಬೀಯನ್ನು ಕೆಂಗಣ್ಣಿನಿಂದ ದಿಟ್ಟಿಸುತ್ತ ತನ್ನ ಕೈಯಲ್ಲಿಯ ಹುಕ್ಕಾ ಕಸಿದುಕೊಂಡು ನವಾಬ ಸಾಹೇಬರ ಕೋಣೆಗೆ ಧಾವಿಸಿದ್ದ. ಅಂತಃಪುರದಲ್ಲಿ ಜಹೂರಬೀಯ ಅಧಿಕಾರವೆಷ್ಟು ಎನ್ನುವದನ್ನು ತಿಳಿದಿದ್ದ ಅವನು ಆ ಮುದುಕಿಗೆ ಎದುರುತ್ತರ ಕೊಡುವ ಸಾಹಸವನ್ನು ಮಾಡಿರಲಿಲ್ಲ.

ಒಂದು ದಿನ ನವಾಬ ಸಾಹೇಬರು ಅದೇಕೊ ಕ್ಲಬ್ಬಿನಿಂದ ಬೇಗನೆ ಮನೆಗೆ ಬಂದಿದ್ದರು. ಊಟ ಮಾಡಿ ವಿಶ್ರಾಂತಿಗೆ ಸೋಫಾದ ಮೇಲೆ ಅಡ್ಡಾಗಿದ್ದರು. ಪಾಶಾ ಬಕ್ತ್ಯಾವರಳನ್ನು ಕರೆದು ಬೆಳ್ಳಿಯ ತಟ್ಟೆಯಲ್ಲಿಟ್ಟ ಪಾನ್ ನವಾಬ ಸಾಹೇಬರಿಗೆ ಕೊಡಲು ಹೇಳಿದ್ದಳು. ಬಕ್ತ್ಯಾವರ ವಿನಯದಿಂದ ಬಗ್ಗಿ ತನಗೆ ಒಪ್ಪಿಸಿದ ಕೆಲಸವನ್ನು ಮಾಡಿದ್ದಳು. ಪಾನ್ ತೆಗೆದುಕೊಳ್ಳುವಾಗ ನವಾಬ್ ಸಾಹೇಬರು ಆಸಕ್ತಿಯಿಂದ ಅವಳನ್ನೇ ದಿಟ್ಟಿಸಿ ನೋಡಿ "ಬೇಗಮ್, ನಿಮ್ಮ ಪುಟ್ಟ ಕರೀಬೆಕ್ಕು ಬಹಳ ಸುಂದರವಾಗಿದೆ. ಇದನ್ನು ಇನ್ನೂ ಸೌಂದರ್ಯ ಸ್ಪರ್ಧೆಗೆ ಯಾಕೆ ಕಳಿಸಲಿಲ್ಲ ನೀವು ?" ಎಂದು ಹಾಸ್ಯ ಮಾಡಿದ್ದರು.

ನವಾಬರ ನಗೆಮಾತಿಗೆ ಪಾಶಾ ಬಾಯ್ತುಂಬ ನಕ್ಕಳು. ಸೌಂದರ್ಯ ಸ್ಪರ್ಧೆ ಎಂದರೆ ಏನು ಎನ್ನುವದು ತಿಳಿಯದಿದ್ದರೂ ಅವರು ತನ್ನ ಬಗ್ಗೆ ಮೆಚ್ಚುಗೆಯ ಮಾತನಾಡಿದರು ಎನ್ನುವದಷ್ಟು ಬಕ್ತ್ಯಾವರಳಿಗೆ ತಿಳಿದದ್ದು. ಮುಂದೆ ಛೋಟೆ ನವಾಬ ಕೂಡ ತನ್ನ ಹೆಸರು ಹಿಡಿದು ಕರೆಯದೆ 'ಕರೀಬೆಕ್ಕು' ಎಂದೇ ಕರೆಯಲು ಆರಂಭಮಾಡಿದ್ದ. ಅಂದಿನಿಂದ ಅವಳ ಬಗ್ಗೆ ವ್ಹಿಕಾರ ಜಂಗ್‌ರ ಮನೋಭಾವ ಬದಲಾಗಿತ್ತು. ಅವಳ ವಿಷಯದಲ್ಲಿ ಅವಳ ಆಸಕ್ತಿ ದಿನೇ ದಿನೇ ಹೆಚ್ಚುತ್ತಿತ್ತು. ಮುಗ್ಧೆಯಾದ ಅವಳು ಈ ಬದಲಾವಣೆಗೆ ನಿಜವಾದ ಕಾರಣವನ್ನು ಊಹಿಸುವುದೂ ಸಾಧ್ಯವಿರಲಿಲ್ಲ. ಪಾಶಾಳಿಗೆ ಇದರ ಅರಿವು ಇರಲಿಲ್ಲ. ನವಾಬ ಸಾಹೇಬರಲ್ಲಿ ಅವಳಿಗೆ ಸಂಪೂರ್ಣ ವಿಶ್ವಾಸವಿತ್ತು. ಮನೆ ತುಂಬ ಸಂಪತ್ತು, ಸುಶಿಕ್ಷಿತ ಹೆಂಡತಿ, ಯೋಗ್ಯ ಮಗ, ಸುಂದರಿಯಾದ ಮಗಳು, ಕೈಗೊಂದು ಕಾಲಿಗೊಂದು ಆಳು - ಇನ್ನೇನು ಬೇಕಾಗಿತ್ತು ಅವರ ಸುಖೀ ಜೀವನಕ್ಕೆ? ಅವರು ಎಂದೂ ಪಾಶಾಳನ್ನು ರೇಗಿಸಿದ್ದಾಗಲೀ, ನೋಯಿಸಿದ್ದಾಗಲೀ ಕಂಡುಬರುತ್ತಿರಲಿಲ್ಲ. ಅರಮನೆ ದಾಟಿ ಹೊರಗಿನ ಅವರ ರೀತಿ-ನೀತಿಗಳನ್ನು ಪಾಶಾ ಪ್ರಶ್ನಿಸುವ ಗೋಜಿಗೆ ಹೋಗುತ್ತಿರಲಿಲ್ಲ. ನವಾಬರೆಲ್ಲಾ ಹೆಚ್ಚಾಗಿ ತಮ್ಮ ವಿಲಾಸಮಯ ಜೀವನವನ್ನು ಮೆರೆಸುವುದರಲ್ಲಿಯೇ ಮಗ್ನರಾಗಿರುವದು ಪಾಶಾಳಿಗೆ ಗೊತ್ತಿದ್ದರೂ ಅವಳು ಇದುವರೆಗೆ ನವಾಬ ವ್ಹಿಕಾರ ಜಂಗ್‌ರ ಬಗ್ಗೆ ದೂರುಗಳನ್ನು ಕೇಳಿರಲಿಲ್ಲ. ಕೇಳಬೇಕೆಂಬ ಪ್ರಯತ್ನವನ್ನೂ ಮಾಡಿರಲಿಲ್ಲ.

ಕೊನೆಗೂ ಒಮ್ಮೆ ಸೈಫುಲ್ಲಾ ಸಾಕಷ್ಟು ಧೈರ್ಯ ತಂದುಕೊಂಡು ನವಾಬರ ಮುಂದೆ ಬಕ್ತ್ಯಾವರ ಬಗ್ಗೆ ಮಾತು ತೆಗೆದ. ನವಾಬಸಾಹೇಬರು ಸ್ವಲ್ಪ ಹೊತ್ತು ಅವರನ್ನೇ ದಿಟ್ಟಿಸಿ ನೋಡಿ ವಕೀಲರಂತೆ ಅವನಿಗೇ "ಅವಳ ಮರ್ಯಾದೆಗೆ ಕುಂದು ತರುವಂತಹ ಕೆಲಸ ಮಾಡೀಯಾ ಜೋಕೆ" ಎಂದು ಸವಾಲು ಹಾಕಿದ್ದರು. ಅವನು ಗಡಗಡ ನಡುಗುತ್ತಾ, ಕಿವಿಗಳನ್ನು ಹಿಡಿದುಕೊಂಡು ಹೇಳಿದ: "ಹುಜೂರ್, ನನ್ನ ಕನಸು -ಮನಸ್ಸಿನಲ್ಲಿಯೂ ಆ ಯೋಜನೆ ಬರಲಾರದು."

ನವಾಬ ಸಾಹೇಬರು ದೀರ್ಘವಾಗಿ ಯೋಚಿಸುತ್ತಿದ್ದು ಆಮೇಲೆ 'ಹುಂ' ಎಂದಿದ್ದರು. ಅದರಲ್ಲಿ ಒಪ್ಪಿಗೆ, ನಿರಾಕರಣೆ ಯಾವದೂ ಸ್ಪಷ್ಟವಾಗಿರಲಿಲ್ಲ. ಏಕಾಂತದಲ್ಲಿ ಪಾಶಾಳೊಡನೆ ಅಂದಿದ್ದರು, "ಆ ಸೊಗಸುಗಾರ ಸೈಫುಲ್ಲಾ ನಿಮ್ಮ ಕರೀಬೆಕ್ಕನ್ನು ಮದುವೆಯಾಗ ಬಯಸುತ್ತಾನೆ. ಪಾಶಾ, ಗೊತ್ತೇನು ನಿಮಗೆ ?"

"ಅಬ್ಬಾ! ಆ ಪೋರ ಈ ಆಟದಲ್ಲಿ ಯಾವಾಗ ಸಿಕ್ಕಿಕೊಂಡ?" ಎಂದು ಉದ್ಗಾರ ತೆಗೆದ ಪಾಶಾ ಸ್ವಲ್ಪ ಹೊತ್ತು ಯೋಚಿಸಿ ಮತ್ತೆ ಹೇಳಿದಳು, "ಇಂಥ ಆಜ್ಞಾಧಾರಕ, ನಮ್ಮ ಹುಡುಗಿಗೆ ಸಿಕ್ಕರೆ ನನ್ನ ಅಡ್ಡಿಯೇನಿಲ್ಲ. ಬಕ್ತ್ಯಾವರಳಿಗೆ ತಕ್ಕ ಜೊತೆ ಅವನು. ನನಗೂ ಅವಳ ಮದುವೆಯದೊಂದು ಸಮಸ್ಯೆಯೇ ಆಗಿತ್ತು. ಈಗ ಆ ಭಾರ ಇಳಿದಂತಾಯ್ತು." ಮಬ್ಬುಗತ್ತಲೆಯಲ್ಲಿ ನಿಂತು ಹೊಂಚಿ ಮಾತು ಕೇಳುತ್ತಿದ್ದ ಬಕ್ತ್ಯಾವರಳ ಸಂತೋಷಕ್ಕೆ ಪೂರ ಬಂದಿತ್ತು. ಓಡಲು ಹೊರಳಿದವಳು ತಾಹಜೀಬ್‌ಳನ್ನೇ ಎದುರಿಸಿದ್ದಳು. ತನ್ನ ಅವಳ ಅಂತಸ್ತನ್ನೇ ಮರೆತು ಅವಳನ್ನಪ್ಪಿ ಕುಣಿದಾಡಿದ್ದಳು. "ಸಾಹಿಬ್ ಜಾದಿ, ಈ ಸಂತೋಷದ ಸುದ್ದಿ ಕೇಳಿದೆಯಾ?" ಎಂದು ಮತ್ತೆ ಮತ್ತೆ ಕೇಳಿದ್ದಳು.

"ಓಹೋ ನಿನ್ನ ಜೊತೆಗೇ ನಾನೂ ಕೇಳಿದೆ. ನಾನು ಈಗಲೇ ಹೋಗಿ ಅಮ್ಮಾ ಜಾನ್‌ಗೆ ಹೇಳುತ್ತೇನೆ. ನಿನ್ನ ನಿಕಾಕ್ಕೆ ಬೇಗ ದಿನ ನಿಶ್ಚಯ ಮಾಡಿರೆಂದು. ನೋಡು ಬಕ್ತ್ಯಾವರ, ಅಮ್ಮಾಜಾನ್, ಅಬ್ಬಾಜಾನ್ ನಿನಗೆ ಕೈ ತುಂಬ ವರದಕ್ಷಿಣೆ ಕೊಡಬಹುದು. ಆದರೆ ನಾನು ಮಾತ್ರ ನೀನು ಬದುಕಿನುದ್ದಕ್ಕೂ ನನ್ನನ್ನು ನೆನಪಿಸಿಕೊಳ್ಳುವಂತಹ ಉಡುಗೊರೆ ಕೊಡುತ್ತೇನೆ" ಸಾಹಿಬ್ ಜಾದಿ ಪಿಸುಗುಟ್ಟಿದ್ದಳು.

"ನೀವು ಕೊಟ್ಟೇ ಕೊಡುತ್ತೀರಿ ಸಾಹಿಬ್‌ಜಾದಿ ನನಗೆ, ನಂಬಿಕೆಯಿದೆ. ನಾನು ಅದನ್ನು ನನ್ನ ಜೀವಕ್ಕಿಂತಲೂ ಹೆಚ್ಚು ಜೋಪಾನವಾಗಿಡುತ್ತೇನೆ"ಬಕ್ತ್ಯಾವರ ಉತ್ತರಿಸಿದ್ದಳು.

ಅವಳ ವಿಧಿ ತನ್ನ ಕೈವಾಡ ತೋರಿಸುವ ಆ ದಿನ ಕೊನೆಗೂ ಬಂದೇ ಬಿಟ್ಟಿತು. ಅಂದು ಪಾಶಾ ಮತ್ತು ತಾಹಜೀಬ್ ಯಾರದೋ ಮದುವೆಗೆ ಹೋಗಿದ್ದರು. ನವಾಬ ಸಾಹೇಬರಿಂದ ಬಕ್ತ್ಯಾವರಳಿಗೆ ಕರೆಬಂದಿತು. ಜಹೂರಬೀ ನವಾಬ ಸಾಹೇಬರ ಕೋಣೆಯಲ್ಲಿ ಕಾಲಿಡದಂತೆ ಅವಳನ್ನು ಎಚ್ಚರಿಸಿದ್ದರೂ ಈಗ ಸ್ವತಃ ಅವರೇ ಕರೆಯುತ್ತಿರುವಾಗ ಅವರ ಆಜ್ಞೆಯನ್ನೂ ಕಡೆಗಣಿಸುವಂತಿರಲಿಲ್ಲ. ಅವಳು ಅವರ ಕೋಣೆಗೆ ಹೋದಾಗ ಅವರೊಂದು ಆರಾಮಕುರ್ಚಿಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಬಕ್ತ್ಯಾವರ ಸುಮ್ಮನೆ ಹೋಗಿ ಅವರ ಆಜ್ಞೆಗೆ ಕಾಯುತ್ತಾ ತಲೆ ಬಾಗಿಸಿ ನಿಂತಳು. ನವಾಬ ಸಾಹೇಬರು ಆಪಾದಮಸ್ತಕ ಅವಳನ್ನು ತಮ್ಮ ತೋಳುಗಳಲ್ಲಿ ಬಂಧಿಸಿದರು. ಬಕ್ತ್ಯಾವರ ಹೆದರಿಕೆಯಿಂದ ಥರಥರ ನಡುಗಿದಳು.

"ಬಾಯಿಬಿಟ್ಟೆ ಎಂದರೆ ನೋಡು. ನಿನ್ನನ್ನೂ ಸೈಫುಲ್ಲಾನನ್ನೂ ಜೀವಂತ ಹುಗಿದುಬಿಡುತ್ತೇನೆ" ನವಾಬರು ಗರ್ಜಿಸಿದರು. ಮೂಕಳಾಗಿ ಬಕ್ತ್ಯಾವರಳ ಕಣ್ಣಿನಿಂದ ಪ್ರವಾಹವೇ ಹೊರಟಿತು.

ಆ ಅಪಾಯಕರ ಕ್ಷಣದಲ್ಲಿ ಯಾರೋ ಬಾಗಿಲು ಪರದೆ ಸರಿಸಿದರು. ಅಲ್ಲಿ ಪಾಶಾ ನಿಂತಿದ್ದಳು. ಅವಳು ಒಮ್ಮೆಲೇ ಪರದೆ ಮುಚ್ಚಿದವಳೇ ಹೊರಕ್ಕೆ ತಿರುಗಿ ತಾಹಜೀಬ್‌ಳಿಗೆ ತನ್ನ ಕೋಣೆಗೆ ಹೋಗಲು ಹೇಳಿದಳು. ಆಮೇಲೆ ಕೋಣೆಯೊಳಕ್ಕೆ ಬಂದವಳೇ ಏನೂ ಮಾತನಾಡದೆ ಅವರಿಬ್ಬರನ್ನು ಕೆಂಗಣ್ಣಿನಿಂದ ದುರುದುರು ನೋಡಿದಳು. ಆಮೇಲೆ ನವಾಬರನ್ನು ಕುರಿತು ಸ್ಪಷ್ಟವಾಗಿ, ವ್ಯಂಗ್ಯ ಧ್ವನಿಯಲ್ಲಿ "ನನ್ನಿಂದ ನಿಮ್ಮ ಕೆಲಸಕ್ಕೆ ತೊಂದರೆಯಾಯಿತೇ" ಎಂದಳು.

ಅತೃಪ್ತಕಾಮದಿಂದ ಕಂಪಿಸುತ್ತಿದ್ದ ನವಾಬ ಸಾಹೇಬ ಅಷ್ಟೇ ಕೊರೆದಂತೆ ಉತ್ತರಿಸಿದರು. "ಮತ್ತೇನು, ಅದನ್ನೇ ಮಾಡುತ್ತಿದ್ದೀಯಲ್ಲ." ಹಣೆಯ ಬೆವರು ಒರೆಸಿಕೊಳ್ಳುತ್ತಾ ಆರಾಮಕುರ್ಚಿಯಲ್ಲಿ ಕುಸಿದರು.

ಸ್ವತಃ ತಾವು ಪೇಚಿನಲ್ಲಿ ಸಿಕ್ಕಾಗಲೂ ನವಾಬ ಸಾಹೇಬರು ತನಗೆ ಕೊಟ್ಟ ಎದುರುತ್ತರದಿಂದ ಪಾಶಾ ದಂಗುಬಡೆದಳು. ಬಕ್ತ್ಯಾವರ ಅವಳ ಪಾದಗಳ ಮೇಲೆ ಬಿದ್ದು ಅತ್ತಳು. ಕಾಲಿನಿಂದಲೇ ಅವಳನ್ನು ಅತ್ತ ನೂಕಿ ಹೇಳಿದಳು ಪಾಶಾ, 'ನಾಯಿಯ ಹಾಗೆ ಸುಮ್ಮನೆ ಬಾಯಿ ಮುಚ್ಚಿ ಬಿದ್ದುಕೋ ಹೋಗು.'

ನವಾಬ ಸಾಹೇಬ ಮತ್ತು ಪಾಶಾಳ ನಡುವೆ ಮುಂದೆ ಏನು ಮಾತುಕತೆ ನಡೆಯಿತೋ ಬಕ್ತ್ಯಾವರಳಿಗೆ ತಿಳಿಯಲಿಲ್ಲ. ಅವಳು ತನ್ನ ಕೋಣೆಗೆ ಓಡಿ ಹೋಗಿ ಅಳುತ್ತಾ ಮೊಣಕಾಲೂರಿ ಅಲ್ಲಾನನ್ನು ಪ್ರಾರ್ಥಿಸಿದಳು. ಆಮೇಲೆ ಎದ್ದು ಮುಖ ತೊಳೆದುಕೊಂಡಳು. ಪಾಶಾ ಅವಳನ್ನು ಕರೆದದ್ದು ಕೇಳಿ ಚಳಿಯಲ್ಲಿ ನಡುಗುವ ಪಾರಿವಾಳದಂತೆ ನಡುಗುತ್ತಾ ಅವಳ ಮುಂದೆ ಹೋದಳು. ಕೋಣೆಯಲ್ಲಿ ಕೆರಳಿದ ಸಿಂಹಿಣಿಯಂತೆ ಅತ್ತಿಂದಿತ್ತ ಇತ್ತಿಂದತ್ತ ತಿರುಗುತ್ತಿದ್ದ ಪಾಶಾ ಅವಳನ್ನು ನೋಡಿ "ಕೃತಘ್ನಳೇ, ಹುಷಾರ್, ನೋಡು ನಿನ್ನನ್ನು ಹರಿದು ಚೂರು ಚೂರು ಮಾಡಿ ನಿನ್ನ ಎಲುವುಗಳನ್ನು ನಾಯಿಗೆ ಹಾಕುವೆ. ಇನ್ನೊಮ್ಮೆ...."

ಚಳಿಗಾಲದ ತರಗೆಲೆಯಂತೆ ಥರಥರ ನಡುಗುತ್ತಿದ್ದಳು ಬಕ್ತ್ಯಾವರ.

"ಬೇಗಮ್, ದೇವರಾಣೆ ಅವಳ ಮೇಲೆ ಸಿಟ್ಟಾಗಬೇಡ. ಅದು ನನ್ನ ತಪ್ಪೆಂದು ಒಪ್ಪಿಕೊಂಡಿದ್ದೇನಲ್ಲ. ಇದೊಂದು ಸಲ ಕ್ಷಮಿಸಿಬಿಡು" ಎಂದು ನಡುವೆಯೇ ತಡೆದರು ನವಾಬ ಸಾಹೇಬ.

"ನನ್ನ ಕಣ್ಣುಗಳನ್ನೇ ನಾನು ನಂಬುವಂತಿಲ್ಲ. ಇನ್ನು ಬೇರೆಯವರನ್ನು ..." ಪಾಶಾ ಸಿಟ್ಟಿನಿಂದ ಅರ್ಧಕ್ಕೆ ತಡೆದಳು.

"ನೀನು ಇನ್ನೂ ನನ್ನನ್ನು ಕ್ಷಮಿಸಿಯೇ ಇಲ್ಲ, ಪಾಶಾ" ವಿನಯದಿಂದ ನವಾಬ ಸಾಹೇಬರೆಂದರು.

"ಹೋಗಲಿ, ಇದೊಂದು ಸಲ ನಾನು ನಿಮ್ಮನ್ನು ಕ್ಷಮಿಸಿದ್ದೇನೆ. ಇನ್ನೊಮ್ಮೆ ಈ ವಿಷಯದಲ್ಲಿ ನನಗೆ ಸ್ವಲ್ಪ ಸಂಶಯ ಬಂದರೂ ನೋಡಿ ಎಚ್ಚರಿಕೆ. ನಿಮ್ಮಿಬ್ಬರ ಜೀವನವನ್ನೇ ತೆಗೆದುಕೊಳ್ಳುವೆ. ಇಲ್ಲವೆ ನಾನಾದರೂ ಸಾಯುವೆ."

ಅಲ್ಲಿಗೆ ಆ ಮಾತು ಮುಗಿದಿತ್ತು.

ನಿಧಾನವಾಗಿಯಾದರೂ ಪಾಶಾಳಿಗೆ ಮತ್ತೆ ನವಾಬ ಸಾಹೇಬರಲ್ಲಿ ಪ್ರೀತಿ, ವಿಶ್ವಾಸ ಮೂಡಿತ್ತು. ಆದರೆ ಅವರ ಗಂಡಸುತನ ಹಟಕ್ಕೆ ಬಿದ್ದಿತ್ತು. ತಮಗಾದ ಸೋಲನ್ನು ಅವರು ಇನ್ನೂ ಮರೆತಿರಲಿಲ್ಲ. ಪಾಶಾಳಿಗೆ ಒಂದು ದಿನ ವಿಪರೀತ ತಲೆನೋವು. ನವಾಬ ಸಾಹೇಬರು ಅವಳ ಪಲ್ಲಂಗದ ಮೇಲೆ ಹತ್ತಿರವೇ ಕುಳಿತು ಮೃದುವಾಗಿ ಹಣೆಗೆ ಮುಲಾಮು ತೀಡಿದರು. ಬಾಧೆ ಕಡಿಮೆಯಾಗಿ ಪಾಶಾ ನಿದ್ರೆಹೋದಳು. ಪಾಶಾ ನಿಜವಾಗಿಯೂ ನಿದ್ದೆ ಹೋಗಿದ್ದಾಳೋ ಇಲ್ಲವೋ ನೋಡಲು ನವಾಬ ಸಾಹೇಬರು ಧ್ವನಿ ಎತ್ತರಿಸಿ ಜಹೂರಬೀ ಎಂದು ಕೂಗಿದರು. ಅವಳು ಬಂದು ಅವರ ಆಜ್ಞೆಗೆ ಕಾಯುತ್ತ ನಿಂತಳು.

"ಜಹೂರಬೀ, ಇಂದು ನನಗೆ ನಿದ್ರೆ ಬರುವ ಹಾಗೆ ಕಾಣುವುದಿಲ್ಲ. ಲೈಬ್ರರಿಯಲ್ಲೇ ಇರುತ್ತೇನೆ. ಬಕ್ತ್ಯಾವರಳ ಕೈಯಲ್ಲಿ ಓವಲ್ಟಿನ್ ಕಳಿಸು" ಎಂದರು ನವಾಬ ಸಾಹೇಬ.

"ಹುಜೂರ್, ಕರೀಮಬಕ್ಷ ಇಂದು ರಜೆಯ ಮೇಲಿದ್ದಾನೆ. ಓವಲ್ಟಿನ್ ನಾನು ತರಲೇ" ಎಂದಳು. ಜಹೂರಬೀ ಮೆತ್ತಗಿನ ದನಿಯಲ್ಲಿ.

"ಮುದಿಗೊಡ್ಡೇ, ನಿನ್ನ ಬಕ್ತ್ಯಾವರಳನ್ನು ನಾನೇನು ಹರಿದು ತಿನ್ನುತ್ತೇನೆ ಎಂದು ತಿಳಿದಿದ್ದೀಯಾ? ಸುಮ್ಮನೆ ಅವಳ ಕೈಯಲ್ಲಿ ಕಳಿಸಿಕೊಡು" ನವಾಬ ಸಾಹೇಬರ ಆಜ್ಞೆಯನ್ನು ತಿಳಿಸಿದಾಗ ಅವಳು ಥರ ಥರ ನಡುಗಿಬಿಟ್ಟಳು.

"ನಾನು ಬಹಳ ದಣಿದಿರುವೆ. ನನಗಾಗಿ ನೀನೇ ಈ ಕೆಲಸ ಮಾಡಲಾರೆಯಾ?" ಅಂಗಲಾಚಿದಳು ಬಕ್ತ್ಯಾವರ.

"ನವಾಬ ಸಾಹೇಬರಿಗೆ ನೀನೇ ಓವಲ್ಟಿನ್ ತರಬೇಕಂತೆ. ಆದ್ದರಿಂದ ನೀನು ಹೋಗಲೇಬೇಕು" ಜಹೂರಬೀ ಅಸಹಾಯಕಳಂತೆ ನುಡಿದಳು.

ಒಂದು ಟ್ರೇಯಲ್ಲಿ ಓವಲ್ಟಿನ್ ಗ್ಲಾಸ್ ಇರಿಸಿಕೊಂಡು ಬಕ್ಕ್ಯಾವರ ಮನಸ್ಸಿಲ್ಲದ ಮನಸ್ಸಿನಿಂದ ಲೈಬ್ರರಿಗೆ ಹೊರಟಳು. ಕಾಲು ಥರಥರ ನಡುಗುತ್ತಿದ್ದವು ಹೆದರಿಕೆಯಿಂದ. ಪುಸ್ತಕದ ಪಂಜರದಲ್ಲಿ ಸೆರೆಯಾಗಿದ್ದ ಆ ಎಷ್ಟೋ ಜನ ವಿವೇಕಿಗಳ ಮಧ್ಯೆ ನವಾಬ ಸಾಹೇಬರು ಬಕ್ಕ್ಯಾವರಳ ಆಗಮನಕ್ಕಾಗಿ ಉಸಿರು ಬಿಗಿಹಿಡಿದು ಕಾದು ಕುಳಿತಿದ್ದರು. ಅವರಲ್ಲಿ ಯಾರಾದರೂ ಆ ಕಾಗದದ ಸೆರೆಯಿಂದ ಇಳಿದು ಬಂದು 'ನವಾಬ ವ್ಹಿಕಾರ್ ಜಂಗ್ ಸಾಕು ಮಾಡು ಈ ನಿನ್ನ ಅವಿವೇಕದ ಕೆಲಸವನ್ನು, ಬಕ್ಕ್ಯಾವರ ನಿನ್ನ ನೀರಡಿಕೆಗೆ ಒಂದು ಗುಟುಕು ಸ್ವಚ್ಛ ತಣ್ಣೀರಾಗಬಹುದು ಅಷ್ಟೇ. ಅದರಿಂದ ನಿನ್ನ ಕಾಮವೇನೂ ತಣಿಯದು. ಅವಳ ಹೃದಯೇಶ್ವರ ಸೈಫುಲ್ಲನಿಗಾಗಿ ಅವಳನ್ನು ಬಿಟ್ಟುಬಿಡು.' ಎಂದು ವಿವೇಕ ಹೇಳುವುದು ಅಸಾಧ್ಯವಾದ ಮಾತಾಗಿತ್ತು. ಒಂದು ವೇಳೆ ಯಾರಾದರೂ ಹೇಳಿದರೂ ಕೇಳದ ಪಶುವೃತ್ತಿ ಅವರಲ್ಲಿ ತಲೆ ಎತ್ತಿತ್ತು. ಗೋಡೆಯ ಮೇಲಿನ ಹಲ್ಲಿಯೊಂದು ರೆಕ್ಕೆಹುಳುವನ್ನು ಜಪ್ಪಿಸಿ ಕುಳಿತಿರುವುದನ್ನೇ ನೋಡುತ್ತ ಒರಗಿದ್ದರು ನವಾಬ ಸಾಹೇಬ. ತನ್ನ ಬಾಲವನ್ನು ಸಿಂಬಿ ಸುತ್ತಿ ಜಪ್ಪಿಸಿ ಹುಳುವನ್ನು ಹಿಡಿಯಲು ಹಾತೊರೆಯುತ್ತಿದ್ದ ಹಲ್ಲಿಯಿಂದ ಹುಳುವು ಪ್ರತಿ ಸಲವೂ ತಪ್ಪಿಸಿಕೊಳ್ಳುತ್ತಿತ್ತು. ಆದರೂ ಮತ್ತೆ ಹತ್ತಿರದಲ್ಲೇ ಸುಳಿದಾಡುತ್ತಿತ್ತು. ಹಲ್ಲಿಯಿಂದ ದೂರ ಸ್ಥಳಕ್ಕೆ ಹಾರಿ ಹೋಗದ ಹುಳದ ಬಗ್ಗೆ ನವಾಬ ಸಾಹೇಬರು ಆಶ್ಚರ್ಯಪಡುತ್ತಿದ್ದರು. ಅವರ ಆಶ್ಚರ್ಯಕ್ಕೆ ಉತ್ತರವೋ ಎನ್ನುವಂತೆ ಬಕ್ಕ್ಯಾವರ ಲೈಬ್ರರಿಯಲ್ಲಿ ಕಾಲಿಟ್ಟಳು. ಟ್ರೇಯನ್ನು ಅವರ ಮುಂದಿದ್ದ ಟೀಪಾಯ್ ಮೇಲಿಟ್ಟು ಸಾಧ್ಯವಿದ್ದಷ್ಟು ಬೇಗ ಹಿಂತಿರುಗಿದಳು. ರೆಕ್ಕೆಹುಳ ಹಲ್ಲಿಯಿಂದ ದೂರ ಹಾರಿ ಹೋಗುವುದರಲ್ಲಿತ್ತು. ಇಂಥ ಹೊತ್ತಿನಲ್ಲಿ ಹಲ್ಲಿ ಸುಮ್ಮನಿದ್ದು ತನ್ನ ಬೇಟೆ ಉಳಿದುಕೊಳ್ಳಲು ಬಿಡಬೇಕು? ಚಟ್ಟನೆ ನವಾಬ ಸಾಹೇಬರೆದ್ದು ಬಕ್ಕ್ಯಾವರಳನ್ನು ಹಿಡಿದುಕೊಂಡರು. ಅವಳನ್ನು ವಶಪಡಿಸಿಕೊಳ್ಳಲು ಅವರು ಹೆಣಗಾಡುತ್ತಿರುವಾಗ ಪಾಶಾ ಗಾಯಗೊಂಡ ಸಿಂಹಿಣಿಯಂತೆ ಓಡಿಬಂದಳು. ಪ್ರಯತ್ನಪೂರ್ವಕವಾಗಿ ತನ್ನನ್ನು ಬಿಡಿಸಿಕೊಂಡ ಬಕ್ಕ್ಯಾವರ ಜೀವದಾಸೆಯಿಂದ ಹೊರಗೆ ಓಡಿದಳು.

ಮುಂದೆ ಏನಾಗುವುದೆನ್ನುವದನ್ನು ತನ್ನ ಅನುಭವದಿಂದ ಮೊದಲೇ ಊಹಿಸಿದ್ದ ಜಹೂರಬೀ, ಬಕ್ಕ್ಯಾವರ ಲೈಬ್ರರಿಗೆ ಬಂದೊಡನೆ ಪಾಶಾಳನ್ನು ಎಬ್ಬಿಸಿ ಅವಳ ಕಿವಿಯಲ್ಲಿ ಈ ವಿಷಯ ಉಸುರಿದ್ದಾಳೆನ್ನುವದು ನವಾಬ ಸಾಹೇಬರಿಗೆ ಅಂಥ ಸಮಯದಲ್ಲಿ ಅರಿವಾಗುವುದೆಂತು! ತನ್ನ ನೋವನ್ನು ಮರೆತು ಪಾಶಾ ಇಲ್ಲಿಗೆ ಓಡಿ ಬಂದಿದ್ದಳು.

ಮುಂದೆ ನವಾಬ ಸಾಹೇಬ ಮತ್ತು ಪಾಶಾರನ್ನು ಒಟ್ಟಿಗೆ ಬಕ್ಕ್ಯಾವರ ಎಂದೂ ನೋಡಲಿಲ್ಲ. ಅಂತಃಪುರದ ವಾತಾವರಣವೆಲ್ಲ ಉಸಿರುಕಟ್ಟಿಸುವಂತಾಯಿತು. ಒಮ್ಮೊಮ್ಮೆ ರಾತ್ರಿ ಬಹಳ ಹೊತ್ತಿನವರೆಗೂ ಪಾಶಾ ಯೋಚನಾಮಗ್ನಳಾಗಿ ಕಟಾಂಜನದಲ್ಲಿ ಅಡ್ಡಾಡುವದು ಬಕ್ಕ್ಯಾವರಳ ಕಣ್ಣಿಗೆ ಬೀಳುತ್ತಿತ್ತು. ಎಷ್ಟೋ ರಾತ್ರಿಗಳನ್ನು ಅಳುತ್ತ ಕಳೆದಿದ್ದರಿಂದಲೋ ಏನೋ ಅವಳ ಕಣ್ಣ ಸುತ್ತ ಕಪ್ಪು ಗೆರೆ ಬೆಳೆಯಿತು. ಆದರೂ ಮನಸ್ಸಿನ ಅಲ್ಲೋಲಕಲ್ಲೋಲವನ್ನು ಹೊರಗೆಡವದೆ ಅವಳ ಮುಖ ಶಾಂತವಾಗಿರುತ್ತಿತ್ತು.

ತಾಹಜೀಬ್‌ಳ ನಿಶ್ಚಿತಾರ್ಥದ ದಿನ ಸಮೀಪಿಸುತ್ತಿತ್ತು. ಅರಮನೆ ಚುರುಕಾಗಿ ಕೆಲಸ ಮಾಡಹತ್ತಿತ್ತು.

ನಿಶ್ಚಿತಾರ್ಥಕ್ಕೆ ಕೆಲವು ದಿನ ಉಳಿದಾಗ ಒಂದು ದಿನ ಪಾಶಾ ಇಡೀ ದಿನವೆಲ್ಲ ಅಟ್ಟದ ಮೇಲಿನ ಕೋಣೆಯಲ್ಲುಳಿದಳು. ಅರಮನೆಯ ಸಂಪತ್ತು ಆ ಕೋಣೆಯಲ್ಲಿತ್ತು. ಅಲ್ಲದೆ ಮದುವೆಗೆ ತಂದ ಲಕ್ಷಾವಧಿ ರೂಪಾಯಿಗಳ ಸಾಮಾನೂ ಅಲ್ಲಿಯೆ ಇದ್ದವು. ಆ ಕೋಠಿಕೋಣೆಯ ಹತ್ತಿರದ ಕೋಣೆಗಳಲ್ಲಿ ಮರದ ಸಾಮಾನುಗಳೂ, ಗಾಜಿನ ಸಾಮಾನು, ಪಾತ್ರೆ-ಪಡಗಗಳು, ಉಪಯೋಗವಿಲ್ಲದ ಇಲೆಕ್ಟ್ರಿಕ್ ಸಾಮಾನುಗಳೂ ಇದ್ದವು.

ಪಾಶಾ ಎಷ್ಟು ಹೊತ್ತಾದರೂ ಕೆಳಗೆ ಇಳಿದು ಬರಲಿಲ್ಲ. ಅದರಿಂದ ಚಿಂತಿತಳಾದ ತಾಹಜೀಬ್ ಜಹೂರಬೀಯೊಡನೆ ತಾನೇ ಅಟ್ಟ ಹತ್ತಿ ಹೋದಳು. ಕೋಠಿಕೋಣೆಗೆ ಹೋಗುವ ಬಾಗಿಲು ಮುಚ್ಚಿತ್ತು. ಅವಳು ಬಾಗಿಲು ಬಡೆದ ಸ್ವಲ್ಪ ಹೊತ್ತಿನ ಮೇಲೆ ಪಾಶಾ ಹೊರಬಂದಳು.

"ಅಮ್ಮಾಜಾನ್, ನಿಮ್ಮ ಆರೋಗ್ಯ ಸರಿ ಇಲ್ಲದಾಗ ಇಷ್ಟೇಕೆ ತೊಂದರೆ ತೆಗೆದುಕೊಳ್ಳುತ್ತಿರುವಿರಿ? ಎಷ್ಟೋ ಹೊತ್ತಿನಿಂದ ಒಬ್ಬರೇ ಕೆಲಸ ಮಾಡುತ್ತಿದ್ದೀರಿ. ಯಾಕೆ ಅರಮನೆಯ ಆಳುಕಾಳುಗಳೆಲ್ಲ ಸತ್ತುಹೋಗಿದ್ದಾರೇನು? ನಡೆಯಿರಿ, ನಿಮ್ಮ ದಾರಿ ನೋಡಿ ನೋಡಿ ನಾನೇ ನಿಮಗೆ ಸಹಾಯ ಮಾಡಲು ಬಂದಿದ್ದೇನೆ" ಎನ್ನುತ್ತ ಕೋಣೆಯ ಒಳಗೆ ಹೊರಟಳು ತಾಹಜೀಬ್. ಅವಳನ್ನು ತಡೆದು ಪಾಶಾ "ಬೇಡ ಮಗು, ಒಳಗೆ ಹೋಗಬೇಡ. ನಾನು ಎಲ್ಲ ಕೆಲಸ ಮಾಡಿ ಮುಗಿಸಿದ್ದೇನೆ. ಎಲ್ಲ ಸರಿಯಾಗಿದೆ. ಕೆಳಗೆ ಹೋಗೋಣ ನಡೆ" ಎಂದಾಗ ಮೂವರು ಕೂಡಿಯೇ ಕೆಳಗಿಳಿದು ಬಂದರು.

ಮರುದಿನ ಸಂಜೆ ಕತ್ತಲೆಯಾದ ಮೇಲೆ ಪಾಶಾ ಬಕ್ತ್ಯಾವರಳನ್ನು ಕರೆದು, "ಮಹಡಿಯ ಮೇಲಿನ ಕೋಣೆಯಲ್ಲಿ ನನ್ನ ಶಾಲು ಮರೆತು ಬಂದಿದ್ದೇನೆ ನಿನ್ನೆ. ತೆಗೆದುಕೊಂಡು ಬಾ ಹೋಗು, ಬೇಗ" ಎಂದಳು. ಬಹಳ ದಿನಗಳಿಂದ ತನ್ನೊಡನೆ ಮಾತನಾಡದ ಒಡತಿ ಇಂದು ಆಜ್ಞೆ ಮಾಡಿದ್ದರಿಂದ ಬಕ್ತ್ಯಾವರ ಹಿಗ್ಗಿ ಹೀರೇಕಾಯಿಯಾದಳು. ಶಾಲು ತರಲು ಕೂಡಲೆ ಓಡಿದಳು. ದಾರಿಯಲ್ಲಿ ತಾಹಜೀಬ್ ಎದುರಾದಳು.

"ಬಕ್ತು, ಇಷ್ಟು ಅವಸರದಿಂದ ಎಲ್ಲಿ ಹೊರಟೆ?"

"ಪಾಶಾ ಕೋರಿ ಕೋಣೆಯ ಕೀಲಿಕೈ ಕೊಟ್ಟಿದ್ದಾರೆ. ಅವರ ಶಾಲು ನಿನ್ನೆ ಅಲ್ಲಿಯೇ ಮರೆತು ಬಂದಿದ್ದಾರಂತೆ. ಅದನ್ನೆ ತರಲು ಹೊರಟಿದ್ದೇನೆ."

"ನಿನ್ನೆ ಇಡೀ ದಿನ ಅಮ್ಮಾಜಾನ್ ಮೇಲಿನ ಕೋಣೆಯಲ್ಲಿಯೇ ಇದ್ದಳು. ನಾನೂ ಬರ್ತೇನೆ ನಡೆ ನಿನ್ನೊಡನೆ. ಅಮ್ಮಾ ನನಗಾಗಿ ಏನೇನು ಮಾಡಿದ್ದಾಳೆ ನೋಡಬೇಕು ನಾನೂ."

"ನಿನ್ನ ನಿಶ್ಚಿತಾರ್ಥದ ತಯಾರಿ ಅಲ್ಲವೇ ಸಾಹಿಬಜಾದಿ ಇವೆಲ್ಲ. ಅದಕ್ಕೆ ಅವರೇ ಕೆಲಸ ಮಾಡುತ್ತಿದ್ದಾರೆ. ಇಲ್ಲದೆ ಹೋದರೆ ನಾವೇಕೆ ಬಿಟ್ಟೇವು ಅವರಿಗೆ ಕೆಲಸ ಮಾಡೋದಕ್ಕೆ. ನಾವಿರೋದಾದರೂ ಯಾಕೆ?" ಮಾತಿನೊಡನೆ ಬಕ್ತ್ಯಾವರಳ ಕಣ್ಣು ನೀರಿನಿಂದ ಮಿನುಗಿದವು.

ತಾಹಜೀಬ್ ಬಕ್ತ್ಯಾವರಳಿಗಿಂತ ಮುಂದಾದಳು. ಕೋರಿಕೋಣೆಗೆ ಬಕ್ತ್ಯಾವರ ಹೋಗುತ್ತಿದ್ದುದು ಇದು ಎರಡನೆಯ ಸಲ. ಎಲ್ಲ ಕಡೆಗೂ ಕತ್ತಲಾಗಿತ್ತು. ಬಾಗಿಲಿಗೆ ಬಂದು ಮುಟ್ಟಿದ ಮೇಲೆ ಬಕ್ತ್ಯಾವರ ಕೀಲಿ ತೆಗೆದು ಬದಿಗೆ ಸರಿದು ನಿಂತಳು. ತಾಹಜೀಬ್‌ಳೇ ಮೊದಲು ಒಳಗೆ ಹೋಗಲಿ ಎಂದು. ಒಡತಿಯಲ್ಲವೇ ಅವಳು. ಅವಳನ್ನು ತಾನು ಹಿಂಬಾಲಿಸಬೇಕು. ಒಳಗೆ ಹೋದ ತಾಹಜೀಬ್ ಸ್ವಿಚ್ ಒತ್ತಲು ಹೋದಳು. ಮರುಕ್ಷಣದಲ್ಲಿ ಅವಳ ಚೀರುವಿಕೆಯಿಂದ ಇಡೀ ಕೋಣೆಯೇ ಪ್ರತಿಧ್ವನಿಸಿತು.

ಕತ್ತಲಲ್ಲಿ ಏನೂ ಕಾಣದೇ ಆರ್ತಳಾಗಿ "ಸಾಹಿಬಜಾದಿ, ಸಾಹಿಬಜಾದಿ" ಎಂದು ಚೀರಿದಳು. ಕೆಳಗಿದ್ದ ಪಾಶಾ, ಸೇವಕರು ಎಲ್ಲರೂ ಕಳವಳದಿಂದ ಮೇಲಕ್ಕೆ ಓಡಿಬಂದರು. ಬಂದವರಲ್ಲಿ ಯಾರೋ ಕಡ್ಡಿ ಗೀರಿದರು. ಅದರ ಮಂದ ಬೆಳಕಿನಲ್ಲಿ ಇಲೆಕ್ಟ್ರಿಕ್ ತಂತಿಗಳ ಬಲೆಯಲ್ಲಿ ಸಿಕ್ಕು ಸತ್ತ ತಾಹಜೀಬ್‌ಳ ದೇಹ ಎಲ್ಲರಿಗೂ ಕಂಡಿತು. ಕಣ್ಣುಗಳನ್ನು ಹಿಗ್ಗಿಸಿ ನೋಡುತ್ತಿದ್ದ ಪಾಶಾ ಪ್ರಜ್ಞೆ ತಪ್ಪಿ ಬಿದ್ದಳು.

***

ಹಾಸುಗಲ್ಲಿನ ಮೇಲೆ ಹೋಗುತ್ತಿದ್ದ, ಅಲಂಕೃತವಾಗಿಯೂ ಮುಸುಕು ಹೊತ್ತಿದ್ದ ಟಾಂಗಾ ನಿಂತಿತು.

"ಬಕ್ತ್ಯಾವರ, ನಮ್ಮ ಮನೆ ಬಂದಿತು ಇಳಿಯೋಣವೇ?" ಎಂದ ಸೈಫುಲ್ಲಾ.

"ನನ್ನನ್ನು ಮೊದಲು ತಾಹಜೀಬ್ ಸಾಹಿಬಜಾದಿಯ ಗೋರಿಗೆ ಕರೆದೊಯ್ಯಿರಿ, ದಯವಿಟ್ಟು" ಬಕ್ತ್ಯಾವರ ಬಿಕ್ಕಿದಳು.

"ಆಗಲಿ ಹಾಗೆಯೇ ಮಾಡೋಣ. ಅಲ್ಲಿಗೇ ಮೊದಲು ಹೋಗೋಣ ಅಳಬೇಡ. ಮೊದಲು ನಿನ್ನ ಕಣ್ಣು ಒರೆಸಿಕೊ. ನಿನ್ನ ಅಳು ನೋಡಲಾರೆ ನಾನು" ಪ್ರೀತಿಯಿಂದ ಹೇಳಿದ ಸೈಫುಲ್ಲಾ ಟಾಂಗಾದವನಿಗೆ ಸೂಚನೆ ಕೊಟ್ಟ.

ಚಾವಟಿ ಎತ್ತುತ್ತಲೆ ಟಿಕ್ ಟಿಕ್ ಸದ್ದು ಮಾಡುತ್ತಾ ಕುದುರೆ ನಾಗಾಲೋಟದಿಂದ ಓಡಿತು

[ಮೂಲ ಉರ್ದುವಿನಲ್ಲಿ :'ರಫಿಯಾ ಮಾಂಜ್ರುಲ್ ಆಮೀನ್]

***

■■

# ಹತ್ತು

ಶನಿವಾರ ರಾತ್ರಿ ಮಲಗುವಾಗ ತಲೆತುಂಬ ಯೋಚನೆಗಳನ್ನು ತುಂಬಿಕೊಂಡೇ ಮಲಗಿದ್ದುದರಿಂದ ಮರುದಿನ ಶಾಮಣ್ಣವರು ಏಳುವಾಗ ತಡವಾಗಿತ್ತು. ಸೀದಾ ಬಚ್ಚಲುಮನೆಗೆ ಹೋದರು. ಅಲ್ಲಿ ಅವರು ಹಲ್ಲುಜ್ಜುವ ಟೂತ್‌ಪೇಸ್ಟಿಗಾಗಿ ನೋಡಿದರೆ ಖಾಲಿ ಟ್ಯೂಬೇ ಇನ್ನೂ ಇತ್ತು. ಪೇಸ್ಟು ತೀರಿ ಎರಡು ಮೂರು ದಿನಗಳಾಗಿದ್ದವು. ಕೊಂಡು ತರಲು ಮಗನಿಗೆ ಹೇಳಿದ್ದು ನೆನಪಾಗಿ ಅಲ್ಲಿಂದಲೇ ಕೂಗಿದರು ಶಾಮಣ್ಣ :

"ದಿನೂ, ಏ ದಿನೂss."

ಉತ್ತರ ಬರಲಿಲ್ಲ. ಮಗನ ಬದಲು ಹೆಂಡತಿ ಉತ್ತರ ಕೊಟ್ಟಳು.

'ಯಾಕ ಕರೀತೀರಿ ಅವನ್ನ? ಇವತ್ತ ಆಫೀಸು ಇಲ್ಲಾ. ಅದಕ್ಕs ಇನ್ನೂ ಮಲಗಿಕೊಂಡಾನ. ಏನ ಬೇಕಾಗಿತ್ತು ನಿಮಗೆ ?"

"ಪೇಸ್ಟು ತೀರಿತ್ತು. ತರಲಿಕ್ಕೆ ಹೇಳಿದ್ದೆ. ತಂದ್ಹಾಂಗ ಕಾಣಲಿಲ್ಲಾ ಅದಕ್ಕs ಕರದೆ."

"ತಂದಿರಲಿಕ್ಕಿಲ್ಲಾ ಬಿಡ್ರಿ. ಪೇಸ್ಟು ಇಲ್ಲದಿದ್ದರ ಏನಾತು ? ಅಲ್ಲೇ ಒಲ್ಯಾಗಿನ ಇದ್ದಿ ತೊಗೊಂಡು ತಿಕ್ಕಿರಿ ಹಲ್ಲು," ಸಲಹೆ ಕೊಟ್ಟಳು ಕೈ ಹಿಡಿದಾಕೆ.

ದಿನಕರ ಮೊದಲಿಂದಲೂ ಹೀಗೆಯೇ. ತಡಮಾಡಿ ಏಳುವದೇ ಅವನಿಗೆ ರೂಢಿ. ಕನ್ನಡ ಸಾಲೆಯಿಂದ ಹಿಡಿದು ಇಂಜಿನಿಯರಿಂಗ್ ಪಾಸಾಗುವವರೆಗೂ ಎಂದೂ ಯಾವ ಪರೀಕ್ಷೆಗೂ ಬೇಗ ಎದ್ದು ಅಭ್ಯಾಸ ಮಾಡಿದವನಲ್ಲ. ಆದರೂ ಒಂದೊಂದೇ ವರ್ಷಕ್ಕೆ ಪಾಸಾಗುತ್ತಿದ್ದ. ತಮ್ಮ ಮಗ ಅಲ್ಲವೇ ಅವನು ಅನ್ನೋ ಹೆಮ್ಮೆ ತಮಗೆ. ಅವನು ಬೇಡಿದ್ದನ್ನೆಲ್ಲಾ ಕೈಯಲ್ಲಿ ಹಿಡಿದಿರುತ್ತಿದ್ದರು. ಚಿಕ್ಕವನಾಗಿದ್ದಾಗಂತೂ ತಾವು ಸ್ನಾನ ಮಾಡುವ ಹೊತ್ತಿಗೆ ಅವನಿಗೆ ಬೆಳಗಾಗುತ್ತಿತ್ತು. ನೇರವಾಗಿ ಬಚ್ಚಲಿಗೆ ಬರುತ್ತಿದ್ದ. ಬಿಸಿನೀರಿನಲ್ಲಿ ಅವನ ಕೈಕಾಲು ಮುಖ ತೊಳೆದು ತಾವೇ ಅವನ ಹಲ್ಲು ತಿಕ್ಕಿ ಓವಲ್ಟೀನ್ ಕುಡಿಯಲು ಅಡಿಗೆ ಮನೆಗೆ ಕಳಿಸುತ್ತಿದ್ದರು.....

ಮುಖಮಾರ್ಜನ ಮುಗಿಸಿಕೊಂಡು ಒಮ್ಮೆ ಮಾಡಿ ಅರಿದ್ದ ಚಹವನ್ನೇ ಕಾಯಿಸಿಕೊಟ್ಟಿದ್ದನ್ನು ಕುಡಿದರು ಶಾಮಣ್ಣ. ಬಾಯಿ ಒಗರು ಒಗರಾಯಿತು. ಡಿಕಾಕ್ಷನ್ ಸುರುವಿಕೊಂಡು ಹತ್ತಿರ ಹಾಲು ಸಕ್ಕರೆ ಇಟ್ಟುಕೊಂಡು, ಎಷ್ಟು ಬೇಕೋ ಅಷ್ಟಷ್ಟು ಹಾಕಿಕೊಂಡು, ಬೆಳಗಿನ ಚಹವನ್ನು ಸವಿಯುವ ತಮ್ಮ ರೂಢಿ, ಪೆನ್ಶನ್ ಆದ ಕೆಲವು ದಿನಗಳಲ್ಲೇ ಬದಲಾವಣೆ ಹೊಂದಿತ್ತು. ತಿಂಗಳುಗಳು ಕಳೆದಿದ್ದರೂ ಈ ಹೊಸ ಬದಲಾವಣೆಗೆ ನಾಲಿಗೆ ಹೊಂದಿಕೊಂಡಿರಲಿಲ್ಲ. ಇನ್ನೇನು, ಮಗ ಸೊಸೆ ಎದ್ದ ಮೇಲೆ ಅವರ ಜೊತೆಗೆ ಎರಡನೆಯ ಸಲವಾದರೂ ಒಳ್ಳೆಯ ಚಹ ಸಿಕ್ಕೀತೆನ್ನುವ ಆಸೆಯಿಂದ ಹೊರಗೆ ಬರುವಾಗ, ಶಶಿ ಎದುರಿಗೆ ಬಂದವಳು ಸರಕ್ಕನೆ ಮುಖ ತಿರುಗಿಸಿಕೊಂಡು ತಮ್ಮನ್ನು ನೋಡಿಯೂ ನೋಡದವಳಂತೆ ಅಡಿಗೆಮನೆ ಹೊಕ್ಕಳು. ಅವಳೊಡನೆ ತಾವು ಮಾತು ಬಿಟ್ಟು ಎಂಟ್ಹತ್ತು ದಿನಗಳಾಗಿದ್ದವು. ಆ ವಿಷಯ ನೆನಪಾದೊಡನೆ ಮನಸ್ಸು ಮತ್ತಿಷ್ಟು ಕಠಿಣವಾಯಿತು.

ದಿನಕರನ ಮೇಲೆ ಹುಟ್ಟಿದ ಎರಡು ಮಕ್ಕಳೂ ತೀರಿಕೊಂಡ ಮೇಲೆ ಹುಟ್ಟಿದವಳು ಶಶಿ. ಒಬ್ಬಳೇ ಮುದ್ದಿನ ಮಗಳು. ಅವಳ ಚಿಕ್ಕಂದಿನ ಆಟಪಾಟಗಳನ್ನು ಕಂಡು ನಲಿಯುತ್ತಿತ್ತು ತಮ್ಮ ಜೀವ. ಶಾಲೆಗೆ ಹೋಗಹತ್ತಿದ ಮೇಲಿನ ಅವಳ ಚಟುವಟಿಕೆಗಳು ತಮಗೆ ಪ್ರಿಯವಾಗಿದ್ದವು. ನೃತ್ಯ, ನಾಟಕ, ಭಾಷಣ ಎಲ್ಲದರಲ್ಲೂ ಅವಳದು ಮೇಲುಗೈ. ತಮ್ಮ ಕರುಳಿನ ಚೂರು ದಿನೇ ದಿನೇ ಬೆಳೆಯುತ್ತಿದ್ದುದನ್ನು ಕಂಡು ಹಿರಿ ಹಿರಿ ಹಿಗ್ಗಿದ್ದರು. ಅಂಥ ಆ

ಕರುಳಿನ ಚೂರು ಈಗ ತಮ್ಮ ಕರುಳಿಗೇ ಚೂರಿಹಾಕುತ್ತಲಿದೆ. ಬೇರೆ ಜಾತಿಯ, ತನ್ನ ಕಾಲೇಜು ಗೆಳೆಯನನ್ನು ಪ್ರೇಮಿಸಿದ್ದಾಳಂತೆ. ಅವನನ್ನೇ ಮದುವೆ ಮಾಡಿಕೊಳ್ಳುವುದಾಗಿ ಹೇಳಿ ಈಗ ಕೆಲವು ದಿನಗಳ ಹಿಂದೆ ಮನೆಯಲ್ಲಿ ಬಾಂಬ್ ಸ್ಫೋಟ್ ಮಾಡಿದ್ದಳು. ಅದರಿಂದ ತಮ್ಮ ಹೃದಯಕ್ಕೇ ಪೆಟ್ಟುಬಿದ್ದಿದೆ. ಕಿವಿಗಳು ಗಡಚಿಕ್ಕಿವೆ. ಹೊಗೆಯಿಂದ ಕಣ್ಣು ಕಾಣದಂತಾಗಿವೆ. ಅವಳು ಆರಿಸಿದವನು ತಮ್ಮ ದೃಷ್ಟಿಯಲ್ಲಿ ಯಃಕಶ್ಚಿತ. ದೊಡ್ಡ ಮನೆತನದವನಲ್ಲ, ಶ್ರೀಮಂತನಲ್ಲ ಮೇಲಾಗಿ ಜಾತಿಯವನೂ ಅಲ್ಲ. ಇಷ್ಟೊಂದು ದೊಡ್ಡ ಅಧಿಕಾರಸ್ಥಾನದಲ್ಲಿ ಮೆರೆದು ನಿವೃತ್ತರಾದ ತಮ್ಮಂಥವರು ಅಂಥ ವರನಿಗೆ ಮಗಳನ್ನು ಕೊಟ್ಟರೆ ಜನ ಏನೆಂದಾರು ? ತಮ್ಮನ್ನು ಕಂಡಲ್ಲಿ ಬೆರಳು ತೋರಿಸಿ ನಗುತ್ತಾರೆ. ಜನರ ದೃಷ್ಟಿಯಲ್ಲಿ ತಾವೆಷ್ಟು ಸಣ್ಣವರಾಗಿಬಿಡುತ್ತೇವಲ್ಲ. ಸಮಾಜದಲ್ಲಿನ ಪ್ರತಿಷ್ಠೆ, ಗೌರವ, ಅಂತಸ್ತು ಎಲ್ಲವೂ ಮಾಯವಾಗಿಬಿಡುತ್ತವಲ್ಲ. ಹ! ಅಹ! ಒಳಗಿನ ಒಳಗಿನಿಂದ ದನಿಯೊಂದು ಕುಹಕವಾಡುತ್ತಿದೆ. ಇನ್ನೆಲ್ಲಿಯ ಗೌರವ, ಇನ್ನೆಲ್ಲಿಯ ಅಂತಸ್ತು ನಿನಗೆ ! ಅಧಿಕಾರ ಹೋದಾಗಲೇ ಎಲ್ಲವೂ ಹೋದವು. ನಿನ್ನ ಮನೆಯವರ ದೃಷ್ಟಿಯಲ್ಲೇ ನಿನ್ನ ಸ್ಥಾನ ಇಳಿದದ್ದು ನಿನಗೆ ಕಾಣೋದಿಲ್ಲವೆ? ಇನ್ನು ಹೊರಗಿನವರೆಷ್ಟು ದಿನ ನಾಟಕವಾಡುತ್ತಾರೆ? ಎಂದು.

ರೂಪ, ವಿದ್ಯೆ, ಹಣ, ದೊಡ್ಡ ಮನೆತನ ಎಲ್ಲವೂ ಇದ್ದ ತಮ್ಮ ಮಗಳನ್ನು, ಅದೂ ಹೂವಿನಂತೆ ಜೋಪಾನಮಾಡಿದ ಮಗಳನ್ನು-ಮದುವೆಯಾಗಲು ಎಷ್ಟೋ ಜನ ಸಿದ್ಧ. ಶಶಿ, ತಮ್ಮ ಮನೆ ಸೊಸೆಯಾಗಿ ಬಂದರೆ ತಮ್ಮ ಪುಣ್ಯ ಎಂದುಕೊಳ್ಳುವವರೆಷ್ಟೋ ಜನ. ಹೀಗೆಲ್ಲಾ ಇರುವಾಗ ಎಲ್ಲೋ ಕಾಣದ, ಕೇಳದ, ಅನಾಮಧೇಯ ಭಿಕಾರಿಗೆ ಅದೂ ತಾನಾಗಿಯೇ ಬಂದು ನಿಮ್ಮ ಮಗಳನ್ನು ಕೊಡಿ ಎಂದು ಅಂಗಲಾಚಿಲ್ಲ - ಅಂಥವನಿಗೆ ತಾವು ಶಶಿಯನ್ನು ಕೊಡಲು ಎಂದೂ ಸಾಧ್ಯವಿಲ್ಲ ಎಂದು ಕೂಗಾಡಿದ್ದರು ಹೆಂಡತಿ, ಮಗಳ ಮುಂದೆ. ಅಂದಿನಿಂದ ಮಗಳ ಮಾತು ಬಂದಾಗಿತ್ತು. ಮನೆಯಲ್ಲಿಯೇ ಇದ್ದರೂ ಕಣ್ಣೆತ್ತಿ ತಮ್ಮ ಕಡೆಗೆ ನೋಡುತ್ತಿರಲಿಲ್ಲ. ತಮ್ಮ ಜೊತೆಗೆ ಚಹ ಕುಡಿಯುವುದು, ಊಟ ಮಾಡುವುದನ್ನೂ ಬಿಟ್ಟಿದ್ದಾಳೆ. ತನಗೆ ಏನಾದರೂ ಬೇಕಾದರೆ ತಾಯಿಯನ್ನು ಕೇಳುತ್ತಾಳೆ. ಅಣ್ಣನಿಗೆ ಹೇಳುತ್ತಾಳೆ. ತಮ್ಮನ್ನು ಕಾಲಕಸದಂತೆ ಒತ್ತರಿಸಿಬಿಟ್ಟಿದ್ದಾಳೆ. ತಾವೊಂದು ಕಸವಾಗಿದ್ದೇನೆನ್ನುವ ಭಾವನೆ ಬಂದೊಡನೆ ತಮ್ಮ ಹೊಟ್ಟೆಯ ಸಂಕಟ ದಿನದಿನಕ್ಕೆ ಹೆಚ್ಚಾಗುತ್ತಿದೆ. ಏನೋ ಕಳೆದುಕೊಂಡು, ಹುಡುಕುತ್ತಿರುವಂತೆ ಅತ್ತಿತ್ತ ಓಡಾಡುತ್ತಾರೆ. ಮಾಡಲು ಕೆಲಸವಿಲ್ಲದೆ ನೀರಿನಿಂದ ಹೊರತೆಗೆದ ಮೀನಿನಂತೆ ಚಡಪಡಿಸುತ್ತಾರೆ. ಏನು ಮಾಡಿದರೂ ದಿನ ಕಳೆಯುವುದು ಕಠಿಣವಾಗುತ್ತಿದೆ. ಗಡಿಯಾರ ನಿಧಾನವಾಗಿ ಸಾಗುವಂತೆ ಕಾಣುತ್ತದೆ. ಹಗಲೆಲ್ಲ ಟೇಬಲ್ ಮೇಲಿನ ಟೈಂಪೀಸು ನೋಡಿ ಮೊನ್ನೆ ಸಿಟ್ಟಿಗೆದ್ದು ಎತ್ತಿ ಕುಕ್ಕಿಬಿಟ್ಟಿದ್ದರು. ಗಾಜು ಒಡೆದು ಚೂರಾಯಿತು. ಸಪ್ಪಳ ಕೇಳಿ ಗಾಜು ಆರಿಸಲು ಒಳಗೆ ಬಂದ ಹೆಂಡತಿ, "ಹಾಂಗ್ಯಾಕ ಹಗಲೆಲ್ಲಾ ಟೈಂಪೀಸ್ ಮುಟ್ಟತೀರಿ? ಕೈ ನಡಗ್ತಾವ, ವಯಸ್ಸಾಯ್ತು, ತುಟ್ಟಿ ಸಾಮಾನು. ಹಗಲೆಲ್ಲಾ ಕೊಳ್ಳಲಿಕ್ಕೂ ಆಗೂದಿಲ್ಲಾ. ಸುಮ್ಮನ ರಾಮಾ, ಕೃಷ್ಣಾ ಅಂತ ಕೂಡ್ರಬಾರದ?" ಎಂದು ಉಪದೇಶ ಮಾಡಿದ್ದಳು.

ಹೌದು, ಅದೇ ಸರಿ. ಎರಡನೆಯ ಚಹ ಬರೋವರೆಗೂ ರಾಮಾಯಣಾ ಆದರೂ ಓದಬೇಕು ಎಂದುಕೊಂಡು ವೆಂಕಟರಾಯರ ಮನೆಯಿಂದ ತಂದ ಪುಸ್ತಕ ತೆಗೆದರು. ರಾಮನ ಕತೆ ಯಾರಿಗೆ ಗೊತ್ತಿಲ್ಲ? ಸಣ್ಣ ಮಕ್ಕಳೂ ಹೇಳತಾರ ಕೇಳಿದರ. ಆದರೂ ವಯಸ್ಸಾದವರು ರಾಮಾಯಣ, ಗೀತಾ ಓದಿ, ವೇದಾಂತ ಹೇಳಿಕೊಂಡು ಕಾಲಾ ಕಳೀತಾರ, ರಾಮಾಯಣ ಓದಿದರ ಮನಸ್ಸಿಗೆ ಶಾಂತಿ ಸಿಗತದ ಅಂತ ವೆಂಕಟರಾಯರು ಹೇಳಿದರು. ನೋಡೋಣ, ಅಂಥಾದ್ದು ಏನು ಅದನ್ನೇ ಇದರಾಗ ವಾಲ್ಮೀಕಿ ಮಹರ್ಷಿಯ ಕತೆಯನ್ನೇ ಓದುತ್ತಾ ಓದುತ್ತಾ ಅದನ್ನೇ ಮೆಲುಕು ಹಾಕಿದರು ಶಾಮಣ್ಣ.

ಬೇಡರವನೊಬ್ಬ, ಹಾದಿ ಪ್ರಯಾಣಿಕರನ್ನು ಸುಲಿದು, ಕೊಂದು ಹೆಂಡತಿ ಮಕ್ಕಳನ್ನು ಸಾಕುತ್ತಿದ್ದ. ಆ ಹಾದಿಯಾಗಿ ಒಮ್ಮೆ ನಾರದ ಮಹರ್ಷಿಗಳು ಬಂದರು. ಅವರನ್ನು ಹಿಡಿದು ಗಿಡಕ್ಕೆ ಕಟ್ಟಿಹಾಕಿ ಹಣಕೊಡು ಎಂದು

ಬೆದರಿಸಿದ. ತಂಬೂರಿ ಬಿಟ್ಟರೆ ಅವರ ಹತ್ತಿರ ಏನಿರಬೇಕು ? ಆಗ ನಾರದ ಮಹರ್ಷಿಗಳು ಅವನಿಗೆ ಬೆಳಕು ತೋರಿಸಿದರು. ಅವನ ಸಂಪಾದನೆಯಿಂದ ಜೀವನ ನಡೆಸುವ ಅವನ ಹೆಂಡತಿ ಮಕ್ಕಳು, ಬಂಧು - ಬಳಗ ಅವನ ಪಾಪದಲ್ಲಿ ಪಾಲುಗಾರರಾಗ್ತಾರೇನೋಂತ ಕೇಳಿಕೊಂಡು ಬಾ ಎಂದರು. ಬೇಡರವ ಹೋಗಿ ಬಂದ. ಅವರಾರೂ ಒಪ್ಪಿರಲಿಲ್ಲ. ಮಹರ್ಷಿಗಳು ಇದು ಪಾಪದ ಕೆಲಸ, ಬಿಟ್ಟುಬಿಡು ಎಂದು ಬೋಧಿಸಿದರು. ಅವನಿಗೆ ಪಶ್ಚಾತ್ತಾಪವಾಗಿ ದೇವರ ಧ್ಯಾನ ಮಾಡುತ್ತ ಕಠಿಣ ತಪಸ್ಸು ಮಾಡಲು ಕುಳಿತ. ಅವನ ಸುತ್ತ ಹುತ್ತ ಬೆಳೆಯಿತು. ಹುತ್ತದಲ್ಲಿ ಮುಚ್ಚಿಹೋದ ಬೇಡರವನು ಹುತ್ತವನ್ನೊಡೆದು ವಾಲ್ಮೀಕಿಯಾಗಿ ಹೊರಬಂದ. ರಾಮಾಯಣ ಬರೆದು ಮಹರ್ಷಿಗಳ ಸಾಲಿಗೆ ಸೇರಿದ. ಮೊದಲು ಯಾವ ದಾರಿಯಿಂದಾದರೂ ಸಂಸಾರವನ್ನು ಕಾಪಾಡಬೇಕೆನ್ನುವ ಮೋಹದ ಹುತ್ತದಲ್ಲಿ ಮುಚ್ಚಿಕೊಂಡಿದ್ದ. ಆಮೇಲೆ ಮಣ್ಣಿನ ಹುತ್ತದಲ್ಲಿ....

"ಚಹಾ ತೊಗೊಳ್ರಿ." ತಲೆ ಎತ್ತುವಷ್ಟರಲ್ಲಿ ಹೆಂಡತಿ ಬಾಗಿಲು ದಾಟಿದ್ದಳು. ತಮಗೆ ಅಡಿಗೆಮನೆ ಕರೆ ಬಂದಿರಲಿಲ್ಲ. ಕಪ್ಪನ್ನೆತ್ತಿ ತುಟಿಗಿಟ್ಟರು. ಒಳಗಿನಿಂದ ಜೋರುಜೋರಾಗಿ ಮಗನ ಬಾಯಿ ಕೇಳುತ್ತಿತ್ತು.

"ಅಲ್ಲ ಅವ್ವಾ, ಆ ಪಾಯಖಾನಿ ಮಗ್ಗಲದಾಗಿನ ಹುತ್ತದೊಳಗ ಹಾವು ಅದ ಅಂತ. ಆಗಲೇ ಆಕಿ ಹೋದಾಗ ಸರಸರ ಸಪ್ಪಳಾ ಮಾಡಿಕೋತ ಅತ್ಲಾಗ ಏನೋ ಹೋದ್ಹಾಂಗ ಆತಂತ."

"ಹೌದಪ್ಪಾ, ರಾಧಾ ಹೇಳಿದಳು. ಪಾಯಖಾನಿಯಿಂದ ಬಂದಾಗ ಥರಾಥರಾ ನಡಗತಿದ್ಲು. ನಾನs ಸಮಾಧಾನ ಮಾಡಿದೆ. ಓತಿಕ್ಯಾತಾ ಹಾವರಾಣಿ ಏನರೆ ಇರಬೇಕು ಬಿಡು ಅಂತ."

"ಹುತ್ತ ಇದ್ದಲ್ಲೆ ಹಾವು ಇದ್ದs ಇರತಾವ. ಅದು ಯಾತಕ್ಕ ಬೇಕು ನಮ್ಮ ಹಿತ್ಲದಾಗ ? ಕೆತ್ತಿಸಿ ಒಗಿಸಿದರಾಯ್ತು."

"ಅವರು ಏನಂತಾರೋ ಏನೋಪಾ! ನಾ ಎಷ್ಟಸಾರೆ ಹೇಳೇನಿ, ಆದರೂ ತಗಿಯೂದು ಬ್ಯಾಡಾ ಅಂತಾರ."

"ಅಪ್ಪಗ ಅದರದೊಂದು ಹುಚ್ಚು. ಹುತ್ತದ ಮ್ಯಾಲ ಅಷ್ಟ್ಯಾಕ ಪ್ರೀತಿ ಅಂವಗ! ಹುಡುಗ್ರು ಆಡತಿರತಾವ. ನಮ್ಮ ಎಚ್ಚರಕ್ಕಾಗ ನಾವು ಇರಬೇಕು. ನಾನಂತೂ ತಗಿಸಿಬಿಡತೇನಿ ಅದನ್ನ."

"ಅವರನ್ನು ಒಂದ ಮಾತು ಕೇಳಿನೋಡಪ್ಪಾ."

"ಅವನನ್ನೇನು ಕೇಳೋದು ? ಮತ್ತೂ ಬ್ಯಾಡಾ ಅಂತಾನ. ನಿನಗ ನಾಗಪ್ಪಗ ಹಾಲು ಎರೀಬೇಕಾದರ ಜಗಲಿಮ್ಯಾಲೆ ಅದ ಅಲ್ಲಾ, ಅದಕ್ಕs ಎರಿ. ಹಿತ್ತಲದಾಗಿನ ಹುತ್ತಾ ಮಾತ್ರ ನಾ ತಗಸಾವ ನೋಡು. ನಾನು ಒಂದೇ ಮಾತಿನಾಂವಾ. ತಲ್ಯಾಗ ಬಂದರ ಬಿಡಾಂವ ಅಲ್ಲಾ." ಖಂಡಿತವಾಗಿ ಹೇಳಿ ದಪದಪ ಹೆಜ್ಜೆ ಇಡುತ್ತ ಅಲ್ಲಿಂದ ಹೊರಗೆ ಹೋದ ದಿನಕರ. ಅವನ ಹೆಜ್ಜೆ ಸಪ್ಪಳಕ್ಕೆ ತಮ್ಮ ಎದೆ ಡವಗುಟ್ಟುತ್ತಿತ್ತು. ಅವನನ್ನು ಕರೆದು ತಮಗಾಗಿ ಪೇಸ್ಟು ತರಲಿಲ್ಲವೇ ಎಂದು ಕೇಳಲೂ ಧೈರ್ಯವಾಗಲಿಲ್ಲ. ಮನಸ್ಸಿಗೆ ಬಂದ ಕೆಲಸವನ್ನು ಮಾಡಿಯೇ ತೀರುವ ಸ್ವಭಾವದವ ದಿನಕರ, ಯಾರಪ್ಪನಿಗೂ ಬಿಡುವವನಲ್ಲ.

ಮನಸ್ಸು ಅಸ್ವಸ್ಥವಾಗಿ ಹಿತ್ತಲಲ್ಲಿ ಹೋಗಿ ನಿಂತರು ಶಾಮಣ್ಣ. ತಾವು ಸಣ್ಣವರಿದ್ದಾಗ ಪುಟ್ಟದಿದ್ದದ್ದು ತಾವು ಬೆಳೆದಂತೆಯೇ ಅದೂ ಬೆಳೆದು ಬೆಳೆದು ಈಗ ಆಳೆತ್ತರ ನಿಂತಿತ್ತು ಹುತ್ತ. ಅಲ್ಲಲ್ಲಿ ಗಿರಿಶಿಖರಗಳಂತೆ ಚೂಪುಚೂಪಾದ ಕೋಡುಗಳಿದ್ದ ಆ ಮಣ್ಣಿನ ಸಣ್ಣ ದಿಣ್ಣೆಯನ್ನು ನೋಡಿದರೆ ತಮಗೆಂತಹದೋ ಮೋಹ, ನೋಡಿದಷ್ಟೂ ಪ್ರೀತಿ. ತಮ್ಮ ಮನೆಗೆ, ತೋಟಕ್ಕೆ ಅದೊಂದು ಅಲಂಕಾರವೆಂದು ತಮ್ಮ ಭಾವನೆ. ಆಗಾಗ ಅದರ ಹತ್ತಿರ ಹೋಗಿ ಪ್ರೀತಿಯಿಂದ ಮುಟ್ಟಿ ಮುಟ್ಟಿ ಕೈಯಾಡಿಸಿ ನೋಡಿ ಸಂತೋಷಪಡುವರು. ಮನೆಯವರಿಗೆಲ್ಲ ಅದನ್ನು

ಕಂಡರೆ ಅಷ್ಟಕ್ಕಷ್ಟೇ. ತಮ್ಮ ಹೆಂಡತಿಯೂ ವರ್ಷಕ್ಕೊಮ್ಮೆ, ಅದೂ ತಾವು ಜೊತೆಗೆ ನಿಂದಾಗ, ಬೇಗ ಬೇಗ ಪೂಜೆ ಮಾಡಿ ಹಾಲೆರೆದು ಬರುವಳು. ಅದೊಂದು ಬಿಡಲಾರದ ಕರ್ಮವೆನ್ನುವಂತೆ ಅವಳ ಕೆಲಸ. ತಮ್ಮಂತೆ ಅವಳೆಂದೂ ಅದನ್ನು ಮನಮುಟ್ಟಿ ಪ್ರೀತಿಸಲಿಲ್ಲ. ಈಗಂತೂ ಸರಸರ ಸಪ್ಪಳ ಕೇಳಿ ಹೆದರಿದ ತನ್ನ ಹೆಂಡತಿಯನ್ನು ಸಂತೋಷಪಡಿಸಲು ಮಗ ಅದನ್ನು ನೆಲಸಮಮಾಡಲು ನಿಂತಿದ್ದಾನೆ. ಸೊಸೆ ನೋಡಿದ್ದು ಹಾವು ರಾಣಿ ಅಥವಾ ಓತಿಕ್ಯಾತ ಏನಾದರೂ ಇರಬಹುದು. ಹಾವಾಗಿರಲಿಕ್ಕಿಲ್ಲ. ಒಂದು ವೇಳೆ ಹಾವು ಆಗಿದ್ದರೂ ಅದೇನು ಒಂದು ಕಡೆಗೆ ನಿಲ್ಲುವದೇ ? ಹರಿದಾಡುವ ಜೀವವದು. ಸುಮ್ಮನೆ ಯಾವದೋ ಭ್ರಮೆ ಹತ್ತಿಸಿಕೊಂಡು ಒದ್ದಾಡುತ್ತಿದ್ದಾರೆ ಇವರೆಲ್ಲ.....

ಹುತ್ತದ ಹತ್ತಿರ ನಿಂತು ಶಾಮಣ್ಣನವರ ಕಾಲು ಸೋತವು. ಅದಕ್ಕೊಂದು ಸುತ್ತುಹಾಕಿ ಒಳಗೆ ಬರುವಾಗ ಹೆಂಡತಿ ಹೇಳಿದಳು:

"ನೀರು ಕಾದಾವ, ಸ್ನಾನಾ ಮಾಡಿ ದೇವರ ಪೂಜಿ ಮಾಡ್ರಿ ನೀವು." ಸ್ವಲ್ಪ ತಡೆದು ಮತ್ತೆ ಹೇಳಿದಳು. "ಭೊಲೋತ್ನ್ಯಾಗ ನೋಡಿ ಮಾಡ್ರಿ. ಮೊನ್ನೆ ನಿರ್ಮಾಲ್ಯದ ಹೂ ತಗದು ಚೆಲ್ಲೂ ಮುಂದ ನಾಗಪ್ಪನ್ನೂ ಎತ್ತಿ ಹೂವಿನ ಕೂಡ ಮೂಲ್ಯಾಗ ಒಗದಿದ್ರಿ. ಹಾಂಗ ಮಾಡಬ್ಯಾಡ್ರಿ."

ಶಾಮಣ್ಣ ಉತ್ತರವೀಯದೆ ಬಚ್ಚಲಿಗೆ ನಡೆದರು.

ಮಗಳ ನಗುವಿನ, ಮಾತಿನ ಜೊತೆಯಿಲ್ಲದೆ ಊಟ ಮಾಡಿದವರಲ್ಲ ತಾವು. ಈಗ ಎಂಟು ದಿನಗಳಿಂದ ತಾಟಿನತ್ತ ಮುಖ ಹಾಕಿದ ಮಗನ ತಲೆಯನ್ನೇ ನೋಡುತ್ತ ತುತ್ತು ಗಂಟಲಿಗೆ ಇಳಿಸುತ್ತಾರೆ. ತುತ್ತು ಒಳಗಿಳಿಯಲು ಒಲ್ಲೆ ಎನ್ನುತ್ತದೆ. ಒತ್ತಾಯದಿಂದ ತುರುಕಿ ಊಟದ ಶಾಸ್ತ್ರ ಮುಗಿಸುತ್ತಾರೆ. ದರ್ಪದಿಂದ ನಡೆಯುತ್ತ, ಹೊಟ್ಟೆತುಂಬ ಉಂಡವರಂತೆ ತೇಗುತ್ತ ಹೊರಬರುವ ನಾಟಕ ಮಾಡುತ್ತಾರೆ, ಅಷ್ಟೆ.

ಹಾಸಿಗೆ ಉರುಳಿಸಿ ರಾಮಾಯಣ ಕೈಯಲ್ಲಿ ಹಿಡಿದ ಶಾಮಣ್ಣನವರನ್ನು ಹೆಂಡತಿ ಚಹ ತಂದು ಎಬ್ಬಿಸಿದಾಗ ಬಿಸಿಲು ಇಳಿಮುಖವಾಗಿತ್ತು. ಹಿತ್ತಿಲಲ್ಲಿ ಮಾತು, ಗದ್ದಲ ಕೇಳಿಬರುತ್ತಿತ್ತು....

"ಏನದು?" ಎಂದರು, ಚಹ ಕುಡಿಯುತ್ತ.

ಹೆಂಡತಿ ಎತ್ತಲೋ ನೋಡುತ್ತ ಹೇಳಿದಳು; "ದಿನಕರ ಎರಡ ಆಳ ಹಚ್ಚ್ಯಾನ, ಹುತ್ತ ಕೆಡವಲಿಕ್ಕೆ ಹತ್ತ್ಯಾರ. ಸಂಜಿ ಅನ್ನೂದರೊಳಗ ಮುಗಸ್ತಾರಂತ. ಆಗಳೆ ಹೇಳಿಲಿಕ್ಕೆ ಬಂದಿದ್ದೆ. ನೀವು ಮಲಗಿದ್ದಿರಿ. ನಿದ್ದೆ ಹತ್ತಿದ್ದು ನೋಡಿ ತಿರುಗಿ ಹೋದೆ. ಎಂಥಾ ದೊಡ್ಡ ಹಾವು ಇತ್ತರಿ ಹುತ್ತಿನೊಳಗ. ಅಬ್ಬಾ ! ಮಾರುದ್ದಾ ಇತ್ತು, ಇಷ್ಟ ಗಡತರಾ, ಮಿರಿಮಿರಿ ಮಿಂಚುತ್ತಿತ್ತು! ಹೊಡದ ಕೊಂದು ಹಾಕಿದರು. ಅದನ್ನ ಅತ್ಲಾಗ ಬೇಲಿ ಕಡೆ ಒಗದಾರ ನೋಡಿ ಬರ್ರಿ ಬೇಕಾದರ. ಅಂತೂ ದಿನಕರ ಹುತ್ತಾ ಕೆಡವಿಸಿ ಭಲೋ ಮಾಡಿದಾ."

ಸತ್ತುಬಿದ್ದ ಹಾವಿನ ನೆನಪಾಗಿ ಶಾಮಣ್ಣನವರ ಕೈ ನಡುಗಿದವು. ಚಹ ತುಳುಕಿ ಧೋತರದ ಮೇಲೆ ಬಿತ್ತು. ಹೆಂಡತಿ ಅವಸರದಿಂದ ಇನ್ನಿಷ್ಟು ಚಹತರ್ತೀನಿ ಎಂದು ಒಳಗೆ ಹೋದಳು.

ಧಪ್... ಧಪ್ .... ಸಪ್ಪಳ ಕಿವಿಯ ಮೇಲೆ ಬೀಳುತ್ತಿತ್ತು. ಒಂದೊಂದೇ ಹೊಡೆತ ತನ್ನ ಮೇಲೆಯೇ ಬೀಳುತ್ತಿದೆಯೆನೋ ಎನ್ನುವ ಹಾಗೆ ಮಿಡುಕಾಡಿದರು. ಒಂದೊಂದೇ ಕೋಡು ಮುರಿದು ಮುರಿದು ನೆಲ ಕಾಣುತ್ತಿದ್ದ ಹುತ್ತದ ನೆನಪಾಗಿ ತಮ್ಮ ಕೈಕಾಲುಗಳತ್ತ ದೃಷ್ಟಿಹರಿಸಿದರು. ಎರಡನೆಯ ಸಲ ಚಹ ತಂದಾಗ ಹೆಂಡತಿಯ ಮೋರೆ ಇಳಿದಿತ್ತು. ಆ ಬದಲಾವಣೆ ಅವರ ಗಮನವನ್ನು ಸೆಳೆದಿತ್ತು. ಬಾಗಿಲತ್ತ ನೋಡುತ್ತ ಹೆಂಡತಿ ಸಣ್ಣ ಧ್ವನಿಯಲ್ಲಿ ಹೇಳಿದಳು :

"ನಿಮಗ ಕೈ ಮುಗಿತೀನಿ. ಹಟಾ ಹಿಡೀಬ್ಯಾಡ್ರಿ. ಶಶಿ ಯಾರನ್ನ ಮಾಡಿಕೋತೀನಿ ಅಂತಾಳೋ ಅವರ ಜೋಡಿ ಲಗ್ನ ಮಾಡಿಬಿಡ್ರಿ. ಹುಡುಗಿ ಸುಖದಿಂದ ಇರತದ."

"ನಿನಗೇನ ತಿಳೀತದ ಮಣ್ಣು: ಇದರಾಗ ಬಾಯಿ ಹಾಕಬ್ಯಾಡ ನೀನು. ಆಕೀಗೆ ತಿಳಿವಳಿಕಿ ಇಲ್ಲಾ. ಅವಳ ಸುಖಾ ದುಃಖಾ ಅವಳಿಗಿಂತ ಹೆಚ್ಚು ನಮಗ ತಿಳೀತದ. ನಾಲ್ಕು ದಿನಾ ಸೆಟಗೊಂಡು ಆಮ್ಯಾಲೆ ಎಲ್ಲಾ ಮರೀತಾಳ. ನೀನು ಸುಮ್ಮ ನಿದ್ದುಬಿಡು."

"ನಿಮಗ ಒಂದೂ ತಿಳಿಯೂದಿಲ್ಲಾ. ನನ್ನ ಮಾತು ಕೇಳ್ರಿ, ನಿಮ್ಮ ಹಟಾ ನಡಿಯೂ ದಿನಾ ಹೋದವು. ಅವಳಿಗೆ ಬೇಡಿದ್ದೆಲ್ಲಾ ಕೊಡಿಸಿ ಸಲಿಗೀಲಿ ಬೆಳೆಸೀರಿ. ಈಗ ನಿಮ್ಮ ಮಾತು ಯಾಕ ಕೇಳತಾಳ ?'

"ನಮ್ಮ ಮನೆತನಕ್ಕ, ಗೌರವಕ್ಕ ತಕ್ಕ ಹಾಂಗ ಲಗ್ನಾ ಮಾಡಲಿಕ್ಕೆ, ವರದಕ್ಷಿಣೆ ಕೊಡಲಿಕ್ಕೆ ಇಪ್ಪತ್ತೈದು ಸಾವಿರ ರೂಪಾಯಿ ಕೂಡಿಸಿ ಇಟ್ಟೀನಿ, ಆಕೀಗಂತ. ಯಾರಾದರೂ ಅಧಿಕಾರಸ್ಥರು, ಲಕ್ಷಾಧೀಶರು, ಮಂತ್ರಿಗಳ ಸಂಬಂಧಾ ಮಾಡಿದರ ಆರಾಮ ಕಾರಿನ್ಯಾಗ ಅಡ್ಡಾಡಿಕೋತ ಬಂಗ್ಲೆದಾಗ ಇರತಾಳ. ನೀ ತಿಳಿಸಿ ಹೇಳಿದ್ಯೋ ಇಲ್ಲೋ, ನಾವು ಆಕೀಗೆ ಹಿತಾನಃ ಮಾಡತೀವಿ ಅಂತ?"

"ನಾ ಎಲ್ಲಾ ಹೇಳಿದೆ. ಅದಕ್ಕ ಆಕಿ 'ಮಂದಿನ್ನ ಮರಗಿಸಿ ಲಂಚಾಗಿಂಚಾ ತೊಗೊಂಡು ನನ್ನ ಸಲುವಾಗಿ ಅಷ್ಟು ರೊಕ್ಕಾ ಕೂಡಿಸಿ ಇಡಲಿಕ್ಕೆ ಯಾರು ಹೇಳಿದರು ನಿಮಗ ? ನೀವು ಹೇಳೂವಂಥಾ ಸುಖಾ ನನಗ ಬೇಕಾಗಿಲ್ಲ. ನಿಮ್ಮ ರೊಕ್ಕಾನೂ ಬೇಕಾಗಿಲ್ಲಾ. ನೀವು ಮದುವಿ ಮಾಡತಿದ್ದರ ಮಾಡಿರಿ. ಇಲ್ಲಾಂದರ ಹ್ಯಾಂಗೂ ವಯಸ್ಸಿಗೆ ಬಂದೇನಿ. ನಾವು ರಜಿಸ್ಟರ್ ಲಗ್ನಾ ಮಾಡಿಕೋತೀವಿ. ಏನನ್ನೂದು ಲಗೂನ ತಿಳಿಸರಿ,' ಅಂತ ಹೇಳಿದಳು." ಮಾತು ಮುಗಿಸಿದ ಹೆಂಡತಿ ಅಲ್ಲಿ ಒಂದು ಕ್ಷಣವೂ ನಿಂತಿರಲಿಲ್ಲ.

ಧಪ್... ಧಪ್.... ಧಪ್ ... ಒಂದರ ಮೇಲೊಂದು ಏಟು ಬೀಳುತ್ತಿದ್ದವು. ಶಾಮಣ್ಣನವರ ಮುಖದ ಬಣ್ಣ ಹಾರಿಹೋಗಿತ್ತು. ನಿಸ್ತೇಜರಾಗಿ ಎಷ್ಟೋ ಹೊತ್ತು ಕಿಟಕಿಯಿಂದ ಕಾಣುತ್ತಿದ್ದ ಧೂಳು ತುಂಬಿದ ಆಕಾಶವನ್ನೇ ನೋಡುತ್ತ ಕುಳಿತಿದ್ದರು. ದಿಲೀಪ ಓಡುತ್ತ ಬಂದು ಕೈ ಎಳೆಯಹತ್ತಿದ.

"ಅಜ್ಜಾ ಲಗೂ ನೋಡ ಬಾ. ಹುತ್ತ ಎಲ್ಲಾ ಬಿದ್ದು ಹೋತು, ನೆಲಸಮಾ ಆತು. ಅಜ್ಜಾ ಹಿತ್ತಲದಾಗ ಬಾ." ಕೂಗುತ್ತಿದ್ದ ಮೊಮ್ಮಗನ ಕೈ ಕೊಸರಿಕೊಂಡು ಶಾಮಣ್ಣ ಕೋಟು, ಸ್ವೆಟರು ಸ್ಕಾರ್ಫು ಧರಿಸಿ, ತಲೆಗೆ ಟೊಪ್ಪಿಗೆ ಇಟ್ಟುಕೊಂಡು ವಾಕಿಂಗ್ ನಡೆದರು.

ಒಂದು ತಿಂಗಳಿನಿಂದ ಈ ದಾರಿ ಅವರಿಗೆ ಪರಿಚಿತವಾಗಿತ್ತು ಅಷ್ಟೇ. ಮೊದಲೆಂದೂ ಅವರು ಈ ಕಡೆಗೆ ಬಂದವರಲ್ಲ. ಆದರೆ ಬರಬರುತ್ತ ದಿನಗಳೆದಂತೆ ರೇಲ್ವೆ ಹಳಿಗಳ ನಡುವಿನ ಸ್ಲೀಪರುಗಳನ್ನೇ ನೋಡುತ್ತ ನಡೆಯುವ ಕೆಲಸ ಅವರಿಗೆ ಪ್ರಿಯವಾಗಿತ್ತು. ದಾರಿಯಲ್ಲಿ ಸಿಕ್ಕುವ ನಾಲ್ಕಾರು ಗುಡಿಸಲು, ಮಾವಿನ ತೋಪು, ಅವುಗಳನ್ನು ದಾಟಿದ ಮೇಲೆ ಹಳಿ, ದೊಡ್ಡ ಗುಡ್ಡವನ್ನು ಕಡಿದು ಎರಡು ಭಾಗ ಮಾಡಿದ ಜಾಗದಲ್ಲಿ ನಡುವೆ ಹೋಗುತ್ತದೆ. ತಲೆಯೆತ್ತಿ ನೋಡಿದರೆ ಅತ್ತಿತ್ತ ಏನೂ ಕಾಣವುದಿಲ್ಲ, ಊರು, ಕೇರಿ, ಜನ ಎಲ್ಲವೂ ಮರೆಯಾಗಿರುತ್ತವೆ. ನಡೆಯುತ್ತಿರುವ ತಾವೊಬ್ಬರು, ಹೋದ ಹೋದಲ್ಲೆಲ್ಲ ತಮ್ಮೊಡನೆಯೇ ಬೆಂಬತ್ತಿ ಬರುವ ಹಳಿಗಳೆರಡು ಅಷ್ಟೇ. ಮತ್ತಾರೂ ಇಲ್ಲ, ಮತ್ತೊಂದು ಮಾತಿಲ್ಲ. ತಲೆಗಳಲ್ಲಿ ಯಾವ ಯೋಚನೆಗಳೂ ಇಲ್ಲ. ಎಲ್ಲವೂ ಹುತ್ತದಂತೆ ನೆಲಸಮವಾಗಿವೆ. ಹಳಿ ಬಿಟ್ಟು ಕೆಳಗೆ ನಡೆಯುತ್ತಿದ್ದವರು, ಮೋಜು ಹುತ್ತದಂತೆ ನೆಲಸಮವಾಗಿವೆ. ಹಳಿ ಬಿಟ್ಟು ಕೆಳಗೆ ನಡೆಯುತ್ತಿದ್ದವರು, ಮೋಜು ನೋಡೋಣವೆಂದು ಹಳಿಗಳ ನಡುವೆ ನಡೆಯಹತ್ತಿದರು ಶಾಮಣ್ಣಾ, ಮೊದಮೊದಲು ನಿಧಾನವಾಗಿ ನಡೆಯುತ್ತಿದ್ದವರಿಗೆ ಆಮೇಲೆ ಒಂದು ಸ್ಲೀಪರಿನಿಂದ ಇನ್ನೊಂದಕ್ಕೆ ಜಿಗಿಯೋಣವೆನಿಸಿತು. ಜಿಗಿಯುವ ವೇಗ ಬರಬರುತ್ತ

ಹೆಚ್ಚಾಗಿ ಓಡಹತ್ತಿದರು. ಓಡೋಡುತ್ತಿದ್ದಂತೆ ಮುರಿದ ಹುತ್ತ, ಸತ್ತ ಹಾವು, ಯಜಮಾನನಾದ ಮಗ, ಸವಾಲು ಹಾಕುವ ಮಗಳು, ಅತ್ತ ವಾಲುವ ಪೀಸಾಗೋಪುರದಂತಿದ್ದ ಹೆಂಡತಿ ತಲೆಯಲ್ಲಿ ಸುಳಿದು ಮಾಯವಾಗುತ್ತಿದ್ದರು, ಬಂಡೆಗಳ ನಡುವಿನ ಭಾಗದಲ್ಲೇ ಇದ್ದ ತಿರುವೊಂದನ್ನು ಸಮೀಪಿಸುತ್ತಿದ್ದರು. ಇನ್ನೇನು ಬಂದಿತು, ಬಂದೇಬಿಟ್ಟಿತು ತಿರುವು. ಈ ತಿರುವು ದಾಟಿದರೆ ಸಾಕು, ಸ್ಟೇಶನ್ ಕಾಣುತ್ತದೆ ಎಂದುಕೊಳ್ಳುತ್ತಿರುವಾಗ-

ಧಡ್ ಧಡ್ ಧಡ್ ಸಪ್ಪಳ ಮಾಡುತ್ತ ಬರುತ್ತಿದ್ದ ಲೋಕಲ್ ಟ್ರೇನು ಮಾತ್ರ- ತನಗೆ ಮೀಸಲಾದ ದಾರಿಯಲ್ಲಿ ಶಾಮಣ್ಣ ನಡೆದಿರುವುದನ್ನು ಗಮನಿಸುವಷ್ಟು ಸಮಯ, ವ್ಯವಧಾನವಿರಲಿಲ್ಲವೇನೋ ಅವರನ್ನು ತುಳಿದು ಮೆಟ್ಟಿ ಮುಂದೋಡಿತು.

***

ಹುತ್ತ ನೆಲಸಮ ಮಾಡಿದ ಗಂಡಾಳುಗಳು ಮರುದಿನ ಸ್ಮಶಾನಕ್ಕೆ ಕಟ್ಟಿಗೆ ಸಾಗಿಸುತ್ತಿದ್ದರು.

***

■■

## ದೀಪದ ಕೆಳಗೆ ...

ಬಹಳ ಹೊತ್ತಿನಿಂದ ಮಲಗಿಕೊಂಡು ಮೈ ನೋಯುತ್ತಿದ್ದುದರಿಂದ ಹಾಲಮ್ಮ ಮುಸುಕು ತೆಗೆದು ಎದ್ದು ಕುಳಿತಳು. ಆಗಲೇ ನಸುಗತ್ತಲೆ ಆಗಿತ್ತು. ಆಟವಾಡಿ ಬಂದ ಮೊಮ್ಮಕ್ಕಳು ಲೈಟಿನ ಬೆಳಕಿನಲ್ಲಿ ಓದುತ್ತ ಕುಳಿತಿದ್ದರು. ಅಡಿಗೆಮನೆಯಿಂದ ಕರಿಯುವ ವಾಸನೆ ಗಮ್ಮೆಂದು ಮೂಗಿಗೆ ಬಡಿಯುತ್ತಿತ್ತು. ಅಮ್ಮನ ಮುದ್ದಿನ ಮೊಮ್ಮಗಳು ಸುಮಾ ಏನೋ ಬಾಯಾಡಿಸುತ್ತಿದ್ದವಳು, ಎದ್ದು ಕುಳಿತ ಅಮ್ಮನನ್ನು ನೋಡಿ:

"ಅಮ್ಮಾ ನಿಂಗೂ ಚಕ್ಲಿ ಬೇಕೇನು ?" ಎಂದು ಕೈ ಮುಂದೆ ಚಾಚಿದಳು. ಸುಮಾನ ತಲೆ ನೇವರಿಸಿ, ನೆತ್ತಿ ಮೂಸಿದ ಹಾಲಮ್ಮ ಬೊಚ್ಚು ಬಾಯಿತೆಗೆದು ನಕ್ಕು, "ಅಯ್ಯಃ ನನ್ನ ಬಂಗಾರಾ ಚಕ್ಲೀ ಕೊಡತೀಯಾ. ನನ್ನ ಬಾಯಾಗ ಹಲ್ಲಿಲ್ಲವಾ ಚಕ್ಲೀ ತಿನ್ನಾಕ, ನಿನ್ನ ಹಲ್ಲು ಕೊಡತೀಯೇನು? ಅದೇನೋ ಅಂತಾರಲ್ಲ ಹಾಂಗ ಆಗೇದ ನನ್ನ ಬಾಳೇ. ಹಲ್ಲು ಇದ್ದಾಗ ಕಡ್ಲಿ ಇಲ್ಲಾ, ಕಡ್ಲಿ ಇದ್ದಾಗ ಹಲ್ಲು ಇಲ್ಲಾ ಅಂತ. ಇರಲಿ ಬಿಡು ನೀನಃ ತಿನ್ನು. ಶಿವಣ್ಣ ಆಫೀಸಿನಿಂದ ಇನ್ನೂ ಬಂದಿಲ್ಲೇನು?" ಎಂದಳು.

"ಇಲ್ಲಮ್ಮಾ, ಅಪ್ಪ ಇನ್ನೂ ಬಂದಿಲ್ಲ. ಆಗಲೇ ಒಬ್ಬ ಸಿಪಾಯಿ ಬಂದು ಹೇಳಿ ಹೋದಾ. 'ಸಾಹೇಬ್ರು ಬರೂದು ತಡಾ ಆಗ್ತದ' ಅಂತ" ಎಂದು ಹೇಳಿದ ಅರುಣ ಮತ್ತೆ ಪುಸ್ತಕದತ್ತ ಬಾಗಿದ.

"ಲಗೂನ ಬಂದಿದ್ದರ ಬಿಸಿ ಬಿಸಿ ಚಕ್ಲಿ ತಿಂತಿದ್ದಾ. ಅಂವಗ ಚಕ್ಲಿ ಅಂದರ ಭಾಳ ಪಿರೀತಿ. ಸಣ್ಣಾವ ಇದ್ದಾಗ ಹಗಲೆಲ್ಲಾ 'ಅವ್ವಾ ನನಗ ಚಕ್ಲಿ ಮಾಡಿಕೊಡು' ಅಂತ ಕೇಳತಿದ್ದಾ."

"ಮತ್ತ ನೀ ಮಾಡಿ ಕೊಡತಿದ್ಯೋ ಇಲ್ಲೊ?" ಶಕುಂತಲಾನ ಲಕ್ಷ್ಯ ಅಭ್ಯಾಸದಿಂದ ಅಮ್ಮನ ಮಾತಿನತ್ತ ಹೊರಳಿತ್ತು.

"ಅಯ್ಯಃ ನಾ ಎಲ್ಲಿಂದ ಮಾಡಿಕೊಡ್ಲಿ. ಮನ್ಯಾಗ ಎಣ್ಣೆ, ಬೆಣ್ಣೇ ಏನೂ ಇರತಿದ್ದಿಲ್ಲಾ. ಮುಂಜಾನಿಂದ ಸಂಜೀತನಕಾ ಹೊಲದಾಗ ದುಡಿದರ ಹೊಟ್ಟೆ ತುಂಬ ರೊಟ್ಟಿ ಸಿಗತಿತ್ತು. ಇಂಥಾದರಾಗ ನಾ ಹ್ಯಾಂಗ ಅವಗ ಚಕ್ಲಿ ಮಾಡಿಕೊಡಬೇಕು? ಯಾವಾಗರೆ ಒಮ್ಮೆ ದುಡುಪಿ ಶ್ಯಾಮನ ಅಂಗಡ್ಯಾಗ ಚಕ್ಲಿ ತಿನ್ನು ಅಂತ ಹೇಳಿ ರೊಕ್ಕಾ ಕೊಡತಿದ್ದೆ."

ಅಡಿಗೆ ಮನೆಯಿಂದ ಅವ್ವನ ಕರೆ ಕೇಳಿ ಅರುಣ ಎದ್ದು ಹೋದ. "ಅಮ್ಮಾಃ ಅವ್ವ ಬಿಸಿ ಬಿಸಿ ಚಕ್ಲಿ ಮೆತ್ತಗ ಕರದಾಳಂತ ನಿನಗ ತಿನ್ನಾಕ ಕೊಟ್ಟಾಳ" ಎಂದು ಅಮ್ಮನ ಕೈಯಲ್ಲಿಟ್ಟ. ಅಮ್ಮನ ಬಾಯಿ ಚಕ್ಕುಲಿ ಮೆಲ್ಲುತ್ತ ಸುಮ್ಮನಾಯಿತು.

"ಮೊಗಲ ಅರಸರಲ್ಲಿ ಅಕಬರನು ಬಹಳ ಪ್ರಸಿದ್ಧಿ ಪಡೆದನು. ಅವನು ತನ್ನ ರಾಜ್ಯವನ್ನು ವಿಸ್ತರಿಸಿ ಚಕ್ರವರ್ತಿ ಎನ್ನಿಸಿಕೊಂಡನು. ರಜಪೂತರೊಡನೆ ಒಪ್ಪಂದ ಮಾಡಿಕೊಂಡನು. ಹಿಂದೂ ಮುಸ್ಲಿಂರಲ್ಲಿ ಒಡಕು ಹುಟ್ಟದಂತೆ ನೋಡಿಕೊಂಡು ಐಕ್ಯತೆ ಸ್ಥಾಪಿಸಿದನು." ಗಟ್ಟಿಯಾಗಿ ಓದುತ್ತಿದ್ದ ಶಕೂ ತಟ್ಟನೆ ನಿಂತಳು.

"ಅಣ್ಣಾ, ಐಕ್ಯತೆ ಅಂದರ ಏನು ?"

"ಐಕ್ಯತೆ ಅಂದರ ಕೂಡಿಕೊಂಡು ಇರೋದು, ಒಂದಾಗಿ ಇರೋದು ಅಂತ ಅದರ ಅರ್ಥ. ಹಿಂದೂಗಳು ಮುಸ್ಲಿಮರು ಬೇರೆ ಬೇರೆ ಅಲ್ಲ. ಒಂದೇ ತಾಯಿ ಮಕ್ಕಳು, ಅಣ್ಣ-ತಮ್ಮಂದಿರು ಅಂತ ತಿಳಿದುಕೊಂಡರೆ ಜಗಳಗಳು

ಬೆಳೆಯೂದಿಲ್ಲ. ಹೌದಲ್ಲೋ?" ಅರುಣ ತಂಗಿಗಿಂತ ಹೆಚ್ಚು ತಿಳಿದವನು. ಅವಳಿಗೆ ತಿಳಿಯದ ವಿಷಯ ವಿವರಿಸಲು ಅವನಿಗೆ ಬಹಳ ಹೆಮ್ಮೆ.

ಎಲ್ಲವನ್ನೂ ಕೇಳುತ್ತಿದ್ದ ಹಾಲಮ್ಮ "ನಮ್ಮ ಮಂದಿ ಮತ್ತ ಮುಸಲ್ಮಾನರು ಒಂದಽ ಅಲ್ಲೇನು? ಅವರ್‍ಯಾಕ ಜಗಳಾಡಬೇಕು? ಅವರೂ ಇಲ್ಲೇ ಹುಟ್ಟಿ ಬೆಳೆದವರು. ಅದಽ ನೀರು, ಅದಽ ಹವಾ, ಅಕೀಽನ ಭೂಮಿತಾಯಿ ಅಲ್ಲೇನು, ನಮ್ಮಿಬ್ಬರನ್ನೂ ಜೋಪಾನಾ ಮಾಡುವಾಕಿ? ದೇವರು, ಧರ್ಮ ಬ್ಯಾರೆ ಆದರ ಏನಾತು? ನಾವು ಬ್ಯಾರೆ ಹ್ಯಾಂಗ ಆಗತೀವಿ? ನಾವು ಅಂದರ ನಾನು, ನಿಮ್ಮ ಅಪ್ಪ ಹಳ್ಯಾಗ ಇದ್ದಾಗ ನಮ್ಮ ನೆರೆಮನ್ಯಾಗ ರಹಮಾನ ಅಂತ ಒಬ್ಬಾಂವ ಇದ್ದ. ಅವನೂ ನಮ್ಮ ಅಣ್ಣಾನಽ ಅಂತ ತಿಳಕೊಂಡಿದ್ದೆ ನಾನು. ನಿಮ್ಮ ಅಜ್ಜ ಸತ್ತಾಗ ನಾ ಇನ್ನೂ ಹೊಟ್ಟೇಲಿದ್ದೆ. ನಿಮ್ಮ ಅಪ್ಪ ಹುಟ್ಟಿದಾಗ ಎಷ್ಟು ಸಹಾಯ ಮಾಡಿದಾ ನಮಗ. ಯಾಕಂದ್ರ ಅಷ್ಟೊತ್ತಿಗೆ ಕ್ಷಯಾ ಆಗಿ ಅಣ್ಣಾನೂ ಸತ್ತು ಹೋಗಿದ್ದಾ. ಅಪ್ಪ ಅವ್ವ ಮೊದಲಽ ಸತ್ತಿದ್ರು. ನನಗ ಯಾರೂ ದಿಕ್ಕಿಲ್ಲದಂಗ ಆಗಿತ್ತು. ಚೂರು ಹೊಲಾ ಇದ್ದದ್ದು ಅಣ್ಣಾನ ಔಷಧಕ್ಕ, ಡಾಕ್ಟರಿಗೆ ಮಾರಿಹೋಗಿತ್ತು. ಆಗ ರಹಮಾನಣ್ಣ ಮಾಡಿದ ಉಪಕಾರಾ ಎಂದೂ ಮರಿಯಾಕಿಲ್ಲ ನನ್ನ ಜೀವಾ. ಮತ್ತ ಅವನ ಹೇಣ್ತಿ ಫಾತೀಮಾಗ ಹೆರಿಗೆ ಆದಾಗ ನಾನಽ ಬಾಣಂತನಾ ಮಾಡಿದ್ದೆ...."

"ಅಮ್ಮಾ ನೀ ಅವರನ್ನ ಮುಟ್ಟಿಸಿಕೋತಿದ್ದಿ?" ಶಕೂ ಬೆರಗಾಗಿ ಕೇಳಿದಳು.

"ಅಯ್ಯಽ ನಿಂದೊಂದು ಮಾತಽ. ಮುಟ್ಟಿಸಿಕೊಳ್ಳದಽ ಹ್ಯಾಂಗ ಇರತಾರ? ಮನುಷ್ಯಾಗ ಮನುಷ್ಯಾ ಸಹಾಯ ಮಾಡದ ಇನ್ನ ಮರಾ ಸಹಾಯ ಮಾಡ್ತಾವೇನು? ನಮ್ಮ ಮನ್ಯಾಗ ಹಬ್ಬ ಹುಣಿವಿ ಆದರ ಸುಣ್ಣಾ ಬಳಿಯೂದು, ತಳಲು ಕಟ್ಟೂದು, ಪ್ಯಾಟಿಯಿಂದ ಸಾಮಾನು ತರೂದು ಎಲ್ಲಾ ಮಾಡತಿದ್ದ ರೆಹಮಾನಣ್ಣ. ನಿಮ್ಮ ಅಪ್ಪಗ ಒಮ್ಮೆ ಜಡ್ಡು ಜೋರಾಗಿತ್ತು. ನಾನೂ ಆಲೇದೇವರಿಗೆ ಬೇಡಿಕೊಂಡಿದ್ದೆ, ನೆಟ್ಟಗಾತು. ಮೂರು ಸೇರು ಸಕ್ಕರಿ ಓದಿಸಿ ಬಂದೆ. ಮಾದಲಿ ಮಾಡಿದ್ದೆ ಎಲ್ಲಾರೂ ಕೂಡಿ ಉಂಡಿವಿ."

ಅಮ್ಮನ ಮಾತನ್ನು ಕೌತುಕದಿಂದ ಕೇಳುತ್ತಿದ್ದರು ಮೊಮ್ಮಕ್ಕಳು. "ಹೌದು ಅಣ್ಣಾ, ದೇವರು ಒಬ್ಬನ ಅದಾನ ಎಲ್ಲರಿಗೂ, ಹಾಂಗಂತ ಶರಣರು, ಸಂತರು, ಎಲ್ಲಾರೂ ಹೇಳತಾರಂತೆ. ಆದರ ಈ ಬೇರೆ ಬೇರೆ ಧರ್ಮದವರು ನಾವು ಹೆಚ್ಚು ನಾವು ಹೆಚ್ಚು ಅಂತ ಬಡಿದಾಡೂದ್ಯಾಕ? ಇದಽ ತಿಳಿವೊಲ್ಲದು ನನಗ."

ಶಕೂ ಗಂಭೀರ ಪ್ರಶ್ನೆ ಹಾಕಿದಾಗ ಅರುಣ ತಲೆ ತುರಿಸಿಕೊಂಡ. ಅವನಿಗೆ ಈ ಸಮಸ್ಯೆ ಬಗೆಹರಿಯಲಿಲ್ಲ. ಹೌದು ಎಂತೆಂಥ ಅತಿರಥ ಮಹಾರಥರೆನ್ನುವ ಪಂಡಿತರನ್ನೇ ಕಾಡುವ ಪ್ರಶ್ನೆಯಿದು. ಆ ಪುಟ್ಟ ತಲೆಗೆ ಹೇಗೆ ಹೊಳೆದೀತು ? ತನ್ನ ಸೋಲನ್ನೊಪ್ಪಿಕೊಳ್ಳಲು ಅವನು ಸಿದ್ಧನಿರಲಿಲ್ಲ. ಗಂಭೀರವಾಗಿಯೇ ತಂಗಿಗೆ ಹೇಳಿದ: "ಸಾಕು ಬಿಡು, ಅದನ್ನೆಲ್ಲಾ ತೊಗೊಂಡು ಏನು ಮಾಡತಿ ? ನಾಳೆ ಪರೀಕ್ಷೆ ಅದ, ಓದು ಸುಮ್ಮನ' ಎಂದು.

ಹೊರಗೆ ಸಪ್ಪಳವಾಯಿತು. ಸುಮಾ 'ಅಪ್ಪಬಂದ' ಎನ್ನುತ್ತ ಓಡಿ ಹೋದಳು. ಮಕ್ಕಳೆಲ್ಲ ಪುಸ್ತಕದಲ್ಲಿ ತಲೆ ಇಟ್ಟರು. ಬೆಳಿಗ್ಗೆ ಕೆಲಸಕ್ಕೆ ಹೋದ ಮಗನ ಮುಖವನ್ನು ಯಾವಾಗ ನೋಡುವೆನೋ ಎಂದು ಚಡಪಡಿಸುತ್ತಿದ್ದ ಹಾಲಮ್ಮ ಸರಿಯಾಗಿ ಸೆರಗನ್ನು ಹೊದ್ದು ಕುಳಿತು, "ಏನು ಕೆಲಸನೋ ಏನೋ, ಹಾಳು ಪೋಲೀಸು ಕೆಲಸ. ಊಟಕ್ಕ, ನಿದ್ದಿಗೆ ಸುದ್ದಾ ಪುರಸೊತ್ತಿಲ್ಲ" ಎಂದು ವಟವಟಿಸಿದಳು. ಗಂಡನನ್ನು ಸ್ವಾಗತಿಸಲು ಹೊರಗೆ ಹೋದ ಸರೋಜ ಗಂಡನ ಆಯಾಸಗೊಂಡ ಗಂಭೀರ ಮುಖ ನೋಡಿ ಸುಮಾನನ್ನು ತಾನೇ ಎತ್ತಿಕೊಂಡು ಒಳಗೆ ಬಂದಳು. ಮುದುಕಿ ಮಾತ್ರ ಸುಮ್ಮನಿರದೆ,

"ಎಷ್ಟು ಹೊತ್ತ ಆಯ್ತಲ್ಲೋ ಶಿವಣ್ಣಾಽ" ಎಂದಳು ಕಳಕಳಿಯಿಂದ.

"ಹೌದವ್ವಾ, ಇವತ್ತ ಹುಬ್ಬಳ್ಳ್ಯಾಗ ಗದ್ದಲ ಭಾಳ ಆತು. ಇಷ್ಟೊತ್ತನಾ ಅಲ್ಲೇ ಇದ್ದೆ. ಇದೇ ಈಗ ದವಾಖಾನಿಯಿಂದ ಬಂದೆ" ಎಂದ ಶಿವಣ್ಣ "ಬಂದೆ, ಈಗ ಮುಖಾ ತೊಳಕೊಂಡು ಬರ್ತೇನೆ" ಎಂದು ಮಾತು ಮುಗಿಸಿದರು.

ಪಾಽಪ, ಮಗ ಹಸಿದು ಬಂದಿರುವಾಗ ತನ್ನ ಮಾತಿನಿಂದ ಬೇಸರಗೊಳಿಸಬಾರದೆಂದು ಹಾಲಮ್ಮ ಸುಮ್ಮನಾದಳು. ಕೈಕಾಲು ತೊಳೆದುಕೊಂಡು ದೇವರ ಮನೆಗೆ ಹೋಗಿ ಊದುಬತ್ತಿ ಹಚ್ಚಿ ನಮಸ್ಕರಿಸಿ ಬಂಧ ಶಿವಣ್ಣ, ಸರೋಜ ತಂದ ತಿಂಡಿಯನ್ನು ಹಿಂದಕ್ಕೆ ಕಳಿಸಿದರು. ಈಗ ನನಗೆ ಹಸಿವೆ ಇಲ್ಲ" ಎಂದು.

ಬಂದು ಮಕ್ಕಳ ಜೊತೆಗೆ ಚಾಪೆಯ ಮೇಲೆ ಕುಳಿತ ಶಿವಣ್ಣನ ಮುಖ ಸಣ್ಣದಾಗಿತ್ತು. ಏನೋ ಯಾತನೆಯಿಂದ ನರಳುತ್ತಿದ್ದ ಹಾಗಿತ್ತು. ಮಾತು ಆಡದೆ ಸುಮ್ಮನೆ ಕುಳಿತ ಮಗನನ್ನು ನೋಡಿ ಹಾಲಮ್ಮನ ಚಡಪಡಿಕೆ ಮತ್ತೆ ಸುರುವಾಯಿತು. ಮಗ ಇಂದು ದಿನದಂತೆ ಇಲ್ಲ, ಚಕ್ಕುಲಿ ತಿನ್ನಲಿಲ್ಲ. ಮುಖವೂ ಬಾಡಿದೆ. ಏನಾಗಿದೆಯೋ ಬಾಯಿಬಿಟ್ಟು ಹೇಳಬಾರದೇ. ಜೀವ ತಡೆಯದೆ ಕೇಳಿದಳು.

"ಶಿವಣ್ಣಾ, ಏನಾತಪಾ, ಯಾಕೋ ಸುಮ್ಮನಽ ಅದೀಯಲ್ಲ?"

"ಅವ್ವಾಽ ಹ್ಯಾಂಗ ಹೇಳಲಿ? ಹೇಳಲಿಕ್ಕೆ ಬಾಯಿನೇ ಬರವೊಲ್ಲದು. ಅಲ್ಲಿ ನಡೆದದ್ದೆಲ್ಲಾ ಇನ್ನೂ ಕಣ್ಣಮುಂದ ಕಟ್ಟಿದಾಂಗ ಆಗೇದ. ಹೀಂಗ ಆದೀತು ಅಂತ ಕನಸಮನಸಿನಾಗೂ ಇದ್ದಿದ್ದಿಲ್ಲಾ ನನಗ" ಅವನ ದನಿಯಲ್ಲಿ ವ್ಯಥೆಯಿತ್ತು.

"ಆದದ್ದರೆ ಏನು ಹೇಳ್ರೆಲ್ಲಾ. ಸುಮ್ಮನ ನಮ್ಮನ್ನ ಯಾಕ ಹೆದರಸತೀರಿ?" ಸುಮ್ಮನಿರದೆ ಸರೋಜ ಬಾಯಿಹಾಕಿದಳು.

'ಇವತ್ತ ಮಧ್ಯಾಹ್ನ ಠಾಣೇದಾಗ ಇದ್ದಾಗ ಹುಬ್ಬಳ್ಳ್ಯಾಗ ಹಿಂದೂ ಮುಸ್ಲಿಮರ ನಡುವ ಹೊಡದಾಟ ಸುರೂ ಆಗೇದ ಲಗೂನ ಬರ್ರಿ ಅಂತ ಫೋನು ಬಂತು. ನಾನು ದಂಗೆ ಲಗೂ ಶಾಂತ ಮಾಡಬೇಕು ಅಂತ ಹೋದೆ. ಆದರ ಅಲ್ಲೆ ಆಗಲೇ ಪರಿಸ್ಥಿತಿ ಭಾಳ ಮುಂದ ಹೋಗಿತ್ತು. ಮಸೀದಿ ಮುಂದ ಹಿಂದೂಗಳ ಮೆರವಣಿಗೆ ಬಂತಂತ, ಅವರು ಬ್ಯಾಂಡ ಬಾರಿಸಿದರಂತ. ಇವರಿಗೆ ತ್ರಾಸ ಆತಂತ. ಅಷ್ಟಕ್ಕಽ ಜಗಳಾಟ ಸುರು ಆಯಿತು. ಕಲ್ಲು, ಬಡಗಿ, ಇಟ್ಟಂಗಿ, ಬಾಟ್ಲಿ ತೊಗೊಂಡು ಬಡಿದಾಟಾನಽ ಸುರೂ ಆಯ್ತು. ಇವರೂ ನೂರಾರು ಸಂಖ್ಯೆಯೊಳಗ ಕೂಡಿದರು. ಆಗ ನಮಗ ಸುದ್ದಿ ಬಂದದ್ದು. ಈ ಸುದ್ದಿ ಉಳಿದ ಓಣಿಗೆಲ್ಲಾ ಹಬ್ಬಿ ಇಬ್ಬರೂ ಒಬ್ಬರನ್ನೊಬ್ಬರ ಸಿಕ್ಕಲ್ಲೆ ಹೊಡೆದರು, ಇರಿದರು, ತಲೀ ಒಡೆದರು. ಪರಿಸ್ಥಿತಿ ಭಾಳ ಗಂಭೀರ ಅದ ಅಂತ ಹೇಳಿ ನಾನು ಸಾಹೇಬರಿಗೆ ಫೋನ ಮಾಡಿ ಮತ್ತಷ್ಟು ರೈಫಲ್ ಸಿಪಾಯಿಯರನ್ನ ಕರೆಸಿದೆ. ಗುಂಪು ಗುಂಪು ಮಾಡಿ ಬೇರೆ ಬೇರೆ ಓಣಿಗೆ ಕಳಿಸಿದೆ. ಅಷ್ಟರೊಳಗಽ ಸುದ್ದಿ ಬಂತು, ಮನೀ ಮಂದೀನ ಒಳಗ ಹಾಕಿ, ಹೊರಗ ಚಿಲಕಾ ಹಾಕಿ ಮನೀಗೆ ಬೆಂಕೀ ಹಚ್ಚಾಕ ಹತ್ಯಾರ ಅಂತ"...

"ಅವ್ವಾಽಽ! ಅವರೇನು ಮನುಷ್ಯಾರೋ ರಾಕ್ಷಸರೋ" ಹಾಲಮ್ಮ ಉದ್ಗರಿಸಿದಳು.

'ಮನುಷ್ಯಾಗ ಇಂಥಾ ಅಮಲು ಏರಿತಂದರ ರಾಕ್ಷಸನಽ ಆಗ್ತಾರ. ಅವ್ವಾಽ ತಾವು ಏನು ಮಾಡ್ತೀವಿ ಏನು ಬಿಡ್ತೀವಿ ಅನ್ನೂ ಎಚ್ಚರಾನ ಅವರಿಗೆ ಇರೂದಿಲ್ಲ."

"ಆಮ್ಯಾಲೆ ನೀವೇನು ಮಾಡಿದಿರಿ?" ಉತ್ಸುಕಳಾಗಿ ಸರೋಜ ಕೇಳಿದಳು.

'ಆಕಾಶದಾಗ ಎರಡು ಮೂರು ಸುತ್ತು ಗುಂಡು ಹಾರಿಸಲಿಕ್ಕೆ ಆರ್ಡರ ಕೊಟ್ಟೆ. ಜನರೇನು ಹಿಂದಕ್ಕ ಸರೀಲಿಲ್ಲ. ಲಾಠೀ ಚಾರ್ಜ ಮಾಡ್ರಿ ಅಂದೆ. ಈ ಗದ್ದಲದಾಗ ಎಷ್ಟೋ ಪೋಲೀಸರಿಗೇ ಕಲ್ಲಿನೇಟು ಬಿದ್ದವು. ನಮ್ಮ ಪಾಟೀಲ

ಇನ್‌ಸ್ಪೆಕ್ಟರಗೂ ಪೆಟ್ಟು ಬಿದ್ದು ದವಾಖಾನಿಗೂ ಹಾಕಬೇಕಾತು. ನಮಗೂ ತಡೀಲಾಗಲಿಲ್ಲ. ಗೋಳಿಬಾರಿಗೆ ಆರ್ಡರ ಆಯಿತು. ಮನಷ್ಯಾ ಸಹನ ಮಾಡಿಕೊಳ್ಳೂದಕ್ಕೂ ಒಂದು ಮಿತಿ ಇರ್‍ತದ ಅಲ್ಲಾ? ಗೋಳಿಬಾರಿಗೆ ಆರ್ಡರ ಕೊಟ್ಟರೂ ಯಾರಿಗೂ ಪ್ರಾಣಾಪಾಯ ಆಗಬಾರದು ಅಂತ ದೇವರನ ನೆನಿಸ್ತಾ ಇದ್ದೆ. ಹಾಂಗ ಪರಿಸ್ಥಿತಿ ಹಿಡಿತಕ್ಕ ಬಂದು ಜನಾ ಹಿಂದ ಸರೀಲಿಕ್ಕೆ ಹತ್ತಿದರು. ಗುಂಪು ಒಡೆದು ಒಡೆದು ಓಡಿಹೋಗಲಿಕ್ಕೆ ಹತ್ತಿದರು. ಕಡಿಗೆ ರಸ್ತೆ ನಿರ್ಜನ ಆಯ್ತು, ಶಾಂತಿ ನೆಲಸ್ತು. ಆದರ ಒಂದು ಥರಾ ಸ್ಮಶಾನ ಶಾಂತಿ ಇತ್ತು. ರಸ್ತೇದ ತುಂಬ ಕಲ್ಲು, ಇಟ್ಟಂಗಿ, ಒಡದ ಬಾಟ್ಲಿ ಬಿದ್ದಿದ್ವು. ಗಾಯ ಆದವರನ್ನೆಲ್ಲಾ ಆಸ್ಪತ್ರೆಗೆ ಸಾಗಿಸಿದ್ವಿ. ಒಂದಿಬ್ಬರಂತೂ ಉಳಿಯೂ ಸ್ಥಿತಿಯೊಳಗ ಇದ್ದಿದ್ದಿಲ್ಲಾ" ಒಂದೆ ಸಮನೆ ಮಾತನಾಡಿದ ಶಿವಣ್ಣ ಸುಮ್ಮನಾದರು.

"ಮುಂದೇನಾತು, ಅವರು ಉಳದರೋ ಸತ್ತರೋ?" ಹಾಲಮ್ಮನೇ ಧೈರ್ಯಮಾಡಿ ಕೇಳಿದಳು.

"ಅದನ್ನಽ ಹೇಳತೇನಿ. ನಾನು ದವಾಖಾನಿಗೆ ಹೋಗಿ ನಮ್ಮ ಪಾಟೀಲರನ್ನ ನೋಡಿ ಉಳಿದವರನ್ನ ನೋಡಲಿಕ್ಕೆ ಹೋದೆ. ಒಬ್ಬನ ಕಾಲಿಗೆ ಗುಂಡು ಬಡಿದಿತ್ತು. ಡಾಕ್ಟರರು ಆಪರೇಶನ್ ಮಾಡಿ ಗುಂಡು ತಗದಿದ್ದರು. ಆದರ ಲಾಠಿ ಛಾರ್ಜಿನೊಳಗ ತಲೀಗೆ ಭಾಳ ಪೆಟ್ಟು ಬಿದ್ದಿತ್ತು. ಡಾಕ್ಟರರು ಎಷ್ಟು ಪ್ರಯತ್ನಮಾಡಿದರೂ ಅವಾ ಉಳೀಲಿಲ್ಲಾ. ಕಾಶೀಮ ಸತ್ತಾ. ಅವ್ನಽ ಕಾಶೀಮ ನನ್ನ ಕಣ್ಣ ಮುಂದ ಜೀವಾ ಬಿಟ್ಟಾ" ಅವನ ದನಿ ಭಾರವಾಗಿತ್ತು. ಕಣ್ಣು ತೇವಗೊಂಡಿದ್ದವು.

"ಯಾವ ಕಾಶೀಮ?" ಹಾಲಮ್ಮನ ದನಿಯಲ್ಲಿ ಭಯ ಕಾತುರ ತುಂಬಿತ್ತು.

"ಅವನಽ ರೆಹಮಾನಣ್ಣನ ಮಗಾ? ಇದ್ದೊಬ್ಬ ಮಗಾ ಸತ್ತೋದಾ. ಮುಪ್ಪಿನ ಕಾಲಕ್ಕ ಚಾಚಾಗ ಆಸರ ಇಲ್ಲದಾಂಗ ಆಯಿತು. ಇದಕ್ಕ ನಾನಽ ಕಾರಣ ಅಂತ ಅನಸ್ತದ" ತುಂಬಿ ಬಂದ ಕಣ್ಣುಗಳನ್ನು ಒರೆಸಿಕೊಂಡರು ಶಿವಣ್ಣ.

ತನ್ನ ಮಗನ ಜೊತೆಗೆ ಮಗನಂತೆಯೇ ಜೋಪಾನಮಾಡಿದ ಕಾಶೀಮ ಸತ್ತ ಸುದ್ದೀ ಕೇಳಿ ಹಾಲಮ್ಮನಿಗೆ ದುಃಖ ತುಂಬಿ ಬಂದಿತ್ತು. ಆದರೆ ತನ್ನ ಆಳು ಮಗನ ವ್ಯಥೆ ಹೆಚ್ಚಿಸಲು ಕಾರಣವಾಗುವುದೆಂದು ತಿಳಿದು ಹೊರ ಚೆಲ್ಲುತ್ತಿದ್ದ ಕಣ್ಣೀರು ಒರೆಸಿಕೊಂಡು ಸಮಾಧಾನದಿಂದ ಮಗನಿಗೆ ತಿಳಿವಳಿಕೆ ಹೇಳಿದಳು.

"ಅದಕ್ಕೇನು ಮಾಡೂದಪಾ ಇನ್ನ. ಅವನ ಭೂಮಿ ಋಣಾ ತೀರಿತು ಅಂತ ತಿಳೀಬೇಕು ಅಷ್ಟಽ. ಅಣ್ಣಾಗ ದೇವರು ಮುಪ್ಪಿನ್ಯಾಗ ಇಂಥಾ ಕಷ್ಟ ಕೊಡಬಾರದಾಗಿತ್ತು. ಆದರೆ ಅದೆಲ್ಲಾ ಅವನ ಕೈಯಾಗಿನ ಮಾತು. ನಾವು ಸೂತರದ ಗೊಂಬಿ. ನೀನು ಸಮಾಧಾನ ತೊಗೋ, ತ್ರಾಸ ಮಾಡಿಕೋಬ್ಯಾಡಾ" ಎಂದಳು.

ಸರೋಜಳಿಗೆ ಒಂದು ಶಂಕೆ ತಲೆದೋರಿತು. "ಅಲ್ರೀ ಆ ಕಾಶೀಮ ಈ ಗದ್ದಲದಾಗ ಯಾಕ ಬಂದಾ? ಬರಬಾರದಾಗಿತ್ತು. ಸುಮ್ಮನ ತಣ್ಣಗ ತನ್ನ ಮನ್ಯಾಗ ತಾನಿದ್ದರ ಅಂವ ಸಾಯತಿದ್ದಿಲ್ಲಾ. ಇದರಾಗ ನಿಮ್ಮದೇನು ತಪ್ಪು? ನಿಮ್ಮ ಕರ್ತವ್ಯ ನೀವು ಮಾಡಿದಿರಿ" ಎಂದಳು ಸರೋಜ ಗಂಡನ ಕೆಲಸವನ್ನೇ ಸಮರ್ಥಿಸಿ.

"ಒಂದು ರೀತಿಯಿಂದ ನೋಡಿದರ ನೀ ಹೇಳೂದು ಖರೇ ಅನಸ್ತದ ಸರೋಜಾ. ರೆಹಮಾನಣ್ಣನಂಥಾ ದೊಡ್ಡ ಮನಸ್ಸಿನವನ ಮಗಾ ಇಂಥಾ ದಂಗೆದಾಗ ಯಾಕ ಸೇರಿಕೊಂಡಾ ಅನ್ನೋದು ನನಗೂ ತಿಳಿದಾಂಗ ಆಗೇದ. ಸಣ್ಣಾವಿದ್ದಾಗ ನಾವು ಕೂಡಿ ಆಡೀವಿ, ಉಂಡೀವಿ, ಜಗಳಾಡೀವಿ. ಆದರ ಮತ್ತೊಂದು ಗಳಿಗ್ಗೆ ಒಂದು ಆಗಿರತಿದ್ದವಿ. ಅವಗ ಹಿಂದೂ ಜನರ ಮ್ಯಾಲೆ ಇಷ್ಟ್ಯಾಕೆ ದ್ವೇಷ ಬಂತು ಅನ್ನೂದು ಗೂಢ ಆಗೇದ ನನಗ. ಬ್ಯಾರೆಯವರು ಕಲಿಸಿದರೂ ಇಂಥಾ ಕೆಟ್ಟ ಬುದ್ಧಿ ಕಲೀಬಾರದಾಗಿತ್ತು. ಅಂಥ ಅಪ್ಪಗ ಇಂಥಾ ಮಗ ಹುಟ್ಟಬಾರದಾಗಿತ್ತು. ಉಹುಂ

ಹುಟ್ಟಬಾರದಾಗಿತ್ತು" ಎಂದು ತಮ್ಮಷ್ಟಕ್ಕೆ ಗೊಣಗಿಕೊಂಡು ಶಿವಣ್ಣ ಎದ್ದು ತಮ್ಮ ಕೋಣೆಗೆ ಹೋದರು. ಸ್ತಬ್ಧವಾಗಿ ಕುಳಿತ ಸೊಸೆ ಮೊಮ್ಮಕ್ಕಳನ್ನು ದಿಟ್ಟಿಸಿ ಹಾಲಮ್ಮ ಗೋಡೆಗೊರಗಿ ಕಣ್ಣು ಮುಚ್ಚಿದಳು.

ಅಂಥಾ ಅಪ್ಪನಿಗೆ ಇಂಥಾ ಮಗ! ಛೇ ಆದರೆ ಶಿವಣ್ಣನಂಥಾ ಮಗನಿಗೆ ಎಂಥಾ ಅಪ್ಪನಿದ್ದ ಎನ್ನುವದು ಅವರಿಗೇನು ಗೊತ್ತು ಪಾಪ, ತನ್ನ ಅಪ್ಪ ಗಾಂಧೀ ಚಳುವಳಿಯಲ್ಲಿ ಭಾಗವಹಿಸಿದ್ದ ದೇಶಭಕ್ತ ಎಂದೇ ತಿಳಿದಿದ್ದ ಶಿವಣ್ಣನಿಗೆ ಅಪ್ಪನ ಬಗ್ಗೆ ತುಂಬ ಅಭಿಮಾನ ಹೆಮ್ಮೆ. ವಿಷಯಲಂಪಟನೆಂದು ಹೆಸರಾಗಿದ್ದ ಗಂಡ ಒಂದು ಹೆಣ್ಣಿಗಾಗಿ ನಡೆದ ಜಗಳದಲ್ಲಿ ಸತ್ತ ಸುದ್ದಿಯನ್ನು ಬಚ್ಚಿಟ್ಟು, ಗಂಡನ ಊರಿನಿಂದ ದೂರದ ತೌರಿಗೆ ಬಂದು ಬಾಳಿದ ಹಾಲಮ್ಮ ತನ್ನ ಒಂದು ಸುಳ್ಳಿನಿಂದ ಶಿವಣ್ಣನ ಬದುಕನ್ನೇ ಹಸನಾಗಿಸಿದ್ದಳು.

***

# ಪ್ರಯಾಣ

"ಅವ್ವಾ, ಬೆಳಗಾಂವಿಯಿಂದ ವಿಜಾಪುರಕ್ಕೆ ಈಗ ಬಸ್ಸು ಆಗ್ಯಾವ, ಲಗೂನ ಹೋಗಿ ಮುಟ್ಟತಿದ್ದಿ. ಆದರ ನಿನಗ ಬಸ್ಸಿನ ನಾತ ಆಗೂದಿಲ್ಲಂತ ಗಾಡೀಗೆ ಕೂಡಿಸೇನಿ. ಹುಬ್ಬಳ್ಳ್ಯಾಗ ಗಾಡಿ ಬದಲು ಆಗ್ತದ. ಒಬ್ಬಾಕಿನ್ನ ಅಷ್ಟು ದೂರ ಹ್ಯಾಂಗ ಕಳಿಸೂದು ಅಂತ ಕಾಳಜಿ ನನಗ."

"ಇರಲಿ ಬಿಡಪಾ ಕಾಶಣ್ಣಾ, ನಿನಗೂ ಈಗ ರಜಾ ಇಲ್ಲಲ್ಲ.... ಒಬ್ಬಾಕಿ ಆದರ ಏನಾತು. ಸಣ್ಣಾಕೀನಽ ನಾನು? ಮುದುಕಿ ಆದೆ. ಸಾಮಾನು ಏನು ಬಾಳ ಇಲ್ಲಾ ಏನಿಲ್ಲಾ. ಇದೊಂದು ಕೈಚೀಲ, ಇದೊಂದು ನೀರಿನ ತಂಬಿಗಿ ಇವೆರಡಽ"

"ಅವಸರದಾಗ ಊಟಾನೂ ನೆಟ್ಟಗ ಮಾಡಲಿಲ್ಲ. ಲಲಿತಾ ಹಾಲಾಗಿನ ಚಪಾತಿ ಮಾಡಿ ಕಟ್ಟ್ಯಾಳ ಡಬ್ಬ್ಯಾಗ. ದಾರಿಯೊಳಗ ತಿನ್ನು. ಇಂಥಾ ಗಾಡೀಗೆ ಅವ್ವನ್ನ ಕಳಸ್ತೀನಿ ಅಂತ ಅಶೋಕಗ ತಾರು ಕೊಟ್ಟೀನಿ. ಅವ ಸ್ಟೇಷನ್‌ಕ ಬಂದಿರತಾನ."

'ನೀವು ಅಣ್ಣಾ ತಮ್ಮಾ ಎಲ್ಲಾ ತಾರಿನ ಮ್ಯಾಲೆ ಕೆಲಸಾ ಮಾಡವ್ರಪಾ. ಹೇಣ್ತಿ ಹೆರಿಗಿಗೆ ತವರ್ಮನಿಗೆ ಹೋಗ್ಯಾಳ, ಊಟದ ತ್ರಾಸು ಆಗ್ತದ ಅವ್ವನ್ನ ಕಳಸು ಅಂತಾ ಅವಾ ತಾರು ಕೊಟ್ಟಾ. ಅದಕ್ಕಽ ನಿಂತ ಕಾಲಮ್ಯಾಲೆ ಹೊರಟೆ. ಅವರ್ನ ಸಂಬಾಳಿಸರೆಪಾ ನೀನು ನಿನ್ನ ಹೇಣ್ತಿ. ವಯಸ್ಸಾಗ್ಯಾವ. ಸಣ್ಣ ಸಣ್ಣ ಮಾತಿಗೆ ಸಿಟ್ಟಿಗೆ ಬರತಾರ. ಲಲಿತಾಗ ಏನೂ ತಿಳಿಕೋಬ್ಯಾಡ ಅನ್ನು. ಆಕೀನೂ ತಿಳಿದಾಕಿ ಇದ್ದಾಳ. ಆದರೂ ಜೀವ ತಡೀಲಾರದ ಹೇಳಿದೆ."

"ಅವ್ವಾಽ ನಿನಗ ಮಲ್ಲಿಗೀ ಹೂವು ಅಂದರ ಭಾಳ ಪ್ರೀತಿ, ಮಾಲಿ ಮಾರಲಿಕ್ಕೆ ಬಂದಾವ ತಗೊಳ್ಳಲೇನು?"

"ಬ್ಯಾಡಪ್ಪಾ. ನನಗ್ಯಾತಕ್ಕ ಮಲ್ಲಿಗೀ ಮಾಲಿ. ಅಜ್ಜಿ ಆದೆ. ಇನ್ಯಾತಕ್ಕ ಬೇಕು. ಹೂವಿನ ಪ್ರೀತಿ ಎಲ್ಲಾ ಸಣ್ಣಾಕಿ ಇದ್ದಾಗ ಇತ್ತು. ಹೋಗಿಬರ್ತೀನಿ ಮನೀಕಡೆ ಜ್ವಾಕಿ" ಕನಕಮ್ಮಾ ಮಗನಿಗೆ ಕೈ ಮಾಡುತ್ತಿದ್ದಂತೆಯೇ ಗಾಡಿ ಮುಂದೆ ಸಂದಿತ್ತು.

ಗಾಡಿಗೆ ಗತಿ ಸಿಕ್ಕಿತ್ತು. ಮೊದಮೊದಲು ಎಳೆಯಲೋ ಬೇಡವೋ ಎನ್ನುವಂತೆ ನಿಧಾನವಾಗಿ, ಭಾರವಾಗಿ ಉರುಳುತ್ತಿದ್ದ ಗಾಲಿಗಳು ವೇಗಕ್ಕೆ ಸೆರೆ ಸಿಕ್ಕಿಬಿದ್ದು ತಪ್ಪಿಸಿಕೊಳ್ಳಲು ತಿಳಿಯದೇ ಓಡುತ್ತಿದ್ದವು. ಆಕಾಶದ ನೀಲಿ, ಮರಗಳ ಹಸಿರು, ಸಹ್ಯಾದ್ರಿಯ ಸೆರಗನ್ನು ಸಿಂಗರಿಸಿದ ಮುತ್ತುಗದ ಹೂವಿನ ಕೆಂಪು, ಅಲ್ಲಲ್ಲಿ ಜುಳು ಜುಳು ಹರಿಯುವ ನೀರು, ಕೆಂಪು ಮಿಶ್ರಿತ ಕರೀ ಬಣ್ಣದ ನೆಲ ಎಲ್ಲವೂ ರೈಲುಡಬ್ಬಿಯ ಕಿಟಕಿಯ ಚೌಕಟ್ಟಿನ ಪರಿಮಿತಿಯೊಳಗೇ ಮೂಡಿ ಮರೆಯಾಗುತ್ತಿದ್ದವು- ಕನಕಮ್ಮನ ಕಣ್ಣ ಮುಂದೆ. ಓಡುತ್ತಿದ್ದ ಟೆಲಿಫೋನ್ ಕಂಬಗಳನ್ನು, ಚಾಪೆ ಸುರುಳಿ ಬಿಚ್ಚಿದಂತೆ ಸರಿಯುತ್ತಿದ್ದ ಹೊಲಗಳನ್ನು ನೋಡಿ ನೋಡಿ ದಣಿದಿದ್ದ ಕಣ್ಣುಗಳು ಹಾಗೆಯೇ ಮುಚ್ಚಿದ್ದವು....

ಕಾಶಣ್ಣ ತುಂಬಾ ಅಂತಃಕರಣದ ಹುಡುಗ. ಮಿದು ಮನಸ್ಸಿನವ. ತನ್ನ ಮೇಲೆ ಬಹಳ ಪ್ರೀತಿ ಅವನಿಗೆ. ತನ್ನ ಎಲ್ಲಾ ಆಸೆಗಳನ್ನು ನೆನಪಿನಲ್ಲಿಟ್ಟಿದ್ದಾನೆ. ತಮ್ಮ ಮನಸ್ಸು ನೊಂದರ ದುಃಖ ಅವನಿಗೆ. ಎಲ್ಲಾ ತನ್ನ ಸದಾಶಿವನ ಹಾಗೆಯೇ ಸ್ವಭಾವ. ಚಿಕ್ಕವಳಿರುವಾಗ ತನ್ನ ನೆರೆಮನೆಯಲ್ಲಿದ್ದ ಸದಾಶಿವನೂ ತನ್ನನ್ನು ಬಹಳ ಹಚ್ಚಿಕೊಂಡಿದ್ದ. ಆಡಿದರೆ ಕೂಡಿಯೇ ಆಡಬೇಕು. ಕೂಡಿಯೇ ಉಣ್ಣಬೇಕು, ತಿನ್ನಬೇಕು, ಜಗಳಾಡಬೇಕು. ಆದರೂ ಆ ಜಗಳ ಬಹಳ ಹೊತ್ತು ಇರುತ್ತಿರಲಿಲ್ಲ. ಮತ್ತೊಂದು ಗಳಿಗೆಗೆ ತನ್ನನ್ನು ಹುಡುಕಿಕೊಂಡು, ಬರುತ್ತಿದ್ದ. ತಮ್ಮ ಮನೆಯ ಒತ್ತಿಲ ಹೂಗಳನ್ನು ತಂಗಿ ಸುಧಾಳಿಗೆ ಕೊಡದೆ ಜಗಳವಾಗಿ ಮೊದಲು ತನಗೆ ತಂದುಕೊಡುತ್ತಿದ್ದ. ತನಗೆ ಹೂವಿನ ಆಸೆ ಹತ್ತಿಸಿದವನೇ ಅವನು. ಒಂದು ದಿನ 'ನಿನಗ ಮಜಾ ತೋರಿಸ್ತೀನಿ ಬಾಯಿಲ್ಲೆ' ಎಂದು ತಮ್ಮ ಮನೆಗೆ

ಕರೆದುಕೊಂಡು ಹೋಗಿ ಹಿತ್ತಿಲ್ಲಲ್ಲಿ ಹೊಸದಾಗಿ ಹಚ್ಚಿದ ಬಳ್ಳಿ ತೋರಿಸಿ ಹೇಳಿದ್ದ. 'ನಿನಗ ಹೂ ಬಾಳಾ ಪ್ರೀತಿ ಅಂತ ಇದನ್ನ ಹಚ್ಚೇನಿ. '...

"ಸ್ವಲ್ಪ ಕಾಲು ಸರಿಸ್ರೀ ಅಮ್ಮಾರs ಅತ್ಲಾಗ. ಸೀಟಿನ ಕೆಳಗಿನ ಗಂಟು ತೊಗೋತಿನಿ'. ಕಣ್ಣು ಬಿಟ್ಟು ಕನಕಮ್ಮ ಕಾಲು ಸರಿಸಿದಳು. ಗಾಡಿ ಕರ್ಕಶವಾಗಿ ಸಿಳ್ಳು ಹಾಕಿತು. ಎದುರಿನ ಸೀಟಿನ ಮೇಲಿನ ಹೆಣ್ಣುಮಗಳು ಎದ್ದು ಸಾಮಾನು ಸಾವರಿಸತೊಡಗಿದಳು.

"ನಿಮ್ಮ ಊರು ಬಂತೇನು?"

"ಹೌದ್ರೀ ಅಮ್ಮಾರ, ಧಾರವಾಡ ಬಂತು. ನಾವಿಲ್ಲೇ ಇಳಿಯಬೇಕು." ಹೊರಗೆ ಹಣಿಕಿದ ಕನಕಮ್ಮನ ಕಣ್ಣಿಗೆ ವಿಶ್ವವಿದ್ಯಾಲಯದ ಕಟ್ಟಡಗಳು ಕಂಡು ಮರೆಯಾದವು. ಗಾಡಿಯ ವೇಗ ಕಡಿಮೆಯಾಗಿತ್ತು.

'ನಿಮ್ಮ ಊರು ಧಾರವಾಡs ಏನು ?"

"ಹೌದ್ರೀ ನಮ್ಮದು ಧಾರವಾಡ. ಅಳ್ನಾವರಕ್ಕ ಮಗಳ್ನ ಕೊಟ್ಟೇನಿ. ನೊಡಲಿಕ್ಕೆ ಹೋಗಿದ್ದೆ. ಆಯಿತ್ವಾರ ಪ್ಯಾಟ್ಯಾಗ ಸ್ವಂತ ಮನಿ. ನಮ್ಮ ಯಜಮಾನರು ಅಂಗಡಿ ಇಟ್ಟಾರ."

"ಹುಂ ಆಯಿತ್ವಾರ ಪ್ಯಾಟೀ ಊರಾಗ ಅದs ಅಲ್ರೆ. ನಾ ಸಣ್ಣಾಕಿದ್ದಾಗ ಈ ಊರಾಗ ಇದ್ವಿವಿ. ನಮ್ಮ ತಂದೀ ನೌಕರಿ ಮಾಡತಿದ್ದರು. ಮಾಳಮಡ್ಡ್ಯಾಗ ನಮ್ಮ ಮನೀ ಇತ್ತು. ಉಳವಿ ಬಸಪ್ಪನ ಜಾತ್ರಿ, ಲಕ್ಷ್ಮೀನಾರಾಯಣನ ಜಾತ್ರಿ ಎಲ್ಲಾ ನೋಡಿದ್ದು ನೆನಪ ಅದs ನನಗ ಇನ್ನೂ. ೨೫-೩೦ ವರ್ಸಾತು ನಾವು ಈ ಊರು ಬಿಟ್ಟು. ಇಲ್ಲಿ ಫೇಡೆ ಬಾಳರುಚಿ ಇರ್ತಾವ. ಸ್ಟೇಷನ್‌ದಾಗ ಸಿಕ್ತಾವೇನ್ರಿ?"

"ಎಷ್ಟು ವರ್ಷದ ಹಿಂದಿನ ಮಾತು ನೆನಪ ಇಟ್ಟೇರಲ್ರೀ? ಛಲೋ ಫೇಡೆ ಅಂದರ ಲೈನ್ ಬಜಾರದಾಗ ಸಿಗ್ತಾವ ನೋಡ್ರಿ. ಅವು ಉತ್ತಮ ಫೇಡೆ. ಅಮ್ಮಾವರಿಗೆ ಫೇಡೆ ತಿನ್ನೂ ಆಸೆ ಆಗೇದ ಕಾಣ್ತದ. ಬರ್ರಿ, ನಮ್ಮಲ್ಲೇ ಹೋಗೋಣ. ನಿಮ್ಮ ಹಳೇ ಧಾರವಾಡಾ, ಅಲ್ಲೀ ಫೆಡೆ ನೋಡೀರಂತ ಹ್ಯಾಂಗದಾವ ಅನ್ನೂದು" ನಗುತ್ತ ಕೇಳಿದಳು ಆ ಅಪರಿಚಿತಳು.

ಇಳಿಯುತ್ತಿದ್ದವಳ ಕೈಗೆ ಟ್ರಂಕು ಕೊಡುತ್ತ ಕನಕಮ್ಮ ನಸುನಕ್ಕು ಹತ್ತುತ್ತಿದ್ದವರಿಗೆ ಜಾಗ ಮಾಡಿಕೊಡಲು ಹಿಂದೆ ಸರಿದು ಬಂದು ತನ್ನ ಸ್ಥಳದಲ್ಲಿ ಕುಳಿತಳು. ಕಿಟಕಿಯಿಂದ ಕಾಣುವ ಹಸಿರು ದಿಬ್ಬಗಳು, ಅತ್ತೀಕೊಳ್ಳದ ಆಳ, ದೂರದಲ್ಲಿ ಮರೆಯಾಗುತ್ತಿದ್ದ ವಿಶ್ವವಿದ್ಯಾಲಯದ ಕಟ್ಟಡಗಳನ್ನೇ ದಿಟ್ಟಿಸುತ್ತಿದ್ದ ಕನಕಮ್ಮನ ಮನಸ್ಸು ಮೂವತ್ತು ವರ್ಷಗಳ ಹಿಂದೆ ಹೋಗಿತ್ತು.

...ಆಗ ಇನ್ನೂ ವಿಶ್ವವಿದ್ಯಾಲಯ ಪ್ರಾರಂಭವಾಗಿರಲಿಲ್ಲ. ಅದಕ್ಕೇ ಅಲ್ಲವೇ ತನ್ನ ಸದಾಶಿವ ಮುಂದೆ ಕಲಿಯುವುದಕ್ಕೆ ಧಾರವಾಡ ಬಿಟ್ಟು ಹೋದದ್ದು. ಬಿ.ಎ. ಪಾಸಾದಾಗ ಪೇಡೆ ತಮ್ಮ ಮನೆಗೆ ತಂದು ಎಲ್ಲರಿಗೂ ಕೊಟ್ಟು ತನಗಾಗಿ ಎರಡು ಪೇಡೆ ಕೈಯಲ್ಲಿ ಹಿಡಿದು ಹಿತ್ತಲಿಗೆ ಬಂದಿದ್ದ. ಅವನೇ ಹಚ್ಚಿದ್ದ ಮಲ್ಲಿಗೆ ಬಳ್ಳಿಯಿಂದ ಮೊಗ್ಗು ಬಿಡಿಸುತ್ತಿದ್ದ ತನ್ನ ಬಾಯಿಗೆ ಪೇಡೆ ತುರುಕಿದ್ದ. ಅವನ ಪೇಡೆಗೆ ಪ್ರತಿಯಾಗಿ ಮಲ್ಲಿಗೆ ಮೊಗ್ಗಿನ ಗೊಂಚಲನ್ನೇ ಅವನ ಕಾಲರಿಗೆ ಸಿಕ್ಕಿಸಿದಳು ತಾನು. ಆದರೆ ಅವನು ಇನ್ನೂ ಮುಂದೆ ಕಲಿಯಲು ಊರು ಬಿಟ್ಟು ಹೋಗ್ತಾನೆ ಎನ್ನುವ ವಿಷಯ ತಿಳಿದು ಬಂದಾಗ ತನ್ನ ಬಾಯಲ್ಲಿದ್ದ ಪೇಡೆ ಕೂಡ ವಿಷವಾಗಿತ್ತು. ಕಣ್ಣಲ್ಲಿ ನೀರು ಒಸರಿತ್ತು. "ಹುಚ್ಚೀ ಇಷ್ಟಕ್ಕೆಲ್ಲಾ ಅಳತಾರೇನs ಬಂಗಾರೀ. ಎರಡs ವರ್ಷಾ ಕಲಿತು, ಶಾಣ್ಯಾ ಆಗಿ ಬಂದು ದೊಡ್ಡ ನೌಕರಿ ಹಿಡಿದು ಆಮ್ಯಾಲೆ .... ನಿನ್ನ ಲಗ್ನಾ ಆಗ್ತೇನಿ" ಎಂದಿದ್ದ ತನ್ನ ಸದಾಶಿವ.

ಆಗ ತಿನಿಸಿದ ಪೇಡೆ ಕೊನೆಯದು. ಅಂದಿನಿಂದ ಇಂದಿನವರೆಗೂ ತಾನು ಪೇಡೆ ತಿಂದೇ ಇಲ್ಲ ಅದಕ್ಕೆ ಕಾರಣ ತನಗೊಬ್ಬಳಿಗೆ ಮಾತ್ರ ಗೊತ್ತು. ಇನ್ಯಾರಿಗೂ ಗೊತ್ತಿಲ್ಲ. ತಾವು ತಿಳಿದುಕೊಳ್ಳೋದು ಒಂದು, ಆದರೆ ನಿಜವಾಗಿ ನಡೆಯುವುದು ಬೇರೇನೋ ಆಗತಿರತದ. ಅದೇ ವರ್ಷ ಸದಾಶಿವನ ತಂದೆ ತೀರಿಕೊಂಡರು. ಮನೆಗೆ ಅವನೇ ಹಿರಿಯ ಮಗ. ಸಂಸಾರದ ಜವಾಬ್ದಾರಿ ಎಲ್ಲಾ ಅವನ ಮೇಲೆಯೇ ಬಿತ್ತು. ನೌಕರಿ ಹುಡುಕಲು ಅತ್ತಿತ್ತ ತಿರುಗುತ್ತಿದ್ದ ಮನೆಯ ದುಃಸ್ಥಿತಿಯಿಂದ, ತನ್ನ ಅಸಹಾಯಕತೆಯಿಂದ ನೊಂದ ಸದಾಶಿವ ತಮ್ಮ ಮನೆಗೆ ಬರುವುದನ್ನೇ ಬಿಟ್ಟಿದ್ದ. ತನ್ನಿಂದ ಸಾಧ್ಯವಾದಷ್ಟು ದೂರ ದೂರ ತಿರುಗುತ್ತಿದ್ದ. ಆಗಲೇ ತನ್ನ ತಂದೆಗೂ ವರ್ಗವಾಗಿ ಊರು ಬಿಟ್ಟು ಹೋಗಬೇಕಾಯಿತು. ಅಂಥಾ ಪರಿಸ್ಥಿತಿಯಲ್ಲಿ ಅವನನ್ನು ಲಗ್ನವಾಗುವ ಆಸೆ ಇದೆ ಎಂದು ಹೇಳುವ ಧೈರ್ಯ ಸಾಲದೆ ತಾಯಿ ಹಸುವಿನಿಂದ ದೂರ ಎಳೆದೊಯ್ಯುವ ಮೂಲಕ ಕರುವಿನ ಹಾಗೆ ತಾನು ಒದ್ದಾಡ್ತಾ ಧಾರವಾಡ ಬಿಟ್ಟು ಹೋಗಿದ್ದಳು. ತಾವು ಹೇಗಿದ್ದರೂ ಇರಲಿ, ಸದಾಶಿವ ಸುಖವಾಗಿದ್ದರೆ ಸಾಕು ಎಂದುಕೊಳ್ಳುತ್ತಿದ್ದಳು.

'ಯಾಕ್ರೀ ಅಜ್ಜೀ ಕಣ್ಣಾಗ ನೀರು ಬಂದಾವ? ಕಸರು ಗಿಸರು ಬಿತ್ತೇನು?"

ಪ್ರಶ್ನೆ ಕೇಳಿದವಳು ಉತ್ತರವನ್ನೂ ತಾನೇ ಹೇಳಿದ್ದಳೆನ್ನುವಂತೆ ಕನಕಮ್ಮ ಹಾಗೇ ಹೂಂಗುಟ್ಟಿ ಕಿಟಕಿಯಿಂದ ಹಿಂದೆ ಸರಿದು ಕುಳಿತು ಸುತ್ತಲೂ ನೋಡಿದಳು. ಡಬ್ಬಿ ಗಿಜಿಗಿಜಿಗುಟ್ಟುತ್ತ ಜೇನುಗೂಡಿನ ಹಾಗಿತ್ತು. ಒತ್ತೊತ್ತಾಗಿ ಒಬ್ಬರ ಹತ್ತಿರ ಒಬ್ಬರು ಕುಳಿತದ್ದಲ್ಲದೆ ಅಲ್ಲಲ್ಲಿ ಹಾಸಿಗೆ, ಟ್ರಂಕು, ಇಟ್ಟು ಅವುಗಳ ಮೇಲೂ ಕುಳಿತಿದ್ದರು. ಗಾಡಿಯ ಶಬ್ದವನ್ನೂ ಮೀರಿ ಹೆಣ್ಣುಮಕ್ಕಳ ಸಂಭಾಷಣೆ, ದೊಡ್ಡ ಮಕ್ಕಳ ಹಾಡೂ, ಸಣ್ಣವರ ಜಗಳಾಟ ಎಲ್ಲಾ ಸೇರಿ ಸಂತೆ ಗದ್ದಲದಂತಿತ್ತು. ಇಷ್ಟು ಜನರ ನಡುವೆಯೂ ತಾನು ಮಾತ್ರ ಏಕಾಕಿ ಎನಿಸಿ ಕನಕಮ್ಮನ ಗಂಟಲು ತುಂಬಿಬಂದಿತ್ತು. ಜೊತೆಗೇ ಬಿಕ್ಕೂ ಸುರುವಾಯಿತು. ತಿರುಗುಣಿ ತಂಬಿಗೆಯ ನೀರು ಹಣಿಕಿದಳು. ಅರ್ಧಕ್ಕೆ ಒಳಗೇ ಇತ್ತು ನೀರು. ಗಾಡಿ ಕುಲುಕಾಟದಲ್ಲಿ ಹೆಚ್ಚು ನೀರು ಚೆಲ್ಲಿ ಹೋಗಿತ್ತು. ಉಳಿದ ನೀರು ವಿಜಾಪುರ ಮುಟ್ಟುವವರೆಗೂ ಆಗಬೇಕಲ್ಲ. ಯಾವಾಗಲೂ ಮಡಿ, ಸಂಪ್ರದಾಯ ಉಳಿಸಿಕೊಂಡು ಬಂದವಳು ತಾನು. ತಂಬಿಗೆ ಬಾಯಿ ಮುಚ್ಚಿ ಬದಿಗೆ ಸರಿಸಿದಳು. ಬಿಕ್ಕುವಿಕೆಯ ಜೊತೆಗೇ ಎದೆ ನೋಯತೊಡಗಿತು. ಎರಡೂ ಕಾಲು ಸೀಟಿನ ಮೇಲಿಟ್ಟುಕೊಂಡು ಮಂಡಿಗೆ ಹಣೆ ಹಚ್ಚಿ ಮುದ್ದೆಯಾಗಿ ಕುಳಿತಳು. ಎದೆ ಧಡಧಡ ಎನ್ನುತ್ತಿತ್ತು. ತಲೆ ಭಾರವಾಗಿತ್ತು. ಇತ್ತಿತ್ತಲಾಗಿ ತಲೆಭಾರ ಹೆಚ್ಚಾಗುತ್ತಿದೆ ತನಗೆ. ರಾತ್ರಿ ನಿದ್ದೆಯೂ ಬರುವುದಿಲ್ಲ, ಕಾಶಣ್ಣನಿಗೆ ಗೊತ್ತಾದರೆ ಡಾಕ್ಟರರು, ಇಂಜೆಕ್ಷನ್ನು ಎನ್ನುತ್ತಾನೆಂದು ಹೇಳದೇ ಸುಮ್ಮನಿದ್ದಳು.

ಗಾಡಿ ಮತ್ತೊಮ್ಮೆ ಸಿಳ್ಳು ಹಾಕಿದಾಗ ಹುಬ್ಬಳ್ಳಿ ಬಂದಿತ್ತು. ಡಬ್ಬಿಯಿಂದ ಇಳಿದು ನಿಧಾನವಾಗಿ ಹೋಗುತ್ತಿರುವಾಗಲೇ ಯಾರ್‍ಯಾರದೋ ಟ್ರಂಕು ಹಾಸಿಗೆ ಹೊತ್ತ ಕೂಲಿಯವನೊಬ್ಬ " ನಡೀರಿ ಅಮ್ಮಾರ ಸರೀರಿ ಲಗುನ. ಗಾಡಿ ಬಿಡತೈತಿ ವಿಜಾಪುರಕ್ಕ ಈಗ" ಎನ್ನು ದಡದಡ ಓಡಿದಾಗ ತಾನೂ ಅವನ ಬೆನ್ನುಹತ್ತಿ ನಡೆದುಬಂದು ಹೆಂಗಸರ ಡಬ್ಬಿಯನ್ನೇರಿ ಉಸ್ಸೆಂದು ಕುಳಿತಳು. ಗಾಡಿ ಬಿಟ್ಟಿತು. ತನ್ನ ಎದುರಿಗೇ ಇಬ್ಬರು ಚಿಕ್ಕಮಕ್ಕಳೊಡನೆ ಕುಳಿತ ತರುಣಿ ಎದ್ದು ಬಂದು ಕಿಟಕಿಯ ಹತ್ತಿರ ನಿಂತ ಹುಡುಗನಿಗೆ ಕೈ ಮಾಡಿ 'ಲಗೂನ ಬರಿತೀನಿ ಪ್ರಕಾಶ. ಮನೀಕಡೆ ಜ್ವಾಕಿ. ಎರಡೂ ಹೊತ್ತು ಹಾಲು ಕುಲಕರ್ಣೀರ ಮನ್ಯಾಗ ತೊಗೊಳ್ರಿ. ರೊಕ್ಕ ಕೇಳಿದರ ಬಂಗಾರಕ್ಕ ಬಂದ ಮ್ಯಾಲೆ ತೊಡತಾಳ ಅಂತ ಹೇಳ್ರಿ" ಎಂದಳು. ಅವಳ ಕೊನೆಯ ಮಾತು ಕಿವಿಗೆ ಬಿದ್ದು ಕನಕಮ್ಮನ ಲಕ್ಷ್ಯ ಸೆಳೆಯಿತು.

'ತಂಗೀ ಯಾವೂರು?"

"ಬಾಗಲಕೋಟೆಗೆ ಹೋಗ್ಬೇಕು"

"ಒಬ್ಬಾಕೀನ?"

"ಹೂಂ. ತಂಗೀ ಮನೀಗೆ ಹೋಗಿ ಬರತೀನಿ."

"ಎಷ್ಟ ಮಂದಿ ಅಕ್ಕ ತಂಗೇರು?"

"ಇಬ್ಬರs. ಮೂರು ಮಂದಿ ತಮ್ಮಂದಿರು. ಈಗ ಬಂದಾವ ತಮ್ಮ."

'ನಿನ್ನ ಹೆಸರು ಬಂಗಾರವ್ವ ಏನು ತಂಗೀ?"

"ಅಲ್ರೀ ಅಮ್ಮಾರ, ನನ್ನ ಹೆಸರು ಸುವರ್ಣಾ. ಆದರ ತಮ್ಮ ತಂದೀ ಪ್ರೀತಿಲೆ ಬಂಗಾರಿ ಬಂಗಾರಿ ಅಂತ ಕರೀತಿದ್ದರು." ಕೂಸಿಗೆ ಹಾಲೂಡಿಸುತ್ತ ಸುವರ್ಣ ನಕ್ಕಳು.

ತನ್ನ ಎದೆಯಲ್ಲಿ ಮತ್ತೊಮ್ಮೆ ಛಳಕು ಹೊಡೆದಂತಾಯ್ತು.

"ನೀವು ಎಲ್ಲಿಗಿ ಹೋಗಬೇಕ್ರೀ?"

"ನಾನು ವಿಜಾಪುರಕ್ಕ ಮಗನ ಮನೀಗಿ ಹೊರಟೇನಿ."

"ಹಂಗಾರ ಛಲೋ ಆತ ಬಿಡ್ರಿ. ನನಗೂ ಜೋಡು ಆತು. ಆ ದಾರ್‍ಯಾಗ ಇಳಿತೇನಿ, ನೀವು ಮುಂದ ಹೋಗತೀರಿ."

'ಹೌದು' ಎನ್ನುವಂತೆ ಗೋಣು ಹಾಕಿ ಕಣ್ಣು ಮುಚ್ಚಿದಳು ತಾನು ಎದೆ ನೀವಿಕೊಳ್ಳುತ್ತ. ಆವಾಗಲೂ ತಾನು ಹೀಗೆಯೇ ಸುಮ್ಮನೇ ಗೋಣು ಹಾಕಿ ಒಪ್ಪಿಗೆ ಕೊಟ್ಟಿದ್ದಳು. ತಂದೆ ವರ ಹುಡುಕಿ ತನ್ನ ಮದುವಿ ನಿಶ್ಚಯಿಸಿದಾಗ ಕತ್ತು ಬಗ್ಗಿಸಿ ಕರಿಮಣಿ ಕಟ್ಟಿಸಿಕೊಂಡಿದ್ದಳು. ತಲೆ ತಗ್ಗಿಸಿ ಹೊಸ್ತಿಲು ದಾಟಿ ಅತ್ತೆ ಮನೆಗೆ ಬಂದಿದ್ದಳು, ವಿಧೇಯ ಹೆಂಡತಿಯಾಗಿ, ಚಿಕ್ಕ ಮಗನ ತಾಯಿಯಾಗಿ ತಾನು ಜಯದೇವನೊಡನೆ ಸಂಸಾರ ಮಾಡುತ್ತಿರುವಾಗಲೇ ಸದಾಶಿವನೂ ಆಕಸ್ಮಾತ್ ಎನ್ನುವಂತೆ ಬೆಳಗಾಂವಿಗೆ ವರ್ಗವಾಗಿ ಬಂದು ತಮ್ಮ ಮನೆಯ ಹತ್ತಿರವೇ ಮನೆ ಹಿಡಿದಿದ್ದ. ತನ್ನ ಗಂಡನ ಪರಿಚಯವನ್ನೂ ಮಾಡಿಕೊಂಡಿದ್ದ. ಒಂದು ದಿನ ಅವನನ್ನೂ ಅವನ ಗರ್ಭಿಣಿ ಹೆಂಡತಿಯನ್ನೂ ತಮ್ಮ ಮನೆಗೆ ಚಹಕ್ಕೆ ಕರೆದಾಗ ಗಂಡ, ತನಗೆ ಅವನಿಗೆ ಗುರುತುಮಾಡಿಕೊಟ್ಟಿದ್ದರು. ಅಪರಿಚಿತರಂತೆ ಅವನು ಸುಮ್ಮನೆ ಕೈ ಮುಗಿದಾಗ ತಾನು ಅವನ ಕಣ್ಣುಗಳನ್ನೇ ದಿಟ್ಟಿಸಿದ್ದಳು. ಒಲವಿನ ಮಹಾಪೂರವೆ ಇತ್ತು ಅವುಗಳಲ್ಲಿ.

ಅವನ ಹೆಂಡತಿಗೆ ಹೆರಿಗೆಯಾಗಿ ಬಂದ ಮೇಲೆ ಅವಳ ಆರೋಗ್ಯ ಸರಿಯಾಗಿಲ್ಲವೆಂದು ತಾನೊಮ್ಮೆ ನೋಡಲು ಹೋಗಿದ್ದಳು ಅವಳನ್ನು. ತಿರುಗಿ ಬರುವಾಗ ಹೊರಕೋಣೆಯಲ್ಲಿದ್ದ ಸದಾಶಿವ ಮೆಲುದನಿಯಲ್ಲಿ ಪಿಸುಗುಟ್ಟಿದ್ದ 'ನನ್ನ ಮಗಳಿಗೆ ಸುವರ್ಣಾ ಅಂತ ಹೆಸರಿಟ್ಟು ಬಂಗಾರೀ ಅಂತ ಯಾಕ ಕರೀತೇನಿ ಅನ್ನೋದು ನಿನಗ ಗೊತ್ತಿರಬೇಕಲ್ಲ ಕನಕ" ಎಂದು. ಯಾಕೆಂದು ತನಗೆ ಗೊತ್ತಿರಲಿಲ್ಲವೇ. ಚಿಕ್ಕಂದಿನಲ್ಲಿ ಬಂಗಾರಿ ಎಂದೇ ಅವ ತನ್ನನ್ನು ಕರೆಯುತ್ತಿದ್ದನು. ಅವನ ಮಾತಿಗೆ ಉತ್ತರ ಕೊಡದೇ ಮನೆಗೆ ಬರುವಷ್ಟರಲ್ಲಿ ಕಾಲು ಥರ ಥರ ಎನ್ನುತ್ತಿದ್ದವು. ಪೂರ್ತಿ ಬೆವತು ಬಿಟ್ಟಿದ್ದಳು. ಸಂಜೆಯಾಗಿತ್ತು. ದೇವರಿಗೆ ದೀಪ ಹಚ್ಚಿ ನಮಸ್ಕಾರ ಮಾಡಿ ಅವರಿಗೂ ಬಗ್ಗಿ ನಮಸ್ಕಾರ ಮಾಡಿದ್ದಳು. ಯಾಕೆ ಎಂದು ಅವನು ಕೇಳುವಷ್ಟರಲ್ಲಿ ದೇವರ ಕೋಣೆಗೆ ಹೋಗಿ 'ದೇವರೇ ಸದಾಶಿವನನ್ನು ಸುಖವಾಗಿಡೆ'ಂದು ಬೇಡಿಕೊಂಡಿದ್ದಳು.

'ಅಮ್ಮಾರs' ಕಣ್ಣು ಮುಚ್ಚಿ ಕುಳಿತಿದ್ದ ತನ್ನನ್ನು ಎಚ್ಚರಿಸಿದಳು ಸುವರ್ಣಾ. "ಅಮ್ಮಾರ ನಾನು ಪಾಯಖಾನಿಗೆ ಹೋಗಿ ಬರತೇನಿ. ದೊಡ್ಡಾಂವ ಸೀಟಿನ ಮ್ಯಾಲ ಮಲಕೊಂಡಾನ ಈ ಕಿರಣನ್ನ ಸ್ವಲ್ಪ ನೋಡಿಕೋತೀರಾ, ಲಗೂನ

ಬರತೇನಿ?" ಅಂದ ಸುವರ್ಣಾನತ್ತ ಕೈ ಚಾಚಿ ಮಗೂನ ತೆಗೆದುಕೊಂಡು ಉಡಿಯಲ್ಲಿ ಕೂಡಿಸಿಕೊಡು "ಹೋಗಿಬಾರವ್ವ, ನಿಧಾನವಾಗಿ ಹೋಗಿ ಬಾ. ನಾ ನೋಡ್ತೀನಿ ಈ ತುಂಟನ್ನ' ಎಂದು ಜೊಲ್ಲು ಒರೆಸಿ ಪುಟ್ಟ ಕೈಗಳಿಂದ ತನ್ನ ಕೆನ್ನೆ ತಟ್ಟಿಕೊಂಡಳು ಕನಕಮ್ಮ. ಅವನು ಜಿಗಿದು ಜಿಗಿದು ತನ್ನ ಎದೆಗೆ ಒದ್ದಾಗ ಮತ್ತೆ ಛಳುಕು ಸುರುವಾಗಿತ್ತು. ಹಾಗೆಯೇ ಎದೆ ನೀವಿಕೊಳ್ಳುತ್ತ ಕಣ್ಣು ಮುಚ್ಚಿದ್ದಳು.....

ದಿನ ಕಳೆದು ತಿಂಗಳು ವರ್ಷಗಳಾಗುತ್ತಲೇ ಇದ್ದವು. ತನ್ನ ಮಕ್ಕಳಿಬ್ಬರೂ ಓದು ಮುಗಿಸಿ ನೌಕರಿ ಹಿಡಿದಿದ್ದರು. ಸದಾಶಿವ ವರ್ಗವಾಗಿ ಬೇರೆ ಊರಿಗೆ ಹೋಗಿ ವರ್ಷ ಕಳೆದಿದ್ದವು. ಒಂದು ದಿನ ತನ್ನ ಗಂಡ ಪೇಪರು ಓದುತ್ತ ಕುಳಿತವರು ಎದ್ದು ಛಂಗನೆ ಅಡಿಗೆ ಮನೆಗೆ ಓಡಿಬಂದಿದ್ದರು. "ಛೇ ಛೇ ಹೀಗಾಗಬಾರದಾಗಿತ್ತು. ಎಂಥಾ ಅನಾಹುತ ಆಯ್ತು."

"ಏನಾಯ್ತು?"

"ಅದs ಆ ಸದಾಶಿವರಾಯರು ಇದ್ದಾರಲ್ಲಾ ಇಲ್ಲೆ...."

"ಏನಾಯ್ತೀ? ಅವರಿಗೆ" ತನ್ನ ಕೈಯಲ್ಲಿದ್ದ ಪಾತ್ರೆ ಕೆಳಗೆ ಬಿದ್ದಿತ್ತು ತನ್ನ ಗಾಬರಿಯಲ್ಲಿ.

"ಅವರಿಗೆ ಏನೂ ಆಗಿಲ್ಲ. ಅಷ್ಯಾಕ ಗಾಬರಿ ಆಗ್ತಿ. ಅವರು ಲಂಚ ತಗೊಳ್ಳೂ ಮುಂದ ಸಿಕ್ಕರಂತ. ನೌಕರಿಯಿಂದ ತೆಗೆದು ಕೇಸು ಹಾಕ್ಯಾರಂತ. ಜಿ. ಸದಾಶಿವರಾಯರು ಅಂದರ ಅವರs ಇರಬೇಕು. ಪಾಪ ಹೆಂಡತಿ ಮಕ್ಕಳ ಗತಿ ಏನು?" ಎನ್ನುತ್ತ ಅವರು ಮತ್ತೆ ಹೊರ ಕೋಣೆಗೆ ಹೋಗಿದ್ದರು. ಆದರೆ ಆಗ ಅಡಿಗೆ ಮನೆಯಲ್ಲಿದ್ದ ತನ್ನ ಗತಿ ದೇವರೇ ಗತಿ?" ಎನ್ನುತ್ತ ಅವರು ಮತ್ತೆ ಹೊರಕೋಣೆಗೆ ಹೋಗಿದ್ದರು. ಆದರೆ ಆಗ ಅಡಿಗೆ ಮನೆಯಲ್ಲಿದ್ದ ತನ್ನ ಗತಿ ದೇವರೇ ಗತಿ. ಅಳು ಅಳುತ್ತಲೇ ಎಲ್ಲ ಕೆಲಸ ಮಾಡುತ್ತಿದ್ದಳು. ಹರಿಯುವ ಕಣ್ಣೀರಿಗೆ ಉಳ್ಳಾಗಡ್ಡಿಯ ನೆವವನ್ನೊಮ್ಮೆ ಹೇಳಿದರೆ, ಹಸಿ ಕಟ್ಟಿಗೆಯ ನೆವವನ್ನು ಮತ್ತೊಮ್ಮೆ ಹೇಳಿದ್ದಳು. ದೇವರ ಪೂಜೆ ಮಾಡುವಾಗಲೂ ದೇವರೇ ಇಂಥ ದುರ್ಬುದ್ಧಿ ಸದಾಶಿವನಿಗೆ ಯಾಕ ಕೊಟ್ಟೆ?" ಎಂದು ಅತ್ತು ಬಿಟ್ಟಿದ್ದಳು. ತನ್ನ ಮುಖಕ್ಕೆ ಏನೋ ಕಪ್ಪು ಹತ್ತಿದಂತೆ ಕೆಲವು ದಿನ ಮುಖ ಒರೆಸಿ ಒರೆಸಿ ತಿಕ್ಕಿ ತಿಕ್ಕಿ ಕೆಂಪಗೆ ಮಾಡಿಕೊಂಡಿದ್ದಳು. ಮುಖ ಮೇಲೆ ಎತ್ತದ ಹಾಗಾಗಿ ಎಷ್ಟೋ ದಿನ ಹೊರಗೆ ಹೋಗಿರಲಿಲ್ಲ. ಬೀದಿಯಲ್ಲಿ ಅಡ್ಡಾಡಿದರೆ ಜನ ತನ್ನನ್ನೇ ನೋಡುತ್ತಾರೇನೋ ಎನ್ನಿಸುತ್ತಿತ್ತು. ದೇವರೇ ಎಂಥಾ ಹೊತ್ತು ತಂದೆಯಪ್ಪಾ ಎಂದು ಒಳಗೇ ಕೊರಗುತ್ತಿದ್ದಳು ತಾನು. ಗಂಡುಮಕ್ಕಳಿಬ್ಬರಿಗೂ ಹೆಣ್ಣು ಕೊಡುತ್ತಾರೆಯೇ ಎಂದು. ಹಾಗೆಂದು ಒಮ್ಮೆ ಗಂಡನೆದುರು ಅಂದು ಅವರಿಂದ ಚೆನ್ನಾಗಿ ಬೈಯ್ಗಳು ತಿಂದಿದ್ದಳು. ಏನಾಗಿದೆ ನಮ್ಮ ಮನೆತನಕ್ಕೆ, ನನ್ನ ಮಕ್ಕಳಿಗೆ. ಯಾಕೆ ದೊಡ್ಡವರು ಹೆಣ್ಣು ಕೊಡೋದಿಲ್ಲ? ಇಂಥಾ ಮನೆತನ, ಇಂಥಾ ವರಗಳು ಸಿಗಬೇಕಾದರೆ ಪುಣ್ಯ ಮಾಡಿರಬೇಕು ಎಂದು ಅವರು ಕೂಗಾಡಿದ್ದರು. ಆಗ ಸ್ವಲ್ಪ ಎಚ್ಚರವಾಗಿತ್ತು ತನಗೆ.

ಸುವರ್ಣಾ ಬಂದು ಮಗುವನ್ನೆತ್ತಿಕೊಂಡಳು. ಅವಳು ಕಟ್ಟಿ ತಂದಿದ್ದ ಬುತ್ತಿ ಬಿಚ್ಚಿ ಊಟ ಮಾಡುವಾಗ ಬಹಳ ಬಲವಂತ ಮಾಡಿದಳು ತಾನೂ ಉಣ್ಣಬೇಕೆಂದು. ಆದರೆ ಎದೆ ಒಳಗೇ ಸಣ್ಣಗೆ ನೋಯುವಾಗ ತನಗೆ ಊಟವೂ ಬೇಕಿರಲಿಲ್ಲ. ತಾನು ತಂದ ಚಪಾತಿಯನ್ನೂ ತಿನ್ನದೆ ಎರಡು ಗುಟುಕು ನೀರು ಕುಡಿದು ಅಡ್ಡಾಗಿದ್ದಳು. ಸುವರ್ಣೆಯ ಮಕ್ಕಳಿಬ್ಬರೂ ಮಲಗಿದ್ದರು. ಅದುವರೆಗೆ ಗಂಟಲಲ್ಲಿ ಒತ್ತಿಕೊಂಡಿದ್ದ ಪ್ರಶ್ನೆ ಇನ್ನೂ ಒಳಕ್ಕೆ ಉಳಿಯದೇ ಹೊರಕ್ಕೆ ಬರಲು ಚಡಪಡಿಸುತ್ತಿತ್ತು. ಏನಾದರೂ ಮಾತು ಸುರು ಮಾಡಬೇಕೆಂದು ಸುಮ್ಮನೆ ಕೇಳಿದಳು ಕನಕಮ್ಮ.

"ನಿನ್ನ ದೊಡ್ಡ ಮಗನ ಹೆಸರೇನು ಇಟ್ಟೀ ತಂಗೀ."

"ಸದಾಶಿವ ಅಂತ, ನಮ್ಮ ತಂದೀ ಹೆಸರದು."

"ಅಂ, ನೀ ಅದs ಸುವರ್ಣಾ ಏನು ಹಂಗಾದರ. ಅದಕ್ಕs ನಿನ್ನ ತಂದಿ ಬಂಗಾರಿ ಬಂಗಾರಿ ಅಂತಾರ, ಎಲ್ಲದಾರ ಈಗ ಅವರು ಯಾವೂರಾಗ?"

"ಅವರು ತೀರಿಕೊಂಡು ಹತ್ತು ವರ್ಷ ಆತ್ರೀ." ಸುವರ್ಣೆಯ ಕಣ್ಣು ತೇವಗೊಂಡಿದ್ದವು. ಬೆಚ್ಚಿಬಿದ್ದಿದ್ದಳು ತಾನು. ಕಣ್ಣಲ್ಲಿ ನೀರು ಬಂದಿರಲಿಲ್ಲ. ಎದೆ ಮಾತ್ರ ಧಡ ಧಡ ಎನ್ನುತ್ತಿತ್ತು.

"ಪಾಪ ನಿಮಗೆಲ್ಲಾ ಭಾಳಾ ತ್ರಾಸಾಗಿರಬೇಕು. ಲಂಚಾ ತಿಂದು ನೌಕರಿ ಕಳಕೊಂಡಿದ್ರು ಅಂತ ಕೇಳಿದ್ದೆ...." ನಾಲಿಗೆ ತಡವರಿಸಿತ್ತು.

"ಎಲ್ಲಿದ್ರೀ ಯಾರ ಹೇಳಿದ್ರು ನಿಮಗ ? ಲಂಚಾನೂ ಇಲ್ಲ ಏನೂ ಇಲ್ಲ. ನನ್ನ ತಂದೀ ದೇವರಂಥವರು. ನೀವು ಯಾರ ಸುದ್ದೀ ಹೇಳತೀರೊ ಗೊತ್ತಿಲ್ಲ. ನಮ್ಮ ತಂದೀ ಊರು ಧಾರವಾಡ. ಜಿ. ಸದಾಶಿವರಾಯರು ಅವರ ಹೆಸರು. ಅವರಿಗೆ ಕೆಮ್ಮು, ದಮ್ಮು ಇತ್ತು. ಅಕಸ್ಮಾತ್ ತೀರಿಕೊಂಡರು. ಡಾಕ್ಟರರು ಬ್ರಾಂಕೈಟಿಸ್ ಅಂದರು. ನಂದೊಬ್ಬಾಕೀದs ಲಗ್ನ ಆಗಿತ್ತು. ದೊಡ್ಡ ತಮ್ಮ ಕಾಲೇಜಿನ್ಯಾಗ ಕಡೀ ವರ್ಷಾ ಕಲೀತಿದ್ದಾ. ಎಲ್ಲಾ ಭಾರ ನನ್ನ ಮ್ಯಾಲೇ ಬಿತ್ತು. ಸಾಯೂ ಮುಂದೆ ಬಂಗಾರಿ ಬಂಗಾರೀ ಅನಕೋತಾ ಜೀವಾ ಬಿಟ್ಟರು." ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಸುವರ್ಣಾ. ಅವಳ ಬೆನ್ನ ಮೇಲೆ ಕೈ ಆಡಿಸುತ್ತಾ ಕುಳಿತಿದ್ದ ಕನಕಮ್ಮನ ಕಣ್ಣೀರೂ ಒಂದೇ ಸಮನೇ ಹರಿಯುತ್ತಿದ್ದವು. ಸಮಾಧಾನಗೊಂಡ ಸುವರ್ಣಾ ಬಾಗಲಕೋಟೆಯಲ್ಲಿ ಇಳಿಯುವ ಸಿದ್ಧತೆ ನಡೆಸಿದ್ದಳು. ದಂಗು ಬಡಿದಂತೆ ಕುಳಿತ ಕನಕಮ್ಮ ಎಚ್ಚರಾಗಿ ಅವಳು ಬೇಡ ಬೇಡ ಎನ್ನುತ್ತಿದ್ದರೂ ಕಿರಣನ ಕೈಯಲ್ಲಿ ತನ್ನ ಕೈಲಿದ್ದ ಹತ್ತು ರೂಪಾಯಿನ ನೋಟನ್ನಿಟ್ಟು ಸಿಂಬಳ ಕಳೆದೊಗೆದು ಸೆರಗಿನಿಂದ ಮುಖ ಒರೆಸಿಕೊಂಡಳು. ಸುವರ್ಣೆ ಇಳಿದು, 'ಹೋಗಿ ಬರ್ತೇನ್ರಿ ಅಮ್ಮಾರs ಅಯ್ಯ ನಿಮ್ಮ ಹಣೇ ಮ್ಯಾಲಿನ ಕುಂಕುಮ ಅಳಿಸಿ ಹೋಗೇದ...." ಎನ್ನುತ್ತಿದ್ದಂತೆ ಗಾಡಿ ಬಿಟ್ಟಿತು.

ಕನಕಮ್ಮ ಗಾಡಿಯಲ್ಲಿ ಕುಳಿತ ಉಳಿದವರತ್ತ ನೋಡದೇ, ಮಾತಾಡಿಸದೇ ಮುಖ ಕಾಣಿಸದ ಹಾಗೆ ಉಟ್ಟ ಸೀರೆಯನ್ನೇ ಕಾಲಿಗೆ, ತಲೆಗೆ ಮುಸುಕುಬೀರಿ ಮಲಗಿಬಿಟ್ಟಳು. ಎಷ್ಟೋ ಹತ್ತಿದರು, ಇಳಿದರು. ವಯಸ್ಸಾದವಳು ಸುಮ್ಮನೆ ಯಾಕೆ ತೊಂದರೆಕೊಡಬೇಕು ಎಂದು ಎಬ್ಬಿಸಲೇ ಇಲ್ಲ. ವಿಜಾಪುರದಲ್ಲಿ ಗಾಡಿ ನಿಂತಾಗ ಎಲ್ಲ ಡಬ್ಬಿಗಳನ್ನು ಹುಡುಕುತ್ತ ಬಂದ ಅಶೋಕ ಮಲಗಿದ್ದ ಅವಳನ್ನು ಎಬ್ಬಿಸಲು ಬಂದು ಚೀರಿದ 'ಅವ್ವಾ'!

***

■■

# ಮರು ವಿಚಾರ

"ಅಜ್ಜೀಽ ಅತ್ತ್ಯಾ ಬಂದ್ಲು, ಅನೂ ಬಂದ್ಲು" ಎಂದು ಕೂಗುತ್ತ ಕುಣಿಯುತ್ತಿದ್ದ ಮೊಮ್ಮಗನ ಧ್ವನಿ ಕೇಳಿದೊಡನೆಯೆ ಟಾಂಗಾದ ಸಪ್ಪಳದ ಕಡೆಗೇ ಕಿವಿಯಿಟ್ಟು ಅಕ್ಕಿ ಹಸನು ಮಾಡುತ್ತಿದ್ದ ಗಂಗಮ್ಮ ಧಾವಿಸಿ ಬಾಗಿಲಿಗೆ ಬಂದು,

"ಬಿದ್ದೀಯೋ ವಿನಯಾ, ಕುಣೇಬ್ಯಾಡಾ" ಎನ್ನುತ್ತ ಮುಂದೆ ಬಂದ ಮೊಮ್ಮಗಳನ್ನೆತ್ತಿಕೊಂಡು ಸಾಮಾನು ಹೊತ್ತು ನಿಂತ ಸಾಬಿಗೆ ಒಳಗೆ ಹೋಗಲು ಹೇಳಿದಳು. ಪ್ಲಾಸ್ಟಿಕ್ ಬುಟ್ಟಿಯನ್ನು ಹಿಡಿದು ಮೆಟ್ಟಿಲೇರುತ್ತಿದ್ದ ಕಣ್ಣು ಕಿರಿದಾಗಿಸಿ ದಿಟ್ಟಿಸಿದಳು. ದೃಷ್ಟಿಯಲ್ಲಿ ಅಕ್ಕರೆ ಸೂಸಿ ಹರಿಯುತ್ತಿತ್ತು.

"ಯಾಕೋ ಎಷ್ಟ ಸೊರಗಿಯಲ್ಲಽ ಮತ್ತೇನರೆ .....?" ಬಾಡಿಗೆ ಕೊಟ್ಟು ಒಳಗೆ ಬರುತ್ತಿದ್ದ ಮಗ ಮಾತನ್ನು ತುಂಡು ಮಾಡಿದ. "ಮಾತು ಕತೀಗೆ ಖೋಲೀನ ಅದ, ಒಳಗ ನಡೀರಿನ್ನ ಹುಶ್ಶ್ಯ ! ಏನ ಬಿಸಲಪಾ, ಮೀರಾ, ಒಂದಿಷ್ಟು ಪಾನಕಾ ಮಾಡು."

ಆರೇಳು ತಿಂಗಳಾದರೂ ಮಗಳಿಂದ ಒಂದು ಪತ್ರ ಬರದಿದ್ದುರಿಂದ ಗಂಗಮ್ಮನ ಜೀವ ಚುಟು ಚುಟು ಎನ್ನುತ್ತಿತ್ತು. ಮೊದಲು ತವರಿಗೆ ಬಂದಾಗಲೆಲ್ಲ ಗಂಡನ ಬಗ್ಗೆ ಒಂದಿಲ್ಲೊಂದು ತಕರಾರು ಹೇಳುತ್ತಿದ್ದಳು ಸರೋಜ. ಕೊನೆಗೊಮ್ಮೆ ತನ್ನ ಆರೋಗ್ಯ ಚೆನ್ನಾಗಿಲ್ಲವೆಂದು ಪತ್ರ ಬಂದಿತು ಸರೋಜಳಿಂದ. ಆಗ ಮಾತ್ರ ಒಂದು ತಿಂಗಳ ಮಟ್ಟಿಗಾದರೂ ಕಳುಹಿಸಿ ಎಂದು ಅಳಿಯನಿಗೆ ಹೇಳಿ ತಂಗಿಯನ್ನು ಕರೆತರಲು ಮಗನನ್ನು ಬೇಡಿದ್ದಳು ಗಂಗಮ್ಮ. ಈಗ ಮಗಳ ಕಂಡೊಡನೆ ಎಲ್ಲ ಚಿಂತೆ ಹಾರಿಹೋದವು. ಸೊಸೆ ತಂದು ಕೊಟ್ಟ ಪಾನಕ ಕುಡಿದು ತಾಯಿ ಮಗಳಿಬ್ಬರೂ ಕೋಣೆಯಲ್ಲಿ ಮಾತಿಗೆ ಕುಳಿತರು. ಅನುರಾಧಾ, ವಿನಯ ಆಗಲೇ ಆಡಲು ಅಂಗಳಕ್ಕೆ ಇಳಿದಿದ್ದರು. ಹೆಂಡತಿಯೊಡನೆ ಮಾತನಾಡುತ್ತ ಈಶಣ್ಣ ತಮ್ಮ ಕೋಣೆಯಲ್ಲಿ ಮಲಗಿದ.

ಸರೋಜ ಬಂದು ಆಗಲೇ ಹದಿನೈದು ದಿನ ಕಳೆದಿದ್ದವು. ತಾಯಿ ಶಂಕಿಸಿದಂತೆ ಅಲ್ಲಿ "ಮತ್ತೇನೂ" ಇರಲಿಲ್ಲ. ತಾಯಿ-ಅತ್ತಿಗೆಯವರ ಆರೈಕೆಯಿಂದ, ಕೆಲಸ ಮಾಡಿದರೂ ಜವಾಬ್ದಾರಿಯಿಲ್ಲದ್ದರಿಂದ, ವಿನಯ- ಅನುರೊಡನೆ ತಾನೂ ಚಿಕ್ಕ ಮಗುವಿನಂತೆ ಹಾಯಾಗಿ ಕಳೆದದ್ದರಿಂದ, ಸರೋಜ ಮೈ ತುಂಬಿಕೊಂಡು ಚೆನ್ನಾಗಿದ್ದಳು. ಇದುವರೆಗೆ ತಾಯಿ ಮಗಳಲ್ಲಿ ನಡೆದ ಮಾತುಕತೆಗಳಿಂದ, ಮಗಳ ಕಾಯಿಲೆ ಏನು ಎನ್ನುವುದರ ಅರಿವು ಗಂಗಮ್ಮನಿಗೆ ಆಗತೊಡಗಿತ್ತು. ಅದು ಮೈಗಿಂತ ಮನಸ್ಸಿನ ಕಾಯಿಲೆ, ಇದಕ್ಕೆ ಔಷಧಿಯನ್ನು ಮಗಳೇನೋ ಹುಡುಕಿದ್ದಳು. ಆದರೆ ತಾಯಿಯ ಮುಂದೆ ಇನ್ನೂ ಅದನ್ನು ಸ್ಪಷ್ಟವಾಗಿ ಉಸಿರಿರಲಿಲ್ಲ.

ಒಂದು ದಿನ ವಿನಯನ ಅಂಗಿಗೆ ಗುಂಡಿ ಹಚ್ಚುತ್ತಿದ್ದಳು ಸರೋಜ. ಗಂಗಮ್ಮ ಅಲ್ಲಿಯೇ ಕುಳಿತು ಹಪ್ಪಳ ಲಟ್ಟಿಸುತ್ತಿದ್ದಳು. ಮೀರಾ ಹಪ್ಪಳ ಒಯ್ದು ಹೊರಗೆ ಒಣಹಾಕುತ್ತ ಹೊರಗೆ ಒಳಗೆ ಓಡಾಡುತ್ತಿದ್ದಳು. ಅನೂ, ವಿನಯ ಇಬ್ಬರೂ ಅಂಗಳದಲ್ಲಿ ಆಡಿಕೊಳ್ಳುತ್ತಿದ್ದರು. ಅನೂ ಓಡುತ್ತ ಕೋಣೆಗೆ ಬಂದಳು. ವಿನಯ ಹಿಂದೆಯೇ ಓಡಿ ಬಂದು ಅವಳ ಕೈಯಲ್ಲಿಯ ಆಟಿಗೆ ಕಸಿದ. ಅವಳು ಬಿಡಲಿಲ್ಲ. ಆಗ ಅವಳನ್ನು ದಬದಬ ಹೊಡೆದು ನೂಕಿದ. ಕೆಳಗೆ ಬಿದ್ದ ಅನು ಅಳತೊಡಗಿದಳು. ಮೀರಾ ಓಡಿ ಬಂದು ಬಿದ್ದ ಅನುವನ್ನು ಎಬ್ಬಿಸಿ ವಿನಯನನ್ನೇ ಗುದ್ದಿದಳು.

"ಆಕೀ ಸಣ್ಣಾಕಿ, ಆಟಿಗೀ ಕೊಟ್ಟು ಹೊರಗ ಹೋಗು ಸುಮ್ಮನ."

ವಿನಯ ಸಿಟ್ಟಿನಿಂದ ಕೂಗಿದ. "ನನಗದು ಬೇಕs ಬೇಕು. ನಂದು ಅದು." ಆಟಿಗೆ ಮತ್ತೆ ಕಸಿದ. ಮತ್ತೆ ಇಬ್ಬರೂ ಹೊಡೆದಾಡಿದರು. ಇನ್ನು ಸಿಟ್ಟಿನಿಂದ ಪ್ರಯೋಜನವಿಲ್ಲವೆಂದು ತಿಳಿದ ಮೀರಾ ಮಗನನ್ನು ರಮಿಸಿದಳು. "ಅನು ಊರಿನಿಂದ ಬಂದಾಳ. ಇನ್ನೊಂದು ನಾಕ ದಿನಕ್ಕ ಮತ್ತ ಹೋಗತಾಳ. ಆಮ್ಯಾಲೆ ಬಾ ಅಂದರೂ ಬರೋದಿಲ್ಲಾ. ಇದೆಲ್ಲಾ ನಿಂದs ಅದ. ಮನೀ ನಿಂದು. ಆಟಿಗಿ ನಿಂದು. ಆಕಿ ಬಂದಾಗ ನಾಕ ದಿನಾ ಛಂದಾಗಿ ಆಡಬೇಕು. ಅನುಗ ಆಟಿಗೀ ಕೊಡು. ನಿನಗ ಬೆಲ್ಲಾ ಕೊಡತೀನಿ ಬಾ."

"ಬಾ ಹಂಗಾರ, ನನಗೆ ಬೆಲ್ಲಾ ಕೊಡ ಬಾ" ಎಂದು ಆಟಿಗೆಯನ್ನು ಅನುವಿನತ್ತ ಎಸೆದು ತಾಯಿಯ ಹಿಂದೆ ಓಡಿದ. "ನನಗೂ ಬೆಲ್ಲಾ" ಎನ್ನುತ್ತಾ ಅನುರಾಧಾ ಓಡಿದಳು. ಎಲ್ಲವನ್ನೂ ನೋಡಿಯೂ ನೋಡದವರಂತೆ ಸುಮ್ಮನೆ ಹಪ್ಪಳ ಲಟ್ಟಿಸುತ್ತಿದ್ದ ಗಂಗಮ್ಮ ಸೊಸೆ ಹೊರಗೆ ಹೋದ ಮೇಲೆ ಮಗಳ ಮುಖ ನೋಡಿದಳು. ಸರೋಜಳ ಮುಖ ಕಪ್ಪಿಟ್ಟಿತ್ತು. ಕಣ್ತುಂಬ ನೀರು ತುಂಬಿ ಇನ್ನೇನು ಹೊರಬೀಳಲಿದ್ದವು. ಅವಳ ಮನಸ್ಸು ಎತ್ತಲೋ ಓಡಿತ್ತು.

ಮೊನ್ನೆ ಪೇಟೆಯಲ್ಲಿ ಅವ್ವನ ಗೆಳತಿ ಕಮಲಮ್ಮ ಭೆಟ್ಟಿಯಾಗಿದ್ದರು. "ಸರೋಜಾ ಯಾವಾಗ ಬಂದಾಳ ? ಅನಕಾ ನಾಕ ದಿನಾ ಇರತಾಳೇನು ?" ಎಂದು ಕೇಳಿದ್ದರು. ಅದಕ್ಕೆ ಅವ್ವ "ಮೈಯಾಗ ಆರಾಮ ಇದ್ದಿದ್ದಿಲ್ಲಾ. ಈಶಣ್ಣ ಹೋಗಿ ಕರಕೊಂಡು ಬಂದಾನ. ತಿಂಗಳೊಪ್ಪತ್ತು ಇದ್ದು ವಿಶ್ರಾಂತಿ ತೊಗೊಂಡು ತನ್ನ ಮನೀಗೆ ಹೋಗತಾಳ" ಎಂದಿದ್ದಳು. ಇವತ್ತು ಅತ್ತಿಗೆ "ನಾಕ ದಿನಾ ಇದ್ದು ಊರಿಗೆ ಹೋಗತಾಳ ಅನು. ಆಮ್ಯಾಲೆ ಬಾ ಅಂದರೂ ಬರೂದಿಲ್ಲಾ" ಅಂದಳು. ಅಂದರ ತಾನು ಮತ್ತ ಅಲ್ಲಿಗೆ ಹೋಗಬೇಕs ತಿರುಗಿ. 'ತನ್ನ ಮನೀಗೆ' ಅಂದಿದ್ದು ಅವ್ವ. ಆದರೆ 'ತನ್ನ ಮನೀ' ಎಲ್ಯದ? ಇಲ್ಲs ಇಲ್ಲಾ. ತನಗ ಮನೀನ ಇಲ್ಲಾ, ಅದು ಗಂಡನ ಮನೀ. ಇದು ಅಣ್ಣನ ಮನೀ. ಅಲ್ಲಿಯವರಿಗೆ ಬ್ಯಾಸರಾದರೆ ಇಲ್ಲಿಗೆ ಬರಬೇಕು - ಇಲ್ಲಿವರಿಗೆ ಬ್ಯಾಸರಾದರ ಅಲ್ಲಿಗೆ ಹೋಗಬೇಕು. ಇದs ಸಂಸಾರ. ಇದs ನನ್ನ ಜೀವನ. ಉಫ್!! ನಿಟ್ಟುಸಿರು ಬಿಟ್ಟ ಮಗಳನ್ನು ನೋಡಿ ಗಂಗಮ್ಮ ಮೆಲ್ಲಗೆ ಕೇಳಿದರು. "ಯಾಕ ಸರೂ, ಹಿಂಗ ಯಾಕ ಅಳತೀ? ಇಷ್ಟು ಯಾಕ ಮನಸ್ಸಿಗೆ ಹಚ್ಚಿಕೊಂಡೀದಿ? ಗಂಡ ಹೆಂಡತಿ ಅಂದ ಮ್ಯಾಲೆ ಮಾತು, ಜಗಳಾ ಇರೂದನ. ಸ್ವಭಾವ ಬ್ಯಾರೇನ ಇರತಾವ. ಹೊಂದಿಕೊಳ್ಳೂತನಾ ತ್ರಾಸ ಆಗ್ತದ. ಅದನ್ನs ದೊಡ್ಡದು ಮಾಡಬಾರದು."

"ಅವ್ವಾs ಅಪ್ಪ ನಿನ್ನ ಸುಖದಾಗ ಇಟ್ಟಿದ್ರು, ನೀ ಹೇಳಿದಾಂಗ ಕೇಳತಿದ್ರು. ನೀ ಕೂಡ್ರ ಅಂದರ ಕೂಡ್ರತಿದ್ದರು, ಏಳ ಅಂದರ ಏಳತಿದ್ದರು. ಅದಕ್ಕs ನಿನಗ ನನ್ನ ಕಷ್ಟ ಅರ್ಥ ಆಗೂದಿಲ್ಲಾ. ನನ್ನ ಗಂಡಾ ಅಲ್ಲೆ ನನ್ನ ಹ್ಯಾಂಗ ನಡೆಸಿಕೊಳ್ಳತಾರ ಅನ್ನೂದು ನಿನಗ ಏನ ಗೊತ್ತದ? ಅವರು ಹೇಳಿದ್ಹಾಂಗ ಕೇಳಬೇಕು ನಾ ಎಲ್ಲಾ. ನಂದೇನೂ ನಡಿಯೂದಿಲ್ಲಾ."

"ಕೇಳಬೇಕವಾ ಮತ್ತ, ಒಬ್ಬೊಬ್ಬ ಗಂಡಸರು ಅಂಥಾವರ ಇರತಾರ."

"ಇಂಥಾ ಪಲ್ಲೆ, ಇಂಥಾ ಅಡಿಗಿ, ತಿಂಡಿ-ತಿನಿಸು ಏನಿದ್ದರೂ ಅವರು ಹೇಳಿದಾಂಗ ಮಾಡಬೇಕು ನಾನು. ನನಗ ಸೇರಿದ್ದು ಏನೂ ಮಾಡು ಹಾಂಗಿಲ್ಲ, ನನಗ ಬ್ಯಾರೇ ರುಚಿ, ಬ್ಯಾರೆ ಆಸೆ ಇರತಾವ ಅನ್ನೂದೂ ತಿಳಿಯೂದಿಲ್ಲೇನು? ನಾನೂ ಮನುಷ್ಯಳು, ಕಲ್ಲು ಅಲ್ಲಾ ಅನ್ನೂದು ಗೊತ್ತಾಗುದಿಲ್ಲೇನು." ಆವೇಶದಿಂದ ಹೇಳಿದಳು ಸರೋಜ. ಈಗ ಅವಳ ಕಣ್ಣೀರು ಇಂಗಿತ್ತು. ಕೋಪದಿಂದ ಮುಖ ಕೆಂಪಾಗಿತ್ತು. ಮೂಗಿನ ಹೊರಳೆ ಅದರುತ್ತಿದ್ದವು.

ಗಂಗಮ್ಮ ನಿಧಾನವಾಗಿ ಕೆಲಸ ಮುಂದುವರಿಸುತ್ತಲೇ ಕೇಳಿದಳು. "ನಿನಗ, ನಿನ್ನ ಯಜಮಾನರಿಗೆ, ಯಾತಕ್ಕ ಜಗಳ ಬರ್‍ತದನೋ ನನಗ ತಿಳೀವೊಲ್ಲದಾಗೇದ. ನೀನೂ ಬಿ.ಎ. ತನಾ ಕಲತಾಕಿ ಅದೀ. ಅವರು ತಿಳಿದವರು ಅದಾರ. ಆದರೂ ಒಬ್ಬರಿಗೊಬ್ಬರು ಹೊಂದಿಕೊಂಡು ಹೋಗವಲ್ಲರಾಗೀರಿ."

"ಜೀವನದಾಗ ಸುಕಾ, ಸಂತೋಷ ಬೇಕಾದರೆ ಇಬ್ಬರೂ ಒಬ್ಬರನ್ನೊಬ್ಬರು ಅರ್ಥ ಮಾಡಿಕೋಬೇಕಾಗ್ತದ ಅವ್ವಾs, ಪ್ರೀತಿಸಬೇಕಾಗ್ತದ, ಗೌರವಿಸಬೇಕಾಗ್ತದ., ಹೆಂಡತಿ ಅಂದರ ನನ್ನ ತೊತ್ತು, ನಾನು ಹೇಳಿದಾಂಗ ಕೇಳಿಕೊಂಡು ಬಿದ್ದಿರಬೇಕಾದ ಆಳು ಅಂತ ಗಂಡ ತಿಳಕೊಂಡರ ಅಲ್ಲಿಗೆ ಅವಳ ಗೌರವ ಏನಾತು ? ಅವಳ ಬದಲೀ ಕೆಲಸಕ್ಕ ಒಂದು ಆಳು ಇಟಕೊಂಡು ತಿಂಗಳಾ ತಿಂಗಳಾ ಪಗಾರಾ ಬಿಸಾಕಿದರ ಹೇಳಿದ್ದು ಮಾಡಿಟ್ಟು ಹೋಗತಾಳ."

"ಬರೆ ಊಟಾ ತಿನಿಸಿನ ಬಗ್ಗೆ ಜಗಳ ಬಂದರ ನೀ ಅಷ್ಟ ಯಾಕ ಸಿಟ್ಟಿಗೇಳಬೇಕು? ನಾಲಗೀ ರುಚೀನ ಮುಖ್ಯ ಅಲ್ಲಲ್ಲ. ಅವರಿಗೇನು ಬೇಕು ಮಾಡಿ ಹಾಕಿದರಾತು. ಈಗ ಒಂದs ಹೊಟ್ಟೀಯವರು ಆಗಿ ನಿನಗ ಸೇರಿದ್ದು ಈಶಣ್ಣಗ ಸೇರೂದಿಲ್ಲ, ಅವಗ ಸೇರಿದ್ದು ನಿನಗ ಸೇರೂದಿಲ್ಲಾ, ಹೌದಲ್ಲೋ?"

"ಅಷ್ಟ ಅಲ್ಲವ್ವಾ, ಒಂದು ಸಾರೆ ನಾನು ನನ್ನ ಗೆಳತಿ ಕೂಡಿ ಹೋಗಿ ದಿನಾ ಉಡಲಿಕ್ಕೆ ಪತ್ತಲಾ ತೊಗೊಂಡು ಬಂದಿವಿ. ನನಗೆ ಸೇರಿದ್ದು ನಾ ಆರಿಸಿ ತಂದು ಉಡಲಿಕ್ಕೂ ಸ್ವಾತಂತ್ರ್ಯ ಇಲ್ಲಾ. ಇದೇನ ಛಂದ ಕಾಣಿಸೂದಿಲ್ಲಾ. ತಿರುಗಿ ಕೊಟ್ಟು ಬ್ಯಾರೆ ತೊಗೊಂಡು ಬಾ ಅಂದರು. ನಾ ಏನ ಕೇಳಿಲಿಲ್ಲ. ನನಗ ಸೇರ್ತದ ಅಂತ ತಂದೀನಿ, ನಾ ಉಡುವಾಕೀನ ಅಂತ ಘಳಿಗೀ ಮುರದೆ. ಇದನ್ನ ಉಟಕೊಂಡ ನನ್ನ ಕೂಡ ಬರಬ್ಯಾಡಾ ಅಂತ ನನ್ನ ಬಿಟ್ಟು ಸಿನಿಮಾಕ್ಕ ಹೋಗಿಬಿಟ್ಟರು."

"ಹೆಣ್ಣಮಕ್ಕಳಿಗೆ ಸಹನಗುಣಾ ಇದ್ದಾಂಗ ಗಂಡಸರಿಗೆ ಇರೂದಿಲ್ಲವಾ. ಅವರಿಗೆ ಸಿಟ್ಟು ಜಾಸ್ತಿ. ಆದರ ನಾ ಒಂದ ಮಾತ್ರ ಕೇಳ್ತೀನಿ, ನೀ ಹೆರಳು ಹಾಕ್ಕೊಳ್ಳುದು, ಶೃಂಗಾರ ಮಾಡಿಕೊಳ್ಳೂದು, ಸೀರಿ ಉಡೂದು ಎಲ್ಲಾ ಅವರಿಗೆ ಛಂದ ಕಾಣಲಿ ಅಂತ ಹೌದಲ್ಲೋ ? ಅಂದ ಮ್ಯಾಲೆ 'ನೀವ ಹೇಳಿದಾಂಗ ಆಗಲಿ ಬರ್ರಿ ನನ್ನ ಜೋಡಿ ಪ್ಯಾಟಿಗೆ, ನೀವs ಸೀರಿ ಆರಸರಿ. ನಾನು ಅದನ್ನ ಉಡತೇನಿ ಅಂತ ಹೇಳಬೇಕು."

"ಊಟಾ ಉಡಿಗಿ ಅವರ ಹೇಳಿದಾಂಗ ಮಾಡಬೇಕಂತ ನೀ ಅಂತೀದಿ. ಮಕ್ಕಳನ್ನ ಜೋಪಾನಾ ಮಾಡೂದು ಅವರs ಕಲಸಬೇಕೇನ ನನಗ? ನಾ ಏನು ಅಜ್ಞಾನೀನ, ಹಳ್ಳೀ ಊರಾಕೀನ ? ಮಕ್ಕಳನ್ನ ಜೋಪಾನಾ ಮಾಡೂದು, ಅವರ ಮನಶ್ಶಾಸ್ತ್ರಾ ಎಲ್ಲಾನೂ ಪುಸ್ತಕದಾಗ ಓದೇ ಇಲ್ಲೇನು? ಅಲ್ಲಾ. ನನ್ನಂಥಾಕೀಗ ಬುದ್ಧಿ ಹೇಳಾಕ ಬರತಾರಲ್ಲ ಇವರು ?" ಮಗಳ ಮಾತಿನ ಧಾಟಿಗೆ ನಗು ಬಂದರೂ ತಡೆದುಕೊಂಡ ಗಂಗಮ್ಮ ಕೇಳಿದಳು, "ಏನಾತು? ಅದೇನಂದರು ಹೇಳಲ್ಲ."

"ಒಂದ ಆದಿತ್ಯವಾರ ಮಧ್ಯಾಹ್ನದಾಗ ಮಳೀ ಬಂದು ನಿಂತಿತ್ತs. ಎಲ್ಲಾ ಹುಡುಗೂರ ಕೂಡ ಅನುನು ಮನೀ ಮುಂದ ಗುಬ್ಬೀಗೂಡು ಕಟ್ಟಿ ಆಡತಿದ್ದಳು. ನಾನು ಚಹಾ ಮಾಡಿ ಒಳಗ ಕರೆದೆ. ಆಕಿ ಓಡಿ ಬಂದಾಕಿನ ಪ್ಲೇಟಿನ್ಯಾಗಿನ ಚಕ್ಲಿಗೆ ಕೈಹಾಕಿ ತಿಂದಳು. ಇವರು ಅಷ್ಟಕ್ಕ ಸಿಟ್ಟಿಗೆದ್ದು ರಪ್ಪನ ಬೆನ್ನ ಮ್ಯಾಲೆ ಹೊಡೆದುಬಿಟ್ಟರು ಆಕೀನ್ನ. 'ಮಣ್ಣಾಗ ಆಡಿ ಬಂದು ಹೊಲಸ ಕೈಲೆ ತಿಂತೀಯಾ, ಹೋಗು ಕೈ ತೊಳಕೊಂಡು ಬಾ' ಅಂತ ಸಿಟ್ಟಿಗೆದ್ದರು. ಇಷ್ಟು ಸಣ್ಣ ಮಾತಿಗೆ ಸಿಟ್ಟಿಗೆದ್ದು ಬಡದರ ಏನು ತಿಳೀತದ, ಸಮಾಧಾನಲೆ ಹೇಳಬೇಕು ಅಂದೆ. 'ತಾಯಾಗಿ ನೀs ಆಕೀಗೆ ಸ್ವಚ್ಛತಾ ಕಲಿಸಿಲ್ಲ. ಮಕ್ಕಳಿಗೆ ರೀತಿ ನಡತಿ ಕಲಸೂದು ತಾಯಿ ಕೆಲಸಾ. ಸಣ್ಣವರಿದ್ದಾಗ ಹೇಳಿದರ ಕಲಿತಾರ, ಇಲ್ಲಾಂದರ ಮುಂದ ನಿನ್ಹಾಂಗ ಆಗಿ ಕೂಡ್ರತಾರ' ಅಂತ ನನಗs ಟೀಕಾ ಮಾಡಿದರು. ನನಗ ಭಾಳ ಸಿಟ್ಟು ಬಂತು. ಜೋರಾಗಿ ವಾದಿಸಿದೆ. ಮಗಳ್ನ ಪ್ರೀತಿ ಮಾಡಲಿಕ್ಕೆ ಬರೂದಿಲ್ಲ ಸುದ. ಅವಳು ಬೇಡಿದ್ದು ಕೊಡಿಸಲಿಕ್ಕೆ ರೊಕ್ಕ ಇರೂದಿಲ್ಲಾ ನಿಮ್ಮ ಹತ್ತಿರ, ಅವಳ್ನ ಹೊಡೀಲಿಕ್ಕೆ ಕೈ ಹ್ಯಾಂಗ ಎತ್ತತೀರಿ?' ಅಂತ. ಚಹಾ ಕುಡೀಲಾರದ ಬಿರ್ರನ ಎದ್ದು ಕೋಟು ಹಾಕ್ಕೊಂಡು ಹೊರಗ ಹೋಗಿಬಿಟ್ಟರು. ಮುಂದ ಎರಡು ದಿನಾ ಮಾತಾಡಲಿಲ್ಲಾ ನಾವಿಬ್ಬರೂ."

"ಅಲ್ಲಾ ಸರೀ, ಗಂಡ ಚಹಾ ಕುಡೀದ ಹೋದರ ನೀನರೆ ಹೇಳಬೇಕು ತಪ್ಪಾತು, ಚಹಾ ಕುಡದು ಹೋಗರಿ' ಅಂತ" ಎಂದರು ಮುಗ್ಧೆ ಗಂಗಮ್ಮ.

"ನಂದೇನು ತಪ್ಪಾಗಿತ್ತು ಅವ್ವಾ ? ನಾ ಯಾಕ ರಿಕ್ವೆಸ್ಟ್ ಮಾಡಿಕೋ ಬೇಕೂ ತಿನ್ನರಿ, ಕುಡೀರಿ ಅಂತ? ಊರೊಳಗೇನು ಚಹಾದ ಅಂಗಡಿ ಕಡಿಮಿ ಇಲ್ಲಾ. ಕಿಸೇದಾಗ ರೊಕ್ಕ ಅಂತೂ ಇದ್ದs ಇರತಾವ. ದುಡದು ತಂದು ಹಾಕತಾರ ಅಂತ ಅವರು ಹೇಳಿದಾಂಗ ಕೇಳಿಕೊಂಡು ಬಿದ್ದಿರಬೇಕು ನಾವು. ನಾನು ಹೇಳಿದೆ 'ನಾನೂ ಬಿ.ಎ. ಆಗೀನಿ, ನೌಕರಿ ಮಾಡತೇನಿ' ಅಂತ. ಬ್ಯಾಡಾ ಅಂತಾರ. ತಾವು ತಂದ ಹಾಕಿದ್ದರೊಳಗs ಮಾಡಬೇಕಂತ. ತಾವು ಸಿಗರೇಟು, ಹೋಟಲು ಗೆಳೆಯರು ಅಂತ ರೊಕ್ಕ ಖರ್ಚು ಮಾಡತಾರ. ಆದರ ಮಗಳು ಟ್ರೈಸಿಕಲ್ ಬೇಡಿದರ ಕೊಡಿಸಲಿಕ್ಕೆ ರೊಕ್ಕ ಇಲ್ಲಾ ಅಂತಾರ. ನಾವೂ ದುಡೀತಿದ್ದರ ನಮ್ಮ ಮನಸ್ಸಿಗೆ ಬಂದಾಗ ಖರ್ಚು ಮಾಡತಿದ್ವಿ." ಅಸಹಾಯಕಳಂತೆ ಮತ್ತೆ ಅತ್ತಳು ಸರೋಜ.

"ಈಗಿನ ದಿನಮಾನ ತುಟ್ಟಿ ಆಗ್ಯಾವ ಸರೋಜಾ. ದೊಡ್ಡ ಊರಾಗ ಖರ್ಚು ಭಾಳ ಇರತಾವ. ಮಂದಿ ಬಿಡೆದಾಗ ಬಿದ್ದಿರತಾರ. ಅವರಿಗೂ ಇವರು ಚಹಾ ಕುಡಿಸಬೇಕಾಗತದ. ಸೈಕಲ್ ಕೊಡಸದಿದ್ದಷ್ಟಕ್ಕೆ ಅವರಿಗೆ ಮಗಳ ಮ್ಯಾಲೆ ಪ್ರೀತಿ ಇಲ್ಲೇನು ?"

"ಅದಕ್ಕs ನಾನೂ ದುಡಿತೀನಿ ಅಂದರ ಯಾಕ ಬ್ಯಾಡ ಅನಬೇಕು ?"

"ಹೆಣ್ಣುಮಕ್ಕಳು ಮನೀ ಬಿಟ್ಟು ಹೊರಗ ದುಡೀಲಿಕ್ಕೆ ಹೋದರ ನಾಲ್ಕು ಮಂದಿಯೊಳಗ ಅಡ್ಡಾಡಬೇಕಾಗತದ. ಕೆಟ್ಟವರು ಯಾರು, ಭೋಲೋರು ಯಾರು ಗೊತ್ತಾಗೂದಿಲ್ಲ. ಹೆಂಡತಿ ತಮ್ಮ ಖಾಸಗಿ ಸ್ವಂತವಸ್ತು ಅಂತ ಅಭಿಮಾನ ಇದ್ದವರು ಅವಳು ಗೌರವಸ್ಥ ಆಗಿ ಮನೀಯೊಳಗs ಇರಬೇಕು ಅಂತ ಇಚ್ಛಾ ಮಾಡತಾರ. ತಪ್ಪೇನಲ್ಲ ಅದು."

"ನನ್ನ ಬಗ್ಗೆ ಅಂಥಾ ಗೌರವ ಅದ ಅಂತ ನನಗೇನೂ ಅನಿಸೂದಿಲ್ಲ ಅವ್ವಾ. ಒಮ್ಮೆ ಅವರ ಗೆಳೆಯರು ಒಬ್ಬರು ಅಮೇರಿಕಾದಿಂದ ಬಂದಿದ್ದರು. ಅವರಿಗೆ ನನ್ನ ಗುರುತು ಮಾಡಿಕೊಟ್ಟರು. ಅವರ ಕೂಡ ನಾ ಇಂಗ್ಲೀಷಿನೊಳಗ ಮಾತಾಡಿದೆ. ಮನೀಗೆ ಬಂದ ಮ್ಯಾಲೆ 'ಎಷ್ಟು ತಪ್ಪು ತಪ್ಪ ಇಂಗ್ಲೀಷ್ ಮಾತಾಡಿ ನನ್ನ ಅವಮಾನಾ ಮಾಡಿದಿ. ಸುಮ್ಮನ ಕನ್ನಡ ಮಾತಾಡಬೇಕಾಗಿತ್ತು' ಅಂತ ನನ್ನ ಕೂಡ ಜಗಳಾಡಿದರು. ನಾನೂ ತಿರುಗಿ ಜಗಳಾಡಿದೆ. 'ನೀವು ನನಗ ಏನೂ ಸ್ವತಂತ್ರ ಕೊಡಲಿಲ್ಲಾ. ನನ್ನ ಹತ್ತಿಕ್ಕಲಿಕ್ಕೆ ಹತ್ತೀರಿ' ಅಂತ ನನ್ನ ಹೊಡದs ಬಿಟ್ಟರು. ಅವ್ವಾ, ಅವತ್ತಂತೂ ಕಪಾಳಿಗೆ ಹೊಡೆದರು.

ಗಂಗಮ್ಮನ ಮುಖದಲ್ಲಿ ಚಿಂತೆಯ ಮೋಡ ಕವಿದಂತೆ ಆಕಾಶದಲ್ಲಿಯೂ ಮೋಡಗಳು ದಟ್ಟೈಸಿದವು. ಕೋಣೆ ನಸುಗತ್ತಲಾಗಿತ್ತು. ಗಂಗಮ್ಮ ಮಾತನಾಡದೇ ಬಗ್ಗಿ ಹಪ್ಪಳ ಲಟ್ಟಿಸುತ್ತಿದ್ದಳು. ಹೊರಗಿನ ಮಳೆಯ ಸಪ್ಪಳ ತಾಯಿ ಮಗಳಿಬ್ಬರ ಕಿವಿಗೆ ಬೀಳಲಿಲ್ಲ.

"ಅಯ್ಯs ಅಯ್ಯಯ್ಯ ಮಳೀ ಬಂತು, ಹಪ್ಪಳ ತೊಯ್ದು ಹೋದ್ವು. ಕೋಣೆಯೊಳಗ ಕೂತರ ಹೊರಗಿಂದು ಏನೇನೂ ಗೊತ್ತಾಗೂದಿಲ್ಲ. ಅಜ್ಜೀs ನಿಮಗ ಮಾತು ಸಿಕ್ಕರ ಮಾನೇದ ಹೊಲಾ ಸಿಕ್ಕಂಗ" ಎನ್ನುತ್ತಾ ಮೀರಾ ಮಲಗುವ ಕೋಣೆಯಿಂದ ಓಡೋಡಿ ಬಂದಳು. ಗಂಗಮ್ಮ ಚಟ್ಟನೆ ಎದ್ದರೂ ಕೂತು ಕೂತು ಜೋಮು ಹಿಡಿದಿದ್ದರಿಂದ ಮುಂದೆ ಹೆಜ್ಜೆ ಇಡಲು ಬರಲೇ ಇಲ್ಲ. ಸರೋಜ ಎದ್ದು ಹೋಗಿ ಹಪ್ಪಳ ಒಳಗೆ ತರಲು ಅತ್ತಿಗೆಗೆ ಸಹಾಯ ಮಾಡಿದಳು. ಆದರೂ ಕೆಲವು ಹಪ್ಪಳ ನೆನೆದು ಒಂದಕ್ಕೊಂದು ಅಂಟಿಕೊಂಡು ಮತ್ತೆ ಮುದ್ದೆಯಾಗಿ ರೂಪಾಂತರಗೊಂಡವು. ಹಪ್ಪಳ ಒಳಗೆ ಬಂದರೂ ಅತ್ತಿಗೆಯ ವಟಗುಟ್ಟುವಿಕೆ ನಿಂತಿರಲಿಲ್ಲ. ಅವಳ ಮಾತು ಕೇಳಿ ಕ್ಷಣ ಕ್ಷಣಕ್ಕೂ ಸರೋಜಳ ಕೋಪ ಏರುತ್ತಿದ್ದಿತು, ಮಗಳು ಎಲ್ಲಿ ಸೊಸೆಗೆ ತಿರುಗಿ ವಾದಿಸಿ ಜಗಳ ತೆಗೆಯುವಳೋ ಎಂದು ಗಂಗಮ್ಮ ದಿಗಿಲುಗೊಂಡಿದ್ದಳು. ಕಷ್ಟಪಟ್ಟು ನಾಲಿಗೆ ಹತೋಟಿಯಲ್ಲಿಟ್ಟುಕೊಂಡಿದ್ದ ಸರೋಜ ಅತ್ತಿಗೆ ಒಳಗೆ ಹೋದೊಡನೆ ಬಾಯಿಬಿಟ್ಟಳು.

"ಅವ್ವಾs ನಾನೂ ಬಂದಾಗಿನಿಂದ ನೋಡತೇನಿ, ಅತ್ತಿಗಿ ಬಾಯಿ ಸುಮ್ಮನ ಇರೂದಿಲ್ಲಾ. ಹಾಂಗ ನೋಡಿದರ ನೀನೂ ಕೈಲಾದಷ್ಟು ಕೆಲಸಾ ಮಾಡೇ ಮಾಡ್ತಿದಿ. ಆದರೂ ಹೀಂಗ ಯಾಕ ಮಾತಾಡತಾಳ? ಯಾವಾಗಲೂ ಹಿಂಗsನೋ ಅಥವಾ ನಾ ಬಂದೀನಂತೋ ?"

"ಯಾವಾಗರೆ ಸಿಟ್ಟು ಬಂದಾಗ, ಬ್ಯಾಸರಾದಾಗ ಅಂತಿರತಾಳ."

"ನೀ ಅಣ್ಣನ ಮುಂದ ಯಾಕ ಹೇಳಬಾರದು ? ಅಂವಗೇನು ಗೊತ್ತಾಗತದ ಇದೆಲ್ಲಾ ? ಎಷ್ಟು ಪ್ರೀತಿ ಮಾಡತಾನ ಅವ ನಿನ್ನ !"

"ಸರೂs, ಅವಾ ನನ್ನ ಪ್ರೀತಿ ಮಾಡತಾನ. ಹಾಂಗs ತನ್ನ ಹೆಂಡತಿನ್ನೂ ಪ್ರೀತಿ ಮಾಡತಾನ. ನಾನು ಏನಾರೆ ಹೇಳಿದರ ಇಬ್ಬರಿಗೂ ಜಗಳಾ ಹಚ್ಚಿದಾಂಗ ಆಗ್ತದ. ಮನಿಯೊಳಗ ಶಾಂತಿ ಇರೂದಿಲ್ಲಾ. ಅಷ್ಟಾಗಿ ಹಪ್ಪಳ ಕೆಟ್ಟವು ಯಾಕ ನೋಡಲಿಲ್ಲಾ ಅಂದಳು. ತಪ್ಪೇನದ ಅದರೊಳಗ?"

"ಮನಸ್ಯಾ ಅಂದ ಮ್ಯಾಲೆ ತಪ್ಪು ಆಗೂವನ, ಹಪ್ಪಳಾ ಮಾಡೂವಾಕಿ ನೀನು. ತಾನು ರಾಣೀಹಾಂಗ ಆರಾಮ ಖೋಲ್ಯಾಗ ಮಲಕೋತಾಳ. ಅಷ್ಟಕ್ಕ ಇಷ್ಟೆಲ್ಲಾ ಯಾಕ ಮಾತಾಡಬೇಕು? ನಾ ಆಗಿದ್ದರ ಸುಮ್ಮನ ಇರತಿದ್ದಿಲ್ಲಾ."

"ಆಕೀ ಕೂಡ ವಾದಿಸಿ, ಜಗಳಾ ಮಾಡಿ ನಾ ಎಲ್ಲಿ ಹೋಗಲಿ ? ಮಗನ ಬಿಟ್ಟ ನನಗೆ ಯಾರು ಅದಾರು?"

ತಾಯಿ ಮಾತಿನಿಂದ ಸರೋಜಳಿಗೆ ಸಿಟ್ಟು ಬಂದೇಬಿಟ್ಟಿತು. "ಅವ್ವಾs ಮಗಾ ಜೋಪಾನಾ ಮಾಡತಾನಂತ ಸೊಸಿ ಅಂದದ್ದೆಲ್ಲಾ ಅನಿಸಿಕೋತ ಇಲ್ಲ್ಯಾಕ ಇರಬೇಕು ? ನಾ ಹೇಳ್ತೀನಿ ಕೇಳು...." ಮುಂದೆ ಬೇಗ ಮಾತನಾಡದೆ ಸುಮ್ಮನಿದ್ದ ಮಗಳ ಮನಸ್ಸನ್ನು ಊಹಿಸಿದ ಗಂಗಮ್ಮ- "ಹೆಣ್ಣಿಗೆ ಸಹನಗುಣಾ ಇರಬೇಕು ಸರೂs ತಾಳಿದಷ್ಟು ಬಾಳತಾರ. ಒಂದು ಮನೀ ಇದ್ದದ್ದು ಎರಡ ಆಗಲಿಕ್ಕೆ ತಡಾ ಆಗೂದಿಲ್ಲಾ."

"ನೀ ಯಾವಾಗಲೂ ಹಿಂಗs ಅವ್ವಾ. ಮೊದಲ ಅಪ್ಪ ಹೇಳಿದ್ದಾಂಗ ಕೇಳಬೇಕು. ಲಗ್ನ ಆದಮ್ಯಾಲೆ ಗಂಡ ಹೇಳಿದಾಂಗ ಕೇಳಬೇಕು. ಅವಾ ಪೂರ್ವಕ್ಕ ಪಶ್ಚಿಮ ಅಂದರೂ ಹೌದು ಅನಬೇಕು. ವಯಸ್ಸಾದ ಮ್ಯಾಲೆ ಮಗಾ ಹೇಳಿದ್ದಾಂಗ ಇರಬೇಕು. ನಾವು ಹೆಂಗಸರು ಗಂಡಸರ ಗುಲಾಮರಾಗಿರಬೇಕು ಅಂತ ಹೇಳತೀದಿ. ಆದರ ಅದೆಲ್ಲಾ ಹಿಂದಿನ ಯುಗದ ಮಾತಾತು. ಇದು ಹೊಸಾಯುಗ. ಈಗ ಗಂಡು-ಹೆಣ್ಣು ಸರಿಸಮಾನರು. ಯಾರೂ ಯಾರ ಗುಲಾಮರೂ ಅಲ್ಲಾ. ಅದಕ್ಕ ನಾ ಹೇಳ್ತೀನಿ ಕೇಳು, ನನಗೂ ಡಿಗ್ರಿ ಅದ. ನಾ ನೌಕರಿ ಮಾಡತೀನಿ, ನಾನು, ನೀನು ಅನು ಮೂರು ಬ್ಯಾರೆ ಮನಿಯೊಳಗ ಇರೂಣು. ನಾನೂ ಗಂಡನ ಕಿಟಿಕಿಟಿ, ಜಗಳ ಎಲ್ಲ ತಾಳಲಾರದೆ ನನ್ನ ಕಾಲ ಮ್ಯಾಲೆ ನಾನು ನಿಲ್ಲಬೇಕು. ತಿರುಗಿ ಗಂಡನ ಮನೀಗೆ ಹೋಗಬಾರದು ಅಂತ ನಿರ್ಧಾರ ಮಾಡಿ ಬಂದೇನಿ. ಸ್ವತಂತ್ರ ಆಗಿ ನಾನೂ ಸುಖದಿಂದ ಇರತೇನಿ. ಸೊಸಿ ಕೈಯಾಗ ಗಾಣದ ಎತ್ತಿನಾಂಗ ದುಡಿಯೂದು ನಿನಗೂ ತಪ್ಪತದ. ಎಷ್ಟು ದಿವಸಂತ ಈ ಮಾತಿನ ಬರಿ ಸಹಸತೀದಿ?" ಒಂದೇ ಉಸುರಿನಲ್ಲಿ ದಡದಡ ಮಾತನಾಡಿದಳು ಸರೋಜ, ಆದರೂ ಅತ್ತಿಗೆಗೆ ಕೇಳದಂತೆ,

"ಇದೆಂಥಾ ಬರಿ ಸರೋಜ. ಇದು ಬರೇ ಮಾತಿನ ಬರಿ. ಖರೆ ಖರೇನ ಬೆಂಕಿಯಿಂದ ಬರಿ ಕೊಡಿಸಿಕೊಂಡಾಕಿಗೆ ಇದೆಂಥಾ ಬರಿ?" ಗಂಗಮ್ಮ ದುಃಖದಲ್ಲೇ ನಕ್ಕಳು.

"ಏನವ್ವಾ ನೀ ಅನ್ನೂದು? ನಿನಗ ಯಾರ ಬರಿಕೊಟ್ಟರು ?'

"ಇಲ್ಲಿ ಬಾ ಹತ್ತರ, ತೋರಸತೇನಿ" ತಾಯಿಯ ತೊಡೆಯ ಮೇಲಿನ ಗಾಯದ ಗುರುತುಗಳನ್ನು ನೋಡಿದ ಸರೋಜ ಮೌನವಾಗಿದ್ದಳು.

"ಯಾರ ಕೊಟ್ಟರು ಅಂದೆಲ್ಲಾ ಸರೂs, ನಿನ್ನ ತಂದಿ ಈ ಬರಿ ಕೊಟ್ಟರು."

"ಅಪ್ಪ? ಯಾಕೆ?"

"ಹೂಂ. ಅವರs ನಿನಗ ತಿಳುವಳಿಕೆ ಬಂದಾಗ ಅವರು ಸಾದ ಆಗಿದ್ದರು. ಅದಕ್ಕs ನಿನಗ ಏನೂ ಗೊತ್ತಿಲ್ಲಾ. ಈಶಣ್ಣಗ ಸ್ವಲ್ಪ ತಿಳೀತಿತ್ತು. ಅಂವಾ ನನ್ನ ಅವಸ್ಥೆ ನೋಡಿ ಅಳತಿದ್ದಾ. ಯಾಕ ಕೊಟ್ಟರು ಅಂದೆಲ್ಲಾ, ಒಂದು ದಿನ ನಾನು ಆಳಮಗನ ಕೈಯಾಗಿಂದ ಚಿಲ್ಲರ ರೊಕ್ಕಾ ತೊಗೊಂಡೆ. ಅದನ್ನ ನೋಡಿ ನನ್ನ ಅತ್ತಿ, ನಾದಿನಿ ಕೂಡಿ ಅವರ ಮುಂದ ನಾನು ಆಳಮಗನ ಕೈ ಹಿಡಿದಿದ್ನೆಂತ ಹೇಳಿಬಿಟ್ಟರು. ಅದನ್ನ ನಂಬಿ ನನ್ನ ಹೊಡೆದರು. 'ಇಂಥಾ ಹೊಯ್ಮಾಲಿತನಾ ಬಿಟ್ಟುಬಿಡು, ಇದು ಮರ್ಯಾದಸ್ಥರ ಮನೀ' ಅಂತ ಹೇಳಿ ಕಡಚೀ ಕಾಸೀ ಈ ಬರೀ ಕೊಟ್ಟರು, ಸಾಯೂತನಕ ನೆನಪಿರಲಿ ಅಂತ" ಗಂಗಮ್ಮ ನಗುತ್ತ ಹೇಳಿದ್ದರೂ ಸರೋಜ ಥರ ಥರ ನಡುಗಿದ್ದಳು.

"ಅದಕ್ಕs ಅವ್ವಾ ಹೇಳೂದು, ಮೊದಲೂ ಕಷ್ಟಪಟ್ಟೇದಿ, ಈಗರೆ ಯಾಕ ಸುಖದಿಂದ ಇರಬಾರದು ನಾವಿಬ್ಬರ ಬ್ಯಾರೆ ಆಗಿ?"

"ಅಜ್ಜೀs ಅಪ್ಪಾ ಬಂದಾ" ಎಂದು ಕೂಗುತ್ತ ಬಂದು ಬೆನ್ನ ಮೇಲೆ ಬಿದ್ದ ವಿನಯನನ್ನು ಹಿಡಿದುಕೊಂಡು ಲೊಟಲೊಟ ಮುತ್ತಿಕ್ಕಿ ಗಂಗಮ್ಮ ನಕ್ಕಳು. "ಸುಖಾ ಇಲ್ಲೇ ಅದ ನನಗ. ಇದs ನನಗ ಸುಖಾ" ಎಂದಳು.

"ಸರೂ, ನಿನ್ನ ಯಜಮಾನರ ಪತ್ರ ಬಂದsದ ನೋಡು" ಅಣ್ಣ ಅವಸರದಿಂದ ಕೂಗಿದರೂ ಸರೋಜ ಉದಾಸೀನಳಾಗಿ ನಿಧಾನವಾಗಿಯೇ ಬಂದು ಪತ್ರ ತೆಗೆದುಕೊಂಡಳು. .

"ತಿಂಗಳಾಗಿ ಹೋತು ನೀನು ಊರಿಗೆ ಹೋಗಿ, ಪತ್ರಾನs ಬರದಿಲ್ಲಾ. ಯಾಕ? ಅನು, ನೀನೂ ಹ್ಯಾಂಗಿದೀರಿ? ನನಗೆ ಊಟದ ತ್ರಾಸ ಆಗೇದ ನೀ ಯಾವಾಗ ಬರತೀ" ಅಂತ ಬರದಾರ.

"ನಿನಗ ಎರಡ-ಮೂರು ಸಾರೆ ಹೇಳಿದೆನವ್ವಾ ಪತ್ರಾ ಬರೀ ಬರೀ ಅಂತ ಯಾಕ ಬರೀಲಿಲ್ಲಾ? ಪಾಪ ಕಾಳಜಿ ಮಾಡತಿದ್ದಾರು."

"ಅವರಿಗೇನ ಕಾಳಜೀ ಬಿಡವ್ವಾ, ಊಟದ ತ್ರಾಸಾಗೇದಂತ ಅಡಿಗಿ ಮಾಡಲಿಕ್ಕೆ ಬೇಕು ಅಂತ ನನ್ನ ನೆನಪ ಆಗೇದ. ಇನ್ನೂ ಆರಾಮ ಆಗಿಲ್ಲಾ, ಈಗs ಬರೂದಿಲ್ಲಾ ಅಂತ ಬರೀತೇನಿ."

***

ಒಂದು ಸಂಜೆ ಗೆಳತಿಯ ಮನೆಯಿಂದ ಬಂದ ಸರೋಜೋಳಿಗೆ ಅಣ್ಣ ಸಿಟ್ಟಿನಿಂದ ಅತ್ತಿಗೆಯನ್ನು ಬಯ್ಯುತ್ತಿರುವುದು ಕೇಳಿಸಿತು. ಅಣ್ಣ ಅಷ್ಟು ಸಿಟ್ಟಿಗೆದ್ದುದನ್ನು ಎಂದೂ ಕಂಡಿರದ ಸರೋಜ ಹೆಜ್ಜೆ ಸಪ್ಪಳವಾಗದಂತೆ ಮೆಲ್ಲನೆ ಒಳಗೆ ಹೋದಳು.

"ಮನೀಯೊಳಗ ಖರ್ಚು ಹೆಚ್ಚಾಗೇದ ಅನ್ನೂದು ಗೊತ್ತದನೋ ಇಲ್ಲೋ ನಿನಗ? ದಿನ ದಿನಕ ಎಲ್ಲಾ ಸಾಮಾನಿನ ಧಾರಣೇ ಪಿತ್ತದ ಜ್ವರಾ ಏರಿದಾಂಗ ಏರಲಿಕ್ಕೆ ಹತ್ಯದ. ಕೈಗೆ ಸ್ವಲ್ಪ ಹಿಡಿತ ಇರಲಿ, ಇಂಥಾದರಾಗ ವಿನಯಗ ಅಷ್ಟು ಕಿಮ್ಮತ್ತಿನ ಅಂಗಿ ಯಾಕ ತಂದಿ ?"

"ಒಬ್ಬನs ಮಗಾ, ಹುಟ್ಟಿದ ಹಬ್ಬಕ್ಕಂತ...."

"ಈಗ ಒಬ್ಬನs ಇದ್ದರೆ ಏನಾತು ? ಇನ್ನ ಮೂರು ತಿಂಗಳಿಗೆ ಬರ್ತಾನಲ್ಲಾ ಇನ್ನೊಬ್ಬಾವಾ? ಆಗ ಔಷಧಿ ಪಥ್ಯ, ದವಾಖಾನಿ, ಬಾಣಂತಿತನಾ ಖರ್ಚು ಇರೂದಿಲ್ಲೇನು? ಒಂದ ಮನೀ ಗೃಹಿಣಿ ಆಗಿ ಅಂದಮ್ಯಾಲೆ ದೂರದೃಷ್ಟಿ ಇರಬೇಕು. ಲೆಕ್ಕಾ ಹಾಕಿ ಬಾಳೇ ಮಾಡಬೇಕು. ಅಂದರ ನಾಕ ದುಡ್ಡ ಉಳೀತಾವ ಕೈಯಾಗ."

"ಇರಲಿ ಬಿಡ್ರಿ, ಎಷ್ಟ ಸಾರೆ ಹೇಳತೀರಿ. ಇನ್ನೂ ತೊಡಸಿಲ್ಲಲ್ಲಾ ಅದನ್ನು ತಿರಗಿ ಕೊಟ್ಟು ಸಾದಾ ಅಂಗಿ ತಂದರಾತು."

'ಹಾಂಗ ಬಾರs ಜಾಣೀ ಹಾದಿಗೆ ಎಲ್ಲೇ, ನೋಡಿಲ್ಲೆ ನನ್ನ ಕಡೆ, ಸಿಟ್ಟು ಬಂತೇನು ನನ್ನ ಮ್ಯಾಲೆ? ನೋಡಿತ್ಲಾಗ, ಎಲಾ ಇಷ್ಟ ಯಾಕ ಕೆಂಪ ಕೆಂಪ ಅದಿ?

ಕೋಣೆಯಲ್ಲಿ ಕುಳಿತ ಸರೋಜ ಅಣ್ಣನ ಸಿಟ್ಟನ್ನೂ ಅತ್ತಿಗೆ ತಾಳ್ಮೆಯನ್ನೂ, ಅವರ ಸರಸವನ್ನೂ ಅನುಭವಿಸಿ ಮೂಕಳಾಗಿ ಏನನ್ನೋ ಯೋಚಿಸುತ್ತ ಕಿಟಕಿಗೆ ಒರಗಿ ನಿಂತಳು. ಗಂಡನ ನಗುಮುಖ ಕಣ್ಣ ಮುಂದೆ ತೇಲಿ ಬಂದಿತು. ವಿನಯ, ಅನು ಇಬ್ಬರೂ ಅಜ್ಜಿಯೊಡನೆ ಗುಡಿಗೆ ಹೋಗಿದ್ದರಿಂದ ಮನೆಯಲ್ಲಿ ಶಾಂತಿ ತುಂಬಿತ್ತು. ಮರುದಿನ ಗಂಗಮ್ಮ ಸ್ನಾನಕ್ಕಿಳಿದಾಗ ಬೆನ್ನಿಗೆ ಸೀಗೆಕಾಯಿ ತಿಕ್ಕಲು ಸರೋಜ ಬಚ್ಚಲಿಗೆ ಹೋದಳು. ಬೆನ್ನ ಮೇಲಿಂದ ಇಳಿದ ಕೈ ಸೊಂಟವನ್ನೂ ಭರದಿಂದ ಉಜ್ಜಿದಾಗ ಗಂಗಮ್ಮ 'ಹಾs' ಎಂದು ನರಳಿದಳು. "ಯಾಕವ್ವಾ ಸೊಂಟ ನೋವಾದಗೇನು ?"

"ಹೂಂನವ್ವಾ, ಯಾವಾಗರೆ ನೋವು ಏಳ್ತದ."

"ಯಾವಾಗ, ಎಲ್ಲೆ ಬಿದ್ದಿದ್ದಿ?"

ಒಂದು ನಿಮಿಷ ಸುಮ್ಮನಿದ್ದ ಗಂಗಮ್ಮ ಹೇಳಿದಳು; "ಬಿದ್ದ ಪೆಟ್ಟು ಅಲ್ಲವ್ವಾ. ನಿನ್ನ ಹಡದವರು ಒದ್ದಿದ್ದರು. ಆಗ ನೀ ಹೊಟ್ಟ್ಯಾಗ ಇದ್ದಿ. ಪುಣ್ಯೇಕ ನಿನಗ ಏನ ಧಕ್ಕೀ ಆಗಲಿಲ್ಲಾ."

"ಈಗ ಯಾರ ಚಾಡಿ ಮಾತು ಕೇಳಿದ್ದು? ಅಜ್ಜಿ ಏನ ಕಲಿಸಿದ್ದು?"

"ಈ ಸಾರೆ ಕೊಳ್ಳಾಗಿನ ಪುತಳೀ ಸರಾ ಕೇಳಿದರು. ನಾ ಕೊಡೂದಿಲ್ಲಾ ಅಂದೆ. ಅದಕ್ಕ ಒದ್ದು ಅದನ್ನು ಕಿತಕೊಂಡರು."

"ಸರಾ ತೊಗೊಂಡ ಏನ ತಾನs ಹಾಕ್ಕೊಂಡನ ಅಪ್ಪ!" ಸಿಟ್ಟಿನಿಂದ ಮೂದಲಿಸಿದಳು ಸರೋಜ. ಮಗಳ ಮಾತಿಗೆ ಗಂಗಮ್ಮ ನಸುನಕ್ಕಳು.

"ತಮಗ ಅಲ್ಲವಾ, ತಾವು ಇಟಗೊಂಡ ಹೆಂಗಸಿಗೆ ಕೊಡಾಕ ಅವರಿಗೆ ಅದು ಬೇಕಾಗಿತ್ತು."

ಕೈ ಜಾರಿ ಬೀಳುತ್ತಿದ್ದ ತಂಬಿಗೆಯನ್ನು ಬಿಗಿಯಾಗಿ ಹಿಡಿದ ಸರೋಜ ಮೌನವಾಗಿ ಮೆತ್ತಗೆ ರೇಶಿಮೆಯಂತಿದ್ದ ಬೆನ್ನನ್ನು ಮೃದುವಾಗಿ ಸವರಿದಳು.

"ಅಪ್ಪ ಇಂಥವರು ಇದ್ದರಂತ ನನಗ ಗೊತ್ತs ಇದ್ದಿದ್ದಿಲ್ಲಾ. ನೀ ಇದನ್ನೆಲ್ಲಾ ಹ್ಯಾಂಗ ಸಹನ ಮಾಡಿಕೊಂಡಿ? ತವರ್ಮನಿಗೆ ಹೋಗಲಿಲ್ಲಾ?"

"ಸರೂ, ಅವರು ಕೊಡೂ ಚಿತ್ರ ಹಿಂಸಾ ನೋಡಿ ನನಗೂ ಒಮ್ಮೊಮ್ಮೆ ಮನೀ ಬಿಟ್ಟ ಹೋಗಬೇಕೂ ಅಂತ ಅನಸತಿತ್ತು. ಅದನ್ನ ಒಮ್ಮೆ ನಮ್ಮ ಅವ್ವನ ಮುಂದೆ ಹೇಳಿದೆ. ಅದಕ್ಕ ಆಕೀ ' ನೀನು ಅಲ್ಲೇ ಇರಬೇಕು. ಸತ್ತರೂ ಅಲ್ಲೇ ಸಾಯಬೇಕು. ನಿನ್ನ ಮಕ್ಕಳ ಮಾರೀ ನೋಡಿಕೊಂಡಾದರೂ ಅಲ್ಲೇ ಇರು. ತಾಳಿಕೋ. ಮಂದಿಯೊಳಗ ನಮ್ಮ ಮಾನಾ ಕಳೀಬ್ಯಾಡಾ. ಗಂಡ ಬಿಟ್ಟ ಗಯ್ಯಾಳಿ ಅಂತ ಅನಿಸಿಕೋಬ್ಯಾಡಾ. ಅವನ ಬಿಟ್ಟು ಬರೂದರಿಂದ ನಿನಗs ಹಾನಿ ಅದ. ಅವನಿಗೇನು ಮತ್ತೊಂದು ಲಗ್ನಾ ಮಾಡಿಕೋತಾನ. ಮಕ್ಕಳ್ನೂ ಕೊಡದ ನಿನ್ನ ಒದ್ದ ಹೊರಗ

ಹಾಕಿದರ ನೀ ಹ್ಯಾಂಗ ಜೀವ ಹಿಡಕೊಂಡ ಇರತಿ? ಅಂತ ಕೇಳಿದ್ಲು. ನನಗೂ ಅದs ಖರೇ ಅನ್ನಿಸಿ ಅವತ್ತಿನಿಂದ ನನಗ ಏನಾದರೂ ಅವ್ವನ ಮುಂದ ಹೇಳಲಿಲ್ಲಾ. ನಿಮ್ಮಿಬ್ಬರನ್ನು ಅಪ್ಪಿಕೊಂಡು ಅತ್ತ ಬಿಡತಿದ್ದೆ. ಬರಬರತ ವಯಸ್ಸಾದಾಂಗ ಅವರಿಗೂ ಬುದ್ಧಿ ಬದಲಾತು. ಒಳ್ಳೆಯವರಾದರು. ಹಾಸಿಗೆ ಹಿಡಿದ ಮ್ಯಾಲಂತೂ ಒಂದ ಘಳಿಗಿ ನನ್ನ ಬಿಟ್ಟ ಇರತಿದ್ದಿಲ್ಲಾ. ಹಗಲೆಲ್ಲಾ ಗಂಗೂ ಗಂಗೂ ಅಂತ ಬಡಬಡಸತಿದ್ದರು ಸಾಯೂತನಕಾ."

ಗಂಗಮ್ಮನ ಕಣ್ಣೀರು ಕೆಳಗೆ ಉರುಳಿ ಮಾಯವಾದವು. ಮಗಳತ್ತ ನೋಡಿದಾಗ ಕೆನ್ನೆಯ ಮೇಲೆ ಧಾರೆ ಹರಿದಿತ್ತು. "ಛೀ ಹುಚ್ಚಿ ಅಳತಾರೇನ? ಬರೇ ನಿನ್ನ ಬಾಯಿಂದ ಕೇಳಿ ಇಷ್ಟ ಅಳತಿ. ನೋಡಿದ್ದರ ಏನ ಮಾಡತಿದ್ದಿ?" ಸೆರಗಿನಿಂದ ಕೆನ್ನೆ ಒರೆಸಿ ಮಗಳನ್ನು ತಬ್ಬಿದಳು.

ಅಣ್ಣನಿಗೆ ರಜೆ ಸಿಕ್ಕಲಿಲ್ಲ. ಸರೋಜ ಒಬ್ಬಳೇ ಅನುರಾಧಾಳೊಡನೆ ಊರಿಗೆ ಹೊರಟಳು. ಗಂಡನಿಗೆ ತಾರು ಕೊಡಿಸಿದ್ದಳು. ಸ್ಟೇಷನ್ನಿಗೆ ಕರೆಯಲು ಬಂದ ಗಂಡ ಟಾಂಗಾದಲ್ಲಿ ಹತ್ತಿ ಹೆಂಡತಿಯ ಕೆನ್ನೆ ಹಿಂಡಿ "ಎರಡ ತಿಂಗಳದೊಳಗs ಕೆಂಪ ಟೊಮೆಟೋ ಹಣ್ಣ ಆಗೀಯಲ್ಲ" ಎಂದಾಗ ಸರೋಜ ಇನ್ನಷ್ಟು ಕೆಂಪಾದಳು. ಟಾಂಗಾದಲ್ಲಿ ಕುಳಿತಿದ್ದರೂ ಜೋಡಿಕುದುರೆ ಸಾರೋಟಿನ ಮಹಾರಾಣಿಯ ಕನಸು ಕಂಡಳು.

***

■■

# ಮೂಕಸಾಕ್ಷಿ

ಸುತ್ತಲೂ ಕಣ್ಣಿಗೆ ಹಬ್ಬ ಉಂಟುಮಾಡುವಂಥ ಕೈ ತೋಟದ ನಡುವೇ ಅಚ್ಚುಕಟ್ಟಾಗಿ ಸುಂದರವಾಗಿ ಕಟ್ಟಿದಂಥ ಮನೆ. ಮನೆಯಲ್ಲ ಬಂಗ್ಲೆಯೇ ಅನ್ನಬೇಕು. ಅಂಥ ಮನೆಯ ಮುಂದಿನ ಕಂಬ ನಾನು. ಸಿಮೆಂಟ್ ಕಾಂಕ್ರೀಟಿನ ಮೇಲ್ಛಾವಣಿಗೆ ಆಧಾರವಾಗಿ ನಿಂತಿದ್ದೇನೆ. ಇಲ್ಲಿ ನಾನಿದ್ದು ಎರಡು ಮೂರು ದಶಕಗಳಾದರೂ ಕಳೆದಿರಬೇಕು. ಆ ಮನೆಯಲ್ಲಿ ನಡೆಯುವ ಎಲ್ಲ ಕಾರ್ಯಗಳಿಗೂ ಸಾಕ್ಷೀಭೂತನಾಗಿ ನಿಂತಿದ್ದೇನೆ. ಮೂಕನಾಗಿ ಮನೆಯ ಕಡೆಗೊಮ್ಮೆ ನಿಟ್ಟಿಸಿದರೆ ಅದರ ಭೂತ ವರ್ತಮಾನಗಳೆಲ್ಲವೂ ಕಣ್ಣೆದುರು ಸಜೀವ ಚಿತ್ರ ತಳೆಯುತ್ತವೆ. ಈಗ ಸದ್ಯದ ಚಿತ್ರವೆಂದರೆ ಮನೆಯ ಸಾಮಾನುಗಳನ್ನು. ಮಂಚ- ಕನ್ನಡಿಗಳು, ಬೆಲೆಬಾಳುವ ಪೀಠೋಪಕರಣಗಳು ಎಲ್ಲವನ್ನೂ ಮನೆಯ ಮುಂದೆ ನಿಂತಿರುವ ಟ್ರಕ್ಕಿಗೆ ಸಾಗಿಸಿ ಒಂದೊಂದೇ ಕೋಣೆಯನ್ನು ಖಾಲಿಮಾಡಿಸುತ್ತಿದ್ದಾನೆ ಅರವಿಂದ, ನಮ್ಮ ಯಜಮಾನರ ಒಬ್ಬನೇ ಮಗ. ಅವನೇ ಈಗ ಮನೆಯ ಮಾಲೀಕ. ಇಂದು ಬೆಳಗಿನಿಂದಲೂ ಈ ಕೆಲಸ ನಡೆದೇ ಇದೆ. ಎಲ್ಲ ಕೋಣೆಗಳೂ ಖಾಲಿಯಾದ ಮೇಲೆ ಬಾಗಿಲು ಹಾಕುತ್ತ ಬಂದವನು ಕೈಯಲ್ಲೊಂದು ಸೂಟ್‌ಕೇಸ್ ಹಿಡಿದುಕೊಂಡು ಭಾರವಾದ ಹೆಜ್ಜೆಹಾಕುತ್ತ ಗೇಟಿನತ್ತ ಸಾಗಿ ಟ್ರಕ್ಕಿನಲ್ಲಿ ಹತ್ತುವ ಮೊದಲೊಮ್ಮೆ ಹೊರಳಿ ಮನೆಯ ಕಡೆಗೇ ನಿಟ್ಟಿಸುತ್ತಿದ್ದಾನೆ. ಅವನು ನನ್ನನ್ನೇ ದುರುದುರು ನೋಡುತ್ತಿದ್ದಂತೆ ಭಾಸವಾಗುತ್ತಿದೆ ನನಗೆ. ಅವನ ದೃಷ್ಟಿಯಲ್ಲಿಯ ಶೂನ್ಯತೆಯನ್ನು ನೋಡಿ ನನ್ನ ಹೃದಯ ಅಳಹತ್ತಿದೆ. ಅವನು ಪುಟ್ಟ ಕೂಸಿದ್ದಾಗಿನಿಂದಲೂ ಎಷ್ಟೋ ಬಾರಿ ನನ್ನ ಹತ್ತಿರ ಕುಳಿತು ಆಡಿದ್ದುಂಟು. ಅಪ್ಪ ಬೈಯ್ದಾಗ ನನ್ನನ್ನಪ್ಪಿ ಅತ್ತದ್ದುಂಟು. ಅವ್ವ ತಿಂಡಿಕೊಟ್ಟಾಗ ಎಂಜಲು ಕೈಯಿಂದ ನನ್ನನ್ನು ಮುಟ್ಟಿ ಮುಟ್ಟಿ ತಿಂದದ್ದುಂಟು. ಅವನೇನೋ ಮರೆತಿರಬಹುದು. ಆದರೆ ನಾನು ಹೇಗೆ ಮರೆಯಲಿ? ತಂದೆ- ತಾಯಿಗಳನ್ನು ಕಳೆದುಕೊಂಡು, ಮನೆ ಮಾರು ಬಿಟ್ಟು ಪರನಾಡಿಗೆ ಹೊರಟಿರುವ ಅರವಿಂದನನ್ನು ಹತ್ತಿರ ಕರೆದು ತಬ್ಬಿಕೊಂಡು ಸಂತೈಸಲೇ ಎನ್ನಿಸುತ್ತದೆ. ನನ್ನ ಮಾತಿನಿಂದ ಅವನ ಕುದಿಯುತ್ತಿರುವ ಮನಸ್ಸಿಗೆ ಸ್ವಲ್ಪ ಸಮಾಧಾನವಾದರೂ ಸಿಗಬಹುದು. ಆದರೆ ನಾನು ಮಾತನ್ನೂ ಆಡಲಾರೆ. ಕಣ್ಣೀರು ಸುರಿಸಲಾರೆ. ಕಲ್ಲಿನ ಕಂಬ ನಾನು.

ಅರವಿಂದ ಎಲ್ಲವೂ ತಾಯಿಯ ಹೋಲಿಕೆಯೇ. ಅವಳದೇ ದುಂಡು ಮುಖ. ಚೂಪು ಮೂಗು, ಕಪ್ಪುಕಣ್ಣು, ತಿದ್ದಿ ತೀಡಿದ ಹುಬ್ಬು, ಗುಂಗುರು ಕೂದಲು, ತುಂಬು ಚೆಲುವೆ ಅರವಿಂದನ ತಾಯಿ. ಅವಳ ಮದುವೆಯಾಗಿ ಹೊಸ ಮೊದಲಗಿತ್ತಿಯಾಗಿ ಬಂದ ದಿನವೂ ನೆನಪಿದೆ ನನಗೆ.

"ಕಮಲ ಬಲಗಾಲು ಒಳಗಿಟ್ಟು ಬಾರವ್ವ" ಆರತಿ ಬೆಳಗಿದ ಮುತ್ತೈದೆ ಹೇಳಿದ್ದರು. ನಾಚುತ್ತ, ಮುಖ ಕೆಳಗೆ ಹಾಕಿದ್ದ ಕಮಲ ಗಂಡನ ಕೈ ಹಿಡಿದುಕೊಂಡು ಸುಮೂಹೂರ್ತದಲ್ಲಿಯೇ ಮನೆ ತುಂಬಿದ್ದಳು. ಯಜಮಾನರಿಗೆ ಹೆಂಡತಿಯ ಮೇಲೆ ತುಂಬಾ ಪ್ರೀತಿ, ಅಭಿಮಾನ, ಅವಳ ರೂಪದ ಬಗ್ಗೆ ಹೆಮ್ಮೆ. ವರ್ಷಾರು ತಿಂಗಳು ಕಳೆದ ಮೇಲೂ ಗಂಡ ಹೆಂಡತಿ ನನಗೆ ಸಮೀಪವಾಗಿ ಇಟ್ಟ ಕುರ್ಚಿಗಳಲ್ಲಿ ಒರಗಿಕೊಂಡು ಸರಸಸಲ್ಲಾಪ ಮಾಡಿದ್ದು ನೋಡಿದ್ದೇನೆ. ಆಗೆಲ್ಲ ಕಮಲಳ ಮಾತೇ ಇಲ್ಲ. ಗಂಡನೇ ಅವಳ ರೂಪಲಾವಣ್ಯ ಪ್ರಶಂಸೆ ಮಾಡುವದು. ಅವಳು ಸುಮ್ಮನೆ ನಾಚಿ ತಲೆ ತಗ್ಗಿಸಿಬಿಡುವಳು. ಗಂಡನಿಗೆ ನಿದ್ರೆ ಹತ್ತಿದ ಮೇಲೆ ಯಾವಾಗಲಾದರೂ ಒಮ್ಮೆ ಕಮಲ ಹೊರಗೆ ಬಂದು ನನ್ನ ಒರಗಿ ಕುಳಿತುಕೊಂಡು ಆಕಾಶದತ್ತ ನಿಟ್ಟಿಸುವಳು. ಆಗಾಗ ಉಸಿರು ಬಿಡುವಳು, ಕಷ್ಟಪಟ್ಟುಕೊಂಡು ಒಮ್ಮೊಮ್ಮೆ ಉಸಿರುವಳು. 'ದೇವರೆ, ನನ್ನ ರೂಪದ ಬಗ್ಗೆ ಅವರಿಗೆ ಎಷ್ಟು ಮೋಹ. ಆದರೆ ನನ್ನ ಹೃದಯದ ಆಸೆ ಏನೆಂಬುದನ್ನು' ಒಂದು ದಿನವೂ ಕೇಳಲಾರರಲ್ಲ ಎಷ್ಟು ವಿಚಿತ್ರ, ಈ ಜೀವನ' ಎಂದು ಕಣ್ಣೀರು ಉದುರಿಸಿ ಒಳಗೆ ಹೋಗುವಳು. ಆವಾಗೆಲ್ಲ ಅವಳ ದುಃಖದ ಕಾರಣ ತಿಳಿದು ಯಜಮಾನರಿಗೆ ಹೇಳಲೇ ಎಂದು ಕೊಳ್ಳುತ್ತಿದ್ದೆ. ಆದರೆ ನಾನು ಅಸಹಾಯ.

ಒಂದು ಸಲ ಇನ್ನೂ ಅರವಿಂದ ಹುಟ್ಟುವ ಮೊದಲು ಗಂಡ ಹೆಂಡತಿ ಇಬ್ಬರೂ ನಾಲ್ಕಾರು ದಿನಗಳ ಮಟ್ಟಿಗೆ ಊರಿಗೆ ಹೋದರು. ಎಲ್ಲಿ ಎನ್ನುವುದು ಯಾರಿಗೂ ಗೊತ್ತಿರಲಿಲ್ಲ. ಅವರಿಬ್ಬರೂ ತಿರುಗಿ ಬಂದಾಗಲೇ ನಾನು ತಕ್ಷಣ ಕಂಡುಕೊಂಡೆ. ಕಮಲ ಸಂಪೂರ್ಣ ಬದಲಾವಣೆ ಹೊಂದಿದ್ದಾಳೆ ಎನ್ನುವುದನ್ನು. ಅವಳ ಮುಖ ಗಂಭೀರವಾಗಿತ್ತು. ಮೊದಲಿನ ಕೋಮಲತೆ ಮಾಯವಾಗಿ ಸ್ವರದಲ್ಲಿ ಕಾಠಿಣ್ಯ ನೆಲೆಸಿತ್ತು. ಕಣ್ಣುಗಳೂ ವಿಚಿತ್ರವಾಗಿದ್ದವು. ಇದೇನೂ ಒಳ್ಳೆಯದಕ್ಕಲ್ಲ ಎನ್ನುವುದು ನನಗೆ ತಿಳಿಯಿತು. ಒಂದು ದಿನ ಅಡಿಗೆಯವಳು ಮಾಲಿಯ ಹತ್ತಿರ ನಿಂತು ಗುಟ್ಟಿನಲ್ಲಿ 'ಗಂಡಾ ಹೇಣ್ತಿ ಮಲಗೂ ಕ್ವಾಣಿ ಬ್ಯಾರೆ ಆಗ್ಯಾವ' ಎಂದಿದ್ದು ಕೇಳಿ ನನ್ನ ಹೊಟ್ಟೆಯಲ್ಲಿ ಕಸಿವಿಸಿಯಾಯಿತು. ಡಾಕ್ಟರರು ಬರಹತ್ತಿದ್ದು ನೋಡಿ ಕಮಲಳ ಆರೋಗ್ಯ ಚೆನ್ನಾಗಿಲ್ಲ ಎಂದು ತಿಳಿದುಕೊಂಡೆ. ಆಮೇಲೆ ತಿಳಿಯಿತು ಕಮಲ ಗರ್ಭಿಣಿ ಎನ್ನುವುದು. ಓ! ಇಷ್ಟೇನಾ ಸಂಗತಿ ಇನ್ನು ಮುಂದಾದರೂ ಇವರು ಚೆನ್ನಾಗಿ ಬಾಳುವೆ ಮಾಡ್ತಾರೆ ಎಂದು ಸಮಾಧಾನ ಪಟ್ಟುಕೊಂಡೆ. ಆಮೇಲೆ ಅರವಿಂದ ಹುಟ್ಟಿದ ಮೂರು ನಾಲ್ಕು ತಿಂಗಳು ಕಳೆದಿರಬೇಕು, ಒಂದು ರಾತ್ರಿ ಕಮಲ ದಡದಡ ಹೊರಗೆ ಓಡಿ ಬಂದು ನನ್ನನ್ನು ಒರಗಿ ನಿಂತಳು. ಹಿಂದಿನಿಂದ ಯಜಮಾನರೂ ಬಂದರು. ಕಮಲ ನನ್ನನ್ನು ಗಟ್ಟಿಯಾಗಿ ತಬ್ಬಿಕೊಂಡು,

"ನಾನು ನಿಮ್ಮ ಜೊತೆ ರೂಮಿಗೆ ಬರೋದಿಲ್ಲ" ಎಂದಳು.

"ನೀನು ಬರಲೇಬೇಕು. ನಾನು ಎಷ್ಟು ದಿನ ಹೀಗೆ ಇರಲಿ ?"

"ನೀವ್ಯಾಕೆ ಹೀಗೇ ಇರ್ತೀರಿ, ಹೋಗ್ರಿ ಸೂಳೆಗೇರಿಗೆ, ನಾನೇನೂ ಬೇಡ ಅನ್ನೋದಿಲ್ಲ. ನಾನು ಅವತ್ತೇ ಹೇಳಿದ್ದೆ ನಾನಿನ್ನು ನಿಮ್ಮ ಹೆಂಡತಿ ಅಲ್ಲ ಅಂತ. ನೀವು ಒತ್ತಾಯ ಮಾಡಿದರೆ ನಾನು ಈ ಕಂಬಕ್ಕೆ ತಲೆ ಚಚ್ಚಿಕೊಂಡು ಸಾಯ್ತೀನಿ" ಕಮಲ ಜೋರಾಗಿ ಅರಚಿದಳು. ಯಜಮಾನರು ಬೆಪ್ಪರಂತೆ ಕ್ಷಣ ಹೊತ್ತು ನಿಂತು ಒಳಗೆ ಹೋಗಿಬಿಟ್ಟರು. ಐದು ನಿಮಿಷಗಳಲ್ಲೇ ಡ್ರೆಸ್ ಮಾಡಿಕೊಂಡು ಹೊರಗೆ ಬಂದು ಕಾರು ಹತ್ತಿ ಹೋಗಿಬಿಟ್ಟರು. ಕಮಲ ಅದುವರೆಗೂ ನನ್ನನ್ನು ತಬ್ಬಿಕೊಂಡು ಅಳುತ್ತಾ ಇದ್ದಳು. ಕೂಡಲೆ "ಅರವಿಂದೂಽ" ಅಂತ ಕರೀತಾ ಒಳಗೆ ಓಡಿಹೋದಳು. ಬಹಳ ಹೊತ್ತಿನವರೆಗೆ ಅವಳ ಕೋಣೆಯಿಂದ ಬಿಕ್ಕುವ ಧ್ವನಿ ಕೇಳುತ್ತಾ ಇತ್ತು. ಗಂಡನನ್ನು ತಾನೇ ಸ್ವತಃ ಸೂಳೆಗೇರಿಗೆ ಕಳಿಸಿ ಮಗನನ್ನು ತಬ್ಬಿಕೊಂಡು ಅಳುವ ಕಮಲ ನನಗೆ ಸಮಸ್ಯೆಯಾದಳು. ಕುಡಿದು ತೂರಾಡುತ್ತ ಯಜಮಾನರು ಸರಿರಾತ್ರಿಗೆ ಮನೆಗೆ ಬಂದರು. ಆ ಚಿತ್ರ ನನ್ನ ನರನರವನ್ನೆಲ್ಲ ಅಲ್ಲಾಡಿಸಿತು. ಇಲ್ಲಿ ತಪ್ಪು ಯಾರದೆಂದು ತಿಳಿಯದು ನನಗೆ. ಬಾಯಿ ಬಿಟ್ಟು ಕೇಳಬೇಕೆಂದರೆ ನಾನು ಮೂಕ.

ಈ ದಿನಚರಿ ಸುಮಾರು ವರ್ಷಗಳವರೆಗೆ ಸಾಗಿಯೇ ಇತ್ತು. ಒಂದೇ ತರದ ಜೀವನ. ಯಜಮಾನರು ಕಮಲಳನ್ನು ಅವಳ ಪಾಡಿಗೇ ಬಿಟ್ಟರು. ಅವಳನ್ನು ಪ್ರೀತಿಸಲೂ ಇಲ್ಲ, ಜಗಳವಾಡಲೂ ಇಲ್ಲ. ನೋಡುವವರ ಕಣ್ಣಿಗೆ ಅವರಿಬ್ಬರೂ ಒಳ್ಳೆ ದಂಪತಿಗಳು. ಮುತ್ತಿನಂಥ ಒಬ್ಬನೇ ಮಗ, ಹಾಂ ಹೌದು. ಈ ಮಗನಿಂದಾಗಿಯೇ ಮನೆಯಲ್ಲಿ ಜೀವಕಳೆಯಿತ್ತು. ಅವನ ಪಾಲನೆ ಪೋಷಣೆಗಾಗಿಯೇ ತಾನು ಬದುಕಿ ಇರುವುದು ಎನ್ನುವುದು ಕಮಲಳ ಭಾವನೆ. ಅವನು ನಕ್ಕರೆ ನಗುವಳು, ಅತ್ತರೆ ಅಳುವಳು. ಅವನಿಗೆ ಕಾಯಿಲೆಯಾದರೆ ಪ್ರಾಣವನ್ನೇ ಪಣವಾಗಿಟ್ಟು ಆರೈಕೆ ಮಾಡುವಳು. ತಾಯಿಯ ರೂಪ ಹೊತ್ತ ಅರವಿಂದ ಸುಂದರವಾಗಿ ಬೆಳೆದ. ತಾಯಿಯ ಮೇಲೆ ಅವನಿಗೆ ಪ್ರೀತಿ ಎಷ್ಟೋ ಅಷ್ಟೇ ತಂದೆಯ ಬಗ್ಗೆ ಭಯ, ಗೌರವ.

ಒಂದು ದಿನ ಬೆಳಗಿನ ಪತ್ರಿಕೆ ಓದುತ್ತ ಕುಳಿತ ಕಮಲ ಕುರ್ಚಿಯಿಂದ ದಡಕ್ಕನೆ ಎದ್ದು ಬಂದವಳೇ ನನ್ನನ್ನಪ್ಪಿ ಹಿಡಿದು ಬಿಕ್ಕಿ ಬಿಕ್ಕಿ ಅತ್ತಳು. ಯಜಮಾನರು ಅವಳು ತೋರಿಸಿದ ವಾರ್ತೆಯನ್ನೋದಿ ಪತ್ರಿಕೆ ಕೆಳಗೆ ಚೆಲ್ಲಿ ಹೋಗಿಬಿಟ್ಟರು. ನನಗೇನೂ ತೋಚಲಿಲ್ಲ. ಅಳುವಿನ ಆವೇಗವೆಲ್ಲ ಕಡಿಮೆಯಾದ ಮೇಲೆ ತಾನೇನು ಮಾಡುತ್ತಿರುವೆ ಎನ್ನುವ ಎಚ್ಚರಿಕೆ ಇಲ್ಲದವರಂತೆ ಕಮಲ ಹಣೆಯ ಕುಂಕುಮ ಅಳಿಸಿ ಹಾಕಿಬಿಟ್ಟಳು. ಅವಳ ಈ

ಕೆಲಸ ನೋಡಿದಾಗ ನನ್ನ ಎದೆ ಝಲ್ಲೆಂದಿತು. ಇದರಿಂದ ಇನ್ನೂ ಏನು ಅನಾಹುತ ಕಾದಿದೆಯೋ ಎಂದು ಕಳವಳವಾಯಿತು. ಅಂದು ಅಳಿಸಿದ ಕುಂಕುಮವನ್ನು ಕಮಲ ತಿರುಗಿ ಎಂದೂ ಹಚ್ಚಲಿಲ್ಲ. ಯಜಮಾನರು ಜೀವಂತ ಇರುವಾಗಲೇ ವಿಧವೆಯ ವೇಷ ತೊಟ್ಟ ಕಮಲಳ ಬಗ್ಗೆ ನನಗೆ ಮೊದಲ ಬಾರಿ ತಾತ್ಸಾರ ಮೂಡಿತು. ಅವಳನ್ನು ಹೀಗಳೆಯಬೇಕು ಎನ್ನಿಸಿತು. ಆದರೆ ನಾನು ಅಸಮರ್ಥನಾಗಿದ್ದೆ. ನನ್ನ ಕೆಲಸವನ್ನು ಅರವಿಂದ ಮಾಡಿದ. ಅಂದು ರಾತ್ರಿಯ ಊಟ ತೀರಿಸಿಕೊಂಡು ಹೊರಗೆ ಬಂದು ನನ್ನ ಬಳಿಗೆ ಬಂದು ಕುಳಿತಿದ್ದರು ಮೂವರೂ. ಮನೆಯ ಕೆಲಸದವರಿಗೆ ಕೇಳಿಸದಂತೆ ತಗ್ಗಿದ ಧ್ವನಿಯಲ್ಲಿ ಅರವಿಂದ ಮಾತು ಪ್ರಾರಂಭಿಸಿದ.

"ಅವ್ವಾ, ಇದೇನು ನಿನ್ನ ಅವತಾರ, ಕುಂಕುಮಾ ಯಾಕೆ ಹಚ್ಚಿಲ್ಲಾ?"

"ಅರವಿಂದ, ನಾನು ಇವತ್ತೆ ಕುಂಕುಮಾ ಅಳಿಸಿದೆ. ಇನ್ನು ಎಂದೂ ಹಚ್ಚೂದಿಲ್ಲಾ" ಧ್ವನಿಯಲ್ಲಿ ನಿರ್ಧಾರವಿತ್ತು.

"ಅದಕ್ಕS ಯಾಕೆ ಅಳಿಸಿದೀ ಅಂತ ಕೇಳಿದೆ. ಅಪ್ಪ ಬದುಕಿ ಇರುವಾಗಲೇ ನೀನು ಬರೀ ಹಣೆಯಲ್ಲಿ ಇರೋದು ಅಂದರ ಎಂಥಾ ಮಾತು ಇದು? ಇದಕ್ಕೇನರೆ ಕಾರಣ ಅದS ಏನು ?"

"ಕಾರಣ ಅದ ಅರವಿಂದಾS ಆದರ ನೀ ಕೇಳಬ್ಯಾಡಾ ನಾ ಹೇಳುದಿಲ್ಲಾ."

"ನಾನೂ ಈಗ ದೊಡ್ಡಾಂವ ಆಗೀನಿ, ಕೇಳಲಿಕ್ಕೆ ಅಧಿಕಾರ ಅದ ನನಗ. ನೀ ನನಗೆ ಹೇಳಲಿಕ್ಕೇಬೇಕು."

"ಅದನ್ನು ಹೇಳೋದರಿಂದ ಯಾರಿಗೂ ಸಂತೋಷ ಇಲ್ಲಪ್ಪಾ. ಸುಮ್ಮನೆ ದುಃಖವೇ ಆಗ್ತದ. ಇದೊಂದು ಮಾತು ಕೇಳಬ್ಯಾಡಾ. ಹೇಳಬಾರದು ಅಂತ ನಾನು ನಿರ್ಧಾರ ಮಾಡೀನಿ" ಕಮಲ ಅಳುತ್ತ ಎದ್ದು ಒಳಗೆ ಹೋಗಿಬಿಟ್ಟಳು. ಯಜಮಾನರು ಮುಖ ಕೆಳಗೆ ಹಾಕಿ ಸುಮ್ಮನೆ ಕುಳಿತಿದ್ದು ನೋಡಿ ಅರವಿಂದ ಹುಚ್ಚನಂತೆ ಗಟ್ಟಿಯಾಗಿ ತಂದೆಯ ಕೈ ಹಿಡಿದು ಅಲುಗಾಡಿಸಿ ಕೇಳಿದ." "ಅಪ್ಪಾS ನೀವೂ ಆದೀರಲ್ಲ ಹಿಂಗ್ಯಾಕೆ? ಏನಾಗಿದೆ?"

ಯಜಮಾನರು ಮುಖ ಮೇಲೆತ್ತಿದಾಗ ಅವರ ಕಣ್ಣುಗಳಲ್ಲಿ ವಿಚಿತ್ರ ದ್ವೇಷ ಉಕ್ಕುತ್ತಿತ್ತು. "ಅರವಿಂದ, ನಿನ್ನಿನ ಪೇಪರಿನ್ಯಾಗ ಅವಳ ಪ್ರಿಯಕರ ತೀರಿಕೊಂಡ ಅಂತ ಸುದ್ದಿ ಬಂದಿತು. ಅದಕ್ಕS ಈ ವೇಷಾ ಹಾಕ್ಯಾಳ. ಆಕಿ ಇನ್ನೂ ಅವನ್ನS ಪ್ರೀತಿ ಮಾಡತಾಳಂತ. ಇದೆಲ್ಲ ಗೊತ್ತಾಗಿ ಸಂಸಾರದಾಗ ಏನೂ ಸುಖಾ ಇಲ್ಲಂತಲೇ ನಾನು ಕುಡೀಲಿಕ್ಕೆ ಸುರು ಮಾಡಿದ್ದು. ಮೊದಲ ಕುಡಿತಿದ್ದಿಲ್ಲಾ. ಬೆಳೆದ ಮಗ ಗೆಳೆಯನ ಸಮಾನ ಅಂತ ನಿನ್ನ ಮುಂದೆ ಹೇಳತೀನಿ" ತಂದೆಯ ಮಾತು ಮುಗಿಯುವ ಮೊದಲೇ ಅರವಿಂದ 'ಶಟಪ್' ಎಂದು ಚೀರುತ್ತ ಎದ್ದು ನಿಂತು ಭರಭರ ತನ್ನ ಕೋಣೆಗೆ ಹೋಗಿಬಿಟ್ಟ.

ಮರುದಿನ ಅರವಿಂದ ಆ ಊರು ಬಿಟ್ಟು ಬೇರೆ ಊರಿಗೆ ಹೋಗಿ ಕಾಲೇಜು ಸೇರಿಕೊಂಡ. ಹಾಸ್ಟೆಲಿನ ಜೀವನ ಪ್ರಾರಂಭಿಸಿದ. ಅದಕ್ಕೆಲ್ಲಾ ಅವನ ತಂದೆಯ ಒಪ್ಪಿಗೆ ಇತ್ತು. ಹಣದ ಸಹಾಯವೂ ಇತ್ತು ಎನ್ನುವುದು ಕಮಲಳಿಗೆ ಗೊತ್ತಿತ್ತು. ಹೋಗುವಾಗ ಮಗ ಹೋಗಿಬರ್ತೀನಿ ಅಂತ ಕೂಡಿ ಕಮಲಳಿಗೆ ಹೇಳಿರಲಿಲ್ಲ. ಅಂದು ರಾತ್ರಿ ಇಡೀ ಕಮಲ ನನ್ನನ್ನೊರಗಿ ಕುಳಿತು ಗೇಟಿನ ಕಡೆಗೆ ಕಡೆಗೆ ದೃಷ್ಟಿಸುತ್ತಾ, ಹುಚ್ಚಿಯಂತೆ ಕುಳಿತಿದ್ದಳು. ಮುಂದೆ ಒಂದು ವಾರದವರೆಗೂ ಮಂಕಾಗಿಯೇ ಇದ್ದಳು. ತಲೆ ಬಾಚಿರಲಿಲ್ಲ. ಸೀರೆ ಬದಲಿಸಿರಲಿಲ್ಲ, ಕುಂಕುಮವನ್ನಂತೂ ಎಂದೋ ಬಿಟ್ಟಿದ್ದಳು. ಹಸಿವಾದಾಗ ಹೊಟ್ಟೆಗೆ ಅಷ್ಟಿಷ್ಟು ತಿಂದು ಜೀವ ಹಿಡಿದಿದ್ದಳು. ಏನನ್ನೋ ದಾರಿ ಕಾಯುತ್ತಿರುವಂತೆ ಕಾಣುತ್ತಿತ್ತು. ಎಂಟನೇ ದಿನ ಪೋಸ್ಟ್‌ಮನ್ ಬಂದಾಗ ಅವಳ ಕೈಗೆ ಒಂದು ಕವರು ಕೊಟ್ಟು ಹೋದ. ಅದನ್ನು ಹಿಂದೆ ಮುಂದೆ ತಿರುಗಿಸಿ ಕಣ್ಣಿಗೆ ಸಮೀಪ ಹಿಡಿದು ನೋಡಿದವಳು ಅಷ್ಟೇ. ಅದನ್ನು ಒಡೆದು ಓದಲಿಲ್ಲ. ಕಣ್ಣುಗಳಲ್ಲಿ ನಿರಾಶೆಯೊಡನೆ ನೀರು ಉಕ್ಕುತ್ತಿತ್ತು. ಮಗ ತಂದೆ ಹೆಸರಿಗೆ ಪತ್ರ ಬರೆದಿದ್ದ, ಅವಳಿಗೊಂದು ದೊಡ್ಡ ಆಘಾತವಾಗಿತ್ತು. ಯಜಮಾನರು ಪತ್ರ ಒಡೆದು ಓದಿ ಅವಳ ಕೈಯಲ್ಲಿಟ್ಟು ಸಡಗರದಿಂದ ಒಳಗೆ ಹೋದರು.

ನನ್ನನ್ನು ಒರಗಿ ನಿಂತುಕೊಂಡೇ ನಡಗುವ ಕೈಗಳಿಂದ ಅವಳು ಪತ್ರ ಬಿಚ್ಚಿದಳು. ಮಗ ತಾಯಿಯ ನಡತೆಯ ಬಗ್ಗೆ ತುಂಬ ತಿರಸ್ಕಾರ ತೋರಿಸಿ ಇಂಥ ತಾಯಿಯಿಂದಾಗಿ ತಾನು ಸಮಾಜದಲ್ಲಿ ತಲೆ ಎತ್ತಿ ತಿರುಗುವುದೇ ಅಸಾಧ್ಯವಾಗಿದೆ ಎಂದು ಹೇಳಿ, ತಾನು ಮನೆಗೆ ಬರಬೇಕಾದರೆ ವಿಧವಾ ವೇಷ ತೊರೆದು ಕುಂಕುಮ ಹಚ್ಚಬೇಕೆಂದೂ ಅಲ್ಲಿಯವರೆಗೆ ಅವಳ ಮುಖ ನೋಡಲಾರೆನೆಂದೂ ಬರೆದಿದ್ದ. ಪತ್ರ ಕೈಯಿಂದ ಜಾರಿ ಬಿದ್ದಿತು. ಕೆಳಗೆ ಕುಸಿದು ಮುಖ ಮುಚ್ಚಿ ಅಳತೊಡಗಿದಳು. ಅದುವರೆಗೂ ಅವಳು ಹೀಗೆ ಅತ್ತಿದ್ದನ್ನು ನಾನು ನೋಡಿರಲಿಲ್ಲ. ಸಂಸಾರದ ಒಡಕನ್ನು ಮುಚ್ಚಿಕೊಂಡು ನಗುತ್ತಲೇ ಬದುಕಿದ್ದಳು. ಕೊಂಚ ಹೊತ್ತು ಕಳೆದು ಒಳಗೆ ಹೋದಳು. ತಿರುಗಿ ಬರುವಾಗ ಅವಳ ಕೈಯಲ್ಲಿ ತಾಗದ ಪೆನ್ನು ಇತ್ತು. ದೃಢ ನಿರ್ಧಾರ ಮಾಡಿದವರಂತೆ ಗಂಭೀರಳಾಗಿದ್ದಳು. ನನಗೆ ಒರಗಿ ಕುಳಿತು ಮಗನಿಗೆ ಕಾಗದ ಬರೆಯತೊಡಗಿದಳು. ನಾನೂ ಇಣಿಕಿದೆ ಕುತೂಹಲದಿಂದ.

ಮೈಮರೆತು ನಾನು ಕಾಗದ ಓದುತ್ತಿದ್ದಾಗ ಯಜಮಾನರು ಯಾವಾಗ ಬಂದಿದ್ದರೋ ತಿಳಿಯಲಾರದೆ ಹೋದ ಅವಳ ಕೊನೆಯ ಸಾಲು ಬರೆಯುತ್ತಿದ್ದಾಗ ಯಜಮಾನರು ಸಿಟ್ಟಿನಿಂದ ಸರಕ್ಕನೆ ಪತ್ರ ಕಸಿದವರೇ ಚರಚರ ಹರಿದೊಗೆದು, ಕಾಲಲ್ಲಿ ಹೊಸೆದು ಕಮಲಳ ರಟ್ಟೆ ಹಿಡಿದು ಅಲುಗಾಡಿಸುತ್ತಾ ಕೂಗಿದರು. 'ಕಮಲೀ, ನೀತಿಗೆಟ್ಟೋಳೆS ಮಗನಿಗೆ ಪತ್ರ ಬರೆದು ನನ್ನಮ್ಯಾಲೆ ಆರೋಪ ಹೊರಿಸಿ ಮುಖಕ್ಕೆ ಮಸೀ ಹಚ್ಚತೀಯಾ?' ಎನ್ನುತ್ತ ಅವಳ ಮೈ ಮುಖ ನೋಡದೆ ದಬದಬ ಹೊಡೆದರು. ಕಮಲ ಬೆಚ್ಚಲಿಲ್ಲ, ಬೆದರಲಿಲ್ಲ. ಅಳಲೂ ಇಲ್ಲ. ಮುಖ ಕೆಂಪಗೆ ನಾಡಿಕೊಂಡು 'ನೀತಿ ನಾನು ಕೆಡಲಿಲ್ಲ, ನೀವೆ ನಿಂತು ಕೆಡಿಸಿದರಿ. ಅರವಿಂದನಿಗೆ ಸತ್ಯ ಏನೆಂದು ತಿಳಿಸಬೇಕು ನಾನು' ಎಂದು ಚೀರಿದಳು. ಯಜಮಾನರು ಥರ ಥರ ಕಂಪಿಸುತ್ತ ತಾವೇನು ಮಾಡುತ್ತಿರುವರೋ ತಿಳಿಯದೆ ಗಟ್ಟಿಯಾಗಿ ಹಿಡಿದು ಅವಳ ತಲೆಯನ್ನು ನನಗೆ ಅಪ್ಪಳಿಸತೊಡಗಿದರು. ತಲೆಯೊಡೆದು ಮಿದುಳು ಹೊರಬಿತ್ತು. ನನ್ನ ಮೈಯೆಲ್ಲ ರಕ್ತ ರಂಜಿತವಾಯಿತು. ಇವರ ಏರಿದ ಧ್ವನಿ ಕೇಳಿ ಓಡಿ ಬಂದಿದ್ದ ಅಡಿಗೆಯವಳು, ವಾಚಮನ್, ಬಿಟ್ಟಕಣ್ಣು ಬಿಟ್ಟ ಹಾಗೆಯೇ ನೋಡುತ್ತ ನಿಂತಲ್ಲೇ ಕಲ್ಲಾಗಿದ್ದರು. ನನ್ನ ಹಾಗೆ, ಕುಸಿದು ಬಿದ್ದ ಕಮಲ ತಲೆಯೊಡೆದು ಮುಖಕ್ಕೆ ಹರಿದ ರಕ್ತವನ್ನೇ ನಾಲಿಗೆಯಿಂದ 'ಉಂ ಉಂ' ಎನ್ನುತ್ತ ಜೀವ ಬಿಟ್ಟಳು. ಪೋಲಿಸರು ಬರುವ ಮೊದಲು ಪತ್ರದ ಚೂರುಗಳನ್ನೆಲ್ಲ ಸೇರಿಸಿ ಯಜಮಾನರು ಸುಟ್ಟುಬಿಟ್ಟರು. ಶವ ಪೋಸ್ಟ್‌ಮಾರ್ಟಂಗೆ ಕಳಿಸಿ ಯಜಮಾನರಿಗೆ ಬೇಡಿ ಹಾಕಿದರು. ಮನೆ ಸ್ಮಶಾನವಾಯಿತು.

ತಾಯಿ ಸತ್ತು ಹೋದಳು. ಅವಳ ನಡತೆಗಾಗಿಯೇ ತಂದೆ ಅವಳನ್ನು ಕೊಂದರೆಂದು ಮಗನ ಭಾವನೆ. ಕುತ್ತಿಗೆಯವರೆಗೆ ಕಹಿಯನ್ನು ತುಂಬಿಕೊಂಡು ಮಗ ಹೊರಟಿದ್ದಾನೆ. ಜೇಲಿಗೆ ಹೋದ ತಂದೆಯ ಬಗ್ಗೆ ಅವನಿಗೆ ಪ್ರೀತಿ, ಕನಿಕರ, ಸಹಾನುಭೂತಿ ಎಲ್ಲವೂ ಇದೆ. ಆದರೆ ತಾಯಿಯ ಬಗ್ಗೆ, ಛೇ ಮನೆಯಲ್ಲಿದ್ದ ಅವಳ ದೊಡ್ಡ ಭಾವಚಿತ್ರವನ್ನು ನಿರ್ದಯನಾಗಿ ಒಡೆದು ಚೂರು ಚೂರು ಮಾಡಿದಾಗಲೇ ತಿಳಿದುಕೊಂಡೆ ಅವನಲ್ಲಿದ್ದ ತಿರಸ್ಕಾರ ಎಷ್ಟೆಂಬುದನ್ನು. ಅವಳ ರಕ್ತ ಇನ್ನೂ ನನ್ನ ಮೈಗೆ ಅಂಟಿಕೊಂಡಂತಾಗಿ ಥರಥರ ನಡುಗುತ್ತೇನೆ. ಛೇ ಪಾಪ ಕಮಲಳ ಪತ್ರ ಮಗನ ಕೈಗೆ ಸಿಕ್ಕಿದರೆ ಎನ್ನುವ ಯೋಚನೆ ಬಂದಾಗ ಅದಕ್ಕೆ ಮೂಕಸಾಕ್ಷಿಯಾಗಿ ನಿಂತ ನನ್ನನ್ನೇ ನಾನೇ ಶಪಿಸಿಕೊಳ್ಳುತ್ತೇನೆ, ನಾನಾದರೂ ಅದನ್ನು ಯಾರೆದುರು ಹೇಳಲಿ? ಹೇಳದೆ ಹೇಗಿರಲಿ? ಅದರ ಒಂದೊಂದು ಅಕ್ಷರವೂ ಇನ್ನೂ ನನ್ನ ಕಣ್ಣೆದುರು ಸ್ಫುಟವಾಗಿ ಮೂಡಿವೆ. ನನಗಂತೂ ಆ ಗುಟ್ಟನ್ನು ನನ್ನಲ್ಲೇ ಇಟ್ಟುಕೊಂಡಿರಲು ಸಾಧ್ಯವಿಲ್ಲ. ಅರವಿಂದನಿಗೆ ಕೇಳಿಸಲಿ - ಕೇಳದಿರಲಿ ಗಾಳಿಗಾದರೂ ಹೇಳಿಬಿಡುತ್ತೇನೆ. ಪತ್ರದಲ್ಲಿ ಹೀಗಿತ್ತು.

ಪ್ರಿಯ ಮಗೂ ಅರವಿಂದ

ನನಗೀಗ ನಲವತ್ತು ವರುಷ. ಮದುವೆಯಾಗಿ ಇಪ್ಪತ್ತೆರಡು ವರುಷ ಕಳೆದಿವೆ. ಇಷ್ಟು ವರ್ಷ ನನ್ನ ಬಾಳಿನ ದುರಂತ ಚಿತ್ರವೊಂದನ್ನು ಮುಚ್ಚಿಟ್ಟುಕೊಂಡು ನಗುನಗುತ್ತ ಬಾಳುವೆ ಮಾಡುತ್ತ ನಿನ್ನನ್ನು ಬೆಳೆಸಿ ದೊಡ್ಡವನನ್ನಾಗಿ

ಮಾಡಿದೆ. ಇನ್ನು ಮುಂದೆಯೂ ಹೀಗೆ ನಡೆದಿದ್ದರೆ ನಾನು ಸುಖವಾಗಿ ಸತ್ತುಹೋಗುತ್ತಿದ್ದೆ. ನನ್ನ ಬದುಕಿನ ಶಾಪ ನಿನಗೆ ತಟ್ಟುತ್ತಿರಲಿಲ್ಲ. ಆದರೆ ನನ್ನ ಪ್ರಾರಬ್ಧ ಈಗ ನೀನು ನನ್ನ ನಡತೆಯನ್ನೇ ಶಂಕಿಸುತ್ತಿದ್ದೀ. ಮಗನು ತಾಯಿಯ ಬಗ್ಗೆ ತಿರಸ್ಕಾರ ತೋರಿದರೆ ಯಾವ ತಾಯಿಯೂ ತಡೆದುಕೊಳ್ಳಲು ಸಾಧ್ಯವಿಲ್ಲ. ನೀನಂತೂ ನನ್ನ ಎರಡನೆಯ ಜೀವ. ನಿನಗಾಗಿಯೇ ನಾನು ಬದುಕಿ ಇರುವದು. ನೀನು ಕೇಳಿದ ಪ್ರಶ್ನೆಗೆ ನಾನೀಗ ಉತ್ತರ ಹೇಳುತ್ತಿದ್ದೇನೆ. ಅದರ ಆಘಾತವನ್ನು ನೀನು ಹೇಗೆ ಸಹಿಸಿಕೊಳ್ಳುವಿಯೋ ಎಂದು ಕನಿಕರ ಉಂಟಾಗುತ್ತದೆ.

ನಾನು ನಿನ್ನ ತಂದೆಯ ಮನೆಗೆ ಹೊಸ ಮೊದಲಗಿತ್ತಿಯಾಗಿ ಬಂದ ವರುಷದಲ್ಲಿಯೇ ಅವರು ನನ್ನ ಶೀಲವನ್ನೇ ಸೂರೆ ಮಾಡಿ ತಮ್ಮ ಸಂಪತ್ತು ಹೆಚ್ಚಿಸಿಕೊಳ್ಳುವ ಕೆಲಸ ಕೈಕೊಂಡರು. ಅದೇ ದಿನವೇ ನಾನು ಅವರಿಗೆ ಹೇಳಿದೆ, ಇಂದಿನಿಂದ ನಾನು ನಿಮ್ಮ ಹೆಂಡತಿಯಲ್ಲವೆಂದು, ಅದೇ ರೀತಿ ಇಂದಿನವರೆಗೂ ಬಾಳಿದೆ. ಅವರು ವಂಚನೆಯಿಂದ ಯಾವ ಅಧಿಕಾರಿಯ ಹತ್ತಿರ ಕಳಿಸಿದರೂ ಅವರೇ ನಿನ್ನ ತಂದೆ. ಮೊನ್ನೆ ತೀರಿಕೊಂಡವರೂ ಅವರೇ....

***

■■

# ಆಸರೆ

ಸುಕ್ಕುಗಟ್ಟಿದ ಕೆನ್ನೆಗಳನ್ನು ಉಬ್ಬಿಸಿ ಒಲೆ ಊದಿ ಊದಿ ಬೇಸತ್ತ ಗಂಗಮ್ಮ ಕೆಳಗೆ ಹಕ್ಕೆಯಲ್ಲಿ ಸಗಣಿ ಬಳಿಯುತ್ತಿದ್ದ ಮಗಳಿಗೆ ಕೂಗಿದಳು "ಮಾಂತೂ, ಏ ಮಾಂತವ್ವ ಒಂದೀಟು ಒಣಾ ಚಿಪ್ಪಾಡಿ ಇದ್ದರ ಒಗೀಯವ್ವಾ ಇತ್ಲಾಗ, ಒಲಿ ಊದಿ ಊದಿ ಗಂಟಲು ಒಣಗಿ ಹೋತು. ಇನ್ನೂ ಉರಿನಽ ಏಳವಲ್ದು. ನೀರು ಕುದ್ದೇ ಇಲ್ಲ."

ಅವ್ವನ ಕರೆ ಕೇಳಿಸಿಕೊಂಡಿದ್ದ ಮಾಂತವ್ವ ಮಾತಾಡದೆ ಸಗಣಿ ಕೈಯಿಂದಲೇ ಚಿಪ್ಪಾಡಿ ದಂಟಿನ ರಾಶಿಯಲ್ಲಿ ಒಣದಾಗಿದ್ದನ್ನು ಹುಡುಕಿ ತೆಕ್ಕೆಯಲ್ಲಿ ತಂದು ಕಟ್ಟೆ ಹತ್ತಿ ಮೇಲೆ ಬಂದು ಒಲೆಯ ಮುಂದೆ ಸುರಿದಳು. ಅವಳ ಸ್ವಭಾವವೇ ಹಾಗೆ. ದಿನದಲ್ಲಿ ಎಷ್ಟು ಬೇಕೋ ಅಷ್ಟೇ ಮಾತು. ಉಳಿದ ಹೊತ್ತಿನಲ್ಲೆಲ್ಲಾ ಕೆಲಸ ಕೆಲಸ. ಆ ಹೊತ್ತಿನಲ್ಲೂ ಬೇರೆಯವರ ಪ್ರಶ್ನೆಗೆ ಇವಳು ಕೊಟ್ಟಷ್ಟೇ ಉತ್ತರ. ಜನದ ಬಾಯಲ್ಲಿ ಮಹಾಂತವ್ವ ಎನ್ನುವ ಹೆಸರು ಮರೆಯಾಗಿ, ಮಾಂತವ್ವ ಮಾಂತಿ, ಮೂಕವ್ವ -ಇನ್ನು ಏನೇನೋ ಹೆಸರು ಹುಟ್ಟಿದ್ದವು. ಅದಕ್ಕೂ ಅವಳ ಆಕ್ಷೇಪಣೆಯಿಲ್ಲ. ಇವಳೇನು ಮನುಷ್ಯಳೋ ದುಡಿಯುವ ಯಂತ್ರವೋ ಎನ್ನುವಂತಿದ್ದಳು. ಗಂಡಸರು ದಿಕ್ಕಿಲ್ಲದ ಆ ಮನೆಗೆ ಅವಳು ಸಾಕಿದ ಎಮ್ಮೆಯ ಹೈನು ಆಧಾರ. ಹಾಲುಬೆಣ್ಣೆ ಹೊತ್ತು ಒಯ್ದು ಹತ್ತಿರದ ಪಟ್ಟಣದ ಪೇಟೆಗೆ ಮಾರಿದಾಗ ತಾಯಿ ಮಗಳ ಹೊಟ್ಟೆಯ ಚಿಂತೆ ಹರಿಯುವುದು. ಬೆರಳು ಸಂದಿನಿಂದ ಸೋರಿಬಿದ್ದ ಸೆಗಣಿಯನ್ನು ಅಂಗೈ ಹಚ್ಚಿ ಬಳಿಯುತ್ತಿದ್ದ ಮಗಳನ್ನು ನೋಡಿ ನಿಟ್ಟುಸಿರುಬಿಟ್ಟ ಗಂಗಮ್ಮ ಒಣದಂಟು ಒಲೆಯಲ್ಲಿಟ್ಟು 'ಉಫ್' ಎಂದಾಗ ಉರಿ ಭಗ್ ಎಂದು ಹೊತ್ತಿಕೊಂಡಿತು.

"ಚಿಗವ್ವಬೇ, ಬೇ ಚಿಗವ್ವಾಽ" ಬಾಗಿಲಿನ ಹೊರಗೇ ನಿಂತು ಕೂಗು ಹಾಕಿದ ಮಲ್ಲನ ದನಿಗೆ ಗುಡಿಸಲ ಚಾವಣಿಯೇ ನಡುಗಿತು. "ಚಿಗವ್ವಾಽ ಗುರಪ್ಪ ಮಾವ ಸತ್ತಾ. ಶಾರದಿಂದ ಡಾಕ್ಟರು ಬಂದಿದ್ರು. ಇಂಜೆಕ್ಷನ್ ಕೊಟ್ರು. ಆದ್ರೂ ಸತ್ತಾ. ದೊಡ್ಡ ಗೌಡರು ನಿಮಗ ಹೇಳು ಅಂದ್ರು" ಎನ್ನುತ್ತಲೇ ಮತ್ತೆ ಓಡಿದ ಮಲ್ಲ ಸಾವಿನ ಮನೆಗೆ.

ಗಂಗಮ್ಮ ಎದ್ದು ಬಂದವಳೇ ಮಗಳನ್ನು ತೆಕ್ಕೆಯಲ್ಲಿ ಹಿಡಿದು ಬೋರಾಡಿ ಅತ್ತಳು. "ಯವ್ವೋ ನಾ ಹ್ಯಾಂಗ ಮಾಡ್ಲೇ ನಿನ ಗಂಡ ಸತ್ತಾ. ಇನ್ನೇನ ಗತಿಯಬೇ, ಯವ್ವೋ ಶಿವನೇ."

ಏನೂ ತಿಳಿಯದವಳಂತೆ ಮಾಂತವ್ವ ಅವ್ವನ ಮುಖ ಕ್ಷಣ ಹೊತ್ತು ನಿಟ್ಟಿಸಿ ನೋಡಿ ನಂತರ ಅವಳ ಕೈಯಿಂದ ಬಿಡಿಸಿಕೊಂಡು ಕಟ್ಟಿ ಇಳಿದು, ಸಗಣಿಗೆ ಕೈ ಹಾಕಲು ಹೊರಟಳು. ಮಗಳ ಕೈಹಿಡಿದು ಎಳೆದು ಗಂಗಮ್ಮ ಕಟ್ಟೆಯ ಮೇಲೆ ಕೂಡ್ರಿಸಿ ಅವಳನ್ನು ಅಪ್ಪಿಕೊಂಡು ಬಾಯಿಬಾಯಿ ಬಡಿದುಕೊಂಡಳು.

"ದೇವರು ಹೆಂತಾ ಹೊತ್ತು ತಂದ್ನೇ ನಮಗ. ಕುಂಕುಮ ಇಲ್ಲದ ನಿನ್ನ ಹಾಳ ಹಣಿ ಹ್ಯಾಂಗ ನೋಡಲೇ ನಾನೂಽ, ನನ್ನ ಕಣ್ಣ ಮುಂದಽ ರಂಡಿಮುಂಡಿ ಆದ್ಯಲ್ಲಽ. ನನ್ನ ನಸೀಬು ಖೊಟ್ಟಿ ಅದ. ದೇವರು ನನ್ನ ಯಾಕ ಉಳಿಸಿದ್ನೇ ಇದನ್ನೆಲ್ಲಾ ನೋಡಾಕಽ" ಅವಳ ದನಿ ಕೇಳಿಯೋ, ಗುರಪ್ಪ ಸತ್ತ ಸುದ್ದಿ ತಿಳಿದೋ ಸುತ್ತಮುತ್ತಿನ ಜನ ಕೂಡಿದರು. ಕಟ್ಟೆ ಹತ್ತಿ ಮೇಲೆ ಬಂದ ಹೆಂಗಸರು, ಗಂಡ ಸತ್ತರೂ ಕಣ್ಣಲ್ಲ ಒಂದು ಹನಿ ನೀರೂ ಹಾಕದೆ ಸುಮ್ಮನೆ ಕುಳಿತು ಒಲೆಯ ಉರಿಯನ್ನೇ ದಿಟ್ಟಿಸುತ್ತಿದ್ದ ಮಾಂತವ್ವನನ್ನು ಬಿಳಿ ಪಿಳಿ ನೋಡಿದರು.

ಸಾಕಷ್ಟು ಜನ ಸೇರಿದ ಮೇಲೆ ತನ್ನ ಬೆಂಗಾವಲಿಗೆ ಜನ ಇದ್ದಾರೆನ್ನುವ ಧೈರ್ಯದಿಂದ ಗಂಗಮ್ಮ ಮಗಳ ರಟ್ಟೆಗೆ ಕೈಹಾಕಿ ಎಬ್ಬಿಸಿ ಒತ್ತಾಯದಿಂದ ಅರ್ಧ ಎಳೆದುಕೊಂಡು , ಅರ್ಧ ನಡೆಸಿಕೊಂಡು, ಮೊದಲು ತಮ್ಮನಾಗಿ ಹುಟ್ಟಿ ಆಮೇಲೆ ಮಗಳ ಕೈಹಿಡಿದು ಅಳಿಯನಾಗಿದ್ದ ಗುರಪ್ಪನ ಮನೆಗೆ ಹೊರಟಳು. ಅವನ ಸೂಳೆ ಯಮನವ್ವನ

ಅಳು ಬೀದಿಗೇ ಕೇಳಿಸುತ್ತಿತ್ತು. ಗಂಡನ ಹೆಣ ಕಂಡರೂ ದುಃಖ ಪ್ರದರ್ಶನ ಮಾಡದೆ ಸುಮ್ಮನಿದ್ದ ಮಾಂತವ್ವನನ್ನು ಕಂಡು ಯಮನವ್ವ ಹೆಣವನ್ನಪ್ಪಿ "ಅಯ್ಯಯ್ಯೋ ನನ್ನ ರಾಜಾs, ನನ್ನ ಅರಸಾ ಹ್ಯಾದನಲ್ರೇ ನನ್ನ ಕೈಬಿಟ್ಟು, ನಾ ಹ್ಯಾಂಗ ಮಾಡಲ್ರೇ, ನನಗ್ಯಾರ ಗತಿ ಇನ್ನs ರಾಜಾ ನನ್ನ ರಾಜಾs" ಎಂದು ಅಳುತ್ತ ಬೊಬ್ಬಿಟ್ಟಳು. ಗಂಗಮ್ಮ ಅವಳಿಗಿಂತ ಜೋರಾಗಿ ಬಾಯಿ ಮಾಡುತ್ತ ಮಗಳನ್ನು ತಿವಿದಳು.

"ನಿನ್ನ ದಿಕ್ಕೇಡಿ ಮಾಡಿ ಹೋದ್ನಲ್ಲs. ನಿನ್ನ ಕುಂಕುಮ ಸೂರ್ಯಾಗಿ ಹೋತಲ್ಲs ಮಾಂತೂ, ನನ್ನ ಹೊಟ್ಟ್ಯಾಗ ಬೆಂಕಿ ಬಿತ್ತs ನಡುನೀರಾಗ ಕೈಬಿಟ್ಟ ಹ್ಯಾದನಲ್ಲs ಮಾಂತೂ" ಮಗಳ ಗದ್ದ ಹಿಡಿದು ಎತ್ತಿದಾಗ ಮಾಂತವ್ವನ ಕಿರುನಗೆ ತೋರಿತು. ಐದು ತಿಂಗಳ ಹಸುಗೂಸಿದ್ದಾಗ ತಮ್ಮನಿಗೆ ಮದುವೆ ಮಾಡಿದ ಅವ್ವನಿಗೆ ಗೊತ್ತು ತಾನು ಈಗ ಇಪ್ಪತ್ತು ವರ್ಷದವಳಾದರೂ ಗಂಡನ ಕೈಯನ್ನು ಒಮ್ಮೆಯೂ ಹಿಡಿಯಲಿಲ್ಲ ಎನ್ನುವದು. ಹಾಗಾದರೆ ಕೈಬಿಟ್ಟು ಹೋದ ಎಂದು ಅಳುವುದರಲ್ಲಿ ಏನು ಅರ್ಥ? ಮಗಳ ಕಿರುನಗೆ ಕಂಡ ಗಂಗಮ್ಮ ಜನರಲ್ಲಿ ನಗೆಗೀಡಾಯಿತೆನ್ನುವ ಭಯದಿಂದ ಮಾಂತವ್ವನ ಮುಖದ ಮೇಲೆ ಸೆರಗು ಎಳೆದು ಮುಸುಕು ಹಾಕಿಬಿಟ್ಟಳು. ತನ್ನನ್ನೇ ದಿಟ್ಟಿಸುತ್ತಿದ್ದ ಸುತ್ತಲಿನ ಜನರ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಒಳ್ಳೆಯದಾಯಿತೆಂದು ಮಾಂತವ್ವ ಇನ್ನೂ ಚೆನ್ನಾಗಿ ಮುಸುಕು ಎಳೆದುಕೊಂಡಳು. ಗಂಡನ ಹೆಣ ಕುಣಿಯಲ್ಲಿಡುವಾಗ ಹೆಂಗಸರ ಒತ್ತಾಯಕ್ಕೆ ಮಾತ್ರ ಮುಸುಕು ಸರಿಸಿ ನೋಡಿದಳು ಅಷ್ಟೇ. ಆಗಲೂ ಅಳಲಿಲ್ಲ. ಕಣ್ಣು ಮಾತ್ರ ಕೆಂಪಾಗಿದ್ದುವು. ದುಃಖದಿಂದಲ್ಲ, ದೇಹದಲ್ಲಿ ಉರಿಯುತ್ತಿದ್ದ ಬೆಂಕಿಯಿಂದ.

ಗಂಡ ಸತ್ತಮೇಲೆ ಹಾಲು ಮಾರಲು ಶಹರಿಗೆ ಹೋಗಬೇಡ ಎಂದು ಅವ್ವ ಆಣೆ ಹಾಕಿ ಒಪ್ಪಿಸಿಕೊಂಡದ್ದರಿಂದ ಮಾಂತವ್ವ ಮನೆಯಲ್ಲಿದ್ದಳು. ಮನೆಗೆ ದಿನದಿನವೂ ಯಾರು ಯಾರೋ ಬರುತ್ತಿದ್ದರು. ಇವಳ ಗಂಡ ಸತ್ತಿದ್ದಕ್ಕಾಗಿ ಹತ್ತಿರ ಕುಳಿತು ಅಳುತ್ತಿದ್ದರು. ಸಮಾಧಾನದ ಮಾತು ಹೇಳಿ ತಮ್ಮ ಪಾಡಿಗೆ ತಾವು ಹೊರಟುಹೋಗುತ್ತಿದ್ದರು. ಇವಳು ಕಲ್ಲುಕಂಬದ ಹಾಗೆ ಕುಳಿತಿರುತ್ತಿದ್ದಳು. ಹಾಗೆ ಮಾತಾಡಿಸಲು ಬಂದ ಮುದುಕಿಯೊಬ್ಬಳು ಹೋಗುವಾಗ ಆಡಿದ ಮಾತು ಮಾತ್ರ ಇವಳ ಕಿವಿಗೆ ಚೆನ್ನಾಗಿ ಕೇಳಿತ್ತು.

"ಪಾsಪ ಗಂಗವ್ವ ತೊಟ್ಲಿಲ ಮದುವೀ ಮಾಡಿದ್ಲು. ಮಗಳು ಒಂದಿನಾ ಗಂಡನ ಮನೀಗೆ ಹೋಗಲಿಲ್ಲ ಗಂಡನ ಸುಕಾ ಕಾಣಲಿಲ್ಲ. ಸುಕಾ ದುಕ್ಕಾ ಏನೂ ಕಾಣದs ಅಳು ಅಂದರ ಹ್ಯಾಂಗ ಬರಬೇಕು ದುಃಕ್ಕಾ" ಎಂದಿತ್ತು ಮುದುಕಿ.

ನಿಜ, ತಾನು ಒಂದು ದಿನವೂ ಗಂಡನ ಮನೆಗೆ ಹೋಗಲಿಲ್ಲ. ಅಷ್ಟೇ ಅಲ್ಲ ಬದುಕಿರುವವರೆಗೆ ಅವನೊಡನೆ ಒಂದು ಮಾತೂ ಆಡಲಿಲ್ಲ. ಒಂದೇ ಊರಲ್ಲಿ ಸಮೀಪದ ಓಣಿಯಲ್ಲಿದ್ದು ಯಾವಾಗಲೋ ಒಮ್ಮೆ ಎಮ್ಮೆ ಮೇಯಿಸಿಕೊಂಡು ಬರುವಾಗ ಅಥವಾ ಹಾಲು ಮಾರಿ ಶಹರದಿಂದ ಬರುವಾಗ ದಾರಿಯಲ್ಲಿ ಭೇಟಿಯಾಗುತ್ತಿದ್ದ. ದೂರದಿಂದ ಅವನ ಧೋತರ, ನಡಿಗೆಯ ಪರಿಚಯವಾದೊಡನೆ ತಾನು ಬೇರೆ ದಾರಿ ಹಿಡಿಯುತ್ತಿದ್ದಳು. ತನಗೆ, ಅವನಿಗೆ ಏನೂ ಸಂಬಂಧವೇ ಇಲ್ಲದಂತೆ ನಡೆದುಕೊಂಡವಳಿಗೆ ಅವನ ಸಾವಿನಿಂದ ಅಳು ಬಂದಿರಲಿಲ್ಲ. ದಿನವೂ ಎಷ್ಟೋ ಜನ ಸಾಯುತ್ತಾರೆ, ಹಾಗೇ ಇವನೂ ಒಬ್ಬ ಎನ್ನುವಂತಿತ್ತು ಮನಸ್ಸಿಗೆ. ಮಂಗಲಸೂತ್ರ ಹರಿದೊಗೆದಾಗಲೂ ಏನೂ ಅನಿಸಿರಲಿಲ್ಲ. ಅದು ಇದ್ದಾಗಲಾದರೂ ಏನು ಹೆಚ್ಚಿನ ಸಿರಿ ಇತ್ತು ಎನ್ನುವ ಉದಾಸೀನತೆ ಮನೆ ಮಾಡಿತ್ತು. ತನ್ನಲ್ಲಿ ಅವನ ಬಗ್ಗೆ ಇಷ್ಟೊಂದು ಉದಾಸೀನತೆ, ದ್ವೇಷ ಹುಟ್ಟಲು ಕಾರಣ ಅವನೇ. ತನಗಿಂತ ಹದಿನೈದು ವರುಷ ಹಿರಿಯ. ತಾನು ದೊಡ್ಡವಳಾಗುವ ಮೊದಲೇ ಯಮುನಿಯ ಗೆಳೆತನ ಮಾಡಿಕೊಂಡವನು ಕೊನೆಯವರೆಗೂ ಬಿಡಲಿಲ್ಲ. ಅವಳಲ್ಲಿ ಸಾಕಷ್ಟು ಸುಖ ಕಂಡಿದ್ದವನಿಗೆ ತನ್ನಲ್ಲಿ ಆಸಕ್ತಿ ಹುಟ್ಟಲೇ ಇಲ್ಲ. ಹುಟ್ಟಿಕೊಳ್ಳಲು ತಾನು ಪ್ರಯತ್ನ ಮಾಡಲೂ ಇಲ್ಲ. ಇದಕ್ಕೆ ಕಾರಣವೇನೋ ತನಗೇ ತಿಳಿಯದು. ಸೂಳೆಯನ್ನು ಇಟ್ಟಿದ್ದು ಯಾವ ಗಂಡಸೂ ಮಾಡಲಾರದ ದೊಡ್ಡ ತಪ್ಪೇನೂ ಅಲ್ಲವಲ್ಲ. ಎಷ್ಟೋ ಜನಕ್ಕೆ ಅಂಥ ಚಟವಿದ್ದೇ ಇರುತ್ತದೆ. ತನ್ನ ಗಂಡನನ್ನು

ತಾನು ಒಲಿಸಬೇಕು, ಪ್ರೀತಿಸಬೇಕು, ಅವನೊಡನೆ ಬಾಳುವೆ ಮಾಡಬೇಕು ಎನ್ನುವ ಅದಮ್ಯ ಆಸೆ ತನ್ನಲ್ಲಿ ಎಂದೂ ಕಾಣಬರಲಿಲ್ಲ. ಅಂದರೆ ತಾನು ಹೆಂಗಸು ಹೌದೋ ಅಲ್ಲವೋ? ಇತರ ಎಲ್ಲ ಹೆಂಗಸರಂತೆಯೇ ತಾನಿಲ್ಲವೇ? ದುಡಿತಕ್ಕೆ ತಕ್ಕಂತೆ ಚೆನ್ನಾಗಿ ಹಾಲು, ಮೊಸರು ತಿನ್ನಿಸಿ ಅವ್ವ ಬೆಳೆಸಿದ್ದಾಳೆ. ಯೋಚಿಸುತ್ತ ಮಾಂತವ್ವ ಮೈ ಕೈ ನೋಡಿಕೊಂಡಳು. ಹದಿನೈದು ದಿನಗಳಿಂದ ಸಗಣಿಯನ್ನು ಕೈಯಿಂದ ಮುಟ್ಟಿಲ್ಲ. ಚಿಗವ್ವನ ಮಗಳು ಶಂಕರವ್ವ ಬಂದಿದ್ದಾಳೆ ಎಮ್ಮೆಯ ಕೆಲಸಕ್ಕೆ, ಹೊಟ್ಟೆ ತುಂಬ ಉಂಡು ಬೋಳು ಹಣೆಯಿಂದ ಕಟ್ಟೆಯ ಮೇಲೆ ಕೂಡುವುದೊಂದೇ ತನ್ನ ಕೆಲಸವೀಗ, ದುಂಡು ದುಂಡಗೆ ಮೆತ್ತಗಾದ ಕೈಗಳ ಮೇಲೆ ಕೈಯಾಡಿಸಿಕೊಂಡಳು ಮಾಂತವ್ವ.

"ಬೇ ಚಿಗವ್ವಾs ಎಬೇs" ಮಲ್ಲ ಹೊರಗಿನಿಂದ ಕೂಗಿದ. ಗಂಗಮ್ಮ ಎಲ್ಲೋ ಹೋಗಿದ್ದಳು. ದನ ಬಿಟ್ಟುಕೊಂಡು ಹೋದ ಶಂಕರೆವ್ವ ಇನ್ನೂ ಬಂದಿರಲಿಲ್ಲ.

"ಯಾಕ ? ಅವ್ವ ಇಲ್ಲಾ, ಹೊರಗ ಹೋಗ್ಯಾಳ" ಎನ್ನುತ್ತ ಕಂಬದ ಮರೆಯಿಂದ ಹಣಿಕಿದಳು. ಮಲ್ಲ ಅವಳನ್ನೇ ದಿಟ್ಟಿಸುತ್ತಿದ್ದ. ತನ್ನ ಮೈಯ್ಯಲ್ಲೇನೋ ಹರಿದಾಡಿದಂತಾಯ್ತು. ಹೀಗೇಕೆ ಏನೂ ತಿಳಿಯಲಿಲ್ಲ. ಮಲ್ಲನ ಮಾತಿಗೆ ಅವನತ್ತ ನೋಡದೆ ಕಿವಿಗೊಟ್ಟಳು. "

"ದೊಡ್ಡ ಗೌಡರು ಇದೇ ಈಗ ಬಂದರು ಶಾರದಿಂದ, ಗಂಗವ್ವ ಚಿಗವ್ವನ ಕರೀ ಅಂದರು. ಗುರಪ್ಪ ಸಾಯೂ ಮುಂದ ಯಮುನವ್ವಗ ಹೊಲಾಮನೀ ಬರಕೊಟ್ಟಿದ್ನಂತ ಅದಕ್ಕs ಗಂಗಮ್ಮ ಕೇಸು ಹಾಕಿಸಿದ್ಲಂತ. ಕೇಸಿನ ಸಂಬಂಧ ಮಾತಾಡೂದೈತಿ ಗಂಗಮ್ಮನ್ನ ಕರಿ ಅಂದ್ರು.

ಗಂಡ ಸತ್ತ ಮರುದಿನವೇ ಅವ್ವ ತನ್ನಿಂದ ಕಾಗದದ ಮೇಲೆ ಹೆಬ್ಬೆಟ್ಟು ಒತ್ತಿಸಿಕೊಂಡ ಕಾರಣ ಈಗ ತಿಳಿಯಿತು. ಅದಕ್ಕೇ ಇರಬೇಕು ಅವ್ವ ತನಗೆ ಮನೆಯಲ್ಲಿಯೇ ಇರಲು ಹೇಳಿದ್ದು. ಹಾಲು ತುಪ್ಪ ಹೆಚ್ಚು ಹೆಚ್ಚಾಗಿ ಹಾಕಿ ಉಪಚಾರ ಮಾಡುತ್ತಿದ್ದದ್ದು. ತಮ್ಮನ ಆಸ್ತಿ ಬರುವದೆನ್ನುವ ಆಸೆಯಿಂದ. ಆ ಗಂಡಿನ ಸುಖವನ್ನೇ ಕಾಣದ, ಅವನಿಗಾಗಿ ಮಕ್ಕಳನ್ನೇ ಹೆರದ, ಜಡ್ಡಿನಲ್ಲಿ ಅವನಿಗೆ ಉಪಚಾರವನ್ನೂ ಮಾಡದ, ಅವನ ಸಾವಿನಲ್ಲಿ ಹನಿ ಕಣ್ಣೀರನ್ನೂ ಸುರಿಸದ ತಾನು ಇನ್ನು ಮೇಲೆ ಅವನ ಹೊಲಕ್ಕೆ ಮಾಲೀಕಳಾಗಿ, ಮನೆಯಲ್ಲಿ ತಣ್ಣಗೆ ಕುಳಿತು ಉಣ್ಣಬೇಕು. ಅವನ ಹೊಲದ ಮೇಲೆ ತನಗೇನು ಅಧಿಕಾರ ? ಅವನು ಕಟ್ಟಿದ್ದ ತಾಳಿಯನ್ನಂತೂ ಸತ್ತದಿನವೇ ಹರಿದೊಗೆದಿದ್ದಾರೆ. ಇನ್ನು ಅವನಿಗೂ ತನಗೂ ಏನು ಸಂಬಂಧವೋ ತಿಳಿಯದಾಗಿದೆ ತನಗೆ. ಅವನ ಹೊಲಕ್ಕೆ ತಾನು ಹೇಗೆ ಮಾಲೀಕಳು? ಇಷ್ಟು ದಿನ ಅವನೊಡನಿದ್ದು ಅವನ ಕಷ್ಟಸುಖಗಳಲ್ಲಿ ಭಾಗಿಯಾಗಿದ್ದ ಯಮುನಿಯನ್ನೂ ಅವಳ ಮಕ್ಕಳನ್ನೂ ಹೊರಗೆ ಹಾಕಿ ಇನ್ನು ತಾನಿರಬೇಕೇ ಅವನ ಮನೆಯಲ್ಲಿ? ಅವನ ಮನದಲ್ಲಿ ಒಮ್ಮೆಯೂ ಬಾರದ ತಾನು ಅವನ ಮನೆಯಲ್ಲಿ ಅದೂ ಅವನು ಸತ್ತಮೇಲೆ ಬಾಳಿ ಬದುಕಲು ಯಾತಕ್ಕೆ ಹೋಗಬೇಕು ? ಛೆ ಇದು ತನ್ನಿಂದ ಸಾಧ್ಯವಿಲ್ಲ. ಯೋಚಿಸುತ್ತ ಮಾಂತವ್ವ ಸುತ್ತಮುತ್ತ ನೋಡಿದಳು. ತನ್ನದಾಗಬಹುದಾಗಿದ್ದ ಆ ದೊಡ್ಡ ಮನೆಗಿಂತಲೂ ಈ ಗುಡಿಸಲು, ಎಮ್ಮೆ ಹಕ್ಕೆ ಬಹಳ ಪ್ರಿಯವಾಗಿ ಕಂಡವು ಮಾಂತವ್ವನಿಗೆ. ಇದನ್ನೆಲ್ಲ ಬಿಟ್ಟು ಹೋಗಿ ಇಷ್ಟು ವರ್ಷಗಳ ಜೀವನ ಬದಲಿಸಿ ಬೇರೆಯಾಗಿ ಬದುಕಲು ಅವಳ ಮನ ಒಪ್ಪಲಿಲ್ಲ. ಮುಖ ಮೇಲೆತ್ತಿದಳು, ಮನೆಗೆ ಬಂದಿದ್ದ ಶಂಕರೆವ್ವ ಹಚ್ಚಿದ ದೀಪ ಅಚಲವಾಗಿ ಉರಿಯುತ್ತಿತ್ತು. ಅಡಿಗೆ ಮನೆಯಲ್ಲಿ ಒಲೆ ಹೊತ್ತಿಸುವದರಲ್ಲಿದ್ದ ಶಂಕರೆವ್ವನೆಡೆಗೆ ಹೊರಳಿ ಕೂಗಿ ಹೇಳಿದಳು. "ಶಂಕ್ರೀ ನಾ ಇಲ್ಲೇ ಗೌಡರ ಮನೀಗೆ ಹೋಗಿ ಬರತೇನು. ಕರ್‍ಯಾಕ ಕಳಿಸ್ಯಾರ. ಅವ್ವ ಬಂದರ ಹೇಳು."

ಗೌಡರ ಮನೆಯ ಮೆಟ್ಟಿಲು ಹತ್ತುತ್ತಿದ್ದ ಮಾಂತವ್ವನ ಕಾಲು ನಡುಗಿದವು. ಗಟ್ಟಿ ಮನಸ್ಸು ಮಾಡಿ ದೊಡ್ಡ ಬಾಗಿಲು ದಾಟಿ ಒಳಗೆ ಹೋಗಿ ನಿಂತು "ಅವ್ವಾರಾ" ಎಂದಳು. ಗೌಡಶಾನಿ ಉತ್ತರ ಕೊಡಲಿಲ್ಲ. ಹೊರಗೆ ಕಟ್ಟೆಯ ಮೇಲಿಟ್ಟ ತುಂಬಿದ ತಂಬಿಗೆ ಹೇಳಿತು ಗೌಡಶಾನಿ ಬಯಲಕಡೆಗೆ ಹೋಗಿರಬಹುದೆಂದು. ಆದರೂ ಮತ್ತೊಮ್ಮೆ

ಧೈರ್ಯ ತಂದುಕೊಂಡು "ಅಪ್ಪಾರ" ಎಂದಳು ಜೋರಾಗಿ. ಕಟ್ಟೆಯ ಮೇಲಿನ ಕೋಣೆಯಿಂದ ಗೌಡರು ಕೂಗಿದರು. "ಯಾರವರು ? ನಿಂಗಾ?"

"ನಾನsರೀ ಮಾಂತವ್ವ" ಧ್ವನಿ ನಡುಗುತ್ತಿತ್ತು.

"ಒಳಗೆ ಬಾರವ್ವಾ. ಯಾಕೆ? ಗಂಗಮ್ಮ ಬರಲಿಲ್ಲೇನು?"

ಒಳಬಾಗಿಲಿಗೆ ಹೋಗಿ ನಿಂತ ಮಾಂತವ್ವನ ಮುಖ ಲಾಟೀನಿನ ಬೆಳಕು ಬಿದ್ದೊಡನೆ ಇನ್ನಷ್ಟು ಕೆಂಪಗಾಯಿತು. ಹಣೆ ಬೆವರುತ್ತಿತ್ತು, ಬೆದರಿದಂತಿದ್ದಳು. ಬಾಯಿಗೆ ಮಾತೇ ಬರಲಿಲ್ಲ. ಇಂಥ ಹೊತ್ತಿನಲ್ಲಿ ಅವಳು ಎಂದೂ ಗೌಡರ ಮನೆಗೆ ಹೋದವಳಲ್ಲ. ಅವರು ದೊಡ್ಡ ಮನುಷ್ಯರು, ಸಂಸಾರಿಕರು, ಮಕ್ಕಳಿಲ್ಲದಿದ್ದರೂ ಊರಿಗೇ ತಂದೆಯಾಗಿದ್ದರು. ದುಃಖಿಗಳಿಗೆಲ್ಲ ಆಪ್ತರು. ಈಗ ತಮ್ಮ ಸಂಸಾರಕ್ಕೆ ನೆರವಾಗಬೇಕೆಂದು ಕೋರ್ಟಿಗೆ ಹೋಗಿ ಬಂದಿದ್ದಾರೆ. ಅಂಥ ದೊಡ್ಡವರಿಗೆ ಆ ನೆರವು ತನಗೆ ಬೇಕಿಲ್ಲವೆಂದು ಹೇಗೆ ಹೇಳುವುದು ತನ್ನಿಂದ ಸಾಧ್ಯವಿಲ್ಲದ ಮಾತು ಎನ್ನಿಸಿತವಳಿಗೆ.

"ಕೋರ್ಟಿಗೆ ಹೋಗಿದ್ದೆ, ಕೇಸು..."

"ಹೌದ್ರಿ, ಅದಕ್ಕs ನಿಮಗ ಹೇಳಬೇಕೂಂತ ಬಂದೆ. ಮಲ್ಲಣ್ಣ ಹೇಳಿದಾ" ಅರೆಬರೆ ಮಾತುಗಳಿಂದ ತಡವರಿಸಿ ಗಪ್ಪಾದಳು.

"ಏನೂ ಕಾಳಜಿ ಮಾಡಬ್ಯಾಡ. ನಾ ಎಲ್ಲಾ ಸಾಹೇಬರಿಗೆ ಹೇಳೆನಿ. ಹೊಲಾ ಮನೀ ನಿನಗs ಸಿಗೂ ಹಾಂಗ ಮಾಡತೀನಿ ಅಂದಾರ. ನೀನೂ ನಿಮ್ಮವ್ವ ಕೋರ್ಟಿಗೆ ಬರಬೇಕಾಗುತೈತಿ. ನಾನೂ ಬರತೀನಿ, ಸಾಕ್ಷಿನೂ ಹೇಳಿಸೋಣು. ಎಲ್ಲಾ ನನಗs ಸಿಗತೈತಿ" ಮರುಕದ ದನಿಯಲ್ಲಿ ನುಡಿದ ಗೌಡರು ಧೋತರದಿಂದ ಬೆವರು ಒರೆಸಿಕೊಳ್ಳುತ್ತ ದಣಿದಿದ್ದ ಕಾಲುಗಳನ್ನು ಹಾಸಿಗೆಯ ಮೇಲೆ ಚಾಚಿದರು.

ಅವರ ಕನಿಕರದ ಮಾತಿನಿಂದ ಮಾಂತವ್ವನಿಗೆ ತಡೆಯಲಾಗಲಿಲ್ಲ. ಸಂಯಮದ ಕಟ್ಟೆ ಒಡೆಯಿತು. ತನ್ನಲ್ಲಿದ್ದ ಭಾವನೆಗಳೆಲ್ಲ ಉಕ್ಕೇರಿ ಬರುವಂತೆ "ನಮ್ಮನ್ನು ಅಲ್ಲೆಲ್ಲಾ ಎಳೀಬ್ಯಾಡ್ರಿ" ಎನ್ನುತ್ತ ದಡ ದಡ ಓಡಿ ಹೋಗಿ ಅವರು ಚಾಚಿದ ಕಾಲುಗಳನ್ನಪ್ಪಿ ಅಳತೊಡಗಿದಳು. ಗಾಬರಿಯಿಂದ ಗೌಡರು ರಟ್ಟೆ ಹಿಡಿದೆತ್ತಿದರು. ಎದೆಗೆ ಒರಗಿಸಿಕೊಂಡು ಬೆನ್ನು, ತಲೆ ನೇವರಿಸಿದರು. ಆ ಸ್ಪರ್ಶದಿಂದ ಮೈಮರೆತ ಮಾಂತವ್ವ ಕಣ್ಣುಮುಚ್ಚಿಕೊಂಡಳು. ಗೌಡರ ಆಲಿಂಗನದಲ್ಲಿ ಕ್ಷಣಹೊತ್ತು ಎಚ್ಚರ ತಪ್ಪಿದಳು. ಅವಳ ಬೆನ್ನು ಕೂದಲಿನ ಮೇಲೆ ಕೈಯಾಡಿಸಿದ ಗೌಡರು ಮೃದುವಾಗಿ ಹಿಡಿದು ಕೆನ್ನೆಯ ಮೇಲೆ ತುಟಿಯನ್ನೊತ್ತಿದರು. ಹಕ್ಕೆಯಲ್ಲಿ ಏನೋ ಸದ್ದಾಯಿತು. ಮಾಂತವ್ವ ಕೂಡಲೇ ಕೊಸರಿ ಹಿಂದೆ ಸರಿದಳು. ಕಂಪಿಸುತ್ತಿದ್ದ ಗೌಡರು ಹಾಸಿಗೆಯ ಮೇಲೆ ಕುಸಿದರು. ಅತ್ತಿತ್ತ ನೋಡದೇ ಮಾಂತವ್ವ ಥರಥರ ನಡುಗುತ್ತ ಹೊರಗೆ ಓಡಿದಳು. ಕೈ ತೊಳೆದು ತಂಬಿಗೆ ಇಡುತ್ತಿದ್ದ ಗೌಡಸಾನಿ, "ಇದೊಳ್ಳೆ ಗಂಟುಬಿತ್ತು ಶನಿ" ಎಂದು ಕ್ಯಾಕರಿಸಿ ಥೂ ಎಂದಳು ಅವಳು ಓಡಿದ ದಿಕ್ಕಿನತ್ತ. ಎಮ್ಮೆಗೆ ಮೇವು ಕೊರೆಯುತ್ತಿದ್ದ ಆಳು ನಿಂಗ ಕೇಳಿಯೂ ಕೇಳಿಸದಂತೆ ಈಳಿಗೆಯ ನಡುವೆ ಹೊರೆಯಿಟ್ಟು ಕರಕ್ ಎನ್ನಿಸಿದ. ಕೋಣೆಯಲ್ಲಿ ಕುಳಿತ ಗೌಡರು ತಣ್ಣಗಾಗಿದ್ದರು.

***

"ಯಪ್ಪಾs ಮಾಂತವ್ವಾ ಕಣ್ಣು ತಗಿಯಬೇ" ಮುಖ, ಕುತ್ತಿಗೆಯಲ್ಲಿ ಇಳಿಯುತ್ತಿದ್ದ ಬೆವರು ಒರೆಸುತ್ತ ಗಂಗಮ್ಮ ಹಾಲಿನ ಬಟ್ಟಲು ಮಗಳ ಬಾಯ ಹತ್ತಿರ ಹಿಡಿದಳು. "ಇದೀಟು ಹಾಲು ಕುಡಿಯಬೇ ಜರಾ ಇಳದಾವು. ಮೈ ಎಲ್ಲಾ ಬೆವತsತಿ. ಒರಸ್ತೀನಿ ಸರದು ಮಲ್ಕೊ."

ಒಂದೊಂದೆ ಗುಟುಕು ಹಾಲು ಗುಟುಕರಿಸಿದ ಮಾಂತವ್ವ ಅವ್ವ ಬೆವರು ಒರೆಸುತ್ತಿದ್ದಂತೆ ಅತ್ತಿತ್ತ ಹೊರಳುತ್ತಿದ್ದಾಗ ಕಿರುಗಿಟ್ಟುತ್ತಿದ್ದ ಮಂಚದತ್ತ ಕಣ್ಣು ಅರಳಿಸಿ ನೋಡಿದಳು. ಹದಿನೈದು ಇಪ್ಪತ್ತು ದಿನಗಳ ಮೇಲೆ ಎಚ್ಚರವಾಗಿ ಕಣ್ಣು ತೆಗೆದ ಮಗಳ ತಲೆಯನ್ನು ಪ್ರೀತಿಯಿಂದ ನೇವರಿಸಿ ಸೆರಗು ಸರಿಯಾಗಿ ಹೊಚ್ಚುತ್ತ ಗಂಗಮ್ಮ ರಮಿಸುವ ದನಿಯಲ್ಲಿ ಹೇಳಿದಳು.

"ಮಾಂತೂ ಇವತ್ತ ನೀ ಆರಾಮ ಅದೀ. ಶಂಕ್ರವ್ವ ರಾಮಣ್ಣ ಹೊಲಕ್ಕ ಹೋಗ್ಯಾರ ನಿನ್ನ ಸಲುವಾಗಿ ನಾ ಮನಿ ಹಿಡಕೊಂಡು ಕೂತೇನಿ, ಇವತ್ತ ಒಂದೀಟು ನಾನೂ ಹೊಲಕ್ಕ ಹೋಗಿ ಬರಲ್ಯಾ. ಶಂಕ್ರೀನ್ನ ಲಗೂನ ಕಳಸ್ತೀನಿ ಮನೀಗೆ ನಿನ್ನ ಜೋಡಿ."

"ಕಾಕಾ ಯಾವಾಗ ಬಂದಾನು ?" ಕ್ಷೀಣವಾಗಿತ್ತು ಧ್ವನಿ.

"ಗೌಡರು ಹೊಲಾ ನಮಗs ಬರೂ ಹಾಂಗ ಮಾಡಿದ್ರು. ಆಗs ರಾಮಣ್ಣನ್ನ ಕರೆಸಿಕೊಂಡೆ. ಅವನ್ನ ಕರಕೊಂಡು ಕೋರ್ಟಿಗೆ ಹೋಗಿ ಹೇಳಿಕಿ ಕೊಟ್ಟ ಬಂದೆ. ಹೊಲಾ ನಮಗs ಸಿಕ್ತು. ಮಕ್ಕತ್ತಲದಾಗ ಏನ ನೋಡಿ ಹೆದರಿದ್ಯೋ ಏನೋ ನೀನು ಉರಿ ಬಂದು ಮಲಕ್ಕೊಂಡಿ, ಅದಕ್ಕs ಶಂಕ್ರೀನ್ನೂ ಇಲ್ಲೇ ಇಟಕೊಂಡೇನಿ, ಆ ಮನಿ ಬಿಟ್ಟು ಇಲ್ಲಿಗೆ ಬರೂ ಮುಂದ ಕಾಕಾನ ನಿನ್ನ ಎತ್ತಿ ತಂದಾ, ನಿನಗ ಅರವು ತಪ್ಪಿತ್ತು. ಜರಾ ಭಾಳ ಇದ್ದು, ಗೌಡರ ಹತ್ತಿರ ಕಾಲು ಹಿಡಕೊಂಡು ಅತ್ತೆ, ನನ್ನ ಮಗಳ ಉಳಿಸಿಕೊಡ್ರೀ ಅಂತ."

"ಹೂಂ"

"ಅವರು ಶಾರದಿಂದ ಡಾಕ್ಟರನ್ನ ಕರಕೊಂಡು ಬಂದು ಅಗಸುದ್ಧೆ ಕೊಡಿಸಿದ್ರು. ಇಕಾ ಇಲ್ಲಿ ನೋಡು ರಟ್ಟೀಗೆ ಇಂಜೆಕ್ಷನ್ ಕೊಡಿಸಿದ್ರು ನೀ ಬದಿಕಿ ಉಳಿದಿ. ನೀ ಎಲ್ಲಿ ಕೈ ಬಿಟ್ಟು ಶಿವನ ಪಾದ ಸೇರ್ತಿಯೋ ಅಂತ ಮಾಡಿದ್ದೆ. ನಿನ್ನ ಬಿಟ್ಟರೆ ನನಗ ಯಾರ ಅದಾರ. ಗೌಡರಿಗೆ ಪುಣ್ಯ ಬರಲಿ, ನಿನ್ನ ಜೀವಾ ಉಳಿಸಿದರು." ಕಣ್ಣೀರೊರೆಸಿಕೊಂಡು ಗಂಗಮ್ಮ ಮತ್ತೊಮ್ಮೆ ತಲೆ ನೇವರಿಸಿ "ಇಕಾ ಇಲ್ಲೇ ಕಾದ ನೀರು ಅದಾವ, ನೀರಡಿಕೆ ಆದರೆ ಈ ಮೋಸಂಬಿ ಹಣ್ಣು ತಿನ್ನು. ಗೌಡರು ತರಿಸಿಕೊಟ್ಟಾರ" ಎಂದು ಮತ್ತೆ ಮತ್ತೆ ಹೇಳಿ ಮುಂಚೀ ಬಾಗಿಲು ಮುಂದೆ ಮಾಡಿಕೊಂಡು ಹೊರಗೆ ಹೋದಳು.

ಗೋಡೆಯ ಕಡೆಗೆ ಮುಖ ಮಾಡಿ ಮಲಗಿದ್ದ ಮಾಂತವ್ವ ಇತ್ತ ಹೊರಳಿದಳು. ಕಿರ್ರೆಂದಿತು ಮಂಚ; ತಾನೀಗ ಮಲಗಿದ್ದುದು ತನ್ನ ಗಂಡನೆನ್ನಿಸಿಕೊಂಡವನ ಮನೆಯಲ್ಲಿ ಅವನ ಮಂಚದ ಮೇಲೆ ಎನ್ನುವುದು ನೆನಪಾಗುತ್ತಲೂ ಅವಳ ತಲೆ ಧಿಮ್ಮೆಂದಿತು. ತಾನು ಯಾವುದನ್ನು ಬೇಡವೆನ್ನುತ್ತಿದೆನೋ ಅದೆಲ್ಲ ನಡೆದೇ ಹೋಗಿಬಿಟ್ಟಿದೆ. ತನಗೆ ಅರಿವು ಇಲ್ಲದ ವೇಳೆಯಲ್ಲಿ ತಾನು ಅರಿವು ತಪ್ಪಿಸಿಕೊಳ್ಳಲು ಕಾರಣ ಆ ವೇಳೆಯಲ್ಲಿ ಗೌಡರ ಮನೆಗೆ ಹೋಗಿದ್ದು. ಆದರೆ ಅದರಿಂದ ತನಗೆ ಅರಿವು ತಪ್ಪಿತೋ ಅಥವಾ ಅರಿವು ಹುಟ್ಟಿತೋ ಎನ್ನುವುದೇ ತಿಳಿಯದಾಗಿದೆ 'ಗೌಡರು' 'ಗೌಡರು' ಎಂದು ತಾಳ ಹಾಕುತ್ತಿದೆ ತನ್ನ ಮನಸ್ಸು. ಅಲ್ಲಿ ನಡೆದದ್ದೆಲ್ಲ ಮತ್ತೊಮ್ಮೆ ನೆನಪಿಸಿಕೊಂಡಳು. ಅವ್ವ ಹೇಳಿದ್ದೂ ನೆನಪಾಯಿತು. ಗೌಡರು ಹೊಲಾ ಮನಿ ಕೊಡಿಸಿದ್ರು. ಡಾಕ್ಟರನ್ನ ಕರೆಸಿ ಅಗಸುದ್ದೆ ಕೊಡಿಸಿದ್ರು. ಹಣ್ಣು-ಹಂಪಲಾ ತರಿಸಿ ಕೊಟ್ರು. ಜೀವ ಉಳಿಸಿದ್ರು ಮತ್ತೆ.... ಮತ್ತೆ ಸಗಣಿ, ಹಾಲು, ಕೆಲಸ, ಊಟ ನಿದ್ದೆಯಲ್ಲಿ ಮೈಮರೆತು ಎಮ್ಮೆಯಂತಾಗಿದ್ದ ತನಗೆ ನೀನು ಹೆಣ್ಣು- ಹೆಂಗಸು ಎನ್ನುವುದನ್ನು ತೋರಿಸಿಕೊಟ್ಟರು. ಅವರ ಅಪ್ಪುಗೆಯನ್ನು ನೆನೆಸಿಕೊಂಡ ಮಾಂತವ್ವ ಎದುರಿಗೆ ಗೌಡರಿಲ್ಲದಿದ್ದರೂ ಕೆಂಪಾದಳು.

"ಯಕ್ಕಾs" ಕೂಗುತ್ತ ಒಳಗೆ ಬಂದಳು ಶಂಕ್ರವ್ವ.

***

ತಂಬಿಗೆ ಹಿಡಿದು ಬಯಲಿಗೆ ಹೊರಟಾಗೆಲ್ಲ ಅವಳ ಜೊತೆಗಿರಲು ಇನ್ನು ಶಂಕ್ರಿಯಿಲ್ಲ. ಚಿಗವ್ವನಿಗೆ ಜಡ್ಡೆಂದು ತಿಳಿದು ಅವಳು ಊರಿಗೆ ಹೋಗಿದ್ದಳು. ಒಬ್ಬಳೇ ಹೊರಟ ಮಾಂತವ್ವ ಅದೇಕೋ ಅಧೀರೆಯಾಗಿದ್ದಳು. ಕಾಲು ನಡುಗುತ್ತಿದ್ದವು. ಭಾರವಾದ ಬುಟ್ಟಿಯನ್ನು ತಲೆಯ ಮೇಲೆ ಹೊತ್ತು ಮೈಲುಗಟ್ಟಲೆ ನಡೆದು ಪಟ್ಟಣಕ್ಕೆ ಹೋಗಿ ಬರುತ್ತಿದ್ದವಳು ತಾನೇ ಏನು ಎಂದು ಪ್ರಶ್ನಿಸುವಂತಿತ್ತು ಅವಳ ಸ್ಥಿತಿ. ಸುತ್ತಲಿನ ಜನ ತನ್ನತ್ತಲೇ ನೋಡುತ್ತಿರುವಂತೆ ನಗುತ್ತಿದ್ದಂತೆ, ಪಿಸಿ ಪಿಸಿ ಮಾತಾಡುತ್ತಿದ್ದಂತೆ ಅನ್ನಿಸಿ ಎದೆ ಪುಕ ಪುಕ ಅನ್ನತೊಡಗಿತ್ತು. ಬೇಗೆ ಬೇಗ ನಡೆಯಬೇಕೆಂದರೆ ಕಾಲುಗಳಲ್ಲಿ ತ್ರಾಣವೇ ಇಲ್ಲ. ಕಣ್ಣೀರು ತುಂಬಿ ಕಣ್ಣು ಮಂಜಾಗುತ್ತಿದ್ದವು. ನೆಲದಲ್ಲಿ ಮೋರೆಯಿಟ್ಟು ಸಾಗುತ್ತಿರುವಾಗ ದೊಡ್ಡ ಮೇವಿನ ಹೊರೆ ಹೊತ್ತ ಗೌಡರ ಆಳು ನಿಂಗ ಎದುರಿಗೆ ಬಂದ, ಕ್ಷಣದಲ್ಲೇ ಅವನಿಗೆ ಡಿಕ್ಕಿ ಹೊಡೆಯುವುದು ತಪ್ಪಿತ್ತು.

"ಅಬ್ಬಬ್ಬ! ಸಣ್ಣ ಗೌಡಶಾನೇರಿಗೆ ಈಗ ಕಣ್ಣಾs ಕಾಣೂದಿಲ್ಲ" ಎಂದು ನಿಂಗ ಗೊಣಗುಟ್ಟಿ ಮುಂದೆ ಹೋದ. ಮಾಂತವ್ವ ನಿಂತಲ್ಲೇ ಥರಥರ ನಡುಗಿದಳು. ಯಾರಿಗಾದರೂ ಕೇಳಿಸಿತೇನೋ ಎಂದು ಹೆದರಿ ಬೆದರಿದ ಜಿಂಕೆಯಂತೆ ಅತ್ತಿತ್ತ ನೋಡುತ್ತ ತಂಬಿಗೆಯ ನೀರು ಚೆಲ್ಲುತ್ತಿದ್ದರೂ ಅದರ ಪರಿವೆಯಿಲ್ಲದೆ ಮನೆಗೆ ಓಡಿದ್ದಳು. ಎರಡು ದಿನ ಉಪವಾಸ ಮಲಗಿದ ಮಗಳನ್ನು ನೋಡಿ ಅವಳ ಅವಸ್ಥೆಗೆ ತಿಳಿಯದ ಗಂಗಮ್ಮ ಗೌಡಶಾನಿಯ ಎದುರು ದುಃಖ ತೋಡಿಕೊಂಡಿದ್ದಳು.

ಬಾಣದಂತೆ ಬಂದಿತ್ತು ಗೌಡಶಾನಿಯ ಬಿರುಸುಮಾತು. "ನಿನ್ನ ಮಗಳಿಗೆ ಹರೆಯ ಕಾಡತಿರಬೇಕ ನೋಡ. ಉಂಡು ತಿಂದ ರಂಡಿ ಗಂಡ ಬೇಕು ಅಂತ ಅತ್ತಳಂತ. ಹಾಂಗ ಆಕೀಗೂ ಬೇಕಾಗಿರಬೇಕು. ಮೋರೆ ಒಣಗಿಸಿಕೊಂಡು ಬಂದ ಗಂಗಮ್ಮ ಮಗಳ ಮುಂದೆ ಹೇಳಿ ನೆಲಕ್ಕೆ ಚಿಟಿಕೆ ಮುರಿದು,

" ನನ್ನ ಮಗಳು ಇಸ್ಟ ವರ್ಸ ಗರತಿ ಗಂಗವ್ವ ಆಗಿ ನಡೆದಾಳ. ಆಕೀನ್ನ ಆಡಿಕೊಂಡವರ ಬಾಯಾಗ ಹುಳಾ ಬೀಳಲಿ" ಎಂದು ಶಪಿಸಿದ್ದಳು.

ಮಾಂತವ್ವ ನಿದ್ರೆ ಬಾರದೆ ಎಂಟು ದಿನ ಅತ್ತಿತ್ತ ಮಂಚದ ಮೇಲೆ ಹೊರಳಾಡಿದ್ದಳು. ತಾನು ಮಲಗಿದ್ದ ಮಂಚದ ಮೇಲೆ ಗಂಡ ಯಮುನಿಯೊಡನೆ ನಡೆಸಿದ್ದ ಸರಸವನ್ನು ಊಹಿಸಿ, ನೆನೆಸಿ, ನಾಚಿ, ಬೆವೆತಿದ್ದಳು. ಯಮುನಿಯ ಸ್ಥಾನದಲ್ಲಿ ತಾನಿದ್ದರೆ ಈಗ ಇಷ್ಟೊಂದು ಕುದಿಯುವ ಅಗತ್ಯವಿರಲಿಲ್ಲ. ತಾನು ವಿಧವೆಯಾದರೂ ಬದುಕಿನ ಸುಖ ಕಂಡು ಉಂಡವಳಾಗಿರುತ್ತಿದ್ದಳು. ಒಂದೆರಡು ಮಕ್ಕಳೂ ತನಗೆ ಇರಬಹುದಾಗಿತ್ತು. ಅವುಗಳನ್ನೇ ಮಗ್ಗುಲಲ್ಲಿಟ್ಟುಕೊಂಡು ನಿಶ್ಚಿಂತೆಯಿಂದ ನಿದ್ರಿಸಬಹುದಾಗಿತ್ತು. ಈಗ ಅದಾವುದೂ ನಡೆಯಲಿಲ್ಲ. ಎಲ್ಲಕ್ಕೂ ಆ ಸತ್ತ ಗಂಡನೇ ಕಾರಣ. ಆ ಗಂಡ ತನ್ನನ್ನು ಬಿಟ್ಟು ಸೂಳೆಯ ಜೊತೆ ಸಂಸಾರ ನಡೆಸಿದರೂ ಯಾರೂ ಏನು ಮಾಡಲಿಲ್ಲ. ಆಗಾಗ ನಾಲ್ಕು ಸಹಾನುಭೂತಿಯ ಮಾತು ಹೇಳುವುದನ್ನು ಬಿಟ್ಟರೆ ಅಂಥ ಗಂಡ ತನ್ನನ್ನು ಈ ಸ್ಥಿತಿಯಲ್ಲಿ ಕೈಬಿಟ್ಟು ಹೋದ. ಹಲ್ಲು ಕಡಿದಳು ಮಾಂತವ್ವ. ಅಂಥ ತಮ್ಮನಿಗೆ ತಿಳುವಳಿಕೆ ಇಲ್ಲದ, ಹಸುಗೂಸಾಗಿದ್ದ ತನ್ನನ್ನು ಗಂಟು ಹಾಕಿದಳು ಈ ಅವ್ವ. ಈ ಹಡೆದವ್ವನೂ ತನ್ನ ವೈರಿಯೇ. ಹೊಸ ಮನೆಯ ಕಾಳಜಿಯೇ ಬಹಳವಾಗಿದೆ ಅವಳಿಗೆ. ಹರೆಯದ ಮಗಳು ಗಂಡನ ಸುಖ ಕಾಣದೇ ಹೇಗೆ ದಿನ ಕಳೆಯಬೇಕೆನ್ನುವ ಚಿಂತೆಯೇ ಅವಳಿಗಿಲ್ಲ. ಇಂಥ ಅವ್ವ ಇದ್ದರೂ ಅಷ್ಟೇ, ಇಲ್ಲದಿದ್ದರೆ ಇನ್ನೂ ಸಂತೋಷ. ಅವ್ವನನ್ನು ಸತ್ತ ಗಂಡನನ್ನು ಒಯ್ದು ಉರಿಯುವ ಒಲೆಗೆ ಹಾಕಬೇಕು. ತಾನೀಗ ಬೇಯುತ್ತಿದ್ದಂತೆ ಅವರೂ ಬೇಯಬೇಕು. ಕ್ಷಣಕ್ಷಣಕ್ಕೆ ಮನಸ್ಸಿನ ಕಹಿ ಹೆಚ್ಚುತ್ತಿತ್ತು. ಸಿಟ್ಟಿನಲ್ಲೆ ಗಂಡನಿಗೆ ಹಿಡಿ ಶಾಪ ಹಾಕಿದಳು. ಸಿಟ್ಟು ಹೆಚ್ಚಾದಂತೆ ಮೈಯ ಕಾವೂ ಏರುತ್ತಿತ್ತು.

ಹಕ್ಕಿಯಲ್ಲಿದ್ದ ಎಮ್ಮೆ ಕರ್ಕಶವಾಗಿ ಕೂಗಿದಾಗ ಎಚ್ಚೆತ್ತ ಗಂಗಮ್ಮ "ಇದರ ಧಾಡಿ ಬರಲಿ, ಎಮ್ಮಿ ಬೆದಿಗೆ ಬಂತೋ ಏನೋ, ನಾಳೆ ಕರಿಬಸಪ್ಪನ ಮನೀಗೆ ಒಯ್ಯಬೇಕು" ಒಟಗುಟ್ಟಿದಳು.

ಮರುದಿನ ಕರಿಬಸಪ್ಪನ ಮನೆಗೆ ಹೋಗದೆ ಗೌಡರ ಮನೆಗೆ ಓಡಿದ್ದಳು ಜ್ವರದಿಂದ ತಪ್ತಳಾಗಿದ್ದ ಮಗಳನ್ನು ನೋಡಿ ಕಂಗೆಟ್ಟು.

ಕಟ್ಟೇಯೇರಿ ಮಂಚದ ಬಳಿಗೆ ಬಂದ ಗೌಡರನ್ನು ಆರ್ತಳಾಗಿ ನೋಡಿದಳು ಮಾಂತವ್ವ. ಕಣ್ಣ ಕೊನೆಯಿಂದ ನೀರು ಹರಿಯಿತು. ನಿಂತು ನೋಡಲು ಸಾಧ್ಯವಾಗದೇ ಮಂಚದ ಮೇಲೆ ಕುಳಿತು, ಧೋತರದ ಚುಂಗಿನಿಂದ ಕಣ್ಣೀರ ಒರೆಸಿದ ಗೌಡರ ಕೈಯನ್ನು ಹಿಡಿದು ಕೆನ್ನೆಯ ಮೇಲಿಟ್ಟುಕೊಂಡು ಮಾಂತವ್ವ ಉಸುರಿದಳು.

"ನೀವಽ ನನ್ನ ಪಾಲಿನ ದೇವ್ರು."

***



# ಹೊಸ ಅಲೆ

ಕಿರ್ರೆಂದು ಬಾಗಿಲು ಕಿರುಗುಟ್ಟಿದಾಗ ಶಂಕರಪ್ಪ ಎಚ್ಚರವಾದ ಬಸವಣ್ಣೆವ್ವ ಎದ್ದು ಹೊರಗೆ ಹೊರಟದ್ದು ತಿಳಿದ ಬೆಳಕಿಂಡಿಯಿಂದ ಬರುವಷ್ಟು ಬೆಳಕು ಇನ್ನೂ ಮೂಡಿರಲಿಲ್ಲ. ಹೊತ್ತುಕೊಂಡ ಕಂಬಳಿ ಕಿತ್ತೆಸೆದು ಹೊರಸಿನ ಮೇಲೆಯೇ ಎದ್ದು ಕುಳಿತ.

"ಬಸ್ಸೀಽ"

"ಆಂ." ಕಣ್ಣು ಹೊಸಕಿಕೊಳ್ಳುತ್ತ ಹೊರಳಿದಳಾಕೆ.

"ನಾ ಇವತ್ತ ಶಾರಕ ಹೋಗಬೇಕಾಗೇತಿ, ಕಚೇರ್ಯಾಗ ಕೆಲಸ ಐತಿ. ಲಗೂನ ನೀರಿಗೆ ಉರಿಹಾಕು. ಜಳಕಾ, ಪೂಜಿ, ನ್ಯಾರಿ ಮುಗಿಸ್ಕೊಂಡಽ ಹೊಕ್ಕೇನಿ."

"ಹೂಂ" ಎಂದು ಹೊರಬಿದ್ದವಳು ಮುಖಕ್ಕೆ ನೀರು ಹನಿಸಿಕೊಂಡು ಚರಿಗೆ ತುಂಬಿ ತಂದು ಹೊರಗಿನ ಕಟ್ಟೆಯ ಮೇಲಿಟ್ಟು ಬಾಗಿಲಿಗೆ ನೀರು ಹಾಕಹತ್ತಿದಳು. ಶಂಕರಪ್ಪ ಎದ್ದು ಚರಿಗೆ ಹಿಡಿದು, ಕಟ್ಟೆ ಇಳಿದು ಕಾಲನ್ನು ಮೆಟ್ಟುತ್ತ ಪಡಸಾಲೆಯತ್ತ ನೋಡಿದ. ಅವ್ವನ ಒಂದು ಮಗ್ಗಲು ಗಂಡು ಮೊಮ್ಮಕ್ಕಳು, ಇನ್ನೊಂದು ಮಗ್ಗಲು ಹೆಣ್ಣು ಮೊಮ್ಮಕ್ಕಳು ಮಲಗಿದ್ದರು. ತನ್ನವೂ ತಮ್ಮನವೂ ಕೂಡಿ ಎಂಟು ಹುಡುಗರು. ಏಳು ಇಲ್ಲಿ ಅಜ್ಜಿಯ ಮಗ್ಗುಲಲ್ಲಿವೆ. ಇನ್ನೊಂದು ಕೂಸು ತನ್ನ ಕೋಣೆಯಲ್ಲಿ. ಬೆಳತನಕ ಕೆಮ್ಮುತ್ತ ಎಚ್ಚರವಾಗಿದ್ದ ಅವ್ವನಿಗೆ ಈಗ ತಾನೇ ನಿದ್ದೆ ಹತ್ತಿರಬೇಕೆಂದುಕೊಂಡ. ಉಹುಂ, ಎಚ್ಚರವಾಗಿಯೇ ಇದ್ದಳು ಕೆಂಚವ್ವ. ಹಿರಿಯ ಸೊಸೆ ಎದ್ದಿದ್ದು ಗೊತ್ತಾದೊಡನೆ ಕಟ್ಟೆ ಮೇಲಿನ ಎಡಕೋಣೆಯಲ್ಲಿ ಮಲಗಿದ್ದ ಸಣ್ಣ ಸೊಸೆಯನ್ನೂ ಕೂಗಿದಳು. ಕೌದಿಯ ಮುಸುಕಿನಲ್ಲಿಂದಲೇ, "ನಾಗವ್ವಾಽ ಏಳವ್ವಾ ಗಡಾನ ಎದ್ದು ನೀರಿಗೆ ಉರಿ ಹಾಕು, ಮಾವ ಎದ್ದು ಹಿತ್ತಲಕ ಹೋಗ್ಯಾನ," ಅಜ್ಜಿಯ ದನಿಗೊ, ದ್ವಾಮಿ ಕಡದದ್ದಕ್ಕೊ ಎಚ್ಚತ್ತ ಮೊಮ್ಮಗ ಮಿಸುಕಾಡಿದಾಗ ಎಳೆದು ತನ್ನ ಕೌದಿ ಹೊಚ್ಚಿ ಚುಕ್ಕು ಬಡಿದಳು.

ಕೆಂಚವ್ವ ಹಿತ್ತಿಲು ಎಂದಿದ್ದರೂ ಹಳ್ಳದ ದಂಡೆ ದೂರವೇ ಇತ್ತು. ಸಗಣಿ ಬುಟ್ಟಿ ತಲೆಯ ಮೇಲಿಟ್ಟುಕೊಂಡು ಎದುರಿಗೆ ಬಂದ ಭರಮನನ್ನು ಶಂಕರಪ್ಪ ಕೇಳಿದ: "ಗೌಡರು ಬಂದರೇನೋ ಭರಮಾ ?"

"ಇಲ್ರೀ ಯಪಾ, ಇನ್ನೂ ಬಂದಿಲ್ಲ. ಈ ಸರೆ ಬರೂವಾಗ ಕಾರಗಾಡಿ ತೊಗೊಂಡಽ ಬರತಾರಂತ್ರೀ. ಅದಕ್ಕಽ ಇನ್ನೂ ಎಡ್ಡ ದಿನಾ ತಡಾ ಆಗ್ಯೆತಿ ಅಂತ ಪತ್ರಾ ಬರದಾರಂತ್ರೀ ಅವ್ವನೋರ ಅಂತಿದ್ರು" ಜೀತದ ಆಳು ಭರಮನಿಗೆ ತನ್ನದೇ ಕಾರು ಬರುತ್ತಿದೆಯೇನೋ ಎನ್ನುವಷ್ಟು ಸಂತೋಷ.

ಊರಲ್ಲಿ ಮೂರ್ನಾಲ್ಕು ಸೈಕಲ್ಲುಗಳೇನೋ ಇದ್ದವು. ಆದರೆ ಕಾರು ಇಡುವ ತಾಖತ್ ಉಳ್ಳವರು ಚಂದಪ್ಪಗೌಡರೊಬ್ಬರೇ. ಇನ್ನೂರ ಎಕರೆ ಜಮೀನು, ಎಂಟೆತ್ತಿನ ಕಮತ, ಹಾಲುಹೈನಿನ ಹೊಳೆ, ಕಾಳು-ಕಡಿ ಕಣಜದಲ್ಲಿ ತುಂಬಿ ತುಳುಕುತ್ತಿದ್ದವು. ಹಣವು ಹೆಚ್ಚಾಗಿ ಕೈಯಲ್ಲಿ ಓಡಾಡಹತ್ತಿದಂತೆ ಖರ್ಚು ಮಾಡುವ ದಾರಿಯನ್ನೂ ಕಂಡು ಹಿಡಿದಿದ್ದರು ಗೌಡರು. ಊರಿಗೆ ಯಾವ ದೊಡ್ಡ ಮನುಷ್ಯರು ಬಂದರೂ ಗೌಡರ ಮನೆಯಲ್ಲೇ ಊಟ - ವಸತಿ, ದೊಡ್ಡವರ ಸ್ನೇಹ ಬೆಳೆದಂತೆ ನಡೆ-ನುಡಿ ಬದಲಾಗಿ ನಾಗರಿಕರಾಗಹತ್ತಿದ್ದರು. ಮಕ್ಕಳನ್ನು ಹೈಸ್ಕೂಲೀಗೇ ಬಿಡಿಸದೆ ಕಾಲೇಜು ಕಟ್ಟೆಯನ್ನು ಹತ್ತಿಸಿದರು. ಮನೆಗೆ ರೇಡಿಯೋ ಬಂದಿತು. ದೊಡ್ಡವರ ಬೀಗತನ ಮಾಡಿದರು. ವಕೀಲರ ಮಗಳು, ಕಲಿತ ಕನ್ಯೆ, ಸೊಸೆಯಾಗಿ ಬಂದಳು. ತಾಲ್ಲೂಕಿನಲ್ಲಾಗಲಿ, ಜಿಲ್ಲಾ ಸ್ಥಳದಲ್ಲಾಗಲಿ ಯಾರಿಗೆ ಏನು ಕೆಲಸವಾಗಬೇಕಾದರೂ ಗೌಡರ ವಶೀಲಿ ಬೇಕೇ ಬೇಕು. ಎಲ್ಲರೊಡನೆ ಓಡಾಡಿ, ಮುತುವರ್ಜಿ ವಹಿಸಿ ಅವರ ಕೆಲಸ ಮಾಡಿಸಿಕೊಟ್ಟು, ಹಳ್ಳಿಗರ ಮುಖಂಡರಾಗಿ ಮೆರೆಯುತ್ತಿದ್ದರು ಚಂದಪ್ಪಗೌಡರು...

"ಅದs ಚಂದಪ್ಪಗೌಡರs ಈಗ ಮಂತ್ರಿಗಳ ಮದುವೀಗೆ ಬೆಂಗಳೂರಿಗೆ ಹೋದವರು ಕಾರು ತರಾಕ ನಿಂತಾರ. ಮತ್ತ ಅವರ ಜೋಡಿ ಓಡ್ಯಾಡಿ ನಾನೂ ಅಷ್ಟಿಷ್ಟು ಕಚೇರಿ, ಕಾಯ್ದೆ, ಕಾನೂನು ಎಲ್ಲಾ ತಿಳಕೊಂಡೇನಿ. ತನ್ನ ಹೊಲಾ, ತ್ವಾಟ, ಆಣಿಕಟ್ಟು ಕಟ್ಟೊ ಕೆಲಸದಾಗ ನೀರಾಗ ಮುಳುಗಿ ಹೋಗ್ತಾವಂತ ಕೇಳಿ ಒಕ್ಕಲತನಾ ಮಾಡಿಕೊಂಡs ಜೀವನಾ ಸಾಗುಸೂ ನಾನು, ಎದೀನs ಒಡಕೊಂಡಿದ್ದೆ. ಎರಡ ದಿನಾ ಚರಗಿತೊಗೊಂಡು ಹತ್ತಿತ್ತು. ಹಾಂಗ ನೋಡಿದರ ಗೌಡರ ತರುವಾಯ ನಾನs ದೊಡ್ಡ ಕುಳಾ. ಆದರ ಜಮೀನs ಹೋದ ಮ್ಯಾಲೆ ಏನು ಮಾಡೂದು, ಆಕಾಶಾನ ತಲೀ ಮ್ಯಾಲೆ ಕಡಕೊಂಡು ಬಿದ್ಹಾಂಗ ಆಗಿತ್ತು. ಅವ್ವ ಅಂತೂ ಈ ಸುದ್ದೀ ಕೇಳಿ ಎರಡ ದಿನಾ ನೀರ ಸುದಾ ಮುಟ್ಟಲಿಲ್ಲಾ. ಮೊದಲs ವಯಸ್ಸಾದಾಕಿ. ಎಲ್ಲಿ ಗೊಟಕ್ ಅಂತಾಳೋ ಅಂತ ಮಾಡಿದ್ವಿ. ಮೈಯಾಗ ಎಲುಬು ತೊಗಲು ಎರಡs ಉಳದಾವ. ಅಪ್ಪ ಸತ್ತಾಗಿಂದ ಖಿಮ್ಮಗ ಉಂಡಾಕೆಲ್ಲಾ ತಿಂದಾಕೆಲ್ಲಾ. ಹೊಸ ಸೀರಿ ತಂದು ಕೊಟ್ಟು, "ಮೈ ತುಂಬ ಉಟಕೊಂಡು ಬೆಚ್ಚಗ ಕುಂದ್ರು" ಅಂದರ, "ನನಗ್ಯಾಕ ಬೇಕು ಅದೆಲ್ಲಾ" ಅಂತ ಸೊಸ್ತೆರು ಉಟ್ಟುಬಿಟ್ಟ ಹಳೇಕೋರಿ ಉಟಕೊಂಡು ಮುದ್ದಾಗಿ ಕುಂಡರತಾಳ. ಆ ಮಾತು, ನಗೀ ಎಲ್ಲಾ ಮೊಮ್ಮಕ್ಕಳ ಜೋಡೀನ, "ಚಿಲಿಪಿಲಿ ಅನ್ನೂ ಹಕ್ಕೀ ಹಾಂಗ ಇವಿಷ್ಟು ಅದಾವಂತ ನಾ ಜೀವ ಹೀಡದೇನಿ" ಅಂತಾಳ. ಎಲ್ಲಾ ಹಿರೇತನಾ ಬಸವಣ್ಣಿಗೆ ಬಂದೈತಿ. ಹಿರೇತನಾ ಅನ್ನಾಕ ಏನ ಸುಕಾ ಅದ ಆಕೀಗೆರೆ. ಮುಂಜಾನಿಂದ ಸಂಜೀತನಾ ಕತ್ತಿ ದುಡದಂಗ ದುಡಿಯೂದs. ಒಕ್ಕಲುತನದ ಮನೀ. ದನಾ-ಕರಾ ಅಂದಮ್ಯಾಲೆ ಕೆಲಸ ಇದ್ದs ಇರತಾವ. ಹಾಂಗೆಲ್ಲಾ ನೋಡಿದರ ನಾಗವ್ವನೂ ಒಳ್ಳೇ ಹುಡಿಗಿ. ಬಾಳೇವಂತಿ ಭೊಲೋತ್ನಾಂಗ ಹೊಂದಿಕೊಂಡು ಹೋಗತಾಳ. ಮೊದಮೊದಲು ಏನೇನೋ ಕಿತಿಬಿ ಮಾಡತಿದ್ದಳಂತ. ಆದರ ಗಂಗಪ್ಪ ಬಿಟ್ಟಾನ ? ಬಾರಕೋಲ ತೊಗೊಂಡು ಒಮ್ಮೆ ಝಾಡಿಸಿಬಿಟ್ಟನಂತ. "ಇದೆಲ್ಲಾ ನಮ್ಮ ಮನ್ಯಾಗ ನಡಿಯೂದಿಲ್ಲಾ. ಅತ್ತಿಗಿ, ಅವ್ವ ಹೇಳಿದಾಂಗ ಕೇಳಿಕೊಂಡ ಬಿದ್ದಿರಬೇಕು. ಅಣ್ಣಾ ನನಗ ಅಪ್ಪನ ಸಮಾನ. ನಾವು ಬ್ಯಾರೇ ಆಗಾಕ ಸಾಧ್ಯ ಇಲ್ಲಾ. ನೀ ಬಂದು ಈ ಮನೀ ಒಡೀಬ್ಯಾಡಾ" ಅಂತ ಹೇಳಿದ್ನಂತ. ಹೌದು, "ಅಣ್ಣಾ ತಮ್ಮ ರಾಮ-ಲಕ್ಷ್ಮಣಾ ಇದ್ಹಾಂಗ ಅದೀರಿ" ಅಂತಿರತಾಳ ಅವ್ವ. ಗಂಗಪ್ಪ ನನಗ ಅಷ್ಟ ಸಹಾಯ ಅಕ್ಕಾನಂತ ನಾಲ್ಕೆತ್ತಿನ ಕಮತಾ ಇಟಕೊಂಡು ಹೊಲಾ, ಪ್ಯಾರಲತ್ವಾಟ, ಲಿಂಬೀ ತ್ವಾಟಾ ನೋಡಿಕೊಳ್ಳಾಕ ಆಕ್ಕೈತಿ. ಇಲ್ಲಾಂದರ ಬರೇ ಆಳಿನ ಮ್ಯಾಲ ಅಂದರ ಸಾಧ್ಯಾನs ಇಲ್ಲಾ. ಅದೂ ಈಗಿನ ಕಾಲದಾಗ ಆಳಿನ ಕೆಲಸಾ ಅಂದರ ಕಚ್ಚಿಗೊಂದು ಕೈ, ಮಚ್ಚಿಗೊಂದು ಕೈ. ನಂಬಿಗೀಯಿಂದ ದುಡಿಯೂವವರs ಇಲ್ಲಾ. ನಮ್ಮಪ್ಪನ ಕಾಲಕ್ಕ ಇದ್ನಲ್ಲ ಜೀತದಾಳು ದ್ಯಾಮಪ್ಪ ಮಾದರವ, ಆದರೂ ಏನ ನಿಷ್ಠಾ, ಏನ ದುಡತಾ, ಗಾಣದ ಎತ್ತು ದುಡದಾಂಗ ದುಡೀತಿದ್ದಾ. ಅಷ್ಟಾದರೂ ಸಿಟ್ಟು ಬಂದಾಗ ಅಪ್ಪ ಬಾರಕೋಲ ಬೀಸದ ಇರತಿದ್ದಿಲ್ಲಾ. ಅವನ ಮಗಾ ಸಾಲೀ ಕಲೀತಿನಿ, ದುಡಿಯಾಕ ಒಲ್ಲೆ ಅಂತಿದ್ದಾ. ಈಗಿನ ದಿನಮಾನಾನ ತಿರುವು-ಮುರವು ಆಗಲಿಕ್ಕೆ ಹತ್ಯಾವು.....

ಹಳ್ಳದಲ್ಲಿ ಕೈಕಾಲು ತೊಳೆದುಕೊಂಡು, ಚರಿಗೆ ತಿಕ್ಕಿದ ಶಂಕರೆಪ್ಪ ತನ್ನಷ್ಟಕ್ಕೆ ತಾನೇ ನಗುತ್ತ ಹಾದೀ ಹಿಡಿದ. "ನನ್ನದೊಂದು ಹುಚ್ಚು ತಲೀನ, ಹೊಲಾ, ತ್ವಾಟಾ ನೀರೊಳಗ ಮುಳುಗಿ ಹೊಂಟಾವ ; ಈಗ ಆಳಿನ ಕಾಳಜೀ ಮಾಡತೇನಿ. ನಮ್ಮದs ನಮಗ ನೆಲೀ ಇಲ್ಲದಾಗ ಉಳಿದದ್ದು ತೊಗೊಂಡ ಮಾಡುದೇನದ. ಗೌಡರ ಜೋಡಿ ನಾಲ್ಕೈದ ಸಾರೆ ಶಹರಕ ಹೋಗಿ, ದೊಡ್ಡ ದೊಡ್ಡ ಸಾಹೇಬರಿಗೆ ಹೇಳಿಕೊಂಡು ನೀರೊಳಗ ಮುಳುಗೂ ಭೂಮಿಗೆ ಹೆಚ್ಚೆಚ್ಚು ರೊಕ್ಕಾ ಕೊಡೂವಾಂಗ ಕೇಳಿಕೊಂಡು ಅವರ ಕೈ ಬೆಚ್ಚಗ ಮಾಡಿ ಬಂದೇನಿ. ಅವರ ಕೈ ಬೆಚ್ಚಗ ಮಾಡಾಕನs ನಾಗವ್ವನ ಪಾಟ್ಲೀ, ಬಸವಣ್ಣಿ ಪದಕದ ಸರಾಮಾರಿ ಬಂದಿವಲ್ಲಾ. ಗೌಡರು ಎಲ್ಲಾ ಸಮಾಧಾನ ಹೇಳತಾರ- "ನಿನಗ ಸರಕಾರದವರು ಐವತ್ತು ಅರವತ್ತು ಸಾವಿರ ರೂಪಾಯಿ ಕೊಡತಾರ ಮತ್ತು ಬ್ಯಾರೆ ಪಡಭೂಮಿ ಜಾಗ ಕೊಡತಾರ, ಅದs ರೊಕ್ಕದಾಗ ಬ್ಯಾರೆ ಜಮೀನು ಕೊಂಡಕೊಂಡರಾತು. ಅಷ್ಟ್ಯಾಕ ಕಾಳಜೀ ಮಾಡತಿ? ಹೀಂಗ ನಿನ್ನೊ ಒಬ್ಬನವ ಏನು ಹೊಲಾ? ಮಂದಿ ಸ್ವಾರ್ಥ ಬಿಡಬೇಕು. ಡ್ಯಾಮು ಕಟ್ಟೂದರಿಂದ ಭಾಳ ಮಂದಿಗೆ ನೀರಾವರಿ ಸಿಗತ್ತೈತಿ. ಹೆಚ್ಚು

ಬೆಳಿ ಬರತೈತಿ. ನಮ್ಮ ದೇಶಕ್ಕ ನಾವು ತ್ಯಾಗ ಮಾಡಬೇಕು" ಅಂತ ಹೇಳತಿರತಾರ. ಆದರ ಹುಟ್ಟಿದ ಊರು, ಮನೀ-ಮನೀ ಮುಳುಗದಿದ್ದರೂ ಹೊಲಾ ನಾವು ಎಲ್ಲಿ ಕೊಳ್ಳತೇವಿ ಅಲ್ಲೇ ಹೋಗಿ ಇರಾಕಬೇಕಲ್ಲ. ಅದಕ್ಕs ಮನೀನೂ ಬಿಡಬೇಕು, ಇಷ್ಟ ದಿನಾ ಅನ್ನಾ ಕೊಟ್ಟ ಭೂಮಿತಾಯಿನ್ನೂ ಬಿಡಬೇಕು. ಸಣ್ಣಾಂದಿರತ ತಿಂದ ಪ್ಯಾರಲ ಹಣ್ಣು, ಲಿಂಬೀಕಾಯಿ ನೆನೆಸಿಕೊಂಡರ ಇನ್ನೂ ಬಾಯಾಗ ನೀರ ಬರತಾವ. ಎಲ್ಲಾ ನಮ್ಮ ಕಣ್ಣಮುಂದs ನೀರ ಪಾಲಾಗತೈತಿ ಅಂತ ಹೊಟ್ಟ್ಯಾಗ ಸಂಕಟ ಆಗತೈತಿ. ಆದರ ಏನು ಮಾಡೂದು? ಆದಷ್ಟು ಹೆಚ್ಚು ರೊಕ್ಕಾ ತೊಗೊಂಡು ಲಗೂನ ಛೊಲೋ ಭೂಮಿ ಕೊಳ್ಳೂದು. ಈಗs ಅಂದರೂ ಇನ್ನೂ ಎರಡ ವರ್ಷ ಬೆಳಿ ತೊಗೊಳ್ಳಾಕ ಬರತೈತಿ, ಅಷ್ಟರಾಗ ಬ್ಯಾರೆ ಠಿಕಾಣಿ ಹುಡುಕೂದು, ಗಂಗಪ್ಪಗ ಎಲ್ಲ ತಿಳಿಸೇನಿ. ಅಂವಾ ನೀ ಹ್ಯಾಂಗ ಹೇಳತಿ ಹಾಂಗ ಮಾಡೂಣು ಅಂತಾನ. ಆದರ ಅವ್ವಗ ಏನೇನೂ ತಿಳಿಯೂದಿಲ್ಲಾ, ಎಷ್ಟ ಹೇಳಿದರೂ "ದೇವರು ಲಗೂನ ನನ್ನ ಕಣ್ಣು ಮುಚ್ಚಲಿ, ಇಲ್ಲೇ ಸಾಯತೇನಿ, ಹೊಲದಾಗ ಹಿರ್‍ಯಾನ ಹಂತ್ಯಾಕ ಹುಗೀರಿ ನನ್ನೂ" ಅಂತ ಅಳತಾಳ. ಆಕೀ ಅತ್ತಾಗೆಲ್ಲಾ ನನ್ನ ಕೈಕಾಲs ಹೋಕ್ಕಾವು. ಅದರಾಗ ನಿನ್ನೆ ಮೂಲಿಮನಿ ಬಸಲಿಂಗ್ಯಾ ಬಂದಿದ್ನಲ್ಲಾ ಚಂಜೀಮುಂದ, ಅವನs ಹೇಳಿದಾ 'ನಮಗ ರೊಕ್ಕಾ ಕೊಡೂ ಸಾಹೇಬರಿಗೆ ವರ್ಗ ಆಗ್ಯೆತಿ; ಅವರ ಬದಲೀ ಬತ್ತೊಬ್ಬರು ಬಂದಾರ' ಅಂತ. ಅವಾಗಿನಿಂದ ನನ್ನ ಹೊಟ್ಟಿ ಕಡ್ಯಾಕs ಹತ್ತೈತಿ. ಮೊದಲಿನ ಸಾಹೇಬರಿಗೆ ಕೈ ಬೆಚ್ಚಗ ಮಾಡಿ ಎಲ್ಲಾ ಬರೋಬ್ಬರಿ ಮಾಡಿ ಬಂದಿದ್ವೀ ನಾನೂ ಗೌಡರೂ. ಈಗಿನವರು ಏನ ಮಾಡತಾರೋ, ಕಾಗದ್ದಾಗಂತೂ ಎಲ್ಲಾ ಅವರ ಕೈಯಾಗ ಇರತೈತಂತ. "ಅವರು ಹೂಂ ಅಂತ ಸಹಿ ಮಾಡಿದರ ಸಾಕು, ರೊಕ್ಕಾ ಬಂದಾಂಗಂತs ತಿಳಕೋ" ಅಂದಿದ್ರು ಗೌಡರು. ಆದರ ಇದೊಂದು ಹೊಸಾ ತೊಡಕ ಗಂಟು ಬಿತ್ತಲ್ಲಾ. ಗೌಡರು ಬರೋದು ಇನ್ನೂ ತಡಾನೋ ಏನೋ; ಎಷ್ಟು ದಿನಾ ಅಂತ ದಾರೀ ನೋಡೂದು. ಸಾಹೇಬರ ಗುರ್ತು ಇಲ್ಲದಿದ್ದರ ಏನಾತು; ಹೋಗಿ ನೋಡಿ ಬಂದರಾತು." ತನ್ನಷ್ಟಕ್ಕೇ ತಾನೇ ಗೊಣಗಿಕೊಳ್ಳುತ್ತ ಹೊರಟಿದ್ದ ಶಂಕರಪ್ಪನನ್ನು, "ಯಪ್ಪಾs ಎತ್ಲಾಗ ಹೊಂಟೀ?" ಮನೆಯ ಬಾಗಿಲಲ್ಲಿ ನಿಂತ ಗೌರಿ ಕೂಗಿ ಎಚ್ಚರಿಸಿದಳು. ವಿಚಾರ ಮಾಡುತ್ತ ತನ್ನ ಮನೆ ದಾಟಿಯೇ ಹೋಗಿದ್ದ ಶಂಕರಪ್ಪ ತಿರುಗಿ ಬಂದ.

ಅವನ ಕೈಗೆ ನೀರು ಹನಿಸುತ್ತ "ಯಪ್ಪಾs ಶಾರಕ ಹೊಕ್ಕೀಯಂತ. ನನಗೆ ಕೆಂಪು ರಿಬ್ಬನ್ನು ತೊಗೊಂಡ ಬಾರಪ್ಪಾ," ಅಂಗಲಾಚಿದಳು ಗೌರಿ. ಅವನಿಗೆ ಗೊತ್ತು ಐದು ಜನ ಹೆಣ್ಣು ಮಕ್ಕಳಿಗೂ ಕೂಡಿ ರಿಬ್ಬನ್ನಿನ ಬಂಡಲ್ಲೇ ಬೇಕಾಗುವುದೆನ್ನುವುದು. ಆದರೂ ಅಷ್ಟು ಆಸೆಯಿಂದ ಬೇಡುವಾಗ ಇಲ್ಲವೆನ್ನುವುದು ಹೇಗೆ? "ಹೂಂ" ಎಂದ.

ಬಚ್ಚಲು ಮನೆಗೆ ಹೊರಟ ಶಂಕರಪ್ಪನಿಗೆ ರೊಟ್ಟಿಯ ಸಪ್ಪಳ ಕೇಳುತ್ತಿತ್ತು. ಗಂಗಣ್ಣ ಆಗಲೇ ಎದ್ದು ಜಳಕ ಮಾಡಿ ನ್ಯಾರಿ ಮಾಡುತ್ತಿದ್ದ. ಹಿರಿಯ ಮಗಳು ಓಡಾಡಿ ತಾಮ್ರದ ತಂಬಿಗೆ, ಮಜ್ಜನಸಾಲಿ ತಿಕ್ಕಿ ತಂದು ಶಿವಪೂಜೆಗೆ ಅಣಿ ಮಾಡಿದಳು. ತುಂಬಿದ ಕೊಡ ಇಲ್ಲದ್ದರಿಂದ ಬಿಂದಿಗೆ ಹಿಡಿದು ಹಿತ್ತಿಲಿನ ಬಾವಿಗೆ ಹೋದಳು. ಅವಳ ಹಿಂದಿನಿಂದ ತಮ್ಮನ ಮಗ ಹಗ್ಗ ಹಿಡಿದು ಹೊರಟ. ಇನ್ನೊಬ್ಬ ಮಗಳು ಹೂವು ಬಿಡಿಸಿ ತಂದಳು. ಶಂಕರಪ್ಪ ಶಿವಪೂಜೆ ಮುಗಿಸಿ ಪಡಸಾಲೆಯ ಬಾಗಿಲು ಮೇಲಿನ ಗಣಪತಿಯ ಪೂಜೆಗೆ ಬಂದಾಗ ಅವನ ಸಣ್ಣ ಮಗು ಐದು ತಿಂಗಳ ಕೂಸು ಅಜ್ಜಿಯ ತೊಡೆಯ ಮೇಲೆ ಅಳುತ್ತಿತ್ತು. ಸುಮ್ಮನಿರಿಸಿ ಸಾಕಾಗಿ ಕೊನೆಗೆ ಕೆಂಚವ್ವ ಕೂಗಿದಳು.: "ಬಸವಣ್ಣೀ ಬಾರಬೇ, ಒಂದಿಷ್ಟ ಮಲೀಸೀಪಿಸಿ ಹೋಗು."

ಅತ್ತೆಯ ಕೂಗು ಕಿವಿಗೆ ಬಿದ್ದರೂ ಸುಮ್ಮನೆ ರೊಟ್ಟಿ ಬಡಿಯುತ್ತಿದ್ದ ನೆಗಣ್ಣೆಯನ್ನು ನಾಗಪ್ಪ ಎಚ್ಚಿಸಿದಳು.

"ಯಕ್ಕಾ ನಾ ರೊಟ್ಟಿ ಮಾಡತೇನಿ ಏಳು. ನೀ ಮಲೀ ಕುಡಿಸಿ ಬಂದು ಮಾವಗ ಊಟಕ್ಕ ಕೊಡು."

ಆಳು ಬಂದು ಹಕ್ಕೆ ಉಡುಗಿ, ಸಗಣಿ ತಿಪ್ಪಿಗೆ ಹಾಕಿ, ದನದ ಉಚ್ಚೀ ತುಂಬಿ ಗುಂಡಿಗೆ ಹಾಕಿ, "ಯವ್ವಾ ಆತ್ರೀ" ಎಂದಾಗ ಕೆಂಚವ್ವ ತಾನೇ ಎದ್ದು ನಾಲ್ಕು ರೊಟ್ಟಿ, ಹಿಂಡಿ ಇಟ್ಟು ತಂದು ಅವರಿಗೆ ನ್ಯಾರೀ ಕೊಟ್ಟಳು. ಮಣೆ, ಅಡ್ಡಣಿಗೆ ಇಟ್ಟು, ಗಂಗಾಳದಲ್ಲಿ ಬಿಸಿ ರೊಟ್ಟಿಯ ಮೇಲೆ ಉಸುಳಿ, ಕರಿಹಿಂಡಿ, ಖಾರದ ಚಟ್ನಿ ಬೆಣ್ಣೆ ಇಟ್ಟು

ಶಂಕರಪ್ಪನಿಗೂ ಕೊಟ್ಟಳು. ಬಸವಣ್ಣೆ ಬಂದು ಚಹ ಸೋಸಿ ಗಂಡನಿಗೂ ಮೈದುನನಿಗೂ ಹಾಕಿಟ್ಟಳು. ಗೌಡರೊಡನೆ ಓಡಾಟ ಜಾಸ್ತಿ ಆದಾಗಿನಿಂದ ಶಂಕರಪ್ಪ ತಮ್ಮ ಮನೆಗೂ ಸಕ್ಕರೆ, ಚಹಾಪುಡಿ ತರುತ್ತಿದ್ದ. ಆದರೆ ನಾಜೋಕಿನವರಂತ ಇವರ ಕಪ್ಪು ಬಸಿಯಲ್ಲಿ ಚಹ ಕುಡಿಯದೆ, ಊಟ ಮಾಡಿದ ಗಂಗಾಳ ತೊಳೆದು, ನೀರು ಕುಡಿದು ಅದರಲ್ಲಿಯೇ ಚಹ ಕುಡಿಯುವವರು. ಅಣ್ಣ ಊರಿಗೆ ಹೋಗುಉನಿದ್ದಾನೆಂದು ತಿಳಿದ ಗಂಗಣ್ಣ ಹೊಲಕ್ಕೆ ಹೋಗದೆ ತಡಮಾಡುತ್ತ ಪಡಸಾಲೆಯಲ್ಲಿ ಸುತ್ತಾಡುತ್ತಿದ್ದ. ಆಳು ಆಗಲೇ ಎತ್ತು ಹೊಡೆದುಕೊಂಡು ಹೊಲಕ್ಕೆ ಹೋಗಿದ್ದ.

ಕೋಟು ರುಮಾಲು ಧರಿಸಿದ ಶಂಕರಪ್ಪ, ಪಟ್ಟಣದಲ್ಲಿ ಅಡ್ಡಾಡಲೆಂದೇ ತಂದಿದ್ದ ನಾಜೂಕಿನ ಚಪ್ಪಲು ಮೆಟ್ಟಿ ತಮ್ಮನಿಗೆ ಹೇಳಿದ: "ನಾ ಒಂದಿಷ್ಟ ಕಚೇರಿಗೆ ಹೋಗಿ ಸಾಹೇಬರಿಗೆ ಭೆಟ್ಟಿ ಆಗಿ ಬರತೇನಿ, ಕೆಲಸ ಮುಗದರ ಸಂಜೀಕ ಬರತೇನಿ, ಇಲ್ಲಾಂದರ ನಾಳೆ ಬರತೇನಿ." ಗಂಗಣ್ಣ ಹೆಚ್ಚು ಮಾತಿನವನಲ್ಲ. ಸುಮ್ಮನೆ ಗೋಣು ಹಾಕಿದ. ಕೋಣೆಯಲ್ಲಿ ಹೊರಸಿನ ಬುಡದಲ್ಲಿದ್ದ ಕಬ್ಬಿಣದ ಪೆಟ್ಟಿಗೆಯಿಂದ ನೂರು ರೂಪಾಯಿ ತೆಗೆದಿಟ್ಟುಕೊಳ್ಳಲು ಶಂಕರಪ್ಪ ಮರೆಯಲಿಲ್ಲ. ಅವನು ಮೆಟ್ಟಿಲಿಳಿದಾಗ ಗೌರಿ ಮತ್ತೊಮ್ಮೆ ನೆನಪು ಮಾಡಿದಳು. "ಯಪ್ಪಾ ಕೆಂಪು ರಿಬ್ಬನ್ ತಾ."

ಊರಿಗೆ ಬಂದು ಕಚೇರಿಗೆ ಮುಟ್ಟಿದಾಗ ಹನ್ನೆರಡು ಹೊಡೆದು ಹೋಗಿತ್ತು. ಹಾಲಿನಲ್ಲಿ ಕುಳಿತ ಗುರ್ತಿನ ಕಾರಕೂನರಿಗೆಲ್ಲ ನಮಸ್ಕಾರ ಹಾಕುತ್ತಾ ಸಾಹೇಬರ ಕೋಣೆಯ ಬಾಗಿಲಿಗೆ ಬಂದು ಹುಸೇನಿಯನ್ನು ಪಿಸುದನಿಯಲ್ಲಿ ಕೇಳಿದ ; "ಸಾಹೇಬ್ರ ಬಂದಾರೇನಪ್ಪಾ?"

"ಹೌದ್ರೀ ಯಣ್ಣಾ, ಬಂದಾರ, ಆದರ ನಿಮ್ಮ ಹೆಸರಿನ ಚೀಟಿ ಬರಕೊಡ್ರಿ ಒಯ್ದು ತೋರಸತೀನಿ. ಹೊಸಾ ಸಾಹೇಬರು ಬಂದಾಗಿಂದ ಇದನ್ನ ಚಾಲ್ತಿಯೊಳಗ ಇಟ್ಟಾರ" ಎಂದ ಶಂಕರಪ್ಪ. ಚೀಟಿಯೊಡನೆ ಕೈಯಲ್ಲಿ ಎಂಟಾಣೆ ತುರುಕಿದ. ಹುಸೇನಿ ಮೆಟ್ಟಿ ಬೀಳುತ್ತ ಅದನ್ನು ಹಿಂದಿರುಗಿಸಿದ.

'ಅದೆಲ್ಲಾ ಬ್ಯಾಡ್ರಿ, ಸಾಹೇಬ್ರಿಗೆ ಗೊತ್ತಾದರ ನನ್ನ ನೌಕರೀ ಹೋದೀತು. ಅವರಿಗೆ ಇವೆಲ್ಲಾ ಸೇರುದಿಲ್ಲಾ" ಎಂದು ಮೆಲ್ಲಗೆ ಹೇಳುತ್ತಲೆ ಬಾಗಿಲು ನೂಕಿ ಒಳಗೆ ಹೋದ ಹುಸೇನಿ.

***

ಬಾಗಿಲು ತೆರೆದುಕೊಂಡಿತು. ಶಂಕರಪ್ಪ ಒಳಗೆ ಹೋದ. ಚೀಟಿಯನ್ನು ಓದಿ ತಲೆ ಎತ್ತಿದ ಸಾಹೇಬರು ಅವನನ್ನೇ ದಿಟ್ಟಿಸಿದರು. ಹೌದೇ? ಅದೇ ಶಂಕರನೇ ಇವನು? ಇರಬಹುದೇ? ಉಹುಂ, ಕಣ್ಣು, ಮೂಗು, ಗುಳಿ ಬಿದ್ದ ಗಲ್ಲ, ಸಡಿಲಾದ ಹಲ್ಲು, ಮಾಸಿದ ಜರಿಯ ರುಮಾಲು, ಹರಿದ ಕರಿಯ ಕೋಟು..... ಉಹುಂ, ಯಾವುದರಲ್ಲೂ ಆ ಹಿಂದಿನ ಲಂಡಂಗಿ ಚೊಣ್ಣದ, ದಷ್ಟಪುಷ್ಟನಾಗಿದ್ದ, ದರ್ಪದ ಶಂಕರನ ಹೋಲಿಕೆ ಕಾಣಲಿಲ್ಲ. ಹುಡುಕಾಡುವಂತೆ ಮತ್ತೆ ಮತ್ತೆ ಅವನನ್ನೇ ನೋಡಿದರು ಸಾಹೇಬರು.

ತನ್ನನ್ನೇ ದಿಟ್ಟಿಸುತ್ತಿದ್ದ ಸಾಹೇಬರೆದುರಿಗೆ ಬಾಗಿ ಕೈ ಮುಗಿದು ವಿನೀತಭಾವದಿಂದ ನಮಸ್ಕರಿಸಿದ ಶಂಕರಪ್ಪ ಹೇಳಿದ, "ಸಾಹೇಬರಿಗೆ ನನ್ನ ಗುರ್ತು ಇಲ್ರೀ; ನಾನು ಬ್ಯಾತನಾಳದ ಶಂಕರಪ್ಪ. ಹೊಲದ ಕೆಲಸಕ್ಕ ಬಂದೀನಿ" ಎಂದು ಮತ್ತೆ ಬಗ್ಗಿದ.

ಮುಗಿದ ಆ ಕೈಗಳನ್ನೇ ನೋಡುತ್ತಿದ್ದ ಸಾಹೇಬರಿಗೆ ಬೇಡವಾದ ನೆನಪೊಂದು ಮಿಂಚಿತು ಮನಸ್ಸಿನಲ್ಲಿ. ಅದೇ ಕೈಗಳೇ ತನ್ನನ್ನು ಎಷ್ಟೋ ಸಲ ಕೋಲಿನಿಂದ ಹೊಡೆದಿದ್ದವು. ಮನೆಯ ಕಟ್ಟೆ ಹತ್ತಿರ ಬಂದು ನಿಲ್ಲಲೂ ಅವಕಾಶ ಕೊಡದೆ ದೂರ ತಳ್ಳಿದ್ದವು. ಯಜಮಾನತಿ ತನಗೆ ನ್ಯಾರೀ ಕೊಟ್ಟಾಗ ರೊಟ್ಟಿಯನ್ನು ಮೇಲಿಂದ ಚೆಲ್ಲುತ್ತಿದ್ದವು. ಚೆಲ್ಲಿದಾಗ ಒಮ್ಮೊಮ್ಮೆ ರೊಟ್ಟಿಯ ಮೇಲಿನ ಪಲ್ಲೆ ನೆಲಕ್ಕೆ ಬಿದ್ದು ಮಣ್ಣು ಪಾಲಾಗುತ್ತಿತ್ತು. ಹಾಗಾದಾಗ ತಾನು ಒಣ ರೊಟ್ಟಿ ತಿನ್ನಬೇಕಾಗುತ್ತಿತ್ತು. ಅದನ್ನು ನೋಡಿದ ಗಂಗಣ್ಣ ಸಣ್ಣವನಾದರೂ ಕರುಳಿನವ. ಅವ್ವನ ಹತ್ತಿರ

ಮಜ್ಜಿಗೆ ಕೇಳಿ ತಂದು ತೆಂಗಿನ ಕರಟದಲ್ಲಿ ಕೊಡುತ್ತಿದ್ದವನು ಅವನೇ. ರೊಟ್ಟಿ ಒಂದೇ ಏನು ಗೋಲಿಗುಂಡು, ಬಳಪ, ಒಡಕ ಪಾಟಿ ಸಾಲೆಯಲ್ಲಿ ತನಗೆ ಬೇಕಾದುದೆಲ್ಲ ಕೊಡುತ್ತಿದ್ದ. ತನ್ನೊಡನೆ ಆಡುತ್ತಿದ್ದ. ಮನೆಗೆ ಬಂದೊಡನೆ ಹಿರಿಯರ ಹೆದರಿಕೆಗೆ ಮತ್ತೆ ದೂರ ದೂರ. ಆದರೂ ಆ ಕಣ್ಣುಗಳಲ್ಲಿಯ ಪ್ರೀತಿ, ಸ್ನೇಹ ಎಷ್ಟೂ ಮಾಸುತ್ತಿರಲಿಲ್ಲ.

ಕೈ ಫೈಲು ತಿರುವುತ್ತಿತ್ತು. ಮನಸ್ಸು ಎಲ್ಲೆಲ್ಲೋ ಹಾರುತ್ತಿತ್ತು. ಫ್ಯಾನಿನ ಸ್ವಿಚ್ ಒತ್ತಿದರು; ತಂಗಾಳಿ ಸುಳಿಯಿತು. ಮುಖವೆತ್ತಿ ಮುಂದಿನ ಕುರ್ಚಿಯತ್ತ ಕೈ ಮಾಡಿ, "ಕೂಡ್ರಿ" ಎಂದರು ಸಾಹೇಬರು.

ಸಾಹೇಬರು ಗಂಭೀರ ಮುಖ ಕಂಡು ಗಾಬರಿಯಾಗಿದ್ದ ಶಂಕರಪ್ಪ ಆಶ್ಚರ್ಯದಿಂದ ನೋಡಿದ. ಇದುವರೆಗೆ ಯಾವ ಸಾಹೇಬರೂ ಅವನಿಗೆ ಕೂಡ್ರಲು ಹೇಳಿರಲಿಲ್ಲ. ಅನುಮಾನಿಸುತ್ತಿದ್ದ ಅವನತ್ತ ತಿರುಗಿ ಮತ್ತೊಮ್ಮೆ, "ಕೂತ್ಕೊಳ್ರಿ ಮೊದಲ" ಎಂದರು. ಎದೆ ಡವ ಡವ ಎನ್ನುತ್ತಿದ್ದಾಗಲೇ ಗಟ್ಟಿ ಧೈರ್ಯ ಮಾಡಿ ಕುಳಿತೇಬಿಟ್ಟ ಶಂಕರಪ್ಪ.

ತಟ್ಟನೆ ಬಂದಿತು ಸಾಹೇಬರ ಪ್ರಶ್ನೆ. "ಚಹಾ ಕುಡಿತಿರೇನ್ರೀ?"

ಶಂಕರಪ್ಪ ತೊದಲಿದ. "ಹೂಂ, ಹೌದು," ಎಂದು. ತಾನು ಬಂದಿದ್ದು ರೊಕ್ಕ ಕೊಡೂ ಸಾಹೇಬರ ಕಡೆಗೆ ಹೌದೋ ಅಲ್ಲವೋ ಎಂದು ಸಂಶಯಿತನಾಗಿದ್ದ. ಹಿಂದಿನವರೆಲ್ಲಾ ತನ್ನ ಹಣದಲ್ಲೇ ಮೋಜು ಮಾಡಿ ಜಬರ್ದಸ್ತಿನಿಂದ ಮಾತನಾಡುತ್ತಿದ್ದರು. ಇವರೇಕೆ ಹೀಗೆ ? ಓಹೋ ಇವರಿಗೇ ಚಹಾ ಬೇಕೇನೋ, ಚಟಕ್ಕನೇ ಎದ್ದವನೇ, "ನಾ ತರಸ್ತೀನಿ ಸಾಹೇಬರ ಚಹಾ. ಸೀ. ಖಾರಾ, ಹೇಳಿ ಬರಲೇನ್ರಿ?" ಎಂದ.

"ಕೂತ್ಕೊಳ್ರಿ ಸುಮ್ಮನ, ನೀವು ಹೋಗೋದು ಬ್ಯಾಡಾ, ಹುಸೇನಿ ಹೇಳಿ ಬರತಾನ, ಉಡುಪಿ ಹೋಟಲ್ ಮಾಣಿ ತರತಾನ, ಈಗ ನಾ ತರಸೋದು ಬರೇ ಚಹಾ ಅಷ್ಟs, ನಾ ಏನ ಕೈಲೆ ಮುಟ್ಟೋದಿಲ್ಲ. ನೀವು ಕುಡಿತೀರಲ್ಲಾ?" ಪ್ರಶ್ನೆ ಕಟುವಾಗಿತ್ತು.

ಶಂಕರಪ್ಪನಿಗೆ ದಿಕ್ಕು ತಪ್ಪಿತು. ಏನು ಉತ್ತರ ಕೊಡಬೇಕೋ ತಿಳಿಯಲಿಲ್ಲ. ಪೆಚ್ಚಾಗಿ ನಕ್ಕ. "ನಾನು ಮನಿಯೊಳಗ ಶಿವಪೂಜೆ, ಮಡಿ ಮಾಡಿದರೂ ಹೊರಗ ಬಂದಾಗ ಎಲ್ಲಾ ತೊಗೋತೇನಿ, ಅದರಾಗ ನೀವು ಕೊಡುತೀನಂದರ ನಾಯಾಕ ಬ್ಯಾಡ ಅನ್ನಲಿ ?" ಎಂದು ಅವರನ್ನು ಪ್ರಸನ್ನಗೊಳಿಸಲು ಮತ್ತೆ ಹಲ್ಲು ಕಿರಿದ.

ಸಾಹೇಬರ ಹುಬ್ಬು ಗಂಟಾಯಿತು. "ನಾ ಮುಟ್ಟಿದ್ದು ನೀವು ಹ್ಯಾಂಗ ಕುಡಿತೀರಿ? ನಾ ಯಾರು ಅನ್ನೂದು ನಿಮಗೆ ಗುರ್ತು ಹತ್ತಿಲ್ಲ, ಅದಕ್ಕ ಮಾತಾಡತೀರಿ. ನನ್ನ ಕುಲಾ ಹೇಳದ ನಿಮಗೆ ಮೋಸ ಮಾಡೂದಿಲ್ಲಾ. ನಾನು ನಿಮ್ಮ ಜೀತದಾಳು ದ್ಯಾಮಪ್ಪನ ಮಗಾ ಮರಿಯಪ್ಪ, ಗುರುತು ಹತ್ತಿತೇನು ?"

ಮುಖಕ್ಕೆ ರಾಚಿದಂತೆ ಬಂದ ಸವಾಲಿಗೆ ಹೆದರಿ ತತ್ತರಿಸಿದ ಶಂಕರಪ್ಪ. ಕೈ ಕಾಲು ನಡುಗ ಹತ್ತಿದವು. ಕುರ್ಚಿಯ ಕೈಗಳನ್ನು ಬಿಗಿಯಾಗಿ ಹಿಡಿದ. ಗುರುತು ಹಿಡಿಯಲು ಸಾಹೇಬರ ಮುಖವನ್ನೇ ನೋಡಬೇಕಲ್ಲ, ಧೈರ್ಯವಾಗಲೊಲ್ಲದು. ಗಂಟಲು ಒಣಗಿತು, ಕುಳಿತಲ್ಲೇ ಚಡಪಡಿಸಿದ. 'ಮರಿಯ' 'ಮರಿಯ' ಎಂದು ಗಂಟಲೊಳಗೇ ಗುಣುಗುಣಿಸಿದ.

ದ್ಯಾಮನ ಹೆಂಡತಿ ತಮ್ಮ ಮನೆಗೆ ಕೆಲಸಕ್ಕೆ ಬಂದಾಗಲೆಲ್ಲ ಪುಟ್ಟ ಬೆತ್ತಲೆ ಹುಡುಗನನ್ನು ಕರೆದುಕೊಂಡು ಬರುತ್ತಿದ್ದದ್ದು ನೆನಪಾಯಿತು. ಅದು ಅಂಬೆಗಾಲಿಡುತ್ತಾ ಹಕ್ಕೆ ಬಿಟ್ಟು ಅಂಗಳದ ಸಮೀಪ ಬಂದಾಗಲೆಲ್ಲಾ ಅಪ್ಪ ಗುಡುಗುತ್ತಿದ್ದ. "ಎಲೇ ಎಲ್ಲ್ಯದಿ, ಕರಕೊಂಡ ಹೋಗ ಅತ್ಲಾಗ, ಮುಟ್ಟಿಗಿಟ್ಟೀತು," ಎಂದು. ತನಗಿನ್ನೂ ನೆನಪಿದೆ. ಒಮ್ಮೆ ತಾನು, ಗಂಗಣ್ಣ ಗೆಳೆಯರೊಡನೆ ಚಿಣ್ಣಿ ಕೋಲು ಆಡುವಾಗ ಆಟ ನೋಡುವ ಆಸೆಯಿಂದ ಮುಂದೆ ಬಂದ ಮರಿಯು ತೀರ ಸಮೀಪಕ್ಕೆ ಬಂದು ನಿಂತಿದ್ದ. ತಾನು ನೋಡಿದವನೇ ಅಪ್ಪನ ಹಾಗೆಯೇ ಹಾರಾಡಿ, ಕೋಲು ತಂದು

ಅವನನ್ನು ಹೊಡೆಯಲು ಬೆನ್ನು ಹತ್ತಿದ್ದು, ಓಡುತ್ತಿದ್ದ ಮರಿಯ ಮುಗ್ಗರಿಸಿ ಬಿದ್ದಿದ್ದ. ಬಾಯಿ ತುಂಬ ಬಳ ಬಳ ರಕ್ತ ಸುರಿದಿತ್ತು ಹಲ್ಲಿಗೆ ಪೆಟ್ಟು ತಾಕಿ.

ಶಂಕರಪ್ಪನಿಗೆ ಕಣ್ಣು ಕತ್ತಲೆಯಿಟ್ಟಿತು. ಕಣ್ಣು ಮುಚ್ಚಿಕೊಂಡು ಕೂತು ಸುಧಾರಿಸಿಕೊಂಡ. ಹಾಗೆಯೇ ಕಣ್ಣೆತ್ತಿ ಸಾಹೇಬರತ್ತ ನೋಡಿದ. ಅವರು ಮತ್ತೆ ಫೈಲಿನ ಮೇಲೆ ಕಣ್ಣಾಡಿಸುತ್ತಿದ್ದರು. ಅದು ತನ್ನದೇ. ಈಗ ಧೈರ್ಯವಾಗಿ ಅವರ ಮುಖವನ್ನೇ ದಿಟ್ಟಿಸಿದ. ತಾನು ತೊಟ್ಟು ಬಿಟ್ಟ ಚಡ್ಡಿ ಹಾಕಿದ್ದ, ಸಣಕಲಾಗಿದ್ದ, ಎಣ್ಣೆ ಕಾಣದ ಕೂದಲಿನ, ಹೊಲದ ಕೆಲಸಗಳಿಂದ ಒರಟಾಗಿ ಬಡಕಲಾಗಿದ್ದ ಕರಿಯ ಹುಡುಗ ಮರಿಯನೆಲ್ಲಿ, ಶುಭ್ರವಾದ ಅರಿವೆ ಹಾಕಿಕೊಂಡು, ದುಂಡ ದುಂಡಗೆ ದಷ್ಟಪುಷ್ಟವಾಗಿ, ಬಣ್ಣವೇರಿದ, ಆಕರ್ಷಕ ಕ್ರಾಪಿನ, ದರ್ಪ, ಮಂದಹಾಸ ಎರಡೂ ಕೂಡಿದ ಮುಖದ, ಅಧಿಕಾರದ ಕುರ್ಚಿಯಲ್ಲಿ ಕುಳಿತ ಈ ಸಾಹೇಬರೆಲ್ಲಿ? ಎಳ್ಳಷ್ಟೂ ಹೋಲಿಕೆಯಿಲ್ಲ. "ಉಹು" ಎಂದ.

"ನಿಮಗ ಜುಲುಮಿ ಮಾಡೂದಿಲ್ಲ. ನೀವು ನನ್ನ ಅತಿಥಿ. ಚಹಾ ಕುಡೀತೀರೇನು. ಅಂತ ಕೇಳಿದೆ. ಬ್ಯಾಡಾದರೆ ಬಿಡ್ರಿ" ಮಾತಿನಲ್ಲಿ ಮೃದುತನವಿತ್ತು.

"ಇಲ್ರೀ, ನಾ ಏನು ಚಹಾ ಬ್ಯಾಡ ಅನ್ನೂದಿಲ್ಲಾ, ತರಸ್ರಿ ಕುಡೀತೀನಿ." ಸಾಹೇಬರಿಗೆ ಅಸಮಾಧಾನವಾದೀತೆನ್ನುವ ಹೆದರಿಕೆಯಿಂದ ಶಂಕರಪ್ಪ ನುಡಿದ.

ಚಹಾ ಕುಡಿದಾದ ಮೇಲೆ ಸಿಗರೇಟು ಹೊತ್ತಿಸಿದ ಸಾಹೇಬರು "ಹಂ, ಈಗ ಹೇಳ್ರಿ ನಿಮ್ಮ ಪ್ರಾಬ್ಲೆಮ್ ಏನು ಅಂತ?" ಎಂದು ಕುರ್ಚಿಯಲ್ಲೊರಗಿ ಕಣ್ಣು ಮುಚ್ಚಿದರು. ಶಂಕರಪ್ಪ ಎಲ್ಲವನ್ನೂ ವಿವರಿಸಿದ. "ಒಕ್ಕಲುತನಾ ಮಾಡಿ ಬದುಕುವವರು ನಾವು. ತ್ವಾಟ, ಹೊಲಾ ಎಲ್ಲಾ ನೀರೊಳಗ ಮುಳುಗಿ ಹೋಗತಾವ. ಮನೀಯೊಳಗ ಮಂದಿನೂ ಭಾಳ. ಮುಂದ ಬಾಳೇ ಮಾಡೂದು ಕಠಿಣ ಆಗತೈತಿ. ಬ್ಯಾರೇ ಹೊಲಾ ಕೊಳ್ಳಬೇಕು ಅಂತ ಮಾಡೀವಿ, ಅದನ್ನ ಬಿಟ್ಟರ ಗತೀನs ಇಲ್ಲಾ ನಮಗ. ಅದಕ್ಕ ತಾವು ದೊಡ್ಡ ಮನಸ್ಸು ಮಾಡಿ ಹೊಲಕ್ಕ, ತ್ವಾಟಕ್ಕ ಹೆಚ್ಚು ರೊಕ್ಕಾ ಸಿಗೂ ಹಾಂಗ ಮಾಡಬೇಕು. ಎಲ್ಲಾ ನಿಮ್ಮ ಕೈಯಾಗ ಇರತೈತಂತ ಗೌಡರು ಹೇಳುತಾರ" ಎಂದು ಮತ್ತೆ ಮತ್ತೆ ಕೈ ಮುಗಿದ. ಮರಿಯನಾದರೂ ಅವನೀಗ ಸಾಹೇಬ. ಅವನಿಗೆ ಕೈಮುಗಿದರೆ ತಪ್ಪಿಲ್ಲ.

ಸಾಹೇಬರ ಮನಸ್ಸು ಮತ್ತೆ ಹಿಂದಕ್ಕೋಡಿತು. ತಾನು ಸಾಲೆ ಕಲಿಯುತ್ತೇನೆಂದು ಹಟ ಮಾಡಿದಾಗ ಅಪ್ಪ ಅವ್ವ ಮನಸ್ಸು ನೋಯಿಸಲಿಚ್ಛಿಸದೆ ಸಾಲೆಗೆ ಕಳಿಸಿದರು. ಗಾಂಧೀವಾದಿ ಬೂದಿಹಾಳ ಮಾಸ್ತರರ ಪುಣ್ಯಾತ್ಮರ ಸಹೃದಯತೆಯಿಂದ, ಗಂಗಣ್ಣನ ಪುಸ್ತಕ ಪಾಟಿಗಳ ನೆರವಿನಿಂದ ತಾನು ಮುಲಕೀ ಪರೀಕ್ಷೆ ಪಾಸಾಗಿದ್ದ. ಬರೀ ಜೀತದಾಳಾಗಿ ದುಡಿಯುವುದರಲ್ಲಿ ಸುಖವಿಲ್ಲವೆನ್ನುವುದನ್ನು ಮನಗಂಡು ಇನ್ನೂ ಕಲಿಯುವ ಆಸೆ ಮಾಡಿದ್ದ. ಆ ಮಾತು ದೊಡ್ಡ ಸಾವುಕಾರರ ಕಿವಿಗೆ ಬಿದ್ದಾಗ ಅವರೆಂದ ಮಾತು ಇನ್ನೂ ತನ್ನ ಎದೆಯಲ್ಲಿ ಕೊರೆದಂತಿದೆ.

"ಇಂಥಾ ದರಿದ್ರ ಮುಂಡೇವು ಎಲ್ಲಾ ಸಾಲೀ ಕಲಿತರ ಸರಸೋತಿಗೆ ಮೈಲಿಗಿ ಆಗತದ. ಸುಮ್ಮನ ನಿಮ್ಮ ಮಗನ್ನ ಜೀತಕ್ಕ ಇಡಲೇ ದ್ಯಾಮ್ಯಾ, ಇಲ್ಲದ್ದs ಸಲಿಗೀ ಕೊಡಬ್ಯಾಡಾ. ಸಲಿಗೀ ನಾಯಿ ತಲಿಗೆ ಏರಿತಂತ. ಹಾಂಗ ಆದೀತು. ಇಲ್ಲೇ ಇದ್ದರ ಸತ್ತಾಗ ನಿನಗ ಬಾಯಾಗ ಹನಿ ನೀರು ಬಿಟ್ಟಾನು. ಅವನ್ನ ಎಲ್ಲೂ ಕಳಿಸಬ್ಯಾಡಾ."

ತಾನು ಮಾತ್ರ ಹಟ ಬಿಟ್ಟಿರಲಿಲ್ಲ. ಅಪ್ಪನಿಗೆ ಮಾಸ್ತರರು ಬುದ್ಧೀ ಹೇಳಿದ್ದರು: "ಸರಸ್ವತಿ ಅವಗ ಒಲೀತಾಳ ಅನ್ನೂದು ನನಗ ಖಾತ್ರಿ ಅದ. ನಿಮಗ ಸಾಲಿ ಫೀ ತೆಗೆದುಕೊಳ್ಳುದಿಲ್ಲಾ. ಮಗಾ ಶಾಣ್ಯಾ ಅದಾನ. ಅವಗ ಸ್ಕಾಲರಶಿಪ್ಪೂ ಸಿಗತದ. ಮುಂದೆ ಸಾಲೀ ಕಲಿಸು," ಎಂದು. ತಾನು ಈಗ ಈ ಸ್ಥಿತಿಯಲ್ಲಿರಲು ಕಾರಣ ಮಾಸ್ತರರೇ ಅನ್ನಬೇಕು; ಅವರೇ ಕಾರಣ, ಛೇ ಆದರ ಅವರೊಬ್ಬರೇ ಅಲ್ಲ. ಇನ್ನೊಂದು ದೊಡ್ಡ ಜೀವ ಇತ್ತು ಯಜಮಾನತಿ ಕೆಂಚವ್ವ. ಅಪ್ಪನ ಪಾಲಿನ ದೇವರು ಆಕೆ. ಅವರ ಹತ್ತಿರ ಹೋಗಿ ತನ್ನೆಲ್ಲ ಕಷ್ಟ ತೋಡಿಕೊಂಡಿದ್ದ ಅಪ್ಪ. ಮಗನನ್ನು ದೂರದ ಶಾಲೆಗೆ ಕಳಿಸಲಿಕ್ಕೆ ಹಣ ಬೇಕಾಗಿತ್ತು. ಅಪ್ಪನ ಹತ್ತಿರ ಒಂದು ದುಡ್ಡೂ ಇರಲಿಲ್ಲ. ಎಲ್ಲವನ್ನೂ ಕೇಳಿದ

ಕೆಂಚವ್ವ ಒಳಗೆ ಹೋಗಿ ಮೆಣಸಿಕಾಯಿ, ಕಾಳು-ಕಡಿ ಮಾರಿ, ಗಂಡನಿಗೆ ಗೊತ್ತಿಲ್ಲದಂತೆ ಕೂಡಿಟ್ಟ ಕಳ್ಳಗಂಟಿನಿಂದ ಆವತ್ತು ರೂಪಾಯಿ ತಂದು ಕೊಟ್ಟು, 'ಇಕಾ ದ್ಯಾಮಾ, ಈ ರೊಕ್ಕಾ ತೊಗೋ, ಮಗನ್ನ ಸಾಲಿಗೆ ಹಾಕು, ಅವನ ನಸಿಬದಾಗ ಇದ್ದಾಂಗ ಆಗತೈತಿ. ದೇವರ ಮ್ಯಾಲೆ ಭಾರ ಹಾಕು. ಮತ್ತ ಈ ವರ್ಷ ಜೀತಾ ಮುಗದ ಮ್ಯಾಲೆ ನೀವೂ ಹೋಗಿ ಅವನ ಹಂತ್ಯಾಕ ಇದ್ದ ಬಿಡ್ರಿ. ಇಲ್ಲಿ ದುಡಿಯೂದು ಅಲ್ಲೇ ದುಡಕೊಂಡು ಇರ್ರಿ" ಎಂದಿದ್ದರು. ಆ ತಾಯೀನ್ನ ತಂಪೊತ್ತಿನೊಳಗೆ ನೆನೀಬೇಕು. ಪಟ್ಟನೆ ಕಣ್ಣು ತೆರೆದ ಸಾಹೇಬರು "ಕೆಂಚವ್ವನೋರು ಹ್ಯಾಂಗದಾರು?" ಎಂದರು. ಉತ್ತರ ಏನೆಂದು ಬರುವುದೋ ಎನ್ನುವ ಅಳುಕು ಧ್ವನಿಯಲ್ಲಿ.

"ಅದಾಳ್ರಿ ಹಾಂಗs ಇದ್ದೂ ಸತ್ತಾಂಗ. ಅಪ್ಪ ಹೋದಾಗಿನಿಂದ ಆಕಿ ಜೀವಕ ಏನೂ ಸುಖಾ ಇಲ್ಲಾ. ಹೊಲಾ ಮುಳುಗೂ ಸುದ್ದೀ ಕೇಳಿದಾಗಿಂದಂತೂ ಹೊಟ್ಟಿಬ್ಯಾನಿ ಹಚ್ಚಿಕೊಂಡಾಳ. ದೇವರ ಲಗೂನs ಕಣ್ಣುಮುಚ್ಚಲಿ ಅಂತ ಅಳತಾಳ. "ಶಂಕರಪ್ಪ ದೈನಾಸದಿಂದ ಹೇಳಿದ. ಸಾಹೇಬರ ಮನಸ್ಸಿನಲ್ಲಿ ಮರುಕ ಹುಟ್ಟಿಸಲು. ಆದರೆ ಅಲ್ಲಿ ಆಗಲೇ ಸೆಲೆ ಒಡೆದಿತ್ತು. ತಮ್ಮ ಭಾವನೆ ಶಂಕರಪ್ಪನಂತ ಶುಷ್ಕ ಹೃದಯಿಗೆ ಕಾಣದಂತೆ ಕಣ್ಣು ಮುಚ್ಚಿದರು.

ತಾನು ಚಿಕ್ಕಂದಿನಲ್ಲಿ ಕೆಲಸ ಮಾಡಿದ ಹೊಲ ಅವರ ಕಣ್ಣ ಮುಂದೆಯೇ ಮಾಯವಾಯಿತು. ಹಸಿರು ತುಂಬಿ ತೊನೆಯುತ್ತಿದ್ದ ಬೆಳೆ ಪ್ರವಾಹದಲ್ಲಿ ಮುಳುಗಿ ಹೋಯಿತು. ಗಂಗಣ್ಣನೊಡನೆ ಕಣ್ಣು ಮುಚ್ಚಾಲೆಯಾಡಿದ ಲಿಂಬಿ ತೋಟ ತೇಲಿ ಹೋಯಿತು. ಪೇರಲ ಗಿಡದ ತುಂಬ ಸುರಿದ ಹಣ್ಣುಗಳ ಚಿತ್ರ ಕಣ್ಣ ಮುಂದೆ ಕಟ್ಟಿತು. ಒಂದು ದಿನ ತಾನು ಗಂಗಣ್ಣ ಕೂಡಿ ಒಂದೇ ಪೇರಲ ಹಣ್ಣನ್ನು ಕಚ್ಚಿ ತಿಂದದ್ದನ್ನು, ಈ ಶಂಕರಪ್ಪ ಬಾಗಿ ಬಾಗಿ ಕೈ ಮುಗಿಯುತ್ತ ಹಲ್ಲು, ಕಿರಿಯುತ್ತ ನಿಂತಿದ್ದಾನಲ್ಲ- ಇದೇ ಶಂಕರಪ್ಪ ನೋಡಿ, ಚಾಡಿ ಹೇಳಿದ್ದ ತನ್ನ ತಂದೆಯ ಮುಂದೆ. ಸಾವುಕಾರರು ರಾಕ್ಷಸಾವತಾರ ತಾಳಿದ್ದರು. "ಸೂಳೇಮಗನs ಇಷ್ಟು ಸೊಕ್ಕು ಬಂತೇನು ನಿನಗ? ನಿನ್ನ ಚರ್ಮಾನs ಸುಲಿತೀನಿ ಇವತ್ತ" ಎನ್ನುತ್ತ ತನ್ನ ಬೆನ್ನ ಮೇಲೆ ಬಾರಕೋಲು ಬೀಸಿ ಬೀಸಿ ಹೊಡೆದಿದ್ದರು. ನೆಲದ ಮೇಲೆ ಉರುಳಾಡಿಸಿದ್ದರು. ಥರ ಥರ ನಡುಗುತ್ತ ಅಪ್ಪ ಒಂದು ಮೂಲೆಯಲ್ಲಿ ಅಳುತ್ತ ನಿಂತಿದ್ದ. ಅವ್ವನಂತೂ ತನ್ನ ಅವಸ್ಥೆ ನೋಡಲಾರದೆ, ಸಂಕಟ ಪಡುತ್ತ ಗುಡಿಸಲಿಗೆ ಓಡಿ ಹೋಗಿದ್ದಳು. ಅವರ ಕೈಯಿಂದ ತನ್ನನ್ನು ಬಿಡಿಸಿಕೊಳ್ಳುವ ಎದೆಗಾರಿಕೆ ಯಾರಿಗೂ ಆಗಲಿಲ್ಲ. ಅಂದು ಸಂಜೆಯವರೆಗೂ ಏಳಲೂ ಆಗದೆ ಅಳುತ್ತ ಹಸಿವಿನಿಂದ ಸಂಕಟ ಪಡುತ್ತ, ಹಕ್ಕೆಯಲ್ಲೇ ಹೊರಳಾಡಿದ್ದೆ ತಾನು. ಅಂದಿನ ನೆನಪಾದರೆ ಇಂದಿಗೂ ಮೈ ಜುಮ್ಮೆನ್ನುತ್ತದೆ. ಹೊಟ್ಟೆಯ ಕಿಚ್ಚು ಉರಿಯಾಗಿ ಸಾವಿರಾರು ನಾಲಗೆಗಳಿಂದ ಧಗ ಧಗ ಎಂದು ಪ್ರಜ್ವಲಿಸತೊಡಗುತ್ತದೆ. ತಮ್ಮನ್ನು ದನಕ್ಕಿಂತಲೂ ಕಡೆಯಾಗಿ ಕಂಡಿದ್ದರಲ್ಲ ಇವರು. ಅಂದಿಗೂ ಇಂದಿಗೂ ಎಷ್ಟು ಅಂತರ! ಆಕಾಶ-ಪಾತಾಳ! ಅದೇ ಶಂಕರಪ್ಪನನ್ನು ಇಂದು ಸನ್ನೆ ಮಾತ್ರದಿಂದ ಕುಣಿಸಬಲ್ಲರು, ಒಂದೇ ಒಂದು ಮಾತಿನಿಂದ ನಾಶಮಾಡಬಲ್ಲರು, ಹೌದು, ಮಾಡಬೇಕು, ಕುಣಿಸಬೇಕು, ಉಸಿರುಗಟ್ಟಿಸಿ ಕೊಲ್ಲಬೇಕು, ನಾಶಮಾಡಬೇಕು ಇವರನ್ನು. ಕುರ್ಚಿಯ ಹಿಡಿಯ ಮೇಲಿದ್ದ ಕೈಯ ಹಿಡಿತ ಬಿಗಿಯಾಯಿತು. ಕಣ್ಣು ತೆರೆದ ಸಾಹೇಬರ ಮುಖ ನೋಡಿದ ಶಂಕರಪ್ಪ ದಂಗು ಬಡೆದ. ಮುಖದಲ್ಲಿ ರೌದ್ರ ಕಳೆ. ಆಜ್ಞೆ ಮಾಡಿದರು : "ನಿಮ್ಮ ಕಾಗದಾ ನೋಡಿ ಇಟ್ಟಿರತೇನಿ, ಹೋಗಿ ಬರ್ರಿ."

ತನ್ನ ಕೆಲಸ ಕೆಡುವುದೆನ್ನುವದು ಖಾತ್ರಿಯಾಯಿತು ಶಂಕರಪ್ಪನಿಗೆ. ಮೊದಲು ಚನ್ನಾಗಿ ಮಾತನಾಡಿದ ಸಾಹೇಬರು ಈಗ ಸಿಟ್ಟಾಗಿದ್ದುದರ ಕಾರಣ ಅವನ ಮಂದಮತಿಗೆ ಹೊಳೆಯಲಿಲ್ಲ. ಧೈರ್ಯ ಮಾಡಿ ಹೇಳಿದ: "ಅವ್ವಗ ನಿಮ್ಮ ಸುದ್ದೀ ಹೇಳತೀನಿ, ಕೇಳಿ ಸಂತೋಷ ಪಡತಾಳ."

ಶಂಕರಪ್ಪನ ಬಾಣ ತಾಗಿತ್ತು. ಅವ್ವನೋರ ಹೆಸರು ಕೇಳಿದಾಗ ಸಾಹೇಬರು ಮುಖ ಮೃದುವಾಯಿತು, ಅವತ್ತು ತಾವು ಬಾಸುಂಡೆಗಳ ನೋವಿನಿಂದ ಜ್ವರದಿಂದ ನರಳುತ್ತ ಹಕ್ಕೆಯಲ್ಲಿ ಬಿದ್ದಾಗ, ಗಂಡ ಹೊರಗೆ ಹೋಗುವದನ್ನೇ ಕಾಯುತ್ತಿದ್ದ ಕೆಂಚವ್ವ ಎಣ್ಣೆ ಅರಿಶಿಣ ಕಲಿಸಿ ತಂದು ಗಂಗಣ್ಣನಿಂದ ತನ್ನ ಬೆನ್ನಿಗೆ ಹಚ್ಚಿಸಿ, ಕಾವು

ಕೊಡಿಸಿದ್ದರು. ತಿನ್ನಲು ರೊಟ್ಟಿ ಬೆಲ್ಲ ಕೊಟ್ಟು ರಮಿಸಿದ್ದರು. ಆ ಅಂತಃಕರಣದ ಮೂರ್ತಿಯನ್ನು ಮರೆಯೋದು ಹೇಗೆ ಸಾಧ್ಯ? ಗಂಗಣ್ಣನಿಗೋ ಅಣ್ಣನಿಗಿಂತಲೂ ತಾನು ಸಮೀಪದವ. ಪ್ರೀತಿಯ ಮಹಾ ಸೆಲೆ. ಈಗಲೂ ಅವನ ಕೈ ತಮ್ಮ ಬೆನ್ನು ನೇವರಿಸುತ್ತಿರುವಂತೆ ಅನುಭವವಾಯಿತು ಸಾಹೇಬರಿಗೆ. ಆ ಗುಂಗಿನಲ್ಲೇ ಇದ್ದರು ಸ್ವಲ್ಪ ಹೊತ್ತು.

"ಸಾಹೇಬರ" ಎನ್ನುತ್ತ ಶಂಕರಪ್ಪ ತಮ್ಮ ಕಡೆಗೆ ಹಸಿರು ನೋಟು ಚಾಚಿದ್ದನ್ನು ಕಂಡರು. "ಇನ್ನೊಮ್ಮೆ ಬರೋಮುಂದ ಇನ್ನಷ್ಟು ತರತೇನಿ" ಎಂದು ಪಿಸುಗುಡುತ್ತ ಪೆಚ್ಚು ನಗೆ ನಕ್ಕ ಶಂಕರಪ್ಪ.

ಓಹ್! ಇವನು ಹಣದಿಂದ ನನ್ನನ್ನು ಕೊಳ್ಳಬಯಸುತ್ತಿದ್ದಾನೆ. ಹಿಂದೆಯೂ ನನ್ನನ್ನು ಕೊಂಡುಕೊಂಡಿದ್ದ. ತನ್ನ ಇಚ್ಛೆಯಂತೆಯೇ ಕುಣಿಸಿದ. ಹಿಂಡಿ ಹಿಪ್ಪೆ ಮಾಡಿದ, ಕೊಂದ. ಆಗಲೂ ಹಾಗೆಯೇ? ಅವನಿಗೆ ನನ್ನನ್ನೇ ಮಾರಿಕೊಳ್ಳಲೇ? ಛೇ ನನಗೆ ನನ್ನ ಸ್ವಾತಂತ್ರ್ಯ ಬೇಕು. ನಾನು ನನ್ನನ್ನು ಯಾರಿಗೂ ಮಾರಿಕೊಳ್ಳಲಾರೆ. ಗುಲಾಮನಾಗಲಾರೆ, ನಾನು ನಾನೇ, ನಾನೇ ನಾನು, ನಾನೇ ಅವನನ್ನು ಕೊಂಡುಕೊಳ್ಳಬೇಕು. ಹೌದು ನಾನೇ ಕೊಳ್ಳಬೇಕು ಅವನನ್ನು ನನ್ನ ಔದಾರ್ಯದಿಂದ.

ತಿರಸ್ಕಾರದಿಂದ ಅವನತ್ತ ನೋಡಿದರು. "ಮತ್ತೆ ಇನ್ನಷ್ಟು ತರತೀನಿ ಸಾಹೇಬರ, ಇದು ನಿಮ್ಮ ಸಿಗರೇಟಿಗೆ" ಎಂದ ಶಂಕರಪ್ಪ ದೈನ್ಯದಿಂದ.

ಕೈಯಲ್ಲಿದ್ದ ಸಿಗರೇಟನ್ನು ಆಶ್‌ಟ್ರೇಯಲ್ಲಿ ಅದ್ದಿ, ಆರಿಸಿ, ಕಿಸೆಯಲ್ಲಿಯ ಪ್ಯಾಕ್ ತೆಗೆದು ಅವನಿಗೆ ತೋರಿಸಿ, "ನನ್ನ ಹತ್ರ ಸಿಗರೇಟು ಅದ. ಆ ನೋಟು ಕಿಸೇಕ ಹಾಕ್ಕೊಂಡು ಊರಿಗೆ ಹೋಗ್ರಿ. ನಾನು ಊರಿಗೆ ಬಂದು ಕೆಂಚವ್ವನೋರನ, ಗಂಗಣ್ಣನ ಭೆಟ್ಟಿ ಆಗತೇನಿ. ಅವರ ಆಶೀರ್ವಾದ ಬೇಕು ನನಗ" ಎಂದರು.

ಆಶ್ಚರ್ಯದಿಂದ ಬಾಯಿ ತೆರೆದು ಅವರನ್ನೇ ನೋಡುತ್ತ ಶಂಕರಪ್ಪ ನಿಂತಾಗ ಹುಸೇನಿ ಬೇರೆಯವರ ಚೀಟಿಯೊಡನೆ ಒಳಗೆ ಬಂದ.

***

■■

# ಹೆಣ ಎತ್ತಿದ ಮೇಲೆ

ಕೆರೆಯಿಂದ ಹೊತ್ತು ತಂದಿದ್ದ ಕೊಡವನ್ನು ಕಣಜಲಿನ ಮೇಲೆ ಇಳಿಸುತ್ತಿದ್ದ ಹಾಗೆಯೇ ಗಾಬರಿಯಿಂದ ಗಂಗೂ "ಯವ್ವಾs ತಾಯವ್ವ ಸತ್ಲಂತ' ಅಂದಳು, "ಅಂs" ಎಂದ ಮುರಿಗೆವ್ವನ ಕೈಯಲ್ಲಿದ್ದ ಉಳ್ಳಾಗಡ್ಡಿ ಉರುಳಿ ಬಿತ್ತು. "ನಿಂಗ ಯಾರು ಹೇಳಿದ್ರು?" " ನಾ ಹಿಂದಿನ ಓಣ್ಯಾಗಿಂದ ಬರೂ ಮುಂದ ಹಲಗೀ ಸಪ್ಪಳ ಕೇಳಿಸ್ತs ಯಾರ ಹೋಗ್ಯಾರ ಅಂದೆ. ದೊಡ್ಡವ್ವೋರು ಅಂದ ಭೀಮಪ್ಪ..." ಹೇಳುತ್ತಿದ್ದ ಹಾಗೇ ಗಂಗೂನ ಗಂಟಲು ಕಟ್ಟಿತು. ತಾನು ನೆರತಿದ್ದಾಗ ಎಬ್ಬಿಸುವ ದಿನ ಹೆಡಿಗೆ ತುಂಬ ರೊಟ್ಟಿ, ಪಲ್ಯ ಹೋಳಿಗೆ, ವಡೆ ಕಟ್ಟಿಕೊಂಡು ಬಂದು ಜರದ ಖಣ ಕೊಟ್ಟು ಉಡಿ ತುಂಬಿ, ಆರತಿ ಮಾಡಿ ತನ್ನ ಗಲ್ಲ ತಟ್ಟಿ "ಏ ಹುಡ್ಗೀ, ಹೆಂಗಸಾದೆ" ಎಂದು ಚೇಷ್ಟೆ ಮಾಡಿ, ನಕ್ಕು ಹೋದ ತಾಯವ್ವನ ಮುಖ ಕಣ್ಣಿಗೆ ಕಟ್ಟಿತು.

"ಪುಣ್ಯವಂತಿ ಆದ್ಲು" ನಿಟ್ಟುಸಿರುಗರೆದ ಮುರಿಗೆವ್ವ ಹೊರಗೆ ನಡೆದಳು.

"ಯವ್ವಾ ನಾನೂ ಬರ್ತಿನಬೇ ನೋಡಾಕ".

"ಬಾ. ನನ್ನ ಕೂಡ ಬಂದು ದೂರ ನಿಂತು ನೋಡಿ ತಿರಗಿ ಬಾ. ಮನೀ ಮುಂದ ಯಾರೂ ಇಲ್ದಾಂಗ ಆಗ್ತದ. ಸಂಗಣ್ಣ ಹೊಲಕ್ಕ ಹೋಗ್ಯಾನ, ಅಂವಗ ಬುತ್ತಿ ಕಳಸಬೇಕು. ಹುಡುಗ್ರು ಸಾಲಿಂದ ಹಸದು ಬರ್ತಾವ. ಇವತ್ತ ನೀನs ಎಲ್ಲ ಮಾಡಿಕೊ, ನಾನು, ಹಿರ್ಯಾ ಮಣ್ಣ ಮಾಡಿದ ಮ್ಯಾಲ ಬರ್ತೀವಿ. ತಾಯಮ್ಮಾಗ ಹಿಡೀ ಮಣ್ಣು ಹಾಕದಿದ್ದರ ಹ್ಯಾಂಗ ? ಊರಂತ ಊರs ಬರ್ರೈತಿ ಇಂದ. "

ಹಲಗೆಯ ಸಪ್ಪಳ ಕಿವಿಗಳಲ್ಲಿ ರೊಯ್ಯನೆ ಬಾರಿಸುತ್ತಿದ್ದಾಗ ಇಬ್ಬರೂ ಕಟ್ಟೆಯ ಮೇಲೆ ಕುಳಿತ ಗಂಡಸರಿಗೆ ಕಾಣದಂತೆ ತಲೆತುಂಬ ಸೆರಗು ಹೊದ್ದು ಪಡಸಾಲೆ ಹೊಕ್ಕರು. ಒಳಹೋಗುವ ಮೊದಲು ಮುರಿಗೆವ್ವ ಮಗಳ ಕಿವಿಯಲ್ಲಿ ಪಿಸುಗುಡುವುದನ್ನು ಮರೆಯಲಿಲ್ಲ.

"ಹೆಣಾ ಮುಟ್ಟಿದವರನ್ನ ಯಾರ್ನೂ ಮುಟ್ಟಬ್ಯಾಡಾ. ನಿನಗ ಯಾರ ನೀರ ಹಾಕವ್ರು. ಮನೀಗೆ ಹ್ವಾದ ಮ್ಯಾಲೆ ನೀರೊಲಿಗೆ ಹಾಕಿರು, ಮರೀಬ್ಯಾಡಾ."

ಒಳಗೆ ಕಾಲಿಡುತ್ತ "ಏನಾಗಿತ್ತವ್ವಾs ತಾಯಕ್ಕಗ ?" ಎಂದು ಸೆರಗಿನಿಂದ ಕಣ್ಣು ತಿಕ್ಕುತ್ತಿರುವಾಗಲೇ 'ಯಕ್ಕಾ'? ಎಂದು ಬಸಲಿಂಗವ್ವ ತೆಕ್ಕೆ ಬಿದ್ದಳು. ಅವಳನ್ನು ಅವಚಿಕೊಂಡು ಕಣ್ಣೀರು ಒರೆಸಿಕೊಳ್ಳುತ್ತಲೇ ಹೆಣದ ಹತ್ತಿರ ಬಂದಳು ಮುರಿಗೆವ್ವ. ಆಗಲೇ ತೊಳೆದು ಒಳ್ಳೆಯ ಸೀರೆ ಉಡಿಸಿ, ಮನೆಯಲ್ಲಿದ್ದ ವಸ್ತುಗಳನ್ನೆಲ್ಲ ಹಾಕಿ, ಕುತ್ತಿಗೆ ಜೋತುಬೀಳದಂತೆ ಚೆನ್ನಾಗಿ ಬಿಗಿದುಕಟ್ಟಿ, ಮಂಚದ ಮೇಲೆ ತಾಯವ್ವನ ನಿರ್ಜೀವ ದೇಹವನ್ನು ಕೂಡ್ರಿಸಿದ್ದರು. ಹಣೇತುಂಬ ಮೂರು ಬೆರಳು ವಿಭೂತಿ, ಅದರ ನಡುವೆ ದೊಡ್ಡ ಕುಂಕುಮ, ತಲೆ ತುಂಬ ಹೂವಿನ ದಂಡೆ, ನೇರವಾದ ಮೂಗಿನಲ್ಲಿ ಮುತ್ತಿನ ನತ್ತು, ಈಗ ಎದ್ದು ಬರುವಳೇನೋ ಎನ್ನುವಂತಿತ್ತು ಮುಖದ ಲಕ್ಷಣ. ಶಾಂತವಾದ, ಸೌಮ್ಯವಾದ ಮುಖ. ತನ್ನನ್ನು ನೋಡುತ್ತಲೇ ಚೆಂಗಿಳಿಕೆವ್ವನಂತೆ ಕುಲುಕುಲು ನಗುತ್ತ ಬಾಯ್ತುಂಬ ಮಾತನಾಡುತ್ತಿದ್ದ ತಾಯಕ್ಕ ಇನ್ನು ತಿರುಗಿ ಬರಲಾರಳು ಎನ್ನುವ ಭಾವನೆ ಬಂದಾಗ ಹಿಂದೆ ಸರಿದಿದ್ದ ದುಃಖ ಮತ್ತೆ ಉಕ್ಕೇರಿತು. ನೆರೆಮನೆಯ ಹಾಲಕ್ಕ ಎತ್ತರವಾದ ಸಮೆಗಳನ್ನೂ ಮುದ್ದವ್ವ ತುಂಬಿದ ಆರತಿಯನ್ನೂ ಹಚ್ಚಿ ತಂದು ಮುಂದೆ ಇಟ್ಟಾಗ ಹೆಣದ ಮುಖ ಇನ್ನೂ ಹೆಚ್ಚಾಗಿ ಬೆಳಗಿತು.

"ಯವ್ವೋ ನನ್ನಕ್ಕ ಹೆಂಗ ಕುಂತಾಳ ನೋಡ್ರೆ ಗೌರವ್ವ ಕುಂತಾಂಗ" ಬಸಲಿಂಗವ್ವ ಬಾಯಿ ಬಾಯಿ ಬಡಿದುಕೊಂಡಳು. ಮುರಿಗೆವ್ವ ಅವಳ ಹತ್ತಿರ ಸರಿದು ಹೆಗಲನ್ನೊತ್ತಿದಳು. "ಬಸಲಿಂಗೂ, ಹೊರಗ ಪಂಚರೂ

ಸಾವುಕಾರ್ರರು ಗಂಡಸರು ಬಾಳ ಮಂದಿ ಕುಂತಾರಬೆ, ದುಃಖ ಹತ್ತಿಕ್ಕೋ, ಅಲ್ಲೋಡು, ನಿನ್ನ ನೋಡಿ ಆ ಹಸೀಬಾಣಂತಿ ನಾಗವ್ವನೂ ಅಳತಾಳ."

"ನಾ ಹೆಂಗ ಸುಮ್ಮಕಿರಲೇ, ನನ್ನ ಹೊಟ್ಯಾಗ ಸಂಕಟ ಆಗ್ತೇತಿ. ನಾ ಇನ್ನ ಹ್ಯಾಂಗ ಇರಲೇ ಇಂಥಾ ಅಕ್ಕನ್ನ ಬಿಟ್ಟು, ದೇವರ ಹತ್ರ ಹ್ಯಾದಳ್ರೇ ನನ್ನ ಬಿಟ್ಟು." ಬಸಲಿಂಗವ್ವ ಹಾಡಿ ಹಾಡಿಕೊಂಡು ಅಳುತ್ತಿದ್ದ ಹಾಗೆ ಪಡಸಾಲೆ ಬಂದ ಜನರಿಂದ ತುಂಬಿ ತುಂಬಿ ತುಳುಕುತ್ತಿತ್ತು. ಕೂಡ್ರಲು ಜಾಗವಿಲ್ಲದೆ ಜನ ನಿಂತರು. ನಿಲ್ಲಲೂ ಜಾಗ ಸಾಲದೆ ಉಸಿರುಕಟ್ಟಿ ಒದ್ದಾಡಿದರು. ಆಮೇಲೆ ಬಂದವರಂತೂ ಹೆಣದ ಮುಖ ನೋಡಿ ನೋಡಿ ಮರಳಿ ಹೊಗಲೇಬೇಕಾಯಿತು. ಅಳು ಸ್ವಲ್ಪ ಇಳಿತರಕ್ಕೆ ಬಂದಾಗ ಮುರಿಗೆವ್ವ ಬಸಲಿಂಗವ್ವನ ಕಿವಿಯಲ್ಲಿ ಉಸುರಿದಳು.

"ನಾಗನೂರಿಗೆ ಹೇಳಿಕಳ್ಸಿದಿರೇನು?" ಹೇಳಿರಲಿಕ್ಕಿಲ್ಲ ಎನ್ನುವ ಧಾಟಿಯೇ ಇತ್ತು ಪ್ರಶ್ನೆಯಲ್ಲಿ. ಇಲ್ಲವೆನ್ನುವಂತೆ ಗೋಣು ಅಲ್ಲಾಡಿಸಿದ ಬಸಲಿಂಗು. "ಜೀವ ಹೋಗು ತಂಕಾನೂ ಮೈಮ್ಯಾಗ ಎಚ್ಚರ ಇತ್ತು ಅಕ್ಕಗ. ಬೆಳತನಕಾ ಅವರು ತೊಡೀಮ್ಯಾಲೆ ತಲೀ ಇಟಕೊಂಡs ಕುಂತಿದ್ರು, ಸಂಕಟಾ ಅಂತ ಹೊಳ್ಳಾಡತಿದ್ರು. ಡಾಗ್ದಾರು ಬಂದು ಚುಚ್ಚಿದ್ರೂ ಏನೂ ಆಗಲಿಲ್ಲಾ. ಸಾಯೂಮುಂಚೆ ತನ್ನ ತವರ್ಮನಿಗೆ, ಗಂಡನ ಮನೀಗೆ ಹೇಳಿ ಕಳಿಸಬ್ಯಾಡ್ರಿ ಅಂತ ಮಾತ ಸುದ್ದಾತೊಗೊಂಡ್ಳು" ಎಂದಳು ಗೊಗ್ಗರ ಧ್ವನಿಯಲ್ಲಿ. ಅತ್ತು ಅತ್ತು ಗಂಟಲು ಒಡೆದಿತ್ತು.

"ಕಡೀಕೂ ತನ್ನ ಹಟಾ ಸಾಧಿಸಿಕೊಂಡs ಬಿಟ್ಳು ತಾಯಕ್ಕ. ಊರಿಗೆ ಊರs ಅಕ್ಕನ್ನ ಹಾಡಿ ಹರಿಸಿದ್ರೂ ಆ ಎರಡೂ ಮನೀಗೆ ಎರವಾದ್ಳು. ನಾಗವ್ವ ಅಂತೂ ಬಾಣಂತನಕ ಬಂದಾಕಿ ದೊಡ್ಡವ್ವನ್ನ ಕಳಿಸೇ ಹೋಗೂ ಹಂಗಾತು. ಇನ್ನ ಹಂಗಾರ ಗಂಗಾಧರ, ಉಮ್ಮವ್ವ ಇಬ್ಬರs ಹೌದಲ್ಲೊ ಬರವ್ರು ?" ಮಣ್ಣು ಇನ್ನೂ ಎಷ್ಟು ಹೊತ್ತಾಗುವುದೋ ಎನ್ನುವ ಆತಂಕವಿತ್ತು ಮುರಿಗೆವ್ವನ ದನಿಯಲ್ಲಿ.

"ಮೂರ ಗಂಟೇಕ ಬಸ್ಸು ಬರತದಂತ ಧಾರವಾಡದಿಂದ. ಅದರ ದಾರೀ ನೋಡಿ ಎತ್ತೂಣು ಅಂದರು ಬರಮಣ್ಣೋರು" ಹತ್ತಿರದಲ್ಲಿದ್ದ ಹಾಲಕ್ಕ ಹೇಳಿದಳು.

ಹೆಣದ ಮುಂದಿನ ಸಮೆ ಆರತಿಗಳಿಗೆ ಧಾರಾಳವಾಗಿ ಎಣ್ಣೆಸುರಿದಿದ್ದರಿಂದ ಅವು ಥಾಳವಾಗಿ ಉರಿಯುತ್ತಿದ್ದವು. ಬಂದವರು ಅಕ್ಕರೆಯಿಂದ ತಂದ ಹೂವು ಪತ್ರೆಗಳಿಂದ ಹೆಣ ಮುಚ್ಚಿಹೋಗಿತ್ತು. ವಿಭೂತಿ ಉಂಡೆ, ಒಡೆದ ತೆಂಗಿನಕಾಯಿಗಳ ರಾಶಿ ದೊಡ್ಡದಾಗುತ್ತಿತ್ತು. ಹಲಗೆಯ ಸಪ್ಪಳ ನಡುನಡುವೆ ಕಡಿಮೆಯಾದಾಗ ಭಜನೆಯ ಮೇಳದವರು ಎತ್ತರದ ದನಿಯಲ್ಲಿ ಹೊಟ್ಟೆಯನ್ನೊಡೆದು ಬರುವಂತೆ ತತ್ತ್ವದ ಪದವನ್ನು ಕೂಗುತ್ತಿದ್ದರು. ಸಪ್ಪಳಗಳಿಂದಾಗಿ ಎಲ್ಲರ ಕಿವಿಗಳೂ ಗಡಚಿಕ್ಕಿ ಬಂದವರೆಲ್ಲ ಈಗ ಎತ್ತರದ ದನಿಯಲ್ಲೇ ಮಾತನಾಡುತ್ತಿದ್ದರು. ಆಗಾಗ ಹೊಸಬರು ಬಂದು ಪೂಜೆ ಮಾಡಿಸಿದಾಗ ಅಯ್ಯನವರು ಹೆಣದ ತೊಡೆಯ ಮೇಲೆ ತಮ್ಮ ಪಾದವನ್ನಿಟ್ಟು 'ಮೃತಳು ಶಿವಲೋಕವನ್ನು ಸೇರಿ ಶಿವಸಾಯುಜ್ಯವನ್ನು ಪಡೆದಳು' ಎಂದು ಮಂತ್ರ ಹೇಳಿದಾಗ ದುಃಖ ಮತ್ತೊಮ್ಮೆ ಎಲ್ಲರನ್ನೂ ಸೀಳುತ್ತಿತ್ತು.

"ಬಸ್ಸು ಬಂತು ಬಸ್ಸು" ಯಾರೋ ಕೂಗಿದರು. "ಬಂದರು ಬಂದರು ಹಿಡಕೊಳ್ರಿ ಹಿಡೀರಿ" ಜನರ ಗುಂಪು ಓಡೋಡಿ ಬರುತ್ತಿದ್ದ ಗಂಗಾಧರ, ಉಮೆಯರನ್ನು ತಡೆಹಿಡಿದು ಸಾವಧಾನವಾಗಿ ಕರೆತಂದಿತು. ಪಡಸಾಲೆಯ ಒಳಗೆ ಕಾಲಿರಿಸಿದ್ದ ಗಂಗಾಧರ 'ದೊಡ್ಡವ್ವಾs' ಎಂದವನೇ ದೊಪ್ಪನೆ ಬಿದ್ದುಬಿಟ್ಟ. ಅವನನ್ನು ಎತ್ತಲು ಮುಂದಾದ ಬರಮಣ್ಣನೂ ಮಕ್ಕಳಂತೆ ಗೋಳೋ ಎಂದು ಅತ್ತುಬಿಟ್ಟರು. ಉಮೆಯಂತೂ ಹುಚ್ಚಿಯಂತೆ ಅಲ್ಲಿಟ್ಟ ಧೂಪ ದೀಪ ಕಾಯಿ ಹೂವು ಒಂದನ್ನೂ ನೋಡದೆ ಹೆಣಕ್ಕೆ ಹಾಯುವವಳಿದ್ದಳು. ಮುರಿಗೆವ್ವ ಹಾಲಕ್ಕ ಕೂಡಿ ಅವಳನ್ನು ಹಿಡಿಯದಿದ್ದರೆ ಹಿಡಿದವರ ತೆಕ್ಕೆಗೆ ಬಿದ್ದು ವಿಲಿವಿಲಿ ಒದ್ದಾಡಿದಳು. ನೋಡುವವರ ಕಣ್ಣುಗಳಿಂದ ಮತ್ತೆ ನೀರು ಸುರಿದವು.

"ದೊಡ್ಡವ್ವಾs ನೀ ಎಲ್ಲಿ ಹೋದೀ ನನ್ನ ಬಿಟ್ಟು. ನಾ ಊರಿಗೆ ಹೋಗೂ ಮುಂದ ಹೊಸಾ ಸೀರಿ ಕೊಡಿಸಿ, ಉಂಡೀ ಡಬ್ಬಿ ಕಟ್ಟಿ, ಪರೀಕ್ಷೆ ಪಾಸಾಗಿ ಬಾ ಅಂತ ಹೇಳಕಳಿಸಿದ್ದಿ, ಹಿಂಗ ಹೇಳದs ಕೇಳದs ಯಾಕ ಹೋಗಿ ಬಿಟ್ಟೀ ದೊಡ್ಡವ್ವಾs"

"ದೊಡ್ಡವ್ವಾs ಪರೀಕ್ಷಾ ಪಾಸಾಗಿ ಸಾಯೇಬ ಆಗಿ ಬರತಾನ ನನ್ನ ಮಗಾ ಅಂತ ಎಲ್ಲಾರ ಮುಂದ ಹೇಳಕೊಂತ ತಿರಗತಿದ್ದಿ. ನಾ ಸಾಯೇಬ ಆಗೂದು ನೋಡಲಿಲ್ಲಾ. ನಮ್ಮ ಗಂಗಣ್ಣ ಪಾಸಾಗ್ಯಾನ ಅಂತ ಊರಿಗೆ ಪೇಡೆ ಹಂಚವರು ಯಾರು ಇನ್ನ? ಊರಿಂದ ಬಂದ ಕೂಡಲೆ ಗದ್ದ ತುಟಿ ಹಿಡಿದು ನನ್ನ ಕೂಸು ಎಷ್ಟು ಸೊರಿಗೇದ ನಿದ್ದಿಗೆಟ್ಟು ಓದಿ ಓದಿ ಅಂತ ಮಮ್ಮಾ ಮಾಡುವರು ಯಾರು ಇನ್ನ? ದೊಡ್ಡವ್ವಾs."

ಗಂಗಾಧರ ಮತ್ತು ಉಮಾನ ಅಳು ಹೊರಗೆ ಕುಳಿತ ಗಂಡಸರ ಕಣ್ಣುಗಳನ್ನೂ ಒದ್ದೆ ಮಾಡಿತು. ಹೊತ್ತುಕೊಂಡ ವಲ್ಲಿಯಿಂದ ಕಣ್ಣು ಒರೆಸಿಕೊಳ್ಳುತ್ತ ಗೌಡರು ಹತ್ತಿರ ಕುಳಿತ ಶಂಕರಪ್ಪನವರ ಮುಂದೆ ಸತ್ತವಳ ಗುಣಗಾನ ಮಾಡಿದರು.

"ಬರಮಣ್ಣನ ಇಟಕೊಂಡ ಹೆಂಗಸು ಅನ್ನಿಸಿಕೊಂಡ್ರೂ ತಾಯಕ್ಕ ತನ್ನ ಸವತೀ ಮಕ್ಕಳಿಗೆ ಅಷ್ಟ ಅಲ್ಲಾ ಊರಿಗೆs ತಾಯಿ ಆಗಿದ್ಲು ನೋಡ್ರಿ."

"ಛೇ, ಛೇ, ಇಟಕೊಂಡಾಕಿ ಅಂತ ಯಾರ ಅನಬೇಕ್ರಿ ಆಕೀಗೆ, ಗರತಿ ಗಂಗವ್ವನ ಹಾಂಗ ಇದ್ಲು. ಊರಾಗ ಯಾರೊಬ್ಬರಿಗೂ ತನ್ನ ಕೈಲಾದಟ ಉಪಕಾರ ಮಾಡದ ಬಿಟ್ಟಾಕಿ ಅಲ್ಲಾ."

"ತಾನು ಗಂಡ ಬಿಟ್ಟು ಹೆಣ್ಣು, ಎಷ್ಟಾದ್ರೂ ಬರಮಣ್ಣಗ ತಾನು ಇಟಕೊಂಡಾಕೀನs ಅತೇಳಿ ಯಾವ ಹೆಣ್ಮಕ್ಕಳಿಗಿ ಇರ್ತದ. ನಾಕ ಮಂದಿ ಅಣ್ಣಾ-ತಮ್ಮಾ ಕೂಡಿ ಇರಾಕ ಒಲ್ಲರು ಈಗಿನ ದಿನದಾಗ. ಹೆಂಡರು ನಾಯಿ ಹಾಂಗ ಕಚ್ಚಾಡ್ತಾರ ಅಂತೇಳಿ ಬ್ಯಾರೇ ಆಗ್ತಾರ. ಆದರ ಈಕಿನ್ನ ನೋಡ್ರಿ."

"ಬಸವಲಿಂಗಕ್ಕನೂ ದೊಡ್ಡ ಮನಸ್ಸಿನಾಕಿ. ಮಕ್ಕಳ ಆಗೂದs ತಡಾ, ತಾಯವ್ವನ ಉಡ್ಯಾಗ ಹಾಕಿಬಿಡ್ತಿದ್ಲು. ತಿನ್ಸಾಕಿ, ಉಣ್ಸಾಕಿ ಎಲ್ಲಾ ಆಕೀದ ಕೆಲಸ."

"ಅದೊಂದs ಏನ್ರೀ, ಬರಮಣ್ಣರೇ ಆಕಿ ಹಾಕಿದ ಉಗುಳ ದಾಟತಿದ್ದಿಲ್ಲಾ. ಹೊಲಗೆಲಸಕ್ಕೆ, ಅಂಗಡಿ ಸಾಮಾನಿನ ಖರೀದಿಗೆ ಎಲ್ಲಾದಕ್ಕೂ ಅಕೀನ್ನ ಕೇಳಿತಿದ್ದಾ. ತಿಜೋರಿ ಕೀಲಿಕೈ ಆಕಿ ಕೈಯಾಗ ಕೊಡಾಕ ಹೋಗಿದ್ನಂತ. ಗಂಡಸ ಆಗಿ ನನ್ನ ಹತ್ರ ಕೈ ಚಾಚತೀಯಾ ? ಇಟಕೋ ನಿನ್ನ ಹತ್ತರ ಕೀಲಿಕೈ ಅಂತ ಜಬರಿಸಿದಳಂತ."

"ಅಂವಾ ಅರೆ ಆಕೀಗೇನ ಕಡಿಮಿ ಮಾಡಿದ್ದಾ, ರೇಶಿಮಿ ಸೀರಿ, ಕುಬಸಾ ವಸ್ತಾ ವಡವಿ ಎಲ್ಲಾ ಕೊಟ್ಟಿದ್ದಾ, ಆದರ ಎಂದೂ ಇಟಕೊಂಡ ಮೆರೆದಾಕಿ ಅಲ್ಲಾ. ಹಾಂಗ ನೋಡಿದರ ನಾಗವ್ವನ ಲಗ್ನಾ, ಗಂಗಣ್ಣ, ಉಮ್ಮವ್ವನ್ನ ಕಾಲೇಜಿಗೆ ಕಳ್ಸೂದು ಎಲ್ಲಾ ಮಾಡಿದ್ದೂ ಆಕೀನ."

"ತನ್ನದ ಅನ್ನೂದು ಏನಿತ್ತು ಈ ಪ್ರಾಣಿಗೆ. ಹಾದರಾ ಮಾಡಿದಳಂತ ಅಪವಾದಾ ಹೊರಿಸಿ ಗಂಡಾ, ಮಾವಾ ಮನೀಬಿಟ್ಟು ಹೊರಗ ಹಾಕಿದ್ರು. ಅದನ್ನ ನಂಬಿ ತವರ್ಮನೀಯವರು ಬಾವೀ ದಾರಿ ತೋರ್ಸಿದರು..."

"ಅಂದರ ತಾಯವ್ವನೋರ ಬಾವೀ ಬೀಳಾಕ ಹೋಗಿದ್ದರೇನ್ರಿ?" ಹತ್ತಿರ ಕುಳಿತು ಇವರ ಮಾತು ಕೇಳುತ್ತಿದ್ದ ಚಿಗುರುಮೀಸೆಯ ಯುವಕ ಕೇಳಿದ.

"ಹೌದೋ ಹುಡುಗಾ, ನೀವಿನ್ನೂ ಹುಟ್ಟಿರಾಕಿಲ್ಲಾ ಆವಾಗಿನ ಹಕೀಕತ್ತು ಇದು. ಆವಾಗ ಬಾವಿ ಜಿದ್ದ ತಾಯಕ್ಕನ ಜೀವಾ ಉಳಿಸಿದವನs ಬರಮಣ್ಣ. ತನ್ನ ಜೀವದ ಖಬರ ಇಲ್ಲದ ಬಾವ್ಯಾಗ ಜಿಗಿದ ತಗದನಂತ."

ಕುತೂಹಲದಿಂದ ಇನ್ನೂ ಹತ್ತಿರಕ್ಕೆ ಸರಿದ ಯುವಕ ಕೇಳಿದ "ಮುಂದೆ?"

"ಬರಮಣ್ಣಗ ತಾಯವ್ವ ಹೇಳಿದಳಂತ ಅತ್ತೀಮನಿಯವರು, ತವರ್ಮನಿಯವರು ಇಬ್ಬರೂ ನನಗ ಹಾದರಗಿತ್ತಿ ಅಂತ ಹೆಸರು ಕೊಟ್ಟಾರ. ಅವರ ಮಾತ ಯಾಕ ಸುಳ್ಳ ಮಾಡಬೇಕು? ಈಗ ನೀನs ಬಾ ನನ್ನ ಜೋಡಿ, ಈ ಊರ ಬಿಟ್ಟು ಹೋಗಿ ಇಬ್ಬರೂ ಕೂಡಿ ಬಾಳೆ ಮಾಡೂಣು. ಗಂಡ ಕಟ್ಟಿದ ಈ ಗುಳದಾಳಿ: ತವರ್ಮನಿಯವರು ಕೊಟ್ಟ ಆ ತಾಳಿ ಸಾಮಾನಿನ ಸರಾ ಮಾರಿ ರೊಕ್ಕಾ ಹಾಕಿ ಒಂದು ಸಣ್ಣ ಅಂಗಡಿ ಇಟ್ಟ ಬದುಕೂಣು ಅಂತ ಹೇಳಿ ಒಪ್ಪಿಸಿ ಇಲ್ಲಿಗೆ ಕರಕೊಂಡು ಬಂದಳಂತ."

"ಬರಮಣ್ಣೋರಿಗೆ ಯಾರೂ ಇದ್ದಿಲ್ಲೇನ್ರಿ ಮಂದಿ ಬಳಗಾ? ಎಲ್ಲಾ ಬಿಟ್ಟು ಇಲ್ಲಿಗ್ಯಾಂಗ ಬಂದರು?"

ಬರಮಣ್ಣನ ತಂದೆತಾಯಿ ಸಣ್ಣಂದಿರತ ಸತ್ತಿದ್ರಂತ. ಹಾಂಗೂ ಹಿಂಗೂ ಜ್ವಾಪಾನ ಆಗಿದ್ದಾ. ಯಾರ್ದೋ ಮನ್ಯಾಗ ಜೀತಾ ಮಾಡತಿದ್ದಾ. ತಾಯವ್ವ ಕಳ್ಳ ಕರಗೂ ಹಾಂಗ ಹೇಳಿದ ಮಾತಿಗೆ ಒಪ್ಪಿ ಇಲ್ಲಿಗೆ ಬಂದಾ."

"ಒಪ್ಪಿ ಬಂದದ್ದಕ್ಕ ಏನ ಕೆಟ್ಟ್ಯಾತು ಬಿಡ್ರಿ. ಲಕ್ಷ್ಮೀನs ಕಾಲ ಮುರಕೊಂಡ ಬಿದ್ದಾಳಂತ ಅವರ ಮನ್ಯಾಗ. ಬರಮಣ್ಣೋರ ನಸೀಬನ ನಸೀಬ. ತಾಯಕ್ಕ ಅವರ ಮನೀ ಭಾಗೇದ ಲಕ್ಷ್ಮೀ ಹಾಂಗ ಇದ್ದರು ಅಂತೇರಿ, ಆದರ...."

"ಆದರs... ಓಡಿ ಬಂದಾಕಿ ಅಂದರ ಊರಾಗಿನ ಮಂದಿ ಸುಮ್ಮನs ಇದ್ದರೇನ್ರಿ?"

"ಸುಮ್ಮನs ಹ್ಯಾಂಗ ಇರತಾರೋs ಊರ ಅಂದ ಮ್ಯಾಲೆ ಹೊಲಗೇರಿ ಇರೂದ ಏನಪಾ. ಮೂವತ್ತ ವರಸದ ಹಿಂದೆ ಇಕೀ ಚೆಲ್ವಿಕಿ ನೋಡಿ ಏಸೋ ಮಂದಿ ಇಕಿ ಬೆನ್ನ ಹತ್ತಿದರು. ಆದರ ನಬೀಸಾಬನ ತಮ್ಮ ಪೀರಸಾಬನ್ನ ಒಮ್ಮೆ ಓಣ್ಯಾಗನs ಕಾಲ್ಮರಿ ತೊಗೊಂಡು ತಿರಿಗಿ ಬಿದ್ಲು. ಆಗ ನೋಡಪಾ ಮಂದಿಗೆ ಇಕೀ ಗುಣಾ ಗೊತ್ತಾದದ್ದು. ಆಮ್ಯಾಲೆ ಒಬ್ಬರೂ ಇಕೀನ್ನ ತಡವಾಕ ಹೋಗಲಿಲ್ಲ. ಹಿಂತಾ ಮನಶ್ಯಾಳು."

"ಅಲ್ರೀ, ಎಷ್ಟಂದರೂ ಕೈ ಹಿಡಿದ ಗಂಡಾ, ಮಾವನ ಕಡೇಂದ ಹಾದರಗಿತ್ತಿ ಅನ್ನೂ ಅಪವಾದ ತೊಗೊಂಡಾವರು. ಅಲ್ರೆಪಾ, ಬೆಂಕಿ ಇಲ್ಲದs ಹೊಗಿ ಏಳ್ತೈತಿ ಏನ್ರೀ?"

"ಅಲ್ಲೋ, ತಾಯಕ್ಕನ ಗುಣಾನ ಮೂವತ್ತ ವರಸ ನೋಡೀವ ಏನಪಾ ನಾವು ಈ ಊರಾಗ. ಒಂದ ದಿನಾ ಯಾವ ಮಾತಿಗೂ ಅಲ್ಲಾ ಅನಿಸಿಕೊಂಡ ಹೆಣ್ಮಗಳ ಅಲ್ಲಾ. ಅಂಥಾಕೀಗೆ ಹಾದರಗಿತ್ತಿ ಅಂದರ, ಅಂದವರ ಬಾಯಾಗ ಹುಳಾ ಬಿದ್ದಾವ ಹುಳಾ. ಛೀ ನಿನ ಮಂಜಾಳ ಹೋಗಾ, ಗುಣ ತಿಳಿಯೂದ ಎಷ್ಟೊತ್ತೊ, ಒಂದ ಅಗಳ ಹಿಚಕಿದರ ಸಾಕು ಬೆಂದದಿಲ್ಲೋ ಗೊತ್ತಾಗ್ತದ. "

"ಇವರ ಗುಣಾ ನೋಡಿದರ ಬಂಗಾರದಂಥಾದ್ದು ಅಂತೀರಿ. ಆದರ ಅಪವಾದ ಯಾಕ ಬಂತು ಅನ್ನೋ ಕಾರಣಾ ಆರೆ ತಿಳೀಬೇಕಾಗಿತ್ತು" ಯುವಕ ಗುಣು ಗುಣು ಗೊಣಗಿದ.

ಶಂಕರಪ್ಪನವರು ಅವನ ಮುಖ ದಿಟ್ಟಿಸಿ ನೋಡಿ "ಈ ಊರಾಂವ ಅಲ್ಲೇನೋ ಹೊಸಬ ಕಾಣ್ತೇದಿ" ಎಂದರು. "ಹೌದ್ರೀ ಕಾಕಾ, ನಾ ಈ ಊರ ಸಾಲಿಗೆ ಮಾಸ್ತರ ಆಗಿ ಬಂದೇನಿ. ಈಗ ತಿಂಗಳಾತು. ಅದಕ್ಕs ಕೇಳಿದೆ ನಿಮ್ಮನ್ನ" ಕುತೂಹಲ ವ್ಯಕ್ತಪಡಿಸಿದ ಮಾಸ್ತರ.

"ತಡೀಯಪಾ ತಡೀ, ಬರಮಣ್ಣನ್ನ ಒಳಗ ಕರೆದ್ರಲ್ಲಾ. ಹೆಣಾ ಎತ್ತತಾರೇನೋ ನೋಡೋಣು" ಎಂದು ಶಂಕರಪ್ಪ ಇನ್ನೂ ಹೇಳುತ್ತಿರುವಾಗಲೇ ಮಾಸ್ತರ ಕಟ್ಟೆ ಬಿಟ್ಟು ಇಳಿದಿದ್ದ. ತನ್ನ ಪ್ರೇಯಸಿಯನ್ನು ಬರಮಣ್ಣನವರು ಕೊನೆಯದಾಗಿ ಬೀಳ್ಕೊಡುವ ಸನ್ನಿವೇಶ ನೋಡಲು ಮಾಸ್ತರ ಮುಂದೆ ಹೋಗಿ ಯಾರ ಸಂದಿಯಲ್ಲೆ ಕತ್ತು ಚಾಚಿದ.

ನಡುಗುವ ಕೈಗಳಿಂದ ಆರತಿ ಎತ್ತಿ ತಾಯವ್ವನಿಗೆ ಬೆಳಗಿದು ಹಿಂದ ಸರಿದ ಬರಮಣ್ಣನವರನ್ನು ನಾಲ್ಕು ಜನ ಹಿಡಿದುಕೊಳ್ಳದಿದ್ದರೆ ಅಲ್ಲೇ ಬವಳಿ ಬಂದು ಬಿದ್ದು ಬಿಡುತ್ತಿದ್ದರೇನೋ. ಹಿಂದಿನ ದಿನದಿಂದ ಉಪವಾಸ. ಇಂದಿನ ದುಃಖ ಕಂಟಗಳಿಗಾಗಿ ಮಳೆಯಲ್ಲಿ ತೊಯ್ದ ಗುಬ್ಬಿಯಂತಾಗಿದ್ದರು ಅಜಾನುಬಾಹು ಮನುಷ್ಯ.

ಕೊನೆಗೊಮ್ಮೆ ಹೆಣ ಎತ್ತಿದ್ದಾಯಿತು. ತಂದು ವಿಮಾನದಲ್ಲಿ ಕೂಡ್ರಿಸಿ ಎಲ್ಲರೂ ಕೈ ಮುಗಿದರು. ನಾಲ್ಕು ಜನರ ಹೆಗಲ ಮೇಲೆ ಕೊನೆಯ ಪ್ರಯಾಣಕ್ಕೆ ಹೊರಟಳು ತಾಯವ್ವ. ಉಡಿಯಲ್ಲಿ ಕಟ್ಟಿಕೊಂಡಿದ್ದ ಚಿಲ್ಲರೆಯನ್ನು ಗಂಗಣ್ಣ ಸೂರೆ ಮಾಡಿದ. ದಾರಿಯಲ್ಲಿ ಚುರುಮರಿಯ ಹೂಮಳೆಗರೆದರು ಬೇರೊಬ್ಬರು. ಮುಂದೆ ಗಂಡಸರು ಹಿಂದೆ ಹೆಂಗಸರು. ನಡುವೆ ವಿಮಾನದಲ್ಲಿ ದೇವತೆಯಂತೆ ಕುಳಿತ ತಾಯಕ್ಕನ ಹೆಣ. ಊರ ಜನವೆಲ್ಲ ಹೆಂಗಸರು. ನಡುವೆ ವಿಮಾನದಲ್ಲಿ ದೇವತೆಯಂತೆ ಕುಳಿತ ತಾಯಕ್ಕನ ಹೆಣ. ಊರ ಜನರೆಲ್ಲ ಕುಣಿಯ ಹತ್ತಿರ ಸೇರಿತ್ತು. ಕೊನೆಯ ಪೂಜೆ ಮುಗಿದ ಮೇಲೆ ಇನ್ನೇನು ಕುಣಿಗೆ ನಾಲ್ಕು ಜನ ಇಳಿಯುವವರಿದ್ದರು. ಹೆಣದೊಡನೆ ಮುಂದಿನ ಕೆಲಸಕ್ಕಾಗಿ, ಯಾರೋ ಧಾವಿಸಿ ಓಡೋಡುತ್ತ ಬಂದರು. ತಡೀರಿ ತಡೀರಿ ಬಂದರು. ತಾಯಕ್ಕನ ಗಂಡ ಬಂದರು ಎಂದು ಯಾರೋ ಕೂಗಿದರು. ಹಿಂದಿನಿಂದ ವೀರಣ್ಣ ದುಃಖ, ಬಿಸಿಲು, ವೃದ್ಧಾಪ್ಯದಿಂದ ಹಣ್ಣಾಗಿ ಕಾಲು ಎಳೆದು ಹಾಕುತ್ತಾ ಬರುತ್ತಿದ್ದರು. ಜನ ಹಿಂದೆ ಸರಿದರು. ತಾಯಕ್ಕನ ಮುಖ ನೋಡಿದ ವೀರಣ್ಣ ಗೊಳೋ ಎಂದರು. ತಮ್ಮ ಪಾಲಿನ ಪೂಜೆ ಮಾಡಿಸಿ, ಸಟಕ್ಕನೆ ಬಗ್ಗಿ ಹೆಣದ ಕಾಲುಮುಟ್ಟಿ ನಮಸ್ಕರಿಸಿದಾಗ ನೆರೆದಿದ್ದ ಜನರೆಲ್ಲ ಚಕಿತರಾದರು.

"ನನ್ನ ಜೀವಾ ಉಳಿಸಿದ ಪುಣ್ಯವಂತಿ. ನಿನಗ ಅಪವಾದಾ ಹೊರಿಸಿ ಬಾಳೇ ಹಾಳು ಮಾಡಿದೆ. ಕ್ಷಮಾ ಕೇಳಾಕ ಬಂದರ ಮಾರೀ ಸುದ್ಧಾ ನೋಡಲಿಲ್ಲಾ ನಂದು. ಈಗ ಸತ್ತು ಸ್ವರ್ಗಾ ಕೂಡಿದಿ. ಈಗ ಕ್ಷಮಾ ಮಾಡು" ಎಂದು ಅವರು ಬಿಕ್ಕುತ್ತಿದ್ದಾಗ ಗೌಡರು ಅವರನ್ನು ಅಪ್ಪಿಕೊಂಡು ಸಂತೈಸಿದರು. "ಆದದ್ದಾಯ್ತು ಮರತಬಿಡ್ರಿ" ಎಲ್ಲರೂ ಹಿಡಿ ಮಣ್ಣಿನಿಂದ ಕುಣಿ ತುಂಬಿಸಿದರು. ಮನೆಯತ್ತ ಮರಳುತ್ತಿದ್ದಾಗ ಯುವಕ ಮಾಸ್ತರ ತನ್ನೊಡನೆ ಮಾತು ಬೆಳೆಸಿದ ಶಂಕರಪ್ಪನವರ ಬೆನ್ನು ಹಿಡಿದ. ಇನ್ನೂ ಕೊನೆಯ, ಆದರೆ ಮಹತ್ತ್ವದ ಮಾತನ್ನು ತಿಳಿಯಬೇಕಾಗಿತ್ತು ಅವನಿಗೆ.

"ತಾಯವ್ವನ್ನ ಕೊಟ್ಟದ್ದು ಬಾಳ ದೊಡ್ಡ ಮನಿತನಕ್ಕ ಏನಪಾ. ಆಸುಪಾಸಿನ್ಯಾಗ ಅಂಥಾ ಗಟ್ಟಿ ಕುಳಾ ಇದ್ದಿದ್ದಿಲ್ಲಾ. ಆದರ ಮಾವ ಭಾಳ ಜಿಪುಣಾ, ಅವಂದs ಎಲ್ಲಾ ಕಾರುಭಾರು ಮನ್ಯಾಗ. ಅಂಥಾ ಮನೀ ಹಿರೇ ಸೊಸಿ ತಾಯವ್ವ, ಇಕೀ ಚೆಲ್ವಿಕೀ ನೋಡೇ ಮಾಡಿಕೊಂಡಿದ್ದರು ವೀರಣ್ಣ ಸಾವುಕಾರ್ರು. ಇಕೀ ಸಂಸಾರಾ ಮಾಡಲಿಕ್ಕೆ ಹೋಗಿ ಎರಡ ವರಸ ಆದರೂ ಮಕ್ಕಳ ಆಗಿದ್ದಿಲ್ಲಾ., ಒಂದು ದಿನ ಸರಿ ರಾತ್ರಿಗೆ ಅವರ ಮನಿ ದರೋಡೆ ಮಾಡಾಕ ಮಂದಿ ಬಂದರು. ಊರಾಗಿನ ಎಲ್ಲಾ ಮನೀಗೆ ಚಿಲಕಾ ಹಾಕಿದ್ದರು. ಯಾರೂ ಇವರ ಸಹಾಯಕ್ಕ ಬರೂಹಾಂಗ ಇದ್ದಿದ್ದಿಲ್ಲಾ. ಇವರ ಮನ್ಯಾಗ ಇದ್ದ ಒಂದು ಬಂದೂಕಿಗೆ ಗುಂಡ ತುಂಬಲಿಕ್ಕೂ ಪುರಸೊತ್ತು ಸಿಗಲಿಲ್ಲಾ. ಎಲ್ಲಾ ಗಂಡಸರನ್ನ ಹಿಡಿದು ಕೈಕಾಲು ಕಟ್ಟಿ ನೆಲಕ್ಕೆ ಕೆಡವಿದರು. ಕೀಲಿಕೈ ಇಸಕೊಂಡು ತಿಜೋರಿ ತಗದರು. ಅದರಾಗ ಅವರಿಗೆ ಹೆಚ್ಚಿಗೆ ಏನೂ ಸಿಗಲಿಲ್ಲಾ. ಇನ್ನೂ ಎಲ್ಲೋ ಮುಚ್ಚಿಟ್ಟಾರ ಅನ್ನೂದು ಅವರಿಗೂ ಗೊತ್ತಾತು. ಜಾಗಾ ಹೇಳರಿ ಅಂತ ಬೆದರಿಸಿದರು. ಒಬ್ಬರೂ ಬಾಯಿ ಬಿಡಲಿಲ್ಲ. ಅವರಿಗೆ ಸಿಟ್ಟು ಬಂದು ಹಿರೇಮಗನ್ನ ಅಂಗಾತ ಮಲಗಿಸಿ ಎದೀಮ್ಯಾಲೆ ಕಾಲಿಟ್ಟು ನಿಂತು ಬಂಗಾರಾ, ರೊಕ್ಕಾ ಎಲ್ಲೈತಿ ಹೇಳದಿದ್ದರ ಇವನ ತಲೀ ಒಡೀತೇವಿ ಅಂತ ಅಂದರು. ಆಗ ತಾಯಕ್ಕನ ಬಾಯಾಗ ದ್ರವ ಬಂತು. ಆಕಿ ಅಡಿಗೀ ಮನ್ಯಾಗಿಂದ ಪಡಸಾಲೆಗೆ ಬಂದು ನಾ ಹೇಳತೇನಿ ಅಂದ್ಳು. ಮಾವಗ ಸಿಟ್ಟು ಬಂದು 'ರಂಡೇ' ಅಂತ ಚೀರಿದಾ, ಆಕೀ ಅತ್ಲಾಗ ನೋಡಲೇ ಇಲ್ಲಾ. ಸೀದಾ ಹೋಗಿ ದರೋಡೆಕ ಬಂದವರನ್ನ ಹಕ್ಕಿಗೆ ಕರಕೊಂಡು ಹೋಗಿ ಕುಳ್ಳು ಮಾಡ ತೋರಿಸಿದ್ಳು. ಅಲ್ಲೇ ಅವರ ಮನೀ ಖಜಾನೀನs

ಇತ್ತು. ಕಳ್ಳರು ಎಲ್ಲಾ ದೋಚಿಕೊಂಡು ಹೋದರೂ ತನ್ನ ಗಂಡನ ಜೀವಾ ಉಳೀತಲ್ಲ ಅಂತ ತಾಯವ್ವನ ಮನಸ್ಸಿಗೆ ಸಮಾಧಾನ ಆಗಿತ್ತು. ಆದರ ತಾ ಮಾಡಿದ ಕೆಲಸ ತನಗೆ ಇಷ್ಟು ಮೂಲ ಆಗ್ತದ ಅಂತ ಗೊತ್ತಿದ್ದಿಲ್ಲಾ. ಮಾವ ಆಕೀ ಅಣ್ಣನ್ನ ಕರೆಸಿ ನಮ್ಮ ಮನೀ ಮಾನಾ ಕಳಿಯಾಕ ಹಾದರಾ ಮಾಡಿದ್ಳು ನಿನ್ನ ತಂಗಿ. ಅವಳ್ನ ನಮ್ಮ ಮನೀಗೆ ಸೇರಿಸೂದಿಲ್ಲಾ, ಕರಕೊಂಡು ಹಾಳಾಗಿ ಹೋಗು ಅಂದರಂತ. ತಂದೀ ಮಾತು ಖರೇ ಇದ್ದರೂ ಇರಬೇಕು ಅಂತ ನಂಬಿಯೋ ಅಥವಾ ತಂದಿಗೆ ಹೆದರಿಯೋ ವೀರಣ್ಣೋರು ಸುಮ್ಮನಿದ್ದುಬಿಟ್ರು. ಅಂಥಾ ಸಾವಕಾರ್‍ರಿಗೆ ಹೆಣ್ಣು ಕಾಸಿಗೊಂದು ಕೊಸರಿಗೆರಡು. ಬ್ಯಾರೆ ಲಗ್ನಾ ಮಾಡಿಕೊಂಡ್ರು. ಆಮ್ಯಾಲೆ ತಮ್ಮ ತಪ್ಪ ಗೊತ್ತಾತು. ಇಲ್ಲೀಗ ಬಂದ್ರಿ ಪಶ್ಚಾತ್ತಾಪ ಆಗಿ. ಆದರ ಇಕೀ ಅವರ ಮಾರಿ ಸುದ್ದಾ ನೋಡಲಿಲ್ಲಾ. 'ನೀ ಯಾರೋ ನನಗ್ಗೊತ್ತಿಲ್ಲ. ನನ್ನ ದೇವರು ಬರಮಣ್ಣ' ಅಂತ ಹೇಳಿಕಳ್ಸಿದ್ಳು. ಸಾಯೂತನಕಾ ಗಂಡನ ಹೆಸರು ಎತ್ತಲಿಲ್ಲಾ."

"ಆದರ ಇವರಿಗೆ ಈಗ ತಿಳಿದsದ ಈ ಹೆಣ್ಣು ಹೆಣ್ಣಲ್ಲ, ದೇವತೀ ಅಂತ. " ಮಾಸ್ತರ ನಿಟ್ಟುಸಿರು ಬಿಟ್ಟು ಬಾವಿಯತ್ತ ನಡೆದ ಸ್ನಾನಕ್ಕೆ.

***

■■

# ಸಿಹಿ ಹಾಗಲ

ಟಿಕೆಟ್ ತೆಗೆದುಕೊಂಡು ಕೈಯಲ್ಲಿಯ ಸೂಟ್‌ಕೇಸಿನ ಜೊತೆಗೆ ನಾನು ಪ್ಲಾಟ್‌ಫಾರ್ಮ್ ಮುಟ್ಟುವುದಕ್ಕೆ ಸರಿಯಾಗಿ ಗಾರ್ಡು ಸೀಟಿ ಊದಿ ಹಸಿರು ಬಾವುಟ ಹಾರಿಸಿದ. ನಾನು ಧಾವಿಸಿ ಹೋಗಿ ಹತ್ತಿರವೇ ಇದ್ದ ಥರ್ಡ್‌ಕ್ಲಾಸ್ ಡಬ್ಬಿಗೆ ಹತ್ತಿದೆ. ತುಂಬಿ ತುಳುಕುತ್ತಿದ್ದ ಜನರ ನಡುವೆಯೇ ತೂರಿಕೊಂಡು ಹೋಗಿ ಕಾಲಿಡಲು ಸ್ವಲ್ಪ ಸ್ಥಳ ದೊರಕಿಸಿಕೊಂಡು ಆಮೇಲೆ ಸೂಟ್‌ಕೇಸಿನ ಮೇಲೆಯೇ ಕುಳಿತುಬಿಟ್ಟೆ. 'ಮದರ್ ಸೀರಿಯಸ್' ಎಂದು ಬಂದ ತಮ್ಮನ ತಾರು ನೋಡಿ ಅವಸರದಲ್ಲಿ ಹಣ ಜೊತೆಮಾಡಿಕೊಂಡು ಓಡಿ ಬಂದು ಹತ್ತಿದ್ದೆ. ಹಸಿವೆಯಿಂದ, ಗಾಬರಿಯಿಂದ, ಕೈಕಾಲುಗಳಲ್ಲಿಯ ಶಕ್ತಿ ಉಡುಗಿ ಹೋಗಿತ್ತು. ಹೊಟ್ಟೆ ತಾಳಹಾಕುತ್ತಿತ್ತು. ಸಂತೆಯಲ್ಲಿದ್ದೂ ಧ್ಯಾನ ಮಾಡುವವನಂತೆ ಅಷ್ಟೊಂದು ಗದ್ದಲದ ನಡುವೆಯೂ ಕಣ್ಣುಮುಚ್ಚಿ ಕುಳಿತುಬಿಟ್ಟಿದ್ದೆ. ಒಂದೆರಡು ಸ್ಟೇಶನ್ ದಾಟುವಷ್ಟರಲ್ಲಿ ಜನರು ಹತ್ತುವುದೂ ಇಳಿಯುವುದೂ ನಡೆದಾಗ ಹಾಗೆಯೇ ಮುಂದೆ ಸರಿಯುತ್ತಾ ಕಿಟಕಿಯ ಹತ್ತಿರ ಸೀಟು ದೊರಕಿಸಿಕೊಂಡು ಆರಾಮಾಗಿ ಕುಳಿತೆ. ಈಗ ಹೊಟ್ಟೆಯ ಕರೆ ಇನ್ನೂ ಹೆಚ್ಚಾಯಿತು. ಮುಂದಿನ ಸ್ಟೇಷನ್ನಿನಲ್ಲಿ ತಿನ್ನಲು ಏನಾದರೂ ಸಿಕ್ಕುವುದೇನೋ ಎಂದು ನೋಡಲು ಸ್ಥಳಬಿಟ್ಟು ಇಳಿದೆ. ನಾಲ್ಕು ಬಾಳೆಹಣ್ಣು ಹಿಡಿದುಕೊಂಡು ತಿರುಗಿ ಬಂದೆ. ನನ್ನ ಸ್ಥಳದಲ್ಲಿ ಯಾವಳೋ ಮುದುಕಿ ತನ್ನ ಗಂಟಿನ ಸಮೇತ ಕುಳಿತುಕೊಂಡಿದ್ದಳು.

"ಏಳಬೇ ನಾ ಕೂತಿದ್ದೆ ಇಲ್ಲೆ. ಈಗ ಇಳಿದು ಹೋಗಿದ್ದೆ" ಎಂದೆ.

ಏಳಲು ಹಿಂದೆ ಮುಂದೆ ನೋಡಿದಳು. ಸುತ್ತ ಕುಳಿತ ಜನರು "ಹೌದವ್ವಾ, ಸಾಹೇಬ್ರು ಕೂತಿದ್ದರು ಆ ಜಾಗದಾಗ" ಎಂದರು.

ಅವರ ಮಾತಿನಿಂದಲೋ, ನನ್ನ ಪ್ಯಾಂಟು ಕೋಟು ನೋಡಿಯೋ, ತನ್ನ ಗಂಟನ್ನು ಕೆಳಗಿಟ್ಟು ಒತ್ತಟ್ಟಿಗೆ ಸರಿದು ಕುಳಿತು ನನಗೂ ಕೂಡ್ರಲು ಸ್ಥಳ ಮಾಡಿಕೊಟ್ಟಳು ಮುದುಕಿ.

"ಬಾ ಯಪ್ಪ, ಕೂತ್ಕೊ, ಖಾಲಿ ಇತ್ತು, ನಾ ಬಂದು ಕುಂತೆ. ಜಾಗ ನಂದು ನಿಂದು ಅನ್ನಾಕ ಯಾರೂ ಸಾಸ್ವತ ಇರಾಕ ಬಂದಿಲ್ಲ ಇಲ್ಲೆ. ಟೇಸನ್ ಬಂದಕೂಡ್ಲೆ ಜಾಗಾ ಇಲ್ಲೇ ಬಿಟ್ಟು ಹೋಗ್ತಾರ ಎಲ್ಲಾರೂ" ಎಂದು ಮಾತಿನಿಂದ ನನ್ನ ಮೂತಿ ತಿವಿಯಲು ಮರೆಯಲಿಲ್ಲ. ಮುದುಕಿಯರನ್ನು ಕಂಡರೆ ನನಗೆ ಮೊದಲಿನಿಂದ ಅಷ್ಟಕ್ಕಷ್ಟೆ. ಇವರ ಮಾತಿಗೇನು ಉತ್ತರ ಕೊಡುವುದೆಂದು ತಾತ್ಸಾರ ಮಾಡಿ ನಾನು ಸುಮ್ಮನೆ ಕಿಟಕಿಯತ್ತ ಮುಖ ತಿರುವಿ ಕುಳಿತೆ.

ಆದರೂ ನನ್ನ ಮನಸ್ಸು ಆ ಮುದುಕಿಯತ್ತಲೇ ಸಂಚರಿಸುತ್ತಿತ್ತು. ಎಲ್ಲಿಯೋ ನೋಡಿದ ಮುಖ. ಕೇಳಿದ ಧ್ವನಿ ಎನ್ನವುದು ನೆನಪಾಗಲೊಲ್ಲದು. ಆಗ ನಾನಿದ್ದ ಪರಿಸ್ಥಿತಿಯೂ ನನ್ನನ್ನು ಹೆಚ್ಚು ಆಲೋಚನೆ ಮಾಡಲು ಬಿಡಲೊಲ್ಲದು. ನೆನಪಿಸಿಕೊಳ್ಳದಿದ್ದರೆ ಮನಸ್ಸಿಗೆ ಸಮಾಧಾನವಾಗದು. ಮತ್ತೆ ಮತ್ತೆ ಅವಳನ್ನು ನೋಡಬೇಕೆನಿಸಿದರೂ ಅದಕ್ಕೂ ಏನಾದರೂ ಅಂದಾಳೆಂಬ ಹೆದರಿಕೆಯಿಂದ ಸುಮ್ಮನಿದ್ದೆ. ಮತ್ತೊಮ್ಮೆ ಇತ್ತ ತಿರುಗಿದೆ. ಮುದುಕಿ ರೊಟ್ಟಿಯ ಗಂಟು ಬಿಚ್ಚಿದಳು.

"ಯೆಪ್ಪ ರೊಟ್ಟಿ ತಿನ್ನೋಣು ಬಾ" ಎಂದಳು.

"ಬ್ಯಾಡಾ, ಹಣ್ಣು ತಂದೀನಿ, ನಾ ತಿಂತೀನಿ" ಎಂದೆ.

"ಓಡೀಯುಪ್ಪ ಬರೇ ಹಣ್ಣ ಯಾಕ ತಿಂತೀ? ಹಸದು ಹಣ್ಣು ತಿನ್ನಬಾರದು. ಇಕಾ ಈ ರೊಟ್ಟಿ ತಿನ್ನು" ಎನ್ನುತ್ತ ಉಸುಳಿ, ಖಾರದ ಚಟ್ನಿ ಹಚ್ಚಿದ ಎರಡು ರೊಟ್ಟಿ ಕೈಯಲ್ಲಿಟ್ಟಳು. ಹಸಿದ ಹೊಟ್ಟೆಗೆ ಹಿತವಾಯಿತು.

ನನ್ನವೆರಡು ಬಾಳೆಹಣ್ಣು ಅವಳಿಗೆ ಕೊಟ್ಟೆ. ಹೊಟ್ಟೆ ತುಂಬಿದ ಮೇಲೆ ಮನದ ಸಂಕಟ ಕಡಿಮೆಯಾಗಿ ಎವೆ ಭಾರವಾದವು....

ಅವ್ವ ಹ್ಯಾಗಿದ್ದಾಳೋ ಏನೋ, ತಾರು ಕೊಡಬೇಕಾದರೆ ಏನಾದರೂ ಹೆಚ್ಚು ತ್ರಾಸು ಆಗಿರಬೇಕು. ಸುಮ್ಮ ಸುಮ್ಮನೆ ಹಾಗೆಲ್ಲಾ ನನಗೆ ತೊಂದರೆ ಕೊಡೋದಿಲ್ಲ ಶೇಖರ. ತಾನೇ ಅವ್ವನನ್ನು ಕಾಳಜಿಯಿಂದ ನೋಡಿಕೊಳ್ಳುತ್ತಾನೆ. ಕ್ಷಯದಿಂದ ದುರ್ಬಲವಾದ ಪ್ರಕೃತಿ, ಏನಾದರೂ ಆಗಿಬಿಟ್ಟಿದ್ದರೆ?..... ನನ್ನ ಸಂಸಾರ ನೋಡಿದಳು. ಚೆನ್ನಾಗಿ ದುಡಿದು ತಂದು ಸುಖವಾಗಿರುವುದನ್ನು ನೋಡಿದಳು. ಆದರೆ ಶೇಖರನ ತಲೆಯ ಮೇಲಿಷ್ಟು ಅಕ್ಕಿಕಾಳು ಹಾಕಬೇಕಲ್ಲ, ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡ ನನಗೂ ಶೇಖರನಿಗೂ ಅವ್ವನನ್ನು ಬಿಟ್ಟರೆ ಇನ್ನಾರಿದ್ದಾರೆ? ಅವಳದಂತೂ ಮೊದಲಿನಿಂದ ಕಷ್ಟವನ್ನೇ ಕಂಡುಂಡ ಜೀವ. ಮುಪ್ಪಿನ ಕಾಲಕ್ಕಾದರೂ ಸುಖ ಕೊಡಬೇಕೆಂದರೆ ಕ್ಷಯದಿಂದ ಆಸ್ಪತ್ರೆಯ ವಾಸವೇ ಗತಿಯಾಯಿತು ಅವಳಿಗೆ. ಅಪ್ಪ ಸತ್ತ ಮೇಲೆ ಹೇಗೋ ಅವರಿವರ ಹೊಲದಲ್ಲಿ ದುಡಿದು ನಮ್ಮನ್ನು ಬೆಳೆಸಬೇಕು ಅನ್ನುವಷ್ಟರಲ್ಲಿ ಅಕ್ಕನ ಗಂಡ ಸತ್ತ. ಚಿಕ್ಕ ವಯಸ್ಸಿನ ಅಕ್ಕ ತನ್ನ ಗಂಡನ ಚೂರು ಹೊಲವನ್ನೂ ಮಾರಿ ನಮ್ಮಲ್ಲಿಗೇ ಬಂದು ಇರಬೇಕಾಯಿತು. ಅವಳಿಂದಲೇ ನಮ್ಮ ವಿದ್ಯಾಭ್ಯಾಸಕ್ಕೆ ಅಷ್ಟಿಷ್ಟು ಸಹಾಯವೂ ಆಯಿತು. ನಾನು ಶೇಖರ ಹೈಸ್ಕೂಲು ಕಲಿವಾಗ ಪಟ್ಟಣದಲ್ಲಿ ಸಣ್ಣ ಕೋಣೆ ಬಾಡಿಗೆ ಹಿಡಿದು ಇರಬೇಕಾಗಿತ್ತು. ಅವ್ವ ಅವರಿವರ ಮನೆಗಳಲ್ಲಿ ಕೆಲಸ ಮಾಡಲು ಹೋದಾಗ ಅಕ್ಕನೂ ಅವಳಿಗೆ ಸಹಾಯ ಮಾಡುತ್ತಿದ್ದಳು. ಮಗಳ ಮುಖ ನೋಡಿದಾಗೆಲ್ಲ ಅವ್ವನ ದುಃಖ ಉಕ್ಕಿ ಬರುತ್ತಿತ್ತು. ಆದರೆ ಆಗ ಅಕ್ಕ ಹೇಳೋ ಮಾತು-

"ಅವ್ವಾS ನನ್ನ ಬಾಳೆ ಹಿಂಗಾತು ಅಂತ ಎಷ್ಟು ದಿನ ಕೊರಗತಿ? ಈ ತಮ್ಮಗೋಳು ಎರಡು ಕಣ್ಣು ಇದ್ದಾಂಗ ಇದ್ದಾರ. ಅವರು ಸಾಲೀ ಕಲಿತು ಶಾಣ್ಯಾರಾದರ ಈ ಮನೀ ಬೆಳಗತದ. ಈಗ ಕಷ್ಟ ಆದರ ಏನಾತು, ನಾಳೆ ಸುಖಾ ಸಿಕ್ಕೇಸಿಗ್ತದ."

ನೆನಪಾದರ ಇನ್ನೂ ತಳಮಳ ಆಗ್ತದ. ಸುಖ ಸಿಗುವುದೆನ್ನುವ ಆಸೆಯೊಳಗ ದುಡಿದು ಸಣ್ಣಾಗಿ, ಮಲೇರಿಯಾ ಜ್ವರದಿಂದ ಹಣ್ಣಾಗಿ ಜೀವ ಬಿಟ್ಟಳು ಅಕ್ಕ. ಡಾಕ್ಟರಿಗೆ ತೋರಿಸಲಿಕ್ಕೂ ರೊಕ್ಕ ಇಲ್ಲದಷ್ಟು ಬಡವರು ನಾವು. ಮುತ್ತಿನಂಥ ಅಕ್ಕನ ಕಳಕೊಂಡು ಈಗ ಸುಖಾ ಅನುಭೋಗಿಸ್ತೀವಿ!

***

ಕಣ್ಣಿನಿಂದ ನೀರು ಹರಿದುದು ಪಕ್ಕದಲ್ಲಿದ್ದ ಮುದುಕಿಗೆ ಹೇಗೆ ಕಾಣಿಸಿತೋ. "ಯಾಕ ಯಪ್ಪಾ ಕಣ್ಣಾಗ ನೀರು?" ಎಂದಳು. ಕಿಟಕಿಯ ಹತ್ತಿರ ಕುಳಿತ ನಾನು ಸಹಜವೆನ್ನುವಂತೆ ಹೇಳಿದೆ, "ಕಣ್ಣಾಗೇನೋ ಧೂಳು ಬಿತ್ತು."

ಹುಟ್ಟಿನಿಂದ ಬಂದ ನನ್ನ ಅಭಿಮಾನ ಇಂಥ ಎಷ್ಟೋ ಬಿಳಿ ಸುಳ್ಳು ಹೇಳಲು ಹಚ್ಚಿತ್ತು. ಹೈಸ್ಕೂಲಿನಲ್ಲಿ ಕಲಿಯುವಾಗ ಗೆಳೆಯರು ಚಹಾ ಕುಡಿಯೋಣ ಬಾ, ಸಿನಿಮಾಕೆ ಹೋಗೋಣ ಬಾ ಎಂದಾಗಲೆಲ್ಲಾ, ನನ್ನದೊಂದು ಉತ್ತರ ಸಿದ್ಧವಾಗಿರುತ್ತಿತ್ತು. ಅವರಿವರ ಋಣದಲ್ಲಿ ಬೀಳಬಾರದಲ್ಲ ಎಂದು ಸುಳ್ಳು ಸೃಷ್ಟಿಸುವುದನ್ನು ಕಲಿತಿದ್ದೆ. ಆದರೆ ನನ್ನ ಮನೆಯ ಪರಿಸ್ಥಿತಿ ಗೊತ್ತಿದ್ದ ಆತ್ಮೀಯ ಗೆಳೆಯರು ನೋಟ್ ಬುಕ್ಕುಗಳಿಗೆ, ಪಠ್ಯ ಪುಸ್ತಕಗಳಿಗೆ ಚಿಲ್ಲರೆ ಹಣದ ಸಹಾಯ ಮಾಡುವಾಗ ಮೂಕನಾಗಿ ಸ್ವೀಕರಿಸುತ್ತಿದ್ದೆ. ಆ ದಿನಗಳಿನ್ನೂ ನನ್ನ ಮನಸ್ಸಿನಿಂದ ಮಾಸಿಲ್ಲ, ಅದರಂತೆಯೇ...

"ಯಾರವರು ಕ್ಲಾಸಿನಲ್ಲಿ ಪಟಾಕಿ ಹಾರಿಸಿದವರು?" ಶಾಸ್ತ್ರೀ ಮಾಸ್ತರರು ಕೇಳಿದರು. ಅವರ ಮಾತು ಇಡೀ ಕ್ಲಾಸನ್ನೇ ಉದ್ದೇಶಿಸಿತ್ತು. ಯಾರೂ ಬಾಯಿ ಬಿಡಲಿಲ್ಲ. ಅವರ ಸಿಟ್ಟು ನೆತ್ತಿಗೆ ಏರಿತು.

"ಹಾರಿಸಿದವರು ಯಾರೆಂದು ಗೊತ್ತಾಗದಿದ್ದರೆ ನಾನು ಪಾಠ ಹೇಳೋದೇ ಇಲ್ಲ." ಫಿಜಿಕ್ಸ್ ಕಠಿಣವಾದ ವಿಷಯ. ಪ್ರಿಲಿಮನರಿ ಪರೀಕ್ಷೆ ಸಮೀಪಿಸಿತ್ತು ಅಭ್ಯಾಸ ಮುಂದುವರಿಯಲೇಬೇಕಾಗಿತ್ತು. ಪುಸ್ತಕ ಕೆಳಗಿಟ್ಟು ಕುಳಿತ ಮಾಸ್ತರರನ್ನು ದಿಟ್ಟಿಸಿದೆ. ಕಠಿಣಮನಸ್ಕರಾಗಿದ್ದ ಅವರು ತುಂಬ ಹತವಾದಿ, ಪಾಠ ಮುಂದುವರಿಯುವ ಲಕ್ಷಣ ತೋರಲಿಲ್ಲ. ನನಗೆ ಜೀವ ತಡೆಯಲಿಲ್ಲ.

"ಸರ್ ನಾ, ಹೇಳ್ತೀನಿ, ಪಟಾಕಿ ಹಾರಿಸದವ ಇನಾಮದಾರರೀ" ಎಂದೆ.

"ಇನಾಮದಾರ, ಸ್ಟ್ಯಾಂಡ್‌ಅಪ್ ಅಂಡ್ ಗೆಟ್‌ಔಟ್" ಎಂದು ಗುಡುಗಿದರು. ಇನಾಮದಾರ ಕೆಂಗಣ್ಣಿನಿಂದ ದುರುದುರು ನೋಡತ್ತ ಎದ್ದು ಹೋದ.

"ಶಿವೂ ನೀ ಇನಾಮದಾರನ ಹೆಸರು ಹೇಳಬಾರದಾಗಿತ್ತು. ದುಷ್ಟ ಅಂವಾ, ನಿನ್ನ ಸುಮ್ಮನs ಬಿಡೂದಿಲ್ಲ" ಎಂದು ಪಾಟೀಲ ನನ್ನ ಕಿವಿಯಲ್ಲಿ ಪಿಸುಗುಟ್ಟಿದ. ನನ್ನ ಎದೆ ಡವಗುಟ್ಟಿದರೂ ಪಾಠದ ಕಡೆಗೆ ಲಕ್ಷ್ಯವಿದ್ದಂತೆ ನಟಿಸಿದೆ.

ಸಂಜೆ ಶಾಲೆ ಬಿಟ್ಟ ಮೇಲೆ ಮನೆಗೆ ಹೊರಟಾಗ ಇನಾಮದಾರ ತನ್ನ ಚಂಡಾಳ ಚೌಕಡಿ ಗುಂಪಿನೊಡನೆ ಅಡ್ಡಗಟ್ಟಿ ನಿಲ್ಲಿಸಿ, ನನ್ನನ್ನು ಹೊಡೆದು ಹಣ್ಣು ಮಾಡಿದ. ಅಂಗಿ ಜಗ್ಗಿ ಹರಿದದ್ದಲ್ಲದೆ ಪುಸ್ತಕ ಕಸಿದುಕೊಂಡು ಕಾಲಲ್ಲಿ ಹಾಕಿ ಕಚಪಚ ತುಳಿದು ಹಾಕಿದ. ಕೆದರಿದ ಕೂದಲು ಬಾಡಿದ ಮುಖ, ಹರಿದ ಅಂಗಿಯೊಡನೆ ಮನೆಗೆ ಬಂದ ನನ್ನನ್ನು ನೋಡಿ ಅವ್ವ ಗಾಬರಿಯಾಗಿ ಕೇಳಿದಳು.

"ಏನೋ ತಮ್ಮಾs ಏನಾತು? ಹಿಂಗ್ಯಾಕ ನಿನ್ನ ಅವಸ್ಥಾ?"

ನನ್ನ ಕಣ್ಣು ತುಂಬಿಬಂದಿದ್ದವು. "ಯಾರೂ ಇಲ್ಲವಾ, ಖರೇ ಹೇಳಿದ್ದಕ್ಕೆ ಈ ಅವಸ್ಥಾ ಆತು" ಎಂದೆ. ಅಕ್ಕ ಎಣ್ಣೆ ಹಚ್ಚಿ ಮೈ ತಿಕ್ಕಿ, ಎರೆದು ಉಪಚಾರ ಮಾಡುತ್ತ ಅಂದಳು "ಇನ್ನೊಮ್ಮೆ ಹಿಂಗ ಯಾರ ಜೋಡೀನೂ ಜಗಳ ಮಾಡಲಿಕ್ಕೆ ಹೋಗಬ್ಯಾಡಪ್ಪಾ. ಮನೀಯೊಳಗ ನೀನs ದೊಡ್ಡಾವಾ. ಗಂಡಸರ ದಿಕ್ಕಿಲ್ಲದವರು ನಾವು...."

ಗಾಡಿ ಗಕ್ಕನೆ ನಿಂತಿತು. ಕಣ್ಣು ತೆರೆದೆ. ತೂಕಡಿಸುತ್ತಿದ್ದ ಮುದುಕಿ ಎಚ್ಚರವಾದದ್ದು ನೋಡಿ ಎದುರು ಸೀಟಿನ ಮೇಲೆ ಕುಳಿತ ಹಿರಿಯನೊಬ್ಬ ಕೇಳಿದ "ಯಾಕಬೇ ಹಾಲಮ್ಮ, ಇತ್ಲಾಗ ಹೊಂಟೆ?"

"ಹೌದಪ್ಪಾ ತಾತಾ, ತಂಗೀ ಮಗಳು ಹಡದಾಳಂತ, ಕಾಗದಾs ಹಾಕಿಸಿದ್ದ, ನೋಡಾಕ ಹೊಂಟೀನಿ."

"ಯಾರು, ಚೆನ್ನವ್ವನ?" ಎಂದ ಪ್ರಶ್ನೆಗೆ ಹೂಂಗುಟ್ಟಿದ ಮುದುಕಿಯತ್ತ ಈಗ ಮತ್ತೆ ನೋಡಿದೆ. ಗಾಡಿಯ ಹೊಯ್ದಾಟಕ್ಕೆ ಮೊಳಕಾಲ ಮೇಲೆ ತಲೆಯಿಟ್ಟು ತೂಕಡಿಸುತ್ತಿದ್ದಳಾಕೆ. ಹಾಲಮ್ಮ! ಇವಳು ಹಾಲಮ್ಮನೆ ? ಹೌದು ಅದೇ ಉದ್ದ ಮೂಗು, ಮೆಳ್ಳೆಗಣ್ಣು, ವಯಸ್ಸಾಗಿದ್ದರಿಂದ ಬಾಯಿ ಬಚ್ಚಾಗಿದೆ. ಮೈ ನಿರಿಗೆಗಟ್ಟಿದ ಹಾಲಮ್ಮ ನಮಗೆ ಕೋಣೆ ಕೊಟ್ಟ ಮನೆಯ ಒಡತಿ.

"ಮನಿಯೊಳಗ ಗಂಡಸರ ದಿಕ್ಕಿಲ್ಲs? ಹಾಂಗಾರ ಒಳಒಕ್ಕಲು ಕೋಣಿ ಅದ, ಕೊಡತೀನಿ, ಬಾಡಿಗೆ ಹತ್ತು ರೂಪಾಯಿ. ನನ್ನ ಮಗ ದೂರ ದೇಶದಾಗ ನೌಕರಿ ಮಾಡತಾನ. ಈಗ ಮನ್ಯಾಗ ನಾನು ನನ್ನ ತಂಗೀ ಮಗಳು ಚನ್ನವ್ವ ಇಬ್ಬರs ಇರತೇವಿ" ಎಂದಿದ್ದಳು ಹಾಲಮ್ಮ ಅವ್ವನ ಮುಂದೆ,

"ಮನ್ಯಾಗ ದುಡಿಯೂ ಗಂಡಸರಿಲ್ಲ, ಹತ್ತು ರೂಪಾಯಿ, ಹೆಚ್ಚಾತು, ಆರು ರೂಪಾಯಿ ಕೊಡತೀವಿ, ನಾನು, ನನ್ನ ಸಣ್ಣಮಕ್ಕಳು, ಅಷ್ಟs ಇರೋವ್ರು," ಅಂಗಲಾಚಿದಾಗ ದೊಡ್ಡ ಮನಸ್ಸು ಮಾಡಿ ಕೋಣೆ ಕೊಡಲು ಒಪ್ಪಿದ್ದಳು ಹಾಲಮ್ಮ. "ಒಟ್ಟಿನ ಮ್ಯಾಲೆ ನೆರಿ ಭೋಲೋ ಇರಬೇಕು ನಮಗ, ಮಂದಿ ಒಳ್ಳೇವರು ಇರಬೇಕು. ನೀವು ನಮಗ, ನಾವು ನಿಮಗ ಆಸರ ಆಗಿರಬೇಕು" ಎಂದಳು.

ಹಾಲಮ್ಮನಿಗೆ ಅಕ್ಕನನ್ನು ಕಂಡರೆ ಕನಿಕರ. ಅಷ್ಟರಲ್ಲಿ ಚಿಕ್ಕಪುಟ್ಟ ಕೆಲಸ ಮಾಡಿಸಲು ಹರಟೆ ಹೊಡೆಯಲು ಸ್ನೇಹ. ನಾವು ಚಿಕ್ಕವರೆಂದು ತಮ್ಮ ಮನೆಯ ಅಪರೂಪದ ತಿಂಡಿಯಲ್ಲಿ ನಮಗೆ ಪಾಲು. ಅವಳ ಅಡಿಗೆಯನ್ನೂ ಸಾಹೇಬ ಮಗನನ್ನೂ ಔದಾರ್ಯವನ್ನೂ ಹೊಗಳಿದಾಗ ಉಬ್ಬುಬ್ಬಿ ನಗುತ್ತಿದ್ದಳು. ಮಾತಿಗೆ ಮಾತು ಬಂದಾಗ ಹಂಗಿಸಿ ಹೀಯಾಳಿಸಲೂ ಹಿಂದೆ ಸರಿಯುವವಳಲ್ಲ. ಎರಡನೆಯವರ ಮನ ನೊಂದೀತೆಂದು ವಿಚಾರಿಸುವವಳಲ್ಲ, ಪ್ರತಿಷ್ಠೆಯವಳು. ಛಲವಾದಿ, ಹಗುರು ಬಾಯವಳು. ಅದನ್ನು ತಿಳಿದ ಅವ್ವ, ಅಕ್ಕ ಅವಳೊಡನೆ ಆರಕ್ಕೆ ಏರದೆ ಮೂರಕ್ಕೆ ಇಳಿಯದೆ ನಡೆದುಕೊಳ್ಳುವರು. ಮನೆಯ ಯಜಮಾನಿ ಎಂದು ಅವಳನ್ನು ಸಂತೋಷದಲ್ಲಿಡೋದಕ್ಕೆ ಪ್ರಯತ್ನ ಮಾಡುವರು, ಆಗಾಗ ನಾನು, ಶೇಖರ ಅವಳ ಸಣ್ಣ ಪುಟ್ಟ ಕೆಲಸ ಮಾಡಿಕೊಡ್ತಾ ಇದ್ದೆವು. ಒಂದು ಸಂಜೆ -

"ಶಿವಣ್ಣ, ಇವತ್ತ ನನಗಿಷ್ಟು ಕಾಯಿಪಲ್ಲೆ ತೊಗೊಂಡು ಬಾರಪ್ಪ" ಎಂದಳು ಹಾಲಮ್ಮ, ನಾನು ಸಾಲೆಯಿಂದ ಬಂದೊಡನೆ.

"ಆಗಲಿ, ಚೀಲಾ ರೊಕ್ಕಾ ತರ್ರಿ, ಏನೇನು ತರಬೇಕು ಹೇಳ್ರೀ" ಎಂದೆ.

"ಮೆಂತೆಪಲ್ಲೆ, ಕೋತಂಬರಿ, ಹಸಿಮೆಣಸಿನಕಾಯಿ, ಹಾಗಲಕಾಯಿ ತೊಗೊಂಡು ಬಾ."

"ಹೋಗ್ರೀ, ವಿಷಾ ಹಾಗಲಕಾಯಿ, ಅದನ್ಯಾಕ್ರೀ? ಬದನೆಕಾಯಿ, ಬೆಂಡೀಕಾಯಿ ತರತಿನ್ರಿ."

"ಹುಚ್ಚಪ್ಪಾ, ನಿನಗೇನು ಗೊತ್ತ ಅದ. ಹಾಗಲಕಾಯಿ ತಿಂದರ ಹೊಟ್ಯಾಗಿನ ಹುಳ ಸಾಯ್ತಾವು. ತೊಗೊಂಡು ಬಾ, ಪಲ್ಲೆ ಮಾಡಿಕೊಡ್ತೀನಿ, ನಾಳೆ ನೀನs ತಿಂದು ನೋಡು."

ಮರುದಿನ ಊಟಕ್ಕೆ ಕುಳಿತಾಗ ಹಾಲಮ್ಮ ಕಳಿಸಿದ್ದ ಹಾಗಲಕಾಯಿ ಪಲ್ಲೆ ನೀಡಿದಳು ಬಹಳ ರುಚಿಯಾಗಿತ್ತು. ಅವ್ವನಿಗೆ ಅದೇ ರೀತಿ ಪಲ್ಲೆ ಮಾಡಲು ಹೇಳಿದೆ. ನನ್ನ ತಲೆಯಲ್ಲಿ ಬಂದೊಡನೆ ಎರಡು ಹಾಗಲಬೀಜಾ ಎಲ್ಲಿಂದಲೋ ದೊರಕಿಸಿ ಹಿತ್ತಲಲ್ಲಿ ತಿಪ್ಪೆಯ ಹತ್ತಿರ ಅವನ್ನು ಊರಿ ನೀರು ಹಾಕಹತ್ತಿದೆ. ದಿನವೂ ಸಾಲೆಯಿಂದ ಬಂದೊಡನೆ ಬಳ್ಳಿ ಎಷ್ಟು ದೊಡ್ಡದಾಗಿದೆ ಎಂದು ನೋಡುವುದೊಂದು ಕೆಲಸವೇ ಆಗಿತ್ತು ನನಗೆ, ಶೇಖರನಿಗೆ. ನಮ್ಮ ಆರೈಕೆಯಿಂದ ಬಳ್ಳಿ ಬೆಳೆದು ದೊಡ್ಡದಾಗಿ ಬೆಳೆದು ಜೋಪಾನ ಮಾಡಿದ್ದಲ್ಲವೇ ? ಯಾವಾಗ ಹರಿದು ತಿಂದೇವೊ ಎನ್ನುವ ಆತುರ ನಮಗೆ.

ಮ್ಯಾಟ್ರಿಕುಲೇಷನ್ ಪರೀಕ್ಷೆ ಸಮೀಪಿಸಿತ್ತು ನಾನು ಓದುವುದರಲ್ಲಿ ಮಗ್ನನಾಗಿದ್ದೆ. ಶೇಖರ ಓಡುತ್ತ ಬಂದ "ಅಣ್ಣಾs ಹಾಲಮ್ಮ ನಮ್ಮ ಬಳ್ಳ್ಯಾಗಿನ ಕಾಯಿ ಹರೀಲಿಕ್ಕೆ ಹತ್ಯಾರ" ಪುಸ್ತಕ ಹಾಗೇ ಒಗೆದು ಓಡಿ ಹೋದೆ. ಹಾಲಮ್ಮ ಉಡಿಯಲ್ಲಿ ಕಾಯಿ ಹಾಕಿಕೊಂಡು ತಿರುಗಿದಳು. ನನಗೋ ಸಿಟ್ಟು ಉಕ್ಕೇರುತ್ತಾ ಇತ್ತು.

"ಏನ್ರೀ ಹಾಲಮ್ಮ ಹಾಗಲಕಾಯಿ ಯಾಕ ಹರದ್ರೀ?"

"ಯಾಕೋ, ಪಲ್ಲೇ ಮಾಡಾಕ ಹರಿದೆ, ಮತ್ತ್ಯಾತಕ್ಕ ಹರೀತಾರ?"

"ಯಾರನ್ನ ಕೇಳಿ ಹರದ್ರೀ?"

"ಯಾರ್ನ ಯಾಕ ಕೇಳಬೇಕೋ ಮೂಳಾ. ನನ್ನ ಅಂಗಳ, ನನ್ನ ಬಳ್ಳಿ ನಾ ಕಾಯಿ ಹರಿದ್ರ ಬ್ಯಾಡ ಅನ್ನೋವ್ರು ಯಾರು ?

"ನಾ ಬ್ಯಾಡ ಅಂತೀನಿ. ನಾನು ಬೀಜಾ ಬಿತ್ತಿ, ನೀರು, ಗೊಬ್ಬರ ಹಾಕಿ ದೊಡ್ಡದು ಮಾಡಿದೆ. ಬಳ್ಳಿ ನಮ್ಮದು.":

"ಅಬಬಬ!ಬಳ್ಳಿ ತನ್ನದಂತ ದೊಡ್ಡ ಯಜಮಾನ ಹೇಳಾಕ ಬಂದಾನ. ಪಲ್ಲೆ ಹೆಚ್ಚಿ ಒಗೆದಿದ್ದ ಬೀಜ ತಿಪ್ಪ್ಯಾಗ ಬಿದ್ದು ಬೆಳದದ. ತಲಿಮ್ಯಾಲಿನ ಮಾಸಹಾರದ ಹುಡುಗಾ ಜಗಳಕ್ಕ ಬಂದಾನ!" ಎಂದು ಬಾಯಿ ಜೋರು ಮಾಡಿದಾಗ ನೆರೆಮನೆಯ ಹೆಂಗಸರು ಹಣಿಕಿದರು. ಅವ್ವ ಒಳಬಾಗಿಲಿನಲ್ಲಿ ನಿಂತು "ತಮ್ಮ, ಇರಲಿ ಒಳಗ ಬಾರಪಾ ಜಗಳಾ ಮಾಡಬ್ಯಾಡಾ" ಎಂದಳು.

"ಒಳಗಿನಿಂದ ಚುಚ್ಚಿಕೊಟ್ಟು ಮತ್ತೆ ಈಗ ಮಳ್ಳೀ ಹಾಂಗ 'ಇರಲಿ ಬಾರಪ್ಪಾ' ಅಂತಾಳ ಈ ಬೋಕಾಣಿ, ನೋಡ್ರವ್ವಾ ನನ್ನ ಮನೀ, ನನ್ನ ಹಿತ್ತಲ ನಾ ಕಾಯಿ ಹರಿದರ ಎಷ್ಟ ಚೌಕಾಸಿ ಇವರದು" ಎಂದು ನೆರೆಮನೆಯ ಹೆಂಗಸರ ಮುಂದೆ ದೂರಿದಳು.

ಅವರೆಲ್ಲ ಸೆರಗಿನ ಮರೆಯಲ್ಲೇ ಪಿಸಿಪಿಸಿ ನಕ್ಕರು. ನನ್ನ ಸಿಟ್ಟು ನೆತ್ತೀಗೇರಿತು. ಅವ್ವನಿಗೆ ಅವಳು ಅಂದ ಮಾತು ಕೇಳಿ, "ಏನ್ರೀ ಹಾಲಮ್ಮ ವಯಸ್ಸಾದವರು ಅಂತ ಮರ್ಯಾದಿ ಕೊಟ್ಟು ಮಾತಾಡಿದರ ಹಿಂಗ ಏನ್ರೀ ಮಾತಾಡೋದು? ನಾವೇನು ನಿಮ್ಮ ಮನಿಯಳಗ ಪುಕ್ಕಟ ಇಲ್ಲಾ. ಬಾಡಿಗೀ ಕೊಡತೀವಿ. ನೋಡಿ ಮಾತಾಡ್ರಿ" ಎಂದೆ ಸಿಟ್ಟಿನಲ್ಲಿ.

"ಅಯ್ಯ ಅಯ್ಯ ಇವನ ದಿಮಾಕಿನ ಮಾತ ಕೇಳ್ರಿ, ದಿಕ್ಕಿಲ್ಲಾ ಅಂದು ಖೋಲೀ ಕೊಟ್ಟೆ. ಉಪಕಾರ ತೀರಸ್ತಾರ ಈಗ. ನಾಳೇ ನನ್ನ ಮನೀ ಖಾಲೀ ಮಾಡ್ರಿ. ನನ್ನ ಮನೀ, ನನ್ನ ಹಿತ್ತಲಾ, ಇಲ್ಲಿ ಯಾರೂ ಬೆಳೀಬೇಕಾಗಿಲ್ಲ" ಎಂದವಳೇ ಸೊಂಪಾಗಿ ಬೆಳೆದು ಹೂ ಬಿಟ್ಟಿದ್ದ ಬಳ್ಳಿಯನ್ನು ಪರಪರ ಹರಿದು ಬೇರು ಸಹಿತ ಗೋಡೆಯ ಆಚೆಗೆ ಒಗೆದಳು. ಉಡಿಯಲ್ಲಿದ್ದ ಹಾಗಲಕಾಯಿಗಳನ್ನೂ ದೂರಕ್ಕೆ ಬೀಸಿದಳು.

ನನ್ನ ಕಣ್ಣಿನಲ್ಲಿ ನೀರು ತುಂಬಿತ್ತು. ಹೊಟ್ಟೆ ಸಿಟ್ಟು ರಟ್ಟೆಯಲ್ಲಿರಲಿಲ್ಲ. ಅವ್ವ, ಅಕ್ಕ ಇಬ್ಬರೂ ನನ್ನನ್ನೆಳೆದು ಒಳಗೆ ಕರೆದುಕೊಂಡು ಬಾಗಿಲು ಹಾಕಿದರು, ಪರೀಕ್ಷೆ ಸಮೀಪಿಸುತ್ತಿತ್ತು. ಓದಬೇಕೆಂದರೆ, ಅವಮಾನ ಚಿಂತೆಯಿಂದಾಗಿ ಓದಿದ್ದು ಹತ್ತುತ್ತಿರಲಿಲ್ಲ. ಹಾಗೂ ಹೀಗೂ ಪರೀಕ್ಷೆ ಮುಗಿಸಿದೆ. ಮೊದಲನೆಯ ಆಸೆ ಅಳಿದು ಹೋಗಿತ್ತು ಈ ಹಾಲಮ್ಮನಿಂದಾಗಿ.

ಪರೀಕ್ಷೆ ಮುಗಿದ ಮರುದಿನವೇ ಅವ್ವ ಹತ್ತಿರ ಬಂದು ಕುಳಿತಳು. ಅವಳ ಬಾಡಿದ ಮುಖ ನೋಡಿದಾಗಲೇ ಏನೋ ಆಗಿದೆ ಅನ್ನಿಸಿತು. "ಏನವ್ವಾ?" ಎಂದೆ. "ತಮ್ಮಾ, ಬ್ಯಾರೆ ಮನೀ ನೋಡಬೇಕಪ್ಪಾ"ಎಂದಳು.

"ಯಾಕವ್ವಾ? ಮತ್ತೇನಾರ ಜಗಳ ಆತೇನು? ಹಾಲಮ್ಮ ಏನು ಮಾಡತಾಳ ಬಿಡು. ಬಿಡು ಅಂದ ಕೂಡಲೆ ಮನೀ ಬಿಡಬೇಕಂತ ಈಗ ಕಾಯಿದೆ ಇಲ್ಲ" ಅಂದೆ, ಅವಳನ್ನು ಸಮಾಧಾನ ಮಾಡಲಿಕ್ಕೆ.

"ಕಾಯಿದೆ ಇರಲಿ ತಮ್ಮಾ, ನಮಗ ಉಂಡು ಮಲಗಲಿಕ್ಕೂ ಸುಮ್ಮನ ಬಿಡೂದಿಲ್ಲಾ ಈ ಹೆಣ್ಣುಮಗಳು. ಯಾವಾಗಲೂ ಬಯ್ಯಕೋತ ಇರತಾಳ. ಹಿಂದ ಹೋದರೂ ಬಯ್ಯೂದು, ಮುಂದೆ ಬಂದರೂ ಬಯ್ಯೂದು. ನನಗಂತೂ ತಾಳಲಾರದಂಗ ಆಗೇದ. ಮತ್ತೆ ನಾವೇನೋ ಆಕೀ ಭಾಂಡಿ ಸಾಮಾನು ಕಳವು ಮಾಡಿವಂತ ಮತ್ತ ಏನೇನೋ, ಹೇಳಬಾರದು ಅವನ್ನೆಲ್ಲಾ" ಎಂದವಳೇ ಅವ್ವ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಆಗ ನನಗೆ ನಿಜವಾದ ಪರಿಸ್ಥಿತಿ ಅರಿವಾಯಿತು. ಬಡವಿಯಾದರೂ ಸ್ವಾಭಿಮಾನಿ ನನ್ನ ಅವ್ವ. ಅವಳ ದೀನಾವಸ್ಥೆ ನನ್ನನ್ನು ಚುಚ್ಚಿತು. ಇನ್ನು ಈ ಮನೆಯಲ್ಲಿರಬಾರದು ಎಂದು ಶಪಥ ಮಾಡಿಕೊಂಡೇ ಎದ್ದು ಹೊರಬಿದ್ದೆ. ಎಂಟು ದಿನ ತಿರುಗಿದರೂ ಎಲ್ಲಿಯೂ ಒಂದು ಕೋಣೆ ಸಿಗಲಿಲ್ಲ. ಅವ್ವ, ಅಕ್ಕನ ಯಾತನೆ ತುಂಬಿದ ಮುಖ ನೋಡಿ ಊಟ ಮಾಡಲೂ ಮನಸ್ಸಾಗುತ್ತಿರಲಿಲ್ಲ. ಕೊನೆಗೆ ಒಂದು ದಿನ ಮನೆಗೆ ಬಂದಾಗ ಅವ್ವ, ಅಕ್ಕ ಒಂದು ಗೋಣಿಚೀಲದಲ್ಲಿ ಪಾತ್ರೆ, ಹಾಸಿಗೆ ಕಟ್ಟಿಕೊಂಡು ಬಂದು ಹೊರಗೆ ಬೀದಿಯಲ್ಲಿ ಕುಳಿತಿದ್ದರು. ಹಾಲಮ್ಮ ಹೊರಗೆ ಹಾಕಿದಳೆಂದು ಹೇಳಲೂ ಧ್ವನಿಯೆತ್ತದೆ ನೆಲದಲ್ಲಿ ಮೋರೆಯಿಟ್ಟು ಕುಳಿತ ಅವರನ್ನು ನೋಡಿ ನನ್ನ ಹೊಟ್ಟೆಯಲ್ಲಿ ಸಂಕಟವಾಯಿತು. ಈಶ್ವರ ದೇವರ ಗುಡಿಯ ಕಟ್ಟೆಯ ಮೇಲೆ ಎರಡು ದಿನ ಕಳೆದು ಹೇಗೋ ಮನೆ ಹುಡುಕಿಕೊಂಡೆವು.

ಹಾಲಮ್ಮನ ಮನೆ ಬಿಟ್ಟ ಮೇಲೆ ಅವಳ ಮುಖ ನೋಡಕೂಡದು ಎನ್ನುವಷ್ಟು ಮನಸ್ಸು ರೋಸಿಹೋಗಿತ್ತು. ಎಲ್ಲಿಯಾದರೂ ದಾರಿಯಲ್ಲಿ ಕಾಣುತ್ತಾಳೆಂದರೆ ಅತ್ತ ಮುಖ ತಿರುವಿ ಹೋಗುತ್ತಿದ್ದೆ. ದ್ವೇಷ ನನ್ನ ಹೃದಯದಲ್ಲಿ ಹೆಪ್ಪುಗಟ್ಟಿತ್ತು. ಆದರೆ ಅವ್ವ ನನ್ನ ಹಾಗಲ್ಲ. ಬಹಳ ದೊಡ್ಡ ಮನಸ್ಸು ಅವಳದು. ಒಮ್ಮೆ ಹಾಲಮ್ಮ ಮಠದಲ್ಲಿ ಭೆಟ್ಟಿಯಾಗಿದ್ದಳಂತೆ. ಅವ್ವನೇ ಮಾತನಾಡಿಸಿದಳಂತೆ. ಚೆನ್ನಾಗಿದ್ದಾಳೆ ಎಂದು ಹೇಳಿದಳು. ನನಗೆ ತಡೆಯಲಿಲ್ಲ.

"ನೀ ಯಾಕ ಅವಳ್ನ ಮಾತಾಡಸಲಿಕ್ಕೆ ಹೋಗಿದ್ದೆ ಅವ್ವಾ? ಹಿಂದಿನದೆಲ್ಲಾ ಮರತಿ ಏನು?" ಎಂದೆ.

ಅದಕ್ಕೆ ಅವ್ವ ಹೇಳಿದ್ದು. "ಮರೀಬೇಕು ತಮ್ಮಾ. ಈ ಭೂಮಿ ಮ್ಯಾಲೆ ದೇವರು ಮನಶ್ಯಾಗ ಮರವ್ಹ ಕೊಟ್ಟಾನಂತ ಜಗಾ ನಡೀತದ. ಮನಶ್ಯಾ ನಾಳೆ ಹೋಗೂ ಮುಂದ ಏನ ಒಯ್ಯತಾನ? ಇರೂತನಕ ಎರಡು ಒಳ್ಳೇ ಮಾತು, ಒಳ್ಳೇ ಸಂಗತಿ ಇರಬೇಕು, ಅಷ್ಟs ಆ ಹೊತ್ತಿನ್ಯಾಗ ದೇವರು ಅವಳಿಗೆ ಅಂಥಾ ಬುದ್ಧೀ ಹಾಕಿದಾ ಅಂತ ಕಡ್ಡೀ ಒಯ್ದು ಗುಡ್ಡಾ ಮಾಡಿದಳು. ನಮ್ಮದs ಕಾಡೂ ಕಾಲ ಯಾರಿಗೆ ಯಾಕ ಅನ್ನಬೇಕು ?"

ಕೇಡು ಮಾಡಿದವರನ್ನೂ ದೂರುವವಳಲ್ಲ ನನ್ನ ಅವ್ವ. ಈಗ ಹೇಗಿದ್ದಾಳೋ, ಮನಸ್ಸು ವಿಲಿ ವಿಲಿ ಒದ್ದಾಡಿತು....

'ಕೂ' ಎಂದ ಗಾಡಿಯ ಕರ್ಕಶ ಸಿಳ್ಳಿಗೆ ಕಣ್ಣು ತೆರೆದೆ. ಹಾಲಮ್ಮ ಎದ್ದು ಗಂಟು ಸಾವರಿಸಿಕೊಳ್ಳುತ್ತಿದ್ದಳು. ಹಿರಿಯ ಕೇಳಿದ "ನಿನ್ನ ಟೇಶನ್ ಬಂತೇನಬೇ?" "ಹೌದ ಹೋಗಿಬರ್ತೇನಿ ಯಪ್ಪಾ ನಾ ಇಳಿತೀನಿ, ಬೇಸಾಗಿ ಕೂಡ್ರಿ" ಎಂದಳು ಹಾಲಮ್ಮ. ಹಾಲಮ್ಮ ಇನ್ನೇನು ಹೊರಟಿದ್ದಾಳೆ, ಇಳಿದು ಹೋಗಿಯೇ ಬಿಡುತ್ತಾಳೆ, ತಿರುಗಿ ಅವಳನ್ನು ನೋಡುವೆನೋ ಇಲ್ಲವೋ ? ಮಾತಾಡಿಸಲೋ ಬೇಡವೋ? ಅವಳಂತೂ ನನ್ನ ಗುರುತು ಹಿಡಿದಿಲ್ಲ, ಮನಸ್ಸು ಹೊಯ್ದಾಡಿತು. ಒಂದು ಕ್ಷಣ ಅವ್ವನ ನೆನಪಾಯಿತು. ಕೇಳಿಯೇಬಿಟ್ಟೆ-

"ಹಾಲಮ್ಮ ನನ್ನ ಗುರುತು ಹತ್ತಿತಿಲ್ಲೋ?"

"ಇಲ್ಲ ಯಪ್ಪಾ, ಕರೇವಂದ್ರು ಹತ್ತಿಲ್ಲ, ಯಾರು ನೀನು ?"

"ನಾನಬೇ ಶಿವಯೋಗಿ, ಗಿಡ್ಡ ಬಸಪ್ಪನ ಮಗಾ, ನಿಮ್ಮ ಮನ್ಯಾಗ ಬಾಡಿಗೆ ಇದ್ದೆವಲ್ಲ?" ಎಂದೆ, ಇಂದಿನ ಹಾಲಮ್ಮನೆದುರು ಹಾಗಲಕಾಯಿ ಮರೆತು ಹೋಗಿತ್ತು.

"ಅಯ್ಯ ! ಬಸವ್ವನ ಮಗಾನs. ಸೂಟು ಬೂಟು ನೋಡಿ ಯಾರೋ ಸಾಹೇಬ ಅಂತ ಮಾಡಿದ್ದೆ ನಾನು. ನೌಕರಿ ಮಾಡತಿಯಾ? ಮದುವಿ ಆತೇನು? ಮಕ್ಕಳೆಷ್ಟು? ಅವ್ವ ಅಕ್ಕ ಪಾಡ ಅದಾರ?" ಒಂದೇ ಉಸುರಿಗೆ ಪ್ರಶ್ನೆಗಳ ಸುರಿಮಳೆಯಾಯಿತು.

ಸಂಕ್ಷಿಪ್ತದಲ್ಲೇ ಉತ್ತರ ಹೇಳಿ, ಕೆಳಗಿಳಿದ ಅವಳ ಕೈಗೆ ಗಂಟನ್ನೆತ್ತಿ ಕೊಟ್ಟೆ. "ಪಾಪ ಬಸವ್ವಕ್ಕಗ ಆರಾಮ ಎಲ್ಲಿ, ಅಸರಂತ ದುಃಖದಾಗ ಆಯುಶ್ಯಾ ಕಳೆದಳು. ಇಬ್ರೂ ಛಲೋತಾಂಗ ನೋಡಿಕೊಳ್ರಿ. ದೇವರು ಕಲ್ಯಾಣ ಮಾಡತಾನ ನಿಮಗ" ಕಣ್ಣೀರು ಮಿಡಿದಳು ಹಾಲಮ್ಮ.

ಕೇಳಿದ ಕೂಡಲೆ ಜಗಳ ಮಾಡದೆ ಸರಿದು ಸ್ಥಳ ಕೊಟ್ಟ ಹಾಲಮ್ಮ, ಹಸಿ ಹೊಟ್ಟೆ ರೊಟ್ಟಿ ನೀಡಿದ ಹಾಲಮ್ಮ, ನನ್ನ ಕಣ್ಣೀರು ಕನಿಕರಿಸಿದ ಹಾಲಮ್ಮ, ತನಗೇನೂ ಸಂಬಂಧವಿಲ್ಲದ ನನ್ನ ಅವ್ವನ ಅನಾರೋಗ್ಯದ ಸುದ್ದಿ ಕೇಳಿ ಕಣ್ಣೀರು ಮಿಡಿದ ಹಾಲಮ್ಮ, ನಮ್ಮ ಇದಿರಿನಲ್ಲೇ ಬೆಳೆದು ಬೆಳೆದು ದೊಡ್ಡವಳಾದಳು.!

***

# ಪರಿಹಾರ

"ಅಯ್ಯs, ಏs ನಿಂಗೀ ನೋಡ ಬಾರs ಇಲ್ಲೇs. ಏನ ಮಾಡ್ಯಾಳ ನಿನ್ನ ಮಗಳೂs!" ಗೀತಾಳ ಚೀರುಧ್ವನಿ ಕಿವಿಯನ್ನು ತೂರಿತು, ಕೈಯಲ್ಲಿಯ ಪೆನ್ನು ನಿಂತಲ್ಲೇ ನಿಂತಿತು, ನನ್ನ ಏಕಾಗ್ರತೆ ನುಚ್ಚು ನೂರಾಯಿತು. ತಡಮಾಡಿ ಬಂದ ನಿಂಗವ್ವನ ಮೇಲೆ ಬೆಳಗಿನಿಂದಲೂ ದುಮುದುಮುಗುಟ್ಟುತ್ತ ಗೊಣಗುತ್ತಿದ್ದ ಗೀತಾಳ ಸಿಟ್ಟು ಈಗ ಸ್ಫೋಟಗೊಂಡಿತ್ತು. ಕೆಲಸದವಳ ಮೇಲಿನ ಸಿಟ್ಟನಿಂದಾಗಿ ಬೆಳಗಿನ ಚಹದ ರುಚಿಯೂ ಕೆಟ್ಟಿತ್ತು.

"ಹುಡುಗೂರ್ನ ಕರಕೊಂಡ ಬರಬ್ಯಾಡಾ, ಮನ್ಯಾಗ ಬಿಟ್ಟುಬಾ ಅಂತ ಎಷ್ಟು ಸಾರೇ ಹೇಳೇನಿ. ತಡಾಮಾಡಿ ಬರೂದು ಅಲ್ಲದ ಎರಡೂ ಮಕ್ಕಳ್ನ ಕಟಿಗೊಂಡು ಬಂದು ನಮ್ಮ ಮನೀ ಕೆಲಸಾ ಹ್ಯಾಂಗ ಮಾಡ್ತೀಯವ್ವಾ? ರೊಂಯ್ ಅಂತ ಸಣ್ಣದು ಒಂದs ಸಮನs ಅತ್ತs ಅಳ್ತದ, ನನ್ನ ತಲೀ ಚಿಟ್ಟು ಹಿಡೀತು. ಅದನ್ನ ಅವಚಿಕೊಂಡ ಭಾಂಡೀ ತಿಕ್ಕಿಡು. ಇನ್ನ ನೀ ಕಸಾ ಉಡಗೂದರಾಗ ನಿನ್ನ ಮಗಳು ವರಾಂಡಾದಾಗ ಹೊಲಸು ಮಾಡಿದ್ದು ನೋಡಿಲ್ಲೆ."

'ಅವ್ವಾರs ಸಣ್ಣಾಕಿಗೆ ಜರಾ ಬಂದಾವ್ರೀ, ರಾತ್ರೆಲ್ಲಾ ಆs ಅನ್ನೂ ಬಾಯಿ ಮುಚ್ಚೇ ಇಲ್ಲಾ ಈಗ ಮೈ ಬೆಂಕಿ ಆಗೇದ. ಅದನ್ನ ಯಾರ ಹತ್ತರ ಬಿಟ್ಟು ಬರ್ಲಿ ? ಹಿರ್‍ಯಾ ಅಡ್ನೇಕ ಕಟಿಗಿ ಕಡ್ಯಾಕ ಹ್ವಾದಾ. ನಾ ಕೀಲಿ ಹಾಕ್ಕೊಂಡ ಇತ್ಲಾಗ ಬಂದೆ."

"ದಿನಾs ಇದನ್ನs ಕೇಳಿ ನನಗಂತೂ ಸಾಕಾಗಿಹೋತು ನೋಡವ್ವಾ"

"ಇನ್ನಷ್ಟ ದಿನ ತಡಕೋಳ್ರೆವ್ವಾ, ಮನ್ಯಾಗ ಯಾರರೆ ಇದ್ರ ಬಿಟ್ಟ ಬರತಿದ್ದೆ. ನಾನೂ ನಿರ್ವಾ ಇಲ್ಲದ ಕರಕೊಂಡ ಬರತೇನಿ. ತುಸಾ ದೊಡ್ಡವರಾದರಂದರ ಬಿಟ್ಟ ಬರತೇನಿ."

"ಅವರು ದೊಡ್ಡವರಾಗೂತನಕಾ ನಾ ತಡಕೋಬೇಕ? ಅಯ್ಯಯ್ಯಪಾ ನನ್ನ ಕಡೀಂದಂತೂ ಆಗೂದಿಲ್ಲವಾ. ನಮ್ಮ ಕಡೇಂದ ಕೆಲಸಾ ನಿಗೂದಿಲ್ಲ ಅಂತ ನಿಮ್ಮನ್ನ ಹಚ್ಚತೇವಿ. ನಿನ್ನ ಮಕ್ಕಳು ಕಾಳ ಹಸನ ಮಾಡಗೊಡುದಿಲ್ಲಾ, ನೆಲಾ ಒರಸಗೊಡುದಿಲ್ಲಾ. ಅವನ್ನ ಅಳಸಿಕೋತ ನೀ ಮಾಡೂದು ನಮಗೆ ಸೇರೂದಿಲ್ಲಾ. ನಾ ಬ್ಯಾರೇ ಕೆಲಸದಾಕಿನ್ನ ನೋಡೇತೇನಿ ಇನ್ನ."

"ಹಾಂಗ ಮಾಡಬ್ಯಾಡರಿ ಅವ್ವಾರ, ಬಡವೀ ಹೊಟ್ಟಿ ಮ್ಯಾಲೆ ಹೊಡೀಬ್ಯಾಡರಿ. ನೀವು ಹೇಳಿದ್ದೆಲ್ಲಾ ಮಾಡತೇನ್ರಿ, ಸ್ವಲ್ಪ ಸಂಬಾಳಿಸಿಕೊಳ್ರಿ."

"ಎಷ್ಟಂತ ಸಂಬಾಳಿಸಿಕೊಳ್ಳೂದವ್ವಾ? ಮೊನ್ನೆ ನಿನ್ನ ದೊಡ್ಡ ಮಗಳು ಒಳಗ ಬಂದು ಫ್ಲಾವರ ಪಾಟ್ ಜಗ್ಗಿ ನೀರೆಲ್ಲಾ ಮ್ಯಾಟಿನ ಮ್ಯಾಲೆ ಚೆಲ್ಲಿ ಬಿಟ್ಟಳು. ಯಾರರೆ ಮಂದಿ ಬಂದರ ಎಷ್ಟ ಅಸಯ್ಯ ಆಗ್ತದ ನೋಡು ನಮಗ. ಮೊದಲ ಅದನ್ನ ಬಳಿ, ನೀರ ಹಾಕಿ ವರಾಂಡಾ ತೊಳಿ."

"ತೊಳಿತೀನ್ರಿ ಅವ್ವಾರ, ಸಿಟ್ಟಿಗೇಳಬ್ಯಾಡ್ರಿ" ಎಂದು ಹೇಳಿದ ನಿಂಗವ್ವ "ಮಣ್ಣಾಗಿಡ್ಲಿ ಇವನ್ನ, ಯಾರಿಗೆ ಬೇಕಾಗ್ಯಾವ ಈ ಮಕ್ಕಳು" ಎಂದು ಗೊಣಗುಟ್ಟಿದ್ದೂ ನನ್ನ ಕಿವಿಗೆ ಬಿತ್ತು.

"ಇನ್ನ ಮ್ಯಾಲೆ ಮಕ್ಕಳನ್ನ ಬಿಟ್ಟ ಬರದಿದ್ರ ನಾ ಬ್ಯಾರೆ ಕೆಲಸದಾಕಿನ ನೋಡಿಕೋತೀನಿ." ಗೀತಾ ಅಡಿಗೆಮನೆಯಿಂದಲೇ ಕೂಗಿದಳು. ಅವಳು ಆಡಿದಂತೆ ಮಾಡಿಯೇ ಬಿಡುವ ಸ್ವಭಾವದವಳು. ಇನ್ನು ನಿಂಗವ್ವನ ಅನ್ನಕ್ಕೆ ಕಲ್ಲುಬಿತ್ತು ಎಂದುಕೊಂಡೆ. ಗೀತಾಳನ್ನ ಸಮಾಧಾನಪಡಿಸಿ ನಿಂಗವ್ವನನ್ನು ಬಿಡಿಸಬೇಡ ಎಂದು ಎರಡು ಮಾತು ಹೇಳಬೇಕೆಂದು ಮನಸ್ಸೇನೋ ಚಡಪಡಿಸಿತ್ತು. ಆದರೆ ಮನೆ ವ್ಯವಹಾರ ಅವಳ ಜವಾಬ್ದಾರಿ. ಅದು

ಅವಳದೇ ರಾಜ್ಯ. ಅಲ್ಲಿ ತಾನು ಇಚ್ಛಿಸಿದಂತೆಯೇ ಎಲ್ಲವೂ ನಡೆಯಬೇಕು ಎನ್ನುವ ಮನೋಭಾವ ಅವಳದು, ಮಾತನಾಡಿ ಉಪಯೋಗವಿಲ್ಲವೆಂದು ಯೋಚಿಸಿ ಸುಮ್ಮನಾಗಿಬಿಟ್ಟೆ. ಆದರೆ ಆ ಮಾತು ಮಾತ್ರ ನನ್ನ ತಲೆಯನ್ನು ಬಿಟ್ಟು ತೊಲಗಲಿಲ್ಲ. ಮನಸ್ಸಿನ ಒಂದು ಮೂಲೆಯಲ್ಲಿ ಪ್ರತಿಧ್ವನಿಸುತ್ತಿತ್ತು. ಇನ್ನು ಬರವಣಿಗೆ ಮುಂದೆ ಸಾಗದೆಂದು ಅಲ್ಲಿಗೇ ಬಿಟ್ಟು ಸ್ನಾನಕ್ಕೆ ಹೋದೆ.

ಬಚ್ಚಲು ಮನೆಯ ಕಿಟಕಿಯಿಂದ ನೋಡಿದೆ. ಒಂದು ಎಲೆಯ ಮೇಲೆ ಪಾತ್ರೆಯಲ್ಲಿದ್ದ ಅನ್ನ ಪಲ್ಯ ಹಾಕಿ ಮಕ್ಕಳ ಮುಂದೆ ಇಟ್ಟು ನಿಂಗವ್ವ ಕಸ ಚೆಲ್ಲಲು ಹೋಗಿದ್ದಳು. ಸಣ್ಣ ಹುಡುಗಿ ತನಗೇ ಬೇಕೆಂದು ಎಲೆಯನ್ನೇ ಜಗ್ಗಿದಾಗ ತುತ್ತು ಅನ್ನವೂ ಮಣ್ಣಿನಲ್ಲಿ ಬಿತ್ತು. ಅದನ್ನೇ ಅಗುಳು ಅಗುಳು ಆರಿಸಿ ತೆಗೆದು ಎರಡೂ ತಿನ್ನುತ್ತಿದ್ದವು. ಕಸ ಚೆಲ್ಲಿ ಬಂದ ನಿಂಗವ್ವ ಆ ಜಾಗವನ್ನೆಲ್ಲ ಸ್ವಚ್ಛ ಮಾಡಿ ಚಿಕ್ಕದನ್ನು ಬಗಲಲ್ಲಿಟ್ಟು ದೊಡ್ಡ ಹುಡುಗಿಯ ಕೈ ಎಳೆಯುತ್ತ ಹೊರಟಾಗ ಹರಿದ ಸೀರೆಯ ಸೆರಗಿನಿಂದ ಕಣ್ಣು ಒತ್ತಿಕೊಳ್ಳುತ್ತಿದ್ದಳು.

ಗೀತಾ ಎಷ್ಟೇ ಒತ್ತಾಯ ಮಾಡಿದರೂ ನನಗೆ ಊಟ ಸೇರಲಿಲ್ಲ. ಉಣ್ಣಲು ತುತ್ತು ಎತ್ತಿದಾಗಲೆಲ್ಲ ಮಣ್ಣಿನಲ್ಲಿ ಅಗುಳು ಆರಿಸುತ್ತಿದ್ದ ನಿಂಗವ್ವನ ಮಕ್ಕಳ ನೆನಪು ಮನದಲ್ಲಿ ಮೂಡಿ ತುತ್ತು ಕಹಿಯಾಗುತ್ತಿತ್ತು. ನಿಂಗವ್ವನಿಗೆ ಸಿಗುವ ಹನ್ನೆರಡು ರೂಪಾಯಿಯ ಕೆಲಸವೂ ಕಳೆದು ಹೋದರೆ ಅವಳ ಪರಿಸ್ಥಿತಿ ಎಷ್ಟು ಶೋಚನೀಯವಾದೀತೆನ್ನುವ ಪ್ರಶ್ನೆ ನನ್ನ ಅನ್ನನಾಳವನ್ನು ಕೊರೆಯುತ್ತಿದ್ದುದರಿಂದ ಅರ್ಧಕ್ಕೇ ಊಟ ಬಿಟ್ಟು ಕೈ ತೊಳೆದುಕೊಂಡೆ. ಈಗ ಗೀತಾಗೆ ತಡೆಯಲಿಲ್ಲ.

"ಊಟಾ ಯಾಕ ಮಾಡಲಿಲ್ಲಾ? ಆರಾಮ ಇಲ್ಲೇನು?" ಪ್ರೀತಿ ಬೆರೆತ ಅಧಿಕಾರ ವಾಣಿಯಿಂದ ಕೇಳಿದಳು.

"ನನ್ನ ಮನಸ್ಸಿಗೆ ಆರಾಮ ಇಲ್ಲ ಗೀತಾ, ಮುಂಜಾನೆ ನಿನಗ ನಿಂಗವ್ವಗ ಆದ ಮಾತು ನನ್ನ ತಲೀನs ಕೆಡಿಸೇದ."

"ಯಾಕ, ಅಂಥಾದ್ದೇನಿ ಮಾತಾಡಿದೆ ನಾನು?"

"ಪಾಪ ಆಕಿ ಹುಡುಗೂರ್ನ ಎಲ್ಲಿ ಬಿಟ್ಟಬರಬೇಕು? ನೀನs ಸ್ವಲ್ಪ ಸಂಬಾಳಿಸಿಕೋಬೇಕಾಗಿತ್ತು."

"ಹಂ ಅದಕ್ಕೇನು ನಿಮಗೆ ಸಿಟ್ಟು ಬಂದದ್ದು? ಅಕೀ ಮಕ್ಕಳು ಕಾಳು ಹಸನು ಮಾಡಗೊಡೂದಿಲ್ಲಾ, ನೆಲಾ ಒರೆಸಗೊಡೂದಿಲ್ಲಾ, ಅದನ್ನೆಲ್ಲಾ ಯಾರ ಮಾಡಬೇಕು?"

"ಸಮಾಜಕ್ಕೆ ಹೋಗಿ ವೇಳೆ ಕಳೆಯೂ ಬದಲು ನೀನs ಮಾಡಿಕೋಬೇಕು. ಇಲ್ಲಾಂದರ ಆಕೀಗೆ ಸಹಾಯ ಮಾಡಬೇಕು."

"ಹಾಂ, ನಿಮಗ ಎಷ್ಟಂದರೂ ನನಕಿಂತಲೂ ಕೆಲಸದಾಕಿನ್ನ ಕಂಡರs ದಯಾಮಯಾ ಹೆಚ್ಚು. ಯಾವಾಗಲೂ ಮನೀಯೊಳಗs ಇದ್ದು ಕೆಲಸಾ ಮಾಡಿ ಬ್ಯಾಸರಾಗತದ ಅಂತ ಸಮಾಜಕ್ಕ ಹೋದರ ಅದೂ ನಿಮ್ಮ ಕಣ್ಣಾಗ ಒತ್ತತದ. ಮುಖ್ಯ ನನ್ನ ಹಣೇಬರಾ ಖೊಟ್ಟಿ ಅದ."

ಮಾನವೀಯತೆಯ ಅಭಾವವಿದ್ದರೂ ಗೀತಾಳಲ್ಲಿ ಕಣ್ಣೀರಿಗೇನೂ ಅಭಾವವಿರಲಿಲ್ಲ. ಧಾರಾಳವಾಗಿ ಸುರಿಸಹತ್ತಿದಳು. ಹೇಸಿಗೆಪಟ್ಟು ಅಲ್ಲಿಂದ ಎದ್ದು ಹೊರಗೆ ಬಂದುಬಿಟ್ಟೆ.

***

"ನಮ್ಮ ಭಾರತೀಯ ಸಂಸ್ಕೃತಿ ತುಂಬ ಪ್ರಾಚೀನವಾದದ್ದು ಮತ್ತು ಉಚ್ಚಮಟ್ಟದ್ದು. ರಾಮ, ಕೃಷ್ಣ, ಬುದ್ಧ, ವಿವೇಕಾನಂದರಂತಹ ಆದರ್ಶ ಪುರುಷರು ಇಲ್ಲಿ ಬಾಳಿ ಹೋದರು. ಆದರೆ ಈಗ ನಮ್ಮ ಯುವಜನಾಂಗದ

ಮನೋಭಾವ ತುಂಬ ಬದಲಾಗುತ್ತಿದೆ. ಅವರಲ್ಲಿ ಒಳ್ಳೆಯ ಗುರಿ, ಆದರ್ಶದ ಅಭಾವ ಎದ್ದು ತೋರುತ್ತಿದೆ. ವಿಲಾಸೀ ಜೀವನ, ಕೀಳು ವಿಚಾರಗಳತ್ತ ಅವರ ಮನಸ್ಸು ಒಲಿದಿದೆ. ಇದರಿಂದ ನೈತಿಕ ಅಧಃಪತನವಾಗಿದೆ. ಸಚ್ಚಾರಿತ್ರ್ಯ, ಶೀಲ, ವಿನಯ, ಶ್ರದ್ಧೆ ಹೇಳಹೆಸರಿಲ್ಲದಂತಾಗಿವೆ. ದೇಶದ ಪರಿಸ್ಥಿತಿಯೇ ಅಲ್ಲೋಲ ಕಲ್ಲೋಲವಾಗಿದೆ. ದೇಶವು ಭ್ರಷ್ಟಾಚಾರಿಗಳಿಂದ, ಕಾಳಕಂತೆಕೋರರಿಂದ ದೇಶದ್ರೋಹಿಗಳಿಂದ ತುಂಬಿಹೋಗಿದೆ. ಈ ಯುವಜನಾಂಗವು ಈ ರೀತಿ ದಾರಿ ತಪ್ಪಲು ಹೆಚ್ಚಿನ ಮಟ್ಟಿಗೆ ಅವರ ಹಿರಿಯರು ಅಥವಾ ತಂದೆ ತಾಯಿಗಳು ಕಾರಣರೆಂದು ನನ್ನ ಭಾವನೆ. ಅದರಲ್ಲೂ ಮಕ್ಕಳಿಗೆ ಮೊದಲು ಮಾರ್ಗದರ್ಶನ ಮಾಡುವವಳು ತಾಯಿ. ಅವಳು ತುಂಬ ಎಚ್ಚರದಿಂದ, ಪ್ರೀತಿಯಿಂದ ಅವರಲ್ಲಿ ಒಳ್ಳೆಯ ಗುಣಗಳು ಬೆಳೆಯುವಂತೆ ಮಾಡಬೇಕು. ಚಿಕ್ಕತನದಲ್ಲಿಯ ಅವರಿಗೆ ಆದರ್ಶದ ಪಾಠಗಳನ್ನು ಕಲಿಸಿಕೊಟ್ಟು ಜೀವನಕ್ಕೆ ಒಳ್ಳೆಯ ಗುರಿ ಇಟ್ಟುಕೊಳ್ಳುವಂತೆ ಅವರನ್ನು ಬೆಳೆಸಬೇಕು. 'ಮೂರು ವರುಷದ ಬುದ್ಧಿ ನೂರು ವರುಷದವರೆಗೆ' ಎನ್ನುತ್ತಾರಲ್ಲ. ಅದು ಸಂಪೂರ್ಣ ಸತ್ಯ. ಚಿಕ್ಕತನದಲ್ಲಿ ತಾಯಂದಿರು ಮಕ್ಕಳ ಬಗ್ಗೆ ತುಂಬ ಕಾಳಜಿ ವಹಿಸಬೇಕು. ಇಂದಿನ ಸುಶಿಕ್ಷಿತ ತಾಯಂದಿರಂತೂ ಈ ಕೆಲಸಕ್ಕೆ ಒಳ್ಳೇ ಸಮರ್ಥರಿದ್ದಾರೆಂದೇ ನನ್ನ ಭಾವನೆ. ಅವರು ದೇಶದ ಪ್ರಗತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಮಕ್ಕಳನ್ನು ಒಳ್ಳೆಯ ಪರಿಸರದಲ್ಲಿ ಬೆಳೆಸಬೇಕು. ಅವರ ಅಭಿರುಚಿ, ಯೋಗ್ಯತೆ, ಬುದ್ಧಿಮಟ್ಟವನ್ನು ತಿಳಿದು, ವಿಚಾರ ಮಾಡಿ ಒಳ್ಳೆಯ ಶಿಕ್ಷಣ ಕೊಡಿಸಬೇಕು. ಅಂದರೆ ಮುಂದಿನ ಜನಾಂಗದವರು ನಮ್ಮ ದೇಶದ ಅತ್ಯುತ್ತಮ ನಾಗರೀಕರಾಗಿ ದೇಶವನ್ನು ಜಗತ್ತಿನ ಒಂದು ಮಹಾನ್ ರಾಷ್ಟ್ರವನ್ನಾಗಿ ಮಾಡುತ್ತಾರೆ ಎನ್ನುವುದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ನಮ್ಮ ದೇಶದಲ್ಲಿ ರಾಮರಾಜ್ಯ ಬರುವ ದಿನಗಳೂ ದೂರವಿಲ್ಲ."

ಬರಲಿರುವ ರಾಮರಾಜ್ಯದ ಚಿತ್ರವನ್ನು ವರ್ಣಿಸಿ ಭಾಷಣಕಾರರು ಜನರಿಂದ ಕಿವಿಗಡಚಿಕ್ಕುವಂತೆ ಚಪ್ಪಾಳೆ ಗಿಟ್ಟಿಸಿದರು. ಅದರಿಂದ ಹುರುಪುಗೊಂಡು ಆವೇಶಪೂರಿತರಾಗಿ ತಮ್ಮ ಭಾಷಣ ಮುಂದುವರಿಸಿದರು. ಆದರೆ ನನ್ನ ಕಣ್ಣ ಮೇಲೆ ಬೇರೆ ಚಿತ್ರವೇ ಮೂಡತೊಡಗಿತ್ತು.

ಮನೆ ಬಿಟ್ಟು ಹೊರಟ ನಾನು ಪೇಟೆಯಲ್ಲಿ ಬಸ್ಸನ್ನಿಳಿದಾಗ ನನ್ನ ಸಹೋದ್ಯೋಗಿಯೊಬ್ಬ ಭೆಟ್ಟಿಯಾಗಿದ್ದ. ಹೆಂಡತಿಯೊಡನೆ ಸಿನಿಮಾ ಮತ್ತ ಮಾರ್ಕೆಟಿಂಗಿಗೆ ಬಂದಿದ್ದ. ಅದೂ ಇದೂ ಮಾತಾಡಿದ ಮೇಲೆ ಕೆಲಸದವಳ ಬಗ್ಗೆ ವಿಚಾರಿಸಿದ. ಯಾಕೆಂದರೆ ಅವನ ಮನೆಕೆಲಸದವಳು ಹನ್ನೆರಡು ರೂಪಾಯಿ ಸಾಲುವುದಿಲ್ಲ, ಹೊಟ್ಟೆ ತುಂಬುವುದಿಲ್ಲ, ಕಾಳು ಕಡಿ ತುಟ್ಟಿಯಾಗಿದೆ. ಹದಿನೈದು ರೂಪಾಯಿ ಕೊಡಿರಿ ಎಂದಳಂತೆ. ಅದಕ್ಕೆ ಬಿಡಿಸಿಬಿಟ್ಟನಂತೆ, 'ನಾವೇ ಸಂಬಳ ಸಾಲದೆ ಒದ್ದಾಡುತ್ತೇವೆ. ಅವಳಿಗೆ ಮೂರು ರೂಪಾಯಿ ಹೆಚ್ಚಿಗೆ ಎಲ್ಲಿಂದ ಕೊಡಬೇಕು? ಅದಕ್ಕೇ ಬೇರೆಯವಳನ್ನು ಹುಡುಕಾಡಬೇಕಾಗಿದೆ' ಎಂದು ಪೇಚಾಡಿಕೊಂಡ. ಅವನ ಹೆಂಡತಿ ಉಟ್ಟ ಸೀರೆಯೇ ಇನ್ನೂರು ರೂಪಾಯಿ ಬೆಲೆ ಬಾಳುತ್ತಿತ್ತು. ಅವನಂತೂ ಸಂಬಳವಲ್ಲದೆ ಗಿಂಬಳದಿಂದ ದಿನವೂ ಮದ್ಯ, ಸಿಗರೇಟು ಎಂದು ಸಾಕಷ್ಟು ಖರ್ಚು ಮಾಡುತ್ತಿದ್ದ, ಇಲ್ಲಿಯೂ ಮಾನವೀಯತೆಯ ಅಭಾವವಿದ್ದರೂ ಹಣಕ್ಕೇನೂ ಕೊರತೆ ಇರಲಿಲ್ಲ. ಇಂಥ ಮಾನವ ರೂಪದ ಪಶುವಿನೊಡನೆ ಮುಂದೆ ಮಾತು ಬೆಳೆಸಲು ಸಾಧ್ಯವಾಗದೆ ಬೇಗ ನಮಸ್ಕಾರ ಹೇಳಿ ಅವರಿಂದ ತಪ್ಪಿಸಿಕೊಂಡು ಇಲ್ಲಿಗೆ ಬಂದು ಭಾಷಣ ಕೇಳಲು ಕುಳಿತಿದ್ದೆ. ಎಷ್ಟೋ ಸಾವಿರ ವರುಷಗಳ ಹಿಂದಿನ ರಾಮರಾಜ್ಯ ಹೇಗಿತ್ತೋ ಯಾರು ಬಲ್ಲರು? ಈಗ ಸದ್ಯ ರಾಮರಾಜ್ಯ ಬೇಡ ಮಾನವ ರಾಜ್ಯ ಬಂದರೆ ಸಾಕು- ಎನಿಸಿತ್ತು. ನನ್ನ ಚಿತ್ತಲೋಕದಿಂದ ಎಚ್ಚತ್ತು ಸುತ್ತಮುತ್ತ ನೋಡಿದೆ. ಮಗ್ಗುಲಲ್ಲಿ ಕುಳಿತ ಅಪರಿಚಿತರಿಬ್ಬರು ಮಾತನಾಡಿಕೊಳ್ಳುತ್ತಿದ್ದರು.

'ಎಷ್ಟು ಛಂದ ಮಾತಾಡತಾರ. ಜನರು ಎಲ್ಲಾ ಹ್ಯಾಂಗ ಕೂತಾರ ನೋಡು ಮೋಡಿ ಹಾಕಿದವರಾಂಗ."

"ಮಾತು ಅಷ್ಟs ಏನು, ಆಳು ಭಾಳ ಅರ್ಭಾಟ ಅದಾರಪಾ, ಆ ಮುಖದ ಮ್ಯಾಲಿನ ತೇಜಸ್ಸು ದೊಡ್ಡ ಹಣೀ, ಚೂಪು ಮೂಗು, ಟೊಮ್ಯಾಟೊದಂಥ ಮೈಬಣ್ಣ, ಆರಡಿ ಎತ್ತರಾ ಕಣ್ಣು ತುಂಬುವಂಥಾ ಮನುಷ್ಯಾ."

"ಇವರ ಭಾಷಣಕ್ಕ ಉತ್ತರ ಹಿಂದೂಸ್ತಾನದಾಗಲೆಲ್ಲಾ ಜನಾ ಲಕ್ಷಗಟ್ಟಲೆ ಕೂಡತಾರಂತಪಾ. ಅದಕs ಇವರ್‍ನ ನಾಗಪುರದಿಂದ ಇಲ್ಲಿಗೆ ಟಿ.ಎ. ಕೊಟ್ಟು ಕರಿಸ್ಯಾರ ನಮ್ಮ ಸಂಘದವರು. ಮಾತು ಆಡಿದರ ಹಿಂಗ ಆಡಬೇಕು ಅರಳುಹುರದಾಂಗ, ಚಟಾಪಟಾ ಅಂತ."

"ಅಂತೂ ಭಾಳ ದಿವಸಕ್ಕ ಒಂದ ಒಳ್ಳೇ ಭಾಷಣಾ ಕೇಳಿದಾಂಗ ಆತು. ರೊಕ್ಕ ಖರ್ಚಾದರೂ ಅಡ್ಡಿ ಇಲ್ಲಾ ಇಂಥಾ ಭಾಷಣಾ ಕೇಳಿದರ ಸ್ವಲ್ಪ ಬುದ್ಧಿ ಬೆಳೀತದ ಅಂತ ನನಗ ಅನಸ್ತದ."

"ನೋಡು ಎಷ್ಟು ಛಂದಾಗಿ ಹೇಳಿದರು. ಇಂದಿನ ಸುಶಿಕ್ಷಿತ ತಾಯಂದಿರು ಮಕ್ಕಳನ್ನ ಕಾಳಜಿಯಿಂದ ಬೆಳೆಸಿದರೆ ದೇಶದ ಸಮಸ್ಯಾ ಬಿಟ್ಟು ಹೋಗ್ತದ ಅಂತ ಹೇಳಿ ಎಷ್ಟು ಸ್ಪಷ್ಟಾಗಿ ಸರಳಾಗಿ ನಮ್ಮ ತಪ್ಪು ತಿಳಿಸಿಕೊಟ್ಟರು."

ಹತ್ತಿರ ಕುಳಿತ ಶ್ರೋತೃಗಳಂತೆ ತೃಪ್ತಿಪಡಲು ನನ್ನ ಮನಸ್ಸು ಒಪ್ಪಲಿಲ್ಲ. ನನ್ನನ್ನು ಆರಿಸಿಕೊಂಡಿದ್ದ ಪ್ರಶ್ನೆಯನ್ನು ಚೀಟಿಯಲ್ಲಿ ಬರೆದು ಭಾಷಣಕಾರರಿಗೆ ಕಳಿಸಿದೆ.

"ಮಧ್ಯಮ ವರ್ಗದ ಕುಟುಂಬದ ಮತ್ತು ಶ್ರೀಮಂತ ವರ್ಗದ ಸುಶಿಕ್ಷಿತ ತಾಯಂದಿರು ಮಕ್ಕಳ ಬಗ್ಗೆ ಕಾಳಜಿ ವಹಿಸಿದರೆ, ನಮ್ಮ ದೇಶದ ಸಮಸ್ಯೆ ಬಗೆಹರಿಯುತ್ತದೆ ಎಂದು ಹೇಳಿದಿರಿ. ಆದರೆ ನಮ್ಮ ದೇಶದ ಲಕ್ಷಾಂತರ ಹಳ್ಳಿಗಳ ಅಶಿಕ್ಷಿತ ಮಕ್ಕಳು ಮತ್ತು ಶ್ರಮಜೀವಿಗಳ ಮಕ್ಕಳು ನಮ್ಮ ದೇಶದ ನಿಜವಾದ ಸಮಸ್ಯೆಯಾಗಿದ್ದಾರೆ ಎಂದು ನನ್ನ ಭಾವನೆ, ಅವರಿಗೆ ಮಾರ್ಗದರ್ಶನ ಯಾರು ಮಾಡಬೇಕು?" ಎಂದಿತ್ತು ನನ್ನ ಚೀಟಿಯಲ್ಲಿ.

ಭಾಷಣಕಾರರು ಚೀಟಿಯನ್ನೋದಿ ಹುಬ್ಬುಗಂಟಿಕ್ಕಿದರು. ಕೊನೆಗೆ "ನಮ್ಮ ದೇಶದಲ್ಲಿರುವ ಶ್ರೀಮಂತರು ಬಡವರು ಎನ್ನುವ ಭೇದಭಾವ ಹೋಗಬೇಕು. ಅಂದರೆ ವರ್ಗರಹಿತ ಸಮಾಜವನ್ನು ಕಟ್ಟಬೇಕು. ಎಲ್ಲರಿಗೂ ಸಮಾನ ಅವಕಾಶಗಳು ಸಿಗಬೇಕು. ಆಗ ಈ ಸಮಸೆ ಬಗೆಹರಿಯುತ್ತದೆ. ಅಂಥ ಸಮಾಜ ಕಟ್ಟಲಿಕ್ಕೆ ನಾವೂ, ನೀವು ಸರಕಾರ ಎಲ್ಲರೂ ಕೂಡಿ ಶ್ರಮಿಸಬೇಕು" ಎಂದರು.

ಮತ್ತೊಮ್ಮೆ ಚಪ್ಪಾಳೆಯ ಕಡಕಡಾಟದಲ್ಲಿ ಸಭೆ ಮುಳುಗಿತು. ಅವರ ಉತ್ತರದ ತಲೆಬುರುಡೆ ತಿಳಿಯದೆ ಬೆಪ್ಪನಂತೆ ನಾನು ಎದ್ದು ಹೊರಗೆ ಬಂದೆ.

ನನ್ನ ಗಡಿಯಾರದ ಮುಳ್ಳು ಎಂಟು ಗಂಟೆಗೆ ಐದು ನಿಮಿಷ ತೋರಿಸುತ್ತಿತ್ತು. ನಮ್ಮ ಮನೆಯ ಕಡೆಗೆ ಹೋಗುವ ಬಸ್ಸು ಇನ್ನು ಐದು ನಿಮಿಷಕ್ಕೆ ಬಿಡುತ್ತಿತ್ತು. ಓಡುತ್ತಲೇ ಬಸ್‌ಸ್ಟ್ಯಾಂಡ್ ತಲುಪಿದೆ. ಬಸ್ಸು ತಯಾರಾಗಿ ನಿಂತಿತ್ತು. ಒಂದು ಬಾಗಿಲಿನಿಂದ ನಾಲ್ಕಾರು ಜನರು ಒಮ್ಮೆಲೇ ನುಗ್ಗಲು ಪ್ರಯತ್ನಿಸುತ್ತ ಒಬ್ಬರನ್ನೊಬ್ಬರು ಕೆಳಗೆ ಜಗ್ಗುತ್ತಿದ್ದರು. ಡ್ರೈವರ್ ಬಸ್ ಸ್ಟಾರ್ಟ್ ಮಾಡಿದ್ದರಿಂದ ನಾನು ಮುಂದಿನ ಬಾಗಿಲಿನತ್ತ ಓಡಿ ಸ್ಟೆಪ್ ಮೇಲೆ ಹತ್ತಿ ನಿಂತೆ. ನನ್ನ ಮುಂದಿನ ಹೆಣ್ಣುಮಗಳು ಕೈಯಲ್ಲೊಂದು ಪ್ಲಾಸ್ಟಿಕ ಬುಟ್ಟಿ ಹಿಡಿದು ನಿಂತಿದ್ದವಳು ಒಮ್ಮೆಲೇ ಕಳ್ಳಾ ಕಳ್ಳಾ ಎಂದು ಚೀರಿದಳು. ನಾನು ಬೆಚ್ಚಿ ಬಿದ್ದೆ. "ಪರ್ಸ್, ನನ್ನ ಪರ್ಸ ಒಯ್ದ" ಎನ್ನುತ್ತ ಹೊರಗೆ ಕೈ ಮಾಡಿದಳು. ಎಂಟು ಹತ್ತು ವರ್ಷದ ಹುಡುಗನೊಬ್ಬ ನಮ್ಮಿಬ್ಬರ ನಡುವಿನಿಂದ ಹಾಯ್ದು ಪರ್ಸಿನೊಡನೆ ಪರಾರಿಯಾಗಿದ್ದ. ಬಸ್ ಹತ್ತುವ ಗಡಿಬಿಡಿಯಲ್ಲಿದ್ದ ನನಗೆ ಅವನತ್ತ ಲಕ್ಷ್ಯವಿರಲಿಲ್ಲ. ಕೆಳಗೆ ನಿಂತವರೊಂದಿಬ್ಬರು ಹುಡುಗನತ್ತ ಓಡಿ ಅವನನ್ನು ಹಿಡಿದು ಎಳೆದು ತಂದರು. ಅವನ ಕೈಯಲ್ಲಿಯ ಪರ್ಸ್ ಕಸಿದು ಬಸ್ಸಿನಲ್ಲಿ ನಿಂತಿದ್ದ ಹೆಣ್ಣುಮಗಳ ಕೈಗೆ ಕೊಟ್ಟೆ. ಬಸ್ ಬಿಟ್ಟಿತು. ಹುಡುಗನನ್ನು ಹಿಡಿದಿದ್ದ ನಾನು ಕೆಳಗೇ ಉಳಿದುಬಿಟ್ಟೆ. ಹುಡುಗ ನನ್ನ ಕೈ ಕೊಸರಿಕೊಂಡು ಓಡಿಹೋಗಲು ಪ್ರಯತ್ನ ಪಡುತ್ತಿದ್ದ. ಆದರೆ ಅವನನ್ನು ಏನು ಮಾಡಬೇಕೆನ್ನುವುದೇ ನನಗೆ ಮೊದಲು ತಿಳಿಯಲಿಲ್ಲ. ಪರ್ಸ ಕಳೆದುಕೊಂಡವಳು ತಿರುಗಿ ಸಿಕ್ಕೊಡನೆ ನಿಶ್ಚಿಂತಳಾಗಿ ಹೊರಟು ಹೋಗಿದ್ದಳು. ಈಗ ನಾನೇನು ಮಾಡಲಿ? ವಿಚಾರಿಸಿದೆ.

"ನಿನ್ನ ಹಿಂಗ ಬಿಡೂದಿಲ್ಲ. ಪೋಲೀಸರ ಕೈಯಾಗ ಕೊಡ್ತೀನಿ."

"ಯಪ್ಪಾ ಬ್ಯಾಡ್ರಿಯಪ್ಪಾ, ಪೋಲೀಸರ ಹಂತ್ಯಾಕ ಒಯ್ಯಬ್ಯಾಡರಿ ನನ್ನ." ಹುಡುಗನನ್ನು ದಿಟ್ಟಿಸಿದೆ. ಬಡಕಲು ದೇಹ, ಹುಳುಕು ಹಲ್ಲು, ಮೈತುಂಬ ಅರಿವೆಯಿರಲಿಲ್ಲ. ಕೂದಲಂತೂ ಎಣ್ಣೆಯನ್ನೇ ಕಂಡಿರಲಿಲ್ಲ.

"ಕಳ್ಳತನಾs ಮಾಡ್ತಿಯೇನೋ, ಚೋಟುದ್ದ ಅದೀ ನೀನು. ಇಷ್ಟಿರ್ತ ಕಲೀತಿಯಾ ?" ಮುಖ ಕೆಳಗೆ ಹಾಕಿ ಸುಮ್ಮನೆ ನಿಂತ. ಜೋರಾಗಿ ಬೆದರಿಸಿದೆ.

"ನಿಮ್ಮವ್ವ ಇದನ್ನ ಕಲಿಸ್ಯಾಳೇನು ನಿನಗ ? ನಿನ್ನ ಜೋಡಿ ಹುಡುಗರು ಸಾಲಿಗೆ ಹೋಗ್ತಾರ ಗೊತ್ತೈತಿಲ್ಲೊ, ನಾಚಿಕಿ ಬರೂದಿಲ್ಲೇನು ನಿನಗ ?"

" ನಾ ಸಾಲಿಗೆ ಹೊಕ್ಕೇನಿ ಅಂದಿನ್ರಿ. ಅವ್ವ ಬ್ಯಾಡ ಅಂತಾಳ"

"ನಿಮ್ಮಪ್ಪ ಏನಂತಾನ ?"

"ಅಂವಾ ಇಲ್ರಿ. ದಿನಾ ಕುಡಿದು ಬಂದು ಜಗಳಾಡತಿದ್ದನ್ರಿ. ಅವ್ವನ್ನ ಬಡೀತಿದ್ದಾ. ಈಗ ಭಾಳ ದಿನಾ ಆತ್ರಿ. ಬಂದೇ ಇಲ್ಲ. ಎಲ್ಲ್ಯೋ ಹೋಗಿ ಬಿಟ್ಟಾನ್ರಿ.

"ಮತ್ತ್ಯಾರ ಅದೀರಿ ಮನ್ಯಾಗ?"

"ನಾವು ನಾಕ ಮಂದಿ ಅದೀವ್ರಿ ಅವ್ವಗ."

ಚಿಕ್ಕಮಕ್ಕಳನ್ನು ಹೆಂಡತಿಯ ಕೊರಳಿಗೆ ಕಟ್ಟಿ ಪಲಾಯನ ಮಾಡಿದ್ದ ಗಂಡನೆನಿಸಿಕೊಂಡಿದ್ದ ಆ ಭೂಪ. "ನಿಮ್ಮವ್ವ ಏನ ಮಾಡ್ತಾಳ?"

"ಭಾಂಡೀ ತಿಕ್ಕಾಕ ಹೋಗ್ತಾಳ್ರಿ. ಮುಂಜಾನಿಂದ ಸಂಜೀತನಾ ಕೆಲಸಾ ಮಾಡ್ತಾಳ್ರಿ. ಆದರೂ ನಮ್ಮ ಹೊಟ್ಟೆ ತುಂಬೂದಿಲ್ರಿ. ಸಣ್ಣ ತಮ್ಮಾ ತಂಗಿ ಎಲ್ಲಾರ್ನೂ ನಾನs ನೋಡಿಕೋಬೇಕರಿ."

ನನ್ನ ಬಾಯಿ ಬಂದಾಗಿತ್ತು. ಕಿವಿ ಮಾತ್ರ ಕೇಳುತ್ತಿತ್ತು.

"ದಿನಾ ಮುಂಜಾನೆ ಅಂಬಲಿ, ರೊಟ್ಟಿ ಏನರೇ ಮಾಡಿ ನಮಗ ಕೊಟ್ಟು ನಮ್ಮನ್ನ ಕುಂದ್ರಿಸಿ ಮನೀಗೆ ಕೀಲಿ ಹಾಕ್ಕೊಂಡ ಹೊಕ್ಕಾಳ್ರಿ. ಮತ್ತ ಚಂಜೀಕ ಬಂದ ಅಡಿಗೀ ಮಾಡ್ತಾಳ್ರಿ. ಎಡ್ಡ ದಿನಾ ಆತು, ಯಾರಿಗೂ ಹೊಟ್ಟೆ ತುಂಬ ಊಟ ಇಲ್ರಿ. ತಂಗಿ ತಮ್ಮ ಅಳಾಕ ಹತ್ತಿದ್ರು ಹಸಿವಿ ಅಂತ. ಅದಕ್ಕs ಇತ್ಲಾಗ ಬಂದ್ನಿ. ಯಾರ್ಯಾರ್ನೊ ಬೇಡಿದಿನ್ರಿ. ಎಡ್ಡ ಪೈಸಾ ಸುದ್ದಾ ಯಾರೂ ಕೊಡಲಿಲ್ರೀ. ಆ ಬುಟ್ಯಾಗ ಪರಸ ಮೋಡಿದ್ನಿ. ತೊಗೊಂಡ ಓಡಿಹೋಗಬೇಕು, ಬಾಳಿ ಹಣ್ಣ ತೊಗೊಂಡ ಎಲ್ಲಾರೂ ಕೂಡಿ ತಿನಬೇಕಂತ ಯಿಚಾರಾ ಮಾಡಿ ತೊಂಗೊಂಡಿದ್ನಿರಿ. ಯಪ್ಪಾs ನಾ ಎಂದೂ ತುಡುಗ ಮಾಡಿಲ್ರಿ. ಹಸಿವೀ ತಡೀಲಾರದ ಮಾಡಿದೆ." ಹುಡುಗ ಹೊಲಸ ಅಂಗಿಯನ್ನೆತ್ತಿ ಸಿಂಬಳ ಕಣ್ಣೀರು ಕೂಡಿಯೇ ತಿಕ್ಕಿದ. ನನ್ನ ಹಿಡಿತ ಸಡಿಲವಾಗುತ್ತಿತ್ತು.

"ಅಲ್ಲ್ಯೋ, ಹಿಂಗ ಮಾಡಿದರ ರೊಕ್ಕ ಸಿಗತಾವಂತ ನಿನಗ ಯಾರ ಹೇಳಿದ್ರು?"

"ನಮ್ಮ ಬಾಜೂ ಮನೀ ನಬೀ ಹೇಳಿದನ್ರಿ. ಅಂವಾ ಹಿಂಗs ತುಡಗ ಮಾಡಿ ಸಿಕರೇಟ ಸೇದ್ತಾನ್ರಿ. ಸಿನಿಮಾ ನೋಡ್ತಾನ್ರಿ, ಅಂವನs ಹೇಳ್ತಿದ್ದಾ. ಯಪ್ಪಾs ನಿಮ್ಮ ಕಾಲಿಗಿ ಬೀಳ್ತೀನ್ರಿ. ಇದೊಂದು ಸಾರೆ ಬಿಟ್ಟುಬಿಡ್ರಿ. ತಂಗಿ ತಮ್ಮ ರಸ್ತೆದಾಗ ಅದಾರ, ಅವ್ವ ಬಂದಾಳೋ ಏನೋs ನಾ ಹೊಕ್ಕೇನ್ರಿ, ಬಿಟ್ಟಬಿಡ್ರಿ."

ಎಡಗೈಯಿಂದ ಎಂಟಾಣೆ ಚಿಲ್ಲರೆ ತೆಗೆದು ಅವನ ಕೈಯಲ್ಲಿಟ್ಟು "ತೊಗೋ ಬಾಳಿಹಣ್ಣು ಒಯ್ಯಿ, ತುಡುಗ ಮಾಡಬ್ಯಾಡಾಃ ಇನ್ನೊಮ್ಮೆ" ಎಂದು ಅವನ ಕೈಬಿಟ್ಟೆ.

'ಹುಂ" ಎಂದು ಗೋಣು ಹಾಕುತ್ತ ಹಿಂದಕ್ಕೆ ಹೊರಳಿ ನೋಡದೆ ಬಾಣ ಬಿಟ್ಟಂತೆ ನೇರವಾಗಿ ಓಡಿಬಿಟ್ಟ ಹುಡುಗ. ಓಡುತ್ತಿದ್ದಂತೆಯೇ ಮುಗ್ಗರಿಸಿ ದೊಪ್ಪನೆ ಕೆಳಗೆ ಬಿದ್ದ. ನನ್ನ-ನನ್ನಂತೆಯೇ ಎಷ್ಟೋ ಜೊತೆ ಕಣ್ಣುಗಳೂ ಇನ್ನೂ ನೋಡುತ್ತಿರುವಾಗಲೇ ಅತಿ ವೇಗವಾಗಿ ಬರುತ್ತಿದ್ದ ಕಾರು ಅವನ ಮೇಲೆ ಹಾಯ್ದು ಅಪ್ಪಚ್ಚಿ ಮಾಡಿತು. ನಾನು ಗರ ಬಡಿದವನಂತೆ ನಿಂತು ಬಿಟ್ಟಿದ್ದೆ. ಕಾರು ಮುಂದೆ ಹೋಗಿ ನಿಂತ ಮೇಲೆ ನೆಲದ ಮೇಲೆ ಬಿದ್ದಿದ್ದ ಹುಡುಗನತ್ತ ನೋಡಿದೆ. ನಿಶ್ಚಲನಾಗಿ, ನಿಶ್ಶಬ್ದನಾಗಿದ್ದ ಹುಡುಗ ಪ್ರಶ್ನಾರ್ಥಕ ಚಿಹ್ನೆಯಂತೆ ಮುದುಡಿ ಬಿದ್ದಿದ್ದ.

ಹತ್ತಿರವಿದ್ದ ಬೀಡಿ ಅಂಗಡಿಯವ ಗಿರಾಕಿಯ ಹತ್ತಿರ ಹೇಳುತ್ತಿದ್ದ. "ನೋಡ್ರಿ, ಎಷ್ಟ ಸೊಕ್ಕ ಆ ನರಸಿಂಗರಾವಗ. ಯಾವಾಗ್ಲೂ ಕುಡದ ಮಬ್ಬಿನ್ಯಾಗ ಕಾರು ಹೊಡೀತಾನ. ಆ ಹುಡುಗ ಒಂದಃ ಏಟಿಗೆ ಖತಂ ಆಗಿಹೋದಾ."

ಟೆರಿಲಿನ ಪ್ಯಾಂಟಿನ ಸುಶಿಕ್ಷಿತ ಯುವಕ ಸಿಗರೇಟಿಗೆ ಬೆಂಕಿ ಹಚ್ಚುತ್ತ,

"ಭಿಕಾರಿ ಹುಡುಗ ಅಂತ ಕಾಣ್ತದ. ಛೋಲೋ ಆತೇಳ. ಭೂಮಿಗೆ ಭಾರ ಕಡಿಮಿ ಆತು. ತಿನ್ನೂ ಒಂದ ಬಾಯಿ ಬಂದಾತು" ಎಂದು ಕಿಸಿಕಿಸಿ ನಕ್ಕ.

ಕೆಲಹೊತ್ತು ಪ್ರಶ್ನಾರ್ಥಕ ಚಿಹ್ನೆಯೇ ನನ್ನ ಕಣ್ಣಮುಂದೆ ಕುಣಿಯಿತು. ಬರಬರುತ್ತ ಸಣ್ಣ, ಪುಟ್ಟ. ಕರಿ, ಬಿಳಿ, ಬೋಳು ತಲೆಗಳ ಮಧ್ಯೆ ಮರೆಯಾಯಿತು. ನನ್ನ ಪ್ರಶ್ನೆಗೆ ಇದೇ ಉತ್ತರವೇ? ಇದೇ ಪರಿಹಾರವೇ? ಎಂದು ಯೋಚಿಸಿದಾಗ ತಲೆ ದಿಮ್ಮೆಂದಿತು.

***

■■

# ಅತ್ತಿಗೆ

ಹೊರಗೆ ಬೆಲ್ ಆಯಿತು. ಆಳು ನಿಂಗ ಓಡಿಹೋಗಿ ಬಾಗಿಲು ತೆರೆದ, ಬಂದವರೊಡನೆ ಮಾತನಾಡಿ ಮಾವನವರ ಕೋಣೆಗೆ ಹೋಗಿ ಅವರಿಗೆ ಹೇಳಿಬಂದ. ಅವರೂ ಕೈಯಲ್ಲಿದ್ದ ಪುಸ್ತಕದೊಡನೆಯೇ ಹೊರಗೆ ಬಂದರು- "ಓ ಬರ್ರಿ. ಯಾವಾಗ ಬಂದ್ರಿ?"

"ಮುಂಜಾನೆಯ ಬಸ್ಸಿಗೆ ಬಂದೆ."

ದನಿ ಕೇಳಿದಾಗ ನನಗಾದ ಆಶ್ಚರ್ಯ, ಆನಂದ ಅಷ್ಟಿಷ್ಟಲ್ಲ. ಹಿಗ್ಗಿನಿಂದ ಮನಸ್ಸು ಕುಣಿಯಿತು. ಕಾಲಿಲ್ಲದೆಯೇ ಭರತನಾಟ್ಯ ಮಾಡಿತು. ಅಪ್ಪ ಬಂದಿದ್ದಾರೆ ಊರಿನಿಂದ. ಓಡಿ ಹೋಗಿ ಮಾತನಾಡಿಸಲೇ ? ಅವ್ವ ಹೇಗಿದ್ದಾಳೋ? ಹಿಂದಿನ ಪತ್ರದಲ್ಲಿ ಅವಳಿಗೆ ಆರಾಮವಿಲ್ಲ ಎಂದು ಬರೆದಿದ್ದರು. ಅದಕ್ಕೆ ನಾನೇ ಇನ್ನೂ ಉತ್ತರ ಬರೆದಿಲ್ಲ. ಮನೆಯಲ್ಲಿ ಅಂತರ್ದೇಶಿಯ ಪತ್ರ ಇರಲಿಲ್ಲ. ಇವರಿಗೆ ಎರಡು ಸಲ ನೆನಪು ಮಾಡಿದೆ. ತಮ್ಮ ಕಾಲೇಜಿನ ಪಾಠಗಳಲ್ಲಿ ತರಲು ಮರತೇ ಬಂದರು. ಎರಡನೆಯ ಸಲ ಕೇಳಿದಾಗ ಸ್ವಲ್ಪ ಬೇಸರದ ಧ್ವನಿಯಲ್ಲಿ 'ಇದೊಂದೇ ಕೆಲಸವೇನು ನನಗೆ ನೆನಪಿಟ್ಟುಕೊಳ್ಳೋದಕ್ಕೆ?' ಎಂದರು. ನಾನೂ ಸುಮ್ಮನಾದೆ. ಹೊಸ ಮೊದಲಗಿತ್ತಿಯಾಗಿ ಗಂಡನ ಮನೆಗೆ ಬರುವಾಗ ಅವ್ವ ಹೇಳಿರಲಿಲ್ಲವೇ - 'ಮನೆಯ ಜನರೆಲ್ಲ ಹೊಸಬರು. ಆದರೂ ಅವರೆಲ್ಲ ನಿನ್ನವರು. ಅತ್ತೆ, ಮಾವ, ನಾದಿನಿ, ಮೈದುನ, ಗಂಡ ಎಲ್ಲರ ಮನಸ್ಸು ತಿಳಿದು ಮಾತಾಡಬೇಕು. ಕೆಲಸ ಮಾಡಬೇಕು. ಅವರು ಒಂದು ಮಾತು ಅಂದರೂ ನಿನ್ನ ಒಳ್ಳೇದಕ್ಕೆ ಅಂತ ತಿಳಿದುಕೊಂಡು ಸಮಾಧಾನವಾಗಿರಬೇಕು. ಹೆಣ್ಣಿಗೆ ತಾಳ್ಮೆ ಬೇಕು. ತಾಳಿದವರು ಬಾಳುತ್ತಾರೆ.' ಅಂತ. ನಾನು ಗಂಡನ ಮನೆಗೆ ಬಂದು ಆರು ತಿಂಗಳಾದ ಮೇಲೆ ಅಪ್ಪ ಮೊದಲ್ನೇ ಸಲ ಬಂದಿದ್ದಾರೆ. ಈ ಆರು ತಿಂಗಳಲ್ಲಿ ಹೇಗಿದ್ದಾರೋ ಏನೋ. ಮೊದಲೇ ಬಡಕಲು ಶರೀರ, ಮಾಸ್ತರಿಕೆ ಕೆಲಸದಲ್ಲಿ ಮೂರು ಹೆಣ್ಣು ಮಕ್ಕಳ ಮದುವೆ ಮಾಡಿದ್ದೇ ಆಶ್ಚರ್ಯ. ಆದರೂ ನನ್ನ ಮದುವೆಯಲ್ಲಿ ಕೊಡತಕ್ಕ ಸಾಮಾನು ಸರಿಯಾಗಿ ಕೊಡಲಿಲ್ಲವೆಂದು ಅತ್ತಿಗೆ, ನಾದಿನಿಗೆ ಅಸಮಾಧಾನ. ಆಗಾಗ ಕೊಂಕು ಮಾತಾಡಿಯೂ ತೋರಿಸ್ತಾರೆ. ನನ್ನ ಗಂಡ ಯಾವ ಮಾತೂ ಎತ್ತದೇ ಪ್ರೀತಿಯಿಂದ ಇರುವುದರಿಂದ ಉಳಿದವರ ಆಡಿಕೆಯನ್ನೇನೂ ನಾನು ಮನಸ್ಸಿನಲ್ಲಿಟ್ಟುಕೊಳ್ಳುವದೇ ಇಲ್ಲ. ಈಗ ಕೈಕೆಲಸ ಮಾಡುತ್ತಾ ಇದ್ದರೂ ನನ್ನ ಮನಸ್ಸು ಕುಣೀತಾ ಇದೆ. ಹೊರಗೆ ಹೋಗಿ ಅಪ್ಪನ್ನ ನೋಡಬೇಕು, ಮಾತಾಡಿಸ್ಬೇಕು ಅಂತ ಆದರೂ ಎದ್ದು ಹೋಗಲು ಕಾಲು ಬರುವುದಿಲ್ಲ. ಅತ್ತೆ ಮನೆಯ ಸೊಸೆ ನಾನು. ಅತ್ತೆ ಕರೆದ ಮೇಲೆ ಹೊರಗೆ ಹೋಗಬೇಕು ಎಂದು ಸುಮ್ಮನಿದ್ದೇನೆ. ಆದರೂ ಹೊರಗಿನ ಮಾತಿಗೆ ಕಿವಿ ಉದ್ದ ಮಾಡಿದೆ. ದನಿಯನ್ನಾದರೂ ಕೇಳಬೇಕೆಂದು.

"ಏನು, ವಿಶೇಷ ಕೆಲಸವಿತ್ತೇನು?" ಮಾವನವರ ದನಿ.

"ನಮ್ಮ ಸ್ಕೂಲ್ ಬೋರ್ಡಿನ ಚೇರಮನ್ನರನ್ನ ಭೆಟ್ಟಿಯಾಗಬೇಕಾಗಿತ್ತು. ಅದಕ್ಕೆ ಬಂದೆ. ಹಾಗೇ ನಿಮ್ಮನ್ನೂ ನೋಡಬೇಕಂತ ಬಂದೆ."

ನೋಡಲು ಬಂದದ್ದು ನನ್ನನ್ನೇ ಆದರೂ ಮರ್ಯಾದೆಗೆ "ನಿಮ್ಮನ್ನು" ಎಂದದ್ದು ಮನಸ್ಸಿಗೆ ಖುಷಿಯಾಯಿತು.

"ಚೇರಮನ್ನರು ಭೆಟ್ಟಿಯಾದರೇನ್ರಿ?"

"ಇಲ್ಲ, ಟೂರಿಗೆ ಹೋಗಿದ್ದಾರೆ. ಸಂಜೆಗೆ ಬರ್ತಾರೆ ಅಂತ ಹೇಳಿದರು. "

"ಸರಿ. ಇನ್ನೇನು ನಿಮ್ಮ ಕಡೆ ಮಳೆ ಆಗಿದೆಯೇನು?"

"ಏನೋ ಸುಧಾರಣವಿದೆ ಪೀಕು, ಬೀಜ ಬಿತ್ತಿದ ಕೂಡಲೇ ಮಳೆಯಾಗಿರಲಿಲ್ಲ. ಅದಕ್ಕೇ ಸ್ವಲ್ಪ ಹಾನಿಯಾಯಿತು" ಹೊಲವೇ ಇಲ್ಲದ ತಂದೆಯ ಮಾತು.

"ನಾನಿನ್ನೂ ಓದೋದಿದೆ ಕೂಡ್ರಿ. ಮನೆಯವರು ಬರ್‍ತಾರ. ಏ ನಿಂಗ್ಯಾs ಒಳಗ ಹೇಳೋ..... ಆಲೂರ ಬೀಗರು ಬಂದಾರಂತ."

ಹೆಜ್ಜೆಯ ಸಪ್ಪಳ, ಮಾವನವರ ಅತಿಥಿ ಸತ್ಕಾರದ ಕೆಲಸ ಮುಗಿಯಿತು. ಇನ್ನು ಅತ್ತೆಯವರ ಪ್ರವೇಶ ಅಂದ್ಕೊಂಡೆ.

ಬಾಣಂತಿಯಾಗಿದ್ದ ನನ್ನ ನಾದಿನಿ ಶಾರದಾಗೆ ಜಡೆ ಹಾಕುತ್ತಿದ್ದ ಅತ್ತೆವ್ವ ಐದು ನಿಮಿಷ ಕಳೆದ ಮೇಲೆ ಹೊರಗೆ ಹೋಗಿ ಹಾಲಿನಲ್ಲಿ ಇಣಿಕಿದರು.

"ಏನು ? ಕೆಲಸದ ಮೇಲೆ ಬಂದಿದ್ದಿರೇನು? ಮನೆಯೊಳಗೆ ಎಲ್ಲಾರೂ ನೆಟ್ಟಗs ಇದ್ದಾರೇನು?"

"ಹೂಂನ್ರಿ, ನಮ್ಮ ಸಾಲಿಯ ಕೆಲಸ ಇತ್ತು. ಹಾಗೇ ಮನೆಯೊಳಗೆ ಹೇಳಿದ್ಳು -ನಿಮ್ಮನ್ನು ಮಂಗಲಾನ್ನೂ ನೋಡಿಕೊಂಡು ಬರ್‍ರಿ ಅಂತ. ಮಂಗಲಾ ಬಂದು ಆರು ತಿಂಗಳಾಯಿತು. ಕಳಿಸಿದರೆ ನಾಲ್ಕು ದಿನದ ಮಟ್ಟಿಗೆ ಕರಕೊಂಡು ಬರ್‍ರಿ ಅಂತ ಹೇಳಿದ್ದಳು."

"ಆರು ತಿಂಗಳಂದ್ರೇನು ಮಹಾ ದಿವಸ ಆಗಲಿಲ್ಲ ಬಿಡ್ರಿ. ಪಂಚಮಿಗೆ ಬಂದೇ ಬರ್‍ತಾಳಲ್ಲ. ಈಗ ನಮ್ಮ ಶಾರದಾಗ ಹೆರಿಗೆ ಆಗಿ ತಿಂಗಳಾಯ್ತು. ನನಗೊಬ್ಬಳಿಗೇ ಎಲ್ಲಾ ಕೆಲಸಾ ಮಾಡಲಿಕ್ಕೆ ಎಲ್ಲಿ ಆಗ್ತದ? ಮತ್ತ ಆಕಿ ಗಂಡನ್ನೂ ಕೇಳಬೇಕಲ್ಲ" ರಾಗ ತೆಗೆದರು ಅತ್ತೆವ್ವ.

"ಹೌದು, ಅದೂ ಖರೇನ. ನಾವೇನು ನಾಲ್ಕು ದಿನದ ಮಟ್ಟಿಗಾದರೂ ನಮ್ಮಲ್ಲಿ ಬರಲಿ ಅಂತೇವಿ. ಆದರ ನಿಮ್ಮ ಅನುಕೂಲಾನೂ ನೋಡಬೇಕಲ್ಲ. ಇಷ್ಟ ದಿನಾ ನಮ್ಮ ಮಗಳಿದ್ದಳು. ಇನ್ನ ನಿಮ್ಮ ಮಗಳ ಅಂತ ತಿಳಕೊಳ್ರಿ. ಹ್ಯಾಂಗಿದ್ದಾಳ ಮಂಗಲಾ?"

"ಮಂಗಲಾss" ಅತ್ತೆಯವರ ಕೂಗು ಕಿವಿಗೆ ಬಿದ್ದ ತಕ್ಷಣ ಎದ್ದು ಹೋದೆ. "ನಿನ ತಂದೆ ಬಂದಾರ ನೋಡು". ಇಷ್ಟು ಹೊತ್ತು ಧ್ವನಿಯನ್ನೇ ಕಿವಿಯಲ್ಲಿ ತುಂಬುತ್ತಿದ್ದವಳು ಈಗ ಅವರನ್ನೇ ಕಣ್ಣಲ್ಲಿ ತುಂಬಿಕೊಂಡೆ. ಅದೇ ಕೆಂಬಣ್ಣಕ್ಕೆ ತಿರುಗಿದ ಬಿಳಿಯ ದೋತರ, ಕರೇ ಕೋಟು, ಬಿಳಿಟೊಪ್ಪಿಗೆ, ಕೈಯಲ್ಲಿ ಛತ್ರಿ, ಕಣ್ಣು ಇನ್ನಷ್ಟು ಒಳಗೆ ನಟ್ಟಿದ್ದವು. ಗಲ್ಲದ ಮೂಳೆ ನಾನೇ ಮುಂದು ಎನ್ನುವಂತೆ ಮೇಲೆ ಎದ್ದಿದ್ದವು. ಅವ್ವನೇ ಮಲಗಿದ ಮೇಲೆ ಅವರ ಉಪಚಾರ ಯಾರು ಮಾಡಬೇಕು? ಏನೇನೋ, ಎಷ್ಟು ಮಾತು ಕೇಳಬೇಕೆಂದುಕೊಂಡವಳಿಗೆ ಗಂಟಲು ಕಟ್ಟಿದಂತಾಯಿತು. ಆದರೂ ಜಗ್ಗಿ ದನಿ ತೆಗೆದು ಕೇಳಿದೆ. "ಅವ್ವ ಹ್ಯಾಂಗದಾಳ ಅಪ್ಪಾ?"

"ಈಗ ಸ್ವಲ್ಪ ಆರಾಮ ಅದಾಳವಾ. ನಡ ನೋವು ಅಂತ ಹಾಸಿಗಿ ಹಿಡಿದs ಬಿಟ್ಟಿದ್ದಳು ಹದಿನೈದು ದಿನಾ."

"ಮತ್ತ ಮನಿಯೊಳಗ ಯಾರು? ನಿನಗ ಸಾಲಿ ಹೊತ್ತಿಗೆ ಅಡಿಗಿ ಯಾರು ಮಾಡುತಿದ್ದರು? ಸುರೇಶನ್ನ ಯಾರ ನೋಡಿಕೋತಿದ್ದರು? ಕುಸುಮೀನೂ ಸಣ್ಣಾಕಿ, ಲಲಿತಕ್ಕ ಕಮಲಕ್ಕ ಯಾರರೇ ಬಂದಿದ್ದರೇನು?"

"ಇಲ್ಲವಾ ಯಾರೂ ಬಂದಿದ್ದಿಲ್ಲಾ. ನನ್ನ ಪಾಕಶಾಸ್ತ್ರ ಪರೀಕ್ಷಾ ಆಯಿತು" ಕ್ಷೀಣ ನಗೆ ನಕ್ಕು ಮುಂದೆ ಹೇಳಿದರು. 'ನೆರೆಮನಿಯವರು ಅಷ್ಟಿಷ್ಟ ಸಹಾಯ ಮಾಡುತ್ತಿದ್ದರು. ಲಲಿತಾಗ ದಿನದೊಳಗ ಇತ್ತು. ಗಂಡು ಹಡದಾಳಂತ ಮೊನ್ನೆ ಪತ್ರ ಬಂತು. ಕಮಲಕ್ಕನ ಗಂಡ ತಮಗೆ ಅನಾನುಕೂಲ ಆಗ್ತದ ಕಳಿಸೂದಿಲ್ಲ ಅಂಥ ಪತ್ರಾ ಬರೆದಿದ್ದ, ಆಯಿತು. ತಮ್ಮ ತಮ್ಮ ಮನ್ಯಾಗ ತಾವು ಸುಖದಿಂದ ಇದ್ದಾರ. ನಾವು ಕೇಳೂದೂ ಅಷ್ಟs, ನೀ ಆರಾಮ

ಅದೀಯಲ್ಲವಾ?" ಅಪ್ಪ ಕಕ್ಕುಲತೆಯಿಂದ ಕೇಳಿದಾಗ ನನಗೇಕೋ ಕಣ್ಣು ತುಂಬಿದವು. ಅತ್ತೆಗೆ ಸಿಟ್ಟು ಬಂದಿತೋ ಏನೋ "ಅವಳಿಗೇನು ಕಡಿಮಿ ಆಗೇದ ಇಲ್ಲೆ" ಎನ್ನುತ್ತಾ ಸರಸರನೆ ಒಳಗೆ ಸರಿದರು. ಅಪ್ಪ ಮತ್ತೆ ಕೇಳಿದರು ಪಿಸುಮಾತಿನಲ್ಲಿ "ತಂಗೀ, ಕಣ್ಣಾಗ ನೀರು? ಯಾಕ ಆರಾಮ ಅದಿಯಲ್ಲಾs"

"ನಾನು ಆರಾಮ ಅದೀನಪ್ಪಾ. ಯಾವುದಕ್ಕೂ ಕೊರತಿ ಇಲ್ಲಾ. ಮನಿಯೊಳಗ ಎಲ್ಲಾರೂ ಚೆನ್ನಾಗೇ ನೋಡಿಕೋತಾರ. ಇವರೂ ಒಳ್ಳೆಯವರು. ಆದರ .... ಅವ್ವಗ ಆರಾಮ ಇಲ್ಲದ್ದು ಕೇಳಿ ಯಾಕೋ ಕೆಟ್ಟನ್ನಿಸಿತು. ನಮ್ಮನ್ನ ಇಷ್ಟ ದಿವಸ ಬೆಳೆಸಿ ಇಷ್ಟು ದೊಡ್ಡವರನ್ನ ಮಾಡಿದಿರಿ. ಇಷ್ಟು ರೊಕ್ಕಾ ಖರ್ಚುಮಾಡಿ ಮಂದೀಮನೀಗೆ ಕಳಿಸಿದ್ರಿ. ನಿಮ್ಮ ಅನುವು ಆಪತ್ತಿಗೆ ನಾವು ಆಗೂಹಾಂಗ ಇಲ್ಲಲ್ಲಾ ಅಂತ ವಿಚಾರ ಬಂದು ದುಃಖ ಆತು."

"ಛೀ ಹುಚ್ಚಿ, ಇದಕ್ಕೆಲ್ಲಾ ಅಳ್ತಾರೇನ? ನಿನ್ನ ಗುಣಕ್ಕ ತಕ್ಕಹಾಂಗ ಶ್ರೀಮಂತ ಮನಿತನಾ ಸಿಕ್ಕಽದ ನಿನಗ ಏನೂ ಕಡಿಮಿ ಇಲ್ಲಾ. ನೀ ಇಲ್ಲಿ ಸುಖದಿಂದ ಇದ್ದರ ನಮ್ಮ ಮನಸ್ಸಿಗೂ ಸಂತೋಷ ಇರ್‍ತದ ಅಲ್ಲೆ. ಇದಕ್ಕೂ ಹೆಚ್ಚಿಗೆ ನಮಗ ಏನೂ ಬ್ಯಾಡ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗ' ಅನ್ನೂ ಹಾಂಗ ಇನ್ನ ನೀನು ಇದs ಮನೀಗೆ ಸಂಬಂಧ ಪಟ್ಟವಳು. ನಿನಗ ತಂದಿ ತಾಯಿಗಳ ಬಗ್ಗೆ ಇಷ್ಟು ಪ್ರೀತಿ ಕಳಕಳಿ ಅದs ಅಷ್ಟsಸಾಕು. ದೇವರು ನಿನಗೆ ಕಲ್ಯಾಣ ಮಾಡ್ತಾನ. ಆಯಿತು ನಾ ಇನ್ನು ಹೋಗಿಬರತೀನಿ. ನಿನ್ನ ತಾಯಿಗೆ ನೀ ಆರಾಮ ಅದಿ ಅಂತ ಹೇಳತೀನಿ. ನಕ್ಕೋತ ನನ್ನ ಕಳಿಸಿ ಕೊಡು" ಅಪ್ಪ ಎದ್ದರು.

"ಸಾಹೇಬ್ರು ಭೆಟ್ಟಿ ಆಗಲಿಲ್ಲ ಅಂದಿ. ಸಂಜೀತನಕಾ ಇರ್‍ತೀಯಲ್ಲಾ?" ಇಲ್ಲಿಯೇ ಇದ್ದು ಊಟ ಮಾಡಿಕೊಂಡು ಹೋಗು ಎನ್ನುವ ಸ್ವಾತಂತ್ರ್ಯ ನನಗಿಲ್ಲದಿದ್ದರೂ ಜೀವ ತಡೀಲಾರದೇ ಕೇಳಿದೆ.

"ಹೂಂ. ಇರ್‍ತೀನಿ ಸಂಜೀತನಕಾ, ನಮ್ಮ ನಾರಾಣಪ್ಪನಲ್ಲೇ ಊಟಕ್ಕ ಹೋಗ್ತೀನಿ. ಆಲೂರಿನ ನಾರಣಪ್ಪ ಇಲ್ಲಿ ಖಾನಾವಳಿ ಇಟ್ಟಿದ್ದು ನನಗೆ ಗೊತ್ತಿತ್ತು. ಗಟ್ಟಿ ಮನಸ್ಸು ಮಾಡಿ ಒಳಗೆ ಹೋಗಿ ಅತ್ತೆಯವರ ಹತ್ತಿರ ಹೇಳಿದೆ. "ಅಪ್ಪ ಹೋಗ್ತಾರಂತೆ" ಅವರಿಗೆ ಊಟಮಾಡ್ರಿ ಇಲ್ಲವಾದರೆ ಕೈಕಾಲು ತೊಳೆದುಕೊಂಡು ಚಹಾ ತಿನಿಸು ತೊಗೊಳ್ರಿ ಅಂತಾರೇನೋ ಎನ್ನುವ ದೂರದ ಆಸೆ ನನಗೆ. ಶಾರದಾನ ಮಗನಿಗೆ ಎರೆದು ಕುಲಾವಿ ಕಟ್ಟುತ್ತಿದ್ದವರು ಎದ್ದು ಹೊರಗೆ ಬಂದು, "ಹೋಗಿ ಬರ್‍ತೀರಾ? ಮಂಗಲಾನ್ನ ಪಂಚಮಿಗೆ ಕಳಿಸಿ ಕೊಡ್ತೀವಿ. ಕಾಳಜಿ ಮಾಡಬೇಡಿರಿ. ಹೋಗಿಬರ್‍ರಿ" ಎಂದವರೇ ಒಳಗೆ ಬಂದರು. ಅಪ್ಪ ಕೊಡೆ ಹಿಡಿದು, ಚಪ್ಪಲಿ ಮೆಟ್ಟಿ ಬೀದಿಗಿಳಿದರು. ನಾನು ಕೋಣೆಗೆ ಹೋದೆ,. ಮಗ್ಗುಲ ಕೋಣೆಯಿಂದ ತಾಯಿ ಮಗಳ ಮಾತು ಕಿವಿಗೆ ಬೀಳುತ್ತಿತ್ತು. "ಹೋದರೇನು?"ಶಾರದಾ ಕೇಳಿದಳು.

"ಹೂಂ ಹೋದರು, ಆದರs..... ಬೀಗರು ಮೊದಲ್ನೇ ಸಾರೆ ಮನಿಗೆ ಬಂದಿದ್ದರು. ಊಟಕ್ಕೆ ಇರ್‍ರಿ ಅಂತ ಹೇಳಬೇಕಾಗಿತ್ತೇನೋ ಅಂತ....."

"ಇರಲಿ ಬಿಡವ್ವ ಸಾಕು. ಏನು ಮಹಾ ದೊಡ್ಡ ಅಂತಸ್ತಿನ ಬೀಗರು ಅಂತ ಉಪಚಾರ ಮಾಡತೀ, ಅವರು ಕೊಟ್ಟ ವರದಕ್ಷಿಣೆ, ಗುಡಿಯೊಳಗ ಮದುವೆ ಮಾಡಿದ್ದು, ನೋಡಿದೀ ಇಲ್ಲೋ. ಇದಕ್ಕೂ ಒಳ್ಳೊಳ್ಳೇ ಮನೆತನ ಬರ್‍ತಿದ್ದು ಅಣ್ಣಾಗ. ಇವಳ ರೂಪಾ ನೋಡಿ ಗಂಟಾಕ್ಕೊಂಡ ಅಣ್ಣ." ಶಾರದಾನ ಚುಚ್ಚುಮಾತು. ಇವಳ ಮಾವ ಕೋರ್ಟಿನಲ್ಲಿ ಕ್ಲಾರ್ಕು. ಅವರ ಮಗ ಶ್ರೀಕಾಂತನ L.L.B. ಡಿಗ್ರಿ ನೋಡಿ ಅವರ ಮನೆಗೆ ಶಾರದಾನ ಕೊಟ್ಟಿದ್ದರು ನಮ್ಮ ಅತ್ತೆ-ಮಾವ.

'ಅಲ್ಲs ಶಾರದಾ ಅದಕ್ಕsಸ ನಾನೂ ಅನ್ನೂದು. ವಿಶೂ ನಮ್ಮ ಮಾವನ ಉಪಚಾರ ಯಾಕ ಮಾಡಲಿಲ್ಲ ಅಂತ ಸಿಟ್ಟಾದಾನು ಅಂತ ಹೆದರಿಕೆ ನನಗ" ಅತ್ತೆವ್ವನಿಗೆ ಮಗನ ಮರ್ಜಿ ಹಿಡಿಯುವ ಆಸೆ. "ಅದಕ್ಯಾಕ ಅಷ್ಟ

ಹೆದರತಿ ಬಿಡು. ನಾ ಎಲ್ಲಾ ಹೇಳತೀನಿ ಅವಗ, ನಾವು ಭಾಳ ಭಾಳ ಕರೆದಿವಿ, ಇಲ್ಲೇ ಸ್ನಾನ ಊಟ ಮುಗಸರಿ ಅಂತ. ಆದರೆ ಅವರು ಇಲ್ಲಾ ನನ್ನ ಕೆಲಸ ಅದ ಅಂತ ಹೋಗೇಬಿಟ್ಟರು ಅಂತ. ನೀ ಸುಮ್ಮನಃ ಇದ್ದುಬಿಡು. ಹೊರಗಿನಿಂದ ಬಂದವಗ ಇಲ್ಲೇನು ನಡೀತದ ಅನ್ನೂದೇನು ಗೊತ್ತಾಗತದ?" ಒಡಹುಟ್ಟಿದ ತಂಗಿಯ ಮಾತನ್ನು ನಂಬದೇ ಇರೋದು ಸಾಧ್ಯವೇ? ನನ್ನ ಮನಸ್ಸು ಒಳಗೊಳಗೇ ವಿಲಿವಿಲಿ ಒದ್ದಾಡಿತು. ಆ ಸಂಕಟ ತಾಳದೆ ಕಣ್ಣೀರು ಉಕ್ಕಿ ಹರಿಯಿತು. ಬಾಗಿಲ ಹತ್ತಿರ ಹೆಜ್ಜೆಯ ಸಪ್ಪಳ ಕೇಳಿ ಲಗುಬಗೆಯಿಂದ ಕಣ್ಣೊರೆಸಿಕೊಂಡೆ.

***

ಹೊರಗೆ ಬೆಲ್ ಆಯಿತು. ನಿಂಗ ಓಡಿಹೋಗಿ ಬಾಗಿಲು ತೆಗೆದು ಮಾತನಾಡಿದ. "ಯಜಮಾನರು ಇದ್ದಾರೇನಪ್ಪಾ?" ಮಾವನವರ ಗಡಸು ದನಿ ಬಾಣಂತಿ ಕೋಣೆಯಲ್ಲಿದ್ದ ನನ್ನ ಕಿವಿಗೂ ಬಿತ್ತು.

"ಇಲ್ರೀ ಅವರು ವಾಕಿಂಗ್ ಹೋಗ್ಯಾರ, ಬರ್ರಿ, ಕೂಡ್ರ ಬರ್ರಿ. ಒಳಗ ಅವ್ವಾರಿಗೆ ಹೇಳತೇನಿ."

ಹೆಜ್ಜೆಯ ಸಪ್ಪಳ, ಸ್ಥೂಲ ದೇಹದ ಮಾವನವರು ಆರಾಮ ಕುರ್ಚಿಯಲ್ಲಿ ಕುಳಿತಿದ್ದಕ್ಕೆ ಕುರ್ಚಿ ಕಿರಿಗುಟ್ಟಿದ್ದು ಕೇಳಿಸಿತು. ಮೊಮ್ಮಗ ಹುಟ್ಟಿದ ಮೇಲೆ ಈಗ ಮೊದಲನೆಯ ಸಲ ಮಾವ ಬಂದಿದ್ದಾರೆ ನನ್ನ ತಂದೇ ಮನೆಗೆ. ಅವರನ್ನ ಮಾತಾಡಿಸುವವರಾರು? ಅಪ್ಪ ವಾಕಿಂಗ ಹೋಗಿದ್ದಾರೆ. ಅವ್ವನಾದರೂ ಕರೆದು, ಕೂಡ್ರಿಸಿ ಉಪಚಾರ ಮಾಡುತ್ತಿದ್ದಳು. ಗಂಡಿನವರಿಗೆ ಉಪಚಾರ ಮಾಡಿಸಿಕೊಳ್ಳೋದು ಅಂದರೆ ಬಹಳ ಖುಷಿ. ನಮ್ಮ ಮನೆಯ ಉಪಚಾರ ಅತ್ತೆವ್ವನಿಗೆ ಸಂತೋಷ ತರುತ್ತಿತ್ತು. ಆಗಾಗ ನೆರೆಯವರ ಮುಂದೆ "ನಮ್ಮ ಶಾರದಾನ ತವರಮನಿಯವರು ದೊಡ್ಡ ಮನುಷ್ಯರು ನೋಡ್ರಿ. ಅವರ ಶ್ರೀಮಂತಿಕೆ ತಕ್ಕ ಹಾಂಗ ಗುಣಾನೂ ದೊಡ್ಡದು. ನಾವು ಹೋದರ ಹರದು ಹೊಟ್ಟ್ಯಾಗ ಹಾಕ್ಕೋತಾರ ಅಷ್ಟು ಪ್ರೀತಿ. ಅವರ ಮನೀ ರೀತಿ ನಡತಿ ಭಾಳ ಛೊಲೋ. ಬಿಂಕ ಬಡಿವಾರ ಎಷ್ಟೂ ಇಲ್ಲ" ಎಂದು ಹೇಳುವುದು ನನ್ನ ಕಿವಿಗೇ ಎಷ್ಟೋ ಸಲ ಬಿದ್ದಿದೆ. ಆದರ ಅವ್ವ ಇವತ್ತಃ ನೀಲಕಂಠರಾಯರ ಮಗಳ ನಿಶ್ಚಯಕ್ಕ ಹೋಗ್ಯಾಳ. ಅವರು ಬಂದ ಕರದಾಗ ಅವ್ವ ಮನೆಯೊಳಗ ಬಾಣಂತಿ ಇದ್ದಾಳ. ನಾ ಬರಲಿಕ್ಕೆ ಆಗೂದಿಲ್ಲ' ಅಂತ ಹೇಳಿದಳು. ಆದರ ಆ ಹೇಮಾವತಿ ಕೇಳಬೇಕಲ್ಲ "ಬಿಡ್ರೀಃ ಶಾರದಾ ಹಡದು ತಿಂಗಳಾಗೇದ. ಮಂಗಲಾನೂ ಇದ್ದಾಳ. ಎಲ್ಲಾ ನೋಡಿಕೋತಾಳ. ನೀವು ಹಿರೇ ಮನುಷ್ಯರು ನಿಶ್ಚಯಕ್ಕ ಬರಲಿಕ್ಕೇ ಬೇಕು. ನಾ ಏನು ಬಿಟ್ಟು ಹೋಗೂದಿಲ್ಲಾ. ಬೀಗರ ಊಟ ಆದಮ್ಯಾಲೆ ಎಷ್ಟು ರಾತ್ರಿ ಆದರೂ ನಾ ಬಂದು ನಿಮ್ಮನ್ನು ಕಳಿಸಿ ಹೋಗ್ತೀನಿ" ಅಂತ ಹಟ ಮಾಡಿ ಕರಕೊಂಡು ಹೋದಳು. ನಮ್ಮ ಮಾವನವರು ಬರೂದು ಯಾರಿಗೆ ಗೊತ್ತು ? ಏಕಾಏಕಿ ಬಂದುಬಿಟ್ಟಾರ. ವಿಶ್ವಣ್ಣ ಕ್ಲಬ್ಬಿಗೆ ಹೋದ. ಇನ್ನ ಬರೂದು ರಾತ್ರಿ ಒಂಬತ್ತಕ್ಕ, ಉಳಿದವರು ಸಣ್ಣ ಹುಡುಗರು. ನಾನು ಬಾಣಂತಿ, ಅವರ ಸೊಸಿ. ಅವರನ್ನ ನಾನಃ ಮಾತಾಡಿಸಿ, ಉಪಚಾರ ಮಾಡಿ ಕೂಸಿನ್ನ ತೋರಿಸಬೇಕಂದರ ಜೀವಕ್ಕ ಹ್ಯಾಂಗ್ಯಂಗೋ ಆಗ್ತದ. ಇನ್ನೇನ ಮಾಡ್ಲಿ? ಮಂಗಲಾನಃ ಕರೀಬೇಕು. ಸಂಜೀ ಅಡಿಗಿ ತಯಾರಿ ಮಾಡುತಿದ್ದಾರು, ಅವರನ್ನು ಕರೆದು 'ಅತ್ತಿಗಿ ನಮ್ಮ ಮಾವ ಬಂದಾರ ಅವರನ್ನ ಕರದು ಉಪಚಾರ ಮಾಡ್ರಿ' ಅಂತ ಹ್ಯಾಂಗ ಹೇಳಬೇಕು? ಹೇಳಬೇಕಂದರೂ ಬಾಯಿ ಬರೋದಿಲ್ಲ. ಮುಂಜಾನೆ ಅವರ ತಂದೆ ಬಂದಾಗ ನೀರು ಸುದ್ಧಾ ಕುಡೀಲಿಲ್ಲ. ಹಾಂಗಃ ಹೋದರು, ಅವ್ವಗ ಕರಿಯೂ ಮನಸ್ಸು ಇತ್ತೇನೋ. ನಾನಃ ಬಿಡಿಸಿದ ಹಾಂಗಾಯ್ತು. ಅತ್ತಿಗೆಗೆ ಕೆಟ್ಟ ಅನಿಸಿರಬೇಕು. ಅವರ ಕೋಣೆಯಿಂದ ಹೊರಗ ಬಂದಾಗ ಕಣ್ಣು ಕೆಂಪು ಆಗಿದ್ದವು. ಅತ್ತಿದ್ದರೋ ಏನೋ. ಈಗ ನನಗ ಗಾಬರಿ ಆಗತದ. ಮುಂಜಾನೆ ಮಾತು ಮನಸ್ಸಿನಾಗಿಟ್ಟುಕೊಂಡು ಅವರೂ ಹೊರಗ ಬಂದು ಮಾವನವರನ್ನ ಮಾತಾಡಿಸಿ ಉಪಚಾರ ಮಾಡದಿದ್ದರ ಹ್ಯಾಂಗ? ಮುಂದೇನು ಗತಿ ? ಬೀಗರು ಸರಿಯಾಗಿ ಉಪಚಾರ ಮಾಡಲಿಲ್ಲ ಅಂತ ಅವರು ಊರಿಗೆ ಹೋದ ಮೇಲೆ ಮಗನ ಮುಂದೆ ಹೇಳಿದರ ಇವರ ಸಿಟ್ಟಿಗೇಳದಃ ಇರತಾರೇನು? ಅವರ ಕೊಂಕುಮಾತು ಮುಳ್ಳಾಗಿ ಚುಚ್ಚತಾವ ನನ್ನ ಒಮ್ಮೆ ಮಾತನಾಡಿದ್ದು ಇನ್ನೂ ನೆನಪದ ನನಗ. ಅಪ್ಪ ಅವರ

ಗೆಳೆಯರ ಮಗಳ ಲಗ್ನಕ್ಕ ಅಂತ ನಮ್ಮ ಊರಿಗೆ ಬಂದಿದ್ದ, ಅಕ್ಕಿಕಾಳು ಬಿದ್ದು ಊಟ ಮುಗಿದ ಕೂಡಲೆ ಯಾರದೋ ಕಾರು ಸಿಕ್ಕಿತಂತ ಅಪ್ಪ ಹಾಂಗs ಊರಿಗೆ ಹೋಗಿಬಿಟ್ಟರು. ನಮ್ಮ ಮನಿಗೆ ಬರಲೇ ಇಲ್ಲ. ಆಗ ಅವರು ಮನೀಗೆ ಬಂದು "ನಿಮ್ಮಪ್ಪ ದೊಡ್ಡ ಮನುಷ್ಯಾ, ನಮ್ಮಂಥಾ ಬಡವರ ಮನೀಗೆ ಯಾರ ಬಂದಾನು" ಅಂತ ನನ್ನ ಹಂಗಿಸಿದರು. ಮೊಮ್ಮಗನ್ನ ನೋಡಲಿಕ್ಕೆ ಅಜ್ಜ ಬಂದರ ಅವರಿಗೆ ಮರ್ಯಾದೆ ಮಾಡಲಿಲ್ಲ ನಿನ್ನ ಮನಿಯವರು ಅಂತ ನನ್ನ ಹೀಯಾಳಿಸಿದs ಬಿಟ್ಟಾರೇನು? ಗಂಡನ ಮೂದಲಿಕೆ, ಅತ್ತೆಯ ಬಿಗುಮಾನ, ಮಾವನ ಉದಾಸೀನತೆ ಎಲ್ಲಾ ನೆನಪಿಗೆ ಬಂದು ಶಾರದಾನ ಕಣ್ಣೀರು ಕಪಾಳಕ್ಕೆ ಬಂದವು. ಜೀವ ತಡೆಯಲಾರದೆ ಅತ್ತಿಗೆಯನ್ನು ಕೂಗಿ ಬರೆಯಬೇಕು ಎಂದು ಬದಿಗೆ ಹೊರಳಿದಳು. ಬಾಗಿಲ ಮುಂದಿನಿಂದ ಹಾಯ್ದು ಅತ್ತಿಗೆ ಹೊರಗಿನ ಹಾಲಿಗೆ ಹೋದದ್ದು ಕಾಣಿಸಿ, ತೆಪ್ಪಗೆ ಬಾಯಿ ಮುಚ್ಚಿಕೊಂಡಳು. ಎದೆ ಡಬಡಬ ಎನ್ನುತ್ತಿತ್ತು. ಮಗ್ಗುಲಲ್ಲಿದ್ದ ಕೂಸಿನ ತಲೆಯ ಮೇಲೆ ಕೈಯಾಡಿಸಿ ಅದನ್ನೇ ಎದೆಗವಚಿಕೊಂಡು ಮನಸ್ಸಿಗೆ ಶಾಂತಿ ತಂದುಕೊಂಡಳು.

'ಊರಿಂದ ಈಗ ಬಂದಿರೇನು?"

"ಹೂಂ, ಕೋರ್ಟಿನೊಳಗ ಸ್ವಲ್ಪ ಕೆಲಸ ಇತ್ತು, ಮಧ್ಯಾಹ್ನ ಬಂದೆ"

"ಒಳ್ಳೇದಾಯ್ತು ನೀವು ಬಂದದ್ದು. ಅವರ ಮಾವನರು ವಾಕಿಂಗ ಹೋಗ್ಯಾರ. ಅತ್ತೆಯವರು ಇಲ್ಲೇ ಒಬ್ಬರ ಮನೀಗೆ ನಿಶ್ಚಯಕ್ಕ ಹೋಗ್ಯಾರ. ಇವರು ಕ್ಲಬ್ಬಿನಿಂದ ಬರೂದು ಇನ್ನೂ ಹೊತ್ತಾಗತದ. ಅದಕ್ಕ ನಾನs ನಿಮ್ಮನ್ನ ಮಾತಾಡಸಲಿಕ್ಕೆ ಬಂದೆ. ಏನೂ ತಿಳಿಕೋಬ್ಯಾಡ್ರಿ ಸಣ್ಣವಳು" ವಿನಯದ ಮಾತು ಅತ್ತಿಗೆಯದು.

"ಛೇ ಛೇ, ತಿಳಕೊಳ್ಳುವಂಥಾದೇನೂ ಇಲ್ಲಾ. ನಾನೇನು ಮೊದಲ ಪತ್ರಾ ಬರದು ಬಂದಿಲ್ಲಾ. ಅವರಿಗೇನೂ ಗೊತ್ತು ನಾನು ಬರ್ತೀನಂತ? ಮನಿಯೊಳಗ ಹೇಳಿದರು, ಹೋಗಿರ್ತೀರಿ ಮೊಮ್ಮಗನ್ನ ನೋಡಿ ಬರ್ರಿ ಅಂತ. ಹ್ಯಾಂಗದಾನ ಅರುಣ?"

"ನೋಡೀರಂತ ಮೊಮ್ಮಗನ್ನ. ಮೊದಲು ಕೈಕಾಲು ತೊಳೀರಿ. ಸ್ವಲ್ಪ ಚಹಾ ತಿನಿಸು ತೊಗೊಂಡು ಆಮೇಲೆ ನೋಡ್ರಿ ಅರುಣನ್ನ. ಏ ನಿಂಗಾs, ಅಜ್ಜಾ ಅವರಿಗೆ ಕಾಲಿಗೆ ನೀರು ಕೊಡು, ವಸ್ತ್ರಾ ಕೊಡು. "

ಮಾವನವರ ಭಾರವಾದ ಹೆಜ್ಜೆಯ ಸಪ್ಪಳ ಬಚ್ಚಲ ಮನೆಯವರೆಗೆ ಹೋಗಿತಿರುಗಿ ಬಂದು ಡೈನಿಂಗ್ ಟೇಬಲ್ಲಿಗೆ ನಿಂತದ್ದು ಕೇಳಿಸಿತು. ಈಗ ಎದೆಯ ಬಡಿತ ಸಮಾಧಾನಕರವಾಗಿತ್ತು.

"ಏನಿದು, ಎಷ್ಟು ತಿನಿಸು ಇಟ್ಟೀರಿ. ಬಿಸ್ಕೀಟು, ಬಾಳೆಹಣ್ಣು, ಅಂಟಿನ ಉಂಡಿ ಇವೆಲ್ಲಾ. ತಗೀರಿ ಸ್ವಲ್ಪ. ಭಾಳ ಆತು ಇದು."

"ಏನ ಬಹಾಳ ಇಲ್ಲ ತೊಗೊಳ್ರಿ, ಯಾವಾಗ ಊಟಮಾಡಿರೋ ಏನೋ, ಅತ್ತೆವ್ವ ಇದ್ದರ ನಿಮಗ ಸಜ್ಜಾಗುತ್ತಿತ್ತು. ನನಗ ತಿಳಿಯೂದಿಲ್ಲ. ನಾನು ಸಣ್ಣಾಕಿ." ದೊಡ್ಡ ಮನಸ್ಸಿನ ಅತ್ತಿಗೆಯ ಸಣ್ಣ ದನಿ ಕಿವಿಗೆ ಬಿದ್ದಾಗ ಹಾಸಿಗೆಯಲ್ಲೇ ಮುದುಡಿದೆ.

"ಏನಿಲ್ಲಾ ಎಲ್ಲಾ ಬರೋಬರಿ ಅದ. ಅತ್ತೆಯವರು ಮನ್ಯಾಗ ಇಲ್ಲದಿದ್ರೂ ನೀವು ಚೆನ್ನಾಗಿ ನಡೆಸ್ತೀರಿ ಮನೀನ. ನನಗ ಗೊತ್ತು ಅದ. ನಿಮ್ಮ ಮನೀ ಶಿಕ್ಷಣನs ಹಾಂಗ. ಪದ್ಧತಿ ರೀತಿ ಭೋಲೋ ಅದ. ಆದರ ಸಂಜೀ ಹೊತ್ತು ನನಗ ಪಚನ ಆಗೂದಿಲ್ಲ ಅದಕ್ಕs ತಗೀರಿ ಅಂದೆ. ಇವತ್ತs ತಿರುಗಿ ಊರಿಗೆ ಹೋಗಬೇಕು ನಾನು."

ಮಾವನವರ ದನಿ ಶಾರದೆಯ ಕಿವಿಯನ್ನು ಸೀಳಿ ತಲೆಯನ್ನು ಕೆಡಿಸಿತು. ಈ ಶಿಕ್ಷಣ ತಮ್ಮ ಮನೆಯದಲ್ಲ. ಅವಳ ತವರು ಮನೆಯ ಶಿಕ್ಷಣ ಎನ್ನುವುದು ಅವರಿಗೇನು ಗೊತ್ತು ಪಾಪ!

ಹಾಲಿಗೆ ಬಂದ ಮಾವನವರಿಗೆ ಅಡಿಕೆ ಪುಡಿಯನ್ನು ಒಯ್ದಳು ಅತ್ತಿಗೆ. ಬಂದೀರಿ. ಇದೊಂದು ದಿನಾ ಇದ್ದು ಸಿಹಿ ಊಟ ಮಾಡಿ ಹೋಗಬೇಕು. ಇವೊತ್ತೇ ನಿಮ್ಮನ್ನ ಕಳಿಸೂದಿಲ್ಲ ನಾವು."

"ಹಾಹಾಹಾsss ಹಾಂಗs ಮಾಡ್ರಿ. ನಿಮ್ಮ ಪ್ರೀತಿಯ ಮಾತು ಮುರಿದು ಹೋಗಲಿಕ್ಕೆ ನನಗೂ ಮನಸ್ಸು ಬರೂದಿಲ್ಲ" ಪ್ರಸನ್ನಚಿತ್ತರಾಗಿದ್ದರು ಮಾವನವರು.

ಅತ್ತಿಗೆ ಸರಸರನೆ ಶಾರದೆ ಮಲಗಿದಲ್ಲಿ ಬಂದು "ಶಾರದಾ, ಅರುಣನ ಅಜ್ಜ ಬಂದಾರ. ಅವನಿಗೆ ಒಳ್ಳೇ ಅರಿವೆ ಹಾಕಿಕೊಡು, ತೋರಿಸ್ತೀನಿ. ಈ ಮಖಮಲ್ಲಿನ ಟೊಪ್ಪಿಗಿ ಕಟ್ಟು, ಚೆಂದಾಗಿ, ಕಾಣ್ತಾನ ನಿನ್ನ ಮಗಾ, ಅರುಣ ಅಜ್ಜನ ಮಳ್ಳ ಮಾಡ್ತಾನ' ಅಂದು ನಕ್ಕಳು.

ಶಾರದೆಗೆ ನಗೆ ಬರಲಿಲ್ಲ. ಅವಳ ಕಣ್ಣೀರಿನಲ್ಲಿ ತನ್ನ ಪ್ರತಿಬಿಂಬ ಕಂಡ ಅತ್ತಿಗೆ ಮುಂದೆ ಬಂದು ಕಣ್ಣೀರೊರಿಸಿ ಕೆನ್ನೆ ತಟ್ಟಿದಳು.

***

■■

# ಹೆಣ್ಣು-ಗಂಡು

ಕೋಣೆಯಲ್ಲಿ ಮಬ್ಬುಗತ್ತಲೆ ಕವಿಯುತ್ತಿದ್ದಾಗ ಮನೋಹರನಿಗೆ ಎಚ್ಚರವಾಯಿತು. ಆದರೂ ಹಾಸಿಗೆಯಲ್ಲಿ ಅತ್ತಿತ್ತ ಹೊರಳಾಡುತ್ತ ಇದ್ದ. ತುಸು ಹೊತ್ತಿಗೆ ಮುಂಚಿನ ಸುಖದ ಅಮಲಿನಲ್ಲೇ ಇನ್ನೂ ಮುಳುಗಿ ಮೈಮರೆತಿದ್ದ. ಜೊಂಪು ಹತ್ತಿ ಎಚ್ಚರವಾಗಿದ್ದರಿಂದ ಮೈಯ ದಣಿವೂ ತಣಿದಿತ್ತು. ಎಷ್ಟೋ ತಿಂಗಳುಗಳು ಕಳೆದ ಮೇಲೆ ದೊರೆತ ಸುಖದಿಂದ, ಬೇಸರಗೊಂಡಿದ್ದ ಮನಸ್ಸು ಅರಳಿತ್ತು. ಹೆಣ್ಣಿನ ನುಣುಪು ದೇಹದ ಬೆಚ್ಚನೆಯ ಸ್ಪರ್ಶ ಇನ್ನಷ್ಟು ಮತ್ತಷ್ಟು ಬೇಕೆನಿಸುತ್ತಿತ್ತು. ಮನಕ್ಕೆ ಕಡಿವಾಣ ಹಾಕಲು ಯತ್ನಿಸದೆ ಮಗ್ಗುಲಿಗೆ ಕೈ ಚಾಚಿದ ಮತ್ತೊಮ್ಮೆ ಆ ಪುಷ್ಟ ದೇಹವನ್ನು ಅವಚಿಕೊಳ್ಳಲು. ಆದರೆ ಅಲ್ಲೆಲ್ಲಿದ್ದಳು ಆ ಹೆಣ್ಣು ? ಬರಿದಾದ, ಆದರೆ ಕೆಲ ಹೊತ್ತಿನಲ್ಲಿ ಹಿಂದೆ ಅಲ್ಲಿ ಹೆಣ್ಣೊಬ್ಬಳು ಮಲಗಿದ್ದಳು ಎನ್ನುವ ಗುರುತು ಬಿಟ್ಟು ಹೋದ ಸ್ಥಳವನ್ನೇ ಮೃದುವಾಗಿ ಕೈಯಾಡಿಸುತ್ತ ಪೂರ್ತಿ ಎಚ್ಚರಗೊಂಡು ಕಣ್ಣು ತೆರೆದ.

ನಾಗಿ ಎಲ್ಲಿ ಹೋದಳು ? ಯಾವಾಗ ಹೋದಳು ? ಎಂದು ಯೋಚಿಸುತ್ತ ಅವಳನ್ನು ಅದೇ ಕೋಣೆಯಲ್ಲಿ ಹುಡುಕುವಂತೆ ಅತ್ತಿತ್ತ ನೋಡಿದ. ಆದರೆ ಅಲ್ಲಿ ಕಣ್ಣು ಅಗಲಿಸಿ ನೋಡಿದರೂ ಏನೂ ಕಾಣದಷ್ಟು ಕತ್ತಲು ಆವರಿಸಿತ್ತು. ಮತ್ತೆ ಕಣ್ಣು ಮುಚ್ಚಿದ. ನಡೆದದ್ದೆಲ್ಲ ನಿಜವೇ ? ಅಲ್ಲ ಕನಸೇ ? ಛೇ ಕನಸಂತೂ ಅಲ್ಲ. ತನಗಾದ ತೃಪ್ತಿ ಸಂತೋಷಗಳೇ ಹೇಳುತ್ತವೆ, ನಡೆದದ್ದೆಲ್ಲ ನಿಜವೇ ಎಂದು. ಆದರೆ ಇದು ಹೇಗೆ ನಡೆಯಿತು ಎಂದು ಯೋಚಿಸಿ ತಲೆಕೆಡಿಸಿಕೊಳ್ಳಲು ಮನ ಒಪ್ಪಲಿಲ್ಲ. ಮೊದಲು ಮಕ್ಕಳು ಪೆಪ್ಪರುಮೆಂಟು ಬಾಯಿಂದ ಹೊರಗೆ ತೆಗೆದು, ತೆಗೆದು ಮತ್ತೆ ಚೀಪುವಂತೆ ಘಟನೆಯನ್ನೇ ಮತ್ತೆ ಚೀಪಿದ.

ದಿನವೂ ಬರುವಂತೆ ಆಫೀಸಿನಿಂದ ಆರುಗಂಟೆಗೆ ಮನೆಗೆ ಬಂದ. ಕೆಲಸದ ನಾಗಿ ಬಂದು ಬಾಗಿಲು ತೆರೆದಳು. ಏನು ಕೆಲಸ ಮಾಡುತ್ತಿದ್ದಳೋ ಹಾಗೆಯೇ ದಡದಡ ಬಂದದ್ದರಿಂದ ಅವಳ ಸೆರಗು ಸರಿದಿತ್ತು. ಆದ್ದರಿಂದ ಅವಳ ಪುಷ್ಟ ಎದೆಯೇ ನನ್ನನ್ನು ಮೊದಲು ಸ್ವಾಗತಿಸಿತು. ನಾನು ಕೈಕಾಲು ತೊಳೆದು ಕೋಣೆಗೆ ಬರುವಷ್ಟರಲ್ಲಿ ಚಹಾ ತಂದು ಕೊಟ್ಟಳು. ಅಲ್ಲಿ ಅವಳ ಕೋಮಲ ಕೈಯ ಸ್ಪರ್ಶ ನನ್ನನ್ನು ಕರೆಯಿತು. ಅವಳು ಅನ್ನ ಸಾರು ಮಾಡಿ ಇಳಿಸಿ, ಹಾಲು ಕಾಸಿ ಹಿತ್ತಲು ಬಾಗಿಲು ಹಾಕಿ ನನ್ನ ಹಾಸಿಗೆ ಸರಿಪಡಿಸಲು ಕೋಣೆಗೆ ಬಂದಳು. ಎರಡೂ ಕೈಯೆತ್ತಿ ಬೆಡ್‌ಸೀಟ್ ಚಟ ಚಟ ಝಾಡಿಸಿದಾಗ ಅವಳ ಅಂಗಾಂಗ ಪ್ರದರ್ಶನ ನನ್ನೊಳಗಿನ ಗಂಡನ್ನು ಬಡಿದೆಬ್ಬಿಸಿತು. ಅವಳು ಬಗ್ಗಿ ಹಾಸಿಗೆಯ ಮೇಲೆ ಕೈಯಾಡಿಸುತ್ತ ಸುಕ್ಕುಗಳನ್ನು ನೀಟಾಗಿ ಮಾಡುವ ಭಂಗಿ ನನ್ನನ್ನು ಆಹ್ವಾನಿಸಿತು. ಅಲ್ಲಿಗೆ ಆರೆಂಟು ತಿಂಗಳಿಂದ ಹಿಡಿದಿಟ್ಟಿದ್ದ ನನ್ನ ಸಂಯಮದ ಅಣೆಕಟ್ಟು ಒಡೆಯಿತು. ಪ್ರವಾಹದಲ್ಲಿ ನಾವಿಬ್ಬರೂ ತೇಲಿ ಹೋದೆವು.

ಬಾಯಲ್ಲಿಯ ಪೆಪ್ಪರಮೆಂಟು ಕರಗಿತ್ತು. ತಿಂದ ಸಿಹಿ, ನಾಲಿಗೆಯ ಮೇಲೆ ಇನ್ನೂ ಉಳಿದಿತ್ತು. ಮನೋಹರ ಎದ್ದು ಲೈಟು ಹಾಕಿ ಹೊರಗೆ ಬಂದ. ಹೊರಬಾಗಿಲು ಮುಂದೆ ಮಾಡಿತ್ತು. ಗಾಳಿಗೆ ಹೊರಗೆ ಬರಬೇಕೆಂದು ಅನ್ನಿಸಿದರೂ ಧೈರ್ಯವಾಗದೆ ತನ್ನ ಗುಟ್ಟನ್ನು ಒಳಗೇ ಬಚ್ಚಿಟ್ಟುಕೊಳ್ಳುವವನಂತೆ ಬಾಗಿಲಿಗೆ ಭದ್ರವಾಗಿ ಚಿಲಕ ಹಾಕಿ ಅಡಿಗೆ ಮನೆಗೆ ಬಂದ. ತಟ್ಟೆ ಇಟ್ಟುಕೊಂಡು ಎಲ್ಲವನ್ನೂ ನೀಡಿಕೊಂಡು ಗಬಗಬನೆ ಉಣ್ಣತೊಡಗಿದ, ಆಗಲೂ ತನಗೆ ಹೀಗೇಕೋ ತುಂಬ ಹಸಿವಾಗಿತ್ತು. ಬಹಳ ದಿನಗಳಿಂದ ಉಪವಾಸವಿದ್ದವನಂತೆ ನಾಗಿಯನ್ನು ತಿಕ್ಕಿ ಮುಕ್ಕಿದ್ದ. ತನ್ನಂತೆಯೇ ನಾಗಿಗೂ ಹಸಿವಾಗಿರಬಹುದು, ಅದಕ್ಕೇ ಅಷ್ಟೊಂದು ತೃಪ್ತಿಯಾಗಿ ಹೊಟ್ಟೆ ತುಂಬಾ ಊಟ ಮಾಡಿದೆವಲ್ಲ ಇಬ್ಬರೂ, ಎಂದು ಮನಸ್ಸಿನಲ್ಲೇ ನಕ್ಕ. ಅನ್ನದ ಪಾತ್ರೆ ಖಾಲಿಯಾಗಿತ್ತು. ಕಣ್ಣು ಎಳೆದು ಬರುತ್ತಿತ್ತು. ಹಾಲು ಕುಡಿದು ಬಂದು ಹಾಸಿಗೆಗೆ ಹೊರಳಿದ.

ಮರುದಿನ ಮುಂಜಾನೆ ನಾಗಿ ಬಾಗಿಲು ಬಡಿದಳು. ಬಾಗಿಲು ತೆಗೆದು ಪ್ರತಿಕ್ರಿಯೆ ಏನೆಂದು ತಿಳಿಯಲು ಅವಳ ಮುಖವನ್ನೇ ದಿಟ್ಟಿಸಿದ. ಆದರೆ ನೆಲ ನೋಡುತ್ತಿದ್ದ ಅವಳ ಕಣ್ಣುಗಳು ಅಡ್ಡ ಗೋಡೆಯಾಗಿದ್ದವು. ಒಳಗೆ ಬಂದು ದಿನದಂತೆ ಎಲ್ಲ ಕೆಲಸವನ್ನೂ ಮಾಡಿ, ಏನೂ ನಡೆಯದವರಂತೆ "ಬಾಗಿಲು ಹಾಕ್ಕೊಳ್ರಿ ಹೋಗ್ತೀನಿ" ಎಂದಳು. ಹತ್ತು-ಹದಿನೈದು ದಿನ ಕಳೆದ ಮೇಲೆ ಮನೋಹರನಿಗೆ ಮತ್ತೆ ಹಸಿವೆಯಾಯಿತು. ಅಂದು ತಾನೇ ನಾಗಿಯನ್ನು ಕೋಣೆಗೆ ಕರೆದ. ನಾಗಿ ಹೊರಟಾಗ ಹತ್ತು ರೂಪಾಯಿ ನೋಟು ಅವಳ ಮುಂದೆ ಹಿಡಿದು, "ಏನರೆ ತೊಗೋ" ಎಂದ. ಆಗ ಮೊದಲ ಬಾರಿ ಅವಳು ಕತ್ತೆತ್ತಿ ಅವನ ಮುಖ ನೋಡಿದಳು.

"ಸಾಯೇಬ್ರ ನಾ ನಿಮ್ಮ ಮನೀ ಕೆಲಸ ಮಾಡಿದ್ದಕ್ಕ ಪಗಾರ ಕೊಡ್ತೀರಿ, ಇದ್ಯಾಕ?'

"ನನ್ನ ಸಂತೋಷಕ್ಕ, ನಾಗೀ ನಾ ಕರೆದಾಗ ಬಂದಿ, ಹೇಳಿದಾಂಗ ಕೇಳಿದಿ ಅದಕ್ಕ."

"ನಿಮ್ಮಂಗ ನನಗೂ ಸಂತೋಷ ಆಗೇತಿ ಸಾಯಬ್ರ, ಇದಕ್ಕ ನನಗ ರೊಕ್ಕ ಬ್ಯಾಡಾ, ನಾ ಮೈ ಮಾರಿಕೊಳ್ಳಾಕ ಬಂದಿಲ್ಲಾ."

ಮನೋಹರ ಥಟ್ಟನೆ ಅವಳ ಭುಜ ಹಿಡಿದು ಕಿವಿಯಲ್ಲಿ ಪಿಸುಗುಟ್ಟಿದ. "ನಾಗಿ ಬಾಯಾರು ಹೋಗಿ ಭಾಳ ದಿನಾ ಆಗಿತ್ತು. ನಾ ಹಸದಿದ್ದೆ...."

"ನನ್ನ ಗಂಡ ಸತ್ತು ಎರ್ಡು ವರಸ ಆಗಿತ್ರೀ, ನಾನೂ......"

ನಾಗಿ ಹೋದ ಮೇಲೆ ಮನೋಹರ ಅಲ್ಲೇ ಕುರ್ಚಿಯಲ್ಲಿ ಎರಡು ತಾಸು ಕುಕ್ಕರಬಡಿದಿದ್ದ. ಅವಳು ಹೋಗುವಾಗ ಆಡಿದ ಮಾತು ಅವನ ಕಿವಿಯಲ್ಲಿ ಇನ್ನೂ ಧ್ವನಿಸುತ್ತಿತ್ತು. ನಾಗಿ, ಗಂಡ ಸತ್ತಾಕಿ, ಎರಡು ಮಕ್ಕಳೂ ಅದಾವ ಎಂದು ಸುಶೀ ಹೇಳಿದ್ದಳು. ನಾಗಿ, ನಮ್ಮ ಮನೆ ಕೆಲಸಕ್ಕೆ ಬಂದ ನಾಲ್ಕಾರು ತಿಂಗಳಿಗೇ ಸುಶೀ ಹಡೀಲಿಕ್ಕೆ ತವರ್ಮನಿಗೆ ಹೋದಳು. ನಾ ಆಕೀಗೆ ಹೇಳಿದ್ದೆ.

"ನಾ ಒಬ್ಬಾಂವ ಇರತೀನಿ. ಅಪ್ಪ ಹಾಸಿಗಿ ಹಿಡಿದಾರ. ಅವ್ವಗ ಅವರ್ನ ಬಿಟ್ಟು ಬರೂದು ಆಗೂದಿಲ್ಲಾ ಹಳ್ಳಿಯಿಂದ. ನಾ ಹೋಟೆಲ್ಲಿನ್ಯಾಗ ಊಟ ಮಾಡತೀನಿ. ಕೆಲಸದಾಕಿನ್ನ ಬಿಡಿಸಿ ಬಿಡು ಅಂತ.

"ನನಗ ಈಗ ಏಳ ತಿಂಗಳು, ನಾನು ಹಡದು ಬರಬೇಕಾದರೆ ಇನ್ನೂ ಏಳು ತಿಂಗಳು ಆಗ್ತದ. ಹೋಟೆಲ್ಲಿನ ಹೊಲಸು ಊಟಾ ಮಾಡಬ್ಯಾಡರಿ. ನಾನು ನಾಗೀಗೇ ಹೇಳತೀನಿ, ಆಕಿ ಅನ್ನಾ -ಸಾರು ಮಾಡ್ತಾಳ. ಮನ್ಯಾಗ ಊಟ ಮಾಡಿರಿ. ಆಕೀಗೆ ಇನ್ನ ಐದು ರೂಪಾಯಿ ಹೆಚ್ಚಿಗೆ ಕೊಟ್ಟರಾತು."

"ನಾ ಅನ್ನಾ ಮಾಡಿಕೋತೀನಿ. ಹ್ಯಾಗೂ ಮಗ್ಗುಲ ಮನೀ ಹುಡುಗರೂ ಅಡಿಗಿ ಮಾಡಸ್ತಾರಲ್ಲಾ, ಅಲ್ಲಿಂದ ಸಾರು ತರ್ತೀನಿ. ಸುಮ್ಮನ ನಾಗೀನ್ನ ಬಿಡಿಸಿಬಿಡು."

'ಪಾಪ, ಬಡವಿ ಒಳ್ಳೇಕಿ ಅದಾಳ. ಕೈ ಬಾಯಿ ಸುದ್ದ ಅದ. ಕೂಸಿನ್ನ ಕರಕೊಂಡ ಬಂದ ಮ್ಯಾಲೆ ಕಾಳಜಿಲೆ ಕೆಲಸಾ ಮಾಡತಾಳ. ನನಗೆಲ್ಲಾ ಗೊತ್ತದ. ಮಗ್ಗುಲ ಮನೀ ಬಟ್ಲರ ಮಾಡಿದ ಸಾರು ಉಣಬ್ಯಾಡ್ರಿ, ನಾಗೀನs ಅಡಿಗಿ ಮಾಡ್ಲಿ. ನಿಮಗೇನ ಬೇಕ ಎಲ್ಲಾ ಹೇಳಿ ಮಾಡಿಸಿಕೊಳ್ರಿ" ತಾನು ಬೇಡವೆಂದಿದ್ದರೂ ಸುಶೀಲ ಅವಳನ್ನು ಗಂಟು ಹಾಕಿ ಹೋಗಿದ್ದಳು. ಮುಗ್ಧೆ! ಈಗ ತಾನು ಬಸರು, ಮುಂದ ಬಾಣಂತಿ, ತನ್ನ ಆರೈಕಿಯೊಳಗ, ತನ್ನ ಕೂಸಿನ್ನ ಜೋಪಾನ ಮಾಡೂದರಾಗ ತನ್ನ ಗಂಡಗ ಇಷ್ಟೊಂದು ಹಸಿವಿ ಆಗಿರಬಹುದು ಅನ್ನೊ ಕಲ್ಪನಾನs ಆಕೀಗೆ ಬಂದಿರಲಿಕ್ಕಿಲ್ಲಾ. ಕ್ರಿಶ್ಚನ್ ಬಟ್ಲರ್ ಮಾಡಿದ ಸಾರು ಉಂಡರೂ ನಾನು ಕುಲಗೆಡತೇನಿ ಅಂತ ಹೆದರಿದಾಕೀ. ನಾಗಿ ಸಂಗದೊಳಗ ನಾ ಕುಲಗೆಡಬಹುದು ಅನ್ನೊ ವಿಚಾರನ ಮಾಡಲಿಲ್ಲ, ಪಾಪ.

ಹಂ. ನಾ ಈಗ ಕುಲಗೆಟ್ಟಂಗ ಹೆಂಗ ಆತು ? ನಾಗೀ ಸಂಬಂಧದಿಂದ ನಾ ಕುಲಗೆಡೂಕ್ಕಿಂತ ಮೊದಲs ನಮ್ಮಪ್ಪ ಕುಲಗೆಟ್ಟಾನಲ್ಲ ಹುಸೇನಬೀನ್ನ ಇಟಕೊಂಡು. ನಾ ಹಳ್ಳಿಯೊಳಗ ಸಾಲಿಗೆ ಹೋಗೂ ಮುಂದೆ ಫಾತಿಮಾ ಬಂದ ಕೂಡಲೆ ಹುಡುಗರು ನನಗ ಚ್ಯಾಷ್ಟಿ ಮಾಡತಿದ್ದರು. "ನಿನ್ನ ತಂಗಿ ಬಂದ್ಲ ನೋಡೋ" ಅಂತ. ನನಗ ಮೊದಲ ಮೊದಲ ಅಳೂಹಾಂಗ ಆಗುತ್ತಿತ್ತು. ಅವ್ವಗ ಕೇಳತಿದ್ದೆ "ಹಾಂಗ ಯಾಕ ಅಂತಾರ?" ಅಂತ. ಆಕಿ ಕಣ್ಣು ಒರೆಸಿಕೊಂಡು "ನೀ ಇನ್ನೂ ಸಣ್ಣಾವ ಇದ್ದೀಯಪ್ಪಾ, ನಿನಗ ತಿಳಿಯೂದಿಲ್ಲಾ" ಅಂತಿದ್ಲು. ದೊಡ್ಡಾಂವ ಆದಂಗ ಅಪ್ಪನ ದೌರ್ಬಲ್ಯ ಗೊತ್ತಾಗಲಿಕ್ಕೆ ಹತ್ತಿತ್ತು. ಅವನ ಬಗ್ಗೆ ಸಿಟ್ಟು ಕಡಿಮಿ ಆಗಿ ಕನಿಕರ ಅನಿಸುತ್ತಿತ್ತು. ಫಾತಿಮಾ ದಾರೀಯೊಳಗ ಭೆಟ್ಟಿ ಆದರ ನಾನs ಮುಂದಾಗಿ ಮಾತಾಡಿಸತಿದ್ದೆ. ಸಮಾಜದೊಳಗೆ ಆಕೀ ಸ್ಥಾನ ಏನೂ ಅನ್ನೂ ಕಲ್ಪನಾ ಬಂದಿತ್ತು. ಕಾಲೇಜ ಸೂಟಿ ಬಿಟ್ಟು ಊರಿಗೆ ಬರೂಮುಂದ ತಂಗೀ ಜೋಡಿ ಆಕಿಗೂ ಸೀರಿ ತರತಿದ್ದೆ. ಅದನ್ನ ನೋಡಿ ಅಪ್ಪ ಹಿಗ್ಗತಿದ್ದರು. ಅವರ ಕಣ್ಣೊಳಗೆ ಬೆಳಕ ಮೂಡುತ್ತಿತ್ತು. ಹುಸೇನಬಿ ಸಾಯೂಮುಂದ ಆಕೀಗೆ ಮಾತು ಕೊಟ್ಟಾಂಗ ಅಪ್ಪ ಒಂದ ಹೊಲ ಮಾರಿ ಫಾತಿಮಾನ್ನ ಲಗ್ನಾ ಮಾಡಿಕೊಟ್ಟರು.

ಅಪ್ಪ-ಹುಸೇನಬೀ ಸಂಬಂಧ ಅಂದರ ಹೀಂಗಿತ್ತು. ಆದರ ನಂದು ನಾಗೀದು ಇಂಥಾ ಸಂಬಂಧನ? ಅಲ್ಲಾ. ಸಾಯೋತನಕ ಆಕೀನ ಇಟಕೊಂಡ ಹ್ಯಾಂಗ ಸಾಗಿಸಲಿ ನಾನು ? ಒಂದು ಸಂಸಾರ ಸಾಕೂದs ನನಗ ಒಜ್ಜೆ ಆದಾಗ ಇನ್ನೊಂದಕ್ಕ ಏನ ಮಾಡಲಿ? ಸುಶೀ ಹತ್ತಿರ ಇದ್ದಾಗ ನನಗ ನಾಗಿಯಾದರೂ ಯಾಕ ಬೇಕು? ನನ್ನ ಸುಶೀನs ಸಾಕು. ಒಟ್ಟಿನ ಮ್ಯಾಲೆ ಸುಶೀಗೆ ನಾ ಮೋಸ ಮಾಡಿದಂಗಾತು.

"ನಾ ಆರೆ ಏನ ಮಾಡ್ಲಿ, ನಾ ಏನೂ ಮುದ್ದಾಂ ಮಾಡಲಿಲ್ಲ. ಕೈ ಮಿಕ್ಕಿ ಆತು." ಒಳದನಿ ಹೇಳಿತು.

"ಮೊದಲನೇ ಸಾರೆ ಕೈ ಮಿಕ್ಕಿ ಅದರ, ಎರಡನೇ ಸಾರೆ ನೀನs ಮುದ್ದಾಂ ಆಕಿನ್ನ ಕರದಿ."

"ಹೌದು, ಆದರ ಆಗ ನನಗ ಇದು ತಪ್ಪು ಅನಿಸಲೇ ಇಲ್ಲಾ. ನಾ ಗಂಡಸ ಇದ್ದೇನಿ, ಬೇಕಾದ್ದು ಮಾಡಬಲ್ಲೆ ಅನ್ನಿಸ್ತು. ಮತ್ತ ಆ ಹೊತ್ತಿನ್ಯಾಗ ತಪ್ಪು ಒಪ್ಪು ಒಂದೂ ನೆನಪಿಗೆ ಬರೋದಿಲ್ಲ."

"ಬೇಕಾದ್ದ ಮಾಡಬಲ್ಲೆ ಅನಲಿಕ್ಕೆ ಎಲ್ಲಾ ಸ್ವಾತಂತ್ರ್ಯ ನಿನಗs ಕೊಟ್ಟಾರೇನು ? ನಿನ್ನಾಂಗ ನಿನ್ನ ಸುಶೀನೂ ಮಾಡಿದರ ?"

"ಛೀ ಎಂಥಾ ಮಾತ ಆಡ್ತೀರಿ, ಆಕಿ ಹಂಗ ಯಾಕ ಮಾಡತಾಳ ? ನನಗ ದ್ರೋಹ ಮಾಡತಾಳೇನೂ?"

"ಯಾಕ? ಆಕಿ ಮನುಷ್ಯಾಳ ಅಲ್ಲೇನು? ನಿನ್ನಂಗ ಆಕಿಗೂ ಹಸಿವಿ ಆಗೂದಿಲ್ಲೇನು ? ನೀನು ಇಲ್ಲದಾಗ ಆಕೀನೂ ಹಾಂಗ ಮಾಡಿದರೆ ನೀ ಸುಮ್ಮನ ಇರತೀಯೇನು?"

"ಏನದು? ಏನ ಮಾತಾಡತೀದಿ? ನಾ ಅಂದರ ಏನಂತ ತಿಳಕೊಂಡೀದಿ ? ಅಂಥಾ ಹಾದರಗಿತ್ತೀನ್ನ ಒದ್ದ ಹೊರಗ ಹಾಕತೇನಿ ಒದ್ದು, ಗಂಡಸ ಅದೀನಿ ನಾನು."

"ಹೌದಪ್ಪ ಗಂಡಸ ಅದೀ ನೀನು. ನಿನ್ನ ಜೀವನದಾಗ ಗಂಡಿಗೊಂದು, ಹೆಣ್ಣಿಗೊಂದು ಕಾಯ್ದೆ ಅದs ಏನು? ನೀ ಹ್ಯಾಂಗ ಸ್ವತಂತ್ರ ಅದೀ, ಹಾಂಗs ಆಕೀಗೂ ಎಲ್ಲಾ ಸ್ವಾತಂತ್ರ್ಯ ಅದ. ಹೆಂಗಸರಿಗೆ ಸಮಾನ ಸ್ವಾತಂತ್ರ್ಯ, ಹಕ್ಕು ಬಾಧ್ಯತೆಗಳು ಬೇಕsಬೇಕು ಅಂತ ನೀನs ಕಾಲೇಜದಾಗ ಕುಣಕುಣದು ಭಾಷಣಾ ಮಾಡತಿದ್ದೆಲ್ಲಾ ಮರತಿ ಏನು ? ಏನಂತಿ ಹೇಳು ? ನೀ ಮಾಡಿದಾಂಗ ಆಕೀ ಮಾಡಿದರ ಒದ್ದ ಹೊರಗ ಹಾಕತೀ? ಈಗ ನೀ ಮಾಡಿದ ತಪ್ಪಿಗೆ ಆಕೀ ನಿನ್ನ ಒದ್ದರs...?"

ಒದೆಸಿಕೊಂಡವನಂತೆ ಮನೋಹರ ಚಟ್ಟನೆ ಕುರ್ಚಿ ಬಿಟ್ಟೆದ್ದ. ಕೈ ಗಡಿಯಾರ ನೋಡಿಕೊಂಡ. ಹೆಂಡತಿಯ ಊರಿಗೆ ಹೋಗುವ ಬಸ್ಸು ಹಿಡಿಯಲು ಹೊರಟೇಬಿಟ್ಟ.

***

ಜ್ವರದಿಂದ ಬಳಲಿದ್ದ ರವಿಗೆ ಆಗತಾನೆ ನಿದ್ರೆ ಹತ್ತಿತ್ತು. ನಾಲ್ಕಾರು ದಿನಗಳಿಂದ ಜ್ವರತುಂಬಾ ಇತ್ತು. ಆಮೇಲೆ ಗೊಬ್ಬರ ಎದ್ದವು. ಎಂಟು ತಿಂಗಳ ಮಗು ಹಿಂಡಿದ ಕಬ್ಬಿನ ಸಿಪ್ಪೆಯಂತಾಗಿದ್ದ. ಹಗಲೂ ರಾತ್ರಿ ಅಳುತ್ತಿದ್ದ. ಮನೆಯ ಕೆಲಸ ಮಗನ ಕಾಯಿಲೆ ಎಲ್ಲದರಿಂದ ಸುಶೀ ಬಹಳ ಆಯಾಸಗೊಂಡಿದ್ದಳು. ಮನೋಹರ ಎರಡು ದಿನ ರಜ ತೆಗೆದುಕೊಂಡು ಮಗನ ಉಪಚಾರ ಮಾಡಿದ. ಮನೆಗೆಲಸದಲ್ಲಿ ಹೆಂಡತಿಗೆ ಸಹಾಯ ಮಾಡಿದ. ಸುಶೀ ತುಂಬಾ ಆಯಾಸಗೊಂಡು ಊಟ ಮಾಡದೆ ಮಲಗಿದಾಗ ಹಾಲು ಕುಡಿಯಲು ಕೊಟ್ಟು, ಹಣೆಗೆ ಅಮೃತಾಂಜನ ತಿಕ್ಕಿದ. ಹಣೆಯ ಮೇಲಾಡುತ್ತಿದ್ದ ಅವನ ನೀಳ ಬೆರಳುಗಳು ತನ್ನ ಕೆನ್ನೆಗೆ ಇಳಿದಾವೆ ಎನ್ನುವ ಆಸೆ ಸುಶೀಯ ಮನದಲ್ಲಿ ಮೂಡಿತ್ತು. ಅದನ್ನು ಅರಿಯದ ಮನೋಹರ ಹೆಂಡತಿಗೆ ನಿದ್ದೆ ಬಂದಿದೆ ಎಂದು ತಿಳಿದು ಅವಳ ಮೈತುಂಬ ರಗ್ಗು ಹೊದಿಸಿ ಹೊರಗಿನ ತನ್ನ ಕೋಣೆಗೆ ಮಲಗಲು ಹೊರಟುಹೋದ. ಲೈಟು ಆರಿಸಿ ಮಲಗಿದ ಸಪ್ಪಳವು ಕೇಳಿಸಿತು ಸುಶೀಗೆ.

ಗಂಡ ಎದ್ದು ಹೋದುದಕ್ಕೆ ಅಸಮಾಧಾನ. ಇನ್ನಷ್ಟು ಹೊತ್ತು ತನ್ನ ಹತ್ತಿರ ಕುಳಿತಿರಬೇಕಾಗಿತ್ತು, ಎನ್ನುವ ಆಸೆ ಸುಶೀಗೆ. ತನ್ನ ಯೋಚನೆ ತನಗೆ ನಗು ತಂದಿತು. ಮನೋಹರ ಯಾಕೆ ತನ್ನನ್ನು ಓಲೈಸಬೇಕು. ಏನೋ ಕರ್ತವ್ಯ ಅಂತ ತಿಳಿದು ತಲೆನೋವಿಗೆ ಅಮೃತಾಂಜನ ತೀಡಿದ, ಹೋಗಿಬಿಟ್ಟ. ಇಲ್ಲಿ ಕುಳಿತರೆ ಅವನಿಗೆ ಸಿಗುವ ಸುಖವಾದರೂ ಏನು? ಹೆರಿಗೆಯಾಗಿ ಬಂದು ಎಂಟು ತಿಂಗಳು ಕಳೆದರೂ ತನ್ನ ಮೈ ಮುಟ್ಟಗೊಟ್ಟಿರಲಿಲ್ಲ ತಾನು. ಇಷ್ಟು ದಿನಗಳಲ್ಲಿ ಎಷ್ಟೋ ಸಲ ಹತ್ತಿರ ಬಂದಿದ್ದ, ಬೇಡಿದ್ದ ಅಂಗಲಾಚಿದ್ದ. ಆದರೂ ನಾಗಿಯನ್ನು ಅಪ್ಪಿದ ಆ ಕೈಗಳನ್ನು ಮುಟ್ಟಲು ಮನಸ್ಸು ಮಾಡಿರಲಿಲ್ಲ ತಾನು. ಅವನ ಬೇಡಿಕೆಯನ್ನು ನಿರಾಕರಿಸಿ ದೂರ ಸರಿದಿದ್ದಳು. ಅತ್ತು, ಕರೆದು ರಂಬಾಟ ಮಾಡಿದ್ದಳು. ನಿಮಗೆ ನಾಚಿಕೆಯಾಗುವುದಿಲ್ಲವೇ ಮನಸ್ಸು ಹಿಡಿತದಲ್ಲಿಟ್ಟುಕೊಳ್ಳಲು ತಿಳಿಯಲಿಲ್ಲವೇ ಎಂದು ಛೀಮಾರಿ ಮಾಡಿದ್ದಳು. ಎಲ್ಲದಕ್ಕೂ ಅವನದೊಂದೇ ಉತ್ತರ "ಏನೋ ಮನಸ್ಸು ದಾರಿ ತಪ್ಪಿತ್ತು. ಇನ್ನೊಮ್ಮೆ ಹಾಗೆ ಆಗುವುದಿಲ್ಲ. ಮರೆತುಬಿಡು."

ಒಮ್ಮೆ ತಮ್ಮಿಬ್ಬರ ಜಗಳ ದೀರ್ಘಕ್ಕೆ ಹೋದಾಗ ಸಿಟ್ಟಿನಿಂದ ಕೂಗಾಡಿದ "ಎಷ್ಟು ದಿನಾ ಹೀಂಗs ಕಾಡಸ್ತೀ? ಭಾಳ ಹಟಮಾರಿ ಇದ್ದೀ ನೀನು. ಆದರೆ ಈ ಹಟಾನs ನಿನ್ನ ಬಾಳೇ ಹಾಳು ಮಾಡೀತು. ನನಗೇನು ನೀ ಇಲ್ಲದಿದ್ದರೆ ಮತ್ತ ನಾಗೀ ಹತ್ತಿರ ಹೋಗತೇನಿ."

ತಾನೂ ಅಷ್ಟೇ ಅಕ್ಕಸದಿಂದ ಅರಚಿದ್ದಳು. "ಹೋಗ್ರಿ ಹಾಳ ಬಾವಿ ಬೀಳ್ರಿ, ನಂದೇನು ಹೋಗ್ತದ. ನಾಕ ಮಂದ್ಯಾಗ ನಿನ್ನ ಮರ್ಯಾದಿ ಏನ ಉಳೀತದ? ಕೆಲಸದಾಕೀನ್ನ ಇಟ್ಟುಕೊಂಡು ಮೆರೀರಿ." ಎರಡು ದಿನ ಇಬ್ಬರೂ ಮಾತನಾಡಿರಲಿಲ್ಲ. ಮನೆ ಮೂಕವಾಗಿತ್ತು. ರವಿಯ ಅಳುವೊಂದನ್ನು ಬಿಟ್ಟರೆ, ಮನೋಹರ ತನ್ನ ಮಾತಿನಂತೆ ನಡೆದುಕೊಂಡಿಲ್ಲವೆನ್ನುವ ಭಂಡ ಧೈರ್ಯವಿದ್ದರೂ ಮನಸ್ಸು ಒಳಗೊಳಗೆ ಅಳುಕುತ್ತಿತ್ತು. ಎಲ್ಲಿ ಅಂದಂತೆ ಮಾಡುತ್ತಾರೊ ಎಂದು ಹೆದರಿ ಎದೆ ಪುಕ ಪುಕ ಎನ್ನುತ್ತಿತ್ತು. ಆಗೆಲ್ಲ ಅವ್ವನ ಮಾತು ನೆನಪಾಗುತ್ತಿದ್ದವು.

"ಏನೋ ಆಸೇಕ ಬಿದ್ದು ಆಗಿರಬೇಕು ಬಿಡು. ಇನ್ನ ಮುಂದ ಆಗದಂಗ ನೋಡಿಕೋ. ಸಡಲು ಬಿಡಬ್ಯಾಡಾ."

"ಏನವಾ? ಆಸೆ ಅಂತ. ಅಷ್ಟೂ ತಿಳಿಯೂದಿಲ್ಲೇನು, ಕಲಿತವರಾಗಿ ಹೀಂಗ ಹೆಂಡತಿಗೆ ದ್ರೋಹಾ ಮಾಡಬಾರದು ಅನ್ನೂ ಎಚ್ಚರ ಇರೂದಿಲ್ಲೇನು ಮೈಮ್ಯಾಲೆ? ಇಂಥವರ ಕೂಡ ಬಾಳೇ ಮಾಡಂತ ಹೇಳತಿಯಲ್ಲಾ." ಅವರಷ್ಟು ಸ್ವಾತಂತ್ರ್ಯ ಹಕ್ಕು ಎಲ್ಲಾ ನಮಗೂ ಅದಾವ ಈ ಕಾಲದಾಗ ಗೊತ್ತಿಲ್ಲೇನು?" ತಾನೂ ತಿರುಗಿ ವಾದಿಸಿದ್ದಳು

ಏರುಧ್ವನಿಯಲ್ಲಿ, ಅವ್ವನ ಮಾತಿನ ಧೋರಣೆ ಸರಿಬರದೆ. ತಮ್ಮಿಂದ ತಪ್ಪಾತು ಅನ್ನೂದು ತಾವs ಸ್ವತಃ ಬಂದ ಹೇಳಿದ್ರಲ್ಲಾ. ಇಷ್ಟು ಪ್ರಾಮಾಣಿಕತನಾ ಅರೆ ಎಷ್ಟು ಮಂದಗಿ ಇರ್ತದ? ಎನ್ನುವ ಧ್ವನಿ ಸುಶೀಯನ್ನು ಒಳಗೆ ಮೀಟಿತು.

" ಗೊತ್ತದs ಸುಶೀ ನೀವು ಶಾಣ್ಯಾರು. ಕಲಿತವರು. ನಮ್ಹಂಗ ದಡ್ಡರು ಅಲ್ಲಾ. ನಿಮ್ಮ ಹಕ್ಕು ಸ್ವಾತಂತ್ರ್ಯ ಎಲ್ಲಾ ಕಾಗದದಾಗ ಅದಾವ. ಅದು ನಿನಗs ಗೊತ್ತಿಲ್ಲs. ಹುಚ್ಚಿ ಅದೀ ನೀನು ಹುಚ್ಚಿ. ಅಂವಾ ಗಂಡಸ ಅದಾನ, ಏನ ಮಾಡಿದರೂ ನಡೀತದ. ನಿನಗ ಹಾಂಗ ಮಾಡಾಕ ಆದೀತೇನು ?" ಅವ್ವನ ಪ್ರಶ್ನೆ ನೇರವಾಗಿತ್ತು. ಅದಕ್ಕೆ ಉತ್ತರ ಕೊಡಲು ತಿಳಿಯದೆ ಕಕ್ಕಾವಿಕ್ಕಿಯಾಗಿದ್ದೆ ತಾನು. ಗಂಡ ಮಾಡಿದ ಹಾಗೆ ತಾನು ಮಾಡುವುದು ಸಾಧ್ಯವೇ ಎನ್ನುವ ಪ್ರಶ್ನೆ ಆಗಾಗ ಧುತ್ತೆಂದು ಎದುರಾಗುತ್ತದೆ. ಗಂಡನ ಮನೆಗೆ ಹೋಗುವುದಿಲ್ಲವೆಂದು ತಾನು ಹಟ ಹಿಡಿದಾಗ ಅವ್ವ ಹೇಳಿದ್ದೇನು ? "ಸುಶೀ ನೀ ಇನ್ನೂ ಸಣ್ಣಾಕಿ ಇದ್ದೀಯವ್ವಾ, ನಿನಗ ತಿಳಿಯೂದಿಲ್ಲಾ, ನಾ ಹೇಳಿದಂಗ ಕೇಳು, ಗಂಡನ ಮ್ಯಾಲಿನ ಸಿಟ್ಟಿಲೆ ಹೀಂಗ ಹಾರ್‍ಯಾಡ್ತಿ, ಬಾಣಂತಿ ಮೈ ಆರಕೋತ ಬಂದಾಗ ನಿನಗ ಗಂಡನ ಹತ್ತಿರ ಇರಬೇಕು ಅನ್ನೂ ಆಸೆ ಆಗ್ತದ. ಹರೇದಾಕಿ, ಎಷ್ಟು ದಿವಸ ಗಂಡನ್ನ ಬಿಟ್ಟು ಇರತೀ? ದೇವರು ಗಂಡಸರನ್ನ ಯಾವ ಮಣ್ಣಿಲೆ ಮಾಡಿದಾ ಅದs ಮಣ್ಣೀಲೇ ನಮ್ಮನ್ನೂ ಮಾಡ್ಯಾನ. ಅವರಿಗಿರೂ ಬಯಕಿ, ಆಸೆ ಎಲ್ಲ ನಮಗೂ ಇರತಾವ. ಅದೆಲ್ಲಾ ನಿನಗ ಮುಂದ ಅರ್ಥ ಆಗ್ತದ. ನೀ ಗಂಡನ ಮನೀಗೆ ಹೋಗೂದs ಛೊಲೋ, ಹಟಾ, ಜಗಳಾ ಏನ ಮಾಡೂದು ಅವನ ಜೋಡಿನs ಮಾಡು, ಇಲ್ಲಿದ್ದು ಮಾಡಬ್ಯಾಡಾ."

ಅವ್ವ ಅಂದಂತೆ ತಾನು ಇದುವರೆಗೆ ತನ್ನ ಹಟಾ ಮುಂದುವರಿಸುತ್ತಲೇ ಬಂದಿದ್ದಳು. ಗಂಡನ ಉಪಚಾರಕ್ಕೆ ಪ್ರೀತಿಯ ಮಾತಿಗೆ ಆಗಾಗ ಮನಸ್ಸಿನಲ್ಲಿ ಮಾರ್ದವತೆ ಮೂಡುತ್ತಿದ್ದರೂ ಅದನ್ನೂ ಹಿಂದೆ ಒತ್ತುತ್ತಿದ್ದಳು. ಆದರೆ ಈಗೀಗ ಆ ಮಾರ್ದವತೆ ಹಿಂದೆ ಉಳಿಯದೆ ಎದ್ದೆದ್ದು ಪುಟಿದು ಬರುವಂತೆ ತೋರುತ್ತಿದೆ. ತನ್ನ ಮನಸ್ಸು ಮೆತ್ತಗಾಗುತ್ತ ನಡೆದಂತೆ ಮನೋಹರ ಹೆಚ್ಚೆಚ್ಚು ನಿರ್ಲಿಪ್ತನಾಗುತ್ತ ನಡೆದಿದ್ದಾನೆ. ಅವನು ತನ್ನ ಆಸೆಯನ್ನು ಬಿಟ್ಟಂತೆ ಕಾಣುತ್ತದೆ. ಏನಾದರೂ ಓದುವದು, ಮಗನನ್ನು ಆಡಿಸುವುದು, ಆಫೀಸು. ಮತ್ತೆ ಮನೆ, ಊಟ, ನಿದ್ದೆ ಹೀಗೆ ದಿನ ಕಳೆಯುತ್ತಿದ್ದಾನೆ. ಭಾನುವಾರ ಒಮ್ಮೊಮ್ಮೆ ಸಿನಿಮಾಕ್ಕೆ, ಗೆಳೆಯರ ಮನೆಗಳಿಗೆ ಕರೆದೊಯ್ಯುತ್ತಾನೆ. ಎಲ್ಲೂ ಯಾರ ಇದಿರೂ ನಮ್ಮ ಸಂಸಾರದ ಬಿರುಕು ಹೊರಬಿದ್ದಿಲ್ಲ. ನನಗೆ ಅಷ್ಟೇ ಸಮಾಧಾನ. ಸಮಾಧಾನವೆಂದರೂ ನಿಶ್ಚಿಂತಿಯಾಗಿಲ್ಲ. ಅವನ ಜೊತೆ ಒಂಟಿಯಾಗಿ ಹೆಚ್ಚು ಹೊತ್ತು ಕಳೆಯಲು ಹೆದರಿಕೆ ನನಗೆ. ಸಿನಿಮಾ, ಕಥೆ ಕಾದಂಬರಿಗಳಲ್ಲಿಯ ಪ್ರಣಯ ಸನ್ನಿವೇಶಗಳು ಮನಸ್ಸಿನ ಶಾಂತಿಯನ್ನೂ ಕೆಡಿಸುತ್ತಿವೆ. ನನ್ನ ಬಗ್ಗೆ ನನಗೇ ನಂಬಿಕೆಯಿಲ್ಲದಂತಾಗಿದೆ. ಸಿನೆಮಾದಲ್ಲಿ ಕುಳಿತಾಗ, ರಿಕ್ಷಾದಲ್ಲಿ ಬರುವಾಗ ಅವನ ಮೈ ತಾಕದಂತೆ ಎಚ್ಚರಿಕೆಯಿಂದ ಕುಳಿತಿರುತ್ತೇನೆ. ಆದರೂ ಮಗುವನ್ನು ಕೊಡುವಾಗ, ತೆಗೆದುಕೊಳ್ಳುವಾಗ, ಮನೆಯ ಕೆಲಸದಲ್ಲಿದ್ದಾಗ, ತಿಳಿದೋ ತಿಳಿಯದೆಯೋ ಅವನನ್ನು ತಾಕಿದಾಗ ರೋಮಾಂಚನಗೊಳ್ಳುತ್ತೇನೆ. ಆಗ ಅವನ ಮುಖ ನೋಡುವ ಧೈರ್ಯವೂ ಇರುವುದಿಲ್ಲ. ಸರಸರ ಅಲ್ಲಿಂದ ಹೋಗಿ ಬಿಡುತ್ತೇನೆ. ಅವನು ಹೊರಗೆ ಹೋದಾಗ ಅವನ ಕೋಣೆಗೆ ಹೋಗಿ ಹಾಸಿಗೆ ಸರಿ ಮಾಡಲು ಹೋದರೆ ತನಗೇ ತಿಳಿಯದಂತೆ ಕೈ ಮೃದುವಾಗಿ ಹಾಸಿಗೆ ಮೇಲಾಡುತ್ತದೆ. ಅವನ ಕ್ರಾಪಿನ ಪರಿಮಳ ಸೂಸುವ ದಿಂಬನ್ನು ಮೂಸುತ್ತೇನೆ. ಹಾಗೆಯೇ ದಿಂಬು ಅವಚಿ ಮಲಗಿಬಿಟ್ಟಿರುತ್ತೇನೆ.

ಮೊನ್ನೆಯಂತೂ ಅವನ ಶರ್ಟು ಅಗಸನಿಗೆ ಹಾಕಲು ತೆಗೆದುಕೊಂಡವಳು ಅದನ್ನೇ ಮೂಸುತ್ತಾ, ಸವರುತ್ತಾ ನಿಂತುಬಿಟ್ಟಿದ್ದೆ. ಮನೋಹರ ತಟ್ಟನೆ ಒಳಗೆ ಬಂದ. ನನಗೆ ತುಂಬಾ ನಾಚಿಕೆಯಾಗಿ, ಕೆಂಪಾಗಿ ಉಸಿರು ಬಿಡುತ್ತಾ ಹೊರಗೆ ಓಡಿ ಬಂದು ಬಿಟ್ಟಿದ್ದೆ. ಇತ್ತೀಚೆಗೆ ಸರಿಯಾಗಿ ನಿದ್ದೆಯೂ ಬರುವುದಿಲ್ಲ. ಹಾಸಿಗೆಯಲ್ಲಿ ಹೊರಳಾಡುತ್ತಾ ಇದ್ದಾಗ "ಯಾಕ ನಿದ್ದಿ ಬಂದಿಲ್ಲೇನು?" ಎಂದು ಅವನು ಕೇಳಿದಾಗ ಹಟದಿಂದ, ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು

"ಬಂದದ" ಎನ್ನುತ್ತೇನೆ. ನಿದ್ದೆ ಬಾರದಾಗ ನಮ್ಮ ಪ್ರಥಮ ರಾತ್ರಿ ನೆನಪು ಮಾಡಿಕೊಳ್ಳುವ ಉಪಾಯವನ್ನು ನನ್ನ ವಿಚಿತ್ರ ಮನಸ್ಸು ಈಗ ಕಂಡುಕೊಂಡಿದೆ. ಅವನು ಅಪ್ಪಿದ್ದು, ತಾನು ನಾಚಿದ್ದು, ಬೆವರಿದ್ದು ಎಲ್ಲಾ ನೆನಪು ಮಾಡಿಕೊಳ್ಳುತ್ತಿರುವಾಗಲೇ ನಿದ್ದೆ ಹತ್ತಿಬಿಟ್ಟಿರುತ್ತಿತ್ತು. ಆದರೆ ಈಗೀಗ ಆ ಉಪಾಯದಿಂದ ಹೆಚ್ಚು ಕಾತುರಗೊಳ್ಳುತ್ತಿದ್ದೇನೆ. ಆ ಅಪ್ಪುಗೆ, ಚುಂಬನ ಬೇಕೆಬೇಕು ಎಂದು ಮೈ ಮುಲಮುಲುಗುಟ್ಟುತ್ತದೆ. ದಿನವೂ ರಾತ್ರಿ ಜಾಗರಣೆಯೇ ಆಗುತ್ತಾ ನಡೆದಿದೆ. ಒಂದೊಂದು ಸಲ ಕಣ್ಣು ಬಿಟ್ಟುಕೊಂಡು ಅವನ ಕೋಣೆಯತ್ತ ನೋಡುತ್ತಿದ್ದಾಗ ಅವನು ಎದ್ದು ಬಂದು ಮಂಚದ ಮೇಲೆ ಕುಳಿತ ಹಾಗೆ ಅನ್ನಿಸಿ, ಅವನನ್ನು ದೂರಸರಿಸಲೋ ಅಪ್ಪಿಕೊಳ್ಳಲೋ ಕೈ ಚಾಚಿದಾಗ ಅಲ್ಲಿ ಯಾರೂ ಇರುವುದಿಲ್ಲ. ಎಲ್ಲ ನನ್ನ ಭ್ರಮೆ.

ದಿನದಿನಕ್ಕೆ ಹುಚ್ಚಿಯಂತಾಗಿದ್ದೇನೆ. ನನ್ನ ಬುದ್ಧಿ ನನ್ನ ಸ್ವಾಧೀನದಲ್ಲುಳಿಯದಂತಾಗಿದೆ. ಮನಸ್ಸು ತೀರಾ ಹೀನಸ್ಥಿತಿಗಿಳಿಯುತ್ತಿದೆ. ಕೆಲವು ದಿನಗಳಿಂದ ರವಿಯನ್ನು ನೋಡಲು ದಿನವೂ ಡಾ. ಪ್ರಕಾಶ ಬರುತ್ತಿದ್ದರು. ಹೆಚ್ಚಾಗಿ ರವಿಯ ಹತ್ತಿರ ತಾನೇ ಇರುತ್ತಿದ್ದವಳು. ಅವರು ಅವನನ್ನು ಪರೀಕ್ಷಿಸುತ್ತಿದ್ದಾಗ ಅವರ ಮಿರಿಮಿರಿ ಮಿಂಚುವ ಸುಗಂಧಿತ ಕ್ರಾಪು, ಸುಪುಷ್ಟ ದೇಹ ನನ್ನನ್ನು ಸೆಳೆಯುತ್ತಿತ್ತು. ಅವರು ಹತ್ತಿರ ಬಂದು ಬಗ್ಗಿ ರವಿಯ ಎದೆಯ ಮೇಲೆ ಸ್ಟೆತೋ ಆಡಿಸುತ್ತಿದ್ದಾಗಂತೂ ಆ ಸಾಮೀಪ್ಯದಿಂದ ರೋಮಾಂಚಿತಳಾಗಿದ್ದ ತಾನು ಉಸಿರು ಬಿಗಿ ಹಿಡಿದು ಕುಳಿತಿರುತ್ತಿದ್ದೆ. ಎರಡು ಮೂರು ದಿನಗಳಲ್ಲೇ ಆ ನೋಟದಿಂದ, ಆಟದಿಂದ ನಾನು ಸೋತು ಹೋಗಿದ್ದೆ. ಹತ್ತಿರ ರವಿ, ಮನೋಹರ ಇಲ್ಲದಿದ್ದರೆ ಏನು ಮಾಡುತ್ತಿದ್ದೆನೋ ತಿಳಿಯದಾಗಿತ್ತು. ನನ್ನ ಮನಸ್ಸಿನಲ್ಲಿ ಹೀಗೆ ಹೊಯ್ದಾಟ, ತಿಕ್ಕಾಟ , ಹೋರಾಟ ನಡೆಸಿದಾಗ ಅವರು ಏಕೆ ಮತ್ತು ಹೇಗೆ ನಾಗಿಯನ್ನು ಅಪ್ಪಿದರೆನ್ನುವುದು ಅರ್ಥವಾಗುತ್ತಿದೆ ನನಗೆ. ಅದಕ್ಕೆ ಕಲ್ಪಿತ ವೈರಿಯ ಜೊತೆ ಯುದ್ಧ ಮಾಡುವುದನ್ನು ಬಿಟ್ಟು ಸೋಲು ಒಪ್ಪಿಕೊಳ್ಳಬೇಕೆಂದಿದ್ದೇನೆ. ಕೇವಲ ಅವರ ಬೆರಳಿನ ಸ್ಪರ್ಶದಿಂದಲೇ ಓಡಿಹೋದ ತಲೆನೋವಿನಂತೆ ಅವರ ಸಂಗದಲ್ಲಿ ನನ್ನ ಮೈ ನೋವು, ಮನದ ನೋವು ಮಾಯವಾಗಲಾರದೆ ? ಅದೇಕೆ ಮಾಯವಾಗುವುದಿಲ್ಲ? ಅವ್ವ ಹೇಳಿದಂತೆ ನಾನೂ ಅದೇ ಮಣ್ಣಿನಿಂದ ಮಾಡಲ್ಪಟ್ಟಿದ್ದೇನೆ.

ಸುಶೀ ಹಾಸಿಗೆಯಿಂದ ಎದ್ದು ನಿರಾತಂಕವಾಗಿ ನಿದ್ದೆ ಮಾಡುತ್ತಿದ್ದ ರವಿಗೆ ಸರಿಯಾಗಿ ಹೊದಿಸಿ, ಗಂಡನ ಕೋಣೆಯ ಹತ್ತಿರ ಹೋದಳು. ಬಾಗಿಲು ತೆರೆದೇ ಇತ್ತು.

***

■■

# ಡಾಲಿ

ಹೊರಗಿನ ಬಿಸಿಲಿನ ಪ್ರಖರತೆಯಿಂದಾಗಿ ಅಂಗಡಿಯ ಮೆಟ್ಟಿಲೇರಿ ಒಳಗೆ ಹೆಜ್ಜೆಯಿಟ್ಟೊಡನೆಯೆ ಸುಜಾತಾಳಿಗೆ ಏನೂ ಕಾಣದೆ ಕಣ್ಣು ಕತ್ತಲಿಟ್ಟಿತ್ತು. ಒಂದು ಕ್ಷಣ ಸುಮ್ಮನೆ ನಿಂತು ಕಣ್ಣ ಮೇಲೆ ಕೈಯಾಡಿಸಿಕೊಂಡಳು. ಹಾಲಿನಲ್ಲಿಯ ನಿಯಾನ್ ದೀಪಗಳು ಝುಗಝುಗಿಸಿದವು. ಅವುಗಳ ಪ್ರಕಾಶದಲ್ಲಿ ಕಾಜಿನ ಕಪಾಟುಗಳೂ, ನಿಲುವುಗನ್ನಡಿಗಳೂ, ಬಣ್ಣ ಬಣ್ಣದ ಅರಿವೆಯ ಥಾನುಗಳೂ, ಮಾಯಾಲೋಕದಿಂದ ಪ್ರತ್ಯಕ್ಷವಾದಂತೆ ಕಂಡವು. ಇಳಿಬಿಟ್ಟ ಸೀರೆಗಳಲ್ಲಿ ಅಪ್ಸರೆಯರು ಅಂತರಿಕ್ಷದಲ್ಲಿ ತೇಲಾಡುತ್ತಿದ್ದಂತೆ ತೋರಿದರು. ಅವಳ ಕಣ್ಣುಗಳು ಹಾಲಿನ ಪ್ರದಕ್ಷಿಣೆ ಹಾಕಿ ಕೌಂಟರಿನ ಬಳಿ ಬಂದಾಗ ಥಟ್ಟನೆ ನಿಂತವು. ಗಾಬರಿಯಿಂದ ಮುಂಗೈ ನೋಡಿಕೊಂಡಳು. ಹೌದು, ಇವತ್ತೂ ಮತ್ತೆ ಹತ್ತು ನಿಮಿಷ ಲೇಟಾಗಿತ್ತು. ಹೀಗಾಗುತ್ತಿರುವುದು ಇದು ಮೂರನೆಯ ಸಲವೆಂಬುದನ್ನು ಮಾಲೀಕನ ದೃಷ್ಟಿ ತನಗೆ ಸೂಚನೆ ಕೊಡುವಂತಿತ್ತು.

ಅಂಗಡಿಗೆ ಬರುವಾಗ ಮೂರು ಸಲ ತಡವಾಗಿ ಬಂದರೆ ಆ ತಿಂಗಳ ಸಂಬಳದಲ್ಲಿ ಐದು ರೂಪಾಯಿ ಖೋತಾ ಎನ್ನುವುದನ್ನು ಅನಿತಾ ಮೊದಲೇ ತಿಳಿಸಿದ್ದರಿಂದಲೇ ಸುಜಾತಾ ಗಾಬರಿಯಾದದ್ದು. ಬರುವ ನೂರೈವತ್ತರಲ್ಲಿ ಐದು ರೂಪಾಯಿ ಕಡಿಮೆಯಾಗುವುದು ಅವಳ ಮಟ್ಟಿಗೆ ಸಂತೋಷದ ಮಾತೇನಲ್ಲ. ಅನಿತಾಳ ಮಾತು ಬೇರೆ. ಅವಳ ತಂದೆ ಅಣ್ಣ ಸಂಪಾದಿಸುವವರಿದ್ದೂ ಕೇವಲ ತನ್ನ ಷೋಕೀಗಾಗಿ ಪಾಕೆಟ್ ಮನಿಗಾಗಿ ಬಟ್ಟೆಅಂಗಡಿಯಲ್ಲಿ ಸೇಲ್ಸ್ ಗರ್ಲ್ ಆಗಿರುವ ಸಿಂಧಿ ಹುಡುಗಿಯವಳು. ನೋಡುವವರ ಕಣ್ಣಿಗೆ ಎದ್ದು ಕಾಣುವಂತೆ ಆಕರ್ಷಕ ಉಡುಪು ಧರಿಸಿ, ಗಿರಾಕಿಗಳೊಡನೆ ಸಲಿಗೆಯಿಂದ ಚಾಲಾಕಿನಿಂದ ಮಾತನಾಡಿ, ಹೆಚ್ಚು ವ್ಯಾಪಾರ ಗಿಟ್ಟಿಸುತ್ತ ತನ್ನ ವೃತ್ತಿಯಲ್ಲಿ ಪಳಗಿದ್ದಳು ಅನಿತಾ. ಮಾಲಿಕನೊಡನೆಯೂ ಕುಲುಕುಲು ನಗುತ್ತ, ಮೈ ಕುಲುಕಿಸುತ್ತ ಮಾತನಾಡುವ ಅನಿತಾಳನ್ನು ಕಂಡರೆ ಸುಜಾತಾಳಿಗೆ ಅಷ್ಟಕಷ್ಟೇ. ಅದೇಕೆ, ಒಂದು ಬಗೆಯ ತಿರಸ್ಕಾರವೂ ಮೂಡಿತ್ತು. ಆದರೆ ಅಂಗಡಿ ಕೆಲಸಕ್ಕೆ ಹಾಜರಾದ ದಿನವೇ ಮಾಲೀಕ ಹೇಳಿಬಿಟ್ಟಿದ್ದ.

"ಅನಿತಾ ನಮ್ಮ ಅಂಗಡೀಗೆ ಬಂದು ಬಹಾಳ ದಿವಸಾತು. ಆಕೀ ಹಾಂಗ ಕೆಲಸಾ ಮಾಡೂದು ನೀನೂ ಕಲೀಬೇಕು. ಗಿರಾಕಿಗಳನ್ನು ಚಂದಾಗಿ ಮಾತಾಡಿಸಿ ಚುರುಕಾಗಿ ವ್ಯಾಪಾರ ಮಾಡಬೇಕು. ಒಂದಕ್ಕೆ ಎರಡು ಮಾತು ಖರ್ಚು ಮಾಡಬೇಕು. ಅಂದರ ನಮಗ ಲಾಭ ಆಗ್ತದ. ನೀನೂ ಛೋಲೋ ಕೆಲಸಾ ಮಾಡಿದರ ಮೂರು ತಿಂಗಳಿಗೊಮ್ಮೆ ೧೦ ರೂ. ಪಗಾರಾ ಏರಸ್ತೀನಿ' ಎಂದು.

ಅಂದ ಮೇಲೆ ಅನಿತಾಳ ಮೊರೆ ಹೋಗಲೇಬೇಕು ಎನಿಸಿತು ಸುಜಾತಾಳಿಗೆ. ಕೂಡಿ ಕೆಲಸ ಮಾಡುವ ಹೆಣ್ಣುಮಕ್ಕಳೆಂದರೆ ತಾವಿಬ್ಬರೇ. ಏನು ತಿಳಿಯಬೇಕಾದರೂ ಅವಳನ್ನೇ ಕೇಳಬೇಕು. ಮೊದಲು ಅನಿತಾ ಸೋಗು ಮಾಡುವ ಬಣ್ಣದ ಗೊಂಬೆ ಎಂದುಕೊಂಡಿದ್ದಳು ತಾನು. ಆದರೆ ಅವಳ ಸ್ವಭಾವ ತಿಳಿಯುತ್ತ ಹೋದಂತೆ ತನ್ನ ಬಗ್ಗೆ ಅವಳಿಗಿದ್ದ ಪ್ರೀತಿ ಅನುಕಂಪ ಹೆಚ್ಚುತ್ತ ಹೋದ ಹಾಗೆ ಇಬ್ಬರ ನಡುವೆ ಆತ್ಮೀಯತೆ ಬೆಳೆದಿತ್ತು. ಸಮೀಪದ ಒಡನಾಟದಿಂದಲೇ ಮನುಷ್ಯ ಸ್ವಭಾವ ತಿಳಿಯುವುದು ಸಾಧ್ಯವೇ ಹೊರತು ಬಾಹ್ಯ ರೂಪದಿಂದಲ್ಲ ಎನ್ನುವ ಸತ್ಯ ತನಗೆ ಈಗ ತಿಳಿದಿದೆ. ಮಲತಂಗಿಯರಲ್ಲಿ ಪ್ರೀತಿಯ ಗಂಧ ಕಾಣದ ತನಗೆ ಬಹುಶಃ ಹಾಗೆ ಅವರು ತನ್ನನ್ನು ದ್ವೇಷಿಸುವುದಕ್ಕೆ ಚಿಕ್ಕಮ್ಮನೇ ಕಾರಣವಿರಬಹುದು. ಅನಿತಾ ಅಕ್ಕನಂತೆ ಕಂಡಿದ್ದಳು....

ತಡವರಿಸುತ್ತಾ ಬೇಗ ಬೇಗ ಒಳಗಿನ ಕೋಣೆಗೆ ಹೋಗಿ ತನ್ನ ಕೊಡೆ, ಪರ್ಸು ಎಲ್ಲ ಒಂದೆಡೆ ಇಟ್ಟು, ಮುಖ ತೊಳೆದು, ಪೌಡರ ಲೇಪಿಸಿ ತುಟಿಗಳಿಗೆ ಕಂಡೂ ಕಾಣದಂತೆ ರಂಗು ಬಳಿದು - ಇದೆಲ್ಲ ಅನಿತಾನೆ ಕಲಿಸಿದ್ದು, ಬಿಸಿಲಿನಿಂದ ಬರಲಿ, ಮಳೆಯಲ್ಲಿ ತೋಯಿಸಿಕೊಂಡಿರಲಿ, ಮನೆಯಿಂದ ಅಂಗಡಿಗೆ ಬಂದ ಮೇಲೆ ಮತ್ತೊಮ್ಮೆ

ಸಿಂಗಾರವಾಗಲೇಬೇಕು. ಅಲ್ಲಿಯೇ ಕಪಾಟಿನಲ್ಲಿ ಮಡಿಸಿಟ್ಟ ನಾಜೂಕಿನ ಸೀರೆಯೊಂದನ್ನು ತೆಗೆದು ಅದನ್ನು ಸಂಬಳದಲ್ಲಿ ಹತ್ತು ರೂಪಾಯಿಯಂತೆ ಪ್ರತಿ ತಿಂಗಳೂ ಕೊಡುವ ಕರಾರಿನ ಮೇಲೆ ಅನಿತಾನೇ ಕೊಡಿಸಿದ್ದಳು. ನಿರಿಗೆ ಹಿಡಿದು ನೀಟಾಗಿ ಉಟ್ಟು ಪಿನ್ನು ಚುಚ್ಚಿ ಭುಜದ ಮೇಲಿನ ಸೆರಗು ಹಾಗೆಯೇ ಇಳಿಬಿಟ್ಟು ಮತ್ತೆ ಮತ್ತೆ ಕನ್ನಡಿ ನೋಡಿಕೊಂಡು ಹೊರಬಂದಾಗ -

ಮಾಲೀಕ ಫೋನಿನಲ್ಲಿ ಮಾತನಾಡುತ್ತಿದ್ದುದರಿಂದ ಅವನ ಮುಖಭಾವ ಸರಿಯಾಗಿ ಕಾಣದೆ ಕಳವಳಪಟ್ಟು ಅನಿತಾಳ ಬಳಿ ಹೋದಳು.

"ಸುಜೀ ಬಸ್ಸು ಸಿಗಲಿಲ್ಲೇನು?" ಅನಿತಾ ಅರಿವೆಯ ಥಾನು ಕಪಾಟಿನಿಂದ ಎತ್ತಿಕೊಳ್ಳುತ್ತ ಪಿಸುಗುಟ್ಟಿದಳು.

"ಬಸ್ಸಿನ್ಯಾಗs ಬಂದೆ. ಆದರೂ ತಡಾ ಆತು ನೋಡು" ಸುಜಾತಾಳ ಗಾಬರಿಯ ದನಿಯಿಂದ ಅವಳ ಸಂಕಟವನ್ನು ಅರ್ಥ ಮಾಡಿಕೊಂಡ ಅನಿತಾ ಅವಳ ಕೈ ಅದುಮಿ ಹೇಳಿದಳು. "Don't worry. Be cheerful" ನಗನಗ್ತಾ ಮಾತಾಡಿ ಚೆನ್ನಾಗಿ ವ್ಯಾಪಾರ ಮಾಡು. ಮಾಲು ಖರ್ಚಾದರೆ ಸಾಕು ಮಾಲೀಕ ಖುಷಿಯಾಗ್ತಾನೆ."

ನಗಬೇಕು, ಹೌದು! ಒಳಗೊಳಗೇ ಜೀವ ತಳಮಳಿಸ್ತಾ ಇದ್ದರೂ ಹೊರಗೆ ನಗುವಿನ ಮುಖವಾಡ ಹಾಕಬೇಕು. ಹೀಗೆ ಜೋಲು ಮೋರೆ ಹಾಕಿಕೊಂಡು ನಿಂತಿದ್ದರೆ ತನ್ನನ್ನು ಯಾರು ನೋಡ್ತಾರೆ? ಮಾತಾಡಿಸ್ತಾರೆ? ಛೇ ಛೇ ಹೀಗಲ್ಲ ನಗುವನ್ನು ಕಣ್ಣುಗಳಲ್ಲಿ ತುಟಿಗಳಲ್ಲಿ ತುಂಬಿಕೊಂಡು ಉತ್ಸಾಹದಿಂದ ತಾನೇ ಅಂಗಡಿಗೆ ಬಂದವರನ್ನು "ಬರ್ರಿ ಒಳಗ ಬರ್ರಿ" ಎಂದು ಆದರಿಸಬೇಕು. "ತಮಗೆ ಏನು ಬೇಕು ?" ಅಂತ ವಿಚಾರಿಸಬೇಕು.

"ಅಂಗಿಯ ಅರಿವೆ? ಲಂಗದ ಬಟ್ಟೆ? ಬ್ಲೌಜಪೀಸ್, ಚೋಲಿ ಪೀಸ್, ಕೊನೆಗೆ ಕಟ್‌ಪೀಸ್ ? ಸೀರೆಗಳಲ್ಲಿ ಯಾವುದು ಕೊಡಲಿ ? ಹ್ಯಾಂಡಲೂಮ್ ಸೀರೇನಾ? ಫುಲ್‌ವಾಯಿಲ್, ಹಾಫ್‌ವಾಯಿಲ್, ಬಾಂಬೆ ಡಾಯಿಂಗ್? ಅಥವಾ ಗಾರ್ಡನ್ ವಾಯಿಲ್? ವೂಲಿ. ಚಿನಾನ್ ಯಾವದು ಬೇಕು ? ಬೇಕಾದಷ್ಟು ಡಿಝಾಯಿನ್ಸ್, ಕಲರ್ಸ ಎಲ್ಲಾ ತರದ್ದೂ ಸಿಗ್ತದ. ನಿಮಗ ಬೇಕಾದ್ದು ಆರಿಸಿಕೊಳ್ಳಿ. ಹಳೇ ತರದ್ದು ಬೇಕಾದರೆ ಇಳಕಲ್, ಶಾಪೂರ ಸೀರೇನೂ ಅವ. ಕಾಂಜೀವರಂ, ಧರ್ಮಾವರಂ, ಮೊಳಕಾಲ್ಮುರು ಸೀರೆ ಭಾಳ ಚೆನ್ನಾಗಿರ್ತಾವ. ರೊಕ್ಕ ಹೆಚ್ಚಾದರೂ ಅಡ್ಡಿಯಿಲ್ಲ ಬಾಳಿಕಿ ತಾಳಿಕಿ ಬರ್ತಾವ. ಹತ್ತು ವರ್ಷ ಒಗದ ಉಟ್ಟರೂ ಬಣ್ಣಾ ಕಡಿಮಿ ಆಗೂದಿಲ್ಲ. ಹರಿಯೂದಿಲ್ಲ. ನಮ್ಮ ಅಂಗಡಿ ಮಾಲು ಅಂತಿಂಥಾದ್ದಲ್ಲ, ಬಹಳ ಖಾತ್ರೀದು. ಒಮ್ಮೆ ತೊಗೊಂಡು ನೋಡಿದರೆ ನಿಮಗೂ ಗೊತ್ತಾಗ್ತದ ಕಲರ್ ಹೋದರ ವಾಪಸ್ ತೊಗೊಂಡು ಬರ್ರಿ..."

ಹೀಗೇ ನಾನಾ ತರದ ಮಾತುಗಳನ್ನು ಖರ್ಚು ಮಾಡಿದಾಗ ಎಲ್ಲವನ್ನೂ ನೋಡಿ ರೇಟು ಕೇಳಿ, ಬಿಚ್ಚಿಸಿ ನೋಡಿ "ಅಯ್ಯ ಸೀರೆಗೆ ರೊಕ್ಕ ಭಾಳಾತು" ಎಂದೋ "ನಮಗ ಬೇಕಾದಂಥ ಡಿಝಾಯಿನ್ ಇಲ್ಲಾ " ಅಥವಾ "ನಮ್ಮ ಮನಸ್ಸಿಗೆ ಬರಲಿಲ್ಲಾ" ಎಂದೋ ಏನೂ ಕೊಳ್ಳದೇ ಹೋದವರು ಎಷ್ಟೋ ಜನ. ಚಿಕ್ಕವರು, ದೊಡ್ಡವರು, ಹಳ್ಳಿಯ ಹೆಂಗಸರು, ಕಾಲೇಜು ತರುಣಿಯರು, ಮುದುಕರು, ಗೃಹಸ್ಥರು ಬಂದು ಹೋಗುವವರು ಅಸಂಖ್ಯಾತರು, ಇನ್ನು ಯುವಕರು ವ್ಯಾಪಾರ ಮಾಡಲಿ ಅಥವಾ ಬಿಡಲಿ ಯಾವದೋ ವಸ್ತು ಪ್ರದರ್ಶನದಲ್ಲಿ ಹೊಕ್ಕಂತೆ ಹಾಲಿನ ತುಂಬ ತಿರುಗಾಡಿ,. ಬಾಗಿಲ ಹತ್ತಿರ ಕಣ್ಣು ಕುಕ್ಕುವ ಸೀರೆಗಳನ್ನುಟ್ಟು ಎದೆಯೇರಿಸಿ ನಿಂತ ಬಣ್ಣದ ಬೊಂಬೆಗಳನ್ನು, ಅಂಗಡಿಯ ಒಳಗೆ ನಿಂತ ಎರಡು ಸಜೀವ ಬೊಂಬೆಗಳ ಚೆಲುವನನ್ನೂ, ದೇಹದ ಉಬ್ಬು-ತಗ್ಗುಗಳನ್ನೂ ಕಣ್‌ದಣಿಯೆ ನೋಡಿ, ಸುಮ್ಮ ಸುಮ್ಮನೆ ಅದರ ಬೆಲೆ ಅದರ ಕ್ವಾಲಿಟಿ ವಿಚಾರಿಸಿದಂತೆ ಮಾಡಿ ನಿಲುವುಗನ್ನಡಿಯಲ್ಲಿ ತಮ್ಮ ಪ್ರತಿರೂಪಗಳನ್ನು ನೋಡಿಕೊಳ್ಳುತ್ತ, ಭುಜ ಹಾರಿಸುತ್ತ ಕ್ರಾಪ್ ತಿದ್ದಿಕೊಳ್ಳುತ್ತ ಹೊರಗೆ ಹೊರಟುಬಿಡುವವರೇ ಬಹಳಷ್ಟು ಜನ.

ಗಿರಾಕಿಗಳಲ್ಲಿ ಹೆಚ್ಚಿನವರು ಕೌಂಟರಿನತ್ತ ಹೋಗದೆ ಹೊರಗೇ ಹೊರಟಾಗ ಮಾಲೀಕನ ಮುಖ ಕೆಂಪಾಗುವುದು. ಕುಳಿತ ಕುರ್ಚಿಯಲ್ಲಿಯೇ ಅತ್ತಿತ್ತ ಮಿಸುಗಾಡುವನು ಗೊಣಗುಟ್ಟುವನು. ಥಾನುಗಳನ್ನೆಲ್ಲ ಸುತ್ತಿ ಮಡಿಸಿ ಮತ್ತೆ ಕಪಾಟಿನಲ್ಲಿಟ್ಟು ಸೀರೆಗಳ ಮಡಿಕೆ ಹಾಕಿ ಒಂದರ ಮೇಲೊಂದು ಪೇರಿಸಿ ಅವುಗಳ ಜಾಗಕ್ಕೆ ಮುಟ್ಟಿಸುವಾಗ ಮತ್ತೆ ಮಗದೊಬ್ಬ ಗಿರಾಕಿ ಹಾಜರು. ಇಷ್ಟು ಹೊತ್ತಿನ ವ್ಯಾಯಾಮದಿಂದ ಮೈ ಕೈ ನೋವಾಗಿ ನಿಂತು ನಿಂತು ಕಾಲು ಸೋಲುತ್ತಿರುವಾಗಲೂ ಶರೀರದ ಆಯಾಸವನ್ನೇನೂ ತೋರಿಸಿಕೊಳ್ಳದೆ ತುಟಿಗಳಿಗೆ ಅಂಟಿಸಿಕೊಂಡ ನಗುವನ್ನು ಬಿಚ್ಚುತ್ತಾ ಮತ್ತೆ .....

"ಓ ಬರ್ರಿ, ಏನು ಬೇಕು ನಿಮಗೆ?" ಎನ್ನುವ ನಾಟಕ ಪ್ರಾರಂಭ.

ತಾನು ಅಂಗಡಿಗೆ ಬಂದು ಎರಡು ತಾಸು ಕಳೆದರೂ ಏನೂ ವ್ಯಾಪಾರವಾಗದಿದ್ದುದಕ್ಕೆ ಸುಜಾತ ಭಯದಿಂದಿದ್ದಳು. ಬಹಳ ಮಾತನಾಡಿದ್ದರಿಂದ ಗಾಬರಿಯಿಂದ ಗಂಟಲು ಒಣಗುತ್ತಿತ್ತು. ವಿದ್ಯುಚ್ಛಕ್ತಿಯ ಅಭಾವದಿಂದ ಫ್ಯಾನು ಯಾವತ್ತೂ ತಿರುಗಿಸುವಂತಿರಲಿಲ್ಲ. ಮೈ ಬೆವರುತ್ತಿತ್ತು. ಶೂನ್ಯ ದೃಷ್ಟಿಯಿಂದ ಅಂಗಡಿಯ ಮೆಟ್ಟಿಲುಗಳನ್ನೇ ದಿಟ್ಟಿಸುತ್ತಿದ್ದಳು. ಅನಿತಾ ಅವಳ ಭುಜ ಒತ್ತಿ ಒಳಗಿನ ಕೋಣೆಗೆ ಬರಲು ಸನ್ನೆ ಮಾಡಿದಾಗ ಅವಳನ್ನು ಹಿಂಬಾಲಿಸಿದಳು. ಚಹದ ಕಪ್ಪನ್ನೆತ್ತಿ ಕೊಡುತ್ತ ಅನಿತಾ ಕೇಳಿದಳು.

"ನಿನ್ನೆ ಸಿನಿಮಾಕ್ಕ ಹೋಗಿದ್ದೇನು ?" ಸುಜಾತಾ ಇಲ್ಲವೆಂದು ತಲೆ ಆಡಿಸಿದಳು.

"ಯಾಕ ಹೋಗಲಿಲ್ಲ, ಎಷ್ಟ ಛಂದ ಅದ ಅಂತ ನಾ ಹೇಳಿದ್ದಿಲ್ಲಾ ?"

"ಚಿಕ್ಕಮ್ಮ ಒಪ್ಪಲಿಲ್ಲ. ಇಲ್ಲದ ಚೈನೀ ಕಲೀ ಬ್ಯಾಡಾ ಅಂದ್ಲು"

"ನನ್ನ ರೊಕ್ಕದಾಗ ಹೋಗ್ತೀನಿ ಅಂತ ನೀ ಹೇಳಬೇಕು"

"ನಾ ಹೇಳಿದೆ. ಆದರ ನಾ ದುಡದದ್ದು ನನ್ನ ಹೊಟ್ಟೆಗೇ ಸಾಲೂದಿಲ್ಲಂತ."

"ನೀನು ಪಗಾರ ಎಲ್ಲಾ ಒಯ್ದು ಆಕೀ ಕೈಯಾಗ ಕೊಡತೀಯಲ್ಲಾ"

"ಹೌದು, ಬಸ್ಸಿಗೆ ಚಹಾಕ್ಕ ಸೀರಿ ಕಂತಿನ ರೊಕ್ಕಾ ಬಿಟ್ಟು ಉಳಿದದ್ದೆಲ್ಲಾ ಕೊಡ್ತೀನಿ."

" ಹೌದ್ಹಾದು, ನನಗೂ ಗೊತ್ತದ. ನಾಲ್ಕು ಸಾರೆ ಬಂದರ ಬಸ್ಸಿನ ಚಾರ್ಜ ಭಾಳ ಆಗ್ತದ ಅಂತ್ಹೇಳಿ ಎರಡ ಸಾರೆ ನಡೆದs ಅಂಗಡೀಗೆ ಬರ್ತೀವಿ."

"ನಾ ಎಷ್ಟು ಕಷ್ಟಪಟ್ಟರೂ ಬೆಲೀನೆ ಇಲ್ಲಾ ಅನಿತಾ. ನಾ ಭಾಳ ದುರ್ದೈವಿ .... ಹುಟ್ಟಿದ ಕೂಡಲೇ ಅವ್ವನ್ನ ಕಳಕೊಂಡೆ, ಹೋದ ವರ್ಷ ಅಪ್ಪನ್ನೂ ಕಳಕೊಂಡೆ. ನನ್ನವರು ಯಾರೂ ಇಲ್ಲ ನನಗ." ಸುಜಾತಾ ಬಿಕ್ಕಿದಳು. ಅನಿತಾ ಸ್ನೇಹದಿಂದ ಅವಳ ಭುಜದ ಸುತ್ತ ಕೈ ಹಾಕಿ ಕನ್ನಡಿಯ ಮುಂದೆ ನಿಲ್ಲಿಸಿ,

"ನೋಡು ಅಲ್ಲೆ, ಯಾರೂ ಇಲ್ಲ ಅಂತ ಯಾಕ ಅಂತೀ?" ಎಂದಾಗ ತಲೆಯೆತ್ತಿದ ಸುಜಾತಾಳ ಕೆನ್ನೆಗೆ ತುಟಿ ಸೋಕಿಸಿ ಕಿಸಕ್ಕನೆ ನಕ್ಕು,

'ನಾಚಬ್ಯಾಡಾ ಹುಚ್ಚೀ, ನಿನ್ನಷ್ಟು ಛಂದ ಇದ್ದರ ನಾನು ಈ ಜಗತ್ತs ಗೆಲ್ಲತಿದ್ದೆ ಗೊತ್ತದೇನು?"

"ಹೋಗs ಹುಚ್ಚರಾಂಗ ಮಾತಾಡಬ್ಯಾಡಾ"

"ಹುಚ್ಚಿ ನಾ ಅಲ್ಲ. ನೀನು Poor fellow. ನೀನು ಎಷ್ಟು ಆಕರ್ಷಕ ಅದೀ. ನಿನ್ನ ಕಣ್ಣಿನ ಹೊಳಪು, ಮುಂಗುರುಳು, ತುಟಿ. ಮೂಗು ಎಲ್ಲಾ ಒಂದಕ್ಕಿಂತ ಒಂದು ಛಂದ ಅದಾವ ನಿನಗ ಅದರ ಮಹತ್ವ ಗೊತ್ತಿಲ್ಲ."

"ಥೂ ನಿನ, ಮತ್ತು ಸುರು ಮಾಡಿದಿ ನಿನ್ನ ಲೆಕ್ಚರು. ನಡೀ ಇನ್ನ. ಹತ್ತು ನಿಮಿಷ ಆಗಿ ಹೋತು. ಹೊರಗ ಹೋಗೂಣು" ಚಹದ ಕಪ್ಪನ್ನು ಮಾಣಿಯ ಕೈಯಲ್ಲಿ ಇಟ್ಟು ನಿರಿಗೆ ಸರಿಮಾಡಿಕೊಂಡಳು ಸುಜಾತಾ.

"ಉಹೂಂ, ಹಾಂಗಲ್ಲ, ನಿಲ್ಲು" ಎಂದು ಮತ್ತೆ ಅವಳ ಕುರುಳು ತಿದ್ದಿ ಸ್ವಲ್ಪ ಪೌಡರ ಸವರಿ, ನೀಳವಾದ ಜಡೆ ಎಳೆದು ಎದೆಯ ಮೇಲಿನಿಂದ ಮುಂದೆ ಹಾಕಿ "ನಡೀ ಇನ್ನ ಎಂದಳು."

ಇಬ್ಬರೂ ತನ್ನ ಸ್ಥಾನಕ್ಕೆ ಬಂದಾಗ ಅನಿತಾ ಏನೋ ಗುಟ್ಟು ಹೇಳುವವಳಂತೆ "ಆ ಡಾಲೀಗೆ ಉಡಿಸಿದಂಥಾ ಭರ್ಜರಿ ಸೀರೆ ನೀನು ಉಟ್ಟುಕೊಂಡರ ಕಾಜಿನ ಕಪಾಟಿನಾಗs ನಿನ್ನ ನಿಲ್ಲಿಸಬೇಕಾಗ್ತದ ನೋಡು" ಎಂದು ಕಿವಿಯಲ್ಲಿ ಪಿಸುಗುಟ್ಟಿದಳು.

"ಹುಶ್" ಎಂದು ಹುಸಿಮುನಿಸು ತೋರಿದ ಸುಜಾತಾ ಅವಳನ್ನು ತಳ್ಳಿ ಇತ್ತ ತಿರುಗಿದಳು. ಯೋಚನೆಗಳ ಸರಮಾಲೆ ಅವಳನ್ನು ಸುತ್ತುವರಿಯ ತೊಡಗಿತು. ಅನಿತಾ ಹೇಳುವಷ್ಟು ನಾನು ಚೆಲುವೆಯಲ್ಲ. ಅವಳು ಇದ್ದುದರಲ್ಲಿಯೇ ಉಪ್ಪು, ಖಾರ ಬೆರೆಸಿ ವರ್ಣಿಸಿ ಹೇಳಿ ತನ್ನನ್ನು ಸಂತೋಷಗೊಳಿಸುತ್ತಾಳೆ. ತನ್ನ ಮರುಳುಗಾಡಿನಂಥ ಜೀವನದಲ್ಲೊಂದು ಓಯೆಸಿಸ್ ಆಕೆ. ಎಷ್ಟು ಉತ್ಸಾಹ, ನಗು ತುಂಬಿ ತುಳುಕುತ್ತದೆ. ಚೇತನದ ಚಿಲುಮೆ ಅವಳು. ಹೀಗಿರುವುದು ಮನೆಯ ಸಂತೃಪ್ತಿಯ ವಾತಾವರಣದಿಂದ ಮಾತ್ರವಲ್ಲ ಅದು ಅವಳ ಗುಣಧರ್ಮವೂ ಹೌದು. ಅವಳ ಈ ಗುಣ ತುಂಬ ಪ್ರಬಲವಾಗಿರೋದರಿಂದ ಅದು ಸುತ್ತಮುತ್ತಲಿನ ಜನರ ಮೇಲೂ ಪರಿಣಾಮ ಬೀರುತ್ತದೆ. ಅವಳ ಹತ್ತಿರ ಬಂದವರಾರೂ ನಗದೇ ಹೋಗುವಂತಿಲ್ಲ. ಹೊಸದಾಗಿ ಮದುವೆಯಾದ ದಂಪತಿಗಳು ತಮ್ಮ ಅಂಗಡಿಗೆ ಬಂದಾಗ ಅವರ ಜೊತೆಗೆ ತೀರ ಪರಿಚಿತಳಂತೆ ಆತ್ಮೀಯವಾಗಿ, ತಮಾಷೆಯಾಗಿ ಮಾತನಾಡಿ ಕೇವಲ ಬ್ಲೌಜ್ ಪೀಸ್ ಕೊಳ್ಳಲು ಬಂದವರನ್ನು ಸೀರೆ, ಬೆಡ್ ಶೀಟ್, ಟಾವೆಲ್ ಕೊಳ್ಳುವಂತೆ ಮಾಡಿದ್ದು ನೋಡಿ ಬೆರಗುಗೊಂಡಿದ್ದಳು. ತಾನು ಮಾಡುವದು ಕೇವಲ ಮಾರುವ ಉದ್ಯೋಗ, ಮಾಲು ಮಾರಾಟವಾಗದಿದ್ದರೂ ತನಗೆ ಸಂಬಳ ಬಂದೇ ಬರುತ್ತದೆ ಎನ್ನುವ ಉದಾಸೀನ ಮನೋಭಾವನೆ ಅವಳಲ್ಲಿಲ್ಲ. ಮಾಲಕನಿಗೆ ಲಾಭ ಮಾಡಿಕೊಡುವದು ತನ್ನ ಕರ್ತವ್ಯ ಎಂದು ತಿಳಿದು ಅದನ್ನು ಚೊಕ್ಕವಾಗಿ ಪಾಲಿಸುತ್ತಾಳೆ. ಸಹೋದ್ಯೋಗಿಗಳೊಡನೆ, ಅಪರಿಚಿತ ಪುರುಷರೊಡನೆ ಮನಸ್ಸು ಬಿಚ್ಚಿ ಮಾತಾಡಿ ಸ್ನೇಹಿತೆಯಂತೆ ನಡೆದುಕೊಳ್ಳುತ್ತಾಳೆ. ಆ ಸ್ನೇಹಕ್ಕೂ ಒಂದು ರೇಖೆ ಇರುತ್ತದೆ. ಅದನ್ನು ದಾಟಿ ಮುಂದೆ ಹೋಗುವುದಿಲ್ಲ ಎನ್ನುವದು ತಿಳಿದಾಗಲೇ ಅನಿತಾಳ ಬಗ್ಗೆ ತನಗ ಪ್ರೀತಿ ಗೌರವ ಹೆಚ್ಚಾಗಿತ್ತು.

ತನ್ನ ಸ್ತ್ರೀತ್ವದ ಗೌರವವನ್ನು ಕಾಯ್ದುಕೊಂಡೂ ಎಲ್ಲರೊಡನೆ ಒಂದು ಮಿತಿಯಲ್ಲಿ ಪ್ರೀತಿಯಿಂದ, ಸಲುಗೆಯಿಂದ ಇರುವದು ಸಾಧ್ಯವಿದೆ ಎನ್ನುವುದಕ್ಕೆ ಅನಿತಾ ತನಗೆ ಮಾದರಿಯಾಗಿ ತೋರಿದ್ದಳು. ಅಂದ ಮೇಲೆ ತಾನೇಕೆ ತನ್ನ ಗಾಂಭೀರ್ಯದ ಕೋಟೆಯನ್ನು ಭೇದಿಸಿ ಹೊರಗೆ ಬಯಲಿಗೆ ಬಂದು ಜೀವನದ ಚೆಲುವನ್ನು ಸಿಹಿಯನ್ನು ಸವಿಯಬಾರದು ? ಮನಸ್ಸು ಮಾಡಿದರೆ ತಾನು ಅನಿತಾಳ ಹಾಗಿರಲು ಸಾಧ್ಯ. ಹಾಗಾದರೆ ಈ ಗಾಬರಿ, ಕಳವಳ ಇಲ್ಲವಾಗಬಹುದು. ಕೊನೆಯ ಪಕ್ಷ ಅಂಗಡಿಯಲ್ಲಿ ಸ್ವಲ್ಪ ಕಡಿಮೆಯಾಗಬಹುದು. ಇರುವಷ್ಟು ಹೊತ್ತಾದರೂ ಮನೆಯ ಜನರನ್ನು ಅಲ್ಲಿಯ ಬೇಸರದ ವಾತಾವರಣವನ್ನು ತನ್ನ ಭವಿಷ್ಯದ ಸಮಸ್ಯೆಗಳನ್ನು ಮರೆತು ಲವಲವಿಕೆಯಿಂದ ಇರಬಹುದು.

ಹೌದು, ತಾನು ಯಾಕೆ ಇಂದಿನಿಂದಲೇ ಅಷ್ಟೇ ಅಲ್ಲ ಈಗಲೇ ಪ್ರಯತ್ನಿಸಬಾರದು? ಎಂದು ಮನಸ್ಸಿನಲ್ಲೇ ಯೋಚಿಸಿಕೊಳ್ಳುತ್ತ, ನಗುತ್ತ ಅಂಗಡಿಯೊಳಗೆ ಬಂದ ದಂಪತಿಗಳನ್ನು ಸ್ವಾಗತಿಸಿದಳು. ಅವರೊಡನೆ ಏಳೆಂಟು ವರುಷದ ಹುಡುಗಿಯೊಂದಿತ್ತು. ಅವಳಿಗಾಗಿ ಲಂಗದ ಅರಿವೆ ತೆಗೆಯಲು ಹೇಳಿದರು. ಬೇರೆ ಬೇರೆ ವಿಧದ ಬಣ್ಣದ ಅರಿವೆಯ ಥಾನುಗಳನ್ನು ಅವರ ಮುಂದೆ ಹರಡಿದಾಗ ಪುಟ್ಟ ಹುಡುಗಿ

"ಅಪ್ಪಾs ನನಗ ಇದs ಇರಲಿ" ಎಂದಳು ಕೆಂಪು ಮಿಶ್ರಿತ ಹಳದಿಯ ವಾಶ್ ಆಂಡ್ ವೇರ್ ಅರಿವೆ ತೋರಿಸುತ್ತ.

"ಹ್ಯಾಂಗ್ರೀ ಇದು ?"

"ಒಂದು ಮೀಟರಿಗೆ ಎಂಟು ರೂಪಾಯಿ ಇಪ್ಪತ್ತು ಪೈಸಾ. ಈಕೆಗೆ ಎರಡು ಮೀಟರು ಸಾಕು ನೋಡ್ರಿ" ಎಂದಳು ಸುಜಾತಾ.

"ತುಟ್ಟಿ ಬಾಳ ಆಗ್ತದರೀ, ಬ್ಯಾರೆ ಯಾವ್ದರೆ ನೋಡಿರಿ!" ತಾಯಿ ಕಡ್ಡೀ ಮುರಿದಂತೆ ನಿರ್ಧಾರದಿಂದ ನುಡಿದಳು. ಹುಡುಗಿ ತಾಯಿಯತ್ತ ಹೊರಳಿ ಕೂಡ ನೋಡದೆ ಅಪ್ಪನಿಗೇ ಜೋತು ಬಿದ್ದಳು. ತನಗೆ ಅದೇ ಬೇಕು ಎನ್ನುತ್ತ. ತಂದೆ ಹೆಂಡತಿಯ ಮುಖ ನೋಡುವ ವಿಚಾರದಲ್ಲಿ ಬಿದ್ದಿದ್ದರು.

"ರೊಕ್ಕ ಭಾಳ ಅನಿಸಿದ್ರೂ ಈ ಅರಿವಿ ತಾಳಿಕಿ ಬರ್‍ತದ. ನೋಡಲಿಕ್ಕೆ ಛಂದನೂ ಅದ. ವರ್ಷದ ತನಕ ಒಗದ ಉಟ್ಟರೂ ಹರಿಯೂದಿಲ್ಲ. ಚೀಪ ಅರಿವಿ ಆರಿಸಿದ್ರ ಲಗೂನ ಹರೀತಾವ ಪಾಪ, ಮಗಳು ಆಸೆ ಮಾಡತಾಳ ಇದನ್ನs ತೊಗೊಳ್ರಿ" ಎಂದು ಸುಜಾತಾ ಒತ್ತಾಯಿಸಿದಾಗ ತಂದೆ ಮಗಳು ಗೆದ್ದಿದ್ದರು. ತಾಯಿ ದುಮು ದುಮು ಉರಿಯುತ್ತಲೇ ಅಂಗಡಿಯ ಕಟ್ಟೆ ಇಳಿದಿದ್ದಳು. ಅವರು ಕಣ್ಮರೆಯಾಗಿ ಹೋದರೂ ಸುಜಾತಾಳ ಮನದಲ್ಲಿ ಮೂಡಿದ ಚಿತ್ರ ಮಾಸಿರಲಿಲ್ಲ. ತಾನು ಚಿಕ್ಕವಳಿದ್ದಾಗ ತಂದೆ-ಮಲತಾಯಿರೊಡನೆ ಪೇಟೆಗೆ ಬಂದಾಗಲೆಲ್ಲ ಇದೇ ರೀತಿಯಲ್ಲಿ ನಡೆಯುತ್ತಿದ್ದಿತು. ಪ್ರತಿ ಸಲ ಸೀರೆ ಕೊಳ್ಳುವಾಗ ಫೀಜು ಕೊಡುವಾಗ ತಾಯಿ ಬೈಯುವಳು. ತಂದೆಯೊಡನೆ ಸುಖವಾಗಿಯೇ ಪಾಲಿಸಿದರೆನ್ನಬೇಕು. ಅವರನ್ನು ನೋಡುತ್ತ ತಾನು ತನ್ನ ಮನದ ಅಳಲನ್ನು ಮರೆತು ನಕ್ಕಿದ್ದಳು. ಆದರೆ ಈಗ ? ಬಾಡಿ ಹೋಗುತ್ತಿದ್ದ ನಗುವನ್ನು ಎಳೆದು ತಂದು ತುಟಿಯ ಮೇಲೆ ಅರಳಿಸಿದಳು ಸುಜಾತಾ.

ಅವಳಿಂದ ಆಕರ್ಷಿಸಲ್ಪಟ್ಟವರಂತೆ ಆ ದಂಪತಿಗಳಿಬ್ಬರೂ ಅವಳಿದ್ದಲ್ಲಿಗೇ ಬಂದರು. ಇಂದು ಹೆಚ್ಚಿನ ವ್ಯಾಪಾರ ಸುಜಾತಾನೇ ಮಾಡಲಿ ಎಂದು ಅನಿತಾ ತಾನೇ ಹಿಂದೆ ಸರಿದಿದ್ದಳು.

"ತಮಗೇನು ಬೇಕು ?" ಕಂಠ ತುಂಬಾ ಮಧುರವಾಗಿತ್ತು.

ಗಂಡ ಒಂದು ಕ್ಷಣ ಸುಜಾತಾಳನ್ನೇ ನಿಟ್ಟಿಸಿದ. ಹೌದು, ಅವೇ ಕಣ್ಣುಗಳು, ತುಟಿ, ಮುಂಗುರುಳು ಎಲ್ಲವೂ. ನಾನು ತಪ್ಪಿರುವುದು ಸಾಧ್ಯವೇ ಇಲ್ಲ, ಹೆಂಡತಿಯತ್ತ ಬೆರಳು ತೋರಿಸಿದ.

'ಅವಳಿಗೆ ಸೀರೆ ತೋರಿಸ್ರಿ, ಶೀಲಾs ನೀನs ಆರಿಸು. ನಾ ಕೂತಿರ್ತೀನಿ? ಅವನು ಎದುರಿಗಿದ್ದ ಸೋಪಾಕ್ಕೆ ಒರಗಿ ಸಿಗರೇಟು ಹಚ್ಚಿ ಕಾಲು ಚಾಚಿದ. ಸುಜಾತಾ ಕಷ್ಟದಿಂದ ಅವನಲ್ಲಿ ನಟ್ಟಿದ್ದ ಕಣ್ಣು ಕಿತ್ತು ಶ್ರೀಮತಿಯತ್ತ ತಿರುಗಿ ಕೇಳಿದಳು.

"ನಿಮಗ ಎಂಥಾ ಸೀರಿ ತೋರಸ್ಲಿ?"

ಹೆಂಡತಿ ಮಾತಾಡುವ ಮೊದಲು ಕಿವಿ, ಮೂಗು, ಕತ್ತಿನ ಆಭರಣಗಳನ್ನು ಚಕಚಕಿಸಿದಳು. ಬಂಗಾರದ ಬಳೆಗಳು ತುಂಬಿದ್ದ ಕೈಯನ್ನು ವ್ಯಾನಿಟಿ ಬ್ಯಾಗಿನ ಮೇಲೆ ಆಡಿಸುತ್ತ ಅಸಡ್ಡೆಯಿಂದ ನುಡಿದಳು.

"ಅದನ್ನೇನು ಕೇಳೋದು ? ಲೇಟೆಸ್ಟ್ ಫ್ಯಾಷನ್ನಿನ್ನು ಎಲ್ಲಾ ತಗೀರಿ"

ಸರಿ ಆಯಿತು. ಒಂದೊಂದಾಗಿ ಎಲ್ಲ ತರದ ಸೀರೆಗಳನ್ನೂ ತೋರಿಸಿದಳು. ಒಂದಕ್ಕೆ ಬಣ್ಣ ಚೆನ್ನಾಗಿಲ್ಲ. ಇನ್ನೊಂದಕ್ಕೆ ಸೆರಗು ಚೆನ್ನಾಗಿಲ್ಲ. ಮತ್ತೊಂದು ತುಂಬಾ ತೆಳುವು. ಕ್ವಾಲಿಟಿ ಚೆನ್ನಾಗಿಲ್ಲ ಬಾರ್ಡರ್ ದೊಡ್ಡದಾಯಿತು.

ಡಿರ್ಝಾಯಿನ್ ಗಾಡಿ ಆಯಿತು. ಈ ಒಡಲಿಗೆ ಅಂಥಾ ಅಂಚು ಇರಬಾರದಿತ್ತು. ಸೆರಗು ಇನ್ನಷ್ಟು ದೊಡ್ಡದಾಗಿರಬೇಕಾಗಿತ್ತು. ಬುಟ್ಟಾ ಸಣ್ಣವು. ಪನ್ನಾ ಕಡಿಮೆ ಇತ್ಯಾದಿ. ಟೇಬಲ್ ಮೇಲಿನ ರಾಶಿ ಏರುತ್ತ ಹೋಯಿತು. ಕಪಾಟುಗಳು ಖಾಲಿಯಾಗುತ್ತ ಬಂದವು. ಕೆಲವು ಸೀರೆಗಳು ಮಡಿಕೆ ಹಾಕಿದಾಗ ಬೇರೆ ಕಾಣುತ್ತವೆ. ಉಟ್ಟಾಗ ಇನ್ನೂ ಚೆನ್ನಾಗಿ ಕಾಣುತ್ತವೆ ಎನ್ನುವುದನ್ನು ತೋರಿಸಲು ತಾನೇ ಬಿಚ್ಚಿ ಮೈಮೇಲೆ ಸೆರಗು ಹೊದ್ದು ತೋರಿಸಿದಳು. ಹೊಸ ಸೀರೆ ಸೆರಗು ಹೊತ್ತು ನಿಲುವುಗನ್ನಡಿಯತ್ತ ನೋಡಿದಾಗ ಕಂಡದ್ದು ಸೋಫಾದ ಮೇಲೆ ಕುಳಿತು ತನ್ನನ್ನೇ ನಿಟ್ಟಿಸುತ್ತಿದ್ದ ಗಂಡನ ಮುಖವನ್ನು. ಸುಜಾತಾ ಕೆಂಪೇರಿದಳು. ಆ ಕಣ್ಣುಗಳನ್ನು ತಪ್ಪಿಸಲು ಇತ್ತ ತಿರುಗಿದಳು. ಕೈಗೆ ಸಿಕ್ಕ ಸೀರೆಯೊಂದನ್ನು ತೆಗೆದು ಬಿಚ್ಚತೊಡಗಿದಳು. ಅದರ ವರ್ಣನೆ ಮಾಡಬೇಕೆಂದರೆ ಗಂಟಲಿನಿಂದೀಚೆಗೆ ದನಿಯೇ ಬರಲೊಲ್ಲದು. ಕೈಗಳು ನಡುಗುತ್ತಿದ್ದವು. ಗಂಟಲು ಒಣಗಿ ಹಣೆಯ ಮೇಲೆ ಬೆವರು ಮೂಡಿತು. ಮನಸ್ಸಿನಲ್ಲೇನೋ ಭೋರ್ಗರೆತ.... ಹೃದಯದ ಡವ ಡವ ತನ್ನ ಕಿವಿಗೇ ಕೇಳುವಷ್ಟು ಜೋರಾಗುತ್ತಿತ್ತು ಕ್ಷಣ ಕ್ಷಣಕ್ಕೆ.

ಅವರು ತನ್ನ ಗುರುತು ಹಿಡಿದಿರಬಹುದು. ಅದಕ್ಕೇ ಹಾಗೆ ನೋಡುತ್ತಿದ್ದಾರೆ. ಕನ್ಯಾ ಪರೀಕ್ಷೆಗೆಂದು ಎರಡು ಸಲ ಮನೆಗೆ ಬಂದು, ಮನಸ್ಸಿಗೂ ಬಂದವರನ್ನು ತಾನು ಇಷ್ಟು ಬೇಗ ಮರೆಯಲು ಸಾಧ್ಯವೇ ? ತಮ್ಮಿಬ್ಬರ ಬಯಕೆಯಂತೆ ಮದುವೆಯಾಗಿದ್ದರೆ ಇಷ್ಟೊತ್ತಿಗೆ ತಾನೇ ಅವಳ ಸ್ಥಾನದಲ್ಲಿರುತ್ತಿದ್ದಳು. ಅವರ ತಂದೆ ಕೇಳಿದಷ್ಟು ವರದಕ್ಷಿಣೆ ತನ್ನ ತಂದೆ ಕೊಟ್ಟಿದ್ದರೆ.... ಅದೆಲ್ಲಾ ರೇರಾಜ್ಯ. ಜಗತ್ತಿನಲ್ಲಿ ಎಲ್ಲದಕ್ಕೂ ಬೆಲೆಯಿದೆ. ಬಡವರ ಮನೆಯ ಹುಡುಗಿಯ ಹೃದಯದ ಭಾವನೆಗಳಿಗೆ ಮಾತ್ರ ಬೆಲೆಯಿಲ್ಲ.

'ಓಃ ಮೈ ಗಾಡ್! ಇನ್ನೂ ಮುಗೀಲಿಲ್ಲೇನು ? ಮುಕ್ಕಾಲು ತಾಸಾತು. ಹಾಂಗs ವ್ಯಾಳೆ ಕಳೀತಿ. ಆರಿಸಲ್ಲಾ ಯಾವ್ದರೆ ಒಂದು" ಗಂಡ ಹತ್ತಿರ ಬಂದ. ಅವನ ಸೆಂಟಿನ ಪರಿಮಳ ಸುಜಾತಾಳಲ್ಲಿ ಕಚಗುಳಿಯಿಟ್ಟಿತು. ದೇವರೇ ಇಷ್ಟು ಹತ್ತಿರ ನಿಂತಾಗ ಅವರ ದೃಷ್ಟಿ ಎದುರಿಸಲಾರೆ ತಾನು ಎಂದು ಕೊಳ್ಳುತ್ತ-

"ಈ ಸೀರಿ ನೋಡ್ರಿ ನಿಮಗ ಸೇರಿತೇನು ? ಸೆರಗು, ಬಣ್ಣ, ಬಾರ್ಡರ್ ಎಲ್ಲಾ ಛಂದ ಅದ. ನಿಮಗ ಒಪ್ತದ. ಎಲ್ಲೆ, ಸೆರಗು ಹೊತ್ತು ಕನ್ನಡಿಯೊಳಗ ನೋಡ್ರಿ" ತನ್ನ ಲಕ್ಷ್ಯವನ್ನು ಪೂರ್ತಿ ಹೆಂಡತಿಯತ್ತ ಕೇಂದ್ರೀಕರಿಸಿದಳು. ಅದೂ ಅವಳ ಮನಸ್ಸಿಗೆ ಬರಲಿಲ್ಲ. ಮುಖ ಮುದುಡಿಸಿದ ಅವಳನ್ನು ನೋಡಿ ಹತಾಶಳಾದ ಸುಜಾತಾ ತಾಳ್ಮೆ ಕಳೆದುಕೊಂಡಳು. ಟೇಬಲ್ಲಿಗೆ ಹತ್ತಿರದಲ್ಲಿ ನಿಂತು ಗಂಡನ ಮುಖ ನೋಡದೆ,

" ಸ್ವಲ್ಪ ಬೊಜ್ಜು ಕಡಿಮೆ ಆಗಿದ್ದರ ಹೆಚ್ಚು ಛಂದ ಕಾಣುತ್ತಿತ್ತು" ಎಂದಳು ಸುಜಾತ ತೀರ ಕೆಳ ದನಿಯಲ್ಲಿ ಪಿಸು ನುಡಿದಿದ್ದರೂ ಹಾವಿನ ಕಿವಿಯ ಹೆಂಡತಿಗೆ ಮಾತು ಕೇಳಿಸಿತ್ತು. ಅವಳು ಕಾಲು ಅಪ್ಪಳಿಸುತ್ತ, ಸಿಟ್ಟಿನಿಂದ ಮಾಲಿಕನ ಹತ್ತಿರ ಹೋಗಿ ದೂರು ಕೊಟ್ಟಳು. ಮಾಲಿಕ 'ಸುಜಾತಾ ಬಾ ಇಲ್ಲೆ " ಎಂದಾಗ ಅವಳಿಗೆ ತನ್ನ ತಪ್ಪಿನ ಅರಿವಾಯಿತು. ಅನಿತಾಳತ್ತ ನೋಡಿದಳು. ಅನಿತಾ 'ಹೋಗು' ಎನ್ನುವಂತೆ ಗೋಣು ಹಾಕಿ ಧೈರ್ಯಕೊಟ್ಟಳು.

"ಗಿರಾಕಿಗಳನ್ನು ಯಾವಾಗಲೂ ಆದರಿಸಬೇಕು. ಅಪಮಾನಾ ಮಾಡಬಾರ್ದು. ತಪ್ಪಾತು ಅಂತ ಕೇಳಿಕೋ ಅವರನ್ನ."

ಒಂದು ಕ್ಷಣ ಸುಮ್ಮನಿದ್ದ ಸುಜಾತಾ ಈ ಹೆಂಡತಿಯ ಗಂಡ ಎಲ್ಲಿ ಎಂದು ನೋಡಿದಳು. ಅವನು ಅಂಗಡಿಯ ಹೊರಬಾಗಿಲ ಹತ್ತಿರ ಕಿಸೆಯಲ್ಲಿ ಕೈ ಹಾಕಿ ನಿಂತು ರಸ್ತೆಯಲ್ಲಿಯ ವಾಹನಗಳ ಓಡಾಟದಲ್ಲೇ ತಲ್ಲೀನನಾಗಿದ್ದ. ಹೊರಗಿನ ಗದ್ದಲಕ್ಕಿಂತ ಹೆಚ್ಚಿನ ಘನ ಘೋರ ಸಂಗ್ರಾಮ ಅವನ ಮನದಲ್ಲಿ ನಡೆಯುತ್ತಿದ್ದ ಸುಜಾತಾಳಿಗೆ ಅರ್ಥವಾಯಿತು. ಸುಜಾತಾ ತನ್ನದಲ್ಲದ ಧ್ವನಿಯಲ್ಲಿ.

"ನಂದು ತಪ್ಪಾತು, ಮರತ ಬಿಡ್ರಿ" ಎಂದಳು. ಗಂಡ ಕೂಡಲೆ ಒಳಗೆ ಬಂದು ಟೇಬಲ್ಲಿನ ರಾಶಿಯಲ್ಲಿಯ ಒಂದು ಸೀರೆ ತೆಗೆದು ಸುಜಾತಾಳ ಕೈಗೆ ಕೊಟ್ಟು, ಪ್ಯಾಕ್ ಮಾಡಿ ಕೊಡಲು ಹೇಳಿದ. ಅವಳು ಅದನ್ನು ಕಟ್ಟುತ್ತಿದ್ದಾಗ ಹೆಂಡತಿಯತ್ತ ಹೊರಳಿ " ಶೀಲಾ ಹೋಗಿ ಬಿಲ್ಲು ಕೊಟ್ಟು ಬಾ" ಎಂದ. ಅವಳತ್ತ ಹೋದೊಡನೆ 'ಸುಜಾತಾ ರಿಯಲಿ ಆಯ್ ಎಮ್ ಸಾರಿ. ನಿಮ್ಮ ಮನಸ್ಸು ನೋಯಿಸಿದ್ದಕ್ಕಾಗಿ ಕ್ಷಮಾ ಕೇಳ್ತೇನಿ" ಎಂದ. ಸುಜಾತಾ ಮಧುರವಾಗಿ ನಕ್ಕಳು ಅಷ್ಟೆ. ಪಾವಟಿಗೆ ಇಳಿಯುವಾಗ ಕಂಡೂ ಕಾಣದಂತೆ ಹೊರಳಿ ಅವಳತ್ತ ನೋಡಿ ಹೊರಡಲಾ ಎನ್ನುವಂತೆ ಅಪ್ಪಣೆ ಕೇಳಿದ. ಸುಜಾತಾ ಕಣ್ಣುಗಳಿಂದಲೇ ಒಪ್ಪಿಗೆ ಕೊಟ್ಟಳು.

ತನ್ನ ರೂಪ, ನಗು, ಮಾತು ಎಲ್ಲವನ್ನೂ ಮಾರಿದರೂ ಬೆಲೆ ಸಿಗುತ್ತಿದ್ದುದು ಮಾಲೀಕನಿಗೆ. ತನಗೇನೂ ಇಲ್ಲ. ಆದರೆ ಇಂದು ಅಪಾರ ನಿಧಿ ಸಿಕ್ಕಷ್ಟು ಸಂತೋಷವಾಗಿತ್ತು ಅವಳಿಗೆ. ತಾನು ಗೌರವಿಸಿದ್ದ ಒಬ್ಬ ವ್ಯಕ್ತಿ ತನ್ನ ವ್ಯಥೆಯನ್ನೂ ನೋವನ್ನೂ ಅರ್ಥ ಮಾಡಿಕೊಂಡಿದ್ದಾನೆ. ತನಗೆ ಎಷ್ಟೊಂದು ಹತ್ತಿರದವನಾಗಿದ್ದಾನೆ. ಆದರೆ ತುಂಬ ದೂರವೂ ಆಗಿದ್ದಾನೆ. ಅರಿಯದೆ ಅವಳಿಂದ ನಿಟ್ಟುಸಿರು ಹೊರಬಂದಿತು.

***

■■

# ಜಾತ್ರೆ ಮುಗಿದಿತ್ತು

"ನೀ ಏನ ಹೇಳ ಸಂಗವ್ವಾ, ಬಾಳೇ ಮಾಡಾಕ ಬಂದ ಇಷ್ಟ ದಿನಾ ಆದರೂ ನಮ್ಮ ಮಲ್ಲವ್ವಗ ನೆಟ್ಟಗ ಅಡಗಿ ಮಾಡಾಕ ಬರೂದಿಲ್ಲ ನೋಡಬೇ."

"ಹಂಗ್ಯಾಕ ಅಂತೀ ಚಿಗವ್ವಾ. ಮಾಡ್ಯಾಳಲ್ಲಾ, ಎಲ್ಲಾ ಹ್ವಾರೇನೂ ಮಾಡ್ತಾಳ."

"ಅದೇನದು ಹಾಂಗ ದುಡದರ ಎತ್ತ ಉಚ್ಚೀ ಹೊಯ್ದಾಂಗ ಉದ್ದಾಽಕ. ಮುಕ್ಕಾಟಲೆ ಕೆಲಸ ಮಾಡೂದೊಂದಽ ಗೊತ್ತದ ನೋಡು ಆ ಮೂದೇವಿಗೆ., ಒಂದು ಶಾಣ್ಯಾತನ ಇಲ್ಲಾ. ಯವಹಾರ ಗೊತ್ತಾಗಂಗಿಲ್ಲ. ನೆಟ್ಟಗ ರೊಕ್ಕಾ ಎಣಿಸಾಕ ಬರೂದಿಲ್ಲಬೇ. ಏನರೆ ತರಾಕ ಅಂಗಡೀಗ ಹ್ವಾದರ ಚಿಲ್ಲರ ಎಣಿಸಾಕ ಸುದ್ದಾ ಬರಾಂಗಿಲ್ಲ. ಅದಕ್ಕೂ ನಾನಽ ಸಾಯಬೇಕ ನೋಡು."

ಮಲ್ಲವ್ವನ ಕೈಯಾಗ ರೊಕ್ಕ ಕೊಡುವಾಕೀನಽ ಅಲ್ಲಾ ಈ ಗೌರವ್ವ. ಆದ್ರೂ ಸೊಸಿನ್ನ ಆಡಿಕೊಳ್ಳಾಕ ಹಾಂಗ ಮಾತಾಡತಾಳ. ಹೆಂತಾ ಬಂಗಾರದಂತಾ ಹುಡುಗೀನ ದಿನಾ ದುಡಿಸೀ ದುಡಿಸೀ, ಬೈದೂ ಬೈದೂ ಪ್ಯಾಲಿ ಮಾಡಿ ಕುಂಡ್ರಿಸ್ಯಾಳ ಈ ಅತ್ತೆವ್ವ ಎಂದು ಮನದಲ್ಲೇ ಅಂದುಕೊಂಡು ಸಂಗವ್ವ ಮಾತು ಬೆಳೆಸಿದಳು.

"ದಿನಾ ಶಗಣೀ ಬಳಿಯೂದು, ಕಸಮುಸುರಿ, ಎಮ್ಮೀ ಹಿಂಡೂದು, ರೊಟ್ಟಿ ಬಡಿಯೂದು, ಮತ್ತ ಮ್ಯಾಲೆ ಹೊಲಕ್ಕ ಹೋಗೂದು ಎಲ್ಲಾಽ ಮಾಡ್ತದಲ್ಲಬೇ ಹುಡುಗೀ. ಒಂದು ತುಟಿ ಎರಡ ಮಾಡಂಗಿಲ್ಲಾ. ತಾ ಏನೋ, ತನ್ನ ಕೆಲಸ ಏನೋ, ಭಾಳ ಸಂಭಾವಿತ ಹುಡುಗಿ ಮಲ್ಲವ್ವ. ತಾಯಿ ಸತ್ತ ಮಗಳು. ಈಟಿರ್ತ ನಾ ನೋಡೇನಿ. ಭಾಳ ಗುಣವಂತಿ 'ತಾಯಿ ಇಲ್ಲದ್ದು ಬಾಯಿ ಇಲ್ಲದ್ದು' ಅಂತಾರಲ್ಲಾ ಹಾಂಗ ಆಗೇದ ಅದರ ಬಾಳೇ."

ಈ ಸಂಗವ್ವ ತನ್ನ ಹಿರೇ ಸೊಸಿ ಮಲ್ಲವ್ವ ಇಬ್ರೂ ಒಂದ ಊರವರು; ಏಟಂದ್ರು ಈಕೀ ಮಲ್ಲವ್ವನ ಬಿಟ್ಟುಕೊಡಾಕಿ ಅಲ್ಲಾ. ಹಿಂಗ ಮಾತಾಡಿದರ ನಾನಽ ಖೊಟ್ಟಿ ಆಗತೇನು- ಎಂದು ವಿಚಾರಿಸಿದ ಗೌರವ್ವ ತಮ್ಮ ಮಾತಿನ ಧಾಟಿ ಬದಲಿಸಿ ಎರಡನೆ ಸೊಸಿ ಶಕುಂತಲಾನ ಗುಣಗಾನ ಪ್ರಾರಂಭಿಸಿದಳು. ಕೈಕೆಲಸ ಮಾಡುತ್ತಲೇ ಬಾಯಿ ವಟಗುಡುತ್ತಿತ್ತು.

"ನಮ್ಮ ಶೇಕವ್ವ ಇಂದ ಹರ‍್ಯಾಗ ಅವಲಕ್ಕಿ ಸೂಸಲಾ ಮಾಡಿದ್ಲು. ಎಷ್ಟ ಸೆಂವಿ ಮಾಡಿದ್ದಳಬೇ. ಒಣಗಿ, ಆಮ್ರು, ಚೆಟ್ನಿ, ಚಾ, ತಿನಿಸು ಎಲ್ಲಾಽ ಮಾಡ್ತಾಳ."

"ದೊಡ್ಡ ಊರಾಗ ಇದ್ದಾಕಿ. ದೊಡ್ಡವರ ಮಗಳು. ಮತ್ತ ಮ್ಯಾಲೆ ಸಾಲೀ ಕಲತಾಕಿ, ಶಾಣ್ಯಾಳ ಅದಾಳವ್ವಾ ನಿನ್ನ ಸೊಸಿ."

"ಶಾಣ್ಯಾತನ ಒಂದಽ ಅಲ್ಲಬೇ ಎಷ್ಟ ಚುರುಕ ಅದಾಳ ಅಂದೀ. ಕೆಲಸದಾಗ ಹೊಳ್ಳ್ಯಾಡೂದಿಲ್ಲ ನೋಡು ಮಲ್ಲಿ ಹಾಂಗ. ಮೈಮ್ಯಾಗಿನ ಅರಬೀ ಎಷ್ಟ ಹಸನ ಇಟಗೊಂತಾಳ. ಕೆಲಸಾ ಮಾಡ್ಯಾಳೋ ಇಲ್ಲೋ ಅನ್ನೂ ಹಾಂಗ ಝುಟ್‌ಪಟ್ ಎಲ್ಲಾ ಮುಗಿಸಿ ಮತ್ತ ಓದಿಕೊಂತ ತನ್ನ ಖೋಲ್ಯಾಗ ಕುಂದರತಾಳ. ಹೆಣ್ಣ ಮಕ್ಕಳ ಅಂದರ ಹಾಂಗ ಇರಬೇಕು."

ಇದ್ದುಳ್ಳವರ ಬೀಗತನ ಮಾಡಿ ಸೊಸೆ ಮನೆಗೆ ಬಂದಾಗಿಂದ ಅವಳ ಮತ್ತು ಅವಳ ಸೀರೆ, ಕುಬ್ಬಸ, ಒಡವೆ -ವಸ್ತುಗಳ ವರ್ಣನೆಯನ್ನೂ ಅವಳ ಗುಣವಂತಿಕೆಯನ್ನೂ ಗೌರವ್ವ ದಿನವೂ ಹೊಗಳುವುದನ್ನು ಕೇಳಿ ಕೇಳಿ ಪಳಗಿದ್ದ ಸಂಗವ್ವನಿಗೆ ಸುಮ್ಮನಿರಲಾಗಲಿಲ್ಲ.

"ಈಗೇನ ಮಾಡಾಕ ಹತ್ಯಾಳ ಶೇಕವ್ವ, ಮಕ್ಕೊಂಡಾಳೇನ?"

"ಗಂಡ ಸಾಲಿಯಿಂದ ಬಂದ ಕೂಡಲೇ ಅಂವಗ ಊಟಕ ನೀಡಿ ತಾನೂ ಉಂಡು ಮಕ್ಕೊಂಡಾಳ. ಮಲಗಲಿ ಬಿಡು ಪಾಪ. ಈಗರೇ ಏನ ಕೆಲಸ ಅದ?"

ಪಡಸಾಲೆಯ ಎದುರಿನ ಕಟ್ಟೆಯ ಮೇಲೆ ಕುಳಿತು ಕೂಸಿಗೆ ಮೊಲೆ ಕೊಡುತ್ತಲೇ ಜೋಳ ಕೇರುತ್ತಿದ್ದ ಮಲ್ಲವ್ವನತ್ತ ನೋಡುತ್ತ ಸಂಗವ್ವ ಒಂದು ಬಾಣ ಒಗೆದಳು.

"ಇವತ್ತ ಸವತೀ ಬೀಜಾ ಕಟಿಯಾಕ ನಾವಿಬ್ರs ಅದಿವಿ. ಅಕ್ಕವ್ವನೂ ಬರಲಿಲ್ಲಾ. ಸಾವಂತ್ರವ್ವ ಹೊಲಕ್ಕ ಹೋಗ್ಯಾಳ ಅಂದಿ. ಅರಪಾವು ಹಿಟ್ಟು ನಾದೀದಿ. ಇದು ಯಾವಾಗ ಮುಗಿಬೇಕ? ಶೇಕವ್ವನ್ನೂ ಕರೆದಿದ್ದರ ನಮ್ಮ ಕೂಡ ಕಟೀತಿದ್ದಳು. ಅದಕ್ಕs ಕೇಳಿದೆ."

"ಯಾಕ, ಬ್ಯಾಸರಾತನ ನಿನಗ? ಸಾವಂತ್ರೆವ್ವ ಇದ್ದರ ಹಾಡ ಅಂತಿದ್ಳು. ಅಕ್ಕವ್ವ ಕತೀ ಅರೇ ಹೇಳತಿದ್ಳು. ತಡಿ, ಒಂದಿಷ್ಟ ಚಾ ಕುಡಿವಂತೆ, ಕಣ್ಣಿಗೆ ಬರೂ ಜಂಪು ಹೊಕ್ಕೈತಿ. ಶೇಕವ್ವಾs ಏ ಶೇಕಕ್ಕಾ, ಏಳಬೆ." ಶೇಕವ್ವ ಓs ಎನ್ನಲಿಲ್ಲ. ಗೌರವ್ವ ಕಟ್ಟೆ ಇಳಿದು ಹೋಗಿ ಕೋಣೆಯ ಬಾಗಿಲು ಬಡಿದಾಗ ಎದ್ದು ಹೊರಗೆ ಬಂದು ಚಹಕ್ಕಿಡಲು ಒಳಗೆ ಹೋದಳು.

***

ತನ್ನ ಅತ್ತಿಯ ಕೈ ಸವತಿಬೀಜ ಕಟಿಯುತ್ತಿದ್ದರೂ ಬಾಯಿ ಒಂದೇ ಸವನೇ ತನ್ನನ್ನೇ ಕಟಿಯುತ್ತಿದ್ದದ್ದು ಮಲ್ಲವ್ವನ ಕಿವಿಗೆ ಬೀಳುತ್ತಿತ್ತು.

ಮದುವಿ ಆಗಿ ಬಂದಾಗಿಂದ ನಮ್ಮತ್ತಿ ಹಂಗಸೂದs ಬಿಟ್ಟಿಲ್ಲಾ. ಮೊದಲ ಒಂದಿಷ್ಟು ಸುಮ್ಮನ ಇರತಿದ್ಳು. ಇತ್ತಿತ್ಲಾಗ ಈ ಸಣ್ಣ ಸೊಸಿ ಬಂದಾಗಿಂದಂತೂ ನನ್ನ ಪಾಡು ಯಾರಿಗೂ ಬ್ಯಾಡಾ. ಕೂತರ, ನಿಂತರ, ಕೆಲಸಾ ಮಾಡಿದರ, ಏನ ಮಾಡಿದರೂ ಬಯ್ಗಳ ಇದ್ದದ್ದ. ನನ್ನ ಗಂಡಾ ಮನೀಗೆ ಹಿರೇ ಮಗಾ ಆದ್ರೂ ಸಾಲೀ ಕಲಿತಾವ ಅಲ್ಲಾ, ಮಾವ ತೀರಿಕೊಂಡ ಕೂಡಲೆ ಒಕ್ಕಲತನಕ ಬಿದ್ದಾನ. ಊಟಕ್ಕ, ಮನಗಾಕ ಅಷ್ಟs ಮನೀಗೆ ಬರತಾನ, ಉಳಿದ ಯಾಳೆ ಎಲ್ಲಾ ಹೊಲದಾಗ. ಹೊಲದ ಕೆಲಸಾ, ಎತ್ತಗೋಳ ಕೂಡs ದಿನಾ ಕಳೀತಾನ, ಮನ್ಯಾಗ ಹೇಣ್ತಿ ಮಕ್ಕಳು ಅದಾರ ಅನ್ನೂ ಖಬರs ಇಲ್ಲಾ, ಎತ್ತಗೋಳ ಪ್ರೀತಿ ಮಾಡುವಷ್ಟ ಸುದ್ಧಾ ಹೇಣ್ತಿ ಮಕ್ಕಳಿಗೆ ಮಾಡೂದಿಲ್ಲ. ಮದಿವ್ಯಾಗಿ ಇಷ್ಟ ವರ್ಷ ಆದರೂ ಒಂದಿನಾ ಅರೆ ನೀ ಉಂಡ್ಯಾ? ತಿಂದ್ಯಾ? ನಿನಗ ಏನರಬೇಕೇನು? ಅಂತ ನನ್ನ ಕೇಳಿಲ್ಲಾ. ರಟ್ಟಿ ಮುರಿಯೂ ಹಾಂಗ ದುಡದು ಮನೀಗೆ ಬಂದು ಬಿದ್ದಾ ಅಂದರ ಆತು. ಎಂದsರ ಒಮ್ಮೆ ಹೇಣ್ತಿ ನೆನಪ ಆಗ್ತೈತಿ. ತಾಯಿ ಇಲ್ಲದ ಪರದೇಶಿ ನಾನು. ಮದುವೀ ಮಾಡಿ ಕೊಟ್ಟ ಮ್ಯಾಲೆ ಅಣ್ಣಾ ಅತ್ತೀಗಿನೂ ಹೊಳ್ಳಿ ನೋಡಲಿಲ್ಲಾ. ಚೊಚ್ಚಲು ಬಾಣಂತನಾ ಒಂದು ಕಾಟಾಚಾರಕ್ಕ ಮಾಡಿ ಮುಗಿಸಿದರು. ಅವಾಗಿಂದ ಸುರುಮಾಡಿದ್ಳು ಅತ್ತೆವ್ವ. ತೊಟ್ಲಾ ಕೊಡಲಿಲ್ಲಾ, ಎಂಥಾ ಬಿಕನಾಸಿ ಬೀಗರ ಗಂಟು ಬಿದ್ದರ ನಮಗ ಅಂತ. ಆಗ ಸುರೂ ಆದದ್ದ ಸೋಬಾನಾನ ಮೂರ ಮಕ್ಕಳ್ನ ಹಡದರೂ ಇನ್ನೂ ಮುಗಿದಿಲ್ಲಾ. ಆಮೇಲಿನ ಎರಡ ಬಾಣಂತೆನಾ ಇಂಥಾ ಅತ್ತೀ ಕೈಯಾಗ ಹ್ಯಾಂಗ ಆತು ಅನ್ನೂದು ಆ ಶಿವನೆ ಬಲ್ಲಾ. ಸಂಗವ್ವ ಚಿಗವ್ವನ ಬಂದು ಕೂಸಿಗೆ ನನಗ ನೀರ ಹಾಕಿ ಹೋಗತಿದ್ಳು. ಹಡದ ಹದಿನೈದು ದಿನಕ್ಕ ಎದ್ದು ಎಲ್ಲಾ ಕೆಲಸಾ ಮಾಡತಿದ್ದೆ.

ಜೋಳ ಒನೆಯುತ್ತ, ಕೇರುತ್ತ ತನ್ನ ನೆಪಿನ ಹರಳು ಆರಿಸಿ ಆರಿಸಿ ಒಗೆಯುತ್ತಿದ್ದಳು.

ನಾ ಏನ ಮಾಡಿದರೂ ಎಲ್ಲಾs ಹೊಳ್ಯಾಗ ಹುಣಸೀಹಣ್ಣು ತೊಳದ್ಹಾಂಗ., ಅದಕ್ಕ ಕಾರಣ ನಮ್ಮ ತವರ್ಮನೀಯವರು ಬಡವರು. ನಾ ಏನೂ ತರಲಿಲ್ಲಾ ಅನ್ನೂದೊಂದ. ಆಕೀ ಅಂದದ್ದೆಲ್ಲಾ ಅನಿಸಿಕೊಂಡು

ತೊತ್ತಿನಾಂಗ ಬಿದ್ದಿರತೇನಿ ನಾನು. ನನಗ ಬುದ್ಧಿ ಇಲ್ಲಾ, ಶ್ಯಾಣ್ಯಾತನ ಇಲ್ಲಾ ಅಂತ ಹಂಗಸತಾಳ ಅತ್ತಿ. ಅಂದರs ನನಗ, ನನ್ನ ಮಕ್ಕಳಿಗೆ ಕೈಯಾಗ ಒಂದು ರೂಪಾಯಿ ಕೊಟ್ಟಾಳೇನು? ಊರ ಬಸವಣ್ಣ ದೇವರ ಜಾತ್ರಿ ಆದರೂ ತಾನು ಹರಕ ಸೀರಿ ಉಟಕೊಂಡು ಮಕ್ಕಳನ ಕರಕೊಂಡು ಬರಿಗೈಲೆ ದೇವರಿಗೆ ಕೈಮುಗಿದು ಬರಬೇಕು. ತನ್ನ ಗಂಡ ಹೊಲದಾಗ ದುಡುದು ರೊಕ್ಕಾ ಕಳಿಸಿದಾಗ ಮೈದುವಾ ಸಾಲೀ ಕಲತಾ, ಕಾಲೇಜು ಕಲತಾ, ಬಿ.ಎ. ಪಾಸಾದ, ಊರಾಗಿನ ಸಾಲ್ಯಾಗ ಮಾಸ್ತರ ಆಗ್ಯಾನ. ಚೊಣ್ಣ, ಕೋಟು ಹಾಕ್ಕೊಂಡು ಶಿಸ್ತಿಲೆ ಅಡ್ಡ್ಯಾಡತಾನು. ಬಿ.ಎ. ಕಲತಾವಂತ ಇಂಗ್ರೇಜಿ ಕಲಿತ ಹೇಣ್ತಿ ಬಂದ್ಳು. ಆಕಿ ಏನೋ ಗಂಡನ ಕಟಿಕೊಂಡು ಶಹರಕ ಹೋಗಬೇಕಂತ ಮತ್ತ ಯತ್ನಾ ಮಾಡಿದ್ಳು. ಆದರ ಅವಂಗ ಇನ್ನೂ ನೌಕರಿ ಸಿಕ್ಕಿಲ್ಲಂತ ಇಲ್ಲೇ ಉಳದಾಳ. ಒಂದಿಲ್ಲಾ ಒಂದಿನಾ ಈ ಊರ ಬಿಟ್ಟ ಹೋಗಾಕಿನ ಆಕಿ.

ಹೂವಿನ ಪತ್ತಲಾ ಉಟಕೊಂಡು ನಿರಗಿ ಒದಕೊಂತ ಅಡ್ಡ್ಯಾಡತಾಳ. ಪಲ್ಲೆ. ಸಾರು ತಿನಿಸು, ಚಾ ಮಾಡಿಬಿಟ್ಟರ ಆಕಿ ಕೆಲಸಾ ಮುಗೀತು. ಮಾಡಿದ್ದ ತಿನಿಸು ಒಯ್ದು ತನ್ನ ಕಪಾಟನ್ಯಾಗ ಇಟಕೊಂಡು ಗಂಡಗ ಚಾ ಕೊಡೊ ನೆವಾ ಮಾಡಿ ತಾನೂ ಹೋಗಿ ಅಲ್ಲೇ ತಿಂದು ಬಾಯಿ ಒರಸಿಕೊಂಡು ಹೊರಗ ಬರತಾಳ. ಇಂತಾ ಸೊಸಿನ್ನ ಕಂಡರ ನಮ್ಮ ಅತ್ತಿಗೆ ಭಾಳ ಅಕ್ಕರತಿ, ಪ್ರೀತಿ. ಯಾಕಂದ್ರ ಆಕಿ ದೊಡ್ಡವರ ಮಗಳು. ವಕೀಲರು ಮಗಳಿಗೆ ಬಂಗಾರ ಇಟ್ಟಾರ, ಅಳಿಯಾಗ ಉಂಗರಾ, ಸೂಟು ಕೊಟ್ಟಾರ; ಮೊಮ್ಮಗ್ಗ ಉಡದಾರ, ತೊಟ್ಲಾ, ಬಟ್ಲಾ ಎಲ್ಲಾ ಕೊಟ್ಟಾರ. ಹೋದಾಗೊಮ್ಮೆ ಹೊಸಾ ಸೀರಿ ಕೊಡತಾರ. ಅದಕ್ಕs ಶೇಕವ್ವ ಕುಂತರೂ ಛಂದ ನಿಂತರೂ ಛಂದ. ಏನ ಮಾಡಿದರೂ ಮಾಫ. ಆಕೀನ್ನ ಹೊಗಳೂದು ತನ್ನ ಬಯ್ಯೂದು ಅತ್ತಿಗೆ ದಿನದ ರೂಢಿ ಆಗಿ ಬಿಟ್ಟದ.

ಅದರ ಬದಲು ನನ್ನ ಕೈಯಾಗ ನಾಕ ದುಡ್ಡು ರೊಕ್ಕ ಇದ್ದ, ನನ್ನ ಗಂಡಾ, ಹೇಣ್ತಿ ಅನ್ನೂ ಮಾಯಾ ಮಾಡಿದ್ದರ, ಹಿರೇ ಸೊಸಿ ಅಂತ ಹಿರೇತನಾ ಕೊಟ್ಟಿದ್ದರ, ಏನೂ ಇಲ್ಲಾಂದರೂ ಕಡೀಕ ಕತ್ತಿ ದುಡಿದಾಂಗ ಇಷ್ಟ ದುಡೀತೀನಲ್ಲಾ ಇದಕ್ಕಾದರೂ ಕಿಮ್ಮತ್ತ ಕೊಟ್ಟಿದ್ದರ ನನ್ನ ಬಾಳೇ ಇಷ್ಟ ಬವಣೆ ಆಗತಿದ್ದಿಲ್ಲಾ., ಈಗ ಗುಣಾ ಯಾರೂ ನೋಡೂದಿಲ್ಲಾ, ಎಲ್ಲಾರಿಗೂ ಹಣಾನs ಬೇಕು. ಹಣಾ ನೋಡಿದ ಹೆಣಾ ಬಾಯಿ ಬಿಡ್ತದಂತ ಅನ್ನುವರು ಯಾರು ಇಲ್ಲಾ. ನನ್ನಂಥ ಧಿಕ್ಕೇಡಿ ಯಾತಕ್ಕ ಬದುಕಬೇಕು?

ಕಣ್ಣೀರು ಉಕ್ಕಿಬಂದ ಮಲ್ಲವ್ವನಿಗೆ ಹಳ್ಳು ಕಾಣಿಸಲಿಲ್ಲ. ಗೋಡೆಯತ್ತ ತಿರುಗಿ ಸೀರೆಯ ಸೆರಗಿನಿಂದ ಕಣ್ಣು ಒತ್ತಿಕೊಂಡಳು. ತೊಡೆಯ ಮೇಲಿನ ಮಗ ಮಿಸುಕಾಡಿದಾಗ ಬಾಯಲ್ಲಿ ಮೊಲೆ ತುರುಕಿ ಚುಕ್ಕು ಬಡಿದಳು.

ಇದೆಲ್ಲವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಸಂಗವ್ವನ ಹೊಟ್ಟೆಯಲ್ಲಿ ಸಂಕಟವಾಯಿತು, ಚಹಾ ಗಂಟಲಲ್ಲಿ ಇಳಿಯಲಿಲ್ಲ.

***

ಎಂಟು ಹತ್ತು ದಿನ ಕಳೆದ ಮೇಲೆ ಒಂದು ಸಂಜೆ ಗಂಗವ್ವ ಎಮ್ಮೆ ಹಿಂಡಿಕೊಂಡು ಮುಗಿಸಿ ಹಾಲಿನ ತಪ್ಪೇಲಿ ಎತ್ತಿಕೊಂಡು ಅಡಿಗೆ ಮನೆಗೆ ನಡೆದಾಗ ಹೊರಬಾಗಿಲಲ್ಲಿ ಯಾರೋ ಸಣ್ಣ ದನಿಯಲ್ಲಿ ಚಿಗವ್ವಾs ಎಂದರು.

"ಯಾರವರು?" ಎನ್ನುತ್ತ ತಪ್ಪೇಲಿ ಕಟ್ಟೆಯ ಮೇಲಿಟ್ಟು, ಹಕ್ಕೆಯಲ್ಲಿಯ ಗುಬ್ಬೀ ಚಿಮಣಿ ಎತ್ತಿ ಹಿಡಿದು ನೋಡಿದ ಸಂಗವ್ವ "ಮಲ್ಲವ್ವೇನು? ಬಾರವ ಒಳಗ ಬಾ? ಎಂದರೂ ಅವಳು ಅತ್ತಿತ್ತ ನೋಡುತ್ತ ಅಂಜುತ್ತ ನಿಂತಿದ್ದನ್ನು ನೋಡಿ ಹತ್ತಿರ ಹೋಗಿ ಕೈಹಿಡಿದು ಒಳಗೆ ಎಳೆದಳು. ಮಲ್ಲವ್ವನ ಕೈಯಲ್ಲಿಯ ತಂಬಿಗೆ ನೋಡಿ "ಬಯಲ ಕಡೆ ಹೊಂಟಿದೇನಬೇ? ಜೋಡಿಗೆ ಬರಲ್ಯಾ? ಹಾಂಗ್ಯಾಕ ಮಾಡೀದೀ ಮಾರಿ? ಮೈಯಾಗ ಆರಾಮ ಐತಿಲ್ಲೊ?" ಎಂದಳು.

ಅವಳ ಯಾವ ಪ್ರಶ್ನೆಗೂ ಉತ್ತರ ಕೊಡದೆ ತಂಬಿಗೆ ಕೆಳಗಿಟ್ಟು ಮಲ್ಲವ್ವ ಮುಖಕ್ಕೆ ಸೆರಗು ಹಚ್ಚಿ ಭೋರೆಂದು ಅಳಹತ್ತಿದಾಗ ಸಂಗವ್ವನಿಗೆ ಏನೂ ತಿಳಿಯದೆ ಕಂಗಾಲಾಗಿ "ಸುಮ್ಕಿರ ತಂಗೀ ಏನಾತೂ" ಎನ್ನುತ್ತ ಅವಳ ಬೆನ್ನಮೇಲೆ ಕೈಯಾಡಿಸಿ ಸಮಾಧಾನ ಮಾಡಿದಳು.

ಅಳುವಿನ ಜೋರು ಇಳಿದ ಮೇಲೆ ಮಲ್ಲವ್ವ "ಚಿಗವ್ವ, ನಾ ಬಯಲಕಡೆ ಹೋಗಾಕ ಬಂದಿಲ್ಲಾ ನಿನ್ನ ಕಡೇನs ಬಂದೇನಿ, ನಾ ಒಂದು ಮಾತ ಹೇಳ್ತೀನಿ, ನನ್ನಾಣೆ ಯಾರ ಮುಂದೂ ಹೇಳಬಾರ್ದು" ಎಂದು ಅತ್ತಿತ್ತ ನೋಡಿದಳು. " ಮತ್ತ ಯಾರರೇ ಅದಾರೇನು ಇಲ್ಲೇ?" ಅವಳ ದನಿಯಲ್ಲಿನ್ನೂ ಗಾಬರಿ ಇತ್ತು.

"ಛೀ. ಹುಚ್ಚೀ, ಇಲ್ಲ್ಯಾರ ಬರಬೇಕ? ಬಾಳಣ್ಣ ಕುಸ್ತೀಗೆ ಹೋಗ್ಯಾನ ರಾಮಪುರಕ. ನಾನs ಒಬ್ಬಾಕೀನs ಅದೀನಿ. ಹೇಳು ಏನದು, ಹೆದರ ಬ್ಯಾಡಾ ನಾ ಅದೀನಿ.

ಸಂಗವ್ವನ ಪ್ರೀತಿಯ ಮಾತಿನಿಂದ ಮತ್ತೆ ಅಳು ನುಗ್ಗಿಬಂದರೂ ಕಷ್ಟಪಟ್ಟು ತಡೆದುಕೊಂಡ ಮಲ್ಲವ್ವ "ಚಿಗವ್ವs ನನ್ನ ಹಡದ ತಾಯಿ ಸತ್ತು ಹೋದರೂ ನೀನs ತಾಯಿ ಅಂತ ತಿಳಕೊಂಡೇನಿ. ಬಾಳಣ್ಣ ನನಗ ಅಣ್ಣನಕಿಂತಾ ಹೆಚ್ಚ ಅದಾನ." ಉಗುಳು ನುಂಗಿ ತಂದೆದ ಮಲ್ಲವ್ವನನ್ನು ಸಂಗವ್ವ ಪ್ರೋತ್ಸಾಹಿಸಿದಳು.

"ಹೇಳ ಮತ್ತ ಏನದ ನಿನ್ನ ಮನಸ್ಸಿನ್ಯಾಗ, ನನಗೂ ಹೆಣ್ಣುಮಕ್ಕಳಿಲ್ಲಾ, ಸೊಸಿ ಬರೂದ ಇನ್ನೂ ಯಾವ ಕಾಲಕ್ಕೋ ಏನೋ, ನಿನ್ನ, ನಿನ್ನ ಮಕ್ಕಳನ್ನ ನಾಕ ದಿನಾ ತವರ್ಮನಿ ಮಾಡಾಕ ಕರಕೊಂಡು ಬರಬೇಕು ಅಂದರ ನಿಮ್ಮತ್ತಿ ಕಳಸಾಕ ತಯಾರ ಇಲ್ಲವಾ."

"ಹೌದವ್ವಾ, ದುಡಿಯಾಕ ಆಳ ಬೇಕಲ್ಲ ಅವರಿಗೆ ಪುಗಸಟ್ಟೆ, ನನ್ನ ಹ್ಯಾಂಗ ಕಳಸ್ತಾರು. ಮನಿ ಹ್ವಾರೆ ಮಾಡವರ್‍ಯಾರು? ನಾನೂ ಕೇಳಿದೆ ಮೊನ್ನೆ ನೀವಿಬ್ಬರೂ ಮಾತಾಡೂದು. "ಅಯ್ಯ ಆಕಿಗೇನು ಕಡಿಮೆ ಆಗೇದ ಇಲ್ಲೆ. ಉಣ್ಣಾಕ ತಿನ್ನಾಕ ಎಲ್ಲಾ ಅದ ಅಲ್ಲಾ. ಈ ಬಿಕನಾಸಿನ್ನ ತವರ್ಮನಿಯವರ ಕರಕೊಂಡ ಹೋಗಾಕ ತಯಾರಿಲ್ಲಾ. ನೀ ಯಾರ ಇಲ್ಲದ್ದ ಕೊಳ್ಳಿಗೆ ಹಾಕ್ಕೋತಿ ಅಂದೈಲ್ಲಾ ನಮ್ಮತ್ತಿ. ನನ್ನ ಹಣೇಬರದಾಗ ಸುಕಾ ಪಡೂದು ಇಲ್ಲದಿದ್ದರ ಏನ ಮಾಡಲಿ ಚಿಗವ್ವಾ?"

"ಅದೆಲ್ಲಾ ಆತ ಬಿಡು. ಈಗೇನಂತಿ ಹೇಳ,. ನಿನ್ನ ಮನಸ್ಸಿಗೆ ಸುಕಾ ಆದರ ಸಾಕು ನನಗ."

ಮಲ್ಲವ್ವ ಮಾತನಾಡದೆ ಬಾಳೆಪಟ್ಟೆಯನ್ನು ಸಡಿಲಿಸಿ ಸೀರೆಯ ನಿರಿಗೆಯಲ್ಲಿ ಮಡಿಸಿಟ್ಟ ಐದು ಐದು ರೂಪಾಯಿಯ ಹಳೆಯ ಮಾಸಿದ ನೋಟನ್ನು ಅವಳ ಮುಂದೆ ಹಿಡಿದಳು. ಸಂಗವ್ವನ ಕಣ್ಣು ಅರಳಿದವು. "ಇದೆಲ್ಲಿಂಡ ಬಂತs?

"ಚಿಗವ್ವಾ ನೀ ಬಯ್ಯಾದರೂ ಬೈ; ಎಡ್ಡ ಹೊಡೆದರೂ ಚಿಂತಿಲ್ಲ. ಇವತ್ತ ಮದ್ಯಾನದಾಗ ಶೇಕವ್ವ ಮನಗಿದ್ಲು ಕ್ಯಾಣೇ ಬಾಗಲಾ ಹಾಕ್ಕೊಂಡು, ಅತ್ತಿ ಯಾರದೋ ಮನೀಗೆ ಹೋಗಿದ್ಲು ನಾನು ಮೆಣಸಿನಕಾಯಿ ತೊಗೊಂಡು ಹೋಗಿ ಮಾರಿ ರೊಕ್ಕಾ ಮುಚ್ಚಿಟ್ಟಕೊಂಡೆ."

"ಅದ್ಹ್ಯಾಂಗ ? ಯಾರೂ ನೋಡಲಿಲ್ಲಾ? ಯಾರಿಗೆ ಮಾರಿದಿ?"

"ಕಡಾಲಿ ಮುದುಕಿಗೆ ಮಾರಿದೆ. ಆಕೀಗೂ ಆಣೇ ಹಾಕಿ ಹೇಳೇನಿ. ಯಾರ ಮುಂದೂ ಹೇಳಬ್ಯಾಡ ಚೀಲಗಟ್ಟೀಲೆ ನಿಟ್ಟು ಒಟ್ಟಿದಾಗ ಸ್ವಲ್ಪ ತಗದರ ಯಾರಿಗೂ ಗೊತ್ತಾಗೂದಿಲ್ಲ ಅಲ್ಲೇನಬೆ?"

"ಕಳವು ಮಾಡಿ ಮಾರಿ ಸಿಕ್ಕಿಬಿದ್ದಿ ಅಂದರ ನಿನ್ನ ಗಂಡಾ ಮೈಯಾಗಿನ ಎಲವು ಮುರದಾನು. ಮೊದಲs ಸಿಟ್ಟಿನಂವಾ. ಮಲ್ಲಕ್ಕಾ, ನನಗೂ ಯಾಕೋ ಅಂಜಿಕೆ ಬರತೈತಿ."

ನೀರು ತುಂಬಿದ ಕಣ್ಣುಗಳಿಂದ ಅವಳನ್ನೇ ದಿಟ್ಟಿಸುತ್ತಾ ಮಲ್ಲವ್ವ ಕೇಳಿದಳು. ಚಿಗವ್ವಾs ಹತ್ತು ವರ್ಸಾತು ನನ್ನ ಬಾಳೆ ನೋಡತಿ, ಈ ಗಂಡಾ ಅನಿಸಿಕೊಂಡಾವ ನನಗ ಏನ ಮಾಡ್ಯಾನು? ಮೂರ ಮಕ್ಕಳಾ ಕೊಟ್ಟಾನು ಅಷ್ಟs. ಅವೂ ನನ್ನ ಕೊಳ್ಳಿಗೆ. ಹಸದರ, ಜಡ್ಡಾದರು ಯಾರೂ ದರಕಾರ ಮಾಡಾಂಗಿಲ್ಲಾ, ದಿನಾs ಅತ್ತಿ ಕಡೇಂದ ಅನಿಸಿಕೊಂಡು ನನಗೂ ಸಾಕಾಗಿ ಹೋಗೇದ. ನನಗೂ ಕೈಯಾಗ ರೊಕ್ಕ ಬೇಕು. ನನ್ನ ಮನೀ ನನ್ನ ಹೊಲಾ, ನನ್ನ ಗಂಡಾ ನಾನು ದುಡೀತೀವಿ ಅಂತ ಬೆಳಿ ಬರತೈತಿ. ಅದನ್ನ ನಾನು ಮಾರಿದರ ಕಳವು ಹ್ಯಾಂಗ ಆಗ್ತದ ಚಿಗವ್ವಾs? ಇನ್ನ ಮ್ಯಾಲೆ ಶೇಂಗಾ, ಜ್ವಾಳ, ಕಾಳು ಏನ ಸಿಕ್ಕದ್ದು ಮಾರಿ ರೊಕ್ಕಾ ಮಾಡಿಕೊಂತೀನಿ."

ಸಂಗವ್ವ ಮೂಕಳಾಗಿ ಕೇಳುತ್ತಿದ್ದಳು. ಇಂಥ ಹುಡುಗೀಗೆ ಬುದ್ಧಿ ಇಲ್ಲಾ, ಯವಾರಾ ಗೊತ್ತಿಲ್ಲ. ಅಂತಾಳಲ್ಲ ಗೌರವ್ವ ಎಂದು ಯೋಚಿಸುತ್ತಿದ್ದಳು. ಸಂಗವ್ವನ ಮೌನ ತಾಳಲಾರದೆ ಮಲ್ಲವ್ವ ಆರ್ತಳಾಗಿ ಬೇಡಿದಳು.

"ಚಿಗವ್ವಾs ನನ್ನ ಹತ್ತರ ರೊಕ್ಕಾ ಇಟಕೊಳ್ಳಾಕ ಹೆದರಕಿ ಬರತೈತಿ., ಯಾರರೆ ನೋಡಿಗೀಡ್ಯಾರು ಅಂತ ನನಗ ಕ್ವಾಣಿ ಇಲ್ಲಾ, ಟ್ರಂಕ ಇಲ್ಲಾ ಅದಕ್ಕs ಇಲ್ಲಿಗೆ ಬಂದೆ ರೊಕ್ಕಾ ತಂದು ನಿನ್ನ ಹತ್ತರ ಇಡತೀನಿ. ಇಟಕೋತಿಯಾ ಚಿಗವ್ವಾ?"

"ಆ ರೊಕ್ಕಾ ಖರ್ಚು ಮಾಡೋದು ನೋಡಿದರ ಎಲ್ಲಿಂದ ಬಂದೂವಂತ ಕೇಳತಾರ ಆಗ ಏನ ಹೇಳತಿ?"

"ನಾ ಇಲ್ಲೆ ಖರ್ಚು ಮಾಡೂದಿಲ್ಲ ಚಿಗವ್ವಾ. ಬಾಳಣ್ಣನ ಮುಂದ ಅಣ್ಣಗ ಹೇಳಿ ಕಳಸ್ತೇನಿ 'ಜಾತ್ರೀಗೆ ಕರ್‍ಯಾಕ ಬಾ' ಅಂತ . ರೊಕ್ಕಾ ನಾನs ಖರ್ಚು ಮಾಡಿ ಅಲ್ಲೀಗೆ ಹೋಗಿ 'ಅಣ್ಣ ಕೊಡಿಸ್ಯಾನ' ಎಂತ ಹೇಳಿ ಟೋಪ ಸೆರಗಿನ ಸೀರಿ, ಕೂಸಿಗೆ ಕಾಲ್ಗಡಗ, ಹುಡುಗೂರಿಗೆ ಅಂಗಿಚೊಣ್ಣಾ ತರತೇನಿ. ಏನ ಮಾಡ್ಲಿ ನಾನೂ ಬದುಕಬೇಕಲ್ಲ? ಅದನ್ನ ನೋಡಿದರ ನಮ್ಮ ಅತ್ತಿ ಬಾಯಿ ಸ್ವಲ್ಲ ಸುಮ್ಮನ ಆಗ್ತದೇನೋ ನೋಡ್ತೀನಿ. ಖರೆ ರೀತಿಯಿಂದ ಬಾಳೇ ಮಾಡಿದರ ಕಿಮ್ಮತ್ತಿಲ್ಲಾ ಚಿಗವ್ವಾs. ಮನೀಯವರs ಕೂತು ನನಗ ಕಳುವುನೂ ಕಲಸ್ತಾರ, ಸುಳ್ಳೇನೂ ಮಾಡ್ತಾರ..." ಮೊಣಕಾಲು ಸಂದಿಯಲ್ಲಿ ತಲೆ ಹುದುಗಿಸಿ ಬಿಕ್ಕಿ ಬಿಕ್ಕಿ ಅತ್ತಳು ಮಲ್ಲವ್ವ.

ಸಂಗವ್ವ ಕರಗಿ ನೀರಾದಳು. ಏನಾದರೂ ಮಾಡಿ ಮಲ್ಲವ್ವನಿಗೆ ಸಹಾಯ ಮಾಡಬೇಕೆಂದು ಮನಸ್ಸು ಮಾಡಿ ಅವಳು ಕೊಟ್ಟ ರೊಕ್ಕ ತೆಗೆದೊಯ್ದು ಅಡಿಗೆ ಮನೆಯ ಗೂಡಿನಲ್ಲಿದ್ದ ಒಳ ಕಪಾಟಿನಲ್ಲಿ ಇಟ್ಟು ಬರುವಾಗ ಅದೇ ಹಿಂಡಿದ ಹಾಲು ಕುಡಿಯಲು ಕೊಟ್ಟಳು ಮಲ್ಲವ್ವನಿಗೆ.

ಮುಂದೆ ಮಲ್ಲವ್ವ ಆಗಾಗ ತಂಬಿಗೆ ಹಿಡಿದುಕೊಂಡು ಸಂಜೆ ಕತ್ತಲಾದ ಮೇಲೆ, ಎಲ್ಲರ ಕಣ್ಣುತಪ್ಪಿಸಿ ಸಂಗವ್ವನ ಮನೆಗೆ ಬಂದು ಹೋದಳು.

***

ಸಂಗವ್ವನಿಗೆ ಅರ್ಧ ಎಚ್ಚರ, ಅರ್ಧ ನಿದ್ದೆ, ಯಾರೋ ತನ್ನ ತಲೆಯೆತ್ತಿ, ಬಾಯಿ ಬಿಡಿಸಿ ಔಷಧಿ ಸುರಿದಾಗ ಅದು ಪೂರ್ತಿ ಹೊಟ್ಟೆಗೆ ಇಳಿಯದೆ ಕಟಬಾಯಿಗುಂಟ ಇಳಿಯಿತು. ಒರಟು ಕೈಯೊಂದು ಬಾಯನ್ನು ಒರಸಿದಾಗ ಅವಳು ಸ್ವಲ್ಪ ಕಣ್ಣು ತೆರೆದಳು. ಬಾಳಣ್ಣ ಹತ್ತರ ಕುಳಿತಿದ್ದ. ಅವನೇ ಔಷಧಿ ಹಾಕುತ್ತಿದ್ದನು. ಅವ್ವ ಮಿಸುಕಾಡಿದ್ದು ನೋಡಿ ಅವನ ಮನಸ್ಸಿಗೆ ಕಾತರ ಕಡಿಮೆಯಾಯಿತು. ಅವಳ ಮುಖದ ಹತ್ತಿರ ಬಗ್ಗಿ ಜೋರಾಗಿ "ಅವ್ವಾs" ಅಂದ. ಸಂಗವ್ವ ಪೂರ್ಣ ಕಣ್ಣು ತೆರೆದಳು. ಮಗನನ್ನು ಕಣ್ಣು ತುಂಬ ನೋಡಿದಳು.

"ಆರಾಮ ಅದೀಯೇನವ್ವಾs"

ಉತ್ತರ ಹೇಳಬೇಕೆಂದರೆ ಬಾಯೇ ಬರಲೊಲ್ಲದು ಅವಳ ಬಾಯಿ, ನಾಲಿಗೆ, ಗಂಟಲು ಎಲ್ಲ ಒಣಗಿ ಹೋಗಿದೆ. ಹೊಟ್ಟೆಯಲ್ಲಿ ಕೆಟ್ಟ ಸಂಕಟವಾಗುತ್ತಿದೆ. ಬಹುಶಃ ಇದೇ ಮರಣ ಸಂಕಟವೆಂದುಕೊಂಡಳೋ ಏನೋ ಸಂಗವ್ವ ಕಣ್ಣ ಕೊನೆಯಿಂದ ನೀರು ಹರಿಯಿತು.

"ಯಾಕವ್ವಾ ಅಳತೀದಿ, ತ್ರಾಸ ಭಾಳ ಆಗ್ತದೇನು? ಎರಡ ದಿನಾ ಮೈಮ್ಯಾಲೆ ಅರುವು ಇದ್ದಿದ್ದಿಲ್ಲಾ, ಜ್ವರ ಭಾಳ ಇದ್ತು. ಡಾಕ್ಟರನ್ನ ಕರಕೊಂಡು ಬಂದೆ, ಅವರು ಕಟ್ಟಿನ ಜ್ವರಾ ಅಂತ ಹೇಳಿದ್ರು. ಔಷಧಾ ಕೊಟ್ಟಾರ, ಇಂಜೆಕ್ಷನ್ ಚುಚ್ಯಾರ, ಹಾಲೂ, ಗಂಜಿ, ಮೋಸಂಬಿ ರಸಾ ಕೊಡರೀ ಅಂತ ಹೇಳ್ಯಾರವ್ವಾ."

ಸಂಗವ್ವನಿಗೆ ಮಾತನಾಡಲು ಬರದಿದ್ದರೂ ಮಗ ಹೇಳಿದುದೆಲ್ಲ ಕೇಳಿಸಿತ್ತು. ಕಟ್ಟಿನ ಜ್ವರಾ ಬಂದಾವರು ನಮ್ಮೂರಾಗ ಯಾರೂ ಉಳಿದಿಲ್ಲ. ಶಾನುಬೋಗರ ಮಗಳು ಮದುವೀಗೆ ಬಂದಾಕಿ ಸತ್ಲು. ಪೀರಸಾಬನ ಅಣ್ಣ ಸತ್ತಾ, ಮತ್ತ ಯಾರ‍್ಯಾರೋ ಸತ್ತರು. ಇಂಥ ಜ್ವರ ಬಂದು ಸತ್ತವರೆಲ್ಲರನ್ನೂ ನೆನಪು ಮಾಡಿಕೊಂಡಳು. ತಾನೂ ಸಾಯುವವಳೇ ಎಂದು ದೃಢನಿಶ್ಚಯ ಮಾಡಿಕೊಂಡಳು. ಸಂಗವ್ವ ಸಾವಿಗೇನು ಹೆದರುತ್ತಿರಲಿಲ್ಲ. ಹಿರ‍್ಯಾ ಸತ್ತ ಮೇಲೆ ಒಬ್ಬಂಟಿಗಳಾಗಿ ಮಗನಿಗಾಗಿ ಬದುಕಿದ್ದಳು. ಅವನಿಗೆ ಮದುವೆ ಮಾಡಿ ಮೊಮಕ್ಕಳನ್ನು ಆಡಿಸುತ್ತ ಕೂಡ್ರಬೇಕಂದರೆ ಅವನು ಅವಳು ಎಮ್ಮೆ ಕಟ್ಟಿ ಹಿಂಡಿ ಕೊಟ್ಟ ನೊರೆಹಾಲು ಕುಡಿದು, ಪೈಲವಾನನಾಗಿ, ಕುಸ್ತಿ ಆಡುತ್ತ ಓಡಾಡುತ್ತಿದ್ದ. ಇವತ್ತಿಲ್ಲಾ ನಾಳೆ ಮಗಾ ಕುಸ್ತಿಯ ಹುಚ್ಚು ಬಿಟ್ಟು, ಹೆಣ್ಣಿನ ಹಿಂದೆ ಬಿದ್ದಾನು ಎನ್ನುವ ಆಸೆಯಿಂದ ಎಮ್ಮೆಗಳೊಂದಿಗೆ ಗುದ್ದಾಡುತ್ತ ಜೀವನ ನಡೆಸಿದ್ದಳು ಸಂಗವ್ವ. ಅವನ ಮದುವೆ ನೋಡುವುದೊಂದೇ ತನ್ನ ಆಸೆಯಿತ್ತು. ಆದರೂ ದೇವರ ಮನಸ್ಸಿಗೆ ಬರಲಿಲ್ಲ ಮತ್ತೆ ಕಣ್ಣು ತುಂಬಿ ಹರಿಯಿತು.

"ಅಳಬ್ಯಾಡವ್ವಾ, ನಿನಗ ಆರಾಮ ಆಗ್ತದ. ಹಾಸಿಗಿ ಬಿಟ್ಟು ಎಬ್ಬಿಸಬ್ಯಾಡರಿ, ಅಗಳಾಡಬ್ಯಾಡರಿ ಅಂತ ಹೇಳ್ಯಾರ ಡಾಕ್ಟರು. ಕಾಳಜಿ ಮಾಡಬ್ಯಾಡರಿ ಅಂದಾರ, ನಾ ಅದೀನಲ್ಲಾ ನೀ ಯಾಕ ಹೆದರತೀ."

ತಾನು ಮಲಗಿದಲ್ಲಿಯೇ ಮಲಗದಿರೆ ತಾನು ಮಾಡಿದ ಹೊಲಸು ತೆಗೆಯುವವರಾರು? ತನ್ನ ಆರೈಕೆ ಮಾಡುವವರಾರು ? ಚಿಂತೆಯಿಂದ ಮತ್ತೆ ಕೊರಗಿದಳು ಸಂಗವ್ವ. ಹರೆಯದ ಮಗನಿಂದ ಎಷ್ಟೊಂದು ಉಪಚಾರ ಮಾಡಿಸಿಕೊಳ್ಳುವುದು? ಸೊಸೆಯಾದರೂ ಇದ್ದಿದ್ದರೆ -

ಕಷ್ಟಪಟ್ಟು "ಸಂಕಟ ಆಗ್ತದ" ಎಂದಳು. ಕೂಡಲೆ ಅಡಿಗೆ ಮನೆಗೆ ಹೋಗಿ ಸಾಬೂ ಅಕ್ಕಿ ಗಂಜಿ, ಹಾಲು ಕೂಡಿಸಿ ತಂದ ಬಾಳಣ್ಣ ಅವಳನ್ನು ಎತ್ತಿಹಿಡಿದು ಕುಡಿಸಿದ.

"ಗಂಜೀ ನೀನಽ ಮಾಡಿದ್ಯಾ?" ಸಂಗವ್ವನ ಕ್ಷೀಣದನಿಯಲ್ಲಿ ದುಃಖ ಅಚ್ಚರಿ ಎರಡೂ ಇದ್ದವು.

"ಇಲ್ಲವ್ವಾ, ಕಾಶವ್ವನ ಮಗಳು ಪಾರ್ವತಿ ಬಂದು ಮಾಡಿದ್ಲು. ಎಮ್ಮಿ ಹಿಂಡೂದೂ ನಿನ್ನ ಮೈ ಒರಸೂದು, ಸೀರಿ ಬಿಡಸೂದು, ಗಂಜೀ ಕಾಸೂದು ಎಲ್ಲಾ ಆಕೀನ ಮಾಡ್ಯಾಳ ಈಗ ನೀ ಮಕ್ಕೊಂಡಾಗಿಂದ." ಪಾರ್ವತಿಯ ಹೆಸರು ಕೇಳಿದ ಸಂಗವ್ವನ ಮುಖದ ಮೇಲೆ ಸಮಾಧಾನದ ಸುಳಿವು ಹಾಯ್ದು ಹೋಯಿತು. ತಾನು ಸೊಸೆಯನ್ನಾಗಿ ಮಾಡಿಕೊಳ್ಳಬೇಕೆನ್ನುವ ಹುಡುಗಿಯರಲ್ಲಿ ಅವಳೂ ಒಬ್ಬಳು.

ಸಮಾಧಾನದಿಂದ ಕಣ್ಣು ಮುಚ್ಚುತ್ತಿದ್ದ ಸಂಗವ್ವನನ್ನು ಬಾಳಣ್ಣ ಮತ್ತೆ ಎಚ್ಚರಿಸಿದ. "ಅವ್ವಾಽ ನಿನಗ ಮೈಮ್ಯಾಗ ಎಚ್ಚರ ಇಲ್ಲದಾಗ ಮಲ್ಲವ್ವ ಬಂದಿದ್ಲು. ನೀ ಮಲಗಿದ್ದು ನೋಡಿ ಕಣ್ಣಾಗ ನೀರು ತಗದ್ಲು. ಹೋಗೂ ಮುಂದು ಏನೋ ಅಂದ್ಲು. ಹೊಂಗಲ ಜಾತ್ರೆ ಬಂತು ಅಣ್ಣಾಗ ಹೇಳಿ ಕಳಿಸೇನಿ. ರೂಪಾಯಿ ಬೇಕಾಗಿದ್ವು ಅಂದ್ಲು. ಆಕೀಗೆ ರೂಪಾಯಿ ಕಡ ಕೊಡತೇನಿ ಅಂದಿದ್ದಿ ಏನಬೇ?"

ಸಂಗವ್ವ ಏಳೆಂಟು ತಿಂಗಳಿಂದ ಮಲ್ಲವ್ವ ತನ್ನ ಹತ್ತಿರ ರೂಪಾಯಿ ಕೂಡಿಟ್ಟ ವಿಷಯ ಗುಟ್ಟಾಗಿ ಮಗನಿಗೂ ಹೇಳಿದಳು. ಜಾತ್ರಿಗೆ ಇನ್ನು ನಾಲ್ಕೇ ದಿನ ಉಳಿದಿವೆ ಎನ್ನುವುದನ್ನು ಕೇಳಿ ಮಗನಿಗೆ ಅಡಿಗೆ ಮನೆಯಲ್ಲಿಯ ಮಾಡಿನಲ್ಲಿಯ ಕಪಾಟಿನಲ್ಲಿಟ್ಟ ರೂಪಾಯಿಗಳನ್ನು ತಂದು ಎಣಿಸಲು ಹೇಳಿದಳು. ಎಣಿಸಿ ನೋಡಿದ ಬಾಳಣ್ಣ ಹೇಳಿದ, 'ನೂರಕ್ಕೆ ಎಂಟು ರೂಪಾಯಿ ಕಡಿಮೆ ಇವೆ' ಎಂದು. ಅವುಗಳನ್ನು ಮುಟ್ಟಿ ನೋಡಿ ಮಗನ ಕೈಯಲ್ಲಿ ಕೊಟ್ಟು 'ನಾಳೆ ಸಂಜೆ ಮಲ್ಲವ್ವ ಹೊಲದಿಂದ ಬಂರುವಾಗ ಯಾರಿಗೂ ತಿಳಿಯದಂತೆ, ಯಾರೂ ನೋಡದಂತೆ, ಅವಳ ಕೈಯಲ್ಲಿಕೊಟ್ಟು, ಎಣಿಸಿಕೊಳ್ಳಲು ಹೇಳಿ, ಅವ್ವಾ ಕೊಟ್ಟು ಕಳಿಸಿದ್ದಾಳೆ ಎಂದು ಹೇಳಿ ಬಾ' ಎಂದಳು.

ಮರುದಿನ ಸಂಜೆ ಮಲ್ಲವ್ವ ತಲೆಯ ಮೇಲೊಂದು ಹೊರೆಯನ್ನಿಟ್ಟುಕೊಂಡು, ಹಿರಿಯ ಮಗನನ್ನು ಮುಂದೆ ಮಾಡಿಕೊಂಡು, ಮನೆಗೆ ಬರುತ್ತ ರೂಪಾಯಿ ಇಲ್ಲದೆ ತವರಿನ ಜಾತ್ರೆಗೆ ಹೋಗುವುದು ಹೇಗೆಂದು ವಿಚಾರದಲ್ಲಿ ಮುಳುಗಿದ್ದಳು. ಎಲ್ಲರ ಹತ್ತಿರ 'ತವರಿಗೆ ಹೋಗುತ್ತೇನೆ, ಅಣ್ಣ ಕರೆಯಲು ಬರುತ್ತಾನೆ' ಎಂದು ಹೇಳಿಯೂ ಆಗಿತ್ತು. ಅಣ್ಣಾ ಮರುದಿನ ಬರುತ್ತೇನೆಂದು ಹೇಳಿಯೂ ಕಳಿಸಿದ್ದ. ಈಸಲ ತಾನು ಹೋಗದಿದ್ದರೆ ಅತ್ತೆ ನೆಗೆಣ್ಣಿಯರ ಮುಂದೆ ತನ್ನ ಪಾಡು ನಾಯಿಗಿಂತ ಕಡೆಯಾಗುತ್ತದೆ ಇದೇ ಹೊತ್ತಿನಲ್ಲಿ ಸಂಗವ್ವ ಮಲಗಬೇಕೆ? ಅವಳು ಆರಾಮ ಆಗುವುದು ಯಾವಾಗ ? ತನ್ನ ರೂಪಾಯಿ ಸಿಗುವದು ಯಾವಾಗ? ಕೆನ್ನೆಯ ಮೇಲೆ ಹರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಳ್ಳಲು ಅವಳ ಕೈ ಖಾಲಿಯಿರಲಿಲ್ಲ. ಸಂಜೆಯವರೆಗೆ ಮೈ ಕೈ ನೋಯುತ್ತಿದ್ದರೂ ಹೊಲದಲ್ಲಿ ಕೆಲಸ ಮಾಡಿದ್ದಳು. ತಲೆಯ ಮೇಲೆ ಭಾರವಾದ ಹೊರೆ ಹೊತ್ತಿದ್ದರಿಂದ ಕುತ್ತಿಗೆ ನೋಯುತ್ತಿತ್ತು. ಹೆಜ್ಜೆಗಳು ನಡುಗುತ್ತಿದ್ದವು. ನಡಿಗೆ ನಿಧಾನವಾಗಿತ್ತು ಜೊತೆಯವರೆಲ್ಲ ಆಗಲೇ ಮುಂದೆ ಹೋಗಿದ್ದರು. ತಾನು ಇನ್ನು ಮನೆಗೆ ಹೋಗಿ ರೊಟ್ಟಿ ಬಡಿಯಬೇಕು. ಎಲ್ಲರ ಊಟವಾದ ಮೇಲೆ ತನ್ನ ಊಟ ನಿದ್ದೆ ಅಲ್ಲಿಯವರೆಗೆ ಹೊಟ್ಟೆಯಲ್ಲಿ ಡೊಂಬರಾಟ. ಮನಸ್ಸಿನ ಸಂಕಟ, ಹೊಟ್ಟೆಯ ಸಂಕಟ ಎರಡೂ ತಾಳದೆ ಅಳುತ್ತಿದ್ದಳು. ಇದಾವುದನ್ನೂ ತಿಳಿಯದ ಕಂದ ಮುಂದೆ ಮುಂದೆ ಓಡಿಹೋಗಿ 'ಲಗೂ ಲಗೂ ಬಾ' ಎಂದು ಕರೆಯುತ್ತಿದ್ದ.

"ಮಲ್ಲಕ್ಕಾ" ಬಾಳಣ್ಣಾ ತೀರ ಹತ್ತಿ ಬಂದು ಕರೆದಾಗಲೇ ಮಲ್ಲವ್ವನಿಗೆ ಎಚ್ಚರ. "ಯಕ್ಕಾ, ತುಸಾ ಕೆಲಸದ, ಇತ್ಲಾಗ ನಿಲುವಿನ ಮರೀಗೆ ಬಾ."

ಮಲ್ಲವ್ವ ಮಗನಿಗೆ ಅಲ್ಲಿಯೇ ನಿಲ್ಲಲು ಹೇಳಿ ತಾನು ಬಾಳಣ್ಣನ ಹಿಂದೆ ಜೋಳದ ನಿಲುವಿನಲ್ಲಿ ಹೊಕ್ಕಳು. ಅವಳಿಗೆ ಮೈಮೇಲೆ ಪೂರ್ಣ ಎಚ್ಚರವಿರಲಿಲ್ಲವೆಂದರೂ ಅಡ್ಡಿಯಿಲ್ಲ.

ಹೊಲದ ಕಡೆಯಿಂದ ಮಲ್ಲವ್ವನ ಗಂಡ ಎತ್ತುಬಿಟ್ಟುಕೊಂಡು ಹೆಗಲಿಗೆ ಬಾರಕೋಲು, ಇನ್ನೊಂದು ಕೈಯಲ್ಲಿ ಕುಡುಗೋಲು ಹಿಡಿದುಕೊಂಡು ಬಂದ. ದಾರಿಯಲ್ಲಿ ನಿಂತ ಮಗನನ್ನು ನೋಡಿ "ಇಲ್ಯಾಕೆ ನಿಂತಿದಿ" ಅಂದ. " ಅವ್ವ, ಬಾಳೂಮಾಮಾ, ಒಳಗದಾರ". ಎಂದು ನಿಲುವಿನತ್ತ ಕೈ ತೋರಿಸಿದ ಮಲ್ಲವ್ವನ ಸುಪುತ್ರ.

ಸಿಟ್ಟಿನ ಅಮಲೇರಿದ ಮಲ್ಲವ್ವನ ಗಂಡ, ರೂಪಾಯಿ ಎಣಿಸಿ ಮುಗಿಸಿ ಬಾಳೆ ಪಟ್ಟೆಯಲ್ಲಿ ಸಿಗಿಸಿಕೊಳ್ಳುತ್ತಿದ್ದ ಮಲ್ಲವ್ವನತ್ತ ಧಾವಿಸಿ "ಹಾದರಗಿತ್ತಿ! ಎಂದಿಂದ ಕಲಿತೀ ಈ ಚಾಳಿ" ಎಂದವನೇ ಕುಡಗೋಲು ಬೀಸಿದ.

ಒಂದೇ ಹೊಡೆತ, ರುಂಡ ಮುಂಡದಿಂದ ಬೇರೆಯಾಗಿ ವಿಲಿವಿಲಿ ಒದ್ದಾಡಿ ಬಿತ್ತು. ದಿಗ್ಭ್ರಮೆಗೊಂಡ ಬಾಳಣ್ಣಾ ಓಡುತ್ತಿದ್ದ. ಮಲ್ಲವ್ವನ ಜಾತ್ರೆ ಮುಗಿದಿತ್ತು.

***

■■

# ಪ್ರಮೇಯ

ಬಿಳಿಯ ಜೋಡು ಕುದುರೆಗಳನ್ನು ಹೂಡಿದ ಸುಂದರವಾದ ರಥದಲ್ಲಿ ಕುಳಿತು ತಾನು ರಾಜಕುಮಾರನೊಡನೆ ಎಲ್ಲಿಗೋ ಹೋಗುತ್ತಿದ್ದಾಳೆ. ಹೊಳೆಯುವ ಪೀತಾಂಬರ, ರತ್ನದ ಆಭರಣ, ವಜ್ರದ ಕಿರೀಟ, ಬಂಗಾರದ ಡಾಬಿನಿಂದ ತಾನು ಅಪ್ಸರೆಯಂತೆ ಅಲಂಕಾರ ಮಾಡಿಕೊಂಡಿದ್ದಾಳೆ. ಬದಿಯಲ್ಲಿ ಕುಳಿತ ರಾಜಕುಮಾರನಂತೂ ಆ ಸ್ವರ್ಗದ ಇಂದ್ರನೇ ಇಲ್ಲಿಗೆ ಇಳಿದು ಬಂದ ಹಾಗೆ ಇದ್ದಾನೆ. ಒಂದು ಕೈಯಿಂದ ತನ್ನನ್ನು ಬಳಸಿ ಹಿಡಿದು, ಇನ್ನೊಂದರಿಂದ ಲಗಾಮು ಹಿಡಿದೆಳೆದು ಕುದುರೆಗಳನ್ನು ಜೋರಾಗಿ ಓಡಿಸುತ್ತಿದ್ದಾನೆ. ರಥದಲ್ಲಿ ತಾವಿಬ್ಬರೇ. ರಾಜಕುಮಾರನ ನಗು, ಕೇಕೆಗಳಿಗೇ ಕುದುರೆಗಳು ರಭಸದಿಂದ ಓಡುತ್ತಿವೆ. ಕ್ಷಣಕ್ಷಣಕ್ಕೂ ಅವುಗಳ ವೇಗ ಹೆಚ್ಚುತ್ತಿದೆ. ಆನಂದದ ಭರದಲ್ಲಿ ತನ್ನ ಎದೆ ನಗಾರಿಯಂತೆ ಜೋರಾಗಿ ಹೊಡೆದುಕೊಳ್ಳುತ್ತಿದೆ. ಬಿಗಿಯಾಗಿ ರಾಜಕುಮಾರನನ್ನು ಅಪ್ಪಿಕೊಂಡಿದ್ದಾಳೆ. ಇದ್ದಕ್ಕಿದ್ದಂತೆ ಮಹಾಪೂರದಿಂದ ಉಕ್ಕಿ ಹರಿಯುತ್ತಿದ್ದ ನದಿ ದಾರಿಗೆ ಅಡ್ಡವಾಯಿತು. ಅದಕ್ಕೆ ಸೇತುವೆಯೇ ಇಲ್ಲ. ಇದ್ದರೂ ಕಾಣುವಂತಿಲ್ಲ. ರಾಜಕುಮಾರ ತಡಮಾಡದೆ ನದಿಯಲ್ಲಿ ರಥವನ್ನು ಧುಮುಕಿಸಿಬಿಟ್ಟ. ಇನ್ನೊಂದು ಕ್ಷಣದಲ್ಲಿ ರಥ, ಕುದುರೆ, ರಾಜಕುಮಾರ ತನ್ನಿಂದ ಬೇರೆಯಾದರು. ತಾನು ಮಾತ್ರ ತುಂಬಿದ ಪ್ರವಾಹದಲ್ಲಿ ಬಿದ್ದು ಬಿದ್ದು ಏಳುತ್ತ, ನೀರು ಕುಡಿಯುತ್ತ, ಮುಳುಗಿ ಸಾಯುತ್ತೇನೆನ್ನುವ ಸಂಕಟದಿಂದ ಕೈ ಚಾಚಿ ಕೂಗುತ್ತಿದ್ದಾಳೆ. ಸುತ್ತಮುತ್ತ ಯಾರೂ ಕಾಣುತ್ತಿರಲಿಲ್ಲ. ನಿರ್ಜನ ಪ್ರದೇಶ, ಭೋರ್ಗರೆಯುವ ಪ್ರವಾಹ, ಜೋರಾಗಿ ಕೂಗಿದಳ ಯಾರಿಗಾದರೂ ಕೇಳಿಸೀತೆಂದು ಹೊಟ್ಟೆಯೊಳಗೆ ಕರುಳು ಕಿತ್ತು ಬರುವಂತೆ ವಿಕಾರವಾಗಿ ಕೂಗಿದಳು.....

"ನಾಗೂs ಏs ನಾಗವ್ವಾs ಏಳು ಹಂಗ್ಯಾಕ ಒದರಾಕ ಹತ್ತೀದಿ?" ಪಾರವ್ವ ಅವಳನ್ನು ಅಲುಗಿಸಿ ಎಬ್ಬಿಸಿದಾಗಲೇ ತಟ್ಟನೆ ಎದ್ದು ಕುಳಿತಳು. ನಾಗೂ ಹರಕು ತಟ್ಟಿನ ಮೇಲೆ.

"ಹುಶ್ಶಪ್ಪಾ, ಮೈ ಇನ್ನೂ ನಡಗಾಕ ಹತ್ತೈತಿ ನೋಡ ಯಕ್ಕಾs" ಬೆವತಿದ್ದ ಮೈಯನ್ನು ಹರಿದ ಸೀರೆಯ ಸೆರಗಿನಿಂದ ಒರೆಸಿಕೊಳ್ಳುತ್ತ, ನಾಗವ್ವ ಅಕ್ಕನತ್ತ ನೋಡಿದಾಗ ಅವಳಾಗಲೇ ಅಂಗಳದಿಂದ ಕೂಗಿದಳು.

"ಕೆಟ್ಟ ಕನಸ ಕಂಡಿದ್ದೀ ಏಳ. ಹೊತ್ತ ಏರೂತನಾ ಮಕ್ಕೊಂಡರ ಹಾಂಗs ಆಕ್ಕೈತಿ. ಗಡಾನ ಮಾರೀ ತೊಳಕೊಂಡ ಚಾ ಕುಡೀ, ರೊಟ್ಟಿ ಬಡದು ಅವಂಗ ರೊಟ್ಟೀ ಕಟ್ಟಿಕೊಡು. ಆಮ್ಯಾಲೇ ನೀನೂ ಬಾ. ನಾನು ಅವ್ವಾರ ಮನೀ ಕೆಲಸಕ್ಕೆ ಹೊಂಟೆ. ತಡಾ ಮಾಡಿದರ ಸಿಟ್ಟಾಗತಾರು" ಮರಿಯನನ್ನು ಬಗಲಲ್ಲಿ ಎತ್ತಿಕೊಂಡು ಹೊರಟ ಪಾರವ್ವ ತಿರುಗಿ ನಿಂತು ಮತ್ತೆ ಕೂಗಿದಳು. "ಆ ಸಿದ್ಧ್ಯಾ ಮಲಗ್ಯಾನ ನೋಡು. ಅವನ್ನ ಎಬ್ಬಿಸಿ ಚಾ ಕುಡಿಸಿ, ಸಾಲಿಗೆ ಹೋಗನ್ನು, ಬಿಟ್ಟರ ಹಾಂಗs ಬಿದ್ದಕೋತಾನ. "

ಬಿಚ್ಚಿದ ಕೂದಲನ್ನು ಬಿಗಿದು ಕಟ್ಟಿದ ನಾಗು ಎದ್ದು ಮುಖ ತೊಳೆದು ಬಂದು ಸಿದ್ದನನ್ನು ಎಬ್ಬಿಸಿದಳು. ಆಂ ಹೂಂ ಎನ್ನುತ್ತ ಮತ್ತೆ ಕೌದಿಯ ಮುಸುಕು ಎಳೆದವನನ್ನು ಅಲ್ಲಿಗೇ ಬಿಟ್ಟುಬಂದು ಚಾ ಕುಡಿದು, ರೊಟ್ಟಿ ಮಾಡಲು ಕುಳಿತಳು. ನಾಗವ್ವನ ರೊಟ್ಟಿಯ ಸಪ್ಪಳ ಕೇಳಿದೊಡನೆಯೇ ಒಳಗೆ ಬಂದ ರಾಮಪ್ಪನಿಗೆ,

"ಮಾವಾs ಸಿದ್ದೂನ ಎಬ್ಬಿಸು, ಸಾಲಿಗೆ ಹೋಗಬೇಕು ಅಂವಿನ್ನೂ."

"ಸಿದ್ಧ್ಯಾs ಲೇ ಸಿದ್ಯಾ, ಏಳಲೇ ಮಗನs. ಎಷ್ಟ ಸಾರೆ ಎಬ್ಬಿಸಬೇಕು ನಿನ್ನ? ನಿಮ್ಮವ್ವ ಸಾಲಿಗೆ ಕಳಿಸಿ ಸಾಹೇಬನ್ನ ಮಾಡಬೇಕಂತ ಬಡಕೊಂತಾಳ. ನೀನೂ ಸಾಲಿ ಬಿಡೂ ಹೊತ್ತ ಆದರೂ ಕೌದೀ ಮುಸುಕು ಹಾಕ್ಕೊಂಡ ಗೊರಕಿ ಹೊಡಿತೀ. ರಾಜಕುಮಾರ ಆಗ್ಯಾನ ಮಗಾ." ಮಾವನ ಕೊನೆಯ ಮಾತು, ಕೇಳಿದ ನಾಗೂ ಕಿಸಕ್ಕನೆ ನಕ್ಕಳು.

ತನ್ನ ಕನಸಿನ ಮೊದಲ ಭಾಗ ನೆನಪಾದಾಗ ನಾಗೂ ಸಂತೋಷಪಟ್ಟು, ರೊಟ್ಟಿ ಹಿಟ್ಟು ನಾದಿ, ಬಡಿದು ಹಂಚಿನಲ್ಲಿ ಹಾಕಿದಳು. ನದಿಯಲ್ಲಿ ತಾನು ಮುಳುಗಿ ಸಾಯುತ್ತಿದ್ದುದು ನೆನಪಿಗೆ ಬಂದೊಡನೆ ಹಂಚಿನ ಮೇಲೆ ಬೇಯುತ್ತಿದ್ದ ರೊಟ್ಟಿಯಂತೆಯೇ ಬೆಂದಳು. ಸುಟ್ಟು ಕರಕಾದಳು. ಮುದುಕ ಗಂಡನನ್ನು ಕಳೆದುಕೊಂಡೂ ಮಕ್ಕಳೂ ಇಲ್ಲದೆ ದಿಕ್ಕಿಲ್ಲದವಳಾಗಿ ಅಕ್ಕನ ಮನೆಯ ಆಸರೆಗೆ ಬಂದ ತಾನೆಲ್ಲಿ, ತನ್ನ ಬಣ್ಣಬಣ್ಣದ ಕನಸೆಲ್ಲಿ, ಕನಸಿನಲ್ಲಿ ಸ್ವಲ್ಪ ಹೊತ್ತಾದರೂ ರಾಜಕುಮಾರಿಯಾಗಿದ್ದೆನಲ್ಲ. ಆದರೂ ಅದು ಎಷ್ಟಾದರೂ ಕನಸೇ. ಕಣ್ಣು ತುಂಬಿ ಬಂದಾಗ ಹಣೆಯ ಬಾವರಿನೊಡನೆ ಕೂಡಿ ಕೆನ್ನೆಯ ಮೇಲೆ ಹರಿದವು. ಬೆವರು ಒರೆಸುವ ನೆಪದಲ್ಲಿ ರೊಟ್ಟಿ ತಿನ್ನಲು ಕುಳಿತ ಮಾವನಿಗೆ ಕಾಣದಂತೆ ಕಣ್ಣೀರು ಒರೆಸಿಕೊಂಡಳು.

"ನಾಗೂ ಯಾಕ? ಅಳಾಕ ಹತ್ತೀದೀ?"

"ಇಲ್ಲೋ ಮಾವಾ ನಾ ಎಲ್ಲಿ ಅತ್ತೀನಿ. ಬೆವರ ಒರೆಸಿಕೊಂಡೆ" ಇತ್ತಿತ್ತಲಾಗ ಮಾವನ ಕಣ್ಣು ಹಗಲೆಲ್ಲಾ ತನ್ನ ಮ್ಯಾಲೇ, ತಾನು ಕುಂತದ್ದು ನಿಂತದ್ದು ಎಲ್ಲಾ ನೋಡತಿರತಾನ.

"ಮುಂಜಾನೆ ಯಾಕೋ ನೆಳ್ಳ್ಯಾಡಿದಾಂಗ ಒದರಾಕ ಹತ್ತಿದಿ, ಏನಾಗಿತ್ತು ?"

"ಕನಸ ಬಿದ್ದಿತ್ತೋ ಮಾವ."

"ಯಾರರೆ ನಿನ್ನ ಹೊಡಿತಾರೇನೋ ಅನ್ನೂ ಹಾಂಗ ಒದರತಿದ್ದಿ. ಏನ ಕನಸ ಬಿದ್ದಿತ್ತು ನನ್ನ ಮುಂದರ ಹೇಳಲ್ಲ."

ನನ್ನ ಮುಂದರ ಹೇಳಲ್ಲ ಅಂತಾನ ಮಾವ. ಹೇಳಬೇಕಂತ ಹೊಂಟರ ಅಕ್ಕ ಏನು ಅಂತ ಸುದ್ದಾ ಕೇಳಲಿಲ್ಲಾ. ಇಂವನ ಮುಂದ ಹೇಳ್ಲಾ? ಆದ್ರ ಕೇಳಿ ನಕ್ಕ ಬಿಡತಾನೋ ಏನೋ.

"ಯಾಕ ಸುಮ್ಮ ಕ ಅದಿ ಹೇಳಲ್ಲ. ನಾನೂ ಆಟ ಕೇಳತೀನಿ. ನೀ ಯಾತಕ ಹೆದರತೀ ಅನ್ನೂದು ಗೊತ್ತಾಗತ್ತೈತಿ.

ಮಾವ ಅನ್ನೂದು ಖರೇ. ನಾ ಇನ್ನೂತನಾ ಯಾತಕ್ಕೂ ಹೆದರಿದಾಕೆಲ್ಲಾ. ಸಣ್ಣಾಕಿದ್ದಾಗಿಂದೂ ಯಾರಿಗೂ ಹೆದರತಿದ್ದಿಲ್ಲಾ. ಪರದೇಶಿ ಮಗಳು ಅಂತ ಅಪ್ಪ ಅಪ್ರೂಪ ಮಾಡಿ ಜ್ಯಾಪಾನ ಮಾಡಿದಾ. ಅವ್ವ ಸತ್ರೂ ಅಕ್ಕನs ಅವ್ವನಕಿಂತಾ ಹೆಚ್ಚಾಗಿದ್ಲು. ಅಕ್ಕ ಗಂಡನ ಮನಿಗೆ ಹೋಗೂದರಾಗ ತಾನs ದೊಡ್ಡಾಕಿ ಆಗಿದ್ಲು. ಮನೀ ಕೆಲಸಾ, ಹೊಲ ಮನೀ ಹ್ವಾರೇ ಎಲ್ಲಾ ಮಾಡತಿದ್ಲು. ಹರೇಕ ಬಂದಾಗ ಗಂಡಸ್ರು ಹಂತ್ಯಾಕ ಬರಾಕ ಹೆದರತಿದ್ರು. ಹಿಂದಿನಮನೀ ಎಲ್ಲಪ್ಪ ಮಾತಾಡಿಕೊಂತ ಹೆಗಲಮ್ಯಾಲೆ ಕೈ ಇಟ್ಟಾಗ ಕೈಯಾಗಿನ ಕುಡುಗೋಲು ತೊಗೊಂಡು ಏರಿ ಹೋಗಿದ್ಲು. ಮನೀಗೆ ಬಂದ ಮ್ಯಾಲೆ ಅಪ್ಪ 'ಭಪ್ಪರೆ ಮಗಳs ನೀ ಗಂಡಸ ಮಗನs ನೋಡ ನನಗ' ಅಂದಿದ್ದಾ.

ಮಾವನ ಮಾತು ಮತ್ತೆ ವರ್ತಮಾನಕ್ಕೆ ಎಳೆಯಿತು ನಾಗವ್ವನನ್ನು.

"ಕನಸ ಹೇಳ ಅಂದರ ಏಟ ದಿಮಾಕ ಬಡೀತಿ.."

ನಾಗವ್ವ ರೊಟ್ಟಿ ಬಡಿಯುತ್ತ ಹೇಳಿದ ಕನಸನ್ನು ಕೇಳಿ ರಾಮಪ್ಪ ದೊಡ್ಡ ದನಿಯಿಂದ ನಕ್ಕು ಬಿಟ್ಟ.

"ಏs ನಾಗೂs ಮಂಗಳವಾರ ನಿಮ್ಮಕ್ಕನ ಕೂಡ ಸಿನೇಮಾ ನೋಡಾಕ ಹೋಗಿದ್ದೆಲ್ಲಾ, ಅದs ಕನಸ ಬಿದ್ದೈತಿ ನೋಡ. ರಾಜಕುಮಾರನ ಕಥೀ ಹೌದಲ್ಲೋ, ನೀ ನೋಡಿದ್ದು?"

ಹೌದೆಂದು ಗೋಣುಹಾಕದ ನಾಗವ್ವ ರೊಟ್ಟಿ ಗಂಟು ರಾಮಪ್ಪನ ಕೈಗಿಟ್ಟು, ಸಿದ್ದನನ್ನು ಶಾಲೆಗೆ ಅಟ್ಟಿ, ಮನೆಗೆ ಕೀಲಿ ಹಾಕಿ, ಅಪ್ಪಾರ ಮನೆಯ ಕೆಲಸಕ್ಕೆ ಹೊರಟಳು.

ತನ್ನ ಊರ ಜಾತ್ರ್ಯಾಗ, ತಂಬೂದಾಗ ತಟ್ಟಿನ ಮ್ಯಾಲೆ ಕುಂತು ತಾನು ಮೊದಲನೇ ಸಾರೆ ಸಿನಿಮಾ ನೋಡಿದ್ಲು. ಮಾತಾಡಿಕೊಂತ ಹಾಡಿಕೊಂತ ಪರದೇದ ಮ್ಯಾಲೆ ಓಡ್ಯಾಡೂ ಜೀವಂತ ಗೊಂಬೀ ನೋಡಿ ಚೋಜಿಗಪಟ್ಟಿದ್ಲು. ಅಕ್ಕನ ಮನೀಗೆ ಇರಾಕ ಬಂದ ಎಷ್ಟೋ ದಿನದ ಮ್ಯಾಲೆ ದೇವರ ಸಿನೇಮಾ ಬಂದsದ. ಅದನ್ನ ನೋಡಿ ದುಕ್ಕಾ ಮರೀ ಅಂತ ಅಕ್ಕ ಕರಕೊಂಡು ಹೋದ್ಲು. ಸಿನೇಮಾ ತೋರಸೂಮನೀ ಭಾಳ ಛಂದಾಗಿತ್ತು. ಕುರ್ಚಿ ಮ್ಯಾಲೆ ಕುಂತಿದ್ವಿ. ದೇವರು ಪ್ರತ್ಯಕ್ಷ ಆದಾಗ ಕೈ ಮುಗಿಯೂದ ನೋಡಿ, "ಸುಮಾಕ ಕುಂದ್ರು, ಹಂಗೆಲ್ಲಾ ಮಾಡಬೇಡ, ಇಲ್ಲಿ ಮಂದಿ ನಗ್ತಾರ" ಅಂದ್ಲು ಅಕ್ಕ. ಮನೀಗೆ ಬರೂಮುಂದ ಹೇಳಿದ್ಲು "ಒಳ್ಳ್ಯಾವರನ್ನ ದೇವರು ಕೈ ಬಿಡೂದಿಲ್ಲ ನೋಡು, ಸಿನೇಮಾದಾಗ ಹ್ಯಾಂಗಾತು? ಆಕೀಗೆ ಎಷ್ಟ ಕಷ್ಟ ಆದ್ರೂ ಕಡೀಕ ಛಲೋ ಆತಿಲ್ಲೋ? ನೀ ಇನ್ನ ಮ್ಯಾಲೆ ಅಳಬ್ಯಾಡಾ. ಅಪ್ಪ ಸತ್ತರ ಏನಾತು? ನಾ ಅದೀನಿ. ಇದs ನಿನ್ನ ಮನೀ ಅಂತ ತಿಳಕೋ. ಸಿದ್ಧಾ, ಮರಿಯಾ ನಿನ್ನ ಮಕ್ಕಳು ಅಂತ ತಿಳಕೋ. ರಟ್ಯಾಗ ಕಸುವು ಇರೂತನ್ಕಾ ಎಲ್ಲಿದ್ರೂ ದುಡಿಯೂದ ಐತಿ. ಹ್ಯಾಂಗರೆ ಹೊಟ್ಟೀ ತುಂಬಿಸಿಕೊಳ್ಳೂಣು" ಅಂತ.

ಅಂದಿನಿಂದ ನಾ ಅಳೂದ ಬಿಟ್ಟಬಿಟ್ಟೆ. ಆ ಮುದುಕ ಗಂಡ ಸತ್ತದ್ದಕ್ಕ ನನಗ ಏನ ದುಕ್ಕಾ ಆಗಿದ್ದಿಲ್ಲಾ. ಮಂದಿ ಏನರೆ ಆಡಿಕೊಂಡಾರು ಅಂತ ಹೆದರಿ ಅಳತಿದ್ದೆ. ನನಗ ಗಂಡಾ, ಮಕ್ಕಳು ಯಾರೂ ಇಲ್ಲಾ, ಒಂಟಿ ಬಡಕ ಆದೆ, ಪರದೇಶಿ ಆದೆ ಅಂತ ಅನಿಸಿದಾಗ ದುಕ್ಕಾ ಉಕ್ಕಿ ಬರುತ್ತಿತ್ತು. ಆದರ ಆಸರಕ ದೇವರಂಥಾ ಅಕ್ಕ ಸಿಕ್ಕಮ್ಯಾಲೆ ಸುಮ್ಮನಾದೆ. ಹಾಂಗs ಶಾಹರಕ ಹೊಂದಿಕೊಂಡೆ. ಮೊದಲ ನನಗ ಮನೀ ಕೆಲಸ ಮಾಡಾಕ ಬರತಿದ್ದಿಲ್ಲಾ. "ಅವ್ವಾರs ನಮ್ಮ ನಾಗೀ ಕೆಲಸಾ ಹ್ಯಾಂಗರೆ ಸಂಬಾಳಿಸಿಕೊಳ್ರಿ. ಆಕೀಗ ಇದನ್ನೆಲ್ಲಾ ಮಾಡಿ ವೈವಾಟ ಇಲ್ಲಾ. ಬರಬರತ ತಾನ ಕಲೀತಾಳ" ಅಂತ ದೈನಾಸಬಿಟ್ಟು ಬೇಡಿಕೊಂತಿದ್ಲು. ಮನೀಗೆ ಬಂದ ಮ್ಯಾಲೆ ನನಗ ಹೇಳತಿದ್ಲು.

"ನಾಗೂs, ಅವ್ವಾರ ಮನೀ ಕೆಲಸಾ ಹಸsನಾಗಿ ಮಾಡಿ, ಭಾಂಡಿ ಲಕಾಲಕಾ ಹೊಳೆಯುವಾಂಗ ತಿಕ್ಕು. ಅರಿಬಿ ಬೆಳ್ಳsಗ ಒಗೀ, ಕಸಾ ಉಡಗೂ ಮುಂದ ಜ್ಯಾಕಿ, ಹಾಂ ಮತ್ತ ಮನ್ಯಾಗೆಲ್ಲಾ ಅಡ್ಡ್ಯಾಡತೀಯಲ್ಲಾ, ಸಾಮಾನು ಎಲ್ಲ ಕಡೆ ಇಟ್ಟಿರತಾರ, ಕೈ ಸುದ್ದಾಗಿ ಇಟಕೋ, ಆಶೇಕ ಬಿದ್ದು ಕಳವು ಮಾಡಬ್ಯಾಡಾ. ಅವ್ವಾರು ಭಾಳ ಛೊಲೋ ಮನಶ್ಯಾರು ಅದಾರ. ದಯಾ -ಮಯಾ ಮಾಡತಾರ. ನಾ ಮರಿಯನ್ನ ಹಡಿಯಾಕ ದವಾಖಾನಿಗೆ ಹೋಗಿದ್ದೆ. ಅವಾಗ ಮುಂಗಡ ರೊಕ್ಕಾ ಕೊಟ್ಟು ಸಹಾಯ ಮಾಡ್ಯಾರ ನಮಗ, ಕಷ್ಟದಾಗ ಆದವರನ್ನು ನೆನಸಬೇಕು. ಅವರಿಗೆ ಮೋಸಾ ಮಾಡ್ಬಾರ್ದು. ದೇವ್ರು ಮೆಚ್ಚೂದಿಲ್ಲಾ. ಹಾಂ ಮತ್ತೊಂದು ಮಾತ ಹೇಳತೀನಿ. ಅವರ ಮನೀ ಅಪ್ಪಾರು, ಮಕ್ಕಳು ಯಾರ ಮಾತಾಡ್ಸಿದ್ರೂ ಹಲ್ಕಿರೀಬ್ಯಾಡ. ಮಾರಿ ಕೆಳಗ ಹಾಕಿ ಹೂಂ ಅನ್ನು. ಸಿಟ್ಟಿನಾಗ ಒಂದು ಮಾತು ಹೆಚ್ಚು ಕಡಿಮೀ ಆಡಿದ್ರೂ ತಡಕೋ, ಸಿಡಿಪಿಡಿ ಮಾಡಬ್ಯಾಡಾ. ಒಟ್ಟಿನ ಮ್ಯಾಲೆ ಅವರ ನಂಬಿಕೆ ಉಳಿಸಿಕೋಬೇಕ ನಾವು ತಿಳೀತಿಲ್ಲೋ."

ಅಕ್ಕ ಹೇಳಿದ್ದಕ್ಕೆಲ್ಲ ತಾನೂ ಹೂಂ ಎನ್ನುತ್ತ ಬಂದಿದ್ದಳು. ಗಂಡನ ಮನಿಗೆ ಹೋಗೂ ಹುಡುಗೀಗೆ ಹೇಳೂ ಹಾಂಗ ಹೇಳಿದ್ಲೂ ಅಕ್ಕ. ಆದರ ತಾನು ಹಿಂದಕ ಖರೇನ ಗಂಡನ ಮನೀಗೆ ಹೋಗೂ ಮುಂದ ಅಕ್ಕ ಅತ್ತs ಅತ್ತಿದ್ಲು. ಏನೂ ಹೇಳಿದ್ದಿಲ್ಲಾ, ಅಪ್ಪನ ವಯಸ್ಸಿನ ಗಂಡಗ ನಮ್ಮ ನಾಗೂನ ಕೊಟ್ಟೆವಲ್ಲಾ ಅಂತ ಆಕೀಗೆ ಗೊತ್ತಿತ್ತು. ಅವ್ವ ತನ್ನ ಹಡಿಯೂ ಮುಂದ ಭಾಳ ತ್ರಾಸ ಆತಂತ. ಡಾಕ್ಟರನ ಕರಕೊಂಡ ಬಂದು ತೋರಿಸಿದರೂ ಅವ್ವ ಉಳೀಲಿಲ್ಲಾ. ಆವಾಗ ಅಪ್ಪ ಗಂಡನ ಕಡೀಂದ ಸಾಲಾ ಮಾಡಿದ್ನಂತ. ಅದನ್ನ ತೀರಿಸಲಿಕ್ಕೆ ಆಗಲೇ ಇಲ್ಲಾ. ಅಕ್ಕನ ಲಗ್ಗಣಕ ಮತ್ತಷ್ಟು ಸಾಲಾ ಮಾಡಿದಾ. ಅದನ್ನ ಮುಗಿಸಾಕ ಅಪ್ಪ ತನ್ನ ಅವಗ ಕೊಡಬೇಕಾಯಿತು. ರೊಕ್ಕಕ್ಕ ನನ್ನ ಕೊಂಡುಕೊಂಡ ಮುದುಕ ಗೂರತಿದ್ದಾ. ಅಂತಾವನಿಂದ ಏನು ಸುಕಾ ಸಿಗಬೇಕ ತನಗ. ಅಂವಾ ಸತ್ತ ಮ್ಯಾಲೆ ಇದ್ದೋಟು ಅವನ ಹೊಲಾ ಮನೀ ಸವತೀ ಮಕ್ಳು ಸುಲಕೊಂಡರು. ನಾ ಅಲ್ಲೆ ಇದ್ದು ಏನ ಮಾಡಬೇಕಾಗಿತ್ತು? ಹೋಯ್ತು ಚಂಡಾಳಿ ಮಾರ್‍ಯಾಗ ಮಣ್ಣ ಹಾಕೊಂಡು ಅಂತ ಇತ್ಲಾಗ ಬಂದು ಬಿಟ್ಟೆ....

"ನಾಗವ್ವಾs ಎಷ್ಟ ಸಾರೆ ಒರಸತೀಯ ನೆಲಾ, ಸ್ವಚ್ಛ ಆಗೇದ ಸಾಕ ಬಿಡು ಇನ್ನ" ಅವ್ವಾರ ಮಾತಿನಿಂದ ಎಚ್ಚರಗೊಂಡ ನಾಗವ್ವ ಮುಂದಿನ ಕೆಲಸಕ್ಕೆ ಹೊರಟಳು.

"ನಾನು ಒಂದೀಟು ಪ್ಯಾಟ್ಯಾಗ ಹೋಗಿ ಬರತೇನಿ ಅವ್ವಾರ ಕೂಡ. ನಾಗೂ ನೀ ಮನೀಗೆ ನಡೀ, ಊಟಾ ಮಾಡಿ ಕಟಗೀ ಮಾಡು ಹೋಗು" ಎಂದಳು ಪಾರವ್ವ.

***

ಆ ದಿನ ನಾಗವ್ವ ಮನೆಯ ಕೆಲಸಕ್ಕೆ ಬಾರದುದಕ್ಕೆ ಅವ್ವಾರಿಗೆ ತುಂಬ ಕಸಿವಿಸಿಯಾಗಿತ್ತು. ಪಾರವ್ವನೊಡನೆ ಮಾತನಾಡಲು ಅವರಿಗೆ ಬಿಡುವಿರಲಿಲ್ಲ. ಮಧ್ಯಾಹ್ನವೂ ನಾಗವ್ವಾ ಬಾರದಿದ್ದಾಗ.

"ಪಾರವ್ವಾs ನಾಗೂ ಆರಾಮ ಅದಾಳಿಲ್ಲೋ?" ಎಂದರು.

"ಅದಾಳಲ್ರೀ. ಆಕೀಗೇನ ಆಗೇದ ಧಾಡಿ."

"ಮತ್ತ್ಯಾಕೋ ಕೆಲಸಕ್ಕೆ ಬರಲಿಲ್ಲಾ.....?"

"ಏನು ಬರತಾಳ್ರೀ? ಮಂದ್ಯಾಗ ಮಾರಿ ಹ್ಯಾಂಗ ತೋರಸತಾಳ ನಾಚಿಗ್ಗೇಡಿ" ಪಾರವ್ವನ ಮುಖ ದುಮುದುಮು ಉರಿಯುತ್ತಿತ್ತು. ದನಿ ಏರಿತ್ತು. ಆ ಹೊತ್ತಿನಲ್ಲಿ ಅಪ್ಪಾ ಅವರು ಇರುವುದಿಲ್ಲ ಎನ್ನುವುದು ಗೊತ್ತು ಅವಳಿಗೆ. ಏನು ಕೊಟ್ಟರೂ ತಂಗಿಗೆ ಒಂದು ತುತ್ತು ಕೊಡದೆ ತಿನ್ನುತ್ತಿರಲಿಲ್ಲ ಪಾರವ್ವ. ಅಂಥವಳಿಗೆ ತಂಗಿಯ ಮೇಲೆ ಸಿಟ್ಟು ಬಂದಿದೆಯೆಂದರೆ-

"ಯಾಕ ಏನಾತು?"

"ಅವ್ವಾರ ನಿಮ್ಮ ಮುಂದ ಸುಳ್ಳು ಹ್ಯಾಂಗ ಹೇಳಲ್ರಿ? ದೇವರಂತಾವ್ರು, ಹರೇದ ಹುಡುಗೀನ್ನ ಮನ್ಯಾಗ ಇಟಕೊಂಡದ್ದಕ್ಕ ನನಗ ಎದೀ ಮ್ಯಾಲೆ ಕುಂತಾಂಗ ಆಗಿತ್ರಿ" ಉಗುಳು ನುಂಗಿ ಸುಮ್ಮನಾದಳು ಪಾರವ್ವ, ಹೇಗೆ ಹೇಳಬೇಕೋ ತಿಳಿಯದೆ.

"ನಿಮ್ಮಲ್ಲೆ ಗಂಡ ಸತ್ತಮ್ಯಾಲೆ ಉಡಿಕಿ ಮಾಡಿಕೋತಾರಲ್ಲ, ಹಾಂಗ ಯಾರಿಗರೆ ಮಾಡಿಕೊಡಬೇಕು" ಪರಿಹಾರ ಸೂಚಿಸಿದರು ಅವ್ವಾರು.

"ನಾನು ಹಾಂಗs ಮಾಡಿದ್ನಿರಿ. ಯಾರರೇ ದುಡುದು ತಿನ್ನೂ ಗಟ್ಟಿಮುಟ್ಟ ಆಳು ಸಿಕ್ಕರ ಮಾಡಿಕೊಡಬೇಕು ಅಂತs ಮಾಡಿದ್ದೆ. ಹಿರ್‍ಯಾನ ಮುಂದ ಅಂದಿದ್ದೆ. ಆದರ ಇಂದ ಮುಂಜಾನೆ ಎದ್ದ ಕೂಡಲೆ ನಾಗಿ ಹಿಂದಕ ಮಾಡಿಕೊಳ್ಳಾಕ ಹತ್ತಿದ್ಳು. ನನ್ನ ಎದೀನ ಒಡೀತು. ಕೇಳಿದೆ ಎರಡ ತಿಂಗಳಾತು ತಲೀಗ ನೀರ ಹಾಕ್ಕೊಂಡಿಲ್ಲಾ ಅಂದ್ಳು."

"ಚ್ಚು, ಚ್ಚು, ಪಾಪ"

"ನನಗ ಇಂಥಾ ಸಿಟ್ಟ ಬಂತು ನೋಡ್ರಿ. ಕೂದಲ ಹಿಡಿದು ದರಾ ದರಾ ಎಳದು ಒಳಗ ತಂದು, ಹಿರ್‍ಯಾನ ಕಾಲ್ಮರಿ ತೊಗೊಂಡ ಹೊಡದೆ, ಮಿಟ್ಟೆನ ಮಿಸುಕಲಿಲ್ಲಾ. ಯಾರ ಕೂಡಾ ಮಲಗಿದ್ದಿ ಅಂತ ಎಷ್ಟ ಕೇಳಿದ್ರೂ ದೆವ್ವ ಬಡಿದ್ಹಾಂಗ ಸುಮಾಕ ಇದ್ಳು. ಹಾಳಾಗಿ ಹೋಗ ರಂಡೆ ನನ್ನ ಮನ್ಯಾಗ ಇರಬ್ಯಾಡ ಅಂತ ಒದ್ದು ಬಂದೆ."

"ಹೋಗ ಅಂದ್ರು ಎಲ್ಲಿ ಹೋಗಬೇಕ ಆಕಿ ಪಾಪ ಸಣ್ಣಾಕಿ"

"ಸಣ್ಣಾಕಿ ಏನ್ರಿ, ಇಂಥಾ ಕೆಲಸ ಮಾಡಬಾರದೂ ಅನ್ನೂದೂ ಇಕೀಗೆ ತಿಳಿಯೂದಿಲ್ಲೇನ್ರಿ. ನಮ್ಮ ಮಾರಿಗೆ ಮಸೀ ಹಚ್ಚಿದ್ಳು. ಮಂದ್ಯಾಗ ನಾ ಹ್ಯಾಂಗ ಮಾರೀ ತೋರಸ್ಲಿ? ಯಾವನ ಕೂಡ ಇದ್ಲೋ ಹೋಗ್ಲಿ ಅವನ ಹಿಂದs

ಹಾಳಾಗಿ." ಪಾರವ್ವ ಮುಖಕ್ಕೆ ಸೆರಗು ಹಾಕಿ ಅಳಹತ್ತಿದಾಗ ಅವಳನ್ನು ಹೇಗೆ ಸಮಾಧಾನ ಮಾಡಬೇಕೆನ್ನುವುದು ಅವ್ವಾರಿಗೆ ತಿಳಿಯಲಿಲ್ಲ.

"ನಾಳೆ ಆಕಿನ್ನ ಕಳಿಸಿಕೊಂಡು. ನೀ ಸುಮ್ಮನಿರು, ಬಯ್ಯಬ್ಯಾಡಾ, ಆದದ್ದಾಗಿ ಹೋಗೇದ. ಮನಶ್ಯಾ ಅಂದಮ್ಯಾಲೆ ತಪ್ಪು ಮಾಡೂದು ಸ್ವಾಭಾವಿಕ. ಆಕಿನ್ನ ನಾನs ಕೇಳತೇನಿ. ಏನರೆ ಮಾಡೋಣು, ಸಮಾಧಾನ ಮಾಡಕೋ."

ಅವ್ವಾರು ಹೇಳಿದಂತೆ ನಾಗಿಯನ್ನು ಕಳಿಸಲು ಒಪ್ಪಿಕೊಂಡು ಪಾರವ್ವ ಮನೆಗೆ ಹೋದಳು ಗಳುವಿನ ಮೇಲಿದ್ದ ಸೀರೆಯೂ ಇರಲಿಲ್ಲ. ಮನೆಯಲ್ಲಿ ನಾಗಿಯೂ ಇರಲಿಲ್ಲ.

***

ಪಾನಪಟ್ಟಿಯ ಅಂಗಡಿಯ ಮುಂದೆ ನಿಂತವಳನ್ನು ಅವ್ವಾರು ಮತ್ತೆ ಮತ್ತೆ ನೋಡಿದರು. ನಾಗವ್ವನ ಹಾಗೆಯೇ ಕಾಣುತ್ತಿದ್ದಳು ಅವಳು. ಅಕ್ಕನ ಮನೆಯಿಂದ ಅವಳು ಓಡಿಹೋಗಿ ಐದಾರು ತಿಂಗಳು ಕಳೆದಿದ್ದವು. ಅವಳು ತನ್ನ ಪಾಲಿಗೆ ಸತ್ತಳೆಂದು ಪಾರವ್ವ ಸುಮ್ಮನಾಗಿದ್ದಳು. ಅಂಗಡಿಯವನೊಡನೆ ಕುಲುಕುಲು ನಗುತ್ತ ಮಾತನಾಡುತ್ತಿದ್ದವಳ ನಿಲುವು, ಆಕಾರ ಎಲ್ಲವೂ ಹಾಗೆಯೇ ಇದೆ. ಆದರೆ ಹೂವಿನ ತೆಳ್ಳನ್ನ ಪತ್ತಲ, ಅಗ್ಗದ ರಂಗು ರಂಗಿನ ರಿಬ್ಬನ್ನು, ಪ್ಲಾಸ್ಟಿಕ್ ಮಣಿಸರ, ಕಿವಿಯಲ್ಲಿ ಜೋತಾಡುವ ಹೊಳೆಯುವ ಲೋಲಾಕು, ತಲೆಯಲ್ಲಿ ಹೂವಿನ ಮಾಲೆ ಎಲ್ಲ ಅವ್ವಾರಲ್ಲಿ ಸಂಶಯ ಎಬ್ಬಿಸಿದವು. ಅಲ್ಲದೆ ಇವಳಿಗೆ ಹೊಟ್ಟೆಯೂ ಇಲ್ಲವಲ್ಲ! ಅವರಿನ್ನೂ ಯೋಚಿಸುತ್ತಿದ್ದಾಗಲೇ ಅಂಗಡಿಯವನು ಕೈಮುಟ್ಟಿಕೊಟ್ಟ ಪಟ್ಟಿಯನ್ನು ಬಾಯಲ್ಲಿಡುತ್ತ ಇತ್ತ ತಿರುಗಿದಳು.

ಹೌದು, ನಾಗವ್ವನೇ ಇವಳು, ಅವ್ವಾರು ಆಶ್ಚರ್ಯಪಟ್ಟರು. ಕರೆಯಬೇಕೆನ್ನುವಷ್ಟರಲ್ಲಿ ತಿರುಗಿ ನೋಡದೆ ಮರೆಯಾಗಿದ್ದಳು. ಅವ್ವಾರು ಪಾರವ್ವನಿಗೂ ಏನೂ ಹೇಳಲಿಲ್ಲ. ಮತ್ತೊಂದು ಸಲ ಇದೇ ನಾಗವ್ವನನ್ನು ಪೇಟೆಯಲ್ಲಿ ನೋಡಿದರು. ಜೊತೆಗೆ ಚೌಕಳಿ ಲುಂಗಿ, ಬನೀನು ತೊಟ್ಟ ಒಬ್ಬ ಕರಿಯ ಗಂಡಸೂ ಇದ್ದ. ಆ ಸಲವೂ ಗದ್ದಲದಲ್ಲಿ ಮರೆಯಾಗಿದ್ದಳು. ಮೂರನೆಯ ಸಲ ಬಸ್ಸಿನಲ್ಲಿ ಕಾಲಿಡಲೂ ಜಾಗವಿಲ್ಲದೆ ಕೈಯಲ್ಲಿ ಚೀಲ ಹಿಡಿದುಕೊಂಡು ಮೇಲಿನ ತೊಗಲಿನ ಪಟ್ಟಿಗೆ ಜೋತಾಡುತ್ತಿರುವಾಗ ನಾಗವ್ವ ತಾನು ಕುಳಿತ ಸ್ಥಳದಿಂದ ಎದ್ದು ಅವ್ವಾರಿಗೆ ಕೂಡ್ರಲು ಹೇಳಿದ್ದಳು. ಆ ಗದ್ದಲದಲ್ಲಿ ಅವಳನ್ನು ಮಾತಾಡಿಸುವುದೂ ಸಾಧ್ಯವಿರಲಿಲ್ಲ. ದಾರಿಯಲ್ಲಿ ಯಾವಾಗಲೋ ಇಳಿದು ಹೋದ ನಾಗವ್ವ ಅವ್ವಾರ ಮನಸ್ಸಿನಿಂದ ಮರೆಯಾಗಿರಲಿಲ್ಲ. ಚಿತ್ರದಂತೆ ಅಚ್ಚೊತ್ತಿದ್ದಳು.

ಆ ಚಿತ್ರ ಮಾಸುವ ಮೊದಲೇ ಒಂದು ದಿನ ಅವ್ವಾರು ಗೆಳತಿಯೊಡನೆ ಸಿನೇಮಾಕ್ಕೆ ಹೋದಾಗ ಬಾಲ್ಕನಿಗೆ ಹೋಗದೆ ಹೆಂಗಸರ ಜಾಗಕ್ಕೆ ಹೋಗಿದ್ದರು. ಇಂಟರ್‌ವಲ್‌ನಲ್ಲಿ ನೋಡಿದಾಗ ಅವರ ಇನ್ನೊಂದು ಬದಿಗೆ ಕುಳಿತವಳು ನಾಗವ್ವನೇ ಆಗಿರಬೇಕೇ? ಈ ಸಲ ಅವರು ಹಿಡಿದ ಪಟ್ಟು ಬಿಡಲಿಲ್ಲ. ಸಿನೇಮಾದಿಂದ ಬರುವಾಗ ದಾರಿಯಲ್ಲಿ ನಾಗವ್ವ ತನ್ನ ಕಥೆ ಹೇಳಿದಳು.

"ಅವ್ವಾರs ಅಕ್ಕ ಹೇಳಿದ್ದು ಖರೇ, ಅಲ್ಲಿಂದ ಬರೂ ಮುಂದ ನಾನು ಎರಡು ತಿಂಗಳ ಹೊಟ್ಟೀಲಿದ್ದೆ...."

"ಮತ್ತ?" ಅವ್ವಾರು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು.

"ನನ್ನ ಹೊಟ್ಟೀನ ನನಗ ಭಾರ ಆದಾಗ ಎಲ್ಲಿ ಕಳ್ಳು ಎಲ್ಲಿ ಕೂಡೀ, ಚಿವುಟಿ ಒಗದನ್ರೀ ಅದನ್ನ. ನನ್ನ ಬಾಳೇ ಎಲ್ಲಾ ಬ್ಯಾರೇ ದಾರಿ ಹಿಡಿದಾಗ ಇದನ್ನ ಹೇಳಾಕ ನನಗೇನ ನಾಚಿಕೆ ಇಲ್ಲ ನೋಡ್ರಿ. ಅದನ್ನ ಬಿಟ್ಟೇಬಿಟ್ಟೇನಿ." ವಿಷಾದ ತುಂಬಿತ್ತು ಅವಳ ದನಿಯಲ್ಲಿ. ಈ ಜೀವನ ಅವಳಿಗೆ ಸುಖ ತಂದಿಲ್ಲವೆನ್ನುವುದು ಸ್ಪಷ್ಟವಾಗಿ ಕಾಣುತ್ತಿತ್ತು.

"ಅಲ್ಲ ನಾಗವ್ವಾs ನಿನ್ನ ಕಾಲ ಮ್ಯಾಲೆ ನೀನs ಕಲ್ಲು ಹಾಕ್ಕೊಂಡಿ. ಈಗ ನೋವಾಗ್ತದ ಅಂತ ಅತ್ತರ ಹ್ಯಾಂಗವ್ವಾ? ನಿನ್ನ ಯಾರಿಗರೇ ಉಡಿಕೀ ಮಾಡಿಕೊಡಬೇಕಂತ ಮಾಡಿದ್ಲು ಪಾರವ್ವಾ. ಆಕೀ ಎದಿ ಒಡಿಯೂ ಹಾಂಗ ಮಾಡಿ ಓಡಿಬಂದಿ."

"ಹಾಂಗಲ್ರೀ ಅವ್ವಾ. ನನಗೇನು ಬ್ಯಾಡಾಗಿತ್ತೇನ್ರಿ ಅಕ್ಕನ ಆಸರಾ? ಇಲ್ಲೆ ಹದಿನೆಂಟು ಮಂದಿ ಹರದು ಪಲ್ಲೇ ಮಾಡತಾರ ನನ್ನ. ಈ ಸುಕಾ ಯಾರಿಗೆ ಬೇಕಾಗಿತ್ರಿ.?" ನಾಗವ್ವನ ಕಣ್ಣು ತುಂಬಿದ್ದವು.

"ಸಿಟ್ಟಾಗಿ ಎರಡೇಟು ಹೊಡದ್ರೂ ನೀ ತಡಕೋಬೇಕಾಗಿತ್ತು ನಾಗವ್ವಾ. ತಪ್ಪು ಮಾಡಿದ್ದಿ ಅಂದಮ್ಯಾಲೆ ಶಿಕ್ಷಾ ಅನುಭೋಗಿಸಬೇಕಲ್ಲ. ನಾ ಹೇಳಿದ್ದೆ ಪಾರವ್ವಗ, "ನಾಗೂ ಸಣ್ಣಾಕಿ, ತಿಳೀಲಾರದ ತಪ್ಪು ಮಾಡ್ಯಾಳ. ಅಷ್ಟು ಸಿಟ್ಟಾಗಬ್ಯಾಡ, ಡಾಕ್ಟರರಿಗೆ ಹೇಳಿ ಏನರೇ ಮಾಡೂಣು ಅಂತ."

ಅವ್ವಾರ ದನಿಯಲ್ಲಿನ ಸಹಾನುಭೂತಿ ಧೈರ್ಯ ಕೊಟ್ಟಿತೋ ಏನೋ, ನಾಗವ್ವ ಅಂಗಲಾಚಿದಳು. "ಅವ್ವಾರs ಹೊಟ್ಟ್ಯಾಗಿನ ಒಂದ ಮಾತ ನಿಮ್ಮ ಮುಂದ ಹೇಳತೀನಿ, ಅಕ್ಕನ ಮುಂದ ಅನ್ನಬ್ಯಾಡ್ರಿ ನನ್ನಾಣೆ ಆಗೇದ."

ಅವ್ವಾರು ಭರವಸೆ ಕೊಟ್ಟಮೇಲೆ "ಅವ್ವಾರs ಉಪ್ಪು ಹುಳಿ ತಿನ್ನೂ ಮನಶ್ಯಾಳು ನಾಗವ್ವಾ ತಪ್ಪು ಮಾಡಿರಬೇಕು ಅಂತ ನೀವು ತಿಳಕೊಂಡೀರಿ. ಅಕ್ಕಾ ಹಾಂಗs ತಿಳಿಕೊಂಡು ಹೊಲಸ ರಂಡಿ ಅಂತ ನನ್ನ ಬಯ್ಯುತಿರಬೇಕು. ಆದರ ಅವ್ವಾರ, ನನ್ನ ಮ್ಯಾಲೆ ಆಸೆ ಮಾಡಿ ನನ್ನ ಕೆಡಿಸಿದವರು ಯಾರ ಗೊತ್ತೈತಿ ಏನ್ರಿ?" ಎಂದು ನಾಗವ್ವ ನೇರವಾಗಿ ಕೇಳಿದಾಗ ಅವ್ವಾರ ಮೈ ಜುಮ್ಮೆಂದಿತು. ಏನು ಹೇಳುವಳೋ ಎಂದು ಎದೆ ಡವಗುಟ್ಟಿತು.

"ನನ್ನ ಪಿರುತೀ ಅಕ್ಕನ ಗಂಡ, ನನ್ನ ಮಾವ ನನಗ ಗಂಟ ಬಿದ್ದನ್ರಿ, ಅಕ್ಕ ಕೆಲಸಕ್ಕ ಹೋದಾಗ ಬಂದು ನನ್ನ ಕಾಡತಿದ್ದಾ. ಒಪ್ಪದಿದ್ದರ ಮನೀ ಬಿಟ್ಟ ಹೊರಗ ಹಾಕ್ಕೇನಿ ಅಂತಿದ್ದಾ" ದುಃಖದಿಂದ ಗಂಟಲು ನರ ಸೇದಿದಂತಾಗಿ ಸುಮ್ಮನಾದಳು ನಾಗವ್ವ.

"ಪಾರವ್ವಾ ಭಾಳ ಸಾರೆ ಕೇಳಿದ್ಲಂತ, ಯಾರು ಅಂತ, ನೀ ಯಾಕ ಹೇಳಿಲಿಲ್ಲಾ?"

"ಅವ್ವಾರs ಸಣ್ಣಾಂದಿರತ ನನ್ನ ಮಗಳಕಿಂತಾ ಹೆಚ್ಚ ಜ್ಯಾಪಾನ ಮಾಡ್ಯಾಳ್ರಿ. ಗಂಡ ಸತ್ತಮ್ಯಾಲೆ ಆಸರಾ ಕೊಟ್ಟಾಳ್ರಿ, ತನ್ನ ಬಾಯಾಗಿನ ತುತ್ತು ರೊಟ್ಟ್ಯಾಗ ನನಗ ಅರ್ಧ ಕೊಟ್ಟಾಳ್ರಿ. ಹಂತಾ ಅಕ್ಕನ ಬಾಳೇಕ ಬೆಂಕಿ ಹಚ್ಚಬೇಕೇನ್ರಿ ನಾನು? ಆಕೀಗೆ ಸವತಿಯಾಗಿ ಕಂಟಕ ಆಗೂದಕ್ಕಿಂತ ಕಣ್ಮರಿ ಆಗಿ ಹೋಗಬೇಕಂತ ಮನೀ ಬಿಟ್ಟ ಬಂದಿನ್ರಿ. ಅವ್ವಾರs ನಿಮ್ಮ ಕಾಲ ಬೀಳತೇನಿ, ಆಕೀ ಮುಂದ ಹೇಳಬ್ಯಾಡ್ರಿ ಗಂಡಾ ಹೇಣ್ತಿ ಜಗಳಾಡ್ಯಾರು. ನಾ ಹೋಗ್ತೀನಿ ಇನ್ನ. ನಿಮ್ಮ ಮನೀ ಕಟ್ಟೀ ಕಲ್ಲು ಹತ್ತೂ ಮರ್ಯಾದಿ ಕಳಕೊಂಡೇನ್ರಿ, ಮರೆತಬಿಡ್ರಿ ನನ್ನ."

ಬಿರಬಿರನೆ ಹೊರಟು ಹೋದ ನಾಗವ್ವನನ್ನೇ ನೋಡುತ್ತ ಅವ್ವಾರು ಮೂಕರಾಗಿ ನಿಂತರು.

***

■■

# ಸುಶೀಲೆ

ಬೆಳಗಿನ ಹೊತ್ತು ಕೋಳಿ ಕೊ-ಕ್ಕೋ ಎಂದಾಗ ಸುಶೀಲೆ ಎಚ್ಚರಾದಳು. ಹೊರಗೆ ಇನ್ನೂ ಕತ್ತಲು, ಎದ್ದು ಮಾಡುವುದಾದರೂ ಏನು ಎಂದುಕೊಳ್ಳುತ್ತ ಮತ್ತೆ ಹಾಸಿಗೆಯ ಮೇಲೆ ಹಾಗೆಯೇ ಹೊರಳಿದಳು. ರಾತ್ರಿ ನಿದ್ದೆ ತಡವಾಗಿ ಹತ್ತಿದ್ದರಿಂದ ಕಣ್ಣುಗಳು ಉರಿಯುತ್ತಿದ್ದರೂ ಮತ್ತೆ ಕಣ್ಣೆವೆ ಮುಚ್ಚಲಿಲ್ಲ. ಜಂತಿಯ ಗಳ ಎಣಿಸುವಂತೆ ದಿಟ್ಟಿಸುತ್ತ ಮಲಗಿದ್ದಳು.

ಮಗ್ಗಲು ಮನೆಯಲ್ಲಿ ಹಿರಿಯನಿಂದ ಹಿಡಿದು ಚಿಕ್ಕಮಗುವಿನವರೆಗೆ ಎಲ್ಲರೂ ಎದ್ದಿದ್ದರು. ದಡಲ್ ಬಡಲ್ ಪಾತ್ರೆಗಳು, ಬರ್ ಬರ್ ಕಸಬರಿಗೆ, ಒದರುವ ನಾಯಿ, ಕೂಗುವ ಕೋಳಿ, ಅರಚುವ ಆಡು, ಕಿರುಚುವ ಮಕ್ಕಳು ಎಲ್ಲವೂ ಸಪ್ಪಳ ಮಾಡುತ್ತಿದ್ದವು. ನಡುನಡುವೆ ಕಪ್ಪು ಬಸಿಗಳ ಕಿಣಿಕಿಣಿ ನಾದ, ರೊಟ್ಟಿ ಬಡಿತ, ಬಾನ್‌ಚೋದ, ಹರಾಮಚಾದೀ, ಸೊಕ್ಕ ಬಂದೈತೇನ ಒದ್ದೇನು ಎನ್ನುವ ಇಮಾಮನ ಬೈಗಳುಗಳೂ ಕೇಳುತ್ತಿದ್ದವು. ಇಮಾಮ, ಸುಶೀಲೆಯ ಗಂಡ, ಕಾಶೀಮನ ಅಣ್ಣ, ಮನೆ ತುಂಬಿದ ಮಕ್ಕಳು, ರೋಗಿಷ್ಟ ಹೆಂಡತಿ, ಮುಪ್ಪಿನ ತಾಯಿ ಇವರಿಗೆಲ್ಲ ಇಮಾಮ ಬೆಳಗಿನಿಂದ ಸಂಜೆಯವರೆಗೆ ಬೈಗುಳಗಳ ಸರಮಾಲೆಯನ್ನೇ ಹೆಣೆಯುತ್ತಿದ್ದ. ಅದರಲ್ಲಿ ಎಷ್ಟೋ ಸಲ ಸುಶೀಲೆಯನ್ನು ಗುರಿಯಾಗಿಟ್ಟುಕೊಂಡೇ ಬಯ್ಯುತ್ತಿದ್ದ. ಕೇಳಿ ಕೇಳಿ ಅವಳ ಕಿವಿ ಜಿಡ್ಡುಗಟ್ಟಿದ್ದವು. ಕಾಶೀಮನೇ ಎಷ್ಟೋ ಸಲ ತಾಳ್ಮೆ ಕಳೆದುಕೊಂಡು ಅವನಿಗೆ ತಿರುಗಿ ಉತ್ತರ ಕೊಡುತ್ತಿದ್ದ, ವಾದಿಸುತ್ತಿದ್ದ. ಕೈಗೆ ಕೈ ಹತ್ತು ಪ್ರಸಂಗ ಬಂದಾಗ ಮಾತ್ರ ಸುಶೀಲೆ ನಡುವೆ ಹೋಗಿ ತಾನು ಏಟು ತಿಂದಾದರೂ ಕಾಶೀಮನನ್ನು ಒಳಗೆ ಎಳೆದುಕೊಂಡು ಬರುತ್ತಿದ್ದಳು. ಕಾಶೀಮ ಒಳಗೆ ಬಂದೊಡನೆ ಏಟು ತಿಂದ ಸುಶೀಲೆಯನ್ನು ರಮಿಸುತ್ತಿದ್ದ. ಆಗ ಅವಳು ಅವನ ಕೊರಳಿಗೆ ಜೋತುಬಿದ್ದು,

"ಅವರು ನಿನ್ನ ಬಯ್ಯೂದು, ಹೊಡಿಯೂದು ಎಲ್ಲಾ ನನ್ನ ಸಲುವಾಗಿ ಅಲ್ಲೇನು? ಪಾಪ ನನ್ನ ಸಲುವಾಗಿ ನೀನು ಪೆಟ್ಟು ತಿಂದಿ" ಎಂದು ಅವನ ಎದೆಗೆ ಮೂಗು ತಿಕ್ಕುತ್ತಿದ್ದಳು.

ಕಾಶೀಮ! ಎಲ್ಲಿ ಅದಾನು ಕಾಶೀಮ !! ನಾನು ಬೆಚ್ಚಗ ಮನ್ಯಾಗ ಮಲಗೇನಿ, ನನ್ನ ಕಾಶೀಮನ ಹೊಡತಾ ತಿಂದು ಜೇಲಿನ್ಯಾಗ ಬಿದ್ದಾನು, ಸುಶೀಲೆ ತನ್ನ ಮಗ್ಗುಲಲ್ಲಿ ಕೈಯಾಡಿಸಿ ಬಿಕ್ಕಿ ಬಿಕ್ಕಿ ಅತ್ತಳು. ಆದರೆ ಅವಳ ಕಣ್ಣು ಒರೆಸುವ ಕಾಶೀಮ ಹತ್ತಿರ ಇರಲಿಲ್ಲ.

ತಾನಿನ್ನೂ ಆಗ ಪುಟ್ಟ ಹುಡುಗಿ, ಮೊಣಕಾಲು ಮುಚ್ಚುವ ಅಂಗಿ, ಕಿವಿಯ ಹತ್ತಿರ ಬಿಗಿಯಾಗಿ ಹೆಣೆದ ಎರಡು ಜಡೆ, ಕೈಯಲ್ಲಿ ಎರಡೆರಡು ಕರ್ಪೂರ ಬಳೆ, ಈ ಅಲಂಕಾರದಲ್ಲಿ ತಾನು ಅವ್ವ ಹೇಳಿದೊಡನೆ ಗೌಡರ ಮನೆಗೆ ಓಡಿ ಬರುತ್ತಿದ್ದಳು. ಅವ್ವನ ಕೆಲಸವಲ್ಲದೆ ಅದರಲ್ಲಿ ತನ್ನ ಸ್ವಾರ್ಥವೂ ಇರುತ್ತಿತ್ತು. ಗೌಡರ ಮನೆಯ ಹೆಬ್ಬಾಗಿಲು ಹೊಸ್ತಿಲ ಮೇಲೆ ಹತ್ತಿ, ಇಳಿದು, ಪಡಸಾಲೆಯ ಕಟ್ಟೆಯನ್ನೇರಿ, ಗೌಡರು ಕೂಡ್ರುವ ಕೋಣೆಯ ಬಾಗಿಲ ಬಳಿ ನಿಂತು, "ಅವ್ವಾ ನಿಮ್ಮನ ಕರಿತಾಳ್ರಿ, ಚಹಾ ಕುಡ್ಯಾಕ ಬರ್ರಿ" ಎಂದು ಕೂಗುವಳು. ಮಂಚದ ಮೇಲೆ ಮಲಗಿ ಆರಾಮ ತೆಗೆದುಕೊಳ್ಳುತ್ತಿದ್ದ ಗೌಡರು ಗೋಡೆಯ ಮೇಲಿನ ಗಡಿಯಾರ ನೋಡಿ, ತಿರುಗಿ ತನ್ನ ಕಡೆಗೆ ಹೊರಳಿ ಹುಂ ಎಂದು ಹುಂಕಾರ ಮಾಡಿದೊಡನೆ ಅಲ್ಲಿಂದ ಹಿತ್ತಲಿಗೆ ಓಡುವುದೊಂದೇ ಕೆಲಸ ತನಗೆ. ಅಲ್ಲಿ ದನದ ಹಕ್ಕೆಯಲ್ಲಿ ಕಾಶೀಮ ಒಂದಿಲ್ಲೊಂದು ಕೆಲಸ ಮಾಡುತ್ತಿರುತ್ತಿದ್ದ. ಆಗ ಅವನಿನ್ನೂ ಎಂಟ್ಹತ್ತು ವರುಷದ ಹುಡುಗನಿರಬೇಕು. ಅವನಿಗೆ ಜೋತುಬಿದ್ದೊಡನೆ ತನ್ನನ್ನು ಎತ್ತಿಕೊಳ್ಳುತ್ತಿದ್ದ. ಪೇರಲ ಕಾಯಿ, ಬಾರಿಕಾಯಿ, ಬಳೆಚೂರು, ಚೆಂಡು ಹೂ ಏನಾದರೂ ಒಂದು ತನಗ ಕೊಡುತ್ತಿದ್ದ. ಅವನೊಡನೆ ಆಟವಾಡಿ ಸಾವಕಾಶ ಕತ್ತಲಾದ ಮೇಲೆ ಮನೆಗೆ ಹಿಂತಿರುಗುವುದು ತನ್ನ ದಿನದ ರೂಢಿ.

ಮುಂದೆ ಸಾಲೆಗೆ ಹೋಗುತ್ತಿರುವಾಗಲೂ, ಸಾಲೆ ಬಿಟ್ಕೊಡನೆ ಗೌಡರ ಮನೆಗೆ ಹೋಗುವುದನ್ನು ತಪ್ಪಿಸುತ್ತಿರಲಿಲ್ಲ. ಗೌಡರು ತನಗೆ ಏನಾಗಬೇಕೆನ್ನುವುದು ಇನ್ನೂ ಗೊತ್ತಿರಲಿಲ್ಲ. ಮನೆಯಲ್ಲಿ ಅವ್ವ, ತಾವು ಇಬ್ಬರೇ ಸಂಜೆಯಾದೊಡನೆ ಚಹಕ್ಕೆಂದು ತಮ್ಮ ಮನೆಗೆ ಬಂದ ಗೌಡರು ತಿರುಗಿ ಯಾವಾಗ ಹೋಗುತ್ತಾರೋ ತನಗೆ ತಿಳಿದಿರಲಿಲ್ಲ. ದೊಡ್ಡವಳಾದಂತೆ ನೆರೆಯಹೊರೆಯವರಿಂದ ತನ್ನ ಅವ್ವ ಅಂಬವ್ವ ಗೌಡರು ಇಟ್ಟುಕೊಂಡ ಹೆಂಗಸು, ತಾನು ಗೌಡರಿಗೆ ಹುಟ್ಟಿದವಳು ಎನ್ನುವ ಮಾತು ಕೇಳಿದ್ದಳು. ಅವ್ವ ಗೌಡರ ಹೆಂಡತಿ ಅಲ್ಲ, ಹೆಂಗಸು ಎನ್ನುವುದು ತಿಳಿಯಬೇಕಾದರೆ ಮತ್ತೆ ಕೆಲವು ವರುಷ ಕಳೆದಿದ್ದವು. ಅದನ್ನು ಕಾಶೀಮನೇ ತನಗೆ ತಿಳಿಸಿ ಹೇಳಿದ್ದ. ಅವನು ತನ್ನ ಗುರು, ಗೆಳೆಯ, ಸಂಬಂಧಿ ಎಲ್ಲವೂ ಆಗಿದ್ದ.

ಕಾಶೀಮ, ಇಮಾಮ ಇಬ್ಬರೂ ಗೌಡರ ಮನೆಯ ಹಿರಿಯ ರೈತ ಇಬ್ರಾಹಿಮನ ಮಕ್ಕಳು. ಅವರು ಹುಟ್ಟಿದ್ದು ಬೆಳೆದದ್ದು ಗೌಡರ ಆಶ್ರಯದಲ್ಲಿಯೇ. ಅವರಿಗೆ ಗೌಡರ ಎಲ್ಲ ಸುದ್ದಿಯೂ ಗೊತ್ತಿತ್ತು. ಅವ್ವ ಗೌಡರನ್ನೇ ನಂಬಿ ನಡೆಯುವ ಹೆಂಗಸಾದ್ದರಿಂದ ಅವಳ ಹೆಸರಿಗೆ ನಾಲ್ಕು ಎಕರೆ ಹೊಲ ಹಚ್ಚಿದ್ದಾರೆಂದು ಕಾಶೀಮನು ತಮಗೆ ಹೇಳಿದ್ದ. ಸಾಲೆ, ಅಭ್ಯಾಸ, ಗೆಳತಿಯರೊಡನೆ ಆಟ, ಕಾಶೀಮನ ಒಡನಾಟದಲ್ಲಿ ತಾನು ಹಾಯಾಗಿ ದಿನ ಕಳೆಯುತ್ತಿದ್ದಳು. ಹೊಟ್ಟೆಯ ತುಂಬ ಊಟ, ಒಳ್ಳೆಯ ಅರಿವೆ, ಪಟ್ಟಣಕ್ಕೆ ಹೋದಾಗಲೆಲ್ಲ ಗೌಡರು ತರುತ್ತಿದ್ದ ಸಿಹಿ ತಿಂಡಿ ತಿನಿಸು, ಬಳೆ, ರಿಬ್ಬನ್ನು, ಹೂವು ಇವುಗಳಿಂದಲೇ ತನಗೆ ಹಬ್ಬ, ಇವುಗಳನ್ನು ತನಗೆ ತಂದುಕೊಡುವ ಗೌಡರನ್ನು ಕಂಡರೆ ಭಯ, ಭಕ್ತಿ. ಅವರ ಹತ್ತಿರ ಹೋಗಲು ಹೆದರಿಕೆಯಾಗುತ್ತಿತ್ತು. ಗೌಡರ ಮಕ್ಕಳಾದ ನಿಂಗಣ್ಣ, ನೀಲಾ ತಮ್ಮ ತಂದೆಯ ತೊಡೆಯ ಮೇಲೆ ಆಡುತ್ತಿದ್ದುದನ್ನು ಒಮ್ಮೊಮ್ಮೆ ಬಾಗಿಲ ಸಂದಿಯಲ್ಲಿ ನಿಂತು ಇಣುಕಿ ನೋಡುತ್ತಿದ್ದಳು., ಹಾಗೆ ನೋಡುತ್ತಿದ್ದಾಗ ಗೌಡತಿ ಬಂದುಬಿಟ್ಟರೆ ತೀರಿತು, ಹುಲಿ ಕಂಡ ಚಿಗರಿಯಂತೆ ತಾನು ಹೆದರಿ ಓಡುತ್ತಿದ್ದಳು. ಓಡುತ್ತಿದ್ದ ತನ್ನನ್ನು, ದುಮುಗುಟ್ಟುವ ಹೆಂಡತಿಯ ಮುಖವನ್ನು ನೋಡಿ ಗೌಡರು ಹಾಹಾಹಾಃ ಎಂದು ಚಾವಣಿ ಹಾರಿ ಹೋಗುವ ಹಾಗೆ ನಗುವುದು ತನಗೆ ರಸ್ತೆಯಲ್ಲಿಯೂ ಕೇಳುತ್ತಿತ್ತು. ಹಾಗೆ ಒಮ್ಮೆ ಓಡಾಡುತ್ತಿದ್ದಾಗ ತಾನು ಬಿದ್ದುಬಿಟ್ಟಿದ್ದಳು. ರಸ್ತೆಯ ಕಲ್ಲು ಹಣೆಗೆ ನಟ್ಟು, ರಕ್ತ ಸುರಿದು ಕಣ್ಣು ಕತ್ತಲೆ ಬಂದಾಗ ಕಾಶೀಮನೇ ಎತ್ತಿಕೊಡು ಮನೆಗೆ ತಂದು ಇಳಿಸಿದ್ದ. ಡಾಕ್ಟರ ಹತ್ತಿರ ಗಾಯಕ್ಕೆ ಪಟ್ಟಿ ಕಟ್ಟಿಸಿಕೊಂಡು ಬಂದು ಉಪಚಾರ ಮಾಡಿದ. ಅವನು ಮಾಡಿದ್ದು ಒಂದಲ್ಲ ಎರಡಲ್ಲ.

ತಾನು ದೊಡ್ಡವಳಾದಂತೆ ಗೌಡರ ಮನೆಗೆ ಹೋಗುವುದನ್ನು ಬಿಟ್ಟು ಬಿಟ್ಟಿದ್ದಳು. ಅವರ ಮನೆಯವರು ತನ್ನನ್ನು ಕೀಳಾಗಿ ನೋಡುವುದು ತನಗೆ ಸೇರುತ್ತಿರಲಿಲ್ಲ. ಅವ್ವ ಎಷ್ಟು ಕೇಳಿಕೊಂಡರೂ ಹಟಕ್ಕೆ ಬಿದ್ದು ತಾನು ಹೋಗುತ್ತಿರಲಿಲ್ಲ. ಕಾಶೀಮನನ್ನು ಕರೆ ಎಂದರೆ ಮಾತ್ರ ಹೋಗುತ್ತಿದ್ದಳು. ಗೌಡರ ಮನೆಗೆ ತಾನು ಹೋಗದಿದ್ದರೂ ಸಾಲೆಗೆ ಹೋಗುವಾಗ, ಬರುವಾಗ ಕಾಶೀಮ ಭೆಟ್ಟಿಯಾಗುತ್ತಿದ್ದ. ಮೊದಲಿನಂತೆ ಮೈಕೈ ಮುಟ್ಟಿ ಸಲಿಗೆ ಮಾಡುತ್ತಿರಲಿಲ್ಲ. ಆದರೂ ಕೂತು ಮಾತಾಡುವುದೂ, ಹೂವು ಹಣ್ಣು ತಂದು ಕೊಡುವುದೂ ಬಿಟ್ಟಿರಲಿಲ್ಲ. ಅವ್ವನಿಗೆ ಗೌಡರು ಕೊಟ್ಟ ಹೊಲವನ್ನು ಕಾಶೀಮ ತಾನೇ ಹರಗಿ, ಉತ್ತು, ಬಿತ್ತಿ ಕೊಡುತ್ತಿದ್ದ. ಇದರಿಂದ ಗೌಡರನ್ನು ಬಿಟ್ಟರೆ ನಮ್ಮ ಮನೆಗೆ ಅವನೇ ಹತ್ತಿರದವನಾಗಿದ್ದ., ದೊಡ್ಡವಳಾಗಿ ಸೀರೆ ಉಡುವ ಹಾಗಾದ ಮೇಲೆ ಅವನನ್ನು ನೋಡಿದೊಡನೆ ತನ್ನ ಮೈಯ್ಯಲ್ಲಿ ಮನಸ್ಸಿನಲ್ಲಿ ಏನೇನೋ ಆಗುತ್ತಿತ್ತು. ಅವನ ಹತ್ತಿರ ಒಬ್ಬಳೇ ಇದ್ದರೆ ನಡುಕ, ನಾಚಿಕೆ, ಸಂತೋಷ ಏನಾಗುತ್ತಿತ್ತೋ ಹೇಳಲಿಕ್ಕೂ ಬರುವಂತಿರಲಿಲ್ಲ. ಅವನೂ ಈಗ ಹೇಳುತ್ತಿರುತ್ತಾನೆ. ತನಗೂ ಹಾಗೇ ಆಗುತ್ತಿತ್ತಂತೆ.

...

ಇಮಾಮನ ನಾಯಿ ಜೋರಾಗಿ ಬೊಗಳಿದಾಗ ಸುಶೀಲೆ ಗಡಬಡಿಸಿ ಎದ್ದಳು. ಮಂಪರಿನಲ್ಲಿ ಕಾಶೀಮನ ತೆಕ್ಕೆಯಲ್ಲಿದ್ದಂತೆ ಕನಸು ಕಾಣುತ್ತಿದ್ದವಳು ಬರಿ ಹಾಸಿಗೆ ನೋಡಿ, ನಿಟ್ಟುಸಿರು ಬಿಟ್ಟು, ಇಂದು ತಾನು ಕೋರ್ಟಿಗೆ ಸಾಕ್ಷಿ ಹೇಳಲು ಹೋಗಬೇಕೆನ್ನುವುದು ನೆನಪಾಗಿ ಹಾಸಿಗೆಯಿಂದ ಎದ್ದು ಹಿತ್ತಲಿಗೆ ಬಂದಳು.

ಅಲ್ಲೊಂದು ಮುಟ್ಟಾಟ ನಡೆದಿತ್ತು. ಇಮಾಮನ ಒಂದು ದೊಡ್ಡ ಕೋಳಿ ಮೋಟು ಗೋಡೆಯನ್ನು ಹಾರಿ ತನ್ನ ಹಿತ್ತಲಿಗೆ ಬಂದಿತ್ತು. ಅದನ್ನು ಹಿಡಿದೊಯ್ಯಲು ಸಲೀಮಾ, ನಬೀ ಓಡಾಡುತ್ತಿದ್ದರು. ಅದು ಅವರ ಕೈಗೆ ಸಿಕ್ಕದಂತೆ ರೆಕ್ಕೆ ಪಟ ಪಟ ಬಡಿದು ಮತ್ತೆ ಓಡುತ್ತಿತ್ತು. ಕೊನೆಗೆ ಇಮಾಮನೇ ಗೋಡೆ ಜಿಗಿದು ಬಂದು ಕೋಳಿಯನ್ನೆತ್ತಿಕೊಂಡು ಮುಖ ತೊಳೆಯುತ್ತಿದ್ದ ಸುಶೀಲೆಯನ್ನು ದುರುಗುಟ್ಟಿ ನೋಡಿ, ಕ್ಯಾಕರಿಸಿ ಉಗುಳಿ.

"ಹಲ್ಕಾ ರಂಡೇ ನನ್ನ ತಮ್ಮಗ ಒಳೆ ಗಂಟು ಬಿದ್ದೀ ನೀನು, ಅವನ ಬಾಳೇ ಹಾಳುಮಾಡಿದಿ' ಎಂದ.

ಸುಶೀಲೆ ಏನೂ ಕೇಳದವಳಂತೆ ಸುಮ್ಮನೆ ಹಲ್ಲು ತಿಕ್ಕುತ್ತಿದ್ದಳು. ಅವನಿಗೆ ಉತ್ತರ ಕೊಡದೆ 'ಥೂ' ಎಂದು ಉಗುಳಿದಳು. ಕಾಶೀಮ ಹೋದಾಗಿನಿಂದ ಇದೇ ತರದ ಮಾತು ಕೇಳಿ ಕೇಳಿ ಬೇಸತ್ತಿದ್ದಳು. ಇವತ್ತು ಕೊನೆಯ ದಿನ ಕೋರ್ಟಿನಲ್ಲಿ ಏನಾಗುವುದೋ ಎಲ್ಲವೂ ತನ್ನ ಸಾಕ್ಷಿಯನ್ನೇ ಅವಲಂಬಿಸಿದೆ ಎಂದು ವಕೀಲರು ಹೇಳಿದ್ದರು. ಮುಖದ ಮೇಲೆ ಕೈಯಾಡಿಸುತ್ತ ಕೈ ಕುತ್ತಿಗೆಗೆ ಹೋಯಿತು. ಕೊರಳು ಬರಿದಾಗಿತ್ತು. ಇಮಾಮ ಅವಳನ್ನು ನೋಡುತ್ತ ನಿಂತೇ ಇದ್ದ, ಇವತ್ತು ಅವನ ಸಿಟ್ಟು ಹೆಚ್ಚಾದಂತಿತ್ತು.

ಅವಳ ಕಡೆಗೆ ಕೈ ತಿವಿಯುತ್ತ "ಏ ಛಿನಾಲಿ, ನಿನಗ ಏಟೂ ಚಿಂತಿ ಇಲ್ಲೇನು? ಕಾಶೀಮ ನಿನ್ನ ಗಂಡ ಅಂತ ಹೇಳ್ತಿದಿ. ಅಂವಾ ನಿನ್ನ ಸಲುವಾಗಿ ಕಾಲು ಮುರಕೊಂಡು ಜೇಲಿನ್ಯಾಗ ಬಿದ್ದರೂ ನಿನ್ನ ಸೊಕ್ಕು ಮುರದಿಲ್ಲೇನು?" ಎಂದು ಒದರಿದ.

ಈಗ ಸುಶೀಲೆಗೆ ತಡೆಯಲಾಗಲಿಲ್ಲ. " ಹೋಗೋ ಮೂಳಾ, ತಮ್ಮನ ಮ್ಯಾಲೆ ಅಷ್ಟ ಪಿರೂತಿ ಇದ್ದಂವಾ ಬಿಡಿಸಿಕೋಬೇಕಾಗಿತ್ತು. ಎಲ್ಲರೂ ಕೂಡಿ ಅವಂನ್ನ ಹೊಡಿಯೂ ಮುಂದ ನೀ ಏನ ಸತ್ತಿದ್ದೇನ ? ನಿನ್ನ ಮಂದಿ ಕರಕೊಂಡ ಬಂದು ಹೊಡೆದಾಡಬೇಕಾಗಿತ್ತು" ಎಂದು ಮುಖಕ್ಕೆ ನೀರು ಉಗ್ಗಿಕೊಂಡಳು.

'ಗೌಡರು ದೊಡ್ಡವರು, ಅವರ ವಿರುದ್ಧ ಹ್ಯಾಂಗ ಬಡದಾಡೋದು ? ನೀವು ಗಂಡಾ -ಹೇಣ್ತಿ ಅಲ್ಲಾ, ನೀನು, ನಿಮ್ಮ ಜಾತಿ ಬ್ಯಾರೆ ಬ್ಯಾರೆ ಅಂತ ಅವರೆಲ್ಲಾ ಹೇಳೋ ಮುಂದ ನೀನು ಕಾಶೀಮನ ಬಿಟ್ಟು ಹೋಗಬೇಕಾಗಿತ್ತು.,ನಿನಗ ಆಸರಾ ಕೊಟ್ಟು ಮನ್ಯಾಗ ತಂದು ಇಟಕೊಂಡ ಗೌಡರ ವಿರುದ್ಧ ಬಡದಾಡಿ ಕಾಲು ಮುರಕೊಂಡ, ನೀ ಪಿಶಾಚಿ ಹಿಡಿದಾಂಗ ಹಿಡಿದಿ ಅವನ್ನ " ಇಮಾಮ ದನಿ ಏರಿಸಿದ.

"ನಾ ಅವನ್ನ ಹಿಡದೇನಿ. ಹೇಣ್ತಿ ಅಂತ ಹೇಳಿ ಮಂಗಳಸೂತ್ರಾ ಕಟಿಕೊಂಡಿನಿ. ಅವನ ಕೈ ನನ್ನ ಜೀಂವಾ ಇರೂ ತನಾ ಬಿಡೂದಿಲ್ಲ. ಹೆಂಗಸಾಗಿ ಹುಟ್ಟಿದ್ರೂ ಇವತ್ತ ಕೋರ್ಟಿಗೆ ಹೋಗಿ ಅವನ್ನ ಬಿಡಿಸಿಕೊಂಡು ಬಂದು ಇದs ಊರಾಗ ಬಾಳೇ ಮಾಡತೇನಿ. ನೀನು ಬಳೀ ಇಟಗೊಂಡು ಮನ್ಯಾಗ ಕುಂದ್ರ ಹೆಂಗಸರಾಂಗ" ಎಂದವಳೇ ಹಿತ್ತಿಲು ಬಾಗಿಲು ರಪ್ಪನೆ ಮುಚ್ಚಿಕೊಂಡಳು.

"ರಾಮಣ್ಣಾs ಏ ಯಣ್ಣಾs ಬಾರಪ್ಪೋ ಕೋರ್ಟಿಗೆ ಹೋಗೋಣ" ಸುಶೀಲೆ ಕೂಗಿದಾಗ ಬೀಡಿ ಹಚ್ಚಿಕೊಳ್ಳುತ್ತಲೇ ಹೊರಗೆ ಬಂದ ರಾಮಣ್ಣ.

"ಸೂಸವ್ವ, ನೀ ಮುಂದ ನಡಿ. ಸ್ವಲ್ಪ ಕೆಲಸ ಐತೀ. ನೀ ಕತ್ತರಿಗೆ ಹೋಗೂದರಾಗ ನಾ ಬರತೇನಿ" ಎಂದ.

ಹಳ್ಳಿಯಿಂದ ಪಟ್ಟಣಕ್ಕೆ ಮೂರು ಮೈಲಿನ ದಾರಿ. ಸುಶೀಲೆಗೆ ಅಷ್ಟು ನಡೆಯುವುದೇನೂ ಕಷ್ಟದ ಕೆಲಸವಲ್ಲ. ಈಗ ಇಪ್ಪತ್ತು ದಿನಗಳಿಂದ ಜೇಲಿಗೆ ದವಾಖಾನೆಗೆ ಎಷ್ಟೋ ಸಲ ಓಡಾಡಿದ್ದಳು. ಇವತ್ತು ಕೊನೆಯ ದಿನ, ಕಾಶೀಮನನ್ನು ಬಿಡಿಸಿಕೊಂಡೇ ಬರಬೇಕು ಎನ್ನುವ ಹುರುಪಿನಿಂದ ದಾಪುಗಾಲು ಹಾಕುತ್ತಿದ್ದಳು. ಹೊಲಕ್ಕೆ ಕಳೆ ಕೀಳಲು ಹೊರಟ ಹೆಂಗಸರ ಗುಂಪೊಂದು ಹಿಂದಿನಿಂದ ಬಂದು ಅವಳನ್ನು ಕೂಡಿಕೊಂಡಿತು. ಅವರೆಲ್ಲರೂ ಅವಳಿಗೆ ಗುರುತಿನವರು. ಚಿಕ್ಕಂದಿನಿಂದಲೂ ಅವಳನ್ನು, ಅಂಬವ್ವನನ್ನು, ಕಾಶೀಮನನ್ನು ಬಲ್ಲವರು.

"ಸೂಸವ್ವಾ ಶಹರಕ ಹೊಂಟಿಯೇನಬೇ?"

"ಹೌದಬೇ ಚಿಗವ್ವಾ".

"ಕಾಶೀಮನ ಕಾಲುನೋವು ಕಡಿಮೆ ಆಗ್ಯೆತೇನಬೇ?"

"ಕಾಲು ಮುರಿದಿತ್ತವ್ವಾ, ಅದಕ್ಕ ಸಿಮೆಂಟು ಹಾಕಿದ್ರು. ಈಗ ಬಿಚ್ಚ್ಯಾರ ಹಗರಕ ನಡೀತಾನ."

"ಪಾಪ ಹದಿನೆಂಟು ಮಂದಿ ಕೂಡಿ ಬಡದರ ಅವನ ಮೈ ಏನಾದೀತು? ಹಣೀಗೂ ಟಾಕೀ ಹಾಕ್ಯಾರಂತಲ್ಲ ಸೂಸವ್ವಾ."

"ಹೌದಬೇ, ಆದರೂ ಗಾಯ ಮಾದ್ಯೆತಿ. ಆರಾಮ ಅದಾನ. ಈಗ ಅವನ್ನ ಹ್ಯಾಂಗರ ಬಿಡಿಸಿಕೊಂಡ ಬರಬೇಕು ಅನ್ನೂದೊಂದS ಚಿಂತೆಯಮ್ಮಾ ನನಗ."

"ಶಿವ ಶಿವಾ ಹೆಂತಾ ಕಾಲ ಬಂತಪ್ಪಾ, ಹೊಡತ ತಿಂದಾಂವಾ ಅಂವಾ. ಮತ್ತ ಅವನ್ನ ಜೇಲಿಗೆ ಹಾಕ್ಯಾರಂತಲ್ಲ" ಒಬ್ಬ ಮುದುಕಿ ನಿಟ್ಟುಸಿರಿಟ್ಟಳು.

"ರೊಕ್ಕ ಇದ್ದವರ ಕಾಲವ್ವಾ ಇದು ಯಮ್ಮಾ, ಸುಳ್ಳು ಖರೇವು ಯಾರೂ ಕೇಳಾಂಗಿಲ್ಲ. ಗೌಡರ ನಿಂಗಣ್ಣಾ, ಅವನ ಗೆಣ್ಯಾರು ಕೂಡಿ ಕಾಶೀಮನ್ನ ಹೊಡೆದರು ಮತ್ತು ಪೋಲೀಸರಿಗೆ ಹೇಳಿ ಅವನ್ನ ಜೇಲಿಗೆ ಹಾಕಿದರು."

"ಸೂಸಕ್ಕಾ, ಕಾಶೀಮಣ್ಣಾ ಗೌಡರ ರೈತಾ, ಸಣ್ಣಾಂದಿರತ ಅವರ ಮನ್ಯಾಗ ಜೀತಾ ಮಾಡ್ಯಾನು. ಅವನ್ಯಾಕ ಹೊಡೆದರು ಜೀಂವಾ ಹೋಗೋ ಹಾಂಗ ?"

"ಯವ್ವಾ ಆ ಕತಿ ದ್ವಾಡದ್ಯೆತಿ, ಹೇಳಿದರ ಮಂದಿಗಿ ಗೊತ್ತಾಗತೈತಿ. ಇಲ್ಲಾಂದರ ಎಲ್ಲಾರೂ ಕಾಶೀಮನS ತಪ್ಪು ಮಾಡ್ಯಾನೋ ಏನೋ ಅಂತ ತಿಳಕೋತಾರ. ನಾ ಹೇಳ್ತೀನಿ ಕೇಳ್ರಿ. ಗೌಡರು ನಮ್ಮವ್ವಗ ನಾಲ್ಕು ಎಕರೆ ಹೊಲಾ ಹಚ್ಚಿದ್ದು ನಿಮಗ ಗೊತ್ತೈತಲ್ಲ?" ಸುಶೀಲೆಗೆ ತನ್ನ ಸುಖ ದುಖ ಕೇಳಲು ಊರಲ್ಲಿ ಜನ ಇದ್ದಾರೆನ್ನುವ ಸಮಾಧಾನ ಸಿಕ್ಕಿತ್ತು.

"ಹೌದಬೇ, ಅಂಬವ್ವ ಗೌಡರಿಗೆ ಹೆಂಗಸಾದರೂ ಗರತಿ ಗಂಗವ್ವನ ಹಾಂಗ ನಂಬಿಗಿಯಿಂದ ನಡಕೊಂಡಳು. ಅನ್ನೂದು ಊರಿಗೇ ಗೊತ್ತೈತಿ. ಆಕಿ ಹೊಟ್ಟೆಗೆ ಬೇಕು ಅಂತ ಹೊಲಾ ಹಚ್ಚಿದ್ರು. ಅವರಿಗೇನ ಕಡಿಮಿ ಐತಿ. ಮನಾರ ಒಟ್ಟೈತಲ್ಲಾ."

"ಕಾಶೀಮ ನಮ್ಮ ಹೊಲಾ ಮಾಡತಿದ್ದಾ. ಕಾಳು-ಕಡ್ಡಿ ಎಲ್ಲಾ ಸುಸೂತ್ರ ತಂದ ತಂದ ಹಚ್ಚತಿದ್ದಾ. ನಮಗ ಹೊಟ್ಟೀ ಚಿಂತಿ ಇದ್ದಿದ್ದಿಲ್ಲ. ಆಮ್ಯಾಕ ಗೌಡರು ಸತ್ರು. ಆವಾಗ ನಿಂಗಣ್ಣಾ ಕಾಶೀಮಗ ಬೆದರಿಸಿದನಂತ., ಕಾಳು-ಕಡ್ಡಿ ನಮ್ಮಮನಿಗೆ ತಂದು ಹಾಕು, ನಾನು ಅಂಬವ್ವನ ಹೊಟ್ಟೀಗೆ ಕೊಡತೀನಿ ಅಂತ ಅಂದನಂತ. ಅದು ನಮ್ಮ ಅವ್ವನ ಕಿವಿಗೆ ಬಿತ್ತು, ಆಕಿ ಹೋಗಿ ಗೌಡಶಾನಿ ಕಾಲು ಹಿಡಕೊಂಡು ಕಣ್ಣೀರ ಹಾಕಿದಳು. ಆಗ ಸುಮ್ಮನಾದ. ಮುಂದ ಅವ್ವ ಸಾಯೂ ಮುಂದ ಗೌಡರ ಮಗನ್ನ ಕರೀರಿ ಅಂತ ಹೇಳಿ ವಿಲಿವಿಲಿ ಒದ್ದಾಡಿದ್ಲು. ಹೇಳಕಳಿಸಿದ್ರೂ ಒಬ್ರೂ ಬರಲಿಲ್ಲ. ಹತ್ತರ ಕಾಶೀಮಗ ನನ್ನ ಮಗಳು ಜ್ವಾಕಿ ಅಂತ ಹೇಳಿ ಜೀವಾ ಬಿಟ್ಟು."

"ಮುಂದ ಗೊತ್ತಾದ ಬಿಡು, ನೀವಿಬ್ಬರೂ ಕೂಡಿ ಆಡಿದ್ರಿ, ಮಾಡಿದ್ರಿ, ಹೇಣ್ತಿ ಅಂತ ನಿನ್ನ ಮನೀಗೆ ಕರಕೊಂಡು ಹೋಗಿ ಕಾಶೀಮ ಮಂಗಳಸೂತ್ರ ಕಟ್ಟಿದಾ. ಐಯ್ ಪಿರೀತಿ ಮಾಡಿ ಮುಸಲರವಾ ಗೌಡರ ಮಗಳ್ನ ಲಗ್ನಾಮಾಡಿಕೊಂಡಾನ ಅಂತ ಆಡಿಕೊಂಡು ಊರ ಮಂದಿ ಬಿದ್ದ ಬಿದ್ದ ನಕ್ಕರು" ಎಂದಳು ಮಾಯವ್ವಾ.

ನಡೆಯುತ್ತಿದ್ದ ಸುಶೀಲೆ ಥಟ್ಟನೆ ನಿಂತಳು.

"ಚಿಗವ್ವಾ, ನಾನು ಗೌಡರ ಮಗಳು ಅಂತ ಈ ಊರವರು ಯಾವ ಬಾಯಿಂದ ಹೇಳತಾರ? ಬಿದ್ದ ಬಿದ್ದ ನಕ್ಕರ ಅಂತ ಹೇಳ್ತಿಯಲ್ಲ ಅವರು ನನ್ನ ಮದುವಿ ಮಾಡಿಕೋತಿದ್ದರೇನು? ನಮ್ಮವ್ವ ಸತ್ತಾಗ ಯಾರರೆ ಬಂದರೇನು? ಪರದೇಶಿ ಮಗಳು ಅಂತ ಯಾರರೆ ಅಕ್ಕರತಿ ತೋರ್ಸಿದರೇನು? ಆವಾಗ ಕಾಶೀಮನ್ನ ಬಿಟ್ಟರ ನನಗ ಯಾರ ದಿಕ್ಕಿದ್ದರು ? ಸೂಳಿ ಮಗಳ ಸಂಗತಿ ಬ್ಯಾಡಾ ಅನ್ನೂ ಹಾಂಗ ಎಲ್ಲಾರೂ ಮಾರಿ ತಿರುವಿದರು. ಅವ್ವ ಸತ್ತಮ್ಯಾಲೆ ನಿಂಗಣ್ಣನ ಹಾರಾಟ ಮತ್ತ ಸುರು ಆತು. ಹೊಲ ನನ್ನ ತಾಬೇಕ ತೊಗೊತೀನಿ, ಈ ಕಾಗದ ಸಹೀ ಮಾಡು, ಅಂದಾ. "ನಮ್ಮಪ್ಪ ಹೊಲ ನನಗ ಕೊಟ್ಟಾರ, ನಾ ಸಹಿ ಮಾಡೂದಿಲ್ಲ ಹೊಲಾ ನಂದು, ಅದು ಹೋದರ ನಾ ಹೊಟ್ಟಿಗೆ ಕೇರ ಹಾಕ್ಕೋಳ್ಳೇನು ?" ಅಂದೆ.

"ಅದಕ್ಕೇನಂದಾ ನಿಂಗಣ್ಣ ?"

"ಸೂಳಿ ಮಗಳಿಗೆ ಹೊಟ್ಟೆ ತುಂಬೂದೇನ ಕಷ್ಟ ಇಲ್ಲ. ಅಂಗಡಿ ತಗಿ ಯಾಪಾರ ಮಾಡು"ಅಂದಾ, ನನಗ ಮೈ ಉರೀತು ನೋಡಬೇ, ನಾನೂ ತಿರುಗಿ ಅಂದೇ, "ಈ ಮಾತು ನಿಮ್ಮ ಮನ್ಯಾಗಿನ ತಂಗಿಗೆ ಹೇಳ ಹೋಗೋ ಅಂತ."

"ಐಯ್ಯ ನನ ಶಿವನ, ಆಕಿ ಒಬ್ಬಾಕಿ ತಂಗೇನ ಈ ನಿಂಗಣ್ಣಾಗ? ನೀನೂ ಅವರ ಅಪ್ಪನ ಮಗಳs ಅಲ್ಲೇನು? ಇಷ್ಟೂ ತಿಳಿಯೂದಿಲ್ಲs ನಿನ್ನ ಹೊಲದ ಮ್ಯಾಲ್ಯಾಕ ಅವನ ಕಣ್ಣು? ಅವನಿಗೆ ಏನ ಕಡಿಮಿ ಆಗ್ಯೆತಿ ?"

"ಮನಿಶ್ಯಾನ ಆಶೇಕ ಮಿತಿ ಇಲ್ಲಾ ಚಿಗವ್ವಾ. ಎಷ್ಟ ಇದ್ದರೂ ಇನ್ನೂ ಬೇಕು ಅಂತಾನ. ಆಮ್ಯಾಗ ದಿನಾ ಬಂದ ತ್ರಾಸ ಕೊಡಾಕ ಹತ್ತಿದಾ. ಒಬ್ಬಾಕೆ ಮಲಗಿದಾಗ ದಬಾ ದಬಾ ಬಾಗಿಲು ಬಡಿಯೂದು, ಮನೀಮ್ಯಾಲೆ ಕಲ್ಲು ಒಗಿಯೂದು ಮಾಡಿದಾ. ಇದನ್ನೆಲ್ಲ ನೋಡಿ ಮೂರೂ ಸಂಜೆಗೆ ಮುಂಚೆ ಬಾಗಲಾ ಹಾಕ್ಕೊಂಡು ಮಲಗತಿದ್ದೆ. ತಂಬಿಗಿ ತೊಗೊಂಡು ಹಳ್ಳಕ್ಕ ಹೋದರ ಯಾರ ಬೆನ್ನತ್ತಾರೋ ಅಂತ ಹೊಳ್ಳಿ ಹೊಳ್ಳಿ ನೋಡತಿನ್ನಿ. ಮನೀ ಬಿಟ್ಟ ಹೊರಗ ಹೋಗೂದು ಅಂದರ ಜೀವದ ಸುತ್ತ ಬರುತ್ತಿತ್ತು. ಒಮ್ಮೊಮ್ಮೆ ಸತ್ತರs ಹೋಗಲ್ಯಾ ಅಂತಿದ್ದೆ. ಕಾಶೀಮನ ಮುಂದ ದಿನಾ ಅಳತಿದ್ದೆ. ಒಂದು ದಿನಾ ಅಂವಾ "ನಿನಗ ಯಾರೂ ದಿಕ್ಕಿಲ್ಲ. ಸೂಸೀ. ಅದಕ್ಕ ಹಾಂಗ ಮಾಡತಾರ, ಎಷ್ಟ ದಿನ ಅಳತೀ. ನಮ್ಮ ಮನೀಗೆ ಬಂದು ಬಿಡು. ನಾ ನಿನ್ನ ಮದಿವಿ ಮಾಡಕೋತಿನಿ ಅಂದಾ, ನನಗ ಏನ ಹೇಳಬೇಕೋ ತಿಳೀಲಿಲ್ಲ. ಇಮಾಮ ಸುಮ್ಮನಿರತಾನೇನು? ಅಂದೆ. ನಾವು ಇಬ್ಬರು ಬ್ಯಾರೆ ಇರೂಣು ಅಂದಾ. ಆವಾಗ ನಾ ಸುಮ್ಮನ ನನ್ನ ಮನೀ ಖಾಲಿ ಮಾಡಿ ಅವನ ಹಿಂದ ಮನೀಗೆ ಹೋದೆ. ಅವರಣ್ಣ ನಾನಾ ತರದ ಬೈಗಳಾ ಬೈದಾ. ಹೊಡ್ಯಾಕೂ ಬಂದಾ. ಕಾಶೀಮ ಜಪ್ಪ ಅನ್ನಲಿಲ್ಲಾ, ಅಡಗಿಮನಿ, ಕ್ವಾಣಿ ಬ್ಯಾರೇ ಮಾಡಿಕೊಂಡಾ, ನನಗೊಂದು ಮಂಗಳಸೂತ್ರಾ ಕಟ್ಟಿದಾ. ನಾವು ಸಂಸಾರಾ ಹೂಡಿದ್ವಿ." ಉಕ್ಕಿ ಬರುತ್ತಿದ್ದ ಕಣ್ಣೀರು ಒರೆಸಿಕೊಂಡಳು ಸುಶೀಲೆ.

"ಇರಲಿ ಬಿಡು, ಸೂಸವ್ವ ಅಳಬ್ಯಾಡಾ. ಹಾಂಗs ಹೇಳು ಮುಂದೇನಾತು ?" ಕೆಂಚವ್ವ ಬೆನ್ನ ಮೇಲೆ ಕೈಯಿಟ್ಟು ಸಮಾಧಾನ ಮಾಡಿದಳು. ಆ ಪರದೇಶಿಯ ದುಃಖವನ್ನು ನೋಡಿ ಎಲ್ಲರ ಬಾಯಿ ಬಂದಾಗಿದ್ದವು, ಕಣ್ಣು ಹನಿಯಾಗಿದ್ದವು.

"ಹೊಲಾ ತಿರಗಿ ಸಿಗಲಿಲ್ಲ ಅನ್ನೂ ಸಿಟ್ಟಿಗೆ ಒಂದು ದಿನ ರಾತ್ರಿ ನಿಂಗಣ್ಣಾ ಎಂಟ್ಹತ್ತ ಮಂದಿ ಕುಡುಕರ್ನ ಕರಕೊಂಡ ಬಂದು, ಒದ್ದು ಬಾಗಲಾತಗಿಸಿ, ಬಾಯಿಗೆ ಬಂದ್ಹಾಂಗ ನನಗ ಬಯ್ದಾ. ಹೊಯ್ಮಾಲಿ ಎಷ್ಟ ಹಾರ್ಯಾಡತಾಳ, ಸೀರಿ ಕಳದ ಹೊಡೀರಲೆ ಆಕೀನ. ಮದುವಿ ಅಂತ, ಹೇಣ್ತಿ ಅಂತ, ಕಸುಬು ಮಾಡುದು ಬಿಟ್ಟು ಮುಸಲನ ಕೂಡ

ಸಂಸಾರ ಮಾಡತಾಳಂತ ಅಂತ ಒದರ್‍ಯಾಡಿದಾ. ನಾಕ ಮಂದಿ ಕೂಡಿ ನನ್ನ ಎಳದ್ರ ಕಾಶೀಮ ಬಿಡಿಸಿಕೊಳ್ಳಾಕ ಬಂದಾ. ಎಲ್ಲರೂ ಕೂಡಿ ಅವನ್ನ ಹಣದ್ರು. ಇವನೂ ಸುಮ್ಮನ ಇರಲಿಲ್ಲಾ., ಕೈಗೆ ಸಿಕ್ಕ ಬಡಿಗಿ ತೊಗೊಂಡು ಬಡದಾ, ತಾನೂ ಕಾಲು ಮುರಕೊಂಡ, ಇಷ್ಟೆಲ್ಲಾ ಮಾಡಿ ಮತ್ತ ಕಾಶೀಮ ಲುಚ್ಚಾ ಅದಾನ, ಗುಂಡಾಗಿರಿ ಮಾಡತಾನ, ಊರಾಗಿನ ಹೆಂಗಸರ ಮ್ಯಾಲೆ ಕೈ ಮಾಡತಾನ ಅಂತ ಪೋಲೀಸರಿಗೆ ಹೇಳಿ ಜೇಲಿಗೆ ಹಾಕಿಸಿದಾ. ಖಟ್ಲೆ ಹಾಕಿಸಿದ. ತಿಂಗಳಾತಬೇ ಕಾಶೀಮ ಜೇಲಿನಾಗ ಬಿದ್ದು, ಕಾಲಿಗೆ ಸಿಮೆಂಟು ಹಾಕ್ಯಾರ. ನಡಿಯಾಕ ಬರಾಂಗಿಲ್ಲ. ಹೊಟ್ಟೆ ತುಂಬ ಕೂಳು ಕೊಡಾಂಗಿಲ್ಲ. ಮತ್ತ ಮ್ಯಾಲೆ ಒದೀತಾರಂತ, ಬಡೀತಾರಂತ. ಕಡದರ ಎರಡ ಆಳ ಆಕ್ಕಿದ್ದಾ. ಈಗ ಸೊರಗಿ ಕಡ್ಡಿ ಆಗ್ಯಾನ. ಯಮ್ಮಾss. ನಾ ಏನ ಮಾಡ್ಲಿ, ಎಲ್ಲಿಗೆ ಹೋಗ್ಲಿ ಅಂತ ಹುಚ್ಚ ಹಿಡಿದಾಂಗ ಆಗೈತಿ. ಶಿವ ಶಿವಾ ಆ ದೇವರಿಗೆ ಕಣ್ಣಿಲ್ಲೇನಬೇ. ನಾವೇನು ಪಾಪ ಮಾಡೀವೋ ಏನೋ " ಸುಶೀಲೆ ಸೆರಗಿಗೆ ಮುಖವಿಟ್ಟು ಭೋರೆಂದು ಅತ್ತುಬಿಟ್ಟಳು.

"ಸೂಸವ್ವಾs ಅಳಬ್ಯಾಡಾ, ನೀನು ದಿಟ್ಟ ಹೆಣಮಗಳು ಅದೀ ಅಂತ ಹೊಡದಾಡಾಕ ನಿಂತೀದಿ, ಧೈರ್ಯ ತೊಗೋ. ಗಟ್ಟಿ ಮನಸ್ಸು ಮಾಡು. ನೀನು ವಕೀಲರಿಗೆ ಇಟ್ಟೀಯಂತಲ್ಲ ಅವರು ಕಾಶೀಮನ್ನ ಬಿಡಸ್ತಾರ. ಅವರಿಗೇ ಕೈಕಾಲ ಬೀಳು, ದೇವರ ನೆಟ್ಟಗ ಮಾಡತಾನ, ಹಣಮಪ್ಪಗ ಹರಕೀ ಹೊರು. ತಂಗೀ ಅಳಬ್ಯಾಡಾ. ಅಕಾ ರಾಮಣ್ಣ ಬಂದ ನೋಡು. ಕೋರ್ಟಿಗೆ ಹೊತ್ತಾಗತೈತಿ ಹೋಗಿಬಾ". ಕೆಂಚವ್ವ ಧೈರ್ಯದ ಮಾತು ಹೇಳಿ ಹೆಂಗಸರೊಡನೆ ಹೊಲಕ್ಕೆ ಹೊರಳಿದಾಗ ರಾಮಪ್ಪ ಬಂದು ಸುಶೀಲೆಯನ್ನು ಕೂಡಿಕೊಂಡ.

***

ಕೋರ್ಟಿನ ಸಿಪಾಯಿ ತನ್ನ ಹೆಸರು ಹಿಡಿದು ಕೂಗಿದಾಗ ಸುಶೀಲೆ ಮೈ ತುಂಬ ಸೆರಗು ಹೊದ್ದು, ತಲೆಕೆಳಗೆ ಹಾಕಿಕೊಂಡು ಒಳಹೊಕ್ಕಳು. ಸಾಕ್ಷಿಯ ಕಟಕಟೆ ಹತ್ತಿದ ಮೇಲೆ, ತಲೆ ಎತ್ತಿ ನೋಡಿದಾಗ ಎದುರಿಗೆ ಮೊದಲು ಕಂಡದ್ದು ಕಾಶೀಮನ ಬಾಡಿದ ಕಂಗೆಟ್ಟ ಮುಖ. ಕುಂಟು ಕಾಲಿನ ಮೇಲೆ ಭಾರ ಹಾಕದೆ ಕಟಕಟೆಗೆ ಒರಗಿ ನಿಂತಿದ್ದನಾತ. ಸುಶೀಲೆಯ ಕಣ್ಣು ತುಂಬಿ ಬಂದವು., ಆ ಜಾಗ ಕೋರ್ಟು ಎನ್ನುವುದು ನೆನಪಾಗಿ ತಟ್ಟನೆ ಮುಖ ಹೊರಳಿಸಿ ನ್ಯಾಯಾಧೀಶರನ್ನು ನೋಡಿ ಕೈಮುಗಿದಳು. ತನ್ನನ್ನು ಕಾಪಾಡುವವರು ನೀವೇ ಎನ್ನುವ ದೀನಭಾವ ಅವಳ ಮುಖದಲ್ಲಿತ್ತು.

ವಕೀಲರ ಪಾಟಿಸವಾಲಿಗೆ ಉತ್ತರವಾಗಿ, ತನ್ನ ಹೆಸರು ಸುಶೀಲೆ. ತನ್ನ ತಾಯಿ ಅಂಬವ್ವ ಸೂಳೆಗಾರಿಕೆಯಿಂದ ಹೊಟ್ಟೆ ತುಂಬಿಸಿಕೊಂಡು ನಾಲ್ಕು ಎಕರೆ ಹೊಲ ಸಂಪಾದಿಸಿದ್ದಳು. ತಾನು ಅವಳ ಒಬ್ಬಳೇ ಮಗಳು. ತಾಯಿ ಸತ್ತ ಮೇಲೆ ತಾನೂ ಸೂಳೆಗಾರಿಕೆ ಮಾಡುತ್ತಿದ್ದೇನೆ ಎಂದು ಹೇಳಿದಳು. ಅಪರಾಧಿ ಸ್ಥಾನದಲ್ಲಿರುವ ಕಾಶೀಮನು ತನ್ನನ್ನು ಇಟ್ಟುಕೊಂಡವನು. ಹೀಗೆ ಇನ್ನೂ ಎಷ್ಟೋ ಜನ ತನ್ನಲ್ಲಿ ಬರುತ್ತಾರೆ, ಎಂದು ಹೇಳಿ ಅವರೆಲ್ಲ ಆಗಾಗ ತನ್ನ ಜೊತೆ ಮಲಗಲು ಬರುತ್ತಾರೆಂದು ನಿಂಗಣ್ಣ ಮತ್ತು ಸಂಗಡಿಗರನ್ನು ತೋರಿಸಿದಳು. ಒಂದು ರಾತ್ರಿ ಕಾಶೀಮ ತನ್ನ ಜೊತೆಗಿದ್ದಾಗ ನಿಂಗಣ್ಣ ಬಂದು ಗದ್ಲ ಮಾಡಿ, ಎಬ್ಬಿಸಿ ತಮ್ಮನ್ನು ಹೊರಗೆ ಎಳೆದು ಅಪಮಾನ ಮಾಡಿದ್ದಲ್ಲದೆ, ಎಲ್ಲರೂ ಕೂಡಿ ಕಾಶೀಮನನ್ನು ಹೆಣ ಬೀಳುವಂತೆ ಹೊಡೆದರೆಂದೂ ಹೇಳಿದಳು. ಅದಕ್ಕೆಲ್ಲ ಕಾರಣ ತಾನು ಅವರಿಗೆಲ್ಲ ಬೇಕಾಗಿದ್ದವಳು. ಇದರಲ್ಲಿ ಕಾಶೀಮನದು ಏನೂ ತಪ್ಪಿಲ್ಲ. ಅವನು ನಿರಪರಾಧಿ, ಎಂದು ಹೇಳಿಬಿಟ್ಟಳು.

ಸರಕಾರಿ ವಕೀಲರು ಎಷ್ಟು ಪ್ರಯತ್ನಿಸಿದರೂ ಅವಳ ಬಾಯಿಯಿಂದ ಏನೂ ಬರಲಿಲ್ಲ. ಇದನ್ನೇ ಪಟ್ಟುಹಿಡಿದಳು. ಕೋರ್ಟು ಮುಕ್ತಾಯವಾಯಿತು.

ಮಧ್ಯಾಹ್ನ ನ್ಯಾಯಾಧೀಶರು ಕಾಶೀಮ ನಿರಪರಾಧಿ ಎಂದು ಬಿಡುಗಡೆ ಮಾಡಿ, ನಿಂಗಣ್ಣ ಮತ್ತು ಸಂಗಡಿಗರಿಗೆ ಮತ್ತೊಮ್ಮೆ ಈ ರೀತಿ ನಿರ್ಲಜ್ಜರಾಗಿ ವರ್ತಿಸದಂತೆ ಎಚ್ಚರಿಕೆ ಇತ್ತು ಬಿಟ್ಟು ಬಿಟ್ಟರು.

ಕಾಶೀಮನ ಹೆಗಲಿಗೆ ಆಧಾರ ಕೊಟ್ಟು ನಡೆಸಿಕೊಂಡು ಹೊರಗೆ ಬಂದು, ಒಂದು ದೊಡ್ಡ ಹುಣಸಿಗಿಡದ ನೆರಳಿಗೆ ಉಸ್ಸೆಂದು ಕುಳಿತ ಸುಶೀಲೆ ರಾಮಣ್ಣನಿಗೆ, "ಯಣ್ಣಾ ಗಂಟಲು ಆರಿ ಹೋಗೇತಿ, ಮೂವಾರಿಗೂ ಇಲ್ಲೇ, ಚಾ ಪೂರಿಪಲ್ಲೆ ತರ್ರಿ್ತೀಯಾ" ಎಂದು ಅಂಗಲಾಚಿದಳು. ರಾಮಣ್ಣ ಅತ್ತ ಹೋದ ಮೇಲೆ ಸೋತು ಹೋದವಳಂತೆ, ಕಾಶೀಮನ ತೊಡೆಯ ಮೇಲೆ ತಲೆ ಇಟ್ಟು ಬಿಕ್ಕಿ ಬಿಕ್ಕಿ ಅತ್ತಳು.

ಅವಳ ತಲೆಯ ಮೇಲೆ ಕೈಯಾಡಿಸುತ್ತ ಕಾಶೀಮ ಸುಮ್ಮನೆ ಕುಳಿತಿದ್ದ. ಅವನ ಕೈ ಅವಳ ಕುತ್ತಿಗೆಗೆ ಹೋದಾಗ ತಟ್ಟನೆ ಅಲ್ಲಿಯೇ ನಿಂತಿತು. ಅದನ್ನು ತಿಳಿದ ಸುಶೀಲೆ ಅವನ ಕೈ ಮೇಲೆ ಕೈ ಇಟ್ಟು,

"ಕೋರ್ಟಿನ್ಯಾಗ ಸಾಕ್ಷಿ ಹೇಳಾಕ ವಕೀಲರು ನನಗ ಕಲಿಸಿದ್ದರು. ನಿನ್ನ ಬಿಡಿಸಿಕೊಳ್ಳಾಕ ಬ್ಯಾರೆ ದಾರೀನS ಇಲ್ಲಾ ಅಂತ ಅಂದರು. ಅದಕ್ಕ ಸುಳ್ಳು ಹೇಳಿದೆ. ನನ್ನ ಮಂಗಳಸೂತ್ರ ಮಾರಿ ವಕೀಲರಿಗೆ ರೊಕ್ಕಾ ಕೊಡತೇನಿ" ಎಂದಳು. ಕಾಶೀಮ ಆಗಲೂ ಮಾತನಾಡಲಿಲ್ಲ. ಅವನ ಕಣ್ಣೀರು ಅವಳ ಕೆನ್ನೆಯ ಮೇಲೆ ಬಿದ್ದು ಹರಿದುಹೋದವು.

***

■■

# ಕಥೆಯಾದವಳು ಹುಡುಗಿ

ಬಚ್ಚಲು ಮನೆಯಿಂದ ಮಡಿ ಸೀರೆ ಸುತ್ತಿಕೊಂಡು ಹೊರಬರುತ್ತಿದ್ದ ಮಗಳನ್ನು ಕಂಡು ಗಿರಿಜವ್ವ "ನೀಲಕ್ಕಾಽ ನಿನ್ನ ಜಳಕ ಆತಲ್ಲ. ಲಗೂನ ದೇವರ ಮನಿಯೊಳಗ ಪಾರ್ವತಿ ಹೆಸರಲೆ ಸೀರಿ ಏರಿಸಿ ಪೂಜೆ ಮಾಡು, ಮಾವನ್ನ ಕೇಳಿ ಬಂಗಾರ ಸಾಮಾನು ಇಸಕೊಂಡು ಹಾಕು" ಎಂದು ಹೇಳಿ ಹೂರಣ ರುಬ್ಬುತ್ತಿದ್ದ ಹೆಣ್ಣಾಳಿನ ಹತ್ತಿರ ಬಂದು ಹೂರಣ ಹಿಡಿದು ನೋಡಿ, "ಕಾಳವ್ವಾಽ ಇನ್ನೊಂದಿಷ್ಟು ಸಣ್ಣಾಗಿ ರುಬ್ಬು, ಇಲ್ಲಂದರ ಹೋಳಿಗಿ ಹರೀತಾವ" ಎನ್ನುತ್ತ ಒಲೆಯ ಮುಂದೆ ಕುಳಿತು ವಡೆ ಕರಿಯುತ್ತಿದ್ದ ಗಂಗಮ್ಮನಿಗೆ, "ಯಮ್ಮಾ ನಾ ವಡೀ ಕರೀತಿನಿ ಏಳು, ಭಾಳ ಹೊತ್ತಾತು ನೀನು ಒಲಿ ಮುಂದ ಕುಂತು, ಹೊರಗ ಹೋಗು, ಮಂದಿ ಭಾಳ ಬಂದಾರ-ನೀರಲಗಿಯವರು, ಹೊಸೂರವರು, ಅಣ್ಣಿಗೇರಿ ಬೀಗರು ಎಲ್ಲಾರೂ ಬಂದಾಂಗ ಕಾಣತೈತಿ. ಮಾತಾಡಸ ಹೋಗು ಅವರನ್ನ" ಎಂದು ತಾಯಿಯನ್ನು ಎಬ್ಬಿಸಿ ಹೊರಗೆ ಕಳಿಸಿದಳು.

ಪಡಸಾಲೆಗೆ ಬಂದ ಮುದುಕಿ ಅಲ್ಲಿ ಕೂಡಿದ ಜನ ನೋಡಿ ನೆಲಕ್ಕೆ ಕುಸಿದೇ ಬಿಟ್ಟಳು. ಸೆರಗು ಮುಖಕ್ಕೆ ಮುಚ್ಚಿಕೊಂಡು ಹೋ ಎಂದು ಅಳಹತ್ತಿದಳು. ಮುಂದೆ ಬಂದ ನಾಗಪ್ಪಣ್ಣ-

"ಗಂಗಮ್ಮನೋರ, ಸಮಾಧಾನ ತೋಗಳ್ರಿ, ಜೀವಕ್ಕೆ ತ್ರಾಸ ಮಾಡಿಕೊಬ್ಯಾಡ್ರಿ" ಎಂದಾಗ "ಯಣ್ಣಾಽ, ನನ್ನ ಹೊಟ್ಟ್ಯಾಗ ಬೆಂಕಿ ಬಿದ್ದೈತಿ. ಬಣ್ಣದ ಗೊಂಬೀ ಹಂತಾ ನನ್ನ ಪಾರಕ್ಕನ್ನ ಕಳಕೊಂಡು ನಾ ಹ್ಯಾಂಗ ಸುಮ್ಮಕಿರಲಿ., ಶಿವಾ ಈ ಮುದುಕಿನ್ನ ಯಾಕ ಒಯ್ಯಲಿಲ್ಲಾ? ಇನ್ನೂ ಕಣ್ಣು ಬಿಟ್ಟು ಆಡೊ ನನ್ನ ಮೊಮ್ಮಗಳನ್ನ ಒಯ್ದಾ." ರಾಗ ತೆಗೆದು ಅಳುತ್ತಿದ್ದ ಮುದುಕಿಯನ್ನು ನೋಡಿದವರ ಕಣ್ಣುಗಳೆಲ್ಲ ತುಂಬಿ ಬಂದವು.

ದೋತರದ ಮುಸುಕು ಬಿಗಿದು ಮಂಚದ ಮೇಲೆ ಮಲಗಿದ್ದ ಬಸಣ್ಣ ಎದ್ದು ಕುಳಿತು ಅವ್ವನನ್ನು ಗದರಿಸಿದ "ಎಬೇ ಯಾಕ ಅಳತಿ ಹಾಂಗ, ಅತ್ತರ ಹೋದಾಕಿ ತಿರುಗಿ ಬರತಾಳೇನ?" ಮಗನ ಕೆಂಪು ಕಣ್ಣು, ಕೆದರಿದ ಕೂದಲು, ಮಾಸಿದ ದೋತರ ನೋಡಿದ ಗಂಗಮ್ಮ ಮತ್ತೆ ದನಿ ಎತ್ತರಿಸಿದಳು. "ಯಪ್ಪಾ ನೋಡ್ರೋ ನನ್ನ ಮಗನ್ನ ದೊರಿ ಹಾಂಗ ಮೆರೆದಾಡತಿದ್ದಾ ಹ್ಯಾಂಗ ಹಾಸಿಗೆ ಹಿಡಿದಾನ, ಮಗಳು ಹೋದಾಗಿಂದ ಹೊಟ್ಟೆಗೆ ಕೂಳು ತಿನವೊಲ್ಲ, ಕಣ್ಣು ಮುಚ್ಚವೊಲ್ಲ. ಪಾರೂ ಪಾರಕ್ಕಾ ನಿನ್ನ ನಾನಽ ಕೊಂದಂಗಾತು" ಅಂತ ಹುಚ್ಚಾಗಿ ಬಡಬಡಸತಾನ.

ಅವ್ವನ ಮಾತು ಕೆಳಿ ಬತ್ತಿದ ಕಣ್ಣುಗಳಲ್ಲಿ ಮತ್ತೆ ಸೆಲೆ ಒಡೆಯಿತು. ಧೋತರ ಹೊಚ್ಚಿಕೊಂಡು ಅಳು ಹೊರಗೆ ಬರದಂತೆ ತಲೆ ದಿಂಬಿಗೆ ಮುಖವೊತ್ತಿದ. ವಿರೂಪಾಕ್ಷಪ್ಪ ಹತ್ತಿರ ಹೋಗಿ ಗೆಳೆಯನ ಬೆನ್ನ ಮೇಲೆ ಕೈಯಾಡಿಸಿ "ಬಸಣ್ಣಾಽ ಹೋದವರು ನಮ್ಮವರು ಅಲ್ಲಾಂತ ತಿಳಕೋಬೇಕು. ಎಲ್ಲಾರೂ ಒಂದು ದಿನಾ ಹೋಗೂದು ಅದ., ಒಬ್ಬರು ಹಿಂದ, ಒಬ್ಬರು ಮುಂದ. ಪಾರಕ್ಕನ ಆಯುಷ್ಯ ಅಷ್ಟಽ ಇತ್ತು. ತನ್ನ ಪಾಲಿನ ಕೆಲಸಾ ಮುಗಿಸಿ ತನ್ನ ಹಾದಿ ಹಿಡದ್ಲು. ಶಿವಗ ಬೇಕಾಗಿತ್ತು ಕರಕೊಂಡಾ. ನೀ ಧೈರ್ಯಾ ತೊಗೋಬೇಕು. ಮನಸ್ಸು ಗಟ್ಟಿ ಮಾಡಿಕೊಬೇಕು" ಎಂದ. ಬಸಣ್ಣನ ಹೃದಯದ ಒಳಗಿನ ಕುದಿಯನ್ನು ವಿರೂಪಾಕ್ಷಪ್ಪ ಚೆನ್ನಾಗಿ ತಿಳಿದಿದ್ದ. ಪಾರ್ವತಿ ಸತ್ತು ತಿಂಗಳು ಕಳೆಯುತ್ತ ಬಂದಿತ್ತು. ಅವನಿಗೆ ಈಗಾಗಲೇ ನೂರಾರು ಸಲ ಬಾಯಿಮಾತಿನ ಒಣ ವೇದಾಂತವನ್ನು ಹೇಳಿದ್ದ. ಅವನ ಮನಸ್ಸಿಗಾದ ನೋವನ್ನು ಕಾಲವೇ ಮಾಯಿಸಬೇಕು ಎನ್ನುವುದು ತಿಳಿದಿದ್ದರೂ ಮತ್ತೆ ನೂರಾಒಂದನೆಯ ಸಲ ಸಾಂತ್ವನದ ಮಾತುಗಳನ್ನಾಡಿದ್ದ.

"ಮುತ್ತಿನಂಥಾ ಗಂಡುಮಕ್ಕಳನ್ನ ನೋಡಿ ನಿಮ್ಮ ದುಃಖಾ ಮರೀಬೇಕ್ರಿ", ಬಸಣ್ಣನ ಮಗನಿಗೆ ಹೆಣ್ಣು ಕೊಟ್ಟ ನಾಗಪ್ಪಣ್ಣ ನುಡಿದರು.

"ಪಾರವ್ವ ಪುಣ್ಯವಂತಿ, ಮುತ್ತೈದಿ ಸಾವಂತ್ರಿ ಆಗಿ ಸತ್ತು", ಇನ್ನೊಬ್ಬ ವಿಧವೆ ಮುದುಕಿ ದನಿಗೂಡಿಸಿದಳು.

"ಏಳ್ರಿ ಇನ್ನ, ಬಸಣ್ಣಾ ಜಳಕಾ ಮಾಡ್ರಿ, ದಿನಾ ಮಾಡಾಕ ಬೀಗರು ಬಿಜ್ಜರು ಎಲ್ಲಾರೂ ಬಂದಾರ, ಇಸಬಾಯಿ ತೊಳಕೊಳ್ಳೂಣು, ನಿಮ್ಮ ಧುಃಖಾ ಆ ಶಿವನs ಮರಸಬೇಕು." ಎಲ್ಲರಿಗಿಂತ ಹಿರಿಯರಾದ ವೀರಭದ್ರಪ್ಪ ಒತ್ತಾಯ ಮಾಡಿದಾಗ ಬಸಣ್ಣ ಮಂಚದಿಂದ ಇಳಿದು ತೂಗಾಡುತ್ತ ಮಗ ಚಂದ್ರಶೇಖರನ ಹೆಗಲ ಮೇಲೆ ಕೈಯೂರಿ ಬಚ್ಚಲಿಗೆ ಹೊರಟ.

ಅಡುಗೆ ಮನೆಯ ಒಳಬಾಗಲಲ್ಲಿ ನಿಂತ ನೀಲಕ್ಕ ಮೆಲುದನಿಯಲ್ಲಿ "ಮಾವಾs" ಎಂದಳು. ಬಸಣ್ಣ ಮುಖವೆತ್ತಿದ. ಗಂಟಲು ಕಟ್ಟಿದ ನೀಲಕ್ಕ "ಪಾರಕ್ಕಗ ಸೀರಿ ಏರಿಸಿ ಪೂಜೆ ಮಾಡಬೇಕು. ಬಂಗಾರದ ಸಾಮಾನು ಕೊಡು" ಎಂದಳು. ನಡದಲ್ಲಿದ್ದ ಕೀಲಿಕೈ ಗೊಂಚಲನ್ನು ಅವಳತ್ತ ಒಗೆದು ಹೇಳಿದ, "ಉಮೇಶಗ ಹೇಳು. ತಿಜೋರಿ ಕೀಲಿ ತಗದು ಕೊಡು ಅಂತ. ಸೀರಿ, ಖಣಾ ನಿಮ್ಮವ್ವನ ಹತ್ತಿರ ಅದಾವ." ನೀಲಕ್ಕ ಗಂಡ ತೆಗೆದುಕೊಟ್ಟ ವಸ್ತ್ರ-ಒಡವೆಗಳನ್ನೆಲ್ಲ ತಾಟಿನಲ್ಲಿ ತುಂಬಿಕೊಂಡು ತಂದು ಪೂಜೆಗೆ ಅಣಿ ಮಾಡಿದಳು.

ಅವ್ವ ಕೊಟ್ಟ ಹಸಿರು ರೇಶಿಮೆಯ ಇಳಕಲ್ಲ ಸೀರೆಯನ್ನು ಸೆರಗು ಮೇಲೆ ಮಾಡಿ, ಚೌಕಾಗಿ ಮಡಿಚಿ ದೇವರ ಜಗುಲಿಯ ಹತ್ತಿರ ಹಣೆಯ ಮೇಲೆ ಗೋಡೆಗೆ ಆನಿಸಿ ಇಟ್ಟು, ತ್ರಿಕೋನಾಕಾರ ಮಡಚಿದ ಜರದ ಖಣವನ್ನು ಸೀರೆ ಮೇಲೆ ಇಟ್ಟಳು. ಪಾಟ್ಲಿ, ಬಿಲಾವರ, ತೋಡೆ, ಮುತ್ತಿನ ಬಳೆ, ಮುತ್ತಿನ ಸರ, ನತ್ತು, ಬುಗುಡಿ, ಚಂದ್ರಹಾರ, ತಾಳಿಸರ ಎಲ್ಲವನ್ನೂ ಮನುಷ್ಯರಿಗೆ ಹಾಕುವಂತೆ ಜೋಡಿಸಿ ಹಾಕಿ, ಬಂಗಾರದ ಕರಡಿಗೆಯನ್ನೂ ಹಾಕಿ, ಅರಿಶಿಣ, ಕುಂಕುಮ, ವಿಬೂತಿ ಹಚ್ಚಿದಳು. ಕೆನ್ನೆಯ ಮೇಲೆ ಹರಿಯುತ್ತಿದ್ದ ಕಣ್ಣೀರನ್ನು ಹಿಂಗೈಯಿಂದ ಆಗಾಗ ಒರೆಸಿಕೊಳ್ಳುತ್ತಲೇ ಎಣ್ಣೆ, ಬತ್ತಿಗಳನ್ನು ಹಾಕಿ ಎರಡು ಸಮೆಗಳನ್ನು ಢಾಳಾಗಿ ಉರಿಸಿಬಿಟ್ಟಳು. ಬೆಳ್ಳಿಯ ಆರತಿ ತುಂಬಿಟ್ಟಳು. ಗುಲಾಬಿ, ಮಲ್ಲಿಗೆ, ಸೇವಂತಿಗೆಯ ಹೂಗಳನ್ನು ಏರಿಸುವಾಗ ಪಟಪಟ ಕಣ್ಣೀರು ಸೀರೆಯ ಮೇಲೆ ಉದುರಿದವು. ಇನ್ನು ತಡೆಯಲಾಗದೆ ಮೊಣಕಾಲುಗಳಲ್ಲಿ ಮುಖ ಮುಚ್ಚಿಕೊಂಡು ಕುಳಿತುಬಿಟ್ಟಳು. ಮುಚ್ಚಿದ ಕಣ್ಣುಗಳ ಹಿಂದೆ ನೆನಪುಗಳ ಬೆಳಕು ತೂಗಾಡಿತು. .......

"ಅವ್ವಾs ಬೇ ನಾ ಬಿದ್ದೇ" ಎಂದು ಅಳುತ್ತ ಓಡಿ ಬರುತ್ತಿದ್ದ ಪುಟ್ಟ ಪಾರೂವನ್ನು ಅವ್ವ ಧಾವಿಸಿ ಹೋಗಿ ಎತ್ತಿಕೊಂಡು ಸೆರಗಿನಿಂದ ಮುಖ, ಮೈ ಕೈ ಒರೆಸುತ್ತಿದ್ದಳು. ನನ್ನವ್ವ ಗಿರಿಜವ್ವ ಸೋದರತ್ತೆಯಾದರೂ ಅವಳನ್ನೂ ಪಾರೂ ಅವ್ವಾ ಎಂದೇ ಕರೆದದ್ದು. "ಆಕೀಗೆ ಅತ್ತೀ ಅನಬೇಕವ್ವಾ" ಎಂದು ಅಮ್ಮ ಕಲಿಸಿದಾಗಲೆಲ್ಲ "ನೀಲಕ್ಕ ಅವ್ವಾ ಅಂತ ಯಾಕ ಕರೀತಾಳ. ನಾನು ಹಾಂಗs ಕರಿಯಾಕಿ" ಎಂದು ಗಲ್ಲ ಉಬ್ಬಿಸಿ ಹೇಳುವಳು. ಗಿರಿಜವ್ವ ಅವಳಿಗೆ ಅವ್ವನಾದರೆ ನಾನು ಅಕ್ಕ. ಯಾವಾಗಲೂ ನನ್ನನ್ನು ಬಿಟ್ಟು ಅತ್ತಿತ್ತ ಸರಿದವಳಲ್ಲ. ಕೂಡಿಯೇ ಆಡುವುದು, ಉಣ್ಣುವುದು, ತಿನ್ನುವುದು, ಮಲಗುವುದು ಎಲ್ಲಾ ಕೂಡಿಯೇ ಮಾಡಬೇಕು. ಮಾವ ಅರಿವೆ-ಅಂಚಡಿ, ರಿಬ್ಬನ್ನು ಬಳೆ ಏನೂ ತಂದರೂ ಎರಡೆರಡು ತರಲೇಬೇಕು. ಇಬ್ಬರೂ ಕೂಡಿ ಹೊಸ ಅರಿವೆ ಹಾಕಿಕೊಂಡು ಕುಣಿದಾಡಿದಾಗ ಪಾರೂನಿಗೂ ಬಹಳ ಹಿಗ್ಗು.

ಅವಳಿಗಿಂತ ಎರಡು ವರ್ಷ ಹಿರಿಯಳಾದ ನಾನು ಮೊದಲು ದೊಡ್ಡವಳಾಗಿದ್ದೆ., ಅವ್ವ ಮಾವನಿಗೆ ಹೇಳಿ ತನ್ನ ಸಾಲೆ ಬಿಡಿಸಿಬಿಟ್ಟಳು. ಆಗ ಪಾರೂನ ಸಿಟ್ಟು, ಹಟ ಹೇಳತೀರದು. ಉಣಲಿಲ್ಲ. ಸಾಲೆಗೂ ಹೋಗಲಿಲ್ಲ, ಮೂಲೆಯಲ್ಲಿ ಮುಸುಕುಹಾಕಿ ಮಲಗಿಬಿಟ್ಟಳು. ಕೊನೆಗೆ ಅವಳ ಹಟಕ್ಕೆ ಮಣಿದು ಮಾವ "ಗಿರಿಜವ್ವ, ಈಗ ಕಾಲ ಬದಲಾಗೇದವ್ವ, ಹೆಣ್ಣ ಮಕ್ಕಳೂ ಸಾಲೀ ಕಲೀತಾರ, ನೀಲೂ ಸಾಲಿಗೆ ಹೋಗಲಿ ಬಿಡು, ಇಬ್ಬರೂ ಕೂಡಿ ಜೋಡಾಗಿ ಹೋಗತಾರ, ಬರತಾರ" ಎಂದು ಒಪ್ಪಿಸಿದ್ದರು. ತಂದೆಯನ್ನು ಕಳೆದುಕೊಂಡು, ನೆಲೆ ತಪ್ಪಿ ಸೋದರಮಾವನ ಮನೆಗೆ ಬಂದ ನನಗೆ ಪಾರೂನಿಂದಾಗಿ ಯಾವ ಕೊರತೆಯೂ ಕಾಣಲಿಲ್ಲ.

"ಪಾರೂ ದೊಡ್ಡಾಕಿ ಆಗಿ ಸೀರೀ ಉಡು ಹಂಗಾದ್ಲೂ. ಆಕೀ ಕೈ ಕೊರಳು ಭಣಾ ಭಣಾ ಅಂತಾವ. ಬಂಗಾರದ ಬಳಿ, ಸರಾ ಮಾಡಿಸಿ ಹಾಕಬೇಕಲ್ಲ" ಎಂದು ಅವ್ವ, ನಮ್ಮ ಮಾವನಿಗೆ ಹೇಳಿದಾಗ ನಾನು ಅಲ್ಲಿಯೇ ಇದ್ದೆ. ಮಾವ ಪಾರೂನ ಅವ್ವನ ಹಳೆಯ ದಾಗೀನುಗಳನ್ನೆಲ್ಲ ಮುರಿಸಿ ಬಳೆ, ಸರ ಮಾಡಿಸಿ ತಂದರು. ಪಾರೂ ಅವುಗಳನ್ನು ದೇವರ ಮುಂದಿಟ್ಟು ನಮಸ್ಕಾರ ಮಾಡಿ, ಅಲ್ಲೇ ನಿಂತಿದ್ದ ತನ್ನ ಕೈಗಳಿಗೆ ಕೆಂಪು ಕಾಜಿನ ಬಳೆಗಳ ಜೊತೆಗೆ ಎರಡು ಬಂಗಾರದ ಬಳೆ ಏರಿಸಿ, ಉಳಿದುದನ್ನು ತಾನು ಹಾಕಿಕೊಂಡಳು. ಇಬ್ಬರೂ ಹೋಗಿ ಹಿರಿಯರಿಗೆ ನಮಸ್ಕಾರ ಮಾಡಿದಾಗ ಅವ್ವ ಅವಳನ್ನಪ್ಪಿ ಅತ್ತುಬಿಟ್ಟಳು. ಮಾವ ಏನೋ ತಪ್ಪು ಮಾಡಿದವರಂತೆ ಎದ್ದು ಹೋದರು. ಎಂಟು ದಿನಗಳಲ್ಲಿಯೇ ನನಗೂ ಬಂಗಾರದ ಬಳೆ ಮಾಡಿಸಿ ತಂದು ಹಾಕಿದರು.

ಪಾರೂ ಬಣ್ಣದಲ್ಲಿ ನನಗಿಂತಲೂ ಕಪ್ಪು. ಚಿಕ್ಕವಳಿದ್ದಾಗ ಬಿದ್ದು ಗಾಯವಾಗಿ ಹಣೆಯಲ್ಲಿ ಕಚ್ಚುಬಿದ್ದಿತ್ತು. ಕಣ್ಣು, ಮೂಗು ನೇರವಾಗಿ ಮೈ ಕೈ ಮಾಟವಾಗಿ ಲಕ್ಷಣವಾಗಿದ್ದರೂ ಅವಳಿಗೆ ಅಸಮಾಧಾನ, ಆಗಾಗ ತನ್ನ ಕಪ್ಪನೆತ್ತಿ ಅವಳು ಆಡಿಕೊಂಡಾಗ ನನಗೆ ಸಂಕಟವಾಗುತ್ತಿತ್ತು. ಅವ್ವ ಅವಳ ಮುಖವನ್ನು ಬೊಗಸೆಯಲ್ಲಿ ಹಿಡಿದು, ನೆಟಿಗೆ ಮುರಿದು ನನ್ನ ಕೂಸು ಭಾಗ್ಯವಂತಿ, ಪುಣ್ಯವಂತಿ, ಗುಣದಾಗ ಅಪರಂಜಿ. ಇಂಥಾ ಮಗಳ್ನ ಇಟ್ಟುಕೊಂಡು ಬಾಳೆ ಮಾಡೂ ಪುಣ್ಯೇ ನಿಮ್ಮ ಅವ್ವಗಿಲ್ಲ - ಎಂದಾಗ ಪಾರೂ ಮಾತ್ರ "ನೀ ಅದಿಯಲ್ಲ ನನ್ನವ್ವ" ಎಂದು ಅತ್ತೆಯನ್ನಪ್ಪಿಕೊಳ್ಳುವಳು.

ನಾವು ಬೆಳೆದು ದೊಡ್ಡವರಾದಂತೆ ಅವಳ ಅಣ್ಣ ಉಮೇಶನೂ ಬೆಳೆದಿದ್ದ, ಮಾವನ ಸಮಾನ ಎತ್ತರವಾಗಿದ್ದ. ನನ್ನೊಡನೆ ಮಾತು ಕಡಿಮೆ ಮಾಡಿದ್ದ, ಎಲ್ಲರ ಕಣ್ಣು ತಪ್ಪಿಸಿ ಆಗಾಗ ಕಳ್ಳನೋಟದಿಂದ ಹೊಸಬಳನ್ನು ನೋಡುವ ಹಾಗೆ ನನ್ನನ್ನು ನೋಡುತ್ತಿದ್ದ. ನನಗೆ ಮೈ ತುಂಬ ನಾಚಿಕೆ, ಅವನತ್ತ ನೋಡಿಯೂ ನೋಡದ ಹಾಗೆ ಮಾಡುತ್ತಿದ್ದೆ. ಅವನ ಯಾವ ಕೆಲಸವನ್ನೂ ನಾನು ಮುಂದಾಗಿ ಹೋಗಿ ಮಾಡುತ್ತಿರಲಿಲ್ಲ. ಪಾರೂ ತುಂಟತನದಿಂದ ಬೇಕಾಗಿಯೇ ನನಗೆ ಅವನ ಕೆಲಸ ಹಚ್ಚುತ್ತಿದ್ದಳು. ನಾವು ಮಾತನಾಡುವಂತೆ ಮಾಡುತ್ತಿದ್ದಳು. ನಾವು ನಾಚುತ್ತ ತಡವರಿಸುತ್ತ, ಕೆಂಪಾಗುತ್ತ ಮಾತಾಡಿದಾಗ "ಓಹೋ ಗಂಡಾ ಹೇಣ್ತಿ ಮಾತಾಡದರೋ" ಎಂದು ಚಪ್ಪಾಳೆ ತಟ್ಟಿ ನಗುವಳು.

ತನ್ನ ಒಳ್ಳೊಳ್ಳೆಯ ರೇಶಿಮೆ ಸೀರೆಗಳನ್ನು ನನಗೆ ಉಡಿಸಿ ನನ್ನ ಚಂದ ನೋಡುವುದರಲ್ಲಿಯೇ ಅವಳಿಗೆ ತೃಪ್ತಿ 'ನೀಲಕ್ಕಾ ನೀ ಬೆಳ್ಳಗ ಅದಿ. ಈ ಕೆಂಪು ಸೀರಿನಿನಗ ಎಷ್ಟು ಛೆಂದ ಕಾಣಸ್ತದ ನೋಡು' ಅಂದು ಉಡಲು ಸೀರಿ ಕೊಟ್ಟು ಜಡೆಗೆ ಮಲ್ಲಿಗೆ ಮಾಲೆ ಮುಡಿಸಿ, ಕುಂಕುಮ ತಿದ್ದಿ ತೀಡಿ 'ನಮ್ಮ ಮನೀ ಲಕ್ಷ್ಮೀ ನೀನು' ಎಂದು ಹಿರಿಯರಂತೆ ನೆಟಿಗೆ ಮುರಿಯುವಳು.

ನಮ್ಮ ಮದುವೆಯ ಮೊದಲಿನ ಮಾತು. ಹೀಗೇ ಒಂದು ದಿನ ಅವಳ ಸೀರೆ ಉಟ್ಟಿದ್ದೆ. ಕೋಣೆಯಲ್ಲಿ ಕುಳಿತು ಇಬ್ಬರೂ ಹೆಣೆಯುತ್ತಿದ್ದೆವು. ನಾನು ಬಾಗಿಲಿಗೆ ಬೆನ್ನು ಮಾಡಿ ಕುಳಿತಿದ್ದೆ. ಒಮ್ಮೆ ತಲೆಯೆತ್ತಿದಾಗ ಪಾರೂ ಅಲ್ಲಿ ಇರಲಿಲ್ಲ. ಹಿತ್ತಲಿಗೆ ಹೋಗಿರಬಹುದೆಂದು ಸುಮ್ಮನಾದೆ. ಬಾಗಿಲ ಹತ್ತಿರ ಹೆಜ್ಜೆಯ ಸಪ್ಪಳವಾಯಿತು. ಪಾರೂ ಬಂದಿರಬಹುದೆಂದು ಹೊರಳಿ ನೋಡಲಿಲ್ಲ. ಯಾರೋ ನನ್ನ ಕಣ್ಣು ಮುಚ್ಚಿದರು. ಹೆಣಿಕೆ ಬಿಟ್ಟು ಕೆನ್ನೆಯ ಮೇಲಿದ್ದ ಕೈ ಹಿಡಿದು ಬೆಚ್ಚಿ ಬಿದ್ದೆ. ಗಂಡು ಕೈ !! ಉಮೇಶ ನನ್ನ ಕಿವಿಯಲ್ಲಿ ಪಿಸುಗುಟ್ಟಿದ, "ನೀಲೂ ನೀ ಅಂತ ತಿಳೀಲಿಲ್ಲಾ. ಸೀರಿ ನೋಡಿ ಪಾರೂ ಅಂತ ತಿಳಕೊಂಡಿದ್ದೆ" ಬಾಗಿಲ ಕಡೆಗೆ ಧಾವಿಸಿದ. ಆಗಲೇ ಪಾರೂ ಬಾಗಿಲ ಹತ್ತಿರ ನಿಂತು, 'ನೀನು ಬರತೀ ಅಂತ ಗೊತ್ತಿತ್ತು ಉಮ್ಮಣ್ಣ, ಅದಕ್ಕs ನಾ ಹೋಗಿದ್ದೆ' ಎಂದು ಬಿದ್ದು ಬಿದ್ದು ನಗುತ್ತಿದ್ದಳು...

'ಪಾರೂ ಪಾರೂ ನನ್ನ ಬಿಟ್ಟು ಹೋಗಿಬಿಟ್ಟೆ, ನಾನೇನು ಮಾಡಲಿ' ನೀಲಕ್ಕನ ಹೃದಯ ಕರಗಿ ನೀರಾಗಿ ಹರಿಯಿತು.

ಒಲೆಯ ಮುಂದೆ ಕುಳಿತು ವಡೆ ಕರಿಯುತ್ತಿದ್ದ ಗಿರಿಜವ್ವ ಪಡಸಾಲೆಯಲ್ಲಿಯ ರೋದನವನ್ನು ಕೇಳಿದಳು. ಅಳು -ಅಳು-ಅಳು. ತಿಂಗಳಾಯಿತು ಮನೆಯಲ್ಲಿಯ ಯಾರ ಕಣ್ಣೂ ಬತ್ತಿಲ್ಲ! ನದಿಗೆ ಮಹಾಪೂರ ಬಂದಂತೆ ಎದೆಯನ್ನೊಡೆದು ಎರಡೂ ದಂಡೆಯಿಂದ ದುಃಖ ಉಕ್ಕಿ ಉಕ್ಕಿ ಬರುತ್ತದೆ. ಯಾವ ಅಣೆಕಟ್ಟೆಗೂ ಇದನ್ನು ತಡೆದು ನಿಲ್ಲಿಸಲು ಶಕ್ತಿಯಿಲ್ಲ.

ತನ್ನ ಅತ್ತಿಗೆ ಸಣ್ಣ ಮಕ್ಕಳನ್ನು ಬಿಟ್ಟು ಸತ್ತಾಗಲೂ ಇಷ್ಟು ದುಃಖವಾಗಿರಲಿಲ್ಲ. ಅಣ್ಣ ಮತ್ತೆ ಮದುವೆ ಬೇಡ ಎಂದುಬಿಟ್ಟ. ಮಗಳೆಂದರೆ ಅಣ್ಣನಿಗೆ ಪ್ರಾಣ. ಪಾರೂ ಆದರೂ ಅಷ್ಟೆ. ಅಷ್ಟು ಪುಟ್ಟ ದೇಹದಲ್ಲಿ ದೇವರು ಎಷ್ಟು ದೊಡ್ಡ ಮನಸ್ಸು ಕೊಟ್ಟಿದ್ದ! ಆಳಿನಿಂದ ಹಿಡಿದು ಅಣ್ಣನವರೆಗೆ ಯಾರ ಮನಸ್ಸೂ ನೋಯಿಸಿದವಳಲ್ಲ.

ಪಾರೂ ಮದುವೆಯಾಗಿ ಗಂಡನಮನೆಗೆ ಹೊರಟು ನಿಂತಾಗ ತನ್ನನ್ನು ಅಪ್ಪಿ ಅತ್ತದ್ದು ನೋಡಿದರೆ ಪಡಸಾಲೆಯ ಕಂಬಗಳಿಗೂ ಕಣ್ಣೀರು ಬಂದಿರಬೇಕು. ಒಬ್ಬಳೇ ಮಗಳು ಸುಖವಾಗಿರಲಿ ಎಂದು ಅಣ್ಣ ದೊಡ್ಡ ಶ್ರೀಮಂತ ವ್ಯಾಪಾರಸ್ಥರ ಒಬ್ಬನೇ ಮಗನನ್ನು ಹುಡುಕಿದ್ದ. ಮಗಳಿಗೆ ಹತ್ತು ತೊಲೆ ಬಂಗಾರ ಹಾಕಿ, ಅಳಿಯನಿಗೆ ಬಂಗಾರದ ಕರಡಿಗೆ, ಮೇಲೆ ಹತ್ತು ಸಾವಿರ ರೂಪಾಯಿ ಕೊಟ್ಟು ಅದ್ದೂರಿಯಾಗಿ ಮದುವೆ ಮಾಡಿದ್ದ. ಪಾರ್ವತಿಯ ಗಂಡ ಕೆಂಪಗೆ ಎತ್ತರವಾಗಿ ನೋಡಲು ಚೆನ್ನಾಗಿದ್ದ. ಹೊಸ ಮೊದಲಗಿತ್ತಿಯೊಡನೆ ಪಾರೂನ ಚಿಕ್ಕವ್ವ ಅವಳ ಗಂಡನ ಮನೆಗೆ ಹೋಗಿ ಬಂದಳು. ಬೀಗರ ಶ್ರೀಮಂತಿಕೆ ಆಳು, ಕಾಳು, ಕಾರು, ಮನೆ ಎಲ್ಲಾ ಹೊಗಳಿದರೂ ಅವರಿಗೆ ಶ್ರೀಮಂತಿಕೆ ಸೊಕ್ಕು ಬಹಳ, ಹುಡುಗನ ದೊಡ್ಡವ್ವ, ಅಕ್ಕ-ತಂಗಿಯರು ನಮ್ಮನ್ನು ದರಕಾರು ಮಾಡಲೇ ಇಲ್ಲ ಎಂದು ನನ್ನ ಮುಂದೆ ದೂರು ಹೇಳಿದ್ದಳು. 'ಅವರು ಎಷ್ಟಾದರೂ ಗಂಡಿನವರು, ನಾವು ಹೆಣ್ಣಿನವರು, ನಾವೇ ತಗ್ಗಿ ನಡೆಯಬೇಕು' ಎಂದು ಅವಳನ್ನು ಸಮಾಧಾನ ಮಾಡಿದ್ದೆ ಗಂಡನ ಮನೆಗೆ ಹೋಗಿ ಬಂದ ಪಾರೂ ಮಾತ್ರ ಸಪ್ಪಗಿದ್ದಳು. ಮುಖ ಬಾಡಿತ್ತು. ನೀಲಕ್ಕ ನಾನು ಕೂಡಿ ಕೇಳಿದಾಗ 'ಮೈಯಾಗ ಆರಾಮ ಇಲ್ಲ ಅತ್ತೇ' ಎಂದು ಮಾತು ಹಾರಿಸಿದಳು. ನಮಗೆ ನಂಬಿಕೆಯಾಗಲಿಲ್ಲ. ಅವಳು ಗಂಡನ ವಿಷಯವಂತೂ ಎತ್ತಲೇ ಇಲ್ಲ. ಆಣೆ ಇಟ್ಟು ಬಹಳ ಒತ್ತಾಯ ಮಾಡಿದಾಗ ಅತ್ತುಬಿಟ್ಟಳು. ಅವಳು ಅಲ್ಲಿ ಹತ್ತು ದಿನವಿದ್ದರೂ ಗಂಡ ಅವಳನ್ನು ಮಾತಾಡಿಸಿರಲಿಲ್ಲ. ಮೊದಲನೆಯ ದಿನ ನಿರ್ವಾಹವಿಲ್ಲದೆ ಕೋಣೆಯಲ್ಲಿ ಮಲಗಿದ್ದ. ತಾನು ಮಂಚದ ಮೇಲೆ ಸುಪ್ಪತ್ತಿಗೆ ಮೇಲೆ ಮಲಗಿ -ಅದೂ ಅಣ್ಣ ಕೊಟ್ಟಿದ್ದು ಅವಳನ್ನು ಕೆಳಗೆ ಜಮಖಾನೆಯ ಮೇಲೆ ಮಲಗಲು ಹೇಳಿದ್ದನಂತೆ., ಅದೊಂದೇ ಅವನು ಮಾತಾಡಿದ್ದು ಮುಂದೆ ಅವನು ಮಲಗಲು ಬಂದಿರಲೇ ಇಲ್ಲ. ಪಾರ್ವತಿ ಎಲ್ಲವನ್ನೂ ಹೊಟ್ಟೆಯಲ್ಲಿಟ್ಟುಕೊಂಡೇ ಬಂದಿದ್ದಳು. ನನ್ನ ಎದೆ ಧಸ್ಸೆಂದಿತು. ಕೈ ಕಾಲು ಹೋದಂತಾಗಿ ಬಹಳ ಹೊತ್ತು ಮಾತು ಬರಲೇ ಇಲ್ಲ. ಬೀಗರ ಮನೆತನ ನೋಡಿ ಬಂದ ಮೇಲೆ ಅಣ್ಣನ ಮುಂದೆ ಹೆದರುತ್ತ ನಾನೇ ಮಾತು ತೆಗೆದಿದ್ದೆ. "ಅಣ್ಣ, ಹುಡುಗ ಪಾರೂನಕಿಂತ ಹತ್ತು ವರ್ಷ ದೊಡ್ಡಾಂವ, ಮತ್ತ ಮಂದಿ ಏನೇನೋ ಮಾತಾಡತಾರ."

"ಗಿರಿಜವ್ವಾऽ ನೀ ಹೇಳೂ ಮಾತು ನನ್ನ ಕಿವಿಗೂ ಬಿದ್ದೈತಿ. ಒಬ್ಬನಽ ಮಗಾ, ಚೆಲುವ, ಕೈಯಾಗ ರೊಕ್ಕ ಓಡ್ಯಾಡತಾವ. ಚೈನೀ ಮಾಡತಿದ್ದಾನು. ಗಂಡಸ ಮಗ ಅದಾನ. ತಪ್ಪೇನದ ಅದರೊಳಗ? ನಾಳೆ ಹೇಣ್ತಿ ಮನೆಗೆ ಬಂದಳಂದರ ತಾನಽ ಹಾದಿಗೆ ಬರತಾನ. ನಿನ್ನ ಅತ್ತಿಗಿ ಬರುತನ್ನಾ ನಾನು ತುಸು ಹಾರ್ಯಾಡಿದ್ದೇನ ?" ಎಂದು ಅಣ್ಣ ನಕ್ಕುಬಿಟ್ಟಿದ್ದ. ಬೀಗರ ಶ್ರೀಮಂತಿಕೆ, ಅಳಿಯನ ಚಂದ ನೋಡಿ ಅಣ್ಣ ಮಗಳನ್ನ ಕೊಟ್ಟು ಬಿಟ್ಟಾ. "ತಾಯಿ ಸತ್ತ ಮಗಳ್ನ ನೀನ ಕಾಪಾಡಬೇಕು. ದೇವರಽ ಆಕೀ ಗಂಡಗ ಛಲೋ ಬುದ್ಧಿ ಕೊಡು" ಎಂದು ಪೂಜೆಗೆ ಕುಳಿತಾಗ ದೇವರನ್ನು ಬೇಡಿಕೊಂಡು ನಾಲ್ಕು ಹೂ ಹೆಚ್ಚಿಗೆ ಏರಿಸಿದೆ. ಪಾರೂನ ಅದೃಷ್ಟ ಚೆನ್ನಾಗಿದ್ದರೆ ಯಾಕ ಸುಖದಿಂದ ಇರಬಾರದು ಎಂದು ಸಮಾಧಾನ ಪಟ್ಟಿದ್ದೆ. ಆದರೆ ಅವಳು ಎರಡನೆಯ ಸಲ ಗಂಡನ ಮನೆಯಿಂದ ಬಂದ ಮೇಲೆ ಆ ಸಮಾಧಾನ ಉಳಿಯಲಿಲ್ಲ.

"ಪಾರೂ ಇಷ್ಟ್ಯಾಕ ಸೊರಗೀ. ಮೈಯಾಗ ಬರೇ ಎಲುಬು ಕಾಣ್ತಾವ, ಅತ್ತೀ ಮನ್ಯಾಗ ಕೂಳು ಹಾಕ್ತಾರೋ ಇಲ್ಲೋ ?" ಎಂದು ಅವಳ ಬೆನ್ನ ಮೇಲೆ ಕೈಯಾಡಿಸಿ ಕೇಳಿದಾಗ

"ಅತ್ತೀ ನಾ ಒಂದ ಮಾತ ಕೇಳ್ತೇನಿ, ಖರೆ ಹೇಳು" ಎಂದು ದೈನಾಸಬಿಟ್ಟು ಕೇಳಿದ್ದಳು. ನಾನು ಹೂಂಗುಟ್ಟಿದಾಗ, "ಅವರಿಗೆ ನನ್ನ ಮದುವೆ ಮಾಡಿಕೊಳ್ಳೊ ಮನಸಿತ್ತೋ ಇಲ್ಲೋ ಕೇಳಿದಿರೇನು ? ನೀವs ಜುಲುಮಿ ಮಾಡಿ ಗಂಟು ಹಾಕಿದಿರಿ ಅಂತಾರಲ್ಲ" ಎಂದಳು. ಬಸಣ್ಣ, ವಿರೂಪಾಕ್ಷಣ್ಣ ಕೂಡಿ ಈ ಮನೆತನ ಈ ಹುಡುಗನ್ನ ಕೈಬಿಡಬಾರದು, ಹಿರೇರಿಗೆ ಗಂಟು ಬಿದ್ದು ಹುಡುಗನ್ನ ಒಪ್ಪಿಸಬೇಕು, ಕೇಳಿದಷ್ಟು ರೊಕ್ಕಾ ಕೊಟ್ಟರೂ ಪಾರ್ವತಿ ಲಗ್ನಾ ಮಾಡಬೇಕು. ಹುಡುಗಿ ಸುಖದಿಂದ ಇರತಾಳ ಎಂದು ಮಾತನಾಡಿಕೊಂಡದ್ದು ನಾನು ಕೇಳಿದ್ದೆ. ಹಾಗೆ ಒತ್ತಾಯ ಮಾಡಬಾರದಾಗಿತ್ತು. ಆಗಿ ಹೋಗಿದೆ. ಈಗ ಮಾತಾಡಿ ಏನ ಪ್ರಯೋಜನ ಎಂದು ಸುಮ್ಮನಿದ್ದೆ.

"ಯಾಕ ಅತ್ತೀ ಸುಮ್ಮನs ಕುಂತಿ? ನನ್ನ ಅವರಿಗೆ ಮದುವೀ ಮಾಡಿ ನನ್ನ ಕುತ್ತಿಗೆಗೆ ಉರುಲು ಹಾಕಿದಿರಿ. ಬಡವಗ ಕೊಟ್ಟಿದ್ರು ಸುಖದಿಂದ ಇರಿತಿದ್ನಿ. ಅಷ್ಟ್ಯಾಕ ಜಲುಮಿ ಮಾಡಿದಿರಿ? ನಾ ನಿಮಗ ಭಾರ ಆಗಿದ್ನೇನು ?" ಎಂದು ಅವಳು ಅತ್ತಾಗ ಅವಳನ್ನು ಸಮಾಧಾನ ಮಾಡಲು ಮಾತು ಸಿಗದೆ ಒದ್ದಾಡಿದೆ. "ಹಾಂಗ ಅನಬ್ಯಾಡವ್ವಾ ಪಾರೂ ನಿನ್ನ ಗ್ರಹಾ ಛಲೋ ಇಲ್ಲ. ಅದಕ್ಕs ಈಗ ತ್ರಾಸಾಗ್ತದ. ಮುಂದೆಲ್ಲಾ ಬರೋಬರಿ ಆಗ್ತದ. ತಾಳಿಕೋ, ಹೆಣ್ಣು ಮಕ್ಕಳು ತಾಳಿಕೊಂಡಷ್ಟು ಬಾಳತಾರ" ಎಂದರೂ ನನ್ನ ಹೃದಯ ಅಳ್ತಾನೇ ಇತ್ತು.

ಪಾರ್ವತಿಯ ಮದುವೆಯಾಗಿ ವರ್ಷವಾಗಿತ್ತು. ಉಮೇಶನ ಜೊತೆಗೆ ನೀಲಕ್ಕನ ಲಗ್ನ ಗೊತ್ತು ಮಾಡಿ, ಮಗಳು ಅಳಿಯ ಬೀಗರನ್ನೆಲ್ಲ ಅಣ್ಣ ಸ್ವತಃ ಹೋಗಿ ಕರೆದು ಬಂದ. ಅಳಿಯರಾಯ ಬರಲು ಒಪ್ಪಲೇ ಇಲ್ಲ. ಸೊರಗಿ ಹೋದ ಪಾರ್ವತಿ ಮೈತುಂಬ ಭಾರವಾಗುವಂತೆ ಬಂಗಾರ ಹೇರಿಕೊಂಡು, ಜರದ ಸೀರೆ ಉಟ್ಟು ಅಣ್ಣನ ಮದುವೆಯಲ್ಲಿ ಕಾಲೆಳೆಯುತ್ತ ಓಡಾಡಿದಳು. ಅವಳ ಕಣ್ಣುಗಳಲ್ಲಿ ಜೀವವಿರಲಿಲ್ಲ. ಮದುಮಕ್ಕಳನ್ನು ಕಂಡಾಗ ನಗುವಳು, ಕೆಲೆಯುವಳು, ಚೇಷ್ಟೆ ಮಾಡುವಳು, ಮತ್ತೆ ಮಂಕಾಗುವಳು, ನಾನೇ ನೋಡಲಾರದೆ ಕೆಲವು ದಿನ ತವರಿನಲ್ಲಿ ಇರಲಿ ಎಂದು ಅಣ್ಣನಿಗೆ ಹೇಳಿ ಒತ್ತಾಯ ಮಾಡಿ ಇಟ್ಟುಕೊಂಡೆ.

ಪಾರ್ವತಿ ಬಂದು ಮೂರು ತಿಂಗಳು ಕಳೆದರೂ ಆ ಮಹಾರಾಯನೇನೂ ಹೆಂಡತಿಯ ನೆನಪು ಮಾಡಿಕೊಂಡು ಒಂದು ದಿನವೂ ಮಾವನ ಮನೆಗೆ ಬರಲಿಲ್ಲ. ಪಾರ್ವತಿಯನ್ನೇ ಕೇಳಿದೆ,

"ಅತ್ತೀ ಅವರಿಗೆ ನಾ ಬೇಕಾಗೇ ಇಲ್ಲಾ ನಾನು. ಊರೊಳಗ ಇದ್ದರೂ ಅವರು ಮನಿಯೊಳಗ ಮಲಗೂದಿಲ್ಲಾ. ಕೈಯಾಗ ರೊಕ್ಕ ಇರತದ, ಕುಡೀಲಿಕ್ಕೆ ಕಲತಾರ. ಊರ ತುಂಬಾ ಸೂಳೇರು ಅದಾರ. ಏನು ಸುಖಾ ಸಿಗತೈತಿ ಅಂತ ಇಲ್ಲಿಗೆ ಬರಬೇಕು ಅವರು ?" ಈ ಮಾತು ಹೇಳುವಾಗ ಪಾರ್ವತಿ ಅಳಲಿಲ್ಲ. ಕಣ್ಣೀರು ಬತ್ತಿ ಹೋಗಿರಬೇಕು.

ಇನ್ನೊಂದು ದಿನ ಬಾವಿಯ ಕಟ್ಟೆಯ ಮೇಲೆ ಕುಳಿತು ಮಾತನಾಡುವಾಗ ಕೈಮೇಲಿನ ಗಾಯ ತೋರಿಸಿದಳು. ಅವಳ ಗಂಡ ಹೊಡೆದಾಗ ವಾಚು ಒಡೆದು, ಗಾಜು ನಟ್ಟು ರಕ್ತ ಸೋರಿದರೂ ಹೊರಳಿ ನೋಡದೆ ಹೋಗಿದ್ದನಂತೆ. ಗಾಯ ಮಾಯಲು ತಿಂಗಳು ಕಳೆಯಿತು. ಯಾರು ಕೇಳಿದರೂ ಬಳೆ ಹೆಚ್ಚಿ ನೋವಾಗಿದೆ ಎಂದು ಹೇಳುತ್ತಿದ್ದಳಂತೆ. ಅವಳ ಕೂದಲು ಉದುರಿ ಅಲ್ಲಲ್ಲಿ ಬಿಳಿ ಕೂದಲು ಕಾಣುತ್ತಿದ್ದವು.

ಮಗಳನ್ನು ಮತ್ತೆ ಗಂಡನ ಮನೆಗೆ ಕಳಿಸಿ ಬರುವ ಮಾತೆತ್ತಿದಾಗ ಅಣ್ಣನೊಡನೆ ಸೂಕ್ಷ್ಮವಾಗಿ ಅವಳ ಅಲ್ಲಿಯ ಸ್ಥಿತಿಯನ್ನು ಹೇಳಿದೆ. ಅಣ್ಣ ಎಷ್ಟೋ ಹೊತ್ತು ಸುಮ್ಮನೆ ತಲೆಯ ಮೇಲೆ ಕೈ ಹೊತ್ತು ಕುಳಿತ.

"ನನ್ನ ಕೈಯಾರ್ ನಾನs ಮಗಳ ಕುತ್ತಿಗೆ ಕೊಯ್ದ್ಹಂಗಾತು ಗಿರಿಜವ್ವಾ" ಎಂದು ಕಣ್ಣಲ್ಲಿ ನೀರು ತಂದ. "ನನ್ನ ಕೈ ಗುಣಾ ಖೊಟ್ಟಿ ಅದ. ನಿನ್ನ ಮದುವಿ ಮಾಡಿದೆ, ನೀ ಗಂಡನ ಕಳಕೊಂಡು ತಿರುಗಿ ಮನೀಗೆ ಬಂದಿ. ಮಗಳ ಮದುವಿ ಮಾಡಿದೆ, ಆಕೀ ಗಂಡ ಆಕಿ ಪಾಲಿಗೆ ಇದ್ದೂ ಸತ್ತಾಂಗ ಅದಾ.":

"ಛೀ, ಛೀ ಹಾಂಗ್ಯಾಕ ಕೆಟ್ಟ ಮಾತು ಆಡತಿ. ಇವತ್ತಿಲ್ಲಾ ನಾಳೆ ಅಳಿಯಾಗ ಛಲೋ ಬುದ್ಧಿ ಬಂದೀತು. ಆಕಿ ಬಾಳೆ ಹಸನ ಆದೀತು" ಅಂದೆ. ನಮ್ಮ ಮಾತು ನಡೆದಾಗ ರೈತ ಪರಪ್ಪ ಬಂದು ಕರೆದಿದ್ದರಿಂದ ಅಣ್ಣಾ ಎದ್ದು ಹೋದ. ಪರಪ್ಪನ ಜೊತೆಗೆ ಅವನ ಮಗಳು ಜಾನವ್ವನೂ ಬಂದಿದ್ದಳು.

"ಜಾನಿ ಆರಾಮ ಅದೀ ಏನ"

"ಹೂನ್ರಿ ಯವ್ವಾ ನಿಮ್ಮ ಪುಣ್ಯೆದಿಂದ ಆರಾಮ ಅದಿನ್ರಿ. ಹಡ್ಯಾಕ ತವರ್ಮನಿಗೆ ಕರಕೊಂಡು ಬಂದಾನ್ರಿ ಅಪ್ಪ, ನಿಮ್ಮನ್ನ, ಪಾರಕ್ಕವರನ್ನ ನೋಡಿ ಹೋಗೋಣಂತ ಬಂದೆ."

ಜಾನಿಗೆ ಮೊದಲೊಂದು ಮದುವೆಯಾಗಿತ್ತು. ಅವನು ಕುಡಿದು ಬಂದು ಹೆಂಡತಿಯನ್ನು ಹೊಡೆದು ಬಡಿದು ಮಾಡುತ್ತಿದ್ದ. ಪರಪ್ಪ ಅಳಿಯನಿಗೆ ಬುದ್ಧೀ ಹೇಳಿ ನೋಡಿದ. ಅವನು ತಿದ್ದಲಿಲ್ಲ. ಅವನಿಗೆ ಸೋಡಚೀಟಿ ಕೊಡಿಸಿ ಮಗಳನ್ನು ಬೇರೆಯವನಿಗೆ ಉಡಿಕೆ ಮಾಡಿ ಕೊಟ್ಟಿದ್ದ. ಜಾನಿಯು ಮಾತು ಕೇಳಿ ಪಾರ್ವತಿ ಹಳೆಯ ಸೀರೆ ರೊಟ್ಟಿ, ಪಲ್ಯ ಹಿಡಿದುಕೊಂಡು ಬಂದಿದ್ದಳು.

ಉಮೇಶ-ನೀಲಾ ಹೊಸದಾಗಿ ಮದುವೆಯಾದವರು. ಅವರ ಸರಸ, ಚೇಷ್ಟೆ, ನಗು, ಮಾತುಗಳಿಂದ ಮನೆಯಲ್ಲಿ ಜೀವಕಳೆ ಇರುವಂತೆ ಕಾಣುತ್ತಿತ್ತು. ಅವರಿಬ್ಬರೂ ವಾಕಿಂಗ್ ಇಲ್ಲವೆ ಸಿನಿಮಾಕ್ಕೆ ಹೊರಟಾಗ ಪಾರ್ವತಿ ಅವರ ಜೊತೆ ಹೋಗುತ್ತಿರಲಿಲ್ಲ.ಹೋಗು ಪಾರೂ ಎಂದು ಜುಲುಮೆ ಮಾಡಿದರೆ,

"ಬ್ಯಾಡ ಅತ್ತೀ, ರಾಜಾ-ರಾಣಿ ಅವರಿಬ್ಬರೇ ಹೋಗಿ ಬರಲಿ. ಶಿವಪೂಜೆಯೊಳಗ ಕರಡಿ ಬಿಟ್ಟಾಂಗ ನಡುವೆ ನಾ ಯಾಕ ? ನಾನು ನಿನ್ನ ಜೋಡೀ ಮನ್ಯಾಗ ಇರತೇನಿ" ಎಂದಾಗ ಕರುಳು ಕಿತ್ತು ಬರುತ್ತಿತ್ತು.

ಗಂಡನೊಡನೆ ಕೂಡಿ ಇರುವ ಚಿಕ್ಕವಯಸ್ಸು, ಈ ವಯಸ್ಸಿನೊಳಗೆ ಇವರು ಮನೆಯೊಳಗೆ ಯಾಕ ಕೊಳೀಬೇಕು? ಎಷ್ಟಾದರೂ ಅದು ಅವಳ ಮನೀ, ಅವಳ ಅತ್ತೀ-ಮಾವಾ, ನಾದಿನಿ, ಅಲ್ಲೇ ಇದ್ದರ ಅವಳ ಗಂಡನ ಮನಸ್ಸು ಇವತ್ತಿಲ್ಲಾ ನಾಳೆ ಕರಗೀತು, ತಿರುಗೀತು ಅಂತ ವಿಚಾರ ಮಾಡಿ ಅಣ್ಣಾ ನಾನೂ ಕೂಡಿಹೋಗಿ ಪಾರೂನ್ನ ಗಂಡನ ಮನೀಗೆ ಕಳಿಸಿ ಬಂದಿವಿ. ಅಣ್ಣ ಅವರ ಕಾಲು ಹಿಡಕೊಂಡು "ನನ್ನ ಮಗಳಲ್ಲ, ನಿಮ್ಮ ಮಗಳು ಅಂತ ತಿಳಕೊಳ್ರಿ' ಅಂತ ಕಣ್ಣೀರು ತಂದು ಹೇಳಿಕೊಂಡ. ನಾನೂ ಹೆಣ್ಣುಮಕ್ಕಳಿಗೆ ಹೇಳಿದೆ.

"ಇಂಥಾ ಕರೇ ಮುಸುಡಿಯಾಕಿ ಕೂಡ ಪ್ರೀತಿಯಿಂದ ಇರೂ ಅಂದರ ನಮ್ಮಣ್ಣಾ ಹ್ಯಾಂಗ ಇರಬೇಕು ? ಆದರೂ ನಮ್ಮ ಮನೀ ಸೊಸಿ ಮಾಡಿಕೊಂಡ ತಪ್ಪಿಗೆ ಮನ್ಯಾಗ ಇಟ್ಟಕೋತೀವಿ. ಹೊಟ್ಟೆಗೆ ಹಾಕತೀವಿ. ಬಿಟ್ಟ ಹೋಗ್ರಿ" ಅಂತ ಪಾರೂನ ಹಿರೇ ನಾದಿನಿ ಸೊಕ್ಕಿಲೆ ಮಾತಾಡಿದಳು. ಆ ಮಾತು ಹೊಟ್ಟ್ಯಾಗ ಇಟಕೊಂಡು ನಾ ಕುದ್ದಕೊಂತ ಊರಿಗೆ ಬಂದೆ.

ನಾವು ಬಂದು ಎರಡು ತಿಂಗಳೂ ಆಗಿದ್ದಿಲ್ಲಾ. ತಾರು ಬಂತು. ಅಣ್ಣಾ ಹೋಗಿ ಪಾರೂನ್ನ ಕರಕೊಂಡು ಬಂದಾ. ಗಲ್ಲದ ಮ್ಯಾಲೆ ಸುಟ್ಟಗಾಯಾ, ಮೈಯಾಗ ಜ್ವರಾ ಬೆಂಕಿ. ಅವಳ ಗಂಡನ ದೊಡ್ಡವ್ವ ಸಿಟ್ಟಿಗೆದ್ದು ಸುಡೂ ಬದನಿಕಾಯಿ ಇವಳ ಗಲ್ಲಕ್ಕ ಒತ್ತಿದ್ದಂತ. ಯಾಕಂತ ಕೇಳಿದರ ಮೂರು ಕಾಯಿ ಸುಡಲಿಕ್ಕೆ ಹಾಕು ಅಂದರ ನಾಲ್ಕು ಯಾಕ ಹಾಕಿದಿ ಅಂತ ಸಿಟ್ಟಾಗಿ ಹಾಂಗ ಮಾಡಿದ್ದಂತ. ಗಿಳೀ ಹಾಂಗ ಸಾಕಿ ಕಟಕರ ಕೈಯಾಗ ಕೊಟ್ಟಿದ್ದೀವಿ ನಾವs. ಆ ಮನೀಯೊಳಗಿನ ಮಂದೀ ಎಲ್ಲಾರ್ನೂ ಕುತ್ತಿಗಿ ಹಿಚಕಿ ಕೊಲ್ಲಬೇಕು ಅನ್ನೂವಷ್ಟು ರಾಕ್ಷಸತನಾ ಹುಟ್ಟಿತ್ತು ನನ್ನ ಮೈಯಾಗ. ಆದರ ನನ್ನ ಕೈಯೊಳಗಿದ್ದದ್ದು ಕಣ್ಣೀರು ಹಾಕೂದು ಒಂದs.

ಪಾರ್ವತಿ ತವರ್ಮನಿಗೆ ಬಂದು ಎಷ್ಟು ವರ್ಷ ಕಳೆದರೂ ಅವರು ಸೊಸಿ ಅದಾಳೋ, ಸತ್ತಾಳೋ ಅಂತ ಕೇಳಲಿಲ್ಲಾ. ಯಾರ್‍ಯಾರ ಬಾಯಿಂದ್ಲೋ ಸುದ್ದಿ ಬರುತಿದ್ವು; ಆಕಿ ಮಾವ ಸತ್ತಾ. ಅತ್ತಿ ಅಂತೂ ಮೊದಲs ಸತ್ತಿದ್ಲು. ಆಕೀ ಗಂಡ ಆಸ್ತೀ ಎಲ್ಲಾ ಹಾಳ ಮಾಡಿ ಮೈ ತುಂಬ ಸಾಲಾ ಮಾಡಿಕೊಂಡಾನ ಅಂತ. ಅಣ್ಣಾ ಮನಸ್ಸು ಗಟ್ಟಿ ಮಾಡಿದ್ವಾ, ಚಕಾರ ಶಬ್ದ ಮಾತಾಡುತ್ತಿದ್ದಿಲ್ಲಾ. ಶ್ರೀಮಂತಿಕೆ ಸೊಕ್ಕು ಇಳಿದ ಹೋದ ಮ್ಯಾಲೆ ಪಾರೂನ ಗಂಡಗ ಬುದ್ಧಿ ಬಂದಿತೇನೋ ಅಂತ ನಾನs ವಿಚಾರ ಮಾಡತಿದ್ದೆ, ಅವಳ ಪಾಲಿನ ಎಡೀ ಎಂಥಾದಿತ್ತೂ ಅನ್ನೋದು ನಮಗ ಕಡೀತನಕಾ ತಳೀಲಿಲ್ಲಾ.....

ಹೋಳಿಗೆ, ಹುಗ್ಗಿ, ಕಡಬು, ವಡಿ, ಅನ್ನ, ಕೋಸಂಬರಿ, ಸಂಡಿಗೆ ಮತ್ತೆ ಪಾರ್ವತಿಗೆ ಪ್ರೀತಿ ಎಂದು ಹೂರಣ, ಒಂದು ವಾಟಿಯಲ್ಲಿ ಕಟ್ಟಿನ ಸಾರು ಎಲ್ಲವನ್ನೂ ತಾಟಿನಲ್ಲಿ ಎಡೆಮಾಡಿಕೊಂಡು ಗಿರಿಜವ್ವ ದೇವರ ಕೋಣೆಗೆ ಬಂದಳು.

"ಇರಪಾಕ್ಷಪ್ಪ ಕಾಕಾ, ಅಪ್ಪ ಕರೀಲಿಕ್ಕೆ ಹತ್ಯಾನ, ಲಗೂನ ಬರಬೇಕಂತ" ಎಂದು ಬಸಣ್ಣನ ಮಗ ಚಂದ್ರಶೇಖರ ಬಂದು ಹೇಳಿದಾಗ ಅವಸರದಿಂದ ಬಂದೆ. "ಯಾಕಪ್ಪ, ಏನಂಥಾ ಅವಸರಾ ಕರ್‍ಯಾಕ ಕಳಿಸಿದ್ದಿ? ದಿನಾ ನೀನs ನಮ್ಮ ಅಂಗಡಿಗೆ ಬರಾಂವಾ" ಪಡಸಾಲೆ ಮೆಟ್ಟಲೇರುತ್ತ ಕೇಳಿದೆ.

ಬಸಣ್ಣ ಸನ್ನೆ ಮಾಡಿ ತನ್ನ ಕೋಣೆಗೆ ಕರೆದೊಯ್ದು, "ಇರಪಣ್ಣಾ ಪಾರಕ್ಕನ ಗಂಡ ಬಂದಾನ", 'ಆ' ಎಂದು ಬಾಯಿ ತೆಗೆದೆ. "ಮದುವಿ ಆಗಿ ಎಂಟು ವರುಷದ ಮ್ಯಾಗ ಈ ಅಳಿಯಾ ಬಂದಾನs ಭೇಷಾತು ಬಿಡು, ಹೇಣ್ತಿನ್ನ ಕರಕೊಂಡು ಹೋಗಾಕ ಈಗ ಬಂದಾನೇನು ?"

"ಆ ಸುದ್ದೀ ಇನ್ನೂ ಮಾತಾಡಿಲ್ಲಾ. ಅಂದರ ಸಾಲಕ್ಕ ಬಡ್ಡೀ ತುಂಬ ಬೇಕಾಗೇದಂತ, ತುಂಬದಿದ್ದರೆ ಮನೀ ಜಪ್ತಿ ಮಾಡತಾರಂತ. ಹತ್ತು ಸಾವಿರ ರೂಪಾಯಿ ಕೇಳತಾನ. ಏನ ಮಾಡಲಿ ತಿಳೀವೊಲ್ಲದು."

ಸಿಟ್ಟಿನಿಂದ ನನ್ನ ಮೈ ಉರಿಯಿತು. ಪಾರ್ವತಿ ನನ್ನ ಕಣ್ಣ ಮುಂದs ಆಡಿ ಬೆಳೆದ ಕೂಸು, ಹೂವಿನಂತಾ ಹುಡುಗಿ. ಆಕಿನ್ನ ಆ ರಾಕ್ಷಸಾ ಹಿಚಿಕಿ ಹಾಕಲಿಕ್ಕೆ ಹತ್ಯಾನ, ಇಂಥಾವಗ ಕೊಟ್ಟಿದ್ದs ಮೊದಲು ನನ್ನ ತಪ್ಪು, ತಿದ್ದಿಕೊಳ್ಳೋದು ಹ್ಯಾಂಗ ಇನ್ನ? ಏನು ಹೇಳಲೂ ತೋಚದೆ ಸುಮ್ಮನಿದ್ದೆ.

"ಈಗ ನನಗ ಏನ ಮಾಡಂದಿ ? ಹತ್ತು ಸಾವಿರ ಎಲ್ಲಿಂದ ತರಲಿ ? ಕೊಡದಿದ್ದರ ಅವಂಗ ಸಿಟ್ಟು ಬರ್‍ತದ."

"ಸಿಟ್ಟು ಬಂದು ಇನ್ನೇನು ಮಾಡತಾನ ಅಂವಾ? ಮಾಡೋದೆಲ್ಲಾ ಮಾಡಿ ಮುಗಿಸ್ಯಾನ. ಪಾರಕ್ಕನ ನೋಡಿದರ ಹೊಟ್ಯಾಗ ಸಂಕಟ ಆಗತೈತಿ. ನನ್ನ ಕೇಳಿದರ ಹತ್ತು ಸಾವಿರ ರೂಪಾಯಿ ಹೋಗಲಿ, ಕವಡೀ ಸುದ್ದಾ ಕೊಡಬಾರದು ಅಂತ ಅನಸ್ತದ."

"ನನ್ನ ಹೊಟ್ಯಾಗ ಸಿಟ್ಟು ಕುದೀತದ ಇರಪಣ್ಣಾ. ಆದರ ನನ್ನ ಮಗಳ ಬಾಳೇ ನೇರ ಆಗಬೇಕಲ್ಲ. ಇವತ್ತಿಲ್ಲ ನಾಳೆ ಅವಂಗ ಬುದ್ಧಿ ಬಂದೀತು ಅಂತ ನನಗೆ ಆಸೇ."

"ಹೌದೂ, ನೀ ಅನ್ನೋದು ಖರೇನ ಅದ. ಸಿಟ್ಟಿನ್ಯಾಗ ಹುಡುಗಿನ್ನ ಕಳಿಸಿ ಕೊಡ್ರಿ ಅಂತ ಹಟಾ ಮಾಡಿ ಕರಕೊಂಡು ಹೋಗಿ ಆಕೀಗೆ ತ್ರಾಸ ಕೊಟ್ರ ಏನ್ಮಾಡೋದು? ಆದರ ಒಮ್ಮೆಲೆ ಹತ್ತು ಸಾವಿರ ಕೊಡಬ್ಯಾಡ. ಐದು ಸಾವಿರ ಕೊಡೋಣು. ಹೇಣ್ತಿನ್ನ ಕರಕೊಂಡು ಹೋಗಿ ಸುಖದಿಂದ ಇಟ್ಟಕೋ. ನಿನಗ ಎಲ್ಲಾ ರೀತಿಯಿಂದ ಸಹಾಯ ಮಾಡ್ತೀವಿ ಅಂತ ಹೇಳೋಣು. ನಾಕ ಮಂದಿ ಹಿರೇರ್‍ನ ಕರಸು. ಅವರೂ ಕೂಡಿ ಅಂವಗ ಬುದ್ಧಿ ಮಾತು ಹೇಳಲಿ".

ಐದು ಸಾವಿರ ರೂಪಾಯಿ ಎಲ್ಲರ ಮುಂದೆ ಕೊಟ್ಟು, ಛೀ ಮಾಡಿ, ಬುದ್ಧೀ ಮಾತು ಹೇಳಿದೆವು. ಆದರೆ ಅಳಿಯನ ಮುಖಾ ಗಂಟು ಬಿಚ್ಚಲಿಲ್ಲಾ. ಮನುಷ್ಯನಂತೆ ಕಾಣಲಿಲ್ಲ. ಪಿಶಾಚಿ ಕಳೆ ಬಂದಿತ್ತು. ಅವನ ಬಣ್ಣ ಸುಟ್ಟು ಹೋಗಿತ್ತು. ಎಲುಬಿನ ಹಂದರವಾಗಿದ್ದ. ಕುಡಿದು ಕೆಂಪಾದ ಕಣ್ಣು, ಹೊಲಸು ಅರಿವೆ. ಅವನೇ ಪಾರೂನ ಗಂಡ ಹೌದೋ ಅಲ್ಲವೋ ಎನ್ನುವ ಹಾಗಿದ್ದ. ಹಣ ತೆಗೆದುಕೊಂಡು ಎದ್ದು ಹೊರಟ, ಇರೂ ಎಂದರೂ ಕೇಳಲಿಲ್ಲ. ಕಟ್ಟೆ ಇಳಿದು ಹೋಗುವಾಗ "ಎಲ್ಲಾರೂ ಕೂಡಿ ನನ್ನ ಅಪಮಾನ ಮಾಡಿದ್ರಿ. ಕೇಳಿದಷ್ಟು ರೊಕ್ಕಾನೂ ಕೊಡಲಿಲ್ಲಾ. ನಿಮ್ಮನ್ನೆಲ್ಲಾ ನೋಡ್ತೀನಿ ಒಂದು ಕೈ" ಎಂದು ಗೊಣಗುಟ್ಟಿ ಹೋದ.

ಮರುದಿನ ಶನಿವಾರ, ನೀಲಕ್ಕ, ಪಾರಕ್ಕ ಕೂಡಿ ಹಣಮಂತ ದೇವರ ಗುಡಿಗೆ ಹೋಗಿದ್ದರು. ಬರುವಾಗ ದಾರಿಯಲ್ಲಿ ಪಾರ್ವತಿಯ ಗಂಡ ಎದುರಿಗೆ ಬಂದ. ಅವನನ್ನು ನೋಡಿ ಇಬ್ಬರೂ ಹೆದರಿ ಬಿಟ್ಟರು. ಅವನು ಕುಡಿದಿದ್ದ, ಮೈಮೇಲೆ ಎಚ್ಚರವಿರಲಿಲ್ಲ. ಬಂದವನೇ ಪಾರ್ವತಿಯನ್ನು ಹಿಡಿದು ಎಳೆದ, ಕೈಯಲ್ಲಿಯ ಹಣ್ಣು ಕಾಯಿ ಕೆಳಗೆ ಬಿದ್ದವು. ದಬ ದಬ ಬಡಿಯ ಹತ್ತಿದ. ಬಿಡಿಸಿಕೊಳ್ಳಲು ಬಂದ ನೀಲಕ್ಕನನ್ನು ದೂಡಿದ. ಸೆರಗು ಎಳೆದು ಸೀರೆ ಕಳದೇ ಎಷ್ಟು ಕೊಸರಾಡಿದರೂ ಬಿಡದೆ ರಸ್ತೆಯಲ್ಲಿ ಹೊಡೆಯುತ್ತಿದ್ದ. ದಾರಿಯಲ್ಲಿ ಹೋಗುವ ಗಂಡಸರು ಕೂಡಿ ಅವನನ್ನು ಹಿಡಿದು ಬಿಡಿಸಿಕೊಂಡರು. ಯಾರೋ ಅವಳ ಮೈಮೇಲೆ ಸೀರೆ ಹೊಚ್ಚಿದರು. ಇನ್ನೊಬ್ಬರು ಟಾಂಗಾ ಮಾಡಿ ಮನೆಗೆ ಕಳಿಸಿಕೊಟ್ಟರು.

ಮರುದಿನ ಪಾರ್ವತಿ ಹಿತ್ತಲಿನ ಬಾವಿಯ ಪಾಲಾಗಿದ್ದಳು. ಈಗ... ಈಗ ಪಾರ್ವತಿ ಪಡಸಾಲೆಯ ಬಾಗಿಲ ಮೇಲೆ ದೊಡ್ಡ ಚೌಕಟ್ಟಿನಲ್ಲಿ ಕುಳಿತು, ಹೂವಿನ ಮಾಲೆ ಹಾಕಿಸಿಕೊಂಡು ಬರಿಯ ಭಾವಚಿತ್ರವಾಗಿದ್ದಾಳೆ.

***

■■

# ಸಿರಿ

ನಾನು ಆಗತಾನೇ ಎದ್ದು ಮುಖ ತೊಳೆದುಕೊಳ್ಳುತ್ತಿದ್ದೆ. ಬಾಬು ಅವಸರವಾಗಿ ಓಡಿ ಬಂದು ತೇಕುತ್ತ ಹೊರಬಾಗಿಲಲ್ಲಿ ನಿಂತುಕೊಂಡೇ 'ರಾಯರೆ' ಎಂದು ಜೋರಾಗಿ ಕೂಗಿದ. ನಾನು ಹೊರಗೆ ಬರುವ ಮೊದಲೇ ಬಾಗಿಲಿಗೆ ನೀರು ಹಾಕುತ್ತಿದ್ದ ನನ್ನವಳಿಗೆ ಹೇಳಿದ್ದ. "ಅಮ್ಮ ಹ್ಯಾಂಗ್ಯಾಂಗೋ ಮಾಡತಾರ. ಮಾತಾಡ್ಸಿದರ ಅಡೂದು ಇಲ್ಲಾ. ಲಗೂನ ಬರಲಿಕ್ಕೆ ಹೇಳ್ರಿ ರಾಯರಿಗೆ" ಎಂದು ಒಂದೇ ಉಸಿರಿನಲ್ಲಿ ಎಲ್ಲ ಹೇಳಿ ಮತ್ತೆ ಓಡಿಹೋದ. ಸುಮಾ ತಂದುಕೊಟ್ಟ ಚಹದ ಕಪ್ಪು ಹಿಡಿದು ಹೇಳಿದೆ:

"ನಿನ್ನೆ ನಾನು ಮನೀಗೆ ಹೋದಾಗ ಅಮ್ಮಾಗ ಭಾಳ ತ್ರಾಸಾಗಿತ್ತು. ನಾ ಇಲ್ಲೇ ಇರ್ತೀನಿ ಅಂದರ ಕೇಳಲಿಲ್ಲ. ಬಾಬು ಇರ್ತಾನ, ನೀ ಮನೀಗೆ ಹೋಗು ಅಂದರು. ನನಗಂತೂ ಏನೂ ಆಸೆ ಉಳಿದಿಲ್ಲ. ಇವತ್ತ ಕಳಿಯೂದು ಕಷ್ಟ ಅಂತ ಡಾಕ್ಟರ ಅಂದಿದ್ದರು. ನಾ ತಿರುಗಿ ಬರೂದು ತಡಾ ಆದರ ನೀ ದಾರೀ ನೋಡಬ್ಯಾಡಾ" ಎಂದು ಹೊರಬಿದ್ದೆ.

"ಅಮ್ಮಾ" ಎಂದು ಕರೆದಾಗ ಬಹಳ ಕಷ್ಟದಿಂದ ಕಣ್ಣು ತೆರೆಯಲು ನೋಡಿದರು. ಅರೆಗಣ್ಣು ತೆರೆಯಲು ಮಾತ್ರ ಸಾಧ್ಯವಾಯಿತು. ಏನೋ ಹೇಳಲು ತುಟಿ ಅಲುಗಿಸುತ್ತಿದ್ದರು. ಧ್ವನಿ ಹೊರಬರುತ್ತಿರಲಿಲ್ಲ. 'ಡಾಕ್ಟರರನ್ನು ಕರೀತಿನಿ' ಎಂದು ಜೋರಾಗಿ ಹೇಳಿದಾಗ ಬೇಡವೆಂದು ತಲೆ ಅಲುಗಿಸಿದರು. ಎಡಗೈ ಎತ್ತಲಾಗದೆ ಅತ್ತಿತ್ತ ಮಿಸುಕಾಡಿಸಿದರು. ಹತ್ತಿರ ಕುಳಿತು ಬಗ್ಗಿ ಅವರ ಕೈ ಹಿಡಿದೆ. 'ಉಂ' 'ಉಂ' ಎನ್ನುತ್ತಿದ್ದುದು ಕೇಳಿ ಅವರ ಬೆರಳ ಉಂಗುರ ಮುಟ್ಟಿದೆ. ಹೌದೆನ್ನುವಂತೆ ಗೋಣು ಹಾಕಿದರು., ಕೈಸನ್ನೆ, ಬಾಯಿಸನ್ನೆಗಳಿಂದ ಅವರು ಹೇಳುತ್ತಿದ್ದುದನ್ನು ತಿಳಿದುಕೊಂಡೆ. "ಉಂಗುರಾ ಮಾರಿ ಮುಂದಿನ ಕೆಲಸಾ ನಡೆಸಬೇಕs?' ಎಂದಾಗ 'ಹೂಂ' ಎಂದು ಅಲುಗಿಸಿದರು. ಸಾವಿನ ಹೊಸ್ತಿಲಲ್ಲಿಯೂ ಒಂದು ಸಮಾಧಾನದ ಕಳೆ ಮುಖದಲ್ಲಿ ಕಂಡಿತು. ಮುಂದೆ ಅರ್ಧಗಂಟೆಯಲ್ಲಿ ನಾನು ಹತ್ತಿರ ಕುಳಿತು ನೋಡುತ್ತಿದ್ದಂತೆಯೇ ಜೀವ ಬಿಟ್ಟರು ಅಮ್ಮ. ಅಂಥ ಶಾಂತವಾದ, ಸಮಾಧಾನದ ಸಾವನ್ನು ನಾನು ಅದುವರೆಗೆ ಕಂಡಿರಲೇ ಇಲ್ಲ. ಕಳೆದ ನಾಲ್ಕು ತಿಂಗಳಿಂದಲೂ ಅವರ ಸಾವು ಸಮೀಪಿಸುತ್ತಿದ್ದ ವಿಷಯ ತಿಳಿದಿದ್ದರೂ ಆ ಘಳಿಗೆಯಲ್ಲಿ ಮನಸ್ಸು ಶೂನ್ಯವಾಗಿ ದುಃಖ ತುಂಬಿ ಬಂದು ಕಣ್ಣೀರು ತೊಟ್ಟಿಕ್ಕಿತು. ಮನಸ್ಸಿಗೆ ಸಮಾಧಾನವಾದ ಮೇಲೆ ಕಣ್ಣು ಗಟ್ಟಿಯಾಗಿ ಒತ್ತಿ ಮುಚ್ಚಿ, ಕೈಕಾಲು ಮಡಿಚಿಟ್ಟು ಮುಂದಿನ ವ್ಯವಸ್ಥೆ ಮಾಡಲು ಹೊರಬಂದೆ. ಬರೆಯುವ ಟೇಬಲ್ ಮೇಲಿನ ಹಾಳೆಯೊಂದನ್ನು ತೆಗೆದು ಪೆನ್ನು ಓಡಿಸುವ ಮೊದಲು ಒಮ್ಮೆ ವಿಚಾರ ಮಾಡಿದೆ. ಕೊನೆಗೆ ನನ್ನ ಕರ್ತವ್ಯ ನಾನು ಮಾಡಿದರಾಯಿತು, ಅಂತ್ಯಕ್ರಿಯೆಗೆ ಬರುವ, ಬಿಡುವ ವಿಷಯ ಅವರಿಗೆ ಸೇರಿದ್ದು ಎಂದುಕೊಂಡು ದಿಲ್ಲಿಯಲ್ಲಿರುವ ಅಮ್ಮನ ಸಾಕುಮಗಳು ಶಶಿಕಲಾಗೆ ಟೆಲಿಗ್ರಾಂ ಬರೆದೆ. ಬಾಬೂನಿಂದ ಎಲ್ಲ ಪರಿಚಿತರಿಗೆ ಹೇಳಿ ಕಳಿಸಿದೆ. ಮತ್ತೆ ಬಂದು ರೂಮಿನಲ್ಲಿ ಅಮ್ಮನ ಮಂಚದ ಹತ್ತಿರವೇ ಕುರ್ಚಿ ಎಳೆದು ಕುಳಿತುಕೊಂಡೆ. ಅಮ್ಮನನ್ನು ನೋಡಿದರೆ ಅದು ಶವ ಎನ್ನುವ ಹಾಗಿರಲಿಲ್ಲ., ಕಣ್ಣುಮುಚ್ಚಿ ನಿದ್ದೆ ಮಾಡುತ್ತಿದ್ದಾರೇನೋ ಎನಿಸುತ್ತಿತ್ತು. ಪ್ರಾಯದಲ್ಲಿ ತುಂಬ ಸುಂದರಿಯಾಗಿರಬೇಕು ಎನ್ನುವ ಲಕ್ಷಣಗಳೆಲ್ಲವೂ ಈ ಐವತ್ತರ ಅಂಚಿನಲ್ಲಿಯೂ ಇದ್ದವು. ನಾನು ಮೊದಲ ಸಲ ನೋಡಿದ್ದೇ ಹತ್ತು ವರ್ಷಗಳ ಹಿಂದೆ.

ವಕೀಲ ಉಮಾಪತಿರಾಯರು ಕ್ಲಬ್ಬಿನಲ್ಲಿ ಭೆಟ್ಟಿ ಆಗಿದ್ದಾಗ, ನನ್ನ ತಂದೆ ಅವರ ಹತ್ತಿರ, ತಮ್ಮ ಮಗನೊಬ್ಬ ಅದೇ ತಾನೇ ಲಾ ಪರೀಕ್ಷೆ ಮುಗಿಸಿದ್ದಾನೆ, ಕೆಲಸ ಕಲಿತುಕೊಳ್ಳೋದಕ್ಕೆ ನಿಮ್ಮ ಹತ್ತಿರ ಕಳಿಸಿಕೊಡಬೇಕೆಂದು ಆಸೆ ಎಂದು ಹೇಳಿದ್ದರಂತೆ. ಉಮಾಪತಿರಾಯರಂಥ ಹೆಸರುವಾಸಿಯಾದ ವಕೀಲರು ನಮ್ಮ ನಗರದಲ್ಲಿ ಕೇವಲ ಬೆರಳೆಣಿಕೆಯಷ್ಟು ಜನ, ಅಂಥವರ ಹತ್ತಿರ ಕೆಲಸ ಕಲಿತುಕೊಳ್ಳೋದಕ್ಕೆ ವೃತ್ತಿಯ ಗುಟ್ಟು ತಿಳಿಯೋದಕ್ಕೆ ನನಗೂ

ಆಸೆ ಏನೋ ಇತ್ತು. ಆದರೆ ಅವರು ನನ್ನನ್ನು ಕೆಲಸಕ್ಕೆ ಸೇರಿಸಿ ಕೊಳ್ಳುತ್ತಾರೋ ಇಲ್ಲವೋ ಎನ್ನುವ ಅನುಮಾನವೂ ಇತ್ತು. ಒಂದು ದಿನ ಅಪ್ಪ ನನ್ನನ್ನು ಕರೆದು "ನಾಳೆ ಮುಂಜಾನೆ ಎಂಟೂವರೆ ಗಂಟೆಗೆ ಉಮಾಪತಿರಾಯರ ಮನೆಗೆ ಹೋಗಿ ಭೆಟ್ಟಿಯಾಗು, ನಿನ್ನನ್ನು ಮಾತನಾಡಿಸಿ ನೋಡ್ತೀನಿ ಎಂದು ಹೇಳಿದ್ದಾರೆ" ಎಂದಾಗ ಸಂತೋಷದೊಡನೆ ಹೆದರಿಕೆಯೂ ಆಯಿತು.

ಅವರ ಮನೆಯ ಗೇಟು ತೆಗೆದು ಕಂಪೌಂಡು ದಾಟಿ ಮನೆ ಮೆಟ್ಟಿಲು ಹತ್ತುವವರೆಗೆ ನನ್ನ ಎದೆ ಡವಗುಡುತ್ತಿದ್ದರೂ ಮೈ ಬೆವತಿದ್ದುದೂ, ಗಂಟಲು ಒಣಗಿದ್ದುದೂ ನೆನೆಸಿಕೊಂಡು ಮುಂದೆ ಎಷ್ಟೋ ದಿನ ನನ್ನಷ್ಟಕ್ಕೆ ನಾನೇ ನಕ್ಕಿದ್ದೆ. ಅಂದು ಬೆಲ್ ಒತ್ತಿದಾಗ ಬಾಗಿಲು ತೆರೆದವರು ಅಮ್ಮ. ಅದೇ ಸ್ನಾನಮಾಡಿ ಬಂದಿದ್ದರೇನೋ. ತಿಳಿಹಸಿರು ಬಣ್ಣದ ಸೀರೆಯಲ್ಲಿ ಅದೇ ಅರಳಿದ ಗುಲಾಬಿಯಂತೆ ಶುಭ್ರವಾಗಿ ಪರಿಮಳ ಸೂಸುತ್ತಿದ್ದರು. ನಾವಿಬ್ಬರೂ ಒಬ್ಬರಿಗೊಬ್ಬರು ಅಪರಿಚಿತರೇ ಆದರೂ ಮುಗುಳುನಕ್ಕು "ಬರ್ರಿ ಒಳಗ ಕೂಡ್ರಿ, ಸ್ನಾನ ಮಾಡ್ತಾ ಇದ್ದಾರ" ಎಂದು ಹೇಳಿ ನನ್ನ ಮುದೆ ಅಂದಿನ ಪೇಪರ ಇಟ್ಟು ಹೋದರು. ಡ್ರಾಯಿಂಗ್ ರೂಮಿನ ಅಂದ ಚೆಂದ ನೋಡುತ್ತ ಪೇಪರಿನ ಮೇಲೆ ಕಣ್ಣಾಡಿಸುತ್ತ, ನನ್ನ ಭಯವನ್ನು ಕಡಿಮೆ ಮಾಡಿಕೊಂಡೆ. ವಕೀಲರು ಹೊರಗೆ ಬಂದು ಮಾತನಾಡಿಸಿದಾಗ ಆತ್ಮವಿಶ್ವಾಸದಿಂದ ನಿರ್ಭಯವಾಗಿ ಮಾತನಾಡಿದೆ. ನಾಳೆಯಿಂದ ತಮ್ಮ ಆಫೀಸಿಗೆ ಬರಲು ಹೇಳಿದರು. ನಮಸ್ಕಾರ ಮಾಡಿ ಏಳುತ್ತಿದ್ದೆ. ತಡೆಯಿರಿ ಎನ್ನುವಂತೆ ಕೈಮಾಡಿ ಸಿರೀ, ಇಬ್ಬರಿಗೂ ಚಹಾ ತಿಂಡಿ ಎಂದರು. 'ಬರ್ರಿ ಒಳಗ ತಯಾರ ಅದ" ಎಂದು ಉತ್ತರ ಬಂದಿತು. ಒಳಗೆ ಹೋದೊಡನೆ ಇಬ್ಬರಿಗೂ ಪರಿಚಯ ಮಾಡಿಕೊಟ್ಟರು. ಡೈನಿಂಗ್ ಟೇಬಲ್ಲಿನ ಮೇಲಿನ ಪ್ಲೇಟು ನೋಡಿ ಗಾಬರಿಯಾದೆ. ನನ್ನ ಉಪಹಾರ ಅದೇ ಮುಗಿದಿದೆ ಎಂದು ಹೇಳಿದಾಗ 'ನಿಮ್ಮಂಥ ಹರೇದವರು ತಿನಲಿಕ್ಕೆ ಅನುಮಾನ ಮಾಡಬಾರದು. ಕೊಟ್ಟಿದ್ದೆಲ್ಲಾ ತಿಂದು ದಕ್ಕಿಕೊಳ್ಳುವಷ್ಟು ತಾಕತ್ತು ಇರಬೇಕು ನಿಮಗ" ಎಂದು ದೊಡ್ಡ ದನಿಯಲ್ಲಿ ವಕೀಲರು ಗದರಿಸಿದರು. ಶ್ರೀದೇವಿಯಮ್ಮ ನಗುತ್ತ, "ನಿಮಗ ಏನು ಬೇಕೋ ಅಷ್ಟ ತೊಗೊಳ್ರಿ. ಬ್ಯಾಡಾದ್ದು ಬಿಟ್ಟು ಬಿಡ್ರಿ. ಆದರ ಸಿಹಿ ಮಾತ್ರ ನೀವು ತಿನಲಿಕ್ಕೇ ಬೇಕು. ನಮ್ಮ ಮನೆಗೆ ಮೊದಲನೆ ಸಾರೆ ಬಂದೀರಿ. ವಕೀಲರ ಹತ್ತರ ಕೆಲಸಾ ಮಾಡವರೂ ಅಂದರ ನಮಗ ಮನೀ ಮಕ್ಕಳ ಇದ್ದಾಂಗ ಸಂಕೋಚ ಮಾಡಕೊಬ್ಯಾಡ್ರಿ . ನಿಮ್ಮದಃ ಮನೀ ಅದ" ಎಂದು ಪ್ರೀತಿಯಿಂದ ಹೇಳಿದಾಗ ಮೈಮರೆತು ಪ್ಲೇಟಿನಲ್ಲಿ ಇದ್ದದ್ದೆಲ್ಲಾ ಮುಗಿಸಿ ಬಿಟ್ಟಿದ್ದೆ. ನನ್ನ ಖಾಲೀ ಪ್ಲೇಟು ನೋಡಿ ವಕೀಲರು ಹಾಸ್ಯ ಮಾಡಿದ್ದರು. "ಸಿರೀ, ವಕೀಲ ನಾನು ಆಗೂದಕಿಂತ ನೀನು ಆಗಬೇಕಿತ್ತು. ನಿನ್ನ ಮಾತಿನಿಂದ ಅರುಣನ ಮ್ಯಾಲೆ ಎಷ್ಟು ಪ್ರಭಾವ ಬಿತ್ತು ನೋಡು" ಎಂದು. ಅಂದಿನಿಂದ ಉಮಾಪತಿರಾಯರ ಮನೆ ನನಗೆ ಅಮ್ಮನ ಮನೆಯೇ ಆಯಿತು.

ಅವರ ಮನೆಯಿಂದ ತಿರುಗಿ ಬಂದು ಮನೆಯಲ್ಲಿ ಅವ್ವನ ಹತ್ತಿರ ಅಲ್ಲಿ ನಡೆದ ವಿಷಯವನ್ನೆಲ್ಲ ಹೇಳಿದೆ. ಶ್ರೀದೇವಿಯವರ ಮಾತು ಬಂದಾಗ ಅವ್ವ ಸುಮ್ಮನಾಗಿದ್ದಳು. ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ನನಗೆ ಇದೇನೋ ಆಶ್ಚರ್ಯವಾಗಿ ಕಂಡಿತು. ವಕೀಲರ ಹೆಂಡತಿಯನ್ನು ನಾನು ಹೊಗಳಿದ್ದು ಅವ್ವನ ಮನಸ್ಸಿಗೆ ಬರಲಿಲ್ಲವೇ? ಯಾಕೆ ಸುಮ್ಮನಾದಳು ? ಎಲ್ಲರ ಹಾಗೆ ನನ್ನ ಅವ್ವನಿಗೂ ಇನ್ನೊಂದು ಹೆಣ್ಣಿನ ಹೊಗಳಿಕೆ ಕೇಳಿ ಹೊಟ್ಟೆಕಿಚ್ಚೆ ? ಸಂಶಯದಿಂದ ಮನಸ್ಸು ಬೇಕುಬೇಕಾದಂತೆ ವಿಚಾರ ಮಾಡಿತು. ಕೊನೆಗೊಂದು ದಿನ ಧೈರ್ಯಮಾಡಿ ಅವ್ವನನ್ನು ಒಬ್ಬರೇ ಇದ್ದಾಗ ಕೇಳಿಯೇ ಬಿಟ್ಟೆ.

"ಅರುಣ, ನೀ ತಿಳಕೊಂಡ ಹಾಂಗ ಶ್ರೀದೇವಿ ಅವರ ಹೆಂಡತಿ ಅಲ್ಲ. ಉಮಾಪತಿರಾಯರ ಹೆಂಡತಿ ತೀರಿಕೊಂಡಾಳ. ಆಕೀ ಮಗಳು ಶಶಿಕಲಾ. ಈ ಶ್ರೀದೇವಿ ವಕೀಲರು ಇಟ್ಟುಕೊಂಡ ಹೆಣ್ಣು. ನೀ ಅವರ ಜೋಡಿ ಕೆಲಸಾ ಮಾಡತೀ ಅಂದಮ್ಯಾಲೆ ಎಲ್ಲಾ ವಿಷಯ ನಿನಗೂ ತಿಳಿದಿರಬೇಕು ಎಂತ ಹೇಳಿದೆ". ಅಷ್ಟು ಹೇಳಿ ಅವಳು ತನ್ನ ಕೆಲಸಕ್ಕೆ ಹೋಗಿ ಬಿಟ್ಟಿದ್ದಳು. ಮುಂದೆ ಮಾತಾಡುವುದೇ ಅಪಚಾರ ಎನ್ನುವಂತೆ, ನಾನು ಕೇಳಿದ ವಿಷಯವನ್ನು ನಂಬದವನಂತೆ ಮತ್ತೆ ಮತ್ತೆ ಅದನ್ನೇ ಮೆಲುಕು ಹಾಕುತ್ತ ಕುಳಿತು ಬಿಟ್ಟಿದ್ದೆ.

ಕೆಲಸ ಹೆಚ್ಚಾದಂತೆ ನಾನು ವಕೀಲರ ಜೊತೆ ಮಾತಾಡಲು ದಿನವೂ ಅವರ ಮನೆಗೆ ಹೋಗಬೇಕಾಗುತ್ತಿತ್ತು. ಎಷ್ಟೋ ಸಲ ಅವರ ಮನೆಯಲ್ಲಿ ತಿಂಡಿ-ಊಟಗಳ ಉಪಚಾರವೂ ನಡೆಯುತ್ತಿತ್ತು. ಆಗೆಲ್ಲಾ ಶ್ರೀದೇವಿಯವರನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದೆ. ಅವರ ನಯ, ವಿನಯ, ಸೌಜನ್ಯ, ಹಿತವಾದ ಮಾತು, ವಾತ್ಸಲ್ಯಪೂರ್ಣ ಉಪಚಾರ ಎಲ್ಲವೂ ಅತ್ಯುತ್ತಮ ಗೃಹಿಣಿಯ ಲಕ್ಷಣಗಳನ್ನೇ ಎತ್ತಿತೋರಿಸುತ್ತಿದ್ದವು. ಅವಳು ನೀತಿವಂತೆಯಲ್ಲದ, ಚಂಚಲ ಮನಸ್ಸಿನ ಹೆಣ್ಣು ಎನ್ನುವ ಭಾವನೆ ಕನಸು ಮನಸಿನಲ್ಲಿಯೂ ಬರಲಿಲ್ಲ. ವಕೀಲರಂತೂ ಕೂತರೆ ಸಿರಿ, ನಿಂತರೆ ಸಿರಿ, ಸಿರಿ ಇಲ್ಲದೆ ಅವರ ಎದೆಯ ಏರಿಳಿತವೂ ಇಲ್ಲ, ಉಸಿರಾಟವೂ ಇಲ್ಲ. ರೆಪ್ಪೆಯ ಬಡಿತವೂ ಇಲ್ಲ ಎನ್ನುವಂತೆ ನಡೆದುಕೊಳ್ಳುತ್ತಿದ್ದರು. ಒಮ್ಮೆ ಜ್ವರದಿಂದ ವಕೀಲರು ಹಾಸಿಗೆ ಹಿಡಿದಾಗ ಶ್ರೀದೇವಿ ಅವರಿಗೆ ಆರೈಕೆ ಮಾಡಿದ್ದು ನೋಡಿ ನನ್ನ ಮನಸ್ಸಿನ ಮೂಲೆಯಲ್ಲಿದ್ದ ಅಲ್ಪಸ್ವಲ್ಪ ಹೊಲಸನ್ನೂ ತೊಳೆದು ಹಾಕಿದೆ. ಹೊರಗೆ ಬಂದು ಇತರರೊಡನೆ ಹೆಚ್ಚಾಗಿ ಬೆರೆಯಲು ಇಷ್ಟಪಡದೆ ಸದಾ ಮನೆಯಲ್ಲೇ ಕಾಲ ಕಳೆಯಬಯಸುವ ಅಮ್ಮನಿಗೆ ನಾನು ಮಗನಾದೆ. ನನ್ನ ತಾಯಿಯಷ್ಟೇ ಗೌರವ ಅವರಿಗೂ ಕೊಡುತ್ತಾ ಬಂದೆ.

ಉಮಾಪತಿರಾಯರು ಸಾಯುವ ಮೊದಲು ಬರೆದಿದ್ದ ವಿಲ್‌ನಲ್ಲಿ ಅಮ್ಮ ಇರುವವರೆಗೆ ಆ ಮನೆ ಅವರಿಗೆ, ಆಮೇಲೆ ಶಶಿಕಲೆಗೆ. ಬ್ಯಾಂಕಿನಲ್ಲಿ ಇಪ್ಪತ್ತು ಸಾವಿರ ರೂಪಾಯಿ ಇಟ್ಟು ಅದರಿಂದ ಬರುವ ಬಡ್ಡಿಯಿಂದ ಅಮ್ಮನ ಉಪಜೀನವ ನಡೆಯಬೇಕು-ಅದರ ತರುವಾಯ ಅದೂ ಶಶಿಕಲೆಗೆ ಸೇರಬೇಕು ಎಂದು ಬರೆದಿದ್ದರು. ಅದಕ್ಕೆ ಸಾಕ್ಷಿಯಾಗಿ ಸಹಿ ಹಾಕಿದ್ದ ನನ್ನ ಮುಂದೆ ಉಮಾಪತಿರಾಯರು ತಮ್ಮ ಮನಸ್ಸು ಬಿಚ್ಚಿದರು.

"ನಾನು ಹೋದಮೇಲೆ ಸಿರಿ ಎಷ್ಟು ವರ್ಷ ಬದುಕಿರುತ್ತಾಳೊ ಏನೋ. ಮುಪ್ಪಿನ ಕಾಲದಲ್ಲಿ ಅವಳನ್ನು ನೋಡಿಕೊಳ್ಳಲು ಯಾರೂ ಇಲ್ಲದಂತಾಯಿತು. ಶಶಿಯನ್ನು ಬಿಟ್ಟರೆ ತನಗೆ ಬೇರೆ ಮಕ್ಕಳೇ ಬೇಡ ಎಂದು ಬಿಟ್ಟಳು. ದೊಡ್ಡವಳಾದಂತೆ ಶಶಿಯೂ ಅವಳನ್ನು ದೂರಮಾಡುತ್ತ ಬಂದಳು. ಹೋಗಲಿ, ಶಶಿ ಈಗ ಗಂಡನ ಮನೆಯಲ್ಲಿ ಸುಖವಾಗಿದ್ದಾಳೆ. ಎಲ್ಲ ಆಸ್ತಿಯನ್ನು ನಿನ್ನ ಹೆಸರಿಗೆ ಬರೆಯುತ್ತೇನೆ. ನಿನ್ನನ್ನು ಜೋಪಾನ ಮಾಡುವವರಿಗೆ ನೀನೇ ಕೊಟ್ಟುಬಿಡು ಅಥವಾ ದತ್ತಕ ತೆಗೆದುಕೋ ಅಂದರೆ ಅದಕ್ಕೂ ಒಪ್ಪಲಿಲ್ಲ. ಹಟಮಾಡಿ ಎಲ್ಲವನ್ನು ನನ್ನಿಂದಲೇ ಶಶಿಗೆ ಬರೆಸಿ ಬಿಟ್ಟಳು. ಅವಳು ಬದುಕಿನಲ್ಲಿ ನನಗೆ ಕೊಟ್ಟಿದ್ದಕ್ಕೆ ಲೆಕ್ಕವೇ ಇಲ್ಲ. ಆದರೆ ಮಾತ್ರ ಏನೂ ತೆಗೆದುಕೊಳ್ಳಲಿಲ್ಲ" ಎಂದು ಹೇಳಿ ಅಷ್ಟು ಗಂಡೆದೆಯ ವಕೀಲರು ಮಕ್ಕಳಂತೆ ಕಣ್ಣೀರು ಹಾಕಿದರು.

ವಕೀಲರು ತೀರಿಕೊಂಡ ಮೇಲೆ ನನ್ನ ಕೆಲಸ ಹೆಚ್ಚಾದರೂ ಅದರಲ್ಲೇ ಬಿಡುವು ಮಾಡಿಕೊಂಡು ದಿನಕ್ಕೊಮ್ಮೆ ಯಾದರೂ ಅಮ್ಮನನ್ನು ಭೆಟ್ಟಿಯಾಗಿ ಬಂರುತ್ತಿದ್ದೆ. ತಂದೆಯ ಸಾವಿನ ಸುದ್ದಿ ಕೇಳಿ ಬಂದ ಶಶಿಕಲೆ ಗಂಡ ದಿಲ್ಲಿಗೆ ಹೋದಮೇಲೆಯೂ ತಿಂಗಳೊಪ್ಪತ್ತು ಇಲ್ಲಿಯೇ ನಿಂತಿದ್ದಳು. ಈ ನಡುವೆ ರಜೆಗೆ ಬಂದಾಗ ಆಗಾಗ ಅವಳನ್ನು ನೋಡುತ್ತಿದ್ದರೂ ಅವಳ ಸ್ವಭಾವ ಪರಿಚಯ ನನಗೆ ಸರಿಯಾಗಿ ಆಗಿರಲಿಲ್ಲ. ಪಾಪ, ಅಮ್ಮ ನಾಲ್ಕು ದಿನಕ್ಕೇ ಹತ್ತು ವರ್ಷ ಹೆಚ್ಚಾದವರ ಹಾಗೆ ಕಾಣುತ್ತಿದ್ದರು. ಅವರ ದುಃಖ ತಿಳಿದು ನನಗೆ ಶಶಿಕಲೆ ತಾಯಿಯ ಮನಸ್ಸಿಗೆ ಸಮಾಧಾನ ಕೊಟ್ಟಾಳು ಎಂದು ಭಾವಿಸಿದ್ದೆ. ಒಂದು ದಿನ ಅಮ್ಮ,

"ಅರುಣ, ನನಗೊಂದು ವಿಚಾರ ಬಂದದ. ಶಶಿಕಲಾ ತಿರುಗಿ ಊರಿಗೆ ಹೋದಮ್ಯಾಲೆ ಇಲ್ಲೇ ನಾ ಒಬ್ಬಾಕಿನೇ ಇರುವಾಕಿ. ಮಂಚ, ಡ್ರೆಸಿಂಗ್ ಟೇಬಲ್, ಡೈನಿಗ್ ಟೇಬಲ್, ಸೋಫಾಸೆಟ್ಟು, ರೇಡಿಯೋಗ್ರಾಮ್. ಇವೆಲ್ಲಾ ಯಾತಕ್ಕ ಬೇಕು ? ಕೊಳ್ಳುವವರು ಯಾರರೆ ಸಿಗತಾರೇನು ನೋಡು ಮಾರಿಸಿ ಕೊಟ್ಟು ಬಿಡು" ಅಂದರು.

ಅವರ ಮಾತು ಮುಗಿಯುತ್ತಲೇ ಶಶಿಕಲೆ ಅವಸರದಿಂದ, "ಮಿ. ಅರುಣ ನಮ್ಮ ತಂದೆಯವರ ಕಾನೂನು ಪುಸ್ತಕ ಅದಾವಲ್ಲಾ, ಅವು ಇನ್ನ ಯಾರಿಗೆ ಉಪಯೋಗಕ್ಕ ಬರತಾವ ? ಅದಕ್ಕ ಅವನ್ನೂ ಯಾರರೆ ಕೊಳ್ಳತಾರೇನು ನೋಡಿ" ಎಂದು ಹೇಳಿದಾಗ ಈ ಶಶಿಕಲೆ ಎಂಥವಳು, ಇವಳ ಸ್ವಭಾವ ಎಂಥದು ಎನ್ನುವ ಕಲ್ಪನೆ ನನಗೆ ಸ್ಪಷ್ಟವಾಯಿತು.

ಆದರ ಜೊತೆಗೆ ಅವಳೇ ಇವನ್ನೆಲ್ಲ ಮಾರಿಸಿ ರೊಕ್ಕ ಕಟ್ಟಿಕೊಂಡು ಹೋಗಬೇಕೆಂದು ಉಪಾಯ ತೆಗೆದದ್ದೂ ಹೊಳೆಯಿತು.

ವಕೀಲರ ಕಾನೂನು ಪುಸ್ತಕಗಳನ್ನು ಮಾರದೆ ಲಾ ಕಾಲೇಜಿನ ಲೈಬ್ರರಿಗೆ ಕೊಟ್ಟರೆ ಅವರ ಹೆಸರು ಉಳಿಯುತ್ತದೆ. ಅಷ್ಟೊಂದು ಬೆಲೆಯುಳ್ಳ ಪುಸ್ತಕಗಳು ಎಲ್ಲರಿಗೂ ಸಿಗುವುದಿಲ್ಲ. ಹೊಸ ವಕೀಲರಿಗೆ ಅವುಗಳಿಂದ ಬಹಳ ಉಪಯೋಗವಾಗುತ್ತದೆ. ಉಮಾಪತಿರಾಯರ ಹೆಸರಿನ ವಿಂಗ್ ಒಂದನ್ನು ಮಾಡಿದರೆ ಒಳ್ಳೆಯದು ಎಂದು ನನ್ನ ಮನಸ್ಸಿನಲ್ಲಿದ್ದ ವಿಷಯವನ್ನು ಮರುದಿನ ಅಮ್ಮ ಒಬ್ಬರೇ ಇದ್ದಾಗ ಕೇಳಿಕೊಂಡೆ.

"ಒಟ್ಟು ಅಂದಾಜು ಈ ಪುಸ್ತಕಗಳ ಬೆಲೆ ಎಷ್ಟಾದೀತು ಅರುಣ" ಎಂದರು. ಅಮ್ಮ ಏನೋ ಯೋಚಿಸುತ್ತ.

"ಹತ್ತು ಸಾವಿರ ರೂಪಾಯಿ ಆದರೂ ಆಗಬಹುದು. ಆದರ ರೊಕ್ಕಾ ಕೊಟ್ಟರೂ ಇಂಥ ಪುಸ್ತಕ ಸಿಗೋದಿಲ್ಲ" ಅಂದೆ.

"ಹಾಂಗಾದರ ಮಾರೋದು ಬೇಡ. ಪುಸ್ತಕಾ ಲೈಬ್ರರಿಗೆ ಕೊಡಿಸಿ ಬಿಡು. ಅವರ ಹೆಸರು ಉಳೀಲಿ" ಅಂದರು. ಶಶಿಕಲೆಯನ್ನು ಒಂದು ಮಾತೂ ಕೇಳಿಲಿಲ್ಲ ಅಮ್ಮ ಎಂದು ನನಗೆ ಆಶ್ಚರ್ಯವಾಯಿತು. ಆದರೂ ಅದನ್ನು ಹೆಚ್ಚು ಹಚ್ಚಿಕೊಳ್ಳದೆ ಪುಸ್ತಕಗಳನ್ನು ಲೈಬ್ರರಿಗೆ ಸಾಗಿಸಿದೆ. ಆದರೆ ಅದರ ಹಿಂದೆ ನಡೆದ ಮಸಲತ್ತು ಎಷ್ಟೋ ದಿನಗಳ ಮೇಲೆ ನನಗೆ ಗೊತ್ತಾಯಿತು. ಅದೆಂದರೆ ಅಮ್ಮ ಶಶಿಕಲೆಗೆ ತಮ್ಮ ಹೆಸರಿನಲ್ಲಿ ಬ್ಯಾಂಕಿನಲ್ಲಿದ್ದ ಇಪ್ಪತ್ತು ಸಾವಿರದಲ್ಲಿ ಹತ್ತು ಸಾವಿರ ರೂಪಾಯಿ ಕೊಟ್ಟುಬಿಟ್ಟಿದ್ದರು. ಒಂದು ದೃಷ್ಟಿಯಲ್ಲಿ ಪುಸ್ತಕಗಳನ್ನು ತಾವೇ ಕೊಂಡು ಕಾಣಿಕೆಯಾಗಿ ಕೊಟ್ಟಿದ್ದರು. ಶಶಿಕಲೆ ಹೋಗುವಾಗ ಮನೆಯಲ್ಲಿಯ ಬಂಗಾರ, ಬೆಳ್ಳಿ, ಎಲ್ಲ ಸಾಮಾನು ಮಾರಿಬಂದ ಹಣ ಎಲ್ಲವನ್ನು ಒಯ್ದಿದ್ದಳು. ಅಮ್ಮ ತಮಗೆ ತಮಗೆ ಬೇಕಾದಷ್ಟೇ ಪಾತ್ರೆ, ವಕೀಲರು ಮಲಗುತ್ತಿದ್ದ ಮಂಚ, ಅವರು ಬರೆಯುತ್ತಿದ್ದ ಕುರ್ಚಿ, ಟೇಬಲ್ ಇಷ್ಟನ್ನೇ ಇಟ್ಟುಕೊಂಡಿದ್ದರು. ಅವರ ಮೈಮೇಲಿದ್ದ ಬಂಗಾರವೆಂದರೆ ಈ ಉಂಗುರವೊಂದೇ ....

ಹೊರಬಾಗಿಲ ಸಪ್ಪಳವಾಯಿತು. ನಾನು ಹೇಳಿ ಕಳಿಸಿದ್ದ ಜನರೆಲ್ಲ ಬಂದಿದ್ದರು. ಅಮ್ಮನಿಗೆ ಬೇಕಾದವರೆಲ್ಲ ಬಂದು ನೋಡಿಕೊಂಡು ಹೋದರು. ಶಶಿಕಲೆಯಿಂದ ಉತ್ತರ ರೂಪವಾಗಿ ತಾರು, ಫೋನು ಏನಾದರೂ ಬರುವ ಸಮಯ ಮೀರಿ ಹೋದ ಮೇಲೆ ಶವ ಎತ್ತಿದೆವು. ಸಂಸ್ಕಾರ ಮುಗಿಸಿ ಅವರ ಮನೆಗೇ ಬಂದೆ. ಅವರು ಮಲಗಿದ್ದ ಜಾಗದಲ್ಲಿ ದೀಪ ಹಚ್ಚಿಟ್ಟೆ. ಯಾಕೋ ಮನೆಗೆ ಹೋಗುವ ಮನಸ್ಸಾಗದೆ ಬಾಬೂನನ್ನು ಮನೆಗೆ ಕಳಿಸಿ ನಾನು ಸುಮ್ಮನೆ ಅಲ್ಲಿಯೇ ಕುಳಿತಿದ್ದೆ.

ಉಮಾಪತಿರಾಯರು ಹೋದ ಮೇಲೆ ಅಮ್ಮ ಎರಡು ವರುಷ ಮಾತ್ರ ಬದುಕಿದ್ದರು. ಹಾಗೆ ನೋಡಿದರೆ ಸಾಯುವಂಥ ವಯಸ್ಸೂ ಅವರದಲ್ಲ. ಆದರೆ ತಮಗೆ ಗುಣವಾಗದ ಗಂಟಲು ಕ್ಯಾನ್ಸರ್ ಸುರುವಾಗಿದೆ ಎಂದು ಗೊತ್ತಾದ ಮೇಲೆ ಬಹಳ ಸಮಾಧಾನದಿಂದ "ಅರುಣ, ಇನ್ನು ಭಾಳ ಅಂದ ಕೆಲವು ತಿಂಗಳೋ, ದಿನಾನೋ ಇರ್ತೀನಿ. ಅವರು ಹೋದಮ್ಯಾಲೆ ಇನ್ನು ಎಷ್ಟು ವರ್ಷ ಈ ಭಾರಾ ತಾಳಬೇಕಪ್ಪಾ ಅಂತಿದ್ದೆ. ಅಂತೂ ದೇವರು ನನ್ನ ಮೊರೆ ಕೇಳಿದಾ"ಅಂದಿದ್ದರು.

ಅಮ್ಮನಿಗೂ ನನಗೂ ಒಂದು ಅಪರೂಪವಾದ ಬಾಂಧವ್ಯ, ಆತ್ಮೀಯತೆ ಬೆಳೆದು ಬಂದ ಮೇಲೆ ಒಂದು ದಿನ ನಾನೇ, ವಕೀಲರು ಅವರನ್ನು ಮದುವೆಯಾದದ್ದು ಯಾವಾಗ? ಹೇಗೆ? ಎಂದು ಕೇಳಿದೆ. ಅದಕ್ಕೆ ಅವರು ಕೊಟ್ಟ ಉತ್ತರವನ್ನು ಅವರ ಶಬ್ದಗಳಲ್ಲಿಯೇ ಮೂಡಿಸುತ್ತಿದ್ದೇನೆ.

"ನನ್ನ ಅಪ್ಪ ನನ್ನನ್ನು ಒಂದು ದೊಡ್ಡ ಶ್ರೀಮಂತ ಕುಟುಂಬಕ್ಕೆ ಕೊಟ್ಟಿದ್ದರು. ಹದಿನಾರು ವರ್ಷಕ್ಕೆ ಮದುವೆಯಾದೆ. ಮುಂದೆ ಎರಡೇ ವರುಷಗಳಲ್ಲಿ ವಿಧವೆಯೂ ಆದೆ. ನಾವು ಬಡವರು ಅಲ್ಲದಿದ್ದರೂ ಗಂಡನ ಮನೆಯವರು ಬಹಳ ಶ್ರೀಮಂತರಿದ್ದರು. ನನ್ನವರು ಮದುವೆಯಾದದ್ದು ನನ್ನ ಚೆಲುವು ನೋಡಿ ಎಂದು ನನಗೆ ತಿಳಿದಿತ್ತು. ಅವರೇ ಹೋದಮೇಲೆ ಆ ಮನೆಯಲ್ಲಿ ನಾನು ಯಾರಿಗೂ ಬೇಡದ ವಸ್ತುವಾದೆ. ಅತ್ತೆ, ಮಾವ, ಭಾವ-ಮೈದುನರಿಂದ ತುಂಬಿದ ಮನೆಯಲ್ಲಿ ನನ್ನ ಪಾಡು ನಾಯಿಪಾಡಾಯಿತು. ಎಲ್ಲರಿಂದಲೂ ತಿರಸ್ಕಾರ, ಅಪಮಾನ, ಸಹಿಸಿದೆ. ಭಾವ-ಮೈದುನರು ನನ್ನ ಬಗ್ಗೆ ಸ್ವಲ್ಪ ಆಸಕ್ತಿ ತೋರಿಸಿದರೂ ಸಾಕು, ಓರಗಿತ್ತಿಯರು ಕೊಂಕು ಮಾತು, ಬಯ್ಗುಳಿಂದ ಹಣ್ಣಾಗುತ್ತಿದ್ದೆ. ಪ್ರಕೃತಿ ಸಹಜ ಪ್ರಾಯ, ನನ್ನ ಸೌಂದರ್ಯ, ಬೇರೆಯವರಿಗೆ ಕಣ್ಣು ಕಿಸುರಾದಾಗ ನನಗೆ ಜೀವವೇ ಬೇಡವಾಯಿತು. ಒಂದು ರಾತ್ರಿ ಬಾವಿಗೆ ಬೀಳಲು ಹೋದೆ. ಮೈದುನ ಯಾವಾಗ ಎಚ್ಚರವಾಗಿದ್ದನೋ ನನ್ನನ್ನು ಉಳಿಸಿದ ಸರಿ, ಅವನಿಗೂ ನನಗೂ ಗಂಟು ಹಾಕಿ ಒದರಾಡಿ ಛೀಮಾರಿ ಹಾಕಿದರು., ಮನೆಯ ಮಂದಿ., ಇದೆಲ್ಲ ನನ್ನ ಅಪ್ಪನ ಕಿವಿಗೆ ಬಿದ್ದಿತು. ನನ್ನ ಕಳ್ಳು ನನಗೆ ಭಾರವಲ್ಲ ಅಂತ ಅವರಿಗೆ ಹೇಳಿ ನನ್ನನ್ನು ಕರೆದುಕೊಂಡು ಬಂದ. ಆಗಿನ್ನೂ ನನಗೆ ಇಪ್ಪತ್ತು ವರುಷ. ಬರಬರುತ್ತ ಅಪ್ಪ ಅಣ್ಣನ ಮನಸ್ಸು ಬದಲಾಯಿತು. ಅವರಿವರ ಮಾತು ಕೇಳಿ ಬೀಗರ ಹತ್ತಿರ ಆಸ್ತಿಯಲ್ಲಿ ನನ್ನ ಪಾಲು ಕೇಳಿದ, ನಾನು ಬೇಡವೆಂದರೆ ಕೇಳಲಿಲ್ಲ. "ನಾ ಮಾಡೋದೆಲ್ಲಾ ನಿನ್ನ ಹಿತಕ್ಕ. ನೀ ಇನ್ನೂ ಸಣ್ಣಾಕಿ, ನಾವು ಹೋದಮ್ಯಾಲೆ ನಿನ್ನ ಯಾರು ನೋಡಿಕೊಂಡಾರು? ಕಾಯ್ದೆ ಪ್ರಕಾರ ಅವರು ಆಸ್ತಿ ನಿನಗ ಕೊಡಲಿಕ್ಕೇ ಬೇಕು. ಆಮೇಲೆ ನೀನs ದತ್ತಕ ಮಾಡಕೊಳ್ಳೂವಂತೆ" ಎಂದು ನನಗೆ ಬೈಯ್ದು ಬುದ್ಧಿ ಹೇಳಿ ಒಪ್ಪಿಸಿದರು. ಬೀಗರ ಮೇಲೆ ಕೇಸು ಹಾಕೋದಕ್ಕೆ ಉಮಾಪತಿರಾಯರನ್ನು ಹಿಡಿದರು. ನನಗೆ ಆಸ್ತಿಯಲ್ಲಿ ಪಾಲು ಸಿಗುವ ಭರವಸೆ ವಕೀಲರಿಂದ ಸಿಕ್ಕಾಗ, ಅಪ್ಪ, ಅಣ್ಣ, ಅತ್ತಿಗೆ ಉಪಚಾರ ಮಾಡಿದ್ದೇ ಮಾಡಿದ್ದು. ತೂಗು ಮಣೆಯಲ್ಲಿಟ್ಟು ತೂಗುವುದೊಂದೇ ಬಾಕಿ ಇತ್ತು. ಎಲ್ಲಾ ದುಡ್ಡಿನ ಮಹಿಮೆ. ಅಣ್ಣನ ಮಗನನ್ನು ನನಗೆ ದತ್ತಕ ಕೊಡುವ ಮಾತು ಗಟ್ಟಿಯಾಗಿತ್ತು. ಬೀಗರು ಸುಲಭವಾಗಿ ಪಾಲು ಕೊಡಲು ತಯಾರಿರಲಿಲ್ಲ. ಕೇಸು ನಡೆಯಿತು.

ಅದೇ ಮೊದಲನೆಯ ಸಲ ನಾನು ಅಪ್ಪನ ಜೊತೆಗೆ ವಕೀಲರ ಮನೆಗೆ ಬಂದಿದ್ದೆ. ನಾವೆಲ್ಲ ವರಾಂಡದಲ್ಲಿ ಕಾದು ಕುಳಿತಿದ್ದೆವು. ವಕೀಲರು ಇನ್ನೂ ಹೊರಗಿನ ಕೋಣೆಗೆ ಬಂದಿರಲಿಲ್ಲ. ಒಳಗೆ ಸಣ್ಣ ಹುಡುಗಿಯೊಬ್ಬಳು ಅಳುವುದೂ, ಚೀರುವುದೂ ಕೇಳುತ್ತಿತ್ತು. ಯಾರ್‍ಯಾರೋ ಸಮಾಧಾನ ಮಾಡುತ್ತಿದ್ದರು. ಆದರೂ ಹುಡುಗಿ ಒಂದೇ ಸವನೆ "ಅವ್ವಾ" ಎಂದು ಅಳುತ್ತಲೇ ಇತ್ತು. ವಕೀಲರ ಹೆಂಡತಿ ತೀರಿಕೊಂಡಿದ್ದಾರೆ. ಮಗಳು ಅನಾಥವಾಗಿದ್ದಾಳೆ ಎನ್ನುವ ವಿಷಯ ನನಗೆ ತಿಳಿದಿತ್ತು. ಯಾಕೋ ನನ್ನ ಜೀವ ಹರಿಯಿತು. ಆ ತಬ್ಬಲಿ ಮಗು ಅಳುವುದು ಕೇಳಿ ಸಂಕಟವಾಯಿತು. ಅದನ್ನು ಎತ್ತಿಕೊಂಡು ರಮಿಸಬೇಕು ಎನ್ನುವ ಕನಿಕರ ಉಕ್ಕಿ ಅಪ್ಪನತ್ತ ನೋಡದೆ ದಿಗ್ಗನೆ ಎದ್ದು ಅವರ ಮನೆಯೊಳಕ್ಕೆ ಹೋಗಿಬಿಟ್ಟೆ. ಕೆಲಸದವಳು ಶಶಿಕಲೆಗೆ ಹಾಲು ಕುಡಿಸಲು ಹೋರಾಡುತ್ತಿದ್ದಳು. ಆದರೆ ಅವಳು ಮಾತ್ರ ಕೈಕಾಲು ಝಾಡಿಸಿ, ಹಾಲಿನ ಕಪ್ಪು ತಳ್ಳಿ ಕಣ್ಣು ಮುಚ್ಚಿಕೊಂಡು ಚೀರುತ್ತಿದ್ದಳು. ನಾನು ಹೋಗಿ ಅವಳನ್ನು ಎತ್ತಿಕೊಂಡು ಎದೆಗೆ ಅವಚಿಕೊಂಡೆ. ಅವಳು ಕಣ್ಣು ತೆಗೆದು ನೋಡೋದಕ್ಕೆ ಪ್ರಯತ್ನ ಮಾಡಿದರೂ ನಾನು ಮುಖ ತೋರಿಸದೆ ಹಾಗೆಯೇ ತಬ್ಬಿಕೊಂಡು ಅವಳ ಬೆನ್ನು, ತಲೆ ಮೃದುವಾಗಿ ನೇವರಿಸುತ್ತಿದ್ದೆ. ಅತ್ತು ಅತ್ತು ದಣಿದ ಶಶಿ ನನ್ನ ಹೆಗಲ ಮೇಲೆಯೇ ನಿದ್ದೆ ಮಾಡಿದಳು. ನಾವಿಬ್ಬರೂ ಹಾಗೆ ಕುಳಿತಿದ್ದಾಗ ಅವಳ ತಂದೆ ರೂಮಿನ ಬಾಗಿಲ ಹತ್ತಿರ ಬಂದು ನಿಂತರು. ನಾನು ಅದೇ ಮೊದಲ ಸಲ ಅವರನ್ನು ನೋಡಿದ್ದು.

ಅಂದಿನಿಂದ ನನ್ನ, ಶಶಿಕಲೆಯ ಪರಿಚಯ ಹೆಚ್ಚಾಗಿ, ನಾನೇ ಹಾಲು ಕುಡಿಸಬೇಕು,ಸ್ನಾನ ಮಾಡಿಸಬೇಕು. ತಲೆ ಬಾಚಬೇಕು ಎಂದು ಹಟ ಮಾಡತೊಡಗಿದಳು. ವಕೀಲರು ನಮ್ಮ ಕೇಸು ಹಿಡಿದಿದ್ದಾರೆ ಎನ್ನುವ ಕಾರಣದಿಂದ ಅವರ ಮನೆಗೆ ಹೋಗುವುದಕ್ಕೆ ಅಪ್ಪ ಬೇಡವೆನ್ನುತ್ತಿರಲಿಲ್ಲ. ದಿನವೂ ಭೆಟ್ಟಿಯಾದರೂ ನಾನು, ವಕೀಲರು ಮಾತನಾಡಿದ್ದೇ ಬಹಳ ಕಡಿಮೆ. ಕಣ್ಣುಗಳು ಮಾತನಾಡುತ್ತಿದ್ದವು. ಮೌನ ನಮಗೆ ಪ್ರಿಯವಾಗಿತ್ತು. ಕಾಲ ಹೆಚ್ಚು

ಹೆಚ್ಚಾಗಿ ಒಬ್ಬರನ್ನೊಬ್ಬರಿಗೆ ತಿಳಿಸಿ ಕೊಡುತ್ತಿತ್ತು. ನಾನು ಮಾಡುವುದು ಸರಿಯೋ ತಪ್ಪೋ ಎಂದು ವಿವೇಚಿಸುವ ಪರಿಸ್ಥಿತಿಯಲ್ಲಿಯೂ ನಾನು ಇರಲಿಲ್ಲ. ಯಾಕೆಂದರೆ ನಾನು ನನಗೆ ತಿಳಿಯದೇ ಅವರನ್ನು ಪ್ರೀತಿಸುತ್ತಿದ್ದೆ.

ನಮ್ಮ ಕೇಸು ಇನ್ನೂ ನಡೆಯುತ್ತಲೇ ಇತ್ತು. ಶಶಿಕಲೆಗೆ ಜ್ವರ ಹೆಚ್ಚಾಗಿ ಡಾಕ್ಟರು ಟೈಫಾಯ್ಡ್ ಎಂದಾಗ ಅವರು ಬಹಳ ಕಂಗಾಲಾಗಿದ್ದರು. ಅವತ್ತು ಅವರ ಮುಖ ನೋಡುವ ಹಾಗಿರಲಿಲ್ಲ. ಮನೆಯಲ್ಲಿ ರಾತ್ರಿ ಅವಳನ್ನು ನೋಡಿಕೊಳ್ಳುತ್ತಿದ್ದೇನೆಂದು ಅಪ್ಪನಿಗೆ ಹೇಳಿ ಅವತ್ತು ಅಲ್ಲಿಯೇ ಉಳಿದೆ. ಆಸ್ತಿ ತೆಗೆದುಕೊಂಡು ಮಗನನ್ನು ದತ್ತಕ ಕೊಡುವ ಕನಸು ಕಾಣುತ್ತಿದ್ದ ಅಣ್ಣ ಅತ್ತಿಗೆಯರೂ ನನ್ನನ್ನು ಆಕ್ಷೇಪಿಸಲಿಲ್ಲ. ರಾತ್ರಿ ಹೆಚ್ಚಾದಂತೆ ಜ್ವರ ಏರಿ ಶಶಿ ಬಾಯಿಗೆ ಬಂದಂತೆ ಬಡಬಡಿಸುತ್ತಿದ್ದಳು. ತಾನು ಆಗಾಗ ಜ್ವರ ಅಳೆಯುತ್ತ, ಬಾಯಾರಿಕೆ ಅಂದಾಗ ಗ್ಲೂಕೋಸ್ ನೀರು ಕುಡಿಸುತ್ತ, ಹಣೆಯ ಮೇಲೆ ಯೂಡಿಕೊಲೋನ್‌ನಲ್ಲಿ ನೆನಸಿದ ಪಟ್ಟಿ ಹಾಕುತ್ತ ಬೆಳಗಿನವರೆಗೂ ಹಾಗೆ ಕೂತಿದ್ದೆ. ನಡುನಡುವೆ ಒಂದೆರಡು ಸಲ ವಕೀಲರು ಎದ್ದು ಬಂದು ನೋಡಿಹೋಗಿದ್ದರು. ಅವರಿಗೂ ನಿದ್ದೆ ಬಂದಿರಲಿಲ್ಲ. ಬೆಳಿಗ್ಗೆ ಅವರ ಜ್ವರ ಇಳಿಯುತ್ತ ಬಂದಾಗ ನಾನು ಕೂತಲ್ಲಿಯೇ ಕಣ್ಣು ಮುಚ್ಚಿದೆ. ಎಚ್ಚರವಾದಾಗ ವಕೀಲರ ರಗ್ಗು ನನ್ನ ಮೈಮೇಲಿತ್ತು. ಅವರ ಕೈ ಮೃದುವಾಗಿ ನನ್ನ ಹಣೆಯ ಮೇಲೆ ಆಡುತ್ತಿತ್ತು. "ಸಿರಿ" ಎಂದರು. ಅವರ ಕಣ್ಣುಗಳಲ್ಲಿ ಮಿಂಚು ಅಪೂರ್ವವಾಗಿತ್ತು. ಅವರು ಏನು ಹೇಳಬೇಕೆನ್ನುತ್ತಾರೆ ಎನ್ನುವದು ಹೇಳದೆಯೇ ನನ್ನ ಹೃದಯಕ್ಕೆ ತಿಳಿದುಹೋಯಿತು. ಮೌನವಾಗಿ ಅವರ ಕೈಮೇಲೆ ನನ್ನ ಕೈ ಇಟ್ಟೆ. ಅಂದಿನಿಂದ ತಿರುಗಿ ನನ್ನ ತವರು ಮನೆಗೆ ಹೋಗಲಿಲ್ಲ. ಜನ ಬಾಯಿಗೆ ಬಂದಂತೆ ಆಡಿ ಕೊಂಡರೂ ವಕೀಲರು ನನ್ನ ಕೈ ಬಿಡದೆ ರಿಜಿಸ್ಟರ್ಡ್ ಮದುವೆ ಮಾಡಿಕೊಳ್ಳೋಣ ಎಂದರೂ ನಾನೇ ಬೇಡವೆಂದೆ. ಸಮಾಜದ ದೃಷ್ಟಿಯಲ್ಲಿ ಹೇಗಿದ್ದರೂ ನಾನು ವಿಧವೆ, ಕಳಂಕಿನಿ. ಇಂಥ ಸಮಾಜಕ್ಕೆ ಸಮಜಾಯಿತಿ ಕೊಡೋದು ನನಗೆ ಬೇಕಾಗಿಲ್ಲ. ನಾನು ಸಾಯುವವರೆಗೂ ನಿಮ್ಮ ಸಂಗಾತಿ. ಅಷ್ಟು ಸಾಕು ನನಗೆ ಅಂದೆ. ಕೇಸು ಮುಂದುವರಿಸುವುದು ಬೇಡವೆಂದೆ. ಅವರಿಗೂ ಇಷ್ಟವಿರಲಿಲ್ಲ. ಬಿಟ್ಟುಬಿಟ್ಟರು. ಆಸ್ತಿ ಕೈ ತಪ್ಪಿದ್ದಕ್ಕೆ ತವರಿನ ಬಳಗ ನನ್ನನ್ನು ತೂಗುಮಣೆಯಿಂದ ತಿಪ್ಪೆಗೆ ಚಲ್ಲಿದರು. ಅವರ ಪಾಲಿಗೆ ನಾನು ಸತ್ತು ಹೋದೆ. ಮಗಳನ್ನು ನೋಡಿಕೊಳ್ಳಲು ಬಂದವರಿಗೆ ದೊಡ್ಡ ಮಗುವನ್ನೂ ನೋಡಿಕೊಳ್ಳಬೇಕಾಯಿತು." ಇದು ಅಮ್ಮನ ಕತೆ.

ವಕೀಲರು ನಿಮ್ಮ ಹಟದಂತೆ. ವಿಲ್ ಬರೆದ ದಿನ ಕಣ್ಣೀರು ಹಾಕಿದ್ದು ಅಮ್ಮನಿಗೆ ಹೇಳಿದೆ. ಅಮ್ಮನ ಕಣ್ಣು ತುಂಬಿ ಬಂದಿತ್ತು. ಅವರು ನನಗೆ ಎಂದೂ ಬತ್ತಲಾರದ ಪ್ರೀತಿ ಕೊಟ್ಟರು. ಅರುಣ. ಆ ಪ್ರೀತಿಯ ಗುರುತಾಗಿ ಈ ಉಂಗುರಾ ಕೊಟ್ಟರು. ಇದಕ್ಕೂ ಹೆಚ್ಚಾಗಿ ಆಸ್ತಿ ಪಾಸ್ತಿ ನನಗ ಒಂದೂ ಬೇಕಾಗಿದ್ದಿಲ್ಲ ಅಂದಿದ್ದರು.

ಅಂತ್ಯಕ್ರಿಯೆಯ ಖರ್ಚು ನಾನೇ ವಹಿಸಿಕೊಂಡಿದ್ದೆ. ಅಮ್ಮನ ಉಂಗುರ ನನ್ನ ಜೇಬಿನಲ್ಲಿಯೇ ಇತ್ತು. ಎತ್ತಿ ಅಂಗೈಯಲ್ಲಿಟ್ಟುಕೊಂಡೆ. "ಅಮ್ಮ ನಿಮ್ಮಿಬ್ಬರ ಪ್ರೀತಿಯ ಗುರುತಾಗಿ ಇದನ್ನು ನಾನೇ ಇಟ್ಟುಕೋತೇನೆ ಎಂದು ಹೇಳಿದೆ. ದೀಪ ನಿಧಾನವಾಗಿ ಉರಿಯುತ್ತಿತ್ತು. ಎದ್ದು ಹೊರ ಬಂದು ಬಾಗಿಲಿಗೆ ಕೀಲಿ ಹಾಕಿದೆ.

***

■■

# ಕ್ಯಾನ್ಸರ್

ಪಡಸಾಲೆಯ ಕಟ್ಟೆಯ ಮೇಲೆ ಹಾಕಿದ್ದ ಹೊರಸಿನ ಮೇಲೆ ಒಂದು ಅರಿವೆಯ ಗಂಟಿನಂತೆ ಮುದುಡಿ ಮುದುಡಿಯಾಗಿ ಮಲಗಿದ್ದ ಶಿವಣ್ಣನ ಹತ್ತಿರ ಬಂದಳು ಬಸವ್ವ,

"ತಮ್ಮಾs ಏ ಶಿವಣ್ಣಾ".

ಕೌದಿಯ ಮುಸುಕು ಬಿಗಿದ ಶಿವಣ್ಣ ಮಿಸುಕಲಿಲ್ಲ. ಬಸವ್ವ ಅಷ್ಟಕ್ಕೆ ಬಿಡುವವಳೇ? ಒಂದು ಕೈಯಲ್ಲಿ ಪತ್ರ ಹಿಡಿದು, ಇನ್ನೊಂದು ಕೈಯಿಂದ ಅಲುಗಾಡಿಸುತ್ತ ದೈನಾಸಬಿಟ್ಟಳು. "ಶಿವೂ ಏಳಪ್ಪಾ, ಕಾಗದ ಬಂದೈತಪ್ಪಾ, ಕೊಪ್ಪದಿಂದ ಬಂದಾಂಗ ಕಾಣತದ. ನಿನ್ನ ಮಾವಂದs ಇರಬೇಕು. ಒಂದೀಟು ಓದಿ ಹೇಳೋಯಪ್ಪಾ."

ಗಂಟಿಗೆ ಜೀವ ಬಂದಿತು. ಒಂದೊಂದಾಗಿ ಕೈ, ಕಾಲು ಮುಖ ಹೊರಗೆ ಬಂದವು. ಅವ್ವನ ಕೈಯಿಂದ ಕಾಗದ ಇಸಿದುಕೊಂಡು, ಮುಖಕ್ಕೆ ಹಿಡಿದ. ಬೆಳಕು ಸಾಲದ್ದರಿಂದ ಅಕ್ಷರಗಳು ಸ್ಪಷ್ಟವಾಗಲಿಲ್ಲ ನರಳುತ್ತಲೇ ಕೈ ಊರಿ ಎದ್ದ. ಅವ್ವ ಆಧಾರ ಕೊಟ್ಟ ಮೇಲೆ ಪಡಸಾಲೆಯ ಬಾಗಿಲಿಗೆ ಬಂದು ನಿಂತು ತನ್ನಷ್ಟಕ್ಕೇ ಪತ್ರ ಓದಿಕೊಂಡ.

ಮೊದಲೇ ಬೆಳ್ಳಗಾಗಿದ್ದ ಮುಖ ಮತ್ತಷ್ಟು ಬಿಳಿಚಿಕೊಂಡಿತು. ಅವ್ವ ಹತ್ತಿರವಿರದಿದ್ದರೆ ಬಿದ್ದೇ ಬಿಡುತ್ತಿದ್ದನೇನೋ! ಬಸವ್ವ ಎಷ್ಟೋ ಸಲ ರಮಿಸಿ ಯಪ್ಪಾ, ಯಣ್ಣಾ ಎಂದು ಕೇಳಿಕೊಂಡ ಮೇಲೆ ನಿಧಾನವಾಗಿ ಪತ್ರ ಓದಿದ.

ಮಗನ ಬಾಯಿ, ತುಟಿಗಳನ್ನೇ ಕಣ್ಣರಳಿಸಿ ಆಶ್ಚರ್ಯದಿಂದ ನೋಡುತ್ತಿದ್ದ ಬಸವ್ವ, ಒಮ್ಮೆಲೇ ಮನೆಯ ಸೂರು ಹಾರಿ ಹೋಗುವ ಹಾಗೆ ಒದರಿದಳು-

"ಏನಂತಾನ ಅಂವಾ, ನಿನ್ನ ಮಾವ ಅನ್ನಿಸಿ ಕೊಂಡಾಂವ? ನಾಕ ಮಂದಿ ಹಿರೇರ ಮುಂದ ಮಾತ ಮುಗಿಸಿ, ನನ್ನ ಕೊಳ್ಳಾಗಿನ ಗುಂಡಿನ ಟಿಕ್ಕೆ, ಟೋಪ ಸೆರಗಿನ ಸೀರಿ ಹಾಕಿ, ಸಕ್ಕರಿ ಕಾರಣಾ ಮಾಡಿ ಬಂದೀನಿ. ಈಗೇನ ಧಾಡಿ ಬಂತ ಇಂವಗ, ನಾಕ ದಿನ ಜಡ್ಡಾಗಿ ಮಲಗಿದರ ಏನಾತು? ಜಗತ್ತಿನ್ಯಾಗ ಬ್ಯಾನಿ ಯಾರಿಗೂ ಬರೂದಿಲ್ಲೇನ? ನನ್ನ ಮಗ್ಗ ಆರಾಮ ಆಗೂ ಜಡ್ಡ ಅಲ್ಲಂತ ಯಾವ ಊರ ಶಾಣ್ಯಾ ಹೇಳಿದ ಇಂವಗ? ಮಗಳು ಬ್ಯಾನೀ ಗಂಡನ್ನ ಒಲ್ಲೆ ಅಂತಾಳಂತ ಕಾಗದಾ ಬರಸಾಕ ನಾಚಿಕೆ ಬರೂದಿಲ್ಲೇನ ಈ ಹೆಂಗಸ್ಯಾಗ. ಜಿಪ್ಪರಿ ಹಿಡಿದ, ಮೈಹುಳೇ ಜಜ್ಜಿ ಮಗಳಿಗೆ ಬುದ್ಧಿ ಕಲಿಸಬೇಕೋ, ಏನ ಅಕೀ ಹೇಳಿದಾಂಗ ಕುಣಿಬೇಕೋ? ನನ್ನ ಮಗ್ಗ ದೇಸದಾಗ ಹೆಣ್ಣ ಕೊಡಾವರ ಸಿಗತಿದ್ದಿಲ್ಲೇನ? ಕಾಲ ಬಿದ್ದ ಕೊಡತಿದ್ದರು. ಕಳ್ಳಿನ್ಯಾಗಿಂದ ಅಂತ ಅಣ್ಣನ ಮಗಳ್ನ ಮಾಡಿದರ, ಈಗ ಕೊಡುದಿಲ್ಲ ಅಂತಾನ ಲುಚ್ಚಾ, ಎಷ್ಟ ಸೊಕ್ಕ ಬಂದsದ ಇಂವಗ, ಇರಲಿ ಮಾಡ್ತೀನಿ ಅಂವಗ ಮನ್ಯಾಗ ಹಿರ್ಯಾ ಸತ್ತಾನ ಅಂದಷ್ಟಕ್ಕ ಊರಾಗಿನ ಹಿರ್ಯಾರು ಇಲ್ಲೇನು?"

ಅವ್ವನ ಆರ್ಭಟ ಕೇಳಿ ಹಿತ್ತಲಲ್ಲಿದ್ದ ನೀಲಕ್ಕ ಓಡಿಬಂದಳು. ಅಣ್ಣನ ಗೋಣು ಸೊಟ್ಟಗಾಗಿದ್ದು ನೋಡಿ "ಯವ್ವಾ, ಬೇ ಯವ್ವಾs ಅಣ್ಣನ ನೋಡಿಲ್ಲೆ ಮಾರಿ ಹ್ಯಾಂಗ ಮಾಡ್ಯಾನ" ಎನ್ನುತ್ತ ಶಿವಣ್ಣನನ್ನು ಹಿಡಿದೊಡನೆ ಅವಳ ಮೇಲೆಯೇ ಬಿದ್ದು ಬಿಟ್ಟನವ. ಇಬ್ಬರೂ ಕೂಡಿ ಅವಸರ ಮಾಡಿ ಅವನನ್ನು ಎತ್ತಿ ಒಯ್ದು ಮತ್ತೆ ಹೊರಸಿನ ಮೇಲೆ ಮಲಗಿಸಿದರು.

ಹೌಹಾರಿ ಎದೆ ಬಡಿದುಕೊಂಡು ಅವ್ವ ಅಳುತ್ತಿರುವಾಗ ಚಿಕ್ಕವಳಾದರೂ ಹೆಚ್ಚು ಧೈರ್ಯವಿದ್ದ ನೀಲಕ್ಕ ಒಳಗೆ ಓಡಿ, ಒಲೆಯ ಬಿಸಿ ಬೂದಿ ತಂದು ಅಣ್ಣನ ಅಂಗಾಲು ತಿಕ್ಕಲು ಅವ್ವನಿಗೆ ಹೇಳಿ, ತಾನು ಉಳ್ಳಾಗಡ್ಡಿ ಜಜ್ಜಿ ತಂದು ಅವನ ಮೂಗಿಗೆ ಹಿಡಿದಳು. ಅದರ ಘಾಟಿಗೆ ಮುಖ ಅತ್ತಿತ್ತ ಹೊರಳಿಸುತ್ತ ಕಣ್ಣು ತೆರೆದ ಶಿವಣ್ಣ.

"ಏ ಯಪ್ಪಾ ಶಿವಣ್ಣಾ, ಒಂದೀಟು ಬಾಯಿ ತಗಿ, 'ಆ' ಅನ್ನು. ಹಣಮಂತ ದೇವರ ಪೂಜಾರಪ್ಪ ಆಕಳ ಹಾಲು ಮಂತ್ರಿಸಿ ಕೊಟ್ಟಾನ, ಕುಡಿ ಇದನ್ನ ಹೊಟ್ಟ್ಯಾಗ ಸಮಾಧಾನ ಆಕ್ಕೈತಿ. ತಿಪ್ಪಾಭಟ್ಟರು ಭಾಳ ಶಾಣ್ಯಾರು ಅದಾರ ಏನೇನೋ ಮಂತ್ರಾ ಭಾಳ ಹೇಳತಾರ. ಇದನ್ನ ಕುಡದರ ಎಂಟ ದಿನದಾಗ ಎದ್ದು ಕೂಡುತಾನ ನಿನ್ನ ಮಗಾ ಅಂದಾರ. ಹಾಂಗS ಆಗಲೆಪ್ಪ, ನಿನ್ನ ಬಾಯಿ ಹರಕಿಂದ ನನ್ನ ಮಗ್ಗ ಗುಣಾ ಅದರ ಹಣಮಪ್ಪಗ ಬೆಳ್ಳಿ ಮೀಸಿ ಮಾಡಿಸಿ ಕೊಡ್ತೀನಿ ಅಂತ ಬೇಡಿಕೊಂಡೀನಿ. "

ಬಸವ್ವ ಮಾಡಿಸಿಕೊಟ್ಟ ಬೆಳ್ಳಿ ಮೀಸಿ ಇಟ್ಟುಕೊಳ್ಳುವ ಭಾಗ್ಯ ಹಣಮಪ್ಪನಿಗೆ ಬರಲೇ ಇಲ್ಲ. ಎಂಟು ದಿನ ಬಿಟ್ಟು, ಹದಿನೈದು ದಿನ ಹಾಲು ಕುಡಿದರೂ ಏನೂ ಗುಣ ಕಾಣಲಿಲ್ಲ. ರಂಗವ್ವನ ಸೊಸೆಯ ತವರೂರಿನಲ್ಲಿ ಫಕ್ಕೀರ ಸಾಬನ ಗೋರಿ ಇದೆ. ಅದಕ್ಕೆ ಹನ್ನೊಂದು ಅಮಾವಾಸ್ಯೆ ನಡೆದುಕೊಂಡರೆ ಎಂಥಾ ಜಡ್ಡು ಇದ್ದರೂ ಹಾರಿ ಹೋಗುತ್ತದೆಂದು ರಂಗವ್ವ ಹೇಳಿದಳು. ಮಗನಿಗೆ ಹಾಸಿಗೆ ಬಿಟ್ಟು ಏಳಲೂ ಆಗುತ್ತಿರಲಿಲ್ಲವಾದುದರಿಂದ ಬಸವ್ವ ಅಮಾವಾಸ್ಯೆಗೊಮ್ಮೆ ತಾನೇ ಹೊರಟಳು.

ಹೊಟ್ಟೆಯಲ್ಲಿ ಸಾವಿರಾರು ಸೂಜಿಗಳನ್ನು ಒಮ್ಮೆಲೇ ಚುಚ್ಚಿದಷ್ಟು ನೋವು ಶಿವಣ್ಣನಿಗೆ, ಉರಿ, ಸಂಕಟ, ನವೆತ ಎಲ್ಲ ಅನುಭವವೂ ಒಟ್ಟಿಗೇ. ಎರಡೂ ಕೈಗಳಿಂದ ಹೊಟ್ಟೆ ಕಿವಿಚುತ್ತ, ಅತ್ತಿತ್ತ ಹೊರಳಾಡುತ್ತ ಶಿವಣ್ಣ 'ಯವ್ವಾ' ಯವ್ವಾ' ಎಂದು ವಿಲಿ ವಿಲಿ ಒದ್ದಾಡಿದ.

ಅಡಿಗೆ ಮನೆಯಿಂದ ನೀಲಕ್ಕ ಓಡಿಬಂದಳು. "ಯಣ್ಣಾ ಅವ್ವ ಇವತ್ತ ಮಣಗಾಂವಿಗೆ ಹೋಗ್ಯಾಳ, ಫಕ್ಕೀರ ಸಾಬನ ಸಮಾಧಿಗೆ, ಇವತ್ತು ಅಮಾಸಿ ಅಲ್ಲೇನು? ಕರೆವ್ವಗ ಎಡಿ ಕೊಡಾಕ. ಬ್ಯಾಳಿಗೆ ಹಾಕಾಕ ನನಗ ಹೇಳ್ಯಾಳ, ಹೂರಣಾ ತಿರವಾಕ ಕುಂತೇನಿ, ನಿನಗ ಏನರೆ ಬೇಕಾಗಿತ್ತೇನ ?"

ಏನೂ ಬೇಡವೆಂದು ಗೋಣು ಅಲ್ಲಾಡಿಸಿದ ಅಣ್ಣನನ್ನು ನೋಡಿ ನೀಲಕ್ಕ ಸಮಾಧಾನದಿಂದ ಮತ್ತೆ ತನ್ನ ಕೆಲಸಕ್ಕ ನಡೆದಳು. ಸ್ವಲ್ಪ ಹೊತ್ತು ಜೋರಾಗಿದ್ದ ಹೊಟ್ಟೆ ನೋವು ನಿಧಾನವಾಗಿ ಕಡಿಮೆ ಆದಂತೆ, ನಿಷ್ಕ್ರಿಯನಾಗಿ ಬಿದ್ದುಕೊಂಡಿದ್ದ ಶಿವಣ್ಣನ ಮಿದುಳು ಚುರುಕಾಯಿತು.

ಅವ್ವ ಫಕೀರ ಸಾಬನ ಗೋರಿಗೆ ಹೋಗಾಕ ಹತ್ತಿ ನಾಕ ಅಮಾಸಿ ಆದವು. ದಾದಾಪೀರ ಮಂತ್ರಿಸಿ ಕೊಟ್ಟ ನಿಂಬೆಹಣ್ಣು, ಸಕ್ಕರಿ, ತಂದು ಪಾನಕಾ ಮಾಡಿ ನನಗ ಕುಡಸ್ತಾಳ, ಧೂಪಹಾಕಿ ಹೋಗಿ ನನ್ನ ಮಾರಿಗೆ ಊದತಾಳ. ಆದರ ದಿನ ದಿನಕ ನನ್ನ ಹೊಟ್ಟೆನೋವು ಕಡಿಮಿ ಆಗೂದು ಬಿಟ್ಟು ಹೆಚ್ಚS ಆಗಾಕ ಹತ್ತೇತಿ. ಈಶ್ವರಯ್ಯನ ಹಸರು ತೊಪ್ಪಲ ರಸಾ ಕುಡ್ಸಿದ್ಳು. ಕುರುಬ ರಾಮನ ನಾರು -ಬೇರು ತಿನಿಸಿದ್ಳು. ಪಂಡಿತರ ಬಸ್ಮಾ ನೆಕಸಿದ್ಳು. ತನ್ನ ಕೈಲಾದ್ದೆಲ್ಲಾ ಮಾಡಾಕ ಹತ್ಯಾಳ. ಆಗಲೆ ನಾ ಹಾಸಿಗಿ ಹಿಡಿದು ದೀಡ ತಿಂಗಳಾತು. ನಾನು ಭಾಳ ಸಾರೆ ಕೇಳಿದೆ. ' "ಬೇ ಯವ್ವಾ ನನ್ನ ಡಾಕ್ಟರಿಗೆ ತೋರಸಬೇಕS. ಹೊಟ್ಟ್ಯಾಗ ಹುಣ್ಣು-ಗಿಣ್ಣುಆಗಿರಬೇಕು. ಅದಕ್ಕ ನೂವಾಗ್ತತಿ, ಅವರು ಕೊಯ್ದು ತಗೀತಾರ, ಆರಾಮ ಆಕ್ಕೈತಿ, ಅಂತ. ಆದರ ಕಿಂವ್ಯಾಗ ಹಾಕ್ಕೋವೊಲ್ಲಳು. ಛೀ, ಬಿಡ ತಮ್ಮಾ, ಡಾಕ್ಟರಿಗೆ ತೋರಸೂದು ಬ್ಯಾಡಾ. ಹೊಟ್ಟೀ ಕೊಯ್ಸದು ಬ್ಯಾಡಾ. ದುಡಿಯೂ ಗಂಡಸ ಮಗಾ ನೀನು. ನಾಳೆ ಅದ್ದರ ಆಗಿ ಕುಂತಿ ಅಂದರ ಹೊಲದಾಗ ದುಡ್ಯಾಂವ ಹ್ಯಾಂಗ ಅಂತಾಳ. ಹಾಸಿಗಿ ಬಿಟ್ಟ ಏಳಾಕ ಆಗವೊಲ್ಲದು ದುಡಿಯೂದು ದೂರದ ಮಾತು. ಆರಾಮಾಗಿ ಏಳ್ತೀನೋ, ಇಲ್ಲಾS ಹಿಂಗ ಹಾಸಿಗಿ ಹಿಡಿದ ಸಾಯ್ತಿನೊ ಯಾರಿಗೆ ಗೊತ್ತು? ಎಂಟ ದಿನಾ ಆತ, ಅನ್ನಾ ಬಸದ ಗಂಜಿ, ಮಜ್ಜಿಗಿ ಮ್ಯಾಲೆ ಅದೀನಿ. ಅದಕ್ಕ ಸಗತೀ ಹ್ಯಾಂಗ ಬರಬೇಕ ಮೈಯಾಗ. ಡಾಕ್ಟರ ಕಡೆ ಹೋದರ ಸಗತೀ ಗುಳಿಗೀ ಕೊಡತಾರ. ಇಂಜೆಕ್ಷನ್ ಚುಚ್ಚತಾರ, ಆರಾಮ ಆದೀತೋ ಏನೋ ಅನಸ್ತೇತಿ, ಆದರ ಈ ಪಟಮಾರಿ ಅವ್ವಗ ಹೇಳುವವರು ಯಾರು? ನಮ್ಮಪ್ಪನ ಮಾತS ಕೇಳತಿದ್ದಿಲ್ಲಾ, ಇನ್ನ ನನ್ನ ಮಾತ ಕೇಳತಾಳ?

ನನಗ ಹೆಣ್ಣು ತರೂ ಮುಂದ, ನಾ ಎಷ್ಟ ಜಾಲವರದೆ ಯವ್ವಾ, ನನಗ ಆ ಹುಡುಗ ಬ್ಯಾಡಾ, ಆಕಿನ್ನ ಗಟ್ಟಿ ಮಾಡಾಕ ಹೋಗಬ್ಯಾಡಾ ಅಂತ. ನನಗ ಮೊದಲs ಗೊತ್ತಾಗಿತ್ತು. ಅವರ ಊರ ಪೈಲವಾನ ಯಮನ್ಯಾನ ಮ್ಯಾಲೆ ಆಕೀ ಮನಸ್ಸು ಐತಿ ಅಂತ. ನನ್ನ ಗೆಣ್ಯಾ ಗಂಗಪ್ಪ ಹೇಳಿದ್ದ ನನಗ. ಅಷ್ಟಾದರೂ ಬಿಡಲಿಲ್ಲ ನಮ್ಮವ್ವ. ಟಿಕ್ಕೆ, ಸೀರಿ ಕೊಟ್ಟು ಆಕಿನ್ನ ಗಟ್ಟಿ ಮಾಡೇ ಬಂದ್ಳು. ನಾ ಹಾಸಿಗಿ ಹಿಡಿದ ಮ್ಯಾಲೆ ಮಾವ ಒಂದು ಸಾರೆ ಬಂದು ಹೋದಾ. ನಮ್ಮತ್ತಿ. ಮಾಡಿಕೊಳ್ಳೂ ಹುಡುಗಿ ಇಬ್ಬರಿಗೂ ಈ ಮದುವಿ ಮನಸ್ಸಿಗೆ ಬಂದಿದ್ದಿಲ್ಲಾ, ಇಬ್ಬರೂ ಇತ್ತಾಗ ಹಣಿಕಿ ಹಾಕಲಿಲ್ಲಾ. ಅಷ್ಟs ಅಲ್ಲಾ, ಕಡೀಕ ಪಂಚರ ಮುಂದ ವಸ್ತಾ, ಸೀರಿ ತಿರಿಗಿ ಕೊಟ್ಟು ಸಂಬಂಧಾ ಬಿಡಿಸಿಕೊಂಡು ಬಿಟ್ರು. ಅವ್ವ ಗಂಟಲು ಹರಿಯೂಹಾಂಗ ಅವರ ವಂಶಾವಳಿ ಎಲ್ಲಾ ಬೈದಾಡಿ ಕಡೀಕ ಥಣ್ಣಗಾದಳು. ಆದರ ಈ ಅಪಮಾನಾ, ಸಂಕಟ ಆದದ್ದೆಲ್ಲಾ ನನಗs ಮತ್ತ. ಒಬ್ಬನs ಮಗಾ ಅಂತ ಭಾಳ ಪಿರೀತಿ ಮಾಡತಾಳ ಅವ್ವ. ನಾನು ನೆಳ್ಳಿದರ, ಅತ್ತರ, ತಾನೂ ಬೋರ್‍ಯಾಡಿ ಅಳತಾಳ. ಹರದಾರಿ ನೆಲಾ ನಡದು ಹೋಗಿ ಫಕ್ಕೀರ ಸಾಬಗ ನಡಕೊಂಡು ಪರಸಾದಾ ತರತಾಳ. ಈ ಪರಸಾದ ನನಗ ಗುಣಾ ಮಾಡೂದಿಲ್ಲ ಅನ್ನೂದs ಇಕೀಗೆ ತಿಳೀವೊಲ್ಲದಾಗೇದ.

"ಆಂss" ಎಂದು ಚೀರಿಬಿಟ್ಟ ಶಿವಣ್ಣ. ಈಗ ಮತ್ತೆ ಹೊಟ್ಟೆಯಲ್ಲಿ ಕಳೆ ಬರತೊಡಗಿತ್ತು. ರುಬ್ಬುಗುಂಡು ಬಿಟ್ಟು ನೀಲಕ್ಕ ಓಡಿ ಬಂದಾಗ ಶಿವಣ್ಣ ತೇಲುಗಣ್ಣು ಹಾಕಿ ನಿಶ್ಚಲನಾಗಿದ್ದ. ಗಾಬರಿಯಾದ ನೀಲಕ್ಕ ಓಣಿಗೆ ಓಡಿ ಬಂದು ಯಾರ್‍ಯಾರನ್ನೊ ಕರೆದಳು. ಅಂಗಲಾಚಿದಳು. ಅಣ್ಣ ಹ್ಯಾಂಗ್ಯಾಂಗೋ ಮಾಡ್ತಾನ ಬರ್ರೆವ್ವಾ, ಸಂಗವ್ವಕ್ಕಾ, ಮಲ್ಲವ್ವs ಎಂದು ಬೊಬ್ಬೆ ಹಾಕಿದಳು. ಗುಬು ಗುಬು ಜನ ಬಂದರು. ಕೂಡಿದ ಜನರಲ್ಲಿ ಹತ್ತಿರ ಬಂದು ಕುಳಿತು ಶಿವಣ್ಣನ ನಾಡಿ ಹಿಡಿದು ನೋಡಿದಳು ಹೊಲಿಗೆ ಅಕ್ಕವರು, ರಮಾ ತಾಯಿಯೇ. ಯಾರನ್ನೋ ಕರೆದು ಪಾಟೀಲ ಡಾಕ್ಟರನ್ನು ಕರೆಯಲು ಹೇಳಿದಳು. ಅಣ್ಣನ ಮುಖ ನೋಡಿ ಸತ್ತೇ ಹೋದನೆಂದು ದುಖ ಪಡುತ್ತಿದ್ದ ನೀಲಕ್ಕ ಅದಕ್ಕ ಬೇಡವೆನ್ನಲಿಲ್ಲ. ಡಾಕ್ಟರರು ಬಂದು ಇಂಜೆಕ್ಷನ್ ಚುಚ್ಚಿದ ಮೇಲೆಯೇ ಶಿವಣ್ಣ ಮೆಲ್ಲಗೆ ಕಣ್ಣು ತೆರೆದ. ಅವನನ್ನು ಪೂರ್ತಿಯಾಗಿ ತಪಾಸು ಮಾಡಿ ವಿವರ ತಿಳಿದುಕೊಂಡ ಪಾಟೀಲರು.

"ಇವನ ಹೊಟ್ಟೆಯ ಎಕ್ಸರೇ ಫೋಟೋ ತಗೀಬೇಕು. ಆಮ್ಯಾಲೆ ಆಪರೇಶನ್ನೂ ಮಾಡಬೇಕಾಗುತ್ತದೋ ಏನೋ. ಅದಕ್ಕೆಲ್ಲಾ ಇಲ್ಲೆ ಅನುಕೂಲ ಇಲ್ಲಾ. ಧಾರವಾಡಕ್ಕ ಕರಕೊಂಡು ಹೋಗ್ರಿ" ಎಂದು ಹೇಳುತ್ತಿರುವಾಗ ಬಸವ್ವ ಜನರನ್ನು ಸರಿಸುತ್ತ ಒಳಗೆ ಬಂದಳು.

ಸವಾರಿ ಚಕ್ಕಡಿ ಕಟ್ಟಿಸಿಕೊಂಡು ಬಂದ ಕರಿಯಣ್ಣನೊಡನೆ ಅವ್ವ, ಮಗಳು ಶಿವಣ್ಣನನ್ನು ಧಾರವಾಡಕ್ಕೆ ಒಯ್ದರು. ಕರಿಯಣ್ಣ ದೂರದ ಸಂಬಂಧದಲ್ಲಿ ಬಸವ್ವನಿಗೆ ಅಳಿಯನಾಗಬೇಕು. ನಾಲ್ಕೆಕರೆ ಗದ್ದೆ, ಅಣ್ಣ-ತಮ್ಮ ಇಬ್ಬರೇ, ತಮ್ಮನಿಂದ ಹೊಲದ ಕೆಲಸ ಮಾಡಿಸುತ್ತ ಕರಿಯಣ್ಣ ಬಿಳಿ ಅರಿವೆ ಹಾಕಿಕೊಂಡು ದೊಡ್ಡ ಮನುಷ್ಯರಂತೆ ಊರಿನಲ್ಲಿ ಕಾರಭಾರ ಮಾಡುತ್ತ ಮೆರೆದಾಡುತ್ತಿದ್ದ. ಎರಡು ಮಕ್ಕಳನ್ನು ಬಿಟ್ಟು ಅವನ ಮೊದಲ ಹೆಂಡತಿ ಸತ್ತಿದ್ದಳು. ಇವನ ಕಾಟ ತಾಳಲಾರದೆ ಅವಳು ಸತ್ತಳು ಎಂದು ಜನ ಆಡಿಕೊಳ್ಳುತ್ತಿದ್ದರು., ಊರಿನ ಚಂಡಾಳ-ಚೌಕಡಿಗಳಿಗೆಲ್ಲ ನಾಯಕನು ಅವನೇ. ಲಕ್ಷಣವಾಗಿದ್ದ ಹುಡುಗಿಯರ ಮೇಲೆಲ್ಲ ಇವನ ಕಣ್ಣು, ನೀಲಕ್ಕನನ್ನು ತನಗೆ ಕೊಡಬೇಕೆಂದು ಬಸವ್ವನಿಗೆ ಹೇಳಿಯೂ ಕಳಿಸಿದ್ದ. ಬಸವ್ವನಿಗೇನೋ ಕರಿಯನಂಥ 'ಗಂಡಸು' ಮಗನನ್ನು ಅಳಿಯನನ್ನಾಗಿ ಮಾಡಿಕೊಳ್ಳುವ ಮನಸ್ಸಿತ್ತು. ಆದರೆ ತಮ್ಮ ನೆರೆಮನೆಯ ಸಿದ್ದಿಯ ಜೊತೆಗೆ ಹಿತ್ತಿಲ ಬಾವಿಯ ಕಟ್ಟೆಯ ಮೇಲೆ ಸರಸ ಸಲ್ಲಾಪ ಮಾಡುತ್ತಿದ್ದ ಕರಿಯನನ್ನು ಆಗಾಗ ನೋಡುತ್ತಿದ್ದ ನೀಲಕ್ಕ ಮಾತ್ರ ಹಾರಾಡಿದ್ದಳು. ಅವನಿಗೆ ತನ್ನನ್ನು ಕೊಟ್ಟರೆ ಹಿತ್ತಿಲ ಬಾವಿ ಬೀಳುತ್ತೇನೆಂದು ಅವ್ವನಿಗೆ ಹೆದರಿಕೆ ಹಾಕಿದ್ದಳು. ನೀಲಕ್ಕ ಶಿವಣ್ಣನಷ್ಟು ಮೆದುಗಿ ಅಲ್ಲ. ಹೆಣ್ಣಾದರೂ ಸೆಟೆದು ನಿಲ್ಲುವವಳು. ಅಂತೆಯೇ ಧಾರವಾಡದಲ್ಲಿ ನಾಲ್ಕಾರು ದಿನ ಇರಬೇಕಾಗಿ ಬಂದಾಗ ಕರಿಯನಿಂದ ಆದಷ್ಟು ದೂರವಾಗಿ, ಎಚ್ಚರಿಕೆಯಿಂದ ಇದ್ದಳು.

ಧಾರವಾಡದ ಸರ್ಜನರು ಶಿವಣ್ಣನನ್ನು ಎಲ್ಲ ತರದಿಂದಲೂ ಪರೀಕ್ಷೆ ಮಾಡಿ ನೋಡಿದರು. ಕೊನೆಗೆ ಇದು ಕೈ ಬಿಟ್ಟ ಕೇಸು, ಆಪರೇಶನ್ನಿನಿಂದ ಏನೂ ಫಾಯದೆ ಇಲ್ಲವೆಂದು ಇಲ್ಲವೆಂದು ತಿಳಿದು ತಿರುಗಿ ಊರಿಗೆ ಕಳಿಸಿದರು.

ಮಗನನ್ನು ತಿರುಗಿ ಊರಿಗೆ ಕರೆತಂದ ಬಸವ್ವ, ಗಂಟಲೆತ್ತಿ ಜೋರಾಗಿ ಕೂಗಾಡಿದಳು. "ಆ ಹೊಲಗಿ ಕಲಸೂ ಬೋಸಡಿ ನನ್ನ ಮಗನ್ನ ಡಾಕ್ಟರ ಕೈಯಾಗ ಕೊಟ್ಟು, ಅವನ ಮಾತು ಕೇಳಿ ಮಗನ್ನ ಕಟ್ಟಿಗೊಂಡು ಊರೂರು ತಿರುಗಿ ಬಂದೆ ಹುಚ್ಚನಾಯಿ ಹಾಂಗ. ನನಗ ಮೊದಲs ಗೊತ್ತಿತ್ತು., ಈ ಡಾಕ್ಟರಿಗೆ ಏನೇನೂ ತಿಳಿಯೂದಿಲ್ಲ ಅಂತ, ಇಲ್ಲೇ ಇದ್ದರ ನನ ಮಗಾ ಆರಾಮ ಇರತಿದ್ದಾ."

ಕ್ಯಾನ್ಸರಿಂದ ಆಗಲೇ ಮೂರು ತಿಂಗಳು ಬಳಲಿದ್ದ ಶಿವಣ್ಣನ ಆಯುಸ್ಸು ಇನ್ನು ದಿನ ಎಣಿಸುವಷ್ಟು ಮಾತ್ರ ಉಳಿದಿತ್ತು. ಶಿವಣ್ಣನ ನಿಜವಾದ ಪರಿಸ್ಥಿತಿ ತಿಳಿದ ನೀಲಕ್ಕ ಬಿಕ್ಕಿ ಬಿಕ್ಕಿ ಅತ್ತಳು.

***

"ಬಸವ್ವಕ್ಕಾs ಅದಿಯೇನಬೇ" ಎನ್ನುತ್ತ ಒಂದು ಸಂಜೆ ಕರಿಯ ಮನೆಯ ಒಳಗೆ ಬಂದ. ಅವನೊಡನೆ ಬಂದಿದ್ದ ಅಪರಿಚತನನ್ನು ನೋಡಿ ನೀಲಕ್ಕ ಅಣ್ಣನ ಹತ್ತಿರದಿಂದ ಎದ್ದು ಅಡಿಗೆ ಮನೆಗೆ ನಡೆದಳು.

"ಬಾರಪ್ಪಾ ಕರಿಯಣ್ಣಾ, ಬಡವರ ಮನೀಗೆ ಅಪರೂಪಕ್ಕ ಬಂದಿ."

"ಊರಾಗ ಇದ್ದಿದ್ದಿಲ್ಲಬೇ, ಅದಕ್ಕ ಬರಾಕ ಆಗಿದ್ದಿಲ್ಲಾ. ಹ್ಯಾಂಗ ಅದಾನ ಶಿವಣ್ಣಾ?"

"ಮಂತ್ರ, ತಂತ್ರ, ತಾಯತ, ತೀರ್ಥಾ ನೀ ನೋಡಿದಾಂಗ ಡಾಕ್ಟರು ಎಲ್ಲಾ ಆತಪ್ಪಾ, ಏನೇನೂ ಗುಣಾ ಇಲ್ಲಾ. ನಿನ್ನಿಯಿಂದ ತಿಳಿಗಂಜಿ, ನೀರು ಸುದ್ದಾ ದಕ್ಕವೊಲ್ಲದು, ನನ್ನ ಮಗಾ ಕೈಗೆ ಹತ್ತತಾನೋ, ಇಲ್ಲೋ ಅನ್ನೂಹಾಂಗ ಆಗೇದ ಕರಿಯಣ್ಣಾs ಆ ದ್ಯಾವರಿಗೆ ಏನ ಕಣ್ಣ ಇಂಗಿ ಹೋಗ್ಯಾವೋ ಏನೋ" ಎನ್ನುತ್ತ ದುಃಖ ಒತ್ತರಿಸಿ ಬಂದು, ಮುಸುಕು ಹಾಕಿ ಅಳಹತ್ತಿದ ಬಸವ್ವನಿಗೆ ಕರಿಯಣ್ಣ ಸಮಾಧಾನ ಹೇಳಿದ:

"ಯಕ್ಕಾs ಅಳಬ್ಯಾಡಾ, ಸುಮ್ಮಿರು, ನಾ ಏನ ನಿನಗ ಹೊರಗಿನಾಂವ ಅಲ್ಲಾ. ನಿನ್ನ ಹಿತಕ್ಕ ಹೇಳ್ತೀನಿ. ನನ್ನ ಮಾತು ಕೇಳು. ಇಷ್ಟೆಲ್ಲಾ ಮಾಡೀದಿ ಇನ್ನೊಂದು ಕೆಲಸಾ ಮಾಡು. ಇಕಾ, ನನ್ನ ಜೋಡಿ ಬಂದಾರಲ್ಲ ನಾಗನಗೌಡರು, ಅವರು ಮಾಟಾ ಮದ್ದು ತಗಿಯಾಕ ಭಾಳ ಹುಶಾರ ಅದಾರ, ಅದಕ್ಕs ಇವರ್ನ ಕರಕೊಂಡು ಬಂದೇನಿ. ಯಾರರ ನಿನಗ ಆಗಲಾರದವರು ಶಿವಣ್ಣಗ ಮಾಟಾ ಮಾಡಿಸಿದ್ದಾರು ಅಂತ ನನಗ ಅನಸ್ತೈತಿ. ಸುತ್ತಾ ಮುತ್ತಾ ಹತ್ತು ಊರ ಮಂದಿ ಇವರ ಕಡೇನ ಬರತಾರ. ಇವರು ರಂಗಾ ಹೊಯ್ದು ಪೂಜೀ ಮಾಡಿ, ಹುಂಜಾ ಬಲಿ ಕೊಟ್ಟರೂ ಅಂದರ, ಎಂಥಾ ಮಾಟ ಇದ್ದರೂ ಎದ್ದ ಬರತೈತಿ, ಇದೆಲ್ಲಾ ಅಮಾಸಿ ದಿನಾ ಸರಿರಾತ್ರಿಗೆ ಆಗಬೇಕ. ಮತ್ತ ಆಸ ಪಾಸ ಯಾವ ಮಂದಿಗೂ ತಿಳೀಬಾರದ. ನೀ ಪೂಜಾ ಮಾಡ್ಸಾಕ ಹತ್ತೀದಿ ಅನ್ನೂದು ತಿಳಿದರ ಕೆಲಸಾ ಕೆಡತೈತಿ. ಇದೊಂದು ಮಾಡೇ ಬಿಡೂಣು, ನೀ ಹೂಂ ಅನ್ನು, ನಾ ಅದಕ್ಕೆಲ್ಲಾ ಯವಸ್ಥಾ ಮಾಡತೀನಿ: ಎಂದು ದುಂಬಾಲು ಬಿದ್ದಾಗ ಬಸವ್ವ ಕೊನೆಯ ಪ್ರಯತ್ನವೆಂದು ಅದಕ್ಕೂ ಸಿದ್ಧಳಾದಳು.

ಅಮಾವಾಸ್ಯೆಯ ದಿನ ಸರಿರಾತ್ರಿಗೆ ಪೂಜೆ ಮುಗಿದು, ಗೌಡಪ್ಪ ಹುಂಜದ ಕುತ್ತಿಗೆಯನ್ನು ಒಂದೇ ಏಟಿಗೆ ಕತ್ತರಿಸಿದ. ಒಳಗಿನ ಕೋಣೆಯಲ್ಲಿ ಶಿವಣ್ಣ ವಿಲಿ ವಿಲಿ ಒದ್ದಾಡುತ್ತ, ನೀಲಕ್ಕ ಬಾಯಿಗೆ ಬಿಟ್ಟ ನೀರನ್ನೂ ಗುಟುಕರಿಸದೆ ಜೀವ ಬಿಟ್ಟ. ಅವತ್ತು ಮುಂಜಾನೆಯಿಂದಲೂ ಅವನಿಗೆ ಪ್ರಜ್ಞೆ ಇರಲಿಲ್ಲ. ಹೊರಗೆ ಹೋಗಲು ಹೆದರಿ ಅಣ್ಣನ ಹಾಸಿಗೆಯ ಬಳಿ ಕುಳಿತಿದ್ದ ನೀಲಕ್ಕ, ಅಣ್ಣನ ಸಾವು ಕಂಡು ಹೆದರಿ ಬಾಯಿ ಬಡಿದುಕೊಳ್ಳುತ್ತ ಹೊರಗೆ ಓಡಿ ಬಂದಳು. ಕರಿಯ ಕೂಡಲೇ ಅವಳನ್ನು ಅಪ್ಪಿ ತಡೆದು ಬಾಯಿ ಒತ್ತಿ ಹಿಡಿದು ಕೋಣೆಗೆ ಎಳೆದೊಯ್ದು ಪೂಜೆ

ಮಾಡುತ್ತ ಕುಳಿತ ಬಸವ್ವ ಮೂಲೆಯಲ್ಲಿ ತೂಕಡಿಸುತ್ತಿದ್ದಳು. ಪೂಜೆ ಮುಗಿಸಿ ಪ್ರಸಾದ ತೆಗೆದುಕೊಂಡು ಬಂದಾಗಲೇ ಅವಳು ಅರ್ಧ ಬಾಯಿ ತೆಗೆದ ಮಗನ ಹೆಣವನ್ನು ಕಂಡದ್ದು.

ಅಣ್ಣ ಸತ್ತ ಒಂದು ತಿಂಗಳಲ್ಲಿ ನೀಲಕ್ಕ ಹಾಸಿಗೆ ಹಿಡಿದಳು. ಎದ್ದೊಡನೆ ವಾಂತಿ, ಹೊಟ್ಟೆಯಲ್ಲಿ ತಳಮಳ, ಮಗನ ಸಾವಿನಿಂದ ಹುಚ್ಚಿಯಂತಾಗಿದ್ದ ಅವ್ವನ ಮುಂದೆ ತನಗೆ ಏನಾಗಿದೆ ಎಂದು ಹೇಳಲೂ ಆಗದೆ, ಮುಚ್ಚಿಟ್ಟುಕೊಳ್ಳಲೂ ಆಗದೆ ಕೊರಗಿ ಕೊರಗಿ ತೊಳಲಾಡಿ, ಕೊನೆಗೆ ಒಂದು ದಿನ ಹಿತ್ತಲ ಬಾವಿಯ ತಳ ಕಂಡಳು ನೀಲಕ್ಕ. ಊರ ಜನ ಬಾಯಿಗೆ ಬಂದಂತೆ ಮಾತಾಡಿತು.

ಬಸವ್ವನಾದರೂ ಎಷ್ಟು ದಿನ ಅಳುತ್ತ ಮಲಗಿಯಾಳು? ಎಷ್ಟು ದಿನ ನೆರೆಯವರು ಬಂದು ಉಪಚಾರ ಮಾಡಿ ಊಟ ಮಾಡಿಸಿಯಾರು? ಅದಕ್ಕೂ ಒಂದು ಮಿತಿ ಇದೆ ಅಲ್ಲವೇ? ಮನೆಗೆ ಜನ ಬರುವುದು ಕಡಿಮೆಯಾಯಿತು ಹೊಟ್ಟೆಗೆ ಹಸಿವೆ ಆಯಿತು. ಬಸವ್ವ ಎದ್ದಳು. ಅಡಿಗೆ ಮಾಡಿಕೊಂಡಳು ಉಂಡಳು, ತಿಂದಳು, ಮಲಗಿದಳು, ತಿಂಗಳೆರಡು ಕಳೆದ ಮೇಲೆ ಜೊತೆಯವರೊಡನೆ ಮಾತಿಗೆ ಕೂತಳು. ಹರಟೆ ಹೊಡೆದಳು. ಸುಖ ಕಂಡು ನಕ್ಕಳು. ದುಃಖ ಕಂಡು ಅತ್ತಳು. ಮೈಗೆ ದಣಿವಾಗುವವರೆಗೆ ದುಡಿದಳು. ಉಂಡಳು, ದಿನ ಕಳೆದವು. ಹಬ್ಬ ಮಾಡಿದಳು. ಹೊಸ ಸೀರೆ ಉಟ್ಟಳು ಅಮಾವಾಸ್ಯೆಗೆ ಕರೆವ್ವನಿಗೆ ಹೋಳಿಗೆ ಎಡೆಮಾಡಿದಳು. ಗುಂಡಿನ ಟಿಕ್ಕೆ ಹಾಕಿಕೊಂಡು ಗೆಳತಿಯರೊಡನೆ ಹುಣ್ಣಿಮೆಗೆ ಯಲ್ಲವ್ವನ ಜಾತ್ರೆಗೆ ಹೋಗಿ ಕರಿಗಡಬು ಉಡಿತುಂಬಿ ಬಂದಳು. ಮತ್ತೆ ದಿನ ಉರುಳಿದವು. ಕತ್ತಲೆ ಆಯಿತು. ಬೆಳಕೂ ಆಯಿತು.

ಮತ್ತೊಂದು ಅಮಾವಾಸ್ಯೆಗೆ ಮಣಗಾಂವಿಗೆ ಫಕೀರಸಾಬನ ಸಮಾಧಿಗೆ ಹೋಗಿ ಬಂದಳು ಬಸವ್ವ. ಅವಳ ರಟ್ಟೆಯಲ್ಲಿ ಕರಿಯ ದಾರದಲ್ಲಿ ಕಟ್ಟಿದ ಚೀಟಿಯಿತ್ತು. ಅವ್ವಕ್ಕಗಳೆಲ್ಲ ಇದು ಯಾಕೆ ಎಂದು ಕೇಳುವ ಮೊದಲೇ ನೆರೆಮನೆಯ ಸಿದ್ದಿ ಸುದ್ದೀ ಹಬ್ಬಿಸಿದಳು.

"ಹಿತ್ತಲ ಬಾವೀ ಕಟ್ಟೀ ಮ್ಯಾಲೆ ಶಿವಣ್ಣ, ನೀಲಕ್ಕ ಇಬ್ರೂ ದೆವ್ವಾಗಿ ಕುಂತದ್ದು ಬಸವ್ವ ನೋಡಿದಳಂತ."

***

■■

# ವರ್ಗ ರದ್ದಾಯಿತು

ನಡುರಾತ್ರಿಯ ನೀರವತೆಯಲ್ಲಿ ಅಲಾರ್ಮ್ ಗಡಿಯಾರದ ಟಿಕ್ ಟಿಕ್ ಶಬ್ದ ನನ್ನ ಎದೆಬಡಿತದೊಡನೆ ಸ್ಪರ್ಧಿಸುತ್ತಿರುವುದು ಕಣ್ಣು ತೆರೆದುಕೊಂಡೇ ಮಲಗಿದ್ದ ಅಶೋಕನಿಗೆ ಸ್ಪಷ್ಟವಾಗಿ ಕೇಳುತ್ತಿತ್ತು. ವಿಜಯ, ಮಕ್ಕಳು ಮೈಮರೆತು ನಿದ್ದೆ ಮಾಡುತ್ತಿರುವಾಗ ತನಗೆ ಮಾತ್ರ ಕಣ್ಣು ಮುಚ್ಚುವುದೇ ಸಾಧ್ಯವಾಗಲೊಲ್ಲದು. ತಲೆಯಲ್ಲಿ ಸಂತೆಯ ಗದ್ದಲ ತುಂಬಿದೆ. ಬಯಲಾಟದ ಕುಣಿತವೂ ನಡೆಯುತ್ತಿದೆ. ಮಿದುಳು ತಕ್ಕಥೈ, ಧಿಮಿ, ಧಿಮಿ ಕುಣಿಯುತ್ತಿದೆ. ನರಗಳೆಲ್ಲ ಹಿಗ್ಗಾ ಮುಗ್ಗಾ ಜಗ್ಗಾಡುತ್ತಿವೆ. ಅಬ್ಬಾ! ಅಸಾಧ್ಯ ಈ ತಲೆನೋವು; ಸಹಿಸಲೂ ಆಗುವುದಿಲ್ಲ. ತಲೆದಿಂಬಿನ ಬಳಿ ಅತ್ತಿತ್ತ ಕೈಯಾಡಿಸಿದ. ಉಹುಂ ಅಲ್ಲಿ ಸಿಗಲಿಲ್ಲ, ಬೈಡ್‌ಲೈಟಿನ ಬೆಳಕಿನಲ್ಲಿ ಕೋಣೆಯ ಸುತ್ತ ಕಣ್ಣೋಡಿಸಿದ. ಎದುರು ಮಂಚದ ಮೇಲೆ ಸುಚೀ, ಸುಷ್ಮಾ ಮಲಗಿದ್ದರು. ರಗ್ಗು ಜಾರಿ ಕೆಳಗೆ ಬಿದ್ದಿತ್ತು. ಒಬ್ಬಳ ಕಾಲು ಮಚ್ಛರದಾನಿಯಿಂದ ಹೊರಗೆ ಚಾಚಿ ಬಂದಿತ್ತು. ಮೂಲೆಯ ಟೀಪಾಯ್ ಮೇಲಿನ ರೇಡಿಯೋದ ಹಿಂದಿನ ಶೋಕೇಸಿನಲ್ಲಿ ಕಣ್ಣಾಡಿಸಿ ಡ್ರೆಸ್ಸಿಂಗ್ ಟೇಬಲ್ಲಿಗೆ ಬಂದಾಗ ಅದೋ ಅಲ್ಲಿತ್ತು, ಅಮೃತಾಂಜನ ಬಾಟಲಿ, ಬಾಟಲಿ ಸಿಕ್ಕಿದ್ದೊಂದೇ ಸಮಾಧಾನ. ಎದ್ದು ಹೋಗಿ ತೆಗೆದುಕೊಳ್ಳುವ ಮನಸ್ಸಾಗಲಿಲ್ಲ. ಕಾರಣ ವಿಜಯ ಅವಳ ತೋಳಿನ ಮೇಲೆ ತಲೆಯಿಟ್ಟು ನಿದ್ದೆ ಮಾಡುತ್ತಿದ್ದಳು. ನಿಶ್ಯಬ್ದವಾಗಿ ಹೊರಳಿ ಅವಳತ್ತ ನೋಡಿದ. ಕೆನ್ನೆಯ ಮೇಲಿನ ಕಣ್ಣೀರು ಕರೆಕಟ್ಟಿತ್ತು. ನೀಳವಾದ ರೆಪ್ಪೆ ಇನ್ನೂ ಹಸಿಯಾಗಿರುವಂತೆ ಅಂಟಿಕೊಂಡಿದ್ದವು.

ವಿಜಯ ಇಂದು ಸಂಜೆ ಶಾಲೆಯಿಂದ ಬರುವಾಗ ದಿನದಂತೆ ಇಲ್ಲವೆನ್ನುವುದು ತನಗೆ ಕೂಡಲೆ ಗೊತ್ತಾಗಿತ್ತು. ದಿನದ ದುಡಿತದಿಂದ ದಣಿದಿದ್ದರೂ ತನ್ನನ್ನು ಕಂಡಕೂಡಲೇ ಹೂವಿನಂತೆ ಅರಳುತ್ತಿದ್ದವಳು ಇಂದು ಮುಖ ತಗ್ಗಿಸಿ ಒಳಗೆ ಬಂದು ಮಂಚದ ಮೇಲೆ ಪರ್ಸ್ ಒಗೆದು ತನ್ನ ಕಡೆಗೆ ನೋಡಿಯೂ ನೋಡದಂತೆ ಬಚ್ಚಲು ಮನೆಯತ್ತ ಹೊರಟಿದ್ದಳು. ಅವಳ ಈ ಹೊಸ ರೀತಿಯಿಂದ ಬೆಚ್ಚಿದ ತಾನೆ ಅವಳ ತೋಳು ಹಿಡಿದು ಕೋಣೆಗೆ ಕರೆತಂದಿದ್ದ, ಕೂಡಲೇ ಪರ್ಸಿನಲ್ಲಿಯ ಕಾಗದವನ್ನು ಬಿಚ್ಚಿ ತನ್ನ ಕೈಗಿತ್ತಳು. ಏನದು? ಯಾರ ಕಾಗದ ? ಯಾರಾದರೂ ಬಂಧುಗಳು ಸತ್ತರೆ ಟೆಲಿಗ್ರಾಂ ಬರಬೇಕಿತ್ತು. ಇವಳನ್ನು ಕೆಲಸದಿಂದ ತೆಗೆದರೋ? ಅಥವಾ ಯಾರಾದರೂ ಬೇನಾಮಿ ಅಶ್ಲೀಲ ಪತ್ರ ಬರೆದರೋ ? ತನ್ನ ವಿಜಯ ನೋಡೋದಕ್ಕೆ ಚೆನ್ನಾಗಿದ್ದುದರಿಂದ ಬೇರೆಯವರ ಕಣ್ಣು ಬೀಳುವದೂ ಸಾಧ್ಯವಿದೆ ಎಂದು ಯೋಚಿಸುತ್ತ ಕಾಗದ ಓದಿದರೆ ಅದು ಅವಳನ್ನು ದೂರದ ಊರಿನ ಶಾಲೆಗೆ ವರ್ಗ ಮಾಡಿದ ಆರ್ಡರು. ಇನ್ನು ಹದಿನೈದು ದಿನಗಳಲ್ಲಿ ಹೋಗಿ ಚಾರ್ಜ ತೆಗೆದುಕೊಳ್ಳಬೇಕು ಎಂದು ಅದರಲ್ಲಿತ್ತು. ಓಹ್! ಇದು ತಮ್ಮಿಬ್ಬರಿಗೂ ಅನಿರೀಕ್ಷಿತ ಆಘಾತ. ವಿಜಯಳ ಕಣ್ಣೀರು ಒರೆಸಿ, ಏನಾದರೂ ಯೋಚಿಸೋಣವೆಂದು ಸಂತೈಸಿ, ಕೆಲಸದ ಗಂಗೂ ಮಾಡಿಟ್ಟ ಅಡಿಗೆಯನ್ನು ಎಲ್ಲರೂ ಊಟ ಮಾಡಿ ಹೊರಗೆ ಬರುವುದರಲ್ಲಿ ಯೋಚನೆಗಳ ಭಾರದಿಂದ ತನ್ನ ತಲೆ ಸಿಡಿಯ ತೊಡಗಿತ್ತು. ನಿದ್ದೆ ಹಾರಿ ಹೋಗಿತ್ತು.

ತಾವಿಬ್ಬರೂ ದುಡಿಯುವವರಾದ್ದರಿಂದ ತಮ್ಮ ಮುಪ್ಪಿನ ಕಾಲಕ್ಕೆ ನೆರಳಿಗೆ ಸ್ವಂತ ಮನೆ ಇರಲೆಂದು ದೂರಾಲೋಚನೆ ಮಾಡಿ, ಸಾಲಮಾಡಿ ಮನೆ ಕಟ್ಟಿಸಿ ವರ್ಷ ಕಳೆದಿತ್ತು. ಸುಚೀ, ಸುಷ್ಮಾ ಇಬ್ಬರ ವಿದ್ಯಾಭ್ಯಾಸ ಮುಗಿದು ಮದುವೆ ಜವಾಬ್ದಾರಿ ಹೊರುವ ಮುಂಚೆಯೇ ಮನೆಯ ಸಾಲ ತೀರಿಹೋಗುತ್ತದೆ ಎಂದು ಲೆಕ್ಕ ಹಾಕಿ, ಸಾಧ್ಯವಿದ್ದಷ್ಟು ಮಿತವ್ಯಯ ಮಾಡಿ, ತನ್ನ ಪಗಾರವನ್ನು ಮನೆಯ ಖರ್ಚಿಗೂ, ವಿಜಯಳದನ್ನು ಸಾಲಕ್ಕೂ ತೆಗೆದು ಇಡುತ್ತಾ ಬಂದಿದ್ದೆವು. ಆದರೆ ಈಗ ನೋಡಿದರೆ ತಮ್ಮ ಮಿತವ್ಯಯ, ಲೆಕ್ಕಾಚಾರ ಎಲ್ಲಾ ಬುಡಮೇಲಾಗಿತ್ತು. ಬೇರೊಂದು ದೂರದ ಊರಿನಲ್ಲಿ ಮನೆಮಾಡಿಕೊಂಡು ತನ್ನ ಸಹಾಯವಿಲ್ಲದೆ ಒಬ್ಬಳೇ ಚಿಕ್ಕ ಮಕ್ಕಳೊಡನೆ ಇದ್ದು ಅವಳು ಎಷ್ಟು ಹಣ ಉಳಿಸಲು ಸಾಧ್ಯ? ಅವಳಿಗಾಗಲೀ ತನಗಾಗಲೀ. ಒಬ್ಬರೇ ಇದ್ದು ಹೇಗಾದರೂ ಸಂಸಾರ

ಸಾಗಿಸಿಕೊಂಡು ಹೋಗುವ ಮನಸ್ಸಿಲ್ಲ, ಶಕ್ತಿಯಿಲ್ಲ, ಆರ್ಥಿಕ ಅನುಕೂಲವೂ ಇಲ್ಲ. ಅವಳನ್ನು ವರ್ಗ ಮಾಡಬೇಕೆನ್ನುವ ಬುದ್ಧಿಯನ್ನು ದೇವರು ಯಾಕಾದರೂ ಅವರಿಗೆ ಕೊಟ್ಟನೋ! ಎಲ್ಲವನ್ನೂ ಬಿಟ್ಟು ತನ್ನ ಹೆಂಡತಿಯನ್ನೇ ವರ್ಗ ಮಾಡಲು ಅವರಿಗೆ ಬೇರೆ ಏನೂ ಕೆಲಸ ಇರಲಿಲ್ಲವೇ? ಅಥವಾ ಯಾರಾದರೂ ಬೇಕಂತಲೇ ಹೊಟ್ಟೆಕಿಚ್ಚಿನಿಂದ ಈ ಕೆಲಸ ಮಾಡಿಸಿದ್ದಾರೋ? ತನಗೆ ಆಗದವರು ಎಷ್ಟೋ ಜನ ಇದ್ದಾರೆ. ತನಗೆ ಕಲಿತ, ಸುಂದರ ಹೆಂಡತಿ ಇರುವದೂ, ಇಬ್ಬರ ಗಳಿಕೆಯಿಂದ ತನ್ನ ಜೊತೆಯವರಿಗಿಂತ ಮೇಲ್ಮಟ್ಟದಲ್ಲಿ ಜೀವಿಸುತ್ತ ಇರುವದೂ, ಮನೆ ಕಟ್ಟಿಸಿಕೊಂಡಿರುವುದೂ ಎಲ್ಲವನ್ನೂ ನೋಡಿ ಆಗದ ಸ್ನೇಹಿತರೂ, ಸಹೋದ್ಯೋಗಿಗಳೂ ಸಾಕಷ್ಟು ಸಂಖ್ಯೆಯಲ್ಲಿ ಇರಬಹುದು. ಆದರೆ ಆಂ- ಆದರೆ ಈ ಕೆಲಸಕ್ಕೆ ಪ್ರಭಾವ ಬೀರುವಂಥ ಅಧಿಕಾರ ಬೇಕು. ಬೆಂಗಳೂರಿನಲ್ಲಿ ಅವರ ಮಾತು ನಡೆಯಬೇಕು. ಅಂಥ ಓs ಈಗ ಅರ್ಥವಾಯಿತು. ಈ ಕೆಲಸ ನನ್ನ ಬಾಸ್-ಮಂಜುನಾಥಯ್ಯಂದೆ, ಅದೇ ಅವನೇ ಮೊದಲೇ ಹೊಳೆಯಲಿಲ್ಲ ತನಗೆ -

ಅದೇ ಮಂಜುನಾಥಯ್ಯ ಕಚೇರಿಯಲ್ಲಿ ಒಂದು ದಿನ ತನ್ನನ್ನು ಕರೆಸಿದ.

'ಸಾಹೇಬ್ರು ನಿಮ್ಮನ್ನು ಕರೀತಾರ್ರೀ."

(ಯಾಕ ಕರೀತಿದ್ದಾನಪಾ ಇಂವಾ. ಎಷ್ಟ ಬಯ್ಯಿಸಿಕೋಬೇಕೋ ಇವನಿಂದ) ಒಳಗೆ ಹೋದೊಡನೆ ದಿನವೂ ತನ್ನನ್ನು ಕಂಡು ಹಾವಿನಂತೆ ಪೂತ್ಕರಿಸುವ ಮಂಜುನಾಥಯ್ಯ ದೇಶಾವರಿ ನಗೆ ನಗುತ್ತ, ಬೋಳು ನೆತ್ತಿಯ ಮೇಲೆ ಕೈಯಾಡಿಸುತ್ತ "ಕೂಡ್ರಿ ಮಿ. ದೇಸಾಯಿ, ಸ್ವಲ್ಪ ಮಾತಾಡೂದ ಅದ ನಿಮ್ಮ ಕೂಡ" ಅಂದ.

ಮುಂದಿನ ಒಂದು ಹಲ್ಲು ಇಲ್ಲದ ಬಾಯಿಂದ ಉಗುಳು ಸಿಡಿಸುತ್ತ ಟೈಪಿಸ್ಟ್ ಜೊತೆ ಮಾತನಾಡುತ್ತಿದ್ದ. (ಲಗೂನ ಬೊಗಳಬಾರದ? ಏನದು ಕೆಲಸಾ ?ಸುಮ್ಮನೆ ವೇಳೆ ಕಳೀತಾನ.)

ಟೈಪಿಸ್ಟ್ ಹೊರಗೆ ಹೋದೊಡನೆ ಮಿ. ದೇಸಾಯ್ ನಿಮ್ಮ ಮಿಸೆಸ್ ಗರ್ಲ್ಸ್ ಸ್ಕೂಲಿನ್ಯಾಗ ಟೀಚರ್ ಅದಾರೇನು ?" ಅಂದ.

"ಹೌದ್ರಿ" (ಇಂವಗ್ಯಾಕ ಬೇಕ ನನ್ನ ಹೆಂಡತಿ ಉಸಾಬರಿ)

"ನೋಡ್ರೀs ನನ್ನ ಮಗಳು ಆಶಾ ಒಂಬತ್ತನೆ ಕ್ಲಾಸಿನ್ಯಾಗ ಕಲೀತಾಳ. ಅದsಸ್ಕೂಲಿಗೆ ಹೋಗತಾಳ. ವಾರ್ಷಿಕ ಪರೀಕ್ಷೆದಾಗ ಗಣಿತ ಪೇಪರು ಛೊಲೋ ಆಗಿಲ್ಲಾ ಅಂತಅಳತಿದ್ಲು. ಹಿಡೀರಿ, ಇದು ಆಕೀ ನಂಬರು. ಆಕೀ ಪೇಪರು ಲಕ್ಷ್ಯ ಕೊಟ್ಟು ತಪಾಸ ಮಾಡಬೇಕು. ಕನಿಷ್ಠಪಕ್ಷ ನೂರಕ್ಕೆ ಎಪ್ಪತ್ತೈದು ಮಾರ್ಕ್ಸ್ ಕೊಡಬೇಕು ಅಂತ ನಿಮ್ಮ ಮಿಸೆಸ್‌ಗೆ ಹೇಳ್ರಿ, ತಿಳೀತೇನು, ಅಲಕ್ಷ್ಯ ಮಾಡಬ್ಯಾಡ್ರಿ. ನಿಮ್ಮದs ಕೆಲಸ ಅಂತ ಮಾಡ್ರಿ. ಆಯ್ತು. ಹೋಗ್ರಿನ್ನ."

ಅವನನ್ನು ಬಯ್ಯಲು. ಶಪಿಸಲು ಶಬ್ದಗಳೇ ಸಾಲದೇ ಸಿಟ್ಟಾಗಿ ಮನೆಗೆ ಬಂದೆ. ವಿಜಯಳಿಗೆ ವಿಷಯ ತಿಳಿಸಿದೆ. ಅವಳು ಆಶಾನ ಪೇಪರು ಹುಡುಕಿ ತನ್ನ ಮುಖದ ಮುಂದೆ ಹಿಡಿದಾಗ ನೋಡಿ ದಂಗಾದೆ. ನೂರಕ್ಕೆ ಹದಿನೈದಕ್ಕಿಂತ ಹೆಚ್ಚು ಕೊಡಲು ಸಾಧ್ಯವೇ ಇರಲಿಲ್ಲ. ಏನು ಮಾಡಬೇಕೋ ತಿಳಿಯದೆ ಪೆಚ್ಚಾಗಿ, ವಿಜಯಳ ಮುಖ ನೋಡದೆ, 'ಆಗಲಿ ಹದಿನೈದs ಹಾಕಿಬಿಡು, ನೋಡೋಣ ಏನು ಮಾಡ್ತಾನ ಮಂಜುನಾಥಯ್ಯ' ಎಂದೆ. ಸೇಡು ತೀರಿಸಿಕೊಂಡ ತೃಪ್ತಿಯ ನಗೆ ನಕ್ಕಿದ್ದೆ.

ಮುಂದಿನ ಮೂರು ತಿಂಗಳು ತನ್ನ ಪಾಲಿಗೆ ಬಾಸ್ "ನಕ್ಷತ್ರಿಕ"ನಾಗಿದ್ದ. ಕಚೇರಿ ಕೆಲಸದಾಗ ಸಿಕ್ಕರೆ ತನ್ನ ಪಾತಾಳಕ್ಕೆ ತುಳೀತಾನ ಅನ್ನೂದು ತನಗೆ ಗೊತ್ತಿತ್ತು. ಮೈ ತುಂಬಾ ಕಣ್ಣಾಗಿ ಕೆಲಸಾ ಮಾಡಿದರೂ ಬಯ್ಯುತ್ತಿದ್ದ.

ಅಪಮಾನ ಮಾಡುತ್ತಿದ್ದ. ದಿನಾ ನರಕಾ ಅನುಭವಿಸುತ್ತಿದ್ದೆ. ಕೆಲವು ವಿಷಯಾನ ವಿಜಯನ ಮುಂದೆ ಹೇಳುತ್ತಿದ್ದೆ. ಕೆಲವು ನಾನs ನುಂಗುತ್ತಿದ್ದೆ. "ನೀವು ಬಾಸ್‌ನ ಎದುರು ಹಾಕ್ಕೊಬಾರದಾಗಿತ್ತು. ಹೆಚ್ಚಿಗಿ ಮಾರ್ಕ್ಸ್ ಹಾಕಿದ್ದರ ನಿಮಗ ಈ ಕಾಟಾ ಇರತಿದ್ದಿಲ್ಲಾ. ಎಷ್ಟೋ ಮಂದಿ ಇಂಥಾವೆಲ್ಲಾ ಮಾಡತಾರ' ಅಂತ ಸ್ನೇಹಿತರು ತನಗೆ ಬುದ್ಧೀ ಹೇಳಿದರು. ಛೀ! ಎಂತೆಂಥಾ ಮಂದಿ ಇರತಾರಲ್ಲ, ಮನುಷ್ಯ ಆಗಿ ಹುಟ್ಟಿ ಬಂದ ಮೇಲೆ ಇವರಿಗೆ ಒಂದು ತತ್ತ್ವ, ಆದರ್ಶ, ಜೀವನದ ಗುರಿ, ಏನೂ ಇರೂದs ಇಲ್ಲ. ಬಾಸ್‌ನ ಮಗಳು ನಪಾಸಾದರ ಅಳತಾಳ. ಅವಗ ಕೆಟ್ಟ ಅನಸತದ ಅಂತ ತನ್ನ ಹೆಂಡತಿ ಇಂಥಾ ಭ್ರಷ್ಟ ಕೆಲಸಾ ಮಾಡಬೇಕು? ಅವಳಿಗೆ ಅಂತರಾತ್ಮ, ವಿವೇಕ, ಬುದ್ಧೀ, ಏನೇನೂ ಇಲ್ಲಾ ಅಂತ ತಿಳಕೊಂಡಾರ ಇವರೆಲ್ಲಾ "ನಮ್ಮ ಬಾಸ್ ಹಾವು ಇದ್ದ್ಹಾಂಗ ಅದಾನರೀ. ಸೇಡು ತೀರಿಸಿಕೊಳ್ಳದ ಬಿಡೂದಿಲ್ಲಾ ಅಂತ ಸಹೋದ್ಯೋಗಿಗಳು ಹೆದರಿಸಿದ್ದರು. ಆ ಮಾತೆಲ್ಲಾ ಅಲಕ್ಷ್ಯಮಾಡಿ ನಕ್ಕು ಬಿಟ್ಟಿದ್ದ ತಾನು. ಆದರ ಈಗ -ಈಗ ಹ್ಯಾಂಗ ಎದುರಿಸಬೇಕು ಈ ಸಮಸ್ಯಾನ ?

ಖೊಖ್ಖ್... ಖೊಖ್ಖ್ ಸುಷ್ಮಾ ಒಂದೇ ಸಮನೇ ಕೆಮ್ಮತೊಡಗಿದಳು. ತಿವಿದು ಎಬ್ಬಿಸಿದಂತೆ ವಿಜಯ ತಟ್ಟನೆದ್ದು ಹೋಗಿ ಅವಳನ್ನು ಎತ್ತಿಕೊಂಡು ಬೆನ್ನು ನೇವರಿಸತೊಡಗಿದಳು. ಮುಖ ಕೆಂಪಾಗಿ ಕಣ್ಣಲ್ಲಿ ನೀರು ಹರಿದು. ಬೆವೆತು, ಸೋತು, ಮಲಗಿದಳು ಸುಷ್ಮಾ. ಅದು ನಾಯಿಕೆಮ್ಮಿನ ಪ್ರತಾಪ. ಮೂರು ತಿಂಗಳ ಕೆಳಗೆ ಸುಚೀ, ಸುಷ್ಮಾ ಇಬ್ಬರೂ ಈ ಕೆಮ್ಮಿನಿಂದ ಸತ್ತು ಬದುಕಿದರು. ಆಗ ಹಗಲು-ರಾತ್ರಿ ತಮ್ಮಿಬ್ಬರಿಗೂ ವಿಶ್ರಾಂತಿ ಇರಲಿಲ್ಲ. ಕೆಮ್ಮಿ ಕೆಮ್ಮಿ ಉಂಡದ್ದೆಲ್ಲ ವಾಂತಿ ಮಾಡಿಕೊಂಡು ಸುಸ್ತಾಗಿ ಮಲಗುವ ಮಕ್ಕಳನ್ನು ನೋಡಿ ತಮ್ಮಿಬ್ಬರಿಗೂ ಅನ್ನ ಗಂಟಲಲ್ಲಿ ಇಳಿಯುತ್ತಿರಲಿಲ್ಲ. ವಿಜಯ ಮಕ್ಕಳ ಉಪಚಾರಕ್ಕೆಂದು ರಜೆ ಹಾಕಿದ್ದಳು. ಹಕ್ಕಿನ ರಜೆ ಮುಗಿದು ಪಗಾರವಿಲ್ಲದೆಯೂ ರಜೆ ತೆಗೆದುಕೊಂಡಿದ್ದಳು. ಸುಷ್ಮಾ ಅಶಕ್ತ ಪ್ರಕೃತಿಯವಳಾಗಿದ್ದರಿಂದ ಇನ್ನೂ ಒಮ್ಮೊಮ್ಮೆ ಕೆಮ್ಮು ತೊಂದರೆ ಕೊಡುತ್ತಿತ್ತು. ಈಗ ವಿಜಯಳಿಗೆ ರಜೆ ಸಿಗುವುದೂ ಸಾಧ್ಯವಿರಲಿಲ್ಲ. ಅಂದರೆ ಈಗ ಮಾಡಬೇಕೇನು? ಚಿಂತೆಗೆ ಕೊನೆಯೇ ಇರಲಿಲ್ಲ. ಬೆಳಗಾಯಿತು.

***

"ಅವ್ವಾಗ ಟಾಟಾ ಮಾಡು ಮರೀs. ನೀನು ಮಾಡು ಸುಚೀs" ಅಶೋಕ ವಿಜಯ ಕುಳಿತ ಬಸ್ಸಿನ ಕಿಟಕಿಯ ಹತ್ತಿರ ನಿಂತು ಮಕ್ಕಳಿಗೆ ಹೇಳಿದ್ದ.

"ಟಾಟಾs ಟಾಟಾs" ಇಬ್ಬರೂ ಒಂದೇ ಉಸುರಿನಲ್ಲಿ ಕೂಗಿದರು. ಗಂಡ ಮಕ್ಕಳನ್ನು ಬಿಟ್ಟು ತಾನೊಬ್ಬಳೇ ಬೆಂಗಳೂರಿಗೆ ಹೊರಡುವುದು ವಿಜಯಳಿಗೆ ಅನಿವಾರ್ಯವಾಗಿತ್ತು. ಸಾಧ್ಯವಾದರೆ ಮೇಲಿನ ಅಧಿಕಾರಿಗೆ ಹೇಳಿತನ್ನ ವರ್ಗ ರದ್ದು ಮಾಡಿಸಿ ಬರಲು ಹೊರಟಿದ್ದಳು. ಸ್ನೇಹಿತರ ಸಲಹೆಯಂತೆ ಗಂಡ-ಹೆಂಡತಿ ಇಬ್ಬರೂ ಒಂದೇ ಊರಿನಲ್ಲಿ ಕೆಲಸ ಮಾಡುವ ಅನುಕೂಲತೆ ಒದಗಿಸಿಕೊಡಬೇಕೆನ್ನುವುದು ಸರಕಾರೀ ಕಾನೂನಿನಲ್ಲಿ ಇದೆ. ಆದರೂ ಮೇಲಾಧಿಕಾರಿಗಳ, ಊರ ಪುಢಾರಿಗಳ ಅವಕೃಪೆಗೆ ಪಾತ್ರರಾದವರಿಗೆ ಇಂಥ ಶಿಕ್ಷೆ ಕೊಡುವುದು ಸಹಜವಾಗಿತ್ತು. ಮೇಲಾಧಿಕಾರಿಗಳನ್ನು ಸ್ವತಃ ಭೆಟ್ಟಿಯಾಗಲು ಬೆಂಗಳೂರಿಗೆ ಹೋಗಬೇಕಾಗಿತ್ತು. ಬೇರೆ ಊರಿಗೆ ಹೋಗಿ ಅಪರಿಚಿತರ ಮಧ್ಯೆ ಒಬ್ಬಳೇ ಹೊಸ ಜೀವನ ಪ್ರಾರಂಭಿಸುವದಕ್ಕಿಂತಲೂ ಇದು ಸುಲಭದ ಕೆಲಸ ಎಂದು ಗಂಡ-ಹೆಂಡತಿ ಇಬ್ಬರೂ ತಿಳಿದಿದ್ದುದೇ ಈ ಪ್ರವಾಸಕ್ಕೆ ಕಾರಣವಾಗಿತ್ತು.

"ನಿನ್ನ ಗೆಳತಿಯ ಮನೀ ಅಡ್ರೆಸ್ ಇಟ್ಟುಕೊಂಡೀ ಅಲ್ಲಾ?"

ಪರ್ಸಿನಲ್ಲಿ ಕಣ್ಣಾಡಿಸಿ ನೋಡಿದಳು ವಿಜಯ; "ಹೂಂ, ಇಟಕೊಂಡೀನಿ."

'ಹೋದ ಕೂಡಲೆ ಅವರ ಮನೆಗೆ ಹೋಗಿ ಸಾಮಾನು ಇಟ್ಟು, ಸ್ನಾನಾ ಮಾಡಿ ಫ್ರೆಶ್ ಆಗಿ ಆಫೀಸಿಗೆ ಹೋಗು. ನಮ್ಮ ಅನಾನುಕೂಲ ಎಲ್ಲಾ ಅವರಿಗೆ ತಿಳಿಸಿ ಹೇಳು. ಅವರೂ ಅನುಭವಿಕರು ಇರತಾರ, ನೀ ಹೇಳಿದರ

ನಂಬತಾರ. ವರ್ಗ ಕ್ಯಾನ್ಸಲ್ ಮಾಡಲಿಕ್ಕೆ ಇಲ್ಲಾ ಅನಲಿಕ್ಕಿಲ್ಲ. ಒಂದs ದಿವಸಕ್ಕ ಭೆಟ್ಟಿ ಆಗದಿದ್ದರ ಇನ್ನೊಂದು ದಿವಸ ನಿಂತು ಬಾ."

"ಹೂಂ" ಎಂದು ಗೋಣು ಅಲ್ಲಾಡಿಸಿ, "ಗಂಗೂನ ಕಡೇಂದ ಎಲ್ಲಾ ಕೆಲಸಾ ಹೇಳಿ ಮಾಡಿಸಿಕೊಳ್ರಿ. ಹುಡುಗರು ಜ್ವಾಕಿ. ಸುಷ್ಮಾಗ ದಿನಾ ರಾತ್ರಿ ಎರಡು ಚಮಚೆ ಔಷಧ ಕುಡಿಸ್ರಿ"ಎಂದಳು ವಿಜಯ.

"ನಾ ಎಲ್ಲಾ ಮಾಡ್ತೀನಿ. ನೀ ಕಾಳಜೀ ಮಾಡಬ್ಯಾಡಾ. ನಿಶ್ಚಿಂತ ಆಗಿ ಹೋಗು, ನಿನ್ನ ಕೆಲಸಾ ಸರಿಯಾಗಿ ಮಾಡಿಕೊಂಡು ಬಾ. ಇದೊಂದು ಗುಡ್ಡ ಕೂತಂಗ ಆಗೇದ ತಲಿಮ್ಯಾಲೆ."

ಎರಡು ಮೂರು ತಿಂಗಳು ಒಂದೇ ಸಮನೆ ನರಕ ಅನುಭವಿಸಿದ ಗಂಡನ ಸೊರಗಿದ ಮುಖ ನೋಡಿ ವಿಜಯಳಲ್ಲಿ ಕನಿಕರದೊಡನೆ ಕೆಚ್ಚೂ ಮೂಡಿತು. ಕಿಟಿಕಿಯ ದಂಡೆಯ ಮೇಲೆ ಕೈಯಿಟ್ಟ ಗಂಡನ ಕೈಯ ಮೇಲೆ ಕೈಯಿಟ್ಟು ನೀವು ಚಿಂತೀ ಮಾಡಬ್ಯಾಡ್ರಿ. ನಾನು ನಿಮ್ಮನ್ನ ಬಿಟ್ಟ ಇರೂದು ಸಾಧ್ಯನs ಇಲ್ಲಾ. ವರ್ಗ ರದ್ದಾದ ಆರ್ಡರ ತಂದs ತೀರತೇನಿ. ಖಾತ್ರಿಲೆ ತರತೇನಿ" ಆವೇಶದಲ್ಲಿ ವಿಜಯಳ ಮುಖ ಕೆಂಪಾಗಿತ್ತು. ಧೈರ್ಯ ತುಂಬುವಂತೆ ಅಶೋಕ ಅವಳ ಕೈಯನ್ನು ಮೃದುವಾಗಿ ಹಿಚುಕಿದ.

***

ಸೆರಗು ಸರಿಪಡಿಸಿಕೊಳ್ಳುತ್ತ, ಪರ್ಸ್ ಎದೆಗೆ ಅವಚಿಕೊಂಡು ವಿಜಿಟರ್ಸ್ ರೂಮಿನಲ್ಲಿ ಕಾಲಿಟ್ಟಳು ವಿಜಯ. ಅಲ್ಲಿ ಕಾಯುತ್ತಿದ್ದ ಜನರನ್ನು ಒಂದು ಸಲ ನೋಡಿ, ಬೀಡಿ ಹೊಗೆಯನ್ನು ಉಗುಳುತ್ತ ಸ್ಟೂಲಿನ ಮೇಲೆ ಕುಳಿತೇ ಇದ್ದ ಸಿಪಾಯಿಯ ಕೈಯಲ್ಲಿ ತನ್ನ ಹೆಸರಿನ ಚೀಟಿಯನ್ನು ಕೊಟ್ಟು ಒಂದು ಮೂಲೆಯಲ್ಲಿ ಕುಳಿತಳು. ಅವನು ಇವಳನ್ನು ತಲೆಯಿಂದ ಕಾಲಿನವರೆಗೂ ಒಂದು ವಿಧವಾಗಿ ದಿಟ್ಟಿಸಿ ನೋಡಿ ಚೀಟಿ ಒಳಗೆ ತೆಗೆದುಕೊಂಡು ಹೋದ.

ಒಳಗಿನಿಂದ ಯಾರಾರೋ ಹೊರ ಬರುತ್ತಿದ್ದರು. ಮತ್ತೆ ಹೊರಗಿನವರು ಒಳಗೆ ಧಾವಿಸುತ್ತಿದ್ದರು. ಸಮಯ ಸರಿಯುತ್ತಿತ್ತು. ವಿಜಯ ಯೋಚನೆಯಲ್ಲಿಯೇ ಮುಳುಗಿದ್ದಳು. ಅಶೋಕನಿಗೆ ಮಂಜುನಾಥಯ್ಯ ರಜ ಕೊಡುವದಂತೂ ಕನಸಿನ ಮಾತು. ಮಕ್ಕಳು ಹಟ ಮಾಡಿದರೆ ಗಂಗೂ ಒಬ್ಬಳೇ ಹೇಗೆ ಸುಧಾರಿಸುತ್ತಾಳೋ? ಇಬ್ಬರೂ ಇಲ್ಲದಾಗ ಅಡಿಗೆ ಮನೆಯಲ್ಲಿ ಎಷ್ಟೆಷ್ಟು ಸಾಮಾನು ಕದಿಯುತ್ತಾಳೋ. ಓಹ್! ಸಣ್ಣದಾಗಿ ಉಸಿರು ಬಿಟ್ಟಳು. ತಲೆ ಭಾರವಾಗಿತ್ತು. ಹೊರಗೆ ಹೋಗಿ ಚಹಾ ಅಥವಾ ಕಾಫಿ ಕುಡಿದು ಬಂದರೆ ಹೇಗೆ ಎಂದು ಯೋಚಿಸುತ್ತಿದ್ದಂತೆ ಸಿಪಾಯಿ ಅವಳನ್ನು ಒಳಗೆ ಕರೆದ. ಅವಳೇ ಕೊನೆಯ ವಿಜಿಟರ್.

"ನಮಸ್ಕಾರ ಸಾರ್. ನಾನು ವಿಜಯಾ ದೇಸಾಯಿ" ಕೈಮುಗಿದು ನಿಂತ, ತೆಳು ದೇಹದ ನೀಳ ಜಡೆಯ ಸುಂದರಿಯನ್ನು ನೋಡಿ ಮಿ. ರಂಗಸ್ವಾಮಿ ಪೆನ್ನು ಮುಚ್ಚಿ ಫೈಲು ಅತ್ತ ಸರಿಸಿದರು.

'ಬನ್ನಿ, ಬನ್ನಿ ಕೂತ್ಕೊಳ್ಳಿ. ತುಂಬ ಹೊತ್ತಾಯಿತೇನೋ ನೀವು ಬಂದು. ಕೆಲಸ ಬಹಳವಿತ್ತು ನೋಡಿ. ವಿಜಿಟರ್ಸ್ ಬಂದೂ ಬಂದೂ ತಲೆ ತಿಂದುಬಿಟ್ಟರು. ಕೆಲಸ -ಕೆಲಸ ಕಾಗದ, ಫೈಲು, ಆರ್ಡರು, ವರ್ಗಾ ವರ್ಗಿ ! ಅಬ್ಬಬ್ಬ ತಲೆ ಚಿಟ್ಟು ಹಿಡಿದು ಹೋಗಿದೆ."

ಪೆಚ್ಚು ನಗೆ ನಗುತ್ತ ವಿಜಯ, 'ಸರ್, ನಾನೂ ಅದಕ್ಕೇ ಬಂದದ್ದು. ನನಗೆ ವರ್ಗ..."

ಅವರು ಅರ್ಧಕ್ಕೇ ತಡೆದರು. "ಓಃಐಸೀ, ಅಂದ ಹಾಗೆ ಈಗ ಮೊದಲು ಸ್ವಲ್ಪ ಕಾಫೀ ತಗೊಳ್ಳೋಣ.' ಸಿಪಾಯಿ ಇಬ್ಬರಿಗೂ ಕಾಫೀ ತಂದಿಟ್ಟ.

ಎಷ್ಟು ಒಳ್ಳೆಯವರು ಈ ಸಾಹೇಬರು! ದೊಡ್ಡ ಅಧಿಕಾರದಲ್ಲಿದ್ದರೂ ಸೊಕ್ಕಿನವರಲ್ಲ. ತನ್ನ ಕೆಲಸವಾಗುವುದು ಕಷ್ಟವಲ್ಲ ಎನ್ನಿಸಿ ಕಾಫಿ ಅಮೃತದಂತೆ ಗಂಟಲಲ್ಲಿಳಿಯಿತು. ಮುಗುಳ್ನಗೆ ಮುಖದ ತುಂಬ ಹರಡಿತು.

ಕಾಫಿ ಕಪ್ ಕೆಳಗಿಟ್ಟು ರಂಗಸ್ವಾಮಿ ತಟ್ಟನೆ ಸಿಪಾಯಿಯ ಕಡೆಗೆ ಹೊರಳಿದರು. 'ಜೀಪ್ ಬಂತೇನು ನೋಡೋ ಈಗಲೇ ಕೆಂಚನಹಳ್ಳಿಗೆ ಹೋಗಬೇಕು" ಎಂದು ಅವನನ್ನು ಕಳುಹಿಸಿ 'ನೋಡಿ ಮಿಸ್ ದೇಸಾಯಿ...."

"ಕ್ಷಮ್ಸಿ ಸರ್ ಮಿಸೆಸ್ ವಿಜಯಾ ಅಶೋಕ ದೇಸಾಯಿ."

"ಓಃ ಹಾಗೇನು? ನೀವು ಮದುವೆಯಾದವರ ಹಾಗೆ ಕಾಣೋದೇ ಇಲ್ಲ. ಇನ್ನೂ ಕಾಲೇಜು ಹುಡುಗಿಯ ಹಾಗೇ ಕಾಣ್ತೀರಿ" ವಿಜಯಳ ಕೆನ್ನೆ ಕೆಂಪಾಗಿ ಕೈ ಮಂಗಳಸೂತ್ರ ಮುಟ್ಟಿತು.

'ಬನ್ನಿ ವಿಜಯಾಃ ಈಗ ಸದ್ಯ ತುಂಬಾ ಅವರಸದಲ್ಲಿದ್ದೇನೆ. ಒಂದು ಹಳ್ಳಿಗೆ ಇನ್ಸ್‌ಪೆಕ್ಷನ್‌ಗೆ ಹೋಗಬೇಕು. ಬಹಳ ಅರ್ಜಂಟು. ಇವತ್ತು ಹೋಗಬೇಕು. ನಿಮ್ಮ ಆಕ್ಷೇಪಣೆ ಇಲ್ಲದಿದ್ದರೆ ನನ್ನ ಜೊತೆ ಜೀಪಿನಲ್ಲಿ ಬಂದ್ಬಿಡಿ. ಅಲ್ಲೇ ನಿಮ್ಮ ಕೇಸು ಏನೂಂತ ಕೇಳ್ಕೋತೀನಿ. ಸಾಧ್ಯವಿದ್ದರೆ ನಿಮ್ಮ ಕೆಲಸ ಮಾಡಿ ಕೊಟ್ಬೇ ಬಿಡ್ತೀನಿ. ನಾಳೆಯೇ ನೀವು ತಿರುಗಿ ಊರಿಗೆ ಹೋಗಬಹುದು. "

ವಿಜಯಳಿಗೂ ಅದು ಸರಿ ಅನ್ನಿಸಿತು. ಸಾಹೇಬರನ್ನು ಹಿಂಬಾಲಿಸಿ ಜೀಪನ್ನೇರಿದಳು. ಹಿಂದೆ ಕುಳಿತ ಜವಾನನ ತುಟಿಗಳ ವ್ಯಂಗ್ಯ ನಗೆ ಅವಳ ಕಣ್ಣಿಗೆ ಬೀಳುವದು ಸಾಧ್ಯವಿರಲಿಲ್ಲ. ದಾರಿಯಲ್ಲಿ ಅವಳ ತೊಂದರೆ ಏನು ಅಂತ ರಂಗಸ್ವಾಮಿ ಕೇಳಿ ತಿಳಿದುಕೊಂಡರು.

'ಓ ಇಷ್ಟೇನೇ? ಇದೇನು ಮಹಾ ಕೆಲಸ, ವರ್ಗ ರದ್ದು ಮಾಡೋದು ಅಲ್ಲವೇ? ಮಾಡೋಣವಂತೆ. ಸರಕಾರದಲ್ಲಿ ಕಾನೂನು ಇದೆ. ಗಂಡ ಹೆಂಡತಿ ನೌಕರಿ ಮಾಡ್ತಾ ಇದ್ದರೆ ಒಂದೇ ಊರಿನಲ್ಲಿ ಇರುವ ಅನುಕೂಲ ಮಾಡಿಕೊಡಬೇಕು ಅಂತ: ಅದರಲ್ಲೂ ಒಳ್ಳೇ ಶಿಕ್ಷಕಿ ನೀವು ನಿಮ್ಮಂತೋರಿಗೆ ತೊಂದರೆಯಾಗೋದನ್ನ ತಪ್ಪಿಸಲೇ ಬೇಕು."

"ಏನೋ ನನ್ನ ಕೈಲಾದ ಮಟ್ಟಿಗೆ ಶ್ರದ್ಧೆಯಿಂದ ಕಲಿಸ್ತೀನಿ, ಇದು ನಮ್ಮ ಕರ್ತವ್ಯ. ನೀವು ಭಾಳ ಹೊಗಳಲಿಕ್ಕೆ ಹತ್ತೀರಿ. ಇದು ನಿಮ್ಮ ಗೊಡ್ಡ ಗುಣಾ ತೋರಸ್ತದ." ನಾಚಿಕೆಯಿಂದ ಹೇಳುತ್ತ ವಿಜಯ ಗಾಳಿಗೆ ಪಟಪಟ ಹಾರುತ್ತಿದ್ದ ತನ್ನ ಸೆರಗು ಸರಿಮಾಡಿಕೊಂಡಳು. ರಂಗಸ್ವಾಮಿಯ ತೋಳು ತನ್ನ ಮೈಗೆ ತಾಕುತ್ತಿದ್ದರೂ ಅವಳಿಗೆ ಅರಿವಾಗಲಿಲ್ಲ.

ಊರ ಗೆಸ್ಟ್ ಹೌಸಿನಲ್ಲಿ ಅವಳನ್ನು ಇಳಿಸಿ ಹೋದ ರಂಗಸ್ವಾಮಿ ಇನ್ಸ್‌ಪೆಕ್ಷನ್ ಮುಗಿಸಿ ಬಂದೊಡನೆ ಅವರೊಡನೆ ಸೊಗಸಾದ ಭೋಜನವಾಯಿತು.

'ಬಂದ ಕೆಲಸವಾಯಿತು ವಿಜಯಾ, ಸ್ವಲ್ಪ ವಿಶ್ರಾಂತಿ ತಕ್ಕೊಂಡು ಬೆಂಗಳೂರಿಗೆ ಹೊರಡೋಣ. ಯಾಕೋ ತುಂಬಾ ಆಯಾಸ' ಎಂದು ಅವರು ಆಕಳಿಸಿದಾಗ ವಿಜಯ ಕನಿಕರದಿಂದ ಅವರತ್ತ ನೋಡಿ "ಆಗಲಿ ಸರ್, ಹಾಂಗs ಮಾಡ್ರಿ. ನೀವು ಇಲ್ಲೇ ಮಲಕೊಳ್ರಿ, ನಾನು ವರಾಂಡಾದಾಗ ಕೂತಿರ್ತೀನಿ' ಎಂದು ಅತ್ತ ತಿರುಗುತ್ತಿದ್ದಾಗ ಬೆಡ್ ರೂಮಿನ ಬಾಗಿಲು ಮುಚ್ಚಿ ಚಿಲಕ ಹಾಕಿದ ರಂಗಸ್ವಾಮಿ ಅವಳ ಎದುರಿಗೆ ನಿಂತಿದ್ದರು.

***

"ಯಾಕ? ವಿಜೂಃ ಹಿಂಗ್ಯಾಕ ಆಗೀದಿ? ಜ್ವರಾ ಬಂದಾವೇನು? ಮುಖಾ ಬತ್ತಿ ಹೋಗೇದ" ಸಂಜೆ ಮನೆಗೆ ಬರುತ್ತಿದ್ದಂತೆ ಶಾಲಿನಿ ಗಾಬರಿಯಿಂದ ಸ್ವಾಗತಿಸಿದಳು.

ಕುರ್ಚಿಯ ಮೇಲೆ ಕುಸಿದ ವಿಜಯ ಮುಖ ಮುಚ್ಚಿ ಬಿಕ್ಕಿದಳು. ಶಾಲಿನಿಗೂ ಏನೂ ತೋಚಲಿಲ್ಲ. ಹತ್ತಿರ ಬಂದು ಅವಳ ಹಣೆ ಮುಟ್ಟಿ ನೋಡಿ ಜ್ವರವಿಲ್ಲವೆಂದು ತಿಳಿದ ಮೇಲೆ ಮತ್ತೆ ಮತ್ತೆ ಪ್ರಶ್ನೆ ಹಾಕಿದ. ಶಾಲಿನಿ ಒಳಗೆ ಹೋಗಿ ಚಹ ತಂದುಕೊಟ್ಟಳು. ಚಹ ಕುಡಿದು ಸ್ವಲ್ಪ ಸುಧಾರಿಸಿಕೊಂಡ ಮೇಲೆ ಎಲ್ಲ ಸಂಗತಿಯನ್ನು ತಾನೇ ಹೇಳುತ್ತಾಳೆ ಎನ್ನುವ ಭರವಸೆಯಿತ್ತು ಶಾಲಿನಿಗೆ.

'ವಿಜೂs ನೀ ಹೋದ ಕೆಲಸ ಆಗಲಿಲ್ಲೇನು ? ಅದನs ಮನಸ್ಸಿಗೆ ಹಚ್ಚಿಕೊಂಡೀ ಏನು?"

"ಆಯ್ತು ಶಾಲಿನಿ, ನನ್ನ ವರ್ಗ ರದ್ದಾಯ್ತು"

"ಮತ್ತ ಯಾಕ ಅಳತೀ? ನನಗಂತೂ ತಿಳೀವೊಲ್ಲದಾಗೇದ, ಕೆಲಸ ಆದದ್ದಕ್ಕ ಸಂತೋಷ ಪಡಬೇಕಲ್ಲಾ"

"ಅಂ ಹೌದು. ಸಂತೋಷ ಪಡಬೇಕು. ಆದರ ನನಗೆ ಅಳು ಬರಲಿಕ್ಕೆ ಹತ್ತೇದ. ಯಾಕಂದರ ಅಂದರ ಒಂದು ಆಕ್ಸಿಡೆಂಟ್ ಆತು..."

"ಏನೋ ನೀ ಹೋಗೂ ಬಸ್ಸಿಗೆ ಆಕ್ಸಿಡೆಂಟ್ ಆಯ್ತs? ಯಾರರೆ ಸತ್ತರೇನು? ನಿನಗ ಪೆಟ್ಟಾತೇನು?"

"ಇಲ್ಲಾ ನನಗೆ ಪೆಟ್ಟ ಆಗಿಲ್ಲಾ, ಆದರ ಒಂದು ಕೂಸು ಸತ್ತಿತು. ಎಷ್ಟು ಥಂದ ಇತ್ತು ಅಂತೀ, ಸಣ್ಣ ಕೂಸು, ಸ್ವಲ್ಪ ಹೊತ್ತಿನ ಹಿಂದೆ ನಕ್ಕೋತ ಇದ್ದ ಕೂಸು ನನ್ನ ಕಣ್ಣ ಮುಂದs ಸತ್ತು ಹೋತು ಅಂದಾಗ ನಂಬಲಿಕ್ಕೇ ಆಗಲಿಲ್ಲಾ. ಈ ಜೀವನ ಎಷ್ಟು ನಶ್ವರ ಅದ ಅನಿಸ್ತು. ಇನ್ನೊಂದು ಘಳಿಗೆ ಏನಾಗ್ತದ ಅನ್ನೂದು ಗೊತ್ತs ಇರೂದಿಲ್ಲ. ಆದರೂ ಬದುಕಲಿಕ್ಕೆ ಎಷ್ಟು ಬಡದಾಡತೀವಿ. ಆ ಕೂಸಿನ ತಾಯಿ ಅಳೂದು ನೋಡಿ ಹೊಟ್ಯಾಗ ಸಂಕಟ ಆತು" ವಿಜಯ ಮತ್ತೆ ಭೋರೆಂದು ಅತ್ತೇ ಬಿಟ್ಟಳು.

ವಿಜಯಳ ಬೆನ್ನು ನೇವರಿಸುತ್ತ ಶಾಲಿನಿ, 'ಇರಲಿ ಬಿಡು ವಿಜೂ ನೀ ಭಾಳ ಮೆತ್ತನ ಮನಸ್ಸಿನಾಕಿ, ಜೀವನ ಅಂದ ಮ್ಯಾಲೆ ಸಾವು-ನೋವು, ಸುಖಾ-ದುಃಖಾ ಎಲ್ಲಾ ಇರೂದ. ಬೆಂಗಳೂರಾಗಂತೂ ಇಂಥಾ ಆಕ್ಸಿಡೆಂಟು ದಿನಾ ಆಗತಿರತಾವ. ಹೊರಗೆ ಹೋದವರು ತಿರುಗಿ ಮನೀಗೆ ಬರತಾರೆ ಅನ್ನೂ ಭರೋಸs ಇರೂದಿಲ್ಲಾ. ಆದರೂ ಇಲ್ಲಿ ಮಂದಿ ಹೊರಗ ಹೋಗುದು ಬಿಡೂದಿಲ್ಲ. ಮತ್ತ ಹೊರಗೆ ಹೋದವರು ಎಲ್ಲಾದರೂ ಸಾಯೂದಿಲ್ಲಾ. ಇಲ್ಲೇ ಸತ್ತರ ಅಲ್ಲೆ ಹುಟ್ಟಿರತಾರ. ಇಲ್ಲಿ ಕಳಕೊಂಡವರಿಗೆ ಅಲ್ಲೆ ಬ್ಯಾರೆ ಏನೋ ಸಿಕ್ಕಿರತದ. ಹಿಂಗs ಹೌದಲ್ಲೋ ಜೀವನ ನಡದಿರೂದು,. ಸುಮ್ಮನಾಗು, ಅಳಬ್ಯಾಡಾ. ಅವರು ಬಂದರು ಕಾಣ್ತದ ಏಳು ಮುಖಾ ತೊಳಕೋ." ವಿಜಯಳ ಕೈ ಹಿಡಿದು ಎಬ್ಬಿಸಿದಳು.

"ಶಾಲೂ, ನಾ ನಾಳೆ ಮುಂಜಾನೆ ಮೊದಲನೇ ಬಸ್ಸಿಗೆ ಊರಿಗೆ ಹೋಗತೀನಿ" ಎನ್ನುತ್ತ ಒಳಗೆ ನಡೆದ ವಿಜಯಳಿಗೆ ಶಾಲಿನಿ ಚೇಷ್ಟೆ ಮಾಡಿದಳು.

'ಹೌದು ನೋಡು. ನೀನು ನಿನ್ನ ಗಂಡನ ಬಿಟ್ಟು ಬಂದು ಮೂವತ್ತಾರು ತಾಸಾಯ್ತು."

ಬಸ್ಸಿನ ಕಿಟಕಿಯಲ್ಲಿ ಹೆಂಡತಿಯನ್ನು ಕಂಡು ದೂರದಿಂದಲೇ ಅಶೋಕ ಕೈ ಬೀಸಿ ನಕ್ಕ.

ಎಷ್ಟು ದೂರದಿಂದ ನನ್ನ ಗುರುತು ಹಿಡಿದರಲ್ಲ ಇವರು, ತಾನಿನ್ನೂ ಮೊದಲಿನಾಂಗs ಕಾಣಿಸ್ತೀನೇನು? ಏನೇನೂ ಬದಲಾಗಿಲ್ಲ! ಖರೇನ? ತನ್ನ ಮೈ, ಕೈ, ಕಾಲುಗಳನ್ನು ನೋಡಿಕೊಂಡಳು. ಸಪ್ಪಗಾದ ಮುಖ ಮಾತ್ರ ಅವಳಿಗೆ ಕಾಣುವಂತಿರಲಿಲ್ಲ. ಇಳಿಯುತ್ತಿದ್ದ ವಿಜಯಳ ಬಗಲಿನ ಏರ್‌ಬ್ಯಾಗಿಗೆ ಕೈಚಾಚಿದಾಗ ಅಶೋಕನ ಕೈ ಅವಳ ಬೆತ್ತಲೆ ಬೆನ್ನಿಗೆ ತಾಕಿತು. ಅಬ್ಬ! ತನ್ನ ಮೈ ಜುಂ ಅಂದಿತು. ನಾಚಿಕೆ ತುಂಬಿ ಬಂದಿತು. ಎಲ್ಲಾ

ಮೊದಲಿನಾಂಗ ಆಗ್ತದ. ಏನೇನೂ ಫರಕ ಇಲ್ಲಾ. ಆದರೂ ಗಂಡನನ್ನು ನೇರವಾಗಿ ನೋಡಲಿಲ್ಲ ವಿಜಯ, ಅವನ ದೃಷ್ಟಿ ತಪ್ಪಿಸಿ ಅತ್ತಿತ್ತ ನೋಡುತ್ತಿದ್ದಳು. ಅವಳ ಈ ಪರಿ ಅಶೋಕನಿಗೆ ಹೊಸದು. ಏನೋ ಸಂಶಯ ಮೂಡಿ, ಬಗ್ಗಿ ಅವಳ ಕಿವಿಯಲ್ಲಿ ಪಿಸುಗುಟ್ಟಿದ.

"ಹೋದ ಕೆಲಸ ಆಗಲಿಲ್ಲೇನು ವಿಜೂs?" ದನಿಯಲ್ಲಿ ನಿರಾಶೆ ಇಣುಕುತ್ತಿತ್ತು.

"ಆಯ್ತಲ್ಲ, ವರ್ಗ ರದ್ದಾದ ಆರ್ಡರ್ ತಂದೇನಿ" ಈಗಲೂ ವಿಜಯ ಗಂಡನತ್ತ ನೋಡಲಿಲ್ಲ.

'ಹುರ್ರಾ' ಎಂದು ಅಶೋಕ ಕೇಕೆ ಹಾಕಿ ನಕ್ಕ. ಸುತ್ತಮುತ್ತ ಇದ್ದ ಜನರನ್ನು ಲೆಕ್ಕಿಸದೆ. ಬಯಸಿದ ವಸ್ತು ಕೈಗೆ ಸಿಕ್ಕೊಡನೆ ಹಿಗ್ಗಿ ಕುಣಿಯುವ ಮಗುವಿನಂತೆ ಕಾಣುತ್ತಿದ್ದ ಗಂಡನನ್ನು ವಿಜಯ ಮೊದಲ ಬಾರಿ ದಿಟ್ಟಿಸಿ ನೋಡಿದಳು. ಅವನು ಕಣ್ಣು ಮಿಟುಕಿಸಿದ, ಛೀ! ಮುಗ್ಧ ಮಗುವಿನಂಥ ಗಂಡ, ಸುಚೀ, ಸುಷ್ಮಾರ ಜೊತೆಗೆ ಇವನೂ ಒಂದು ಮಗು. ತನ್ನನ್ನು ಇಷ್ಟೊಂದು ಪ್ರೀತಿಸುವ, ಬಿಟ್ಟು ಇರಲೂ ಇಷ್ಟ ಪಡದ ಗಂಡನನ್ನು, ಪುಟ್ಟ ಮಕ್ಕಳನ್ನು ಮರೆತು ನಿನ್ನೆ ರಾತ್ರಿಯೆಲ್ಲಾ ಸಾವನ್ನೆ ಬಯಸಿದ್ದೆನಲ್ಲ ತಾನು. ಇನ್ನು ಊರಿಗೆ ಹೋಗಲೇಬಾರದು. ಗಂಡನಿಗೆ ಮುಖ ತೋರಿಸಲೇ ಬಾರದು. ಇಲ್ಲಿಯೇ ಸತ್ತು ಊರಿಗೆ ಹೋಗಬೇಕು ಎನ್ನುವ ಯೋಚನೆ ತುಂಬಾ ಕಾಡಿತ್ತು. ಆದರೆ ಸಾಯಲು ಧೈರ್ಯ ಮಾತ್ರ ಬರಲಿಲ್ಲ. ಎಂಥ ಹೇಡಿ ತಾನು ಎಂದು ತನ್ನ ಬಗ್ಗೆಯೇ ಜಿಗುಪ್ಸೆ ಪಟ್ಟು ಕೊಂಡಿದ್ದಳು. ಬಸ್ಸಿಗೆ ಹತ್ತಿದ ಮೇಲೂ ನಿಜವಾಗಿಯೂ ಆಕ್ಸಿಡೆಂಟ್ ಆಗಿ ತಾನು ಸಾಯಬಾರದೇ ಎಂದು ಆಸೆಪಟ್ಟಿದಳು. ಊಹೂಂ; ಸಾವು ಬರಲಿಲ್ಲ. ತಾನು ಸತ್ತು ಹೋಗಿದ್ದರೆ ಈ ಮೂವರ ಪಾಲಿಗೆ ಬದುಕು ಹೇಗಿರುತ್ತಿತ್ತು ? ಅಬ್ಬಾ ! ಊಹಿಸಲು ಸಾಧ್ಯವಿಲ್ಲ. ಆದರೂ ಗಂಡನ ಜೊತೆಗೆ ಹೆಜ್ಜೆ ಹಾಕದೆ ವಿಜಯ ಅತ್ತಿತ್ತ ನೋಡುತ್ತಿದ್ದಳು.

"ವಿಜೂs ನಿನ್ನೆ ರಾತ್ರೆಲ್ಲಾ ನನಗ ನಿದ್ದೀನ ಬರಲಿಲ್ಲ ವಿರಹ ತಾಪದಿಂದ. ಒಂದು ರಾತ್ರಿ ನೀ ಇರದಿದ್ದರ ನನಗ ಭಣಭಣಾ ಅನಸತದ. ಇನ್ನ ವರ್ಗ ರದ್ದು ಆಗಿರದಿದ್ದರ ನಾನು ಹುಚ್ಚ ಆಗಿಬಿಡತಿದ್ದೆ. ಹೌದಲ್ಲೋ? ಅಲ್ಲs ಏ ಹುಡುಗೀ, ನೀ ನಿದ್ದೀ ಮಾಡಿದಿ ಏನು? ಅಂ ಖರೇ ಹೇಳು ಮತ್ತ?"

"ಇಲ್ರೀ ನನಗೂ ನಿದ್ದಿ ಬರಲಿಲ್ಲಾ" ಎಂದಳು ವಿಜಯ ಅತ್ತಿತ್ತ ಹುಡುಕು ನೋಟ ಬೀರುತ್ತ.

"ಅಲ್ಲs ನಾ ಏನೇನೋ ಮಾತಾಡೇ ಮಾತಾಡ್ತಿನಿ. ನೀ 'ಅಂ', 'ಊಂ' ಅಂತೀದಿ. ಯಾಕ? ಏನರೆ ಕಳಕೊಂಡೀ ಏನು? ಏನು ಹುಡಕತೀ?"

"ಹಾಂ ನಾ ಏನೋ ಕಳಕೊಂಡೀನಿ ಅನಸತಿತ್ತು. ಏನು ಅಂತ ನೆನಪು ಆಗವೊಲ್ಲದಾಗಿತ್ತು. ಈಗ ನೆನಪಾತು ನೋಡ್ರಿ. ನಂದು ಬಿಳೀ ಎಂಬ್ರಾಯ್ಡರಿ ಕರಚೀಫು ಇತ್ತಲ್ಲ. ಅದನ್ನs ಬೆಂಗಳೂರಾಗ ಕಳಕೊಂಡಾಂಗ ಅನಸ್ತದ."

"ಅಯ್ಯ ಹುಚ್ಚೀ, ಕರಚೀಫs ಹ್ಹ ಹ್ಹ ಹ್ಹ. ಹೋದರ ಹೋಗಲಿ ಬಿಡು. ಅಂಥಾ ಡಜನ್ ಕರಚೀಫ್ ಕೊಡಸತೇನಿ ನಿನಗ. ಮೊದಲ ಮನೀಗೆ ನಡೀ. ಸುಚೀ, ಸುಷ್ಮಾ ಒಂಟಿಗಾಲಿನ ಮ್ಯಾಲೆ ನಿಂತಾರ 'ಅವ್ವ ಯಾವಾಗ ಬರತಾಳ ' ಅಂತ. ನಡೀ." ಅವಳ ಭುಜದ ಸುತ್ತ ಕೈ ಹಾಕಿ ಮನೆಯತ್ತ ನಡೆಸಿದ.

***

■■

# ಕಳಚಿ ಬಿದ್ದ ಪೈಜಣ

ಹಿಂದಿನ ರಾತ್ರಿ ಔತಣಕೂಟ, ಪಾನ ಸಮಾರಂಭವೆಲ್ಲ ಭರ್ಜರಿಯಾಗಿತ್ತು. ಎಲ್ಲ ಮುಗಿದು, ಬಂದವರೆಲ್ಲ ಹೊರಟು ಹೋದ ಮೇಲೆ ಪ್ರಭಾಕರ ಹಾಯೆಂದು ರೇಶಿಮೆಯಂಥ ಸುಪ್ಪತ್ತಿಗೆಯ ಮೇಲೆ ಮಲಗಿ, ನಿದ್ದೆ ಬಾರದೆ ಹೊರಳಾಡುತ್ತಿದ್ದ. ಪಿ.ಎ ಮೆಲ್ಲಗೆ ಬಾಗಿಲು ತಟ್ಟಿ ಒಳಗೆ ಬಂದು, "ಇನ್ನೂ ಏನಾದರೂ ಬೇಕೇನು ಕೇಳ್ರಿ, ಸಾಹೇಬ್ರು ಬೇಜಾರು ಪಡ್ಕೊಬಾರದು ಅಂತ ವೀರಣ್ಣ ಕೇಳ್ತಾನ್ರೀ ಸರ್" ಎಂದ. ಅದರ ಅರ್ಥ ಇಬ್ಬರಿಗೂ ಗೊತ್ತು. ಕೇಳಿದವನಿಗಂತೂ ಮೊದಲೇ ಗೊತ್ತು . ಪ್ರಭಾಕರ ಮಾತನಾಡದೇ ಸನ್ನೆಯಿಂದಲೇ ಬೇಡವೆಂದು ತಿಳಿಸಿ ಬಾಗಿಲು ಮುಚ್ಚಿ ತುಂಬ ಹೊತ್ತು ಹೊರಳಾಡಿದರೂ ಏನೇನೊ ನೆನಪುಗಳು ಬಂದು ಮುತ್ತಿ ನಿದ್ದೆಯನ್ನು ದೂರ ಮಾಡಿದ್ದವು. ಸರಿರಾತ್ರಿ ಕಳೆದ ಮೇಲೆಯೇ ಜೊಂಪು ಹತ್ತಿತ್ತು.

ಬೆಳಗಿನಲ್ಲಿ ಪಕ್ಷಿಗಳ ಕಿಲಿ ಕಿಲಿ ಶಬ್ದದಿಂದ ಬಹುಬೇಗ ಎಚ್ಚರವಾಗಿತ್ತು ಪ್ರಭಾಕರನಿಗೆ. ಡಾಕ್ ಬಂಗ್ಲೆ ನಿಶ್ಶಬ್ದವಾಗಿತ್ತು. ಸಪ್ಪಳ ಮಾಡದೆ ವರಾಂಡಾ ದಾಟಿ, ಹೊರಗೆ ಬಂದು ತೋಟಕ್ಕೆ ಹೋದ. ತರತರದ ಹೂವಿನ ಗಿಡಗಳು, ಆಕಾಶ ಮಲ್ಲಿಗೆಯ ಎತ್ತರವಾದ ಗಿಡಗಳ ಗುಂಪು, ನೀರಿನ ಕಾರಂಜಿ ಎಲ್ಲವೂ ಹಾಗೆಯೇ ಇತ್ತು. ಇಪ್ಪತ್ತೈದು ವರ್ಷ ಹಿಂದಿನಂತೆಯೇ. ಕೆಲವು ಹೂವಿನ ಗಿಡಗಳು ಹೆಚ್ಚಾಗಿದ್ದವು. ಅಲ್ಲಲ್ಲಿ ಕೂತು ವಿರಾಮ ಪಡೆಯಲು ಸಿಮೆಂಟು ಬೆಂಚುಗಳನ್ನು ಕಟ್ಟಲಾಗಿತ್ತು ಅಷ್ಟೇ. ಮಂತ್ರಿಗಳು ಬರುತ್ತಾರೆಂದು ಮಾಲಿ ಮುತುವರ್ಜಿ ವಹಿಸಿ ತೋಟವನ್ನು ಕಸಕಡ್ಡಿಗಳಿಲ್ಲದೇ ಸ್ವಚ್ಛವಾಗಿಟ್ಟಿದ್ದ. ಪ್ರಭಾಕರ ಎಲ್ಲವನ್ನೂ ದಾಟಿ ಹೋಗಿ ತೋಟದ ಕೊನೆಗೆ ಇದ್ದ ಬೆಂಚಿನ ಮೇಲೆ ಕುಳಿತ. ಶುದ್ಧವಾದ ತಂಗಾಳಿಯನ್ನು ಕಣ್ಣುಮುಚ್ಚಿ ನೀಳವಾಗಿ ಉಸಿರಾಡಿದ. ಕಣ್ಣುತೆರೆದು ದೂರದವರೆಗೆ ದೃಷ್ಟಿ ಹಾಯಿಸಿದ, ಆಕಾಶ ನಿಧಾನವಾಗಿ ಕೆಂಪೇರುತ್ತಿತ್ತು. ಮಂಜಿನ ಮುಸುಕು ಹಾಕಿದ ಬೆಟ್ಟಗಳು ದೂರದವರೆಗೂ ಸಾಲುಸಾಲಾಗಿ ಕಾಣುತ್ತಿದ್ದವು. ಡಾಕ್ ಬಂಗ್ಲೆ ಇದ್ದದ್ದು ಕಲ್ಲುಗಳಿಂದ ತುಂಬಿದ ಎತ್ತರವಾದ ಗುಡ್ಡದ ಮೇಲೆ. ಗುಡ್ಡದ ಕೆಳಗಿದ್ದ ರಾಮಪುರದಿಂದ ಹೊರಟು ದಾರಿಗಡ್ಡ ನಿಂತ ಬಂಡೆಗಲ್ಲುಗಳನ್ನು ಅಂಕುಡೊಂಕಾಗಿ ಹಾವಿನಂತೆ ಸುತ್ತು ಬಳಸಿದ ಟಾರ್ ರೋಡ್ ಡಾಕ್ ಬಂಗ್ಲೆಯನ್ನು ಮುಚ್ಚಿತ್ತು. ಪ್ರಭಾಕರ ಕುಳಿತ ಸ್ಥಳದಿಂದ ರಾಮಪುರದ ಎತ್ತರವಾದ ಕೆಲವು ಮನೆಗಳು, ಬಾಲ ಗೋಪಾಲನ ಗುಡಿ, ಅದರ ಮುಂದಿನ ಕಲ್ಯಾಣಿ, ಪೇಟೆಯ ಸ್ವಲ್ಪ ಭಾಗ, ನಾಯಕರ ಹಳೆಯ ಅರಮನೆಯ ಕೊನೆಯ ಅಂತಸ್ತು ಕಾಣುತ್ತವೆ. ಇವುಗಳನ್ನೆಲ್ಲ ರಕ್ಷಿಸಲು ನಿಂತ ಖಾಕಿ ಡ್ರೆಸ್ಸಿನ ಶಿಸ್ತಿನ ಸಿಪಾಯಿಗಳಂತೆ ಧೂಳು ಮುಸುಕಿದ ಬಂಡೆಗಲ್ಲುಗಳು ಸುತ್ತಮುತ್ತ ನಿಂತಿವೆ. ಮಕ್ಕಳು ಲಗೋರಿ ಆಡಲು ಕಲ್ಲುಗಳ ಮೇಲೆ ಕಲ್ಲುಗಳನ್ನು ಸೇರಿಸಿ ಇಟ್ಟಂತೆ ಕಾಣುವ ಆ ಬಂಡೆಗಲ್ಲುಗಳು ಯಾವಾಗ ಜಾರಿ ಕೆಳಗೆ ಬಿದ್ದು ಹಾದಿ ಹೋಕರ ತಲೆ ಒಡೆಯುವವೋ ಎಂದು ಭಯಪಡುವಂತಿವೆ. ಆದರೆ ನೂರಾರು ವರ್ಷಗಳಿಂದ ಅವು ಅಲ್ಲಿಯೇ ಸರ್ಕಸ್ಸಿನ ಸಾಹಸಿಗಳಂತೆ ಸಮತೋಲನ ಕಾಯುತ್ತ ನಿಂತಿವೆ.

ನೂರೈವತ್ತು ವರ್ಷಗಳ ಹಿಂದೆ ರಾಮಪುರವನ್ನು ಆಳಿದ ಪಾಳೆಯಗಾರ, ಕೆಚ್ಚೆದೆಯ ಭಂಟ ಭರಮ ನಾಯಕನ ಕಾರ್ಯ ಸಾಹಸಗಳನ್ನು ಕಂಡ ಆ ಬಂಡೆಗಳು ಅವನ ಅಟ್ಟಹಾಸಕ್ಕೆ ಮಾರ್ದನಿ ಕೊಡುತ್ತಿದ್ದವೆಂದು ತಮಗೆ ಇತಿಹಾಸ ಪಾಠ ಕಲಿಸುತ್ತಿದ್ದ ಜೋಶಿ ಮಾಸ್ತರರು ಹೇಳುತ್ತಿದ್ದುದನ್ನು ಪ್ರಭಾಕರ ಇನ್ನೂ ಮರೆತಿಲ್ಲ. ಮಾಸ್ತರರ ಹಿರಿಯರು ಪಾಳೆಯಗಾರರ ಆಸ್ಥಾನ ಜೋತಿಷಿಗಳಾಗಿ ಇದ್ದರಂತೆ. ಭರಮನಾಯಕನ ಉಚ್ಛ್ರಾಯ ಸ್ಥಿತಿಯಲ್ಲಿ ಉಜ್ವಲ ಭವಿಷ್ಯವನ್ನು ಬರೆದ ಜೋಯಿಸರಿಗೆ ನಾಯಕನ ಮರಿ ಮೊಮ್ಮಗನ ಕಾಲಕ್ಕೆ ಪಾಳೆಯಗಾರಿಕೆ ಕೈ ಬಿಡುವುದು ಎನ್ನುವುದೂ ಗೊತ್ತಿತ್ತಂತೆ. ಹಾಗೆಂದು ಮಾಸ್ತರರು ಬಡಾಯಿ ಕೊಚ್ಚುತ್ತಿದ್ದರು. ಅದು ನಿಜವೋ ಸುಳ್ಳೋ ಯಾರಿಗೆ ಗೊತ್ತು? ಪಾಳೆಯಗಾರಿಕೆ ಕೈ ಬಿಟ್ಟಿದ್ದಂತೂ ಪ್ರಭಾಕರ ಕಂಡಿದ್ದ.

ಜೋಶಿ ಮಾಸ್ತರರು ಕ್ಲಾಸಿನಲ್ಲಿ ಪಾಳೆಯಗಾರರ ಪುರಾಣ ಸುರು ಮಾಡಿದರೆ ಸಾಕು ಸುಮಿತ್ರೆಯ ಮುಖ ಅರಳುತ್ತಿತ್ತು. ಆ ದೊಡ್ಡ ದೊಡ್ಡ ಕಪ್ಪು ಕಣ್ಣುಗಳು, ತೀಡಿದ ಹುಬ್ಬು, ನೀಳವಾದ ಮೂಗು, ತೆಳು ತುಟಿ, ಬಳುಕುವ ದೇಹ, ಸುಮಿತ್ರೆ ನಿಜಕ್ಕೂ ಪದ್ಮಿನಿ ಜಾತಿಯ ಹೆಣ್ಣು. ಅವಳ ಸಾದಗಪ್ಪು ಬಣ್ಣದಿಂದಾಗಿ ಪ್ರಭಾಕರ ಶಿಲಾಬಾಲಿಕೆ ಎಂದು ಅವಳಿಗೆ ಅಡ್ಡ ಹೆಸರೂ ಇಟ್ಟಿದ್ದ. ಹದಿನೈದು ವರ್ಷಕ್ಕೇ ತನ್ನ ಮೈಮಾಟದಿಂದ ನೋಡುವವರ ಕಣ್ಣು ಸೆಳೆಯುತ್ತಿದ್ದಳು ಸುಮಿತ್ರೆ. ಚಿಕ್ಕಂದಿನಲ್ಲಿಯೇ ತಬ್ಬಲಿಯಾದ ಸುಮಿತ್ರೆಯನ್ನು ಅಜ್ಜ ಅಮ್ಮ ಅಚ್ಚೆಯಿಂದಲೇ ಬೆಳೆಸಿದ್ದರು. ಶಾಲೆಯಲ್ಲಿ ಎಲ್ಲದರಲ್ಲಿಯೂ ಅವಳಿಗೆ ಅಗ್ರಸ್ಥಾನ. ಅವಳ ಅಜ್ಜ ಪಾಳೆಯಗಾರನಾದರೆ ತನ್ನ ತಂದೆ ಮಾಮಲೇದಾರ! ತಾನೇನು ಕಡಿಮೆ ಎನ್ನುತ್ತಿದ್ದ ಪ್ರಭಾಕರ. ತಂದೆಯೊಡನೆ ನಾಲ್ಕು ಊರು ತಿರುಗಾಡಿ ಗೌಡ ಕುಲಕರ್ಣಿಯವರಿಂದ ಮುಜುರೆ ಮಾಡಿಸಿಕೊಳ್ಳುತ್ತಿದ್ದ. ತನಗೆ ಸುಮಿತ್ರೆಯನ್ನು ಚೇಷ್ಟೆ ಮಾಡುವುದು, ಪೀಡಿಸುವುದು ತುಂಬ ಸಂತೋಷದ ಸಂಗತಿ. ಉಳಿದ ಹುಡುಗರು, ಜೋಶಿಯವರ ಹಾಗೆ ಅದೇ ಊರಿನವರೇ ಆದ ಮಾಸ್ತರರು ಇವರೆಲ್ಲ ಸುಮಿತ್ರೆಗೆ ಕೊಡುವ ಗೌರವವನ್ನು ನೋಡಿ ನನಗೆ ಉಕ್ಕಿ ಬರುವ ನಗು, ಪ್ರಭಾಕರನ ಚೇಷ್ಟೆಯ ಮಾತು, ಮೊಂಡು ಧೈರ್ಯ, ಟೀಕೆ-ಟಿಪ್ಪಣಿಗಳು ಸುಮಿತ್ರೆಗೆ ಇಷ್ಟವಾಗಿದ್ದುದರಿಂದಲೇ ಅವರಿಬ್ಬರನ್ನೂ ಹತ್ತಿರಕ್ಕೆ ತಂದಿದ್ದವು....

ಒಂದು ದಿನ ಶಾಲೆಯಲ್ಲಿ ಸುಮಿತ್ರೆಯ ಕಾಲಿನ ಬೆಳ್ಳಿಯ ಪೈಜಣ ಕಳಚಿ ಬಿದ್ದದ್ದು ಪ್ರಭಾಕರನ ಕೈಗೆ ಸಿಕ್ಕಿತ್ತು. ಬಹಳ ಹುಡುಕಾಡಿ ಕೊನೆಗೆ ಅತ್ತು ಕರೆದು ಕಣ್ಣು ಕೆಂಪಗೆ ಮಾಡಿಕೊಂಡು ಶಾಲೆ ಬಿಟ್ಕೊಡನೆ ಸುಮಿತ್ರೆ ಮನೆಗೆ ಹೊರಟಿದ್ದಳು. ಅವಳು ಅರಮನೆಯ ಗೇಟಿಗೆ ಬಂದಾಗ ಪ್ರಭಾಕರ ಹತ್ತಿರ ಬಂದು, 'ಸುಮೀ....' ಎಂದ ಓಗೊಡದೆ ಅವಳು ಹೊರಳಿ ನೋಡಿದಳು. ಮುಖ ಬಾಡಿತ್ತು. ಕಣ್ಣು ಕೆಂಪಗಾಗಿ ಊದಿಕೊಂಡಿದ್ದವು. ಪ್ರಭಾಕರನ ಜೀವ ಚುರ್ರ್ ಎಂದಿತು. ಪೈಜಣ ಎತ್ತಿ ಅವಳ ಮುಖಕ್ಕೆ ಹಿಡಿದಿದ್ದ. ತಕ್ಷಣ ಇಂದ್ರಜಾಲ ಮಾಡಿದಂತೆ ಮುಖದಲ್ಲಿ ಬದಲಾವಣೆ, ನಗುವ ಕಣ್ಣುಗಳು, ಕಂಪಿಸುತ್ತಿದ್ದ ತುಟಿಗಳು, ಕೆಂಪೇರಿದ ಕೆನ್ನೆ, ಏರಿಳಿಯುತ್ತಿದ್ದ ಎದೆ, ಪೈಜಣ ಅವಳ ಕೈಯಲಿಟ್ಟ ಪ್ರಭಾಕರ ತಟ್ಟನೆ ಬಗ್ಗಿ ಅವಳ ಕೆನ್ನೆಗೆ ಮುತ್ತು ಕೊಟ್ಟಿದ್ದ. ಅತ್ತ ಲಕ್ಷ್ಯಕೊಡದ ಮುಗ್ಧೆ ಸುಮಿತ್ರೆ "ಪ್ರಭಾ ಪೈಜಣ ಸಿಕ್ಕಿತು ಛೊಲೋ ಆತು. ಇದನ್ನ ಕಳಕೊಂಡು ಬಂದರ ಹೊಡತಾ ಕೊಡ್ತೀನಿ ಅಂದಿದ್ಲು ಅಜ್ಜಿ" ಎಂದಿದ್ದಳು. ಅವಳ ಸಂತೋಷದಲ್ಲಿ ಪ್ರಭಾಕರ ಮನಃ ಪೂರ್ವಕ ಭಾಗಿಯಾಗಿದ್ದ.

ಹೆಜ್ಜೆ ಸಪ್ಪಳ ಮಾಡದೆ ಹತ್ತಿರ ಬಂದಿದ್ದ ಪಿ.ಎ. 'ಸರ್' ಎಂದ ಪ್ರಭಾಕರ ಕಣ್ಣು ತೆರೆದು ಎದ್ದು ಬಂಗ್ಲೆಯತ್ತ ನಡೆದ.

***

ರಾಮಪುರದ ಕಾಲೇಜಿನ ಹೊಸ ಕಟ್ಟಡ ಊರ ಹೊರಗೆ ಇನ್ನೊಂದು ಗುಡ್ಡದ ಕೆಳಗೆ ವಿಶಾಲವಾದ ಮೈದಾನವಿತ್ತು. ಪಾಳೆಯಗಾರ ತಿಮ್ಮಪ್ಪ ನಾಯಕರ ಹೊಲವನ್ನು ಅವರ ಮಕ್ಕಳು ಊರಿನ ಶ್ರೀಮಂತರಿಗೆ ಮಾರಿಕೊಂಡಿದ್ದರು. ಅದನ್ನು ಕೊಂಡುಕೊಂಡಿದ್ದ ಶ್ರೀಮಂತ ಪುಢಾರಿ ವೀರಣ್ಣ ಕಾಲೇಜ ಕಟ್ಟಲು ಜಾಗವನ್ನು ದಾನವಾಗಿ ಕೊಟ್ಟು ಕಟ್ಟಡಕ್ಕೆ ಲಕ್ಷ ರೂಪಾಯಿಗಳನ್ನು ದೇಣಿಗೆ ನೀಡಿದ್ದ. ಅಂದಿನ ಸಭೆಯಲ್ಲಿ ಕಾಲೇಜಿನ ಉದ್ಘಾಟನೆಯೊಡನೆ ಮಂತ್ರಿ ಪ್ರಭಾಕರರಾಯರಿಂದ ವೀರಣ್ಣನ ಸನ್ಮಾನವೂ ನಡೆಯುವದಿತ್ತು. ಹೊತ್ತಿಗೆ ಸರಿಯಾಗಿ ಬಂಗ್ಲೆಗೆ ಬಂದ ಆತಿಥೇಯ ವೀರಣ್ಣನೊಡನೆ ಪ್ರಭಾಕರ ಕಾರಿನಲ್ಲಿ ಬೆಟ್ಟವನ್ನಿಳಿದು ಕಾಲೇಜು ಕಡೆಗೆ ಹೊರಟ. ಕಾರು ಊರಿನ ನಡುವೆ ಹಾಯ್ದು ಬರುವಾಗ ವೀರಣ್ಣ ಮಂತ್ರಿಗಳಿಗೆ ಊರಿನ ಪರಿಚಯ ಮಾಡಿಕೊಡುತ್ತಿದ್ದ. ಹೊಸ ಸರಕಾರಿ ಆಸ್ಪತ್ರೆ, ಮಾರ್ಕೆಟ್, ಬಾಲವನ, ಎಲ್ಲವನ್ನು ತನ್ನ ನೇತೃತ್ವದಲ್ಲಿ ಕಟ್ಟಿಸಿದ್ದು ಎಂದು ಜಂಬ ಕೊಚ್ಚಿಕೊಂಡ. 'ನೀಲಾಂಜನ' ಟಾಕೀಜಿನ ಭವ್ಯ ಕಟ್ಟಡವನ್ನು ನೋಡಿದ ಪ್ರಭಾಕರ ಅದು ವೀರಣ್ಣನದೇ ಸ್ವಂತ ತುರಾಯಿ ಎನ್ನುವದನ್ನು ಮೌನವಾಗಿ ಕೇಳಿಕೊಂಡ. ಮುಂದಿನ ಓಣಿ ದಾಟಿದೊಡನೆ ಪ್ರಭಾಕರ ಕುತೂಹಲದಿಂದ ಕಿಟಕಿಯತ್ತ ಬಗ್ಗಿದ.

"ತಿಮ್ಮಪ್ಪನಾಯಕರ ಹೆಸರು ಕೇಳಿರಬಹುದಲ್ಲ ಸರ್, ಅವರದೇ ಹಳೇ ಅರಮನೆ" ಕಾರು ಗೇಟಿನ ಬಳಿ ಬಂದಾಗ ಪ್ರಭಾಕರ ಡ್ರೈವರನ ಬೆನ್ನು ತಟ್ಟಿ ಕಾರು ನಿಲ್ಲಿಸಿ ತಾನೇ ಬಾಗಿಲು ತೆಗೆದು ಅವಸರದಿಂದ ಕೆಳಗಿಳಿದ. ವೀರಣ್ಣ ನಿರ್ವಾಹವಿಲ್ಲದೆ ಅವನನ್ನು ಹಿಂಬಾಲಿಸಿದ.

"ಒಂದು ಕಾಲಕ್ಕೆ ದೊಡ್ಡ ಪಾಳೆಯಗಾರರು ಸರ್, ರಾಮಪುರದ ನಾಯಕರು. ಈಗ ಎಲ್ಲಾ ಕಳಕೊಂಡು ಮೂಲಿಗೆ ಬಿದ್ದಾರ. ಅರಮನಿ ನೋಡ್ರಿ ಹೆಂಗ ಹಾಳು ಸುರೀತದ."

ದೊಡ್ಡ ಗೇಟಿನಿಂದ ಫರ್ಲಾಂಗು ದೂರವಿದ್ದ ಅರಮನೆಯ ಮುಂದಿನ ಹೂದೋಟದಲ್ಲಿ ಈಗ ಮೊಣಕಾಲೆತ್ತರ ಹುಲ್ಲು ಬೆಳೆದಿತ್ತು. ಅರಮನೆಯ ಸುತ್ತು ಇದ್ದ ಪ್ರಾಕಾರದ ಗೋಡೆ ಅಲ್ಲಲ್ಲಿ ಬಿದ್ದುದರಿಂದ ಊರಿನ ಬಿಡಾಡಿ ದನಗಳು, ಕತ್ತೆಗಳು ಸಲೀಸಾಗಿ ಒಳಗೆ ಬಂದು ಆರಾಮ ಪಡೆಯುತ್ತಿದ್ದವು. ಇವರನ್ನು ಕಂಡು ಕತ್ತೆಯೊಂದು ಅರಚುತ್ತ ಓಡಿಹೋಯಿತು. ಅಡ್ಡ ಬಂದ ನಾಯಿಗೆ ಪಿ.ಎ. ಕಲ್ಲು ಬೀಸಿದ. ಅರಮನೆಯ ಒಂದು ಹೆಬ್ಬಾಗಿಲು ಕಿತ್ತು ಬುಡಮೇಲಾಗಿ ಬಿದ್ದಿತ್ತು. ಇಪ್ಪತ್ತೈದು ವರ್ಷಗಳ ಹಿಂದೆ ಸ್ವಲ್ಪಮಟ್ಟಿಗಾದರೂ ಸುಸ್ಥಿತಿಯಲ್ಲಿದ್ದ ಕಟ್ಟಡ ಈಗ ಶಿಥಿಲಗೊಂಡಿದ್ದರಿಂದ ಕಲ್ಲು ಒಂದೊಂದೇ ಸಡಿಲಾಗಿ ಕಳಚಿ ಬಿದ್ದು ಅಲ್ಲಲ್ಲಿ ಕಲ್ಲು ಮಣ್ಣಿನ ರಾಶಿಯಿತ್ತು., ಸುಣ್ಣಬಣ್ಣವಿಲ್ಲದೆ ಹೊರ ಗೋಡೆ ಬಣ್ಣಗೆಟ್ಟು, ಮಳೆನೀರಿನಿಂದ ಪಾಚಿಗಟ್ಟಿ ಕರ್ರಗಾಗಿ ಅಸಹ್ಯವಾಗಿ ಕಾಣುತ್ತಿತ್ತು. ಜಾಲಂದರಗಳೆಲ್ಲ ಬಿರುಕು ಬಿಟ್ಟು ಅರ್ಧಮರ್ಧ ಕಳಚಿ ಬಿದ್ದಿದ್ದವು. ಒಂದು ಕಿಟಕಿಗೂ ಬಾಗಿಲುಗಳಿರಲಿಲ್ಲ. ಪ್ರಭಾಕರ ವಿಚಾರ ಮಗ್ನನಾಗಿ ಒಂದೊಂದನ್ನೇ ನೋಡುತ್ತ ಒಳಗೆ ಹೊರಟಿದ್ದ. ವೀರಣ್ಣ ಪಿಸುದನಿಯಲ್ಲಿ "ನಾಯಕರ ಆರು ಮಂದಿ ಮಕ್ಕಳು ಪಾಲು ಬೇಡಿ ಈ ಮನೀ ಹಂಚಿಕೊಂಡಾರ. ಒಳಗ ಅವರ ಅಂತಃಪುರ ಅದ. ಘೋಷಾದ ಹೆಣ್ಣುಮಕ್ಕಳು ಅದಾರ್ರಿ ಸರ್" ಎಂದ. ಸ್ಮಶಾನದಂತಿದ್ದ ಭಯ ಹುಟ್ಟಿಸುವಷ್ಟು ನಿಶ್ಶಬ್ದವಾಗಿದ್ದ ಅರಮನೆಯಲ್ಲಿ ಜೀವಂತ ಜನರಿದ್ದಾರೆ ಎಂದರೆ ಪ್ರಭಾಕರನಿಗೆ ಆಶ್ಚರ್ಯ, "ಯಾರಿದ್ದಾರೆ? ಇಂಥಾ ಮನಿಯೊಳಗ" ಎಂದ ಕೂಡಲೇ ವೀರಣ್ಣ "ನಾಯಕರ ದೊಡ್ಡ ಮಕ್ಕಳು ಮೂರು ಮಂದಿ ತೀರಿಕೊಂಡಾರ, ಇಬ್ಬರು ಊರು ಬಿಟ್ಟು ಹೋಗ್ಯಾರ, ಇಲ್ಲೇ ಇರುವವರು ಅಂದರ ನಾಯಕರ ಕಿರಿಮಗಾ ರಾಮನಾಯಕರಿ ಸರ್", "ಹೌದೇ" ಎನ್ನುವಂತೆ ಆಶ್ಚರ್ಯದಿಂದ ಹುಬ್ಬೇರಿಸಿದ ಪ್ರಭಾಕರನಿಗೆ ವೀರಣ್ಣ ಇನ್ನಷ್ಟು ಮಾಹಿತಿ ಒದಗಿಸಿದ. "ಆದರ ರಾಮನಾಯಕರು ಅರ್ಧಾಂಗವಾಯು ಆಗಿ ಹಾಸಿಗೆ ಹಿಡಿದ ಹದಿನೆಂಟು ವರ್ಷ ಆದೂವರಿ. ಮಾತಾಡಲಿಕ್ಕೂ ಬರೂದಿಲ್ಲ. ಅವರು, ಅವರ ರಾಣಿ ಸಾಹೇಬರು, ಅವರ ಮಗಾ ಇಷ್ಟು ಮಂದಿ ಇಲ್ಲೆ ಇರತಾರ್ರಿ." ಪ್ರಭಾಕರ ಹಿಂದಿರುಗಿ ಹೊರಟು ಗೇಟಿನ ಹತ್ತಿರ ಬಂದಾಗ ನಿಂತು ಮತ್ತೆ ಅರಮನೆಯತ್ತ ನಿಟ್ಟಿಸಿದ. ಅವನ ಹೃದಯದ ಕೋಲಾಹಲ ಮುಖದ ಮೇಲೆ ಮೂಡಿತ್ತು. ಜಣ್... ಜಣ್... ಜಣ್ ಬೆಳ್ಳಿ ಗೆಜ್ಜೆಯ ಮಧುರ ನಿನಾದ ಕಿವಿಯಲ್ಲಿ ಮೊರೆಯಿತು. ಮೂರಂತಸ್ತಿನ ಕೋಣೆಯ ಕಿಟಕಿಯಲ್ಲಿ ನೆರಳೊಂದು ಸರಿಯಿತು. ಪ್ರಭಾಕರ ಮಾತನಾಡದೆ ತಿರುಗಿ ಬಂದು ಕಾರನ್ನೇರಿದ.

***

ಕಾಲೇಜಿನ ಕಟ್ಟಡದ ಪ್ರಾರಂಭೋತ್ಸವವಾದ ಮೇಲೆ ವೇದಿಕೆಗೆ ಬಂದ ಮಂತ್ರಿ ಮಹಾಶಯರಿಗೆ ವಿದ್ಯಾರ್ಥಿನಿಯರಿಂದ ಸ್ವಾಗತ ಗೀತೆ, ಬೇರೆ ಬೇರೆ ಸಂಘ ಸಂಸ್ಥೆಗಳಿಂದ ಮಾಲಾರ್ಪಣೆ, ಪ್ರಜಾ ಜನರಿಂದ ಮನವಿಗಳು, ಬೇಡಿಕೆಗಳ ಸಲ್ಲಿಕೆ, ಇತ್ಯಾದಿ ಎಲ್ಲ ಮುಗಿದ ಮೇಲೆ ಬಹುಮಾನಿತರಿಗೆ ಮಂತ್ರಿಗಳ ಅಮೃತಹಸ್ತದಿಂದ ಪ್ರಶಸ್ತಿ ವಿತರಣೆ ಎಂದರು ಕಾರ್ಯನಿರ್ವಾಹಕರು. ಪ್ರಭಾಕರ ತನ್ನ ಹಸ್ತಗಳತ್ತ ನೋಡಿ ನಕ್ಕು ಎದ್ದು ಬಹುಮಾನ ಕೊಡತೊಡಗಿದ. 'ಲಕ್ಷ್ಮಣ ನಾಯಕ' ಎಂದು ಕರೆದಾಗ ವೇದಿಕೆಯನ್ನೇರಿ ಬಂದ ಯುವಕನನ್ನು ಕಂಡು ಬೆರಗಾಗಿ ಅವನನ್ನೇ ಎವೆಯಿಕ್ಕದೇ ನೋಡಿದ ಪ್ರಭಾಕರ. ನಗುವ ಕಪ್ಪು ಕಣ್ಣುಗಳು ಅವನ ಹೃದಯದ ಆಳವನ್ನೇ ಮೀಟಿದವು.

ಹತ್ತಿರವಿದ್ದ ಪ್ರಾಚಾರ್ಯರು ವಿನೀತರಾಗಿ ಮೆಲುದನಿಯಲ್ಲಿ ಪರಿಚಯಿಸಿದರು. ಪಾಳೆಗಾರ ತಿಮ್ಮಪ್ಪ ನಾಯಕರ ಮೊಮ್ಮಗ ರಾಮನಾಯಕರ ಮಗ - ನಮ್ಮ ಕಾಲೇಜಿನ ಕೊನೆಯ ವರ್ಷದ ವಿದ್ಯಾರ್ಥಿ." ಬಹುಮಾನ ಕೊಟ್ಟು, ಎರಡೂ ಕೈಗಳಿಂದ ಅವನ ಬಲಗೈ ಹಿಡಿದು ಆತ್ಮೀಯತೆಯಿಂದ ಅಲುಗಿಸಿದ ಪ್ರಭಾಕರ. ಆ ಮೃದು ಸ್ಪರ್ಶ ಅವನನ್ನು ಮತ್ತೆ ಹಿಂದೆ ವರ್ಷಗಳಷ್ಟು ಹಿಂದೆ ಎಳೆಯಿತು......

ಊರಿಗೆ ಹೊರಟ ಪ್ರಭಾಕರ ಅಂದು ಸುಮಿತ್ರೆಯ ಭೆಟ್ಟಿಗೆ ಬಂದಾಗ ಪ್ರೀತಿಯಿಂದ ವಿಶ್ವಾಸದಿಂದ ಅವನ ಕೈ ಹಿಡಿದಳು:

"ಪ್ರಭಾ, ನೀನು ಗಂಡು ಹುಡುಗ, ಕಾಲೇಜು ಕಲೀಲಿಕ್ಕೆ ಹೊಂಟಿ, ಕಲಿತು ಸಾಹೇಬ ಆಗೂವವಾ. ನಾನು - ಹೆಣ್ಣು ... ಸಾಲೀ ಮುಗಿಸಿ ಮನೀಯೊಳಗೆ ಮೂಲಿ ಹಿಡದು ಕೂಡ್ರತೇನಿ." ತುಂಬಾ ಬೇಸರದಲ್ಲಿದ್ದಳು ಸುಮಿತ್ರೆ.

"ನಿಮ್ಮಜ್ಜ ನಿನ್ನ ಮೂಲಿಯೊಳಗ ಕುಡ್ರೂಸೂದಿಲ್ಲ ಸುಮೀ. ರಾಮನಾಯಕಗ ಮದುವೀ ಮಾಡಿ ಸೊಸಿನ್ನ ಮಾಡಿಕೋತಾರಂತ ಕೇಳಿದ್ದೆ. ಇನ್ನೇನು ಬಿಡು ನೀನು ಪಾಳೇಗಾರತಿ, ನಮ್ಮಂಥಾ ಬಡವರನ್ನ ಯಾಕ ನೆನಸತಿ?"

ಸುಮಿತ್ರೆಯ ಕಣ್ಣುಗಳಲ್ಲಿ ನೀರು ಚಿಮ್ಮಿದವು. "ಎಲ್ಲಾ ಗೊತ್ತಿದ್ದರೂ ಹಂಗಸತೀಯಾ ಪ್ರಭಾ ? ಪಾಳೇಗಾರ ಅನ್ನೂ ಹೆಸರ ಬಿಟ್ಟರ ಈಗ ಅಜ್ಜಾಗ ಏನ ಉಳದದ? ತುಂಬಿದ ಮನೀ, ಆಳು ಕಾಳು ಎಲ್ಲಾ ಹೋಗಿ ಬರೇದ ಆಗೇದ. ಅಜ್ಜಿ ದಾಸಿಗೆ ಪಗಾರಾ ಕೊಡಲಿಲ್ಲಾ ಅಂತ ಬಿಟ್ಟು ಹೋದ್ಲು. ಅದಕ್ಕ ಈಗ ಅಜ್ಜಿ ತಾನ ಕಸಾ ಗುಡಿಸಿ, ಅಜ್ಜನ ಸೇವಾ ಮಾಡಿ, ಒಬ್ಬರಿಗೂ ತಿಳೀದಾಂಗ ಎಲ್ಲಾ ಮಾಡಿ ಮುಗಿಸಿ ಕೂಡ್ರತಾಳ."

"ಹೌದು, ಒಂದು ದಿನಾ ನಿಮ್ಮಜ್ಜ ಅಪ್ಪನ ಮುಂದ ಎಲ್ಲಾ ಹೇಳಿಕೊಂಡರಂತ. ಸರಕಾರದಿಂದ ಹೆಚ್ಚಿಗಿ ಹಣಾ ಸಿಗೂ ಹಾಂಗ ಮಾಡಲಿಕ್ಕೆ ಬರತಿದ್ದರ ಪ್ರಯತ್ನ ಮಾಡಬೇಕು ಅಂತಿದ್ರಂತ. ದಿನ ದಿನಕ ನಿಮ್ಮ ಪರಿಸ್ಥಿತಿ ಕೆಡಲಿಕ್ಕೆ ಹತ್ತೇದ ಅಂತಿದ್ರು ಅಪ್ಪ."

" ಇಂತಾ ಮನೀಯೊಳಗ ವಿದ್ಯಾ, ಬುದ್ಧಿ, ಗುಣಾ ಒಂದೂ ಇಲ್ಲದ ರಾಮನಾಯಕನ ಹೆಂಡತಿ ಆಗಿ ನಾನು ಎಷ್ಟು ಸುಖದಿಂದ ಇದ್ದೇನು ಪ್ರಭಾ ಈಗ ಏನು ಮಾಡಲಿ?"

ಉತ್ತರಿಸಲು ಕಠಿಣವಾಗಿದ್ದ ಸುಮಿತ್ರೆಯ ಪ್ರಶ್ನೆಗೆ ಏನೂ ಮಾತನಾಡದೆ ನಿಧಾನವಾಗಿ ಅವಳ ಕೈ ಬಿಟ್ಟು ಕಣ್ಣೀರೊರೆಸಿದ್ದ ಪ್ರಭಾಕರ....

ಲಕ್ಷ್ಮಣ ಯಾವಾಗಲೋ ವೇದಿಕೆ ಇಳಿದು ಹೋಗಿದ್ದ. ಮುಂದಿನ ವಿದ್ಯಾರ್ಥಿ ಬಂದು ನಿಂತಾಗ ಪ್ರಭಾಕರ ಯಾಂತ್ರಿಕವಾಗಿ ಕೈ ಚಾಚಿದ.

***

ಸಭೆಯ ಕಾರ್ಯಕಲಾಪಗಳನ್ನೆಲ್ಲ ಮುಗಿಸಿ ಬಂಗ್ಲೆಗೆ ಬಂದು, ಬೇಡವಾಗಿದ್ದರೂ ಅತಿಥಿಗಳೊಡನೆ ಹರಟುತ್ತ ಊಟ ಮಾಡಿ, ವಿಶ್ರಾಂತಿ ಪಡೆಯಲು ಎದ್ದ ಪ್ರಭಾಕರನಿಗೆ ಪಿ.ಎ. ನೆನಪಿಸಿದ. "ಸರ್, ಮೂರು ಗಂಟೇಕ ನಾವು ಇಲ್ಲಿಂದ ಲಕ್ಷ್ಮಣಪುರಕ್ಕ ಹೊರಡಬೇಕು. ಅಲ್ಲೇ ನಾಲ್ಕಕ್ಕ ತಾವೊಂದ ಮೀಟಿಂಗ್ ಕರೆದೀರಿ."

ಮತ್ತೆ ಹಾಸಿಗೆಯ ಮೇಲೆ ಹೊರಳಾಡಿದ ಪ್ರಬಾಕರ ಎದ್ದು ಕಿಟಕಿಯ ಬಳಿ ನಿಂತು ದೂರದವರೆಗೆ ದೃಷ್ಟಿ ಹಾಯಿಸಿದ. ಒಂದು ಕಾಲಕ್ಕೆ ಸುಮಿತ್ರೆಯ ಅಜ್ಜನ ಹವಾಮಹಲ್ ಆಗಿತ್ತು ಆ ಬಂಗ್ಲೆ. ಸುಮಿತ್ರೆಗೆ ಬೆಟ್ಟ ಹತ್ತಿ ಬಂದು, ಇಲ್ಲಿ ನಿಂತು ದೂರದವರೆಗೂ ಹಬ್ಬಿದ ಬೆಟ್ಟಗಳನ್ನೂ, ಕೊಳ್ಳಗಳನ್ನೂ ಒಂದಾನೊಂದು ಕಾಲಕ್ಕೆ ಅಜ್ಜನ

ಆಸ್ತಿಯಾಗಿದ್ದ ಪೇರಲ, ಸೀತಾಪೇರಲದ ತೋಟಗಳನ್ನೂ ನೋಡುವದೆಂದರೆ ತುಂಬ ಖುಷಿ. ಅವುಗಳಿಗೆಲ್ಲ ತಾನೇ ಮಾಲಿಕಳೇನೋ ಎನ್ನುವಂತೆ ನೋಡುವಳು. ಅವಳು ಹಾಗೆ ಮೈ ಮರೆತು ನೋಡುವಾಗ ಪ್ರಭಾಕರ ಆಕಾಶ ಮಲ್ಲಿಗೆಯ ಹೂವಿನಿಂದ ಕಿವಿಯಲ್ಲಿ ಕಚಗುಳಿ ಇಟ್ಟು ಅವಳ ಧ್ಯಾನ ಭಂಗ ಮಾಡುವನು. ಅವಳ ನೀಳವಾದ ಜಡೆ ಹಿಡಿದೆಳೆಯುವನು. ಅವಳು ಹೊಡೆಯಲು, ಬೆನ್ನಟ್ಟಿದರೆ ಕೈಗೆ ಸಿಗದೆ ಓಡುವನು, ಅವರಿಬ್ಬರ ಕಿಲಕಿಲ ನಗುವಿನಿಂದ ಜೀವತಳೆದ ಬಂಡೆಗಳೂ ನಗುವವು....

ಹೊರಗೆ ರಂಗಪ್ಪ ಯಾರೊಡನೆಯೋ ಮಾತನಾಡುತ್ತಿದ್ದ. ಹೆಣ್ಣು ಧ್ವನಿ? ಪ್ರಭಾಕರನ ಕಿವಿ ಚುರುಕಾದವು. "ರಂಗಪ್ಪಾ....." ಎಂದ ರಂಗಪ್ಪ ಒಳಗೆ ಬಂದು ಹೇಳಿದ. ಸಾಹೇಬರ ನಿಮ್ಮನ್ನು ಭೆಟ್ಟಿ ಆಗಲಿಕ್ಕೆ ಹೆಣ್ಮಕ್ಕಳು ಬಂದಾರ್ರಿ. ಮಲಗ್ಯಾರ ಅಂತ ಹೇಳಿದೆ. ನಾ ಆ ತನಕಾ ಇಲ್ಲೇ ಕೂತು ಕಾಯ್ತೀನಿ ಅಂದರ್ರಿ" ಪ್ರಭಾಕರನ ಎದೆ ಬಡಿತ ಹೆಚ್ಚಿತು. ಕಿಟಕಿಯ ದಂಡೆಗೆ ಆತುಕೊಂಡೇ ಹೇಳಿದ, "ನಾ ಮಲಗೂದಿಲ್ಲಾ, ಒಳಗ ಕಳಿಸು ಅವರನ್ನ."

ಜರಿಯಂಚಿನ ಗುಲಾಬಿ ರೇಶಿಮೆ ಸೀರೆಯನ್ನುಟ್ಟು, ಜರದ ಕಸೂತಿ ಮಾಡಿದ ಕೆಂಪು ಶಾಲನ್ನು ತಲೆತುಂಬ ಹೊದ್ದುಕೊಂಡ ಮಧ್ಯ ವಯಸ್ಸಿನ ಹೆಣ್ಣುಮಗಳು ಒಳಗೆ ಬಂದಳು. ಅವಳು ಎರಡೂ ಕೈ ಜೋಡಿಸುವ ಮೊದಲೇ ಪ್ರಭಾಕರ ಹುಡುಗನಂತೆ ಅವಳ ಕೈ ಹಿಡಿದು ತಂದು ಕಿಟಕಿಯ ಹತ್ತಿರ ನಿಲ್ಲಿಸಿ ಹೇಳಿದ, "ಸುಮೀ .... ನಾ ಇಲ್ಲೆ ನಿಂತು ಏನು ನೋಡತಿದ್ದೆ ಗೊತ್ತದೇನು?" ಸುಮಿತ್ರೆ ಗಾಬರಿಯಿಂದ ಅಗಲವಾದ ಕಣ್ಣುಗಳಿಂದ ಅವನ ಮುಖವನ್ನೇ ದಿಟ್ಟಿಸುತ್ತಿದ್ದಳು. "ಕೆಂಪು ಲಂಗ ಹಾಕಿ, ಹಳದಿ ದಾವಣಿ ಹೊತ್ತು ಮದರಂಗಿ ಹಚ್ಚಿ ಕೆಂಪಾದ ಬಿಳಿ ಪಾದಗಳಿಗೆ ಹಾಕಿದ ಬೆಳ್ಳಿಯ ಪೈಜಣ ಸಪ್ಪಳ ಮಾಡ್ತಾ ಓಡುವ ಹುಡುಗೀನ ನೋಡ್ತಿದ್ದೆ. ಆಕಿ ಹೋಗಿ ಆ ಪಾರಿಜಾತ ಗಿಡದ ಕೆಳಗ ನಿಂತ್ಲು. ನಾನು ಗಿಡಾ ಅಲ್ಲಾಡಿಸಿದೆ. ಆಕಿ ಮೈತುಂಬ ತಲಿತುಂಬ ಬಿಳಿ ಕೆಂಪು ಪಾರಿಜಾತದ ಮಳೀ ಸುರೀತು."

ಮೈಮರೆತು ಮಾತನಾಡುತ್ತಿದ್ದ ಪ್ರಭಾಕರನ ಕೈ ಹಿಡಿದು, "ಪ್ರಭಾ ನೀ ಇನ್ನೂ ನನ್ನ ಮರತಿಲ್ಲಾ ?" ಎಂದಳು ಸುಮಿತ್ರೆ. ಪ್ರಭಾಕರ ಉತ್ತರ ಕೊಡದೆ ಅವಳ ಹೆಗಲ ಸುತ್ತ ಕೈ ಬಳಸಿ ಕಿಡಕಿಯತ್ತ ತಿರುಗಿಸಿದ. ಮೌನ ದೀರ್ಘವಾಯಿತು. ಮಾತು ಇಬ್ಬರಿಗೂ ಬೇಕಿರಲಿಲ್ಲ.

ಆದರೆ ಕಾಲ ನಿಲ್ಲುವುದಿಲ್ಲವಲ್ಲ....! ಹಜಾರದ ಗೋಡೆ ಗಡಿಯಾರ ಮೂರು ಗಂಟೆ ಬಾರಿಸಿತು. ಸುಮಿತ್ರೆ ಎಚ್ಚತ್ತು "ಪ್ರಭಾ.... ನಮ್ಮ ಮನೀ ಪರಿ....." ಅರ್ಧದಲ್ಲೇ ತಡೆದು ಪ್ರಭಾಕರ, "ನನಗ ಎಲ್ಲಾ ಗೊತ್ತದ ಸುಮೀ....ನಾ ಮುಂಜಾನೆ ಅರಮನಿಗೆ ಬಂದಿದ್ದೆ" ಎಂದು ಉಸಿರು ಎಳೆದ.

"ನೀ ಬಂದದ್ದು ನಾನೂ ನೋಡಿದೆ. ವೀರಣ್ಣ ಹೇಳಿದಾ ನೀನು ಮೂರು ಗಂಟೇಕ ರಾಮಪುರ ಬಿಡತೀ ಅಂತ, ಅದಕ್ಕ ಅವಸರ ಮಾಡಿ ನಾ ಬಂದೆ. "ಪ್ರಭಾಕರನ ಮನದಲ್ಲಿ ಎದ್ದ ಪ್ರಶ್ನೆ ಅರ್ಥವಾಯಿತೆನ್ನುವಂತೆ ತಲೆ ತಗ್ಗಿಸಿದಳು ಸುಮಿತ್ರೆ.

"ಪ್ರಭಾ, ನಿನಗೆ ಎಲ್ಲಾ ಗೊತ್ತದ ಅಂತ ತಿಳಿದಿದ್ದೀ. ಆದರ ವೀರಣ್ಣಾ ಹಣಾಕೊಟ್ಟು ನನ್ನ ದೇಹ, ರೂಪ ಕೊಂಡಕೊಂಡಾನ ಅನ್ನೂದು ನಿನಗ ಗೊತ್ತಿಲ್ಲಾ."

"ಸುಮೀ ...." ಪ್ರಭಾಕರ ಆವೇಶದಿಂದ ಕೂಗಿದ.

"ಪ್ರಭಾ.... ತನ್ನ ಪಾಲಿಗೆ ಬಂದ ಆಸ್ತಿ ಎಲ್ಲಾ ಕಳದು, ಬಂಗಾರ, ಬೆಳ್ಳಿ, ಸೂಳೀ ಮನೀ ತುಂಬಿ, ಮ್ಯಾಲೆ ಗಂಡ ಅನ್ನಿಸಿಕೊಂಡಾವಾ ಗುಣಾ ಆಗದಂಥಾ ಜಡ್ಡಿನಿಂದ ಹಾಸಿಗಿ ಹಿಡಿದಾ. ಆವಾಗ ನಾ ಏನು ಮಾಡಬೇಕಾಗಿತ್ತು? ಮನುಷ್ಯ ಹವಾ ತಿಂದು ಬದುಕಲಿಕ್ಕಂತೂ ಸಾಧ್ಯ ಇಲ್ಲಾ. ಅಜ್ಜ ಅಮ್ಮ ತೀರಿಕೊಂಡಾಗ ಲಕ್ಷ್ಮಣ ಸಣ್ಣ ಕೂಸು.

ನನಗ ಯಾರು ದಿಕ್ಕೂ ಇದ್ದಿದ್ದಿಲ್ಲಾ. ಮೂರು ಜೀವಾ ಉಳಸಲಿಕ್ಕೆ ವೀರಣ್ಣನ ಸೂಳಿ ಆದೆ. ಆದರ ಇನ್ನೂ ತನಕಾ ಅವನೂ ನಾಯಕರ ಮನೀ ಮರ್ಯಾದಿ ಕಾಯ್ದುಕೊಂಡು ಬಂದಾನ" ಪ್ರಭಾಕರನ ಕೈ ತನ್ನ ಎರಡೂ ಕೈಯಲ್ಲಿ ತೆಗೆದುಕಂಡು ಕಣ್ಣಿಗೊತ್ತಿಕೊಂಡು ಹೇಳಿದಳು ಸುಮಿತ್ರೆ. "ಮನಸ್ಸಿಲ್ಲದೆ ರಾಮನಾಯಕನ್ನ ಮದುವಿ ಆದಾಗನ ನಾನು ಸೂಳಿ ಆಗಿದ್ದೆ ಪ್ರಭಾ. ಹೃದಯ ನಿನಗ ಕೊಟ್ಟೆ, ಮೈ ಅವರಿಬ್ಬರಿಗೂ ಕೊಟ್ಟೆ ಹೋಗಲಿ ಬಿಡು, ಅದೆಲ್ಲಾ ಯಾಕೀಗ. ನನ್ನ ಮಗಾ ಈ ವರ್ಷ ಬಿ. ಎ. ಆಗ್ತಾನ ಅವನಿಗೊಂದು ನೌಕರಿ ಕೊಡಸ್ತೀಯಾ? ಅದನ್ನ ಕೇಳಲಿಕ್ಕೆ ಬಂದೆ ಇಲ್ಲಿಗೆ."

ಸುಮಿತ್ರೆಯ ಕಳಚಿ ಬಿದ್ದ ಪೈಜಣವನ್ನು ತಾನು ಮತ್ತೆ ಹುಡುಕುವುದು ಸಾಧ್ಯವೇ ಎಂದು ಪ್ರಭಾಕರ ಯೋಚಿಸುತ್ತಿದ್ದ.

***

■■

# ಮಗು

ಎಲ್ಲಿ ನೋಡಿದರೂ ಜನ... ಜನ... ಗಂಡಸರು, ಹೆಂಗಸರು ಮಕ್ಕಳು, ಮುದುಕರು ಎಲ್ಲರನ್ನೂ ತುಂಬಿಕೊಂಡ ರೈಲು ಹಳಿಗಳ ಮೇಲೆ ಓಡುತ್ತಲೇ ಇತ್ತು. ಇಳಿಯುವವರು ತಮ್ಮ ಸ್ಟೇಶನ್ ಬಂದೊಡನೆ ಗಂಟು ಗದಡಿ ಸಮೇತ ಇಳಿಯುತ್ತಿದ್ದರೂ ಅದರ ಎರಡರಷ್ಟು ಜನ ಮತ್ತೆ ಡಬ್ಬಿಗಳಲ್ಲಿ ತುಂಬುತ್ತಿದ್ದುದರಿಂದ ಎಲ್ಲ ಕಡೆಗೂ ಗದ್ದಲವೇ ತುಂಬಿತ್ತು. ಬೆಲೆ ಬಾಳುವ ಅರಿವೆ ಹಾಕಿಕೊಂಡು ವಿದ್ಯಾವಂತರಂತೆ ಕಾಣುವ ಕೆಲವರು ಆ ಗದ್ದಲದಲ್ಲಿಯೂ ಜನರನ್ನು ಅತ್ತಿತ್ತ ಸರಿಸಿ ಕುಳಿತುಕೊಳ್ಳಲು ಸ್ಥಳ ಮಾಡಿ ಕೊಂಡಿದ್ದರು. ಮೈಕೈಯಿಂದ ಪುಷ್ಟರಾಗಿದ್ದು ಬಲಯುತರಾಗಿದ್ದವರು ಉಳಿದವರನ್ನು ಒತ್ತೊತ್ತಿ ಅರಾಮವಾಗಿ ಕುಳಿತು ಕಾಲು ಚಾಚಿದ್ದರು. ಇನ್ನುಳಿದ ಬಾಯಿ ಸತ್ತವರು, ಬಲಹೀನರು, ಕೆಳಗೆ ಕುಳಿತುಕೊಂಡೋ, ನಿಂತುಕೊಂಡೋ ಪ್ರಯಾಣ ಬೆಳೆಸಿದ್ದರು. ಅವರನ್ನು ಅವರ ಕೈಕಾಲುಗಳನ್ನು ತುಳಿದು, ಕಂಡೂ ಕಾಣದಂತೆ ಜನ ಅತ್ತಿತ್ತ ಅಡ್ಡಾಡುತ್ತಿದ್ದರು, ಕೆಲವರಂತೂ ಗದ್ದಲದಲ್ಲಿ ಸಿಕ್ಕು ನುಗ್ಗು ನುಗ್ಗಾಗಿ ನಿಲ್ಲಲೂ ಸ್ಥಳವಿಲ್ಲದೆ ಪಾಯಖಾನೆಯ ಬಾಗಿಲಿಗೆ ಆತುನಿಂತು ತಮ್ಮ ಸ್ಟೇಶನ್ ಯಾವಾಗ ಬರುವದೋ ಎಂದು ದಾರಿ ಕಾಯುತ್ತಿದ್ದರು.

ರಂಗಪ್ಪನ ಅದೃಷ್ಟಕ್ಕೆ ಮೊದಲು ಸೀಟಿನ ಅಂಚಿನಲ್ಲಿ ಕೂಡ್ರಲು ಸ್ಥಳ ಸಿಕ್ಕರೂ ಬರಬರುತ್ತ ಸರಿಯುತ್ತ, ಖಾಲಿಯಾದ ಸ್ಥಳವನ್ನು ಆಕ್ರಮಿಸಿ ಕೊಳ್ಳುತ್ತ ಈಗ ಆರಾಮವಾಗಿ ಕಿಡಕಿಯ ಹತ್ತಿರ ಪ್ರಶಸ್ತವಾಗಿ ಕುಳಿತಿದ್ದ. ಮಾತನಾಡಲು ತನ್ನ ಬುದ್ಧಿಮಟ್ಟದ ಜೊತೆಗಾರರು ಇಲ್ಲದ್ದರಿಂದ ಮತ್ತೆ ನೋಡಿದ ಮುಖಗಳನ್ನೇ ನೋಡಿ ನೋಡಿ ಬೇಸರ ಬಂದುದರಿಂದ ರಂಗಪ್ಪ ಕಿಡಕಿಗೆ ತಲೆ ಒರಗಿಸಿ ಕಣ್ಣು ಮುಚ್ಚಿದ. ಗಾಡಿಯ ವೇಗ ಕುಲುಕಾಟ ಚೆನ್ನಾಗಿ ಜೋಗುಳ ಹಾಡುತ್ತಿರುವಂತೆ ನಿದ್ರೆಯೂ ಹತ್ತಿತ್ತು. ಗಾಡಿ ಜೋರಾಗಿ ಸಿಳ್ಳು ಹಾಕಿದಾಗ ರಂಗಪ್ಪ ಬೆಚ್ಚಿಬಿದ್ದ. ಸ್ಟೇಶನ್ ಬಂದಿತ್ತು.

"ತಡೀಯಮ್ಮಾS ನಾವು ಮೊದಲು ಇಳೀತೀವಿ. ಹತ್ತಾಕ ಯಾಕ ಅವಸರಾ ಮಾಡ್ತೀದಿ"? ರಂಗಪ್ಪ ಹೊರಳಿ ನೋಡಿದ. ಮಗುವನ್ನು ಬಗಲಲ್ಲಿ ಎತ್ತಿಕೊಂಡು ಇನ್ನೊಂದು ಕೈಯಲ್ಲಿ ವೈರ್‌ಬ್ಯಾಗ್ ಹಿಡಿದ ತರುಣಿ ಹಿಂದೆ ಸರಿದು ನಿಂತಳು. ಮುಖ ಸರಿಯಾಗಿ ಕಾಣಲಿಲ್ಲ. ಕಿಡಕಿಯಿಂದ ಬಗ್ಗಿ ನೋಡಿದ. ಅದೇ ಹೊತ್ತಿಗೆ ಅವಳೂ ಇತ್ತ ಹೊರಳಿದಳು. ರಂಗಪ್ಪನ ಎದೆಯಲ್ಲಿ ಏನೋ ಸಿಕ್ಕಿಕೊಂಡಂತಾಯಿತು. ಬಡಿತದ ವೇಗ ಹೆಚ್ಚಿತು. ಸರಕ್ಕನೆ ಅವಳು ಮುಖ ತಿರುಗಿಸಿ ಬೇರೆ ಡಬ್ಬಿಯತ್ತ ತಿರುಗಿದಳು. ಅಷ್ಟರಲ್ಲಿ ಗಾರ್ಡ್ ಸೀಟಿ ಊದಿ ಹಸಿರು ಬಾವುಟ ತೋರಿಸಿದ. ಇಂಜಿನ್ ಸಿಳ್ಳು ಹಾಕಿದ್ದನ್ನು ಕೇಳಿದ ಅವಳು ಗಲಿಬಿಲಿಗೊಂಡು, ಅಸಹಾಯಕಳಾಗಿ ಅತ್ತಿತ್ತ ನೋಡಿ ಮತ್ತೆ ಡಬ್ಬಿ ಹತ್ತಿ ಒಳಬಂದಳು.

ತನ್ನ ಮಗಳು ಜಾನಕಿ!

ರಂಗಪ್ಪ ತನ್ನ ಸೀಟಿನಲ್ಲಿಯೇ ಮಿಸುಕಾಡಿದ. ಆದರೆ ಏಳಲಿಲ್ಲ. ಜಾನಕಿಯೇನು ಸಾಮಾನ್ಯಳಲ್ಲ. ರಂಗಪ್ಪನತ್ತ ತಿರುಗಿಯೂ ನೋಡದೆ ಬಿರ್ರನೆ ಬೇರೆ ಕಡೆಗೆ ಹೋದಳು. ಕುಳಿತಲ್ಲಿಯೇ ಕಣ್ಣು ಮುಚ್ಚಿದರೂ ರಂಗಪ್ಪನಿಗೆ ಈ ಸಲ ನಿದ್ದೆ ಬರುವಂತಿರಲಿಲ್ಲ.

"ರೀ ಮಿಸ್ಟರ ಸ್ವಲ್ಪ ಸರಿದು ಕೂಡ್ರಿ. ಪಾಪ ಈ ಹೆಣ್ಮಗಳು ಕೂಸನ್ನ ಎತ್ತಿಕೊಂಡು ನಿಂತಽ ಬಿಟ್ಟಾಳ ಹಾಂ, ಹಾಂಗS ಕೂಡ್ರವಾ ತಂಗಿ, ಇರಲಿ ಕೂಡು ಸಂಕೋಚ ಮಾಡಿಕೋಬ್ಯಾಡ. ಎಷ್ಟೊತ್ತು ನಿಂದರತಿ. ಕೂಡು, ನಾನೂ ನಿನ್ನ ತಂದಿ ಸಮಾನ ಅದೀನಿ."

ಕಣ್ಣು ತೆರೆದು ಕಾಲು ಮುದುರಿಕೊಂಡು ಮೂಲೆಗೆ ಒತ್ತಿಕೊಂಡ, ರಂಗಪ್ಪನ ಮಗಳು ಜಾನಕಿ- ಅಲ್ಲ ಅಲ್ಲಿ ನಿಂತ ಹೆಣ್ಣುಮಗಳು ಅದೇ ಸೀಟಿನ ಕೊನೆಯಲ್ಲಿ ಮಗುವನ್ನು ತೊಡೆಯ ಮೇಲಿಟ್ಟುಕೊಂಡು ಕುಳಿತಳು.

ಜಾನಕಿಯನ್ನು ತಾನು ನೋಡಿ ಐದಾರು ವರುಷ ಕಳೆದಿದ್ದವು. ತೆಳ್ಳಗೆ, ಬೆಳ್ಳಗೆ ಬಳುಕುವ ಬಾಲೆಯಾಗಿದ್ದವಳು ಮದುವೆಯಾಗಿ, ಮಗುವಿನ ತಾಯಿಯಾಗಿ ಮೈ, ಕೈ ತುಂಬಿಕೊಂಡು ದುಂಡಗಾಗಿದ್ದಾಳೆ. ಬಣ್ಣ ಬಂದಿದೆ. ಕಳೆಕಳೆಯಾಗಿದ್ದಾಳೆ. ಸುಖವಾಗಿಯೇ ಇರಬಹುದು. ಅತ್ತ ಕಡೆಗೆ ತಿರುಗಿ ಕುಳಿತಿದ್ದರಿಂದ ಮುಖ ಕಾಣುವಂತಿಲ್ಲ. ಮಗುವೂ ದುಂಡದುಂಡಗೆ ಕೆಂಪಾಗಿ ಚೆನ್ನಾಗಿದೆ. ಹೆಣ್ಣೋ ಗಂಡೋ ತಿಳಿಯದು. ನೋಡಿದೊಡನೆಯೆ ಮುದ್ದಾಗಿ ಎತ್ತಿಕೊಳ್ಳುವಂತಿದೆ. ಆದರೆ ಈ ಕೈಗಳಿಂದ ತಾಯಿಯನ್ನು ಎತ್ತಿ ಮುದ್ದಾಡಿದ ಈ ಕೈಗಳಿಂದ ಮಗುವನ್ನು ಎತ್ತುವೆನೋ ಇಲ್ಲವೋ? ಈಗ ಇಲ್ಲಿ ನನ್ನ ಜೊತೆ ಸಾವಿತ್ರಿ ಇದ್ದಿದ್ದರೆ ಇಷ್ಟೊತ್ತು ಸುಮ್ಮನಿರುತ್ತಿದ್ದಳೆ? ಇದುವರೆಗೂ ಮಗಳ ನೆನಪನ್ನು ತೆಗೆಯದೆ ಒಂದು ದಿನವನ್ನೂ ಕಳೆದಿಲ್ಲ. ಸಾವಿತ್ರಿಗಷ್ಟೇ ಯಾಕೆ? ನನಗೆ ಆಸೆ ಇಲ್ಲವೇ? ಪ್ರೀತಿ ಇಲ್ಲವೇ? ಮಗಳನ್ನು ನೋಡಿದಾಗಿನಿಂದ ಯಾವಾಗ ಮಾತನಾಡಿಸಿಯೇನೋ ಎಂದು ಜೀವ ಚಡಪಡಿಸುತ್ತಿದೆ. ಅದಕ್ಕೇನು "ಬಾರವ್ವ ಜಾನೂ, ಇಲ್ಲಿ ಕೂಡ್ರು. ತಾ ನಿನ್ನ ಮಗೂನ್ನ ನನ್ನ ತೊಡೆಮೇಲೆ ಕೂತಿರ್ಲಿ" ಅಂತ ಬೇಡಿದರೆ? ಜಾನಕಿ ಬರೋದಿಲ್ಲವೇ? ಮಾತಾಡೂದಿಲ್ಲವೇ?" ಅಪ್ಪಾ ತಗೊಳ್ರಿ ಮಗೂನ, ನನ್ನ ಕೈ ಸೋತಿದೆ, ಎನ್ನೋದಿಲ್ಲವೇ? ಉಫ್ ಎಲ್ಲ ಸರಿ, ಆದರೆ ಜಾನಕಿ ಹಾಗೆಲ್ಲ ಸೋಲುವವಳಲ್ಲ. ನನ್ನ ಬೇಡಿಕೆ ನಿರಾಕರಿಸಿದರೆ ? ನೀನಾರೋ ನನಗೆ ಗೊತ್ತಿಲ್ಲ ಎಂದು ಅವಮಾನ ಮಾಡಿದರೆ ? ಓಹ್ ಅವಮಾನ.... ಜಾನಕಿಯಿಂದ ನನಗೆ ? ಸಹಿಸೋಕೆ ಆದೀತೆ? ನೋಡು, ನಾನಿಷ್ಟು ವಿಲಿವಿಲಿ ಒದ್ದಾಡುತ್ತಿದ್ದರೂ ಎಷ್ಟು ನಿಶ್ಚಿಂತೆಯಾಗಿ, ಎತ್ತಲೋ ನೋಡುತ್ತ ಇಲ್ಲಿ ಅಪ್ಪ ಕುಳಿತಿದ್ದಾನೆ ಎಂದು ಲಕ್ಷ್ಯವನ್ನೂ ಕೊಡದೆ ಕುಳಿತಿದ್ದಾಳೆ. ಹುಟ್ಟಿ ಬೆಳೆದಾಗಿನಿಂದ ನನ್ನ ಮನೆಯಲ್ಲಿ ಕಳೆದ ಇಪ್ಪತ್ತು ವರುಷಗಳನ್ನು ಮರೆತೇ ಬಿಟ್ಟಿದ್ದಾಳೇನೋ.

ಜಾನಕಿ ಕಾಲೇಜು ಕಟ್ಟೆ ಹತ್ತಿದ ಮೇಲೆ ಪರಿಚಿತರಿಂದ, ಗೆಳೆಯರಿಂದ ಅವಳಿಗೆ ಅಲ್ಲಲ್ಲಿ ಯೋಗ್ಯ ವರ ಇರುವ ಬಗ್ಗೆ ಸಲಹೆ, ಸೂಚನೆಗಳು ಬಂದವು. ಆದರೆ ಜಾನಕಿ ನಮ್ಮ ಕಣ್ಣಿಗೆ ಇನ್ನೂ ಸಣ್ಣ ಹುಡುಗಿ. ಆಟ ಆಡಿಕೊಂಡಿರೋ ವಯಸ್ಸು. ಇಷ್ಟ ಲಗೂ ಮದುವೀ ಜವಾಬ್ದಾರಿ ಬ್ಯಾಡಾ ಸಣ್ಣ ಹುಡುಗಿ. ಆಟ ಆಡಿಕೊಂಡಿರೋ ವಯಸ್ಸು. ಇಷ್ಟ ಲಗೂ ಮದುವೀ ಜವಾಬ್ದಾರಿ ಬ್ಯಾಡಾ ಕಾಲೇಜು ಕಲೀಲಿ. ಡಿಗ್ರಿ ತೊಗೊಳ್ಳಿ. ಬೇಕಾದರ ಎಂ.ಎ. ನೂ ಓದಲಿ. ಆಕೀಗೆ ಹಾಡಿನ ಮ್ಯಾಲೆ ಭಾಳ ಪ್ರೀತಿ ಅದ, ಸಂಗೀತ ಕಲೀಲಿ, ಅಂತ ಮದುವೀ ವಿಚಾರಾ ಮುಂದು ಮುಂದು ಹಾಕಿದೆ. ಮನಿಯೊಳಗ ಸಂಗೀತ ಕಲಿಸಲಿಕ್ಕೆ ಸುರು ಮಾಡಿದೆ. ಸಾವಿತ್ರಿ ಮುಂದ ಹೇಳತಿದ್ದೆ ನನ್ನ ಮಗಳಿಗೆ ಸರಸ್ವತಿ ಅಂತ ಹೆಸರ ಇಡಬೇಕಾಗಿತ್ತು. ವಿದ್ಯಾ ಮತ್ತು ಸಂಗೀತ ಎರಡರ ದೇವತೆ ಸರಸ್ವತಿ ಅಂತ. ನನ್ನ ಮಾತಿಗೆ ಸಾವಿತ್ರಿ ನಕ್ಕರೂ ಒಮ್ಮೊಮ್ಮೆ ಭಾಳ ಮನಸ್ಸಿಗೆ ಹಚ್ಚಿಕೊಂಡು ಹೇಳತಿದ್ಲು. 'ಜಾನಕೀಗೆ ಎಂಥಾ ಗಂಡ ಸಿಕ್ತಾನೋ ಏನೋ. ಅದ ಚಿಂತಿ ಆಗೇದ ನನಗ, ಆಕೀ ಹೆಳಿದ್ದಕ್ಕೆಲ್ಲಾ ನೀವು ಹೂಂ ಹೂಂ ಅಂದು ಕೇಳಿದ್ದೆಲ್ಲಾ ಕೈಯಾಗ ಹಿಡಿದಿರ್ತೀರಿ. ಆದರ ಹಿಂಗ ಗಂಡನ ಮನೀಯೊಳಗ ಆಕೀ ಮಾತು ನಡೀಬೇಕಿಲ್ಲ' ಅಂತ. ನೋಡ್ತೀರು ಸಾವಿತ್ರೀ, ಆಕೀಗೆ ಎಂಥಾ ಗಂಡನ್ನ ಹುಡುಕ್ತೇನಿ ಅಂತ. ಕೂತರ, ನಿಂತರ ಆಕೀ ಮಾರೀ ನೋಡತಿರಬೇಕು. ಅಂಗೈಯಾಗಿನ ಅರಗಿಣಿ ಹಾಂಗ ಆಕೀನ್ನ ಸಾಕಬೇಕು. ಶ್ರೀಮಂತಿಕೆ ವಿದ್ಯಾ, ರೂಪ ಎಲ್ಲಾದರೊಳಗ ಆಕೀಗೆ ಅನುರೂಪ ಆಗಿರ್ಬೇಕು, ಅಂಥಾ ಗಂಡನ್ನ ಹುಡುಕತೇನಿ ಜಾನಕಿಗೆ. ಇಂತಾ ಅಪ್ಪಾ ಇರೂ ಮುಂದ ನೀ ಯಾಕೆ ಕಾಳಜೀ ಮಾಡತೀ?" ತನ್ನ ಮಾತುಗಳೇ ತನಗೆ ಚಾಟಿಯಿಂದ ಹೊಡೆದಂತಾಗಿ ರಂಗಪ್ಪ ಮತ್ತೆ ಕಣ್ಣು ತೆರೆದ.

ಮೂಲೆಯಲ್ಲಿ ಕುಳಿತಿದ್ದ ರಂಗಪ್ಪನ ಗೊಡವೆಗೆ ಬಾರದೆ ಜನ ಹತ್ತಿದ್ದರು. ಇಳಿದಿದ್ದರು. ಜಾನಕಿಯ ಹತ್ತಿರ ಈಗ ಒಬ್ಬ ಮುದುಕಿ ಬಂದು ಕುಳಿತಿದ್ದಳು. ಜಾನಕಿ ಇನ್ನೂ ಸೀಟಿನ ಅಂಚಿನಲ್ಲಿಯೇ ಕುಳಿತಿದ್ದಳು. ಎಷ್ಟು ಸನಿಹ.... ಆದರೆ ಎಷ್ಟು ದೂರ, ತಾವಿಬ್ಬರೂ ತಂದೆ ಮಗಳೆಂದು ಬಹುಶಃ ತಮ್ಮಿಬ್ಬರನ್ನು ಬಿಟ್ಟು ಅಲ್ಲಿದ್ದವರಿಗೆ ಯಾರಿಗೂ ಗೊತ್ತಿಲ್ಲ. ಒಬ್ಬಳನ್ನೇ ಕಂಡು ಮುದುಕಿ ಮಾತು ತೆಗೆದಳು.

"ತಂಗೀ ಯಾವೂರಿಗೆ?"

"ಇಲ್ಲೇ ದಾವಣಗೇರಿಗೆ" ಚುಟುಕು ಉತ್ತರದಿಂದ ಮುದುಕಿಗೆ ಹೇಗೆ ಸಮಾಧಾನವಾದೀತು? ಮತ್ತೊಂದು ಪ್ರಶ್ನೆ ಹಾಕಿದಳು.

"ಅಲ್ಲೇ ಯಾರ ಅದಾರು? ಗಂಡನ್ಮನೀನೋ, ತವರ್ಮನೀನೋ?" ಉತ್ತರ ಹೇಳಲು ಕಠಿಣವಾತೇನೋ ಜಾನಕಿಗೆ. "ಇಲ್ಲವ್ವಾ, ದವಾಖಾನಿಗೆ ಹೋಗ್ತೇನಿ" ರಂಗಪ್ಪ ಕಣ್ಣರಳಿಸಿ ಅವಳತ್ತ ನೋಡಿದ. 'ಜಾನೂಗ ಆರಾಮ ಇಲ್ಲೇನು? ಏನು ಕೂಸಿಗೊ?'

"ಆರಾಮ ಇಲ್ಲೇನು ಮೈಯ್ಯಾಗ ? ಮತ್ತ ಒಬ್ಬಾಕಿ ಹೊಂಟೀಯಲ್ಲ."

"ನನಗ ಅಲ್ಲವ್ವಾ, ನಮ್ಮ ಯಜಮಾನರಿಗೆ."

"ಏನಾಗೇದ" ಮುದುಕರು ಮಾತು ಸುರು ಮಾಡಿದರೆ ತಳ ಮುಟ್ಟಿಯೇ ಬಿಡುವವರು. ರಂಗಪ್ಪ ಮನಸ್ಸಿನಲ್ಲಿಯೇ ಮುದುಕಿಗೆ ವಂದಿಸಿದ.

"ಕಾಲೇಜದಾಗ ಕಲಸತಾರ ನಮ್ಮ ಯಜಮಾನ್ರು. ಕೆಲಸ ಇತ್ತಂತ ದಾವಣಗೇರಿಗೆ ಹೋಗಿದ್ರು, ಅಲ್ಲೆ ಸ್ಕೂಟರ್ ಆಕ್ಸಿಡೆಂಟ್ ಆತಂತ. ತಾರು ಬಂತು ನೋಡಾಕ ಹೊಂಟೇನಿ."

"ಚ್ಚು, ಚ್ಚು., ಭಾಳ ಪೆಟ್ಟಾಗಿರಬೇಕು" ಮುದುಕಿ ಮೃದುವಾಗಿ ಕೇಳಿದಳು.

"ಕಾಲಿನ ಎಲುಬಿಗೆ ಪೆಟ್ಟಾಗೇದ., ಪ್ಲಾಸ್ಟರ ಹಾಕಿ ಕಟ್ಟ್ಯಾರ, ಗಾಬರಿ ಆಗ ಬ್ಯಾಡಾ ಲಗೂನ ಊರಿಗೆ ಬರತೇನಿ ಅಂತ ಹೇಳಿ ಕಳಿಸ್ಯಾರ. ಆದರೂ ನನಗ ಜೀಂವಾ ತಡೀಲಿಲ್ಲ ಹೊಂಟೇನಿ."

ಈ ಗಂಡು- ಹೆಣ್ಣಿನ ಪ್ರೀತಿ, ಪ್ರೇಮ ಎನ್ನುವುದೆಲ್ಲಾ ಒಂದು ಮಾಯಾಜಾಲವಿರಬೇಕು. ಇಪ್ಪತ್ತು ವರ್ಷ ಜೋಪಾನ ಮಾಡಿದ ಅಪ್ಪ ಹತ್ತಿರ ಕುಳಿತರೂ ಒಂದು ಮಾತೂ ಆಡದ ಮಗಳಿಗೆ ಕೇವಲ ಐದು ವರುಷ ಜೊತೆಗಿದ್ದು ಜೀವನ ನಡೆಸಿದ ಗಂಡನ ಬಗ್ಗೆ ಎಷ್ಟೊಂದು ಪ್ರೀತಿ, ಗಾಢ ಪ್ರೇಮ! ಇಷ್ಟೊಂದು ಕಷ್ಟಪಟ್ಟು ಮಗುವಿನೊಡನೆ ಒಬ್ಬಳೇ ರೈಲು ಪ್ರಯಾಣ ಮಾಡಿ ಗಂಡನನ್ನು ನೋಡಲು ಅವಳ ಜೀವ ಹಂಬಲಿಸುತ್ತಾ ಇದೆ. ಹಾಗೆಯೇ ಕಾಲು ನೋವಿನಿಂದ ಹಾಸಿಗೆ ಹಿಡಿದು ನರಳುತ್ತ ಮಲಗಿದ ಗಂಡನ ಜೀವ ಜಾನಕಿಯನ್ನು, ಮಗುವನ್ನು ನೋಡಿ ಅರಳುತ್ತದಲ್ಲವೇ ? ಪ್ರೀತಿಯಿಂದ ಕಣ್ಣುಗಳು ಹೊಳೆಯುತ್ತವೆ. ಅವನ ನೋವು ಮರೆತು ಹೋಗುತ್ತದೆ. ಛೇ, ಇದು ಮಾಯೆ ಅಲ್ಲವೇ ಅಲ್ಲ. ಇದು ಜೀವನ. ತಾನೂ ಸಾವಿತ್ರಿ ತಾರುಣ್ಯದಲ್ಲಿ ಹಾಗೆಯೇ ಇದ್ದೆವಲ್ಲ ಜೋಡಿ ಹಕ್ಕಿಗಳಂತೆ.

"ಛೀ ನಮ್ಮವ್ವಾ, ಏನು ಕೂಟರೋ, ಏನ ಮೋಟಾರೋ ಧಾಡಿ ಬರಲಿ, ಮನಶ್ಯಾರ ಜೀವಾನ ತೊಗೋತಾವು. ನಿನ್ನ ನಸೀಬ ಛೊಲೋ ಐತಿ. ನಿನ್ನ ಗಂಡಗ ನೆಟ್ಟಗಾಗತತಿ ಏಳು. ಆದರ ಕೂಸಿನ್ನ ಕರಕೊಂಡು ಒಬ್ಬಾಕೀನ ಹೊಂಟೀದಿ. ತವರ್ಮನಿಗೆ ಸುದ್ದಿ ಕಳಿಸಬಾರದ? ಅಪ್ಪ ಅವ್ವ ಯಾರೂ ಇಲ್ಲೇನ?"

ರಂಗಪ್ಪನ ಎದೆ ಬಡಿತ ನಿಂತೇ ಹೋದಂತಾಯಿತು. ಏನು ಹೇಳುವಳೋ ಮಗಳ ಬಾಯಿಂದ ಏನು ಉತ್ತರ ಬರುವುದೋ ಎಂದು ಉಸಿರು ಬಿಡದೆ ಕಾದ. ಮಗಳ ಮುಖದತ್ತ ನೋಡದಿದ್ದರೂ ಕಿವಿ ತೆರೆದು ಇಟ್ಟಿದ್ದ. ಯುಗ ಕಳೆಯಿತು. ಉಹುಂ, ಉತ್ತರ ಬರಲಿಲ್ಲ. ಅದರ ಬದಲು,

"ಯಮ್ಮಾ, ಕೂಸಿನ್ನ ಕರಕೋ. ನಾ ಸಂಡಾಸಿಗೆ ಹೋಗಿಬರ್ತೀನಿ. ಬಿರ್ರನೆ ಎದ್ದು ಹೋದಳು ಜಾನಕಿ. ಅವಳ ಕಣ್ಣು ಮಿಂಚಿದವೇ? ರಂಗಪ್ಪನಿಗೆ ಸಂದೇಹ. ಅವನ ದೃಷ್ಟಿ ಈಗ ಮುದುಕಿಯತ್ತ ತಿರುಗಿತು. ಮಗುವನ್ನೆತ್ತಿ

ತೊಡೆಯ ಮೇಲೆ ನಿಲ್ಲಿಸಿಕೊಂಡಿದ್ದಳು ಮುದುಕಿ. ಅಪರಿಚಿತ ಮುಖ ಕಂಡೊಡನೆ ಮಗು ಅಳಹತ್ತಿತು. ಮುದುಕಿ ಕಟ್ಟಾಡಿಸಿದಳು. ಲೊಳ ಲೊಳ ಅಂದಳು. ಸುಮ್ಮನಾಗಿಸಲು ಸಾಧ್ಯವಿದ್ದಷ್ಟು ಪ್ರಯತ್ನಪಟ್ಟಳು. ಮಗುವಿನ ದನಿ ಏರುತ್ತ ಹೋಯಿತು. ರಂಗಪ್ಪನಿಗೆ ತಡೆಯಲಾಗಲಿಲ್ಲ. ಕೈ ಚಾಚಿದ:

"ಇಲ್ಲಿ ತಾರಬೇಯಮ್ಮ ಕೂಸಿನ್ನ."

"ತಗೋ ಯಪ್ಪಾ, ಈಗ ಬರ್ತಾಳ ಇದರ ಅವ್ವ."

ಕಿಡಕಿಯ ಗಾಳಿಯಿಂದ ಆರಾಮವೆನಿಸಿತೇನೋ ಮಗುವಿನ ಅಳು ನಿಂತಿತು. ಗಂಡು ಮಗು, ಹುಬ್ಬು, ತುಟಿ ಎಲ್ಲಾ ಜಾನಕಿಯಂತೆಯೇ. ಕಣ್ಣು, ಗುಂಗುರು ಕೂದಲು ಅಪ್ಪನಂತೆ, ಇದರ ಅಪ್ಪ.... ತನ್ನ ಅಳಿಯ....

"ಅಪ್ಪಾs ಇವರ ಹೆಸರು ಉಮೇಶ ಅಂತ., ಎಂ.ಎ. ಎರಡನೇ ವರ್ಷ ಕಲೀತಾರ. ಹಾಡು ಭಾಳ ಛಂದ ಅಂತಾರ."

ಎತ್ತರದ ನಿಲುವಿನ, ಕಪ್ಪು ಕಣ್ಣು, ಗುಂಗುರು ಕೂದಲಿನ ಯುವಕ ನಗುತ್ತ ತನಗೂ, ಸಾವಿತ್ರಿಗೂ ನಮಸ್ಕಾರ ಮಾಡಿದ. "ಜಾನಕಿ ಭಾಳ ಛಂದ ಹಾಡ್ತಾರ. ದನಿ ಇಂಪಾಗೇದ. ನೀವು ಅವರಿಗೆ ಭಾಳ ಪ್ರೋತ್ಸಾಹ ಕೊಡ್ತೀರಿ ಅಂತ ನಿಮ್ಮ ಬಗ್ಗೆ ಭಾಳ ಅಭಿಮಾನದಿಂದ ಹೇಳತಿರತಾರ?"

ಅಂದಿನ ವಾರ್ಷಿಕೋತ್ಸವದಲ್ಲಿ ಅವರಿಬ್ಬರೂ ಕೂಡಿ ಹಾಡಿದ ಭಾವಗೀತೆಗಳು, ಜಾನಪದ ಹಾಡುಗಳು ಎಲ್ಲರಿಗೂ ಮೆಚ್ಚುಗೆಯಾದವು. ವಿದ್ಯಾರ್ಥಿಗಳಿಂದ ವಾಹ್ ವಾ, ಶಾಭಾಶ್, ಒನ್ಸಮೋರ್‌ಗಳೆಲ್ಲ ಬಂದುವು. ಕೇಳಿದವರೆಲ್ಲ ಚಪ್ಪಾಳೆ ತಟ್ಟಿ ಉತ್ಸಾಹದಿಂದ ಕುಣಿದರು.

ಆದರೆ ಅವರಿಬ್ಬರ ಗೆಳೆತನ ಹಾಡಿಗಷ್ಟೇ ಮುಗಿಯಲಿಲ್ಲವೆನ್ನುವುದು ತನಗೆ ಬಹಳ ತಡವಾಗಿ ತಿಳಿಯಿತು. ಸಾವಿತ್ರಿ ಒತ್ತಾಯ ಮಾಡ್ತಾನೇ ಇದ್ಲು. ಲಗೂ ವರಾ ಹುಡುಕರಿ ಅಂತ. ತಾನೂ ಗೆಳೆಯರಿಗೆಲ್ಲ ಹೇಳಿದ್ದ. ಈ ಸಲ ಪರೀಕ್ಷಾ ಮುಗಿದ ಮ್ಯಾಲೆ ಜಾನಕಿ ಮದುವೀ ಮಾಡಬೇಕು ಅಂತ ನಿರ್ಧಾರ ಮಾಡಿದ್ದೆ. ಪರೀಕ್ಷಾ ಮುಗಿದ ಮರುದಿನಾ ಜಾನಕಿ ತನ್ನ ಹತ್ತಿರ ಬಂದು ಏಕಾಏಕಿ ಧಡಂ ಅಂತ ಹೇಳಿಬಿಟ್ಟಳು. "ಅಪ್ಪಾs ನಾನು, ಉಮೇಶ ಲಗ್ನ ಮಾಡಿಕೋತೀವಿ. ನಿಮ್ಮ ಒಪ್ಪಿಗಿ ಬೇಕು. " ತಾನು ಒಪ್ಪಿಯೇ ಒಪ್ಪುವೆನೆಂಬ ಭರವಸೆ ಇಟ್ಟುಕೊಂಡು ಅಷ್ಟು ಧೈರ್ಯದಿಂದ ಹೇಳಿದ್ದಳೆಂದು ಕಾಣುತ್ತದೆ.

"ಯಾ ಉಮೇಶ?"

"ಅವರs ಆವತ್ತ ಗುರ್ತು ಮಾಡಿ ಕೊಟ್ಟಿದ್ನೆಲ್ಲಾ. ಆಮೇಲೆ ನನ್ನ ಜೋಡಿ ಹಾಡು ಹೇಳಿದ್ರು ಅವರ್‍ನs. ಈ ವರ್ಷ ಎಂ.ಎ. ಮುಗೀತು. ರ‍್ಯಾಂಕ ಸಿಕ್ಕರೂ ಸಿಗಬಹುದು. ಕೆಲಸ ಹುಡುಕಲಿಕ್ಕೆ ಹತ್ಯಾರ. ಅವ್ವ ಹೇಳಿದ್ಲು. ನೀವು ನನ್ನ ಮದಿವೀ ವಿಚಾರಾ ಮಾಡಲಿಕ್ಕೆ ಹತ್ತೀರಿ ಅಂತ. ಅದಕ್ಕ ನಾನs ಮೊದಲ ಹೇಳಿದೆ. ನೀವು ಹೊರಗ ಎಲ್ಲೂ ಹುಡುಕಬ್ಯಾಡ್ರಿ. ನಾನು ಅವರ್‍ನ ಮಾಡಿಕೋತೀನಿ." ಅಂಗಡಿಯಲ್ಲಿ ನೋಡಿದ ಆಟದ ಸಾಮಾನು ತನಗೆ ಬೇಕೇ ಬೇಕೆಂದು ಹಟ ಮಾಡುವ ಮಗುವಿನಂತಿತ್ತು ಅವಳ ಮಾತು. ಆ ಮಾತು ರುಚಿಸದೆ ಮೊಟ್ಟ ಮೊದಲ ಬಾರಿಗೆ ಅವಳ ಮೇಲೆ ನನಗೆ ಸಿಟ್ಟು ಬಂದಿತು. ಆದರೂ ಸಹನೆಯಿಂದ ಕೇಳಿದೆ:

"ಅವನ ತಂದಿ ತಾಯೀ ಅದಾರೇನು? ಮನಿತನಾ ಎಂಥಾದ್ದು ?"

"ತಾಯಿ ಇಲ್ಲ. ತಂದಿ ಅದಾರ. ಅಕ್ಕ ಅಣ್ಣ ಅದಾರ, ತಂದಿ ಮಂಜುನಾಥ ಪ್ರೆಸ್ಸಿನೊಳಗ ಕೆಲಸ ಮಾಡ್ತಾರ. ಅವರ ಮನೀಗೂ ಒಮ್ಮೆ ಕರಕೊಂಡು ಹೋಗಿದ್ರು. ಜನಾ ಭಾಳ ಒಳ್ಳೆಯವರು."

ಈಗ ತನ್ನ ಸಿಟ್ಟು ಸ್ಫೋಟಗೊಂಡಿತು. "ಜಾನಕಿs, ಕಾರಕೂನನ ಮಗ, ಎಂ.ಎ. ಆದಾಂವ ನಿನಗ ಯೋಗ್ಯ ವರಾ ಹ್ಯಾಂಗ ಆಗ್ತಾನ? ಮರತ ಬಿಡು ಅದನ್ನೆಲ್ಲಾ. ಡಾಕ್ಟರರು, ಇಂಜಿನೀಯರು, ಆಫೀಸರರು, ಶ್ರೀಮಂತ ಜಮೀನ್ದಾರರು ಅಂಥಾವರು ಬೇಕೋ ಎಂಥಾವರನ್ನ ತರ್ತೀನಿ. ನಮ್ಮ ಯೋಗ್ಯತಾಕ ತಕ್ಕ ಹಾಂಗ ಬೀಗತನಾ ಮಾಡಬೇಕು. ಇಲ್ಲಾಂದರ ಮಂದಿ ಏನಂದಾರು. ನನ್ನ ಗೆಳೆಯಾನ ಪ್ರೆಸ್ಸಿನೊಳಗಿನ ಕಾರಕೂನನ ಮಗನ್ನ ಅಳಿಯನ್ನ ಮಾಡಿಕೊಳ್ಳಲ್ಯಾ? ಆ ಪ್ರೆಸ್ಸು ಕೊಳ್ಳುವಷ್ಟು ತಾಕತ್ತು ಅದ ನನಗ, ಇಂತಾ ಬೀಗತನಾ ನಾನೂ ಮಾಡೂದಿಲ್ಲ. ನೀ ಆ ವಿಚಾರ ತಗದು ಹಾಕು, ನಡೀ ಒಳಗ."

ಜಾನಕಿ ದೈನ್ಯದಿಂದ, ಸಹನೆಯಿಂದ ಬಹಳ ಕೇಳಿಕೊಂಡಳು. ತನ್ನನ್ನು . ತಾನು ಮದುವೆಯಾದರೆ ಅವನನ್ನೇ ಎಂದು ತನ್ನ ನಿರ್ಧಾರವನ್ನೂ ಹೇಳಿದಳು. ಬುದ್ಧಿ ತಿಳಿಯದ ಹುಡುಗಿ, ನಾಲ್ಕು ದಿನ ಹಟ ಮಾಡಿ ಸುಮ್ಮನಾಗುತ್ತಾಳೆ ಎಂದುಕೊಂಡು ತಾನು ಅವಳ ಮಾತಿಗೆ ಕಿವಿಗೊಡದೆ ಬೇರೆಯವರನ್ನೇ ನೋಡತೊಡಗಿದೆ. ಅಮೆರಿಕೆಯಲ್ಲಿ ಇಂಜಿನೀಯರ ವರನೊಬ್ಬ ಹಿಂದುಸ್ಥಾನಕ್ಕೆ ಬಂದು ಮದುವೆ ಮಾಡಿಕೊಳ್ಳಬೇಕೆಂದಿದ್ದನಂತೆ. ನಾನೂ ಜಾನಕಿಯನ್ನು ತೋರಿಸಲು ನಿಶ್ಚಯಿಸಿದೆ. ಅದೇ ದಿನ ಅವಳು ಮನೆ ಬಿಟ್ಟು ಹೋದಳು. ಎರಡು ದಿನಗಳಾದ ಮೇಲೆ ಉಮೇಶನೊಡನೆ ಅವಳ ಮದುವೆಯಾಯಿತು ಎನ್ನುವ ಸುದ್ದಿ ನನ್ನ ಕಿವಿಗೆ ಬಿತ್ತು. ಸಮಾಜದಲ್ಲಿ ನನ್ನ ಮರ್ಯಾದೆ ಇಳಿದುಹೋಗಿತ್ತು. ಆ ಸಂಕಟದಲ್ಲಿ ಮಗಳು ನನ್ನ ಪಾಲಿಗೆ ಸತ್ತುಹೋದಳೆಂದುಕೊಂಡೆ. ಸಾವಿತ್ರಿ ಗೋಳಾಡಿದಳು. ಮಗಳು ಗಂಡನೊಡನೆ ಸುಖವಾಗಿ ಇರುವುದೊಂದೇ ನಮಗೆ ಸಾಕು. ಅವರನ್ನು ಮನೆಗೆ ಕರೆಯಿರಿ ಎಂದು ಕಣ್ಣೀರು ಕಾಲುವೆ ಹರಿಸಿದಳು. ನಾನು ಕಿವುಡನಾಗಿದ್ದೆ. ಕರೆಯದೆ ಅವಳೂ ಬರಲಿಲ್ಲ. "ಜಾನೂ ರೂಪದಾಗ ನನ್ನಾಂಗ ಇದ್ದರೂ ಹಟಮಾರಿತನ ಎಲ್ಲ ನಿಮ್ಮದ ನೋಡ್ರೀs" ಎಂದು ಸಾವಿತ್ರಿ ಆಗಾಗ ಹಂಗಿಸುತ್ತಿದ್ದಳು. ಜಾನಕಿ ತನ್ನ ಮನೆ ಬಿಟ್ಟು ಹೋದರೂ ಏನು ಕಡಿಮೆಯಾಗಿದೆ ಅವಳಿಗೆ? ಪ್ರೀತಿಸುವ ಗಂಡ ಇದ್ದಾನೆ. ಮುದ್ದಾದ ಮಗು ಇದೆ. ಉಣ್ಣಲು ಉಡಲು ತಾಪತ್ರಯವಿಲ್ಲ. ಅವಳೂ ಎಂದೂ ತನ್ನ ಬಾಗಿಸಲಿಗೆ ಬರಲಿಕ್ಕಿಲ್ಲ ಇನ್ನು.....

ಮಗು ಕೂದಲು ಹಿಡಿದು ಎಳೆಯುತ್ತಿತ್ತು. ಕಿವಿ ತಿರುಚುತ್ತಿದ್ದ, ಮಗುವಿನ ತಲೆಗೆ ಎದೆಯಾನಿಸಿ ಅಲುಗಾಡಿಸಿದ ರಂಗಪ್ಪ. ಕಿಲ ಕಿಲ ನಕ್ಕಿತ್ತು ಮಗು. ಹೆಗಲಿಗೆ ತಲೆ ಒತ್ತಿ ಹಿಡಿದು ಚುಕ್ಕು ಬಡಿದ. ನೆತ್ತಿ ಮೂಸಿ ಪುಳಕಿತನಾದ. ಎಳೆದು ಎದೆಗಪ್ಪಿಕೊಂಡ. ಮಗು ತನ್ನ ಪುಟ್ಟ ಪುಟ್ಟ ಕೈಗಳಿಂದ ಅವನ ಕೆನ್ನೆಗೆ ಬಡಿಯುತ್ತಿತ್ತು. "ಮಗನs ಹೊಡೀತಿಯಾ ನನ್ನ" ಎಂದು ಅಂಗ್ಯೆ ಹಿಡಿದು ಮುತ್ತಿನ ಮಳೆಗರೆದ. ಜಾನಕಿ ಬಂದಳು. ರಂಗಪ್ಪನತ್ತ ಕೈ ಚಾಚಿ, "ಅಪ್ಪಾs ಶಶೀನ್ನ ಕೊಡ್ರಿ" ಎಂದಳು.

"ಇರಲಿ ಬಿಡು ಜಾನೂ. ಇಂವಾ ನನ್ನ ತೊಡಿ ಮ್ಯಾಲೆ ಕೂತಿರ್ಲಿ" ಎಂದ ರಂಗಪ್ಪ.

***

■■

# ಅರ್ಧಾಂಗಿ

ಬೇಗನೆ ಸ್ನಾನ ಮುಗಿಸಿ ಬಂದ ಸುನೀತಾ ಕನ್ನಡಿ ಎದುರು ನಿಂತು ನರೆಯುತ್ತಿದ್ದ ಕೂದಲು ಕಾಣದಂತೆ ಬಾಚಿ, ಸರಳವಾಗಿ ತುರುಬುಕಟ್ಟಿಕೊಂಡು ಸೆರಗು ಅಡ್ಡಕಟ್ಟಿ ಅಡಿಗೆ ಮನೆಗೆ ಬಂದಳು. ಇಂದು ಅವಳು ಕಾಲೇಜಿಗೆ ರಜೆ ಹಾಕಿದ್ದಳು. ಇಂದಿಗೆ ತಮ್ಮ ಮದುವೆಯಾಗಿ ಇಪ್ಪತ್ತು ವರುಷಗಳಾದವು. ಆದ್ದರಿಂದ ದಿನದ ಅಡಿಗೆಯ ಜೊತೆಗೆ ಒಂದು ಸಿಹಿ, ಮಸಾಲೆ ಅನ್ನ ಮಾಡಬೇಕೆಂದು ತಯಾರಿ ನಡೆಸಿದಳು. ಉಪಾಹಾರ ಮುಗಿಸಿ ಹೊರಗೆ ಹೊರಟ ಗಿರೀಶನಿಗೆ ಮದುವೆಯ ದಿನವನ್ನು ನೆನಪಿಸಿ, ಬೇಗ ಮನೆಗೆ ಬರಬೇಕು, ಎಲ್ಲರೂ ಕೂಡಿ ಊಟ ಮಾಡೋಣ ಎಂದು ತಾಕೀತು ಮಾಡಿ ಕಳಿಸಿದ್ದಳು.

"ಅಚ್ಛಾ ಸುನೀ, ನಮ್ಮ ಮೀಟಿಂಗ್ ಮುಗದ ಕೂಡ್ಲೆ ಬರ್ತೀನಿ. ಮರಿಯೂದಿಲ್ಲ. ಆಯ್ತಿಲ್ಲೊ, ಬಾಯ್" ಎಂದು ಕಾರ್ ಸ್ಟಾರ್ಟ್ ಮಾಡಿದ ಗಂಡನಿಗೆ ಕೈ ಬೀಸಿ ಸ್ನಾನಕ್ಕೆ ಹೋಗಿದ್ದಳು. ಸುನೀತಾ ಒಗ್ಗರಣೆ ಚುಂಯ್ ಎನ್ನಿಸಿದಾಗ ಫೋನ್ ಟ್ರಿನ್‌ಗುಟ್ಟಿತು. ಈ ಫೋನ್ ಮನೆಗೆ ಬರುವ ಮೊದಲು ಮನೆ ಎಷ್ಟು ಶಾಂತವಾಗಿತ್ತು. ಗಿರೀಶನ ಕೆಲಸ ಹೆಚ್ಚಾದ ಮೇಲೆ ಮನೆಗೆ ಫೋನ್ ಬಂದಿತ್ತು. ಈಗ ಗಿರೀಶ, ಮಾಲಿನಿ, ಶಿರೀಷ ಒಬ್ಬರಿಲ್ಲ ಒಬ್ಬರನ್ನು ಫೋನ್ ಕರೆಯುತ್ತಲೇ ಇರುತ್ತಿತ್ತು. ಶಿರೀಷ್ ಫೋನ್ ಎತ್ತಿಕೊಂಡು 'ಹಲೋ' ಎಂದ. ಓs ಅವನ ಗೆಳೆಯ ಸಾಗರನದು. ಆಯಿತಿನ್ನು ಹದಿನೈದು ನಿಮಿಷ ಫೋನಿಗೆ ಬಿಡುವಿಲ್ಲ.

"ಹಾಂ ಹಾಂ, ಹೌದು. ನಾನೂ ಕಾಮೆಂಟ್ರಿ ಕೇಳಿದೆ. ಬಾಥಮ್ 'ಮ್ಯಾನ್ ಆಫ್ ದಿ ಮ್ಯಾಚ್" ಆಗ್ಯಾನ. ಆಯ್ತು ಬಿಡು ಇನ್ನೇನು ಇಂಗ್ಲೆಂಡಿನವರs ಸೀರೀಜ ಗೆದ್ದ್ಹಾಂಗ ಆತು." ಶಿರೀಷ ತಾನೇ ಗೆದ್ದವನಂತೆ ತಾರ ಸ್ಥಾಯಿಯಲ್ಲಿ ಕೂಗುತ್ತಿದ್ದ.

ಕಾಲೇಜಿಗೆ ಬಂದ ಮಗನ ಕ್ರಿಕೆಟ್ ಹುಚ್ಚು ಹೆಚ್ಚಾಗುತ್ತಿರುವುದರಿಂದ ತನ್ನ ಮನಸ್ಸು ಆತಂಕಗೊಳ್ಳುತ್ತಿದೆ. ಶಿರೀಷನಿಗೆ ಮೂರು ಹೊತ್ತು ಕ್ರಿಕೆಟ್ ಆಟ, ಕಾಮೆಂಟ್ರಿ ಬಿಟ್ಟರೆ ಬೇರೆ ಯಾವುದರಲ್ಲೂ ಆಸಕ್ತಿಯೇ ಇಲ್ಲ. ಗಿರೀಶ ತನ್ನ ಪಕ್ಷದ ಕೆಲಸಗಳಲ್ಲಿ ಮಗ್ನನಾಗಿ ಮನೆಯತ್ತ, ಮಕ್ಕಳತ್ತ ಲಕ್ಷ್ಯ ಕೊಡುವುದನ್ನೇ ಬಿಟ್ಟಿದ್ದಾನೆ. ತಾನೇ ಮಾತಾಡಿ ಅವನ ಗಮನ ಸೆಳೆದರೂ 'ಹೋಗಲಿ ಬಿಡು, ಯಾಕೆ ಚಿಂತೀ ಮಾಡತೀ, ಈ ವಯಸ್ಸs ಹಾಂಗ, ಎಲ್ಲಾ ಹುಡುಗರಿಗೂ ಸ್ಪೋರ್ಟ್ಸ್, ಸಿನಿಮಾ, ಕ್ರಿಕೆಟ್ ಕಾಮೆಂಟ್ರಿಗಳ ಹುಚ್ಚು. ಮುಂದ ಎಲ್ಲಾ ಸರಿ ಹೋಗ್ತಾರ' ಎನ್ನುವನು. ಅವನ ನಿಶ್ಚಿಂತೆ, ಆಶಾಭಾವನೆ ತನಗಿಲ್ಲ. ಬೆಳೆಯುವ ವಯಸ್ಸಿನಲ್ಲಿ ಮಕ್ಕಳಿಗೆ ಆದರ್ಶದ ಪಾಠ ಹೇಳಿಕೊಟ್ಟು ಒಳ್ಳೆಯ ಮಾರ್ಗದರ್ಶನ ನೀಡಿ ಅವರು ಒಳ್ಳೆಯ ಪ್ರಜೆಗಳಾಗೋ ಹಾಗೆ ಬೆಳೆಸೋದು ಪಾಲಕರ ಕರ್ತವ್ಯ. ಅವರು ಹೋದ ದಾರಿಗೆ ಬಿಡುವುದು ಒಳ್ಳೆಯದಲ್ಲ. ತಳ ಹತ್ತದಂತೆ ಮಸಾಲೆ ಅನ್ನವನ್ನು ಮೇಲೆ, ಕೆಳಗೆ ತಿರುವುತ್ತಿದ್ದ ಸುನೀತಾ ತನ್ನಲ್ಲೇ ನಕ್ಕಳು. ಅರೇ ಇದೇನು ಎಲ್ಲಿಯೋ, ಯಾವ ಕಾಲಕ್ಕೋ, ಯಾರಿಂದಲೋ ಕೇಳಿದ ಭಾಷಣ ನೆನಪಿಗೆ ಬರುತ್ತಿದೆಯಲ್ಲ. ಮೇಲಿನ ಎರಡೂ ಮಾತುಗಳನ್ನು ಹೇಳಿದ ವ್ಯಕ್ತಿ ಒಬ್ಬನೇ ಅಲ್ಲವೇ ಎಂದು ಕೊಂಡಾಗ ಅವಳ ಸೌಟು ಹಿಡಿದ ಕೈ ಸೋತಿತು.

ಶೇವಿಗೆ ಕರಿಯುತ್ತಿದ್ದ ಸುನೀತಾಳ ಮನಸ್ಸು ಬೆಳೆದು ನಿಂತ ಮಾಲಿನಿಯ ಮದುವೆಯತ್ತ ಹೊರಳಿತು. ಡಿಗ್ರಿ ಕ್ಲಾಸಿನಲ್ಲಿ ಓದುತ್ತಿದ್ದ ಮಾಲಿನಿಗೆ ತಕ್ಕ ವರ ತನ್ನ ಸಂಬಂಧಿಕರಲ್ಲಿ ಯಾರೂ ಇಲ್ಲ. ಇದ್ದರೂ ಅಂತರ್ ಜಾತೀಯ ವಿವಾಹದಿಂದ ಹುಟ್ಟಿದ ತನ್ನ ಮಗಳನ್ನು ಮದುವೆಯಾಗುವರೇ ಸಂದೇಹ. ಜಾತಿಯನ್ನು ನೋಡದೇ ಮದುವೆಯಾಗುವ ವಿಷಯದಲ್ಲಿ ನಮ್ಮ ಸಮಾಜ ಇಪ್ಪತ್ತು ವರ್ಷಗಳಲ್ಲಿ ಅಂಥ ಪ್ರಗತಿಯನ್ನೇನೂ ಸಾಧಿಸಿಲ್ಲ. ಪಿ.ಯು.ಸಿ. ಕಲಿಯುವ ವಿದ್ಯಾರ್ಥಿನಿಯರು ಅಥವಾ ಟೀನೇಜರ್ಸ್ ಎನಿಸಿಕೊಳ್ಳುವವರು ಮನೆ ಬಿಟ್ಟು ಹೋಗಿ ತಮಗೆ ಬೇಕಾದವರನ್ನು

ಮದುವೆಯಾಗುತ್ತಿರೋದನ್ನ ಈಗೀಗ ಕಾಣುತ್ತಿದ್ದೇವೆ. ತಮ್ಮ ಕಾಲೇಜಿನ ಸುಷ್ಮೀ, ಸಂಧ್ಯಾ ಹಾಗೆಯೇ ಮಾಡಿದರಲ್ಲ! ತನ್ನ ಮಾಲಿನಿಯೂ ಹಾಗೆಯೇ ಮಾಡಿದರೆ? ಛೇ ಇಷ್ಟಕ್ಕೆಲ್ಲ ಮನೆ ಬಿಟ್ಟು ಯಾಕೆ ಓಡಿ ಹೋಗಬೇಕು, ಹುಡುಗಿ ಒಪ್ಪಿದ ಹುಡುಗನಿಗೆ ಅವಳನ್ನು ತಂದೆ-ತಾಯಿಗಳೇ ಮದುವೆ ಮಾಡಿಕೊಟ್ಟರಾಯಿತು. ಅವಳಿಗೆ ಅವನು ತಕ್ಕ ವರನಿದ್ದರೆ, ಹಾಂ. ಇಲ್ಲಿಯೇ ಎಡವಟ್ಟಾಗುವುದು. ಹುಡುಗ ತಕ್ಕವನು ಹೌದೋ ಅಲ್ಲವೋ, ಎನ್ನೋದನ್ನ ನಿರ್ಣಯಿಸುವವರು ಯಾರು? ಹುಡುಗಿಯೋ ಅವಳ ತಂದೆ ತಾಯಿಗಳೋ? ಈ ವಿಷಯದಲ್ಲಿ ಒಮ್ಮತಕ್ಕೆ ಬಾರದೆ ಹುಡುಗಿಯರು ಮನೆಬಿಟ್ಟು ಓಡಿ ಹೋಗ್ತಾರೆ ಅಲ್ಲವೇ? ಮನೆ ಬಿಟ್ಟು ಹೋದ ಮಾತ್ರಕ್ಕೆ ರಕ್ತ ಸಂಬಂಧ ಬಿಟ್ಟು ಹೋಗ್ತದೆಯೆ? ತನ್ನ ವಿದ್ಯಾರ್ಥಿನಿ ಪಂಕಜಾ ಕ್ರಿಶ್ಚಿಯನ್ ಹುಡುಗನನ್ನ ಮದುವೆಯಾಗಿ ಪಮೇಲಾ ಆಗಿ ಮತ್ತೆ ಮನೆಗೆ ಬಂದು ವಿದ್ಯಾಭ್ಯಾಸ ಮುಂದುವರಿಸಿದಳಲ್ಲ! ಅಷ್ಟಾಗಿ ತಕ್ಕ ವರ ಎಂದರೆ ಎಂಥವರು? ಗುಣ ಸ್ವಭಾವ ಒಂದೂ ಗೊತ್ತಿರದ ಹುಡುಗನ ಮನೆತನ ಡಿಗ್ರಿ, ಸಂಬಳ ನೋಡಿ ಕೈ ತುಂಬ ಹಣ ಕೊಟ್ಟು ಹುಡುಗಿಯನ್ನು ಕೊಟ್ಟು ಬಿಡುತ್ತಾರಲ್ಲ. ಅವಳು ಸುಖವಾಗಿರುತ್ತಾಳೆಯೆ? ಯಾರಿಗೆ ಗೊತ್ತಿರ್‍ತದೆ. ಯಾರ ಜೀವನ ಹೇಗೆ ನಡೆದಿರ್‍ತದೆ ಎನ್ನೋದು. ಮನುಷ್ಯನ ಸ್ವಭಾವವೇವಿಚಿತ್ರ; ಮೇಲೆ ಕಾಣುವಷ್ಟು ಸರಳವಾಗಿ ಒಳಗೆ ಇರುತ್ತಾರೆಯೇ? ವಯಸ್ಸು ಕಳೆದಂತೆಲ್ಲಾ ಸ್ವಬಾವವೂ ಬದಲಾಗುತ್ತ ಹೋಗುವುದನ್ನು ತಾನೇ ಸ್ವತಃ ಗಿರೀಶನಲ್ಲಿ ಕಾಣುತ್ತಿರುವೆನಲ್ಲ. ತಾನು ಮೊದಲು ನೋಡಿ ಪ್ರೀತಿಸಿದ ಗಿರೀಶ ಅವನೇ ಹೌದೋ ಅಲ್ಲವೋ ಎನ್ನುವಷ್ಟು ಬದಲಾಗಿದ್ದಾನೆ. ಆದರೂ ಅವನನ್ನು ತಾನು-

ಟ್ರಿಣ್, ಟ್ರಿಣ್ ರೇಣುವಿನ ಫೋನ್ ಎಂದು ಕಾಣುತ್ತದೆ. ಇನ್ನು ಮಾಲಿನಿ, ಅವಳು ಇಬ್ಬರೂ ಕೂಡಿ ತಾಸುಗಟ್ಟಲೆ ಜಯಾ ಬಾಧುರಿ ಅಮಿತಾಬರ ಜಗಳ, ಸಂಜೀವ ಕುಮಾರನ ಮದುವೆ ವಿಷಯ ಕುರಿತು ಹರಟೆ ಹೊಡೀತಾರೆ. ಪಾಪ! ಅವರಾದರೂ ಏನು ಮಾಡಿಯಾರು. ಅವರಿಗೆ ಆದರ್ಶ ನಾಯಕರೇ ಇಲ್ಲವಲ್ಲ! ಅವಳ ಅಪ್ಪ ಕಳ್ಳ ಸಾಗಾಣಿಕೆದಾರ, ಇವಳ ಅಪ್ಪ ರಾಜಕೀಯ ಪುಢಾರಿ.

"ಮಮ್ಮೀ, ಪಪ್ಪಾ ನಿನ್ನ ಕರೀತಾರ" ಎಸರಿಗೆ ಸಕ್ಕರೆ ಸುರುವಿ ಸವಿತಾ ಟವೆಲ್ಲಿನಿಂದ ಕೈ ಒರೆಸಿಕೊಳ್ಳುತ್ತ ಗೊಣಗಿದಳು. ಈ ಮಮ್ಮೀ ಪಪ್ಪಾ, ಎಲ್ಲಾ ಕಾನ್ವೆಂಟ್ ಪ್ರತಾಪ. ಗಿರೀಶಗ ಎಷ್ಟೋ ಸಲ ಹೇಳಿದೆ, ಕನ್ನಡ ಸಾಲಿಗೆ ಕಳಿಸೂಣ ಅಂತ. 'ಬೇಡ ಸೂನೀs ಕಾನ್ವೆಂಟನಲ್ಲಿ ಕಲಿತರೆ ಇಂಗ್ಲೀಷ್ ಭಾಷೆ, ಶಿಸ್ತು, ಓರಣ ಎಲ್ಲಾ ಬರ್‍ತದೆ' ಎಂದು ಬಿಟ್ಟ.

'ಹಲೋ ಗಿರೀ, ಯಾಕ, ಮತ್ತೇನು ?'

"ಸುನೀ, ಇವತ್ತಿನ ಮೀಟಿಂಗ್ ಲಗೂ ಮುಗಿಯು ಹಾಂಗ ಕಾಣೂದಿಲ್ಲ. ನೀವೆಲ್ಲ ನನ್ನ ದಾರಿ ನೋಡ ಬ್ಯಾಡ್ರಿ, ಅದನ್ನs ಹೇಳಲಿಕ್ಕೆ ಕರದೆ."

"ಈಗಿನ್ನೂ ಹನ್ನೆರಡ ಆಗೇದ ಗಿರೀ, ತಡಾ ಆದರೂ ಅಡ್ಡಿಯಿಲ್ಲಾ, ನೀ ಊಟಕ್ಕ ಮನೀಗೆ ಬರಬೇಕು. ನಾವೆಲ್ಲಾ ಕಾಯ್ತೀವಿ. ಇವತ್ತು ವಿಶೇಷ ದಿನಾ ಅಂತ ಹೇಳಿದ್ದೆ ಮರತೇನು!"

" ಇಲ್ಲಾ ಸುನೀ ಮರತಿಲ್ಲಾ. ನನಗ ಇಲ್ಲೆ ಭಾಳ ಕೆಲಸ ಅದ. ನಮ್ಮ ಪಕ್ಷದ ಸದಸ್ಯರೊಳಗ ಚುನಾವಣಾ ಟಿಕೆಟ್ ಯಾರಿಗೆ ಕೊಡಬೇಕು ಅನ್ನೂದರೊಳಗ ಭಿನ್ನಾಭಿಪ್ರಾಯ ಹುಟ್ಟೇದ. ಈ ಗದ್ದಲದೊಳಗ ನನ್ನ ತಲೀ ಕೆಟ್ಟು ಹೋಗೇದ. ಇನ್ನೊಮ್ಮೆ ಪ್ರಯತ್ನ ಮಾಡಿ ನೋಡ್ತೇವಿ. ಆಗದಿದ್ದರ ನಾನು ಈಗಿಂದೀಗ ರಾಜಧಾನಿಗೆ ಹೊರಡಬೇಕಾಗ್ತದ, ನಮ್ಮ ನಾಯಕರನ್ನ ಬೆಟ್ಟಿ ಆಗಬೇಕು. ಇದು ನನ್ನ ಜೀವನದೊಳಗ ಬಹಳ ಮಹತ್ವದ ವಿಷಯ ಅದ ಸುನೀs. ಪ್ಲೀಸ್ ನೀನು ಸಿಟ್ಟಾಗಬ್ಯಾಡಾ. ನನ್ನ ದಾರೀ ಕಾಯಬ್ಯಾಡ್ರಿ. ಪ್ಲೀಜ್ ಸುನೀ, ಬಾಯ್"

ಮೊಟ್ಟ ಮೊದಲ ಸಲ ತಂದೆಗೆ ಪರಿಚಯ ಮಾಡಿಕೊಡಲು ತನ್ನ ಮನೆಗೆ ಅವನನ್ನು ಆಹ್ವಾನಿಸಿ ಅವನಿಗೆ ಇಷ್ಟವಾದ ಬಣ್ಣದ ಸೀರೆಯುಟ್ಟು, ಚೆನ್ನಾಗಿ ಅಲಂಕರಿಸಿಕೊಂಡು ದಾರಿ ಕಾಯುತ್ತಾ ಕುಳಿತಾಗ ಗಿರೀಶ ಬಾರದೆ

ಅವನ ಫೋನ್ ಬಂದಿತ್ತು. ದಾರಿಯಲ್ಲಿ ಒಂದು ಸಣ್ಣ ಆಕ್ಸಿಡೆಂಟ್ ಸಂಭವಿಸಿದ್ದುದರಿಂದ ತಾನು ಹಾಸ್ಪಿಟಲ್‌ನಲ್ಲಿರುವೆನೆಂದೂ ಮನೆಗೆ ಬರಲು ತಡವಾಗುವುದೆಂದೂ ತಂದೆಯವರಿಗೆ ತಿಳಿಸಲು ವಿನಂತಿಸಿಕೊಂಡಿದ್ದ. ತನ್ನ ಮನಸ್ಸು ತುಂಬಾ ಕಳವಳಕ್ಕೀಡಾಗಿತ್ತು. ಆಕ್ಸಿಡೆಂಟ್ ಹೇಗಾಯಿತೋ ಎಷ್ಟು ಪೆಟ್ಟಾಗಿದೆಯೋ, ಯಾವ ಹಾಸ್ಪಿಟಲ್ ಎಂದು ಕೇಳಿದರೆ ಹೋಗಿ ನೋಡಿಕೊಂಡು ಬರಬಹುದಾಗಿತ್ತು ಎಂದು ಚಡಪಡಿಸಿದ್ದಳು. ಸ್ವತಃ ಫೋನ್ ಮಾಡಿದ್ದರಿಂದ ಅಂಥ ಸೀರಿಯಸ್ ಏನೂ ಇರಲಿಕ್ಕಿಲ್ಲ. ಇನ್ನೊಂದು ತಾಸಿಗೆ ಬಂದಾನು ಎಂದು ಸಮಾಧಾನ ಪಟ್ಟುಕೊಂಡಿದ್ದಳು. ತನ್ನಿಂದ ವಿಷಯ ತಿಳಿದ ತಂದೆ ಗಿರೀಶ ಬಂದ ಮೇಲೆ ತಮಗೆ ಫೋನ್ ಮಾಡಿ ತಿಳಿಸಲು ಹೊರಗೆ ಹೋಗಿದ್ದರು. ಅವರು ಹೋಗಿ ಹದಿನೈದು ನಿಮಿಷಗಳಲ್ಲಿಯೆ ಗಿರೀಶ ಬಂದಿದ್ದ. "ಎಕ್ಸಕ್ಯೂಜ್ ಮೀ ಸುನೀತಾ ತಡ ಆಯ್ತು. ನಗು ನಗುತ್ತಯಾವೊಂದು ಅಪಾಯವಿಲ್ಲದೇ ಗಿರೀಶ ತನ್ನೆದುರು ನಿಂತಾಗ ತನಗೆ ಖುಶಿಯಿಂದ ಕುಣಿಯುವಂತಾಗಿತ್ತು. ತಂದೆಯವರಿಗೆ ಫೋನ್ ಮಾಡಿ ಹಿಂತಿರುಗಿ ಬರುವಷ್ಟರಲ್ಲಿ ಗಿರೀಶ ಹೂದಾನಿಯಲ್ಲಿಯ ಬಿಳಿ ಗುಲಾಬಿ ಹಿಡಿದು ನಿಂತಿದ್ದ. ತನ್ನ ಹತ್ತಿರ ಬಂದು ಜಡೆಗೆ ಹೂ ಸಿಕ್ಕಿಸಿ, ತಲೆ ಬಗ್ಗಿಸಿ ನಿಂತ ತನ್ನ ಕೆಂಪು ಕೆನ್ನೆಯನ್ನು ಮೃದುವಾಗಿ ನೇವರಿಸಿದ್ದ. ಅಷ್ಟರಲ್ಲಿ ಅವ್ವ ಹೊರಗೆ ಬಂದಿದ್ದಳು.

"ಮಮ್ಮೀ ನನಗ ಹಸಿವಿ ಆತು. ಊಟಕ್ಕ ಕೊಡೂಣಲ್ಲಾ. ನಾನು ಮ್ಯಾಚ್ ನೋಡಲಿಕ್ಕೆ ಹೋಗಬೇಕಾಗೇದ." ಶಿರೀಷ ಕರೆದಾಗಲೇ ಸುನೀಳಿಗೆ ಎಚ್ಚರ. ಮೌನವಾಗಿ ಊಟ ಮಾಡುತ್ತಿರುವಾಗ ತಾಯಿಯ ಇಳಿಮುಖ ನೋಡಿ ಶಿರೀಷ ಲೊಚಗುಟ್ಟಿದ. "ಪಾಪ ಮಮ್ಮೀಗೆ ಭಾಳಾ ನಿರಾಶ ಆಗೇದ. ಎನಿವರ್ಸರಿಡೇ ದಿನಾನೂ ಪಪ್ಪಾ ಮನೀಗೆ ಊಟಕ್ಕ ಬರಲಿಲ್ಲಾ ಅಂತ." ಮಾಲಿನಿ ದನಿಗೂಡಿಸಿದಳು, "ಇರಲಿ ಬಿಡು, ಮಮ್ಮೀ, ಪಪ್ಪಾ ಎಲ್ಲಾರ ಹಾಂಗ ಸಾಮಾನ್ಯರು ಅಲ್ಲಾ. ಭಾಳ ದೊಡ್ಡ ಮನುಷ್ಯಾರು ಆಗ್ಯಾರ. ನನ್ನ ಫ್ರೆಂಡ್ಸ್ ಅಂತಿರತಾರ 'ನಿನ್ನ ಪಪ್ಪಾ ಭಾಷಣ ಎಷ್ಟು ಛಂದ ಮಾಡ್ತಾರ. ಸಭೆ, ಸಮಾರಂಭ ಅಂತ ಯಾವಾಗಲೂ ಅಡ್ಡಾಡತಾರ. ಭಾಳ ಜನಪ್ರಿಯ ಅದಾರ. ಪೇಪರಿನೊಳಗ ಅವರದs ಹೆಸರು ಓದ್ತೀವಿ.' ಅಂತ. ಪಕ್ಷ, ಸಮಾಜ ಅಂತ ಜನಸೇವಾ, ದೇಶಸೇವಾ ಮಾಡೂವವರಿಗೆ ಸ್ವಂತ ಜೀವನಕ್ಕ ಮಹತ್ವ, ಟೈಮು ಎರಡೂ ಇರೂದಿಲ್ಲ ಮಮ್ಮೀ. ನೀ ಇದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಬಾರದು. ನಾವು ಇದ್ದೀವಲ್ಲ ನಿನ್ನ ಜೊತೀಗೆ. ಹುಂ, ಸರಿಯಾಗಿ ಊಟಾ ಮಾಡು. ಇನ್ನಷ್ಟು ಪಾಯಸ ನೀಡತೇನಿ. ಏ ಶಿರೀಷ ಚಪಾತಿ ಸಾಕು ಬಿಡು ಇನ್ನ. ಮಸಾಲಿ ಅನ್ನ ಎಷ್ಟು ರುಚೀ ಆಗೇದ ನೋಡು. "

ಮಗಳ ಮಾತು ಕೇಳಿ ತೀರಿ ಹೋದ ತನ್ನ ತಾಯಿಯ ನೆನಪಾಗಿ ಕಂಠ ತುಂಬಿ ಬಂದರೂ ಬೆಳೆದ ಮಕ್ಕಳ ಎದುರು ತನ್ನ ದೌರ್ಬಲ್ಯ ತೋರಿಸಿಕೊಳ್ಳಬಾರದೆಂದು ಕಷ್ಟಪಟ್ಟುಕೊಂಡು ಊಟ ಮುಗಿಸಿದಳು ಸುನೀತಾ. ಮಗ ಮ್ಯಾಚಿಗೆ, ತಾಯಿ ಬರಲೊಪ್ಪದಾಗ ಮಗಳು ಗೆಳತಿಯೊಡನೆ ಸಿನಿಮಾಕ್ಕ ಹೊರಟು ಹೋದ ಮೇಲೆ ನೆಪಕ್ಕೆ ಕೈಯ್ಯಲ್ಲೊಂದು ಪುಸ್ತಕ ಹಿಡಿದು ಅಡ್ಡಾದಳು ಮನಸ್ಸು ಉಯ್ಯಾಲೆ ಆಡುತ್ತ ಹಿಂದೆ ಹೋಯಿತು....

"ರೀ ಮಿಸ್ ಸ್ವಲ್ಪ ನಿಲ್ರೀ" ಗಂಭೀರವಾದ ಆ ದನಿ ಕೇಳಿದೊಡನೆ ಮೂವರೂ ಹೊರಳಿ ನೋಡಿದರು. ಸಾಧಾರಣ ಎತ್ತರದ, ಗುಂಗುರು ಕೂದಲಿನ, ಮಿಂಚು ಕಣ್ಣಿನ ಯುವಕ ಮೊದಲು ಮುಗುಳು ನಕ್ಕ.

"ನಾನು ನಿಮಗ ಅಪರಿಚಿತ...."

" ಇಲ್ರೀ ನನಗ ಗೊತ್ತದ ನೀವು ಗಿರೀಶ ಸರ್ಜಾಪೂರ. ಪೊಲಿಟಿಕಲ್ ಸಾಯನ್ಸ ಬಿ.ಎ. ಕಡೀ ವರ್ಷ ಕಲೀತೀರಿ. ಹೌದಲ್ಲೊ " ಮಾಯಾ ತಟ್ಟನೆ ಕೇಳಿದಳು.

"ನೀವು ಭಾಷಣಾ ಭಾಳ ಛಂದ ಮಾಡ್ತೀರಿ. ಅಂತರ ಕಾಲೇಜ ಡಿಬೇಟಿನೊಳಗ ನಿಮಗ ಬಹುಮಾನ ಸಿಕ್ಕದ. ಈಗ ಜನರಲ್ ಸೆಕ್ರೆಟರಿ ಇಲೆಕ್ಷನ್‌ಕ ನಿಂತೀರಿ." ರೇಣು ತಾನೇನು ಕಮ್ಮಿ ಎನ್ನುವಂತೆ ಹೇಳಿದಳು.

ಇನ್ನು ಸುಮ್ಮನೆ ನಿಂತವಳು ತಾನೊಬ್ಬಳೇ. ಒಂದು ದಿನ ಕ್ಲಾಸಿನಿಂದ ತಾನೊಬ್ಬಳೇ ಹೊರಬಂದಾಗ ಕಾರಿಡಾರಿನ ತುಂಬಾ ಹುಡುಗರೇ ತುಂಬಿದ್ದರು. ಹೊಸದಾಗಿ ಬಂದು ಸೇರಿದವರೂ, ಹಳಬರೂ ಅಲ್ಲಲ್ಲಿ ಗುಂಪು ಗುಂಪಾಗಿ ನಿಂತು ಹರಟುತ್ತಿದ್ದುದರಿಂದ ತನಗೆ ಹೋಗಲು ದಾರಿಯೇ ಇರಲಿಲ್ಲ. ಅವರನ್ನು ದಾಟಿಕೊಂಡು ಹೋಗುವದಂತೂ ಸಾಧ್ಯವಿರಲಿಲ್ಲ. ಗಾಬರಿಯಾಗಿ ಅತ್ತಿತ್ತ ನೋಡುತ್ತ ನಿಂತಾಗ ಈ ಯುವಕ ಮುಂದೆ ಬಂದು ದಾರಿಗೆ ಅಡ್ಡವಾಗಿ ನಿಂತ ಇಬ್ಬರು ತರುಣರ ಹೆಗಲಮೇಲೆ ಕೈ ಹಾಕಿ ಸಹಜವಾಗಿ ಮಾತಾಡುತ್ತ ಅವರನ್ನು ಬದಿಗೆ ಸರಿಸಿ ತನ್ನತ್ತ ನೋಡಿದ್ದ. ಆ ಸುಳಿವು ತಿಳಿದು ತಾನು ತಲೆ ತಗ್ಗಿಸಿ ಸರಸರನೆ ಹೊರಟು ಹೋಗಿದ್ದಳು. ಇದೆಲ್ಲ ಒಬ್ಬರಿಗೂ ತಿಳಿಯದಂತೆ ನಡೆದದ್ದು. ಆಮೇಲೆ ಎದುರಿಗೆ ಕಂಡಾಗ ಕಣ್ಣುಗಳಲ್ಲೇ ಕೃತಜ್ಞತೆ ಸಲ್ಲಿಸಿದ್ದಳು. ಅವನ ಪರಿಚಯ ಇಂದೇ ಆದದ್ದು. ಅವನು ನಗುತ್ತ ಮತ್ತೆ ಹೇಳಿದ "ಆಯ್ತು ನನ್ನ ಅರ್ಧಾ ಕೆಲಸ ಆಯ್ತು. ನಾನು ಇಲೆಕ್ಷನ್‌ಕ ನಿಂತೇನಿ, ನಿಮ್ಮ ಓಟು ಕೇಳಲಿಕ್ಕೆ ನಿಲ್ಲಿಸಿಕೊಂಡೆ. ತೊಂದರೆ ಕೊಟ್ಟಿದ್ದಕ್ಕ ಕ್ಷಮಿಸ್ರಿ."

"ಛೇ ತೊಂದರಿ ಏನಿಲ್ಲಾ ಮಿ|| ಗಿರೀಶ, ನೀವು ಕಾಳಜಿ ಬಿಡ್ರಿ. ಅಷ್ಟs ಯಾಕ ಎಲ್ಲಾ ಲೇಡಿ ಸ್ಟೂಡೆಂಟ್ಸ್ ವ್ಹೋಟ್ ನಿಮಗ ಸಿಗತಾವ ಅಂತ ತಿಳಕೊಳ್ರಿ" ಮಾಯಾ ಮಾತು ಮುಗಿಸುವಷ್ಟರಲ್ಲಿ ಅಲ್ಲಿ ಕೂಡಿದ ವಿದ್ಯಾರ್ಥಿಗಳಲ್ಲಿ ಒಬ್ಬ "ಭಪ್ಪರೇ ಮಗನs ಹೀರೋ ಆದ್ಯೋ ಗಿರೀಶಾs" ಎಂದು ಕೂಗಿದ. ಎಲ್ಲರೂ ಗೊಳ್ಳೆಂದು ನಕ್ಕರು. "ನೀವು ಆರಿಸಿ ಬಂದ ಮ್ಯಾಲೆ ನಮಗ ಪಾರ್ಟಿ ಕೊಡಬೇಕ ನೋಡ್ರಿ " ರೇಣು ಚೇಷ್ಟೆ ಮಾಡಿದಳು.

ಗಿರೀಶ ಆರಿಸಿ ಬಂದು ಜನರಲ್ ಸೆಕ್ರೆಟರಿಯಾದ. ಮಾತು ಕೊಟ್ಟಂತೆ ಪಾರ್ಟಿನೂ ಕೊಟ್ಟ. ಅವನೊಡನೆ ಪರಿಚಯ ಬೆಳೆದಂತೆಲ್ಲಾ ಮನಸ್ಸು ಅವನತ್ತ ಎಳೆಯುತ್ತಿರುವುದರ ಅನುಭವವಾಗುತ್ತಿತ್ತು ತನಗೆ. ಅವನೂ ಅಷ್ಟೆ. ಎಲ್ಲರೊಡನೆ ಮಾತಾಡುತ್ತ ನಗುತ್ತ ಸಲಿಗೆಯಾಗಿದ್ದರೂ ತನ್ನ ಹತ್ತಿರ ಬಂದೊಡನೆ ಅವನ ಚಹರೆಯೇ ಬದಲಾಗುತ್ತಿತ್ತು. ಕಣ್ಣಿನ ಮಿಂಚು ಹೆಚ್ಚಾಗುತ್ತಿತ್ತು. ದನಿಯಲ್ಲಿ ಮಾರ್ದವತೆ ಮೂಡುತ್ತಿತ್ತು. ಯಾವ ಗುಂಪಿನಲ್ಲಿದ್ದರೂ ತಮ್ಮಿಬ್ಬರ ಕಣ್ಣುಗಳು ಹುಡುಕಾಟವಾಡುತ್ತಿದ್ದವು. ಏಕಾಂತದಲ್ಲಿ ತಾವಿಬ್ಬರೇ ಹತ್ತಿರ ಹತ್ತಿರ ಕುಳಿತು ಪಿಸುದನಿಯಲ್ಲಿ ಮಾತಾಡಿಕೊಳ್ಳುವ ಅವಕಾಶ ಸಿಕ್ಕಾಗ ಎಂದೂ ತಪ್ಪಿಸಿಕೊಳ್ಳಲಿಲ್ಲ. ತಾಯಿಗಿಂತಲೂ ತಂದೆಯ ಹತ್ತಿರ ಹೆಚ್ಚು ಸಲುಗೆಯಿಂದಿದ್ದ ತಾನು ಗಿರೀಶನನ್ನು ಮನೆಗೆ ಕರೆಯಲು ಅವರ ಒಪ್ಪಿಗೆ ಪಡೆದಿದ್ದಳು. ನಾಲ್ಕಾರು ಜನ ಅವನನ್ನ ಕಂಡು ಮಾತನಾಡಿ ಚೆನ್ನಾಗಿ ಪರಿಚಯವಾದ ಮೇಲೆ ತಂದೆ ಸೀರಿಯಸ್ಸಾಗಿ ಒಂದು ದಿನ ತನ್ನೊಡನೆ ಮಾತನಾಡಿದರು.

"ಗಿರೀಶ ಮೊದಲನೇ ಸಲಾ ಮನೀಗೆ ಬಂದಾಗ ತಡಾ ಆಗಿದ್ದಕ್ಕ ಕಾರಣಾ ಏನ ಹೇಳಿದ್ದಾ ನೆನಪದ ಏನು ಸುನೀತಾ ?"

ಹೌದು ತನಗೆ ಚೆನ್ನಾಗಿ ನೆನಪಿತ್ತು. ಅವನು ನಮ್ಮ ಮನೆಗೆ ಬರುವಾಗ ದಾರಿಯಲ್ಲಿ ಹೋಗುತ್ತಿದ್ದ ರಿಕ್ಷಾ ಒಬ್ಬ ಹೆಣ್ಣು ಮಗಳಿಗೆ ಡಿಕ್ಕಿ ಹೊಡೆದಿತ್ತು. ಅವಳು ಪ್ರಜ್ಞೆ ತಪ್ಪಿ ಬಿದ್ದಳು. ಗಿರೀಶ ತಕ್ಷಣ ಅವಳನ್ನು ಅದೇ ರಿಕ್ಷಾದವನ ಸಹಾಯದಿಂದ ಆಸ್ಪತ್ರೆಗೆ ಒಯ್ದು ಚಿಕಿತ್ಸೆ ಕೊಡಿಸಿದ್ದ. ಅವಳಿಗೆ ಪ್ರಜ್ಞೆಬಂದ ಮೇಲೆ ವಿಳಾಸ ತಿಳಿದುಕೊಂಡು ಅವಳ ಮಗನನ್ನು ಕರೆಸಿ ರಿಕ್ಷಾದವನೊಡನೆ ರಾಜೀ ಮಾಡಿಸಿ ಇಬ್ಬರಿಗೂ ತೊಂದರೆ ಆಗದಂತೆ ನೋಡಿಕೊಂಡಿದ್ದ. ಎರಡು ದಿನಗಳ ಮೇಲೆ ತನ್ನನ್ನೂ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಸಾವಿತ್ರಮ್ಮನ ಭೆಟ್ಟಿ ಮಾಡಿಸಿದ್ದಾಗ, ತಾಯಿ ಮಗ ಇಬ್ಬರೂ ಗಿರೀಶ ಅವರ ಭಾಗದ ದೇವರೆಂದು ಹಾಡಿ ಹೊಗಳಿದ್ದರು. ತಾನು ಹೆಮ್ಮೆಯಿಂದ ಉಬ್ಬಿ ಹೋಗಿದ್ದಳು. ತಂದೆಯ ಪ್ರಶ್ನೆಗೆ 'ಹುಂ' ಎಂದು ಗೋಣು ಹಾಕಿದಳು.

"ಈಗಿನ ಬಹಳಷ್ಟು ಯುವಕರ ನಡತಿ ನನಗ ಸರಿ ಬರೂದಿಲ್ಲ. ಅವರ ಅಜ್ಞಾನ ಆಡಂಬರ, ಅಹಂಕಾರ ಎಲ್ಲಾ ನೋಡಿ ಸಿಟ್ಟು ಬರತದ. ಆದರ ಗಿರೀಶ ಮಾತ್ರ ಅಂಥಾವ ಅಲ್ಲಾ. ನಾನೂ ಎಷ್ಟೋ ರೀತಿಯಿಂದ ನೋಡಿದೆ, ಆದರ್ಶವಾದಿ, ಪ್ರಾಮಾಣಿಕ, ಸ್ವಾಭಿಮಾನಿ ಹುಡುಗ ಇದ್ದಾನ."

ಮಾತುಗಳು ತನ್ನ ಕಿವಿಗೆ ಇಂಪಾಗಿ ಮನಕ್ಕೆ ತಂಪಾಗಿದ್ದವು. ತಮ್ಮ ಮದುವೆಗೆ ಏನನ್ನುವರೋ ಎನ್ನುವ ಅಧೈರ್ಯ ಸ್ವಲ್ಪ ಸ್ವಲ್ಪವಾಗಿ ಮಾಯವಾಗುತ್ತಿತ್ತು.

"ನಾನು ಇಂಥಾ ಹುಡುಗನ್ನ ಭಾಳ ಲೈಕ್ ಮಾಡ್ತೀನಿ ಸೀತಾ. ನನಗ ಒಂದು ಸಂಶಯ ಬಂದಿತ್ತು. ಅದೂ ಇಂದು ಪರಿಹಾರ ಆಯ್ತು. ಗಿರೀಶ ವಕೀಲ ಆಗಬೇಕು, ನ್ಯಾಯಕ್ಕ ಹೋರಾಡಬೇಕು, ಸಮಾಜಸೇವಾ ಮಾಡಬೇಕು. ನೌಕರಿ ಸೇರಿ ಗುಲಾಮ ಆಗಬಾರದು ಅಂತಾನ. ನಗರದ ಪ್ರಸಿದ್ಧ ವಕೀಲ ನಾರಾಯಣರಾಯರ ಮಗಳು ಅಂತ ನಿನ್ನ ಮ್ಯಾಲೆ ಬಲೀ ಬೀಸಿದ್ದನೇನೋ ಅನಿಸಿತ್ತು. ಆದರ ಅದು ತಪ್ಪು. ನಾನು ಮದುವೀ ಮಾತು ತಗದಾಗ ಒಪ್ಪಿಗೆ ಕೊಟ್ಟ ಮ್ಯಾಲೆ ಹೇಳಿದಾ: ಮದುವಿ ಆದ ಮ್ಯಾಲೆ ಸುನೀತಾನ ಕೂಡ ಬ್ಯಾರೆ ಮನೀಮಾಡ್ತೀನಿ. ಪ್ರ್ಯಾಕ್ಟಿಸ್ ಬೆಳೆಯುತನಕಾ ತನ್ನ ಪಾಲಿಗೆ ಬಂದ ನಾಲ್ಕೆಕರೆ ಹೊಲಾ ಮಾರಿ, ಒಂದೆರಡು ಟ್ಯೂಶನ್ ಹೇಳಿ, ಮನೀ ನಡಸತೇನಿ ಅಂತ. ನಾನು ಎಷ್ಟು ಹೇಳಿದರೂ ಕೇಳಲಿಲ್ಲ. ಮಾವನ ಮನಿಯೊಳಗ ಇರಲಿಕ್ಕೆ ತಯಾರಿಲ್ಲ. ಈ ಹುಡುಗ ಭಾಳ ಸ್ವಾಭಿಮಾನಿ ಅದಾನ. ಗಂಭೀರ ಅದಾನ. ಭಲೇ ಭಲೇ." ತಂದೆ ಯೋಚಿಸುವಂತೆ ಕಣ್ಣುಮುಚ್ಚಿ ಸುಮ್ಮನಾದರು.

ಸಂತೋಷದಿಂದ ಎದೆ ಹಾರುತ್ತಿದ್ದರೂ ನಡುಗುವ ಕೈಗಳನ್ನು ಗಟ್ಟಿಯಾಗಿ ಹಿಡಿದು ಕೊಂಡು ತಾನೇ ಕೇಳಿದಳು. "ಅಪ್ಪಾs ಆದರ ಅವರ ಜಾತಿ..."

ತಲೆದೂಗುತ್ತ ತಂದೆ ಅಂದಿದ್ದರು. "ಹುಂ. ಹೌದು ಗಿರೀಶನ ಮನಿತನಾ, ಬಂಧು-ಬಳಗ, ಜಾತಿ-ಕುಲ ತಿಳಕೊಂಡೇನಿ. ಹಣದಿಂದ ಶ್ರೀಮಂತ ಅಲ್ಲದಿದ್ದರೂ ವಿದ್ಯಾ, ಬುದ್ಧಿ, ಗುಣ ಸ್ವಭಾವ ಎಲ್ಲಾರಿಂದನೂ ಶ್ರೀಮಂತ ಇದ್ದಾನ. ಇಂಥಾ ಅಳಿಯ ಯಾವ ಜಾತಿಯವ ಆದರೂ ಅಷ್ಟs. ಮನೀ ಮಾಡಿ ಹೆಂಡತಿಯನ್ನೂ ಪ್ರೀತಿಯಿಂದ ನೋಡಿಕೊಂಡು ಸಮಾಜದೊಳಗ ಗೌರವಸ್ಥ ಆಗಿರೂ ಅಳಿಯಾ ನನಗ ಸಿಕ್ಕರ ಸಾಕು, ಪ್ರೀತಿನೂ ಕೂಡೇದ, ಇನ್ನೇನು ಬೇಕು."?

ತಂದೆ ತಾಯಿಯರ ಒಪ್ಪಿಗೆಯಿಂದಲೇ ಪ್ರೇಮವಿವಾಹ ಮಾಡಿಕೊಂಡ ಅದೃಷ್ಟವಂತೆ ತಾನು. ಗಿರೀಶ ಹೊಸ ಮನೆ ಮಾಡಿ ಪ್ರ್ಯಾಕ್ಟೀಸು ಸುರು ಮಾಡಿದ ಮೇಲೆ ಮಾಲಿನಿ ಹುಟ್ಟುವವರೆಗೆ ಎಂ.ಎ. ಓದಿದಳು. ಗಿರೀಶನ ಒಪ್ಪಿಗೆ ಪಡೆದು ಮನೆಯ ಜವಾಬ್ದಾರಿಯಲ್ಲಿ ತನ್ನದೂ ಪಾಲಿರಲೆಂದು ಕಾಲೇಜು ಲೆಕ್ಚರರ ಆದಳು. ಸೂರೆ ಹೋಗುವಂತಹ ಸಂಪತ್ತಿಲ್ಲದಿದ್ದರೂ ಜೀವನದಲಿ ಸುಖವಿತ್ತು ನೆಮ್ಮದಿಯಿತ್ತು.

ಒಂದು ಮಧ್ಯಾಹ್ನ ಕಾಲೇಜಿಗೆ ಫೋನು ಮಾಡಿದ. "ಸುನೀ, ನನ್ನ ಗೆಳೆಯ ವಿಶ್ವನಾಥ ಅಂತ ಇದ್ದಾ, ನನ್ನ ಗಳಸ್ಯ ಕಂಠಸ್ಯ, ನೆನಪದ ಏನು?" ಸದಾ ಬಾಲಂಗೋಸಿಯಂತೆ ಗಿರೀಶನ ಹಿಂದೆಯೇ ತಿರುಗುತ್ತಿದ್ದ ಅವನನ್ನು ತಾನು ಹೇಗೆ ಮರೆತಾಳು. "ಅಂವಾ ಇಲ್ಲಿಗೆ ಎ.ಎಸ್.ಪಿ. ಅಂತ ವರ್ಗ ಆಗಿ ಬಂದಾನ. ಗಂಡಾ ಹೇಣ್ತಿ ಇಬ್ಬರ್‍ನೂ ಊಟಕ್ಕ ಕರದೇನಿ. ಕಾಲೇಜದಿಂದ ಸ್ವಲ್ಪ ಲಗೂನ ಮನೀಗೆ ಹೋಗ್ತೀಯಲ್ಲಾ."

ವಿಶ್ವನಾಥ ಯಾವ ಕೆಟ್ಟ ಮುಹೂರ್ತದಲ್ಲಿ ನಗರಕ್ಕೆ ಕಾಲಿಟ್ಟನೋ ಗಿರೀಶ ಮನೆಗೆ ಬರುವುದನ್ನೇ ಕಡಿಮೆ ಮಾಡಿದ. ಸಂಜೆ ಹೊತ್ತು ಇಬ್ಬರೂ ಕೂಡಿ ಮಾಲಿನಿಯೊಡನೆ ಸಂತೋಷವಾಗಿ ಆಡತಿದ್ವಿ. ಅದೂ ತಪ್ಪಿಹೋಯ್ತು. ಆದರೆ ಗಿರೀಶನ ಪ್ರ್ಯಾಕ್ಟೀಸ್ ಚನ್ನಾಗಿ ನಡೀತಾ ಬಂದು ಆದಾಯ ಏರ್‍ತಾ ಹೋಯ್ತು. ದೊಡ್ಡ ಮನೆಗೆ ಹೋದೆವು. ಮನೆಗೆ ಫೋನ್ ಬಂದಿತು. ಒಳ್ಳೊಳ್ಳೆ ಸೀರೆ, ಬಟ್ಟೆ ಬಂದವು. ತೋಟದ ಕೆಲಸಕ್ಕೆ ಮಾಲಿ ಬಂದ. ಶಿರೀಷ್ ಹುಟ್ಟಿ ಮಗನ ನಾಮಕರಣ ಸಮಾರಂಭವನ್ನು ಗಿರೀಶ ವಿಜೃಂಭಣೆಯಿಂದ ಆಚರಿಸಿದ. ನಗರದ ಪ್ರತಿಷ್ಠಿತರೆಲ್ಲ ಬಂದಿದ್ದರು. ಯಾರ್‍ಯಾರೋ ಓಡಾಡಿದರು. ಉಂಡು ತಿಂದು, ಕೈತೊಳೆದು ರಾಶಿ ಉಡುಗೊರೆ ಕೊಟ್ಟು ಹೋದರು. ತನ್ನ ಗಿರೀಶನಿಗೆ ಇಷ್ಟೊಂದು ಜನರ ಗುರುತಿದೆ, ಅವನ ಹೆಸರು ಎಲ್ಲ ವರ್ಗಗಳವರಿಗೂ ಗೊತ್ತಿದೆ ಎನ್ನುವುದು ಅಂದೇ ತನಗೆ

ತಿಳಿಯಿತು. ಮನಸ್ಸಿಗೇನೋ ಸಂತೋಷವಾಯಿತು. ಆದರೆ ಒಳಗಿನವ ಸಣ್ಣದನಿಯೊಂದು ಕೂಗುತ್ತಿತ್ತು ಗಿರೀಶ ತನ್ನಿಂದ ದೂರವಾಗುತ್ತಿದ್ದಾನೆ ಎಂದು.

ಒಂದು ಸಂಜೆ ಅನಿರೀಕ್ಷಿತವಾಗಿ ಗಿರೀಶ ಮನೆಗೆ ಬಂದ. ಸಂಭ್ರಮದಿಂದ ಬೇಗ ಚಹಾ ತಿಂಡಿ ಕೊಡಬೇಕೆಂದು ತಾನು ಎದ್ದಳು. ಆದರೆ ಗೀರೀಶ ತನ್ನ ಸುತ್ತ ತೋಳು ಬಳಸಿ ಹಿಡಿದುಕೊಂಡು ಬೆಡ್‌ರೂಮಿಗೆ ಕರೆದೊಯ್ದು ಕಿಸೆಯಲ್ಲಿಯ ಪೆಟ್ಟಿಗೆಯನ್ನು ತೆಗೆದು ಒಂದು ಸುಂದರವಾದ ನೆಕ್ಲೇಸ್ ತನ್ನ ಕುತ್ತಿಗೆಗೆ ತೊಡಿಸಿ ಅಪ್ಪಿಕೊಂಡು ಮುತ್ತಿಟ್ಟ. ಇಂತ ಕ್ಷಣಗಳೇ ಅಪರೂಪವಾಗಿದ್ದಾಗ ಸಂತೋಷದಿಂದ ತನ್ನ ಕಣ್ಣು ತುಂಬಿ ಬಂದಿದ್ದವು. ಕಷ್ಟಪಟ್ಟು ದುಡಿದು ಬಂಗಾರದ ಸರ ತಂದು ಕೊಡೋ ಬದಲು ನಿಮ್ಮ ತೋಳಿನ ಹಾರವೇ ಸಾಕಾಗಿತ್ತು ನನಗೆ." ಎಂದಿದ್ದಳು. ತಾನು, 'ಹುಚ್ಚಿ' 'ಹುಚ್ಚಿ' ಎನ್ನುತ್ತ ಮತ್ತೆ ಮತ್ತೆ ಅಪ್ಪಿ ಮುತ್ತು ಕೊಟ್ಟಿದ್ದ.

ತರುವಾಯ ವಿಶ್ವನಾಥನ ಹೆಂಡತಿ ಅಲಕಾಳಿಂದ ತನಗೆ ಆ ನಂಬಲಾರದ ವಿಚಿತ್ರ ಸುದ್ದಿ ತಿಳಿದಿತ್ತು. ಗಿರೀಶ ದಿನವೂ ಸಂಜೆ ವಿಶ್ವನಾಥ, ಗಂಗಾಧರ ಗೌಡ, ನಾರಾಯಣ ಸ್ವಾಮಿಯವರ ಜೊತೆಗೆ ಕ್ಲಬ್ಬಿನಲ್ಲಿ ಇಸ್ಪೀಟು ಆಡುತ್ತಾನೆ. ಕೆಲವು ದಿನಗಳ ಹಿಂದೆ ಅವನೇ ಸಾವಿರಾರು ರೂಪಾಯಿ ಗೆದ್ದಿದ್ದ. ಅದರಿಂದ ನೆಕ್ಲೇಸ್ ಕೊಂಡನೆಂದು ವಿಶ್ವನಾಥನ ಹತ್ತಿರ ಹೇಳಿದನಂತೆ. ತನಗೆ ಮೈ ತುಂಬ ಸೂಚಿ ಚುಚ್ಚಿದ ಅನುಭವ. ತಿರಸ್ಕಾರದಿಂದ ಅಂದು ರಾತ್ರಿಯೇ ಗಿರೀಶನಿಗೆ ಹೇಳಿದೆ. ಇಂಥ ಹಣದ ನೆಕ್ಲೇಸ್ ನನಗೆ ಬೇಡ ಎಂದು ಅವನ ಮುಂದೆಯೇ ಬೀರುವಿನಿಂದ ತೆಗೆದು ಡ್ರೆಸ್ಸಿಂಗ್ ಟೇಬಲ್ ಮೇಲಿಟ್ಟೆ. ಮರುದಿನ ಮನೆಯಿಂದಲೇ ಅದು ಮಾಯವಾಗಿತ್ತು. ಅಂತೂ ತಾನೂ ಗೆದ್ದೆನೆಂದು ಹಾಯಾಗಿದ್ದೆ. ಆದರೆ ಹದಿನೈದಿಪ್ಪತ್ತು ದಿನಗಳ ಮೇಲೆ ಲಲಿತಾ ಅದೇ ನೆಕ್ಲೇಸ್ ಹಾಕಿಕೊಂಡು ತಮ್ಮ ಮನೆಗೆ ಬಂದಾಗ ಗೊತ್ತಾಯಿತು. ಗಿರೀಶ ಸರವನ್ನು ಪಣಕ್ಕೊಡ್ಡಿ ಇಸ್ಪೀಟಾಟದಲ್ಲಿ ಸೋತಿದ್ದಾನೆಂದು. ಅವನನ್ನು ತಿದ್ದಿ ದಾರಿಗೆ ತರಲು ಯತ್ನಿಸಿ ತಾನೂ ಸೋತಿದ್ದಳು.

ಒಂದು ರಾತ್ರಿ ಫೋನ್ ಬಂದಿತು ನಾರಾಯಣ ಸ್ವಾಮಿಯಿಂದ; ಅರ್ಜೆಂಟ್ ಬರಬೇಕೆಂದು ಕಾರನ್ನೂ ಕಳಿಸಿದ್ದರು. ಗಿರೀಶ ಹೋಗಿ ಬೆಳಗು ಮುಂಜಾನೆ ಬಂದ. ಅವನ ಬಾಯಿಂದ ಮದ್ಯದ ವಾಸನೆ ಹೊಡೆಯುತ್ತಿತ್ತು. ಅದು ತನಗೆ ಎರಡನೆಯ ಶಾಕ್. ಮಕ್ಕಳ ಮುಂದೆ ಜಗಳವಾಡಬಾರದೆಂದು ಸುಮ್ಮನೆ ಎದ್ದು ತನ್ನ ಕೆಲಸಗಳನ್ನೆಲ್ಲ ಮುಗಿಸಿ ತಡವಾಗಿ ಎದ್ದು ಗಂಡನನ್ನು ಮಾತಾಡಿಸದೆ ಕಾಲೇಜಿಗೆ ಹೊರಟು ಹೋಗಿದ್ದಳು. ಸಂಜೆ ಬಂದಾಗ ಗಿರೀಶ ಮನೆಯಲ್ಲೇ ಇದ್ದ. ತನ್ನನ್ನು ಎಳೆದು ತಂದು ಕೂಡ್ರಿಸಿ, ರಾತ್ರಿ ನಡೆದದ್ದೆಲ್ಲ ವಿವರಿಸಿದ್ದ. "ನಾರಾಯಣಸ್ವಾಮಿ ಗೋವೆಯ ಪೆನ್ನಿಯ ಕಳ್ಳಸಾಗಾಣಿಕೆದಾರ, ಹೇಗೋ ಅವನ ಕಾರು ಪೋಲಿಸರಿಗೆ ಸಿಕ್ಕುಬಿಟ್ಟಿತ್ತು. ಗಿರೀಶ ಹೋಗಿ ಬೇರೊಂದು ಊರಿನ ದಫೇದಾರನಿಗೆ ಕೈ ಬೆಚ್ಚಗೆ ಮಾಡಿ ಎರಡು ದಿನಗಳ ಹಿಂದೆ ತನ್ನ ಕಾರು ಕಳುವಾಗಿತ್ತೆನ್ನುವ ದೂರನ್ನು ಸ್ವಾಮಿಯಿಂದ ಮಾಡಿಸಿ ಬಂದ. ಇನ್ನೇನು ಕೇಸು ಗೆದ್ದ ಹಾಗೆಯೇ. ಆ ಸಂತೋಷಕ್ಕಾಗಿ ಸ್ವಾಮಿ ಪೆನ್ನಿಯ ರುಚಿ ತೋರಿಸಿದ.. ಕ್ಷಮಿಸು ಸುನೀs, ನಾನು ಕುಡುಕ ಅಲ್ಲಾ" ಎಂದು ಗಿರೀಶ ಅಂಗಲಾಚಿದಾಗ ತಾನು ಕರಗಿ ಅವನ ತಲೆ ಎಳೆದು ಎದೆಗೊತ್ತಿಕೊಂಡು ಮಗುವಿನಂತೆ ರಮಿಸಿದ್ದಳು. ಆದರೆ ಅವನ ಮಾತು ಸುಳ್ಳೆನ್ನುವುದು ಆಮೇಲೆ ಗೊತ್ತಾಗಿತ್ತು.

ಮುಂದೊಂದು ದಿನ ಕಾಲೇಜಿನಿಂದ ಹೊರಗೆ ಬಂದಾಗ ತನಗೊಂದು ಆಶ್ಚರ್ಯ ಕಾದಿತ್ತು. ಕಾರಿನಲ್ಲಿ ಕುಳಿತು ಗಿರೀಶ ತನಗಾಗಿ ಕಾಯುತ್ತಿದ್ದ. ಮನೆಗೆ ಬಂದ ಮೇಲೆ ಹೇಳಿದ. "ಸ್ವಾಮಿಯ ಕೇಸು ಗೆದ್ದಿತು ಸುನೀ. ಅವನು ಸಿಕ್ಕಿಕೊಳ್ಳದೆ ಪಾರಾದ. ಅದಕ್ಕ ಈ ಕಾರು ನನಗ ಪ್ರಜೆಂಟ ಮಾಡ್ಯಾನ. ನಾಳಿಂದ ನಾನs ಡ್ರೈವಿಂಗ್ ಕಲೀತೀನಿ. ಹಾಂ. ಸುನೀs ಕಾರಿಗೆ ಹೆಸರ ಏನು ಇಡೂಣು ಹೇಳು, ನಿನ್ನದs ಚೊಯ್ಸ" ಅವನು ಗಲ್ಲ ಹಿಂಡಿ ಕೇಳಿದಾಗ "ಫೆನ್ನಿ ಅಂತ ಇಡು ಗಿರೀ" ಎಂದು ಬಿರುಸಿನಿಂದ ಹೇಳಿ ಅಲ್ಲಿಂದ ಎದ್ದು ಹೋಗಿದ್ದಳು ತಾನು. ಮೊದಲು

ಫೋನು, ಕಾರು, ಆಮೇಲೆ ಇಂಥ ದೊಡ್ಡ ಮನೆ, ಅದಕ್ಕೆ ತಕ್ಕ ಆಡಂಬರದ ಸಾಮಗ್ರಿಗಳು ಒಂದೊಂದೇ ಮೆಟ್ಟಲು ಹತ್ತಿ ಹೋಗಿದ್ದ ಗಿರೀಶ, ಸಮಾಜದಲ್ಲಿ ಅವನ ಅಂತಸ್ತು ಏರುತ್ತಿತ್ತು. ಆದರೆ ತನ್ನ ದೃಷ್ಟಿಯಲ್ಲಿ ? ಆದರ್ಶವಾದಿ, ಪ್ರಾಮಾಣಿಕ, ಸ್ವಾಭಿಮಾನಿ ಗಿರೀಶ ಎಲ್ಲಿ ? ಲಂಚಕೋರರ, ಕಪ್ಪು ಹಣದವರ ಬಡವರ ಬಾಯಿ ಬಡಕರ ಈ ಗಿರೀಶ ಎಲ್ಲಿ ? ಅಜಗಜಾಂತರ.

ಗಿರೀಶನ ಆಪ್ತ ಸ್ನೇಹಿತ ಡಾ. ಶಿವಮೂರ್ತಿಯ ಕರೆಯ ಮೇರೆಗೆ ಅಂದು ತಾನು ಕಾಲೇಜಿನಿಂದ ಸೀದಾ ಅವರ ಶಾಂತಿ ನರ್ಸಿಂಗ್ ಹೋಂಗೆ ಹೋಗಿದ್ದಳು. ಇತ್ತೀಚೆಗೆ ಗಿರೀಶನ ಬ್ಲಡ್ ಪ್ರೆಶರ್ ಏರುತ್ತಿದೆಯೆಂದೂ, ಪಥ್ಯ, ಔಷಧಿ, ರೆಸ್ಟ್ ಎಲ್ಲ ಅವನಿಗೆ ಅವಶ್ಯವೆಂದೂ ಹೇಳಲು ಕರೆದಿದ್ದರು ಮೂರ್ತಿ.

"ನನ್ನಿಂದ ಸಾಧ್ಯ ಇದ್ದಷ್ಟು ಅವರ ಪಥ್ಯ ಔಷಧಿ ಎಲ್ಲಾ ನೋಡಿಕೋಳ್ಳೀನಿ ಶಿವಣ್ಣಾs. ಇನ್ನ ಮ್ಯಾಲೆ ಪಕ್ಷದ ಮೀಟಿಂಗು ಚರ್ಚಾ ಎಲ್ಲಾ ಮನೀಯೊಳಗs ಕರೀಲಿಕ್ಕೆ ಹೇಳತೀನಿ ಅಂದರ ಅವರಿಗೆ ಸ್ವಲ್ಪ ರೆಸ್ಟ್ ಸಿಕ್ಕೀತು."

ಚ್ಚುಚ್ಚು ಲೊಚಗುಟ್ಟುತ್ತ ಶಿವಮೂರ್ತಿ 'ದೇವಕೀ' ಎಂದು ಕರೆದರು. 'ಏನ್ಸಾರ್' ಎನ್ನುತ್ತ ಲಕ್ಷಣವಾಗಿದ್ದ ಹರೆಯದ ಹುಡುಗಿಯೊಬ್ಬಳು ಬಂದು ನಿಂತಾಗ ಅವಳಿಗೆ ಏನೋ ಕೆಲಸ ಹೇಳಿ ಕಳಿಸಿದ ಮೇಲೆ ತನ್ನತ್ತ ತಿರುಗಿ ಕೇಳಿದರು: "ಈ ಹುಡುಗಿ ಬಗ್ಗೆ ನಿಮಗ ಏನೂ ಗೊತ್ತಿಲ್ಲ ನೀತಕ್ಕಾ" ಎಂದು ಅವರ ಗಂಭೀರವಾದ ಮುಖ ನೋಡುತ್ತ ಇಲ್ಲವೆಂದು ಗೋಣು ಹಾಕಿದ್ದಳು ತಾನು. "ಇಕೀ ಅಕ್ರಮ ಗರ್ಭ ತಗಸಲಿಕ್ಕೆ ಈಗ ಆರು ತಿಂಗಳು ಹಿಂದ ಗಿರೀಶ ಇಕಿನ್ನ ಇಲ್ಲೆ ಅಡ್ಮಿಟ್ ಮಾಡಿಸಿದ. ಆಮ್ಯಾಲೆ ಇಲ್ಲೇ ಆಯಾ ಅಂತ ಕೆಲಸಕ್ಕೆ ಇಟ್ಟಕೋ ಶಿವೂ, ಭಾಳ ಚುರುಕು ಹುಡುಗಿ, ತಪ್ಪಿ ಕಾಲು ಜಾರ್‍ಯಾಳ ಅಂತ ಶಿಫಾರಸು ಮಾಡಿದ. ನಾನು ನೋಡ್ತಿದ್ದಂಗ ಹುಡುಗಿ ಸ್ವಭಾವ ಛಲೋ ಅದ. ಪ್ರಾಮಾಣಿಕ ಮತ್ತು ಚುರುಕು ಇದ್ದಾಳ."

"ಪಾಪ! ಮತ್ತ ಯಾತಕ ಅಂಥ ಕೆಲಸಾ ಮಾಡಿದಳೋ" ಎಂದು ತಾನು ಅನುಕಂಪ ತೋರಿಸಿದಾಗ ಬಂದ ಶಿವಮೂರ್ತಿಯವರ ಉತ್ತರ ತನ್ನನ್ನು ದಂಗು ಬಡಿಸಿತ್ತು.

"ನೀತಕ್ಕಾ ಹೊರಗಿನ ಜಗತ್ತು ಹ್ಯಾಂಗ ಅದ ಅನ್ನೂದು ನಿಮಗಿನ್ನೂ ಗೊತ್ತಿಲ್ಲಾ. ಮನೀ, ಮಕ್ಕಳು, ಕಾಲೇಜು ಇದs ವರ್ತುಲದೊಳಗ ನೀವು ಜೀವಿಸ್ತೀರಿ. ಈ ಹುಡುಗಿ ಶೀಲಾ ಕೆಡಿಸಿದವರು ದೊಡ್ಡ ದೊಡ್ಡ ಜನಾ ಯಾರೂ ಅನ್ನೂದು ಆಕೀಗೆ ಗೊತ್ತಿದ್ರು ಬಾಯಿ ಬಿಡೂದಿಲ್ಲಾ; ಮತ್ತ ಕೇಳಿದ ಜನಾ ತನ್ನ ಮಾತೂ ನಂಬೂದಿಲ್ಲಾ ಅಂತಾಳ. ಅವಳ ಮಾತು ಖರೇ ಅನಸ್ತದ ನನಗ."

ಎದೆ ಡವಗಟ್ಟುತ್ತಿದ್ದರೂ ತಾನು "ಇದಕ್ಕ ಕಾರಣ ಯಾರು ಅಂತ ನಿಮ್ಮ ಮುಂದೂ ಹೇಳಿಲ್ಲೇನು ಆಕಿ" ಎಂದಿದ್ದಳು. " ಆಕಿ ಹೇಳದಿದ್ದರೂ ನನಗ ಗೊತ್ತಾಗೇದ. ಗಿರೀಶನ ಪಕ್ಷದ ಪೋಲಿ ಪಟಾಲಂದವರs ಈ ಕೆಲಸಾ ಮಾಡಿದ್ದು. ಹೇಳ್ರಿ ನೀತಕ್ಕ ಇಂಥಾ ಜನರನ್ನೆಲ್ಲಾ ನೀವು ಮನಿಯೊಳಗ ಸೇರಿಸ್ತೀರಾ ? ಈ ಬದ್ಮಾಷರನ್ನ ಮಾನ್ಯ ಅತಿಥಿಗಳ ಹಾಂಗ ಕಾಣ್ತೀರಾ?" ತನ್ನ ನಿರುತ್ತರವೇ ಶಿವಮೂರ್ತಿಗೆ ಉತ್ತರವಾಗಿತ್ತು.

ಮನೆಗೆ ಬಂದ ಮೇಲೆ ಗಂಡನೊಡನೆ ಆದ ಬಿಸಿ ಬಿಸಿ ಮಾತುಕತೆಯ ಕೊನೆಗೆ ಅವನೇ ಅಂದು ಬಿಟ್ಟಿದ್ದ. "ಅವರೇನೇ ಈ ಮಾತು ಮನಸಿಗೆ ಹಚ್ಚಿಕೊಂಡಿಲ್ಲಾ, ನೀ ಯಾಕ ತಲೀ ಕೆಡಿಸಿಕೋತಿ ಬಿಡು. ಸಮಾಜದಾಗ ಹದಿನೆಂಟು ತರದ ಜನಾ ಅಂದ ಮ್ಯಾಲೆ ಇವೆಲ್ಲಾ ನಡೀಯೂವs" ಅಂತ. ಆ ಹದಿನೆಂಟರಲ್ಲಿ ಅವನೂ ಒಬ್ಬ ಎನ್ನುವುದು ತನಗೆ ತಿಳಿದರೂ ತಾನೇನು ಮಾಡುವಂತಿದ್ದೆ-

ಮಕ್ಕಳು ದೊಡ್ಡವರಾದ ಮಲೆ ಗಿರೀಶ ತನಗೆ ಎಷ್ಟೋ ಸಲ ಹೇಳಿದ್ದ ನೌಕರಿ ಬಿಟ್ಟು ಬಿಡು ಎಂದು. ಅದೇಕೋ ತನಗೆ ಅವನ ಮಾತು ಒಪ್ಪಿಗೆಯಾಗಿರಲಿಲ್ಲ. ಈ ಮನೆ ತನ್ನದು, ಗಿರೀಶ ತನ್ನವನು ಎನ್ನುವ ಮೋಹವೋ ಆಕರ್ಷಣೆಯೋ ದಿನದಿನಕ್ಕೆ ಕಡಿಮೆಯಾಗುತ್ತಿತ್ತು. ಆದರೆ ಅವನನ್ನು ಎದುರಿಸಿ, ಪ್ರತಿಭಟಿಸಿ, ಧಿಕ್ಕರಿಸಿ ಹೋಗುವಷ್ಟು ತಾನು ನಿಷ್ಕ್ರಿಯಳಾಗಿ ಬಿಟ್ಟಿದ್ದಳು. ತನ್ನ ಮಾತು ಕೇಳದೆ ತನ್ನ ಪ್ರೀತಿಯ ವಲಯವನ್ನು ದಾಟಿ ಬಹುದೂರ ಹೋಗಿ ಗಿರೀಶ ಜನ ನಾಯಕನಾಗುತ್ತಿದ್ದಾನೆ. ಇನ್ನೇನು ಟಿಕೆಟ್ ಸಿಕ್ಕರೆ ಈ ವರ್ಷ ಆರಿಸಿ ಬಂದು, ಮುಂದೆ ಮಂತ್ರಿಯೂ ಆಗುವ ಕನಸು ಕಾಣುತ್ತಿದ್ದಾನೆ. ಅವನಿಗೂ ತನಗೂ ಅಂತರ ಹೆಚ್ಚು ಹೆಚ್ಚಾಗುತ್ತಿದೆ. ಆದರೂ ಒಂದೇ ಮನೆಯ ಛಾವಣಿಯ ಕೆಳಗೆ ಗಂಡ ಹೆಂಡತಿಯಾಗಿ ಬಾಳುತ್ತಿದ್ದೇವೆ. ತನ್ನ ದುಃಖ, ಒಳನೋವು, ಎದೆಗುದಿ ಏನು ಎನ್ನವುದನ್ನು ಅಪ್ಪ ಜೀವಿಸಿದ್ದರೆ ಅವರೊಬ್ಬರು ಮಾತ್ರ ಅರ್ಥ ಮಾಡಿಕೊಳ್ಳಬಹುದಿತ್ತು. ತನ್ನ ಅಳಲನ್ನು ಅವರೊಡನೆ ಹಂಚಿಕೊಳ್ಳಬಹುದಿತ್ತು. ಉಹುಂ, ಅಲ್ಲ, ತಮ್ಮ ಪ್ರೀತಿಯ ಮಗಳು ದುಃಖಿತಳಾಗಿದ್ದನ್ನು ಕೇಳಿದ್ದರೆ ಆದರ್ಶವಾದಿ ಅಳಿಯನ ಅಧಃಪತನವನ್ನು ನೋಡಿದ್ದರೆ ಅವರ ಎದೆ ಒಡೆದುಹೋಗುತ್ತಿತ್ತೇನೋ. ಒಂದು ರೀತಿಯಿಂದ ಅವರು ಇಲ್ಲದಿದ್ದುದೇ ಒಳ್ಳೆದಾಯ್ತು. ಉಳಿದವರ ದೃಷ್ಟಿಯಲ್ಲಿ ತಾನು ಪರಮಸುಖಿ, ಬೇಕಾದಷ್ಟು ಶ್ರೀಮಂತಿಕೆ ಇದೆ. ಪ್ರೀತಿಸುವ ಗಂಡ, ಮಕ್ಕಳು ಎಲ್ಲಾ ಇದ್ದಾರೆ., ಇವಳಿಗೇನು ಕಡಿಮೆ ಎನ್ನುವವರೇ ಎಲ್ಲರು. ಗಿರೀಶ ತನಗೆ ತಕ್ಕ ವರ ಎಂದೇ ಪ್ರೇಮಿಸಿ, ಪರೀಕ್ಷಿಸಿ ವಿವಾಹವಾದೆ. ಈಗಿನ ಗಿರೀಶ ತನಗೆ ಬೇಕಾದ ಸಂಗಾತಿಯೇ? ತನ್ನ ಜೀವನವೇ ಹೀಗಿರುವಾಗ ಇನ್ನು ಮಾಲಿನಿಯದು-

ಫೋನ್ ಕರೆ ಕೇಳಿತು. "ಯಾರು? ಸುನೀತಾಬಾಯಿಯವರೇನು. ನೀವು ಅರ್ಜೆಂಟ್ ಶಾಂತಿ ನರ್ಸಿಂಗ್ ಹೋಮ್‌ಗೆ ಬರ್ರಿ. ಗಿರೀಶಗ ತ್ರಾಸ ಆಗೇದ. ಇಲ್ಲೇ ಅಡ್ಮಿಟ್ ಮಾಡೇವಿ ರೂ ನಂ. ೬ ಸ್ಪೇಶಲ್ ವಾರ್ಡ ಲಗೂನ ಬರ್ರಿ. ಗಾಬರಿ ಆಗಬ್ಯಾಡ್ರಿ" ಗೌಡರ ದನಿ ಕೇಳಿ ಎದೆ ಡವಡವ ಹೊಡೆದುಕೊಂಡಿತು.

ಆಸ್ಪತ್ರೆಯಲ್ಲಿ ಕಾಲಿಟ್ಟ ಅವಳನ್ನು ಡಾ. ಶಿವಮೂರ್ತಿಯವರೇ ಕರೆದೊಯ್ದರು. "ನೀತಕ್ಕಾ ಗಿರೀಶನ ಬ್ಲಡ್ ಪ್ರೆಶರ್ ಹೆಚ್ಚಾಗಿತ್ತು. ರೆಸ್ಟ್ ತೊಗೊಳ್ಳಲಿಲ್ಲಾ . ಇವತ್ತಿನ ಮಿಟಿಂಗಿನೊಳಗ ಗಲಾಟೆ ಆಯ್ತೋ ಏನೋ. ಪ್ಯಾರಾಲಿಟಿಕ್ ಅಟ್ಯಾಕ್ ಬಂದದ, ಬಲಭಾಗಕ್ಕ, ಜೀವ ಭಯ ಇಲ್ಲಾ ಆದರೂ ಚೇತರಿಸಿಕೊಳ್ಳಲಿಕ್ಕೆ ಟೈಮ ಬೇಕಾಗ್ತದ. ಗಾಬರಿ ಆಗಬ್ಯಾಡ್ರಿ. ನನ್ನಿಂದ ಸಾಧ್ಯ ಇದ್ದಷ್ಟೆಲ್ಲಾ ಪ್ರಯತ್ನ ಮಾಡ್ತೇನಿ. ಗಿರೀಶ ಆರಾಮ ಆಗ್ತಾನ ಬರ್ರಿ, ಕೂಡ್ರಿ ಇಲ್ಲೆ."

ಹತ್ತಿರ ಕುಳಿತ ಸುನೀತಾ ಎಚ್ಚರವಿಲ್ಲದ ಗಿರೀಶನ ಎಡಗೈ ತನ್ನ ಅಂಗೈಯಲ್ಲಿಟ್ಟುಕೊಂಡು ಮೃದುವಾಗಿ ಸವರಿದಳು. ಗಿರೀಶ ಇನ್ನು ವರ್ಷಗಳವರೆಗೆ ತನ್ನ ಹತ್ತಿರವೇ ಇರುತ್ತಾನೆ ಎನ್ನುವ ವಿಷಯ ಅವಳಿಗೆ ಸಂತೋಷ ಕೊಟ್ಟಿತೋ ಎನ್ನುವಂತೆ ಕಣ್ಣು ಒರೆಸಿಕೊಳ್ಳುತ್ತ ನಕ್ಕಳು.

***

■■

# ಮಗುವಿಗಾಗಿ

ಫೋನ್‌ಟ್ರಿನ್‌ಗುಟ್ಟಿತು. ಸಿಸ್ಟರ್ ಲಗುಬಗೆಯಿಂದ ಎತ್ತಿದಳು.

"ಸರ್, ಮಹೇಶ್ ಕುಮಾರ ಅಂತ. ನಿಮ್ಮನ್ನ ಕರಿತಾರ."

"ಹಲೋ".

"ಹಲೋ ಡಾ. ಪಾಟೀಲ, ನಿಮಗೆ ನನ್ನ ಪರಿಚಯವಿಲ್ಲ. ನಾನು ಮಹೇಶ ಕುಮಾರ. ಮಳಲಾಪೂರ ಆಂಡ ಕಂಪನೀಲಿ ಮುಖ್ಯ ಇಂಜಿನಿಯರಾಗಿ ಇಲ್ಲಿ ಕೆಲಸಕ್ಕೆ ಬಂದಿದೀನಿ. ನಿಮ್ಮನ್ನ ಕಾಣಬೇಕಾಗಿತ್ತು. ನಿಮ್ಮ ಮನೇಲಿ ಎಷ್ಟು ಹೊತ್ತಿಗೆ ಸಿಗ್ತೀರಾ ? ಪ್ಲೀಸ್ ತಪ್ಪು ತಿಳುಕೋಬೇಡಿ. ಆಸ್ಪತ್ರೆಗಿಂತ ಮನೆ ವಾಸಿ ಅನ್ಸುತ್ತೆ."

"ಆಗಲಿ ಬರ್ರಿ. ಇಲ್ಲೆ ಗದ್ದಲ ಜಾಸ್ತಿ ಇರ್ತದ, ಮನೀಯೊಳಗ ಆರಾಮವಾಗಿ ಕೂತು ಮಾತಾಡೋಣ. ಸಂಜೀ ಐದೂವರಿಗೆ ಬರ್ರಿ. "

"ಥ್ಯಾಂಕ್ ಯು. ಡಾಕ್ಟರ. ಸಂಜೆಗೆ ಬರ್ತೀವಿ, ಅಂದರೆ ನಾನು ನಮ್ಮ ಮಿಸೆಸ್ಸು ಇಬ್ರೂ."

ಫೋನು ಕೆಳಗಿಟ್ಟು ಡಾಕ್ಟರರು ಅಪಾಯಿಂಟ್‌ಮೆಂಟ್ ಗುರುತು ಹಾಕಿಕೊಂಡು ಮತ್ತೆ ರೋಗಿಯತ್ತ ತಿರುಗಿದರು. ನಿಧಾನವಾಗಿ ರೋಗಿಗಳ ಕ್ಯೂ ಕರಗುತ್ತಾ ಬಂದಾಗ ಮಧ್ಯಾಹ್ನ ಎರಡು ಗಂಟೆಯಾಗಿತ್ತು.

ಕಾಂಚನ ಬಾಗಿಲಲ್ಲಿ ಕಾಯುತ್ತಿದ್ದಳು. ಮದುವೆಯಾದ ಹೊಸತರಲ್ಲಿ ಅವಳು ಊಟಕ್ಕೆ, ನಿದ್ದೆಗೆ ಸ್ನೇಹಿತರ ಮನೆಗಳಿಗೆ ಹೋಗಲು, ಸಿನಿಮಾ, ನೋಡಲು ಗಂಡನಿಗಾಗಿ ಕಾದು ಕಾದು ಬೇಸತ್ತು ಹೊತ್ತಿಗೆ ಸರಿಯಾಗಿ ಬಾರದ ಗಂಡನ ಮೇಲೆ ರೇಗಾಡುತ್ತಿದ್ದಳು. ದಿನ ಕಳೆದಂತೆ ತನ್ನ ಗಂಡ ಡಾಕ್ಟರ, ಅದರಲ್ಲೂ ಮನಶ್ಶಾಸ್ತ್ರ ಓದಿದವನು, ತನ್ನ ಪ್ರ್ಯಾಕ್ಟೀಸ್ ಕುದುರಿಸಲು ಕಷ್ಟಪಡಲೇಬೇಕು ಎನ್ನುವ ಸತ್ಯವನ್ನು ತಿಳಿದುಕೊಂಡು ತಣ್ಣಗಾಗಿದ್ದಳು. ಅವನ ದಿನಚರಿಗೆ ಹೊಂದಿಕೊಂಡಿದ್ದಳು. ದವಾಖಾನೆ ಸುರು ಮಾಡಿದ ಹತ್ತು ವರ್ಷಗಳಲ್ಲಿ ಒಳ್ಳೆಯ ಹೆಸರನ್ನೂ ಕೈ ತುಂಬಾ ಹಣವನ್ನೂ ಉಮೇಶ ಸಂಪಾದಿಸಿದ್ದ.

ಸರಿಯಾಗಿ ಐದೂವರೆಗೆ 'ನಮಸ್ಕಾರ' ಎಂದು ಕೈ ಮುಗಿಯುತ್ತ ದಂಪತಿಗಳಿಬ್ಬರೂ ಒಳಗೆ ಬಂದರು. ಅವರ ವೇಷಭೂಷಣ, ಶಿಷ್ಟಾಚಾರ, ಸಮಯ ಪ್ರಜ್ಞೆ ಉಮೇಶನಿಗೆ ಸಂತೋಷ ಕೊಟ್ಟವು.

"ನಾನು ಮಹೇಶ ಕುಮಾರ, ನನ್ನ ಹೆಂಡತಿ ಕುಸುಮ."

ಗಂಡನ ಕೈ ಕುಲುಕುತ್ತ "ಬರ್ರಿ ಹೊತ್ತಿಗೆ ಸರಿಯಾಗಿ ಬಂದ್ರಿ. ಸಂತೋಷ, ಕೂಡ್ರಿ" ಎಂದು ಅವರನ್ನು ಹೊರಗಿನ ಕೋಣೆಯಲ್ಲಿಯೇ ಕೂಡ್ರಿಸಿದ. ಸಾಮಾನ್ಯವಾಗಿ ರೋಗಿಗಳಾಗಿ ಬಂದವರನ್ನು ಮಾತನಾಡಿಸಿ, ಪರೀಕ್ಷಿಸಿ ಡಾಕ್ಟರರ ಕರ್ತವ್ಯ ಮುಗಿದ ಮೇಲೆಯೇ ಮನೆಯ ಒಳಗೆ ಕರೆದೊಯ್ದು ಕಾಂಚನಳನ್ನು ಸ್ನೇಹಿತರಂತೆ ಆದರೋಪಚಾರ ಮಾಡುವುದು ಉಮೇಶನ ಪದ್ಧತಿ.

ಈಗ ಇನ್ನೂ ಮಾತು ಪ್ರಾರಂಭಿಸದೆ ಮೌನವಾಗಿ ಕುಳಿತ ದಂಪತಿಗಳನ್ನು ದಿಟ್ಟಿಸಿದ, ಒಳ್ಳೆಯ ಜೋಡಿ. ತುಂಬ ಆರೋಗ್ಯವಂತರಂತೆ ಕಾಣುತ್ತಾರೆ. ಪಾಪ! ಬಹುಶಃ ಮಕ್ಕಳಾಗಿಲ್ಲವೇನೋ. ಇವರಲ್ಲಿ ಯಾರು ರೋಗಿಯೋ, ಹೆಂಡತಿ ನೋಡಲು ಆಕರ್ಷಕವಾಗಿದ್ದಾಳೆ. ರೂಪವತಿ ಎಂದು ಹೇಳುವಂತಿಲ್ಲವಾದರೂ ಒಂದು ಚೆಲುವು ಅವಳನ್ನು ಆವರಿಸಿದೆ. ಎಲ್ಲಿಯೋ ನೋಡಿದ ಹಾಗಿದೆಯಲ್ಲ ಇವಳನ್ನ ಎಲ್ಲಿ? ಯಾವಾಗ? ತಟ್ಟನೆ ಉಮೇಶನ ದೃಷ್ಟಿ ಅವಳ

ಹಿಂದೆ ಗೋಡೆಯ ಮೇಲಿದ್ದ ಕ್ಯಾಲೆಂಡರಿನತ್ತ ಹೋಯಿತು. ಹುಲಿಯ ಭಯದಿಂದ ಓಡುವ ಜಿಂಕೆಯ ದೊಡ್ಡ ದೊಡ್ಡ ಕಣ್ಣುಗಳು ಅವನ ಗಮನ ಸೆಳೆದವು. ಅವಳ ಮುಖವನ್ನೊಮ್ಮೆ ಜಿಂಕೆಯ ಕಣ್ಣುಗಳನ್ನು ಮತ್ತೊಮ್ಮೆ ದಿಟ್ಟಿಸಿದ. ಎಲ್ಲ ತದ್ರೂಪು. ಅವುಗಳಲ್ಲಿ ಭಯ, ಕಾತರ, ದೈನ್ಯ ದುಃಖ ಎಲ್ಲ ತುಂಬಿದೆ. ಅದು ಅವನ ಮನಸ್ಸನ್ನು ತಟ್ಟಿತು. ಯಾಕೆ ಸುಮ್ಮನಿದ್ದಾರಲ್ಲ. ಏನೂ ಮಾತನಾಡಲೊಲ್ಲರು. ಏನು ಸಂಕೋಚವೋ ಹೆಣ್ಣು ಮಗಳಿಗೆ ಉಮೇಶನ ದೃಷ್ಟಿ ಗಂಡನತ್ತ ತಿರುಗಿತು.

"ಕುಸುಂ ಯಾಕೆ ಸುಮ್ಮನೆ ಕೂತ್ಬಿಟ್ಟೆ ? ಡಾಕ್ಟರ ಹತ್ತಿರ ಹೇಳು ನಿನಗೆ ಏನಾಗುತ್ತೆ ಅಂತ" ದನಿ ಬಿರುಸಾಗಿದ್ದರೂ ಕೃತ್ರಿಮವಾಗಿ ತುಟಿಗಳು ನಗುತ್ತಿದ್ದವು. ಹೆಂಡತಿ ಮತ್ತೂ ತಲೆ ಬಗ್ಗಿಸಿ ಮೌನವಾಗಿದ್ದಳು. ಟೇಬಲ್ ಕೆಳಗೆ ಅಲ್ಲಾಡುತ್ತಿದ್ದ ಅವಳ ಕಾಲುಗಳನ್ನೇ ನೋಡುತ್ತಿದ್ದ ಉಮೇಶ ಅವಳ ಹೊಯ್ದಾಟವನ್ನು ಅರ್ಥಮಾಡಿಕೊಂಡ. ಹೊರಗೆ ಕಾಣುವಷ್ಟು ಸರಳವಾಗಿಲ್ಲ ಇವರಿಬ್ಬರೂ. ಇನ್ನೂ ನಿಜವಾಗಿಯೂ ಇವರ ಒಳಗನ್ನು ಪರೀಕ್ಷಿಸಬೇಕು ಎಂದು ಕೊಂಡು ಎಚ್ಚರದಿಂದ ಇಬ್ಬರನ್ನು ನೋಡುತ್ತಿದ್ದ. ಸುಮ್ಮನೆ ಕುಳಿತ ಹೆಂಡತಿಯನ್ನು ನೋಡಿ ಗಂಡನ ಹುಬ್ಬು ಬಿಗಿದುಕೊಂಡವು.

" ಮತ್ತೆ ಸುರುವಾಯ್ತೇ ನಿನ್ನ ಆಟ. ಡಾಕ್ಟರ ಹತ್ತಿರ ಹೋಗೋಣ ಅನ್ನೋದು, ಕರೆದುಕೊಂಡು ಬಂದರೆ ಕಲ್ಲುಗುಂಡಿನ ಹಾಗಿದ್ದುಬಿಡೋದು. ನಿನ್ನಂತ ಗುಂಡುಕಲ್ಲಿನ ಜೊತೆ ನಾನಾದರೂ ಹೇಗೆ ಬಾಳು ಸಾಗಿಸ್ಬೇಕು, ನನ್ನ ಕರ್ಮ" ಎಂದು ಸಿಡಿಗುಟ್ಟಿದ.

"ಇರಲಿ ಬಿಡ್ರಿ ಮಹೇಶಕುಮಾರ್. ಯಾಕೋ ನಿಮ್ಮ ಮನೆಯವರು ಸಂಕೋಚ ಮಾಡಿಕೊಳ್ತಾರೆ. ವಿಷಯ ಸೂಕ್ಷ್ಮ ಇರಬಹುದು. ಅವರಿಗೆ ಹೇಳಲಿಕ್ಕೆ ಆಗದಿದ್ರೆ ನೀವು ಹೇಳ್ರಿ. ನೀವೇನೂ ಸಂಕೋಚ ಪಟ್ಕೋಬೇಡ್ರಿ. ರೋಗಿಗಳ ಗುಟ್ಟು ಕಾಪಾಡೋದು ಡಾಕ್ಟರರ ಕರ್ತವ್ಯ. ನನ್ನಿಂದ ಯಾವ ವಿಷಯಾನೂ ಹೊರಬೀಳೋದಿಲ್ಲ. ನೀವು ಹೇಳಿ ಏನು ತೊಂದರೆ ಅಂತ. ಆಮೇಲೆ ಅವರನ್ನ ಪರೀಕ್ಷಿಸ್ತೀನಿ. ದೈಹಿಕವಿರಲಿ, ಮಾನಸಿಕವಿರಲಿ ಚಿಕಿತ್ಸೆ ಮಾಡೋಣವಂತೆ, ಸಾಧ್ಯವಿದ್ದಷ್ಟು ಪ್ರಯತ್ನ ಮಾಡ್ತೀನಿ ಅನ್ನೋ ಭರವಸೆ ನಿಮಗೆ ಕೊಡ್ತೀನಿ ಹೇಳ್ರಿ."

ಮಹೇಶ ಮೂಕನಂತೆ ಕುಳಿತ ಹೆಂಡತಿಯತ್ತ ತಿರಸ್ಕಾರದಿಂದ ನೋಡಿದ. ಒಂದಿಷ್ಟೂ ಚಲಿಸದೆ ಕಲ್ಲುಬಂಡೆಯಂತೆ ಕುಳಿತ ಕುಸುಮಳನ್ನು ನೋಡಿ ಉಮೇಶನಿಗೆ ಅಚ್ಚರಿಯಾಯಿತು. ಗಂಡ ಹೇಳುವುದನ್ನು ಕೇಳಲು ಮೈಯೆಲ್ಲ ಕಿವಿ ಮಾಡಿಕೊಂಡು ಸ್ತಬ್ಧವಾಗಿ ಕುಳಿತಿದ್ದಳಾಕೆ. ಅವಳನ್ನು ನೋಡಿ ಮಹೇಶನ ಮುಖ ಬಣ್ಣಗೆಟ್ಟಿತು, ಏನೋ ನಿರ್ಧಾರಕ್ಕೆ ಬಂದವನಂತೆ ತಟಕ್ಕನೆ ಮೇಲೆದ್ದು "ಡಾಕ್ಟರ ಪ್ಲೀಸ್, ಒಂದು ನಿಮಿಷ ವರಾಂಡಕ್ಕೆ ಬನ್ನಿ" ಎಂದು ಸರಸರನೆ ಹೊರಗೆ ಹೋಗಿ ಬಿಟ್ಟ., ಹೊರಗೆ ಹೋಗುವ ಮೊದಲು ಉಮೇಶ ಕಣ್ಣಂಚಿನಿಂದ ಕುಸುಮಳತ್ತ ನೋಡಿದ. ಬಂಡೆಯಂತೆ ಕುಳಿತಿದ್ದ ಕುಸುಮ ನೀಳವಾಗಿ ಉಸಿರು ಬಿಟ್ಟು ಚಲಿಸಿದಳು.

ಮಾತು ಮುಗಿಸಿ ಉಮೇಶ ಬಂದಾಗ ಕುಸುಮ ಮೈಮರೆತು ಎದುರಿಗಿದ್ದ ಮಗುವಿನ ಚಿತ್ರವನ್ನೇ ದಿಟ್ಟಿಸುತ್ತಿದ್ದಳು. ಇವನು ಬಂದರೂ ಹೊರಳಿರಲಿಲ್ಲ. ಕುಸುಮಳ ಜಿಂಕೆ ಕಣ್ಣುಗಳು ಮಿಂಚುತ್ತಿದ್ದುದನ್ನು ನೋಡಿದ. ನೀರಿಲ್ಲದೆ ಹಾಗೆ ಮಿಂಚಲಾರವು. ಪಾಪ! ಏನು ತೊಂದರೆಯೋ, ಮಕ್ಕಳ ಮೇಲೆ ಆಸೆಯೇನೋ ಮುಗಿಲುದ್ದ ಇದ್ದ ಹಾಗೆ. ಆದರೆ ಗಂಡನನ್ನೇ ಹತ್ತಿರ ಸೇರಿಸಲಾರಳಲ್ಲ! ಎಂಥ ವಿಚಿತ್ರ ರೀತಿ ಇದು.

"ಬರ್ರಿ, ಕುಸುಮಾದೇವಿ, ನಿಮ್ಮನ್ನ ಪರೀಕ್ಷೆ ಮಾಡಬೇಕು" ಪರದೆಯ ಹಿಂದೆ ಹೊರಟ ಉಮೇಶ. ಎದ್ದು ಬಾರದ ಕುಸುಮಳನ್ನು ನೋಡಿ ಮೃದುವಾಗಿ ಹೇಳಿದ. "ಬರ್ರಿ ಒಳಗ, ನಿಮಗ ಏನು ತ್ರಾಸಾಗ್ತದ. ನನ್ನ ಮುಂದಹೇಳ್ರಿ. ಒಂದ ನಿಮಿಷ ಬರ್ರಿ" ಅವನ ಧ್ವನಿಯಲ್ಲಿಯ ಆತ್ಮೀಯತೆಯ ಪ್ರಭಾವದಿಂದ ಕುಸುಮ ಎದ್ದು ಒಳಗೆ ಹೋದಳು. ಅವಳ ಹೊಟ್ಟೆ ಮುಟ್ಟಿ ನೋಡಿ ನಾಲ್ಕಾರು ಪ್ರಶ್ನೆ ಅವಳಿಂದ ಉತ್ತರವನ್ನೂ ಪಡೆದ. ದೈಹಿಕವಾಗಿ ಯಾವ

ತೊಂದರೆಯೂ ಇದ್ದಂತೆ ಕಾಣಲಿಲ್ಲ. ಟೇಬಲ್ ಮೇಲಿಂದ ಇಳಿಯುತ್ತಿದ್ದಂತೆ ಕುಸುಮ 'ಡಾಕ್ಟರ' ಎಂದಳು ಪಿಸುದನಿಯಲ್ಲಿ. "ನೀವು ಹೀಗೆ ನೋಡಿದ್ರೆ ನನ್ನ ರೋಗ ಏನು ಅನ್ನೋದು ನಿಮಗೆ ಗೊತ್ತಾಗೋದಿಲ್ಲ" ಎಂದಳಾಕೆ. ಅವಳ ಹೊಳೆಯುವ ಕಣ್ಣುಗಳನ್ನು ನೋಡಿ ಉಮೇಶ ಅಚ್ಚರಿಪಟ್ಟ. ಅವು ಈಗ ಕಿಡಿ ಕಾರುತ್ತಿದ್ದವು.

"ನಿಮಗೆ ಹೇಳಬೇಕಾದ್ದನ್ನ ಧೈರ್ಯದಿಂದ ಹೇಳ್ರಿ. ನಾನು ಡಾಕ್ಟರು. ನಿಮಗ ಸಹಾಯ ಮಾಡಬಲ್ಲೆ ಅನ್ನೋ ಭರವಸೆ ಕೊಡ್ತೀನ್ರಿ."

"ನಿಮ್ಮ ಮೇಲೆ ಭರವಸೆ ಹುಟ್ಟಿದ್ದಕ್ಕೇ ನಾನು ಮಾತಾಡ್ತಿದ್ದೀನಿ. ಆದರೆ ನಾನು ಹೇಳಬೇಕಾದ್ದನ್ನೆಲ್ಲಾ ಬರೆದು ತರ್ತೀನಿ. ಇನ್ನೂ ಎರಡು ದಿನಾ ಟೈಮು ಬೇಕು."

ಉಮೇಶ "ಬರ್ರಿ ಮಿಸೆಸ್ ಮಹೇಶಕುಮಾರ. ಏನೂ ಕಾಳಜಿ ಮಾಡಬ್ಯಾಡ್ರಿ. ನಿಮ್ಮ ತೊಂದರೆ ನನಗ ಗೊತ್ತಾತು." ಎಂದು ಗಟ್ಟಿ ದನಿಯಲ್ಲಿ ಹೇಳುತ್ತ ಹೊರಗೆ ಬಂದ - ಸಿಗರೇಟು ಹಚ್ಚಿದ ಮಹೇಶ ವರಾಂಡದಲ್ಲಿದ್ದ.

"ಮಿ. ಮಹೇಶ, ಡೋಂಟ್‌ವರಿ. ಇನ್ನ ಮೂರು ದಿನಾ ಬಿಟ್ಟು ನನ್ನ ಗುರುತಿನ ಲೇಡಿ ಡಾಕ್ಟರರು ಕುಸುಮಾದೇವಿ ತಪಾಸ ಮಾಡಲಿ. ಅವರ ರಿಪೋರ್ಟ್ ಬಂದ ಮ್ಯಾಲೆ ಟ್ರೀಟ್‌ಮೆಂಟ್ ಸುರು ಮಾಡ್ತೀನಿ. ನಿಮ್ಮ ಫೋನ್ ನಂಬರು, ವಿಳಾಸ ಕೊಡ್ರಿ. ನಾನು ಬಂದು ಶ್ರೀಮತಿಯವರನ್ನು ಕರಕೊಂಡು ಹೋಗ್ತೀನಿ, ಆಯ್ತಲ್ಲ, ಕಾಳಜಿ ಮಾಡಬ್ಯಾಡ್ರಿ ಬರ್ರಿ, ಒಳಗ ಬರ್ರಿ" ಎಂದು ಅವರನ್ನು ಕರೆದೊಯ್ದು ಕಾಂಚನಳ ಪರಿಚಯ ಮಾಡಿಕೊಟ್ಟು ಚಹಾ ಪಾನವಾಯಿತು. ಶಾಲೆಗೆ ಹೋಗಿದ್ದ ಸಾಗರ ಬಂದಾಗ ಅವನನ್ನು ಪ್ರೀತಿಯಿಂದ ಎತ್ತಿ ಮುದ್ದಾಡಿದ ಕುಸುಮಳ ಮಾತೃಹೃದಯ ಪಾಟೀಲ ದಂಪತಿಗಳಿಗೆ ಪರಿಚಯವಾಯಿತು.

***

ಲೇಡಿ ಡಾಕ್ಟರರ ಪರೀಕ್ಷೆ ಮುಗಿದ ಮೇಲೆ ತಿರುಗಿ ಬರುವಾಗ ಕುಸುಮ ಪತ್ರವನ್ನು ಉಮೇಶನ ಕೈಯಲ್ಲಿಟ್ಟಳು. ಅವಳ ಕೈ ನಡುಗುತ್ತಿತ್ತು. ಕಣ್ಣು ತುಂಬಿದ್ದವು. ಉಮೇಶ ತನ್ನ ಸ್ಟಡಿ ರೂಮಿನ ಬಾಗಿಲು ಮುಚ್ಚಿ ಕುಸುಮಳ ಕಾಗದ ಬಿಚ್ಚಿದ.

"ಪ್ರೀತಿಯ ಡಾಕ್ಟರ,

ಈ ಪತ್ರವನ್ನು ನಾನು ಬರೆಯುತ್ತಿರುವುದು ನೀವು ಡಾಕ್ಟರ ಅಲ್ಲದೆ, ಮನಶ್ಶಾಸ್ತ್ರವನ್ನು ತಿಳಿದವರು ಮತ್ತು ಇವೆಲ್ಲಕ್ಕಿಂತ ಹೆಚ್ಚಾಗಿ ನೀವೊಬ್ಬ ಮಾನವೀಯ ಗುಣವುಳ್ಳ ಮನುಷ್ಯರು ಎನ್ನುವ ಭರವಸೆ ನನಗೆ ಹುಟ್ಟಿದ್ದರಿಂದ. ನನ್ನ ಸುತ್ತುಮುತ್ತೆಲ್ಲ ಒಳ್ಳೇ ಸೂಟು ಬೂಟಿನಲ್ಲಿದ್ದು ಮನುಷ್ಯ ರೂಪದಲ್ಲಿದ್ದ ಮೃಗಗಳನ್ನೇ ನಾನು ಹೆಚ್ಚಾಗಿ ನೋಡುತ್ತಿದ್ದೇನೆ. ಅಂಥವರಲ್ಲಿ ನನ್ನ ಗಂಡನೂ ಒಬ್ಬ ಎನ್ನುವ ವಿಷಯ ಸೂಕ್ಷ್ಮ ಮತಿಗಳಾದ ನಿಮಗೀಗಾಗಲೇ ತಿಳಿದಿರಬಹುದು.

ನನ್ನ ಗಂಡನಿಗೆ ಸಂಪತ್ತಿದೆ. ಸುರೂಪವಿದೆ. ವಿದ್ಯೆ ಇದೆ. ಇವೆಲ್ಲವುಗಳ ಬಲದಿಂದ ಸಮಾಜದಲ್ಲಿ ಒಳ್ಳೆ ಹೆಸರೂ ಇದೆ. ಆದರೆ ಮುಖ್ಯವಾಗಿ ಮನುಷ್ಯನಲ್ಲಿ ಇರಬೇಕಾದ ಪ್ರೀತಿ, ಮಮತೆ, ಕರುಣೆಗಳಿಗೆ ಆ ಆರಡಿ ದೇಹದಲ್ಲಿ ಸ್ಥಳವಿಲ್ಲ. ನೀವು ನನ್ನನ್ನು ಲೇಡಿ ಡಾಕ್ಟರ್ ಬಳಿ ಪರೀಕ್ಷೆಗೆ ಕರೆದೊಯ್ದುದ್ದು ಕೇವಲ ನನ್ನ ಗಂಡನ ಕಣ್ಣಿಗೆ ಮಣ್ಣೆರಚಲು ಎಂದು ತಿಳಿದಿದ್ದೇನೆ. ನಾನು ದೈಹಿಕವಾಗಿ ಎಲ್ಲ ರೀತಿಯಿಂದಲೂ ಆರೋಗ್ಯವಾಗಿದ್ದೇನೆ. ಮಕ್ಕಳನ್ನು ಕಂಡರೆ ನನಗೆ ಬಹಳ ಆಶೆ, ಪ್ರೀತಿ. ಅವುಗಳನ್ನು ಪುಟ್ಟವಿದ್ದಾಗಿನಿಂದ ಎತ್ತಿ ಆಡಿಸಿ, ಹಾಲೂಡಿಸಿ, ಅವುಗಳ ಮುದ್ದು ಮಾತು ಕೇಳುತ್ತ ಆಟವಾಡುವುದೆಂದರೆ ನನಗೆ ಎಲ್ಲಿಲ್ಲದ ಆನಂದ. ಸ್ವರ್ಗವೆ ಕೈಗೆ ಸಿಕ್ಕಷ್ಟು ಸಂತೋಷ, ಸ್ವರ್ಗ ಇಲ್ಲವೆಂಬುದು ಗೊತ್ತಿದ್ದರೂ ವಾಡಿಕೆಯಂತೆ ಈ ಮಾತು ಹೇಳುತ್ತಿದ್ದೇನೆ.

(ಛೇ ತುಂಬಾ ಬುದ್ಧಿವಂತೆ ತಲೆ ಆಡಿಸಿ ನಕ್ಕ ಉಮೇಶ.)

ಗಂಡನೊಡನೆ ಒಂದೇ ಮನೆಯಲ್ಲಿದ್ದರೂ ಅವನನ್ನು ಸೇರಲಾರದೆ ಮಕ್ಕಳಿಗಾಗಿ ಆಸೆ ಮಾಡುವವಳು ಇವಳೆಂಥ ಹುಚ್ಚಿ, ಎಂದು ನಗುವಿರಾ ? ಉಹುಂ, ನನ್ನ ಕತೆ, ನನ್ನ ಜೀವನದ ದುರಂತ ಕತೆ ಕೇಳಿದರೆ ನೀವು ನಗುವುದಿಲ್ಲ. ನನಗೆ ಗೊತ್ತು ನನಗೆ ಸಹಾಯ ಮಾಡುವುದಾಗಿ ಮಾತು ಕೊಟ್ಟಿದ್ದೀರಿ, ಡಾಕ್ಟರ ನೆನಪಿದೆಯೇ ? ನನ್ನ ಕತೆ ಕೇಳಿದ ಮೇಲೆ ಯಾವ ರೀತಿ ಸಹಾಯ ಮಾಡಬೇಕು ಎಂದು ನೀವು ಯೋಚಿಸಲೇ ಬೇಕಾಗುತ್ತದೆ. ನೀವು ತಪ್ಪಿಸಿಕೊಂಡರೆ ಅಷ್ಟು ಸುಲಭವಾಗಿ ನಾನು ನಿಮ್ಮನ್ನು ಬಿಡುವವಳಲ್ಲ. ಸಾಗರದ ಅಲೆಗಳ ಮಧ್ಯೆ ಉಸಿರು ಕಟ್ಟಿ ಮುಳುಗಿ ಸಾಯುತ್ತಿರುವ ನನಗೆ ನೀವೊಂದು ಲೈಫ್ ಬೋಟ್ ಆಗಿ ಸಿಕ್ಕಿರುವಿರಿ ಎನಿಸುತ್ತದೆ ನನಗೆ. ಸಾಗರ ಎಂದೊಡನೆ ನಿಮ್ಮ ಮಗನ ನೆನಪಾಯಿತು. ಓಹ್ ಎಂಥ ಸುಂದರವಾದ ಮಗು. ಗುಂಗುರುಕೂದಲು, ಮೊಂಡು ಮೂಗು, ಕವಳಿ ಹಣ್ಣಿನಂತೆ ಕಪ್ಪಾದ ಕಣ್ಣುಗಳು, ಇನ್ನೂ ಇನ್ನೂ ಮುದ್ದಿಸಬೇಕೆಂಬ ಆಸೆ ಮನಸ್ಸಿನ ತುಂಬ ತುಂಬಿಕೊಂಡಿದೆ. ನಾನು ಸಾಗರನೊಬ್ಬನನ್ನೇ ನೋಡಿದ್ದು. ನಿಮ್ಮ ದೊಡ್ಡ ಮಗ ಗಗನನ್ನು ನಾನಿನ್ನೂ ನೋಡಿಯೇ ಇಲ್ಲ. ನಿಮ್ಮ ಮಕ್ಕಳನ್ನು ನೋಡಲು ನಿಮ್ಮ ಮನೆಗೆ ನಾನು ಹಾರಿ ಬರುತ್ತೇನೆ. ಡಾಕ್ಟರ, ಅದಕ್ಕಾಗಿಯಾದರೂ, ನಿಮ್ಮ ರೋಗಿಯಾಗಿರಲು ಇಚ್ಛಿಸುತ್ತೇನೆ.

ಛೇ, ಏನೇನೋ ಮನಸ್ಸಿಗೆ ತೋಚಿದ್ದನ್ನೆಲ್ಲಾ ಬರೀತಾ ಇದ್ದೀನಿ. ಇಷ್ಟು ವರ್ಷಗಳವರೆಗೆ ಹೀಗೆ ನನ್ನ ಅಳಲು ತೋಡಿಕೊಳ್ಳಲು ಯಾರೂ ಸಿಕ್ಕಿರಲಿಲ್ಲ. ನನಗೆ ಇನ್ನು ನಿಜವಾಗಿಯೂ ನನ್ನ ಕತೆ ಸುರು ಮಾಡ್ತೀನಿ. ಡಾಕ್ಟರ, ನಾನು ಆಗಲೇ ಒಂದು ಮಗುವಿನ ತಾಯಿ. ನನ್ನ ಗಂಡ ಇದನ್ನು ನಿಮಗೆ ಹೇಳಿರಲಾರರು. ನನ್ನನ್ನು ಪರೀಕ್ಷಿಸಿದ ನಿಮಗೂ, ಲೇಡಿ ಡಾಕ್ಟರರಿಗೂ ಈಗಾಗಲೇ ನಾನು ತಾಯಿ ಎನ್ನುವುದು ಗೊತ್ತಾಗಿರಬಹುದು, ಹೌದು. ಒಂದು ಶ್ರೀಮಂತ, ಸಂಪನ್ನ ಕುಟುಂಬದ ಮಗಳಾದ ನಾನು ಮದುವೆಯಾಗಿ ಗಂಡನ ಮನೆಗೆ ಬಂದ ಎರಡು ವರ್ಷಗಳ ಮೇಲೆ ಒಂದು ಹೆಣ್ಣು ಮಗುವಿನ ತಾಯಿಯಾದೆ. ಆದರೆ ನನ್ನ ದುರಾದೃಷ್ಟಕ್ಕೆ ಅದು ಅಬ್‌ನಾರ್ಮಲ್ ಮಗುವಾಗಿ ಹುಟ್ಟಿತ್ತು. ತಾಯಿಯಾದ ನಾನೇನೋ ಅದನ್ನು ಹೊತ್ತು ಹೆತ್ತಿದ್ದಕ್ಕೆ ಪ್ರೀತಿಯಿಂದ ಜೋಪಾನವಾಡುತ್ತಿದ್ದೆ. ನನ್ನ ಗಂಡ ಮಾತ್ರ ಅದನ್ನು ಕಡೆಗಣ್ಣಿನಿಂದಲೂ ನೋಡಲಿಲ್ಲ. ತುಂಬ ತಿರಸ್ಕಾರದಿಂದ ಕಂಡರು. ಅದು ನನ್ನ ಪಾಪದ ಪಿಂಡವೆಂದು ತಿಳಿದುಕೊಂಡರೋ ಏನೋ, ನನ್ನನ್ನು ಶತ್ರುವಿನಂತೆಯೇ ಕಂಡರು. ತವರು ಮನೆಯಿಂದ ಬರುವಾಗ ಆ ಮಗುವನ್ನು ತರಬೇಡವೆಂದು ಬಾಯಿಬಿಟ್ಟು ಹೇಳಿದರು. ನನ್ನ ಮನಸ್ಸಿಗೆ ದೊಡ್ಡ ಆಘಾತವಾಯಿತು. ಅದನ್ನು ಹೆತ್ತ ತಾಯಿ ತಂದೆಗಳೇ ತಾತ್ಸಾರ ಮಾಡಿದರೆ ಉಳಿದವರು ಹೇಗೆ ಪ್ರೀತಿಯಿಂದ ಜೋಪಾನ ಮಾಡಿಯಾರು? ನನಗೆ ಮಮತೆ ತೋರಿಸುವ ತಾಯಿ ಇರಲಿಲ್ಲ. ಅತ್ತಿಗೆಯರ ಕೈಯಲ್ಲಿ ಮಗುವನ್ನು ಬಿಟ್ಟು ಬರಲು ಮನಸ್ಸಾಗದೆ ನಾನು ಹಟ ತೊಟ್ಟೆ. ಗಂಡನ ಮನೆಗೆ ಬರುವಾಗ ಮಗುವಿಗೆ ಜೊತೆಗೇ ಬರುವೆ, ಇಲ್ಲದಿದ್ದರೆ ಬರುವುದೇ ಇಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟೆ. ಹೆಂಡತಿಯನ್ನು ಎಷ್ಟು ದಿನ ತವರಿನಲ್ಲಿ ಬಿಟ್ಟಾರು, ಸಮಾಜದಲ್ಲಿ ಇವರಿಗೆ ಮರ್ಯಾದೆ ಉಳಿಯಬೇಕಲ್ಲ, ಆದ್ದರಿಂದ ಗಂಡನ ಮನೆಗೆ ಬರುವಾಗ ತಾಯಿ ಮಗು ಕೂಡಿಯೇ ಬಂದೆವು. ಮಗುವಿಗೆ ನಾಮಕರಣವಿಲ್ಲ, ಮುತ್ತೈದೆಯರ ಹರಕೆಯಿಲ್ಲ, ಸಂತೋಷ ಕೂಟವಿಲ್ಲ. ಅವರಿಗೆ ಅಂಥ ಮಗುವನ್ನು ಜನಕ್ಕೆ ತೋರಿಸುವುದಕ್ಕೆ ಮನಸ್ಸಿಲ್ಲ. ಮಗು ಮನೆಯ ಮೂಲೆಯ ಒಂದು ಕೋಣೆಯಲ್ಲಿ ಕೂಸಾಗಿ ಬೆಳೆಯ ಹತ್ತಿತು. ಅವರು ತಿರಸ್ಕಾರ ಮಾಡಿದಷ್ಟೂ ನನಗೆ ಅದರ ಮೇಲೆ ಪ್ರೀತಿ ಹೆಚ್ಚುತ್ತಿತ್ತು. ಇಬ್ಬರ ಪ್ರೀತಿಯನ್ನು ನಾನೊಬ್ಬಳೇ ಕೊಡಬೇಕೆಂದು ಬೇಸರಿಸದೆ ಜೋಪಾನ ಮಾಡುತ್ತಿದ್ದೆ. ದಣಿವಾದರೂ ಹಗಲಿರುಳೆನ್ನದೆ ಎತ್ತಿ ಆಡಿಸುತ್ತಿದ್ದೆ. ಅದನ್ನು ಹೊರಗೆ ಹೋಗುವುದನ್ನು ತಪ್ಪಿಸುತ್ತಿದ್ದೆ. ಆದರೆ ಹೈ ಸೊಸೈಟಿಯ ಮಹೇಶಕುಮಾರ ಮೇಲಿಂದ ಮೇಲೆ ಪಾರ್ಟಿ, ಸಂಗೀತ ಸಭೆ, ಸ್ನೇಹಿತರ ಮನೆಗಳಿಗೆ ಹೋಗಬೇಕಾಗುತ್ತಿತ್ತು. ಅವಾಗೆಲ್ಲ ಹಟ ತೊಟ್ಟು ನನ್ನನ್ನು ಚೆನ್ನಾಗಿ ಶೃಂಗರಿಸಿ ಜೊತೆಗೆ ಕರೆದೊಯ್ಯುತ್ತಿದ್ದರು. ನನ್ನ ಮತ್ತು ಮಗಳ ಆರ್ಥಿಕ ಹೊಣೆ ಎಲ್ಲ ಅವರೇ ಹೊತ್ತಿದ್ದರಿಂದ ಅವರ ಇಂಥ

ಆಸೆಗಳಿಗೆ ನಾನು ಮಣಿಯಲೇಬೇಕಾಗುತ್ತಿತ್ತು. ಮಗಳನ್ನು ನೋಡಿಕೊಳ್ಳಲು ದಾದಿಯನ್ನು ನೇಮಿಸಿ ನಾನು ಅವರೊಡನೆ ಅಡ್ಡಾಡಬೇಕೆಂದು ಅವರ ಇಚ್ಛೆ. ಆದರೆ ದಾದಿಯ ಕೈಯಲ್ಲಿ ಮಗುವನ್ನು ಕೊಡಲು ನನಗಿಷ್ಟವಿಲ್ಲ. ನಾನು ಹೊರಗೆ ಹೋಗಬೇಕಾದಾಗಲೆಲ್ಲ ಮಗುವನ್ನು ಕೋಣೆಯಲ್ಲಿಟ್ಟು ಬೀಗ ಹಾಕಿ ಹೋಗುತ್ತಿದ್ದೆವು. ಆದರೆ ನನ್ನ ಮನಸ್ಸೆಲ್ಲ ಮನೆಯತ್ತ ಇರುತ್ತಿದ್ದುದರಿಂದ ಎಷ್ಟೋ ಸಲ ಪಾರ್ಟಿಯಲ್ಲಿ ಸಲೀಸಾಗಿ ಜನರೊಡನೆ ಕೂಡುವುದು, ಮಾತನಾಡುವುದು ನನಗೆ ಸಾಧ್ಯವಾಗುತ್ತಿರಲಿಲ್ಲ. ಉಳಿದ ಹೆಣ್ಣುಮಕ್ಕಳು ಎಲ್ಲರೊಡನೆ ನಗುತ್ತ ಕೆಲೆಯುತ್ತ ಇರುವುದನ್ನು ನೋಡುವ ಅವರಿಗೆ ನನ್ನನ್ನು ಕಂಡರೆ ಸಿಟ್ಟು. ಒಂದು ಸಲ ಪಾರ್ಟಿಯಲ್ಲಿ ಇವರ ಬಾಸ್‌ನನ್ನು ನಾನು ಉದಾಸೀನ ಮಾಡಿದೆನೆಂದು ಮನೆಗೆ ಬಂದ ಮೇಲೆ ನನ್ನನ್ನು ಚೆನ್ನಾಗಿ ಹೊಡೆದರು.

(ಆ ದೊಡ್ಡ ದೊಡ್ಡ ಕಣ್ಣುಗಳಲ್ಲಿ ತುಂಬಿದ್ದ ಭಯ, ದುಃಖ ಎಲ್ಲ ಉಮೇಶನಿಗೆ ಅರ್ಥವಾದವು. ಆ ಕಣ್ಣುಗಳು ನಕ್ಕಾಗ ಹೇಗೆ ಕಾಣಬಹುದೆಂದು ಊಹಿಸಿಕೊಳ್ಳಲು ಉಮೇಶ ಒಂದ ಕ್ಷಣ ಕಣ್ಣು ಮುಚ್ಚಿದ.)

ಡಾಕ್ಟರ ಇಷ್ಟೆಲ್ಲ ಹೇಳಿದರೂ ಒಂದು ಮುಖ್ಯ ವಿಷಯವನ್ನು ನಾನು ನಿಮಗಿನ್ನೂ ಹೇಳಿಲ್ಲ. ನಾನು ಇವರ ಮನೆಗೆ ಬಂದು ಏಳೆಂಟು ತಿಂಗಳಾಗುತ್ತ ಬಂದಿದ್ದರೂ ಇವರು ಒಂದು ದಿನವೂ ನನ್ನನ್ನು ಮುಟ್ಟಿರಲಿಲ್ಲ. ಮೊದಲೇನೋ ನಾನು ಮಗುವಿನಲ್ಲಿ ಮಗ್ನಳಾಗಿದ್ದೆ. ಬರಬರುತ್ತ ಇವರು ನನ್ನಿಂದ ಬೇಕಂತಲೇ ದೂರವಾಗುತ್ತಿರುವರು ಎನ್ನಿಸಿ ಭಯವಾಯಿತು. ಮಗುವನ್ನು ಕೋಣೆಯಲ್ಲಿ ಮಲಗಿಸಿ ನಾನೇ ಇವರ ಹತ್ತಿರ ಹೋದೆ. ಸುಮ್ಮನೆ ಏನೇನೋ ನೆವ ಹೇಳಿ ನನ್ನನ್ನು ದೂರವಿಡುತ್ತಾ ಬಂದರು. ನಾನು ತುಂಬ ಆಗ್ರಹದಿಂದ ಕೇಳಿದಾಗ 'ನಿನ್ನನ್ನು ಮುಟ್ಟಲು ನನಗೆ ಹೆದರಿಕೆ. ಎಲ್ಲಿ ಇಂಥದೇ ಇನ್ನೊಂದು ಮಗುವಾಗುತ್ತದೋ ಎಂದು' ಎಂದು ಹೇಳಿಬಿಟ್ಟರು. ಒಟ್ಟಿನಲ್ಲಿ ಮಗುವಿನಿಂದಾಗಿ ನನ್ನ ಬಗ್ಗೆಯೂ ಅವರಿಗೆ ಜಿಗುಪ್ಸೆ ಇತ್ತು. ಆಕಾಶವೇ ಕಳಚಿ ನನ್ನ ತಲೆಯ ಮೇಲೆ ಬಿದ್ದಂತಾಯಿತು. ಮಗು, ಗಂಡ ಇಬ್ಬರಿಂದಲೂ ದೂರವಾಗುವ ಮನಸ್ಸಿಲ್ಲ. ನನಗೆ ಇಬ್ಬರೂ ಬೇಕು. ಅತ್ತೆ, ಕರೆದೆ ಗೋಳಾಡಿದೆ. ನನ್ನ ಕಷ್ಟ ಹೇಳಿಕೊಳ್ಳಲು ಅಂಥ ಆತ್ಮೀಯರೂ ಇಲ್ಲದೆ ಕೊರಗಿದೆ. 'ನೀವು ಓದಿದವರು ಚೆನ್ನಾಗಿ ವಿಚಾರಮಾಡಿರಿ. ಯಾವಾಗಲೋ ಒಂದು ಸಲ ಇಂಥ ಮಗುವಾಗುತ್ತದೆ. ನಿಮ್ಮಿಂದ ಇನ್ನೊಂದು ಚೆನ್ನಾಗಿರುವ ಮಗು ನನಗೆ ಬೇಕು' ಎಂದು ದೈನ್ಯದಿಂದ ಕೇಳಿಕೊಂಡೆ. ಏನು ಹೇಳಿದರೂ ಇವರು ತಮ್ಮ ಹಟ ಬಿಡಲಿಲ್ಲ. ಕುಡಿತಕ್ಕೆ ಜೊತೆ ಕೊಡಲು ಅವರಿಗೆ ಸ್ನೇಹಿತರು ಇರುವಂತೆ ಹೊರಗಿನ ಸುಖಕ್ಕೆ ಸ್ನೇಹಿತೆಯರೂ ಇರುವುದನ್ನು ನಾನು ತಿಳಿದುಕೊಂಡೆ. ಅಂದ ಮೇಲೆ ನನ್ನ ಅವಶ್ಯಕತೆ ಅವರಿಗಿರಲಿಲ್ಲ. ನನ್ನ ಮನಸ್ಸು ತುಂಬಾ ರೋಸಿಹೋಯಿತು. ಈ ಬಂಡೆಗಲ್ಲನ್ನು ಕರಗಿಸುವುದು ಸಾಧ್ಯವಿಲ್ಲ ಎಂದುಕೊಂಡೆ.

ಆರ್ಥಿಕವಾಗಿ ನಾನು ಅವರನ್ನು ಅವಲಂಬಿಸಬೇಕಾಗಿತ್ತು. ಪದವೀಧರೆಯಾಗಿದ್ದರೂ ನನಗೆ ಕೆಲಸ ಕೊಡುವವರು ಯಾರು? ಅದರಲ್ಲೂ ಇಂಥ ಮಗುವನ್ನು ಕಟ್ಟಿಕೊಂಡು ನಾನು ಹೇಗೆ ಬೇರೆ ಮನೆ ಮಾಡಿ ನನ್ನ ಕಾಲ ಮೇಲೆ ನಾನೆ ನಿಲ್ಲಬಲ್ಲೆ? ನನ್ನ ಮಗುವಿನ ಜೊತೆಯಲ್ಲೇ ಮಲಗುತ್ತ ದಿನ ಕಳೆಯುತ್ತಿದ್ದೆ. ಒಂದು ದಿನ ಅದಕ್ಕೆ ಬಹಳ ಜ್ವರವಿದ್ದವು., ಎರಡು ಮೂರು ದಿನ ಕಳೆದರೂ ಜ್ವರ ಇಳಿಯಲೇ ಇಲ್ಲ. ಇವರು ಮಗುವಿರುವ ಕೋಣೆಯತ್ತ ತಲೆ ಹಾಕುತ್ತಿರಲಿಲ್ಲ. ಡಾಕ್ಟರರನ್ನು ಕರೆದು ತೋರಿಸಿ ಎಂದು ಬೇಡಿಕೊಂಡೆ. ಕಿವಿಗೆ ಹಾಕಿಕೊಳ್ಳಲಿಲ್ಲ. ನಾಲ್ಕನೆಯ ದಿನ ಮಗು ಎಚ್ಚರ ತಪ್ಪಿದ್ದರಿಂದ ಇವರು ಆಫೀಸಿಗೆ ಹೋದ ಮೇಲೆ ನಾನೇ ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ಮನೆಯ ಹತ್ತಿರವಿದ್ದ ಡಾಕ್ಟರರಲ್ಲಿ ಹೋದೆ. ಅವರು ಸಂಜೆಯವರೆಗೆ ಪ್ರಯತ್ನಿಸಿದರೂ ಪ್ರಜ್ಞೆ ತಿರುಗಿ ಬರಲಿಲ್ಲ. ತಲೆ ಅಲ್ಲಾಡಿಸಿ ಬಿಟ್ಟರು. ಮೂರು ದಿನಗಳಿಂದ ನಿದ್ದೆಗೆಟ್ಟು ಆ ಇಡೀ ದಿನ ಉಪವಾಸವಿದ್ದ ನನಗೆ ದುಃಖದಿಂದ ತಲೆ ತಿರುಗಿ ಅಲ್ಲೇ ಬಿದ್ದುಬಿಟ್ಟೆ.

ಸುದ್ದಿ ಮುಟ್ಟಿದ ಮೇಲೆ ಇವರು ಬಂದು ಅತ್ಯಕ್ರಿಯೆ ಏರ್ಪಾಡು ಮಾಡಿದರು. ಅತ್ತೆ ಮಾವ ಮೊದಲೇ ಇರಲಿಲ್ಲ. ದೂರದ ತವರಿಗೆ ಸುದ್ದಿ ಕಳಿಸುವಷ್ಟು ವ್ಯವಧಾನವಿರಲಿಲ್ಲ. ಮನೆಯಲ್ಲಿ ನಾವಿಬ್ಬರೇ. ಇವರಿಗೆ ಒಂದಿಷ್ಟೂ

ದುಃಖವಾದ ಹಾಗೆ ನನಗೆ ತೋರಲಿಲ್ಲ. ಇಂಥ ನಿರ್ದಯಿ, ಕಟುಕ ಗಂಡನನ್ನು ಪಡೆದದ್ದಕ್ಕೆ ಮನಸ್ಸಿಗೆ ಬಹಳ ನೋವಾಗಿ ರಾತ್ರಿ ಎಲ್ಲಾ ಅಳುತ್ತಿದ್ದೆ. ಇವರು ಏನೂ ನಡೆಯದ ಹಾಗೆ ಹೊರಗೆ ಹೋಗಿ ಊಟ ಮಾಡಿ ಬಂದು ಆರಾಮವಾಗಿ ಮಲಗಿಕೊಂಡರು. ಇವರ ವರ್ತನೆಯಿಂದ ನನ್ನ ಮನಸ್ಸಿನಲ್ಲಿ ಗಂಡನ ಬಗೆಗಿದ್ದ ಮೃದು ಭಾವನೆಗಳೆಲ್ಲ ಸುಟ್ಟು ಹೋದವು. ಮನಸ್ಸು ಕಲ್ಲಿನಂತೆ ಆಯಿತು. ನನ್ನ ಕಷ್ಟ ಇಷ್ಟಕ್ಕೇ ಮುಗಿಯಲಿಲ್ಲ. ಮುಂದೆ ಒಂದು ವಾರದಲ್ಲಿಯೇ ಇವರು ನನ್ನನ್ನು ತಮ್ಮ ಹತ್ತಿರ ಮಂಚದಲ್ಲಿ ಮಲಗಲು ಕರೆದರು. ನಾನು ಒಪ್ಪಲಿಲ್ಲ. ತುಂಬಾ ಒತ್ತಾಯ ಮಾಡಿ ಎಳೆದೊಯ್ದರು. ನನಗೆ ಅವರನ್ನು ಪ್ರತಿಭಟಿಸಲೂ ಆಗಲಿಲ್ಲ. ಅಷ್ಟು ನಿರ್ವಿಣ್ಣಳಾಗಿದ್ದೆ, ಅವರು ನನ್ನನ್ನು ಅಪ್ಪಿಕೊಂಡು ಮುದ್ದು ಮಾಡಿದರು. ಆದರೆ ನನ್ನ ಮೈ ಕಲ್ಲಿನಂತಾಗಿತ್ತು. ಅವರ ಇಚ್ಛೆಗೆ ನನ್ನ ದೇಹ ಮಣಿಯಲಿಲ್ಲ. ದಿನವೂ ಇದೇ ರೀತಿ ಮುಂದುವರೆಯಿತು. ಆ ಬಂಡೆಗಲ್ಲನ್ನು ನನ್ನ ಗಂಡನೆಂದು ಒಪ್ಪಿಕೊಂಡು ಪ್ರೀತಿಸಲು ನನ್ನ ಮನಸ್ಸು ಸಿದ್ಧವಿಲ್ಲ. ಅದೇ ಈಗ ಅವರಿಗೆ ಬಂದಿರುವ ಸಮಸ್ಯೆ. ಎಷ್ಟೋ ಜನ ಡಾಕ್ಟರುಗಳಿಂದಲೂ ಈ ಸಮಸ್ಯೆ ಬಿಡಿಸಲಾಗಲಿಲ್ಲ. ಈ ಹೊಸ ಊರಿಗೆ ಬಂದ ಮೇಲೆ ತಜ್ಞರೆಂದು ಅವರೇ ನಿಮ್ಮ ಹತ್ತಿರ ನನ್ನನ್ನು ಕರೆದುಕೊಂಡು ಬಂದರು. ಬರುವಾಗ ನನಗೆ ಎಳ್ಳಷ್ಟೂ ಮನಸ್ಸಿರಲಿಲ್ಲ. ಈಗ ನಿಮ್ಮ ಭೆಟ್ಟಿಯಾದದ್ದು ಒಳ್ಳೆಯದಾಯಿತು ಎನಿಸುತ್ತದೆ. ನನಗೆ ಮುದ್ದಾದ ಮಗು ಬೇಕು. ನನ್ನ ಜೀವ ಮಗುವಿಗಾಗಿ ಹಂಬಲಿಸುತ್ತದೆ. ಆದರೆ ಗಂಡನ ಸಹವಾಸ ಬೇಡ. ಈ ಸಮಸ್ಯೆ ಹೇಗೆ ಬಿಡಿಸುವಿರಿ ಹೇಳಿ ಡಾಕ್ಟರ. ಮಗು... ಮುದ್ದಾದ ಮಗು. ಸಾಗರನಂಥ ಮುದ್ದಾದ ಮಗು ಬೇಕು. ನಾಚಿಕೆ ಬಿಟ್ಟು ಕೇಳುತ್ತಿರುವೆ. ನನಗೆ... ನನಗೆ ನನಗೆ ಸಾಗರನಂಥ ಮಗು ಬೇಕು. ಕೊಡುವಿರಾ ಡಾಕ್ಟರ... ಹೇಗೆ, ನೀವು ಕೊಡುವಿರಾ?

ನಿಮ್ಮ ಕುಸುಮ."

ಪತ್ರ ಟೇಬಲ್ ಮೇಲೆ ಜಾರಿತು. ಉಮೇಶ ಎರಡೂ ಕೈಗಳಿಂದ ತಲೆ ಹಿಡಿದು ಕುಳಿತುಬಿಟ್ಟ. ಅವಳ ದೊಡ್ಡ ದೊಡ್ಡ ಕಣ್ಣುಗಳು, ನಿಡಿದಾದ ಮೂಗು, ಗುಂಗುರು ಕೂದಲಿನ ಸುಂದರವಾದ ಮಗುವಿನ ಕಣ್ಣಮುಂದೆ ತೇಲುತ್ತಿತ್ತು. ಟೇಬಲ್ ಮೇಲೆಯೇ ತಲೆ ಇಟ್ಟು ಕಣ್ಣುಮುಚ್ಚಿದ.

ಉಮೇಶ ತಾನೇ ಬಂದು ಕುಸುಮಳನ್ನು ಹೊರಗೆ ಸುತ್ತಾಡಿ ಬರಲು ಕರೆದಾಗ ಅವಳಿಗೆ ಅಚ್ಚರಿಯಾದರೂ ಒಲ್ಲೆ ಎನ್ನದೆ ಸಿದ್ಧವಾಗಿ ಬಂದಳು. ತಿಳಿನೀಲಿ ಸೀರೆಯನ್ನುಟ್ಟ ಗೋದಿ ಬಣ್ಣದ ಸುಂದರಿಯ ಕಣ್ಣುಗಳಲ್ಲಿ ಈಗ ಭಯದ ಬದಲು ಪ್ರಶ್ನೆ ಇತ್ತು. ಕಾರು ಹೊರಡಿಸುತ್ತ ಉಮೇಶ ಅವಳತ್ತ ನೋಡಿ ಕೇವಲ ಮುಗುಳ್ನಗೆಯ ಉತ್ತರಕೊಟ್ಟು ಮೌನವಾಗಿದ್ದ.

ಆ ಪತ್ರ ಓದಿದ ಮೇಲೆ ಡಾಕ್ಟರನಾಗಿ ಈ ರೋಗಿಯ ಬಗ್ಗೆ ತನ್ನ ಕರ್ತವ್ಯವೇನು ಎಂದು ಚಿಂತಿಸಿ ಚಿಂತಿಸಿ ತಾನೇ ಹುಚ್ಚನಾಗಿದ್ದೇನೆ ಎಂದು ಬಾಯಿಬಿಟ್ಟು ಹೇಗೆ ಹೇಳಿಕೊಂಡಾನು! ಕಾಂಚನ, ಮಕ್ಕಳು ಯಾರ ಸಾಮಿಪ್ಯವೂ ಈಗ ತನಗೆ ಬೇಕಾಗಿರಲಿಲ್ಲ. ಕುಸುಮ ಒಬ್ಬ ಮಾನಸಿಕ ರೋಗಿ ಎಂದಷ್ಟೇ ಕಾಂಚನಾಳ ಹತ್ತಿರ ಹೇಳಿದ್ದ, ಅವಳ ಸಮಸ್ಯೆಯ ವಿವರಗಳನ್ನು ಹೇಳಿರಲಿಲ್ಲ. ಅವಳ ಬಗ್ಗೆ ತನ್ನಲ್ಲಿ ಮೂಡುತ್ತಿದ್ದ ಭಾವನೆಗಳ ಸುಳಿವೂ ಕಾಂಚನಳಿಗೆ ಹತ್ತಗೊಟ್ಟಿರಲಿಲ್ಲ. ಆ ವೇಗದ ಸುಳಿಯಲ್ಲಿ ಸಿಕ್ಕ ತನ್ನ ಬಗ್ಗೆ ತನಗೇ ಭಯವಾಗುತ್ತಿತ್ತು. ಇದರ ಕೊನೆ ಹೇಗೆ ಎಂದು ತನಗೇ ತಿಳಿದಿರಲಿಲ್ಲ. ಈ ಕೇಸನ್ನು ಕೈಬಿಟ್ಟು ಬಿಡಲೇ ಎಂದೂ ಒಮ್ಮೊಮ್ಮೆ ಯೋಚಿಸುತ್ತಿದ್ದ. ಆದರೆ ಹಾಗೆ ಮಾಡಲು ಯಾವದೋ ಶಕ್ತಿ ತನ್ನನ್ನು ತಡೆಯುತ್ತಿತ್ತು. ಈ ಹೊಯ್ದಾಟದಲ್ಲಿ ಒಂದು ವಾರ ಕಳೆದಿತ್ತು. ಮಾನಸಿಕ ರೋಗಿಗಳ ಚಿಕಿತ್ಸೆ ಮಾಡುವಾಗ ತನ್ನ ಗಂಡ ಅಂತರ್ಮುಖಿಯಾಗುತ್ತಿದ್ದು ಆಗ ಅವನಿಗೆ ಏಕಾಂತ, ಮನಶ್ಶಾಂತಿಯ ಅಗತ್ಯವಿದ್ದುದನ್ನು ತಿಳಿದ ಕಾಂಚನ ಮಕ್ಕಳೊಡನೆ ಅವನಿಂದ ದೂರವಿದ್ದಳು.

ಪಾರ್ಕಿನ ಮುಂದೆ ಕಾರು ನಿಲ್ಲಿಸಿ ಉಮೇಶ ಬಾಗಿಲು ತೆರೆದು ನಿಂತ. ಇಳಿಯಲೋ ಬೇಡವೋ ಎಂದು ಅನುಮಾನಿಸಿದಳು ಕುಸುಮ.

"ಮೊನ್ನೆ ಗಾರ್ಡನ್ ಶೋ ಆಗೇದ. ಹೂ ಛಂದ ಅದಾವ, ನೋಡೋಣ ಬರ್ರಿ. ನಿಮಗ ಹೂವು ಅಂದರ ಭಾಳ ಪ್ರೀತಿ ಅಲ್ಲೇನು ?" ಉಮೇಶ ಒತ್ತಾಯಿಸಿದ. ತೋಟದೊಳಕ್ಕೆ ಬಂದೊಡನೆ, ಅಲ್ಲಿಯ ಬಣ್ಣ ಬಣ್ಣದ ಹೂಗಳನ್ನು ಕಂಡ ಕುಸುಮಳ ಮುಖ ಅರಳಿತು. ಮಗುವಿನ ಮುಗ್ಧತೆಯೊಂದಿಗೆ ಕುಸುಮ ಅವನತ್ತ ತಿರುಗಿದಳು.

"ನನಗ ಹೂ ಅಂದರ ಪ್ರೀತಿ ಅನ್ನೋದು ನಿಮಗ ಹ್ಯಾಂಗ ಗೊತ್ತಾಯಿತು ಡಾಕ್ಟರ?"

"ನನಗ ಎಲ್ಲಾ ಗೊತ್ತಾಗ್ತದ. ನಿಮಗ ಮಕ್ಕಳನ್ನ ಕಂಡರೆ ಸಂತೋಷ. ಅಂದ ಮೇಲೆ ಹೂವೂ ಹಾಗೆಯೇ, ಮಕ್ಕಳು, ಹೂವು ಎರಡೂ ಒಂದೇ."

ತನ್ನ ಜೊತೆಗೆ ಡಾಕ್ಟರ ಇದ್ದಾರೆನ್ನುವದನ್ನು ಮರೆತು ಕುಸುಮ ತೋಟದ ತುಂಬೆಲ್ಲ ತಿರುಗಾಡಿದಳು. ಒಂದೊಂದು ಗಿಡದ ಹತ್ತಿರವೂ ನಿಂತು ಅಂದ ಚೆಂದ ಸವಿದಳು. ತನ್ನ ಕಣ್ಣಿನ ಭಾಷೆಯಲ್ಲಿಯೇ ಮಾತನಾಡಿದಳು. ವೇಳೆ ಕಳೆದುದೇ ಗೊತ್ತಾಗಲಿಲ್ಲ. ಉಮೇಶ ಮೌನವಾಗಿದ್ದು ಅವಳ ಆನಂದದಲ್ಲಿ ಭಾಗಿಯಾಗಿದ್ದ.

ಒಮ್ಮೆಲೇ ಆ ಕಣ್ಣುಗಳಲ್ಲಿಯ ಸಂತೋಷ ಮಾಯವಾಗಿ ಭಯಮೂಡಿತು.

"ಹೊತ್ತಾಯ್ತಲ್ಲ, ಮನೆಗೆ ಹೋಗೋಣವಾ ಡಾಕ್ಟರ" ದನಿಯಲ್ಲಿ ಬೇಸರವಿತ್ತು.

"ಸ್ವಲ್ಪ ಹೊತ್ತು ಕೂಡ್ರಿ. ಅಡ್ಡಾಡಿ ಆಯಾಸ ಆಗಿರ್‍ಬೇಕು ನಿಮಗ" ಎನ್ನುತ್ತ ಅಲ್ಲಿಯೇ ಹುಲ್ಲಿನ ಮೇಲೆ ಕುಳಿತ. "ನಾನು ನಿಮ್ಮ ಮನೀಗೆ ಬರೂದಕ್ಕಿಂತ ಮೊದಲ ಆಫೀಸಿನೊಳಗ ನಿಮ್ಮ ಯಜಮಾನರನ್ನ ಭೆಟ್ಟಿ ಆಗಿ ಬಂದಿದ್ದೆ. ನಿಮ್ಮ ಪತ್ರಾ... "

"ಡಾಕ್ಟರ" ಎಂದು ಚೀರಿ ಎದ್ದು ನಿಂತಳು ಕುಸುಮ. ಸಿಟ್ಟಿನಿಂದ ನಡುಗುತ್ತಿದ್ದಳು. ಉಮೇಶ ಮೃದುವಾಗಿ ಅವಳ ಕೈಹಿಡಿದೆಳೆದು ಕೂಡ್ರಿಸಿ ಹೇಳಿದ, "ಉಹುಂ, ನಾ ಆ ಪತ್ರಾ ಅವರಿಗೆ ತೋರಿಸಿಲ್ಲಾ. ಅದು ನಮ್ಮಿಬ್ಬರ ಗುಟ್ಟು, ಬ್ಯಾರೆ ಯಾರಿಗೂ ತಿಳಿಯೂದಿಲ್ಲ. ನೀವು ಕಾಳಜಿ ಮಾಡಬ್ಯಾಡ್ರಿ. ಮಹೇಶ ಕುಮಾರರಿಗೆ ಹೇಳಿದೆ. ನಿಮ್ಮ ಹೆಂಡತಿ ಒಬ್ಬ ಮನೋರೋಗಿ. ಅವರ ಮನಸ್ಸು ಬಾಳ ಮೃದು. ಅದಕ್ಕೇನೋ ಆಳವಾದ ಗಾಯ ಆಗೇದ. ಅದು ಮಾಯಲಿಕ್ಕೆ ಸ್ವಲ್ಪ ಕಾಲ ಬೇಕು. ನೀವು ಒಪ್ಪಿದರ ನಾನು ಚಿಕಿತ್ಸೆ ಮಾಡ್ತೀನಿ, ಆದರ ಒಂದು ಷರತ್ತು ಅಂತ. "

"ಏನದು ?" ಕುಸುಮ ಕುತೂಹಲಿಯಾಗಿದ್ದಳು.

"ಷರತ್ತು ಹಾಕಿದ್ದು ನಿಮಗಲ್ಲ. ಮಹೇಶ ಕುಮಾರರಿಗೆ. ನಿಮ್ಮ ಹೆಂಡತಿನ್ನ ನಾನು ಚೆನ್ನಾಗಿ ಸ್ಟಡೀ ಮಾಡಬೇಕು. ನಾನು ಅವರನ್ನ ಮೇಲಿಂದ ಮೇಲೆ ಭೇಟ್ಟಿಯಾಗಬೇಕು. ಮಾತಾಡಬೇಕು ಅಂತ."

" ಅವರು ಒಪ್ಪಿರಲಿಕ್ಕಿಲ್ಲ."

"ಉಹುಂ, ನೀವು ತಪ್ಪು ತಿಳಕೊಂಡೀರಿ. ಅವರು ನಿಮ್ಮನ್ನ ಭಾಳ ಪ್ರೀಕಿ ಮಾಡ್ತಾರ. ನನ್ನ ಶರತ್ತಿಗೆಲ್ಲಾ ಅವರು ಒಪ್ಪಿಕೊಂಡರು.

"ಓ ಮೈ ಡಿಯರ ಡಾಕ್ಟರ, ಅವರ ಪ್ರೀತಿ ಬಗ್ಗೆ ನೀವೇನೂ ನನಗ ಹೇಳಬೇಕಾಗಿಲ್ಲ. ಅವರು ಏನಿದ್ದಾರ, ಹ್ಯಾಂಗ ಇದ್ದಾರ ಅನ್ನೋದು ನನಗ ಅವರು ರೂಪ, ಒಳರೂಪ ಎಲ್ಲಾ ಗೊತ್ತದ."

"ನೀವು ನನ್ಹಾಂಗ ಮನಶ್ಶಾಸ್ತ್ರ ಓದಿಲ್ಲಾ. ಮನುಷ್ಯನ ಮನಸ್ಸು ಒಂದು ವಿಚಿತ್ರ ಜಗತ್ತು. ಅದು ಸಂಕೀರ್ಣ ಅದ. ಅದರ ಏರು ... ಇಳುವು... "

"ಸಾಕು, ಸಾಕು ಅದರ ಏರು ಇಳುವು, ಆಳ-ಅಗಲ, ಬಣ್ಣ, ರೂಪ, ರುಚಿ, ವಾಸನೆ ಯಾವದೂ ಯಾವದೂ ಹೇಳಬೇಡಿ. ಡಾಕ್ಟರ ನನಗ ಅದೆಲ್ಲಾ ಬೇಕಾಗಿಲ್ಲ. ನನಗ ಬೇಕಾಗಿರೋದು ನನ್ನಂಥಾ ಮನುಷ್ಯ ಜೀವಿ. ಮಾನವೀಯ ಭಾವನೆಗಳಿರೋ ಮನುಷ್ಯ ಬೇಕು. ಅದು -ಅದು ಉಸಿರಾಡಿಸೋ ಬಂಡೆಗಲ್ಲು ಕಲ್ಲು -ಬರೀ ಕಲ್ಲು. ಅದರ .... ಸಹವಾಸಾ ನನಗ ಬ್ಯಾಡಾ. "ಉದ್ವಿಗ್ನಳಾಗಿ ಬಡಬಡ ಒದರಿದ ಕುಸುಮಳ ಮುಖ ಕೆಂಪಾಗಿತ್ತು. ಕಣ್ಣು ಮುಚ್ಚಿ ನೀಳವಾದ ಉಸಿರೆಳೆದುಕೊಂಡಳು. ಎದೆ ಏರಿ ಏರಿ ಇಳಿಯುತ್ತಿತ್ತು.

ಉಮೇಶ ನಿಧಾನವಾಗಿ ಅವಳ ಹತ್ತಿರ ಸರಿದು ಸಂತೈಸುವಂತೆ ಭುಜದ ಸುತ್ತ ಕೈ ಹಾಕಿದ. ಕುಸುಮ ಮುಖ ಕಿವುಚಿ 'ಹಾ' ಎಂದು ಸಣ್ಣಗೆ ಚೀರಿ ಅವನ ಕೈ ಕಿತ್ತೊಗೆದಳು. "ಯಾಕ್ರೀ ಏನಾತು ?" ಗಾಬರಿಯಾಗಿದ್ದ ಉಮೇಶ.

" ನನ್ನ ಪ್ರೀತಿಯ ಗಂಡ ಕಾಣಿಕೆ ಕೊಟ್ಟಾರ ಡಾಕ್ಟರ ಸಾಹೇಬ್ರ. ಇಲ್ನೋಡಿ "ಬ್ಲೌಜು ಸರಿಸಿ ತೋರಿಸಿದಳು. ಅಲ್ಲಿಯ ಚರ್ಮ ನೀಲಿಯಾಗಿ ರಕ್ತ ಹೆಪ್ಪುಗಟ್ಟಿತ್ತು.

"ಅವರ ಆಸೆಗೆ ನನ್ನ ದೇಹ ಬಗ್ಗೋದಿಲ್ಲ ಅಂತ ಅವರಿಗೆ ಬ್ರಹ್ಮಾಂಡ ಸಿಟ್ಟು, ಅದಕ್ಕೆ ಈ ಶಿಕ್ಷೆ... ಅಲ್ಲಲ್ಲ ಪ್ರೀತಿ ಪ್ರದರ್ಶನ, ಹಲ್ಲುಗಳಿಂದ ಸರಸವಾಡಿದ್ದಾರೆ."

ವ್ಯಂಗ್ಯವಾಗಿ ಹೇಳಿದ ಕುಸುಮಳ ಕಡೆಗೆ ಲಕ್ಷ್ಯವೀಯದೆ ಹೇಳಿದ ಉಮೇಶ "ಏಳ್ರಿ ಸೆಪ್ಟಿಕ್ ಆಗದಂಗ ಒಂದು ಇಂಜೆಕ್ಷನ್ ಕೊಡ್ತೀನಿ" ಅವನ ಬೆರಳುಗಳು ಮೃದುವಾಗಿ ಅವಳ ನೋವಿನ ಮೇಲೆ ಆಡುತ್ತಿದ್ದವು.

ಕಾರಿನಲ್ಲಿ ಕುಳಿತ ಮೇಲೆ ಇದ್ದಕ್ಕಿದ್ದಂತೆ ಕುಸುಮ "ಡಾಕ್ಟರ, ನಾನು ಸಾಗರನನ್ನ ನೋಡಬೇಕು, ನಿಮ್ಮ ಮನೀಗೆ ಕರಕೊಂಡು ಹೋಗ್ತೀರಾ?" ಅವನ ತೋಳು ಬಿಗಿಯಾಗಿ ಹಿಡಿದು ಕೇಳಿದಳು. ಅವಳ ಕಣ್ಣುಗಳು ಆಸೆಯ ಕೊಳಗಳಾಗಿದ್ದವು. ಅವಳ ಸಾಮೀಪ್ಯದಿಂದ ಉಮೇಶನ ಮೈ ಬಿಸಿಯಾಯಿತು. 'ನನಗ ಸಾಗರನಂಥಾ ಮಗುಬೇಕು. ಕೊಡ್ತೀರಾ, ನೀವು ಕೊಡ್ತೀರಾ ಡಾಕ್ಟರ್?' ಮತ್ತೆ ಮೊರೆಯಿತು. ಕಿವಿಯಲ್ಲಿ ತಲೆ ಧಿಮಿಗುಟ್ಟಿತು. ಅವಳತ್ತ ತಿರುಗಿ ನೋಡುವ ಧೈರ್ಯವಾಗದೆ ಎದುರಿಗೆ ಓಡಿ ಬಂದು ಕಾರಿನ ಕೆಳಗೆ ಸರಿದು ಮಾಯವಾಗುವ ರಸ್ತೆಯನ್ನೇ ದಿಟ್ಟಿಸುತ್ತಿದ್ದ ಅವನ ವಿಚಾರ ಪ್ರವಾಹ ಅವಳ ತಲೆಗೂ ಮುಟ್ಟಿತೇನೋ.

"ಡಾಕ್ಟರ, ನೀವು ಚಿಕಿತ್ಸೆ ಸುರುಮಾಡೋ ಮೊದಲು ನನ್ನ ಪತ್ರಕ್ಕೆ ಏನು ಉತ್ತರ ಹೇಳ್ತೀರಾ? ಹೇಳಿ ಡಾಕ್ಟರ್, ನಾನು, ಕೇಳುವಂತೆ ಮಗೂನ ಕೊಡ್ತೀರಾ" ಎಂದು ತಿನ್ನಲು ಹಣ್ಣನ್ನು ಬೇಡುವ ಮಗುವಿನಂತೆ ಸರಳವಾಗಿ, ಶಾಂತವಾಗಿ ಕೇಳಿದಳು ಕುಸುಮ. ಉಮೇಶ ಅವಳತ್ತ ತಿರುಗಿ ಆ ಕಣ್ಣುಗಳನ್ನು ಆಳವಾಗಿ ದಿಟ್ಟಿಸಿದ. ಅಲ್ಲಿ ನೀಲ ಸಾಗರದ ಚೆಲುವು ಇತ್ತು. ಆತೃಪ್ತಿಯ ಅಲೆಗಳ ಭೋರ್ಗರೆತವೂ ಇತ್ತು.

ಇದೊಂದು ಕೊನೆಯ ಪರೀಕ್ಷೆ ಎಂದುಕೊಂಡ. ಉಮೇಶ ಧೈರ್ಯವಾಗಿ ಅವಳನ್ನು ಕೇಳಿದ. " ನಿಮ್ಮ ಬೇಡಿಕೆಯನ್ನು ನಾನು ಈಡೇರಿಸೋದಿಲ್ಲ ಅಂದರೆ ಏನು ಮಾಡ್ತೀರಿ?" ಮರುಪ್ರಶ್ನೆ ತಟ್ಟನೆ ತೂರಿ ಬಂದಿತು. "ಪ್ರಪಂಚದಲ್ಲಿ ನೀವೊಬ್ಬರೆ ಗಂಡಸೆಂದು ತಿಳಿದಿದ್ದೀರಾ?" ಬಾಣದ ಅಲುಗು ತೀಕ್ಷ್ಣವಾಗಿತ್ತು. ತತ್ತರಿಸಿ ಹೋದ ಉಮೇಶ ಅವಳನ್ನು ಹತ್ತಿರ ಎಳೆದುಕೊಂಡು ಎದೆಗೆ ಒರಗಿಸಿಕೊಂಡ. ಕಾರು ನಿಲ್ಲಿಸಿ ಅವಳನ್ನು ಮುತ್ತಿಟ್ಟ. ಲೌವ್ಲಿ ಎನ್ನುತ್ತ ಅವಳ ನಗುತ್ತಿದ್ದ ಕಣ್ಣುಗಳನ್ನು ಮತ್ತೆ ಮತ್ತೆ ಚುಂಬಿಸಿದ. "ಕುಸುಂ, ನಿನಗ ಸಾಗರನಕಿಂತ ಸುಂದರವಾದ ಮಗೂನ ಕೊಡಬಲ್ಲೆ. ಆದರೆ ಅದಕ್ಕ ನಮಗಿಬ್ಬರಿಗೂ ಮಾನಸಿಕ ತಯಾರಿರಬೇಕು. ಅವಸರ ಬೇಡ ಪ್ಲೀಜ್."

"ನನಗ ಮಗು ಸಿಗುತ್ತೆ ಅಂದರೆ ಜೀವನದ ಕೊನೇವರೆಗೂ ಕಾಯ್ತೀನಿ, ಆ ಸುಂದರ ಕ್ಷಣಕ್ಕಾಗಿ ಆಸೆ ಮಾಡ್ತಾ ದಿನ ಕಳೀತೀನಿ ಉಮೇಶ."

"ಕುಸುಂ ಇನ್ನೂ ಒಂದು ಷರತ್ತು. ನಮ್ಮ ಸಂಬಂಧ ಈಗ ಬರಿ ಡಾಕ್ಟರ ರೋಗಿಗಳದಾಗಿ ಉಳಿದಿಲ್ಲ. ನಾವಿಬ್ಬರೂ ಭೆಟ್ಟಿಯಾಗಬೇಕಾದರೆ ಚಿಕಿತ್ಸೆ ಮುಂದುವರೀಲೇಬೇಕು. ಚಿಕಿತ್ಸೆ ಪಡೆದ ಹಾಗೆ ಗುಣಾನೂ ಕಾಣಿಸ್ಕೋಬೇಕಲ್ಲ. ಅದಕ್ಕೆ ನಿನ್ನ ಗಂಡನ ಹತ್ತಿರ ಸ್ವಲ್ಪ ಬೇರೆಯಾಗಿ ನೀನು ನಡಕೋಬೇಕು. ಸ್ವಲ್ಪ ಮೃದುವಾಗಿ ನಡ್ಕೋ."

"ಹುಂ, ನಗ್ತಾ ಇರೋ ಹಾಗೆ ಮುಖವಾಡ ಹಾಕ್ಕೋಬೇಕು. ಪ್ರೀತಿಸೋ ಹಾಗೆ ನಟನೆ ಮಾಡಬೇಕು ಆಯ್ತಲ್ಲ. ಪುಟ್ಟ ಸಾಗರ ಸಿಗ್ತಾನಂದರ ನಾನು ಏನೆಲ್ಲಾ ಮಾಡಬಲ್ಲೆ."

***

ತಿಂಗಳುಗಳು ಲೆಕ್ಕಕ್ಕೆ ಬಾರದೆ ಜಾರಿದ್ದವು. ಉಮೇಶನ ಹತ್ತಿರ ಕುಸುಮಳ ಚಿಕಿತ್ಸೆ ನಡೆದೇ ಇತ್ತು. ಇವರಿಬ್ಬರೂ ಸುತ್ತಾಡುವುದನ್ನು ಜನ ಕಣ್ಣು ಬಿಟ್ಟು ನೋಡುತ್ತಿದ್ದರು. ಕುಸುಮ ಮಾನಸಿಕ ರೋಗಿ, ಡಾಕ್ಟರ ಹತ್ತಿರ ಚಿಕಿತ್ಸೆ ಪಡೆಯುತ್ತಿದ್ದಾಳೆನ್ನುವ ಮಾತು ಎಲ್ಲರ ಕಿವಿಗೂ ಮುಟ್ಟಿತ್ತು. ಕೆಲವರು ಕನಿಕರ ತೋರಿದರು. ಹಲವರು ಅಸಹನೆಪಟ್ಟರು. ಕುಸುಮ, ಉಮೇಶ ಅದಾವುದಕ್ಕೂ ಲಕ್ಷ್ಯ ಕೊಡಲಿಲ್ಲ. ಇದಕ್ಕೆಲ್ಲ ಕೊನೆ ಎಂಬಂತೆ ಒಂದು ದಿನ ಆ ಪತ್ರ ಉಮೇಶನಿಗೆ ಬಂದಿತು.

"ಪ್ರಿಯ ಉಮೇಶ,

ನನ್ನ ಜೀವನದಲ್ಲಿಂದು ತುಂಬ ಸಂತೋಷದ ದಿನ. ನಾನು ತಾಯಿಯಾಗಲಿದ್ದೇನೆ. ನಿನ್ನ ಚಿಕಿತ್ಸೆ ಫಲಕಾರಿಯಾಯಿತು. ಮಾನಸಿಕವಾಗಿ, ದೈಹಿಕವಾಗಿ ನಾನು ಹೊಸ ಮನುಷ್ಯಳಾದೆ. ನೀನು ಚಿಕಿತ್ಸೆ ಪ್ರಾರಂಭ ಮಾಡುವಾಗ ಹೇಳಿಕೊಟ್ಟಂತೆ ಮಹೇಶನೊಡನೆ ನಾನು ಪ್ರಯತ್ನ ಪಟ್ಟು ಮೃದುವಾಗಿ ವರ್ತಿಸುತ್ತಿದ್ದೆ. ನಗು ಬಾರದಿದ್ದರೂ ಮುಖ ಗಂಟಿಕ್ಕುತ್ತಿರಲಿಲ್ಲ. ನಾನು ಮನಸೋಕ್ತ ನಕ್ಕಾಗ, ಆ ಕಠಿಣ ಮುಖವೂ ಅರಳುವುದನ್ನು ಕಂಡು ಅಚ್ಚರಿಗೊಳ್ಳುತ್ತಿದ್ದೆ. ಅವರ ಬೇಕು ಬೇಡಗಳನ್ನು ಗಮನವಿಟ್ಟು ನೋಡಿಕೊಳ್ಳುತ್ತಾ ಬಂದೆ. ಹೊರಗೆ ಹೊರಡುವಾಗ ಅವರನ್ನು ಕೇಳಿ ಅವರಿಷ್ಟದಂತೆ ಸಿಂಗರಿಸಿಕೊಳ್ಳುತ್ತಿದ್ದೆ. ಆಗಾಗ ಅವರ ಕೆಲಸ, ವಿಚಾರ, ಅಭಿರುಚಿಗಳ ಬಗ್ಗೆ ಮೆಚ್ಚುಗೆ ಸೂಚಿಸುತ್ತಿದ್ದೆ. ಇದೆಲ್ಲಾ ನಾನು ನಟನೆಯೆಂದೇ ಸುರುಮಾಡಿದ್ದೆ. ದಿನಗಳೆದಂತೆ ಅದು ಅಭ್ಯಾಸವಾಗಿ ಹೋಯಿತು. ನಿನ್ನ ಸಲಹೆಯಂತೆ ಇತ್ತೀಚೆಗೆ ಅವರೂ ನನ್ನನ್ನು ಬಲಾತ್ಕರಿಸಲಿಲ್ಲ. ನೋಯಿಸಲಿಲ್ಲ. ಬಂಡೆಗಲ್ಲು ಸ್ವಲ್ಪ ಸ್ವಲ್ಪ ಮೃದುವಾಗುತ್ತಿದೆಯೇನೋ ಎನ್ನಿಸಿ ನಾನೇ ಅವರಿಗೆ ಹತ್ತಿರವಾಗುವ ಆಸೆ ಹುಟ್ಟುತ್ತಿತ್ತು. ಅವರ ನಗು, ಮಾತು, ಸರಸ ಬೇಕೆನ್ನಿಸುತ್ತಿತ್ತು. ನಿನ್ನ ಸಹವಾಸದಿಂದ ನನ್ನ ಸುಪ್ತ ಭಾವನೆಗಳೆಲ್ಲ ಎಚ್ಚತ್ತಿದ್ದವು.

ನಿನ್ನೆ ನನ್ನಲ್ಲಿ ಪುಟ್ಟ ಸಾಗರ ಮೂಡಿದ್ದು ತಿಳಿದಾಗ ಮನಸ್ಸಿಗೆ ಬಹಳ ಸಂತೋಷವಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದೆ. ಅವರು ನನ್ನ ಹತ್ತಿರ ಬಂದು ಮಂಚದ ಮೇಲೆ ಕುಳಿತು ಪ್ರೀತಿಯಿಂದ ತಲೆ, ಹಣೆ ನೇವರಿಸಿ 'ಕುಸುಮ ಯಾಕಳ್ತೀ?' ಎಂದು ಕೇಳಿದಾಗ ನನಗಾದ ಸಂತೋಷವನ್ನು ಅವರೊಡನೆ ಹಂಚಿಕೊಳ್ಳಲು ಸಾಧ್ಯವಾಗದೆ, ಆದರೂ ಅವರು ದೂರ ಕುಳಿತದ್ದು ಸಹನವಾಗದೆ ನಾನೇ ಬಾಚಿ ತಬ್ಬಿಕೊಂಡು ಅವರ ಎದೆಯಲ್ಲಿ ಮುಖ ಹುದುಗಿಸಿ ಅಳಹತ್ತಿದೆ. ಅವರ ಅಪ್ಪುಗೆ, ಪಿಸುಮಾತು, ನೇವರಿಕೆ ಎಲ್ಲ ನನಗೆ ಹಿತವಾಗಿ ಅವರ ತೋಳುಗಳಲ್ಲಿ ಒಂದಾಗಿ ಸೇರಿಹೋದೆ. ನನಗೆ ಹೊಸ ಜೀವನವನ್ನು ಪುಟ್ಟ ಸಾಗರವನ್ನು ಕೊಟ್ಟ ನಿನಗೆ ನಾನು ಆಜನ್ಮ ಕೃತಜ್ಞಳು. ಇನ್ನೇನು ಬರೆಯಲಿ?

ನಿನ್ನ
ಕುಸುಮ.

***

■■

# ಸೇಡಿನ ಹಿಂದೆ-ಮುಂದೆ

ಗಿರಕ್.... ಚಿರಕ್... ಗಿರಕ್.... ಚೊಂಯ್ ಮಾದನಗೌಡರ ಚಡಾವಿನ ಲಯಬದ್ಧವಾದ ಸಪ್ಪಳವು ಅಮಾವಾಸ್ಯೆಗೆ ಎರಡು ದಿನ ಮೊದಲಿನ ಕತ್ತಲು ಉಬ್ಬಸದಿಂದ ಉಸಿರು ಬಿಡುತ್ತಿರುವಂತೆ ಕೇಳಿಸುತ್ತಿತ್ತು. ಲಠ್ಠ ಬಡಿಗೆಯನ್ನು ಹಿಡಿದ ಗೌಡರ ಆಳು ಬಸ್ಯಾನ ಕೈಯ ಕಂದೀಲಿನ ಮಬ್ಬು ಬೆಳಕು ಗೌಡರ ದಾಪುಗಾಲಿನ ಹತ್ತಿರವಷ್ಟೇ ಬಿದ್ದು ಸುತ್ತಲಿನ ಕತ್ತಲನ್ನು ಗವ್ವೆನ್ನಿಸುತ್ತಿತ್ತು ಮನುಷ್ಯರು ಕಾಣದಿದ್ದರೂ ತೂಗುತ್ತಿದ್ದ ಬೆಳಕನ್ನು ನೋಡಿದ ದಾರಿಹೋಕರು ಸಪ್ಪಳ ಮಾಡದೆ ಮೆಲ್ಲಗೆ ಅರುಗಾಗುತ್ತಿದ್ದರು. ದಾರಿಯಲ್ಲಿ ಜನಸಂಚಾರವೂ ಹೆಚ್ಚಿಗಿರಲಿಲ್ಲವೆನ್ನಿ. ಹಳ್ಳಿಯ ಗಂಡಸರೆಲ್ಲ ಕಣ ಮಾಡಿದ್ದ ಹೊಲ ಕಾಯಲು ಹೊರಟು ಹೋಗಿದ್ದರು. ಬೆಳಗಿನಿಂದ ಸಂಜೆಯವರೆಗೆ ಮೈಯ ಮೂಳೆ ಪುಡಿಯಾಗುವಂತೆ ದುಡಿದು ಹೆಂಗಸರು, ಮಕ್ಕಳು ಹೊಟ್ಟೆಗಿಷ್ಟು ರೊಟ್ಟೀ ತುಂಬಿ, ಮೈಮೇಲಿನ ಖಬರು ಇಲ್ಲದೆ ನಿದ್ದೆ ಹೋಗಿದ್ದರು. ಒಂದೆರಡು ಬಾಟ್ಲಿ ಏರಿಸಿ, ಕಣ ನೋಡಿ ಬರಲು ಹೋಗುತ್ತೇನೆಂದು ಗೌಡರು ಮನೆ ಬಿಟ್ಟಿದ್ದರು.

ಮನೆಯಲ್ಲಿ ಗೌಡತಿಗೆ ದಮ್ಮು ಜೋರಾಗಿತ್ತು. ಅವಳು ತೇಲುಗಣ್ಣು ಮೇಲುಗಣ್ಣು ಮಾಡುವುದನ್ನು ನೋಡಿದರೆ ಬೆಳತನಕ ಉಳಿಯುತ್ತಾಳೋ ಇಲ್ಲವೋ ಎನ್ನುವ ಸ್ಥಿತಿ ಗೌಡರ ತಂಗಿ ಶಂಕರವ್ವನಿಗೆ ಹೆದರಿಕೆ ಹುಟ್ಟಿಸಿತ್ತು. ಗಂಡ ಸತ್ತು ಚಿಕ್ಕ ವಯಸ್ಸಿನಲ್ಲಿಯೇ ತವರು ಮನೆ ಸೇರಿದ ಶಂಕರೆವ್ವನಿಗೆ ಅಣ್ಣನ ದೊಡ್ಡ ಮನೆಯ ಉಸ್ತುವಾರಿಯ ಜೊತೆಗೆ ಬೇನೆಯಿಂದ ಬಳಲುತ್ತಿದ್ದ ಅತ್ತಿಗೆವ್ವನ ಚಾಕರಿಯೂ ಗಂಟು ಬಿದ್ದಿತ್ತು. ಶಂಕರೆವ್ವ ದುಡಿಯಲು ಹಿಂಜರಿಯುವ ಹೆಣ್ಣು ಮಗಳಲ್ಲ. ಆದರೆ ಮಾತೆತ್ತಿದರೆ ಎಲ್ಲರ ಮೇಲೂ ಬಾರಕೋಲು ಎತ್ತುವ ಅಣ್ಣನ ಮುಂಗೋಪ, ಕುಡುಕುತನ, ಸಡಿಲುಕಚ್ಚೆಯ ಸ್ವಭಾವ, ದಿನವೂ ಸಾಯುತ್ತೇನೆಂದು ರೋದನರಾಗ ಹಾಡುವ ಅತ್ತಿಗೆಯ ಅಳುಮುಂಜಿ ಸ್ವಭಾವ; ನಗು, ಸಂತೋಷ, ಕುಟುಂಬ ವಾತ್ಸಲ್ಯ, ಸುಖ-ದುಃಖದ ಮಾತುಕತೆ ಇಲ್ಲದ ಮನೆಯ ಸಿಡಿಯುವಂಥ ವಾತಾರವಣ ಶಂಕರೆವ್ವನಿಗೆ ನರಕವೆಂದರೆ ಬೇರೆಯಿಲ್ಲ, ಇದೇ ಇನ್ನುವಂತೆ ಮಾಡುತ್ತಿದ್ದವು.

ಆ ರಾತ್ರಿಯೂ ಗೌಡರು ಊಟಕ್ಕೆ ಕುಳಿತಾಗ ಆಂಬ್ರ ಸವಿಯಾಗಿಲ್ಲವೆಂದು ಗಂಗಾಳ ಎತ್ತಿ ಗೋಡೆಗೆ ಒಗೆದಿದ್ದರು. ಅತ್ತಿಗೆಗೆ ಗಂಜಿ ಕುಡಿಸುತ್ತಿದ್ದ ಶಕರೆವ್ವ ಓಡಿ ಬಂದು ಸೊಸೆ ಬಂಗಾರೆವ್ವನನ್ನು ಬಯ್ದಂತೆ ಮಾಡಿ, ಬೇರೆ ಗಂಗಾಳ ಇಟ್ಟು ಅನ್ನಕ್ಕೆ ಕೆನೆ ಮೊಸರು ಹಾಕಿ, ಅಣ್ಣನಿಗೆ ಸಮಾಧಾನ ಹೇಳಿ ಊಟ ಮಾಡಿಸಿದ್ದಳು. ಹೊರಗೆ ಹೊರಡಲು ತಯಾರಾಗುತ್ತಿದ್ದ ಅಣ್ಣ ಇನ್ನು ಕಣಕ್ಕೆ ಹೋಗುತ್ತೇನೆಂದು ಹೇಳಿ ಯಮುನಿಯ ಮನೆಗೆ ಹೋಗಿ ಮುಂಜಾನೆ ತಾಸ್ಹೊತ್ತು ಏರಿದ ಮೇಲೆಯೇ ಬರುತ್ತಾನೆಂದು ತಿಳಿದ ಶಂಕರೆವ್ವ ಅಂಜಂಜುತ್ತ ಹೊರಗೆ ಹೋಗಿ ಪಡಸಾಲೆಯ ಬಾಗಿಲ ಸುಳಿಕೆಯಲ್ಲಿ ನಿಂತು ತನ್ನನ್ನೇ ದುರುದುರು ನೋಡುತ್ತಿದ್ದ ಅಣ್ಣನಿಗೆ ಹೇಳಿದ್ದಳು:

"ಯಣ್ಣಾ ಇವತ್ತೊಂದ ದಿನಾ ಹೊರಗ ಹೋಗಬ್ಯಾಡಪ್ಪ, ಮನ್ಯಾಗ ಇರು. ಅತ್ತಿಗಿ ಹ್ಯಾಂಗ್ಯಾಂಗೋ ಮಾಡತಾಳ. ನನಗ ಗಾಬರಿ ಆಕ್ಕತಿ. ಸಿಂಪೀಯಟು ಗಂಜಿ ಸುದ್ದಾ ಆಕೀಗೆ ಹೊಟ್ಯಾಗ ಹೋಗಿಲ್ಲ; ನೀ ಮನ್ಯಾಗ ಇದ್ದರ ಬೇಸಿ."

"ಗಂಗ್ಯಾ ಇಲ್ಲೇನು?"

ತನ್ನ ದೊಡ್ಡ ಮಗ ಗಂಗಪ್ಪ ಗಾಂಜಾ ಸೇದಿ ಕೋಣೆಯಲ್ಲಿ ಎಚ್ಚರವಿಲ್ಲದೆ ದಿನವೂ ಬಿದ್ದಿರುತ್ತಿದ್ದ ಸಂಗತಿ ಗೊತ್ತಿದ್ದೂ ತಂಗಿಯನ್ನೇ ಕೇಳಿದ. ಇದ್ದೂ ಇಲ್ಲದಂತಿದ್ದ ಗಂಗಪ್ಪನಿಂದ ಏನು ಉಪಯೋಗ ಎನ್ನುವಂತೆ ಶಂಕರೆವ್ವ ಸುಮ್ಮನೆ ಅಣ್ಣನನ್ನೇ ನೋಡಿದಳು.

"ಸಂಗ್ಯಾ ಏನ್ಮಾಡ್ತಾನು ?"

"ಸಂಗಣ್ಣ ಕೂಡಲದವರ ನಾಟಕ ಕಂಪನಿ ಜೊತಿ ಹೋಗಿ ಎಂಟು ದಿನಾ ಆದುವಲ್ಲಣ್ಣಾ."

"ಹಂ" ಕಾಲು ಅಪ್ಪಳಿಸಿದ ಗೌಡ ಚೀರಿದ. "ಹಡದ ಇಟ್ಟಾಳಲ್ಲ ಇಂಥಾ ಅಡ್ನಾಡಿ ಗಂಡಮಕ್ಕಳ್ನ. ಒಬ್ಬ ನಿಶೇದಾಗ ಬಿದ್ದಿರತಾನ ಇನ್ನೊಬ್ಬಾಂವ ನಾಟಕದ ಹೆಂಗಸರ ಸೆರಗಿನ್ಯಾಗ ಮೋಜ ಮಾಡ್ತಾನ. ಆಹಾಹಾಹಾ ಮುತ್ತಿನಂಥಾ ಮಕ್ಕಳು. ಮುತ್ತು ಬಳಕೋಬೇಕ ಎರಡೂ ಕೈಲೆ. ನಾ ಒಬ್ಬಾಂವ ಅದೀನಲ್ಲಾ ದುಡದು ದುಡದು ಸಾಯಾಕ, ವಾಡೇದಂಥಾ ಮನೀ, ಹದಿನಾರು ಎತ್ತಿನ ಕಮತಾ ಮಾಡಿ ಇಟ್ಟೇನಿ. ತಿಂದು, ಉಂಡು ಮಜಾ ಮಾಡ್ತಾರ ಮಕ್ಕಳು, ಮಜಾ. ನಾಳೆ ನಾ ಸತ್ತ ಮ್ಯಾಲೆ ಗೊತ್ತಾಗ್ತದ ಇವ್ರಿಗೆ. ಹಾಳಾಗಿ ಹೋಗಲಿ ಬಿಡು. ಸತ್ತರ ಸಾಯುವಳ್ಳಾಕ ನಿನ್ನ ಅತಿಗಿ. ಮುಂಜಾನಿ ಬಂದ ಮಣ್ಣ ಕಾಣಸ್ತೀನಿ" ಅಂತ ಸಿಟ್ಟಿನಿಂದ ಹೊಸ್ತಿಲು ದಾಟಲು ಹೋಗಿ ಮಾದನಗೌಡರು ಎಡವಿದ್ದರಿಂದ ಹೆಬ್ಬೆರಳು ಉಗುರು ಕಿತ್ತು ರಕ್ತ ಬಂದಿತ್ತು.

"ಲೇ ಬಸ್ಯಾ ನಂದಿಕೋಲಿನಾಂಗ ಸೆಟದ ಹಾಂಗs ನಿಂತೀದಿ. ಬೆಳಕ ತೋರಿಸಲೇ ಮಗನ." ಗುರುಗುಟ್ಟಿದ್ದರು ಗೌಡರು. ಕಣ್ಣು ತುಂಬಿ ನಿಂತ ಶಂಕರೆವ್ವ ನೋಡುತ್ತಿರುವಾಗಲೇ ಕರೀ ಕಂಬಳಿ ಹೊದ್ದ ಬಸ್ಯಾ ಉಲನ್ ಕೋಟು ಹಾಕಿದ ಗೌಡರು ಕತ್ತಲಲ್ಲಿ ಕರಗಿ ಹೋಗಿದ್ದರು.

ಕಣ ಮಾಡಿದ್ದ ಹೊಲಕ್ಕೆ ಹೋಗಿ ಆಳುಗಳನ್ನೆಲ್ಲ ಬೈಗುಳಗಳಿಂದಲೇ ಮಾತನಾಡಿಸಿ, ಎಚ್ಚರದಿಂದ ಕಾಯಲು ಹೇಳಿ ಬಸ್ಯಾನ ಜೊತೆಗೆ ತಮ್ಮ ಬಲಗೈ ಬಂಟ ಪೈಲ್ವಾನ್ ಗಿರೆಪ್ಪನನ್ನೂ ಕರೆದುಕೊಂಡು ಯಮುನಿಯಿದ್ದ ತೋಟದ ಮನೆಯತ್ತ ಗೌಡರು ಹೆಜ್ಜೆ ಹಾಕಿದರು. ಇತ್ತೀಚೆಗೆ ಯಾಕೋ ಗೌಡರು ಒಬ್ಬರೇ ತಿರುಗುತ್ತಿರಲಿಲ್ಲ. ದಿನವೂ ನಡೆದು ತಿಳಿದಿದ್ದ ಹಾದಿ. ಜೊತೆಗೆ ಇಬ್ಬರು ಗಂಡಾಳು ಇದ್ದರೂ ಗೌಡರಿಗೆ ಭಯ, ಎದೆಯಲ್ಲಿ ಅವಲಕ್ಕಿ ಕುಟ್ಟುತ್ತಿತ್ತು. ಬೇಗ ಬೇಗ ನಡೆಯಲು ಹೋಗಿ ಒಂದೆರಡು ಬಾರಿ ಎಡವಿದರು.

"ಲೇ ಗಿರ್ಯಾ, ಯಾಕೋ ಕಂದೀಲ ಬೆಳಕ ಕಾಣವಲ್ದು, ಟಕಮಕ ಅಂತತಿ, ಬ್ಯಾಟರಿನರೇ ಹಿಡುಕು."

"ಯಪ್ಪಾ ಬ್ಯಾಟ್ರಿ ಕಣದಾಗ ಮರತ ಬಂದೀನ್ರಿ, ಗಡಾನ ಓಡಿ ಹೋಗಿ ತಂದ ಬಿಡ್ತೀನ್ರಿ" ಎನ್ನುತ್ತ ಅವನು ಹೋದ. ದಿನಾಲು ಬ್ಯಾಟ್ರಿ ಇಟ್ಟುಕೊಂಡೇ ಬರುವ ಗಿರ್ಯಾ ಇವತ್ತೇಕೆ ಮರೆತ. ಹೋಗಲಿ, ಮನೀಗಿ ಹೋಗಿ ಕೈ ತೊಗೊಂಡ್ರಾತು. ಈ ದಿನದಾಗ ಯಾರ್ನೂ ನಂಬಬಾರ್ದು ಎಂದು ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿದ್ದ ಗೌಡರು ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ಬಸ್ಯಾನ ಕೈಯ ಕಂದೀಲೂ ಬಿದ್ದು ಹೋಗಿ ಗವ್ವೆನ್ನುವ ಕತ್ತಲಲ್ಲಿ ಒಂದೇ ಕ್ಷಣದಲ್ಲಿ ಚಪಗೊಡಲಿಯ ಹೊಡೆತದಿಂದ ಮಾದನಗೌಡರ ರುಂಡಮಾರು ದೂರ ಜಿಗಿದು ಬಿದ್ದಿತ್ತು. ಬಾಯಿಗೆ ಬಟ್ಟೆ ತುರುಕಿಸಿಕೊಂಡಿದ್ದ ಬಸ್ಯಾ ಕಂಬಳಿ ಮುಸುಕಿನಲ್ಲಿ ಒದ್ದಾಡುತ್ತಿದ್ದ. ಬ್ಯಾಟ್ರಿ ತರಲು ಹೋದ ಗಿರೆಪ್ಪ ಆ ರಾತ್ರಿ ಬರಲೇ ಇಲ್ಲ.

ನೆತ್ತರು ಕಾರುತ್ತಿದ್ದ ಚಪಗೊಡಲಿ ಹಿಡಿದ ಕರಿಯಪ್ಪ ಅತ್ತಿತ್ತ ನೋಡಿ ಹಳ್ಳಿಯ ಹೊರ ದಾರಿಗೆ ರಪಾಟ ಓಡುತ್ತಿದ್ದ. ಹಿಂದಿನಿಂದ ಬಂದ ಗಿರೆಪ್ಪ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು ಭಯದಿಂದ ಕರಿಯಪ್ಪ ಚೀರುವ ಮೊದಲೇ ಅವನ ಬಾಯಿ ಒತ್ತಿ ಹಿಡಿದು, ಕಿವಿಯಲ್ಲಿ ಪಿಸುಗುಟ್ಟಿದ.

"ಕರಿಯಾ, ನಾನಲೇ ಗಿರೆಪ್ಪ, ನಾವು ಮಾತಾಡಿದಾಂಗ ಎಲ್ಲಾ ಕೆಲಸ ನಡದೈತಿ. ಬಾಯಿ ಮುಚಿಕೊಂಡ ಆ ಕೊಡಲಿ ಹಿಡಕೊಂಡ ಸಪ್ಪಳಾ ಮಾಡದಾಂಗ ನಡೀ ನಿಮ್ಮ ಮನೀಗ ಹೋಗೂಣು. ಇನ್ನಾ ಯಾರೂ ನಮ್ಮನ್ನ ನೋಡಿಲ್ಲಾ."

ತನ್ನ ಕೈಯಾರ ಗೌಡರ ತಲೆ ಚೆಂಡಾಡಿ ಹೆದರಿ ನಡುಗುತ್ತಿದ್ದ ಕರಿಯಪ್ಪನನ್ನು ಗಿರೆಪ್ಪ ದಾರಿಯ ಹೊಂಡದಲ್ಲಿ ಅರಿವೆ, ಕೊಡಲಿ ತೊಳೆಸಿ ತಂದು ಅವನ ಮನೆಗೆ ಕರೆದುಕೊಂಡು ಹೋಗಿ ಅಂಗಳದಲ್ಲಿಯ ಹೊರಸಿನ ಮೇಲೆ ಮಲಗಿಸಿ ಕಂಬಳಿ ಹೊಚ್ಚಿದ. "ಸುಮಾಕ ಬಿದ್ದಕೋ. ನಾಳೆ ಊರಾಗ ಯಾರ ಏನ ಮಾತಾಡಿದ್ರೂ ಗೊತ್ತಿಲ್ಲಾಂಗ ಇದ್ದಬಿಡು. ಪೀಡಾ ಹೋತು ಅಂತ ಊರ ಮಂದಿ ಸುಮ್ಮನಾಗತಾರ. ಪೋಲಿಸರಿಗೆ ಸಂಸೇಬರೂಹಾಂಗ ನಡಕೊಂಡೀ, ಅವರ ನಿನಗ ಫಾಶೀನ ಹಾಕ್ತಾರ ಮಗನ. ಹೆದರಬ್ಯಾಡಾ ನಾ ಅದೀನಿ. ಊರಾಗ ಯಾರೂ ತುಟಿಪಿಟಿಕ್ ಅನ್ನದಾಂಗ ನೋಡಿಕೊಂತೀನಿ. "

ಎದ್ದು ಹೋಗುತ್ತಿದ್ದ ಗಿರೆಪ್ಪನ ಕೈ ಹಿಡಿದುಕೊಂಡು ಕರಿಯಪ್ಪ ಕೇಳಿದ. "ಗಿರೆಣ್ಣಾ ಆದದ್ದೆಲ್ಲಾ ಖರೇ ಹೌಂದಲ್ಲೊ ಅಂತ ನನಗ ಇನಾ ನಂಬಿಕೆ ಆಗವಲ್ಲ ನೋಡ. ನೀ.... ನೀನು ಗೌಡರ ಬಲಗೈ ಆಗಿದ್ದಿ. ನೀ ಹ್ಯಾಂಗ ಬಸ್ಯಾನ ಹಿಡಕೊಂಡ ನನಗ ನೆರವಾದಿ ? ಹೇಳೋಯಪ್ಪ"

"ಕರಿಯಣ್ಣಾ ಯಮುನೀನ್ನ ನಾ ಭಾಳ ಪಿರೀತಿ ಮಾಡತಿದ್ದೆ. ಮದುವಿ ಮಾಡಿಕೊಳ್ಳೂಣು ಅಂತ ಮಾತಾಡಿದ್ವಿ. ಆಕೀಗ ನನ್ನ ಮ್ಯಾಲೆ ಭಾಳ ಮನಸಿತ್ತೋ ಯಣ್ಣಾ. ಆದರ ಗೌಡ ಆಕೀನ್ನ ಕೆಡಿಸಿ, ತನ್ನ ಸೂಳಿನ್ನ ಮಾಡಿಕೊಂಡಬಿಟ್ಟಾ. ನನ್ನ ಮೈಯಾನ ರಗತ ಕುದೀತಿತ್ತ ನೋಡ. ಹ್ಯಂಗಾರೆ ಮಾಡಿ ಈ ಸೇಡ ತೀರಿಸ್ಕೊಂತೀನಿ ಅಂತ ಮಾತ ಕೊಟ್ಟಿದ್ನಿ. ಯಮುನೀಗಿ. ಅದ ಇಂದ ತೀರಿತು, ನೋಡಪಾ. ಕರಿಯಣ್ಣಾ ನೀ ನನಗ ಒಬ್ಬಗ ಅಲ್ಲಾ ಊರಿಗೇ ಉಪಗಾರಾ ಮಾಡೀ ಅಂತ ತಿಳಕೋ. ಈ ಇದಿಮಾರಿ ಜೀಂವಾ ತೊಗೊಂಡು ಈಗ ನಿಶ್ಚಿಂತಿ ನಿದ್ದೀಮಾಡ. ನೋಡ, ನಿನ್ನ ಹೆಂಡ್ರು ಮಕ್ಕಳಿಗಿ ಸುದ್ದಾ ಗೊತ್ತಿಲ್ಲಾ ಹೆಣಾ ಬಿದ್ದಂಗ ಬಿದ್ದಾರ. ನಾ ಬರ್ತೀನಿ" ಎಂದು ಎದ್ದು ಕಣ್ಣು ಒರೆಸಿಕೊಳ್ಳುತ್ತ ಗಿರೆಪ್ಪ ಹೊರಟು ಹೋದ.

ಮುಖದ ತುಂಬ ಮುಸುಕು ಎಳೆದು ಮಲಗಿದರೂ ನಿದ್ದೆ ಕರಿಯಪ್ಪನ ಹತ್ತಿರ ಸುಳಿಯಲಿಲ್ಲ. ಪಾಪಗೇಡಿಯಾದರೂ ಒಬ್ಬ ಮನುಷ್ಯನನ್ನು ಕೊಂದು ಆ ಪಾಪದ ಭಾರವನ್ನು ತಾನು ಹೊತ್ತುಕೊಂಡೆ ಎಂದು ಆ ಮುಗ್ಧ ಜೀವದ ಎದೆಯಲ್ಲಿ ಕೋಲಾಹಲವಾಗುತ್ತಿದ್ದಾಗ ಮನಸ್ಸಿಗೆ ಶಾಂತಿ ಎನ್ನುವುದು ಎಲ್ಲಿ? ಜನರಿಂದ ಈ ಸುದ್ದಿಯನ್ನು ಮುಚ್ಚಿಟ್ಟರೂ ಮನಸ್ಸಿನ ತಳಮಳದಿಂದ ಪಾರಾಗಲಾರೆ ಎನ್ನಿಸಿದಾಗ ಕರಿಯಪ್ಪ ಹೊದ್ದ ಕಂಬಳಿ ಕಿತ್ತೆಸೆದು ಕೊಡಲಿ ಹಿಡಿದುಕೊಂಡು ಮಲ್ಲೂರಿನ ಪೋಲಿಸ ಠಾಣೆಗೆ ನಡೆದ.

***

ಒಂದು.... ಎರಡು... ಮೂರು.... ನಾಕು.... ಕರಿಯಪ್ಪ ನಿಧಾನವಾಗಿ ಜೈಲಿನ ಕುಂಬಿಗಳನ್ನು ಎಣಿಸುತ್ತಿದ್ದ. ತನ್ನ ಒಳ್ಳೆಯ ನಡತೆ, ಪರೋಪಕಾರ ಬುದ್ಧಿಯಿಂದಾಗಿ ಜೈಲಿನಲ್ಲೂ ಕರಿಯಪ್ಪ ಎಲ್ಲರಿಗೂ ಬೇಕಾದವನಾಗಿದ್ದ. ಕಾವಲುಗಾರ ಕಾಶೀಮಸಾಬ ಹೊಟ್ಟೆ ನೋವಿನಿಂದ ನರಳುತ್ತಿದ್ದಾಗ ಕರಿಯಪ್ಪ ಅವನ ಹೊಟ್ಟೆ ತಿಕ್ಕಿ ಕಾಲಿಗೆ ಚಿಟಿಕೆ ತೆಗೆದು ಗುಣಮಾಡಿದ್ದ. ಕಾಶೀಮ ಖಾಲಿ ಇದ್ದಾಗಲೆಲ್ಲ ಕರಿಯಪ್ಪನಿಗೊಂದು ಕೊರೆ ಬೀಡಿ ಕೊಟ್ಟು ಹರಟೆ ಕೊಚ್ಚುತ್ತಿದ್ದ. ದಿನದಿನಕ್ಕೆ ಅವರಿಬ್ಬರ ಗೆಳೆತನ ಬೆಳೆದು, ಕರಿಯಪ್ಪ ಕಾಶೀಮನಿಂದ ಅಂಕಿ, ಮಗ್ಗಿ, ಅಕ್ಷರ ಹೇಳಿಸಿಕೊಂಡು ಅವನು ತಂದು ಕೊಡುವ ಹಳೇ ಪೇಪರನ್ನು ಕ ಮ ಎಂದು ಓದುತ್ತಿದ್ದ. ತನ್ನ ಓದುವಿಕೆಗೆ ತಾನೇ ಸಂತೋಷಪಟ್ಟು ಕಣ್ಣೀರು ಕರೆಯುತ್ತಿದ್ದ. ಹಾಗೆ ಅವನೊಮ್ಮೆ ಅಳುತ್ತಿದ್ದಾಗ ಕಾಶೀಮ ಕೇಳಿದ:

"ಕರಿಯಣ್ಣಾ, ನೀ ಇಷ್ಟ ಭೋಳೋ ಮನಿಶ್ಯಾ ಅದೀ, ನೀ ಖೂನಿ ಯಾಕ ಮಾಡಿದಿ ಅನ್ನೂದ ನನಗ ಹೇಳಲ್ಲ. ನಿನ್ನ ಶಿಕ್ಷಾನs ಮುಗಿಯಾಕ ಬಂತು, ಹೇಳ."

ನಿಟ್ಟುಸಿರು ಬಿಟ್ಟ ಕರಿಯಪ್ಪ "ಪರಸಂಗ ಹಂತಾದ ಬಂತೋಯಪ್ಪಾ. ಈಗಿನಾಂಗ ಆಗ ನಂಗೂ ಚೂರಾ ಚೂರಾ ಓದಾಕ, ಬರಿಯಾಕ ಬರತಿದ್ರ ನಾ ಖೂನಿ ಮಾಡತಿದ್ದಿಲ್ಲೊ ಯಣ್ಣಾ, ನನ್ನ ಕತೀ ದ್ವಾಡದೈತಿ, ಹೇಳತೇನಿ ಕೇಳ:

"ನಂಗ ಇದ್ದದ್ದು ಆರೆಕರೆ ಹೊಲಾನಪ್ಪ. ಗಂಡಾ-ಹೇಣ್ತಿ ನಮ್ಮವ್ವ ನಾಕ ಮಕ್ಕಳು ಎಲ್ಲಾರೂ ಕೂಡಿ ಹೊಲದಾಗ ಮುಂಜಾನಿಂದ ಚಂಜೀತನಾ ದುಡದ್ರೂ ವರ್ಸಾನಗಟ್ಲೆ ಉಣ್ಣಾಕ ಕಾಳು-ಕಡಿ ಹುಟ್ಟತಿದ್ದಿಲ್ಲಾ. ಬೆಳಿ ಬರಲಿ ಬಿಡಲಿ ಸರಕಾರದ ಲೇವಿ ಅಂತೂ ಕೊಡಾಕ ಬೇಕಲ್ಲ ವರ್ಸಾ ಹಲಬಿದ್ನಿ, ಕೈ ಮುಗದ್ನಿ, ಏನ ಮಾಡಿದ್ರೂ ಕಡಿಮಿ ಮಾಡ್ಲಿಲ್ಲಪ್ಪಾ. ಹೋಗ್ಲಿಬಿಡ, ರಟ್ಟೀ ಮುರದು ದುಡದ್ರ ಭೂಮಿತಾಯಿ ಹೊಟ್ಟೀ ತುಂಬಸತಾಳ ಅಂತ ವರ್ಸಾ ಕೊಟಕೋಂತ ಬಂದ್ನಿ. ಹೊಟ್ಟೀ-ಬಟ್ಟೀಗಿ ಕಡಿಮಿ ಮಾಡಿದ್ರೂ ಲೇವೀ ತಪ್ಪಸತಿದ್ದಿಲ್ಲಾ. ಹಾಂಗ ವರ್ಸಾನೂ ಚಕ್ಕಡ್ಯಾಗ ಆರ ಚೀಲಾ ಹೇರಿಕೊಂಡು ಹೊಂಟದ್ನಿ. ಗೌಡಾ ಹಾದ್ಯಾಗ ತರಬಿ "ಲೇ, ನಮ್ಮ ವಾಡೇಕೆ ತಂದು ಹಚ್ಚು, ಒಮ್ಮೆಗೇ ಎಲ್ಲಾರ ಭತ್ತಾನೂ ಕಳಿಸೂಣಂತ" ಅಂದಾ. ಒಲ್ಲೆ ಅಂದರ ಅಂವಗ ಸಿಟ್ಟು ಬರ್ತದ. ಅದಕ್ಕ ಭತ್ತಾ ಒಯ್ದು ಅವನ ಪಡಸಾಲಿ ಕಟ್ಟೀಮ್ಯಾಲ ಹೇರಿ 'ಯಪ್ಪಾರ ನಾ ಲೇವಿ ಭತ್ತಾ ಕೊಟ್ಟೇನಿ ಅಂತ ಒಂದು ಚೀಟಿ ಬರಕೊಡ್ರೀ" ಅಂತ ಅಂಜಕೊಂತ ಕೇಳಿದ್ನಿ. ಗೌಡ ಸಿಟ್ಟಾದ್ರೂ ತೊಗೊಳಲೆ ಮಗನ ಅಂತ ಕಾಗಜ ಮ್ಯಾಲೆ ಏನೋ ಗೀಚಿ ಕೊಟ್ಟಾ. ನಾನ ಓದಾಕ ಬರಿಯಾಕ ಬರಲಾರದ ಮೂಳಾ, ಅದರಾಗೇನೈತಿ ಅಂತ ತಿಳಕೊಳ್ಳದ ಜತನಾಗಿ ಒಯ್ದು ಪೆಟಿಗ್ಯಾಗಿಟ್ಟು ನನ್ನ ಕೆಲಸಕ್ಕ ಹ್ವಾದ್ನಿ. ಮುಂದ ಎರಡ ಮೂರ ತಿಂಗಳಿಗೇ ಲೇವಿ ವಸೂಲಿಗೆ ದಾರ್‍ವಾಡದಿಂದ ಸಾಯೇಬ್ರು ಬಂದ್ರು. ಗೌಡ್ರು ಕುಲಕಣ್ಣೀರು ಎಲ್ಲಾರೂ ಕೂಡಿದ್ರು. ಯಾರ್‍ಯಾರು ಲೇವಿ ಕೊಟ್ಟಿದ್ದಿಲ್ಲಾ ಅವರ್‍ನೆಲ್ಲಾ ಚಾವಡಿಗಿ ಕರೆಸಿದ್ರು. ನನಗೂ ಬುಲಾವ್ ಬಂತು. ನಾ ಭತ್ತಾ ಕೊಟ್ಟೇನಿ ಅಂತ ಬಸ್ಯಾಗ ಹೇಳಿದ್ನಿ. ಅದನ್ನ ಚಾವಡೀಗಿ ಬಂದ ಹೇಳ ಬಾ ಅಂತ ನನ ಎಳಕೊಂಡ ಹ್ವಾದಾ. ಎಲ್ಲಾರ ಮುಂದ ಅವತ್ತ ಅದ ಮಾತ ಹೇಳಿದ್ನಿ. 'ಗೌಡರ ಮನೀಗಿ ಆರ ಚೀಲ ಭತ್ತಾ ಇಳಿಸಿ ಬಂದೀನಿ' ಅಂತ. ಗೌಡರು 'ಸುಳ್ಳ ಹೇಳತೀಯಲೇ ಮಗನ....' ಅಂತ ಕಣ್ಣ ಕಿಸಿದರು. ನನ್ನ ಎದಿ ಧಸ್ಸ್ ಅಂತು. ಮನೀಗಿ ಓಡಿ ಹೋಗಿ ಪೆಟಿಗ್ಯಾಗಿಟ್ಟ ಚೀಟಿ ತಂದ ಸಾಯೇಬ್ರ ಕೈಯಾಗ ಕೊಟ್ನಿ ಸಾಯೇಬ್ರು ಅದನ್ನ ಹಿಂದ ಮುಂದ ತಿರುಗಿಸಿ ನೋಡಿ 'ಇದರಾಗೇನೈತಲೇ. ನಿನ್ನಿಂದ ಆರ ಚೀಲ ಭತ್ತ ಬರಬೇಕೂ ಅಂತ ಬರದೈತಿ. ಗೌಡರಂಥಾ ಶ್ರೀಮಂತ್ರು ಮೋಸಾ ಮಾಡ್ತಾರೇನಲೇ' ಅಂತ ನನಗs ಬುದ್ಧೀ ಹೇಳಿದ್ರು. ಕಾಶೀಮಣ್ಣಾ ನನಗ ದಿಕ್ಕ ತೋಚದಾಂಗ ಆತು. ಗೌಡಾ ನನ್ನ ರಟ್ಟೀ ದುಡುಮೀ ಭತ್ತಾತಿಂದು ಹಾಕಿದ್ದು ಅಲ್ಲದ ನಾನs ಸುಳ್ಳ ಅಂತ ಊರ ಮಂದೀ ಮುಂದ ನನ್ನ ಮರ್‍ವಾದೀ ಮೂರ ಕಾಸಿಗೆ ಮಾರಿದಾ. ಕಣ್ಣೀರ ಹಾಕತಿದ್ದ ಮುದುಕಿ, ಮಕ್ಕಳು ಎಲ್ಲಾರ್‍ನೂ ಬೆದರಿಸಿ ಮತ್ತ ಆರ ಚೀಲಾ ಭತ್ತಾ ತಂದು ಲೇವಿ ಸಾಹೇಬ್ರಿಗೆ ಕೊಟ್ನಿ. ಆ ವರಸ ನಾವು ಉಂಡದ್ದಕ್ಕಿಂತ ಉಪಾಸ ಇದ್ದ ದಿನಾ ಭಾಳ. ಮುದುಕಿ ಗೌಡಗ ಶಾಪಾ ಹಾಕಿ ಜೀಂವಾ ಬಿಟ್ಟಿತು. ಆಗ ಸಾವಕಾರ ಹತ್ತರ ಮಾಡಿದ ಸಾಲಾ ಬೆಳಕೊಂತ ಹೋತು. ಅದರ ಜೋಡಿ ನನ ಸೇಡು ಬೆಳಕೊಂತ ಹೋತು. ಹಲ್ಲಮಸದಾಂಗ ದಿನಾ ಕೊಡಲಿ ಮಸೀತಿದ್ದೆ. ಮಸದು ಒಂದಿನಾ... ಕಚಕ್ ಮಾಡಿದೆ." ಅಳುತ್ತಿದ್ದ ಕರಿಯಪ್ಪನನ್ನು ಕಾಶೀಮ ಸಮಾಧಾನ ಮಾಡಿದ.

ಎರಡು ತಿಂಗಳು ನಂತರ ಕರಿಯಪ್ಪನ ಬಿಡುಗಡೆಯಾಯಿತು. ಕರಿಯಪ್ಪ ಜೈಲಿನ ಹೊರಗೆ ಬಂದು ಸ್ವಚ್ಛವಾದ ತಂಗಾಳಿಯನ್ನು ನೀಳವಾಗಿ ಎಳೆದು ತುಂಬ ತುಂಬಿಕೊಂಡು ಆಕಾಶಕ್ಕೆ ಮುಖವೆತ್ತಿ, ನಿಧಾನವಾಗಿ ಉಸಿರು ಬಿಟ್ಟ. ಆ ಬಡಕಲು ಮೈಯಲ್ಲಿ ಹೊಸ ಶಕ್ತಿ ಉಕ್ಕಿ ಹರಿಯಿತು. ಗಿರೆಪ್ಪನೊಡನೆ ಚಕ್ಕಡಿ ಹೂಡಿಕೊಂಡು ಅಪ್ಪನನ್ನು ಕರೆಯಲು ಬಂದ ಮಾನಪ್ಪ ಓಡಿ ಅಪ್ಪಿಕೊಂಡ. ಎಲ್ಲ ಒಂದು ಕನಸೋ ಎನ್ನುವಂತೆ ಶೂನ್ಯ ದೃಷ್ಟಿಯಿಂದ ಜೈಲಿನ ಆವಾರದ ಗೋಡೆ ಬಾಗಿಲುಗಳನ್ನು ಮೂಕನಾಗಿ ಕರಿಯಪ್ಪ ಮರೆಯಾಗುವವರೆಗೆ ದಿಟ್ಟಿಸುತ್ತಿದ್ದ. ಕೋರ್ಟಿನಲ್ಲಿ ನಡೆದ ತನ್ನ ವಿಚಾರಣೆಯ ದೃಶ್ಯ ಅವನ ಕಣ್ಣ ಮುಂದೆ ಸುಳಿಯಿತು. ಕರಿಯ ನಿಲುವಂಗಿ ಹಾಕಿಕೊಂಡು ಅತ್ತಿತ್ತ ಓಡಾಡುತ್ತ ತನಗೆ ತಿಳಿಯದ ಭಾಷೆಯಲ್ಲಿ ಜಜ್ಜರಿಗೆ ಏನೊ ಹೇಳುತ್ತಿದ್ದವರು ತಮ್ಮ ವಕೀಲರೆಂದು ಗಿರೆಪ್ಪ ಅವನಿಗೆ ಹೇಳಿದ.

ಅವರು ಚೆನ್ನಾಗಿ ವಾದ ಮಾಡಿದ್ದರಿಂದ ತನಗೆ ಐದೇ ವರುಷ ಶಿಕ್ಷೆಯಾಗಿತ್ತು. ವಕೀಲ ಸಾಹೇಬರು ಬಹಳ ಜಾಣರು ಎಂದೆಲ್ಲ ವರ್ಣಿಸಿದ್ದ. ತಟ್ಟನೆ ಏನೋ ನೆನಪಾದಂತೆ ಕರಿಯಪ್ಪ,

"ಗಿರೆಪ್ಪಣ್ಣಾ ಆ ವಕೀಲ ಸಾಹೇಬ್ರಿಗೆ ನೀ ಇನ್ನಾ ಎಟ್ಟ ಪೀಜ ಕೊಡಬೇಕ? ಈಟ ದಿನಾ ಹ್ಯಾಂಗ ಸುಮ್ಮ ಇದ್ದಾರು. ಅಸಲ ಬಡ್ಡಿ ಕೂಡಿಸಿಕೊಡೂಣು. ನನ್ನ ಜೀಂವಾ ಉಳಿಸಿದ ದೇವ್ರ ಅವರು' ಎಂದ.

ನೀರು ತುಂಬಿದ ಅವನ ಕಣ್ಣುಗಳನ್ನೇ ನೋಡುತ್ತ ಗಿರೆಪ್ಪ "ಕರಿಯಣ್ಣಾ ನೀ ಚಿಂತೀ ಬಿಡೋ ಅದರದು. ವಕೀಲ್ರನ್ನ ಇಡೂಣು ಅಂತ ಮಾತಾಡಿದಾಗ ಯಮುನೀ ತನ್ನ ಕೊಳ್ಳಾಗಿನ ಟಿಕ್ಕೆ ತಗದ ಕೊಟ್ಟ ಬಿಟ್ಟಾಳ. ಅದನ್ನ ಮಾರಿ ವಕೀಲರಿಗೆ ರೊಕ್ಕಾ ಕೊಟ್ಟೇವಿ..." ಬಾಯಿ ತೆರೆಯುತ್ತಿದ್ದ ಕರಿಯಪ್ಪನನ್ನು ಸುಮ್ಮನಿರಿಸುವಂತೆ ಅವನ ಕೈ ತಟ್ಟುತ್ತ.

'ಆ ಬಂಗಾರದ ಟಿಕ್ಕೆ ಗೌಡ ಮಾಡ್ಸಿ ಕೊಟ್ಟಿದ್ನಂತ. ಊರ ಮಂದಿನ್ನೆಲ್ಲಾ ಉಸರು ಹಾಕ್ಸಿದ ಆ ಮೂಳನ ಟಿಕ್ಕೆ ನನಗ ಯಾಕ ಬೇಕ, ಕರಿಯಣ್ಣನ ಜೀಂವಾ ಉಳದ್ರ ಸಾಕ ಅಂದ್ಲು.' ಗಂಟಲು ಕಟ್ಟಿಕೊಂಡ ಕರಿಯಪ್ಪ ಮೌನವಾಗಿದ್ದ.

ಮಾನಪ್ಪ ತುಂಬ ಹುಮ್ಮಸ್ಸಿನಿಂದ ಬಾಲ ತಿರುಚಿ, ಹುರಿದುಂಬಿಸಿ ಎತ್ತುಗಳನ್ನು ಜೋರಾಗಿ ಓಡಿಸುತ್ತಿದ್ದ ತನ್ನ ನಿಪುಣತೆಯನ್ನು ಅಪ್ಪನಿಗೆ ತೋರಿಸಬೇಕಾಗಿತ್ತು. ಅವನಿಗೆ ಚಕ್ಕಡಿ ಊರ ದಾರಿಯಲ್ಲಿದ್ದಾಗ ಬದಿಯ ಹೊಲದಿಂದ ದೊಡ್ಡ ಹುಲ್ಲಿನ ಹೊರೆ ಹೊತ್ತ ಹೆಣ್ಣು ಮಗಳೊಬ್ಬಳು ಮುಂದೆ ಬಂದಳು. ಗಿರೆಪ್ಪ ಕೂಡಲೆ "ಶಂಕರೆಕ್ಕಾ ಬಾ, ಗಾಡಿ ಹತ್ತು ಜಾಗಾ ಐತಿ" ಎಂದು ಕೂಗಿದಾಗ ಎಚ್ಚತ್ತು ಕರಿಯಪ್ಪ ಕಣ್ಣು ತಿಕ್ಕಿ ಕೊಂಡು ಮತ್ತೆ ಮತ್ತೆ ನೋಡಿದ. ಗೌಡರ ತಂಗಿ ಶಂಕರೆವ್ವ ಹೊಸಿಲು ದಾಟಿ ಬರದವಳು, ಬಿಸಿಲಿನ ಮೋರೆ ಕಾಣದೆ ಬೆಳ್ಳಗಿದ್ದವಳು ಹುಲ್ಲಿನ ಹೊರೆ ದೊಪ್ಪನೆ ಒಗೆದು ಜಿಗಿದು ಚಕ್ಕಡಿಯಲ್ಲಿ ಹತ್ತಿದಳು. ಕರಿಯಪ್ಪ ದೂರ ದೂರ ಸರಿಯುತ್ತ ಮಾನಪ್ಪನ ಮಗ್ಗುಲಿಗೆ ಹೋದ.

"ಬಾ, ಕರಿಯಣ್ಣಾ ನೆಟ್ಟಗ ಕುಂದ್ರು, ಹಂಗ್ಯಾಕ ಗಾಬರಿ ಆಗೀದಿ" ಎಂದು ಅವಳು ಮಾತಾಡಿಸಿದಾಗಂತೂ ಅವನ ನಾಲಗೆಯ ತೇವವೇ ಆರಿ ಹೋಗಿತ್ತು. ಅಂಜಿದ ಕರಿಯಪ್ಪನನ್ನು ನೋಡಿ ಗಿರೆಪ್ಪ ಪಕ್ಕೆ ಹಿಡಿದುಕೊಂಡು ನಕ್ಕ. "ಕರಿಯಣ್ಣಾ ನೀ ಹೋಗಿ ಐದು ವರಸದಾಗ ನಮ್ಮೂರಾಗ ಏನೇನಾಗೇತಿ ಅನ್ನುದು ನಿನಗ ಗೊತ್ತ ಇಲ್ಲಲ್ಲ. ಗೌಡಪ್ಪ ಸತ್ತ ಮರುದಿನಾನ ಗೌಡಶಾನಿನೂ ಜೀಂವಾ ಬಿಟ್ಟು ಗಂಡಮಕ್ಕಳು ಪಾಲಾ ಮಾಡಿಕೊಂಡ್ರು. ಸಂಗಪ್ಪ ತನ್ನ ಪಾಲಿಗಿ ಬಂದ ಹೊಲಾ ಮಾರಿ ನಾಟಕ ಕಂಪನಿ ಕಟ್ಟಾಕ ಊರ ಬಿಟ್ಟ ಹ್ವಾದಾ. ಗಾಂಜಾದ ನಿಶೇದಾಗ ಬಿದ್ದಿರೂ ಗಂಗಪ್ಪನ್ನ, ಅವನ ಹೇಣ್ತೆನ್ನ ಅವನ ಆಸ್ತೀನ ಅವನ ಮಾವ ತನ್ನ ಊರಿಗೆ ತೊಗೊಂಡು ಹ್ವಾದಾ. ಇನ್ನ ಉಳದಾಕಿ ಅಂದರ ಈ ಶಂಕರೆವ್ವ ಒಬ್ಬಾಕೀನ, ಈಕಿ ದಿಕ್ಕೇಡಿ ಆದ್ಳು."

"ಬಿಡೋ ಗಿರೆಣ್ಣಾ, ನಿನ್ನಂಥಾ ಅಣ್ಣಾ ಯಮನವ್ವನಂಥಾ ಅತ್ತಿಗಿ ಇದ್ದಾಗ ನಾ ಯಾಕ ದಿಕ್ಕೇಡಿ ಆಗ್ಲಿ? ಕೈ ಕಾಲು ಘಟ್ಟಿ ಇರೂತನಾ ದುಡೀತೇನಿ, ನಿನ್ನ ಮಕ್ಕಳ್ನ ಆಡಿಸಿಕೊಂತ ಇರ್ತೇನಿ. ಸಾಯೂಮುಂದ ಹನಿ ನೀರ ಬಿಡಾಕ ನೀವ ಅದೀರೆಲ್ಲಾ, ನೀವಃ ನನ ಬಂಧು ಬಳಗಾ."

ತನ್ನ ತವರು ಮನೆಯೆಲ್ಲ ಮುರಿದು ಮೂರಾ ಬಟ್ಟೆಯಾಗಿದ್ದರೂ ಪ್ರೀತಿಯಿಂದ, ಆತ್ಮವಿಶ್ವಾಸದಿಂದ ಮಾತನಾಡುತ್ತಿದ್ದ ಶಂಕರೆವ್ವ ನಿಜವಾದ ಗೌಡತಿ ಎಂದುಕೊಂಡ ಕರಿಯಪ್ಪ ಅವಳಿಗೆ ಕೈ ಮುಗಿದು ಕಣ್ಣೀರಿಟ್ಟ.

***

■■

# ಉತ್ಸವ

ಮಮತಾ ಮಂಡಳದ ಕಾರ್ಯಕಾರಿ ಸಮಿತಿಯ ಸದಸ್ಯೆಯರೆಲ್ಲ ಅಂದು ಮಧ್ಯಾಹ್ನ ಒಂದು ಗಂಟೆಗೇ ಮಂಡಳದ ಅಧ್ಯಕ್ಷೆ ಮಂಜುಳಾನ ಮನೆಯಲ್ಲಿ ಕೂಡಿದ್ದರು. ಇನ್ನೇನು ಮೀಟಿಂಗು ಪ್ರಾರಂಭವಾಗುತ್ತದೆ ಎನ್ನುವಾಗ ಮಂಜುಳಾ ಇನ್ನೊಮ್ಮೆ ಒಳಗೆ ಹೋಗಿ ಕನ್ನಡಿ ನೋಡಿ ಕುರುಳು ತಿದ್ದಿ, ಲಿಪ್‌ಸ್ಟಿಕ್ ತುಟಿ ಬಿಟ್ಟು ಚದುರದಂತೆ ಕರವಸ್ತ್ರದಿಂದ ಸವರಿ, ತೆಳುವಾಗಿ ಪೌಡರ್ ಲೇಪಿಸಿ, ಹೊರಗೆ ಬಂದು ಸೋಫಾದಲ್ಲಿ ಕುಳಿತು "ರಂಗಪ್ಪಾ,......" ಎಂದು ಕರೆದಳು.

ಅಡುಗೆ ಆಳು ರಂಗಪ್ಪ ತಿನಿಸಿನ ಪ್ಲೇಟುಗಳನ್ನಿಟ್ಟುಕೊಂಡು ಬಂದು ಎಲ್ಲರಿಗೂ ಕೊಡಹತ್ತಿದ. ಬಾದಾಮಿ ಹಲ್ವ, ಕೋಡಬಳೆ, ಬೋಂಡಾ ಚಟ್ನಿ, ಹಣ್ಣುಗಳಿಂದ ಪ್ಲೇಟು ತುಂಬಿತ್ತು. 'ಅಯ್ಯ ಭಾಳ ಆತ್ರೆವಾ ಇದೆಲ್ಲಾ' 'ಇದೇ ಈಗ ಊಟ ಆಗಿತ್ತು' ಎಂದೆಲ್ಲಾ ಉದ್ಗಾರಗಳು ಹೊರಟರೂ ತಿನಿಸನ್ನು ಯಾವ ಮಹಿಳೆಯೂ ಬೇಡವೆನ್ನಲಿಲ್ಲ.

ತಮ್ಮ ಮನೆಯಲ್ಲಿ ಮೀಟಿಂಗ್ ಮಾಡಿದಾಗ ಎಲ್ಲ ಸದಸ್ಯೆಯರೂ ಖಾರ, ಸಿಹಿ-ತಿಂಡಿ ಕೊಡುತ್ತಿದ್ದಾಗ ತಾನು ಉಳಿದವರಿಗಿಂತ ಧಾರಾಳಿ ಎನ್ನುವದನ್ನು ತೋರಿಸಲು ಮಂಜುಳಾ ಒತ್ತಾಯದಿಂದ ಮತ್ತೊಮ್ಮೆ ಪ್ಲೇಟು ತುಂಬಿದಳು.

"ಮೀಟಿಂಗನಕಿಂತ ಈಟಿಂಗ್ ಜೋರ ಆತಲ್ಲಾ." ಸಹಕಾರ್ಯದರ್ಶಿನಿ, ಕಾಲೇಜು ಕನ್ಯೆ ಕೋಮಲಾ ಪಿಸಿಪಿಸಿ ನಕ್ಕಳು.

"ಚರ್ಚಾ ಮಾಡಲಿಕ್ಕೆ ಶಕ್ತಿ ಬೇಕಲ್ಲ. ನಮ್ಮ ಮೀಟಿಂಗ್ ಏನಂದರೂ ಎರಡು ತಾಸ ಆಗ್ತದ. ಅಷ್ಟೊತ್ತಿಗೆ ತಿಂದದ್ದೆಲ್ಲಾ ಅರಗಿ ಹೋಗ್ತದ." ಮಂಜುಳಾ ಸಮಾಧಾನ ಹೇಳಿದಳು.

ವಯಸ್ಸಾದ ಸದಸ್ಯೆ ವಿಮಲಾತಾಯಿ "ಇವತ್ತ ಶನಿವಾರ. ನನ್ನ ಒಪ್ಪತ್ತ ಇಲ್ಲೇ ಆತು ನೋಡ್ರೆವಾ" ಎನ್ನುತ್ತಿರುವಾಗ ರಂಗಪ್ಪ ಎಲ್ಲರಿಗೂ ಚಹ ತಂದು ಕೊಟ್ಟ.

"ಕೆಂಚವ್ವಗ ಬಂದು ಈ ಪ್ಲೇಟೆಲ್ಲಾ ಒಯ್ಯ ಅನ್ನು ರಂಗಪ್ಪಾ. ಹಾಂಗs.... ಇನ್ನಷ್ಟು ಹಾಲು ತೊಗೊಂಡ ಬಾ. ಚಹಾ ಎಷ್ಟು ಕೆಂಪ ಮಾಡೀದಿ.:" ಮಂಜುಳಾ ಹಾಗೆ ಹೇಳಿದೊಡನೆ ಬಾಗಿಲವರೆಗೆ ಹೋದ ರಂಗಪ್ಪ ತಿರುಗಿ ಹೇಳಿದ.

"ಹೆಬ್ಬಳ್ಳಿಯಿಂದ ಹನುಮವ್ವ ಇನ್ನೂ ಹಾಲು ತಂದಿಲ್ರೀ ಅವ್ವಾರ. ಅದಕ್ಕ ಚಹಾ ಹಾಲು ಕಮ್ ಬಿದ್ದು.

"ಹನುಮವ್ವ ಇನ್ನೂ ಬಂದಿಲ್ಲ? ಎರಡು ಹೊಡೀಲಿಕ್ಕೆ ಬಂತು. ಏನ ಧಾಡಿ ಆಕೀಗೆ ? ಮೊದಲ ಲಗೂನ ಬರುತಿದ್ದು" ಮಂಜುಳಾ ಬುಸುಗುಟ್ಟಿದಳು. ಅವಳ ಪ್ರಶ್ನೆಗೆ ಉತ್ತರ ಗೊತ್ತಿರದ ರಂಗಪ್ಪ ಸುಮ್ಮನೆ ಒಳಗೆ ಹೋದ.

"ಈ ಹಾಲಿನವರು, ಕೆಲಸದವರು ಏನ ಏರಿ ಕೂತಾರ್ರೆವ್ವ, ಈಗ ಅವರದs ರಾಜ್ಯ. ಅವರು ಕೆಲಸಾ ಮಾಡಿದ್ಹಾಂಗ ನಾವು ಮಾಡಿಸಿಕೋಬೇಕು. ಹಾಲಿನವರು ಕೊಟ್ಟಂಥಾ ನೀರ ಹಾಲು ಬಾಯಿ ಮುಚಿಗೊಂಡು ಸುಮ್ಮನ ತೊಗೊಬೇಕು; ಛೇ ಛೇ, ಭಾಳ ಆತು ಇವರದೂ" ವಿಮಲಾತಾಯಿ ಮಾತಿಗೆ ಸುರುಮಾಡಿದರು. ಉಳಿದವರೆಲ್ಲ ಅವರಂತೆಯೇ ದನಿಗೂಡಿಸಿದರು. ಮಾತಿನಲ್ಲಿ ಮಂಜುಳಾ ಯಾಕೆ ಹಿಂದೆ ಬಿದ್ದಾಳು!

"ಈಗ ಆರು ತಿಂಗಳ ಹಿಂದೆ ಹಾಲಿನ ಹನುಮವ್ವ ಬಂದು, "ಅವ್ವಾರ ಒಂದಿಟು ಸಹಾಯಾ ಮಾಡ್ರೀ" ಅಂತ ದೈನಾಸ ಬಿಟ್ಲು. ಏನವ್ವಾ ಅಂದೆ. ಒಂದ ಹೊಸಾ ಎಮ್ಮೀ ತೊಗೋಬೇಕ ಅಂತೀನಿ, ಎಡ್ಡ ಸಾವಿರ ಅಂತಾರ್ರೀ.

ನೀವೊಂದು ಐನೂರೂಪ್ಯೆ ಕೊಟ್ರ ಬೇಶಾಕ್ತಯ್‌ತಿ. ಹಿಂಡಿದ ಹಾಲೂ ನಿಮಗ ಕೊಟ್ಟ ಮುಟ್ಟಸತೇನಿ. ತಿಂಗಳಾ ರೊಕ್ಕಾ ಮುರಕೊಳ್ರಿ ಅವ್ವಾರ. ರೊಕ್ಕಾ ಕೊಟ್ಟು ಪುಣ್ಯಾ ಕಟಗೊಳ್ರಿ" ಅಂದ್ಲು.

"ನೀವು ರೊಕ್ಕಾ ಕೊಟ್ಟ ಬಿಟ್ಟಿರೇನು?"

'ಅಲ್ಲಾ ಪಾಪ, ಬಡವರು ಹೊಟ್ಟೀಪಾಡಿಗೆ ದುಡೀತಾರ. ಅವರಿಗೆ ಅನುವು-ಆಪತ್ತಿಗೆ ನಮ್ಮಂಥವರಲ್ಲದ ಇನ್ನಾರ ಸಹಾಯ ಮಾಡಬೇಕು ಅಂತ ವಿಚಾರ ಮಾಡಿ, 'ನೋಡು ಹನುಮವ್ವಾ, ನಾವೂ ನೌಕರದಾರರು, ಮನೀ ಅಂದ ಮ್ಯಾಲೆ ಸಾಕಷ್ಟು ಖರ್ಚು ಇರತದ. ನೀ ಇಷ್ಟ ಕೇಳತಿ ಅಂದ ಮ್ಯಾಲೆ ಇಲ್ಲಾ ಅನಲಿಕ್ಕೆ ಆಗೋದಿಲ್ಲ. ಹ್ಯಾಂಗಾರೆ ಮಾಡಿ ಐನೂರು ರೂಪಾಯಿ ಕೊಡತೇನಿ. ದಿನಾ ಒಂದ ಲೀಟರ ಹಾಲ ತಂದುಕೊಡು. ಆದರ ಈಗ ಮೂರು ರೂಪಾಯಿಗೆ ಲೀಟರ ಕೊಡತೀಯಲ್ಲಾ. ನಮ್ಮ ರೊಕ್ಕಾ ಒಯ್ದದ್ದಕ್ಕ ನಮಗ ಎರಡು ರೂಪಾಯಿಗೆ ಲೀಟರ ಹಾಲು ಕೊಡು. ಆದರ ನನ್ನ ರೊಕ್ಕ ಮುಟ್ಟೂತನಾ ನಾ ನಿನಗ ಒಂದ ಪೈಸಾ ಸುದ್ಧಾ ಕೊಡುದಿಲ್ಲಾ ಅಂದೆ. "

"ಹೌದು, ಬರೊಬ್ಬರಿ ಹೇಳಿದಿರಿ. ಒಮ್ಮೆಲೆ ಗಂಟು ಒಯ್ದಾಕಿಗೆ ಇಷ್ಟು ಭಾಳೇನು?" ಮೂರು - ನಾಲ್ಕು ದನಿಗಳು 'ಸೈ' ಗುಟ್ಟಿದವು.

"ಒಂದೆರಡು ತಿಂಗಳು ಸರಿಯಾಗಿ ಕೊಟ್ಲು. ಈಗ ಹಿಂಗ ಸುರು ಮಾಡ್ಯಾಳ. ತಡಾ ಮಾಡ್ತಾಳ. ಎಮ್ಮಿ ಹಿಂಡವೊಲ್ಲದು ಅಂತ ಹಾಲ ಕಡಿಮಿ ಕೊಡ್ತಾಳ. ಒಟ್ಟಿನ ಮ್ಯಾಲೆ ಇಂಥಾವರನ್ನ ನಂಬಬಾರದು ನೋಡ್ರಿ?" ಮಂಜುಳಾ ಉಸಿರು ಬಿಟ್ಟಳು.

"ಅಲ್ರೀ ಮಂಜುಳಾ, ಟಿ.ವಿ. ತೊಗೊಂಡಿರೇನು? ಎಷ್ಟು ಬಿತ್ತು?" ಲತಾ ತುಂಬಾ ಅಚ್ಚರಿಯಿಂದ ಪ್ರಶ್ನಿಸಿದಳು.

"ಹೌದ್ರೀ? ಹೋದ ವಾರ ನಮ್ಮವರು ಬೆಂಗಳೂರಿಗೆ ಹೋದಾಗ ತಂದಾರ. ಹದಿನೈದು ಸಾವಿರದ ಮ್ಯಾಲೆ ಬಿತ್ತು. ಕಲರ್ ಟಿ.ವಿ. ನೋಡ್ರಿ ಇದು. ಕಂಪನೀನೂ ಭಾಳ ಪ್ರಸಿದ್ಧ ಆದ. ನನಗಂತೂ ಇದು ಪ್ರೀತಿ, ಬ್ಲಾಕ್ ಅಂಡ್ ವೈಟ್ ಟಿ.ವಿ. ಹ್ಯಾಂಗ ನೋಡ್ತಾರಪಾ ಅನಸ್ತದ" ನಾಲ್ಕು ಅಂಕಿಯ ಸಂಬಳದ ಅಧಿಕಾರಿಯ ಹೆಂಡತಿ ಮಂಜುಳಾ ಮುಖ ಕಿವುಚಿ ಹೇಳಿದಳು.

"ಹಾಂ, ಈಗ ಮಂಡಳದ ವಾರ್ಷಿಕೋತ್ಸವದ ಬಗ್ಗೆ ಮಾತಾಡೂಣಲ್ಲ. ವ್ಯಾಳ್ಯಾ ಆಗ್ತದ" ಹರಟೆ ಎತ್ತಲೋ ಸಾಗುತ್ತಿದ್ದುದನ್ನು ಹಿಡಿದು ದಾರಿಗೆ ಎಳೆದಳು ಕೋಮಲಾ.

"ಹೌದು, ಅದಕ್ಕಂತ ಕೂಡೀವಲ್ಲ. ಹೇಳ್ರಿ ಈಗ ಎಲ್ಲಾರೂ ಏನೇನು ಮಾಡೋಣ? ಉತ್ಸವಕ್ಕ ಅತಿಥಿ ಅಂತ ಯಾರನ್ನ ಕರಸೂಣು ? ಒಂದು ನಾಟಕಾ ಅಂತೂ ಮಾಡಬೇಕ." ಮಂಜುಳಾ ಉತ್ಸಾಹಿತಳಾದಳು. ಕಾರಣ ಅವರೇ ಬರೆದ ನಾಟಕವನ್ನು ಮಂಡಳದ ಸದಸ್ಯೆಯರು ಆಡುವವರಿದ್ದರು.

"ಅಲ್ರೀ ಮಂಜುಳಾ, ನಿಮ್ಮ ನಾಟಕದಾಗ ಪುರುಷರ ಶೋಷಣೆಯ ವಿರುದ್ಧ ಬಂಡಾಯ ಮಾಡಿದ ಮಹಿಳೆಯರ ಕಥೀ ಅದ. ಹಾಂಗ ವರದಕ್ಷಿಣಾ ನಿರ್ಮೂಲನ ಅಂತ ಒಂದು ವಸ್ತು ಇಟಕೊಂಡು ಒಂದು ವಿಚಾರ ಸಂಕಿರಣ ಮಾಡೂಣಂತ' ಕಾರ್ಯದರ್ಶಿ ಲತಾ ಸಲಹೆ ಕೊಟ್ಟಳು.

"ಹಾಂಗಂದ್ರ ಏನ್ರವ್ವಾ, ನಮಗ ಅದೆಲ್ಲಾ ತಿಳಿಯೂದಿಲ್ಲಾ ಬಿಡಿಸಿ ಹೇಳ್ರಿ"

"ಏನಿಲ್ರೀ ವಿಮಲಾತಾಯೀ. ವರದಕ್ಷಿಣಾ ಕೊಡೂದು, ತೊಗೊಳ್ಳೂದು ತಪ್ಪು ಅಂತ ನಾಲ್ಕಾರು ಮಂದೀ ಕಡೇಿಂದ ಭಾಷಣಾ ಮಾಡಿಸೂದು. ಹೊರಗಿನಿಂದ ಒಂದಿಬ್ಬರನ್ನ ಭೋಲೋ ಮಾತಾಡೂ ಪ್ರೊಫೆಸರ್ನ ಭಾಷಣಕ್ಕ ಕರಸೂಣಂತ. ಅದೂ ಒಂದ ಮಹಿಳೆಯರ ಮುಖ್ಯ ಸಮಸ್ಯಾನ ಅಲ್ಲ" ಲತಾ ವಿವರಿಸಿದಳು.

"ನನಗೊಂದು ವಿಚಾರ ಹೊಳೆದದ ನೋಡ್ರಿ: ನಮ್ಮ ಮಮತಾ ಮಂಡಳದ ಸದಸ್ಯೆಯರು ಎಂಬತ್ನಾಲ್ಕು ಮಂದಿ ಇದ್ದಾರ. ಅವರೆಲ್ಲಾ ಆವತ್ತು ವಾರ್ಷಿಕೋತ್ಸವದ ದಿನಾ ನಾವು ನಮ್ಮ ಮಕ್ಕಳಿಗೆ ವರದಕ್ಷಿಣಾ ತೊಗೊಳ್ಳೂದಿಲ್ಲಾ, ಕೊಡೂದಿಲ್ಲಾ ಅಂತ ವೇದಿಕೆ ಮ್ಯಾಲೆ ನಿಂತು ಪ್ರತಿಜ್ಞಾ ಮಾಡಬೇಕು. ಅಂದ್ರ ಅಷ್ಟು ಶೋಷಣೆ ತಪ್ಪತದ ಅಂತ" ಕೋಮಲಾ ತನ್ನ ಸಲಹೆಯನ್ನು ಸಭೆಯ ಮುಂದಿರಿಸಿದಳು.

ಅದುವರೆಗೆ ತುಟಿಪಿಟಕ್ಕೆನ್ನದೆ ಕುಳಿತಿದ್ದ ಖ್ಯಾತ ಉದ್ದಿಮೆದಾರರ ಪತ್ನಿ ಪರಿಮಳಾದೇವಿ ಆಗ ಬಾಯಿ ಬಿಟ್ಟರು:

"ಒಂದು ಊರೊಳಗಿನ ಎಂಬತ್ತು ಮಂದಿ ಪ್ರತಿಜ್ಞಾ ತೊಗೊಂಡರ ಸಮಸ್ಯಾ ಹ್ಯಾಂಗ ಬಗೀ ಹರೀತದ? ಅದು ಎಲ್ಲಾರು ಇಡೀ ದೇಶದ ಜನಾ ಕೂಡಿ ಮಾಡುವ ಕೆಲಸಾ. ಅದಕ್ಕ ಇಂಥಾದ್ದೆಲ್ಲಾ ಏನ ಬ್ಯಾಡಾ, ಸಂಗೀತ ಗೊತ್ತಿದ್ದವರು ನಾಲ್ಕು ಮಂದಿ ಕೂಡಿ ದೇವರ ಸ್ತುತಿ ಹಾಡೂಣಂತ." ಫಾರಿನ್ ರಿಟರ್ನ್ಡ್ ಅಳಿಯ ಸಿಕ್ಕರೆ ಐವತ್ತು ಸಾವಿರ ವರದಕ್ಷಿಣೆ ಕೊಡುವ ತಯಾರಿಯಲ್ಲಿದ್ದ ಪರಿಮಳಾ ಪ್ರತಿಜ್ಞೆ ಹೇಗೆ ಮಾಡಿಯಾಳು? ಅವಳಂತೆಯೇ ಅವಳ ಮಾತಿಗೂ ತೂಕ ಹೆಚ್ಚಾಗಿದ್ದುದರಿಂದ ಕೋಮಲಾನ ಸಲಹೆ ಬಿದ್ದು ಹೋಯಿತು.

"ಗಂಡಸರ ಮನಸಿನ ವಿರುದ್ಧ ನಾವೆಲ್ಲಾ ಹಿಂಗ ಪ್ರತಿಜ್ಞಾ ಮಾಡಿದೆ, ಚಳುವಳಿ ಮಾಡಿದೆ ಅಂತ ಹೊರಟರ ನಿಮ್ಮ ಮಂಡಳಿನೂ ಬ್ಯಾಡಾ, ನೀವು ಹೊರಗ ಹೋಗೂದು ಬ್ಯಾಡಾ ಅಂತ ಮನ್ಯಾಗ ಕೂಡ್ರಸತಾರ ನಮ್ಮವರು" ಎಂದು ವಿಮಲಾತಾಯಿ ಸಂಸಾರದ ಗುಟ್ಟು ಒಡೆದರು.

"ನಾವಷ್ಟ ಪ್ರತಿಜ್ಞಾ ಮಾಡಿದರ ಏನ ಬಂತು? ನಮ್ಮ ಯಜಮಾನರು, ಮಕ್ಕಳು ಒಪ್ಪಬೇಕಲ್ಲ. ಇಂಥಾ ಗದ್ದಲಕ್ಕ ಬೀಳೂದು ಬ್ಯಾಡಾ. ಬರೇ ಹಾಡು, ನಾಟಕಾ, ಭಾಷಣಾ ಅಷ್ಟ ಮಾಡಿ ಬಿಡೂಣು ಸಾಕು" ಮಂಜುಳಾಳ ಮಾತಿನಿಂದ ಚರ್ಚೆಗೆ ಕೊನೆಯ ಪರದೆ ಬಿತ್ತು.

"ಅವ್ವಾರ ಅವ್ವಾರ" ಎಳೆ ದನಿಯೊಂದು ಗೇಟಿನ ಹತ್ತಿರ ನಿಂತು ಕೂಗುತ್ತಿತ್ತು. ಇವರೆಲ್ಲರ ಮಾತಿನ ರಭಸ ನಿಂತು ಮೌನ ನೆಲೆಸಿದಾಗ ಮತ್ತೊಮ್ಮೆ ಆ ದನಿ ತೂರಿ ಬಂದಿತು. "ಅವ್ವಾರ"

"ಯಾರವರು? ರಂಗಪ್ಪಾ ಯಾರ ನೋಡು. ಭಿಕ್ಷಾಕ್ಕ ಬಂದಿದ್ದರ ಮುಂದ ಹೋಗೂ ಅಂತ ಹೇಳು. ಇಂಥಾ ಸೋಮಾರಿಗಳಿಂದ ನಮ್ಮ ದೇಶ ತುಂಬಿ ಹೋಗೇದ." ಮಂಜುಳಾ ಸೋಫಾದಲ್ಲಿಯೇ ಸಿಡಿಮಿಡಿಗೊಂಡಳು.

ರಂಗಪ್ಪ ಹೊರಗೆ ಹೋದ. ನೆತ್ತಿ ಸಿಡಿಯುವಂಥ ಬಿಸಿಲು. ನೀಲಿ ಬಣ್ಣ ಕಾಣದಷ್ಟು ಧೂಳು ತುಂಬಿದ ಅಂಗಿ ತೊಟ್ಟುಕೊಂಡು, ಎಣ್ಣೆ ಕಾಣದೆ ಹುರ್ರೆಂದು ಹಾರುತ್ತಿದ್ದ ಕೂದಲನ್ನು ಹಿಂಗೈಯಿಂದ ಹಿಂದೆ ಸರಿಸುತ್ತ ಆರೇಳು ವರುಷದ ಪುಟ್ಟ ಹುಡುಗಿಯೊಬ್ಬಳು ನಿಂತಿದ್ದನ್ನು ನೋಡಿದ, ಅವಳ ಕೈಯಲ್ಲಿ ಹಾಲಿನ ಡಬ್ಬಿ ಇತ್ತು. ಅವಳ ಬರಿಗಾಲು ನೋಡಿದ ರಂಗಪ್ಪನ ಕರುಳು ಚುರ್ರೆಂದಿತು. ಅವಳ ರಟ್ಟೆ ಹಿಡಿದು ಅಶೋಕ ಗಿಡದ ನೆರಳಲ್ಲಿ ಎಳೆದು ಕೇಳಿದ:

"ನೀ ಹನುಮವ್ವನ ಮಗಳಲ್ಲ? ನಿಮ್ಮವ್ವ ಯಾಕ ಬಂದಿಲ್ಲಾ?" ಅಷ್ಟರಲ್ಲಿ ಮೀಟಿಂಗು ಮುಗಿಸಿದ ಮಂಜುಳಾ ಸದಸ್ಯೆಯರೊಡನೆ ಹೊರಗೆ ಬಂದಳು.

"ಅವ್ವಾರ, ಇಕೀ ಹನುಮವ್ವನ ಮಗಳು ನಿಂಬೆವ್ವರೀ, ಹಾಲು ತೊಗೊಂಡು ಬಂದಾಳ" ರಂಗಪ್ಪ ವಿವರಿಸಿದ.

"ಎಷ್ಟೊತ್ತು ಮಾಡಿದಿ? ನಮಗ ಚಹಾಕ ಹಾಲು ಸಿಗಲಿಲ್ಲಾ. ನಿಮ್ಮವ್ವ ಯಾಕ ಬರಲಿಲ್ಲಾ ?" ಮಂಜುಳಾ ಸಿಟ್ಟಿಗೆದ್ದಳು.

"ನಮ್ಮವ್ವ ಎಮ್ಮೀ ಮೇಸಾಕ ಹೋಗಿ ಬಿದ್ದಾಳ್ರೀ. ಕಾಲಿಗೆ ಬಾವು ಬಂದತರಿ. ರಾತ್ರಿಯಿಂದ ಜರಾನೂ ಬಂದಾವ್ರಿ. ನಮ್ಮ ಅಪ್ಪ, ಅಣ್ಣ ಹೊಲಕ್ಕ ಹೋಗ್ಯಾರ್ರಿ. ನಮ್ಮವ್ವ ಎದ್ದು ಎಮ್ಮಿ ಹಿಂಡಿ ಕೊಡಾಕ ತಡಾ ಆತ್ರಿ. ನಮ್ಮೂರು ಇಲ್ಲಿಂದ ಹರದಾರಿ ದೂರ ಆಕ್ಕೈತ್ರಿ. ನಡಕೋಂತ ಬಂದ್ನಿ. ತಡಾ ಆತ್ರಿ" ಗಿಡದ ನೆರಳು ತುಸು ತಂಪು ನೀಡಿದ್ದರಿಂದಲೋ ಏನೋ ನಿಂಬೆವ್ವ ಧೈರ್ಯದಿಂದ ಉತ್ತರ ಕೊಟ್ಟಳು.

"ಆಯ್ತು, ನಿಮ್ಮದು ಸದಾ ಇದs ಗೋಳು, ಒಂದಿಲ್ಲಾ ಒಂದು ನೆವಾ ಹೇಳ್ತೀರಿ. ಮುಂಗಡ ರೊಕ್ಕಾ ಕೊಟ್ಟಿದ್ದs ನಮ್ಮ ತಪ್ಪು. ಹೋಗು ಹಿಂದಿನ ಬಾಗಿಲಿಗೆ. ರಂಗಪ್ಪಾ ಹಾಲು ಹಾಕಿಸ್ಕೋ." ಎಂದು ಅಪ್ಪಣೆ ಮಾಡಿದ ಮಂಜುಳಾ ಗೆಳತಿಯರನ್ನು ಬೀಳ್ಕೊಡಲು ಗೇಟಿನತ್ತ ನಡೆದಳು.

"ಅಬ್ಬಾ! ಕೆಂಡದ ಮಳೀ ಸುರದಾಂಗ ಅದ ಬಿಸಿಲು, ಇಂಥಾ ಬಿಸಲಾಗ ಹ್ಯಾಂಗ ಮನಿಗೆ ಹೋಗ್ತೀರವಾ. ಪರಿಮಳಾದೇವಿ ನೀವು ನಿಮ್ಮ ಕಾರಿನ್ಯಾಗ ಈ ನಾಲ್ಕೂ ಮಂದೀನ್ನ ಕರಕೊಂಡು ಹೋಗ್ತೀರಾ, ಪ್ಲೀಜ್? ಕೋಮಲಾ, ಇಂದಿರಾ ಅವರ ಮನೀ ಸಮೀಪ ಅವ. ಛತ್ರೀನೂ ತಂದಾರ. ನಡೀತಾ ಹೋಗ್ತಾರ. ಆಗ್ಲಿ, ಬಾಯ್ ಮತ್ತ ಕೂಡೋಣಂತ" ಎಂದು ಮಂಜುಳಾ ಒಳಗೆ ಬಂದಳು.

ಹಿತ್ತಿಲಕಟ್ಟೆಯ ಮೇಲೆ ನೆರಳಲ್ಲಿ ಕುಳಿತು ನಿಂಬೆವ್ವ ಎಲೆಯಲ್ಲಿ ಹಾಕಿಕೊಟ್ಟ ತಿನಿಸು ಮೆಲ್ಲುತ್ತಿದ್ದಳು. ಸದಸ್ಯೆಯರು ತಿಂದು ತಟ್ಟೆಯಲ್ಲಿ ಬಿಟ್ಟ ಎಂಜಲು ಅದು ಎನ್ನುವುದನ್ನು ತಿಳಿದಿದ್ದ ಮಂಜುಳಾ ಅತ್ತ ಕಡೆಗೆ ನೋಡಿಯೂ ನೋಡದಂತೆ ವಿಶ್ರಾಂತಿಗೆ ಬೆಡ್‌ರೂಮ್ ಹೊಕ್ಕಳು.

***

■■

# ಪರಿಸ್ಥಿತಿ

"ಎದ್ದ ಹೋಗ್ರಿ ಇಲ್ಲಿಂದ "

ಒದೆ ತಿಂದ ನಾಯಿಯಂತೆ ತಲೆ ತಗ್ಗಿಸಿ ಸುಮ್ಮನೆ ಹೊರಟ ಮೋಹನ ಕಣ್ಣಂಚಿನಿಂದ ತೊಟ್ಟಿಲಲ್ಲಿ ಮಿಸುಕಾಡುತ್ತಿದ್ದ ಮಗನನ್ನೊಮ್ಮೆ, ಮಾಲಾನನ್ನೊಮ್ಮೆ ನೋಡಿದ. ಅವಳ ಕಣ್ಣು ಕೆಂಪಾಗಿದ್ದವು. ದುಃಖದಿಂದ ತುಟಿಗಳು ಅದುರುತ್ತಿದ್ದವು. ಅಷ್ಟು ಹೊತ್ತಿನವರೆಗೆ ಮೋಹನ ಹೇಳಿದ್ದನ್ನೆಲ್ಲ ಮಾತು ಬಾರದವಳಂತೆ ಸುಮ್ಮನೆ ಕೇಳಿ ಒಮ್ಮೆಲೆ ಸ್ಫೋಟಗೊಂಡಿದ್ದಳು. ಹೆಂಡತಿ ಅತ್ತು ರಂಬಾಟ ಮಾಡಿದಾಗ ತಾನು ಅವಳನ್ನಪ್ಪಿ, ರಮಿಸಿ ಕಣ್ಣೀರು ಒರೆಸಬೇಕಾಗುತ್ತದೆಂದು ತಿಳಿದುಕೊಂಡಿದ್ದ ಮೋಹನನಿಗೆ ಈ ತಿರಸ್ಕಾರ ಅನಿರೀಕ್ಷಿತವಾಗಿತ್ತು. ಅವನಿಗೆ ಗೊತ್ತಿತ್ತು ಇನ್ನು ಮಾಲಾಳ ಸಿಟ್ಟು ತಂಗಿಯ ಮೇಲೆ ತಿರುಗುತ್ತದೆಂದು. ಶೀಲಾ ಆಫೀಸಿನಿಂದ ಬಂದು ಅರ್ಧ ಗಂಟೆಯಾಗಿದ್ದರೂ ಕಾಲು ತೊಳೆದು, ಅರಿವೆ ಬದಲಿಸಿ, ಏನೂ ತಿಂದಿರಲಿಲ್ಲ. ಮೋಹನ ಅಲ್ಲಿಂದ ಎದ್ದು ಸೀದಾ ಶೀಲಾನ ರೂಮಿಗೆ ಬಂದ. ಗೋಡೆಯತ್ತ ಮುಖ ಮಾಡಿ ಮುದ್ದೆಯಾಗಿ ಮಲಗಿದ್ದ ಶೀಲಾನ ಹತ್ತಿರ ಹಣೆ, ಕೂದಲುಗಳ ಮೇಲೆ ಮೌನವಾಗಿ ನೇವರಿಸಿದ. ಎದ್ದು ಕುಳಿತ ಶೀಲಾ ಕಣ್ಣೀರಿನಲ್ಲಿ ಕರಗಿದಳು. ಹೆಗಲ ಮೇಲೆ ಅವಳ ತಲೆ ಒರಗಿಸಿಕೊಂಡು ಮೃದುವಾಗಿ ಬೆನ್ನು ತಟ್ಟಿದ. ಬಾಡಿದ ಹೂವಿನಂತಿದ್ದ ಅವಳ ಮುಖ ಮೇಲೆತ್ತಿ ಹರಿಯುತ್ತಿದ್ದ ನೀರನ್ನು ತುದಿ ಬೆರಳಿನಿಂದ ಒರೆಸಿದ. ಶೀಲಾನ ದುಃಖ ಸ್ವಲ್ಪ ಹಿಡಿತಕ್ಕೆ ಬಂದಿತು.

"ಮಾಮಾ, ನನಗೆ ಭಾಳ ಹೆದರಿಕಿ ಆಗಲಿಕ್ಕೆ ಹತ್ತೇದ" ಪಿಸುದನಿಯಲ್ಲಿ ಉಸುರಿದಳು. ಅವನ ಕಿವಿಯ ಸಮೀಪದಲ್ಲಿ.

ತನ್ನ ಪ್ರೀತಿಯೊಂದೇ ಅವಳಿಗೆ ಧೈರ್ಯ ತುಂಬಬಲ್ಲದೆಂದು ತಿಳಿದಿದ್ದ ಮೋಹನ ಅವಳ ಕಣ್ಣುಗಳನ್ನು ಮುತ್ತಿಟ್ಟ.

"ಅಳಬ್ಯಾಡಾ, ಸಮಾಧಾನ ಮಾಡಿಕೋ. ಇವತ್ತಿಲ್ಲಾ ನಾಳೆ ನಾವು ಈ ಪ್ರಸಂಗ ಎದುರಿಸಲಿಕ್ಕೇ ಬೇಕಾಗಿತ್ತಲ್ಲಾ. ಅದಕ್ಕ ಆಕಿs ಕೂಸಿನ ಜೋಡಿ ದವಾಖಾನಿಯಿಂದ ಬಂದ ದಿನಾನೇ ಏನೇನಾತು ಎಲ್ಲಾ ಹೇಳಿಬಿಟ್ಟೆ. ಮತ್ತ ಇದರೊಳಗ ನಿಂದೇನೂ ತಪ್ಪಿಲ್ಲಾ. ನಾನs ಸಂಯಮ ಕಳಕೊಂಡೆ. ದೊಡ್ಡ ಮನಸ್ಸು ಮಾಡಿ ಕ್ಷಮಾ ಮಾಡು ಅಂತನೂ ಹೇಳೇನಿ. ಒಂದೆರಡ ದಿನ ಒದರ್ಯಾಡತಾಳ. ಮುಂದ ಕೂಸಿನ್ನ ನೋಡಿ ಮರೀತಾಳ. ನೀನೂ ಆಕೀಗೆ ತಿರಗಿ ಮಾತಾಡಬ್ಯಾಡಾ. ನಾಲ್ಕು ಬಯ್ದರ ಬಯ್ಸಿಕೋ" ತಗ್ಗಿದ ದನಿಯಲ್ಲೇ ಹೇಳುತ್ತಿದ್ದ.

"ಶೀಲಾs ಶೀಲೀs ಎಲ್ಲಿ ಸತ್ತಿಯs?" ಮಾಲಾ ತನ್ನ ಕೋಣೆಯಿಂದ ಒಮ್ಮೆಲೆ ಚೀರಿದಳು. ಬೆಚ್ಚಿದ ಶೀಲಾ ಎದ್ದು ಮೋಹನನನ್ನು ಹೊರಳಿ ನೋಡುತ್ತ ಬಾಣಂತಿಯ ಕೋಣೆಗೆ ಹೋದಳು. ಬಲಿಯಾಗಲು ಹೊರಟ ಕುರಿಯಂತಾಗಿತ್ತು ಅವಳಸ್ಥಿತಿ. ಅವಳನ್ನು ಈ ಪರಿಸ್ಥಿತಿಗೆ ತಂದೊಡ್ಡಿದ ಮೋಹನ ಮತ್ತೊಂದು ಕುರಿಯಾಗಿ ತಲೆ ತಗ್ಗಿಸಿದ.

ಎರಡು ಮಕ್ಕಳ ತಂದೆಯಾಗಿದ್ದ ತಾನು ಏಕಿಷ್ಟು ಚಂಚಲಚಿತ್ತನಾದೆ ಎನ್ನುವುದೇ ತಿಳಿಯದು. ಕಾಲೇಜು ಕಲಿಯುವಾಗಿನಿಂದ ತನ್ನ ಮನೆಯಲ್ಲಿದ್ದ ಶೀಲಾ ಅಕ್ಕನಿಗೆ ಕೆಲಸದಲ್ಲಿ ಸಹಾಯ ಮಾಡುತ್ತ ಮಕ್ಕಳನ್ನು ಆಡಿಸುತ್ತ ತಿಳಿಯದ ಪಾಠಗಳನ್ನು ತನ್ನಿಂದ ಹೇಳಿಸಿಕೊಳ್ಳುತ್ತ ಬುದ್ಧಿವಂತ ಚುರುಕು ಹುಡುಗಿಯಾಗಿ ಬೆಳೆದಿದ್ದಳು. ಪದವಿ ಪಡೆದ ಮೇಲೆ ಟೈಪಿಂಗ್ ಕಲಿತು ಎಲ್.ಆಯ್.ಸಿ. ಯಲ್ಲಿ ಕೆಲಸಕ್ಕೆ ಸೇರಿ ಮಧ್ಯಮ ವರ್ಗದ ತಂದೆಯ ಭಾರವನ್ನು ಹಗುರ ಮಾಡಿದ್ದಳು. ಮಾವನವರು ಶೀಲಾಳಿಗಾಗಿ ವರ ಹುಡುಕುತ್ತಿದ್ದರು. ತಾನೇ ಸ್ವತಃ ಕೆಲವರಿಗೆ ಕನ್ಯೆಯನ್ನು

ತೋರಿಸಿದ್ದ. ಅವಳ ರೂಪ, ವಿದ್ಯೆಗೆ ಯಾವ ಪುಣ್ಯವಂತ ಅವಳ ಕೈ ಹಿಡಿಯುವನೋ ಎಂದುಕೊಳ್ಳುತ್ತಿದ್ದ. ಆದರೆ ಬಂದವರಿಗೆ ಇವರ ಯೋಗ್ಯತೆಗೆ ಮೀರಿ ದಕ್ಷಿಣೆ ಬೇಕಾಗಿತ್ತು. ಅರವಿಂದ ತನ್ನ ಸೋದರತ್ತೆ ಸುಂದರಕ್ಕನಿಗೆ ದೂರದ ಸಂಬಂಧ. ಶೀಲಾಳಷ್ಟೇ ಕಲಿತವ. ಇನ್ನೂ ಕಾಯಂ ನೌಕರಿ ಸಿಕ್ಕಿರಲಿಲ್ಲ. ಅವನೊಡನೆ ಶೀಲಾಳ ಮದುವೆಯ ಮಾತು ಮುಗಿದಿತ್ತು. ಅರವಿಂದನೇನೋ ಒಳ್ಳೆಯ ಹುಡುಗ. ರೂಪವಂತ. ಆದರೆ ಶೀಲಾಳಿಗೆ ತಕ್ಕವನೆಂದು ತನಗೆ ಅನಿಸಿರಲಿಲ್ಲ. ತನ್ನ ಮನಸ್ಸಿನ ವಿರುದ್ಧ ಮಾವನವರು ಈ ಮದುವೆಯನ್ನು ಗೊತ್ತು ಮಾಡಿದ್ದರು. ಗಂಡನಿಗೆ ಒಳ್ಳೆಯ ಕೆಲಸ ಸಿಗುವವರೆಗೆ ಮದುವೆಯನ್ನು ಮುಂದೆ ಹಾಕಲಾಗಿತ್ತು. ಶೀಲ ಇನ್ನೂ ತನ್ನ ಮನೆಯಲ್ಲೇ ಇದ್ದಳು.

ಒಳಗಿನ ಕೋಣೆಯಲ್ಲಿ ಮಾಲಾ ಮತ್ತು ಸುಂದರಕ್ಕ ಇಬ್ಬರೂ ಕಿರುಚುತ್ತಿದ್ದರು.

"ನಾಚಿಗ್ಗೇಡಿ, ಹಳೇ ನಾಚಿಗ್ಗೇಡಿ ಏನಾಗಿತ್ತು ನಿನಗ ಧಾಡಿ ? ಮದುವಿ ಗೊತ್ತಾದಾಕಿ ನಾಲ್ಕು ದಿನಾ ಮನಸ್ಸ ಬಿಗಿ ಹಿಡೀಲಿಕ್ಕೆ ಆಗಲಿಲ್ಲಾಂದರ ಎಂಥಾ ಹೆಣ್ಣು ನೀನು. ಅರವಿಂದಗ ಏನ ಹೇಳತಿ ? ಮೋಸಾ ಮಾಡಿ ಲಗ್ನಾ ಮಾಡಿಕೋತಿಯೇನ?" ಮಾಲಾ ಪೂತ್ಕರಿಸಿದಾಗ ಅತ್ತೆ ಉತ್ತರಿಸಿದಳು.

"ಛೇ, ಛೇ, ಅರವಿಂದ ಸಂಭಾವಿತ. ಇಂಥಾ ಹರೇಮಿನ ಲಗ್ನಾ ಮಾಡಿದರ ಬುಟ್ಟ್ಯಾಗಿಟ್ಟು ಮಾರಿಕೊಂಡು ಬಂದಾಳು. ಅವನಿಗೇನು, ಮನೀ ಬಾಗಿಲದಾಗ ಹುಡುಗೇರ ಕ್ಯೂ ನಿಂತಾರ. ಈ ಲಗ್ನಾನs ಬ್ಯಾಡಾ ಅಂತ ಹೇಳ್ತೇನಿ" ಶೀಲಾನ ಉಸಿರೇ ಕೇಳುತ್ತಿರಲಿಲ್ಲ.

ಮೋಹನನ ಮೈ ಕಂಪಿಸುತ್ತಿತ್ತು. ಅವಳನ್ನು ಅನುಭವಿಸಿ ಸುಖಪಟ್ಟವನು ತಾನು, ತಪ್ಪೆಲ್ಲ ಅವಳೊಬ್ಬಳದೇ ಹೇಗಾದೀತು ? ಇವರು ಮಾತಾಡುವುದೇ ತಪ್ಪು. ಅರಿಯದ ಹುಡುಗಿಯನ್ನು ಪ್ರೀತಿಯ ಮಾತುಗಳಿಂದ ಮೋಹಿಸಿ ಅವಳ ಮನಸ್ಸಿನ ಹತೋಟಿ ಕಳೆದುಕೊಳ್ಳುವಂತೆ ಮಾಡಿದ್ದು ತನ್ನ ತಪ್ಪಲ್ಲವೇ ? ಅವಳಾಗಿಯೇ ತನ್ನ ಮೇಲೆ ಬಂದು ಬೀಳಲಿಲ್ಲ! ಈ ಸಂಚಿನಲ್ಲಿ ತನ್ನ ಅಪರಾಧವೇ ಹೆಚ್ಚಿನದು. ಅವಳೊಬ್ಬಳೇ ಯಾಕೆ ಅನ್ನಿಸಿಕೊಳ್ಳಬೇಕು. ತನ್ನನ್ನೂ ಬಯ್ಯಲಿ ಇದೇ ರೀತಿ ಅಪ್ಪ, ಅವ್ವ, ಅಕ್ಕ, ಅತ್ತೆ, ಮಾವ ಎಲ್ಲರೂ ಬಯ್ದರೆ ಅವಳೊಬ್ಬಳೇ ಹೇಗೆ ಎದುರಿಸಿಯಾಳು ? ಮಾಲಾ ಈ ಮಾತನ್ನು ನುಂಗಿ ಸುಮ್ಮನಿದ್ದು ಬಿಟ್ಟಿದ್ದರೆ ಬೊಬ್ಬಾಟವಾಗುತ್ತಿದ್ದಿಲ್ಲ. ನಾಳೆ ನಮ್ಮ ಮನೆಯ ಕಥೆ ಬೀದಿಗೂ ಬೀಳುವುದೇ. ಅವಳೊಡನೆ ತಾನೂ ಜೊತೆಗಿದ್ದರೆ ಈ ಅಪಮಾನ. ನೋವು ಬಯ್ಗಳ ಸಹಿಸಲಿಕ್ಕೆ ಶೀಲಳಿಗೆ ಸಾಧ್ಯವಾದೀತು. ಛೇ ಛೇ ಇದೇನು ಮಾಡಿಬಿಟ್ಟೆ ನಾನು. ಅವಳನ್ನು ಅಪ್ಪಿಕೊಂಡ ಆ ಕ್ಷಣದಲ್ಲಿ ಎಲ್ಲವೂ ಮರೆತು ಹೋಗಿ ಮನಸ್ಸಿಗೆ ಮೋಹ ಕವಿಯಿತಲ್ಲ. ಆ ಕಣ್ಣು, ತುಟಿ, ಗಲ್ಲ, ಮೈಮಾಟ ಎಲ್ಲ ಹುಚ್ಚು ಹಿಡಿಸಿಬಿಟ್ಟವಲ್ಲ! ಹೆಂಡತಿಯ ಸಹವಾಸವಿಲ್ಲದೆ ಮೂರ್ನಾಲ್ಕು ತಿಂಗಳುಗಳೇ ಕಳೆದಿದ್ದವು. ತನ್ನ ಬಯಕೆಗೆ ಈ ಅಮಾಯಕ ಹುಡುಗಿ ಬಲಿಯಾದಳಲ್ಲ. ತನ್ನಿಂದಾಗಿ ಅವಳ ಜೀವ ಹಾಳಾಗಬಾರದು. ಅರವಿಂದನೊಡನೆ ಅವಳ ಮದುವೆ ನಿಂತು ಹೋದರೆ?.... ? ಅರೆ. ಇದೇನು ತನ್ನ ಮನಸ್ಸು ಇದನ್ನೇ ಅಪೇಕ್ಷಿಸುತ್ತಿತ್ತು ಎನ್ನುವಷ್ಟು ನಿಶ್ಚಿಂತವಾಗಿದೆಯಲ್ಲ. ಒಂದು ಸಲ ನಿಶ್ಚಯವಾದ ಮದುವೆ ಮುರಿದು ಹೋದರೆ ಹುಡುಗಿಗೆ ಅದೇ ಒಂದು ಕಳಂಕ. ಇನ್ನು ಶೀಲಾಳಿಗೆ ಬೇಗ ಗಂಡು ಸಿಗುವುದು ಕನಸಿನ ಮಾತೇ ಸರಿ. ಒಂದು ಗಂಡಿನ ತಪ್ಪಿಗೆ ಅವಳು ಜೀವನ ಪೂರ್ತಿ ಕುಮಾರಿಯಾಗಿರಬೇಕೇ? ಉಹುಂ, ಇಲ್ಲ ಅವಳೊಬ್ಬಳನ್ನೇ ಬಿಡುವುದಿಲ್ಲ. ಅವಳಲ್ಲಿ ಸಮಾಜವನ್ನು ಎದುರಿಸುವಷ್ಟು ಬಲವಿಲ್ಲ. ತಪ್ಪು ತನ್ನದೂ ಆಗಿರುವಾಗ ತಾನೇ ಏಕೆ ಅವಳನ್ನು ಮದುವೆಯಾಗಬಾರದು. ತಂದೆಗೆ ತಾನೊಬ್ಬನೇ ಮಗ. ಉಂಡು-ಉಡಲು ಸಾಕಷ್ಟು ಆಸ್ತಿಯೂ ಇದೆ. ಜೊತೆಗೆ ನೌಕರಿಯೂ ಇದೆ. ಮಾಲಾ-ಶೀಲಾ ಅಕ್ಕ-ತಂಗಿಯರು. ಕೆಲವು ದಿನ ಮಾಲಾ ಸಿಡಿ ಸಿಡಿ ಮಾಡಿದರೂ ಎರಡು ಮಕ್ಕಳ ತಾಯಿ. ಪರಿಸ್ಥಿತಿಗೆ ತಾನೇ ಹೊಂದಿಕೊಳ್ಳುತ್ತಾಳೆ. ಅವಳು ಇನ್ನೂ ಹಟ ಮಾಡಿದರೆ ಶೀಲಾಳೊಡನೆ ನಾನು ಬೇರೆ ಮನೆ ಮಾಡುತ್ತೇನೆ ಎಂದರಾಯಿತು. ತಾನೇ ಮೆತ್ತಗಾಗುತ್ತಾಳೆ, ಸರಿ, ಈಗಲೇ ಹೇಳಿಬಿಡಬೇಕು.

ದೃಢವಾದ ಹೆಜ್ಜೆಗಳನ್ನಿಡುತ್ತ ಮೋಹನ ಮಾಲಾನ ಕೋಣೆಗೆ ಬಂದ. ಮಾತಿನ ದಭೆ ದಭೇ ಒಮ್ಮೆಲೆ ಶಾಂತವಾಯಿತು. ಶೀಲಾನ ಹತ್ತಿರ ಹೋಗಿ ಅವಳ ಹೆಗಲ ಮೇಲೆ ಕೈಯಿಟ್ಟು "ಬಾ ಶೀಲಾ, ನಿನಗ ಹಸಿವಿ ಆಗಿರಬೇಕು. ಒಳಗ ಹೋಗಿ ತಿಂಡಿ ತಿನ್ನು. ಮಾಲಾ, ಶೀಲಾನ್ನ ಅರವಿಂದ ಬಿಟ್ಟರ ನಾನಃ ಆಕೀನ್ನ ರಿಜಿಸ್ಟರ್ಡ್ ಮದಿವೀ ಮಾಡಿಕೋತೀನಿ. ಇದು ಪ್ರಮಾಣ. ನಾನು ಈ ಮನೀ ಯಜಮಾನ ಅನ್ನೂ ನೆನಪ ಇಟ್ಟುಕೋ. ನೀನು ಬಾಣಂತಿ ತ್ರಾಸ ಮಾಡಿಕೋಬಾರದು. ಪರಿಸ್ಥಿತಿ ತಿಳಕೊಂಡು ಸುಮ್ಮನಿರು." ಇಷ್ಟು ಹೇಳಿ ಶೀಲಾಳ ಕೈ ಹಿಡಿದು ಹೊರಗ ಕಳಿಸಿದ.

"ದೇವರು ನನ್ನ ಯಾಕ ಉಳಿಸಿದ್ನೋ, ಹಡಿಯೂಮುಂದ ಸತ್ತಿದ್ದರ ಛೊಲೋ ಇತ್ತು" ಹಾಡಿ ಹಾಡಿಕೊಂಡು ಅಳುತ್ತಿದ್ದ ಮಾಲಾಳ ದನಿ ಅಡಿಗೆ ಮನೆಯಲ್ಲಿ ಇಬ್ಬರ ಕಿವಿಗಳಿಗೂ ಅಪ್ಪಳಿಸುತ್ತಿತ್ತು. ಹಾಲಿನ ಲೋಟವನ್ನೆತ್ತಿ ಶೀಲಾಳ ತುಟಿಗಿಟ್ಟ ಮೋಹನ. ಒಂದು ಗುಟುಕೂ ನುಂಗಲಾರದಷ್ಟು ಗಂಟಲು ಉಬ್ಬಿತ್ತು. ಆರ್ತಳಾಗಿ ಮೋಹನನತ್ತ ನೋಡಿ ಶೀಲ ಬಲವಂತವಾಗಿ ಗಟಗಟ ಹಾಲು ಕುಡಿದು ತನ್ನ ಕೋಣೆಗೆ ಹೋಗಿ ಬಿದ್ದುಕೊಂಡಳು. ಮೋಹನ ಅವಳನ್ನು ಹಿಂಬಾಲಿಸಲಿಲ್ಲ. ಅಳುತ್ತಿದ್ದ ಮಗುವನ್ನೆತ್ತಿಕೊಂಡು ಮೊಲೆ ಕುಡಿಸುತ್ತಿದ್ದ ಹೆಂಡತಿಯನ್ನೊಮ್ಮೆ ಹಣಿಕಿನೋಡಿ, ತಲೆಬಾಗಿಲು ತೆರೆದು ತೋಟದಲ್ಲಿ ಹೋಗಿ ನಿಂತು ಹಾಯಾಗಿ ಉಸಿರು ಬಿಟ್ಟ.

ರಾತ್ರಿ ಎಲ್ಲ ನಿದ್ರೆ ಇಲ್ಲದೆ ಕೆಂಡವಾಗಿದ್ದರೂ ಬೆಳಿಗ್ಗೆ ಬೇಗ ಎದ್ದು ಶೀಲಾ ಕಾಫಿ ಮಾಡಿಕೊಂಡು ಅಕ್ಕನ ರೂಮಿನಲ್ಲಿ ಕಾಲಿಟ್ಟಾಗ ಮಾಲಾ ಅವಳತ್ತ ದುರುದುರು ನೋಡಿ ಕೆಳಗೆ ಮಲಗಿದ್ದ ಅತ್ತೆಗೆ "ಸುಂದ್ರತ್ತೀ, ಆಕೀಗೆ ಕೋಣ್ಯಾಗ ಬರಬ್ಯಾಡಾ ಅನ್ನು, ಆಕೀ ಕೈಯಾಗಿಂದ ತಿಂದ್ರ ನನಗ ವಿಷ ತಿಂದ್ಹಾಂಗ. ಹಾವಿಗೆ ಹಾಲ ಎರದಾಂಗ ಆತು, ಇಷ್ಟ ದಿನಾ ಸಾಕಿದ್ದಕ್ಕೂ ಉಪಕಾರಾ ಮಾಡಿದ್ಲು" ಎಂದು ಚೀರಿದಳು. ಇನ್ನೊಂದು ಕ್ಷಣ ಅಲ್ಲಿ ನಿಲ್ಲದೆ ಶೀಲಾ ಬಾಯಿಗೆ ಸೆರಗು ತುರುಕಿ ಹೊರಗೆ ಓಡಿದಳು.

ಮೋಹನ ಹೆಂಡತಿಯ ಕೋಣೆಯ ಬಾಗಿಲಲ್ಲೇ ನಿಂತು ಕೇಳಿದ.

"ಕೂಸಿನ್ನ ತೊಟ್ಲಾಗ ಹಾಕೂದು ಎಂದು ಅನ್ನೂದು ಹೇಳಿದರ ಊರಿಗೆ ಪತ್ರಾ ಬರೀತೀನಿ." ಮಾಲಾನಿಂದ ಉತ್ತರ ಬರಲಿಲ್ಲ. ಎಂಟ್ಹತ್ತು ದಿನಗಳಿಂದ ನಡೆದ ಹೆಂಡತಿಯ ಮೌನ ಸತ್ಯಾಗ್ರಹಕ್ಕೆ ಮೋಹನ ಮೆತ್ತಗಾಗಿ ಹೋಗಿದ್ದ. ಈ ಸಮಸ್ಯೆಯನ್ನು ಬಗೆಹರಿಸುವುದು ತಾನು ತಿಳಿದಷ್ಟು ಸುಲಭವಲ್ಲವೆಂದು ಈಗೀಗ ಅವನಿಗೂ ತಿಳಿಯತೊಡಗಿತ್ತು. ಶೀಲಾಳ ಸೋತ ಮುಖ, ಮಾಲಾಳ ಸಿಟ್ಟಿನ ಮುಖ, ಎರಡರ ನಡುವೆ ತಾನು ಎತ್ತ ಹೋಗಬೇಕೆಂದು ತಿಳಿಯದೆ ದಿಕ್ಕುಗಾಣದಾಗಿದ್ದ.

ಮೋಹನನ ಪತ್ರ ನೋಡಿ ಅಪ್ಪ-ಅವ್ವ, ಅತ್ತೆ-ಮಾವಂದಿರು ಹೊಸ ಕೂಸು ನೋಡಲು ಸಂಭ್ರಮದಿಂದ ಬಂದಿಳಿದರು. ಮಾಲಾ ಹಿರಿಯರಿಗೆ ನಡೆದ ಸಂಗತಿಯನ್ನೆಲ್ಲ ವರ್ಣಿಸಿ ಹೇಳಿ ಗೋಳೋ ಎಂದಳು. ಮುಸು ಮುಸು ಅಳುತ್ತ ಮುಖ ಮುಚ್ಚಿ ಕುಳಿತ ಶೀಲಾಳನ್ನು ಅವಳ ಅಪ್ಪ-ಅವ್ವ ಬಯ್ಗುಳದಿಂದ ನರಕ ದರ್ಶನ ಮಾಡಿಸಿದರು. ಎಲ್ಲರೂ ತಪ್ಪೆಲ್ಲ ತನ್ನದೇ ಎನ್ನುವಂತೆ ಮಾತಾಡುತ್ತಾರಲ್ಲ ಎಂದು ಶೀಲಾ ಒಳಗೊಳಗೇ ಸಿಡಿಮಿಡಿಗೊಂಡಳು. ಹಿರಿಯರ ಎದುರು ಅಪರಾಧಿಭಾವ ಹೊತ್ತು ತಲೆ ತಗ್ಗಿಸಿ ಕುಳಿತ ಮೋಹನ ಮತ್ತೆ ಹೇಳಿದ. "ನೀವೆಲ್ಲಾ ಒಪ್ಪಿದರ ಶೀಲಾನ್ನ ಲಗ್ನಾ ಮಾಡಿಕೋತೀನಿ. ಇಬ್ಬರ‍್ನೂ ಸುಖದಿಂದ ಇಡತೇನಿ."

ಮಾಲಾ ತಾಯಿಯ ಕೊರಳಿಗೆ ಜೋತುಬಿದ್ದು "ಈ ಲಗ್ನಕ್ಕ ನೀವು ಹೂಂ ಅಂದರ ನನ್ನ ಕುತ್ತಿಗೀ ಕೊಯ್ದ್ಹಾಂಗ ಅಂತ ತಿಳಕೋರಿ" ಎಂದು ಅತ್ತಳು.

ಮೋಹನನ ಅಪ್ಪ ಯೋಚಿಸಿ ಹೇಳಿದರು. "ಅರವಿಂದನ ಕೂಡ ಲಗೂನ ಶೀಲಾನ ಲಗ್ನಾ ಗೊತ್ತು ಮಾಡೂನು. ಅಂವಗ ಬರಲಿಕ್ಕೆ ನಾ ಪತ್ರಾ ಬರೀತೀನಿ"

"ಅರವಿಂದ ಬಂದಾಗ ಏನು ನಡೀತು ಎಲ್ಲಾ ನಾ ಅವರಿಗೆ ಹೇಳೀನಿ. ಒಪ್ಪಿದರ ಲಗ್ನಾ ಮಾಡಿಕೊಳ್ಳಿ, ಬ್ಯಾಡಾದರ ಬಿಡಲಿ" ಶೀಲಾ ಮೊಂಡು ಧೈರ್ಯದಿಂದ ಹೇಳಿದಳು.

"ಇಂಥಾ ಸುದ್ದೀ ಕೇಳಿದ ಮ್ಯಾಲೆ ಯಾರು ನಿನ್ನ ಲಗ್ನಾ ಮಾಡಿಕೋತಾರವ್ವ" ಮೋಹನನ ಅವ್ವ, ಸಂತಾಪ ಸೂಚಿಸಿದರು.

"ಬ್ಯಾಡಾಂದರ ನಾ ಹಾಗs ಇರತೇನಿ. ನೌಕರಿ ಮಾಡಿ ನನ್ನ ಹೊಟ್ಟೀ ನಾ ತುಂಬಿಸಿಕೋತೀನಿ. ನಾ ಯಾರಿಗೂ ಭಾರ ಆಗೂದಿಲ್ಲಾ. ಆದರ ಅರವಿಂದಗ ಮೋಸಾ ಮಾಡಿ ಲಗ್ನಾ ಮಾಡಿಕೊಳ್ಳಲಿಕ್ಕೆ ನನ್ನ ಮನಸ್ಸು ಒಪ್ಪೂದಿಲ್ಲಾ. ನಾನು ಕಡೀತನಕಾ ಅವರ ಜೊತೀಗೆ ಬಾಳಬೇಕು. ನನ್ನ ಮನಸ್ಸು ಕುಟುಕುತ್ತ ಇರ್ತದ" ಶೀಲಾ ನಿರ್ಧಾರ ಹೇಳಿದಳು.

ಅವಳೆಡೆಗೆ ಕನಿಕರದಿಂದ ನೋಡುತ್ತ ಶೀಲಾನ ಅಪ್ಪ ಹೇಳಿದರು "ಶೀಲಾ, ನೀನು ತಪ್ಪು ಮಾಡಿದಾಗs ನಿನ್ನ ಮನಸ್ಸಾಕ್ಷಿ ಸತ್ತು ಹೋತು. ಆಗ ನೀ ಮಾಲಾಗ ಅನ್ಯಾಯ ಮಾಡ್ಲಿಕ್ಕೆ ಹತ್ತೀದಿ ಅನ್ನೋದು ಮರತ ಬಿಟ್ಟೆ" ಬೇರೆ ದಾರಿ ಕಾಣದ ಶೀಲಾ ಮತ್ತೆ ಬಿಕ್ಕಿ ಬಿಕ್ಕಿ ಅತ್ತಳು.

"ನಾ ಜೀವದಿಂದ ಇರೂತನಾ ಇವರ ಜೋಡಿ ನಿನ್ನ ಲಗ್ನ ಆಗಲಿಕ್ಕೆ ಸಾಧ್ಯ ಇಲ್ಲಾ" ಮಾಲಾ ಅಕ್ಕಸದಿಂದ ತಂಗಿಯ ಸೊಂಟೆಗೆ ತಿವಿದಳು.

"ಇದರೊಳಗೆ ತಪ್ಪು ನಂದೂ ಅದ. ಅದರ ಪ್ರಾಯಶ್ಚಿತ್ತಕ್ಕೆ ನಾ ಶೀಲಾನ್ನ ಲಗ್ನ ಆಗೇತೀರತೇನಿ. ಮಾಲಾ ನೀ ಇಷ್ಟ ಜಿದ್ದ ಮಾಡಿದರೂ ನಾ ಲಗ್ನ ಆಗಿ ಬ್ಯಾರೆ ಮನಿ ಮಾಡತೇನಿ" ಮೋಹನ ತನ್ನ ಗಂಡಸುತನ ತೋರಿಸಿದ ಹಿರಿಯರಿದ್ದಾರೆನ್ನುವ ಭರವಸೆಯಿಂದ.

"ಅವ್ವಾs ನಾ ಇಲ್ಲಿ ಇರೂದಿಲ್ಲ. ನನ್ನ ಊರಿಗೆ ಕರಕೊಂಡು ಹೋಗ್ರಿ, ಇಲ್ಲಾ ಒಂದಿಷ್ಟು ವಿಷಾ ಕೊಟ್ಟ ಬಿಡ್ರಿ' ಎನ್ನುತ್ತ ತಾಯಿಯ ತೆಕ್ಕೆಗೆ ಬಿದ್ದು ಮಾಲಾ ಮನೆಯ ಸೂರು ಹಾರಿ ಹೋಗುವಂತೆ ಅತ್ತಳು. ಹಿರಿಯರು ಮೂಕರಾಗಿದ್ದರು. ಸಮಸ್ಯೆ ಇನ್ನಿಷ್ಟು ಜಟಿಲವಾಗುತ್ತ ಹೋಯಿತು.

ದಿನದಿನಕ್ಕೆ ಈ ಅಪಮಾನ, ನೋವು, ದುಃಖಪಡುತ್ತಲೇ ತಾನು ಬಾಳನ್ನು ಸವೆಸಬೇಕೇನೋ ಎಂದು ದಿಗಿಲಾಗಿತ್ತು ಶೀಲಾಳಿಗೆ. ಈ ಸಮಾಜದ ದೃಷ್ಟಿಯಲ್ಲಿ ಎಂಥ ದೊಡ್ಡ ತಪ್ಪು ತನ್ನದು ! ಇದರಲ್ಲಿ ಗಂಡಸಿನ ಪಾಲು ಏನೂ ಇಲ್ಲವೇ ? ಕಾಮ ಹೆಣ್ಣಿನ ಶತ್ರು! ಕಾಮದಿಂದ ಗಂಡಸಿಗೆ ಸುಖವಾದರೆ ಹೆಂಗಸಿಗೆ ಹೆಚ್ಚಿನ ಭಾಗ ದುಃಖವೇ. ಐದು ನಿಮಿಷದ ಸುಖಕ್ಕೆ ಬಲಿಯಾದರೆ ಜೀವವಿರುವವರೆಗೂ ದುಃಖಿಸಬೇಕು, ಇಂಥ ಬಯಕೆಯನ್ನೇ ಹೆಣ್ಣಿಗೆ ಕೊಡಬಾರದಿತ್ತು. ಕೊಟ್ಟು ಮತ್ತೆ ಮೇಲೆ ಹೆಜ್ಜೆ ಹೆಜ್ಜೆಗೆ ಈ ರೀತಿ ಸಂಕಟ, ಅಪಮಾನ, ದುಃಖ, ಕೊಡುವ ದೇವರೆ ಹೆಣ್ಣಿನ ಶತ್ರು. ಹೆಣ್ಣಿನ ದುಃಖದಿಂದ ದೇವರು ಮೋಜು ನೋಡುವನೇ? ನಿಜಕ್ಕೂ ತನ್ನ ಪಾಲಿಗಂತೂ ದೇವರಿಲ್ಲ. ತನಗೆ ಯಾರೂ ಇಲ್ಲ, ಏಕಾಂಗಿ ವಿಚಾರ ಮಾಡಿ ಮಾಡಿ ತಲೆಕಾಯ್ದು ಹೊಟ್ಟೆಯಲ್ಲಿ ಕೂಳಿಲ್ಲದೆ, ನಿದ್ದೆಯಿಲ್ಲದೆ ಅತ್ತಿತ್ತ ಹೊರಳುತ್ತಿದ್ದ ಶೀಲಾಳ ದೇಹ ಒಮ್ಮೆಲೆ ಕಂಪಿಸಿತು. ಯಾವ ಮಾಯೆಯಿಂದಲೋ ಮೋಹನ ಬಂದು ಅವಳನ್ನು ಅಪ್ಪಿಕೊಂಡಿದ್ದ ಅವನು ಮುದ್ದಿಡಲು ಮುಂದಿವರಿಯುವಷ್ಟರಲ್ಲಿ ತನ್ನ ಕಸುವನ್ನೆಲ್ಲ ಹಾಕಿ ಅವನನ್ನು ನೂಕಿ ಶೀಲಾ, ಎದ್ದು ನಿಂತಳು.

"ಯಾಕ ಶೀಲಾ, ಹೆದರಬ್ಯಾಡಾ, ನಾನು ನೋಹನ, ನಿನ್ನ ಮುಖಾ ಸಪ್ಪಗಾಗಿತ್ತು ಅಳ್ತಿಯೇನೋ ಅಂತ ರಮಿಸಲಿಕ್ಕೆ ಬಂದೆ."

"ಹೌದು, ನೀವು ರಮಿಸಲಿಕ್ಕೆ ಬಂದೀರಿ. ಆದರೆ ಈಗ ನನಗ ನಿಮ್ಮ ಪ್ರೀತಿ ಬ್ಯಾಡಾ. ನೀವು ಹೊರಗ ಹೋಗ್ರಿ ಏಳ್ರಿ ಇಲ್ಲಿಂದ ಹೋಗ್ರಿ. "

"ಸಿಟ್ಟಾಗಬ್ಯಾಡಾ ಶೀಲಾ, ನಾ ನೋಟೀಸ ಕೊಟ್ಟೇನಿ. ನಿನ್ನ ರಜಿಸ್ಟರ್ಡ ಲಗ್ನಾ ಮಾಡಿಕೋತೀನಿ, ನನ್ನ ನಂಬು, ಯಾರು ಏನಂದ್ರೂ ನಾ ಕೇಳಾಂವ ಅಲ್ಲಾ. ನಾ ನಿನ್ನ ಭಾಳ ಪ್ರೀತಿ ಮಾಡ್ತೇನಿ.

"ಹೌದು, ನೀವು ಭಾಳ ಪ್ರೀತಿ ಮಾಡೇ ಈ ಗತೀಗೆ ನನ್ನ ತಂದಿರಿ. ಎರಡು ಮಕ್ಕಳು ಮತ್ತು ಅಕ್ಕನ ಜವಾಬ್ದಾರಿನೂ ನಿಮ್ಮ ಮ್ಯಾಲೆ ಅದ."

"ನಾ ಹೇಳಿದಾಂಗ ಕೇಳಿಕೊಂಡ ಬಿದ್ದಿರ್ಲಿ ಆಕಿ. ಇಲ್ಲಾಂದರ ಒದ್ದ ಹೊರಗ ಹಾಕತೇನಿ. ನನ್ನ ಮಾತ ಕೇಳಲಾರದ ಮಾಲಾ ನನಗೆ ಬೇಕಾಗಿಲ್ಲ."

"ಮಾಮಾ, ನೀವು ಅಕ್ಕನ ಕೂಡ ಪ್ರೀತಿ ಮಾತು ಆಡಿದ್ದು ನಾನs ಕಿವೀಲೆ ಕೇಳೀನಿ. ಈಗ ಆಕೀನ್ನ ಒದೀತೀನಿ ಅಂತೀರಿ. ನಾಳೆ ಇನ್ನೊಬ್ಬಾಕಿ ನಿಮ್ಮ ಕೈಗೆ ಸಿಕ್ಕಾಗನೂ ಹಿಂಗs ಒದಿಯೂವವರ ಅಲ್ಲಾ."

"ಛೇ, ಛೇ ನೀ ತಪ್ಪು ತಿಳಕೊಬ್ಯಾಡಾ ಶೀಲಾ. ಆಕೀ ಹಟಮಾರಿತನಕ್ಕ ಸಿಟ್ಟು ಬಂದು ಹಾಂಗ ಅಂದೆ. ನನಗ ಇಬ್ಬರೂ ಬೇಕು. ಇಬ್ಬರ್ನೂ ಸಾಕತೀನಿ ಆತಿಲ್ಲೊ. ಬಾ ಇಲ್ಲೇ."

"ನೀವು ಇಲ್ಲಿಂದ ಎದ್ದ ಹೊರಗೆ ಹೋಗ್ರಿ. ಇನ್ನೊಮ್ಮೆ ಇಲ್ಲೆ ಕಾಲು ಇಡಬ್ಯಾಡ್ರಿ. ಹೋಗ್ರಿ ಈಗ ಹೊರಗೆ" ಮೋಹನನನ್ನು ದಬ್ಬಿದ ಶೀಲಾ ಧಡ ಧಡಿಸುವ ಎದೆಯನ್ನು ಹಿಡಿದುಕೊಂಡು ಹಾಸಿಗೆಯ ಮೇಲೆ ಉರುಳಿದಳು.

ರಾತ್ರಿಯ ನಿಶ್ಶಬ್ದ ವಾತಾವರಣದಲ್ಲಿ ಈ ಸಂಭಾಷಣೆ ಎಲ್ಲರ ಕಿವಿಗಳಿಗೂ ತಟ್ಟಿತ್ತು.

***

ಮುಂದೆ ಎಂಟು ದಿನಗಳಲ್ಲಿಯೆ ಶೀಲಾ ತನ್ನದೇ ಸ್ವಂತ ಮನೆಯಿಂದ ಅವ್ವನಿಗೆ ಪತ್ರ ಬರೆದಳು.

ಅವ್ವನಿಗೆ,

ನನ್ನ ಗೆಳತಿಯೊಬ್ಬಳ ಸಹಾಯದಿಂದ ಅಕ್ಕನ ಮನೆಯಿಂದ ಹೊರಬಿದ್ದು ಇಲ್ಲಿಗೆ ಬಂದಿದ್ದೇನೆ. ನಾನು ಮಾಡಿದ ತಪ್ಪಿನಿಂದಾಗಿ ಅವಳ ಜೀವನ ಹಾಳಾಗಬಾರದೆಂದು ನನ್ನ ಉದ್ದೇಶ. ಅರವಿಂದನಿಗೆ ವಿಷಯ ತಿಳಿಸದೆ ಅಪ್ಪ ಮದುವೆ ಗೊತ್ತು ಮಾಡಿದರೆ ಅದನ್ನು ಖಂಡಿತ ಮುರಿಯುತ್ತೇನೆ. ನನ್ನದೇ ಸಂಬಳವಿರುವುದರಿಂದ ನಾನು ನಿಮಗೂ ಭಾರವಾಗಲು ಬಯಸುವುದಿಲ್ಲ. ಮಗಳ ಮನೆಗೆ ಬರಬೇಕು ಎನ್ನಿಸಿದರೆ ನೀವು ಸಂತೋಷದಿಂದ ಬರಬಹುದು. ಸಮಾಜ, ಮಕ್ಕಳು, ಸೊಸೆಯಂದಿರ ಮುಂದೆ ಅಪಮಾನವೆನಿಸುತ್ತಿದ್ದರೆ ನಾನು ನಿಮ್ಮ ಪಾಲಿಗೆ ಇಲ್ಲವೆಂದೇ ತಿಳಿಯಿರಿ.

ನಿಮ್ಮ
ಶೀಲಾ

ಅಪ್ಪ ಸಿಟ್ಟಾದರೂ ಅವ್ವ ಜೀವ ತಡೆಯದೆ ಬಂದೆಬಿಟ್ಟಳು. ಮಗಳ ಎರಡು ಕೋಣೆಯ ಮನೆಯನ್ನು ಸಜ್ಜು ಮಾಡಲು ನೆರವಾದಳು. ಅವಳ ಒಂಟಿ ಬಾಳನ್ನು ನೆನೆದು ಕೊರಳು ತಟ್ಟಿ ಗುಟ್ಟಿನಲ್ಲಿ ಅತ್ತಳು. ದನಿಯೇರಿಸಿದರೆ ಚಾಳಿನವರಿಗೆ ಕಾರಣ ಹೇಳಬೇಕಲ್ಲ. ನೌಕರಿ ಮಾಡುತ್ತಾಳೆ ಮದುವೆ ಮುಂದೆ ಹಾಕುತ್ತಿದ್ದಾಳೆಂದು ಹೆಂಗಳೆಯರಲ್ಲಿ ಸುದ್ದಿ ಹರಡಿದಳು. ಕಲ್ಯಾಣ ಕಟ್ಟುವ ಜನ ಆ ವರ, ಈ ವರ ಎಂದು ಅವ್ವನಿಗೆ ವರದಿ ಒಪ್ಪಿಸಿದರು. ಈಗಲೇ ಬೇಡ. ಚಿಕ್ಕವಳು, ಕೆಲವು ದಿನ ಕಳೆಯಲಿ ಎಂದು ಅವ್ವನೇ ಅವರಿಗೆ ಸಮಾಧಾನ ಹೇಳಿ ಅಪ್ಪನ ಸಿಟ್ಟು ಇಳಿಸಲು ತಿರುಗಿ ಊರಿಗೆ ಹೋದಳು.

ಕೆಲಸಕ್ಕೆ ಹೋಗುವ ಹುಡುಗಿ, ಒಬ್ಬಂಟಿ, ಎಂದು ಎಲ್ಲರೂ ಶೀಲಳಿಗೆ ಸಹಾಯ ಮಾಡಲು ಸಿದ್ಧರು. ಆಫೀಸು, ಒಬ್ಬಳ ಅಡಿಗೆ, ಅಕ್ಕ-ಪಕ್ಕದವರೊಡನೆ ಹರಟೆ, ಪೇಟೆ, ಸಿನಿಮಾಗಳಲ್ಲಿ ದಿನ ತಿಂಗಳು, ವರ್ಷಗಳು ಉರುಳಿದವು. ತನ್ನ ಜೀವನದಲ್ಲಿಯ ದುರಂತದ ಸುಳಿವು ಒಬ್ಬರಿಗೂ ಬಿಟ್ಟುಕೊಡದಂತೆ ನೀತಿ-ನಿಯಮಗಳನ್ನು ಬೆಳೆಸಿಕೊಂಡ ಶೀಲಾಳಿಗೆ ತನ್ನವರೆಲ್ಲ ಬಿಟ್ಟು ಬಂದರೂ ಇಲ್ಲಿ ಮಾನಸಿಕ ಶಾಂತಿ ಸಿಕ್ಕಿತ್ತು. ಬಹಳ ದಿನಗಳ ಹಿಂದೆ ಮಾಮಾ ಒಮ್ಮೆ ಆಫೀಸಿಗೆ ತನ್ನನ್ನು ಹುಡುಕಿಕೊಂಡು ಬಂದಾಗ ಇನ್ನೊಮ್ಮೆ ತನ್ನನ್ನು ಬೆಟ್ಟಿಯಾದರೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಅವನನ್ನು ಹೆದರಿಸಿದ್ದಳು. ಮಾಮಾ ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಹೋದ ಸುದ್ದಿ ತಿಳಿದು ಹಾಯಾಗಿದ್ದಳು.

ತನ್ನ ಬಸವಳಿದ ಮುಖ ನೋಡಿ ಕಮಲಕ್ಕ "ಸುಮ್ಮನ ಕೈ ಬಾಯಿ ಸುಟಕೋತ ಕಚೇರ್‍ಯಾಗ ದುಡಕೋತ ಯಾಕ ಬತ್ತಲಿಕ್ಕೆ ಹತ್ತೀದಿ ? ಶೀಲಾ ಮದುವಿ ಮಾಡಕೋ. ಆಗೂ ವಯಸ್ಸಿನ್ಯಾಗ ಎಲ್ಲಾ ಆದರ ಛಂದ" ಎಂದು ಪ್ರೀತಿಯಿಂದ ದುಂಬಾಲು ಬೀಳುತ್ತಿದ್ದರು.

"ಯಾವುದಕ್ಕೂ ಕಾಲ ಕೂಡಿ ಬರಬೇಕಲ್ರಿ" ಎಂದು ಶೀಲಾ ಹಾರಿಕೆಯ ಉತ್ತರ ನೀಡಿ ನಕ್ಕು ಬಿಡುತ್ತಿದ್ದಳು.

ಹಗಲು ಹೇಗೋ ಕಳೆದರೂ ಕಾತ್ರಿ ಮುಸುಕಿನಲ್ಲಿ ನಿದ್ದೆಯಲ್ಲಿ ತನ್ನ ಸುಖ-ಸಂಸಾರ ಕನಸುಗಳನ್ನು ಕಂಡು ಪುಲಕಿತಳಾಗುತ್ತಿದ್ದಳು. ಎದ್ದಾಗ ಅವಳ ಬಾಳಸಂಗಾತಿ, ಮುದ್ದು ಮಕ್ಕಳು ಮಾಯವಾಗುತ್ತಿದ್ದರು. ಜಡವಾದ ಮೈ ಮನಸ್ಸು ಹೊತ್ತು ಯಾಂತ್ರಿಕವಾಗಿ ಕೆಲಸದ ನೊಗಕ್ಕೆ ಹೆಗಲು ಕೊಡುತ್ತಿದ್ದಳು. ನಡುವೆ ಒಮ್ಮೆ ಅವ್ವ ಬಂದಾಗ ಅರವಿಂದನ ಮದುವೆಯಾದ ವಿಷಯ ಹೇಳಿದಳು. ಅಪ್ಪ ತೀರಿದ ಮೇಲೆ ಅವ್ವ ಬಂದು ಶೀಲಳ ಜೊತೆಯಾದಳು. ಒಂದು ಅಂತಃಕರಣದ ಜೀವ ತನ್ನ ಹತ್ತಿರ ಇದೆಯೆಂದು ಅವಳಿಗಷ್ಟೇ ಸಮಾಧಾನ.

ಮನಸ್ಸು ಎಷ್ಟು ಕಲ್ಲು ಮಾಡಿಕೊಂಡರೂ ತನ್ನದೂ ಉಪ್ಪು, ಹುಳಿ, ಖಾರ ತಿನ್ನುವ ಜೀವ ತಾನೆ! ತಾನು ಗಂಡಿನೊಡನೆ ಪಡೆದ ಮೊದಲ ಅನುಭವ ಅವಳಿಗೆ ಬೇಡವೆನ್ನಿಸುವುದಿಲ್ಲ. ನಿಷ್ಕಳಂಕ ಮುಖ, ಆರ್ಥಿಕ ಸ್ವಾತಂತ್ರ್ಯ ತುಂಬಿದ ಯೌವನ ಒಂದೊಂದೂ ಯುವಕರನ್ನು ತನ್ನ ಹತ್ತಿರ ಎಳೆಯುತ್ತಿದ್ದರೂ ಸಾಧ್ಯವಿದ್ದಷ್ಟು ಅವರನ್ನು ದೂರವಿಡಲು ಪ್ರಯತ್ನ ಮಾಡುತ್ತಲೇ ಬಂದಿದ್ದಳು. ಈಗೀಗ ಇಂಥ ಹೋರಾಟದಿಂದ ತಾನು ತಪ್ಪು ಮಾಡುತ್ತಿರುವೆನೇ ಎಂದು ಯೋಚಿಸುತ್ತಿದ್ದಳು. ಕುಳಿತಾಗ, ನಿಂತಾಗಲೆಲ್ಲ ಈ ಯೋಜನೆ ಅವಳನ್ನು ಕಾಡುತ್ತಿತ್ತು. ಅದರ ಪರಿಣಾಮ ದೇಹದ ಮೇಲೂ ಆಗುತ್ತಿರುವಂತೆ ಅಲ್ಲೊಂದು ಇಲ್ಲೊಂದು ಬೆಳ್ಳಿ ಕೂದಲು ಮಿನುಗುತ್ತಿದ್ದವು. ಸಮಯ ಹೀಗೆಯೇ ಜಾರಿ ಹೋಗುವುದು ಎಂದು ಚಿಂತಿಸುತ್ತಿದ್ದಳು.

ಸಣ್ಣದಾಗಿ ಸಿಳ್ಳು ಕೇಳಿಸಿತು. ತಟ್ಟನೆ ಬಾಗಿಲತ್ತ ತಿರುಗಿದಳು. "ಅಂ, ಅಭಯ, ಬರ್‍ರಿ ಯಾವಾಗ ಬಂದ್ರಿ?"

"ನಾ ಬಂದ ನಿಂತ ಎಷ್ಟೊತ್ತಾತು ; ಲಕ್ಷ್ಯ ಎಲ್ಲ್ಯದ ನಿಮ್ದು? ಯಾವ ಕನಸಿನ ಲೋಕದಾಗ ಇದ್ದಿರೋ ನಾ ಪಿಶಾಚಿ ಹಾಂಗ ನುಗ್ಗಿದೆ. ಮನೀಗೆ ಕೀಲಿ ಹಾಕಿತ್ತು. ಅಕ್ಕ ಎಲ್ಲಿ ಹೋಗ್ಯಾಳ ನಿಮಗ ಗೊತ್ತದ ಏನು ಅಂತ ಕೇಳಾಕ ಬಂದಿದ್ದೆ.

"ಹಾಂ. ಹೌದು, ಸಂಜೀ ಮುಂದ ಸಿನಿಮಾಕ್ಕ ಹೋಗ್ತೀವಿ ಅಂತ ತೃಪ್ತಿ ಕುಣೀತಿದ್ದಳು. ಆದರೆ ದೇವಕಿ ಕೀಲಿಕೈ ನಮ್ಮಲ್ಲೆ ಕೊಟ್ಟಿಲ್ಲಾ. ನೀವು ಬರೋದು ಅವರಿಗೆ ಗೊತ್ತ ಇದ್ದಿಲ್ಲೇನು ?"

"ಇಲ್ಲಾ, ಪತ್ರಾ ಬರಿಯಾಕ ಟಾಯಿಮ್ ಇದ್ದಿದ್ದಿಲ್ಲಾ. ಯಥಾ ಪ್ರಕಾರ ಇಂಟರವ್ಯೂಕ್ಕ ಬುಲಾವ್ ಬಂತು. ಹಚಿಬೀ ತೊಗೊಂಡು ಹಾಜರ್ ಆದೆ" ಏರ್ ಬ್ಯಾಗ್ ತೋರಿಸಿ ವಿಷಾದದ ನಗೆ ನಕ್ಕ ಅಭಯ.

"ಬರ್ರಿ ಒಳಗ ಕೂಡ್ರಿ. ಚಹಾ ಮಾಡ್ತೇನಿ. ಅವ್ವ ಇಲ್ಲೇ ಗುಡೀಗೆ ಹೋಗ್ಯಾಳ, ಅನಕಾ ಆ ಪೇಪರ ನೋಡ್ರಿ.

"ಛೇ ಛೇ ಚಹಾ ಈಗೇನ ಬ್ಯಾಡ್ರಿ. ಬಸ್‌ಸ್ಟ್ಯಾಂಡಿನ್ಯಾಗ ಕುಡದ ಬಂದೆ, ಮಾತಾಡೂಣಂತ ಇಲ್ಲೆ ಕೂಡ್ರಿ. ಪೇಪರ ಅಂತೂ ಎ ಟು ಝಡ್ ಎಲ್ಲಾ ಓದಿ ಮುಗಿಸೇನಿ. ಬ್ಯಾರೆ ಏನ ಕೆಲಸದ ಹೇಳ್ರಿ ನಮ್ಮಂಥಾ ನಿರುದ್ಯೋಗಿಗಳಿಗೆ? ಡಿಗ್ರಿ ತೊಗೊಂಡು ಐದ ವರ್ಷ ಆದ್ವು, ಕೂಳು ಕತ್ತರಿಸೋದು, ಕತ್ತೀಹಾಂಗ ತಿರಗೋದು ಎರಡs ಕೆಲಸಾ."

"ಇರಲಿ ಬಿಡ್ರಿ ಅಷ್ಟ್ಯಾಕ ನಿರಾಶ ಆಗ್ತೀರಿ, ಇವತ್ತಿಲ್ಲಾ ನಾಳೆ ಕೆಲಸ ಸಿಕ್ಕೀತು."

"ನೀವs ಲಕ್ಕೀ ಆದೀರಿ ಶೀಲಾ. ನೌಕರಿ ಅದ. ಖರ್ಚು ಮಾಡಲಿಕ್ಕೆ ಸ್ವತಂತ್ರ ಇದ್ದೀರಿ. ನಾವು ಸಿಗರೇಟು, ಶೇವಿಂಗ್‌ಗೆ ಸುದ್ಧಾ ಇನ್ನೊಬ್ಬರಿಗೆ ಕೈ ಒಡ್ಡಬೇಕು. ಮದುವಿ, ಮನೀ - ಮಕ್ಕಳು ಏನೂ ಕಾಣದ ನಮ್ಮ ಆಯುಷ್ಯ ಮುಗದ ಹೋದರೂ ಹೋಗಬಹುದು.

"ಚ್ಚು ಚ್ಚು ಯಾಕ್ರೀ ಅಭಯ, ಇವತ್ಯಾಕ ಹಿಂಗ ಮಾತಾಡತೀರಿ? ನಾಳಿನ ಇಂಟರವ್ಯೂದ ತಯಾರಿ ಏನಾದರೂ ಮಾಡಿಕೊಳ್ರಿ. ನಾಳಿನ ಕೆಲಸ ನಿಮಗ ಸಿಕ್ಕರೂ ಸಿಗಬಹುದು.

"ನಾಳಿನ ಕೆಲಸ ಸಿಕ್ಕರ ಮೊದಲ ನಿಮ್ಮ ಬಾಯಿಗೇ ಸಿಹಿ ಹಾಕ್ತೇನಿ ಶೀಲಾ" ಎಂದು ಅವಳತ್ತ ಕಣ್ಣು ಮಿಟುಕಿಸಿ ಸುಂದರವಾಗಿ ನಕ್ಕ ಅಭಯ.

ಅವಳಲ್ಲಿ ಲಜ್ಜೆಯ ತೆರೆಗಳನ್ನು ಎಬ್ಬಿಸಿದ ಅಭಯನ ಮುಂದೆ ನಿಲ್ಲಲಾರದೆ ಶೀಲಾ ಒಳಗೆ ಓಡಿದಳು. ದೇವಕಿ ಬರುವವರೆಗೆ ಅಭಯ ಶೀಲಾನ ಅವ್ವನೊಡನೆ ಹರಟೆ ಹೊಡೆಯುತ್ತಿದ್ದ.

ಧಡಧಡಿಸುತ್ತಿದ್ದ ಎದೆಯನ್ನು ಒತ್ತಿ ಹಿಡಿದುಕೊಂಡು ಹಾಸಿಗೆಗೆ ಒರಗಿ ಕಣ್ಮುಚ್ಚಿದಳು ಶೀಲಾ. ಅಭಯನ ತುಂಟ ಕಣ್ಣುಗಳು ತನ್ನನ್ನು ಎಷ್ಟು ರೀತಿಯಲ್ಲಿ ಕುಣಿಸುತ್ತಾವಲ್ಲ. ಅವನ ಮಾತು, ನಗು, ನಡತೆ ಎಲ್ಲವೂ ತನ್ನನ್ನು ಸೆಳೆಯುತ್ತಲೇ ಇವೆ. ಅವನು ಇಂಟರ್‌ವ್ಯೂಗೆ ಎಂದು ಬಂದಾನು ಎಂದು ತನ್ನ ಜೀವ ದಾರೀ ನೋಡುತ್ತದೆ. ಅವನು ಹತ್ತಿರ ಇರಬೇಕು ಎನ್ನುವ ಆಸೆಯಿಲ್ಲದೆ ಕೆಲಸ ಸಿಕ್ಕು ಎಲ್ಲಿಯಾದರೂ ದೂರ ಹೋದಾನು ಎನ್ನುವ ಭಯವೂ ಇದೆ. ಇದೆಂಥ ಹುಚ್ಚು ? ಇದಕ್ಕೇ ಪ್ರೇಮ ಪ್ರೀತಿ ಎನ್ನುತ್ತಾರೆಯೇ ? ಅಭಯ ಬಾಯಿಬಿಟ್ಟು ಮಾತನಾಡದಿದ್ದರೂ ಅವನ ಮನದ ಆಸೆ ತನಗೆ ನಿಚ್ಚಳವಾಗಿದೆ. ಕೆಲಸವೊಂದು ಸಿಕ್ಕಿದ್ದರೆ ಇಷ್ಟರಲ್ಲಿ ಕೇಳಿಯೇ ಬಿಡುತ್ತಿದ್ದನೇನೋ ಒಂದು ವೇಳೆ ಕೇಳಿದರೆ ಆಗ ತಾನೇನು ಮಾಡಬೇಕು? ನಿಜ ಹೇಳಬೇಕೇ? ವಿಷಯ ತಿಳಿದ ಮೇಲೆ ಅವನು ದೊಡ್ಡ ಮನಸು ಮಾಡಿ ಮದುವೆಗೆ ಒಪ್ಪಬಹುದೇ ? ಉಹುಂ, ಈ ಗಂಡಸರನ್ನು ನಂಬಲು ಸಾಧ್ಯವಿಲ್ಲ. ಶೀಲ ಕೆಟ್ಟ ಹುಡುಗಿಯೆಂದು ಮುಖತಿರುವಿ ಹೋಗಬಹುದು. ಇವರಿಗೆಲ್ಲ ಅಪ್ಪಟ ತಾಜಾ ಹೆಣ್ಣೇಬೇಕಲ್ಲ!

ತಾನು ಮತ್ತು ಅವ್ವ ಬಿಟ್ಟರೆ ಆ ಚಾಳಿನಲ್ಲಿ ಯಾರಿಗೂ ತನ್ನ ಬಗ್ಗೆ ಏನೂ ತಿಳಿದಿಲ್ಲ. ಅಂಥ ಪ್ರಸಂಗವೇ ಇನ್ನೂ ಎದುರಾಗಿಲ್ಲ. ಒಂದು ವೇಳೆ ತಿಳಿದರೆ ತನ್ನ ಬಾಳು ಇದೇ ರೀತಿ ಸುಗಮವಾಗಿ, ಸಂತೋಷದಿಂದ ನಡೆಯುವುದೇ? ಇದೇ ಕಮಲಕ್ಕ ತನ್ನನ್ನು ತಿರಸ್ಕಾರದಿಂದ ನೋಡಬಹುದು. ಸುಂದರಮ್ಮ ದೇವಕಿಯರು ತಮ್ಮ ಮನೆ ಮೆಟ್ಟಿಲು ಹತ್ತಗೊಡಲಿಕ್ಕಿಲ್ಲ. ಮಾಲೀಕರು ಮನೆ ಖಾಲಿ ಮಾಡಲು ಹೇಳಬಹುದು. ಬೇರೆ ಯಾರೂ ಮನೆ ಬಾಡಿಗೆಗೆ ಕೊಡಲಿಕ್ಕಿಲ್ಲ. ಹೌದು, ವಿಷಯ ತಿಳಿದ ಯಾರೂ ತನ್ನನ್ನು ಕ್ಷಮಿಸಲಿಕ್ಕಿಲ್ಲ. ತಪ್ಪು ತನ್ನೊಬ್ಬಳದೇ ಅಲ್ಲ ನಿಜ. ಆದರೆ ಸಮಾಜದಲ್ಲಿ ನೀತಿ ಇರುವುದೇ ಗಂಡಿಗೊಂದು, ಹೆಣ್ಣಿಗೊಂದು. ತನಗಾದ ಅನ್ಯಾಯವನ್ನು ಈ ಸಮಾಜ ಸರಿಪಡಿಸಬಲ್ಲದೇ? ಉಹುಂ, ತನ್ನ ಗೊಡವೆ ಅದಕ್ಕೆ ಬೇಕಿಲ್ಲ. ತಾನಾದರೂ ಏಕೆ ಸತ್ಯವನ್ನು ತಿಳಿಸಿ, ತನ್ನ ಜೀವನ ಹಾಳು ಮಾಡಿಕೊಳ್ಳಬೇಕು?

ಅವ್ವ ತೀರಿದ ಮೇಲೆ ತಾನು ಒಬ್ಬಂಟಿಯಾಗಿ ದಿನ ದೂಡಬೇಕೆ? ದೇಹವನ್ನು ದಂಡಿಸಿಕೊಂಡು, ಇಷ್ಟೊಂದು ಕಠಿಣತಮ ತಪಸ್ಸು ತಾನು ಮಾಡಿದರೂ ತನಗೆ ಜನರ ಕುಹಕದ ನಗೆ, ಚುಚ್ಚು ಮಾತುಗಳಿಂದ ಬಿಡುಗಡೆಯಿಲ್ಲ. ಅವ್ವ ಅಂತೂ ನನ್ನ ತಲೆಯ ಮೇಲೆ ನಾಲ್ಕು ಅಕ್ಕೀಕಾಳು ಹಾಕಬೇಕೆಂದೇ ಜೀವ ಹಿಡಿದಿದ್ದಾಳೆ.

"ಈ ಸಾರೆ ಹ್ಯಾಂಗರೆ ಮಾಡಿ ಅಭಯನ ಮದುವಿ ಮಾಡೇಬಿಡಬೇಕಂತೀವಿ ಅಂತ ದೇವಕಿ ಅಂತಿದ್ಲಪ್ಪಾ. ಎಲ್ಲರೇ ಹುಡುಗೀ ನೋಡಿಯೇನು ?" ಅವ್ವನ ಮಾತೂ ಮದುವೆಗೇ ಬಂದಿತ್ತು. ಅರ್ಧ ಕುತೂಹಲದಿಂದ ಅರ್ಧ ಹೆದರಿಕೆಯಿಂದ ಶೀಲಾ ಎದ್ದು ಬಂದು ಬಾಗಿಲಿಗೆ ಒರಗಿ ನಿಂತಳು.

'ಹುಡುಗೀನ್ನ ನೋಡೀನ್ರಿ, ಆದರ ನೌಕರಿ ಒಂದ ಸಿಗಬೇಕಲ್ರಿ' ಎನ್ನುತ್ತ ಶೀಲಾಳನ್ನು ನೋಡಿದ ಅಭಯ.

"ಅದರಾಗೇನದ, ನೌಕರಿ ಇದ್ದ ಹುಡುಗೀನ್ನ ಮಾಡಿಕೊಂಡರಾತು; ಮದುವೀನೂ ಆಗ್ತದ, ನಿಮ್ಮ ಆರ್ಥಿಕ ಸಮಸ್ಯಾನೂ ಬಗೀಹರೀತದ" ಎಂದು ಶೀಲಾ ನಯವಾಗಿ ಸೂಚಿಸಿದಳು.

ಅವಳ ಮಿಂಚುಕಣ್ಣುಗಳನ್ನು ನೋಡಿ 'ನಿನ್ನ ಗುಟ್ಟು ಗೊತ್ತಾಯಿತು' ಎನ್ನುವಂತೆ ಅಭಯ ನಕ್ಕ. ಶೀಲಾನ ಅವ್ವ ಬೆರಗಾಗಿ ಇಬ್ಬರನ್ನೂ ದಿಟ್ಟಿಸಿದಳು.

***

■■

# ಇಕ್ಕಟ್ಟು

ಹಳ್ಳಿಯಲ್ಲಿರುವ ಸರಕಾರಿ ದವಾಖಾನೆಗಳಲ್ಲಿ ಡಾಕ್ಟರರು ಆದಿತ್ಯವಾರವೂ ಕೆಲಸಕ್ಕೆ ಹೋಗಲೇಬೇಕು ಎಂದೇನೂ ಇಲ್ಲ. ಆದ್ದರಿಂದ ಡಾ. ಶಿವಣ್ಣ ಅಂಥ ಅಗತ್ಯವಾಗಿ ನೋಡಲೇಬೇಕಾಗಿರುವ ಕೇಸುಗಳಿದ್ದರೆ ಹನ್ನೊಂದು ಗಂಟೆಯ ಹೊತ್ತಿಗೆ ಹೋಗಿ ಒಂದು ತಾಸು ಇದ್ದು ಮನೆಗೆ ಬಂದು ಊಟ ಮಾಡಿ ಮಲಗಿಬಿಡುತ್ತಿದ್ದ. ಆ ಹಳ್ಳಿಯ ದವಾಖಾನೆಯಲ್ಲಿ ಅವನು ಮಾಡಿದ್ದೇ ರಾಜ್ಯ. ಕೊನೆಯ ಪಕ್ಷ ಆದಿತ್ಯವಾರವಾದರೂ ರಾಜನಂತೆ ಆರಾಮವಾಗಿರೋಣ ಎಂದು ಬಯಸುವ ಶಿವಣ್ಣ ರೋಗಿಗಳಿಂದ ಕರೆ ಬಂದಾಗ ಅನುಮಾನಿಸದೆ ವಿಶ್ರಾಂತಿಯನ್ನು ಬದಿಗೆ ಸರಿಸಿ ಹೋಗಿಬಿಡುತ್ತಿದ್ದ. ಸುಮಾರು ಐದಾರು ಸಾವಿರ ಜನಸಂಖ್ಯೆಯ ಆ ಹಳ್ಳಿಗೆ ಸರಕಾರಿ ದವಾಖಾನೆ ಸಿಕ್ಕಿದ್ದು ಯಾವನೋ ಪುಣ್ಯವಂತ ಎಂ.ಎಲ್.ಎ. ನ ದಯದಿಂದ. ಆದರ್ಶವಾದೀ ಯುವಕ ನಿರುದ್ಯೋಗಿ ಡಾಕ್ಟರ ಅಲ್ಲಿ ಕೆಲಸ ಆರಂಭಿಸಿದ್ದು ಈ ಹಳ್ಳಿಗರ ಪುಣ್ಯದಿಂದ ಅಲ್ಲಿಗೆ ಬಂದ ೮-೧೦ ತಿಂಗಳುಗಳಲ್ಲಿಯೇ ಜನಪ್ರಿಯನಾಗಿದ್ದ. ರೋಗಿಗಳ ಪಾಲಿಗೆ ದೇವರಾಗಿದ್ದ.

ಶಿವಣ್ಣನ ಹೆಂಡತಿ ಶಾಲಿನಿ ಚೊಚ್ಚಿಲು ಹೆರಿಗೆಗೆ ತವರಿಗೆ ಹೋಗಿ ತಿಂಗಳು ಕಳೆದಿತ್ತು. ಶಿವಣ್ಣನಿಗೆ ಈಗ ಬೇಸರ ಬಂದಾಗಲೆಲ್ಲ ತನ್ನಲ್ಲಿದ್ದ ಪುಸ್ತಕ ಸಂಗ್ರಹಕ್ಕೆ ಮೊರೆಹೋಗುತ್ತಿದ್ದ. ಇಲ್ಲವಾದರೆ ಸಮೀಪದ ಇನ್ನೊಂದು ಹಳ್ಳಿಯ ಆರೋಗ್ಯ ಕೇಂದ್ರದಲ್ಲಿ ಡಾಕ್ಟರಾಗಿದ್ದ ಗೆಳೆಯ ಆನಂದನಲ್ಲಿ ಆದಿತ್ಯವಾರ ಹೋಗಿ ಬರುತ್ತಿದ್ದ. ಕೇಂದ್ರದ ಆಳು ಸಿದ್ದಪ್ಪನ ಹೆಂಡತಿ ಮಲ್ಲವ್ವ ಬಿಸಿಬಿಸಿಯಾಗಿ ರುಚಿಯಾಗಿ ಅಡಿಗೆ ಮಾಡುತ್ತಿದ್ದಳು. ಹಳ್ಳಿಯವಳಾದರೂ ಶಾಲಿನಿಯ ಟ್ರೇನಿಂಗಿನಿಂದ ಶುಚಿಯನ್ನೂ ಕಲಿತಿದ್ದಳು. ಶಿವಣ್ಣನಿಗೆ ಮನೆಯ ಬಗ್ಗೆ ಯಾವ ಚಿಂತೆಯೂ ಇರಲಿಲ್ಲ. ಸಾಹಿತ್ಯ ಮತ್ತು ವೈದ್ಯಕೀಯ ಪುಸ್ತಕಗಳ ಅಭ್ಯಾಸದಲ್ಲಿ ವೇಳೆ ಕಳೆಯುತ್ತಿದ್ದ ಶಿವಣ್ಣ ಈ ಆದಿತ್ಯವಾರ ಆನಂದನಲ್ಲಿ ಹೋಗಬೇಕೆಂದು ಲೆಕ್ಕ ಹಾಕಿದ್ದ. ಆನಂದ ಇವನಿಗಿಂತ ಎರಡು ವರ್ಷ ಮೊದಲು ಕೆಲಸ ಪ್ರಾರಂಭಿಸಿದ್ದ. ಹೆಚ್ಚು ಅನುಭವಿಯಾಗಿದ್ದ. ಜೊತೆಗೆ ಸ್ವಾರಸ್ಯಕರವಾಗಿ ಮಾತನಾಡುತ್ತಿದ್ದ. ಅವನ ಹಳ್ಳಿಗೆ ಹೋಗಲು ಒಂದು ತಾಸಿನ ಬಸ್ ಪ್ರಯಾಣ, ಒಂದು ಮೈಲು ಕಾಲು ನಡಿಗೆ ಸಾಕು. ಆದರೆ ಇಂದು ಅವನು ದವಾಖಾನೆಗೆ ಹೋಗಲೇ ಬೇಕಾದ ಕೆಲಸವಿತ್ತು. ಎರಡು ಕೋಣೆಯ ಆ ಕಟ್ಟಡದ ದುರಸ್ತಿ ಕೆಲಸ, ಸುಣ್ಣ ಹಚ್ಚುವದು ನಡೆದಿತ್ತು. ಇದಕ್ಕಾಗಿ ಶಿವಣ್ಣ ಜಿಲ್ಲಾ ಆರೋಗ್ಯ ಕೇಂದ್ರದಿಂದ ತುಂಬಾ ಕಷ್ಟಪಟ್ಟು ಒಪ್ಪಿಗೆ ಪಡೆದಿದ್ದ. ಸರಕಾರದ ಹಣವೆಂದರೆ ಜನತೆಯ ಹಣ. ಅದು ಪೋಲಾಗದಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯವೆಂದು ತಿಳಿದು ತಾನೇ ಸ್ವತಃ ಮುಂದೆ ನಿಂತು ಕೆಲಸ ಮಾಡಿಸುತ್ತಿದ್ದ. ಇವತ್ತು ಆ ಕೆಲಸ ಮುಗಿಸಿಯೇ ಆನಂದನಲ್ಲಿ ಹೋಗಬೇಕೆಂದುಕೊಂಡಿದ್ದ. ಶಿವಣ್ಣ ಸ್ನಾನ ಮಾಡಿ ಹೊರಗೆ ಬರುವಷ್ಟರಲ್ಲಿ ಹೊರಗೆ ಯಾರೋ 'ಡಾಕ್ಟರ ಸಾಹೇಬರ' ಎಂದರು. ಮಲ್ಲವ್ವ ಹೋಗಿ ನೋಡಿ ಬಂದು ಹೇಳಿದಳು. "ರಂಗ ಬಂದಾನ್ರೀ ಅಪ್ಪಾರ, ಕರ್ಯಾಕ ಹತ್ಯಾನ."

"ಯಾವ ರಂಗಾ ? ಯಾಕ ಬಂದಾನ ?"

"ಕಲಾಯಿ ಮಾಡ್ತಾನಲ್ರೀ ಅವನರೀ ರಂಗ. ನಿಮ್ಮ ಹತ್ರ ಕೆಲಸ ಐತಿ ಅಂತಾನ್ರೀ."

ಟವೆಲ್ ಹೆಗಲಿಗೆ ಹಾಕಿಕೊಂಡೇ ಹೊರಗೆ ಹೊರಟ ಶಿವಣ್ಣನಿಗೆ ಮಲ್ಲವ್ವ ಮೆಲ್ಲಗೆ ಹೇಳಿದಳು. "ನ್ಯಾರಿ ಆಗೇದ್ರಿ. ಚಪಾತಿ ಆರ್‍ತಾವ. ಲಗೂ ಬರ್‍ರಿ." ತನ್ನ ತಾಯಿಯಂತೆಯೇ ಹೊಟ್ಟೆಯ ಕಾಳಜಿ ಮಾಡುವ ಮಲ್ಲವ್ವನ ಮಾತು ಕೇಳಿ ನಗುತ್ತ ಶಿವಣ್ಣ ಹೊರಗೆ ಹೋದ. ಹಿತ್ತಲ ಬಾಗಿಲ ಹೊರಗೆ ಸ್ವಲ್ಪ ದೂರ ನಿಂತ ರಂಗ ಮುಂದ ಬಂದು ಬಗ್ಗಿ ಕೈ ಮುಗಿದ.

"ಯಾಕೋ ರಂಗಪ್ಪಾ, ಏನು ಕೆಲಸ ಅದ? ಅಪ್ಪಾರು ಊರಿಗೆ ಹೋಗ್ಯಾರ. ಭಾಂಡಿ ರಿಪೇರಿ, ಕಲಾಯಿ ಕೆಲಸ ಏನು ಇಲ್ಲಾ."

"ಯಪ್ಪಾ ನಂದಃ ಕೆಲಸ ಇತ್ರಿ" ಮುಖ ಕೆಳಗೆ ಹಾಕಿ ಅನುಮಾನಿಸುತ್ತ ನಿಂತ ರಂಗಪ್ಪನನ್ನು ಶಿವಣ್ಣ ಅವನಿಗೆ ಹಣ ಬೇಕಾಗಿದೆ, ಕೇಳಲು ಸಂಕೋಚ ಪಡುತ್ತಿದ್ದಾನೆಂದು ಭಾವಿಸಿದ. ಆ ಹಳ್ಳಿಯಲ್ಲಿ ಆಗಾಗ ಬಡವರು ಅವನಿಂದ ಐದು ಹತ್ತು ರೂ. ಕೈಗಡ ಕೇಳುತ್ತಿದ್ದರು. ಕೆಲವರು ತಿರುಗಿ ಹಣವನ್ನು ಕೊಟ್ಟಿದ್ದರು. ಇನ್ನು ಕೆಲವರು ತಮ್ಮ ಹೊಲದಲ್ಲಿ ಬೆಳೆದ ಸುಲಗಾಯಿ, ಕುಂಬಳಕಾಯಿ, ಶೇಂಗಾ ಇತ್ಯಾದಿಗಳನ್ನು ತಂದುಕೊಟ್ಟು ಋಣ ತೀರಿಸಿ ಕೊಂಡಿದ್ದರು. ತಿರುಗಿ ಕೊಡದೆ ತಾವು ಡಾಕ್ಟರರಿಂದ ಕೈಗಡ ಪಡೆದದ್ದನ್ನೂ ಮರೆತು ಓಡಾಡುವ ಭಂಡರೂ ಆ ಹಳ್ಳಿಯಲ್ಲಿದ್ದರು. ಜನರ ಇಂಥ ವರ್ತನೆಯಿಂದಲೇ ಅವರವರ ಸ್ವಭಾವವನ್ನು ತಿಳಿಯುತ್ತಿದ್ದ ಶಿವಣ್ಣ. ಪಟ್ಟಣವೇನು, ಹಳ್ಳಿಯೇನು ಈ ಲೋಕದಲ್ಲಿ ಸತ್ಯವಂತರು, ಪ್ರಾಮಾಣಿಕರು, ದುಡಿಮೆಗಾರರ ಜೊತೆಗೇ ಸೋಮಾರಿಗಳು, ಸುಳ್ಳುಗಾರರು, ಭ್ರಷ್ಟರು ಕೂಡ ಜೀವ ಮಾಡುತ್ತಿದ್ದಾರೆ ಎನ್ನುವುದನ್ನು ದಿನದಿನಕ್ಕೆ ತಿಳಿದುಕೊಳ್ಳುತ್ತಿದ್ದ ಶಿವಣ್ಣ.

"ರೊಕ್ಕ ಬೇಕೇನೋ ರಂಗಪ್ಪಾ? ಎಷ್ಟು ಬೇಕು ?

"ಛೇ, ಛೇ, ರೊಕ್ಕ ಬ್ಯಾಡ್ರಿಯೆಪ್ಪಾ, ನಿಮ್ಮ ಕಡೆ ಬ್ಯಾರೆ ಕೆಲಸ ಇತ್ರಿ." ತನ್ನ ಕೆಲಸವೇನು ಎನ್ನುವುದನ್ನು ಸ್ಪಷ್ಟವಾಗಿ ಹೇಳದೆ ಕೈ ಹೊಸೆಯುತ್ತ ನಿಂತು ವೇಳೆ ಕಳೆಯುತ್ತಿದ್ದ ರಂಗಪ್ಪ ಶಿವಣ್ಣನ ಸಹನೆ ಕಳೆಯುತ್ತಿದ್ದ.

"ಏನೋ ಕೆಲಸ ಐತಿ ಅಂತೀ, ಏನೂ ಹೇಳವೊಲ್ಲಿ? ಹಿಂಗ್ಯಾಕ? ಔಷಧಾ, ಬೇಕೇನು? ಯಾರಿಗೆ ಜಡ್ಡಾಗೆದೇನು?"

"ಹೌದ್ರಿ ಯಪ್ಪಾ ಔಷಧಿ ಬೇಕು. ನಿಮಗ ಪುಣ್ಯಾ ಬರ್ತದ, ಕಾಲಿಗೆ ಬೀಳ್ತೀನಿ."

"ಯಾರಿಗೆ ಜಡ್ಡಾಗೇದ? ದವಾಖಾನೆಗೆ ಕರಕೊಂಡು ಬಾ. ಇನ್ನೊಂದು ಸ್ವಲ್ಪ ಹೊತ್ತು ಬಿಟ್ಟು ಬರ್ತೀನಿ. ನೋಡಿ ಔಷಧಾ ಕೊಡ್ತೀನಿ". ಒಳಗೆ ಹೊರಡಲು ತಿರುಗಿದ ಶಿವಣ್ಣನ ಕಾಲುಗಳನ್ನು ರಂಗಪ್ಪ ಬಗ್ಗಿ ಗಟ್ಟಿಯಾಗಿ ಹಿಡಿದುಕೊಂಡ.

'ಬಿಡೋ ರಂಗಪ್ಪ, ಕಾಲು ಯಾಕ ಹಿಡೀತಿ? ಡಾಕ್ಟರ ಆಗೇನಿ, ಸರಕಾರದೋರು ಪಗಾರ ಕೊಡ್ತಾರ ಔಷಧಾ ಕೊಡ್ತೀನಿ. ಇದರಾಗೆಲ್ಲಾ ಪಾಪ ಪುಣ್ಯಾ ಏನು ಬಂತು? ಕಾಲು ಬಿಡು, ದವಾಖಾನಿಗೆ ಬಾ."

ರಂಗಪ್ಪ ಶಿವಣ್ಣನ ಕಾಲು ಬಿಡಲಿಲ್ಲ. ಬಹಳ ಹೇಳಿದ ಮೇಲೆ ಎದ್ದು ನಿಂತ. "ಆಕೀಗೆ ಮೂರ್‍ನಾಕು ತಿಂಗಳ ಆಗೇದ್ರಿ. ಬೀಳೂ ಹಾಂಗ ಏನರೆ ಔಷಧಾ ಕೊಡ್ರಿ" ಶಿವಣ್ಣ ಅಚ್ಚರಿಯಿಂದ ಕೇಳಿದ: "ಯಾಕೊ ಮಕ್ಕಳು ಬ್ಯಾಡೇನು ನಿನಗ? ಈಗ ಎಷ್ಟು ಅದಾವು? ಹೆರಿಗಿ ಆಗಲಿ ಬಿಡು. ನಿನ್ನ ಹೇಣ್ತಿಗೆ ಆಪರೇಶನ್ ಮಾಡಿಸೋಣಂತ."

"ಯಪ್ಪಾ, ನನ್ನ ಹೆಣ್ತಿ ಅಲ್ರಿ. ನನ್ನ ತಂಗಿ ಬಸರ ಅದಾಳ್ರಿ. ಅದನ್ನ ತಗಸ ಬೇಕಾಗೇದ."

"ತಗಸೂದು ಛೊಲೋ ಅಲ್ಲೊ ರಂಗಪ್ಪಾ. ಹೆರಿಗಿ ಆಗಲಿ ಬಿಡು."

"ಯಪ್ಪಾ, ತಪ್ಪು ಹೊಟ್ಯಾಗ ಹಾಕೊಳ್ರಿ. ದೊಡ್ಡ ಮನಸ ಮಾಡಿ ಔಷಧಾ ಕೊಡ್ರಿ. ತಂಗೀ ಗಂಡ ಸತ್ತು ಭಾಳ ದಿನಾ ಆತ್ರಿ."

ಶಿವಣ್ಣನ ಸಿಟ್ಟು ನೆತ್ತಿಗೇರಿತು. "ಏನೋ, ನನ್ನ ಅಂದರ ಏನಂತ ತಿಳಕೊಂಡೀ ಮಗನ? ಹಾದರಾ ಮಾಡುವರಿಗೆಲ್ಲಾ ಸಹಾಯ ಮಾಡಾಕ ಸರಕಾರದವರು ಪಗಾರಾ ಕೊಟ್ಟು ನನ್ನ ಇಟ್ಟಾರಂತ ತಿಳಕೊಂಡೀ ಏನು? ಹೋಗಿನ್ನ, ಮನೀಗೂ ಬರಬ್ಯಾಡಾ, ದವಾಖಾನಿಗೂ ಬರಬ್ಯಾಡಾ, ನಡೀ."

"ಯಪ್ಪಾ ಸಾವಕಾಸ್ರೀ ಯಪ್ಪಾ. ಸನ್ಮಂತ ತೊಗೊಳ್ರೀ, ಬಡವರಿಗೆ ನೀವ ದೇವರಾಗಿ ಬಂದೀರಿ. ಬಯ್ಯಬ್ಯಾಡ್ರಿ. ಮನೀ ಮರ್ವಾದಿ ಹೊಕ್ಕೈತಿ ಅಂತ ಕೇಳಾಕ ಬಂದಿನ್ರೀ."

ರಂಗಪ್ಪ ಅಳುವುದೊಂದು ಬಾಕಿ ಇತ್ತು. ಅವನ ಮುಖ ನೋಡುವದನ್ನೂ ಸಹಿಸದೆ ಶಿವಣ್ಣ ಸಿಟ್ಟಿನಿಂದ ಒಳಗೆ ಬಂದ. ನ್ಯಾರಿಗೆ ಹೋಗಲು ಮನಸ್ಸಾಗಲಿಲ್ಲ. ಸುಮ್ಮನೆ ತಲೆ ತಗ್ಗಿಸಿಕೊಂಡು ರಂಗಪ್ಪ ಎಷ್ಟೋ ಹೊತ್ತು ಹಾಗೆಯೇ ನಿಂತಿದ್ದ. ಕಾಲೆಳೆದು ಹಾಕುತ್ತ ಅವನು ಹೋಗುವುದನ್ನು ಕೋಣೆಯಿಂದಲೇ ನೋಡುತ್ತಿದ್ದ ಶಿವಣ್ಣ ಹೊರಗೆ ಬಂದ.

ಡಾಕ್ಟರ ಸಾಹೇಬರ ಮರ್ಜಿ ತಿಳಿದು ಕೆಲಸ ಮಾಡುತ್ತಿದ್ದ ಸಿದ್ದಪ್ಪ ಹೆಚ್ಚು ಕಾಳಜಿಯಿಂದ ಸುಣ್ಣ ಹಚ್ಚುವವನಿಗೆ ತಾನೂ ಸಹಾಯ ಮಾಡಿ ಬೇಗ ಕೆಲಸ ಮುಗಿಸಿದ. ಅಡ್ಡಾಡಿ ಎಲ್ಲವನ್ನೂ ನೋಡಿ ಕೀಲಿ ಹಾಕುವಂತೆ ಸಿದ್ದಪ್ಪನಿಗೆ ಹೇಳಿದ ಶಿವಣ್ಣ ಕುರ್ಚಿಯ ಮೇಲಿನ ಕೋಟಿಗೆ ಕೈ ಹಾಕಿದ.

"ಅಪ್ಪಾರ ಮುಂಜಾನಿ ರಂಗ ಮನೀ ಕಡೆ ಬಂದಿದ್ನಂತಲ್ರೀ." ಮೆಲ್ಲಗೆ ಮಾತಾಡಿದ ಸಿದ್ದಪ್ಪನ ಮುಖವನ್ನು ಸುಮ್ಮನೇ ನೋಡಿದ ಶಿವಣ್ಣ.

"ನೀವು ಬಯ್ದು ಕಳಿಸಿದಿರಂತ್ರೀ, ಛೋಲೊ ಮಾಡಿದ್ರಿ ಲುಚ್ಚಾ ಅದಾನ ಅಂವಾ. ತಂಗಿ ಬಸರ ಅದಾಳಂತ ಹೇಳಿ ನಿಮ್ಮ ಕಾಲು ಹಿಡಕೊಂಡನಂತ, ಅದೆಲ್ಲಾ ಸುಳ್ಳು. ರಂಗಗ ಆಕಿ ದೂರದ ಸಂಬಂಧ ಆಗಬೇಕ್ರಿ. ಸಣ್ಣಾಕಿರತ ಗಂಡ ಸತ್ತಾ. ರಂಗನ ಅವ್ವ ಮನ್ಯಾಗ ತಂದ ಇಟಕೊಂಡಿದ್ಲು. ಇಂವಾ ಆಕಿನ್ನ ಇಟಕೊಂಡಾನ್ರಿ. ಈಗ ಬಸರ ಆಗಿದ್ಲು ಇಂವಗ. ಮರ್ಯಾದಿ ಹೊಕ್ಕೈತಿ ಅಂತ ನಿಮ್ಮ ಕಾಲು ಹಿಡಕೊಂಡಾನ. ಸೂಳೀಮಗಾ ಹಿಂತಾ ಕೆಲಸಾ ಮಾಡೂ ಮುಂದ ಮಾನಾ ಮರ್ವಾದಿ ಎಚ್ಚರ ಇರಾಂಗಿಲ್ಲ ಕಾಣತೈತಿ" ಮಾತು ಮುಗಿಸಿದ ಸಿದ್ದಪ್ಪ ತನ್ನ ಕರ್ತವ್ಯ ಮುಗಿಯಿತೆನ್ನುವಂತೆ ಕೀಲಿ ತೆಗೆದುಕೊಂಡು ಹೊರಗೆ ಹೋದ.

ಚಹ ಕುಡಿಯುತ್ತ ಹರಟೆ ಹೊಡೆಯುತ್ತಿದ್ದಾಗ ಶಿವಣ್ಣ ಆನಂದನಿಗೆ ರಂಗಪ್ಪನ ಕಥೆ ಹೇಳಿದ. ತಾನು ಬಯ್ದು ಕಳಿಸಿದ್ದೂ ಹೇಳಿದ. ಸುಮ್ಮನೆ ಕುಳಿತು ಕೇಳುತ್ತಿದ್ದ ಆನಂದ ಗಂಭೀರವಾಗಿ ಶಿವಣ್ಣನನ್ನು ಕೇಳಿದ. "ಶಿವಣ್ಣಾ ಮನುಷ್ಯನ ಪ್ರಕೃತಿ ಸಹಜ ಗುಣದೊಳಗ ಕಾಮ ಅನ್ನೂದು ಒಂದು. ಈ ಮಾತು ನೀ ನಂಬತೀಯೋ ಇಲ್ಲೋ ?"

"ಹೌದು, ಅಲ್ಲ ಅಂತ ಯಾರ ಅಂತಾರ? ಹಸಿವು, ನಿದ್ದಿ ಹಾಂಗ ಅದೂ ಸಹಜ ಕ್ರಿಯೆ. ಒಪ್ತೀನಿ. ಆದರ ಹಾಂಗ ಅಂತ ಹಾದರಕ್ಕ ಪ್ರೋತ್ಸಾಹ ಕೊಟ್ಟರ ಸಮಾಜ ವ್ಯವಸ್ಥಾ ಬುಡಮೇಲು ಆಗೂದಿಲ್ಲೇನು ?"

"ಶಿವಣ್ಣಾ ನೀನು ಆದರ್ಶವಾದಿ ಇದ್ದೀ ಅನ್ನೂದು ನನಗೆ ಗೊತ್ತದ. ಹಾಂಗ ವಿಚಾರವಾದೀನೂ ಇದ್ದೀ ಅಂತ ತಿಳಕೊಂಡೀನಿ. ಹಾದರಕ್ಕ ಪ್ರೋತ್ಸಾಹ ಕೊಡಬೇಕು ಅಂತಾ ನಾ ಹೇಳೂದಿಲ್ಲಾ. ಆದರ ಇಂಥಾ ವಿಷಯದೊಳಗ ಸಮಾಜದಾಗ ಶ್ರೀಮಂತರ ಸಮಸ್ಯಾ ಲೀಲಾಜಾಲವಾಗಿ ಬಗೀ ಹರೀತಾವ, ಆಗ ಸಮಾಜ ಬುಡಮೇಲು ಆಗೂದು ದೂರ ಉಳೀತು, ಸುದ್ದಿ ಸುದ್ದಾ ಹೊರಬೀಳೂ ಹಾಂಗಿಲ್ಲ. ಯಾಕಂದ್ರ ಅವರಿಗೆ ರೊಕ್ಕದ ಬಲಾ ಇರ್ತದ. ಆ ವಾಸಂತಿ ಕತೀ ಗೊತ್ತದ ಇಲ್ಲೋ?"

"ಹಾಂ ನಮಕಿಂತ ಎರಡ ವರ್ಷ ಸೀನಿಯರ ಇದ್ಲಲ್ಲಾ ಆಕೀನ ಹೌದಲ್ಲೋ ? ಗೊತ್ತದ ಬಿಡು. ಕಲತು ಮುಗಿಯುತನಾ ಎಷ್ಟು ಮಂದಿ ಗೆಳೆಯರು ಆಕೀಗೆ."

"ಡಿ ಆಂಡ್ ಸಿ ಅಂತ ಹೇಳಿ ಕಲಿಯೂ ಮುಂದ ಆಕೀನು ಹೊಟ್ಟೆ ಇಳಿಸಿಕೊಂಡಳು ಅಂತ ಮೇರಿ ಸಿಸ್ಟರ್ ನಮ್ಮ ಮುಂದ ಹೇಳುತ್ತಿದ್ದಳು. ಈಗ ನೋಡಿದಿಲ್ಲೊ ಫಾರಿನ್ ರಿಟರ್ನ್ಡ್ ಡಾಕ್ಟರ ಗಂಡ ಸಿಕ್ಕಾನ. ಇಬ್ಬರೂ ಕೂಡಿ ನರ್ಸಿಂಗ್ ಹೋಂ ತಗದಾರ. ಬೊಗಸೀಲೆ ರೊಕ್ಕಾ ಬಳೀತಾರ."

"ಬೊಗಸೀಲೆ ಅಲ್ಲೋ, ಸಲಕೀಲೆ ಅನ್ನು. ಆಕೀ ಬಂಗ್ಲೆ ಏನು, ಕಾರು ಏನು, ಅಬ್ಬಬ್ಬಾ."

"ಹೋಗಲಿ ಬಿಡು. ಅದೆಲ್ಲಾ ಹಾಳಾಗಲಿ, ನನಗ ಅನಸ್ತದ-ಗಂಡ ಮಕ್ಕಳು ಇದ್ದೂ ಹಾದರಾ ಮಾಡೂದು ತಪ್ಪು. ಈಗ ನೋಡು ರಂಗನ ಹುಡುಗಿ ಬಸರ ಆದರ ಮಂದಿ ಛೀ ಥೂ, ಅಂತಾರ. ಆಕಿ ವಿಧವಾ ಆದಾಗ ಯಾರರೆ ಆಕಿನ್ನ ಲಗ್ನ ಆದರೇನು? ಆಕೀನೂ ಮನುಷ್ಯಾಳ ಅಲ್ಲೇನು ? ಕಾಮಕ್ಕ ಆಕಿನೂ ಬಲಿ ಆಗಿರ್ಬೇಕು. ನೀ ಹಿಂಗ ವಿಚಾರ ಮಾಡಿ ಆಕೀಗೆ ಸಹಾನುಭೂತಿ ತೋರಿಸಬೇಕಾಗಿತ್ತು."

"ನೀ ಹೇಳೂದೆಲ್ಲಾ ಖರೆ ಅನಸ್ತದ ಆನಂದಾ. ನಾನು ಆಕೀಗೆ ಔಷಧಿ ಕೊಟ್ಟು ಹೊಟ್ಟೇ ಇಳಿಸಿದೆ ಅನ್ನೂದು ಹಳ್ಳೀ ಮಂದಿಗೆ ಗೊತ್ತಾದರ ನನ್ನ ಗೌರವ ಏನು ಉಳಿದೀತು? ಸೂಲಗಿತ್ತಿಕಿಂತ ಕಡೀ ಆಗ್ತೀನಿ. ಇವತ್ತ ಇಕೀ, ನಾಳೆ ಇನ್ನೊಬ್ಬಾಕಿ. ಇದs ಕೆಲಸಾ ಮಾಡಬೇಕಾಗತದ ನಾನು. ಅದಕ್ಕ ಮೊದಲ ಬಿಗಿಯಾಗಿ ಇರ್ಬೇಕು ಅಂತ ನನ್ನ ವಿಚಾರಾ."

"ನಾನೂ ಹಿಂಗ ವಿಚಾರ ಮಾಡತಿದ್ದೆ ಮೊದಲ, ಆದರ ಒಂದು ಪ್ರಸಂಗದಿಂದ ಮನಸ್ಸು ಬದಲಾಯಿತು."

"ಏನಾತು ? ನಿನ್ನ ಹತ್ತರ ಯಾರರೆ ಬಂದಿದ್ದರೇನು?"

"ಹುಂ, ನಾನು ನೌಕರೀ ಹಿಡಿದು ಆರು ತಿಂಗಳಾಗಿತ್ತು. ಒಬ್ಬ ಮಾಸ್ತರಾ ಇಂಥಾದೇ ಕೇಸು ತಗೊಂಡು ನನ್ನ ಕಡೀಗೆ ಬಂದಾ. ಆಕೀ ಇನ್ನೊಬ್ಬ ಮಾಸ್ತರನ ಮಗಳು. ಹದಿನೆಂಟು ವರ್ಷದ ಹುಡುಗಿ. ಅಪ್ಪ ವರಾ ಹುಡುಕಿ ಹಣ್ಣಾಗಿದ್ದ. ವರದಕ್ಷಿಣೆ ಕೊಡೂದು ಕನಸಿನ ಮಾತಾಗಿತ್ತು. ಮದವಿ ಮುಂದಕ ಹೋಗತಿತ್ತು. ಹುಡುಗಿ ಸಣ್ಣ ಮಾಸ್ತರನ ಗೆಳಿತನಾ ಮಾಡಿ ಬಸರಾದ್ಲು. ಗಾಬರಿ ಆಗಿ ನನ್ನ ಹತ್ತಿರ ಬಂದು ಭಾಳ ಹೇಳಿಕೊಂಡಾ. ನಾನೂ ನಿನ್ನಾಂಗ ಆದರ್ಶ, ಮರ್ಯಾದಿ ಅಂತ ವಿಚಾರ ಮಾಡಿ ಅವನ್ನ ಬಯ್ದು ಕಳಿಸಿದೆ. ಮುಂದೆ ಹದಿನೈದು ದಿನದೊಳಗೆ ಹುಡುಗಿ ಬಾವಿ ಹಾರಿಕೊಂಡಳು. ಪೋಲೀಸರು ಪಂಚನಾಮ ಮಾಡಿ ಪೋಸ್ಟ್ ಮಾರ್ಟಂಗೆ ಹೆಣಾ ನನ್ನ ಹತ್ತರ ತಂದರು. ಟೇಬಲ್ ಮ್ಯಾಲೆ ಮಲಗಿದಾಕಿನ್ನ ನೋಡಿ ನನಗ ಶಾಕ್ ಆಯ್ತು. ಹರೇದ ಹುಡುಗಿ ಕಣ್ಣು, ಮೂಗಿಲೆ ಚೆಲುವಿ, ಯಾರನ್ನೋ ಲಗ್ನ ಆಗಿ, ಮಕ್ಕಳನ್ನ ಹಡದು, ಹೆಂಡತಿ ತಾಯಿ ಆಗಬೇಕಾದಾಕಿ ಈಗ ಹೆಣಾ ಆಗಿ ಹೋಗಿದ್ಲು. ಜೀವನ ಮುಗಿದು ಹೋಗಿತ್ತು. ವಾಸಂತಿ ನೆನಪಾತು. ಆಗ ನಂದು ತಪ್ಪಾತು ಅನ್ನಿಸ್ತು. ಔಷಧಿ ಕೊಟ್ಟು ಈ ಜೀವಾ ನಾನು ಬದಕಸೂದು ಸಾಧ್ಯ ಇತ್ತು ಅಂತ ಕೆಟ್ಟನ್ನಿಸಿತ್ತು. ಆಕಿ ಅಪ್ಪ ಸಾಲಾ ಸೋಲಾ ಮಾಡಿ ನೂರು ರೂಪಾಯಿ ನನಗೆ ಕೊಡಲಿಕ್ಕ ಬಂದರು. ಮಗಳು ಬಸರಿದ್ಲು ಅನ್ನೂ ಮಾತು ರಿಪೋರ್ಟಿನ್ಯಾಗ ಬರಬಾರದು ಅಂತ. ಆ ನೋಟು ಅವರ ಕೈಯಾಗಿಟ್ಟು, ಬೆನ್ನ ಮ್ಯಾಲೆ ಕೈಯಾಡಿಸಿ ಸಮಾಧಾನ ಮಾಡಿ ಕಳಿಸಿದೆ. ಆಗಿನಿಂದ ಬುದ್ಧ್ಯಾಪೂರ್ವಕ ತಪ್ಪು ಮಾಡವರಿಗೆ ಸಹಾಯ ಮಾಡಬಾರದು, ಸಹಜವಾಗಿ ಇಂಥಾ ತಪ್ಪು ಆದರ ಸಹಾಯ ಮಾಡಬೇಕು ಅಂತ ನಿರ್ಧಾರ ಮಾಡಿದೆ. "

ಶಿವಣ್ಣನಿಗೆ ಆನಂದನ ಮಾತು ಹಿಡಿಸಿದವು. ಆದರ್ಶ ತತ್ತ್ವಗಳಿಗಿಂತ ಮಾನವೀಯತೆ ದೊಡ್ಡದು. ಸಾಧ್ಯವಾದರೆ ನಾಳೆ ರಂಗನನ್ನು ಕರೆಸಬೇಕು ಎಂದುಕೊಂಡು ಊರಿಗೆ ಹಿಂತಿರುಗಿದ. ಮರುದಿನವೇ ಶಾಲಿನಿಗೆ ಹೆರಿಗೆಯಾಯಿತೆಂದು ತಾರು ಬಂದಿತು. ಹದಿನೈದು ದಿನ ರಜೆ ಹಾಕಿ ಶಿವಣ್ಣ ಊರಿಗೆ ಹೊರಟು ಹೋದ.

***

ಹೆಂಡತಿ ಮಗನೊಡನೆ ಸಂತೋಷವಾಗಿ ಕಾಲ ಕಳೆದು ಡ್ಯೂಟಿಗೆ ಹಾಜರಾದ ಶಿವಣ್ಣ ಹೊಸ ಹುರುಪಿನಿಂದ ಬಂದಿದ್ದ. ಬೇಗ ಬೇಗ ಸ್ನಾನ ಮಾಡಿ ದವಾಖಾನೆಗೆ ಹೋಗಲು ತಯಾರಾಗುತ್ತಿದ್ದ. ನ್ಯಾರಿ ತಂದಿಟ್ಟ ಮಲ್ಲವ್ವ

ನಿಧಾನವಾಗಿ ಮಾತು ತೆಗೆದಳು. ಕಾಣಿ ನೋಡುತ್ತ ನಿಧಾನವಾಗಿ ತೂಕ ಮಾಡುವಂತೆ ಮಾತನಾಡುವ ಸ್ವಭಾವದವಳು ಅವಳು.

"ಈ ಕಲಿಯುಗದಾಗ ಎಂತೆಂತಾ ಇಚಿತ್ರ ನಡಿತೈತ್ರಿ ಅಪ್ಪಾರ, ನಂಬಾಕೂ ಆಗೂದಿಲ್ಲಾ ಬಿಡಾಕೂ ಆಗೂದಿಲ್ಲಾ."

ಶಿವಣ್ಣ ತುತ್ತು ಬಾಯಿಗಿಡುತ್ತ "ಯಾಕವ್ವ ? ಏನಾತು ?" ಎಂದ.

"ನಿನ್ನೆ ರಾತ್ರಿ ಕಲಾಯಿ ರಂಗಪ್ಪನ ಆಡು ಮೂರು ಮರಿ ಈದೈತ್ರಿ. ಎಡ್ಡು ಆಡಿನ ಮರಿ ಅದಾವ್ರಿ. ಇನ್ನೊಂದು ಕೂಸು ಇದ್ದಾಂಗ ಐತ್ರಿ. ಥೇಟ್ ಕೂಸು, ಇದೆಂಥಾದ, ಶಿವನ, ಇನ್ನೂ ಏನೇನು ಕಾಣಬೇಕೋ ಈ ಕಣ್ಣು?"

"ರಂಗಪ್ಪನ ಆಡು ಕೂಸು ಈದದ?" ಶಿವಣ್ಣನ ಬುದ್ಧಿಗೆ ಚಳುಕು ಹೊಡೆದಂತಾಯಿತು. ನೀರಿನ ತಂಬಿಗೆ ಎತ್ತಿ ಗಟಗಟ ಕುಡಿದ. "ಯಾವ ರಂಗಪ್ಪ? ಯಾವಾಗ ಈದದ?" ಅನುಮಾನವಿದ್ದರೂ ಖಾತ್ರಿ ಮಾಡಿಕೊಳ್ಳಲು ಕೇಳಿದ.

"ಕಲಾಯಿ ಮಾಡೂ ರಂಗಪ್ಪರೀ. ಅವತ್ತ ನಿಮ್ಮ ಕಡೆ ಕೆಲಸ ಐತಿ ಅಂತ ಬಂದಿದ್ದಲ್ರೀ. ನಿನ್ನೆ ರಾತ್ರಿ ಅವನ ಆಡು ಈದೈತಿ. ಜನಾ ಜಾತ್ರಿ ಮಂದಿ ಅದನ್ನ ನೋಡಾಕ ಹಂಗs ಬಂದ ಬರತಾರ, ಯಾರ ತೌಡು ನುಚ್ಚು ಕೊಟ್ರು, ಯಾರ ಕಾಳ -ಕಡ್ಡೀ ಕೊಟ್ರು ಈ ಇಚಿತ್ರಾ ನೋಡಾಕ ಆಸಪಾಸ ಹಳ್ಳಿ ಮಂದೀನೂ ಬರಾಕ ಹತ್ಯಾರಂತ. ಒಂದು ತಗಡಿನ ಡಬ್ಬಿ ಇಟ್ಯಾರಂತ ಅದರಾಗ ರೊಕ್ಕ ಹಾಕಿ ನೋಡತಾರಂತ ನಮ್ಮಾ ಹಿರ್ಯಾ ಹೇಳಿತಿದ್ದಾ."

"ನೀ ನೋಡಿ ಬಂದೀ ಏನು ಮಲ್ಲವ್ವಾ?"

"ಯಪ್ಪಾ ಊರ ಮಂದೀನ ಬಂದು ನೋಡೂ ಮುಂದ ನಾನು ಬಿಟ್ಟೇನ್ರೆ. ರಾತ್ರೀನ ನೋಡಿ ಬಂದೆ. ಥೇಟ ಮನುಷ್ಯಾರ ಕೂಸು ಇದ್ದಾಂಗೈತಿ. ಇಟ ಒಂದ ಮಾವಿನಕಾಯಟು ತಲೀ ಅದ. ಕಣ್ಣು, ಮೂಗು ಎಲ್ಲಾ ಮೂಡೇದ. ಟೊಂಕದ ತನಾ ಕಾಣತೈತ್ರಿ. ಕೆಳಗೆ ನೆಟ್ಟಗ ಕಾಣಂಗಿಲ್ಲಾ ಸೊಣ್ಣ ಸೊಟ್ಟ ಆಗೆದ. ಹುಟ್ಟಿದಾಗ ಜೀವೂನ ಇದ್ದಿಲ್ಲಂತ್ರೀ?"

ಕೈ ತೊಳೆದು ಅರಿವೆ ಹಾಕಿಕೊಂಡು ಶಿವಣ್ಣ ರಂಗನ ಮನೆ ಎಲ್ಲಿದೆ ಎಂದು ಮಲ್ಲವ್ವನನ್ನು ಕೇಳಿ ತಿಳಿದುಕೊಂಡು ನೆಟ್ಟಗೆ ಅಲ್ಲಿಗೇ ನಡೆದ. ನಡೆದ ವಿಷಯವೇನೆಂದು ಅವನಿಗೆ ಗೊತ್ತಾಗಿತ್ತು. ವಿಚಾರ ಮಾಡುತ್ತ ಹೊರಟ ಅವನಿಗೆ ದಾರಿಯಲ್ಲಿ ಪರಿಚಿತರೆಷ್ಟೋ ಜನ ನಮಸ್ಕಾರ ಮಾಡಿದರೂ ಲಕ್ಷ್ಯವಿರಲಿಲ್ಲ. ಡಾಕ್ಟರ ಸಾಹೇಬರು ಬಂದ ಸುದ್ದಿ ಕೇಳಿ ರಂಗ ತಾನೇ ಓಡೋಡಿ ಬಂದು ಸ್ವಾಗತಿಸಿದ.

"ಬರ್ರಿ, ಡಾಕ್ಟರ ಸಾಹೇಬ್ರ ಬರ್ರಿ, ನನ್ನ ಹೇಣ್ತಿಗೆ ಜಡ್ಡು ಜೋರು ಆಗೇದ್ರಿ. ನೀವು ಊರಾಗ ಇದ್ದಿಲ್ಲ. ನನ್ನ ಜೀವಾಂನ ಹೋಗಿತ್ತು. ದೇವರು ಬಂದಾಂಗ ಬಂದ್ರಿ' ಎಂದು ಕಾಲು ಬಿದ್ದು ಕೈ ಹಿಡಿದು ಕರೆಯುತ್ತ ಅವರನ್ನು ಹಟ್ಟಿಗೆ ಬಿಡದೆ ಮನೆಯ ಒಳಗೇ ಕರೆದುಕೊಂಡು ಹೋದ.

ಮಬ್ಬುಗತ್ತಲಿಗೆ ಕಣ್ಣು ಹೊಂದಿಸಿಕೊಂಡು ನೋಡಿದ ಶಿವಣ್ಣನಿಗೆ ಹೊರಸಿನ ಮೇಲೆ ಒಬ್ಬ ಹೆಂಗಸು ಮಲಗಿದ್ದುದು ಕಂಡಿತು. "ಈಕಿ ನಿನ್ನ ಹೇಣ್ತಿ ಏನು?"

"ಹೌದ್ರಿ ಯಪ್ಪಾ, ಅರ್ಧಾಂಗ ಹೊಡದು ಎಡ್ಡ ವರ್ಷ ಆದೂವ್ರಿ, ಮೂರು ಮಕ್ಕಳು ಆಗೂತಂಕಾ ಗಟ್ಟಿಮುಟ್ಟಾಗಿ ಇದ್ದಳ್ರಿ. ಈಗ ನೋಡ್ರಿ ಕೊಡ್ಡ ಬಿದ್ದಾಂಗ ಬಿದ್ದಾಳ. ಮಾತೂ ಇಲ್ರಿ. ಇದು ಗುಣ ಆಗೂ ಜಡ್ಡ ಅಲ್ಲಾ ಅಂತ ಹೇಳ್ತಾರ್ರಿ. ನನಗಂತೂ ಜೀವಾನ ಬ್ಯಾಸರ ಆಗೇದ. ಸಣ್ಣ ಮಕ್ಕಳ್ನ ನೋಡಲ್ಯೋ, ಇಕೀ ಚಾಕರೀ ಮಾಡಲ್ಯೋ,

ದುಡ್ಯಾಕ ಹೋಗಲ್ಯೋಽ ಏನ ಮಾಡಲಿ ಯಪ್ಪಾ ನೀವ ಹೇಳ್ರಿ" ರಂಗಪ್ಪ ಅತ್ತು ಬಿಟ್ಟ ರೋಗಿಯನ್ನು ಪರೀಕ್ಷಿಸಿದ ಶಿವಣ್ಣ ನಾಳೆ ಯಾರನ್ನರೆ ಕಳಸು ಔಷಧ ಕೊಡ್ತೀನಿ ಎಂಣಿನೂ ಕೊಡ್ತೀನಿ, ಕೈಕಾಲಿಗೆ ಹಚ್ಚಿ ತಿಕ್ಕು, ಗುಣಾ ಆದರೂ ಆಗಬಹುದು" ಎನ್ನುತ್ತ ಎದ್ದ.

ಇನ್ನೊಂದು ಮೂಲೆಯಲ್ಲಿ ಅರಿವೆಯ ಗಂಟು ಬಿದ್ದಿತ್ತು. ಅದರಿಂದ ನರಳುವ ದನಿ ಹೊರಟಾಗ ಶಿವಣ್ಣ ಬೆಚ್ಚಿ ಅಲ್ಲಿಯೇ ನಿಂತ. ರಂಗಪ್ಪ ಮತ್ತೆ ಅವನ ಕಾಲು ಹಿಡಿದುಕೊಂಡ.

"ಯಪ್ಪಾ ಆಕಿನ್ನ ಆಟ ನೋಡ್ರಿ. ಯಪ್ಪಾ. ದೇವರು ಬಂದಾಂಗ ಬಂದೀರಿ. ಶಗಣೀ ತಿನ್ನೂ ಕೆಲಸಾ ಮಾಡೀನ್ರಿ. ನೀವು ಇಕೀಗೆ ಔಸದಿ ಕೊಡಲಿಲ್ರಿ. ಹಳ್ಳೀ ಸೂಲಗಿತ್ತೀನಽ ಏನೋ ಮದ್ದು ಕೊಟ್ಟಳ್ರಿ. ನಿನ್ನೆ ರಾತ್ರಿ ಇಕೀ ಹಲಿವುಳಿದಳ್ರಿ. ಮೈಮ್ಯಾಲೆ ಭಾಳ ಹೋಗಾಕ ಹತ್ತೇತಿ. ಎಚ್ಚರಾನ ಇಲ್ಲಾ. ಹೀಂಗ ಆದರ ಸತ್ತಽ ಹೊಕ್ಕಾಳ. ಬಡವನ ಮ್ಯಾಲೆ ದಯಾ ಮಾಡಿ ಆಕೀನ್ನಟು ಉಳಸ್ರೀ. ಯಪ್ಪಾ ನಿಮ್ಮ ಕಾಲ ಬೀಳ್ತೀನಿ. ನಿಮ್ಮ ಹೆಸರ ಹೇಳಿ ಬದಕ್ಕೋಂತೀನಿ" ಅಳುತ್ತಿದ್ದ ರಂಗನನ್ನು ಸರಿಸಿ ಶಿವಣ್ಣ ಇನ್ನೊಬ್ಬಳನ್ನು ಪರೀಕ್ಷಿಸಿದ ಕೂಡಲೇ ಇಂಜೆಕ್ಷನ್ ಕೊಟ್ಟ. ಎರಡು ಗುಳಿಗೆ ನುಂಗಿಸಿದ. ಮರುದಿನ ಮತ್ತೆ ಔಷಧಿ ಕಳಿಸುತ್ತೇನೆಂದು ಹೇಳಿ ಎದ್ದ. ಹಿಂದೆ ಬರುತ್ತಿದ್ದ ರಂಗಪ್ಪನನ್ನು ತೀಕ್ಷ್ಣವಾಗಿ ನೋಡುತ್ತ ಮೆಲ್ಲಗೆ ಕೇಳಿದ.

"ಈಕಿ ಹಲಿವುಳಿದದ್ದು ಹಟ್ಟೀಯೊಳಗ ಅದ ಹೌದಲ್ಲೊ?"

ರಂಗಪ್ಪ ಮೂಕ ಪಶುವಿನಂತೆ ಗೋಣು ಹಾಕಿದ. ಶಿವಣ್ಣ ದವಾಖಾನೆಯತ್ತ ಹೊರಟ. ಬಾಯಿ ಮುಚ್ಚಿಕೊಂಡಿರಲು ರಂಗಪ್ಪ ಕೊಟ್ಟ ಇಪ್ಪತ್ತು ರೂಪಾಯಿ ಕಿಸೆಯಲ್ಲಿಟ್ಟುಕೊಂಡು ಸಿದ್ದಪ್ಪ ಡಾಕ್ಟರ ಬರುವ ದಾರಿಯನ್ನೇ ಕಾಯುತ್ತ ಕಟ್ಟೆಯ ಮೇಲೆ ಕುಳಿತಿದ್ದ.

***

■■

# ಮುಖಾಮುಖಿ

ಅಡಿಗೆ ಮನೆಯಿಂದ ಕಾಲೆಳೆಯುತ್ತ ಬಂದ ಸುನಂದ ಕೋಣೆಯಲ್ಲಿ ಸುರುಳಿ ಸುತ್ತಿ ಇಟ್ಟ ಗಾದಿಯನ್ನು ಕಾಲಿನಿಂದಲೇ ಒದ್ದು ಉರುಳಿಸಿ, ಮೇಲು ಹೊದಿಕೆಯನ್ನು ತೆಗೆದು ಝಾಡಿಸದೆ ಹಾಗೆಯೇ ಬಿದ್ದುಕೊಂಡು ಕಣ್ಣುಮುಚ್ಚಿದಳು. ಬೆಳಗಿನಿಂದ ಸಂಜೆಯವರೆಗೆ ಶಾಲೆಯಲ್ಲಿ ಒದರಾಡಿ ಸುಸ್ತಾಗಿ ಮನೆಗೆ ಬಂದಾಗ ತನಗಾಗಿ ಒಂದು ಗುಟುಕು ಬಿಸಿ ಚಹ ಕೂಡ ತಯಾರಿರಲಿಲ್ಲ. ಅಡಿಗೆ ಮನೆಯಲ್ಲಿ ಮಧ್ಯಾಹ್ನ ಊಟ ಮಾಡಿದ್ದ ತಾಟು, ಬಟ್ಟಲು ಮುಸುರೆ ಪಾತ್ರೆಗಳೆಲ್ಲ ಹಾಗೆಯೇ ಹರವಿದ್ದವು. ಒಳಗಿನ ಕೋಣೆಯಲ್ಲಿ ಮಂಚದ ಮೇಲೆ ಪಾರ್ವತಿ ಮಗಳನ್ನು ತೊಡೆಯ ಮೇಲೆ ಹಾಕಿಕೊಂಡು ಕುಳಿತಿದ್ದಳು. ಕೆದರಿದ ತಲೆ ಮೈಲಿಗೆ ಸೀರೆಯಲ್ಲಿದ್ದ ಅವಳ ಮುಖ ಒಣಗಿತ್ತು.

"ಯಾಕ ಅಕ್ಕಾ, ಮತ್ತ ಜ್ವರಾ ಬಂದಾವೇನು ?"

"ಹೌದ ಸುನಂದಾ, ಮುಂಜಾನಿಂದ ಮೈ ಬೆಚ್ಚಗಿತ್ತು, ಈಗ ಕುದೀತದ."

"ಅವರಿನ್ನೂ ಬಂದಿಲ್ಲೇನು ? ಡಾಕ್ಟರ ಕಡೆ ಹೋಗಿ ಬರ್ರಿದ್ರು." ಇಲ್ಲವೆನ್ನುವಂತೆ ಗೋಣು ಹಾಕಿದಳು ಪಾರ್ವತಿ. ಗಂಡ ದಿನವೂ ಸಂಜೆ ಗೆಳೆಯರೊಡನೆ ಕ್ಲಬ್ಬಿಗೆ ಹೋಗಿ ಅಲೆದಾಡಿ ತಡವಾಗಿ ಬರುವುದು ಗೊತ್ತಿದ್ದರೂ ಅಡಿಗೆ ಮನೆಗೆ ಕಾಲಿಟ್ಟಳು. ಮುಸುರೆ ತೊಳೆದು ಚಹಾ ಮಾಡಿಕೊಂಡು ಪಾರ್ವತಿಗೂ ಕೊಟ್ಟು ತಾನೂ ಕುಡಿದಳು. ಅಡಿಗೆ ಮಾಡಿ ದೊಡ್ಡ ಮಕ್ಕಳಿಬ್ಬರಿಗೂ ಊಟಕ್ಕೆ ನೀಡಿದಳು. ಪಾರ್ವತಿ ಮಧ್ಯಾಹ್ನದಿಂದ ಉಪವಾಸವಿದ್ದ ಕಾರಣ ಜುಲುಮೆಯಿಂದ ಅವಳನ್ನೂ ಊಟಕ್ಕೆ ಎಬ್ಬಿಸಿದಳು. ಅಲ್ಲಿಯವರೆಗೆ ಮಗಳನ್ನು ತೊಡೆಯ ಮೇಲೆ ಹಾಕಿಕೊಂಡು ತಣ್ಣೀರು ಪಟ್ಟಿ ಇಟ್ಟಳು. ಪಾರ್ವತಿ ಬಂದ ಕೂಡಲೆ ಮಗುವನ್ನು ಅವಳ ಕೈಗೆ ಒಪ್ಪಿಸಿ ಕೋಣೆಗೆ ಬಂದು ಮಲಗಿದಳು.

"ಸುನಂದಾ ನಿಂದೂ ಒಂದು ಹಟಾ, ವರದಕ್ಷಿಣಾ ಕೊಡಬ್ಯಾಡ್ರಿ ಅಂತ. ಆದರ ಈಗ ಯಾರು ಒಪ್ತಾರ ? ಎಲ್ಲಾರಿಗೂ ಒಂದಿಲ್ಲಾ ಒಂದು ರೀತಿಯಿಂದ ವರದಕ್ಷಿಣಾ ಬೇಕಃಬೇಕು. ನೀ ಹೀಂಗ ಹಟಾ ಹಿಡದರ ನಿನ್ನ ಮದುವೀನ ಆಗೂದಿಲ್ಲೋ ಏನೋ ಅಂತ ಗಾಬರಿ ಆಗ್ತದ ನನಗ." ತನ್ನನ್ನು ಒಪ್ಪಿದ ಹದಿನಾಲ್ಕನೇ ವರನನ್ನು ತಾನು ನಿರಾಕರಿಸಿದಾಗ ಅಪ್ಪ ತನ್ನ ಮನ ಒಲಿಸಲು ಯತ್ನಿಸಿದರು.

"ಆಗದಿದ್ದರ ಇಲ್ಲಾ, ಹ್ಯಾಂಗೂ ಪದವೀ ಸಿಕ್ಕದ. ಎಲ್ಯಾರ ನೌಕರಿ ಮಾಡತೇನಿ. ನಿಂಗೂ ಸಹಾಯ ಆಗ್ತದ."

"ನಿನ್ನ ಸಹಾಯ ತೊಗೊಂಡು ನಮಗೇನ ಮಾಡೂದದ ? ಲಗೂನ ಲಗ್ನಾ ಮಾಡಿ ನಿನ್ನ ಗಂಡನ ಮನಿಗೆ ಹೊತ್ತು ಹಾಕೂದಃ ಈಗ ನಮ್ಮ ಕೆಲಸಾ. ಅಷ್ಟಾಗಿ ನಿನ್ನ ಸಲುವಾಗಿ ಖರ್ಚು ಮಾಡಲಾರದಂಥಾ ಕೆಟ್ಟ ಪರಿಸ್ಥಿತಿಯೊಳಗ ನಾವೇನು ಇಲ್ಲಾ." ಅಣ್ಣನಿಂದ ಬುದ್ಧಿವಾದ.

"ನಮ್ಮಪ್ಪ ಕೊಡೂ ಹಣಾ ನೋಡಿ ಮದುವಿ ಆಗುವರ ಬಗ್ಗೆ ನನಗ ಪ್ರೀತಿ ಗೌರವ ಹುಟ್ಟೂದು ಸಾಧ್ಯ ಇಲ್ಲಾ. ಮಾತುಕತಿ ಆಡಿ ವ್ಯವಹಾರ ಮುಗಿಸಲಿಕ್ಕೆ ನಾ ಏನು ದನಾ ಅಲ್ಲ, ನನಗೂ ಒಂದು ವ್ಯಕ್ತಿತ್ವ ಅದ. ಸ್ವತಂತ್ರ ವಿಚಾರ ಅವ. ಅದಕ್ಕ ನೀವಾದರೂ ಬೆಲೆ ಕೊಡ್ರಿ. ಸುಮ್ಮನ ನನಗ ಒತ್ತಾಯ ಮಾಡಬ್ಯಾಡ್ರಿ."

"ಹಗಲೆಲ್ಲಾ ಅಂಥಿಂಥಾ ಸುಡುಗಾಡು ಪುಸ್ತಕಾ ಓದಿ ಓದಿ, ಕಾಲೇಜು ಕಲತು ತಲೀಕೆಡಿಸಿಕೊಂಡಾಳ. ನಿನ್ನ ಮದುವಿ ಆಗದಿದ್ದರ ಇನ್ನೂ ಇಬ್ಬರು ತಂಗೆಂದಿರು ಇದ್ದಾರ, ಬೆಳೆದು ಕೂತವರು; ಅವರದು ಹ್ಯಾಂಗ ಆಗಬೇಕು? ಅದನ್ನ ವಿಚಾರ ಮಾಡಿಯೇನು? ಅಪ್ಪನ ಒಡಲ ಸಂಕಟದಿಂದ ಬಂದ ಮಾತುಗಳು.

ಇಂಥ ಯಾವ ಮಾತುಗಳೂ ತನ್ನನ್ನು ತನ್ನ ಆದರ್ಶದ ದಾರಿಯಿಂದ ದೂರ ಮಾಡಲಿಲ್ಲ. ಅಂದು ಹಟದಿಂದಲೇ ಹೇಳಿದ್ದಳು: "ಇನ್ನ ಮ್ಯಾಲೆ ತಂಗೆಂದಿರ ಲಗ್ನದ ಪ್ರಯತ್ನ ಮಾಡರಿ. ನನ್ನ ಮನಸ್ಸಿಗೆ ತಕ್ಕ ವರಾ ಸಿಕ್ಕಾಗ ನಾನೂ ಮಾಡಿಕೋತೀನಿ." ಅಪ್ಪ ಒದರಾಡಿದರು. ಅಣ್ಣ ಮಾತು ಬಿಟ್ಟ. ಅತ್ತಿಗೆ ಕೂತರೆ ನಿಂತರೆ ಬುದ್ಧಿ ಹೇಳಿದರು. ತಾಯಿ ಹಣೆ ಚಚ್ಚಿಕೊಂಡು ಅತ್ತಳು. ಯಾವುದಕ್ಕೂ ಜಗ್ಗಲಿಲ್ಲ ತಾನು. ಅಷ್ಟು ಹಟ, ಛಲ ತನಗೆ. ಈ ಅನಿಷ್ಟ ಸಂಪ್ರದಾಯದ ವಿರುದ್ಧ ತಾನೊಬ್ಬಳಾದರೂ ಹೋರಾಡಬೇಕೆನ್ನುವ ಛಲ, ತನ್ನ ಛಲ ಗೆದ್ದಿತು.

ತಂಗಿಯರಿಗೆ ಗಂಡು ಸಿಕ್ಕು ವರದಕ್ಷಿಣೆ ಕೊಟ್ಟು ಮದುವೆಯಾದರು. ಮದುವೆಯ ಹಂದರದಲ್ಲಿ ಅವಿವಾಹಿತ ಅಕ್ಕನಾಗಿ ಸುನಂದ ಎಲ್ಲರ ದೃಷ್ಟಿಗೆ ಬಿದ್ದಿದ್ದಳು. ತಾನು ಇವರೆಲ್ಲರಿಗಿಂತ ಬೇರೆಯೇ ಎನ್ನುವುದನ್ನು ತೋರಿಸುವಂತೆ ಮುಖ ಮೇಲೆತ್ತಿ ಹಮ್ಮಿನಿಂದ, ಹುರುಪಿನಿಂದ ಓಡಾಡಿ ಎಲ್ಲರೂ ಅಚ್ಚರಿಯಿಂದ ನೋಡುವಂತೆ ಮಾಡಿದ್ದಳು. ತಂಗಿಯರು ತಾಯಿಯರಾದರು. ಅಣ್ಣನ ಮಕ್ಕಳು ದೊಡ್ಡವರಾದರು. ಮಾಡಲು ಬೇರೇನೂ ಕೆಲಸವಿಲ್ಲದೆ ತಾನೂ B.Ed. ಮುಗಿಸಿ ಶಾಲೆಯಲ್ಲಿ ನೌಕರಿ ಹಿಡಿದಳು. ತಾಯಿಯ ಗೋಣಗಾಟದಿಂದ ಅಪ್ಪನ ಸಿಟ್ಟಿನ ಮುಖದಿಂದ ದೂರವಾಗಿ ಕೆಲ ದಿನ ಹಾಯಾಗಿದ್ದಳು.

ಮನೆಯಲ್ಲಿ, ನೆರೆಹೊರೆಯವರಲ್ಲಿ, ಬಂಧು -ಬಳಗದವರಲ್ಲಿ ತನ್ನ ಮದುವೆಯ ಬಗ್ಗೆ ಚರ್ಚೆ ನಡೆದು, ಮಾತಾಡಿ ಬೇಸತ್ತು ಸಾಕಾಗಿ ಸಾಕಾಗಿ ಕೊನೆಗೊಮ್ಮೆ ಎಲ್ಲರೂ ಸುಮ್ಮನಾದರು. ತಮ್ಮ ಮದುವೆಯ ವಿಷಯ ಸವಕಲು ನಾಣ್ಯವಾಯಿತು. ಬರಬರುತ್ತ ಎಲ್ಲಿಯಾದರೂ ವರ ಇದ್ದಾನೆನ್ನುವ ಬಗ್ಗೆ ಅಪ್ಪ, ಅಣ್ಣ ಮಾತಾಡಿದ್ದನ್ನೇ ತಾನು ಕೇಳಲಿಲ್ಲ. ಅವ್ವ, ತಂಗಿಯರ ಗಂಡಂದಿರ ಉಪಚಾರ, ಮೊಮ್ಮಕ್ಕಳ ಲಾಲನೆ ಪಾಲನೆಯಲ್ಲಿ ಮಗ್ನಳಾಗಿ ಬಿಟ್ಟಳು. ಮನೆಗೆ ಬರು ಹೋಗುವವರ ಪ್ರಶ್ನೋತ್ತರಗಳು ನಿಂತವು. ಮನೆಯ ಅಳಿಯಂದಿರ, ಅಣ್ಣನ ಗೆಳೆಯರ, ಹರೆಯದ ಗಂಡಸರ ಕುತೂಹಲಕರ ನೋಟ ಈಗೀಗ ತನ್ನ ಮೇಲೆ ಇರುತ್ತಿರಲಿಲ್ಲವೆನ್ನುವುದೂ ತನ್ನ ಲಕ್ಷ್ಯಕ್ಕೆ ಬಂದಿತು. ಎಲ್ಲರಿಂದಲೂ ಅಲಕ್ಷ್ಯಳಾದ ಮೇಲೆ ತನಗೇನಾಯಿತು ? ಎಲ್ಲರೂ ತನ್ನಿಂದ ದೂರ ಸರಿಯುತ್ತಿದ್ದಾರೆ. ತನ್ನ ಬಗ್ಗೆ ಯಾರಿಗೂ ಪ್ರೀತಿಯಿಲ್ಲ, ಲಕ್ಷ್ಯವಿಲ್ಲ, ಕಾಳಜಿಯಿಲ್ಲ. ಇಡೀ ಜಗತ್ತಿನಲ್ಲಿ ತಾನೊಬ್ಬಳೇ ಒಬ್ಬಳು; ಉಳಿದವರೆಲ್ಲಾ ಒಂದು. ತಾನು ಒಂದು, ತಾನು ಏಕಾಕಿ. ತನಗಾರೂ ಇಲ್ಲ. ತಾನು ಇದೇ ರೀತಿ ಜೀವಮಾನವೆಲ್ಲಾ ಉಪೇಕ್ಷಿತಳಾಗಿಯೇ ಬದುಕಬೇಕೆ? ಹೀಗೆಯೇ ದುಡಿದು ಸಂಬಳ ತಂದು ಮನೆಯವರ ಕೈಗೆ ಕೊಟ್ಟು ಪೇಯಿಂಗ್ ಗೆಸ್ಟಿನಂತೆ ಇರಬೇಕೆ? ಮೊದಮೊದಲು ಬೇಡವೆಂದಿದ್ದರೂ ಈಗ ಸಂಬಳವನ್ನು ಸುಮ್ಮನೆ ತೆಗೆದುಕೊಳ್ಳುತ್ತಾರೆ. ಈ ಮನೆ ತನ್ನದಲ್ಲವೇ? ತಾನು ಇಲ್ಲಿ ಬರೀ ಗೆಸ್ಟ್ ಮಾತ್ರವೇ? ಈ ಮನೆಯ ಅಧಿಕಾರವೆಲ್ಲ ಅಪ್ಪನ ತರುವಾಯ ಅಣ್ಣನಿಗೇ ಸೇರಿದ್ದು ಎನ್ನುವಂತೆ ಇವರೆಲ್ಲರ ವರ್ತನೆ ಇದೆ. ಅಣ್ಣ ದೊಡ್ಡವನು ನಿಜ. ಆದರೆ ಅಣ್ಣನಂತೆಯೇ ತಾನೂ ದುಡಿದು ತರುವವಳಲ್ಲವೇ ? ಅನಿಗಿರುವ ಅಧಿಕಾರ, ಮರ್ಯಾದೆ ತನಗೇಕಿಲ್ಲ? ಈ ಮನೆಯ ಹಿರಿ ಮಗಳು ತಾನು ಆರ್ಥಿಕವಾಗಿ ಸ್ವಾವಲಂಬಿ. ತನ್ನನ್ನು ಯಾವ ಮಾತಿಗೂ ಯಾವ ಕೆಲಸಕ್ಕೂ ಸಲಹೆ ಕೇಳುವುದಿಲ್ಲ. ತಾವು ತಾವೇ ನಿರ್ಣಯ ಕೈಕೊಂಡು ಬಿಡುತ್ತಾರೆ. ಹೋಗಲಿ, ಏನಾದರೂ ಮಾಡಿಕೊಳ್ಳಲಿ ಎಂದರೆ ವಿವಾಹಿತ ತಂಗಿಯರಿಗಿದ್ದಷ್ಟು ಮರ್ಯಾದೆ,ಮಹತ್ವ ಕೂಡ ತನಗಿಲ್ಲ. ಅಂದ ಮೇಲೆ ಈ ಮನೆಯಲ್ಲಿ ತನ್ನ ಸ್ಥಾನವೇನು? ಒಂದು ಒಳ್ಳೆಯ ತತ್ತ್ವಕ್ಕಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ ತನಗೆ ಮನೆಯಲ್ಲಿಯೇ ಅನಾದರವೇ? ಪ್ರೋತ್ಸಾಹದ ಒಂದು ಮಾತೂ ಇಲ್ಲ. ಯಾಂತ್ರಿಕ ಬದುಕು, ಛೇ, ಬರಿ ಯಾಂತ್ರಿಕ ಬದುಕು. ತಾನೊಂದು ಉಣ್ಣುವ, ಉಡುವ ದುಡಿಯುವ ಯಂತ್ರ. ಇವರ ಪಾಲಿಗೆ ಅವಿವಾಹಿತೆಯಾದರೂ ತನಗೆ ಸೂಕ್ಷ್ಮ ಭಾವನೆಗಳಿಲ್ಲವೆ? ಉಚ್ಚ ವಿಚಾರವಿಲ್ಲವೇ? ಸುಶಿಕ್ಷಿತಳಲ್ಲವೇ? ಬುದ್ಧಿಯಲ್ಲೂ ಜಾಣತನದಲ್ಲೂ ಅಣ್ಣನಿಗಿಂತ ತಾನೇನೂ ಕಡಿಮೆಯಿಲ್ಲವಲ್ಲ. ತನ್ನ ವ್ಯಕ್ತಿತ್ವಕ್ಕೆ ಏನೂ ಬೆಲೆ ಇಲ್ಲವೆ ? ಇಂಥ ನೂರಾರು ವಿಚಾರಗಳಿಂದ ತಲೆ ಧಿಮಿ ಧಿಮಿಗುಟ್ಟಿ, ರಾತ್ರಿಯೆಲ್ಲ ನಿದ್ದೆ ಇಲ್ಲದೆ ಹೊರಳಾಡುತ್ತಿರಲಿಲ್ಲವೇ ? ತಾನು ?

"ಸುನಂದಾನ ತಲಿಯೊಳಗ ಬಿಳೀ ಕೂದಲು ಆಗ್ಯಾವ ಅತ್ತೆವ್ವ, ಅತ್ತಿಗೆ ಆತಂಕದಿಂದ ಅವ್ವನಿಗೆ ಹೇಳುತ್ತಿದ್ದುದು ಒಂದು ದಿನ ತನ್ನ ಕಿವಿಗೆ ಬಿದ್ದಿತ್ತು.

"ನಾಳಿನ ಶ್ರಾವಣಕ್ಕ ಮೂವತ್ತೆರಡು ಮುಗೀತಾವಲ್ಲ, ಬಿಳೀ ಕೂದಲ ಆದರೂ ಆಗಿದ್ದಾವು" ಅವ್ವನ ದನಿಯಲ್ಲಿ, ನಿರಾಸಕ್ತಿಯಿತ್ತೋ ವೇದನೆಯಿತ್ತೋ ತನಗೆ ತಿಳಿದಿರಲಿಲ್ಲ.

ಮರುದಿನ ಸ್ನಾನಮಾಡಿ ಬಂದು ತಲೆ ಬಾಚಿಕೊಳ್ಳಲು ಕನ್ನಡಿ ಎದುರು ನಿಂತವಳು ಬೈತಲೆಯ ಹತ್ತಿರ ಬಿಳಿ ಕೂದಲು ಕಂಡು ಅವನ್ನು ಮುಚ್ಚುವಂತೆ ಹೇರ್‌ಸ್ಟೈಲ್ ಬದಲಾಯಿಸಿದ್ದಳು. ಅಂದು ಬಸ್ಸಿನ ಕ್ಯೂನಲ್ಲಿ ನಿಂತಾಗ, ಬಸ್ಸಿನಲ್ಲಿ, ಶಾಲೆಯಲ್ಲಿ ಸಹೋದ್ಯೋಗಿ ಪಾಟೀಲ ಎರಡು ಮೂರು ಸಲ ತನ್ನತ್ತ ತಿರುಗಿ ನೋಡಿದ್ದ. ಯಾರೋ ಹೊಸಬರನ್ನು ನೋಡುವಂತೆ. ಆರು ತಿಂಗಳ ಹಿಂದೆ ವರ್ಗವಾಗಿ ಇವಳ ಶಾಲೆಗೆ ಬಂದ ಮನೋಹರ ಪಾಟೀಲನಲ್ಲಿ ಹೆಚ್ಚು ಸಲಿಗೆಯಿಲ್ಲದಿದ್ದರೂ ಆಗೀಗ ಮಾತನಾಡಿ ಪರಿಚಯವಿತ್ತು. ಮಧ್ಯಾಹ್ನ ಚಹದ ಬಿಡುವಿನಲ್ಲಿ ಪಾಟೀಲ ಹತ್ತಿರ ಬಂದಿದ್ದ.

"ಮಿಸ್ ಸುನಂದಾ ಈ ಹೇರ್ ಸ್ಟೈಲ್ ನಿಮಗ ಭಾಳ ಒಪ್ತದ ನೋಡ್ರಿ" ಎಷ್ಟೂ ಸಂಕೋಚ ಪಟ್ಟುಕೊಳ್ಳದೇ ಸರಳವಾಗಿ, ಧೈರ್ಯದಿಂದ ಅವನು ತನ್ನೆದುರಿಗೇ ಆ ಮಾತು ಹೇಳಿದಾಗ ತನಗೆಷ್ಟು ಸಂತೋಷವಾಗಿತ್ತು ! ಒಮ್ಮೆಲೇ ಮುಖವೆಲ್ಲ ಕೆಂಪಾಗಿ ಹದಿಹರೆಯದ ಹುಡುಗಿಯಂತೆ ತಲೆ ತಗ್ಗಿಸಿದ್ದಳು. ಅವಳ ನಾಚಿಗೆ ನೋಡಿ ಏನೇನಿಸಿತೋ ಪಾಟೀಲ ತುಂಬು ಮನಸ್ಸಿನಿಂದ ಜೋರಾಗಿ ನಕ್ಕುಬಿಟ್ಟಿದ್ದ. ಆ ನಗೆ, ಆ ಮಾತುಗಳೇ ಅಲ್ಲವೇ ತನ್ನನ್ನು ರೋಮಾಂಚಿತಳನ್ನಾಗಿ ಪರವಶಳನ್ನಾಗಿ ಮಾಡಿದ್ದು? ಅವನಲ್ಲಿ ಏನೋ ಒಂದು ಹೊಸ ಆಕರ್ಷಣೆ ಹುಟ್ಟಿ ಮತ್ತೆ ಮತ್ತೆ ಅವಕಾಶ ಹುಡುಕಿಕೊಂಡು ಅವನೊಡನೆ ಮಾತನಾಡಿದ್ದಳು. ಚಹಕ್ಕೆ ಸಿನಿಮಾಕ್ಕೆ, ಕರೆದಾಗ ಹೋಗಿದ್ದಳು. ಅವನ ಕಂಪನಿ ಸಿಗುತ್ತದೆಂದು ಅವನ ಕ್ಲಾಸಿನವರೊಡನೆ ಟ್ರಿಪ್ಪಿಗೂ ಹೋಗಿ ಬಂದಳು. ಒಂದೊಂದು ದಿನ ಒಂದೊಂದು ಹೊಸ ಸೆಳೆತ ಅವನಲ್ಲಿ. ಒಂದು ಮುಗುಳ್ನಗೆ, ನಾಚಿಸುವ ಒಂದು ಆತ್ಮೀಯ ಹೊಗಳಿಕೆ, ಕಣ್ಣು ಮಿಟುಕಿಸುವುದು. ಹತ್ತಿರ ಬಂದಾಗ ಯಾರೂ ಕಾಣದಂತೆ ತನ್ನ ಬೆರಳು ಮುಟ್ಟುವದು, ಟೇಬಲ್ ಕೆಳಗೆ ಪಾದವನ್ನೊತ್ತುವದು ಒಂದೇ ಎರಡೇ ? ತಾನೂ ಒಂದೊಂದೇ ಒಂದೊಂದೇ ಹೆಜ್ಜೆ ಸಮೀಪಿಸುತ್ತ ಮೈಮರೆತು. ಹತ್ತಿರ ಹತ್ತಿರ ಹೋಗಿ ಒಂದು ದಿನ ಅವನ ಬಿಸಿ ಅಪ್ಪುಗೆಯಲ್ಲಿ ಕರಗಿ ಹೋಗಿದ್ದಳು. ತನ್ನನ್ನು ಪ್ರೀತಿಸುವ, ಆರಾಧಿಸುವ ಜೀವವೊಂದು ಇದೆ ಎಂದರೆ ಜಗತ್ತನ್ನೇ ಗೆಲ್ಲುವೆ ಎನ್ನುವ ಹುಮ್ಮಸ್ಸು ನರನಾಡಿಗಳಲ್ಲಿ ತುಂಬಿ ಹರಿದಿತ್ತು. ತಮ್ಮಿಬ್ಬರ ಸಂಬಂಧ ಇಷ್ಟು ಬೆಸೆದುಕೊಂಡಾಗ ಇನ್ನು ತಡವೇಕೆ ? ಅವನನ್ನು ಮದುವೆಯಾಗುವೆನೆಂದು ಘೋಷಿಸಿ, ತನ್ನನ್ನು ಇಷ್ಟು ಅಲಕ್ಷಿಸಿ ಅವಮಾನ ಮಾಡಿದವರ ಮೇಲೆ ಬಾಂಬು ಹಾಕಬೇಕೆಂದು ನಿರ್ಧರಿಸಿಕೊಂಡ ದಿನವೇ ತನ್ನ ಮೇಲೆ ಬಾಂಬು ಬಿದ್ದಿತ್ತು.

ದಿನದ ಅದೇ ಮೋಹಕ ಮುಗುಳ್ನಗೆ ಬೀರುತ್ತ ಪಾಟೀಲ ಹೇಳಿದ್ದ; " ಸಾರಿ ಸುನಂದಾ ನನಗೆ ಮದುವಿ ಆಗಿ ಮೂರು ಮಕ್ಕಳಿದ್ದಾರ. ನಿನಗ ಗೊತ್ತದ ಅಂತ ತಿಳಕೊಂಡಿದ್ದೆ." ತನ್ನ ಕಣ್ಣಿನ ಮುಂದೆ ಕತ್ತಲೆಯೇ ತುಂಬಿ ಏನೂ ಕಾಣಿಸದಾಗಿತ್ತು. ಬೆಳಕು ಕಂಡಾಗ, "ಸುನಂದಾ ಸುನೂ" ಅವನು ಒದ್ದೆ ಕರ್ಚೀಫಿನಿಂದ ತನ್ನ ಮುಖ ಒರೆಸುತ್ತ ಕಿವಿಯಲ್ಲಿ ಮೃದುವಾಗಿ ಕರೆಯುತ್ತಿದ್ದ. ಎಷ್ಟೋ ಹೊತ್ತು ಸುಮ್ಮನೆ ಕುಳಿತ ತನ್ನ ಮುಖ ಬಿಳಿಚಿ ಕೊಂಡಾಗ ತನ್ನ ಮನಸ್ಸಿನ ಪದರುಗಳನ್ನೆಲ್ಲ ಬಿಚ್ಚಿ ಓದುತ್ತಿದ್ದ ಅವನೆಂದಿದ್ದ;

"ಗಾಬರಿ ಆಗಬ್ಯಾಡಾ ಸುನಂದಾ. ನಿನಗ ಏನೂ ತೊಂದರೆ ಆಗೂದಿಲ್ಲ. ನನಗ ಆಪರೇಷನ್ ಆಗೇದ." ತಾನು ಅಂಗೈಯಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಾಗ ಅವನು ತೋಳು ಬಳಸಿ ಅವಳನ್ನು ಎದೆಗೆ ಒರಗಿಸಿ ಕೊಂಡಿದ್ದ. ಆದರೂ ತಾನು ಪ್ರತಿಭಟಿಸಲಿಲ್ಲ ಏಕೆ? ತಾನೇಕೆ ಅವನ ಕೆನ್ನೆಗೆ ಹೊಡದು ಎದ್ದು ಬರಲಿಲ್ಲ? ಅವನ

ಆಲಿಂಗನದಲ್ಲೇ ಏಕೆ ಕರಗಿ ಹೋದೆ? ತನ್ನ ಏಕಾಕಿತನ ಮರೆಸಿದನೆಂದೇ? ತನ್ನ ಯೌವನದ ದಾಹ ತಣಿಸಿದನೆಂದೇ? ಅವನನ್ನು ಬಿಟ್ಟರೆ ತನಗಾರೂ ಗತಿಯಿಲ್ಲ ಎನ್ನುವ ಅಸಹಾಯಕತೆಯೇ ? ಹೇಗಿದ್ದರೂ ಕಾಲು ಜಾರಿಯಾಗಿದೆ. ಒಬ್ಬನ ಗೆಳೆತನವೇ ಸಾಕು ಎನ್ನುವುದಕ್ಕಾಗಿಯೇ ? ಯಾವ ಕಾರಣಕ್ಕಾಗಿ? ಅಥವಾ ಈ ಎಲ್ಲ ಕಾರಣಗಳಿಗಾಗಿಯೇ ? ಅಂತೂ ಯಾತಕ್ಕಾಗಿ ಕಾನೂನು ಬಾಹಿರ ಎರಡನೆಯ ಹೆಂಡತಿಯಾಗಿ ಅವನ ಮನೆಗೆ ಬಂದೆನೋ ತಿಳಿಯದೆ ಹೋದೆ. ತಾನು ಆದರ್ಶದ ಮಾತು ಹೇಳಿ ಮದುವೆಯಾಗದೆ ಉಳಿದಾಗ ಆಡಿಕೊಂಡಂತೆಯೇ ತಾನು ಪರಿಸ್ಥಿತಿಯ ಕೈಕೂಸಾಗಿ ಅವನ ಮನೆ ಸೇರಿದಾಗಲೂ ಜನರಿಗೆ ನಾಲಿಗೆ ಸಾವಿರ ರೂಪದಲ್ಲಿ ಕುಣಿಯಿತು. ಆದರೆ ತನ್ನ ಮೈ ಮನಸ್ಸು ಎರಡೂ ದಡ್ಡು ಬಿದ್ದಿದ್ದವು.

ತನ್ನನ್ನು ಮನೆಗೆ ಕರೆತಂದ ದಿನವೇ ಮನೋಹರ ಪಾರ್ವತಿಗೆ ಹೇಳಿದ್ದ;" ಇಕೀನ್ನ  ನಿನ್ನ ತಂಗಿ ಹಾಂಗ ನೋಡಿಕೋ." ಸುಮ್ಮನೆ ಗೋಣು ಅಲ್ಲಾಡಿಸಿದ್ದಳು ಪಾರ್ವತಿ. ಅವಳೊಂದು ಮೂಕ ಕುರಿ. ಕುರಿ ಬ್ಯಾ ಅಂದರೂ ಅಂದೀತು, ಅವಳು ಏನೂ ಅನ್ನದೇ ಅವನ ಜೊತೆಗೆ ಹತ್ತು ವರುಷ ಸಂಸಾರ ಮಾಡಿದ್ದಳು. ಅವಳ ತಂದೆ ಕೊಟ್ಟ ಒಡವೆಯೆಲ್ಲ ಗಂಡನ ಇಸ್ಪೀಟು ಕುಡಿತಕ್ಕೆ ಹಾಳಾಗಿ ಹೋಯಿತೆಂದು ತನ್ನೆದುರು ಪಾರ್ವತಿ ಹೇಳಿಕೊಂಡು ಅತ್ತಾಗ ಗಂಡಸನ್ನು ಹದ್ದುಬಸ್ತಿನಲ್ಲಿಡಲಾಗದ ಹೇಡಿ ಎಂದು ತನ್ನೊಳಗೆ ತಾನು ನಕ್ಕಿದ್ದಳು. ಮೊದಲಿನ ತಿಂಗಳುಗಳು ತುಂಬ ಸಂತಸದಿಂದಲೇ ಕಳೆದಿದ್ದವು. ಶಾಲೆಯಿಂದ ಇಬ್ಬರೂ ಜೊತೆಗೂಡಿ ಬರುವುದರೊಳಗೇ ಚಹ, ತಿಂಡಿ, ಸಿದ್ಧ. ಹೊತ್ತು ಹೊತ್ತಿಗೆ ಪಾರ್ವತಿಯ ಬಿಸಿ ಅಡಿಗೆ, ಎಣ್ಣೆ ನೀರಿನ ಉಪಚಾರ, ಗಂಡನ ಪ್ರೀತಿ, ಮಕ್ಕಳೊಡನೆ ಆಟ, ತನ್ನ ಜೀವನದಲ್ಲಿಯೇ ಮರೆಯಲಾರದ ಸುಖದ ಕ್ಷಣಗಳು.

ಬರುವ ಸಂಬಳದಲ್ಲಿ ಮನೋಹರ ಆಗಾಗ ಕೈಚಾಚತೊಡಗಿದ. ಉದಾರ ಮನಸ್ಸಿನಿಂದ ಇವಳೂ ಕೊಡುತ್ತಿದ್ದಳು. ಒಂದೊಂದೇ ನೆವ ಹೇಳಿ ಹಣ ಕೇಳುವುದಲ್ಲದೇ ಅವಳಿಗೆ ಅಪ್ಪುಗೆ ಚುಂಬನ ತುಂಟಾಟಗಳ ಲಂಚ ಬೇರೆ. ತಾನು ಅವನ ಕಿವಿ ಹಿಡಿಯುವ, ಮೂಗುದಾರ ಹಾಕುವ ನಟನೆ ಮಾಡುತ್ತಲೇ ಪರ್ಸ್ ಅವನ ಕೈಗೆ ಕೊಟ್ಟಿದ್ದಳು. ಅದೇ ನಿತ್ಯದ ರೂಢಿಯಾಗಲು ತಡವಾಗಲಿಲ್ಲ. ಸಂಬಳ ಬಂದ ಮರುದಿನವೇ ಕೈಚಾಚುತ್ತಿದ್ದವ ಆಗ ಅಧಿಕಾರದಿಂದ ಪಡೆಯತೊಡಗಿದ. ತನಗೆ ಸೀರೆ, ಅಲಂಕಾರ ಸಾಮಗ್ರಿ, ಮನೆಗೆ ಅಗತ್ಯ ಸಾಮಾನು, ಮಕ್ಕಳಿಗೆ ಆಟಿಕೆ ತರಲೂ ಕೈಯಲ್ಲಿ ಹಣವಿಲ್ಲದಾಗ ತನಗೆ ಎಚ್ಚರ ಬಂದಿತ್ತು. ಪ್ರತಿಭಟಿಸಿ ಹಣ ಕೊಡುವುದನ್ನು ಬಿಟ್ಟಿದ್ದಳು. ಆಗ ಹಣ ಇಟ್ಟಲ್ಲಿಂದ ಕಳುವಾಗತೊಡಗಿತು. ಕೇಳಿದರೆ ಮನೋಹರ ತನಗೆ ಗೊತ್ತಿಲ್ಲವೆನ್ನುತ್ತಿದ್ದ. ಗಾಬರಿಗೊಂಡ ತಾನು ಸ್ನೇಹಿತೆಯ ಸಲಹೆ ಮೇರೆಗೆ ಸಂಬಂಳವನ್ನೆಲ್ಲ ಬ್ಯಾಂಕಿನಲ್ಲೇ ಬಿಟ್ಟು ಅಗತ್ಯವಿದ್ದಷ್ಟೇ ಮನೆಗೆ ತಂದಾಗ ಮನೋಹರ ಬಯ್ದಿದ್ದ, ಒದರಾಡಿದ್ದ, ಅವಮಾನಗೊಳಿಸಿದ್ದ. ಅದಕ್ಕೂ ತಾನು ಬಗ್ಗದಾದಾಗ ತನಗೆ ಊಟ ಕೊಡಬೇಡವೆಂದು ತನ್ನೆದುರೇ ಪಾರ್ವತಿಗೆ ಅಪ್ಪಣೆ ಮಾಡಿದ್ದ. ಅವನ ಮಾತಿಗೆ ಲಕ್ಷ್ಯ ಕೊಡದೆ ಪಾರ್ವತಿ ತನಗೆ ನೀಡಿದಾಗ ಅವಳನ್ನು ಮೈತುಂಬ ಹೊಡೆದಿದ್ದ. ಅವಳ ಗೋಳು ನೋಡಲಾರದೆ ತಾನು ಸಂಕಟಪಟ್ಟಿದ್ದಳು. ಇದಕ್ಕೆ ಪರಿಹಾರ ಒಂದೇ; ಅದು ತನ್ನ ಕೈಯಲ್ಲೇ ಇತ್ತು. ಹೌದು, ಹಣ ಕೊಡದೆ ಅವನ ಮನೆಯಲ್ಲಿ ಊಟ ಮಾಡಲು ತನಗೇನು ಅಧಿಕಾರ? ತಾನು ಯಾರು? ಅವನಿಗೆ ಏನಾಗಬೇಕು? ತವರು ಮನೆಯಂತೆಯೇ ಇಲ್ಲಿಯೂ ತಾನು ಪೇಯಿಂಗ್ ಗೆಸ್ಟ್ ಮಾತ್ರ ಎನ್ನುವುದು ಖಚಿತವಾಯಿತು. ಸಂಬಳ ಅವನ ಕೈಗೆ ಹಾಕಿದ ಮೇಲೆಯೆ ಪಾರ್ವತಿಯ ಕೋಣೆ ಬಿಟ್ಟು ತನ್ನ ಬಳಿ ಮಲಗಲು ಬಂದಿದ್ದ. ಆಗಲೂ ತಾನು ಸುಮ್ಮನೆ ಅವನ ವಶವಾಗಿದ್ದೆ. ಯಾಕೆ ? ಯಾಕೆ ಎದ್ದು ಅವನನ್ನು ಒದ್ದು ನೂಕಲಿಲ್ಲ?

ಕರೆಗಂಟೆ ಸದ್ದಾಯಿತು. ನಿದ್ದೆಯ ಆಳಕ್ಕೆ ನಿಧಾನವಾಗಿ ಇಳಿಯುತ್ತಿದ್ದ ಸುನಂದ ಎಚ್ಚೆತ್ತಳು. ಕೈಗಡಿಯಾರದತ್ತ ಅವಳ ಲಕ್ಷ್ಯ ಹೋಯಿತು. ಹನ್ನೆರಡುವರೆ. ಒಳಗೆ ಬಂದ ಮನೋಹರ ಬಾಗಿಲು ಆಧರಿಸಿ ಹಿಡಿದು ನಿಂತಾಗಲೇ ಅವಳಿಗೆ ತಿಳಿಯಿತು. ಕಂಠಪೂರ್ತಿ ಕುಡಿದಿದ್ದಾನೆಂದು. ಗದ್ದಲ ಮಾಡುವುದು, ಊಟ ಬೇಡವೆನ್ನುವುದು, ತನ್ನ

ಇಚ್ಛೆಗೆ ವಿರುದ್ಧ ತನ್ನ ಮೇಲೆ ಆಕ್ರಮಣ ಮಾಡುವುದು ಈಗ ನಾಲ್ಕಾರು ತಿಂಗಳಿಂದ ಹೆಚ್ಚಾಗಿತ್ತು. ತಾಟು ಇಟ್ಟು ನೀಡಿದ ಮೇಲೆ "ನಿನ್ನ ಊಟವಾಯಿತೆ?" ಎಂದು ಒಂದು ಮಾತೂ ಕೇಳಲಿಲ್ಲ. ಗಪಗಪ ತಿಂದು ಸುಮ್ಮನೆ ತನ್ನ ಕೋಣೆಗೆ ಹೋಗಿ ಬಿದ್ದುಕೊಂಡ. ಹೆಂಡತಿ ಮಕ್ಕಳಿದ್ದ ಕೋಣೆಗೆ ಕಾಲಿಡಲಿಲ್ಲ. ಸೆರಗಿನಿಂದ ಕೆನ್ನೆಯ ಮೇಲೆ ಇಳಿಯುತ್ತಿದ್ದ ಕಣ್ಣೀರು ಒರೆಸಿಕೊಳ್ಳುತ್ತ ಆ ಸರಿರಾತ್ರಿಯಲ್ಲಿ ನಾಲ್ಕು ತುತ್ತು ಹೊಟ್ಟೆಗೆ ಇಳಿಸಿದ ಸುನಂದ ಅವನು ಮಲಗಿದ ಹಾಸಿಗೆಗೆ ಬರಲು ಹಿಂಜರಿದು ಒಂದು ಮೂಲೆಯಲ್ಲಿ ಜಮಖಾನೆ ಹಾಸಿ ಬಿದ್ದುಕೊಂಡಳು. ಆದರೆ ಅವಳ ದಿನಚರಿ ಅಲ್ಲಿಗೇ ಮುಗಿಯಲಿಲ್ಲ. ಹತ್ತಿರ ಬಂದು ಅವಳ ಕೈ ಹಿಡಿದೆಳೆದ. ಅವನ ಇಡೀ ದೇಹವೇ ಹೊಲಸು ನಾರುತ್ತಿತ್ತು. ಅರಿವೆ ಹಾಕಿದ್ದರೂ ಪೂರ್ತಿ ಬೆತ್ತಲಾದಂತೆ ಅವಳ ಕಣ್ಣಿಗೆ ಕಾಣುತ್ತಿದ್ದ. ತೀರಾ ಸನಿಹಕ್ಕೆ ಬಂದು ಎದೆಯ ಮೇಲೆ ಕೈಯಿಟ್ಟಾಗ ಕ್ರೂರ ರಾಕ್ಷಸವೊಂದು ಕುತ್ತಿಗೆ ಹಿಚುಕುತ್ತಿರುವಂತೆ ಎನಿಸಿ ಚಿಟ್ಟನೇ ಚೀರಿ ಮೇಲೆದ್ದಳು ಸುನಂದಾ. ಮನೋಹರ ಅವಳನ್ನು ಹಿಡಿದೆಳೆದ. ಮತ್ತೆ ಹಾಸಿಗೆಯ ಮೇಲೆ ಕೆಡವಿ ಸೀರೆ ಎಳೆದ. ಕ್ರೂರ ಪಂಜುಗಳಿಂದ ತನ್ನನ್ನು ಅಪ್ಪಿಕೊಳ್ಳಲು ಬಂದ ಸಿಂಹವನ್ನು ಕಂಡು ಸುನಂದಾ ಬಿಡಿಸಿಕೊಳ್ಳಲು ಒದ್ದಾಡಿ ತನ್ನೆಲ್ಲ ಬಲವನ್ನು ಒಟ್ಟುಗೂಡಿಸಿ ಝಾಡಿಸಿ ಅವನ ಮುಖಕ್ಕೆ ಒದ್ದಳು. ಹಲ್ಲು ಮುರಿಯಿತೇನೋ, ಬಳಬಳ ರಕ್ತ ಸುರಿಯಿತು. ಆದರೂ ಸೀರೆ ಬಿಡಲಿಲ್ಲ ಅವನು. ವಿಕಾರವಾದ ಅವನ ಮುಖವನ್ನು ನೋಡಿ ನಡುಗುತ್ತ ಜೋರಾಗಿ ಕಿರಿಚುತ್ತ ಸುನಂದಾ ಪಡಸಾಲೆಗೆ ಓಡಿ ಬಂದಾಗ ಪೂರ್ತಿ ಬೆತ್ತಲಾಗಿದ್ದಳು. ಪಾರ್ವತಿ ಓಡಿ ಬಂದಿದ್ದಳು. ವಿಷಯ ಗ್ರಹಿಸಿದ ಅವಳು ತಟ್ಟನೆ ಸುನಂದೆಯನ್ನು ತನ್ನ ಕೋಣೆಗೆ ನೂಕಿ ಬಾಗಿಲು ಹಾಕಿ ತಾನೇ ಮನೋಹರನ ಹತ್ತಿರ ಹೋಗಿ ಸೆರಗಿನಿಂದ ಮುಖ ಒರೆಸಿ ಹಾಸಿಗೆಯಲ್ಲಿ ಮಲಗಿಸಿದಳು. ಮರುದಿನ ಮನೋಹರ ಏಳುವ ಮೊದಲೇ ಸುನಂದ ತನ್ನ ಸಾಮಾನುಗಳ ಸಮೇತ ವರ್ಕಿಂಗ್ ವುಮೆನ್ಸ್ ಹಾಸ್ಟೆಲ್ ಸೇರಿದ್ದಳು. ರಜೆ ಹಾಕಿದ್ದ ಮನೋಹರ ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಹೊರಟು ಹೋಗಿದ್ದ.

***

ಪಿರಿಯಡ್ ಮುಗಿಸಿದ ಸುವಂದಾ ಸ್ಟಾಫ್‌ರೂಮಿಗೆ ಬಂದಾಗ ಕೋಣೆ ನಿರ್ಜನವಾಗಿತ್ತು. ಹಾಯೆಂದು ಉಸಿರು ಬಿಟ್ಟು ತಂದ ಪುಸ್ತಕಗಳನ್ನು ಟೇಬಲ್ಲಿನ ಮೇಲೆ ರಭಸದಿಂದಲೇ ಅಪ್ಪಳಿಸಿ ದೊಪ್ಪನೆ ಕುಳಿತಳು. ಸಣ್ಣಾಗಿ ನೋಯುತ್ತಿದ್ದ ಹಣೆಯನ್ನು ತುದಿ ಬೆರಳುಗಳಿಂದ ಬಲವಾಗಿ ಹಿಚುಕಿಕೊಂಡಳು. ತುಂಬಾ ಆಯಾಸವಾಗಿ ಕೈಕಾಲುಗಳಲ್ಲಿಯ ಶಕ್ತಿಯೇ ಸೋರಿ ಬಲಹೀನವಾಗಿದ್ದವು. ಟೇಬಲ್ ಮೇಲೆ ಸುಮ್ಮನೆ ಒರಗಿದಳು. ಮುಂದಿನ ಪೀರಿಯಡ್ ಅವಳಿಗೆ ಆಫ್ ಇದ್ದುದು ನೆನಪಾಗಿ ಸ್ವಲ್ಪ ಆರಾಮವೆನಿಸಿತ್ತು. ಇತ್ತಿತ್ತಲಾಗಿ ತನ್ನಿಂದ ಪಾಠ ಹೇಳುವುದು ಸರಿಯಾಗಿ ಆಗುತ್ತಿಲ್ಲವೆನ್ನುವುದು ತನಗೆ ತಿಳಿಯುತ್ತದೆ. ಪಾಠದ ತಯಾರಿ ಮಾಡಿಕೊಳ್ಳುವುದೂ ತನ್ನಿಂದ ಆಗುತ್ತಿಲ್ಲ. ಎಲ್ಲ ಕೆಲಸಕ್ಕೂ ದಣಿವು. ಬೇಸರ, ಒಡಹುಟ್ಟಿದ ಅಕ್ಕನಂತಿರುವ ರೂಮ್‌ಮೇಟ್ ಶಕುಂತಲಾ ಜೊತೆಗೆ ಮನಬಿಚ್ಚಿ ಮಾತಾಡಲು ಆಗುತ್ತಿಲ್ಲ. ತನ್ನ ಸಪ್ಪೆ ಮೋರೆ, ಆಯಾಸದಲ್ಲಿ ತೇಲುವ ಎಣ್ಣೆ ಮುಖ, ಸೋತ ನಡಿಗೆ ಬಲವಂತದ ನಗೆ ನೋಡಿ ನೋಡಿ ಅವಳೇ ಮೊನ್ನೆ ಜೋರು ಮಾಡಿ ಹೀಗೇಕಾಗಿದ್ದೀ ಎಂದು ಕೇಳಿದಳು. ನನಗೇ ಗೊತ್ತಿಲ್ಲವೆಂದಾಗ ಡಾ. ಪ್ರಮೀಳಾನ ಹತ್ತಿರ ಚೆಕ್‌ಅಪ್‌ಗೆ ಕರೆದೊಯ್ದಳು. ಅವರು ಹೇಳಿದುದು ತನಗೆ ಅರಿಯದ ವಿಷಯವೇನೂ ಅಲ್ಲ. ನಾಲ್ವತ್ತರಿಂದ ಐವತ್ತರ ಒಳ ಹೊರಗೆ ಮುಟ್ಟು ನಿಲ್ಲುವ ಸಮಯದಲ್ಲಿ ಸಾಮಾನ್ಯ ಎಲ್ಲ ಹೆಣ್ಣು ಮಕ್ಕಳಿಗೆ ಈ ಅಸ್ವಸ್ಥತೆ ಇದ್ದದ್ದೇ. ಇದೇನು ರೋಗವಲ್ಲ. ಒಳ್ಳೆಯ ಆಹಾರ, ಟಾನಿಕ್ ತೆಗೆದುಕೊಂಡು ಸಾಧ್ಯವಿದ್ದಷ್ಟು ರೆಸ್ಟ್ ತೆಗೆದುಕೊಳ್ಳಬೇಕು. ಚಿಂತೆ ಮಾಡದೆ ನಮಸ್ಸು ಶಾಂತವಾಗಿಟ್ಟುಕೊಳ್ಳಬೇಕು, ಇತ್ಯಾದಿ ಎಲ್ಲ ಹೇಳಿ ಟಾನಿಕ್ ಬರೆದುಕೊಟ್ಟರು. ಆಗಲೇ ತಿಂಗಳಾಯಿತು. ಔಷಧಿ ಸುರುವಾಗಿ. "ನಿನ್ನ ಜೀವನಕ್ಕ ಸುಖಾ ಮಾಡಿಕೊಳ್ಳಲಾರದ ಹಣಾ ಕೂಡಿಟ್ಟು ಏನು ಮಾಡತೀ?" ಎಂದು ಒತ್ತಾಯದಿಂದ ಬೋರ್ನವಿಟಾ, ತತ್ತಿ, ಹಣ್ಣುಗಳಿಗೆ ಖರ್ಚು ಮಾಡ ಹಚ್ಚಿದ್ದಾಳೆ ಶಕುಂತಲಾ; ಹೌದು, ಅವಳಿಗಾದರೆ ಪರವೂರಿನಲ್ಲಿದ್ದ ಗಂಡ, ಮಕ್ಕಳಿಗೆ ಹಣ ಕಳಿಸಲು ಕೈ

ಹಿಡಿತದಲ್ಲಿಡಬೇಕು. ತನಗೇನೂ ಅಂಥ ಜವಾಬ್ದಾರಿ ಇಲ್ಲವಲ್ಲ. "ಹಾಯಾಗಿ, ಆರಾಮ ರಾಣೀ ಹಾಂಗ ಇದ್ದೀ, ಕಾಡವರಿಲ್ಲ, ಬೇಡವರಿಲ್ಲ." ಗೆಳತಿ ಆಗಾಗ ಹಂಗಿಸುತ್ತಾಳೆ. ತನಗಾರೂ ಇಲ್ಲವೇ?

"ಮೇ ಆಯ್ ಕಮಿನ್ ಮೇಡಂ"

"ಯಸ್" ಹುಡುಗಿ ಹತ್ತಿರ ಬಂದು ವಿನೀತಳಾಗಿ ನಿಂತಾಗ ಸುನಂದಾ ಅವಳನ್ನೇ ದಿಟ್ಟಿಸಿದಳು. ಆ ಕಪ್ಪುಕುರುಳು, ನೀಳ ಮೂಗು, ಕೊಂಚ ದಪ್ಪ ತುಟಿ .... ಎಲ್ಲಿಯೋ ನೋಡಿದ್ದೇನಲ್ಲ ಯಾರಿವಳು. ?

"ಮೇಡಂ, ಭಾಷಣ ಸ್ಪರ್ಧಾಕ್ಕ ಹೆಸರು ಕೊಡಲಿಕ್ಕೆ ಬಂದೇನಿ."

"ಯಾವ ಕ್ಲಾಸು ? ನಿನ್ನ ಹೆಸರೇನು?"

"ಎಸ್.ಎಸ್.ಎಲ್.ಸಿ. ರೀ. ಸಂಗೀತ ಪಾಟೀಲ ನನ್ನ ಹೆಸರು. ಕನ್ನಡದೊಳಗ ಯಾವ ಯಾವ ವಿಷಯ ಅದಾವ ಸ್ವಲ್ಪ ಇನ್ನೊಮ್ಮೆ ಹೇಳತೀರೇನ್ರಿ?"

ಸುನಂದಾ ಮಾತನಾಡದೇ ವಿಷಯದ ಪಟ್ಟಿ ತೆಗೆದು ಅವಳ ಕೈಗಿತ್ತು ಅವಳ ಮುಖವನ್ನೇ ಮತ್ತೆ ಮತ್ತೆ ನೋಡಿದಳು. ಆ ಹೆಸರಿನವರು ಎಷ್ಟು ಜನವೊ ಎಂದಿತು ಅವಳ ಮನಸ್ಸು. ಅತ್ತ ಲಕ್ಷ್ಯವಿಲ್ಲದೆ ಪಟ್ಟಿ ಓದುತ್ತಿದ್ದ ಸಂಗೀತಾಳ ಕಣ್ಣು ಒಮ್ಮೆಲೆ ಅರಳಿದವು.

"ಓ ಗುಡ್ ! ವರದಕ್ಷಿಣೆಯ ನಿರ್ಮೂಲನೆಯಿಂದ ಮಹಿಳೆಯರ ಉದ್ಧಾರ ಸಾಧ್ಯವಾಗಬಲ್ಲದು. ಎಷ್ಟ ಛೊಲೋ ವಿಷಯ ಅದರೀ, ನನಗ ಭಾಳ ಸೇರ್‍ತದ. ನಾನು ಅದರ ಬಗ್ಗೆ ಮಾತಾಡ್ತೇನಿ...."

"ಪರವಾಗಿಯೋ ಅಥವಾ ವಿರೋಧಿಸ್ತಿಯೋ?" ಜೀವ ತಳೆದ ಸುನಂದಾ ಉತ್ಸುಕಳಾದಳು.

"ಛೇ ಛೇ ಮೇಡಂ ಪರವಾಗೇ ಮಾತಾಡ್ತೆನಿ. ವರದಕ್ಷಿಣಾ ಪದ್ಧತಿ ನಮ್ಮ ಸಮಾಜಕ್ಕೆ ಒಂದು ಕಲಂಕ. ಎಷ್ಟು ಹೆಣ್ಣುಮಕ್ಕಳ ಜೀವನ ಸತ್ಯಾನಾಶ ಆಗಲಿಕ್ಕೆ ಹತ್ತೇದ. ಹೆಣ್ಣು ಹೆತ್ತವರ ಗೋಳು ನೋಡಲಾಸಲ್ಲ. ಇದನ್ನೆಲ್ಲಾ ನಾ ಹೇಳತೇನಿ, ಈ ಪದ್ಧತಿ ಹೋಗಬೇಕು..."

"ಸಂಗೀತಾ," ಆವೇಶ ಒಮ್ಮೆಲೆ ಕಡಿಯಿತು. ನಾಚಿದವಳಂತೆ ಮೇಡಂನ ಗಂಭೀರ ಮುಖ ನೋಡುತ್ತ, "ಸಾರಿ ಮೇಡಂ, ಇದು ವೇದಿಕೆ ಅಲ್ಲಾ ಅನ್ನೂದು ಮರತು ಭಾಷಣಾನ ಸುರುಮಾಡಿ ಬಿಟ್ಟೆ" ಎಂದು ತಿಳಿಯಾಗಿ ನಕ್ಕಳು.

"ಕೂಡ್ರು ಸಂಗೀತಾ," ಮೇಡಂನ ತುಟಿಗಳ ಅಂಚಿನಲ್ಲಿ ಕಿರುನಗೆ ಕಂಡ ಸಂಗೀತಾ ಎದುರಿನ ಕುರ್ಚಿಯಲ್ಲಿ ಕುಳಿತು, "ಮೇಡಂ, ನನಗೂ ಓದೂ ಚಟಾ ಭಾಳ ಅದ. ಅದರಿಂದ ವಿಚಾರಾನೂ ಮಾಡ್ತೇನಿ. ಈ ವಿಷಯದ ಬಗ್ಗೆ ಮಾತಾಡಲಿಕ್ಕೆ ನೀವು ಸ್ವಲ್ಪ ಹೆಲ್ಪ್ ಮಾಡತೀರಾ ನನಗ ?"

"ಸಂಗೀತಾ, ಆ ವಿಷಯ ಬಿಟ್ಟು ಬೇರೆ ಯಾವದಾದರೂ ಆರಿಸಿಕೊಂಡರ ಒಳ್ಳೆಯದು ಅಂತ ನನ್ನ ಅಭಿಪ್ರಾಯ."

ಅಚ್ಚರಿಗೊಂಡ ಸಂಗೀತಾ, "ಮೇಡಂ ಉಳಿದ ಯಾವ ವಿಷಯಾನೂ ನನಗ ಹಿಡಿಸಲಿಲ್ಲಾ. ನಮ್ಮ ಸಮಕಾಲೀನ ಜೀವನದ ಪ್ರಬಲ ಸಮಸ್ಯಾ ಅದ ಈ ವರದಕ್ಷಿಣಾ ಪದ್ಧತಿ. ಇಂತಾದರ ಬಗೆಗೆ ವಿಚಾರ ಮಾಡಬೇಕು. ಹೆಣ್ಣು ಮಕ್ಕಳಿಗಾಗಿ ನಾವು ಈ ಪದ್ಧತಿ ಪ್ರತಿಭಟಿಸಲಿಕ್ಕೇ ಬೇಕು. ಹೌದೋ, ಅಲ್ಲೋ ನೀವ ಹೇಳ್ರಿ. ನಾ ಅಂತೂ ಗಟ್ಟಿ ಮನಸ್ಸು ಮಾಡೇನಿ. ಮಾತಾಡಿದರ ಇದೇ ವಿಷಯದ ಬಗ್ಗೆ, ಇಲ್ಲಾಂದರ ಇಲ್ಲಾ."

ಸುನಂದಾ ಕನಿಕರದಿಂದ "ನೀನು ಬರೆ ಭಾಷಣಾ ಮಾಡ್ತೀಯೋ ಏನು ಜೀವನದೊಳಗ ಹೋರಾಟಾ ಮಾಡ್ತೀಯೋ" ಎಂದಳು.

ಸಿಡಿದೆದ್ದ ಸಂಗೀತಾ, "ಬರೇ ಭಾಷಣಾ ಮಾಡಿದರ ಏನು ಉಪಯೋಗ ಆಗ್ತದರೀ. ನಾನು ನುಡಿದಂತೆ ನಡದ ತೋರಿಸಲಿಕ್ಕೂ ಸಿದ್ಧ ಅದೇನಿ. ವರದಕ್ಷಿಣಾ ಇಲ್ಲದ ನನ್ನ ಮದುವೀ ಆಗಲಿಕ್ಕೆ ಒಪ್ಪಿದರ ಆಗ್ತೀನಿ. ಇಲ್ಲಾಂದರ ಕುಮಾರಿ ಆಗಿ ಉಳಿತೇನಿ. ಶಿಕ್ಷಣಾ ಪಡಿತೇನಿ. ನೌಕರಿ ಮಾಡತೇನಿ. ನನ್ನ ಕಾಲ ಮ್ಯಾಲೆ ನಾನು ನಿಲ್ಲತೇನಿ. ಬೇಕಾದರ ಬೆಟ್ ಕಟ್ರಿ. ಅವತ್ತ ನಾನು ಇದನ್ನೆಲ್ಲಾ ಹೇಳಿ ಪ್ರತಿಜ್ಞಾ ಮಾಡತೇನಿ."

ಸುನಂದಾ ಸುಮ್ಮನೆ ಕೈ ಎತ್ತಿ ಅವಳ ಮಾತಿಗೆ ಬ್ರೆಕ್ ಹಾಕಿದಳು.

"ನಿನ್ನ ಬಗ್ಗೆ ಸ್ವಲ್ಪ ವಿವರ ಹೇಳು ಸಂಗೀತಾ. ಅಂದರ ವೈಯಕ್ತಿಕವಾಗಿ."

"ನನ್ನ ತಂದೆಯವರು ಮನೋಹರ ಪಾಟೀಲ, ಬೇರೆ ಊರೊಳಗ ನೌಕರಿ ಮಾಡ್ತಾರ. ನನಗ ಇಬ್ಬರೂ ಅಣ್ಣಂದಿರು ಇದ್ದಾರ. ನನ್ನ ತಾಯಿ ಪಾರ್ವತಿ ತೀರಿಕೊಂಡು ನಾಲ್ಕು ವರ್ಷ ಆದವು. ಇಲ್ಲೇ ಸೋದರಮಾವನ ಮನಿಯೊಳಗ ಇದ್ದೀನಿ ನಾನು" ಸಂಗೀತಾಳ ಧ್ವನಿ ಕುಗ್ಗಿತ್ತು.

ಕೂಡಲೇ ಸುನಂದಾ ನಡುಗುತ್ತಿರುವ ತನ್ನ ಕೈಯಿಂದ ಗಟ್ಟಿಯಾಗಿ ಅವಳ ಕೈ ಹಿಡಿದು ಅವಳನ್ನು ಸಾಂತ್ವನಗೊಳಿಸಿ, ಆತ್ಮೀಯವಾಗಿ ಛೇಡಿಸಿದಳು. "ನಿನ್ನ ಮಾವನ ಒಬ್ಬ ಮಗಾ ಇರಬೇಕಲ್ಲ. ಅವನ್ನs ಮದುವಿ ಆಗಿಬಿಡು. ನಿನ್ನ ಸಮಸ್ಯಾ ಬಗೀಹರೀತದ" ಮೇಡಂನ ಮಾತಿನಿಂದ ಸ್ವಲ್ಪವೂ ಲಜ್ಜಿತಳಾಗದೆ ಸಂಗೀತಾ ಹೂನ್ರಿ ಇದ್ದಾನ ಆರುವರುಷದಂವಾ ಎಂದು ನಕ್ಕು, "ಮೇಡಂ ಇದು ನನ್ನೊಬ್ಬಳ ಸಮಸ್ಯಾ ಅಂತ ನಾ ತಿಳಕೊಂಡಿಲ್ಲ. ಇದೊಂದು ಗಂಭೀರ ಸಮಸ್ಯಾ ಅಂತ ತಿಳಕೊಂಡು ಅದರ ಬಗ್ಗೆ ನೀವು ಎಂದೂ ವಿಚಾರ ಮಾಡಿಲ್ಲೇನು? ಹೆಣ್ಣುಮಕ್ಕಳೆಲ್ಲಾ ಎಚ್ಚರಾಗಬೇಕು. ವರದಕ್ಷಿಣಾದ ವಿರುದ್ಧ ಆಂದೋಲನ ಹೂಡಬೇಕು ಅಂತ ನಿಮಗ ಅನಿಸೇ ಇಲ್ಲೇನು ?" ಮಾತು ಜೋಡಿಸಿದಳು.

ಬೆಲ್ ಸಪ್ಪಳ ಕೇಳಿ ಸುನಂದಾ ಪುಸ್ತಕ ಜೋಡಿಸಿಕೊಂಡು "ವಿಶ್ ಯು ಬೆಸ್ಟ್‌ಆಫ್‌ಲಕ್, ಸಂಗೀತಾ ಮತ್ತ ಭೆಟ್ಟಿ ಆಗೋಣ" ಎಂದು ಎದ್ದು ಹೊರನಡೆದಳು.

***

■■

# ಆಘಾತ

ಆಕೆ ತುಂಬಾ ದಣಿದಿದ್ದಳು. ನಡೆದು ನಡೆದು ಆಯಾಸವಾಗಿತ್ತು. ಏದುಸಿರು ಬರುತ್ತಿತ್ತು. ಮೈ ಭಾರವಾಗಿ ಸೋತು ಕಾಲೆಳೆದು ಹಾಕುತ್ತಿದ್ದಳು. ಮಗನೊಡನೆ ಅವಳು ಆ ಊರನ್ನು ಮುಟ್ಟಲೇಬೇಕಿತ್ತು. ಆಕೆ ಏಕಾಂಗಿಯಾಗಿದ್ದಳು. ಅದರಿಂದ ಜೀವ ಬೆದರಿತ್ತು. ಅಲ್ಲಲ್ಲಿ ಕುಳಿತು ವಿಶ್ರಾಂತಿ ಪಡೆದರೂ ಗುರಿ ಮುಟ್ಟಲು ನಡೆಯಬೇಕಾಗಿತ್ತು. ಮಗ ಹಸಿವು, ನಿದ್ದೆ. ನೀರಡಿಕೆ ಎಂದಾಗಲೆಲ್ಲ ಹೇಗೋ ಕಷ್ಟಪಟ್ಟು ದಾರಿಯಲ್ಲಿಯ ಮರದ ಹಣ್ಣುಗಳಿಂದ, ಕೆರೆಯ ನೀರಿನಿಂದ ಹಸಿವು ನೀರಡಿಕೆ ಹಿಂಗಿಸಿದ್ದಳು. ಮೊದಮೊದಲು ಅವನನ್ನು ಬಗಲಲ್ಲಿ ಹೊತ್ತುಕೊಂಡೇ ದಾರಿ ನಡೆದಿದ್ದಳು. ಆದರೆ ಬರಬರುತ್ತ ತನ್ನ ಮೈಯ ಶಕ್ತಿ ಕಡಿಮೆಯಾಗಿ ಅವನು ಭಾರವಾಗಿದ್ದರಿಂದ ಕೈ ಹಿಡಿದು ನಡೆಸಿಕೊಂಡು ಬರುತ್ತಿದ್ದಳು. ಬಹಳ ದೂರ ನಡೆದದ್ದರಿಂದ ತಾವು ಹೋಗಬೇಕಾದ ಊರು ಸಮೀಪ ಬಂದಿದೆ ಎಂದು ಅವಳಿಗೆ ತಿಳಿದಿತ್ತು. ಅದೋ, ಅಲ್ಲಿ ಕಾಣ್ತದಲ್ಲ ಅದೇ ಊರು. ಬಂದೇ ಬಿಟ್ಟಿತು. ಇನ್ನೇನು ದೂರವಿಲ್ಲ. ಅಲ್ಲಿಗೆ ಮುಟ್ಟಿ ಆರಾಮವಾಗಿ ಕಾಲು ಚಾಚಿ ವಿಶ್ರಾಂತಿ ತಕ್ಕೊಳ್ಳೋಣ ಎಂದು ತನಗೂ ಮಗನಿಗೂ ಕೂಡಿಯೇ ಸಮಾಧಾನ ಹೇಳಿಕೊಂಡಿದ್ದಳು. ಹುರುಪಿನಿಂದ ದೂರದಿಂದ ಕಾಣುತ್ತಿದ್ದ ಆ ಊರಿನ ಗುಡಿಯ ಕಳಸ ನೋಡುತ್ತ ತಾಯಿ, ಮಗ ಬೇಗ ಬೇಗ ಕಾಲು ಹಾಕಿದ್ದರು. ದಾರಿ ಸವೆಯುತ್ತಿತ್ತು. ಅಷ್ಟು ಜೋರಾಗಿ ನಡೆಯುತ್ತಿದ್ದವರು ಒಮ್ಮೆಲೆ ನಿಂತು ಬಿಟ್ಟರು. ಅರೇ, ಇದೇನು ದಾರಿ ಮುಗಿದೇ ಹೋಯಿತು. ಗುಡಿ ಇನ್ನೂ ದೂರವಿದೆ. ಅಲ್ಲಿಗೆ ಹೋಗೋ ದಾರಿ ಕಾಣುವುದೇ ಇಲ್ಲ. ನಾವು ಊರು ಮುಟ್ಟುವದಾದರೂ ಹ್ಯಾಗೆ? ಯಾರನ್ನು ಕೇಳಬೇಕು ? ತಾನು ಹೊರಟಿದ್ದೇ ಒಂಟಿಯಾಗಿ. ಮಗನಿಗೆ ದಣಿವಾಗಿ ಕಾಲು ಸೋತು ತಲೆ ತಿರುಗಿ ನೆಲಕ್ಕೆ ಕೂತೇ ಬಿಟ್ಟ. ಅವ್ವ ನೀರು ... ನೀರು ಬೇಕು ಎಂದು ಬಾಯಿ ಬಾಯಿ ಬಿಟ್ಟ. ಅವಳು ಆಸೆಯಿಂದ ಅತ್ತಿತ್ತ ನೋಡಿದಳು. ಹತ್ತಿರ ಎಲ್ಲೂ ನೀರಿಲ್ಲ. 'ತಮ್ಮಾ ಈ ಗಿಡದ ನೆಳ್ಳಿಗೆ ಕೂತಿರು. ನಾ ಅಡ್ಡ ದಾರಿ ಹಿಡಿದು ಹೋಗಿ ನೋಡ್ತೇನೆ ಹೊಲದಾಗ ಬಾವಿ ಇದ್ದೀತು' ಎಂದು ಮಗನನ್ನು ಬಿಟ್ಟು ಹೊರಟಳು. ಹೌದು, ಅವಳ ಎಣಿಕೆಯಂತೆ ಹತ್ತಿರದಲ್ಲೇ ಒಂದು ಬಾವಿ ಇತ್ತು. ಹೊಕ್ಕು ತುಂಬುವ ಬಾವಿ. ಸಡಿಲಾಗಿ ಸೊಟ್ಟಾಗಿದ್ದ ಪಾವಟಿಗೆಗಳ ಮೇಲೆ ನಿಧಾನವಾಗಿ ಒಂದೊಂದು ಕಾಲಿಡುತ್ತ ಇಳಿದು ನೀರಿನ ಹತ್ತಿರ ಬಂದಳು. ನೀರಿಗೆ ಬೊಗಸೆಯೊಡ್ಡಬೇಕೆಂದು ಬಗ್ಗಿದಳು ಬೆನ್ನ ಮೇಲೇನೋ ಭಾರ ಬಿದ್ದಂತಾಗಿ ಮೈ ಕೊಡವಿದಳು. ಭಾರ ಸರಿಯಲಿಲ್ಲ. ಬದಲು ಅವಳ ಕುತ್ತಿಗೆ ಬಿಗಿಯಹತ್ತಿತ್ತು. ಪಿಶಾಚಿಯೊಂದು ತನ್ನ ಬೆನ್ನ ಮೇಲೇರಿ ಕುಳಿತು ಕುತ್ತಿಗೆ ಹಿಚುಕುತ್ತಿದೆ ಎಂದು ತಿಳಿದು ಚಳ್ಳನೆ ಬೆವೆತಳು. ಸೀರೆ ಒದ್ದೆಯಾಯಿತು. ಆ ಬಿಗಿ ಮುಷ್ಟಿಯಿಂದ ತನ್ನ ಕುತ್ತಿಗೆ ಬಿಡಿಸಿಕೊಳ್ಳಲು ವಿಲಿ ವಿಲಿ ಒದ್ದಾಡಿದಳು. ಒಂದೇ ಸವನೆ ಚೀರಲು ಶುರುಮಾಡಿದಳು... 'ಅವ್ವಾ, ಅವ್ವಾ ಯಾಕವ್ವ ? ಎಚ್ಚರಾಗು ಅವ್ವಾ' ಮಗ ಹತ್ತಿರ ಕುಳಿತ ಅವಳನ್ನು ಅಲುಗಾಡಿಸುತ್ತ ಕರೆಯುತ್ತಿದ್ದ. ಪಟಕ್ಕನೆ ಎದ್ದು ಕೂತಳು ಸಾವಿತ್ರಿ. "ಎಂಥಾ ಕೆಟ್ಟ ಕನಸು ಬಿದ್ದಿತ್ತಪ್ಪಾ ಮನು. ನಾನು ಚೀರಿದೆನೇ?"

'ಸ್ಪಷ್ಟಾಗಿ ಅಲ್ಲಾ, ಏನೋ ಒಂದು ತರಾ ದನಿ ಮಾಡಿ ಒದರುತ್ತಿದ್ದಿ' ಸಾವಿತ್ರಿ ತನ್ನ ಕನಸನ್ನು ಮಗನಿಗೆ ವರ್ಣಿಸಿ ಹೇಳಿ ನಡುಗಿದಳು.

"ಬಿಡವ್ವಾ, ಅಷ್ಟ್ಯಾಕ ಹೆದರತಿದಿ. ನಿನಗೂ ವಯಸ್ಸಾತು. ಏನೋ ಸ್ವಲ್ಪ ಬಿ.ಪಿ. ಅದ. ಡಾಕ್ಟರು ಔಷಧ ಕೊಡತಾರ. ವಿಶ್ರಾಂತಿ ತೊಗೋ. ಕಾಳಜಿ ಮಾಡಬ್ಯಾಡಾ. ಎಲ್ಲಾ ಆರಾಮ ಆಗ್ತದ. ನಾ ಅದೀನಿ. ನಿನ್ನ ಹೂವಿನಾಂಗ ನೋಡಿಕೋಳ್ತೀನಿ ಅತಿಲ್ಲೋ', ಅವ್ವನ ಕೈ ಸವರುತ್ತಿದ್ದ ಮನು.

'ಮನು ನಾಳೆ ಮಾನಿಂಗಜ್ಜನ ಕೂಡ ಕನ್ಯಾ ನೋಡಲಿಕ್ಕೆ ಹೋಗಬೇಕಲ್ಲವ ?'

"ಈಗಿನ್ನೂ ನಾಲ್ಕು ಹೊಡದದ, ನಮ್ಮ ಬಸ್ಸು ಒಂಬತ್ತಕ್ಕ ಅದ ಅವ್ವ. ಒಂದೆರಡ ತಾಸು ಆರಾಮಾಗಿ ಮಲಕೋ. ಆ ಕನಸು ಗಿನಸು ಎಲ್ಲಾ ಮರತಬಿಡು.'

'ಹೋಗಪ್ಪ ಮನು, ನೀ ಮಲಕ್ಕೋ ಹೋಗು. ನನಗ ನಿದ್ದೆ ಬರ್ತದೋ ಇಲ್ಲೋ ನೋಡ್ತೀನಿ.' ಸಾವಿತ್ರಿ ಮತ್ತೆ ಉರುಳಿಕೊಂಡು ರಗ್ಗು ಕುತ್ತಿಗೆಯವರೆಗೆ ಎಳೆದುಕೊಂಡಳು.

ಮಗ ಎದ್ದು ಹೋದರೂ ಅವನಾಡಿದ ಸಾಂತ್ವನದ ಮಾತು, ಅವನ ಮೆತ್ತಗಿನ ಹಿಡಿತ ಸಾವಿತ್ರಿಯ ಮನಸ್ಸನ್ನು ತಟ್ಟಿ ಗಾಬರಿ, ಕಳವಳದಿಂದ ಡಬಡಬ ಬಡಿದು ಕೊಳ್ಳುತ್ತಿದ್ದ ಎದೆ ಸಾವಕಾಶವಾಗಿ ಹಿಡಿತಕ್ಕೆ ಬಂದು ಕಣ್ಣು ಮುಚ್ಚಿದಳು. ರೆಪ್ಪೆ ಕೂಡಿದರೂ ನಿದ್ದೆಯೊಂದು ಇಳಿಯಬೇಕಲ್ಲ? ಮನಸ್ಸು ಕಕ್ಕಾಬಿಕ್ಕಿಯಾಗಿತ್ತು. ಕನಸು ಕಂಡ ಗಾಬರಿಗಿಂತ ಈಗ ಮರುದಿನ ಕನ್ಯಾ ನೋಡಲು ಹೋಗುವ ಸಂಗತಿ ಅವಳ ಒಳ ಹೊಕ್ಕು, ಕೈ, ಕಾಲು ಬಾಯಿಗಳಿಂದ ಜೀವ ಪಡೆಯಿತು. ಮತ್ತೆ ಮತ್ತೆ ಹೊರಳಾಡಿ ರಗ್ಗು ಎಳೆದೆಳೆದು ಹೊದ್ದುಕೊಂಡಳು. ಮೃದುವಾದ ತುಪ್ಪಳವಿದ್ದ ಹೊದಿಕೆಯದು. ಹೊತ್ತರೂ ಮೈಮೇಲೆ ಭಾರವಿಲ್ಲ. ಬೆಚ್ಚಗೆ ಹಿತವಾಗಿತ್ತು. ಮನು ಇಂಜಿನಿಯರಿಂಗ್ ಕೊನೆಯ ವರ್ಷದಲ್ಲಿದ್ದಾಗ ಉತ್ತರ ಭಾರತದ ಪ್ರವಾಸಕ್ಕೆ ಹೋಗಿ ದಿಲ್ಲಿಯಿಂದ ಅವ್ವನಿಗೆಂದೇ ರಗ್ಗು ತಂದಿದ್ದ. ಅದನ್ನು ಅವಳಿಗೆ ಹೊದಿಸಿ ಸಂತೋಷಪಟ್ಟಿದ್ದ. ಪುಟ್ಟ ಮನುವನ್ನು ತನ್ನ ದೇಹಕ್ಕೆ ಒತ್ತಿಕೊಂಡು ಹೊಚ್ಚುತ್ತಿದ್ದುದು ಅವಳಿಗೆ ನೆನಪಾಗಿತ್ತು. ಮಗನ ಪ್ರೀತಿ ಮನಸ್ಸಿನ ತುಂಬಾ ತುಂಬಿ ತುಳುಕಾಡಿದಾಗ ಅದರ ಭಂಡಾರವನ್ನಿಷ್ಟು ಯಾರ ಮುಂದಾದರೂ ಒಡೆಯಬೇಕೆಂದು ಅಕ್ಕನೆದುರು ಹೇಳಿದ್ದಳು ಸಾವಿತ್ರಿ. ಒಂದು ಗಳಿಗೆ ಸುಮ್ಮನಿದ್ದು, ಆಗಲೆ ತಲೆ ನೆರೆಯುತ್ತಿದ್ದ ಅಕ್ಕ ತನ್ನ ಅನುಭವವನ್ನು ತಂಗಿಯೊಡನೆ ಹಂಚಿಕೊಂಡಿದ್ದಳು.

"ಸಾವೂ, ನಿನಗ ಒಬ್ಬನ ಮಗ, ನಿನ್ನ ಪ್ರೀತಿ ಎಲ್ಲಾ ಅವನಿಗೇ ಕೊಟ್ಟೀದಿ. ಅವನೂ ನಿನ್ನ ಪ್ರೀತಿ ಮಾಡ್ತಾನ. ಆದರೆ ಅವನ ಪ್ರೀತಿ ಹಂಚಿಕೊಳ್ಳಲಿಕ್ಕೆ ಇನ್ನೊಬ್ಬಳು ಬಂದ ಮ್ಯಾಲೆ ಅವನೂ ಬದಲು ಆಗ್ತಾನ. ನೀನು ಪರಿಸ್ಥಿತಿಗೆ ಹೊಂದಿಕೊಳ್ಳಲಿಕ್ಕೆ ಈಗಿನಿಂದ ಮನಸ್ಸು ಗಟ್ಟಿಮಾಡಿಕೊಳ್ಳಬೇಕು ಅಂತ ಈ ಮಾತು ಹೇಳಿದೆ. ನಿನ್ನ ನೋಯಿಸಬೇಕು ಅಂತ ಅಲ್ಲಾ."

ರಗ್ಗಿನೊಳಗೆ ಮಿಸುಕಾಡುತ್ತಿದ್ದಳು ಸಾವಿತ್ರಿ. ಹುಡುಗಿ ನೋಡಲು ಹೋಗಬೇಕೆಂದರೆ ತನಗೆ ಏಕಿಷ್ಟು ಕಸಿವಿಸಿ? ಸೊಸೆ ಬರುತ್ತಾಳೆಂದು ಸಂಭ್ರಮ ಪಡಬೇಕು. ತಾನಂತೂ ಸೌಭಾಗ್ಯ ಕಳೆದುಕೊಂಡು ಇಪ್ಪತ್ತೈದು ವರ್ಷಗಳೇ ಕಳೆದವು. ಮಗನ ಮನಸ್ಸಿಗೆ ಒಪ್ಪುವ ರೂಪ. ವಿದ್ಯೆ ಎಲ್ಲದರಲ್ಲಿ ಅನುರೂಪಳಾದ ಸೊಸೆಯನ್ನು ಹುಡುಕುತ್ತ ಈಗ ಮೂರು ವರ್ಷಗಳೇ ಕಳೆದವು. ಒಂದಿದ್ದರೆ ಒಂದಿಲ್ಲ. ಒಂದು ಕುರೂಪಿ, ಒಂದು ಕುಳ್ಳಿ, ಇನ್ನೊಂದು ಗಂಡುಬೀರಿ. ಮತ್ತೊಂದಕ್ಕೆ ವಿದ್ಯೆಯಿಲ್ಲ. ಮನೆತನ ಚೆನ್ನಾಗಿಲ್ಲ ಎಂದು ಎದೆಯಲ್ಲಿ ದುಗುದುಗಿ, ಮೈಯಲ್ಲಿ ಅಸ್ವಸ್ಥತೆ. ಮಗನ ಮನಸ್ಸಿಗೆ ಬಂದಿಲ್ಲವೆಂದು ತಿಳಿದೊಡನೆ ಭಾರ ಇಳಿದಂತಾಗಿ ಮನ ಮುದಗೊಳ್ಳುತ್ತಿತ್ತು. ತನಗೆ ಹೀಗೇಕಾಗುತ್ತದೆ? ಎಲ್ಲ ತಾಯಂದಿರೂ ಹೀಗೆ ಚಡಪಡಿಸುತ್ತಾರೆಯೇ? ತನ್ನ ಜೀವನದಲ್ಲಿ ಇರುವದು ಮನು ಒಬ್ಬನೇ. ಅವನು ಸುಖವಾಗಿರುವುದು ತನಗೆ ಬೇಡವೆ? ಹುಚ್ಚು ! ತನಗೆಲ್ಲೋ ಹುಚ್ಚು. ಮನು ದೊಡ್ಡವನಾಗಿ ಒಬ್ಬ ಮನುಷ್ಯನಾಗಲೆಂದೇ ತಾನು ಈ ವರ್ಷಗಳನ್ನೆಲ್ಲ ಬದುಕಿದ್ದು. ಅವನ ಸುಖ ದುಃಖಗಳನ್ನೆಲ್ಲ ತನ್ನವು ಎಂದು ತಿಳಿದದ್ದು.

ನೌಕರಿ ಮಾಡಿ ಬಂದು ಮನೆಯನ್ನೂ ಮಗನನ್ನೂ ನೋಡಿಕೊಂಡು ಗಂಡು-ಹೆಣ್ಣಿನ ಇಬ್ಬರ ಕೆಲಸವನ್ನೂ ಒಬ್ಬಳೇ ಮಾಡಿದ್ದರಿಂದ ಶರೀರ ದಣಿದಿದೆ. ಜೊತೆಗೆ ವಯಸ್ಸಾಗುತ್ತಿದೆ. ಬಿ.ಪಿ. ಇದೆ. ಅದರಿಂದ ಈ ರೀತಿ ಕಳಕಳಿ, ಚಿಂತೆ ಇದೆಯೇ ಹೊರತು, ಈಗ ಮದುವೆಯಾದರೆ ಅವನ ಪ್ರೀತಿ ಕಡಿಮೆಯಾಗುತ್ತದೆ ಅನ್ನೋ ಭಯ ಏನಿಲ್ಲ ತನಗೆ. ಮಗನಿಗೆ ಹೆಂಡತಿ ಬಂದ ಮೇಲೆ ತಾಯಿ-ಹೆಂಡತಿ ಇಬ್ಬರನ್ನೂ ನೋಡಿಕೊಳ್ಳುವ ಜವಾಬ್ದಾರಿ ಅವನಿಗೆ ಬೀಳ್ತದೆ. ತಾಯಿ - ಹೆಂಡತಿ ಇಬ್ಬರೂ ಪ್ರೀತಿ, ಅಂತಃಕರಣದಿಂದ ಬೆರೆತುಕೊಂಡರೆ ಮಗನ ಶ್ರಮ ಕಡಿಮೆಯಾಗ್ತದೆ. ಮುಖ್ಯ ಇದಕ್ಕೆಲ್ಲಾ ತಿಳುವಳಿಕೆ ಬೇಕು. ಒಂದು ವೇಳೆ ಚಿಕ್ಕವರಲ್ಲಿ ಆ ತಾಳ್ಮೆ, ತಿಳುವಳಿಕೆ

ಕಡಿಮೆಯಾದರೆ ಹಿರಿಯಳಾದ ತಾನೂ ಆ ಕೊರತೆ ತುಂಬಿಸಬೇಕು. ಛೇ, ಮನುನ ವಿಷಯಕ್ಕೆ ತಾನು ಸಣ್ಣ ಮನಸ್ಸು ತೋರುವದು, ಅವನ ಅಂತಃಕರಣಕ್ಕೆ ಶಂಕೆ ಪಡುವದು ತಪ್ಪು, ಶುದ್ಧ ತಪ್ಪು ಇಂಥ ಯೋಚನೆ. ಅವನಿಗಾಗಿ ತಾನು ಬದುಕಿನಲ್ಲಿ ಏನೇನೆಲ್ಲ ಸಹಿಸಿದವಳು ಇಲ್ಲವಾದರೆ ಎಂದೋ ತಾನು ಸತ್ತು ಹೋಗಬೇಕಿತ್ತು. ಎಷ್ಟೋ ವರ್ಷಗಳ ಹಿಂದೆಯೇ ತಾನು ಸಾಯಬೇಕಿತ್ತು.

ತಪ್ಪು ತಪ್ಪು ಹೆಜ್ಜೆಯಿಟ್ಟು ಆಗ ತಾನೇ ನಡೆಯಲು ಕಲಿಯುತ್ತಿದ್ದ ಮನುವಿನೊಡನೆ ಪ್ರಕಾಶನ, ತನ್ನ ಸಂಸಾರ ತುಂಬ ಮಧುರವಾಗಿತ್ತು. ಸರಸಿ, ವಿದ್ಯಾವಂತ ಪತಿ, ಒಳ್ಳೆಯ ಸಂಬಳದ ನೌಕರಿ, ಅಚ್ಚುಕಟ್ಟಾದ ಮನೆ, ಇವೆಲ್ಲಕ್ಕೆ ಕಳಸವಿಟ್ಟಂತೆ ಮುದ್ದಾದ ಗಂಡುಮಗು. ಸರ್ವಜ್ಞನ ಮಾತಿನಲ್ಲಿ ಸ್ವರ್ಗಕ್ಕೆ ಕಿಚ್ಚು ಹಚ್ಚುವ ಸಂಸಾರ. ಆದರೆ ಆ ದಿನ ತನ್ನ ಬಾಳಿಗೇ ಕಿಚ್ಚು ಬಿದ್ದಿತ್ತು. ಸ್ಕೂಟರಿಗೆ ಲಾರಿ ಡಿಕ್ಕಿ ಹೊಡೆದು ಪ್ರಕಾಶ ತಕ್ಷಣ ಸಾವನ್ನಪ್ಪಿದ್ದ. ಆಫೀಸಿಗೆ ಹೋಗುವ ಮುನ್ನ ದಿನದಂತೆ ತನ್ನ ಜಡೆ ಎಳೆದು ಗಲ್ಲ ಹಿಂಡಿ, ಮನೂನ ಕೆನ್ನೆಗೆ ಮುತ್ತುಕೊಟ್ಟು ಹೊರಟು ಹೋಗಿದ್ದ. ಅವನ ದೇಹ ಮನೆಗೆ ಬಂದಾಗ ಸುದ್ದಿ ತಿಳಿದರೂ ನಂಬದಂತೆ ಕುಳಿತಿದ್ದ ತಾನು ಚೀರಿ ಮೂರ್ಛೆ ಹೋಗಿದ್ದಳು. ತಿರುಗಿ ತನಗೆ ಎಚ್ಚರವಾದಾಗ ಬಳಗದವರೆಲ್ಲ ತನ್ನ ಸುತ್ತಿದ್ದರು. ಮನು ತನ್ನ ಮೇಲೆ ಬಿದ್ದು ಅತ್ತಾಗಲೇ ತಾನು ಈ ಭೂಮಿಗೆ ಇಳಿದದ್ದು. 'ಹೋಮ್ ದೇ ಬ್ರಾಟ್ ಹರ್ ವಾರಿಯರ್ ಡೆಡ್'. ಪ್ರಕಾಶ ಅರ್ಧ ಯುದ್ಧದಲ್ಲೆ ಕೈಬಿಟ್ಟು ಹೋಗಿದ್ದ. ಆದರೆ ಮನುವಿಗಾಗಿ ತಾನು ಬದುಕಬೇಕಿತ್ತು. ಹೋರಾಡಬೇಕಿತ್ತು. ಸೋಲೋ, ಗೆಲುವೋ ಯಾವುದು ಕಾದಿದೆಯೋ ಗೊತ್ತಿಲ್ಲ. ಹೋರಾಟ ಮಾತ್ರ ನಿಜ. ಮನುವನ್ನು ಹತ್ತಿರ ಎಳೆದು ತಬ್ಬಿಕೊಂಡು ತಾನು ಬಿಕ್ಕಿ ಬಿಕ್ಕಿ ಅತ್ತಾಗ ಬಳಗವೆಲ್ಲ ಸಮಾಧಾನದ ಉಸಿರು ಬಿಟ್ಟಿತ್ತು. ಇಂಥ ಪರಿಸ್ಥಿತಿಯಲ್ಲಿದ್ದ ಹೆಣ್ಣು ಎಲ್ಲರಿಗೂ ಭಾರ. ಗಂಡನ ಅಣ್ಣ-ಅತ್ತಿಗೆಯರು, ನಾದಿನಿಯರು ದಿನ ಕರ್ಮಗಳಾದ ಮೇಲೆ ತಮ್ಮಷ್ಟಕ್ಕೆ ತಾವು ಹೊರಟು ಹೋದರು. ತವರು ಮನೆಯವರ ಕರುಳು; 'ನಮ್ಮ ಜೊತೆಗೆ ಬಂದು ಬಿಡು. ಇಲ್ಲಿ ಇದ್ದರೆ ಸುಮ್ಮನೆ ಅಳುತ್ತ ಕೂಡ್ರುತ್ತೀ' ಎಂದು ಅಣ್ಣ' ಅಪ್ಪ ಕರೆದರು. ಜನ ನಿಮಿತ್ಯಕ್ಕೆ ಅತ್ತಿಗೆಯೂ ದನಿಗೂಡಿಸಿದಳು. ತಾಯಿ ಇಲ್ಲದ ಮನೆ ಹೆರವರ ಮನೆ ಎನಿಸಿತು. ಮಗಳ ಕಷ್ಟದಲ್ಲಿ ಹತ್ತಿರ ಕರೆದು ಕೊರಳು ತಬ್ಬಿಕೊಂಡು ಸೆರಗು ಹೊಚ್ಚಿ ಆಸರೆ ಕೊಡುವ ತಾಯಿಯೇ ಇಲ್ಲದ ಮೇಲೆ ಯಾವ ಮನೆಯಾದರೇನು 'ಈಗ ಬೇಡ. ನನ್ನ ಮನಸ್ಸಿಗೆ ಇಲ್ಲಿಯೇ ಸಮಾಧಾನವಿದೆ. ಮುಂದೆ ನೋಡೋಣ' ಎಂದು ಹೇಳಿ ಕಳಿಸಿದೆ. ಅಪ್ಪ ಒಬ್ಬರು ನನ್ನ ಜೊತೆಯಲ್ಲೇ ಉಳಿದರು. ನನ್ನದೇ ಮನೆಯಲ್ಲಿ ಮನೆಕೆಲಸ, ಜವಾಬ್ದಾರಿ ಎಲ್ಲ ನನ್ನದೇ. ಪ್ರಕಾಶನ ನೆನಪು ತಿವಿದು ತಿವಿದು ಗಾಸಿಗೊಳಿಸುತ್ತಿದ್ದರೂ ಅಳುತ್ತ ಕೂಡ್ರಲು ಬಿಡುವಿಲ್ಲದಷ್ಟು ಕೆಲಸವಿರುತ್ತಿತ್ತು. ಅಪ್ಪ ವಯಸ್ಸಾದವರು. ಈ ಪೆಟ್ಟಿನಿಂದ ಇನ್ನೂ ಮೆತ್ತಗಾಗಿದ್ದರು. ಮನು ತುಂಬಾ ಚಿಕ್ಕವನು. ಇಬ್ಬರಿಗೂ ನಾನು ಬೇಕು. ಆಫೀಸಿನ ಕಾಗದ ಪತ್ರಗಳು, ಜೀವ -ವಿಮೆ, ಫಂಡಿನ ಹಣ ಇತ್ಯಾದಿ ಕೆಲಸವನ್ನೆಲ್ಲ ಪ್ರಕಾಶನ ಸಹೋದ್ಯೋಗಿಗಳು ವಹಿಸಿಕೊಂಡಿದ್ದರು. ಮನೆ ಮಾಲಿಕರು ತುಂಬಾ ಒಳ್ಳೆಯವರು, ನೆರೆಯವರೂ ಅಷ್ಟೆ. ಎಲ್ಲರೂ ಒಂದಿಲ್ಲ ಒಂದು ವಿಧದಲ್ಲಿ ಸಹಾಯ ಮಾಡುತ್ತಿದ್ದರು.

ಮೂರು ತಿಂಗಳು ಕಳೆಯಿತು. ತನ್ನ ಮನಸ್ಸು ಒಂದು ಥರ ಕಲ್ಲಿನಂತಾಗಿತ್ತು. ಕಣ್ಣೀರು ಬತ್ತಿ ಹೋಗಿತ್ತು. ತನ್ನ ಮುಂದಿನ ಜೀವನದ ಬಗ್ಗೆ ವಿಚಾರ ಮಾಡಲೇಬೇಕಾದ ಸಮಯ ಬಂದಿತ್ತು. ಅಪ್ಪ ತನ್ನೊಡನೆ ಎಷ್ಟು ದಿನ ಇಲ್ಲಿ ನಿಂತಾರು? ಅವರ ಜೀವ ತಮ್ಮ ಮನೆಗೇ ಎಳೆಯುತ್ತಿತ್ತು. ಜೊತೆಗೆ ತನ್ನನ್ನು ಅಲ್ಲಿಗೇ ಬರುವಂತೆ ಬಲವಂತ ಮಾಡುತ್ತಿದ್ದರು. ತಾನು ಚಿಕ್ಕವಳಾದರೂ ಈ ದುರಂತ ತನಗೆ ವಯಸ್ಸಿಗೆ ಮೀರಿದ ಅನುಭವ ತಂದುಕೊಟ್ಟಿತ್ತು.

'ಅಪ್ಪ, ನಾನು ಪದವೀಧರೆ. ಇವರ ಆಫೀಸಿನಲ್ಲೆ ಒಂದು ನೌಕರಿ ಸಿಗ್ತದೆ. ನನ್ನ ಕಾಲ ಮೇಲೆ ನಾನು ನಿಲ್ಲಬೇಕು. ಮಗನನ್ನೂ ಬೆಳೆಸಬೇಕು. ಬೇರೆಯವರಿಗೆ ಭಾರವಾಗಬಾರದು. ನಾನು ಇಲ್ಲೆ ಇರ್ತೀನಿ' ಇದು ನನ್ನ

ವಾದ. 'ನೀನು ನೌಕರಿ ನಮ್ಮ ಊರಿನಲ್ಲಿ ಮಾಡಬಹುದಲ್ಲ ಇಲ್ಲಿ ಒಬ್ಬಳೇ ಹೇಗಿರ್ತಿ' ಎಂದು ಅವರ ಮನ ಒಲಿಕೆಯ ಮಾತು. ತನಗೋ ಅತ್ತಿಗೆಯ ಕೈಯಲ್ಲಿ ತಾನು ಬಾಳ ಬೇಕಲ್ಲ ಎನ್ನುವ ಕುದಿತ. ಬಾಯಿಬಿಟ್ಟು ಹೇಳಿ ಮನಸ್ಸು ನೋಯಿಸದೆ ಹಾಗೇ ದಿನ ಮುಂದೂಡುತ್ತಿದ್ದಳು.

'ಮಗಳನ್ನು ನೋಡೋದಕ್ಕೆ ಬರ್ತಾರೆ. ನೀವು ಬರಲೇಬೇಕು' ಎಂದು ಅಪ್ಪನಿಗೆ ಅಣ್ಣನಿಂದ ಕರೆ ಬಂದಿತು. ಅಪ್ಪ ಊರಿಗೆ ಹೋಗುವ ಮೊದಲು ಮನೆಯ ಮಾಲಿಕರಿಗೆ 'ಸಾವಿತ್ರಿ ಒಬ್ಬಳೇ ಇರ್ತಾಳೆ ಜೋಪಾನ ' ಎಂದು ಎರಡೆರಡು ಸಲ ಹೇಳಿ ಹೋದರು. ನನಗೆ ಒಂದು ಥರಾ ಮುಜುಗರ. 'ಅಪ್ಪಾ ಯಾಕಿಷ್ಟು ಚಿಂತೀ ಮಾಡ್ತೀರಿ. ನಾನು ಏನು ಸಣ್ಣಾಕಿ ಅಲ್ಲ, ಧೈರ್ಯವಾಗಿ ಇರ್ತೀನಿ. ಮಾಲಕರ ಮನಿಯೊಳಗ ಸಾಕಷ್ಟು ಮಂದಿ ಇದ್ದಾರ. ಅವನ ಮಗನ ಗೆಳೆಯಾ ಊರಿಗೆ ಬಂದಾರ, ರಾತ್ರಿ ಭಾಳ ಹೊತ್ತು ಇಸ್ಪೇಟ್ ಆಡತಾರ. ಹರಟೇ ಹೊಡೀತಾರ. ಉಲುವು ಇರ್ತದ. ನೀವೇನು ಕಾಳಜೀ ಮಾಡಬ್ಯಾಡ್ರಿ ಹೋಗಿ ಬರ್ರಿ' ಎಂದು ಕೆಟ್ಟ ಧೈರ್ಯದಿಂದ ಅವರನ್ನು ಕಳಿಸಿದೆ.

ನನ್ನ ಇಪ್ಪತ್ತೈದು ವರ್ಷದ ಜೀವನದಲ್ಲಿ ನಾನು ಹತ್ತಿರದಿಂದ ಕಂಡದ್ದು ನಾಲ್ಕಾರು ಜನ ಗಂಡಸರನ್ನು ಮಾತ್ರ ಅಪ್ಪ , ಅಣ್ಣ, ಪ್ರಾಶ, ಅವನ ಜೀವದ ಗೆಳೆಯರು, ನನ್ನ ಅಧ್ಯಾಪಕರು ಹೀಗೆ ಸಣ್ಣ ಪಟ್ಟಿ. ಎಲ್ಲಾ ಒಳ್ಳೆಯವರೇ. ಚೆನ್ನಾಗಿ ನಗುನಗುತ್ತ ನಾಲ್ಕು ಮಾತಾಡಿ ನನ್ನ ಅಡಿಗೆಯನ್ನು, ಮನೆಯ ಅಚ್ಚುಕಟ್ಟುತನವನ್ನು ಹೊಗಳಿದರೆ ಆಯಿತು, ತನಗೆಲ್ಲ ಒಳ್ಳೆಯವರೇ. ಆ ಒಳ್ಳೆಯ ಮನುಷ್ಯನ ಅಂತರಂಗ ಹೇಗಿದೆ, ಅವನ ಭಾವನೆಗಳು, ಯೋಚನೆಗಳು ಯಾವ ದಿಕ್ಕಿನಲ್ಲಿ ಓಡ್ತವೆ ಇವೆಲ್ಲ ತನಗೆ ನಿಲುಕಲಾರವು. ಸೂಕ್ಷ್ಮವಾಗಿ ನೋಡಿ ಅರಿತುಕೊಳ್ಳಬೇಕೆನ್ನುವ ಬುದ್ಧಿಯೂ ಇರಲಿಲ್ಲ ಆ ವಯಸ್ಸಿಗೆ, ಆದರೆ ನನ್ನ ಮಟ್ಟಿಗೆ ನಾನು ಮಹಾ ಬುದ್ಧಿವಂತಳು. ಯಾರಿಗೂ ಇಲ್ಲದ ತಿಳುವಳಿಕೆಯಿಂದ ವರ್ತಿಸುವವಳು ನಾನು. ನನ್ನ ವೈಧವ್ಯಕ್ಕೆ ಗಾಂಭೀರ್ಯದ ಜೊತೆ ಬೇಕೇಬೇಕಿತ್ತು. ಉಳಿದ ನನ್ನ ವಯಸ್ಸಿನ ಹುಡುಗಿಯರಂತೆ ಎಲ್ಲ ಸಣ್ಣ ಮಾತಿಗೂ ಹಲ್ಲು ಕಿಸಿದು ನಗುವಂತಿರಲಿಲ್ಲ. ಈ ನನ್ನ ನಡವಳಿಕೆ ನನಗೆ ಅಕ್ಕನ ಪಟ್ಟವನ್ನೇ ಕಟ್ಟಿದವು. ಮನೆಗೆ ಬರುವ ತರುಣರೆಲ್ಲ ತನ್ನನ್ನು ಅಕ್ಕ ಎಂದೇ ಕರೀತಿದ್ದರು. ಅಪ್ಪ ಊರಿಗೆ ಹೋದ ಮರುದಿನ ಮುಂಜಾನೆ ಮನು ನೆರೆ ಮನೆಯಲ್ಲಿ ಆಟ ಆಡುತ್ತಿದ್ದ. ನಾನು ಸ್ನಾನಕ್ಕೆ ಹೊರಟಿದ್ದೆ.

'ಶಮ್ಮೀ ಅಕ್ಕ ಏನ್ಮಾಡ್ತಿರಿ?" ಪ್ರಕಾಶ ತನ್ನನ್ನು ಶಮ್ಮೀ ಎಂದೇ ಕರೆಯುತ್ತಿದ್ದ.

'ಬರ್ರಿ ಸುರೇಶ ಕೂಡ್ರಿ. ಸ್ನಾನಕ್ಕೆ ಹೊರಟಿದ್ದೆ.' ಒಳಗಿನಿಂದಲೇ ಹೇಳಿದೆ. ಸುರೇಶ ಮಾಲಕರ ಮಗ, ಶರದನ ಗೆಳೆಯ, ಉತ್ತರ ಭಾರತದಲ್ಲಿ ನೌಕರಿಯಲ್ಲಿದ್ದ. ರಜೆಯಲ್ಲಿ ಬಂದಿದ್ದ. ನಾಲ್ಕಾರು ಸಲ ತಮ್ಮ ಮನೆಗೂ ಮನುವಿನೊಡನೆ ಆಡಲು, ಮ್ಯಾಗಝಿನ್ ಕೇಳಲು, ಕ್ಯಾಸೆಟ್ ಕೇಳಲು ಬಂದಿದ್ದ. ಸುಮಾರು ನನ್ನ ವಯಸ್ಸಿನವನೇ.

'ನಿಮ್ಮನ್ಯಾಗ ಪಂಕಜ್‌ಮಲಿಕ್‌ನ ರಿಕಾರ್ಡ್ ಅದ ಅಂತ ಕೇಳಿದೆ. ನನಗ ಅವನ ಹಾಡು ಭಾಳ ಪ್ರೀತಿ. ಒಂದು ರೀತಿ ಹುಚ್ಚು ಅನ್ರಿ, ಕೇಳಿಲಿಕ್ಕಂತ ಬಂದೆ. ಸಾರಿ, ನಿಮಗೆ ತ್ರಾಸ ಕೊಟ್ಹಾಂಗ ಆಯ್ತು. ನಾ ಆಮ್ಯಾಲೆ ಬರ್ತೀನಿ.' ಆಗಲೇ ಬ್ಲೌಜು ಕಳೆದಿದ್ದ ನಾನು ಮೈತುಂಬ ಸೆರಗು ಹೊದ್ದು, ಬಾಗಿಲ ಹತ್ತಿರ ಬಂದು ಹೇಳಿದೆ. 'ಇರಲಿ ಕೂಡ್ರಿ ಸುರೇಶ. ಅಲ್ಲೆ ಶೆಲ್ಫಿನ ಮೇಲೆ ರೆಕಾರ್ಡ್ ಅದ. ತಗದ ಹಾಕ್ರಿ. ನಾ ಸ್ನಾನಕ್ಕೆ ಹೋಗ್ತೀನಿ.'

ಬೇಗ ಬೇಗ ನೀರು ಸುರಿದುಕೊಳ್ಳುತ್ತಿದ್ದ ತನಗೆ ಬಚ್ಚಲಿನಲ್ಲೂ ಪಂಕಜನ ಗಂಭೀರ ಧ್ವನಿಯಲ್ಲಿ 'ದೋ ನೈನಾ ಮತವಾಲೆ ' ಕೇಳುತ್ತಿತ್ತು. ಪ್ರಕಾಶನ ಪ್ರೀತಿಯ ಹಾಡು ಅದು. ಅದನ್ನು ಹಾಕಿದಾಗೆಲ್ಲ ಪ್ರಕಾಶ ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ. ಬಿಸಿ ಅಪ್ಪುಗೆ, ಮತ್ತೇರಿಸುವ ದನಿ, ಆ ವಾತಾವರಣ ಇಬ್ರೂ ಮೈ ಮರೆಯುತ್ತಿದ್ದೆವು. ಪ್ರಕಾಶನ ನೆನಪು ಸುತ್ತಿಕೊಂಡೇ ನಾನು ಬಚ್ಚಲಿನಿಂದ ಬೆಡ್‌ರೂಮ್‌ಗೆ ಹೋದೆ. ಸ್ನಾನದಿಂದ ಮೈ ಸ್ವಚ್ಛವಾಗಿ ಹಸುರಾಗಿತ್ತು. ಮನಸ್ಸು ಆಹ್ಲಾದಗೊಂಡಿತ್ತು. ಗರಿಗೆದರಿ ಹಾರುತ್ತಿದ್ದ ಹಕ್ಕಿ ಬಾಣ ತಗುಲಿ ಥಟ್ಟನೆ ನೆಲಕ್ಕೆ ಬಿತ್ತು. ಪ್ರಕಾಶನ ಬಾಹುಗಳ ನೆನಪು ತೀವ್ರಗೊಂಡು ನಾನೇ ಕರಗಿ ಕಣ್ಣೀರಾಗಿ ಹರಿಯತೊಡಗಿದೆ. ತಟ್ಟನೆ ಎಚ್ಚರಾದೆ.

ಎರಡು ಕೈಗಳು ಆಗಲೇ ನನ್ನನ್ನು ಎತ್ತಿ ಬಿಸಿ ಉಸಿರು, ಬಿಸಿ ತುಟಿಗಳಿಂದ ಕೆನ್ನೆಯನ್ನು ಮುತ್ತಿದ್ದವು. ಎಷ್ಟು ಒದ್ದಾಡಿದರೂ ಆ ಬಿಗಿ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೇ ಜಾರುತ್ತ ಜಾರುತ್ತ ಅದರೊಡನೆ ಒಂದಾಗಿ ಹೋದೆ. ಭಯದಿಂದ ನಿಶ್ಯಬ್ದಳಾಗಿದ್ದೆ.

ಎಷ್ಟೋ ಹೊತ್ತಿನ ಮೇಲೆ ಸೀರೆ ಸುತ್ತಿಕೊಂಡೆ. ಅಡಿಗೆ ಮನೆಗೆ ಹೋದೆ. ಯಾಂತ್ರಿಕವಾಗಿ ಚಿಮಣಿ ಎಣ್ಣೆ ಬಾಟಲಿ ಎತ್ತಿ ಮೈಮೇಲೆ ಸುರಿದುಕೊಂಡೆ. ಕಡ್ಡಿಪೆಟ್ಟಿಗೆ ಹುಡುಕುತ್ತಿದ್ದೆ. ಮುಂಬಾಗಿಲು ಸಪ್ಪಳ ಮಾಡಿ ಮನು ಓಡಿ ಬಂದು ನನ್ನ ಕಾಲು ತಬ್ಬಿಕೊಂಡ. ಅವ್ವಾ ಹಸಿವೆ ಆಗೇದ. ಅವನನ್ನು ಎಳೆದು ಅಪ್ಪಿಕೊಂಡು ಅಳಹತ್ತಿದೆ. ಎಳೆ ಕಂದಮ್ಮ ನನ್ನ ಕಣ್ಣು ಒರಸುತ್ತ 'ಯಾಕವ್ವ ಅಳ್ತೀ. ಯಾರ ಹತ್ಯಾ ಮಾಡಿದ್ರು. ನಾ ಹೊಡೀತಿ' ಎಂದು ಕೈ ಎತ್ತಿದ. ಇನ್ನಷ್ಟು ಗಟ್ಟಿಯಾಗಿ ಅಪ್ಪಿಕೊಂಡೆ. 'ಮನೂ, ನಿನ್ನ ಹ್ಯಾಂಗ ಬಿಟ್ಟ ಹೋಗ್ಲಿ' ಅವನು ಎಲ್ಲ ತಿಳಿದವನಂತೆ 'ಅವ್ವ ನಾನೂ ನಿನ್ನ ಜೊತೆ ಬರ್ತೀನಿ' ಎಂದು ಕುತ್ತಿಗೆಗೆ ಅಟ್ಟೀ ಮಿಟ್ಟಿ ಹಾಕಿದ. ಇಬ್ಬರೂ ಸಾಯುವ ವಿಚಾರಕ್ಕೆ ಬೆಚ್ಚಿ ಬಿದ್ದೆ. ಅರಳುವ ಮೊಗ್ಗನ್ನು ಬೆಂಕಿಗೆ ಹಾಕುವುದೇ? ಈ ಮುದ್ದು ಮರಿಯನ್ನು ಯಾರ ಹತ್ತಿರ ಬಿಟ್ಟು ಹೋಗಲಿ ? ಹುಲಿಯ ಹತ್ತಿರ ಹೋಗುತ್ತಿದ್ದ ಗೋವಿನಂತಾಗಿತ್ತು ನನ್ನ ಕಥೆ. ಹುಲಿ ಪುಣ್ಯಕೋಟಿಯನ್ನು ತಿನ್ನದೆ ಬಿಟ್ಟಾಗ ಕರುವಿಗೆ ಮತ್ತೆ ತಾಯಿಯಾಗಿತ್ತು. ಬೆಂಕಿ, ರೈಲು, ವಿಷ ಇವುಗಳಲ್ಲಿ ಒಂದೇ ಸಾಕು ಮನು ತಬ್ಬಲಿಯಾಗಲು. ಛೇ ಮನು ಕಂಡವರೆದುರು ಕೈ ಚಾಚಿ ದೈನಾಸಪಡುವ ವಿಚಾರ ನನ್ನಿಂದ ಸಹಿಸೋದು ಸಾಧ್ಯವಿಲ್ಲ. ಪ್ರಕಾಶನಿಗೆ ಮಗನೆಂದರೆ ಪ್ರಾಣ, ಅವನೂ ನನ್ನನ್ನೂ ಕ್ಷಮಿಸಲಾರ. ನಾನು ಬದುಕಲೇಬೇಕು ಮನುವಿಗಾಗಿ ಬದುಕಬೇಕು.

ಅಪ್ಪನ ಜೊತೆಗೆ ಅಣ್ಣನ ಮನೆಗೆ ಬಂದುಬಿಟ್ಟೆ. ಊರು ಬಿಡುವ ಮೊದಲು ಮಾಲಕರ ಮನೆಗೆ ಹೇಳಿಬರಲು ಹೋದಾಗ ಸುರೇಶ ಆ ಘಟನೆಯಾದ ದಿನವೇ ಊರು ಬಿಟ್ಟ ಸುದ್ದಿ ತಿಳಿಯಿತು. ವಿಷಯ ಸುರೇಶ ಮತ್ತು ನನ್ನಲ್ಲಿ ಮಾತ್ರ ಉಳಿದದ್ದು ಮನಸ್ಸಿಗೆ ನೆಮ್ಮದಿ ತಂದಿತ್ತು. ನೌಕರಿ ಮಾಡಿದರೂ ಅಣ್ಣನ ಆಶ್ರಯ ಬಿಟ್ಟು ಹೋಗಲಿಲ್ಲ. ಅಣ್ಣನ ಉದಾಸೀನ, ಅತ್ತಿಗೆಯ ತಿರಸ್ಕಾರ. ಅಣ್ಣನ ಮಕ್ಕಳ ದುರಾಶೆ ಎಲ್ಲವನ್ನೂ ನುಂಗಿದೆ. ಎಲ್ಲಾ ಮನುವಿಗಾಗಿ. ಮನು ಕಲಿತು ನೌಕರಿ ಹಿಡಿದು ಮನೆ ಮಾಡಿ ನನಗೂ ನೌಕರಿಯಿಂದ ವಿಶ್ರಾಂತಿ ಕೊಡಿಸಿದ. ನಾನು ಬದುಕಿದ್ದೇ ಮನುವಿಗಾಗಿ ಅವನ ಸುಖಕ್ಕಾಗಿ, ಏಳ್ಗೆಗಾಗಿ ಮನು..... ನನ್ನವ....

'ಅವ್ವ, ಏಳು ಹೊಡೀತು. ನೀರು ಕಾದಾವ ಸ್ನಾನಾ ಮಾಡು. ಸ್ವಲ್ಪ ಆರಾಮ ಅನಿಸ್ತದ.' ಮಂಪರು, ಎಚ್ಚರಗಳ ತೂಗುಯ್ಯಾಲೆ ಆಡುತ್ತಿದ್ದ ಸಾವಿತ್ರಿ ದಿಗ್ಗನೆ ಎದ್ದು ಕುಳಿತಳು.

ಸಾವಿತ್ರಿ, ಮನೋಹರ, ಅಜ್ಜ ಕನ್ಯೆ ತೋರಿಸಲು ಜೊತೆಗೆ ಬಂದ ದಂಪತಿಗಳು ಎಲ್ಲರ ಲಕ್ಷ್ಯವೂ ಆ ಮುಚ್ಚಿದ ಬಾಗಿಲಿನತ್ತಲೇ ಇತ್ತು. ಉಪಚಾರದ ಮಾತು-ಕತೆ, ತಿಂಡಿ-ತೀರ್ಥ ಎಲ್ಲ ಮುಗಿದ ಮೇಲೆ ಈಗ ಹುಡುಗಿಯ ಅಣ್ಣ ಅವರು ಕುಳಿತಿದ್ದ ಹಾಲಿಗೆ ಹೊಂದಿಕೊಂಡಂತೆ ಇದ್ದ, ಮುಚ್ಚಿದ ಬಾಗಿಲಿನ ಹತ್ತಿರ ಮೆಲ್ಲಗೆ ಕದ ದೂಡಿ ಒಳಗೆ ಇಣುಕಿ ಕರೆದ 'ಶಕೂ, ಬಾ ಇಲ್ಲೆ' ಅತ್ತಿತ್ತ ಹರಿದಾಡುತ್ತಿದ್ದ ದೃಷ್ಟಿಗಳೆಲ್ಲ ಸರಕ್ಕನೆ ಅಲ್ಲಿಯೆ ಸರಿದವು.

ಬೆಳ್ಳಗೆ, ತೆಳ್ಳಗೆ ನಡಿಗೆಯ ಉದ್ದ ಜಡೆಯ ಹುಡುಗಿ ತಲೆ ತಗ್ಗಿಸಿಕೊಂಡು ನಿಧಾನವಾಗಿ ಹೊರಬಂದಳು. ಅವಳು ಮುಡಿದಿದ್ದ ಮಲ್ಲಿಗೆಯ ಪರಿಮಳ ತುಂಬಿ ಬಿಗಿ ಹಿಡಿದ ವಾತಾವರಣ ಸಡಿಲಾಗಿ ಘಮ್ಮೆಂದಿತು.

'ಬಾ, ತಂಗಿ ಕೂಡ್ರು ಇಲ್ಲೆ' ಶಕುಂತಲೆಯನ್ನು ಹತ್ತಿರ ಕೂಡ್ರಿಸಿಕೊಂಡ ಸಾವಿತ್ರಿ ಮನುವಿನತ್ತ ಹೊರಳಿದಳು. ಅವನ ದೃಷ್ಟಿ ಹುಡುಗಿಯ ಮುಖದಲ್ಲೇ ನೆಟ್ಟಿತ್ತು. ತುಟಿಗಳಲ್ಲಿ ಪ್ರಸನ್ನತೆ ಇತ್ತು. ತಾಯಿ ತನ್ನನ್ನೇ ನೋಡುತ್ತಿದ್ದ ಪರಿವೆಯೂ ಅವನಿಗೆ ಬರಲಿಲ್ಲ. ಮನುವಿಗೆ ಒಪ್ಪುವಂಥ ಹುಡುಗಿ ಸಿಕ್ಕಿದಳು. ಮಾತು-ಕತೆ ಮುಗಿದು ಮದುವೆಯ ದಿನವೂ ಗೊತ್ತಾಯಿತು.

ಸಾವಿತ್ರಿ ಈಗ ತನ್ನ ಬಿ.ಪಿ. ಯನ್ನು ಮರೆತು ಮದುವೆಯ ತಯಾರಿಯಲ್ಲಿ ತೊಡಗಿದಳು. 'ನಾಳೆ ಶಕುಂತಲಾ ಮನೀಗೆ ಬಂದ ಮೇಲೆ ಎಲ್ಲಾ ಕೆಲಸ ಆಕೀಗೆ ಒಪ್ಪಿಸಿ ನಾ ವಿಶ್ರಾಂತಿ ತೊಗೊತೀನಿ ಮನು. ಪೂರ್ಣ ವಿಶ್ರಾಂತಿ ನನಗು' ಖುಷಿಯಿಂದ ಹೇಳುತ್ತಿದ್ದಳು.

ಕಿವಿ ಕೊರೆಯುವ ಮೈಕಿನ ಹಾಡು ಮೆಟ್ಟಿ ಮಾತಾಡುವ ಜನ, ಆ ಗದ್ದಲಕ್ಕೆ ತಮ್ಮ ಜಗಳಾಟ, ಕಿರಿಚಾಟದಿಂದ ವಿಶೇಷ ಕಳೆ ನೀಡುವ ಮಕ್ಕಳು, ಮದುವೆಗೆ ಬಂದ ಪುರುಷರೆಲ್ಲರ ಕೇಂದ್ರ ಬಿಂದು ತಾವೇ ಎಂದುಕೊಂಡು ಸಂಭ್ರಮಿಸುವ ಮಹಿಳೆಯರು. ಈ ಎಲ್ಲರ ನಡುವೆ ಮನೆಯ ಕಟ್ಟೆಯ ಮೇಲೆ ನಿಂತ ಮುತ್ತೈದೆಯರು ಮಾಡುವ ಶಾಸ್ತ್ರಗಳನ್ನೆಲ್ಲ ದೂರದಿಂದ ನೋಡುತ್ತಿದ್ದಳು ಸಾವಿತ್ರಿ. ವರಬಂದು ಹಸೆ ಮಣೆಯ ಮೇಲೆ ಕುಳಿತ. 'ಸೋದರ ಮಾವನ್ನ ಕನ್ಯಾನ ಕರಕೊಂಡು ಬರ್ಲಿಕ್ಕೆ ಹೇಳ್ರಿ' ಶಾಸ್ತ್ರಿಗಳು ಸನಾದಿಯವರನ್ನೂ ಮೆಟ್ಟಿ ಕೂಗಿದರು. ನಾಲ್ಕಾರು ಜನ 'ಲಗೂ ಬರ್ರಿ' 'ಲಗೂ ಬರ್ರಿ' ಎಂದು ಅತ್ತಿತ್ತ ಓಡಾಡಿದರು. ಸಾಲಂಕೃತ ಶಕುಂತಲೆಯನ್ನು ಅವಳ ಸೋದರಮಾವ ಕೈಹಿಡಿದು ಕರೆದುಕೊಂಡು ಬಂದು ಮನುವಿನ ಮಗ್ಗಲು ಮಣೆಯ ಮೇಲೆ ಕೂಡ್ರಿಸಿ ಮುಖ ಮೇಲೆ ಎತ್ತಿದ.

ಸಾವಿತ್ರಿಯ ಮುಖ ಬತ್ತಿ ರಕ್ತಹೀನವಾಯಿತು. ಕಣ್ಣುಗಳು ದೊಡ್ಡದಾಗುತ್ತ ಹೋಗಿ ಬೆಳ್ಳಗಾಗಿ ಕಾಲು ನಡುಗಿ ಕುಸಿದು ಕೆಳಗೆ ಉರುಳಿದಳು. ತುಟಿಗಳು 'ಸುರೇಶ' ಎಂದು ಪಿಸುನುಡಿದದ್ದು ಮಾತ್ರ ಯಾರ ಕಿವಿಗೂ ಬೀಳಲಿಲ್ಲ. ಅಕ್ಕ ಓಡಿ ಬಂದು 'ಸಾವೂ ಸಾವಿತ್ರೀ' ಎನ್ನುತ್ತ ಅವಳ ಮಗ್ಗಲು ಧೊಪ್ಪನೆ ಕುಳಿತಳು. ಹತ್ತಿರವಿದ್ದ ನಾಲ್ಕಾರು ಜನ 'ಏನಾಯ್ತು' ಎನ್ನುವಾಗಲೇ ಎಲ್ಲ ದಿಕ್ಕಿನಿಂದಲೂ ಸಿಲಿಸಿಲಿ ಎಂದು ವಧೂ-ವರರ ಮೇಲೆ ಅಕ್ಕಿ ಕಾಳು ಬಿದ್ದವು.

***

ಆಸ್ಪತ್ರೆಯ ನಿಶ್ಶಬ್ದ ವಾತಾವರಣದಲ್ಲಿ ತನ್ನ ಹತ್ತಿರದಲ್ಲೇ ಹಣ್ಣಿನ ಚೀಲ ಹಿಡಿದು ನಿಂತ ಸುರೇಶನನ್ನು ನೋಡಿದ ಸಾವಿತ್ರಿಯ ದೇಹ ಸೂಕ್ಷ್ಮವಾಗಿ ನಡುಗಿತು. ಹೆದರಿಕೆಯಿಂದ ಕಣ್ಣುಗಳು ವಿಸ್ತಾರಗೊಂಡವು. ಆದರೆ ಅವಳು ಅಲುಗಾಡುವುದೂ ಸಾಧ್ಯವಿರಲಿಲ್ಲ. ಕೊರಡಾಗಿದ್ದ ಅರ್ಧ ದೇಹ, ಮೂಗಿನ ನಳಿಗೆ, ಗ್ಲೂಕೋಜ್ ಡ್ರಿಪ್ ಎಲ್ಲ ಅಡ್ಡಿಯಾಗಿದ್ದವು. ಎಂಟು ದಿನಗಳ ಹಿಂದೆ ಎಚ್ಚರ ತಪ್ಪಿದಾಗಲೇ ಮಾತು ನಿಂತು ಹೋಗಿತ್ತು.

ಅತ್ತಿತ್ತ ನೋಡಿದ ಸುರೇಶ ಪಟಕ್ಕನೆ ಅವಳ ಮಂಚದ ಅಂಚಿಗೆ ಕೂತು ಅವಳ ಚೈತನ್ಯವಿದ್ದ ಕೈ ತನ್ನ ಅಂಗೈಯಲ್ಲಿಟ್ಟುಕೊಂಡು ತನ್ನ ಒಳಗುದಿ ಅವಳೆದುರು ತೋಡಿಕೊಂಡ. "ಶಮ್ಮೀ ನನ್ನ ನೀವು ಕ್ಷಮಾ ಮಾಡಬೇಕು. ನಿಮ್ಮ ಮನ್ಯಾಗ ಅವತ್ತು ನಿಮಗ ದೊಡ್ಡ ಶಾಕ್ ಕೊಟ್ಟೆ. ಆದರ ನಿಮ್ಮ ಮ್ಯಾಲೆ ಬಲಾತ್ಕಾರ ಮಾಡಬೇಕು ಅನ್ನೂ ಯೋಚನಾನ ಅವತ್ತ ನನಗ ಇದ್ದಿದ್ದಿಲ್ಲಾ. ನಿಮ್ಮ ಪರಿಸ್ಥಿತಿ ಬಗ್ಗೆ ಸಹಾನುಭೂತಿ ಇತ್ತು. ನಿಮ್ಮ ರೂಪ, ಏಕಾಂಗಿತನ, ಆ ಹಾಡು, ಸ್ನಾನ ನಿಮ್ಮ ದುಃಖ ಎಲ್ಲಾ ಕೂಡಿ ಯಾವುದೋ ಉದ್ರೇಕಕ್ಕೆ ಒಳಗಾದೆ. ನಿಮಗ ಮಾಡಿದ ಅನ್ಯಾಯಕ್ಕ ಮುಖಾ ತೋರಿಸೋ ಧೈರ್ಯ ಇಲ್ಲದೆ ಅವತ್ತೇ ಊರು ಬಿಟ್ಟು ಹೋದೆ. ಆದರೆ ನನ್ನ ತಪ್ಪು ಹೆಜ್ಜೆ ಹೆಜ್ಜೆಗೂ ನನ್ನ ಹುರಿದು ಮುಕ್ಕುತ್ತಿತ್ತು. ನಿಮ್ಮನ್ನ ನಾನು ಮದುವಿ ಯಾಕ ಆಗಬಾರದು ಅನ್ನೂ ವಿಚಾರನೂ ಎಷ್ಟೋ ಸಲ ಬರುತ್ತಿತ್ತು. ಆದರ ಸಮಾಜ ಎದುರಿಸಿ ನಿಲ್ಲೋ ಧೈರ್ಯ ಇದ್ದಿದ್ದಿಲ್ಲಾ. ನನ್ನ ಮ್ಯಾಲೆ ನಿಮಗ ಪ್ರೀತಿ ಬದಲು ದ್ವೇಷ ಹುಟ್ಟಿದ್ದರ ಏನು ಗತಿ ಅಂತ ಅನುಮಾನಿಸಿದೆ. ಶರದನ ಪತ್ರದಿಂದ ನೀವು ಆ ಊರು ಬಿಟ್ಟು ಹೋದಿರಿ ಅನ್ನೋದು ಗೊತ್ತಾತು. ನಾನು ಮದುವಿ ಮಕ್ಕಳು ಅಂತ ಸಂಸಾರದೊಳಗ ಮುಳುಗಿದೆ. ಶಕೂನ ಮದುವಿಯೊಳಗ ಮತ್ತೊಮ್ಮೆ ನಮ್ಮಿಬ್ಬರ ಭೆಟ್ಟಿ ಆಗ್ತದ ಅಂತ ನನಗ ಅನ್ನಿಸಿದ್ದಿಲ್ಲಾ. ನನ್ನ ನೋಡಿ ನಿಮಗ ಶಾಕ್ ಆತು ಅನ್ನೋದು ನನಗೊಬ್ಬನಿಗೇ ಗೊತ್ತಾತು. ದಯಮಾಡಿ ನನ್ನ ಕ್ಷಮಾ ಮಾಡ್ರಿ. ಅದೊಂದು ಕೆಟ್ಟ ಕನಸು ಅಂತ ಮರತಬಿಡ್ರಿ. ಡಾಕ್ಟರು, ನಾವು ಕೈಲಾದ ಪ್ರಯತ್ನ ಎಲ್ಲಾ ಮಾಡ್ತೀವಿ. ನೀವು ಆರಾಮ ಆಗ್ತೀರಿ. ಚಿಂತೀ ಮಾಡಬ್ಯಾಡ್ರಿ. ನಮ್ಮಿಬ್ಬರ

ಸಂಬಂಧ ಆ ರಹಸ್ಯ ನಾ ಯಾರ ಮುಂದೂ ಹೇಳಿಲ್ಲ. ಇಕಾ ವಚನಾ ಕೋಡ್ತೀನಿ, ಯಾರ ಮುಂದೂ ಹೇಳೂದಿಲ್ಲ. ನಮ್ಮ ರಹಸ್ಯ ನಮ್ಮ ಜೋಡಿ ಸಾಯ್ತದ. ಮರೆತುಬಿಡ್ರಿ ಅದನ್ನ."

ಒಂದೇ ಸಮನೆ ಬಡಬಡಿಸುತ್ತಿದ್ದ ಸುರೇಶ, ಶಮಿಯ ಕಣ್ಣುಗಳನ್ನೇ ಅನುಸರಿಸಿ ಹಿಂದೆ ಹೊರಳಿ ನೋಡಿ ಚಕಿತನಾದ. ಯಾವಾಗಲೋ ಮನು ಅಲ್ಲಿ ಬಂದು ನಿಂತಿದ್ದ. ಸುರೇಶ ತಲೆ ತಗ್ಗಿಸಿ ಸರಸರ ಹೊರಟೇ ಬಿಟ್ಟ. ಸಾವಿತ್ರಿ ಏಕಾಂಗಿಯಾಗಿ ಮಗನನ್ನ ಎದುರಿಸಿದಳು. ಮನು ಅವನನ್ನೇ ದುರುಗುಟ್ಟಿ ನೋಡಿದ. ಪ್ರೀತಿ, ಅಂತಃಕರಣದ ಕಣವೂ ಇಲ್ಲದ ಆ ಕಣ್ಣುಗಳಲ್ಲಿ ಬರೀ ತಿರಸ್ಕಾರವಿತ್ತು. ಆ ನೋಟ ಸಾವಿತ್ರಿಯ ಹೃದಯವನ್ನು ಚುಚ್ಚಿತು. ಅವ್ವ ಕಳಂಕಿನಿ, ನಡತೆಗೆಟ್ಟವಳು ಎಂದು ತಿಳಿದ ಮನುವಿಗೆ ಮಾತು ಬಾರದ ಸಾವಿತ್ರಿ ಏನೆಂದು ತಿಳಿಸಿ ಹೇಳಿಯಾಳು? ಏನು ಮಾಡಬೇಕು, ಹೇಗೆ ಹೇಳಬೇಕು, ಏನೆಂದು ಹೇಳಬೇಕು -ತಿಳಿಯದೆ ವಿಲಿವಿಲಿ ಒದ್ದಾಡಿದಳು ಸಾವಿತ್ರಿ.

'ನೀನೆಂಥ ಅವ್ವ, ನಡತೆಗೆಟ್ಟವಳು. ಅಪ್ಪ ಹೋದ ಮೇಲೂ ಇಷ್ಟು ವರ್ಷ ಬದುಕಿದ್ದೀ. ನಿನಗೆ ಸಾವಾದರೂ ಬರಬಾರದೇ' ಎನ್ನುತ್ತಿತ್ತು ಮನುವಿನ ದೃಷ್ಟಿ, ದಾರಿ ನಡೆದು, ದಣಿದು ಬಾಯಾರಿದ ದೇಹಕ್ಕೆ ತಂಪನ್ನೆರೆಯಲು ಬಾವಿಯ ಹತ್ತಿರ ಬಗ್ಗಿದ ಸಾವಿತ್ರಿಯ ಬೆನ್ನ ಮೇಲೆ ಹತ್ತಿದ ಪಿಶಾಚಿ ಈಗ ಕತ್ತು ಹಿಚುಕುತ್ತಿತ್ತು. ಕ್ಷಣ ಕ್ಷಣಕ್ಕೂ ಹಿಡಿತ ಬಿಗಿಯಾಗುತ್ತಿತ್ತು. ಮುಳುಗುತ್ತಿದ್ದವಳು ಆಸರೆಗೆಂದು ಅವನತ್ತ ಕೈ ಚಾಚಿದಳು. ಈಗ ನೀರಿನ ಬದಲು ರಕ್ತ ತುಂಬಿ ಕೆಂಪಾದವು. ದೃಷ್ಟಿ ಮಬ್ಬಾಗಿ, ಭಾರವಾಗಿ, ನಿಧಾನವಾಗಿ ರೆಪ್ಪೆಗಳು ಮುಚ್ಚಿಕೊಂಡವು. ಉಳಿದ ಅರ್ಧ ಭಾಗವೂ ಕೊರಡಾಯಿತು.

***

■■

# 'ಇದುವೆ ಜೀವ, ಇದು ಜೀವನ'

ಸುಮತಿ ಕುಳಿತಿದ್ದ ಕುರ್ಚಿಯ ಎದುರಿಗಿದ್ದ ಕಿಡಕಿಯಿಂದ ನೇರವಾಗಿ ಸ್ವಲ್ಪ ದೂರದಲ್ಲಿತ್ತು ಆ ಮರ. ಮರದ ತುಂಬ ಥಳಥಳಿಸುವ ತಿಳಿ ಹಸಿರು ಎಲೆಗಳು, ಹಕ್ಕಿಗಳ ಚಿಲಿಪಿಲಿ ಮಾತು, ಕೆಳಗೆ ತಂಪಾದ ನೆರಳಿನಲ್ಲಿ ಮಲಗಿ ಮೆಲುಕಾಡಿಸುವ ಊರ ದನಗಳು; ಋತುಮಾನಕ್ಕೆ ತಕ್ಕಂತೆ ಬಣ್ಣ ಬದಲಾಯಿಸುತ್ತ ನೋಡುವವರ ಕಣ್ಣುಗಳಿಗೆ ಸೊಂಪಾಗಿದ್ದ ಮರ ಈಗ ಬೋಳಾಗಿತ್ತು. ಟೊಂಗೆಗಳೆಲ್ಲ ಒಣ ಕಟ್ಟಿಗೆಯ ತುಂಡುಗಳು, ಹಸುರು ಹುಡುಕಿ ಹಾರಿ ಹೋದ ಹಕ್ಕಿಗಳ ದನಿಯಿಲ್ಲ. ದನಗಳು ಗುಡ್ಡ ಸೇರಿದ್ದವು. ನೀಲಿ ಆಕಾಶದ ಹಿನ್ನೆಲೆಯಲ್ಲಿ ಮಕ್ಕಳು ಗೀಚಿದ ಚಿತ್ರದಂತೆ ಕಾಣುತ್ತ ಬೋಳು ಬೋಳಾಗಿತ್ತು. ದಿನ ಕಳೆದಂತೆ ಮತ್ತೆ ಈ ಒಣ ಟೊಂಗೆಗಳಿಗೆ ಬಣ್ಣ ಮೂಡಬಹುದು, ದನಿ ಚಿಮ್ಮಬಹುದು..... ಮರವನ್ನು ನೋಡುತ್ತ ಸುಮತಿ ಯೋಚಿಸಿದಳು; ಈ ಬೋಳು ಮರಕ್ಕಿಂತಲೂ ತಾನು ಕಡೆಯಾದೆ. ನೀರು ತುಂಬಿದ ಕಣ್ಣುಗಳನ್ನು ಮರದಿಂದ ಸರಿಸಿ ಗೋಡೆಯ ಮೇಲಿನ ಭಾವಚಿತ್ರದಲ್ಲಿ ನಾಟಿಸಿದಳು.

'ಜೀವಕ್ಕೆ ಕೇಳತೈತಿ ಈ ದೇಹಾ ! ನೀ ಬಿಟ್ಟ ಹೋಗಬ್ಯಾಡಾ ಮಾರಾಯಾ' ತಾಳಕ್ಕೆ ಸರಿಯಾಗಿ ಕಟೆದು ಹಾಡುತ್ತಿದ್ದ ಪಲ್ಲವಿ ಇನ್ನೂ ತನ್ನ ಕಿವಿಯಲ್ಲಿ ದನಿಗೊಡುತ್ತಿದೆ. ಅಷ್ಟೊಂದು ದೈನಾಸಬಿಟ್ಟು ಕೇಳಿದರೂ ಜೀವ ಕೇಳಿರಲಿಲ್ಲ, ದೇಹವನ್ನು ಇಲ್ಲಿ ಬಿಟ್ಟು ಹೋಗಿಬಿಟ್ಟಿತ್ತು. ದೇಹ ಜೀವವನ್ನು ಕೇಳುತ್ತೊ ಇಲ್ಲವೊ ಗೊತ್ತಿಲ್ಲ. ನಾನಂತೂ ಪರಿಪರಿಯಾಗಿ ಅವರನ್ನು ಕೇಳಿಕೊಂಡಿದ್ದೆ ನನ್ನನ್ನು ಬಿಟ್ಟು ಹೋಗಬೇಡಿರಿ ಎಂದು, ಮೂವತ್ತು ವರುಷಗಳಿಂದ ಬೆಸೆದು ಬಂದ ಕೊಂಡಿಯನ್ನು ಕತ್ತರಿಸಬೇಡಿರಿ ಎಂದು ಸಂಕಟ ಪಡುತ್ತ ಅಂಗಲಾಚಿದ್ದೆ. ಅವರ ತಲೆಯ ಮೇಲೆ ಮೃದುವಾಗಿ ಕೈಯಾಡಿಸುತ್ತ ಬೆಳಗು ಹರಿಯುವವರೆಗೂ ಹಾಗೆಯೇ ಕುಳಿತಿದ್ದೆ. ಆರಾಮವಾಗುತ್ತಾರೆಂದು ಹೇಳಿದ ಡಾಕ್ಟರರ ಮಾತನ್ನು ನಂಬಿಕೊಂಡು. ಆ ನಂಬಿಕೆ ಕತ್ತಲೆಯಲ್ಲಿ ಕರಗಿ ಹೋದೀತೆಂದು ಹೆದರಿ ಕಣ್ಣನ್ನೂ ಮುಚ್ಚಿರಲಿಲ್ಲ. ಅವರ ನರಳಾಟ ಕಡಿಮೆಯಾಗುತ್ತ ಬಂದಿತ್ತು. ನಿದ್ದೆ ಹತ್ತಿದಂತೆ ಮಲಗಿದ್ದ ಆ ಪ್ರಶಾಂತ ಮುಖವನ್ನು ದಿಟ್ಟಿಸುತ್ತಿದ್ದೆ. ಇಬ್ಬರ ಮೌನ ನೋಡಿ ಹತ್ತಿರ ಬಂದ ಶಿವಗಂಗವ್ವ ಚಿಗವ್ವ ಅವರ ಕೈ ಹಿಡಿದು-

"ಸುಮಾ಼ ಘಾತ ಆಯ್ತಲ್ಲ ತಂಗೀ" ಎಂದು ಎದೆ ಎದೆ ಬಡಿದುಕೊಂಡಾಗ ಬೆಚ್ಚಿ ಬಿದ್ದು ಅವರ ಎದೆಯ ಮೇಲೆ ಬಿದ್ದು ಹೊರಳಾಡಿದ್ದೆ....

ತಟತಟನೆ ಬೀಳುತ್ತಿದ್ದ ಕಣ್ಣೀರು ತಾನು ಓದತೊಡಗಿದ್ದ ಪತ್ರವನ್ನು ನೆನೆಸುತ್ತಿದ್ದುದು ಸುಮತಿಯ ಪರಿವೆಗೆ ಬಂದಿರಲಿಲ್ಲ. ಆಫೀಸಿಗೆ ಹೊರಟಿದ್ದ ಸುಂದರ ಅವ್ವನ ಕೋಣೆಗೆ ಬಂದ. ನಿಧಾನವಾಗಿ ಹತ್ತಿರ ಬಂದು ಅವ್ವನ ತಲೆಯನ್ನು ಆವಚಿ ಹಿಡಿದು ಕಣ್ಣೀರೊರೆಸಿದ.

"ಅವ್ವಾ಼ ಅಳಬ್ಯಾಡಾ. ನೀ ಹೀಂಗ ಅತ್ತರ ಅಪ್ಪ ತಿರಗಿ ಬರತಾರೇನು?" ಮಗನ ಸ್ಪರ್ಶದಿಂದ ಎಚ್ಚತ್ತಳು ಸುಮತಿ. ಸುಂದರ ತನ್ನ ಕಣ್ಣೀರು ಕಂಡಾಗಲೆಲ್ಲ ಕಸಿವಿಸಿ ಪಡುತ್ತಾನೆ. "ಇಲ್ಲಪ್ಪ ಅಳೂದಿಲ್ಲ. ನೀ ಹೋಗಿ ಬಾ" ಎಂದು ಕಣ್ಣೀರು ನುಂಗಿದಳು ಸುಮತಿ.

"ಬರ್ತೀನಿ ಲೀಲೂ, ಬರ್ತಿನಿ ಸೋನೀ಼ ಟಾಟಾ಼."

"ಅಪ್ಪಾ಼, ನಾನೂ ಬರ್ತೀನಿ. ಅಪ್ಪಾನ ಜೋಡೀ ಹೋತೀನಿ." ಅಳುತ್ತಿದ್ದ ಸೋನಿಯಾಳನ್ನು ಎತ್ತಿ ಲೀಲಾ ಬಚ್ಚಲಿಗೆ ಒಯ್ದಳು. ಬಚ್ಚಲಿನಿಂದ ಸೋನಿಯಾ 'ಅಮ್ಮಾ' ಎಂದು ಚೀರುತ್ತಿದ್ದರೂ ಕಿವಿ ಮುಚ್ಚಿಕೊಂಡಿದ್ದೆ. 'ಮಕ್ಕಳಿಗೆ ತಾಯಿಯ ಹೆದರಿಕೆ ಬೇಕು, ಅವ್ವಾ಼ ನೀ ಅಚ್ಛಾ ಮಾಡಿ ಹುಡುಗರನ್ನ ಕೆಡಿಸಬ್ಯಾಡಾ. ಅವರು ನನ್ನ ಮಾತು ಕೇಳೂದಿಲ್ಲ' ಎಂದು ನಾನೇ ನನ್ನವ್ವನೊಡನೆ ಎಷ್ಟೋ ಸಲ ಜಗಳ ಮಾಡಿದ್ದೆ. ಸೋನಿಗೆ ಬಿಸಿನೀರು ಬೇಡ, ಎಣ್ಣೆ

ಬೇಡ, ಸೋಪು ಬೇಡ, ಅಂಗಿಬೇಡ, ಪೌಡರ ನಾನೇ ಹಾಕೋತೀನಿ, ತಾಯಿಯೊಡನೆ ಹೀಗೆ ದಿನವೂ ಜಗಳವಿದ್ದದ್ದೇ. ಲೀಲಾ ಕೀಸರಿಟ್ಟು ಮಗಳನ್ನು ಬಯ್ಯುತ್ತಿದ್ದಳು.

"ಚೋಟುದ್ದ ಇದ್ದೀ, ಹೇಳಿದ ಮಾತು ಕೇಳೂದಿಲ್ಲ. ಎಷ್ಟ ಹಟಮಾರಿ ಇದ್ದೀ."

ಸುಮತಿಗೆ ಮತ್ತೆ ಗಂಡನ ನೆನಪಾಯಿತು. ಸೋನಿ ಅಜ್ಜನನ್ನೇ ಹೋತಿದ್ದಾಳೆ ಎಂದು ತಾನು ಸೊಸೆಗೆ ಹೇಳಿದ್ದಳು. ತನ್ನ ಗಂಡ ತುಂಬ ಹಟಮಾರಿ. ಮೂವತ್ತು ವರುಷಗಳ ಬಾಳುವೆಯಲ್ಲಿ ಹೆಜ್ಜೆ ಹೆಜ್ಜೆಗೆ ಅವನ ಹಟ ಉಂಡು ಅನುಭವಿಸಿದ್ದಳು. ಪಶ್ಚಿಮಕ್ಕೆ ಪೂರ್ವವೆಂದರೂ ತಾನು ಹೌದು ಎನ್ನಬೇಕು. ಉರಿಬಿಸಿಲಿಗೆ ಬೆಳದಿಂಗಳು ಎಂದರೂ ಒಪ್ಪಿಕೊಂಡು ವಾಕಿಂಗ್ ಹೊರಡಬೇಕು. ತನ್ನ ಸೋದರಮಾವನ ಚೇಷ್ಟೆಯ ಮಾತಿಗೆ ಸೆಟಗೊಂಡು ಎಂಟ್ಹತ್ತು ವರುಷ ತನ್ನನ್ನು ತವರಿಗೆ ಕಳಿಸಿರಲಿಲ್ಲ. ಮಕ್ಕಳ ಬಗ್ಗೆಯೂ ಹಾಗೆಯೆ. ಸತ್ಯ ಡಾಕ್ಟರ ಆಗಬೇಕೆಂದು ಅವರ ಆಸೆಯಿತ್ತು. ನನ್ನ ಅತ್ತೆ ಹಳ್ಳಿಯಲ್ಲಿ ಡಾಕ್ಟರರ ಉಪಚಾರವಿಲ್ಲದೆ ಚಿಕ್ಕವಯಸ್ಸಿನಲ್ಲಿಯೇ ಸತ್ತದ್ದು ಅವರನ್ನು ಘಾಸಿಮಾಡಿರಬೇಕು. ಒಬ್ಬ ಮಗನನ್ನಾದರೂ ಡಾಕ್ಟರ ಮಾಡಬೇಕೆನ್ನುವ ಅವರ ಆಸೆ ಹುಸಿಯಾಗಿತ್ತು. ಶಿವು ಚೆನ್ನಾಗಿ ಮಾರ್ಕ್ಸ ಪಡೆದಿದ್ದರೂ ಮೆಡಿಸಿನ್ ಆರಿಸದೆ ಸಸ್ಯಶಾಸ್ತ್ರ ತೆಗೆದುಕೊಂಡಾಗಂತೂ ಅವರ ಸಿಟ್ಟು ನೆತ್ತಿಗೇರಿತ್ತು.

"ಒಬ್ಬ ಆದ್ರೂ ಡಾಕ್ಟರ ಆಗಲಿ ಅಂದರ ಈ ... ಮಕ್ಕಳು ನನ್ನ ಮಾತs ಕೇಳವೊಲ್ಲರು. ಹೇಳಿದ ಮಾತು ಕೇಳಲಾರದ್ದು ಇವೆಂಥಾ ಮಕ್ಕಳು?" ಸಿಟ್ಟು ಬಂದಾಗ ಲಂಗು ಲಗಾಮಿಲ್ಲದೆ ಅವರ ಬಾಯಿಂದ ಅಶ್ಲೀಲ ಬಯ್ಗುಳಗಳು ಸುರಿಯುತ್ತಿದ್ದವು. ಅವರು ಒದರಾಡುವಾಗ ಯಾವ ಮಕ್ಕಳೂ ಮುಂದೆ ಸುಳಿಯುತ್ತಿರಲಿಲ್ಲ. ನಾವಿಬ್ಬರೇ ಇದ್ದಾಗ ನಾನು ಕೇಳುತ್ತಿದ್ದೆ:" ಡಾಕ್ಟರ ಆಗಬೇಕು ಅನ್ನೂ ಆಸೇ ಇದ್ದವರು ನೀವ್ಯಾಕ ಆಗಲಿಲ್ಲಾ?"

ನನ್ನನ್ನು ಸುಟ್ಟು ಬಿಡುವಂತೆ ದುರುದುರು ನೋಡುತ್ತಿದ್ದರು. ನನಗೆ ಗೊತ್ತಿತ್ತು. ಹೆಣ ಕೊಯ್ಯುವ ಕೆಲಸ ಇವರಿಂದ ಆಗದ್ದಕ್ಕೆ ಬಿಟ್ಟಿದ್ದಾರೆ ಎನ್ನುವುದು. ಅವರ ನೋಟವನ್ನು ಲೆಕ್ಕಿಸದೆ ಮತ್ತೆ ಹೇಳುತ್ತಿದ್ದೆ.

"ನಾವು ಮಕ್ಕಳನ್ನ ಹಡದೀವಿ ಅಂದಷ್ಟಕ್ಕ ಅವರ ಭವಿಷ್ಯ ಬರಿಯೂದು ನಮ್ಮಿಂದ ಸಾಧ್ಯ ಇಲ್ಲ. ಹುಟ್ಟಿಸೂದಷ್ಟs ನಮ್ಮ ಕೆಲಸ.... ಹುಂ, ಉಹುಂ ಅದೂ ತಪ್ಪು, ಮೊನ್ನೆ ನಿಮ್ಮ ಗೆಳೆಯಾ ಪಾಂಡುರಂಗ ಹೇಳಿದ್ದು ಕೇಳಿಲ್ಲೇನು? ಮನ್ಯಾಗ ಜಗಳ ಆದಾಗ ಅವರ ಮಗ ತಿರುಗಿ ಕೇಳಿದನಂತೆ "ನಾವು ನಿನ್ನ ಹಡದವರು, ಜ್ಞಾಪಾನ ಮಾಡಿದವರು, ನಾವು ಹೇಳಿದ್ದು ನೀ ಕೇಳಬೇಕು ಅಂತ ಹಗಲೆಲ್ಲಾ ಹಂಗಿಸತೀರಿ. ನಾ ಏನು ಬೇಡಿಕೊಂಡಿದ್ನೇನು ನಿಮಗ ನನ್ನ ಹುಟ್ಟಸಪಾ ಯಪ್ಪಾs ಅಂತ? ನಿಮ್ಮ ಬಯಕೆ ತೀರಿಸ್ಕೊಂಡಿರಿ ಆತು. ನನಗ ತಿಳಿದಾಂಗ ನಾ ಮಾಡ್ತೀನಿ" ಅಂತ. ನಮ್ಮ ಮಕ್ಕಳು ಹಂಗೆಲ್ಲಾ ತಿರಗಿ ವಾದಿಸೂವವರು ಅಲ್ಲಾ. ಶಿವು, ಸತ್ಯ ದೊಡ್ಡವರಾಗ್ಯಾರ. ತಿಳುವಳಿಕಿ ಬೇಳೀಲಿಕ್ಕೆ ಹತ್ತೇದ. ತಮಗ ಬೇಕು ಅನಿಸಿದ್ದು ಓದತಾರ. ಅದಕ್ಯಾಕ ಅಷ್ಟು ಸಿಟ್ಟು ಮಾಡತೀರಿ"?

ಮಕ್ಕಳನ್ನು ಹದ್ದು ಬಸ್ತಿನಲ್ಲಿಡಬೇಕೆಂದು ಅವರು ಬಯಸುತ್ತಿದ್ದರೂ ಮಕ್ಕಳೆಂದರೆ ಅವರಿಗೆ ಬಲು ಪ್ರೀತಿ. ಮೂಗಿನ ತುದಿಯ ಸಿಟ್ಟು, ದುರುದುರು ನೋಟ, ಬಯ್ಗುಳ ಸುರಿಮಳೆ, ಎಲ್ಲ ಸೋಗಿನದು ಎಂದು ನನಗೆ ಗೊತ್ತು. ಅವರಲ್ಲಿ ಗುಪ್ತವಾಗಿ ವಾತ್ಸಲ್ಯದ ಹೊನಲು ಹರಿಯುತ್ತಿತ್ತು. ಒಳ್ಳೆಯ ಬಟ್ಟೆ, ಆಗಾಗ ಸ್ವೀಟ್ಸ್, ಪಾಕೆಟ್‌ಮನಿ ಮಕ್ಕಳಿಗೆ ಕೊಟ್ಟು ಖುಷಿ ಪಡುತ್ತಿದ್ದರು. ಸತ್ಯನಿಗೆ ಟೈಫಾಯ್ಡ್ ಆಗಿ ಜ್ವರ ಮತ್ತೆ ಮರುಕಳಿಸಿದಾಗ ಮನೆ ದೇವರನ್ನು ನೆನೆಸಿ ಮಂಗಳವಾರ ಉಪವಾಸ ವ್ರತವನ್ನು ಹಿಡಿದರಲ್ಲದೆ ಕೊನೆಯವರೆಗೂ ನಡೆಸಿಕೊಂಡು ಬಂದರು. ವಯಸ್ಸಾದ ಮೇಲೆ ಇದೆಲ್ಲ ಬೇಡ ಎಂದು ನಾನು-ಮಕ್ಕಳು ಎಷ್ಟು ಹೇಳಿದರೂ ಕೇಳಲಿಲ್ಲ. ಹಟವೆಂದರೆ ಹಟ.

ಅವರ ಹಟಕ್ಕೆ ತದ್ವಿರುದ್ಧ ಸ್ವಭಾವದವಳು ನಾನು. ಅಂತೆಯೇ ನಮ್ಮಿಬ್ಬರ ಬಾಳು ಅಷ್ಟು ಕೂಡಿ ನಡೆದಿರಬೇಕು. ನನ್ನ ಸ್ವಂತ ಆಸೆ, ಆಸಕ್ತಿ ಅಭಿರುಚಿ ಯಾವದನ್ನೂ ಇಟ್ಟುಕೊಳ್ಳದೆ ಎಲ್ಲರೊಡನೆ ಹೊಂದಿಕೊಳ್ಳುವವಳು ನಾನು. ಹಿರಿಯರ ಜೊತೆ ಅವರಂತೆಯೇ, ಚಿಕ್ಕವರ ಜೊತೆಗೆ ಅವರಿಷ್ಟದಂತೆಯೆ.

"ಯಾವ ಪಾತ್ರೆಗೆ ಹಾಕಿದರೂ ಅದೇ ಆಕಾರ ಪಡೆಯಬಲ್ಲ ನೀರು ಇದ್ದ ಹಾಗೆ ಅವ್ವ" ಎಂದು ಶಿವು ಹೇಳುತ್ತಿದ್ದ.

'ಈ ನೀರು ಎಲ್ಲರಿಗೂ ಬೇಕೇ ಬೇಕು" ಎಂದು ಸತ್ಯ ನಗುತ್ತಿದ್ದ. ಇವರು ಕಂಡೂ ಕಾಣದಂತೆ ಮೀಸೆಯಲ್ಲಿಯೇ ನಕ್ಕು ಅಲ್ಲಿಂದ ಎದ್ದು ಹೋಗುತ್ತಿದ್ದರು. ಕೊನೆಯವ ಸುಂದರ ಕಾಮರ್ಸ್ ಸೇರಿಕೊಂಡಾಗ ಇವರು ಏನೂ ಮಾತಾಡಲಿಲ್ಲ. ಅವರಿಗೂ ಗೊತ್ತಾಗಿತ್ತು. ಮುಖ್ಯವಾಗಿ ಮಕ್ಕಳು ಒಳ್ಳೆಯವರಾಗಿ, ನಾಲ್ಕು ಜನಕ್ಕ ಬೇಕಾದವರಾಗಿ ಬೆಳೆದರೆ ಸಾಕು. ಇನ್ನು ಅವರು ಯಾವ ಉದ್ಯೋಗ ಕೈಕೊಂಡರೂ ಅಷ್ಟೆ ಎಂದು.

ಶಿವೂನ ಜೀವನದ ಹಾದಿ ಬೇರೆ ಆದಾಗ ಅವರು ಸಿಟ್ಟಾಗಿ ತಮ್ಮ ಪ್ರತಿಕ್ರಿಯೆ ತೋರಿಸಲಿಲ್ಲ. ಸುಮ್ಮನಿದ್ದರೂ ಅವರು ಬಹಳ ನೊಂದುಕೊಂಡಿದ್ದಾರೆಂದು ತಿಳಿದುಕೊಂಡ ನಾನು ಅವರನ್ನು ಸಂತಯಿಸಲು ಪ್ರಯತ್ನ ಪಟ್ಟೆ. ಸಸ್ಯಶಾಸ್ತ್ರದಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಓದಲು ಶಿವು ಶಿಷ್ಯವೇತನ ಪಡೆದು ಕಲ್ಕತ್ತೆಗೆ ಹೋದ. ಮೊದಲು ಕ್ರಮವಾಗಿ ಪತ್ರ ಬರೆದು, ರಜೆಯಲ್ಲಿ ಊರಿಗೆ ಬಂದು ಹೋಗಿ ಮಾಡುತ್ತಿದ್ದ. ನಾಲ್ಕನೆಯ ವರ್ಷದ ರಜೆಯಲ್ಲಿ ನಾವೆಲ್ಲ ಅವನ ದಾರೀ ಕಾಯುತ್ತಿದ್ದಾಗ ಒಂದು ಉದ್ದವಾದ ಪತ್ರ ಬರೆದ. "ನಾನು ಇಲ್ಲಿ ಪರಿಸರದಿಂದ ಪ್ರಭಾವಿತನಾಗಿ 'ಕ್ರಾಂತಿಪಥ'ದಲ್ಲಿ ಸೇರಿದ್ದೇನೆ. ನಮ್ಮ ದೇಶದ ಬಡತನ, ಅಜ್ಞಾನ ಹೋಗಲಾಡಿಸಲು ಕ್ರಾಂತಿಯೊಂದೇ ಮದ್ದು ಎನ್ನುವದನ್ನು ನಂಬಿದ ನಾನು ನನ್ನ ಕೈಲಾದಷ್ಟು ದೇಶಕ್ಕಾಗಿ ದುಡಿಯ ಬೇಕೆಂದಿದ್ದೇನೆ. ನಿಮಗೆ ಮಾತ್ರ ನಾನು ನಿರುಪಯೋಗಿ. ದಯವಿಟ್ಟು ನನ್ನನ್ನು ಕ್ಷಮಿಸಿ" ಎಂದು ತಿಳಿಸಿದ್ದ. ಪತ್ರ ಓದಿ ನನ್ನ ಹೊಟ್ಟೆ ಬರಿದಾದಂತೆ ಭಾಸವಾಯಿತು. ನನ್ನ ಮಗುವನ್ನು ತಿರುಗಿ ನೋಡುತ್ತೇನೋ ಇಲ್ಲವೋ ಎನಿಸಿ ಸಂಕಟಪಟ್ಟು ಅವರ ಭುಜಕ್ಕೊರಗಿ ಅತ್ತುಬಿಟ್ಟೆ. ಅವರು ಸುಮ್ಮನೆ ನನ್ನ ಭುಜದ ಸುತ್ತ ಕೈ ಹಾಕಿ ಕುಳಿತಿದ್ದರು. ಮಾತಿಲ್ಲದೆ ಇಬ್ಬರ ಮನಸ್ಸು ಒಂದೇ ನಾದ ಮಿಡಿಯುತ್ತಿದ್ದವು.

ತತ್ತ್ವಜ್ಞಾನ ತೆಗೆದುಕೊಂಡು ಪಿಎಚ್.ಡಿ. ಮಾಡುತ್ತಿದ್ದ ಸತ್ಯ ಒಂದು ದಿನ ಹುಡುಗಿಯನ್ನು ಮನೆಗೆ ಕರೆದು ತಂದ. ನನ್ನ ಎದೆ ಡಬಡಬ ಎಂದಿತು. ಅವಳನ್ನು ಕೂಡ್ರಿಸಿ, ಅಡಿಗೆ ಮನೆಯಲ್ಲಿ ನನ್ನ ಹತ್ತಿರ ಬಂದ. "ಅವ್ವಾ ಗಾಬರಿ ಆಗಬ್ಯಾಡ. ಅಪ್ಪ ಬರೂದರಾಗ ನಾವು ಹೋಗ್ತೀವಿ. ಹೊರಗ ಬಾ ಗುರ್ತಾ ಮಾಡಿ ಕೊಡ್ತೀನಿ" ಎಂದ ನಗುತ್ತ.

"ಆಕಿ ಯಾರೋ? ಮನೀಗೆ ಯಾಕ ಕರಕೊಂಡ ಬಂದಿ?" ಎಂದೆ.

"ಆಕಿ ಹೆಸರು ಲೀಲಾ. ನನ್ನ ಗೆಳೆಯನ ತಂಗಿ. ಲೀಲಾ ಲೈಬ್ರರಿಯೊಳಗ ಕೆಲಸ ಮಾಡ್ತಾಳ. ನಾ ಹಗಲೆಲ್ಲಾ ಓದಲಿಕ್ಕೆ ಹೋಗ್ತೀನಲ್ಲ, ಗುರುತು ಆಗೇದ."

ಆಗಲೇ ನನಗೆ ಸಂಶಯ ಬಂದಿತ್ತು. ಬರಬರುತ್ತ ಅವಳು ಬರುವುದು, ನನ್ನ ಜೊತೆಗೆ ಹರಟೆ ಹೊಡೆಯುವುದು, ಮನೆಗೆಲಸದಲ್ಲಿ ಸಹಾಯ ಮಾಡುವುದು ಎಲ್ಲ ಸುರುವಾಗಿತ್ತು. ಒಳ್ಳೆಯ ಮನೆತನದ ಸುಶಿಕ್ಷಿತ ಹುಡುಗಿ, ಲಕ್ಷಣವಾಗಿದ್ದಾಳೆ. ಸತ್ಯನಿಗೆ ಮದುವೆ ಮಾಡಿದರೂ ತಪ್ಪಿಲ್ಲ ಎಂದುಕೊಂಡು ನಾನೇ ಅವರ ಒಡನಾಟ ಪ್ರೋತ್ಸಾಹಿಸುತ್ತ ಬಂದೆ. ನಡುವೆ ಇವರಿಗೂ ಒಂದು ಮಾತು ತಿಳಿಸಿದ್ದೆ. ಸತ್ಯ ನೋಡಿ ಕೊಂಡದ್ದು ಎಂದು ಹೇಳಿರಲಿಲ್ಲ. ಅವರು ಆಗಾಗ ಅವಳನ್ನು ಮಾತಾಡಿಸಿ ನೋಡಿ ತಮ್ಮ ಒಪ್ಪಿಗೆ ಕೊಟ್ಟಿದ್ದರು. ಒಂದು ಒಳ್ಳೆಯ ಮುಹೂರ್ತ ನೋಡಿ ಮದುವೆ ಮಾಡೋಣ ಎಂದಾಗ ಸತ್ಯ ತನ್ನ ಪಿಎಚ್.ಡಿ. ಮುಗಿಯಲಿ ಎಂದು ತಡೆದಿದ್ದ.

ವಿಧಿ ಎನ್ನುವುದೊಂದು ಇದ್ದರೆ ಅದು ಇಲ್ಲಿ ಮತ್ತೆ ಅಡ್ಡ ಬಂದಿತ್ತು. ಆಸ್ಟ್ರೇಲಿಯಾದ ಪ್ರೊ. ಪಿಯರ್ಸ್‌ನ್‌ರ ರೂಪದಲ್ಲಿ ಭಾರತದಲ್ಲಿ ಕೆಲವು ತಿಂಗಳು ಇದ್ದು ಇಲ್ಲಿಯ ತತ್ತ್ವಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಬಂದ ಪಿಯರ್ಸ್‌ನ್‌ರಿಗೆ ಸತ್ಯ ಬಹಳ ಮೆಚ್ಚಿನವನಾದ. ಕೆಲವು ದಿನ ಕಳೆದ ಮೇಲೆ ಉತ್ತರ ಭಾರತದ ಯಾತ್ರಾಸ್ಥಳಗಳನ್ನು,

ಹಿಮಾಲಯವನ್ನು ನೋಡಿ ಬರಲು ಹೊರಟ ಪಿಯರ್ಸನ್‌ರಿಗೆ ಸತ್ಯ ಜೊತೆಯಾದ. ಅಲ್ಲಿಯವರೆಗೆ ತತ್ತ್ವಜ್ಞಾನವನ್ನು ಪುಸ್ತಕಗಳಲ್ಲಿ ಓದಿದ್ದ ಸತ್ಯನಿಗೆ ಹಿಮಾಲಯದ ತಪ್ಪಲು ಪ್ರದೇಶ ಹೊಸದೊಂದು ಲೋಕವನ್ನು ತೆರೆದು ತೋರಿಸಿತು. ಅಲ್ಲಿಯ ಯೋಗಿಗಳು, ಬೈರಾಗಿಗಳು ನಡೆಸುತ್ತಿದ್ದ ಜೀವನ, ಮಾಡುತ್ತಿದ್ದ ಯೋಗ ಅವನಿಗೆ ಒಂದು ರೀತಿಯ ಮೋಡಿ ಮಾಡಿಬಿಟ್ಟವು! ಸತ್ಯ ಹೃಷಿಕೇಶದ ಹತ್ತಿರ ಉಳಿದು ಯೋಗಾಭ್ಯಾಸ ಮಾಡಹತ್ತಿದ. ಅವನು ಇನ್ನೂ ತಿರುಗಿ ಊರಿಗೆ ಯಾಕೆ ಬರಲಿಲ್ಲವೆನ್ನುವುದು ತಿಳಿಯದೆ ತತ್ತರಿಸುತ್ತಿದ್ದ ನಮಗೆ ಒಂದು ಪತ್ರ ಬರೆದು ಮುಗಿಸಿ ಕೈ ತೊಳೆದುಕೊಂಡ. ಲೀಲಾ ಬಂದರೆ ಏನು ಹೇಳುವದೆಂದು ತಿಳಿಯದೆ ಗೊಣಗುತ್ತಿದ್ದ ನನಗೆ ಲೀಲಾನೆ ಬಂದು ಸತ್ಯ ಬರೆದ ಪತ್ರ ತೋರಿಸಿದಳು.

'ಲೀಲಾ,

ನಿನ್ನ ಸ್ನೇಹ ಬೆಳೆಸಿ ನಾನು ತಪ್ಪು ಮಾಡಿದೆನೆಂದು ನನ್ನ ಅಂತರಾತ್ಮ ಕೊರಗುತ್ತಿದೆ. ಮನಸ್ಸಿನ ಈ ತಳಮಳದಲ್ಲಿ ಯೋಗ ಮಾಡುವುದು ನನ್ನಿಂದ ಸಾಧ್ಯವಾಗುತ್ತಿಲ್ಲ. ದಯವಿಟ್ಟು ನೀನು ನನ್ನನ್ನು ಮರೆತು ಬಿಡು, ಕ್ಷಮಿಸಿದ್ದೇನೆಂದು ಒಂದು ಸಾಲು ಬರೆದು ತಿಳಿಸಿದರೆ ಸಾಕು. ನಾನು ನಿನಗೆ ಚಿರ ಋಣಿ. ನೀನು ಬೇರೆ ಮದುವೆಯಾಗಿ ಸುಖವಾಗಿರು.

ಇಂತು,

ಸತ್ಯಕಾಮ".

ಸತ್ಯ ಅವಳಿಗೆ ವಿಳಾಸ ತಿಳಿಸಿದ್ದ. ಅವನಿದ್ದುದು ಹೃಷಿಕೇಶದ ಒಂದು ಹಳ್ಳಿ. ಅವನ ಇಚ್ಛೆಯಂತೆಯೆ ಪತ್ರ ಬರೆಯುವೆನೆಂದು ಲೀಲಾ ಹೇಳಿದಾಗ ನನಗೆ ಮುಖ ತಗ್ಗಿಸುವಂತಾಗಿತ್ತು. ಆ ರಾತ್ರಿ ಅವರು ಪತ್ರವನ್ನೋದಿ, ಮಂಕಾಗಿ ಕುಳಿತ ನನ್ನ ಭುಜ ಅಲುಗಿಸಿ ಕೇಳಿದರು.

"ಸುಮೀsss ಸತ್ಯ ಇಲ್ಲೆ ವಿಳಾಸ ಕೊಟ್ಟಾನ. ನಾವಿಬ್ಬರೂ ಹೋಗಿ ಕರಕೊಂಡು ಬರೂಣೇನು ?" ಮಕ್ಕಳ ಬಗೆಗಿದ್ದ ಅವರ ಅಂತಃಕರಣ ಅಪಾರ. ಆ ಸಿಟ್ಟಿನ ಮುಖವಾಡದ ಹಿಂದೆ ಎಂಥ ಮೃದು ಮನಸ್ಸು ಇತ್ತು ಎನ್ನುವುದು ಹತ್ತಿರದ ನನಗೆ ಮಾತ್ರ ಗೊತ್ತು. ಇಂಥ ತಂದೆಯ ಮನಸ್ಸನ್ನು ನೋಯಿಸುವ ಮಗನ ಬಗ್ಗೆ ಹೆತ್ತ ತಾಯಿ ನಾನೆ ಕಠಿಣಳಾದೆ. "ನಾವು ಇಲ್ಲಿಂದ ಹೋಗೂದರೊಳಗ ಅವ ಹಳ್ಳೀ ಬಿಟ್ಟಿದ್ದರ ನಮಗ ಸಿಗೂದಿಲ್ಲ. ಒಂದು ವೇಳೆ ಸಿಕ್ಕರೂ ನಮ್ಮ ಮಾತ ಕೇಳತಾನ ಅನ್ನೂ ಭರೋಸ ಇಲ್ಲಾ. ಸಂಸಾರ ಬಿಟ್ಟು ತಪಸ್ಸು ಮಾಡಿ ಮುಕ್ತಿ ಹೊಂದಬೇಕು ಅನ್ನೊವವಗ ನಾವು ಯಾಕ ಬೆನ್ನ ಹತ್ತಿ ಹೋಗಿ ಕರೀಬೇಕು? ಹೋಗಲಿ ಬಿಡ್ರಿ. ಎಲ್ಲ್ಯಾದರೂ ಹೋಗಲಿ."

ಅವರು ಸಮಾಧಾನ ಮಾಡುವಂತೆ ನನ್ನ ಬೆನ್ನು ಸವರುತ್ತ ಹೇಳಿದರು. "ಸುಮೀsss ಯಾಕ ಸುಮ್ಮನಾದಿ, ಅಳತಿದ್ದರ ಅತ್ತಬಿಡು. ನಿನ್ನ ಎದಿ ಹಗುರಾಗಲಿ. ಹಿಂದ ನೀನ ನನಗ ಹೇಳಿದ್ದೆಲ್ಲ, ಮಕ್ಕಳ ಭವಿಷ್ಯ ಬರಿಯೂದು ನಮ್ಮ ಕೈಯಾಗಿಲ್ಲ ಅಂತ. ಅವರ ಜೀವನಾ ಅವರು ರೂಪಿಸಿಕೋತಾರ. ಅವರಿಗೆ ಬೇಕಾಗೂ ಸೌಕರ್ಯ ಮಾಡಿಕೊಡೂದಷ್ಟುs ನಮ್ಮ ಕೆಲಸ. ಹೌದಲ್ಲೊ?"

ತಗ್ಗಿಸಿದ ನನ್ನ ತಲೆಯನ್ನು ಮೇಲೆತ್ತಿ ಗಲ್ಲದ ಮೇಲೆ ಇಳಿಯುತ್ತಿದ್ದ ಕಣ್ಣೀರನ್ನೊರೆಸಿ ಮತ್ತೆ ಹೇಳಿದ್ದರು:

"ನೀ ಯಾಕ ಅಳತೀ ಅನ್ನೂದ ನನಗ ಗೊತ್ತದ. ದೊಡ್ಡವರಿಬ್ಬರೂ ಕೈ ಬಿಟ್ಟು ಹೋದರು. ಮುಪ್ಪಿನ ಕಾಲಕ್ಕ ನಮ್ಮನ್ನ ನೋಡವರ್‍ಯಾರು ಅನ್ನೂ ಸ್ವಾರ್ಥಕ್ಕ ನೀ ಅಳೂದಿಲ್ಲ ಸುಮೀsss, ಮಕ್ಕಳು ಇನ್ನೂ ಸಣ್ಣವರು ಪಾsಪ ! ಜೀವನದಾಗ ಯಾವ ಸುಖಾನೂ ಕಾಣಲಿಲ್ಲ ಅಂತ ನಿನಗ ಸಂಕಟ ಆಗ್ತದ. ಹೌದಲ್ಲೋ? ಹೌದು, ಇಷ್ಟ

ವರ್ಷ ಕೂಡಿ ಬಾಳಿದ ಮ್ಯಾಲೆ ನಿನ್ನ ಸ್ವಭಾವ ನನಗ ತಿಳೀದಿದ್ದರ ಹ್ಯಾಂಗ ? ಆದರ ನೀನು ಈ ರೀತಿ ವಿಚಾರ ಮಾಡುದು ತಪ್ಪು ಅನಸ್ತದ ನನಗ. ಸುಖದ ಕಲ್ಪನಾ ಒಬ್ಬೊಬ್ಬರಿಗೆ ಒಂದೊಂದು ರೀತಿ ಇರ್ತದ. ಈ ಜಗತ್ತಿನೊಳಗ ಎಷ್ಟು ಮಂದೀನೊ ಅಷ್ಟು ತರದ ರೂಪ, ಬುದ್ಧಿ, ವಿಚಾರ ಎಲ್ಲಾ ಬ್ಯಾರೆ ಬ್ಯಾರೆ. ಹಾಂಗs ಸುಖದ ಕಲ್ಪನಾನೂ ಬ್ಯಾರೆ ಬ್ಯಾರೆ. ಸತ್ಯ, ಶಿವು ಇಬ್ಬರೂ ತಾವು ಹಿಡಿದ ದಾರಿಯೊಳಗೆ ಸುಖಾ ಅದ ಅಂತ ತಿಳಕೊಂಡಾರ. ಅವರು ಎಲ್ಲೇ ಇದ್ದರೂ ಒಳ್ಳೆಯವರಾಗಿ ಇರ್ತಾರ. ಒಳ್ಳೆಯದನ್ನ ಮಾಡ್ತಾರ, ಹಿಂಗ ವಿಚಾರ ಮಾಡಿದರ ನಿನಗ ಅಷ್ಟು ದುಃಖ ಆಗೂದಿಲ್ಲ."  ಅವರು ಹೇಳಿದ ಮಾತುಗಳನ್ನು ಮೆಲುಕು ಹಾಕುತ್ತ ನನ್ನ ದುಃಖ ಇಂಗಿತ್ತು. ಮಕ್ಕಳಿಗೆ ಕೇವಲ ಅವರ ಹುಟ್ಟಿಗೆ ಕಾರಣರಾದ ತಂದೆ-ತಾಯಿಗಳಿಂದ ಮಾತ್ರವಲ್ಲದೆ ಹಿಂದಿನ ಆರು ತಲೆಮಾರಿನಿಂದಲೂ ಗುಣ, ರೂಪ, ಸ್ವಭಾವ ರೋಗ ರುಜಿನಗಳೂ ಬರುತ್ತವೆ ಎಂದು ಜೀವಶಾಸ್ತ್ರಜ್ಞರು ಕಂಡು ಹಿಡಿದಿದ್ದಾರೆ ಎನ್ನುವುದನ್ನು ನಾನೂ ಒಮ್ಮೆ ಓದಿದ್ದೆ. ನಮ್ಮ ಅಜ್ಜ ಹುಟ್ಟಿದ ಮೇಲೆ ಮುತ್ತಜ್ಜ ಸಂಸಾರವನ್ನು ಬಿಟ್ಟು ಆಶ್ರಮ, ಗುರುಗಳು, ದೇವರು ಎಂದು ತಿರುಗುತ್ತ ಹೋದವನು ತಿರುಗಿ ಮನೆಗೆ ಬರಲಿಲ್ಲವೆಂದು ನಾನು ಚಿಕ್ಕಂದಿನಲ್ಲೇ ಕೇಳಿದ್ದೆ. ಆ ಗುಣ ಸತ್ಯನಲ್ಲಿ ಇಳಿದಿದ್ದೀತೆ ಎಂದು ನಾನು ಇವರಲ್ಲಿ ವಿಷಯ ತಿಳಿಸಿದಾಗ 'ಇದ್ದರೂ ಇರಬಹುದು' ಎಂದಿದ್ದರು.

ನಿವೃತ್ತಿ ಹೊಂದಿದ ಮೇಲೆ ಇವರು ಇತರ ಗೆಳೆಯರಂತೆ, ಕ್ಲಬ್ಬಿಗೆ ಪಾರ್ಕಿಗೆ ಹೋಗದೆ ಪುಸ್ತಕಗಳನ್ನು ಆರಿಸಿ ತಂದು ಓದಿ ಚೆನ್ನಾಗಿದ್ದುದನ್ನು ನನಗೂ ಕೊಡುತ್ತಿದ್ದರು. ಜಗತ್ತಿನ ವಿಚಾರವಾದಿಗಳ, ಆದರ್ಶವಾದಿಗಳ ಸಂಪರ್ಕ ಬೆಳೆದಂತೆ ನನ್ನವರು ಬೆಳೆಯುತ್ತಿದ್ದದ್ದು ನನಗೂ ಅರಿವಿಗೆ ಬಂದಿತ್ತು. ಜೀವನದ ಬಗ್ಗೆ, ಸನಿಹಕ್ಕೆ ಬಂದ ವ್ಯಕ್ತಿಗಳ ಬಗ್ಗೆ ತಮ್ಮ ದೃಷ್ಟಿ ಧೋರಣೆಗಳನ್ನು ಬದಲಾಯಿಸಿಕೊಂಡು ಮನುಷ್ಯ ಪಕ್ವವಾಗುತ್ತ ಹೋಗಲಿಕ್ಕೆ ಇದು ತಕ್ಕ ಕಾಲ, ಅದನ್ನು ಅವರ ಮುಂದೆ ಆಡಿ ತೋರಿಸಿದಾಗ ನಕ್ಕು ಬಿಟ್ಟಿದ್ದರು. ಅವರ ನಿವೃತ್ತಿ ವೇತನ, ಮತ್ತು ಸುಂದರನ ಬ್ಯಾಂಕಿನ ವೇತನದಿಂದ ನಮ್ಮ ಜೀವನ ನೆಮ್ಮದಿಯಿಂದ ಸಾಗಿತ್ತು.

ಒಂದು ದಿನ ಸುಂದರ ನಮ್ಮ ಹತ್ತಿರ ಬಂದು ಕುಳಿತ. ಓದುತ್ತಿದ್ದ ಪುಸ್ತಕದಿಂದ ಅವರು ತಲೆಎತ್ತಿ ನೋಡಿದರು. ಸುಂದರನ ಮುಖ ಅಪೂರ್ವ ಕಳೆಯಿಂದ ಕೂಡಿತ್ತು. ಹೆತ್ತ ತಾಯಿಯ ಹೆಚ್ಚುಗಾರಿಕೆಯ ಮಾತಲ್ಲ. ನೋಡಿದವರೆಲ್ಲ ಇವೆಷ್ಟು ಸುಂದರ ಎನ್ನುತ್ತಿದ್ದರು. ಅವನು ನಗುತ್ತ "ಅಪ್ಪಾs ನೀವು ಅವಾಗ ಕೇಳಿದ್ರಲ್ಲ. ನಾನು ಈಗ ಮದುವಿ ಆಗಲಿಕ್ಕೆ ತಯಾರ ಅದೀನಿ. ಆದರ ...." ಎಂದು ತಡೆದ.

"ಯಾಕಪ್ಪ ಸುಮ್ಮನಾದಿ, ಪೂರ್ಣ ಹೇಳಿಬಿಡು" ಎದೆ ಧಡಧಡಿಸುತ್ತಿದ್ದರೂ ನಾನು ಆತುರದಿಂದ ಕೇಳಿದ್ದೆ.

"ಅವ್ವಾs ನಾನು ಲೀಲಾನ್ನ ಮದುವಿ ಆಗಬೇಕಂತ ಮಾಡೀನಿ".

ನಮ್ಮಿಬ್ಬರಿಗೂ ಮಾತೇ ಹೊರಡಲಿಲ್ಲ. ಮತ್ತೆ ನಾನೇ ಕೇಳಿದೆ ಸಣ್ಣಗೆ.

"ಅವಳು ಒಪ್ತಾಳೇನೋ ?"

"ಅವ್ವ ಸತ್ಯಣ್ಣ ಹೋದ ಮ್ಯಾಲೆ ಆಕೀಗೆ ಸಮಾಧಾನ ಹೇಳಲಿಕ್ಕೆ ಅಂತ ಆಗಾಗ ಭೆಟ್ಟಿ ಆಗ್ತಿದ್ದೆ. ನಿಮಗ ಹೇಳಿದ್ದಿಲ್ಲ. ಅವಳ ಮನಿಯವರು ಬ್ಯಾರೆ ವರಾ ನೋಡುತ್ತಿದ್ದರು. ಎಲ್ಲಿಯೂ ಕೂಡಿ ಬರಲಿಲ್ಲ. ಅದಕ್ಕೇನು ಕಾರಣ ಅನ್ನೂದು ನಮಗೆಲ್ಲಾ ಗೊತ್ತದ. ಅವಳ ಸ್ವಭಾವ ನನ್ನ ಮನಸ್ಸಿಗೆ ಬಂದ ಮ್ಯಾಲೆ ಒಂದಿನಾ ನಾನs ಕೇಳಿದೆ. ವಿಚಾರ ಮಾಡಿ ಒಪ್ಪಿಗಿ ಕೊಟ್ಟಳು. ಆದರ ನಿಮ್ಮಿಬ್ಬರ ಒಪ್ಪಿಗಿ ಇದ್ದರ ಮಾತ್ರ ಮದುವಿ ಆಗಬೇಕು ಅಂತ ಕರಾರು ಹಾಕ್ಯಾಳ. ಈಗ ನೀವೇನಂತೀರಿ."

"ಸುಂದರೂ, ಖರೇನ ಹೇಳಬೇಕಂದರ ಇವತ್ತ ನಮ್ಮ ಮನಸ್ಸಿನ ಒಂದು ಭಾರ ಇಳದಾಂಗ ಆತು ನೋಡು. ಆ ಹುಡುಗಿಗೆ ಸತ್ಯನಿಂದ ಅನ್ಯಾಯ ಆತು ಅಂತ ನನ್ನ ಮನಸ್ಸು ಕಟೀತಿತ್ತು. ಈಗ ನೀನs ಮದುವಿ ಆದರ, ನಾವಿಬ್ಬರೂ ಮನಃಪೂರ್ವಕ ಆಶೀರ್ವಾದ ಮಾಡ್ತೀವಿ."

ಈ ಸಲ ನಮ್ಮಿಬ್ಬರ ಪರವಾಗಿ ಅವರು ಮಾತನಾಡಿದ್ದರು. ಆದರೂ ನನಗೆ ಅಳುಕು. "ಸುಂದರೂ, ಅಣ್ಣ ಬಿಟ್ಟು ಹುಡುಗೀನ್ನ ತಮ್ಮ ಮಾಡಿಕೋತಾನ ಅಂತ ಮಂದಿ ಆಡಿಕೋತಾರಪ್ಪ. ಅದನ್ನ ಮನಸ್ಸಿಗೆ ಹಚಿಕೋಬ್ಯಾಡ. ಒಟ್ಟಿನ ಮ್ಯಾಲೆ ನೀವಿಬ್ಬರೂ ಸುಖದಿಂದ ಇದ್ದರ ಸಾಕು ನಮಗ."

"ಜನಾ ಆಡಿಕೊಳ್ಳೂದಕ ನಾ ಮಹತ್ವ ಕೊಡೂದಿಲ್ಲ ಅವ್ವಾs. ನಾಲ್ಕು ದಿನಾ ಆಡಿಕೊಂಡು ಬಾಯಿ ಚಪಲಾ ತೀರಿಸ್ಕೋತಾರ." ವ್ಯಕ್ತಿತ್ವ ಬೆಳೆಸಿಕೊಂಡಿದ್ದ ಮಗನ ನಗುವಿನಲ್ಲಿ ನಾನು ಕರಗಿ ಹೋಗಿದ್ದೆ. ಹಾಗೆ ಲೀಲಾ ನಮ್ಮ ಮನೆಗೆ ಬಂದಳು. ನಮಗೆ ಮಗಳೂ ಅವಳೇ, ಸೊಸೆಯೂ ಅವಳೇ.

ಸೋನಿಯಾ ಹುಟ್ಟಿದ ಮೇಲೆ ಅವಳೊಡನೆ ಆಡುತ್ತ ಕಾಲ ಕಳೆದದ್ದೇ ತಿಳಿಯಲಿಲ್ಲ ನಮಗೆ. ಒಂದು ದಿನಾ ಸ್ನಾನ ಮುಗಿಸಿ ಬರುತ್ತಿದ್ದ ಅವರು ಬಚ್ಚಲಲ್ಲಿಯೇ ಕುಸಿದು ಬಿದ್ದರು. ಮೊದಲನೆಯ ಹಾರ್ಟ್ ಅಟ್ಯಾಕ್‌ನಿಂದ ಅವರು ಮತ್ತೊಮ್ಮೆ ಹುಟ್ಟಿ ಬಂದ ಹಾಗಾಗಿತ್ತು.

ಹಾಸಿಗೆಯಲ್ಲಿದ್ದುಕೊಂಡು ಅವರು ಸೊಸೆಗೆ ಹೇಳುತ್ತಿದ್ದರು. "ಲೀಲಾs ನಾನು ಈಗ ಸೋನೀ ಹಾಂಗ, ಹಾಸಿಗಿ ಬಿಟ್ಟು ಏಳಬಾರದು. ಭಾಳ ಹೊತ್ತು ಕೂಡ್ರಬಾರದು. ಹೊರಗ ಅಡ್ಡಾಡಬಾರದು. ನನ್ನೂ ಒಂದು ಕೂಸಿನ್ಹಾಂಗ ಜ್ವಾಪಾನ ಮಾಡತಾಳ ನಿಮ್ಮ ಅತ್ತಿ. ಈ ಮೂವತ್ತ ವರ್ಷ ನಾ ಹೇಳಿದಾಂಗ ಅಕಿ ಕೇಳಿಕೋತ ಬಂದ್ಲು. ಈಗ ಆಕಿ ಹೇಳಿದಾಂಗ ನಾ ಕೇಳ್ತೀನಿ. ಕೂಡ್ರು ಅಂದರ ಕೂಡ್ರತೀನಿ. ಏಳು ಅಂದರ ಏಳತೀನಿ. ಹೌದಲ್ಲೋ, ಸುಮೀs ಬಾ ಇಲ್ಲೆ, ಆಧಾರ ಕೊಡು ನನಗ. ನಾ ವರಾಂಡದಾಗ ಕೂತು ಸ್ವಲ್ಪ ಗಾಳಿ ಕುಡೀತೀನಿ."

ಮನೆಯ ಕೆಲಸ, ಮಾವನ ಉಪಚಾರಗಳಲ್ಲಿ ನನಗೆ ಸಹಾಯ ಮಾಡಲು ಲೀಲಾ ನೌಕರಿ ಬಿಟ್ಟು ಮನೆಯ ಹೊಣೆ ವಹಿಸಿಕೊಂಡಿದ್ದಳು. ಹಾರ್ಟ್ ಅಟ್ಯಾಕ್ ಆದವರು ಮುಂದೆ ಎಷ್ಟೋ ವರ್ಷ ಬಾಳಿದ್ದನ್ನ ಕಂಡ ನಾನು ಅವರು ಗುಣ ಹೊಂದುತ್ತಿದ್ದುದನ್ನು ನೋಡಿ ನಿಶ್ಚಿಂತಳಾಗಿದ್ದೆ. ಎರಡನೆಯ ಸಲ ಅಟ್ಯಾಕ್ ಬಂದಾಗ ಅವರು ರಾತ್ರಿಯೇ ನನ್ನ ಕೈ ಬಿಟ್ಟು ಹೊರಟು ಹೋಗಿದ್ದರು.

ನಾನು ಇನ್ನು ಇರುವುದಾದರೂ ಯಾರಿಗಾಗಿ, ಬದುಕಬೇಕಾದ್ರೂ ಯಾಕಾಗಿ? ಇಲ್ಲಿ ನನ್ನ ಅವಶ್ಯಕತೆ ಯಾರಿಗೂ ಇಲ್ಲ. ಸತ್ಯ, ಶಿವು ತಮಗೆ ತಿಳಿದ ಹಾಗೆ ಹಾದಿ ಹಿಡಿದಿದ್ದಾರೆ. ಸುಂದರೂ ಹೆಂಡತಿ ಮಗಳೊಡನೆ ಚೆನ್ನಾಗಿ ಬಾಳ್ತಾನೆ. ವಯಸ್ಸಾಗಿ, ಕೈಕಾಲು ಬಿದ್ದು, ಹಾಸಿಗೆ ಹಿಡಿದು ಮಲಗಿ ಮನೆಯವರಿಗೆ ಭಾರವಾಗಿ ಬದುಕುವುದಕ್ಕಿಂತಲೂ ಹೀಗೇ ಗಟ್ಟಿಯಾಗಿ ಇರುವಾಗಲೇ ಸತ್ತು ಹೋಗಬೇಕೆನಿಸುತ್ತದೆ. ಆದರೆ ಸಾಯೋದು ಅಷ್ಟು ಸುಲಭ ಅಲ್ಲವಲ್ಲ. ಸಾವು ಬೇಕೆಂದಾಗೆಲ್ಲ ಬರುವುದಿಲ್ಲ. ಅವರ ಹಾಗೆ ನನಗೂ ಅಟ್ಯಾಕ್ ಬಂದು ಪಟ್ಟಂತ ಹೋಗಿ ಬಿಡಬೇಕು. ಮೊನ್ನೆ ಲೀಲಾ ಹೇಳ್ತಿದ್ದಳಲ್ಲ. ಅವಳ ಗೆಳತಿಯ ಗಂಡನಿಗೆ ಚಿಕ್ಕ ವಯಸ್ಸು,. ಹೆಂಡತಿ, ಎರಡು ಪುಟ್ಟ ಮಕ್ಕಳು. ಒಂದು ಮುಂಜಾನೆ ಚಹಾ ಕುಡಿಯುತ್ತಿರುವಾಗಲೇ ಅಟ್ಯಾಕ್ ಬಂದು ಸತ್ತು ಹೋದನಂತೆ. ಗೆಳತಿಯ ದುಃಖ ನೋಡಲಾಸಲ್ಲ ಅಂತ ಲೀಲಾನೂ ಅತ್ತು ಅತ್ತು ಕಣ್ಣು ಕೆಂಪಗೆ ಮಾಡಿಕೊಂಡು ಬಂದಿದ್ದಳು. ಅಷ್ಟು ಸಣ್ಣವರು ಸಾಯದೆ ನನ್ನಂಥವರಾದರೂ ಸಾಯಬಾರದೆ? ಸಾವು ಅಂದರೆ ಅಂಗಿ ಕಳಚಿ ಬೀಸಾಡಿದ ಹಾಗೆ ಅಂತ ತಿಳಿದವರು ಹೇಳ್ತಾರ. ಅಷ್ಟು ಸುಲಭ ಆಗಿದ್ರ ನಾನೂ ತೆಗೆದು ಒಗೀತಿದ್ದೆ. ಈ ಅಂಗಿ ಇನ್ನೂ ಜೀರ್ಣವಾಗಬೇಕೇನೊ...

ಝಣಣಣ! ಅಡಿಗೆ ಮನೆಯಿಂದ ಬಂದ ಸಪ್ಪಳ ಸುಮತಿಯ ನೆನಪಿನ ಸುರುಳಿಯನ್ನು ಕತ್ತರಿಸಿತು. ಸೋನಿಯಾಳ ಸ್ನಾನ ಮುಗಿದು ಲೀಲಾ ಊಟ ಮಾಡಿಸುತ್ತಿರಬೇಕು. ಇನ್ನು ಲೀಲಾ ತನ್ನನ್ನು ಊಟಕ್ಕೆ ಕರೆಯಲು ಬರುತ್ತಾಳೆ. ನಿನ್ನೆ ಸಂಜೆ ಸುಂದರೂ ತಂದುಕೊಟ್ಟ ಸತ್ಯನ ಪತ್ರ ಓದಿದಾಗಿನಿಂದ ಮನಸ್ಸು ತನ್ನ ವಶದಲ್ಲಿಯೇ ಇಲ್ಲ. ಏನೇನೋ

ವಿಚಾರಗಳೆಲ್ಲ ಹುಟ್ಟಿ ಘಾಸಿಗೊಳಿಸುತ್ತಿವೆ. ಹುಟ್ಟು-ಸಾವು ಮನುಷ್ಯನ ಕೈಯಲ್ಲಿ ಇಲ್ಲವೆನ್ನುವುದನ್ನು ನಾನು ಬಲ್ಲೆ. ಆಯುಷ್ಯ ಇರುವವರೆಗೂ ಬದುಕಲೇಬೇಕಾದುದು ಅನಿವಾರ್ಯ ಎನ್ನುವುದು ಗೊತ್ತಿದೆ. ಆದರೂ ನನ್ನ ಸಂಸಾರ, ನನ್ನ ಗಂಡ - ಮಕ್ಕಳು ಇವರಿಗಾಗಿ ನಾನು ಮಾಡುವ ಕರ್ತವ್ಯ - ಕೆಲಸ ಎಲ್ಲ ಮುಗಿದಿದೆ. ಇನ್ನು ಇರುವುದರಿಂದ ಏನು ಪ್ರಯೋಜನ? ಬದುಕಿದ್ದರೆ ಯಾರಿಗಾದರೂ ನನ್ನಿಂದ ಉಪಯೋಗವಾಗುತ್ತಿದ್ದರೆ ಮಾತ್ರ ಬದುಕಬೇಕು ಎನ್ನುವ ವಿಚಾರವೇ ಮತ್ತೆ ಮತ್ತೆ ತಲೆ ಎತ್ತಿ ತಿವಿಯುತ್ತಿದೆ. ಸತ್ಯನ ಪತ್ರವಂತೂ ಕೈಯಲ್ಲಿ ಇದೆ. ಇನ್ನು ಶಿವು-ಶಿವು ಎಲ್ಲಿ ? ಎಲ್ಲಿದ್ದಾನೋ ಹೇಗಿದ್ದಾನೋ ಗೊತ್ತಿಲ್ಲ. ತನ್ನ ವಿಳಾಸ ತಿಳಿಸಿದಿದ್ದರೂ ಇಷ್ಟು ದಿನ ಒಂದು ಸಾಲಿನ ಪತ್ರವನ್ನಾದರೂ ಬರೆಯುತ್ತಿದ್ದ. ಈಗ ಒಂದು ವರ್ಷದಿಂದ ನಾಪತ್ತೆ, ಅವನ ಬಗ್ಗೆ ಏನೂ ವಿಷಯ ತಿಳಿದಿಲ್ಲ. ತಂದೆ ತೀರಿದ ಸುದ್ದಿ ಕೂಡ ಶಿವು, ಸತ್ಯರಿಗೆ ಗೊತ್ತಿಲ್ಲ. ಸಾಯುವ ಹಿಂದಿನ ದಿನ ಅವರು ಇಬ್ಬರೂ ಮಕ್ಕಳನ್ನು ನೆನೆಸಿದ್ದರು. ಸುಮತಿಯ ಕಣ್ಣಾಲಿಗಳು ತುಂಬಿ ಬಂದವು. ಸತ್ಯನ ಪತ್ರವನ್ನು ಮತ್ತೊಮ್ಮೆ ಎತ್ತಿ ಓದಿದಳು.

"ಪ್ರೀತಿಯ ಅಪ್ಪ, ಅವ್ವ

ನನ್ನ ಯೋಗಸಾಧನೆ ಈಗ ಒಂದು ಹಂತವನ್ನು ಮುಟ್ಟಿದೆ. ಭಗವಾನ್ ಶ್ರೀ ಸಚ್ಚಿದಾನಂದರ ಶಿಷ್ಯನಾದ ಮೇಲೆ ನನ್ನ ಜೀವನದ ಗುರಿ ಈಗ ನಿಚ್ಚಳವಾಗಿದೆ. ಇನ್ನು ಒಂದು ವಾರದಲ್ಲಿ ನಮ್ಮ ಗುರುಗಳೊಡನೆ ಅಮೆರಿಕನ್‌ರ ಆಮಂತ್ರಣದ ಮೇರೆಗೆ ಅಲ್ಲಿಗೆ ಹೊರಟಿದ್ದೇನೆ. ಮಾನವ ಕುಲಕ್ಕೆ ನನ್ನಿಂದ ಆಗುವ ಸೇವೆಯನ್ನು ಸಲ್ಲಿಸುವ ಅವಕಾಶ ಸಿಕ್ಕಿದ್ದಕ್ಕಾಗಿ ನನಗೆ ತುಂಬ ಸಂತೋಷವಾಗಿದೆ. ದೇವರು ನಿಮ್ಮೆಲ್ಲರನ್ನೂ ಸಂತೋಷವಾಗಿಡಲಿ.

ಇತಿ,

ಸತ್ಯಾನಂದ"

ಕಣ್ಣುಮುಚ್ಚಿ ಒಂದು ದೀರ್ಘ ಉಸಿರುಬಿಟ್ಟಳು ಸುಮತಿ. ಹೊರಗೆ ರಿಕ್ಷಾ ನಿಂತ ಸಪ್ಪಳವಾಯಿತು. ಕೆಲಸದಲ್ಲಿದ್ದ ಸೊಸೆ ಬರುವ ಮೊದಲೇ ಸುಮತಿ ಧಾವಿಸಿ ಹೋಗಿ ಬಾಗಿಲು ತೆರೆದಳು. ರಿಕ್ಷಾದವನು ಸೂಟಕೇಸ ಎತ್ತಿ ಕಟ್ಟೆಯ ಮೇಲೆ ಇಡುತ್ತಿದ್ದ. ಶಿವು ರಿಕ್ಷಾದಲ್ಲಿ ಕುಳಿತೇ ಅವ್ವನ ಕಡೆ ಕೈಚಾಚಿದ. ಗಡ್ಡ ಮೀಸೆಗಳಿಂದ ತುಂಬಿದ ಮುಖವನ್ನು ಕರುಳು ಗುರುತಿಸಿತು. ಸುಮತಿ ಓಡಿ ಹೋಗಿ ಮಗನನ್ನು ಬಾಚಿ ತಬ್ಬಿಕೊಂಡಳು. ಅವನ ನೆತ್ತಿ ಮೂಸಿದಳು. ಅವಳ ಕಣ್ಣೀರು ಅವನ ಪೊದೆಗೂದಲಿನಲ್ಲಿ ಎಲ್ಲಿಯೋ ಅಡಗಿ ಹೋಯಿತು. ಅವ್ವನ ಭುಜದ ಸುತ್ತ ಕೈ ಹಾಕಿ ಸೀಟಿನ ಮೇಲೆ ಸರಿಯುತ್ತ ಸರಿಯುತ್ತ ಶಿವು ರಿಕ್ಷಾ ಬಿಟ್ಟು ಇಳಿದು ನಿಂತ. ಅವನ ಬಲಗಾಲು ಮೊಣಕಾಲಿನವರೆಗೆ ತುಂಡಾಗಿತ್ತು ತಾಯಿಗಾಗಿ ಸಾವು ಕೊನೆಯ ಘಳಿಗೆಯಲ್ಲಿ ಮಗನ ಮೇಲೆ ದಯೆ ತೋರಿತ್ತು.

***

■■

# ಶ್ರೀದೇವಿ

ಭಾರತೀಯ ಸಂಗೀತ ವಿದ್ವಾಂಸರ ವೀಣಾವಾದನ ಕಾರ್ಯಕ್ರಮಕ್ಕೆ ಹೋಗಲು ಶ್ರೀದೇವಿ ಶೃಂಗರಿಸಿಕೊಳ್ಳುತ್ತಿದ್ದಾಗ ಫೋನ್ ಗಂಟೆಯಾಯಿತು. ಬಲಗೈಯಲ್ಲಿ ಲಿಪ್‌ಸ್ಟಿಕ್ ಹಿಡಿದವಳು ಎಡಗೈಯಿಂದ ಅಲಕ್ಷ್ಯವಾಗಿ ಫೋನ್ ಎತ್ತಿದಳು. ಕರೆ ಬಂದಿದ್ದು ಭಾರತದಿಂದ ಎಂದೊಡನೆ ಲಿಪ್‌ಸ್ಟಿಕ್ ಕೆಳಗಿಟ್ಟು ಬಲಗೈಗೆ ಫೋನ್ ವರ್ಗಾಯಿಸಿ ಆರಾಮವಾಗಿ ಸೋಫಾದ ಮೇಲೆ ಕುಳಿತು ಕಿವಿಗೊಟ್ಟಳು.

"ಹೋ! ನಾನು ನಾಗರಾಜ ಮಾತಾಡ್ತಿರೋದು."

"ಹಾಯ್! ಅಣ್ಣಾ ನಾನೇ ಶ್ರೀ. ಏನು ಎಲ್ಲಾ-"

ಅವಳ ಮಾತು ಮುಗಿಯಲಿಲ್ಲ "ಇಲ್ಲಾ ಶ್ರೀ. ಒಂದು ಸ್ಯಾಡ್ ನ್ಯೂಜ್, ಅಪ್ಪ ತೀರಿಕೊಂಡ್ರು"

"ಆಂ? ಎಲ್ಲೆ?"

"ಅಪ್ಪ ಅವ್ವ ಇಬ್ರೂ ಬೆಂಗಳೂರಿನಿಂದ ಹೋಗಿ ತಿಂಗಳಾಗಿತ್ತು. ಹಳ್ಳಿ ಮನೀಗೆ ಹೋಗ್ತೀನಿ ಅಂತ ಹಟಾ ಮಾಡಿದ್ರು, ಕಳಿಸಬೇಕಾಯ್ತು. ಅಂತ್ಯಕ್ರಿಯೆ ಅಲ್ಲೇ ನಡೀತದ. ನೀನು ಬರ್ತೀಯೇನು? ಬರ್ತೀನಿ ಅಂದರ ಡೆಡ್ ಬಾಡಿ ಇಡೋ ವ್ಯವಸ್ಥೆ ಮಾಡ್ತಿನಿ."

ಒಂದು ಕ್ಷಣ ಶ್ರೀದೇವಿ ಸುಮ್ಮನಿದ್ದಳು. ತನ್ನ ಅಪ್ಪ, ಪ್ರೀತಿಯ ಅಪ್ಪ ಅವರನ್ನು ಕೊನೆಯದಾಗಿ ನೋಡಲು ತಾನು ಹೋಗಲೇಬೇಕು. ತಾನಿರುವುದು ಬಾಸ್ಟನ್ನಿನಲ್ಲಿ, ಸಾವಿರಾರು ಮೈಲಿ ದೂರ, ಆದರೂ ಪ್ರಯತ್ನಪಟ್ಟು ಹೋಗಲೇಬೇಕು.

"ಅಣ್ಣಾ, ಬರ್ತೀನಿ. ಈಗ ರಾತ್ರಿ ಎಂಟು ಗಂಟೆ. ಹೇಗಾದ್ರೂ ಮಾಡಿ ರಾತ್ರಿ ಹೊರಡುವ ಪ್ಲೇನ್ ಹಿಡೀತಿನಿ ಬಾಯ್." ಮಾತು ಮುಗಿಸಿದ ಶ್ರೀದೇವಿ ಮತ್ತೊಂದು ನಂಬರ ತಿರುವಿದಳು. ರಾತ್ರಿ ಹನ್ನೆರಡಕ್ಕೆ ಹೊರಡುವ ಬೋಯಿಂಗ್‌ನಲ್ಲಿ ಅವಳಿಗೆ ಸೀಟು ಕಾಯ್ದಿರಿಸಿದ ವಿಷಯ ಏಜಂಟನಿಂದ ತಿಳಿದೊಡನೆ ಸೋಫಾದ ಮೇಲೆ ಕುಸಿದು ಮುಖ ಮುಚ್ಚಿಕೊಂಡಳು. ಅಪ್ಪನ ಮುಖ ಕಣ್ಣ ಮುಂದೆ ತಂದುಕೊಳ್ಳಲು ಪ್ರಯತ್ನಿಸಿದಳು. ಅವರಿಗೆ ಆರು ತಿಂಗಳ ಕೆಳಗೆ ಪಾರ್ಶ್ವವಾಯು ಬಡಿದು ಹಾಸಿಗೆ ಹಿಡಿದ ಸುದ್ದಿ ತಿಳಿದಾಗಲೇ ತಾನು ಹೋಗಬೇಕಿತ್ತು. ಏನೇನೋ ಕಾರಣಗಳಿಂದ ಹೋಗಲಿಲ್ಲ. ಅವರಿಗೆ ಇಷ್ಟು ಬೇಗ ಸಾವು ಬಂದೀತೆಂದು ತನಗೆ ತಿಳಿಯಲಿಲ್ಲ. ಹುಚ್ಚಿ! ಎಂಥ ಹುಚ್ಚಿ! ತಾನು ! ಸಾವು ತನಗೆ ಈಗಾಗಲೇ ಒಮ್ಮೆ ಕೈ ಕೊಟ್ಟಿತ್ತಲ್ಲ!

ಹಾಸ್ಪಿಟಲ್‌ನಿಂದ ತನಗೆ ಕರೆ ಬಂದು, ಅಲ್ಲಿಗೆ ಹೋಗಿ ಬಿಳಿ ಬಟ್ಟೆಯ ಗಂಟನ್ನು ನೋಡಿದಾಗಲೇ ಅಲ್ಲವೇ ಬೆಳಿಗ್ಗೆ ಮನೆ ಬಿಟ್ಟು ಆಫೀಸಿಗೆ ಹೋದ ವಿಜಯ ಸತ್ತಿದ್ದಾರೆನ್ನುವುದು ತನಗೆ ತಿಳಿದದ್ದು. ಕಾರ್ ಆಕ್ಸಿಡೆಂಟ್‌ನಲ್ಲಿ ಚೂರು ಚೂರಾಗಿದ್ದ ದೇಹವನ್ನು ತನ್ನಿಂದ ನೋಡಲೂ ಸಾಧ್ಯವಾಗಿರಲಿಲ್ಲ. ಬೆಳಿಗ್ಗೆ ಹೋಗುವಾಗ ತನಗೆ ಬಾಯ್ ಹೇಳಿ ಹೋದ ಗಂಡ ತನ್ನ ಜೀವನಕ್ಕೇ ಬಾಯ್ ಹೇಳಿದ್ದಾರೆನ್ನುವುದನ್ನು ನಂಬಲೇಬೇಕಾಗಿತ್ತು. ಅತ್ತೆ ಮಾವ ತೀರಿಹೋಗಿದ್ದರೂ ಗಂಡನ ಇಬ್ಬರು ತಂಗಿಯರು ಭಾರತದಲ್ಲಿದ್ದರು. ನಾಗರಾಜನಿಗೆ ವಿಜಯನ ಸಾವಿನ ಸುದ್ದಿ ತಿಳಿದು ಭಾರತದಿಂದ ಅವರು ಬರುವವರೆಗೂ ವಿಜಯನ ಅವಶೇಷಗಳನ್ನು ಇಟ್ಟುಕೊಂಡು, ಅಕ್ಕಪಕ್ಕ ಮಕ್ಕಳಿಬ್ಬರನ್ನೂ ಹಿಡಿದುಕೊಂಡು ಕಣ್ಣೀರು ಸುರಿಸುತ್ತ ಬೆಳತನಕ ಒಬ್ಬಳೇ ಕುಳಿತಿದ್ದೆನಲ್ಲ! ಭಾರತೀಯರೊಡನೆ ಅಷ್ಟಾಗಿ ಬೆರೆಯದ ವಿಜಯನಿಗೆ ಇದ್ದ ಹೆಚ್ಚಿನ ಸ್ನೇಹಿತರೆಲ್ಲ ವಿದೇಶೀಯರು. ಆ ಹೊತ್ತಿನಲ್ಲಿ ತನ್ನವರೆನ್ನುವವರು ಇಲ್ಲಿ ಯಾರಿದ್ದಾರೆ

ಎಂದು ಯೋಚಿಸಲೂ ತನಗೆ ತಿಳಿಯದೆ ಹೋಗಿತ್ತು. ಮೈ, ಮನಸ್ಸು ಎಲ್ಲಾ ಜಡವಾಗಿದ್ದವು. ಗಂಡನ ಸ್ನೇಹಿತರೆಲ್ಲ ಬಂದು ಅನುಕಂಪ ಸೂಚಿಸಿ ಸಹಾಯ ಬೇಕಾದರೆ ಕೇಳಿರಿ ಎಂದು ಹೊರಟು ಹೋಗಿದ್ದರು. ಕುತ್ತಿಗೆಯವರೆಗೆ ದುಃಖ ತುಂಬಿದ್ದರೂ ಹೊಟ್ಟೆ ಮಾತ್ರ ಬರಿದಾಗಿ ಸಂಕಟಪಡುತ್ತಿತ್ತು. ವಸು, ವರುಣ ಹರೆಯದ ಮಕ್ಕಳು, ಅವ್ವ ಹಸಿವು ಎಂದಿದ್ದರು. ಒಳಗೆ ಹೋಗಿ ಏನಿದೆಯೋ ನೋಡಿ ತಿನ್ನಿರಿ ಎಂದು ಕಳಿಸಿದ್ದೆ. ರಾತ್ರಿ ಹೆಚ್ಚಾದಂತೆ ಮಕ್ಕಳು ತೂಕಡಿಸಿ ಮ್ಯಾಟಿನ ಮೇಲೆಯೇ ನಿದ್ರಿಸಿದ್ದರು. ತಾನು ಎದ್ದು ಹೋಗಿ ಮನೆಯ ಎಲ್ಲ ಲೈಟುಗಳನ್ನು ಹಚ್ಚಿ ನಿದ್ದೆ ಬಾರದಂತೆ ಮುಖ ತೊಳೆದು ಕೊಂಡು ಹೊಟ್ಟೆಯ ಸಂಕಟ ತಡೆಯಲಾರದೆ ಫ್ರಿಜ್‌ನಲ್ಲಿದ್ದ ಹಾಲು ಕುಡಿದು ಬೆಳಗಾದರೆ ಸಾಕು ಎನ್ನುತ್ತ ಕುಳಿತಿದ್ದಳು.

ಅತ್ತು ಅತ್ತು ಸಾಕಾಗಿ, 'ದೇವರು ವಿಜಯನನ್ನು ಯಾಕೆ ಸಾಯಿಸಿದ ? ತನಗೆ ಯಾಕೆ ಇಂಥ ಕಷ್ಟ ಕೊಟ್ಟ?' ಎಂದು ಕೇಳುವಂತೆ ದೇವರ ಪಟದ ಕಡೆಗೆ ತಿರುಗಿದಾಗ, ಸುಂದರವಾದ ಬನಸಿರಿಯ ನಡುವೆ ಪಾರ್ವತಿಯೊಡನೆ ಕುಳಿತ ಶಿವ ನಗುತ್ತಿದ್ದ. ತಾನು ಈ ಕ್ಯಾಲೆಂಡರಿನ ಚಿತ್ರ ಹಾಕಿ ಪೂಜೆ ಮಾಡಿದಾಗ ವಿಜಯ ತುಂಬಾ ತಕರಾರು ಮಾಡಿದ್ದ. ದೇವರು ? ಎಲ್ಲಿಯ ದೇವರು? ಇಂದಿನ ಯುಗದಲ್ಲಿ ವಿಜ್ಞಾನವೇ ದೇವರು. ಬೇರೆ ದೇವರಿಲ್ಲ. ಮನುಷ್ಯನಿಂದ ಅಸಾಧ್ಯವಾದದ್ದು ಯಾವದೂ ಇಲ್ಲ. ಪ್ರಯತ್ನ ಮಾಡುವುದು ಮುಖ್ಯ. ಈ ಭಕ್ತಿ, ಪೂಜೆ, ದೇವರು ಮನುಷ್ಯನನ್ನ ಸೋಮಾರಿಯಾಗಿ ಮಾಡಿಬಿಡ್ತವೆ. ಇವುಗಳನ್ನು ನಂಬಿ ಯಾರೂ ಪ್ರಗತಿ ಹೊಂದೋದಿಲ್ಲ. ನೋಡು ಶ್ರೀ, ನಾನು ನನ್ನ ಸ್ವಂತ ಪ್ರಯತ್ನದಿಂದ ಇಂಥ ಒಂದು ಒಳ್ಳೇ ಸ್ಥಾನವನ್ನು ಅದೂ ಪರದೇಶದಲ್ಲಿ ಪಡೆದಿಲ್ಲವೆ ಎಂದು ವಾದಿಸುತ್ತಿದ್ದ. ತಾನು ಎರಡು ದಿನ ಊಟ ಬಿಟ್ಟು ಹಟ ಮಾಡಿದಾಗ 'ನಿನ್ನ ತಲೆ' ಎಂದ ಬಯ್ದುಕೊಂಡು ಶಿವನ ಪಟಕ್ಕೆ ಸ್ಥಾನ ಕೊಟ್ಟಿದ್ದ.

ತಮ್ಮ ಮದುವೆ ನಿಶ್ಚಯವಾದಾಗ ಗೆಳತಿ ಶರ್ಮಿಳಾ ತನ್ನ ಕಿವಿಯಲ್ಲಿ ಪಿಸುಗುಟ್ಟಿದ್ದಳು. "ಯು ಆರ್ ಲಕ್ಕೀ ಶ್ರೀ, ನಿನ್ನ ವುಡ್ ಬಿ ತುಂಬಾ ಹ್ಯಾಂಡಸಮ್." ಹೌದು ವಿಜಯಗೆ ರೂಪ, ವಿದ್ಯೆ, ಅಧಿಕಾರ, ಸಂಪತ್ತು ಜೊತೆಗೆ ಅಹಂಕಾರ ಎಲ್ಲಾ ಇತ್ತು. ಮದುವೆಯಾದ ಮೇಲೆ ಬಾಸ್ಟನ್ನಿಗೆ ಬರುವಾಗ ತಾನು ವೀಣೆ ಪ್ಯಾಕ್ ಮಾಡಿದ್ದನ್ನು ಲಗ್ಗೇಜ ಜಾಸ್ತಿ ಬೇಡ ಎಂದು ತೆಗೆದಿಟ್ಟು ಬಿಟ್ಟ. ಇಲ್ಲಿಗೆ ಬಂದ ಮೇಲೆ ಅವನ ವಿದೇಶಿ ಸ್ನೇಹಿತರ ಜೊತೆ ಪಾರ್ಟಿಗಳಲ್ಲಿ ಬೆರೆಯಲು ತನ್ನನ್ನು ತುಂಬಾ ತಿದ್ದಿದ. ತುಂಬು ತೋಳಿನ ಬದಲು, ಸ್ಲೀವ್‌ಲೆಸ್, ತುರುಬಿನ ಜಾಗದಲ್ಲಿ ಬಾಬ್‌ಕಟ್, ಮುಖಕ್ಕೆ ಮೇಕಪ್, ಲಿಪ್‌ಸ್ಟಿಕ್ ಒಂದೊಂದಾಗಿ ಎಲ್ಲಾ ಬಂತು. ಹೊಂದಿಕೊಂಡಿದ್ದಳು. ಆದರೆ ಅಂಗಸೌಷ್ಟವ ಕೆಡುವದೆಂದು ಮಗುವಿಗೆ ಹಾಲು ಕುಡಿಸಬೇಡ ಎಂದು ಅವ ಜೋರು ಮಾಡಿದಾಗ ಮಾತ್ರ ತನಗೆ ತುಂಬಾ ದುಃಖವಾಗಿತ್ತು. ವಿಜಯನ ಸ್ವಭಾವವೇ ವಿಚಿತ್ರ. ತಾನು ತನ್ನ ಹೆಂಡತಿ, ಮಕ್ಕಳು, ಮನೆ ಎಲ್ಲದರ ಬಗ್ಗೆ ಅತಿ ಅಭಿಮಾನ, ಪ್ರೀತಿ. ಎಲ್ಲರಿಂದಲೂ ಯಾವಾಗಲೂ ಸೈ, ಶಭಾಸ್ ಎನ್ನಿಸಿಕೊಂಡಿರಬೇಕು, ತನ್ನನ್ನು ಯಾರಾದರೂ ಹೊಗಳಿದರೆ ಅವನಿಗೆ ತುಂಬಾ ಸಂತೋಷ. ಅಂದು ಮನೆಗೆ ಬರುತ್ತಲೇ ಡಿಯರ್ ಎನ್ನುತ್ತ ಅಪ್ಪಿ ಮುದ್ದಾಡಿ ಬಿಡುತ್ತಿದ್ದ ಮಕ್ಕಳೆದುರಿಗೇ. ಮಕ್ಕಳೇನು ಬಂತು, ಅವರೂ ಆಗಲೇ ಹರೆಯಕ್ಕೆ ಬಂದಿದ್ದರಲ್ಲ. ವರುಣನ ಗೆಳತಿಯರ ತಂಡ ಬೆಳೆಯುತ್ತಿತ್ತು. ಕೊನೆಗೆ ವಸೂ ಕೂಡ ಹೊರಗೆ ತಿರುಗಲು ಸುರುಮಾಡಿದಾಗ ತಾನು ಸಿಟ್ಟಾಗಿ ಗಂಡನೊಡನೆ ಜಗಳವಾಡಿದ್ದಳು.

"ಶ್ರೀ ಇದು ಅಮೇರಿಕ. ಇಲ್ಲಿಯ ಜನರಿದ್ದ ಹಾಗೆ ನಾವೂ ಇರ್ಬೇಕು. ಇಲ್ಲಿ ಹದಿಹರೆಯದ ಹುಡುಗಿಯರು ಡೇಟಿಂಗ್‌ಗೆ ಹೋಗೋದಿಲ್ಲವೇ ? ಹಾಗೆಯೇ ವಸೂನೂ ಹೋಗ್ತಾಳೆ. ಅವಳನ್ಯಾಕೆ ಬಯ್ತೀ?" ಎಂದಿದ್ದ ವಿಜಯ. ಹೀಗಾದರೆ ಅವಳಿಗೆ ಮದುವೆ ಮಾಡೋದು ಕಷ್ಟವಾಗುತ್ತೆ ಎಂದು ತಾನು ವಾದಿಸಿದಾಗ, "ಅವಳು ಅಮಿತನೊಡನೆ ತಿರುಗ್ತಾಳಲ್ಲ, ಹೋಗಲಿ ಬಿಡು, ಅವನ ಜೊತೆಗೆ ಮದುವೆ ಮಾಡೋಣ. ಅಮಿತ ಒಳ್ಳೇ ಮನೆತನದ

ಹುಡುಗ. ಅವನು ಭಾರತದಿಂದ ಇಲ್ಲಿಗೆ ಬರೋದಕ್ಕೆ ನಾನು ಬಹಳ ಸಹಾಯ ಮಾಡಿದ್ದೀನಿ. ಅಷ್ಟಾಗಿ ಅವನು ಇಲ್ಲೇ ಸೆಟಲ್ ಆಗ್ತಾನಂತೆ. ನಾನೆಲ್ಲ ವಿಚಾರಿಸಿದ್ದೀನಿ. ನಾಲ್ಕು ದಿನ ಮಜಾ ಮಾಡಲಿ. ನೀನು ಅವರಷ್ಟಕ್ಕೆ ಬಿಟ್ಬಿಡು" ಎಂದು ನನಗೇ ಬುದ್ಧಿವಾದ ಹೇಳಿದ್ದ. ಅಮೇರಿಕದ ಸ್ವಚ್ಛಂದ ವಾತಾವರಣದಲ್ಲಿ ಮಕ್ಕಳನ್ನು ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳುವುದು ತನಗೂ ಕಷ್ಟವಾಗಿತ್ತು. ತಂದೆ ಇದ್ದಾಗಳೇ ಹೀಗೆ ಬೆಳೆದ ಮಕ್ಕಳು, ಇನ್ನು -ಇನ್ನು ಮೇಲೆ ತನ್ನ ಮಾತು ಕೇಳುತ್ತಾರೆಯೇ? ತನಗೆ ಗೌರವ ಕೊಡುತ್ತಾರೆಯೇ? ವಿಚಾರ ಮಾಡಿದಂತೆಲ್ಲ ಅಳು ಮತ್ತೆ ನುಗ್ಗಿ ಬಂದಿತು. ಅಂತೂ ರಾತ್ರಿ ಕಳೆದಿತ್ತು. ಮರುದಿನ ಸಂಜೆ ನಾಗರಾಜ ಬಂದು ವಿಜಯನ ಆಫೀಸಿನವರ ಸಹಾಯದಿಂದ ಅಂತ್ಯಕ್ರಿಯೆ ಮುಗಿಸಿ ಬಂದಿದ್ದ.

"ಶ್ರೀ ಎಲ್ಲಾರೂ ಬೆಂಗಳೂರಿಗೆ ಹೋಗೋಣ ನಡೀರಿ. ಅವ್ವ, ನಿನ್ನ ಕರಕೊಂಡ ಬರಬೇಕಂತ ಹೇಳ್ಯಾಳ."

"ನನಗ ಏನೂ ತಿಳೀವೊಲ್ಲದು ಅಣ್ಣಾ."

"ಮಾಮಾ, ಈಗ ಭಾರತಕ್ಕೆ ಹೋಗಿ ಎನ್ಮಾಡೂದು? ನಾನು, ವಸು ಇನ್ನೂ ಕಲೀಬೇಕಲ್ಲ. ನಮ್ಮ ಇಲ್ಲಿ ಶಿಕ್ಷಣ ಅರ್ಧಾ ಆಗ್ತದ. ಅಪ್ಪನ ಆಫೀಸಿನಿಂದ ಸಾಕಷ್ಟು ಹಣಾ ಬರ್ತದ ಅಂತ ಅವರ ಕಂಪನಿ ಚೀಫ್ ಎಕ್ಸಿಕ್ಯೂಟಿವ್ ಹೇಳಿದ್ರು."

"ಹೌದು, ನನ್ನ ಮುಂದೂ ಹೇಳಿದ್ರು: ಕಂಪನಿ ಕೆಲಸಾ ಮಾಡೂ ಮುಂದ ವಿಜಯ ತೀರಿಕೊಂಡಾರ ಅಂತ ಅವರ ಮನೀಗೆ ಬೇಕಾಗೂ ಸಹಾಯ ಕಂಪನಿಯವರು ಮಾಡ್ತಾರಂತ, ಮಕ್ಕಳಿಗೆ ಶಿಕ್ಷಣದ ಖರ್ಚು, ಶ್ರೀಗೆ ಪೆನ್ಶನ್, ಎಲ್ಲಾ ಕೊಡುತಾರಂತ ಹೇಳಿದರು."

"ಆಯ್ತು ಮತ್ತ ಇನ್ನೇನು? ಹಣದ ಸಮಸ್ಯಾ ಅಂತೂ ಇಲ್ಲಾ. ನಾವೂ ಕಲೀತೀವಿ. ಇಲ್ಲೆ ಕೆಲಸಾ ಹುಡುಕತೀವಿ. ಇಲ್ಲೇ ಹುಟ್ಟಿ ಬೆಳೆದು ದೊಡ್ಡವರಾಗೀವಿ. ಮಾಮಾ, ನಾವು ಇಲ್ಲೇ ಇರೂದು ಒಳ್ಳೇದು ಅಂತ ನನಗೆ ಅನಸ್ತದ. ಅವ್ವನೂ ನಮ್ಮ ಕೂಡ ಇರತಾಳ."

ಇಪ್ಪತ್ತು ವರುಷದ ವರುಣ ಹಿರಿಯನಂತೆ ಎಲ್ಲ ನಿರ್ಧಾರ ತೆಗೆದುಕೊಂಡಾಗ ಶ್ರೀ ಗೆ ಮೊದಲು ಆಶ್ಚರ್ಯವಾಗಿತ್ತು. ನಂತರ ಅನಿವಾರ್ಯವಾಗಿತ್ತು. ಎಲ್ಲ ಸುಖ ಸೌಕರ್ಯಗಳಿದ್ದರೂ ಗಂಡನಿಲ್ಲದೆ ವಿದೇಶದಲ್ಲಿ ಕಳೆಯುವ ಜೀವನ ಯಾಂತ್ರಿಕವಾಗಿತ್ತು. ತಾನು ಇಲ್ಲಿ ಬದುಕುತ್ತಿರುವುದೇ ಮಕ್ಕಳಿಗಾಗಿ. ತನ್ನ ವರುಣ, ವಸುಮತಿ ಇಬ್ಬರು ಮಕ್ಕಳಿಗಾಗಿ. ಆಂ ಹೌದು ಶ್ರೀದೇವಿ ಗತಕಾಲದ ನೆನಪಿನ ಬಲೆಯಿಂದ ಬಿಡಿಸಿಕೊಂಡು ಹೊರಬಂದಳು. ಅಜ್ಜ ತೀರಿಕೊಂಡದ್ದು ತನ್ನ ಮಕ್ಕಳಿಗೆ ತಿಳಿಸಬೇಕಲ್ಲ. ವರುಣ ಹೆಂಡತಿ ಜೊತೆಗೆ ವೀಕ್ ಎಂಡ್‌ಗೆ ಹೋಗಿದ್ದಾನೆ. ಅವನಂತೂ ಈಗ ತನಗೆ ಸಿಗೋದಿಲ್ಲ. ಶ್ರೀದೇವಿ ಮತ್ತೆ ಫೋನ್ ಎತ್ತಿದಳು.

'ವಸೂ, ನಿನ್ನ ಅಜ್ಜ ತೀರಿಕೊಂಡ್ರು. ನಾನು ರಾತ್ರೀ ಪ್ಲೇನ್‌ನಲ್ಲಿ ಭಾರತಕ್ಕೆ ಹೊರಟೀನಿ. ನೀನೂ ಬರ್ತೀಯಾ?" ಅವಳಿಂದ ಬರುವ ಉತ್ತರ ಏನೆಂದು ಶ್ರೀಗೆ ಗೊತ್ತಿದ್ದೂ ಕೇಳಿದಳು.

"ಓ, ಸ್ಯಾಡ್ ನ್ಯೂಜ್. ಸಾರಿ ಮಮ್ಮೀ. ನನಗೆ ಬರಲಿಕ್ಕೆ ಆಗೋದಿಲ್ಲ ನಾಳೆ ನನಗೆ ಟೆಸ್ಟ್ ಇದೆ. ನೀನು ಹೋಗಿ ಬಾ. ನಮ್ಮ ಚಿಂತೆ ಮಾಡಬೇಡ. ಅಣ್ಣನಿಗೆ ನಾನು ಸುದ್ದಿ ತಿಳಿಸ್ತೀನಿ. ಕೆಲವು ದಿನ ಇದ್ದು ಬಾ. ಪೂರ್‌ಫೆಲೊ, ಅಜ್ಜನ್ನ ನಾನು ನೋಡಿ ಐದು ವರ್ಷ ಆಗಿದ್ದು. ಅಪ್ಪ ತೀರಿದ ಮೇಲೆ ಒಂದು ಸಲ ನಾವೆಲ್ರೂ ಹೋಗಿದ್ವಿ ಅಲ್ವಾ? ಅಮ್ಮನಿಗೆ, ನಂಗೆ ದುಃಖವಾಯ್ತು ಅಂತ ತಿಳಿಸು ಮಮ್ಮೀ."

ವಸುಮತಿ ಪಾಶ್ಚಾತ್ಯ ಸಂಗೀತದಲ್ಲಿ ಡಿಪ್ಲೋಮಾ ಮಾಡುತ್ತಿದ್ದವಳು ಕಲಿಯುವುದು ಮುಗಿದೊಡನೆ ತನ್ನ ಸಹಪಾಠಿಯನ್ನು ಮದುವೆಯಾಗ್ತೀವಿ ಅಂತ ತಾಯಿಗೆ ಹೇಳಿದ್ದಳು. ಅಮಿತ ಈಗ ಅವಳಿಂದ ದೂರವಾಗಿದ್ದ. ಅವಳ

ಈ ಮದುವೆಯಿಂದ ತನ್ನ ಮನಸ್ಸಿಗೆ ನೋವಾಗಿದ್ದರೂ ಏನೂ ಹೇಳದೆ ಸುಮ್ಮನಿದ್ದಳು. ವರುಣನಿಗೆ ಭಾರತದ ಹುಡುಗಿಯನ್ನು ಮದುವೆ ಮಾಡಬೇಕೆನ್ನುವ ತನ್ನ ಇಚ್ಛೆಯನ್ನು ಅವನಿಗೆ ಬಾಯಿ ಬಿಟ್ಟು ತಿಳಿಸುವ ಮೊದಲೇ ಒಂದು ದಿನ ವರುಣ ನ್ಯಾನ್ಸಿಯನ್ನು ಮನೆಗೆ ಕರೆದುಕೊಂಡು ಬಂದಿದ್ದ. ತಾನು ಒಪ್ಪಿಗೆ ಕೊಡುವುದು ಅನಿವಾರ್ಯವಾಗಿತ್ತು. ಹೆಂಡತಿಯೊಡನೆ ಬೇರೆ ಮನೆಯಲ್ಲಿದ್ದ. ಈಗ ವಸೂ ಒಬ್ಬಳೇ ಜೊತೆಗೆ ಇರುವವಳು. ಅದೂ ಮದುವೆಯಾಗುವವರೆಗೆ ಮಾತ್ರ. ಮುಂದೆ ? ಮುಂದೆ ತಾನು ಒಬ್ಬಳೇ ಇಲ್ಲಿ ತಾನು- ಶ್ರೀದೇವಿ ತನ್ನ ಯೋಚನೆಗಳನ್ನೆಲ್ಲ ಕೊಡವಿ ಎದ್ದಳು.

***

ಬೆಂಗಳೂರು ವಿಮಾನ ನಿಲ್ದಾಣದಿಂದ ಒಂದು ಚಿಕ್ಕ ಸೂಟಕೇಸಿನೊಡನೆ ಹೊರಗೆ ಬಂದ ಶ್ರೀದೇವಿ ಹಳ್ಳಿಗೆ ಹೋಗಲು ಟ್ಯಾಕ್ಸಿಸ್ಟ್ಯಾಂಡಿನತ್ತ ನಡೆದಳು. ಯಾರನ್ನೂ ನಿರೀಕ್ಷಿಸದ ಅವಳಿಗೆ ಮಲ್ಲೇಶ ಎದುರಾಗಿ 'ಹಲೊ' ಎಂದು ಸ್ವಾಗತಿಸಿ ಸೂಟಕೇಸ್ ಹಿಡಿದುಕೊಂಡ. ಮಲ್ಲೇಶ ಅವಳ ತಾಯಿಯ ಚಿಕ್ಕವ್ವನ ಮಗ.

"ಮಾಮಾ, ನೀವು ಬರ್‍ತೀರಿ ಅಂತ ನನಗೆ ಗೊತ್ತೇ ಇದ್ದಿಲ್ಲ."

"ಹಂ ಹ್ಯಾಂಗ ಗೊತ್ತಾಗಬೇಕು? ನಾಗರಾಜ ಹಳ್ಳಿಗೆ ಬಂದ ಮೇಲೆ ಶ್ರೀ ಬರ್‍ತಾಳಂತ ಹೇಳಿದ. ನಿನ್ನ ಕರಕೊಂಡ ಹೋಗಬೇಕು ಅಂತ ನಾನು ಬಂದೆ."

"ಥ್ಯಾಂಕ್ಸ್" ಎನ್ನುತ್ತ ಕಾರು ಹತ್ತಿದಳು ಶ್ರೀದೇವಿ.

ಮಲ್ಲೇಶ ಮೌನವಾಗಿ ಕಾರು ನಡೆಸುತ್ತಿದ್ದ. ಅಪ್ಪನ ಅಂತ್ಯಕ್ರಿಯೆಗೆ ಬಂದವಳು. ಇಂಥ ಸಮಯದಲ್ಲಿ ಇವಳೊಡನೆ ಏನು ಮಾತಾಡಬೇಕು ? ಪ್ರಯಾಣ ಸುಖಕರವಾಗಿತ್ತೇ ಎಂದರೆ ದುಃಖದಿಂದ ಸಂಕಟಪಡುತ್ತಿರುವಾಗ ಸುಖವೆಲ್ಲಿ ? ಎಂದಾಳು. ಆರೋಗ್ಯವಾಗಿದ್ದೀಯಾ ಎನ್ನಲೇ ಸಾವಿರಾರು ಮೈಲು ಪ್ರವಾಸ ಮಾಡಿದರೂ ಕೊಂಚ ಆಯಾಸವಿಲ್ಲದಂತೆ ತುಂಬಿದ ಮೈ ಮುಖದಿಂದ ಕಳೆಕಳೆಯಾಗಿದ್ದವಳಿಗೆ ಈ ಪ್ರಶ್ನೆ ಉಚಿತವಲ್ಲ, ಮಕ್ಕಳು ಬರಲೇ ಇಲ್ಲವೇ ? ಎಂದು ಕೇಳಿದರೆ ಗೊತ್ತಿದ್ದೂ ಕೇಳುತ್ತಾನಲ್ಲ. ಹಳ್ಳಿಗಮಾರ ಎಂದುಕೊಂಡರೆ ? ಒಟ್ಟಿನಲ್ಲಿ ಶ್ರೀಯೊಡನೆ ಮಾತನಾಡಬೇಕು ಎನ್ನುವ ಆಸೆ ಮೈತುಂಬ ತುಂಬಿದ್ದರೂ ಒಂದೂ ಮಾತು ತುಟಿ ದಾಟಿ ಹೊರಬರದೆ ಗಂಟಲಲ್ಲೆ ತಡವರಿಸುತ್ತಿದೆ.

ಶ್ರೀದೇವಿ ತಲೆ ತಗ್ಗಿಸಿ ಕುಳಿತು ತನ್ನ ಬಣ್ಣದ ಕೈ ಉಗುರುಗಳನ್ನು ದಿಟ್ಟಿಸುತ್ತಿದ್ದಳು. ವೀಣೆ ಮೀಟಲಿಕ್ಕೆ ಮೀಸಲಾದ ಉಗುರುಗಳು ಎಂದು ಮಲ್ಲೇಶ ಎಷ್ಟೋ ಸಲ ತನಗೆ ಚೇಷ್ಟೆ ಮಾಡುತ್ತಿದ್ದ. ಅವನ ಸಂಗೀತದ ಪ್ರೀತಿಗೆ ತಾನು ಮದುವೆಗೆ ಮೊದಲು ಬೆಂಗಳೂರಿನಲ್ಲಿದ್ದಾಗ ವೀಣೆ ಕಲಿತಿದ್ದಳು. ಈಗ ವೀಣೆ ಎಲ್ಲಿದೆ? ಇರಬೇಕು. ನಾಗರಾಜನ ಮನೆಯ ಕೋಣೆಯ ಮೂಲೆಯಲ್ಲಿ ಧೂಳು ತಿನ್ನುತ್ತ ಬಿದ್ದಿರಬಹುದು. ಅವಳ ಕೈ ಹಾಗೇ ಮೇಲಕ್ಕೆ ಸರಿದು ಬಳೆಗಳ ಮೇಲಾಡಿತು. ಒಂದು ಕೈಯಲ್ಲಿ ನಾಲ್ಕು ಚಿನ್ನದ ಬಳೆಗಳು, ಇನ್ನೊಂದರಲ್ಲಿ ಪುಟ್ಟ ರಿಸ್ಟ ವಾಚು ನಿನ್ನ ಬೆಳ್ಳನೆಯ ದುಂಡು ಕೈಗಳಿಗೆ ಕೆಂಪು ಚಿಕ್ಕೆಯ ಬಳೆ ತುಂಬಾ ಒಪ್ಪುತ್ತವೆ ಎಂದು ಮಲ್ಲೇಶ ಒಮ್ಮೆ ಕೈ ತುಂಬ ಬಳೆ ಇಡಿಸಿ, ನೋಡಿ, ಈ ಕೈಗಳಿಗೆ ಮುತ್ತು ಕೊಟ್ಟಿದ್ದ. ಆ ನೆನಪಿನಿಂದ ನಾಚಿಕೊಂಡಂತೆ ಅವಳ ಅಂಗೈಗಳು ಮುಚ್ಚಿ ಮುಟ್ಟಿಗೆಯಾದವು.

ದೃಷ್ಟಿ ಎದುರಿನ ರಸ್ತೆಯ ಮೇಲಿದ್ದರೂ ಕಣ್ಣ ಕೊನೆಯಿಂದ ಆಗಾಗ ಶ್ರೀಯನ್ನು ನೋಡುತ್ತಿದ್ದ ಮಲ್ಲೇಶನಿಗೆ ಅವಳ ಯೋಚನೆಗಳು ಯಾವ ದಿಕ್ಕಿನಲ್ಲಿ ಸಾಗುತ್ತಿವೆ. ಎನ್ನುವುದರ ಅರಿವಾಯಿತು. ಶ್ರೀ ತನ್ನ ಅಕ್ಕನ ಮಗಳು,

ತಾನು ಪ್ರೀತಿಸುವ ಹುಡುಗಿ - ತನಗೆ ದಕ್ಕದೆ ಹೋದಳು. ಅದಕ್ಕೆ ಕಾರಣ ಅಕ್ಕನ ಹಣ, ಅಧಿಕಾರ, ಅಂತಸ್ತುಗಳ ದಾಹ. ಮಾಮಾ ಪಾಪ, ತುಂಬಾ ಸರಳ ಮನುಷ್ಯ. ಮಗಳಿಗೂ ಮನಸ್ಸಿದೆ. ಮಲ್ಲೇಶನಿಗೆ ಕೊಟ್ಟು ಲಗ್ನ ಮಾಡೋಣ ಎಂದರೂ ಅಕ್ಕ ಕೇಳಲಿಲ್ಲ. ಇನ್ನೊಬ್ಬ ಮಗಳನ್ನು ಕೇವಲ ಕಾಲೇಜ ಲೆಕ್ಚರರಿಗೆ ಕೊಡೋದು ಬೇಡ. ಎಲ್ಲಾ ರೀತಿಯಿಂದಲೂ ದೊಡ್ಡ ಕಡೆಗೆ ಕೊಡೋಣ ಎಂದು ಹಟ ಮಾಡಿದಳು. ಅದೇ ಹೊತ್ತಿಗೆ ವಿಜಯ ಬಂದು ನೋಡಿದ. ಸುಂದರ, ಶ್ರೀಮಂತ, ಮೇಲಾಗಿ ಪರದೇಶಕ್ಕೆ ಹೊರಟಿದ್ದವ ಅಕ್ಕನಿಗೆ ಆಸೆಯಾಯಿತು. ಮಾಮನನ್ನು ಒಪ್ಪಿಸಿ ಶ್ರೀಗೆ ಬುದ್ಧಿ ಹೇಳಿ, ತಿದ್ದಿ ತನ್ನ ದಾರಿಗೆತಂದು ವಿಜಯನೊಡನೆ ಮದುವೆ ಮಾಡಿದಳು.

ಒಂದು ಕಾಲಕ್ಕೆ ತನ್ನನ್ನು, ತುಂಬಾ ಪ್ರೀತಿಸುತ್ತಿದ್ದ ಈ ಮಲ್ಲೇಶ, ತನ್ನನ್ನೇ ಮದುವೆ ಆಗ್ತೀನಿ ಅಂತ ಹಟ ಹಿಡಿದಿದ್ದ, ತನಗೂ ಮನಸ್ಸಿತ್ತು. ಆದರೆ ತನ್ನಲ್ಲಿ ಇನ್ನೂ ಪ್ರೀತಿ ಬೇರೂರಿ ದೃಢವಾಗಿರಲಿಲ್ಲ ಅನಿಸ್ತದೆ. ಅದಕ್ಕೇ ಅವ್ವ ವಿಜಯನ ಶ್ರೀಮಂತಿಕೆ, ಪರದೇಶ ಪ್ರವಾಸ, ಅಲ್ಲಿಂದ ತಿರುಗಿ ಭಾರತಕ್ಕೆ ಬಂದ ಮೇಲಿನ ಸುಖಜೀವನ ಎಲ್ಲ ವರ್ಣಿಸಿದಾಗ ತಾನು ಮದುವೆಯನ್ನು ವಿರೋಧಿಸಲಿಲ್ಲ, ಮಲ್ಲೇಶನ ಮನಸ್ಸಿಗೆ ತಾನೆಷ್ಟು ದೊಡ್ಡ ಪೆಟ್ಟು ಕೊಟ್ಟೆ ಎನ್ನುವುದು ತನಗೆ ಬಹಳ ತಡವಾಗಿ ತಿಳಿದಿತ್ತು. ವಿಜಯನ ಜೊತೆಗಿನ ತನ್ನ ಸಂಸಾರದಲ್ಲಿ ಅಂಥ ಹೆಚ್ಚುಗಾರಿಕೆ ಏನೂ ಇರಲಿಲ್ಲ. ಪರದೇಶದಲ್ಲಿರುವ ಗೃಹಿಣಿಯರಂತೆ ತನಗೂ ಕೈತುಂಬ ಕೆಲಸವಿರುತ್ತಿತ್ತು. ಕೆಲಸದ ಬೇಸರ ಕಳೆಯಲು ಪಾರ್ಟಿ, ಕುಡಿತ, ವೀಕೆಂಡ್‌ನಲ್ಲಿ ಪ್ರವಾಸ ಹೋಗುವುದು ಇವು ಅಲ್ಲಿಯ ಜನರ ಮನರಂಜನೆ. ಕೈತುಂಬಾ ಹಣ ಬರುತ್ತಿದ್ದ ಹಾಗೆಯೇ ನೀರಿನಂತೆ ಹರಿದುಹೋಗುತ್ತಿತ್ತು. ಒಮ್ಮೆ ಮದುವೆಯಾಗಿ ಹೋದ ಮೇಲೆ ಮೊದಲ ಹೆರಿಗೆಗೆಂದು ತಾನು ಬೆಂಗಳೂರಿಗೆ ಬಂದದ್ದು. ಆಗ ಅಪ್ಪ ಇನ್ನೂ ಕೆಲಸದಲ್ಲಿದ್ದರು. ಮನೆಯಲ್ಲಿ ಆಳು-ಕಾಳು, ಓಡಾಡಲು ಕಾರು, ಉಪಚರಿಸಲು ಅವ್ವ -ತವರು ತನಗೆ ಸ್ವರ್ಗಸಮಾನವಾಗಿ ಕಂಡಿತ್ತು. ತಾವೂ ಭಾರತಕ್ಕೆ ತಿರುಗಿ ಬರೋಣ ಎಂದು ಎಷ್ಟು ಸಲ ಕೇಳಿಕೊಂಡರೂ ವಿಜಯ ಒಪ್ಪಿರಲಿಲ್ಲ. ಅದನ್ನು ನೆನೆದು ಎಷ್ಟೋ ರಾತ್ರಿ ತಾನು ವರುಣನನ್ನು ಅಪ್ಪಿಕೊಂಡು ಅಳುತ್ತಿದ್ದಳು. ತನ್ನ ಮನಸ್ಸಿನ ನೋವನ್ನು ತಿಳಿದುಕೊಳ್ಳದ ಅವ್ವ, ಬಂದು ಹೋದವರೊಡನೆಲ್ಲ ಅಳಿಯನ ಸಂಸಾರದ ಹೆಗ್ಗಳಿಕೆ ಕೊಚ್ಚುತ್ತಿದ್ದುದ್ದನ್ನು ಕೇಳಿ, ಕೇಳಿ ತಲೆ ಚಿಟ್ಟೆನ್ನುತ್ತಿತ್ತು. ವಸುವಿನ ಹೆರಿಗೆಗೆ ಅವ್ವ ಬಾಸ್ಟನ್ನಿಗೆ ಬಂದಿದ್ದಳು. ತಿರುಗಿ ಭಾರತಕ್ಕೆ ಬರಲು ಅಳಿಯನನ್ನು ಕೇಳಿಕೊಂಡಳು. ಅವರು ಒಪ್ಪಲಿಲ್ಲ. ಇದ್ದೊಬ್ಬ ಮಗಳು ಕಣ್ಣೆದುರು ಇರದ ಹಾಗೆ ಆಯಿತಲ್ಲ ಎನ್ನುವ ಕೊರಗು ಅಪ್ಪ-ಅವ್ವ ಇಬ್ಬರಿಗೂ ಹತ್ತಿತು.

ಶ್ರೀ ಅಮೇರಿಕಕ್ಕೆ ಹೋದ ಕೆಲವು ದಿನ ಅಕ್ಕನ ಕಾಲು ನೆಲದ ಮೇಲೆಯೇ ಇರಲಿಲ್ಲ. ತಾನೇ ಪರದೇಶಕ್ಕೆ ಹೋಗಿ ಬಂದಷ್ಟು ಸಂಭ್ರಮ ಪಟ್ಟರು. ಆರೇಳು ವರುಷ ಕಳೆದರೂ ಅಳಿಯ ತಿರುಗಿ ಬರದೆ ಇದ್ದಾಗ ಅಕ್ಕ ಕಂಗಾಲಾದಳು. ಹೆಮ್ಮೆಯಿಂದ ಬೀಗುತ್ತಿದ್ದವಳು ತನ್ನ ಮುಂದೆ ಆಗಾಗ ಗೊಣಗತೊಡಗಿದಳು. ಪ್ರೀತಿಯಿಂದ ಅರಗಿಳಿಯಂತೆ ಪಕ್ಕದಲ್ಲಿಟ್ಟಕೊಂಡು ಜೋಪಾನ ಮಾಡಿದ ಮಗಳನ್ನು ಕಷ್ಟಕ್ಕೆ ಸುಖಕ್ಕೆ ಆಗದಂತೆ ಮಾಡಿದನಲ್ಲ ಎಂದು ವಿಜಯನ ಮೇಲೆ ಬೇಸರಿಸುತ್ತಿದ್ದಳು. ಅಷ್ಟರಲ್ಲಿ ತನ್ನ ಮದುವೆ ಗೀತಾಳೊಡನೆ ಆಗಿತ್ತು. ಹಳ್ಳಿಯಲ್ಲಿದ್ದ ತನ್ನ ಹೊಲಗಳ ಜೊತೆಗೆ ಮಾಮನ ಹೊಲಗಳನ್ನು ತಾನೇ ಬೇಸಾಯ ಮಾಡಿಸುತ್ತಿದ್ದ. ಕಾಲೇಜಿನಲ್ಲಿ ಪಾಠ ಹೇಳುತ್ತಲೇ ವಾರಕ್ಕೊಮ್ಮೆ ಹಳ್ಳಿಗೆ ಹೋಗಿ ಬರುತ್ತ, ರಜೆಯಲ್ಲಿ ಉಳಿದ ಕೆಲಸ ಮಾಡಿಸುತ್ತ ಹೊಲದ ಉತ್ಪನ್ನ ಹೆಚ್ಚಿಸಿದ್ದ. ಕ್ರಮೇಣ ಹಣ ಕೂಡಿದ ಮೇಲೆ ಬೆಂಗಳೂರಿನಲ್ಲಿ ಮನೆ ಕಟ್ಟಿಸಿ, ಕಾರು ಇಟ್ಟುಕೊಂಡು ಅಕ್ಕನ ದೃಷ್ಟಿಯಲ್ಲಿ ಒಳ್ಳೆಯ ಕುಳವಾಗಿದ್ದ. ಇದನ್ನೆಲ್ಲ ತಾನು ಮಾಡಿದ್ದು ಅಕ್ಕನ ಮೇಲಿನ ಹಟಕ್ಕಾಗಿ ಎಂದು ತನಗೆ ಗೊತ್ತು. ವಿಜಯ ತೀರಿಕೊಂಡ ಸುದ್ದಿ ಬಂದಾಗ ಅಕ್ಕ ಮಾಮಾರ ದುಃಖದಲ್ಲಿ ಸಮಭಾಗಿಯಾಗಿದ್ದ ಶ್ರೀಯನ್ನು ನೆನೆದು ಸಂಕಟಪಟ್ಟಿದ್ದ.

ವಿಜಯ ತೀರಿಕೊಂಡ ಎರಡು ತಿಂಗಳ ಮೇಲೆ ಎಲ್ಲ ವ್ಯವಸ್ಥೆ ಮಾಡಿ ವರುಣ -ವಸೂನೊಡನೆ ತಾನು ಬೆಂಗಳೂರಿಗೆ ಬಂದಿದ್ದಳು. ಅವ್ವ ತನ್ನನ್ನು ತಬ್ಬಿಕೊಂಡು, ಮೈ ಕೈ ಎಲ್ಲ ನೇವರಿಸಿ ಗಳಗಳ ಅತ್ತಿದ್ದು ನೋಡಿ ತನಗೆ ದುಃಖ ಮರುಕಳಿಸಿ ಬಂದಿತ್ತು. ದಿನಾಲು ತನ್ನನ್ನು ನೋಡಿ ಮಾತನಾಡಿಸಲು ಸಾಂತ್ವನ ಹೇಳಲು ಬರುವ ಜನರೆಷ್ಟೋ, ಅಪ್ಪನ ಆಫೀಸಿನವರು, ತಮ್ಮ ಬಂಧುಗಳು, ಪರಿಚಿತರು, ಅಣ್ಣನ ಗೆಳೆಯರು, ಅವರ ಅನುಕಂಪದ ಮಾತುಗಳು, ಒಣ ವೇದಾಂತದ ಉಪದೇಶಗಳು ಒಮ್ಮೊಮ್ಮೆ ತಲೆ ಎಬ್ಬಿಸಿ ಅಲ್ಲಿಂದ ಓಡಿ ಹೋಗಬೇಕೇನ್ನಿಸುತ್ತಿದ್ದವು. ಸತ್ತವರು ಸತ್ತು ಹೋದರು, ಇದ್ದವರೇನು ಮಾಡುತ್ತಾರೆ? ಎಂದು ಅವ್ವನನ್ನು ಕೇಳಿದಾಗ, ನಮ್ಮೊಡನೆ ದುಃಖ ಹಂಚಿಕೊಳ್ಳಲು ಜನ ಬರುತ್ತಾರೆ. ಅವರೊಡನೆ ಮಾತನಾಡುವದರಿಂದ ನಮ್ಮ ಮನಸ್ಸಿನ ಭಾರ ಕಡಿಮೆಯಾಗುತ್ತದೆಂದು ಈ ತರದ ಪದ್ಧತಿ ನಮ್ಮಲ್ಲಿದೆ ಎಂದಿದ್ದಳು. ನಮ್ಮ ಮನಸ್ಸಿಗಾದ ದುಃಖವನ್ನು ಮರೆಯಲು ಬಿಡದೆ ಮತ್ತೆ ಮತ್ತೆ ಬಂದು ತಿವಿದು ನೋಯಿಸುತ್ತಾರಲ್ಲ. ಇದೆಂಥ ಆಚರಣೆ? ವರುಣ ವಸೂ ನಾಗರಾಜನೊಡನೆ ಹೊರಗೆ ಹೋಗಿದ್ದರು. ಹೊರಗೆ ಕಾರು ನಿಂತ ಸಪ್ಪಳವಾಗಿತ್ತು. ಅವ್ವ ತಾನೇ ಎದ್ದು ಹೊರಗೆ ಹೋಗಿದ್ದಳು. ಬೆಳಿಗ್ಗೆಯಿಂದ ಬಹಳ ಜನ ಬಂದಿದ್ದರಿಂದ ತನ್ನ ತಲೆ ಸಿಡಿಯುತ್ತಿತ್ತು. ಹಾಗೇ ಕಣ್ಣುಮುಚ್ಚಿದಳು. ಅವ್ವ ಒಬ್ಬಳೇ ತಿರುಗಿ ಬಂದು ತನ್ನ ಹಾಸಿಗೆಯ ಮೇಲೆ ಕುಳಿತು ಹಣೆ ನೇವರಿಸುತ್ತ ಹೇಳಿದ್ದಳು.

"ಮಲ್ಲೇಶ ಬಂದಿದ್ದ, ಒಳಗೆ ಬರಲೇ ಇಲ್ಲಾ"

"ಹೋದರೇನು?"

"ಹುಂ ಹೋದ. ಶ್ರೀನ್ನ ಈ ಸ್ಥಿತಿಯೊಳಗ ನೋಡುದು ನನಗ ಸಾಧ್ಯಾನ ಇಲ್ಲಾ. ಅವಳಿಗೆ ಹ್ಯಾಂಗ ಸಮಾಧಾನದ ಮಾತು ಹೇಳಬೇಕು ಅನ್ನೋದು ತಿಳಿಯೂದಿಲ್ಲ. ನಾ ಇಲ್ಲಿಂದನ ತಿರುಗಿ ಹೋಗತೀನಿ, ನಾ ಬಂದಿದ್ದೆ ಅಂತ ಹೇಳಿಬಿಡು' ಅಂದ.

ತನ್ನ ಮನಸ್ಸಿಗೆ ತಂಪಾಗಿತ್ತು. ಯಾಕೋ ತಿಳಿಯದು. ಮಲ್ಲೇಶ ಒಳಗೆ ಬಂದಿದ್ದರೆ ಚೆನ್ನಾಗಿತ್ತು ಎನ್ನಿಸಿತ್ತು.

"ಮಲ್ಲೇಶ ನಿನ್ನ ಮದುವಿ ಆಗಬೇಕು ಅಂತ ಭಾಳ ಆಸೇ ಮಾಡಿದ್ದ. ಕೊಟ್ಟಿದ್ದರ ನೀ ನನ್ನ ಕಣ್ಣ ಮುಂದ ಸುಖದಿಂದ ಇರತಿದ್ದಿ. ಈ ವಿಧಿ ನಿನಗ ತಪ್ಪತಿತ್ತು." 'ಅವ್ವ ತನ್ನನ್ನು ಅಪ್ಪಿಕೊಂಡು ಜೋರಾಗಿ ಅತ್ತಿದ್ದಳು.

ಒಂದು ಹಳ್ಳಿಯ ಚಹದಂಗಡಿಯ ಹತ್ತಿರ ಕಾರು ನಿಂತಿತ್ತು. ಮಲ್ಲೇಶ ಕೆಳಗಿಳಿದು ಹೋಗಿ ಚಹ, ಕಾರಾ ಸೇವು ತೆಗೆದುಕೊಂಡು ಬಂದ. ಶ್ರೀದೇವಿಗೆ ಚಹ ಬಹಳ ರುಚಿಯಾಗಿತ್ತು. ಇನ್ನೊಂದು ಕಪ್ಪು ಚಹದೊಡನೆ ಮಲ್ಲೇಶ ಒಂದು ತಂಬಿಗೆ ನೀರನ್ನೂ ತಂದ.

"ಶ್ರೀ ನೀ ಏನೂ ತಿಳೀದಿದ್ದರ ಒಂದು ಮಾತು ಹೇಳ್ತೀನಿ."

"ಏನದು ?" ಅವರ ಮೌನಕ್ಕೆ ಮಾತು ಮೂಡಿತ್ತು.

'ಇದು ಹಿಂದೂಸ್ತಾನ. ನಾವು ಈಗ ಹೋಗೂದು ಕರ್ನಾಟಕದ ಒಂದು ಹಳ್ಳಿ. ಅಪ್ಪನ ಅಂತ್ಯಕ್ರಿಯಾಕ್ಕ ನೀನು ಹೊರಟಿದ್ದೀ, ಜನರ ಕಣ್ಣೆಲ್ಲಾ ನಿನ್ನ ಮ್ಯಾಲೆ ಇರತಾವ. ನೀನು ವಿಧವಾ ಅನ್ನೋದು ಜನಾ ಮರತಿಲ್ಲಾ. ಅವರು ನಿನ್ನ ಬಗ್ಗೆ ಏನೂ ಕೆಟ್ಟ ಮಾತು ಆಡಬಾರದು ಅಂತ ನನ್ನ ಆಸೆ. ಅದಕ್ಕ ಈ ನೀರು ತೊಗೊಂಡು ನಿನ್ನ ಮುಖಾ ತೊಳಕೋ, ಆ ಮೇಕಪ್ಪು ಕಾಡಿಗೆ, ಕುಂಕುಮ, ಲಿಪ್‌ಸ್ಟಿಕ್ ಎಲ್ಲಾ ಅಳಿಸಿ ಹೋಗಲಿ, ಪ್ಲೀಸ್."

ಹುಡುಗಾಟವನ್ನು ಬಿಟ್ಟು, ಮದುವೆಯಾಗಿ ಗೃಹಿಣಿಯಾದ ಕೂಡಲೆ ಅಮೇರಿಕಕ್ಕೆ ಹೋಗಿ ಇಲ್ಲಿ ಸಾಮಾಜಿಕ ನಡವಳಿಕೆಗಳನ್ನು ಮರೆತು ಬಿಟ್ಟವಳು ತಾನು. ಒಂದು ಭಿನ್ನವಾದ ಪರಿಸರದಲ್ಲಿ ಇಪ್ಪತ್ತೈದು ವರುಷಗಳನ್ನು ಕಳೆದ ತಾನು ತಪ್ಪು ಮಾಡಿದ್ದು ಸಹಜವೇ. ಮಾಮಾ ಹೇಳಿದ್ದು ಒಳ್ಳೆಯದಾಯಿತು. ಎಂದುಕೊಂಡ ಶ್ರೀದೇವಿ ಮುಖ

ತೊಳೆದುಕೊಂಡಳು. ಮಲ್ಲೇಶನ ಜೀವ ಚಡಪಡಿಸಿತು. ಅವಳ ಎರಡೂ ಕೈಗಳನ್ನು ತನ್ನ ಕೈಯಲ್ಲಿ ಹಿಡಿದು "ನನ್ನ ಕಣ್ಣಿಗೆ ನೀ ಭಾಳ ಚಂದ ಕಾಣ್ತಿದ್ದಿ. ಆದರೆ ಜನರ ಸಲುವಾಗಿ ಹಾಂಗ ಹೇಳಿದೆ. ಸಾರಿ ಶ್ರೀ ನನ್ನ ತಪ್ಪು ತಿಳೀಬ್ಯಾಡಾ" ಎಂದು ಬಗ್ಗಿ ಕೈಗಳಿಗೆ ಮುತ್ತಿಟ್ಟ.

ಕಾರು ಮುಂದೆ ಹೊರಟಿತು. ಅದುವರೆಗೆ ಸುಮ್ಮನೆ ಕುಳಿತಿದ್ದ ಶ್ರೀ ಮಾತಾಡಿದಳು. "ಅಪ್ಪ ಅವ್ವ ಹಳ್ಳಿಗೆ ಯಾಕೆ ಬಂದರು ಮಾವಾ. ಅಣ್ಣನ ಜೊತೆಗೆ ಇರಬಹುದಾಗಿತ್ತಲ್ಲ?"

"ಮಾವ ಹಾಸಿಗೆ ಹಿಡಿದು ಆರು ತಿಂಗಳ ಆಗಿತ್ತು ಶ್ರೀ. ದಿನಾಲು ಔಷಧ ಇಂಜೆಕ್ಷನ್ನು, ಮಾಲೀಸು ಎಲ್ಲಾ ನಡೆದೂ ಇತ್ತು. ಅರ್ಧಾಂಗಿ ಆದವರು ಎಷ್ಟೋ ಮಂದಿ ಚೇತರಿಸಿಕೋತಾರ. ಆಕೆಗೂ ವಯಸ್ಸಾಯಿತು. ಎಷ್ಟ ತ್ರಾಸಾದ್ರೂ ಎಲ್ಲಾ ಉಪಚಾರ ಮಾಡತಿದ್ಲು. ನಿನ್ನ ಅತ್ತಿಗಿ ಯಾವ ರೀತಿಯಿಂದೂ ಸಹಾಯ ಮಾಡುತಿದ್ದಿಲ್ಲಾ. ಮಾವ ಹಾಸಿಗೀ ಹಿಡಿದದ್ದು ತನಗೆ ಏನೂ ಸಂಬಂಧ ಇಲ್ಲಾ ಅನ್ನೂ ಹಾಂಗ ಇರತಿದ್ಲು. ನಾಗರಾಜಗ ಇವೊಂದೂ ತಿಳೀತಿದ್ದಿಲ್ಲಾ ಕಾಣ್ತದೆ. ಅಲಕ್ಷ್ಯ ಮಾಡಲಿಕ್ಕೆ ಹತ್ತ್ಯಾನ ಅಂತ ಅಕ್ಕ ನನಗ ಹೋಗೋಣ ಅಂತ ಗಂಟ ಬಿದ್ದರು. ಹಳ್ಳಿಗೆ ಹೋದರ ಈ ಕಿರಿಕಿರಿ ಎಲ್ಲಾ ತಪ್ಪತದ ಅಂತ ನಾನಃ ನನ್ನ ಮನೀಗೆ ಕರಕೊಂಡು ಹೋದೆ. ಈಗ ನನಗೂ ಪೆನ್ಶನ್ ಆಗೇದಲ್ಲ. ಗೀತಾ ಹುಡುಗ್ರು ಬೆಂಗಳೂರಾಗ ಇರತಾರ. ನಾನು ಅಲ್ಲಿಷ್ಟು, ಇಲ್ಲಿಷ್ಟು ದಿನಾ ಅಡ್ಡಾಡತೇನಿ."

ಆಚಾರ ವಿಚಾರಗಳಲ್ಲಿ ಸಂಪೂರ್ಣ ಭಿನ್ನವಾಗಿದ್ದರೂ ಮಕ್ಕಳ ವಿಷಯದಲ್ಲಿ ಭಾರತ ಅಮೇರಿಕ ಎರಡೂ ಒಂದೇ ಎಂದುಕೊಂಡ ಶ್ರೀದೇವಿ ಮುಂದೆ ಮಾತಾಡಲಿಲ್ಲ.

ಹಳ್ಳಿಯಲ್ಲಿ ಓಣಿಯ ತುಂಬ ಜನವಿತ್ತು. ಕಾರು ದೂರದಲ್ಲಿ ನಿಲ್ಲಿಸಿ ಶ್ರೀಯೊಡನೆ ಮಲ್ಲೇಶ ಮನೆಯ ಬಾಗಿಲಿಗೆ ಹೋದ. ವಿಮಾನ ಸಿದ್ಧವಾಗಿತ್ತು. ಭಜನೆಯವರು ಶಿವನಾಮಸ್ಮರಣೆ ಮಾಡುತ್ತಿದ್ದರು. ಹಲಗೆಯವರು ಕಿವಿ ಪರದೆ ಹರಿಯುವಂತೆ ಬಡಿಯುತ್ತಿದ್ದರು. ಶ್ರೀದೇವಿಯ ಎಡೆ ಡಬಡಬ ಬಡಿದುಕೊಂಡಿತು. ಗಂಟಲು ಉಬ್ಬಿತು. ಪಡಸಾಲೆಯ ಕಟ್ಟೆಯ ಮೇಲೆ ಜನ ಜಾತ್ರೆ, ಹೂವು, ಪತ್ರಿ, ತೆಂಗಿನಹೋಳುಗಳು ರಾಶಿ ಬಿದ್ದಿತ್ತು. ಕೋಟು ರುಮಾಲು ಹಾಕಿ, ವಿಭೂತಿ ಪಟ್ಟಾ ಬಡಿದು, ಧೂಪ ದೀಪಗಳ ನಡುವೆ ಗೋಡೆಗೆ ಆತು ನೀಟಾಗಿ ಕಟ್ಟಿ ಕುಳ್ಳಿರಿಸಿದ ತಂದೆಯ ಶವ ನೋಡುತ್ತಲೆ ಶ್ರೀದೇವಿ ಅವ್ವನ ತೆಕ್ಕೆಬಿದ್ದು ಬೋರೆಂದು ಅತ್ತಳು. ಕಣ್ಣೀರು ಕಾಲುವೆ ಹರಿಯಿತು.

ತಂದೆಯ ದಿನಕ್ಕೆಂದು ಬಂದ ಬಂಧು ಬಳಗವೆಲ್ಲ ಹೊರಟು ಹೋಗಿದ್ದರು. ನಾಗರಾಜ ಬೆಂಗಳೂರಿಗೆ ಹೊರಟು ನಿಂತಾಗ ಕೇಳಿದ,

"ಅವ್ವಾ, ಬೆಂಗಳೂರಿಗೆ ಹೋಗೋಣ ಬರ್ತೀಯಾ?"

ಮಲ್ಲೇಶ ಸುಮ್ಮನೆ ಕೈಕಟ್ಟಿ ನಿಂತಿದ್ದ. ಸುಮಾ ಬಾಯುಪಚಾರಕ್ಕಾದರೂ ಅತ್ತೆಗೆ ಬಾ ಎನ್ನಲಿಲ್ಲ. ಅವ್ವ ಒಲ್ಲೆ ಎಂದು ತಲೆ ಆಡಿಸಿದಳು. ನಾಗರಾಜ ತಂಗಿಗೆ ಹೇಳಿದ.

"ಶ್ರೀ ನೀ ಬಾಸ್ಟನ್ನಿಗೆ ಹೋಗುವಾಗ ಬಂದು ಹೋಗು."

ಒಂದು ಕ್ಷಣದ ಮೌನದ ಬಳಿಕ ಶ್ರೀದೇವಿ ಹೇಳಿದಳು "ಅಣ್ಣಾ ನಾನು ತಿರಿಗಿ ಹೋಗೂದಿಲ್ಲಾ. ಅವ್ವನ ಜೊತಿ ಇಲ್ಲೇ ಇರ್ತೀನಿ."

ಅವಳ ಅನಿರೀಕ್ಷಿತ ನಿರ್ಧಾರ ಎಲ್ಲರನ್ನೂ ಚಕಿತಗೊಳಿಸಿತ್ತು. ಅರಳಿದ ಕಣ್ಣುಗಳಿಂದ ಅವಳನ್ನು ನೋಡಿದ ಮಲ್ಲೇಶನಿಗೆ ಬಗ್ಗಿಸಿದ ಶ್ರೀಯ ತಲೆಯಲ್ಲಿ ಬೆಳ್ಳಿ ಮಿಂಚುತ್ತಿದ್ದುದು ಕಾಣಿಸಿತು.

***

■■

# ಬಾರುಕೋಲು

"ಚಿನ್ನವ್ವಾ, ಏ ಚಿನ್ನೂ, ನೀರಿಗೆ ಬರತೀಯೇನ?" ಪಂಚಮಿ ಹಬ್ಬಕ್ಕೆ ತವರಿಗೆ ಬಂದ ನಾಗವ್ವ ಎರಡೂ ಕೊಡ ಹಿಡಿದುಕೊಂಡು ತಲೆ ಬಾಗಿಲ ಹತ್ತಿರ ನಿಂತು ಕರೆಯುತ್ತಿದ್ದಳು. ಪಡಸಾಲೆಯ ಕಸ ಉಡುಗುತ್ತಿದ್ದ ಚಿನ್ನವ್ವ ಕಟ್ಟೆಗೆ ಕುಳಿತು ತಲೆ ಬಾಚಿಕೊಳ್ಳುತ್ತಿದ್ದ ಮಾದವ್ವನತ್ತ ನೋಡಿದಳು. ಅತ್ತೆ ಒಪ್ಪಿದರಲ್ಲವೇ ಅವಳು ಗೆಳತಿಯೊಡನೆ ನೀರಿಗೆ ಹೋಗುವುದು.

"ನೀ ಹೋಗಿ ಬಾರವ್ವ, ಆಕೆಗಿನ್ನೂ ಕೆಲಸ ಭಾಳ ಅದಾವ" ಮಾದವ್ವ ಕುಳಿತಲ್ಲಿಂದಲೇ ಕೂಗಿ ಹೇಳಿ ಸೊಸೆಯತ್ತ ಕೆಂಗಣ್ಣು ಬೀರಿದಳು. ಉಸಿರು ಬಿಟ್ಟು ಚಿನ್ನವ್ವ ಮತ್ತೆ ಕಸಬರಿಗೆ ಎತ್ತಿಕೊಂಡಳು.

ನಾಗವ್ವ ಪುಣ್ಯವಂತೆ, ಕೊಟ್ಟ ಮನೆಯಲ್ಲಿ ಹೊಟ್ಟೆಗೆ ಬಟ್ಟೆಗೆ ಚಾಟಿ ಎನ್ನುವಷ್ಟು ಬಡತನ. ಹೊಲಕ್ಕೆ ದುಡಿಯಲು ಹೋದಾಗ ಹೊಟ್ಟೆ ತುಂಬ ಊಟ, ಆದರೂ ಅವಳ ಅತ್ತೆ ನಾಗರಪಂಚಮಿಗೆ ತವರಿಗೆ ಕಳಿಸಿದ್ದಾಳೆ. ಚಿನ್ನವ್ವನಿಗೆ ಇದ್ದೂರಲ್ಲಿಯೇ ತವರು ಮನೆ ಇದೆ. ಆದರೆ ಹಬ್ಬ ಮಾಡುವ ಸಂತೋಷವಿಲ್ಲ. ಎರಡು ವರುಷಗಳಿಂದ ಅಪ್ಪನ ಮನೆಯ ಓಣಿಗೆ ಕಾಲು ಹಾಕಲು ಅತ್ತೆ ಬಿಟ್ಟಿಲ್ಲ. ಇವಳು ಅಲ್ಲಿಗೆ ಹೋಗಬಾರದು. ಎನ್ನುವುದಷ್ಟೇ ಅಲ್ಲ, ಅವರಲ್ಲಿ ಯಾರೂ ಕೊನೆಗೆ ಸಣ್ಣ ತಮ್ಮ -ತಂಗಿಯರೂ ಇಲ್ಲಿಗೆ ಬರಬಾರದು, ಅವರೊಡನೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಬಾರದು ಎನ್ನುವುದು ಮಾದವ್ವನ ಕಟ್ಟಪ್ಪಣೆ. ಚರಿಗೆ ತೆಗೆದುಕೊಂಡು ಹೋದಾಗ, ನೀರಿಗೆ ಹೋದಾಗ ಚಿನ್ನವ್ವ ತವರಿನವರನ್ನು ಕಂಡರೂ ಹೊರಳಿ ನೋಡುವಂತಿಲ್ಲ. ಆಕಸ್ಮಾತ್ ತಾಯಿಯ ಭೆಟ್ಟಿ, ತನ್ನೊಡನೆ ಮಾತು ನಡೆದದ್ದು ಗೊತ್ತಾದರೆ ಸಾಕು, ಮಾದವ್ವನಿಂದ ಸೊಸೆಗೆ ಹೊಡೆತ, ಒದೆತಗಳು ಬೀಳುವುದಂತೂ ನಿಶ್ಚಿತ. ಇಂಥ ಕಹಿ ಅನುಭವದಿಂದ ಚಿನ್ನವ್ವ ಅತ್ತೆಯ ಮನೆಯ ಬಂಗಾರದ ಪಂಜರದ ಪಕ್ಷಿ ಆಗಿದ್ದಳು. ಸಣ್ಣ ವಯಸ್ಸಿನ ಅವಳ ಕೋಮಲ ಮನಸ್ಸು ತವರಿನ ಅಂತಃಕರಣದ ಜೀವಗಳಿಗೆ ಹಾತೊರೆಯುತ್ತಿದ್ದಂತೆ ಮಾದವ್ವನ ಕೆಂಗಣ್ಣು, ಬಿರುನುಡಿಗಳಿಗೆ ಥರ ಥರ ನಡುಗುತ್ತಿತ್ತು.

ಅತ್ತೆ ಮಾದವ್ವ ಆ ಮನೆಯ ಸೊಸೆಯಾಗಿ ಬಂದಾಗ ಅವಳ ಅತ್ತೆ ಸಂಕ್ರವ್ವ ಇನ್ನೂ ಜೀವಂತವಿದ್ದಳು. ಬಡವರ ಮನೆಯ ಕಪ್ಪು ಹುಡುಗಿ ಮಾದವ್ವನನ್ನು ಕಂಡರೆ ಸಂಕ್ರವ್ವನಿಗೆ ಒಂದು ಥರಾ ತಿರಸ್ಕಾರ, ಅಸಹ್ಯ. ಅವಳ ಎಲ್ಲ ಕೆಲಸಗಳು, ಪ್ರತಿ ಮಾತೂ ಸಂಕ್ರವ್ವನಿಗೆ ಸೇರುತ್ತಿರಲಿಲ್ಲ. ಬೈಗುಳಗಳಿಂದಲೆ ಬೆಳಗಾಗುವುದು, ರಾತ್ರಿಯಾಗುವುದು ಮಾದವ್ವನಿಗೂ ರೂಢಿಯಾಗಿ ಹೋಗಿತ್ತು. ಆರೆಂಟು ವರುಷ ಕಳೆದರೂ ಮಾದವ್ವನಿಗೆ ಮಕ್ಕಳಾಗದಿದ್ದಾಗ ಅವಳನ್ನು ಸಂಕ್ರವ್ವ ಹೊಡೆದು ಸೇಡು ತೀರಿಸಿಕೊಳ್ಳುತ್ತಿದ್ದಳು. ಒಂದು ಸಣ್ಣ ತಪ್ಪಿಗೂ ಮಾದವ್ವ ಒದೆತ ತಿನ್ನುತ್ತಿದ್ದಳು.

ಒಮ್ಮೆ ಕುಡಿಯುವ ನೀರಿನ ಮಣ್ಣಿನ ಹರವಿ ಮಾದವ್ವನ ಕೈಯಿಂದ ಜಾರಿ ಬಿದ್ದು ಒಡೆದಿತ್ತು. ಅಷ್ಟಕ್ಕೇ ಸಂಕ್ರವ್ವ ಅವಳನ್ನು ನೆಲಕ್ಕೆ ಕೆಡವಿ, ಬೆನ್ನು ಹತ್ತಿ ಕೂತು, ಕೂದಲು ಜಗ್ಗಿ ಹೊಡೆಯುತ್ತಿದ್ದುದನ್ನು ನೋಡಿದ ಮಾವ ಕನಿಕರ ಪಟ್ಟು ಬಿಡಿಸಲು ಬಂದ. ಆಗ ಹೆಂಡತಿಯ ಬಾಯಿಂದ ಹೊರಹೊಮ್ಮಿದ ಅಶ್ಲೀಲ ಬೈಗುಳಗಳನ್ನು ಕೇಳಿದ ಮಾವ ಕಿವಿ ಮುಚ್ಚಿಕೊಂಡು ಹೊರಗೆ ಓಡಿ ಹೋದದ್ದನ್ನು, ಮೊದಲಿಗಿಂತ ಇಮ್ಮಡಿ ಸಿಟ್ಟಿನಿಂದ ಸಂಕ್ರವ್ವ ಸೊಸೆಯನ್ನೂ ಚಚ್ಚಿದ್ದನ್ನೂ ನೋಡಿದ ಜನ ಇನ್ನೂ ಮರೆತಿಲ್ಲ. ಚುಟುಕಾ ಕಾಯಿಸಿ ಕೊಟ್ಟ ಬರೆಗಳು ಮಾದವ್ವನ ಕಪ್ಪು ಮೈಯಲ್ಲಿ ಎದ್ದು ಕಾಣುತ್ತಿರಲಿಲ್ಲ. ತಾನು ಪರಿಪರಿಯಾಗಿ ಪೀಡಿಸಿದರೆ ಸೊಸೆ ಮನೆ ಬಿಟ್ಟು ಓಡಿ ಹೋದಾಳು. ಆಗ ಮಗನಿಗೆ ಇನ್ನೊಬ್ಬ ಚೆಲುವೆಯನ್ನು ತರಲು ಅನುಕೂಲವಾಗುತ್ತದೆಯೆಂದು ಸಂಕ್ರವ್ವನ ಪ್ಲ್ಯಾನ್ ಇತ್ತೆಂದು ಅವಳನ್ನು ಹತ್ತಿರದಿಂದ ಬಲ್ಲವರು ಹೇಳುತ್ತಾರೆ. ಆದರೆ ಅವಳ ಆಸೆ ಈಡೇರಲಿಲ್ಲ. ಮಾದವ್ವ ಮೊಂಡು ಹೆಣ್ಣು: ಉಣ್ಣಲು ಉಡಲು

ಕಡಿಮೆಯಿಲ್ಲದ ಅತ್ತೆಯ ಮನೆ ಬಿಟ್ಟು, ಕೂಳಿಗೆ ದಿಕ್ಕಿಲ್ಲದ, ಅವ್ವ-ಅಪ್ಪನೂ ಇಲ್ಲದ ತವರಿಗೆ ಅವಳೇಕೆ ಹೋದಾಳು? ನೆಲ ಕಚ್ಚಿ ಹಿಡಿದು ನಿಂತಳು.

'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ' ಎಂದು ಹಿರಿಯರು ಗಾದೆ ಮಾಡಿದ್ದು ಸುಳ್ಳಲ್ಲ. ಒಂದು ದಿನ ಸಿಟ್ಟಿನ ಆವೇಶದಲ್ಲಿ ಸೊಸೆಯನ್ನು ಬೆನ್ನಟ್ಟಿ ಹೊಡೆಯಲು ಹೋದ ಸಂಕ್ರವ್ವ ಜೋಲಿತಪ್ಪಿ ಪಡಸಾಲೆಯ ಕಟ್ಟೆಯ ಮೇಲಿಂದ ಬಿದ್ದು ನಡ ಮುರಿದುಕೊಂಡಳು. ಅತ್ತೆ ಹಾಸಿಗೆ ಹಿಡಿದ ಮೇಲೆ ಮಾದವ್ವ ನೇಟಾದಳು. ಮನೆಯ ಯಜಮಾನಿಕೆ ಅವಳ ಕೈಗೇ ಬಂದಿತು. ಸಂಕ್ರವ್ವ ಎರಡು ವರ್ಷ ನರಳಿ ನರಳಿ, ಕೂಳು, ನೀರು, ಉಪಚಾರವಿಲ್ಲದೆ ಹಲುಬಿ ಹಲುಬಿ ಒಂದು ದಿನ ಸತ್ತಳು. ಯಾರಾದರೂ ಓಣಿಯ ಅಕ್ಕವ್ವಗಳು ಅತ್ತೆಯ ಉಪಚಾರ ಮಾಡಬೇಕೆಂದು ಬುದ್ಧೀ ಹೇಳಲು ಬಂದರೆ ಅವಳ ಮೈಯ ಮಾಂಸವನ್ನೇ ಹರಿದು ತಿನ್ನುವಂತೆ ಮಾದವ್ವ ಜಗಳಕ್ಕೆ ಹೋಗುತ್ತಿದ್ದಳು. ಅತ್ತೆ ಸತ್ತದ್ದು ಗೊತ್ತಾದೊಡನೆ ಚರಿಗೆ ಹಾಲು ಕುಡಿದು ಬಂದು ಸಿಂಗಾರ ಮಾಡಿದ ಹೆಣದ ಮುಂದೆ ಕೂತು, ತನ್ನನ್ನು ಕಾಡಿಸಿ, ಪೀಡಿಸಿದ ಅತ್ತೆ ನರಕಕ್ಕೆ ಹೋದಳೆಂದು ಹಾಡಿ ಹಾಡಿಕೊಂಡು ಅತ್ತದ್ದು ಕೇಳಿ ಊರ ಅತ್ತೆಯರು ಸಿಟ್ಟಾದರೆ, ಸೊಸೆಯಂದಿರು ಸೆರಗಿನ ಮರೆಯಲ್ಲಿ ಕಿಸಿ ಕಿಸಿ ನಕ್ಕರು.

ಅತ್ತೆ ತೀರಿದೊಡನೆ ಮಾದವ್ವ ಮಾಡಿದ ಮೊದಲ ಕೆಲಸವೆಂದರೆ ತನ್ನ ತಂಗಿಯ ಮಗ ನಿಂಗಣ್ಣನನ್ನು ತಂದು ಸಾಕಿದ್ದು. ನಿಂಗಣ್ಣ ಬೆಳೆದದ್ದು ಮಾದವ್ವನ ನೆರಳಿನಲ್ಲಿಯೇ. ರೊಕ್ಕವಿಟ್ಟ ಟ್ರಂಕಿನ ಕೀಲಿಕೈ ಗುಂಡಗಡಿಗೆಗೆ ಕಟ್ಟಿಕೊಂಡು, ಗಂಡಸರಂತೆ ಹೊಲದ, ಮನೆಯಲ್ಲಿ ದುಡಿಯುವ, ಎತ್ತರದ ನಿಲುವಿನ, ಕಪ್ಪು ಬಣ್ಣದ, ದೊಡ್ಡ ಬಾಯಿಯ ದೊಡ್ಡವ್ವನನ್ನು ಕಂಡರೆ ದುಡಿಯುವ, ಎತ್ತರದ ನಿಲುವಿನ, ಕಪ್ಪು ಬಣ್ಣದ, ದೊಡ್ಡ ಬಾಯಿಯ ದೊಡ್ಡವ್ವನನ್ನು ಕಂಡರೆ ನಿಂಗಣ್ಣನಿಗೆ ಅಷ್ಟೇ ಏಕೆ ಅವನ ದೊಡ್ಡಪ್ಪನಿಗೂ ಅಂಜಿಕೆ. ಈಗಲೂ ಅಂದರೆ, ಹೆಂಡತಿ ಬಂದ ಮೇಲೂ ನಿಂಗಣ್ಣ ದೊಡ್ಡವ್ವನೆದುರು ಬಾಯಿ ತೆರೆಯುತ್ತಿರಲಿಲ್ಲ. ಹೆಂಡತಿಯೆಂದರೆ ಅವನಿಗೆ ಬಹಳ ಪ್ರೀತಿ.

ಮುಂಜಾನೆಯಿಂದ ರಾತ್ರಿಯವರೆಗೆ ಕೆಲಸ ಮಾಡಿ ಹೈರಾಣಾಗಿ ಹಾಸಿಗೆಗೆ ಬಂದ ಚಿನ್ನವ್ವನನ್ನು ಅಪ್ಪಿಕೊಳ್ಳುತ್ತಾನೆ. ಹೆಂಡತಿಯ ಕಣ್ಣುಗಳಿಂದ ಸುರಿಯುವ ನೀರನ್ನು ಒರೆಸಿ ಮುದ್ದಿಸುತ್ತಾನೆ. ಅತ್ತೆಯ ಕಾಟದ ಬಗ್ಗೆ ಗಂಡನ ಮುಂದೆ ಚಿನ್ನವ್ವ ದೂರಿ ಕೊಂಡಾಗ ಮಾತ್ರ ಅವನು ನಿರ್ಲಿಪ್ತ. ಅಷ್ಟರಲ್ಲಿ ಅವನ ಪ್ರೀತಿಯ ಒರತೆ ಬರಿದಾಗಿರುತ್ತದೆ. ಬಹಳ ಪೀಡಿಸಿದಾಗ ನೀ ಆತು, ಅವ್ವ ಆತು ನನಗೇನೂ ಗೊತ್ತಿಲ್ಲ ಎಂದು ಮಗ್ಗುಲಿಗೆ ಹೊರಳಿ ಮುಸುಕು ಎಳೆಯುತ್ತಾನೆ. ಮುದ್ದಿನ ಮಗಳು ಚಿನ್ನವ್ವನನ್ನು 'ಅವ್ವ ಅವ್ವ' ಎಂದು ಬಾಯ್ತುಂಬ ಕರೆದು ಪ್ರೀತಿಸುವ ಗುರಪ್ಪ ಮಗಳನ್ನು ಇಂಥ ಮನೆಗೆ ಏಕೆ ಕೊಟ್ಟ ?

ಇಂಥ ಮನೆ ಅನ್ನಲು ಏನಾಗಿದೆ ? ಹೊಲವಿದೆ. ಮನೆಯಿದೆ, ಬೆಳ್ಳಿ ಬಂಗಾರವಿದೆ. ಉಣ್ಣಲು ಉಡಲು ಏನೂ ಕೊರತೆಯಿಲ್ಲ. ಸೊಸೆಯನ್ನು ಅಷ್ಟು ಬಯ್ದು, ಬಡಿದು ಮಾಡುವ ಮಾದವ್ವ ಊಟಕ್ಕೆ ಕೂತಾಗ 'ತವರ್ಮನಿಯವರಂತೂ ಬಿಕನಾಸಿಗೋಳು, ಇಲ್ಲಾದರೂ ಹಾಲು ಬೆಣ್ಣಿ ಉಣ್ಣು;' ಎಂದು ಹಂಗಿಸಿ ಚಿನ್ನವ್ವನ ಎಡೆಗೆ ಧಾರಾಳವಾಗಿ ನೀಡುತ್ತಾಳೆ. ಗುರಪ್ಪ ಅಷ್ಟು ಸ್ಥಿತಿವಂತನೇನೂ ಅಲ್ಲ. ಮನೆ ಮಂದಿ ಎಲ್ಲ ದುಡಿದರೂ ವರ್ಷಾನುಗಟ್ಟಲೆ ಉಣ್ಣುವಷ್ಟು ಕಾಳು ಸಿಗುವುದಿಲ್ಲ. ಆದರೆ ಗುರಪ್ಪ ಬಣವಿ ಒಟ್ಟುವುದರಲ್ಲಿ ಬಹಳ ಜಾಣ. ಅವನು ಒಟ್ಟಿದ ಬಣವಿ ಎತ್ತರವಾಗಿ ನೆಟ್ಟಗೆ ನಿಂತು ಗಟ್ಟಿಮುಟ್ಟಾಗಿರುತ್ತದೆ. ಎಂಥ ಗಾಳಿಗೂ ಜರಿಯುವುದಿಲ್ಲ. ಅವನ ಕೆಲಸ ಸುತ್ತ ಮುತ್ತ ನಾಲ್ಕಾರು ಹಳ್ಳಿಗಳಿಗೂ ಗೊತ್ತು. ಎಲ್ಲರೂ ಬಣವಿ ಒಟ್ಟಲು ಗುರಪ್ಪನನ್ನೇ ಕರೆಯುತ್ತಾರೆ.

ತನ್ನ ಹೊಲದಲ್ಲಿ ದುಡಿಯಲು ಹೆಂಡತಿ ಮಕ್ಕಳಿಗೆ ಹಚ್ಚಿ ಗುರಪ್ಪ ಕರೆದಲ್ಲಿಗೆ ಹೋಗುತ್ತಾನೆ. ಕೈ ತುಂಬ ರೊಕ್ಕ, ಕಾಳು ಸಂಪಾದಿಸುತ್ತಾನೆ. ಬಣವಿ ಒಟ್ಟುತ್ತಿರುವಾಗ ಇಲ್ಲವೆ ಬೇರೆ ಕೆಲಸ ಮಾಡುತ್ತಿರುವಾಗ ಅವನು ಸದಾ

ಬಯಲಾಟದ ಮಟ್ಟುಗಳನ್ನು ಹಾಡುತ್ತಾನೆ. ಅವನು ಹಾಡು ಕೇಳುತ್ತಿದ್ದರೆ ಜೊತೆಗೆ ಕೆಲಸ ಮಾಡುವವರಿಗೂ ದಣಿವು ಕಾಣುವುದಿಲ್ಲ. ಬಯಲಾಟ ಅವನ ಖಯಾಲಿ, ಸುತ್ತ ಯಾವ ಹಳ್ಳಿಯಲ್ಲಿ ಬಯಲಾಟವಾದರೂ ಅವನು ಹಾಜರ್, ಸ್ವತಃ ವೇಷ ಕಟ್ಟದಿದ್ದರೂ ಆಟವನ್ನು ಆರಿಸಿ, ಪಾತ್ರಗಳನ್ನು, ಹಂಚಿ, ತಾಲೀಮಿಗೆ ಜನರನ್ನು ಕೂಡಿಸಿ, ಆಟದ ದಿನ ಎಲೆ-ಅಡಿಕೆ, ಬೀಡಿ ಸೆರೆಯ ವ್ಯವಸ್ಥೆಯವರೆಗೆ ಎಲ್ಲ ಕೆಲಸಗಳಿಗೂ ಓಡಾಡುತ್ತಾನೆ. ಹಾಗೆ ತನ್ನೊಡನೆ ಬಯಲಾಟದ ಹಾಡಿಗೆ ಸೂರು ಹಿಡಿಯಲು ಬಂದ ನಿಂಗಣ್ಣನನ್ನು ನೋಡಿ ಆ ಮನೆಗೆ ತನ್ನ ಮಗಳನ್ನು ಕೊಡುವ ವಿಚಾರ ಮಾಡಿದ.

ಒಂದು ರೀತಿಯಲ್ಲಿ ಮಾದವ್ವ ಅವನಿಗೆ ದೂರದಿಂದ ಸಂಬಂಧವಾಗಬೇಕು. ಇಡೀ ಆಸ್ತಿಗೆಲ್ಲ ನಿಂಗಣ್ಣನೇ ಹಕ್ಕುದಾರ. ಯಾರ ಬಾಯಲ್ಲಿ ನೀರು ಬರುವುದಿಲ್ಲ ? ಮಾದವ್ವನ ಮರ್ಜಿ ಹಿಡಿದು, ಹೊತ್ತು ಸಾಧಿಸಿ, ತನ್ನ ವಿಚಾರ ಅವಳ ಕಿವಿಯ ಮೇಲೆ ಹಾಕಿದ. ಚಿನ್ನವ್ವ ಕಣ್ಣು, ಮೂಗು ನೇರ, ನಡೆದರೆ ಅಂಗಾಲು ಕೆಂಪಾಗುವಂಥ ಮೈ ಬಣ್ಣ. ಹೆಸರಿಗೆ ತಕ್ಕ ಚಿನ್ನ. ಬಡವರ ಮನೆಯ ಹುಡುಗಿಯಾದರೆ ತನ್ನ ಮುಷ್ಟಿಯಲ್ಲಿ ಇರುವಳು. ಹಾಕಿದ್ದು ತಿಂದು, ಕೊಟ್ಟದ್ದು ಉಟ್ಟು, ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರುವ ಸೊಸೆ ಸಿಕ್ಕರೆ ಚೆನ್ನಾಗಿ ದಬಾಯಿಸಿ ಅಧಿಕಾರ ಚಲಾಯಿಸಬಹುದು, ಎಂದು ಯೋಚಿಸಿದ ಮಾದವ್ವ ನಿಂಗಣ್ಣನನ್ನೂ ಕೇಳದೆ ತನ್ನ ಒಪ್ಪಿಗೆ ಕೊಟ್ಟಳು. ಚೆಂದುಳ್ಳಿ ಚೆಲುವಿ ಮಗ್ಗುಲಿಗೆ ಬಂದರೆ ಅವನಾದರೂ ಏಕೆ ಬೇಡವೆಂದಾನು? ಮಾದವ್ವ ಹುಬ್ಬಳ್ಳಿಯಿಂದ ಮದುವೆಯ ಬನಾರಸಿ ಸೀರೆ ತಂದಳು. ಬೆಳ್ಳಿ ನಡಪಟ್ಟಿ, ಕಾಲಿನ ರುಳಿ, ಬಂಗಾರದ ಮುಡಿ ಉಂಗುರ ಸೊಸೆಗೆ ಹಾಕಿ ಊರ ಜನರ ಕಣ್ಣು ಕುಕ್ಕಿಸಿದಳು. ಅಂಥ ಜರಿ ಬುಟ್ಟಾದ ರೇಶಿಮೆ ಸೀರೆಯನ್ನು ಆ ಊರ ಸೊಸೆಯಂದಿರಲ್ಲಿ ಯಾರೂ ಉಟ್ಟಿರಲಿಲ್ಲ. ಎಲ್ಲರೂ ಚಿನ್ನವ್ವನ ದೈವವನ್ನು ಹಾಡಿ ಹೊಗಳಿದ್ದರು.

" ಹಬ್ಬಕ್ಕ ಚೆನ್ನವ್ವ ಬರತಾಳಿಲ್ಲೋ ಯಣ್ಣಾ" ಬಣವಿ ಒಟ್ಟುತ್ತಿದ್ದ ಗುರಪ್ಪಗ ಕೈಗೆ ಹೊರೆ ಕೊಡುತ್ತ ಭೀಮವ್ವ ಕೇಳಿದಳು.

"ಎರಡ ವರಸ ಆತ ತಂಗೀ, ಚಿನ್ನವ್ವನ್ನ ಅವಳ ಅತ್ತಿ ತವರ್ಮನಿಗೆ ಕಳಿಸಲಾರದ. ನಿನಗೂ ಗೊತ್ತೈತಲ್ಲಾ, ಹಬ್ಬಕ್ಕ ಇನ್ನ ಎರಡ ದಿನಾ ಉಳೀತು. ಇನ್ನೂ ಸುದ್ದಿ ಇಲ್ಲಾ."

"ನೀಲವ್ವ ಮೊನ್ನಿ ಅಳಾಕ ಹತ್ತಿದ್ಲು ನನ್ನ ಮುಂದ. ತುಂಬಿದ ಮನ್ಯಾಗ ಸುಕದಿಂದ ಇರತಾಳಂತ ಮಗಳ್ನ ಕೊಟ್ಟರ ಈಗ ಆಕಿ ಮಾರಿ ಸುದ್ದಾ ಕಾಣವಾಲ್ತ ನಮಗ ಅಂತ. ಮಾದವ್ವಗ ಮಗಳೂ ಆಕಿನ, ಸೊಸೀನೂ ಆಕಿನ. ಸೊಟ್ಟ ಆ ಸೀರಿ, ನಡಪಟ್ಟಿ ಸಲುವಾಗಿ ಬಂಗಾರದಂತಾ ಹುಡುಗಿ ಜೀವಾ ಹಿಂಡತಾಳ. ಹಿಂಗ ಆ ಕೂಸಿಗೆ ತರಾಸ ಕೊಟ್ರ ಶಿವಾ ಮೆಚ್ಚಾಕಿಲ್ಲ ಯಣ್ಣಾ."

"ಮದುವಿ ಆದ ವರಸ ಪಂಚಮಿ ಹಬ್ಬಕ್ಕ ಬರೂ ಮುಂದ ತನ್ನ ಸಡಗರಾ ತೋರಸಾಕ ಸೀರಿ ವಸ್ತಾ ಕೊಟ್ಟ ಮಾದವ್ವ ಕಳಿಸಿದ್ದs ಮುಳುವಾತು ನೋಡ ಭೀಮವ್ವಾ ನನ್ನ ಮಗಳಿಗೆ. ಇಡೀ ಮನೀ ಮಂದಿ ಎಲ್ಲಾ ಪಡಸಾಲಿ ಕಟ್ಟೆಮ್ಯಾಲೆ, ಅಡಗಿ ಮನ್ಯಾಗ ಮಲಗಿದಾಗ ಟ್ರಂಕು ನಮ್ಮ ತೊಗರೀ ಚೀಲಾ ಹೊತಕೊಂಡ ಹೋಗ್ಯಾರ ನೋಡವ್ವ. ಏನೋ ಸಪ್ಪಳಾತಂತ ನಮ್ಮವ್ವ ಎದ್ದಾಗ, ಕವಿ ನೆಳ್ಳಿನ್ಯಾಗ ಮನಷ್ಯಾರು ಹಿತ್ತಲ ಬಾಕಲಾಗಿಂದ ಓಡಿ ಹೋಗೂದು ನೋಡಿ ಲಬಾ ಲಬಾ ಹೊಯ್ಕೊಂಡ್ಲು. ನಮಗೆಲ್ಲಾ ಎಚ್ಚರಾತು. ಅಷ್ಟೊತ್ತಿಗೆ ಓಡಿ ಹೋಗಿದ್ರು. ಸೂಳೀಮಕ್ಕಳು.

"ಚಿನ್ನವ್ವನ ಸೀರಿ, ವಸ್ತಾ ಎಲ್ಲಾ ತೊಗೊಂಡು ಆ ಟರಂಕ ಹಾಳ ಬಾವ್ಯಾಗ ಒಗದಿದ್ರಂತಲ್ಲ?"

"ಹೌದಬೇ, ಎಷ್ಟ ವರ್ಸಾತು ಎಷ್ಟ ಹುಡುಕಿದರೂ ಕಳ್ಳರೂ ಸಿಗಲಿಲ್ಲಾ, ಆಗಿಂದ ಮಾದವ್ವ ಒಂದs ಸೂರು ಹಿಡದಾಳ. ನಾ ಹಾಕಿದ ಸೀರಿ, ವಸ್ತಾ ತಂದ ಕೊಡಸಿ ಮಗಳ್ನ ತವರ್ಮನಿಗೆ ಕರಕೊಂಡು ಹೋಗ್ರಿ ಅಂತ. ಕಳವು ಆದದ್ದೂ ನಾವ ಎಲ್ಲಿಂದ ಕೊಡೂಣ, ನೀನs ಹೇಳವ್ವ."

"ಅದೂ ಆತವ್ವ. ಮಗಳ ಮಾರಿಕಂಡರ ಸಾಕಂತ, ಇಕೀನೂ ಮನ್ಯಾಗಿಂದು ಚೂರಾ ಪಾರಾ ಬಂಗಾರ ಕೊಟ್ಟು. ನಾನೂ ಅಷ್ಟ ರೊಕ್ಕ ಕೂಡಿಸಿದ್ದೆ. ಎಲ್ಲಾ ಕೂಡಿಸಿ ಐನೂರು ರೂಪಾಯಿ ಕೊಡಾಕ ಹೋಗಿದ್ದೆ. ಆದರ ಮಾದವ್ವಂದು ಒಂದs ಪಟ್ಟು ನಾ ಹಾಕಿದ ಸೀರಿ, ಸಾಮಾನಾ ತಂದ ಕೊಡ್ರಿ ಅಂತ. ನಿಂಗಣ್ಣ ಅಂತೂ ಬಾಯಿ ಸತ್ತಾಂವ. ಎಲ್ಲಾ ಇಕೀದ ರಾಜ್ಯ ನೋಡ. ಏನ ಮಾಡಬೇಕ ತಿಳೀದಾಂಗ ಆಗೇತಿ. ಅಲ್ಲಿ ಆಕೀಗೂ ಒಂದಕ್ಕ ಹತ್ತು ಮಾತಾಡಿ ಹಂಗಸತಾಳಂತ. ನನಗೂ ನೋಡಿ ನೋಡಿ ಸಾಕಾಗೇತಿ. ಏನರೆ ದಾರಿ ಹುಡುಕಬೇಕಾಗೇತಿ. ಈ ಸಾರೆ ಹಬ್ಬಕ್ಕ ನಾನs ಕರ್ರ್ಯಾಕ ಹೋಗತೇನಿ."

ಮರುದಿನವೇ ಮಾದವ್ವನ ನೆರೆಮನೆಯ ಪಾರಮ್ಮ ಧಾವಿಸಿ ಬಂದಳು. 'ಗುರಪ್ಪಾ ಇಂದ ನಸಿಕಿನ್ಯಾಗ ಚಿನ್ನವ್ವ ಕಣ್ಣು ಒರಸಿಕೋತ ಅಂಗಳ ಕಸಾ ಉಡುಗುತಿದ್ಲು. ಮಾದವ್ವ ಒಳಗಿದ್ಲು. ನನಗ ಜೀಂವಾ ತಡೀಲಿಲ್ಲಾ. 'ಯಾಕ ಕೂಸs ಏನಾತು, ಯಾಕ ಅಳತೀ' ಅಂದೆ. "ಎರಡ ವರ್ಸಾತು ನನ್ನ ತವರ್ಮನಿಗೆ ಕಳಿಸಿಲ್ಲಾ. ಸೊಸಿ ಸುಖದಕಿಂತ ನಿಮಗ ಸೀರಿ. ವಸ್ತ್ರಾನ ಹೆಚ್ಚಾತು. ಇಂತಾ ಸಿರಿವಂತಿಕೆ ಒಯ್ದು ಸುಡಬೇಕ ಅಂತ ಹೊಟ್ಟೆ ಉರದು ನಾನೂ ಒದರಾಡಿದೆ. ಯಮ್ಮಾ. ನಮ್ಮತ್ತಿ ಚುಟುಕಾ ಕಾಸಿ ಬೆನ್ನಿಗೆ ಬರಿ ಎಳದಾಳಬೇ, ರಾತ್ರಿ ಎಲ್ಲಾ ಮಲಗಾಕ ಬರಲಿಲ್ಲಾ. ಕಣ್ಣಿಗೆ ಕಣ್ಣು ಹತ್ತಲಿಲ್ಲಾ. ನನಗ ಸಾವು ಬರವಲ್ಲು' ಅಂತ ಅತ್ಲು ಚಿನ್ನವ್ವ. ನನಗ ಸಂಕಟಾತು ಗುರಪ್ಪಾ, ಹೇಳಾಕ ಬಂದೆ."

ಪಾರಮ್ಮನ ಮಾತು ಮುಗಿಯುವ ಮೊದಲೇ ಹೊಸಿಲು ದಾಟಿದ್ದ ಗುರಪ್ಪ ಬಯಲಾಟದ ಭೀಮನಂತೆ ಧಪ್ ಧಪ್ ಹೆಜ್ಜೆ ಹಾಕುತ್ತ ನಡೆದಿದ್ದ. ಅನ್ಯಾಯವವನ್ನು ಸಹಿಸಿ ಸಹಿಸಿ ಅವನ ಸಿಟ್ಟು ಜ್ವಾಲೆಯಾಗಿ ಉರಿಯುತ್ತಿತ್ತು. ಕಣ್ಣು ಕೆಂಪಗಾಗಿ ಬುಜಗಳೆರಡೂ ಕಂಪಿಸುತ್ತಿದ್ದವು. ಅವನ ಅವತಾರ ನೋಡಿದ ಜನ ಹಾದಿ ಬಿಟ್ಟು ಹಿಂದೆ ಸರಿದರು. ಮಾದವ್ವನ ಮನೆಯ ಒಳಹೊಕ್ಕವನೇ ಹಕ್ಕೆಯಲ್ಲಿ ತೂಗು ಬಿದ್ದ ಬಾರುಕೋಲು ಎಳೆದುಕೊಂಡು ಪಡಸಾಲೆಯ ಕಟ್ಟೆ ಹತ್ತಿ ಮಾದವ್ವನ ಮೇಲೆ ಬೀಸಿದ. ಬೆದರಿದ ಮಾದವ್ವ ಚೀರಿದಳು. ಲಬೋ ಲಬೋ ಎಂದಳು. ನೆಲದ ಮೇಲೆ ಉರುಳಾಡಿದಳು. ಅವಳ ಸೀರೆ ಒದ್ದೆಯಾದರೂ ಗುರಪ್ಪ ಬಾರುಕೋಲು ಬೀಸುತ್ತಲೇ ಇದ್ದ. ಮಾವನ ಮುಖ ಕಂಡ ಕೂಡಲೆ ನಿಂಗಣ್ಣ ಕಟ್ಟಿ ಇಳಿದು ಪರಾರಿಯಾಗಿದ್ದ. ಚಿನ್ನವ್ವ ಅಡಿಗೆ ಮನೆಯ ಬಾಗಿಲಿಗೆ ನಿಂತ ಕಲ್ಲುಗೊಂಬೆಯಾಗಿದ್ದಳು. ಓಣಿಯ ಜನರೆಲ್ಲ ತಲೆ ಬಾಗಿಲು ತುಂಬ ನಿಂತಿದ್ದರು. ಕೈಸೋತ ಗುರಪ್ಪ ಬಾರಕೋಲು ಬೀಸಿ ಒಗೆದವನೇ "ಚಿನ್ನವ್ವಾ ನಡೀ ಮನೀಗೆ. ನಿಮ್ಮವ್ವ ಹಾದೀ ನೋಡತಾಳು" ಎಂದು ಮಗಳನ್ನು ಮುಂದಿಟ್ಟುಕೊಂಡು ಬಿರಬಿರನೆ ಹೊರ ನಡೆದ.

ಕತೆ ಇಲ್ಲಿಗೇ ಮುಗಿಯಲಿಲ್ಲ. ಚಿನ್ನವ್ವ ತವರ್ಮನೆಯಲ್ಲಿ ನಾಗರ ಪಂಚಮಿ ಹಬ್ಬ ಮಾಡಿ ಅತ್ತೆ ಮನೆಗೆ ಬಂದಳು. ಅವಳೀಗ ಆರು ಮಕ್ಕಳ ತಾಯಿ. ಗುರಪ್ಪ ಆಗಾಗ ಮಕ್ಕಳ ಮನೆಗೆ ಹೋಗಿ ಮಕ್ಕಳನ್ನು ಆಡಿಸಿ, ನಕ್ಕು, ನಲಿದು, ಮಾದವ್ವನೊಡನೆ ಹರಟೆ ಹೊಡೆದು ಬರುತ್ತಾನೆ. ಹಕ್ಕೆಯಲ್ಲಿ ತೂಗುಬಿದ್ದ ಬಾರುಕೋಲು ಚಿನ್ನವ್ವನಿಗೊಂದು ಪಾಠ ಹೇಳುತ್ತಿರುವಂತೆ ಕಾಣುತ್ತದೆ.

***

# ಒಂದು ಮೂಗುತಿಯ ಕಥೆ

ಧಡ್... ಧಡಲ್ ... ಬಡಲ್.... ಟಪ್...ಠಪ್..... ಚರ್‍ರ್‍ರ್.... ಆ ಚಿಕ್ಕ ಕೋಣೆಯಲ್ಲಿದ್ದ ವಸ್ತುಗಳೆಲ್ಲ ಕೈ ಕಾಲು ಬಂದವರಂತೆ ಅತ್ತ-ಇತ್ತ ಹಾರಾಡುತ್ತಿದ್ದವು. ಪಾತ್ರೆಗಳು ಜಿಗಿದಾಗ ಠಣ್ ಎಂದು ಸಪ್ಪಳಿಸಿದವು. ಹಾಸಿಗೆಯನ್ನೆತ್ತಿ ಚಟಪಟ ಝಾಡಿಸಿದಾಗ ಹರಕು ಚಾಪೆಯ ಕಡ್ಡಿಗಳು ಡೊಂಕಾಗಿ ನಡು ಮುರಿಯಿತು. ತೂತು ಬಿದ್ದು ಚಾದರದಿಂದ ಕೈ ತೂರಿ ಹೊರಗೆ ಬಂದಿತು. ಕೋಣೆಯ ನಾಲ್ಕೂ ಮೂಲೆ ಖಾಲಿ ಮಾಡಿ ಕಸಬರಿಗೆ ಆಡಿಸಿದಾಗ ಜೊಂಡಿಗ, ಹಲ್ಲಿಗಳು ಸರಸರ ಗೋಡೆ ಏರಿ ಹಂಚಿನಲ್ಲಿ ಸುರಕ್ಷಿತವಾದವು.

ಬೆಳಕು ಹರಿದಾಗಿನಿಂದ ವಟಗುಡುತ್ತ, ತನ್ನ ಕೋಣೆಯ ತಳ-ಬುಡವನ್ನೆಲ್ಲ ಹುಡುಕುತ್ತಿದ್ದ ಮಾನವ್ವ ಹೊತ್ತೇರಿ ಬಹಳ ಹೊತ್ತಾಗಿದೆ, ಮನೆ ಕೆಲಸಕ್ಕೆ ಹೋಗಬೇಕು ಎನ್ನುವುದು ಮರೆತು ತನ್ನ ಕೆಲಸದಲ್ಲಿಯೇ ಗರ್ಕಾಗಿದ್ದಳು. ಆದರೂ ಅವಳ ವಸ್ತು ಸಿಕ್ಕಿರಲಿಲ್ಲ. ಕೈ ಸೋಲಲು ತಾನು ಸಿದ್ಧಳಿಲ್ಲವೆನ್ನುವುದನ್ನು ಸಾರುವಂತೆ ಅವಳೀಗ ದನಿ ಎತ್ತಿದ್ದಳು.

"ನೀ ಒಳೇ ಗಂಟು ಬಿದ್ದೀ ನನಗ ಬಿಕನಾಶಿ. ಕೂಲಿ ಇಲ್ಲಾ ಕುಂಬಳ ಇಲ್ಲಾ. ದುಡ್ಡು-ದುಗ್ಗಾಣಿ ದುಡಿಯಾಂಗಿಲ್ಲಾ ತಾಳಿಕಟ್ಟಿದ್ದಟ ಖರೇವು. ಗಂಡ ಅಂತ ಗಂಡಾ. ಒನಕೀ ತುಂಡ ಆಗೀದಿ. ಅದಽರೆ ಉಪಯೋಗಕ್ಕೆ ಬಂದೀತು, ನೀ ಯಾತಕ್ಕೂ ಇಲ್ಲಾ. ಮದುವಿ ಆದಾಗಿಂದ ನಾನಽ ದುಡಿಬೇಕು. ಮುಸುರಿ ತಿಕ್ಕಿ, ಅರಿವಿ ಹಿಂಡಿ, ನೆಲಾ ತೊಳದು ನನ್ನ ಕೈಯಾನ ನರಾ ಸಾಯಾಕ ಹತ್ಯಾವ, ಮುಂಜಾಲಿಂದ ಚಂಜೀತನಾ ದುಡುದು ತಂದು ಕೂಳ ಕುದಿಸಿ ಇಟ್ಟಾಗ ಮುಕ್ಕಾಟಲೇ ತಿನ್ನಾಕ ಬರತೀ, ತಿಂದು ಬಕಬಾರಲೇ ಬೀಳತಿ. ನೀ ಗಂಡಸೇನೋ, ಹೊಂಟೆದ್ದ ಹೋಗ್ ಅತ್ನಾಗ. ಅಣ್ಣಾ-ಅತಿಗಿ ಅಂತ ಭಾಳ ಬಡಕೊಂತಿ. ಯಾವಾಕಿ ಕೂಳ ಹಾಕ್ಕಾಳ ನಿನಗ ನೋಡತೇನಿ. ನೀ ಮನೀ ಬಿಟ್ಟ ಹೋಗಿಬಿಡು, ನಿನ್ನಿಂದ ಏನೂ ಹರಕತ್ತಿಲ್ಲಾ. ಕೂಳು ದಂಡ ನಿನಗ. ಕಡದರ ನಾಕ ಆಳು ಆಗೂ ಹಾಂಗ ಅದೀ, ದುಡಿಯಾಕ ಬ್ಯಾಡಾ, ಹೇಣ್ತಿ ಮಕ್ಕಳ ಸುಕ-ದುಕ್ಕ ನೋಡಾಕ ಬ್ಯಾಡಾ, ಚೈನೀ ಬೇಕು ಚೈನೀ, ಬೀಡಿಗೆ ಸುದ್ಧಾ ನನಗ ಕೈ ಒಡ್ಡತೀ ನಾಚಿಕಿ ಬರಾಂಗಿಲ್ಲ ನಿನಗ? ಮನ್ಯಾಗಿನ ಚಿಲ್ಲರ ರೊಕ್ಕ ಅಂತೂ ಎಲ್ಲಿ ಇಟ್ಟಲ್ಲೆ ಮಾಯ ಆಕ್ಕಾವ. ನನ್ನ ಮೂಗುತಿ ಎಲ್ಲಿ ಐತಿ ಹೇಳ ಈಗ. ಮನೀಯಂತ ಮನೀ ಎಲ್ಲಾ ಹುಡುಕಿದರೂ ಸಿಗವಾಲ್ಲು. ನಿನ್ನೆ ರಾತ್ರಿನ್ಯಾಗ ಮೂಗಿನ್ಯಾಗ ಇತ್ತು. ಬೆಳಕ ಹರಿದಾಗ ಇಲ್ಲ ಅಂದರ, ಅದು ಎಲ್ಲಿ ಬಿದ್ದ ಹೊಕ್ಕತಿ ? ನನಗ ನಿದ್ದಿ ಹತ್ತಿದಾಗ ನೀನಽ ತಗದೀ. ನನಗ ಎಲ್ಲಾ ಗೊತ್ತೈತಿ. ನಿನ್ನ ಐದೇಶಿ ಬಲ್ಲೆ ನಾನು. ಕತ್ತಲದಾಗ ಎದ್ದಾಕಿ ರಾತ್ರಿ ಆದರೂ ನನ್ನ ಕೆಲಸ ಮುಗಿಯುದಿಲ್ಲ. ದುಡದು ದುಡದು ಮೈಮ್ಯಾಲಿನ ಖಬರು ಇಲ್ಲದ ನೆಲಾ ಸಿಕ್ಕರ ಸಾಕಂತ ಬಿದ್ದಾಂಗ ಬಿದ್ದಿರತೇನಿ. ನೀನಽ ನನ ಮೂಗುತಿ ಬಿಚಿಕೊಂಡೀದಿ ಹೌದಲ್ಲೋ? ಆಣೀ ಮಾಡಿ ಹೇಳು, ಖರೇ ಹೇಳು. ನಿನ್ನ ಯಾವ ಗೆಣತಿಗೆ ಕೊಡಾಕ ಬಿಚಗೊಂಡೀ ಹೇಳು. ತತಾ ಇಲ್ಲೆ ಮೂಗುತಿ. ನನ್ನ ಕಣ್ಣ ತಪ್ಪಿಸಿ ಯಾವಾಕಿಗೆ ಕೊಟ್ಟರೂ ಆ ಬೋಸುಡಿ ಸೀರಿ ಕಳದು ಮಚ್ಚೀಲೆ ಬಡದು ಕಸಗೊಂಡ ಬರ್‍ತೀನಿ, ಹೇಳು."

ಈ ಹೊತ್ತಿನಲ್ಲಿ ಮಾನವ್ವನನ್ನು ಕೆಲಸಕ್ಕೆ ಕರೆದರೂ ಉಪಯೋಗವಿಲ್ಲವೆಂದು ತಿಳಿದ ಸುನಂದ ತನ್ನ ಅಡಿಗೆ ಕೋಣೆಯಿಂದಲೇ ಮಾನವ್ವನ ಅಸ್ತವ್ಯಸ್ತ ಕೋಣೆಯನ್ನು, ಒಂಟಿ ಯುದ್ಧವನ್ನು ನೋಡುತ್ತಿದ್ದಳು. ಅಶಿಕ್ಷಿತೆಯಾಗಿದ್ದರೂ ಸುಂದರ ಮನಸ್ಸಿನ ಮಾನವ್ವ ಬೇರೆ ಗಂಡಸರ ಮುಂದೆ ಮುಖ ಎತ್ತದೆ, ಮೈತುಂಬ ಸೆರಗು ಹೊದ್ದು, ತಲೆ ತಗ್ಗಿಸಿ ನೋಡ ನೋಡುತ್ತ ಬದಿಗೆ ಸರಿದು ನಿಲ್ಲುವ ಹೆಂಗಸು. ಕಿವಿಯಿಂದ ಕೇಳಬಾರದ, ಬಾಯಿಂದ ಬರಬಾರದ ಬೈಗುಳಗಳನ್ನೆಲ್ಲ ಸುರಿಸುತ್ತಿದ್ದ ಮಾನವ್ವನ ದುಃಖದ ಆಳವನ್ನು ಸುನಂದ ಚೆನ್ನಾಗಿ ಬಲ್ಲಳು. ಗುಡುಗಿನ ಒಂದೆ ಬರುವ ಮಳೆಯಂತೆ ನೆಲಕ್ಕೆ ಕೈ ಅಪ್ಪಳಿಸಿ ಶಪಿಸುತ್ತ ಮಾನವ್ವ ಈಗ ಅಳತೊಡಗಿದ್ದಳು.

'ಸಣ್ಣ ಮಗಳು ಸುಕದಿಂದ ಇರಲೆಂತ ಪಿರೀತಿಲೆ ನೋಕರದಾರಗ ನನ್ನ ಮದಿವೀ ಮಾಡಿಕೊಟ್ಟು ಮಣ್ಣಾಗಿ ಹ್ವಾದೆಲ್ಲ ಯವ್ವಾ. ಇವನಿಂದ ನಾ ಏನ ಸುಕಾ ಕಂಡ್ನೇ. ನೀ ಕೊಟ್ಟ ಬೆಳ್ಳಿ ಪಟ್ಟ, ಗುಂಡಿನ ಸರಾ, ಎಲ್ಲಾ ಇವನ ಹೆಣಕ್ಕ ಬಡದ್ನೇ ಯವ್ವಾಃ ಈಗ ಮೂಗ್ತಿನೂ ಹೋತು. ನೋಕರಿ ಹ್ವಾದ ಮ್ಯಾಲೆ ಕೂಳಿಗೆ ದಂಡ ಆಗ್ಯಾನ ಯವ್ವಾ. ಶೇಕೀ ಮದವಿ ನಾ ಹ್ಯಾಂಗ ಮಾಡಲೇ. ನಾ ದುಡದದ್ದು ಬ್ರಮರಾಕ್ಸಸಗ ಸಾಲೂದಿಲ್ಲ ಯವ್ವಾ. ಕಿಸೇದಾಗ ರೊಕ್ಕ ಇಲದಿದ್ರೂ ಇವಂದ ದಿಮಾಕ್ ಭಾಳ ಯವ್ವಾ. ಇವಂಗ ನಾ ಒಬ್ಬಾಕಿ ಸಾಲೂದಿಲ್ಲ. ಗೆಣತೇರಿಗೆ ಮಾಡ್ತಾನ ಯವ್ವಾ. ನನ್ನ ಎಡ್ಡ ಗಂಡ ಮಕ್ಕಳ್ನೂ ಮಣ್ಣಾಗಿಟ್ಟು ನಾ ಬಂಜಿ ಆಗೀನಿ ಯವ್ವಾ."

ಗೇಟಿನ ಸಪ್ಪಳವಾಯಿತು. ಬಿಳಿ ದೋತರ, ಶರ್ಟು, ಗಾಂಧಿ ಟೊಪ್ಪಿಗೆಯಿಂದ ಅಲಂಕೃತವಾದ ಕರೀಮೂತಿಯ ನಿಂಗಪ್ಪ ತುಟಿ ಪಿಟಕ್ಕೆನ್ನದೆ, ಸ್ಥಿತ ಪ್ರಜ್ಞನಂತೆ ಗಂಭೀರವಾಗಿ ಹೊರಗೆ ಹೋಗುತ್ತಿದ್ದ. ನಾಲ್ಕಾರು ವರುಷಗಳಿಂದ ಈ ಜೋಡಿ ಅಥವಾ ಇಜ್ಜೋಡಿಯ ದಾಂಪತ್ಯ ವೈಖರಿಯನ್ನು ಸಮೀಪದಿಂದ ನೋಡಿದ ಸುನಂದೆಗೆ ಈ ದೃಶ್ಯವೇನೂ ಹೊಸದಾಗಿರಲಿಲ್ಲ.

"ನಂದಾ, ಚಹಾ ಆತೇನು" ಕೇಳುತ್ತಾ ಅಡಿಗೆ ಮನೆಗೆ ಬಂದ ವಿಶ್ವನಾಥ ಸುನಂದೆಯ ಭುಜದ ಸುತ್ತ ಕೈಹಾಕಿ ಹತ್ತಿರ ಎಳೆದುಕೊಂಡು "ಇವತ್ತ ಮಾನವ್ವನ ಸುಪ್ರಭಾತಕ್ಕ ಎಚ್ಚರಾತು" ಎಂದು ನಕ್ಕ. ಅವನಿಗೆ ಅದೊಂದು ನಗುವ ವಿಷಯವೇ. ಸುನಂದೆಯ ಮನಸ್ಸಿಗೆ ಬೇಸರವಾದರೂ ತೋರಿಸಿಕೊಳ್ಳದೇ ಶುಭ್ರವಾಗಿ ಹೊಳೆಯುತ್ತಿದ್ದ ಗಂಡನ ತಂಪು ಕೆನ್ನೆಯ ಮೇಲೆ ಬೆರಳಾಡಿಸಿದಳು.

"ಪಾಪ ! ಮಾನವ್ವಂದೂ ಒಂದು ಕಷ್ಟದ ಜೀವನಾ. ಬರೀ ಹೋರಾಟ. ಹಿಂದಿನ ಜನ್ಮದೊಳಗ ನನಗ ವಿಶ್ವಾಸ ಇಲ್ಲಾ ವಿಶೂ. ಆದರೂ ಒಮ್ಮೊಮ್ಮೆ ಇಂಥಾ ಒಳ್ಳೇ ಹೆಂಡತಿಗೆ ಅಥಾ ಗಂಡನ್ನ ದೇವರು ಯಾಕ ಗಂಟು ಹಾಕಿದ್ದಾನು. ಹೋದ ಜನ್ಮದೊಳಗ ಏನು ಪಾಪಾ ಮಾಡಿದ್ದಾಳು ಅನಸ್ತದ."

"ಸಿಲ್ಲಿ, ನೀವು ಹೆಂಗಸರು ಹಿಂಗಃ ವಿಚಾರ ಮಾಡ್ತೀರಿ. ಅವರ ಭವಿಷ್ಯ, ಸುಖಾ-ದುಃಖಾ ಎಲ್ಲಾ ಅವರ ಕೈಯೊಳಗ ಇರ್ತದ. ನನ್ನ ಕೇಳಿದರ ಆಕೀ ಗಂಡನ್ನ ಹೊರಗ ಹಾಕಬೇಕು. ಒದ್ದು ಹೊರಗ ಹಾಕಬೇಕು. ನೀ ಇಲ್ಲೆ ಇರೂದು ಜರೂರಿಲ್ಲ. ಇರೂದ ಇದ್ದರ ಹೇಳಿದ್ದು ಕೇಳಿಕೊಂಡು ಬಿದ್ದಿರು ಅನಬೇಕು."

"ಇದು ಜೀವನಾ ವಿಶೂ. ಲಗ್ನಾ ಮಾಡಿಕೊಂಡ ಮ್ಯಾಲೆ ಹೆಣ್ಣಿಗೆ ಅಳಕೋತ ಆದರೂ ಜೀವನಾ ಕಳೀಬೇಕಾಗತದ. ಹೋಗಿಬಿಡು ಅಂತ ಕೊಡಿವಿ ಕಳಿಸಾಕ ಅಂವಾ ಮೂಲ್ಯಾಗಿನ ಕಸಾ ಅಲ್ಲ, ಗಂಡ ಅದಾನ. ತಾಳೀ ಕಟ್ಟಿದಾಂವ ತನ್ನ ಹಕ್ಕು ಸಾಧಸತಾನ."

"ಸರಿಯಾಗಿ ಸಂಸಾರಾ ಮಾಡಿದರ ಅಂವಾ ಗಂಡ. ಇಲ್ಲಾಂದರ ಗುಂಡುಕಲ್ಲು. ಆ ಒಜ್ಜೆ ಯಾಕ ಹೊರಬೇಕು? ನಾ ದುಡದು ನಂದು, ಮಗಳ್ದು ಹೊಟ್ಟೀ ತುಂಬಿಸಿಕೋತೇನಿ. ನಿನಗ ಕೂಳು ಹಾಕೂದಿಲ್ಲ. ಹೋಗಿ ಬಿಡು ಅನಬೇಕು."

ಸಿಟ್ಟು ಬಂದಾಗ ಮಾನವ್ವ ಹೀಗೆ ಎಷ್ಟೋ ಸಲ ಹೇಳಿದ್ದನ್ನು ಸುನಂದೆ ಕೇಳಿದ್ದಳು. ಆದರೆ ಭಂಡ ನಿಂಗಪ್ಪ ಯಾವ ಎಗ್ಗಿಲ್ಲದೆ. ಅವಳ ಮಾತುಗಳನ್ನೆಲ್ಲ ಗಾಳಿಗೆ ತೂರಿ, ಅವಳ ಬಯ್ಗುಳಕ್ಕೆ ಬೆಲೆ ಕೊಡದೆ, ಇದ್ದ ರೊಟ್ಟಿಗಳನ್ನು ತಿಂದು ತಿರುಗಲು ಹೋಗುತ್ತಿದ್ದ. ಓದು ಬರಹ ತಿಳಿಯದ, ಬರೀ ಮೈಮುರಿ ದುಡಿತವನ್ನೇ ತಿಳಿದಿದ್ದ ಅಮಾಯಕ ಮಾನವ್ವ ತಾನಿಲ್ಲದೆ ಬಾಳಲಾರಳು ಎನ್ನುವ ಗುಟ್ಟನ್ನು ಆ ಪುಂಡ ಚೆನ್ನಾಗಿ ತಿಳಿದುಕೊಂಡಿದ್ದ.

ವಿಚಾರ ಮಾಡುತ್ತ ಸುನಂದ ಗಂಡನನ್ನು ಕೂಗಿದಳು. "ವಿಶೂ, ಲಗೂನ ಬಾ, ವಿಶಾಲನ್ನ ಸಾಲಿಗೆ ಬಿಟ್ಟು ನೀನು ಆಫೀಸಿಗೆ ಹೋಗಬೇಕು. ತಿಂಡಿ ತೊಗೊಂಡು ತಯಾರಾಗು."

ಸುನಂದೆಯ ಮುಖ ಗಂಭೀರವಾಗಿದ್ದರೆ ವಿಶ್ವನಾಥನಿಗೆ ಅಸಮಾಧಾನ. ಅವಳು ಈಗಲೂ ಎರಡು ಮಕ್ಕಳ ತಾಯಿಯಾದ ಮೇಲೂ ನಗುತ್ತ ಅವನ ಹಿಂದೆ ಮುಂದೆ ಸುತ್ತುತ್ತ ಇರಬೇಕು. ತಾನು ಅವಳನ್ನು ಮುದ್ದು ಮಾಡುತ್ತಾ ಇರಬೇಕು. ಸಮಸ್ಯೆಗಳನ್ನು ತಲೆಯಲ್ಲಿ ಇಟ್ಟುಕೊಂಡರೆ ತಲೆ ಬಿಸಿಯಾಗುತ್ತದೆ. ಸಾಧ್ಯವಿದ್ದಷ್ಟು ಬೇಗ ಅದಕ್ಕೆ ಪರಿಹಾರ ಹುಡುಕಬೇಕು ; ಇಲ್ಲವಾದರೆ ಅದರ ಬಗ್ಗೆ ಯೋಚಿಸಲೇಬಾರದು. ಜೀವನ ಇರುವದೇ ಎಂಜಾಯ್ ಮಾಡಲಿಕ್ಕೆ. ಅದು ಬಿಟ್ಟು ತಮಗೆ ಸಂಬಂಧವಿಲ್ಲದ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳುವದಕ್ಕಲ್ಲ ಎನ್ನುವದೇ ವಿಶೂನ ಜೀವನ ಸಿದ್ಧಾಂತ. ಅದನ್ನೇ ಮತ್ತೊಮ್ಮೆ ಸುನಂದೆಗೆ ಹೇಳಿದ.

'ಪರ ಚಿಂತೆ ಎಮಗೆ ಏಕೆ ಅಯ್ಯಾ' ಅಂತ ಬಸವಣ್ಣನವರು ವಚನಾ ಹೇಳ್ಯಾರಲ್ಲ. ಭಾಳ ಒಳ್ಳೇ ಮಾತು. ಮಾನವ್ವ -ನಿಂಗಪ್ಪ ಜಗಳಾ ಆಡಿದರಂತ ನೀ ಯಾಕ ಮಾರೀ ಕೆಟ್ಟ ಮಾಡತೀ. ಹಗಲೆಲ್ಲಾ ಇವರ ಜಗಳಾ ಕೇಳಲಿಕ್ಕೆ ಆಗೂದಿಲ್ಲ. ಆಕೀಗೆ ನಿಂಗಪ್ಪನ ಕೂಡ ಸಂಸಾರಾ ಮಾಡಲಿಕ್ಕೆ ಆಗದಿದ್ದರ ಸೋಡಚೀಟಿ ಕೊಟ್ಟಬಿಡು ಅನ್ನು. ಒಮ್ಮೆ ನಿಕಾಲಿ ಆಗಿ ಹೋಗ್ತದ. ನಾನು ಆಫೀಸಿಗೆ ಈಗ ಹೋದಾಂವ ಸಂಜಿಗೆ ಬರ್ತೀನಿ. ನಾ ಹೊರಗ ಹೊರಡೂ ಮುಂದ ಹಿಂದ ಅಳಮಾರಿ ಮಾಡಬ್ಯಾಡಾ. ನಗನಗ್ತಾ ಇರೂ."

ವಿಶ್ವನಾಥ ಒಳ್ಳೆಯ ಗಂಡ ಹೌದು. ಆದರೆ ಸ್ವಾರ್ಥಿ. ಯಾವಾಗಲೂ ನಗ್ತಾ ಇರಬೇಕಂತೆ ಅದು ಹೇಗೆ ಸಾಧ್ಯ? ನಾನೇನೂ ಯಂತ್ರ ಅಲ್ಲವಲ್ಲ. ನನಗೂ ಭಾವನೆಗಳಿವೆ, ವಿಚಾರಗಳಿವೆ. ಸಂವೇದನೆಗಳಿವೆ. ಹೊರ ಜಗತ್ತಿಗೆ ಕಣ್ಣು, ಕಿವಿ ಮುಚ್ಚಿಟ್ಟುಕೊಂಡು ತನ್ನನ್ನು, ತನ್ನ ಮನೆಯನ್ನು ಮಾತ್ರ ನೋಡಿಕೊಂಡಿರಬೇಕು ಅನ್ನೋದು ಸ್ವಾರ್ಥದ ಪರಮಾವಧಿ. ಸುನಂದ ಅವನ ಆಲೋಚನೆಯ ರೀತಿಯನ್ನೇ ಮೆದುವಾಗಿ ಪ್ರಶ್ನಿಸಿದಳು.

"ವಿಶೂ. ನೀ ಹೇಳೋದು ಒಂದು ರೀತಿ ಖರೇ. ಆದರ ನಾನೂ ಬರೇ ಮಾನವ್ವನ ಬಗ್ಗೇನೆ ವಿಚಾರ ಮಾಡೂದಿಲ್ಲ. ಗಂಡನಿಂದ ಶೋಷಿತರಾಗುವ ಎಲ್ಲ ಹೆಣ್ಣುಗಳ ಬಗ್ಗೆ ವಿಚಾರ ಮಾಡ್ತೀನಿ. ಅವರ ಸಮಸ್ಯೆಗಳನ್ನು ತಿಳಿದುಕೊಳ್ಳೋದಕ್ಕ ಪ್ರಯತ್ನಿ ಪಡ್ತೀನಿ. ಸಮಾಜಶಾಸ್ತ್ರ ಓದಿರೋದರಿಂದ ಈ ಸಮಸ್ಯೆಯ ಆಳ ನನಗ ಅರ್ಥ ಆಗ್ತದ. ಆದರ ಇದಕ್ಕ ಡೈವೋರ್ಸನ ಪರಿಹಾರ ಅನ್ನೂದು ತಪ್ಪು. ಈಗ ನೀನs ನೋಡು. ನಿನ್ನ ದೊಡ್ಡಮ್ಮನ ಮಗಳು ಕುಮುದಿನಿ ಅದಾಳಲ್ಲ. ಗ್ರಾಜುಯೇಟ್ ಆಗಿ ನೌಕರಿ ಮಾಡ್ತಾಳ. ಆಕೀಗೆ ಗಂಡ, ಮಾವ ಬಹಾಳ ತ್ರಾಸ ಕೊಡ್ತಾರಲ್ಲ ಆಕೀಗೆ ಯಾಕ ಗಂಡನ್ನ ಡೈವೋರ್ಸ ಮಾಡಲಿಕ್ಕೆ ನೀನು ಸಲಹಾ ಕೊಡೂದಿಲ್ಲಾ ? ಆರ್ಥಿಕವಾಗಿ ಸ್ವತಂತ್ರ ಇದ್ದಾಳ. ಗಂಡನ್ನ ಬಿಟ್ಟು ಬಿಡಬಹುದಲ್ಲಾ."

"ನಂದಾs ಛೀ ಛೀ. ನೀ ಸಮಸ್ಯೆಯನ್ನು ಸರಿಯಾಗಿ ಅರ್ಥಾ ಮಾಡಿಕೊಳ್ಳುದಿಲ್ಲಾ ಸುಮ್ಮನ ಮಾತಾಡ್ತಿ. ಕುಮುದಿನಿ ಯಾರು ? ಮಾನವ್ವ ಯಾರು ?" .... ಕಸಬರಿಗೆ ಹಿಡಿದು ಬಳಬರುತ್ತಿದ್ದ ಮಾನವ್ವನನ್ನು ನೋಡಿ ಮಾತು ನಿಲ್ಲಿಸಿ ಶೂಸಿನ ಲೇಸು ಕಟ್ಟಿಕೊಂಡು ವಿಶ್ವನಾಥ ಎದ್ದುಹೋದ.

ಸುನಂದೆ ಕೊಟ್ಟ ಚಹ ಕುಡಿಯುತ್ತ ಮಾನವ್ವ ಮತ್ತೊಮ್ಮೆ ಮೂಗು ಸೀಟುತ್ತ ಕಣ್ಣೀರು ಹರಿಸಿದಳು. "ನಮ್ಮವ್ವ ಸಾಯೂ ಮುಂದ ನನ್ನ ಸಣ್ಣ ಮಗಳಿಗೆ ಮೂಗುತಿ ಕೊಡ್ರಿ ಅಂತ್ಹೇಳಿ ಅಣ್ಣಾ -ಅತ್ತಿಗೆಗೆ ಕೆಟ್ಟ ಆಗಿ ನನಗ ಕೊಟ್ಟಿಳ್ರಿ ಅವ್ವಾರ. ಈಗ ಅದನ್ನೂ ನುಂಗಿ ನೀರು ಕುಡದಾ."

ಮಾನವ್ವನ ಮೂಗುತಿಯೆಂದರೆ ಸುನಂದೆಗೂ ಹೊಸ ವಸ್ತುವಲ್ಲ. ಜೋಳದ ಕಾಳಿನಷ್ಟು ದೊಡ್ಡ ಒಳ್ಳೆಯ ಮುತ್ತಿನ ಮೂಗುತಿ. ಬಂಗಾರದ್ದು. ಅಂಥದನ್ನು ಮಾಡಿಸಲು ಈ ದಿನಗಳಲ್ಲಿ ಐದಾರು ನೂರು ರೂಪಾಯಿ ಬೇಕಾದೀತು. ಭದ್ರವಿಲ್ಲದ ಕೋಣೆ, ಕೈಶುದ್ಧ ಇಲ್ಲದ ಗಂಡ, ಪಾಪ, ಮಾನವ್ವ ಏನು ಮಾಡಿಯಾಳು? ಅವ್ವ ಕೊಟ್ಟ ಆಸ್ತಿಯನ್ನು ಜೋಪಾನವಾಗಿಟ್ಟುಕೊಳ್ಳಲು ಸುನಂದೆಯ ಕೈಯಲ್ಲಿಯೇ ಕೊಟ್ಟಿದ್ದಳು. ತಾನು ಮಾತ್ರ ಸಂತೆಯಲ್ಲಿ ಜೋಗೇರ ಹತ್ತಿರ ಕೊಂಡ ಕೆಂಪುಹರಳಿನ ಮೂಗುಬೊಟ್ಟು ಇಟ್ಟುಕೊಂಡು 'ನಾಳೆ ನಮ್ಮ ಶೇಕವ್ವನ ಮದುವ್ಯಾಗ ಮೂಗುತಿ ಆಕೀಗೆ ಕೊಡ್ತೀನಿ' ಎಂದು ಹಿಗ್ಗುತ್ತಿದ್ದಳು.

ಒಂದೆರಡು ತಿಂಗಳ ಹಿಂದೆ ಶೇಕವ್ವ ಮೈನೆರೆದಾಗ ಇದ್ದೊಬ್ಬ ಮಗಳ ಸಡಗರ ನೋಡಲು ಮಾನವ್ವ ಅವಳನ್ನು ಐದು ದಿನ ಕೂಡ್ರಿಸಿ ಆರತಿ ಮಾಡಿದಳು. ಕೆಲಸ ಮಾಡುವ ಮನೆಗಳಲ್ಲಿ ಕೈಗಡ ತಂದು ಮಗಳಿಗೆ ಸೀರೆ, ಕುಬಸ, ಉತ್ತತ್ತಿ, ಕೊಬ್ಬರಿ-ಬೆಲ್ಲ ತರಿಸಿದ್ದಳು. ತಂದು ಕೊಟ್ಟವನು ನಿಂಗಪ್ಪನೇ. ತನ್ನ ಹೋಟೇಲ್ ಖರ್ಚು, ಬಸ್ಸು, ಬೀಡಿ ಎಂದು ಅವಳಿಂದ ಹತ್ತಿಪ್ಪತ್ತು ರೂಪಾಯಿ ಹೆಚ್ಚಿಗೆ ಕಿತ್ತಿದ್ದ. ತನ್ನ ಮನೆಯ ಶುಭ ಕಾರ್ಯಕ್ಕೆ ಹಳ್ಳಿಯಿಂದ ಬಳಗವನ್ನೂ ಕರೆಸಿದ್ದಳು. ಆಗ ಸುನಂದೆಯೇ ಶೇಕವ್ವನಿಗೆ ಹಾಕಲು ಮೂಗುತಿ ತೆಗೆದುಕೊಟ್ಟಿದ್ದಳು. ಶೇಕವ್ವನ ಮೇಲೆ ಹುಟ್ಟಿದ ಎರಡೂ ಗಂಡು ಮಕ್ಕಳು ಸತ್ತು ಹುಟ್ಟಿದ್ದವಂತೆ. ಅವಳಿಗೆ ಇನ್ನು ಮಕ್ಕಳೇ ಬೇಡವೆಂದು ಡಾಕ್ಟರರೇ ತೀರ್ಮಾನಿಸಿ ಆಪರೇಷನ್ ಮಾಡಿದ್ದರು. ಅದನ್ನು ನೆನೆಸಿ ಸುನಂದೆಯ ಮುಂದೆ ಆಗಾಗ ಕಣ್ಣೀರು ಹಾಕುತ್ತಿದ್ದಳು ಮಾನವ್ವ. ಈಗಂತೂ ಶೇಕವ್ವನೇ ಅವಳಿಗೆ ಗಂಡು-ಹೆಣ್ಣು ಎಲ್ಲಾ. ಅವಳಿಗೆ ಸಾಲೆ ಕಲಿಸಿ ಒಳ್ಳೆಯ ವರನಿಗೆ ಕೊಟ್ಟು ಮದುವೆ ಮಾಡುವುದೇ ಅವಳ ಜೀವನದ ಗುರಿ.

ಮಗಳು ದೊಡ್ಡವಳಾದ ದಿನದಿಂದ ನಿಂಗಪ್ಪನಿಗೆ ವರ ಹುಡುಕಲು ಹೇಳಿದ ಮಾನವ್ವ ಮದುವೆಯಾದ ಮೇಲೆ ಮಗಳೊಡನೆ ಮೂಗುತಿಯು ಹೋಗುವದೆಂದು ತಿಳಿದು ತಾನೊಂದಿಷ್ಟು ದಿನ ಇಟ್ಟುಕೊಂಡು ಅಕ್ಕರತೆ ಮುಗಿಸಿಕೊಳ್ಳಲು ಬಯಸಿದ್ದಳು. ಅಂಥ ಮೂಗುತಿಯೇ ಮಾಯವಾಗಿದೆಯಲ್ಲ!

ಒಂದು ದಿನ ಸುನಂದೆಯ ಬಳಿಗೆ ಬಂದು ಮಾನವ್ವ ಬ್ಯಾಂಕ್ ಪಾಸ್ ಬುಕ್ ತೋರಿಸಿದಳು. ಎಂಥ ಸಾಹಸಿ ಈ ಹಳ್ಳಿ ಹೆಣ್ಣು ಎಂದು ಅಚ್ಚರಿ ಸುನಂದೆಗೆ. "ಅವ್ವಾರ ಶೇಕವ್ವನ ಮದುವಿಗೆ ರೊಕ್ಕಾ ಕೂಡಸಾಕ ಹತ್ತೇನ್ರಿ. ತಿಂಗಳಾ ಇಪ್ಪತ್ತು ರೂಪಾಯಿ, ಹಿರ್ಯಾನ ಹೋಗಿ ತುಂಬಿ ಬರತಾನ್ರಿ. ಒಂದೀಟು ಲೆಕ್ಕ ಏಟ ಆಗೇತಿ ನೋಡ್ರಿ."

ಪಾಸ್ ಬುಕ್ ನೋಡಿದಾಗ ಸುನಂದೆಯ ಮನಸ್ಸಿಗೆ ಪಿಚ್ಚೆನಿಸಿತು. ಅವಳು ಹೇಳಿದ ಲೆಕ್ಕಕ್ಕಿಂತ ಐವತ್ತು ರೂಪಾಯಿ ಕಡಿಮೆ ಇದ್ದವು. ನಿಂಗಪ್ಪ ಇಲ್ಲೂ ತನ್ನ ಕೈಚಳಕ ತೋರಿಸಿದ್ದ. ತಾನು ಅವಳಿಗೆ ಯಾವ ರೀತಿ ತಾನೇ ಸಹಾಯ ಮಾಡಬಲ್ಲಳು. 'ನಿನಗೆ ಬೇಕಾದರೆ ಇನ್ನೂ ಐದ್ಹತ್ತು ರೂಪಾಯಿ ಹೆಚ್ಚಿಗೆ ಸಂಬಳ ಕೊಡು. ಸೀರೆ, ಕುಪ್ಪಸ, ಚಹ, ತಿಂಡಿ ಅಂತೂ ಕೊಟ್ಟೇ ಕೊಡುತ್ತೀ, ಇದಕ್ಕೂ ಹೆಚ್ಚಿಗೆ ಏನೂ ಹಚ್ಚಿಕೊಳ್ಳಲು ಹೋಗಬೇಡ' ಎಂದು ವಿಶ್ವನಾಥ ತನಗ ಮೊದಲೇ ಎಚ್ಚರಿಸಿದ್ದ. ಸಿಟ್ಟು ಬಂದರೆ ಅವರಿಗೆ ಕೋಣೆ ಬಿಟ್ಟು ಹೋಗಲು ಗಂಡ ಹೇಳುವವನೇ. ತನ್ನ ಗಂಡನನ್ನು ಶಪಿಸುತ್ತ ಅಳುತ್ತ ಹೊರಟ ಮಾನವ್ವನಿಗೆ ಹೇಗೆ ಸಮಾಧಾನ ಹೇಳಬೇಕೆನ್ನುವುದು ತಿಳಿಯದೆ ಮಂಕಾದಳು ಸುನಂದೆ.

ತಮ್ಮ ಕೋಣೆಯ ಕೀಲಿ ಹಾಕಿದ್ದರಿಂದ ಶಾಲೆಯಿಂದ ಬಂದ ಶೇಕವ್ವ ಸುನಂದೆಯೊಡನೆ ಅಕ್ಕಿ ಆರಿಸುತ್ತ ಕುಳಿತವಳು ಗೇಟಿನತ್ತ ನೋಡಿ 'ಅವ್ವ ಬಂದಳ್ರಿ'ಎನ್ನುತ್ತ ಓಡಿದಳು. ಮಾನವ್ವನ ಆಕಾರ ಕಂಡು ಗಾಬರಿಯಿಂದ ಸುನಂದೆಗೆ ಮಾತೇ ಹೊರಡಲಿಲ್ಲ. ಅವಳ ಮೈಮೇಲಿನ ಸೀರೆ, ಕುಪ್ಪಸಗಳು ಅಲ್ಲಲ್ಲಿ ಹರಿದಿದ್ದವು. ತುರುಬು ಬಿಚ್ಚಿ ಕೂದಲು ಹಾರಾಡುತ್ತಿದ್ದವು. ಮುಖ ಕೈಗಳ ಮೇಲಾದ ಗೀರು ಗಾಯಗಳಿಂದ ರಕ್ತ ಒಸರುತ್ತಿತ್ತು. ಒಂದು ಕೈಯಲ್ಲಿ ಚಪ್ಪಲಿ ಇತ್ತು. ಎದೆಯ ಮೇಲಿನ ಸೆರಗಿನ ಖಬರು ಇರಲಿಲ್ಲ. ಮುಖ ಸಿಟ್ಟಿನಿಂದ ಕೆಂಪಾಗಿ ಉರಿಯುತ್ತಿತ್ತು. ಶೇಕವ್ವನನ್ನು ತಬ್ಬಿಕೊಂಡು ನೆಲಕ್ಕೆ ಕುಳಿತು ಅಳಹತ್ತಿದಳು ಮಾನವ್ವ. ಅವಳ ದುಃಖ ಹರಿದು ಹೋಗುವವರೆಗೆ ತುಟಿ ಎರಡು ಮಾಡದೆ ಸುನಂದೆ ಸುಮ್ಮನೆ ನೋಡುತ್ತಿದ್ದಳು.

"ಆ ಬೋಸುಡಿ ಕಡಿಗೂ ನನ್ನ ಮೂಗ್ತಿ ಕೊಡಲೇ ಇಲ್ರೀ ಅವ್ವಾರ."

"ಏನಿದು?ಯಾರು ಆಕಿ?" ನಾಲ್ಕಾರು ತಿಂಗಳ ಹಿಂದೆ ಕಳೆದು ಹೋದ ಮೂಗುತಿಯ ವಿಷಯ ಮತ್ತೆ ಬಂದಾಗ ಸುನಂದೆಯ ಕುತೂಹಲ ಹೆಚ್ಚಿತು.

"ಈ ಊರ ಭಾಡ್ಯಾ ನನ್ನ ಮೂಗ್ತಿ ಬಿಚಿಗೊಂಡು ಆಕೀಗೆ ಕೊಟ್ಟಿದ್ದಾನು ಅನ್ನೂ ಸಂಶೇ ನನಗ ಇತ್ರಿ ಅವ್ವಾರ. ಇವತ್ತ ಚಿನ್ನವ್ವ ಹೇಳಿದ್ಳು. ಆ ಮಲ್ಲಿ ನಿನ್ನ ಮೂಗಿನ್ಯಾಗಿಂದು ಇಟಕೊಂಡಾಳ ಅಂತ."

"ಮುಂದ? ನೀ ಆಕೀ ಕೂಡ ಜಗಳಾ ಮಾಡಿದೇನ ?"

"ಮತ್ತ ಕೇಳಿ ಸುಮ್ಮನ ಇರಲೇನ್ರಿ. ಹಾಲು ಕೊಡೂ ಬಸಪ್ಪನ ತಂಗಿರಿ ಆಕಿ. ಪೋಸ್ಟಿನ ಹಂತ್ಯಾಕ ಐತ್ರಿ ಅವರ್ಮನಿ. ಆಕೀ ಕಟಿಗ್ಗೆ ಹೋಗೂ ಮುಂದ ಬರೂಮುಂದ ಹಾದ್ಯಾಗ ಕುಂತಿರತಾನಲ್ರಿ ಇವಂಗ ಗಂಟು ಬಿದ್ದಾಳ್ರಿ ಆ ಮನಿಹಾಳ ಮೂಳಿ."

"ಆಕೀನ ಎಂದೂ ನಮ್ಮ ಕಂಪೌಂಡಿನ್ಯಾಗ ನೋಡಿಲ್ಲಾ. ಆಕಿ ಹ್ಯಾಂಗ ಬಂದು ಗಂಟು ಬಿದ್ದಳು ನಿಂಗಪ್ಪಗ" ಸುನಂದೆ ಛೇಡಿಸಿದಳು.

ಕಣ್ಣೀರಿನಲ್ಲೇ ನಗುತ್ತ ಮಾನವ್ವ "ಚ್ಯಾಷ್ಟಿ ಮಾಡ್ತಿರೇನ್ರಿ ಅವ್ವಾರ. ಇದs ನಮ್ಮ ಮೂಳ ಹೊಕ್ಕತ್ರಿ ಅಕಿ ಹಂತ್ಯಾಕ. ಗಂಡಸರ ಕಚ್ಚಿ ಬದ್ರ ಇರೊದಿಲ್ಲ ಬಿಡ್ರಿ. ಆದರ ಆಕಿ ಮುಕ್ಕಾಟಲೆ ಮಾನವಂತಿ ಆಗಿ ಇರಬೇಕಲ್ರಿ."

ಸುನಂದೆಯ ಕುತೂಹಲ ವಿಚಿತ್ರ ಭಯಕ್ಕೆ ತಿರುಗುತ್ತಿತ್ತು. ತನ್ನ ಗಂಡ ಬೇರೆ ಹೆಣ್ಣಿನ ಸಂಗ ಮಾಡಿದರೆ ಕ್ಷಮಿಸಬಲ್ಲಳು ಮಾನವ್ವ. ಆದರೆ ಗಂಡನಿಲ್ಲದ ಮಲ್ಲಿ ಮಾಡಿದ್ದು ಮಾತ್ರ ಮಾನಗೇಡಿಯ ಕೆಲಸ. ನಿಂಗಪ್ಪನನ್ನು ದೂರವಿಟ್ಟು ನಿನ್ನ ವಸ್ತು ನೀನು ತೆಗೆದುಕೋ ಎಂದು ಇವಳ ಮನೆಗೆ ತಂದು ಒಪ್ಪಿಸಬೇಕಾಗಿತ್ತೇನೋ ಮಾನವ್ವನಿಗೆ. ತಪ್ಪು ಮಾಡಿದ್ದು ಗಂಡಸಾದರೂ ಹೆಣ್ಣು ಇನ್ನೊಂದು ಹೆಣ್ಣನ್ನೇ ದೂರಬೇಕೇ? ಅವಳ ಬಗ್ಗೆ ಸಹಾನುಭೂತಿ ಅವಳಲ್ಲಿ ಹುಟ್ಟದೇ? ಸುನಂದೆಯ ಒಡಲೊಳಗೆ ಒಂದು ನೋವು ಹುಟ್ಟಿತು. ಅದಕ್ಕೆ ರೆಕ್ಕೆ - ಪುಕ್ಕಗಳೂ ಮೂಡಿಕೊಂಡು ಚಿತ್ರವಾಯಿತು.

ಮೂರ್ನಾಲ್ಕು ವರ್ಷಗಳ ಹಿಂದೆ ಸಂಗೀತಳು ಬಸಿರಿನಲ್ಲಿದ್ದಾಗಿನ ಮಾತು. ಅಗಸನಿಗೆ ಕೊಡಲೆಂದು ಗಂಡನ ಪ್ಯಾಂಟು-ಶರ್ಟು ಖಾಲಿ ಮಾಡುತ್ತಿದ್ದ ಸುನಂದೆಯ ಕೈಗೊಂದು ಪತ್ರ ಸಿಕ್ಕಿತು. ಅವರ ಆಫೀಸಿನ ಹುಡುಗಿಯೊಬ್ಬಳು ಬರೆದದ್ದು. ವಿಶ್ವನಾಥ ಟೂರಿಗೆ ಹೋಗಿದ್ದ ಸಮಯದಲ್ಲಿ ಅಲ್ಲಿ ಅವಳ ತಂದೆಗೆ ಹುಷಾರಿಲ್ಲದಾಗ ಇವನು ಸಹಾಯ ಮಾಡಿದ್ದ. ಕೃತಜ್ಞತೆ ಸಲ್ಲಿಸಿ, ಇನ್ನೊಮ್ಮೆ ಬಂದಾಗ ಖಂಡಿತ ತಮ್ಮ ಮನೆಗೆ ಬರಬೇಕೆಂದು ಬರೆದಿದ್ದಳು.

ಮಾತೇನೋ ಸಣ್ಣದು. ಆದರೂ ಸುನಂದೆಗೆ ಏಕೋ ಸಂಕಟವಾಗಿತ್ತು. ಪತ್ರ ಬಂದಾಗ ಇವಳಿಗೆ ತೋರಿಸಿ ಆ ಹುಡುಗಿಯ ವಿಷಯ ಹೇಳಿಬಿಟ್ಟಿದ್ದರೆ ನಿರುಂಬಳವಾಗುತ್ತಿತ್ತು. ಇವಳಾಗಿಯೇ ಕೇಳಿದಾಗ ಮರೆತು ಬಿಟ್ಟಿದ್ದೆ. ಅದೇನು ದೊಡ್ಡ ವಿಷಯ ಅಲ್ಲ. ಅದನ್ನು ಬೆಳೆಸಬೇಡ ಎಂದು ದನಿ ಏರಿಸಿ ಮಾತನಾಡಿದ್ದ ವಿಶ್ವನಾಥ. ಆ ಮಾತಿನ ಹಿಂದೆ ನಾನೇನು ಮಾಡಿದರೂ ಪ್ರಶ್ನಿಸಲು ನೀನಾರು ಎನ್ನುವ ಧ್ವನಿ ಇತ್ತು. ಇವಳೂ ಕೂಗಾಡಿ ಮಾತು ಬಿಟ್ಟು ತವರು ಮನೆಗೆ ಹೊರಟು ಹೋಗಿದ್ದಳು. ಆದರೆ ಮುಂದೆ ಆದದ್ದೇನು? ಮಗಳು ಹುಟ್ಟಿದ ಮೇಲೆ ಕರೆಯಲು ಬಂದ ಗಂಡನೊಡನೆ ಸುಮ್ಮನೆ ಬಂದುಬಿಟ್ಟಿದ್ದಳು. ಆದರೆ ಆ ನೋವು ಬೆರಳಾಡಿಸುತ್ತ ಇರುತ್ತಿತ್ತು.

'ಅವ್ವಾರ ಇರಲಿ ಬಿಡ್ರಿ. ಅಳತೀರ್ಯಾಕ"

ವಿಶ್ವನಾಥ ಹೇಳುವ ಹಾಗೆ ತಾನು ಅಗತ್ಯಕ್ಕಿಂತ ಹೆಚ್ಚಿನ ವಿಚಾರ ಮಾಡುತ್ತಿದ್ದೇನೆ ಎಂದುಕೊಂಡು ನಕ್ಕಳು ಸುನಂದೆ. 'ಮುಂದ ಏನಾತು ?"

"ನನ್ನ ಮೂಗುತಿ ತಿರುಗಿ ಕೊಡು ಅಂತ ಮಲ್ಲಿಗೆ ಕೇಳಿನ್ರಿ. ಆಕಿ ಹೊಯ್ಮಾಲಿ ಹಾಂಗ ಕೊಟ್ಟಾಳ್ರಿ. ನಿನ್ನ ಗಂಡನ್ನ ಕೇಳ ನನಗೊತ್ತಿಲ್ಲ ಅಂದು ಹೊಂಟಳ್ರಿ. ನಾ ಯಾಕ ಬಿಡಲಿ. ತುರುಬು ಹಿಡದು ಜಗ್ಗಿ ಪಟಾ ಪಟಾ

ಬಡದಿನ್ರಿ. ಅಕೀನೂ ನಾಕ ಏಟ ಬಡಿದು ನನ್ನ ಸೀರಿ, ಕುಬಸಾ ಹರದಳ್ರಿ. ಮೂಗುತೀ ಜಗ್ಗಾಕ ಹೋದೆ ಸಿಗಲಿಲ್ಲಾ. ಮೂಗ ಕಡದಿನ್ರಿ. ಲಬಾ ಲಬಾ ಹೊಯ್ಕೊಂಡಳ್ರಿ. ಹೊಟ್ಟ್ಯಾಗಿನ ಸಂಕಟಕ ಕಾಲಾಗಿಂದು ತೊಗೊಂಡು ಬಾರಿಸಿದಿನ್ರಿ. ಬಸರ ಹೆಣಮಗಳ್ರಿ, ಏನಾರ ಆದೀತು ಅಂತ ಓಣ್ಯಾನ್ನವರು ಬಂದು ಬಿಡಿಸಿದ್ರಿ. ಆದರೂ ನನ್ನ ಮೂಗತಿ ಸಿಗಲಿಲ್ಲಾ.'

"ನಿಂಗಪ್ಪ ಇದ್ನೇನ ಅಲ್ಲೆ ?"

"ಅಂವಾ ಯಾಕ ಸಾಯಾಕ ಬರತಾನ್ರಿ ಅಲ್ಲೆ. ಎಲ್ಲಿ ಹೋಗ್ಯಾನೋ ಎಡ್ಡ ದಿನಾ ಆತು ಮನೀಗೆ ಬಂದಿಲ್ಲಾ. ಸಂತೀನೂ ಮಾಡಿಲ್ರಿ. ನಡೀ ಶೇಕೂ, ಒಲಿ ಹೊತ್ತಸು, ಹಸದಿದ್ದೀ. ಒಂದೀಟ ರೇಶನ್ ಅಕ್ಕಿ ಆದಾವ ಹಾಕ್ತೀನಿ." ಮಾನವ್ವ ಎದ್ದಳು.

***

"ನಿಮ್ಮ ಮನೀ ಹಿಂದಿನ ಕ್ವಾಣಿ ಕೊಡ್ತಿರೇನ್ರಿ ನಮಗ ಇರಾಕ." ಒಂದು ಸಂಜೆ ನಿಂಗಪ್ಪ ಬಂದು ಕೇಳಿದ್ದ. ಮಾನವ್ವ ಅವನ ಹಿಂದೆ ನಿಂತಿದ್ದಳು. "ನನ್ನ ಹೇಣ್ತಿ ನಿಮ್ಮ ಮನೀ ಕಸಾ ಮುಸುರಿ ಮಾಡ್ತಾಳು. ಹೇಳಿದ್ದ ಕೆಲ್ಸಾ ಮಾಡ್ತಾಳು. ಕೊಟ್ಟರ ನಿಮ್ಮ ಉಪಕಾರ ಭಾಳ ಆಕ್ಕತಿ. ನಾವು ಇದ್ದ ಕ್ವಾಣಿ ಮುನಸಿಪಾಲಿಟಿಯವರು ಕೆಡವತಾರ್ರಿ. ಇರಾಕ ಜಾಗಾ ಇಲ್ಲ ನಮಗ." ನಿಂಗಪ್ಪ ವಿನಯದಿಂದ ಬೇಡಿಕೊಂಡಿದ್ದ. ಒಳ್ಳೆಯ ಕೆಲಸದವರು ಸಿಗದೆ ಪರದಾಡುತ್ತಿದ್ದ ವಿಶ್ವನಾಥ-ಸುನಂದೆಯರು ಒಂದೆರಡು ದಿನ ವಿಚಾರ ಮಾಡಿ ಒಪ್ಪಿಗೆ ಕೊಟ್ಟಿದ್ದರು. ಬರಬರುತ್ತ ಅವರ ಸಂಸಾರದ ಸಂದಿಗೊಂದಿಗಳೆಲ್ಲ ಪರಿಚಯವಾಗಿದ್ದವು. ಹತ್ತು ಹನ್ನೆರಡು ವರುಷಗಳ ಹಿಂದೆ ವಾಚ್‌ಮನ್ ಆಗಿದ್ದ ನಿಂಗಪ್ಪ ಹೆಣ್ಣಾಳನ್ನು ಕೆಣಕಿ ಕೂಲಿಯವರಿಂದ ಹೊಡೆತ ತಿಂದು ಆಸ್ಪತ್ರೆ ಸೇರಿದ್ದ. ಮಾನವ್ವ ದುಡಿದು ಜೋಪಾನ ಮಾಡಿದ್ದಳು. ತಾನು ಅದುವು ಮನುಷ್ಯನೆಂದು ನಿಂಗಪ್ಪ ಈಗಂತೂ ದುಡಿತವನ್ನೆ ಸಂಪೂರ್ಣ ಬಿಟ್ಟು ಕೊಟ್ಟಿದ್ದ. ವಿಷಯ ತಿಳಿದ ಮೇಲೆ ವಿಶ್ವನಾಥ ಕೂಗಾಡಿ ಈಗ ಸುಮ್ಮನಾಗಿದ್ದ. ತಿಂಗಳುಗಳು ಕಳೆದರೂ ಮಾನವ್ವ ತನ್ನ ಮೂಗುತಿ ನೆನೆಸಿಕೊಂಡು ಅಳುವುದನ್ನು, ಗಂಡನನ್ನು ಶಪಿಸುವುದನ್ನು ಬಿಟ್ಟಿರಲಿಲ್ಲ.

"ಅವ್ವಾರ" ಮಾನವ್ವ ಒಂದು ಬಟ್ಟೆಯ ಗಂಟನ್ನು ಹಿಡಿದುಕೊಂಡು ಹಿತ್ತಿಲ ಬಾಗಿಲಿಗೆ ನಿಂತಿದ್ದಳು. ಏನೆಂದು ಕೇಳಲು ಹೋದ ಸುನಂದೆ ಮಾತು ಬಾರದೆ ನಿಂತಳು. ಕಣ್ಣುಮುಚ್ಚಿ ಬೆಚ್ಚಗೆ ಮಲಗಿದ್ದ ಗಂಡು ಮಗು ಅವಳ ಉಡಿಯಲ್ಲಿತ್ತು.

'ಮಲ್ಲಿಗೆ ಈಗೊಂದ ತಿಂಗಳಿಂದ ಆರಾಮ ಇದ್ದಿದ್ದಿಲ್ಲಂತ್ರಿ. ದಿನಾ ತುಂಬಿದ್ದವು. ಅದೇನೋ ಬಡ್‌ಪಶರ್, ಅದು ಹೆಚ್ಚಾಗಿತ್ತಂತ. ಅಶಕ್ತನೂ ಆಗಿದ್ದಳ್ರಿ. ಗಂಡ ಇಲ್ಲದ ಮಿಂಡಗ ಬಸರಾದ್ರ ಯಾರ ಕೇಳಬೇಕ್ರಿ. ತಾನs ದುಡದು ತಿನಬೇಕು.. ನೆಟ್ಟಗ ಹೊಟ್ಟಿಗಿ ಇರತಿದ್ದಿಲ್ಲ. ಮೊನ್ನೆ ಬ್ಯಾನಿ ಎದ್ದಾಗ ಮುನಿಸಿ ಪಾಲ್ಟಿ ದವಾಖಾನಿಗೆ ಇಂವನs ಕರಕೊಂಡ ಹೋಗಿದ್ನಂತ. ಖರ್ಚಿಗೆ ಮೂಗುತಿ ಮಾರಿದ್ನಂತ. ಹಡ್ಯಾಣ ತರಾಸು ಆಗಿ ಮಲ್ಲಿ ಸತ್ತಳ್ರಿ. ಆದರ ಈ ದಿಕ್ಕೇಡಿ ಕೂಸಾ ಬದಕೀತು; ಇಂವಾ ತೊಗೊಂಡು ಬಂದು " ನನ್ನ ತಪ್ಪಾತು ಹೊಟ್ಟ್ಯಾಗ ಹಾಕೋ. ಇದು ನಂದs ಕೂಸು. ಪರದೇಶಿ. ಈ ನಿನ್ನ ಕೈಯ ಕಾಲಂತ ತಿಳಕೊಂಡ ಹಿಡಿತೀನಿ. ಇದಕ್ಕ ತಾಯಿ ಆಗು. ಜ್ವಾಪಾನಾ ಮಾಡು ಅಂತ ಅಳಾಕ ಹತ್ತಿದನ್ರಿ. ನನಗೂ ದುಕ್ಕ ಆತು. ಆ ಹೊಲಸರಂಡಿ ಸತ್ತುಹೋದಳು. ಈ ಕೂಸು ಏನು ಪಾಪಾ ಮಾಡೇದ. ನನಗೂ ಗಂಡು ಮಕ್ಕಳು ಇಲ್ಲಾ. ಇರಲಿ ಬಿಡು ಅಂದಿನ್ರಿ. ಹಾಂಗ ಬಿಟ್ರ ಅನಾತ ಆಕ್ಕತ್ರಿ. ಕೂಸಿಗೆ ಒಂದು ತುತ್ತು ಹಾಕಿ ಬೆಳೆಸಿದರ ಶಿವಾ ಮೆಚ್ತಾನು ಅಲ್ರೀ ಅವ್ವಾರ?"

ಗೊಂಬೆಯಂತೆ ಗದ್ದಕ್ಕೆ ಕೈಕೊಟ್ಟು ಸುನಂದೆ ಮೂಕಳಾಗಿ ನಿಂತೇ ಇದ್ದಳು. ಚಳಿಗೆ ಬೆದರಿ ಕಣ್ಣು ತೆಗೆದು ಅಳುತ್ತಿದ್ದ ಮರಿನಿಂಗಪ್ಪನನ್ನು ಸೆರಗು ಮುಚ್ಚಿ ಎದೆಗೆ ಒತ್ತಿಕೊಂಡಳು ಮಾನವ್ವ.

***

**ಐಸ**

# ಹರಕೆ

ಇನ್ನೂ ಕತ್ತಲು ಇದ್ದಾಗಲೇ ಎದ್ದು ಬೇಗ ಬೇಗ ಕೆಲಸ ಮಾಡಿದ್ದರೂ ಪಾರವ್ವ ರೊಟ್ಟಿ ಬಡಿಯುತ್ತಿದ್ದಾಗ ಹೊತ್ತು ಏರಿತ್ತು. ಬಿಸಿಲಿನ ಝಳ, ಒಲೆಯ ಕಾವು ಕೂಡಿ ಅವಳ ಹಣೆಯ ಮೇಲಿಂದ ಬೆವರು ಹನಿ ಸಾಲುಗಟ್ಟಿ ಇನ್ನೇನು. ಕೊಮ್ಮಣಿಗೆಯಲ್ಲಿ ಸುರಿದು ಬೀಳಲಿತ್ತು. ರೊಟ್ಟಿಯನ್ನೆತ್ತಿ ಹಂಚಿಗೆ ಹಾಕುವ ಮೊದಲು ಸ್ವಲ್ಪ ತಡೆದು ಎಡಗೈಯಿಂದ ತೊಗರಿ ಕಟ್ಟಿಗೆ ಚಾಚಿ, ಬಲಗೈಯಿಂದ, ಬೆವರು ಒರೆಸಿ ಚೆಲ್ಲಿದಳು.

ಎದ್ದೊಡನೆ ಸೆಗಣಿ ಕಸ ಬಳಿದು, ಒಲೆ ಹೊತ್ತಿಸಿ ಮಕ್ಕಳಿಗೆ ಚಹಾ ಕಾಸಿ ಕೊಟ್ಟು, ತಾನು ಉಪವಾಸವಿದ್ದು ನೀರು ಕಾಸಿ, ಜಳಕ ಮಾಡಿ ಒಂದು ವಾರದ ಹಿಂದೆ ಈದ ಎಮ್ಮೆ ಹಿಂಡಿ ಹಾಲು ತೆಗೆದಿಟ್ಟು, ರೊಟ್ಟಿ ಬಡಿಯುತ್ತ,

"ಈರಪ್ಪಾs, ಏs ಈರಪ್ಪಾ," ಮಗನನ್ನು ಕೂಗಿದಳು ಪಾರವ್ವ, ಹೊರಗಿನ ಕಟ್ಟೆಯ ಮೇಲೆ ಗೋಡೆಗೆ ಒರಗಿ ಕುಳಿತು ನಿಧಾನವಾಗಿ ಬೀಡಿ ಎಳೆಯುತ್ತಿದ್ದ ಈರಪ್ಪ ಮಿಸುಕಲಿಲ್ಲ.

"ಏ ಈರೂs, ಈರಣ್ಣಾs ಬಾರಯಪ್ಪಾ, ನನಗ ಹೊತ್ತಾಗತೈತಿ ದೇವರಿಗೆ ಹೋಗಾಕ. ಇಂದ ಅಮಾಸಿ. ದೇವರಿಗೆ ಮೀಸಲತುಪ್ಪ ಕೊಟ್ಟ ಬರಾಕs ಭೇಕು. ಇಂದ ಹಾಲು ನೀನs ಒಯ್ದು ಕೊಟ್ಟ ಬಾರೋಪಾ ವರವೀ ಮನಿಗೋಳಿಗೆ"

ಈರಪ್ಪ ಗಡಸು ದನಿಯಲ್ಲಿಯೇ ಕೂತಲ್ಲಿಂದ ಒದರಿದ. "ಹೋಗ್ಹೋಗು. ನಾ ಏನ ಹೋಗಾಂಗಿಲ್ಲಾ. ಈ ಸುಡೂ ಬಿಸಿಲಾಗ ಅಷ್ಟು ದಾರ ಯಾರ ನಡೀಬೇಕು. ದೇವರಿಗೆ ಹೊಕ್ಕಾಳಂತ ದೇವರಿಗೆ, ಯಾರ ಹೇಳಿದ್ದಾರ ಈಯವ್ವಗ. ಕಲ್ಲು ದೇವರು ತಿಂತಾನೇನು? ಉಣತಾನೇನು? ನಮಗ ನೀಡಿದರ ನಾವs ಉಂಡೇವು ಆ ಮೀಸಲು ತುಪ್ಪಾ"

ಗಂಡನೂ ಹೀಗೆಯೇ ಭಯಭಕ್ತಿ ಇಲ್ಲದೇ ದೇವರಿಗೆ ನಡಕೊಳ್ಳದೇ ಬಾಯಲ್ಲಿ ಮಣ್ಣು ಹಾಕಿಕೊಂಡು ಹೋದ. ಹಿಟ್ಟಿನ ಕೈಯಿಂದಲೇ ಗಲ್ಲಗಲ್ಲ ಬಡಿದುಕೊಂಡಳು ಪಾರವ್ವ. ಕಲ್ಲಪ್ಪ ಸತ್ತದ್ದು ಹೊಟ್ಟೆಯಲ್ಲಿ ಆದ ಗಡ್ಡೆಯಿಂದ ಆಪರೇಷನ್ನಿಗೆ ಖರ್ಚು ಮಾಡಲು ಹಣವಿಲ್ಲದ್ದರಿಂದ ಎನ್ನುವದು ಪಾರವ್ವನ ಅಲ್ಪಮತಿಗೆ ತಿಳಿಯದು.

"ಯಪ್ಪಾ ಈರಣ್ಣಾ. ತೋಬಾ ತೋಬಾ ಅನ್ನು, ದೇವಿಗೆ ಹಾಂಗ ಕಲ್ಲು ಅನಬ್ಯಾಡೋ ನಿಮಗರೆ ಆಕಿ ಬಾಳಟ್ಟು ಆಯುಸ್ಯಾ ಕೊಡಲಿ. ನಿನ್ನ ತಂಗಿಗೆ ಛಲೋ ಗಂಡ ಸಿಗಲಿ. ಸಣ್ಣ ತಮ್ಮನ ಜರಾ ಕಮ್ಮಿ ಆಗ್ಲಿ. ಯಪ್ಪಾ ನನಗರೆ ಯಾರ ಆದಾರೋ ನಿಮ್ಮನ್ನ ಬಿಟ್ಟರ. ನಿಮ್ಮ ಸಲವಾಗೇ ಬದುಕೇನಿ. ನಿಮ್ಮಪ್ಪ ಸತ್ತಾಗಿಂದ ಗಂಡಸಿನ ಆಸರ ಇಲ್ಲದ ಹೊಲದಾಗ ಮನ್ಯಾಗ ಕೂಡೇ ದುಡೀತೀನಿ. ದೇವರು ನಿಮಗ ಛೋಲೋ ಮಾಡಲಿ ಅಂತ ಹರಕೀ ಹೊರತೀನಿ. ಅದಕ್ಕ ಎಮ್ಮಿ ಈದ ಕೂಡಲೆ ಮೀಸಲ ತುಪ್ಪಾ ಕಾಸಿ ಇಡತೀನಿ." ಮೂಗು ಸೀಟುತ್ತ, ಸೆರಗು ಕಣ್ಣಿಗೆ ಒತ್ತಿದ ಅವ್ವನನ್ನು ನೋಡಿ ಈರಪ್ಪನ ಮನಸ್ಸು ಸ್ವಲ್ಪ ಮರುಗಿತೇನೋ.

'ಇರ್ಲಿ ಬಿಡು, ಅಳಬ್ಯಾಡಾ. ನಿನಗ ಏಟ ಹೇಳಿದರೂ ಆಟರಾಗ ಐತಿ. ಹಾಲು, ತುಪ್ಪದ ರೊಕ್ಕಾ ಡಾಕ್ಟರರಿಗೆ ಕರ್ಚು ಮಾಡಿದ್ದರ ಈಟೊತ್ತಿಗೆ ನಾಗಣ್ಣನ ಜ್ವರಾ ಕಮ್ಮಿ ಆಕ್ಕಿದ್ದು. ದರಾ ಅಮಾಸೀಗೆ ದೇವರಿಗೆ ಹೋಗೂದು ಬಿಟ್ಟು, ಅದ ಬಸ್ ಚಾರ್ಜ್ ಉಳಿಸಿದ್ದರ ಇಟೊತ್ತಿಗೆ ನನಗ ಒಂದ ಸೈಕಲ್ ಕೊಳ್ಳತಿದ್ದಿ. ನಾ ಅದನ್ನ ಹೊಡಕೊಂಡು ಎಲ್ಲಾ ವರವೀ ಮನೀಗೆ ಹಾಲು ಕೊಟ್ಟು ಬರತಿದ್ದಿ. ಬಿಸಲಾಗ, ಮಳ್ಯಾಗ ನೀ ಬುಟ್ಟೀ ಹೊತಕೊಂಡು ಹರದಾರಿ ನೆಲಾ ನಡಿಯೂದ ತೆಪ್ಪತಿತ್ತು."

"ಆಗಲಿ ಈರಣ್ಣಾ. ಈ ದಪಾ ಸುಗ್ಗಿ ಆತಂದ್ರ ನಿನಗ ಒಂದ ಸೈಕಲ್ ಕೊಡಸ್ತೀನಿ. ನಾ ಹಾಲು ಕೊಡು ಮನೀ ಬಾಯಾರ ಗುರ್ತಿನ್ಯಾಗ ಎಲ್ಲರೇ ಹಳೇ ಸೈಕಲ್ ಸಿಗತೈತೇನ ಕೇಳ್ರಿ ಅಂತೀನಿ ಆತಿಲ್ಲೊ." ಮಗನನ್ನು ರಮಿಸಿದಳು ಪಾರವ್ವ ಹಿಟ್ಟಿನ ಕೈ ತೊಳೆಯುತ್ತ.

"ಹೂಂ. ನೀ ಹಿಂಗ ಅನ್ನಾಕ ಹತ್ತೇ ಭಾಳ ದಿನಾ ಆದ್ವು. ಸುಗ್ಗಿ ಬರತೈತಿ ಹೋಗತೈತಿ. ಒಂದೊಂದ ವರ್ಸ ಮಳೀ ಇಲ್ಲಾ, ಬೆಳೀ ಇಲ್ಲಾ. ಫಾಳೆ ಕೊಡಾಕ ಸುದ್ದಾ ರೊಕ್ಕ ಇರಂಗಿಲ್ಲಾ. ಹ್ಯಾದ ವರ್ಸ ಮಳೀ ಛೊಲೋ ಆತು. ಬೆಳೀನೂ ಬಂದಿತ್ತು. ದೊಡ್ಡ ಎಮ್ಮಿಗೆ ಜಡ್ಡು ಆತು, ದನದ ಡಾಕ್ತರ ಕಡೇ ಎಮ್ಮೀ ಒಯ್ಯೂದು ಬಿಟ್ಟಿ, ಮಂತ್ರ-ತಂತ್ರ, ಲೋಬಾನ ಅಂತ ಓಡ್ಯಾಡಿದಿ. ಕಡಿಗೂ ಎಮ್ಮಿಗಿ ಜಡ್ಡ ಹೆಚ್ಚಾಗಿ, ಸತ್ತs ಹೋತು. ಉಳದ ರೊಕ್ಕಾ ಸಾವಕಾರ ಇಸಗೊಂಡ ಹ್ವಾದಾ. ಬ್ಯಾಂಕಿಗೆ ಅಸಲು-ಬಡ್ಡೀಗೆ ರೊಕ್ಕ ಸಾಲಲಿಲ್ಲಾ, ನಾ ಹೇಳಿದ ಮಾತ ನೀ ಕೇಳಂಗಿಲ್ಲಾ. ದುಡೀ ದುಡೀ ಅಂದರ ನಾನರೆ ಏಟ ದುಡೀಬೇಕು? ಕತ್ತೀ ಹಾಂಗ ದುಡದರೂ ಹೊಟ್ಟೀತುಂಬ ರೊಟ್ಟಿ ಇಲ್ಲಾ, ಹಾಲ ಇಲ್ಲಾ, ಸುಕಾ ಇಲ್ಲಾ" ರೌಸಿಗೆದ್ದು ವರ ವರ ಒದರಿಂದ ಈರಪ್ಪ.

"ಇಲ್ಲಪ್ಪಾ ಈರಣ್ಣ ಇನ್ನ ಮ್ಯಾಲೆ ನೀ ಹೇಳಿದಾಂಗ ಕೇಳತಿನ್ಯೊ, ಈವತ್ತ ಒಂದ ದಿನಾ ಹಾಲು ಒಯ್ಯಿ, ಬಾಯಾರಿಗೆ ಹಾಲು ತೆಪ್ಪಿಸಬಾರ್ದು" ಪಾರವ್ವ ಅಂಗಲಾಚಿದಳು.

"ಇವತ್ತ ಇಮಾಮ ಸಾಹೇಬರ ಬಾಡಿಗಿ ಸೈಕಲ್‌ಗೆ ರೊಕ್ಕಾ ಕೊಟ್ಟರ ನಾ ಹಾಲ ಒಯ್ಯಾಂವ ನೋಡ ಮತ್ತ. ಇಲ್ಲಾಂದರ ನೀನs ಹೋಗಿ ಕೊಟ್ಟ ಬಾ. " ಅವ್ವನನ್ನು ಸಾಕಷ್ಟು ಮೆತ್ತಗೆ ಮಾಡಿದ್ದ ಈರಪ್ಪ ತನ್ನ ಆಸೆಯನ್ನು ಹೇಳಿಕೊಂಡ.

ತಾನು ದೇವರಿಗೆ ಒಯ್ಯುವ ತುಪ್ಪದ ಗಿಂಡಿ, ಹಣ್ಣು -ಕಾಯಿ, ರೊಟ್ಟೀ ಗಂಟು ಎಲ್ಲ ತಯಾರು ಮಾಡಿಕೊಂಡ. ಪಾರವ್ವ ಚಂಚಿ ತೆಗೆದು ಎರಡು ರೂಪಾಯಿ ಕೈಗೆ ಕೊಟ್ಟಳು.

"ಇಕಾ ಹಿಡಿ, ಸೈಕಲ್ ಮ್ಯಾಲೇ ಹೋಗು. ಹಾಲು ಕೊಟ್ಟು ಬರೂಮುಂದ ಬಿಸಗೋಟ ತೊಗೊಂಡು ಬಾ. ಎಡ್ಡ ದಿನಾ ಆತು ನಾಗಣ್ಣನ ಹೊಟ್ಯಾಗ ಅನ್ನದ ಅಗಳು ಹೋಗಿಲ್ಲಾ. ಒಂದೀಟ ಚಾ ಬಿಸಗೋಟು ಬೀಳಲಿ. ಕಮಲೀ, ಮನೀ ಕಡೆ ಜ್ಯಾಕಿ, ನೀರಿಗೆ, ಕಟಿಗ್ಗೆ ಹೋಗೂ ಮುಂದ ಬೇಶಾಗಿ ಬಾಗಿಲಿಗೆ ಕೀಲಿ ಹಾಕ್ಕೊಂಡ ಹೋಗ. ರಾತ್ರೀಗೆ ಬರೇ ರೊಟ್ಟೀ ಮಾಡು. ಕಾರಬ್ಯಾಳಿ ಐತಿ, ನಾಳೆ ಮಧ್ಯಾಹ್ನಕ ನಾ ಬರ್ತೀನಿ, ತಮ್ಮನ್ನ ನೋಡಿಕೋ, ಹಾಲು ಹಿಂಡಿ ಕೊಡು, ಈರಣ್ಣ ಕೊಟ್ಟ ಬರ್‍ತಾನ" ಎಂದು ಹೊರಗೆ ಹೊರಟ ಅವ್ವನನ್ನು ನಿಲ್ಲಿಸಿ, "ಯವ್ವಾ ನೀ ಕೊಟ್ಟ ರೂಪಾಯಿಬಾಗ ಬಿಸಗೋಟ, ಸೈಕಲ್ ಎರಡೂ ಬರೂದಿಲ್ಲಾ" ಎಂದು ಹಟ ಹಿಡಿದ ಈರಪ್ಪನ ಕೈಗೆ ಮತ್ತೆ ಮೂರು ರೂಪಾಯಿ ಹಾಕಿ ಪಾರವ್ವ ತನಗಾಗಿ ಬಸ್‌ಸ್ಟ್ಯಾಂಡಿನಲ್ಲಿ ಕಾಯುತ್ತಿದ್ದ ರಾಚವ್ವನನ್ನು ಕೂಡಿಕೊಳ್ಳಲು ಹೊರಬಿದ್ದಳು.

***

"ಯವ್ವಾs, ಅಣ್ಣಾ, ಕಾಲು ಮುರಕೊಂಡು ದವಾಖಾನ್ಯಾಗ ಅದಾನ, ಆಪರೇಶನ್ ಮಾಡಬೇಕಂತಬೇ" ಎಂದು ಅಳುತ್ತ ಹೇಳಿದ ಮಗಳ ಮಾತು ಕೇಳಿ ನೆತ್ತಿ ಸುಡುವ ಬಿಸಿಲಿನಲ್ಲಿ ನಡೆದು ಬಂದ ಪಾರವ್ವ ತಲೆಯ ಮೇಲಿನ ಬುಟ್ಟಿಯನ್ನು ನೆಲಕ್ಕೆ ಕುಕ್ಕಿ ದೊಪ್ಪೆಂದು ಕುಳಿತಳು.

ದೇವಿಗೆ ಮೀಸಲು ತುಪ್ಪ ಕೊಟ್ಟು, ಕಾಯಿ ಒಡೆಸಿ, ಪ್ರಸಾದ ಹಿಡಿದು, ಮಕ್ಕಳೊಡನೆ ಊಟ ಮಾಡಿದರಾಯಿತೆಂದು ಬರಿ ಹೊಟ್ಟೆಯಲ್ಲಿ ಬಂದ ಪಾರವ್ವನ ಗಂಟಲು ಒಣಗಿ, ತೇಕು ಹತ್ತಿ, ಕೈಕಾಲು ಸೋತಂತಾಗಿ, ಕಣ್ಣಿಗೆ ಕತ್ತಲು ಬಂದು ಹಾಗೇ ನೆಲದ ಮೇಲೆ ಉರುಳಿ ಬಿಟ್ಟಳು. ಗಾಬರಿಯಾದ ಕಮಲಿ ಅವಸರ ಮಾಡಿ ಹರಿವೆಯಲ್ಲಿಯ

ತಣ್ಣೀರು ತಂದು ಅವ್ವನ ಬಾಯಿಗೆ ಒಂದೆರಡು ಗುಟುಕು ಹನಿಸಿ ತೇವುಗೈಯಿಂದ ಮುಖ ಒರೆಸಿದಾಗ ಕಣ್ಣು ತೆರೆದ ಪಾರವ್ವ "ನನ್ನ ಕೂಸಿಗೆ ಏನಾತಬೇ" ಎಂದಳು ಕ್ಷೀಣದನಿಯಲ್ಲಿ.

"ಅಣ್ಣ ಹಾಲ ಕೊಟ್ಟ ತಿರಿಗಿ ಬರೂ ಮುಂದ ಆ ಹುಣಸೀಮರದ ಕತ್ತರೀ ಹತ್ತರ ದೆವ್ವನಂತಾ ಟ್ರಕ್ ಬಂದ ಹಾದು ಹೋತಂತಬೇ, ಇಂವಾ ಬಿದ್ದದ್ದ ನೋಡಿ ಹಾಂಗ ಹೊಡಕೊಂಡ ಹೋಗಿಬಿಟ್ಟನಂತ. ಚಾದ ಅಂಗಡಿ ಪರಮಣ್ಣ ನೋಡಿ ದವಾಖಾನಿಗ ಒಯ್ದನಂತ, ಸೈಕಲ್ ಮುರದ ಮೂರುತುಕಡಿ ಆಗೇತಿ, ಅಣ್ಣನ ಕಾಲು ಓಟು ಬಾತು ತಿದಿ ಆಗೇತಿ, ನಿಂದರಾಕ ಬರವಾಲ್ದು. ನಿನ್ನೀ ರಾತ್ರಿ ನೋವು ಭಾಳ ಆಗತೈತಿ ಅಂತ ಹೊಯ್ಕೋತಿದ್ದ. ಬಾವು ಕಡಿಮಿ ಆದ ಮ್ಯಾಲೆ ಆಪರೇಶನ್ ಮಾಡತಾರಂತ. ನಡಿಯಬೇ ನಾವೂ ಹೋಗೂಣು ನಾಗಣ್ಣನ ಕರಕೊಂಡ." ಕಮಲಿ ಒಂದೇ ಉಸುರಿನಲ್ಲಿ ಎಲ್ಲ ಹೇಳಿ ಮುಗಿಸಿ ತಮ್ಮನನ್ನು ಎತ್ತಿಕೊಂಡಳು.

ಪಾರವ್ವ ಗಳಗಳ ಚೆರಿಗೆ ನೀರು ಕುಡಿದು, ಗೋಡೆಯ ಮೇಲಿದ್ದ ದೇವಿ ಚಿತ್ರಕ್ಕೆ ಕೈಮುಗಿದು. "ಯವ್ವಾ ನನ ತಾಯೀ, ನನ್ನಿಂದ ತೆಪ್ಪ ಆಗಿದ್ದರ ಹೊಟ್ಯಾಗ ಹಾಕ್ಕೋ, ಯವ್ವಾ ನನ್ನ ಮಗನ ಕಾಲು ಗುಣಾ ಮಾಡು, ನಿನ ಹರಕೀ ತೀರಸತೀನಿ ಸಿಟ್ಟಾಗ ಬ್ಯಾಡಾ." ಎಂದು ಬೇಡಿಕೊಂಡು ಹೊರಡುವಾಗ ಮಗನಿಗಾಗಿ ದೇವಿಯ ಪ್ರಸಾದದ ಚೀಟು ಒಯ್ಯಲು ಮರೆಯಲಿಲ್ಲ. "ಫೋಟೋ ತೆಗೆದು ನೋಡ್ತೀವಿ. ಮೊಣಕಾಲಿನೊಳಗ ಎಲುಬು ಸೀಳು ಬಿಟ್ಟದ. ನಾಳೆ ಆಪರೇಶನ್ ಮಾಡಿ ಪ್ಲಾಸ್ಟರ್ ಹಾಕಿ ಕಾಲು ಕಟ್ಟತೇವಿ, ಆಮ್ಯಾಲೆ ಮನೀಗೆ ಹೋಗ್ರಿ, ಮಲಗಿದಲ್ಲೆ ಮಲಗಿರಬೇಕು ನಿನ್ನ ಮಗಾ. ಮೂರ ವಾರದ ಮ್ಯಾಲೆ ಬರ್ರಿ. ನೋಡಿ ಹೇಳತೇನಿ. ಆರಾಮ ಆಗ್ತಾನ, ಕಾಳಜಿ ಮಾಡಬ್ಯಾಡ."

ಸರಕಾರಿ ಡಾಕ್ಟರರು ಧೈರ್ಯ ಹೇಳಿದಾಗ ಪಾರವ್ವನ ಪಾಲಿಗೆ ಅವರೇ ದೇವರಾಗಿದ್ದರು. ಮತ್ತೆ ಮತ್ತೆ ದೈನಾಸಬಿಟ್ಟು ಮಗನಿಗೆ ಬೇಗ ಗುಣವಾಗುವಂತೆ ಮಾಡಬೇಕೆಂದು ಅವಳು ಕೇಳಿಕೊಳ್ಳುತ್ತಿರುವಾಗ ಅವರು "ನಾವು ನಾಳೇ ಆಪರೇಶನ್ ಮಾಡ್ತೀವಿ. ನೀನು ಔಷಧಿ, ಇಂಜೆಕ್ಷನ್ ಮತ್ತು ಉಳಿದ ಖರ್ಚಿಗೆ ಇನ್ನೂರು ರೂಪಾಯಿ ತೊಗೊಂಡ ಬಾ" ಎಂದು ಬೇರೆ ರೋಗಿಯತ್ತ ನಡೆದರು.

ಬಿಟ್ಟೂ ಬಿಡಲಾರದೆ ಎಳೆಗರುವನ್ನು ಆಗಲಿ ಹೋಗುವ ಆಕಳಿನಂತೆ ಪಾರವ್ವ ಕಾಲು ಎಳೆಯುತ್ತ ಹಳ್ಳಿಯತ್ತ ಹೊರಟಳು. ದವಾಖಾನೆಯ ಖರ್ಚು ಇನ್ನೂರು, ಸೈಕಲ್ ರಿಪೇರಿಯ ಖರ್ಚು ಇನ್ನೂರು ರೂಪಾಯಿ ಎಲ್ಲಾ ಹೇಗೆ ಜೋಡಿಸಬೇಕೆನ್ನುವ ಚಿಂತೆಯಲ್ಲಿ ದಾರಿ ದೂಕುತ್ತಿದ್ದಳು ಪಾರವ್ವ. ತನಗ ಎಷ್ಟ ಕಷ್ಟಾ ಬರ್ತಾವ. ಒಂದ ಮುಗೀತ ಅನ್ನೂದರಾಗs ಇನ್ನೊಂದ. ಅದೂ ಮುಗೀತ ಅನ್ನೂದರಾಗ ಮತ್ತೊಂದ. ಇಡೀ ಜೀವಮಾನ ಎಲ್ಲಾ ಇಂದಿಲ್ಲಾ ನಾಳ್ಗೆ ಸುಕಾ ಸಿಕ್ಕೀತಂತ ಆಸೇ ಮಾಡೂದರಾಗ ಕಳದುಹೋತು, ಇನ್ನ ಈ ಉಸಲ ನಿಲ್ಲೂ ತನಕಾ ಹಿಂಗs ಕಾಣ್ತದ, ಆ ಪರಮಾತ್ಮ ಎಲ್ಲಿದ್ದಾನು? ಕಣ್ಣು ಮುಚ್ಚಿದ್ದಾನೇನ? ಪಾಪ ಮಾಡಿದವರಿಗೆ ಆಟ ಶಿಕ್ಷಾ ಕೊಡತಾನಂತ ಪುರಾಣದಾಗ ಹೇಳತಿದ್ರು, ನಾ ಏನ ಹಂತಾ ಪಾಪಾ ಮಾಡೇನಿ, ಸುಳ್ಳಿ ಅಲ್ಲ, ಕಳ್ಳಿ ಅಲ್ಲ, ಹಾಲಿನ್ಯಾಗ ನೀರ ಕೂಡಿಸಿ ಮೋಸಾ ಮಾಡಾಂಗಿಲ್ಲ. ಬಾಯಾರು ಕೊಡೂ ರೊಕ್ಕ ಕಿರೇದಿಂದ ಭೋಲೊ ಹಾಲು ಕೊಡ್ತೀನಿ. ಗಂಡನ ಜತೀಗೆ ಚಂದಾಗಿ ಬಾಳೇವು ಮಾಡಿದೆ. ಅವನ ಆಯಸ್ಸು ತೀರಿತ್ತು. ಮಕ್ಕಳ ಮಾರೀ ನೋಡಿ ಕಾಲಾ ಹಾಕಬೇಕಂದರ ಈಗ ಹಿಂಗ. ದೇವರ ಪೂಜೆ ತಪ್ಪಸಾಂಗಿಲ್ಲಾ, ಅಮಾಸಿಗೆ ಒಮ್ಮೆ ಕಾಯಿ ಒಡಸ್ತೀನಿ, ಮೀಸಲು ತುಪ್ಪಾ ಕೊಡ್ತೀನಿ.... ಆದರೂ ಯಾಕ ಸಿಟ್ಟಾಗ್ಯಾಳ ಆಕಿ ? ... ಮೀಸಲು... ಹಾಂ ಮೀಸಲು ಅಂದ ಕೂಡ್ಲೆ ನೆಪ್ಪಾತು, ನನ್ನಿಂದ ತಪ್ಪ ಆಗೇತಿ, ಈ ದೇವೀಗೆ ನಡಕೊಳ್ಳಾಕ ಅವ್ವನೇs ಹೇಳಿದ್ದಳು. ಆಕೀನೂ ಹಾಂಗ ಬಯಾ ಬಕುತಿ-ರೀತಿ-ರಿವಾಜು ಎಲ್ಲಾ ನಡಸತಿದ್ಲು. ಸಾಯೂ ಮುಂದ ನನ್ನ ಹಂತ್ಯಾಕ ಕರದು ಒಂದು ಮಾತ ಹೇಳಿದ್ಲು. 'ಈ ದೇವಿ ಭಾಳ ದೊಡ್ಡಾಕಿ. ಜಗತ್ತಿಗೇ ಆಕೆ ದೇವತೆ. ಆಕಿನ್ನ ಸಂತೋಷದಾಗ ಇಡಬೇಕ, ಸಿಟ್ಟು ಬಂದರ ಆಕೀ ನಮ್ಮನ್ನ ಮುಕ್ಕಿ ಬಿಡ್ತಾಳ. ಎಲ್ಲಾ ನಾಸ ಮಾಡಿ ಬಿಡತಾಳ, ಮನೀ ಹೆಣ್ಣುಮಗಳ್ನ ಆಕೀ ಸೇವಾಕ್ಕ ಬಿಡಬೇಕ.

ಅದಕ್ಕs ನಿಮ್ಮಕ್ಕ ಚೆನ್ನಿನ ನಾ ದೇವರಿಗೆ ಬಿಟ್ಟಿದ್ದು. ನೀ ಈ ರಿವಾಜ ನಡಸಿಕೊಂಡ ಬಾ. ಕಮಲಿ ಇನ್ನೂ ಕೂಸ ಐತಿ, ದೊಡ್ಡಾಕಿ ಆದ ಮ್ಯಾಲೆ ಆಕೀಗೆ ಲಗ್ನಾ ಮಾಡಬ್ಯಾಡಾ. ದೇವಿ ಸೇವಾಕ್ಕ ಬಿಡು, ನಿನಗ ಎಲ್ಲಾ ಛೊಲೋ ಆಕ್ಕೇತಿ. ಮಳೀ ಬೆಳೀ ಬರತೈತಿ. ಉಣ್ಣಾಕ, ತಿನ್ನಾಕ, ಕಡಿಮೆ ಆಗೂದಿಲ್ಲಾ. ಈ ರಿವಾಜ ತೆಪ್ಪಸಿದಿ ಅಂದರ ದೇವೀಗೆ ಸಿಟ್ಟ ಬರತೈತಿ' ಅವ್ವನ ಮಾತು ಕಲ್ಲಿನಲ್ಲಿ ಕೊರೆದಂತೆ ಪಾರವ್ವನ ಮನಸ್ಸಿನಲ್ಲಿತ್ತು. ಆದರೆ ಕಲ್ಲಪ್ಪ ಅವಳ ಈ ಮಾತಿಗೆ ಪೂರ್ಣ ವಿರುದ್ಧವಾಗಿದ್ದ.

"ಏ ಪಾರೀ ನೀ ಹಿಂತಾದೆಲ್ಲಾ ಹೇಳಬ್ಯಾಡಾ. ಕಮಲಿನ್ನ ನಾ ದೇವರಿಗೆ ಬಿಡೂದಿಲ್ಲಾ ಆಕೀನ್ನ ಸಾಲೀಗ ಹಾಕಾಂವ. ನಾಕ ಅಕ್ಸರ ಕಲೀಲಿ, ನಮ್ಹಾಂಗ ದಡ್ಡರು ಆಗೂದು ಬ್ಯಾಡಾ ನನ್ನ ಮಕ್ಕಳು. ಆಕೀಗೆ ಗಂಡನ್ನ ಹುಡುಕಿ ಲಗ್ನಾ ಮಾಡಾಂವ. ದೇವರಿಗೆ ಬಿಡೂ ರಿವಾಜು ನಿನ್ನ ತವರುಮನ್ಯಾಗ ಇದ್ದೀತು. ನಮ್ಮ ಮನ್ಯಾಗ ಇಲ್ಲಾ. ಇದ್ದರೂ ನಾ ಬಿಡೂದಿಲ್ಲಾ" ಎಂದು ಗಂಡ ಬೆದರಿಸಿ ಬಿಟ್ಟಿದ್ದ. ಗಂಡ ಹಾಕಿದ ಉಗುಳು ದಾಟುವ ಧೈರ್ಯವಿರದ ಪಾರವ್ವ ತೆಪ್ಪಗಾಗಿದ್ದಳು. ಆದರೆ ಗಂಡ ಹೊಟ್ಟೆಯಲ್ಲಿನ ಗಂಟಿನಿಂದ ಸತ್ತಾಗ ಇದೆಲ್ಲ ದೇವಿಯ ಸಿಟ್ಟು ಎಂದೇ ಬೋರಾಡಿ ಅತ್ತಿದ್ದಳು. ಈರಪ್ಪನೂ ಅಪ್ಪನ ಗುಣದವನೇ ದೇವರು-ದಿಂಡರು ಬೇಡ. ಈಗ ಕಾಲು ಮುರಿದು ಬಿದ್ದ. ಅಪ್ಪ ಸತ್ತೊಡನೆ ಸಾಲೆ ಬಿಟ್ಟು ಹೊಲದಲ್ಲಿ ದುಡಿಯುತ್ತಿದ್ದ ಅವನಿಗೆ ತಮ್ಮ-ತಂಗಿಯರನಾದರೂ ಸಾಲೆಗೆ ಕಳಿಸಬೇಕೆನ್ನುವ ಹಂಬಲ. ಅದರಂತೆ ಕಮಲಿ ನಾಲ್ಕನೆ ಇಯತ್ತೆಯವರೆಗೆ ಕಲಿತು ಮುಂದೆ ಕಲಿಯಲು ಪರವೂರಿಗೆ ಹೋಗದೆ ಮನೆ-ಹೊಲ ಕೆಲಸ ಮಾಡುತ್ತ ಇದ್ದಳು. ಅವ್ವ ಸಾಲ ಮಾಡಿ, ಮಕ್ಕಳ ಬಾಯಿ ಬಡಿದು, ಮಾಡುತ್ತಿದ್ದ ಪೂಜೆ ರೀತಿ-ರಿವಾಜು, ದೇವರು ಇವೆಲ್ಲ ಅವಳ ಮನಸ್ಸಿಗೂ ಬರದೆ ಅವ್ವ -ಮಕ್ಕಳಲ್ಲಿ ಆಗಾಗ ಜಗಳವೂ ಆಗುತ್ತಿತ್ತು.

"ನಾಗಣ್ಣಾs, ನನ ಕೈ ಸೋತದ, ಸ್ವಲ್ಪ ಇಳದು ನಡೀಯಪ್ಪಾ." ಕಮಲಿಯ ದನಿ ಕೇಳಿದಾಗಲೇ ಪಾರವ್ವ ತಿಳಿವಿಗೆ ಬಂದದ್ದು. ಚಿಕ್ಕ ಮಗನನ್ನು ಎತ್ತಿಕೊಂಡು ತಾನೇ ಭರ ಭರ ಮುಂದೆ ನಡೆದಳು.

ಅವ್ವ ಮೇಲಿಂದ ಮೇಲೆ ಸಿಟ್ಟು ಮಾಡುವುದು. ಸಣ್ಣ ತಪ್ಪಿಗೂ ತನ್ನನ್ನು ಬರಲು ತೆಗೆದುಕೊಂಡು ಹೊಡೆಯುವದು. ಮಕ್ಕಳೊಡನೆ ಜಗಳವಾಡಿ ಅತ್ತು ಕರೆದು ಉಪವಾಸ ಮಲಗುವುದು, ಎಲ್ಲದಕ್ಕೆ ತಾನೇ ಕಾರಣ ಎಂದು ತಿಳಿದಿದ್ದ ಕಮಲಿ ತನ್ನನ್ನು ದೇವರಿಗೆ ಬಿಡಬೇಕೆನ್ನುವ ಅವ್ವನ ಹಟಕ್ಕೆ ಮಾತ್ರ ಮಣಿಯದಾಗಿದ್ದಳು. ಅಕ್ಕರ ಕಲಿತು ಚೂರು ಪಾರು ಓದಬಲ್ಲ ಕಮಲಿಯ ತಿಳಿವಿನ ವಿಸ್ತಾರ ದೊಡ್ಡದಾಗಿತ್ತು. 'ಜಗತ್ತಿಗೆಲ್ಲ ದೇವರು ಒಬ್ಬನೇ, ಅದೊಂದು ಶಕ್ತಿ ಅಷ್ಟೇ, ಅದಕ್ಕೆ ರೂಪ, ಆಕಾರಗಳಿಲ್ಲ. ಮನುಷ್ಯರಂತೆ ಹಸಿವು-ನೀರಡಿಕೆ ಆಗುವದಿಲ್ಲ,. ದೇವರಿಗೆ ಬಲಿ ಕೊಡುವದು, ಹರಕೆ ಹೊರುವದು, ಹೆಣ್ಣನ್ನು ಮೀಸಲು ಬಿಡುವುದು ಬೇಕಾಗಿಲ್ಲ. ಇವೆಲ್ಲ ಮನುಷ್ಯರೇ ಮಾಡಿಕೊಂಡದ್ದು. ದೇವರಿಗೆ ಸಂತೋಷವಾಗಬೇಕಾದರೆ ನಾವು ಒಳ್ಳೆಯವರಾಗಬೇಕು. ಅದೇ ಮುಖ್ಯ ಎಂದು ಸಂಗಪ್ಪ ಮಾಸ್ತರರು ಹೇಳಿ ಹೇಳಿ, ಕಟೆದು ಕಟೆದು ಮಕ್ಕಳ ತಲೆಯಲ್ಲಿ ತುಂಬುತ್ತಿದ್ದದ್ದು ಕಮಲಿಯ ಮನಸ್ಸಿನಲ್ಲಿ ಭದ್ರವಾಗಿ ಬೇರೂರಿದೆ. ಚಾದ ಅಂಗಡಿ ಪರಮಣ್ಣ, ತನ್ನ ಈರಣ್ಣ ಎಲ್ಲ ಹಾಗೇ ಹೇಳುತ್ತಾರೆ. ಇವರನ್ನೆಲ್ಲ ಕಂಡರೆ ಅವ್ವನಂಥ ಹಳೆಯ ತರದ ಜನರಿಗೆಲ್ಲ ಸೇರಿಕೆಯಿಲ್ಲ. ಈಗಿನ ಹುಡುಗರು ಪುಂಡರು, ಭಂಡರು, ಬಿಕನಾಸಿಗಳು ಎಂದೆಲ್ಲ ಬಯ್ಯುತ್ತಾರೆ. ಈ ಜನಕ್ಕೆಲ್ಲ ಯಾವಾಗ ತಿಳುವಳಿಕೆ ಬಂದೀತು. ಆದರೆ ಯಾರು ಏನೇ ಹೇಳಿದರೂ ನಾನಂತೂ ಅವ್ವನ ಹರಕೆ ಒಪ್ಪುವುದಿಲ್ಲ. ಎಂಥ ಪ್ರಸಂಗ ಬಂದರೂ ಸರಿ, ನಾನು ಬಸವಿ ಆಗಲು ತಯಾರಿಲ್ಲ. ಯಾರೇನು ಮಾಡುತ್ತಾರೋ ನೋಡೋಣ.'

ಎದೆ ಸೆಟೆಸಿ ತಲೆ ಎತ್ತಿಕೊಂಡೇ ಒಳಗೆ ಹೆಜ್ಜೆಯಿಟ್ಟ ಮಗಳನ್ನು ನೋಡಿ ಪಾರವ್ವನ ಮೈ ಉರಿದು ಹೋಯಿತು. ಕೋಲನ್ನೆತ್ತಿ ಮಗಳನ್ನು ಬಾರಿಸ ಹತ್ತಿದ್ದಳು. 'ನಿ ಒಳೆ ಇದಿ ಆಗಿ ಹುಟ್ಟಿದಿ ನನ್ನ ಹೊಟ್ಯಾಗ, ಹುಟ್ಟಿದ ಕೂಡಲೆ ಕುತಿಗಿ ಹಿಚುಕಿದಿರ ಬೇಶ್ ಆಕ್ಕಿತ್ತು.'

ಪೆಟ್ಟು ತಿಂದು ಮೈ ಜಡ್ಡುಗಟ್ಟಿದ ಕಮಲಿ ಈ ಸಲ ಸುಮ್ಮನಿರಲಿಲ್ಲ. ಅವ್ವನ ಮೇಲೆ ಏರಿ ಹೋಗಿ ಕಟ್ಟಿಗೆ ಕಸಿದು ಮೂಲೆಗೆ ಒಗೆದಳು. ಸಿಟ್ಟಿನಿಂದ ಥರಥರ ನಡುಗುತ್ತಿದ್ದ ಕಮಲಿಯನ್ನು ನೋಡಿ ಪಾರವ್ವನ ಬಾಯಿ ಬಂದಾಯಿತು. ಕಮಲಿಯ ಮುಖ ರಾವು ಹೊಡೆದಿತ್ತು. ಕಣ್ಣು ಕೆಂಪಾಗಿ ಬೀಳುತ್ತಾವೇನೋ ಎನ್ನುವಷ್ಟು ಹಿಗ್ಗಿದ್ದವು. ಎತ್ತರದ ದನಿಯಲ್ಲಿ ಕಮಲಿ ಒದರಿದಳು.

"ಇಕಾ ಯವ್ವಾ, ಇದs ಕಡೀ ದಿನಾ, ಇನ್ನ ಮ್ಯಾಲೆ ನೀ ನನ್ನ ಹೊಡದೀ ಅಂದರ ನೋಡ ಪಾಡ ಆಗಂಗಿಲ್ಲಾ, ತಲ್ಯಾಗ ಹುಳಾ ಹೊಕ್ಕವರ ಹಾಂಗ ಮಾಡಬ್ಯಾಡಾ, ನನ್ನ ದೇವರಿಗಿ ಬಿಡೂ ಮಾತ ನೀ ಮರತು ಬಿಡು. ನನಗ ಜುಲುಮೀ ಮಾಡಿದಿ ಅಂದರ ಯಾರ ಕೂಡರೆ ಓಡಿ ಹೊಕ್ಕೇನಿ. ಎಲ್ಲಾದರೂ ದುಡದು ತಿಂತೇನಿ, ನೆನಪ ಇಟಕೋ."

ತನ್ನನ್ನು ಮೀರಿ ಬೆಳೆದು ನಿಂತ ಮಗಳನ್ನು ನೋಡಿ ದಂಗು ಬಡಿದ ಪಾರವ್ವ ಕುಸಿದು ಬಿದ್ದು ಮುಖಕ್ಕೆ ಸೆರಗು ಮುಚ್ಚಿ ಅಳಹತ್ತಿದಳು. ಜೀವನದುದ್ದಕ್ಕೂ ಬರೀ ಕಷ್ಟವನ್ನೇ ಉಂಡ, ಈಗಲೂ ತಮಗಾಗಿ ದುಡಿಯುತ್ತ ಎಲುಬಿನ ಹಂದರವಾಗಿದ್ದ ಅವ್ವನ ಹತ್ತಿರ ಹೋಗಿ ಕೂತು ಕಮಲಿ ಅವಳನ್ನು ತಬ್ಬಿ ಕೊಂಡಳು. ಅವ್ವನ ದುಃಖವೆಲ್ಲ ನೀರಾಗಿ ಹರಿದು ಹೋಗುವವರೆಗೆ ಕಮಲಿ ಸುಮ್ಮನಿದ್ದಳು. ಆಸರೆ ಇಲ್ಲದೆ ಹೊಯ್ದಾಡಿ ಸೋತು ಹೋಗಿದ್ದ ಪಾರವ್ವ ಉಡಿಯಲ್ಲಿ ತಲೆ ಇಟ್ಟು ಕಣ್ಣು ಮುಚ್ಚಿದಳು. ಅವ್ವನ ಸೆರಗು ಸರಿಸಿ ತಲೆಯ ಮೇಲೆ ಕೈಯಾಡಿಸುತ್ತ ಕಮಲಿ ಮೃದುವಾಗಿ ಹೇಳತೊಡಗಿದಳು.

"ಯವ್ವಾ ನೀ ಚಿಂತೀ ಮಾಡಬ್ಯಾಡಾ, ಅಳಬ್ಯಾಡಾ, ರೊಕ್ಕಕ್ಕ ತಲೀ ಕೆಡಿಸಿಕೋ ಬ್ಯಾಡಾ. ನಾ ಸಾಕಿದ ಕೆಂದ ಆಡು ಅದ ಅಲ್ಲಾ ಅದನ್ನ ಮಾರಿ ಬಿಡೂಣು. ಮತ್ತ ನೀ ಹಾಲು ಕೊಡ್ತೀಯಲ್ಲ ಆ ಬಾಯಾರ ಕಡೇ ಮುಂಗಡ ರೊಕ್ಕಾ ಕೇಳೂಣು. ದಯಾಮಯಾ ಇದ್ದವರು ಅಂತೀ ರೊಕ್ಕಾ ಕೊಟ್ಟಾರು. ತಿಂಗಳಾ ಹಾಲು ಕೊಟ್ಟು ಮುಟ್ಟಿಸೂಣು. ಪ್ಲೈವುಡ್ ಫ್ಯಾಕ್ಟರ‍್ಯಾಗ ಪರಮಣ್ಣಾ ನನಗ ಕೆಲಸ ಕೊಡತೇನಿ ಅಂದಾನ. ದಿನಗೂಲಿ ಎಂಟು ರೂಪಾಯಿ ಅಂತ, ನಾ ದುಡದು ಗಂಡಸ ಮಗನಾಂಗ ಮನೀ ನಡಸತೇನಿ. ಈರಣ್ಣಾ ಆರಾಮ ಆಗಿ ಬಂದ ಮ್ಯಾಲೆ ಅವನೂ ದುಡೀತಾನ. ಎಲ್ಲಾರೂ ಕೂಡ ಕಷ್ಟಪಟ್ಟು ದುಡದರ ಸುಕಾ ಸಿಗತೈತಿ. ನಾಗಣ್ಣಾಗ ಬಾಳಟ್ಟು ಸಾಲೀ ಕಲಸೂಣು. ಅಂವಾ ನೋಕರೀ ಮಾಡಲಿ, ನೀ ಅಳಬ್ಯಾಡಾ ಯವ್ವಾ ಅಪ್ಪ ಹೋದರೂ ನಿನ್ನ ಜೊತಿಗೆ ನಾವು ಅದೀವಿ...."

ಮುಂಬರುವ ಸುಖದ ಕನಸಿನಲ್ಲಿ ತೇಲಾಡುತ್ತಿದ್ದ ಪಾರವ್ವ ಉತ್ತರವನ್ನೇ ಕೊಡಲಿಲ್ಲ.

***

■■

# ನೀಲಿಮಾ ತೀರ

ಭರಪೂರ ಮಳೆಗಾಲ. ಎದೆಯಲ್ಲಿ ನಡುಕ ಹುಟ್ಟಿಸುವ ಗುಡುಗಿನ ಗರ್ಜನೆ, ಚಕ್ಕನೆ ಹೊಳೆದು ಕಣ್ಣು ಮುಚ್ಚಿಸುವ ಮಿಂಚಿನ ಹೊಳಪು, ಎಲ್ಲೊ ದೂರದಲ್ಲಿ ಬಡ್‌ಬಡಿಸುವ ಸಿಡಿಲು, ಎದೆಬಡಿತವನ್ನೇ ನಿಲ್ಲಿಸುವ ಕ್ಷಣಗಳು, ಧಾರಾಕಾರವಾಗಿ ಮಳೆ ಸುರಿಯುತ್ತಿರುವಾಗ-

ಮುಂಬಾಗಿಲಲ್ಲಿ ನಿಂತು ಅಪ್ಪನ ದಾರಿಕಾಯುತ್ತಿದ್ದಳು ಬೇಬಿ. ಭೋರ್ಗರೆಯುವ ಕಡಲನ್ನೊಮ್ಮೆ, ಅದನ್ನು ಮೀರಿಸುವಂತೆ ಶಬ್ದಿಸುತ್ತಿದ್ದ ಮುಗಿಲನ್ನೊಮ್ಮೆ, ಅಪ್ಪ ದಿನವೂ ನಡೆಯುವ ಕಾಲುದಾರಿಯನ್ನೊಮ್ಮೆ ದಿಟ್ಟಿಸುತ್ತಿದ್ದಳು ಬೇಬಿ. ಓ ! ಅಲ್ಲಿ ಹೆಜ್ಜೆ ಸಪ್ಪಳ, ಯಾರೋ ಬರುತ್ತಿದ್ದಾರೆ. ಅಪ್ಪನೇ ಇರಬೇಕು. ಎಷ್ಟು ಅವಸರದಿಂದ ಓಡೋಡಿ ಬರುತ್ತಿದ್ದಾನೆ. ಮತ್ತೆ ನನಗೊಬ್ಬಳಿಗೇ ಏಕೆ, ಅವನಿಗೆ ಸಂತೋಷವಿಲ್ಲವೇ ? ಮಗಳಿಗೆ ಹೊಸ ಅಂಗಿ, ಸಿಹಿಯಾದ ಕೇಕು ತರಲು ಅವನಿಗೆ ಆಸೆ ಇಲ್ಲವೇ ? ತಾನು ಹೇಳಿದಂತೆ ನೀಲಿ ಬಣ್ಣದ ಅಂಗಿ ಸಿಗದಿದ್ದರೆ ಎಂಥದು ತಂದಾರು ? ದಿನವೂ ನೀಲಿಕಡಲು, ನೀಲಿ ಮುಗಿಲು ನೋಡುತ್ತ ಬೆಳೆದ ತನ್ನ ಹೆಸರೂ ನೀಲಿಮಾ - ನೀಲಿ ಬಣ್ಣದ ಅಂಗಿಯೇ ತನಗೆ ಬೇಕು. ಬೇರೆ ತಂದರೆ ತೊಡುವವಳೇ ಅಲ್ಲ. ನಾಳೆಯೇ ಅದನ್ನು ಅಂಗಡಿಗೆ ಹಿಂದೆ ಕಳಿಸುವೆ.- ಅರೆ! ಅವರು ಮುತ್ತು ಅಂಕಲ್. ಪಕ್ಕದ ಮನೆಯವರು, ಅಪ್ಪ ಏಕೆ ಬರಲಿಲ್ಲ? ಅವರು ದೋಣಿ ಬಿಡುವುದೇ ಏಳು ಗಂಟೆಗೆ. ಇವತ್ತಾದರೂ ಬೇಗ ಬರ್ರಿ ಅಂದಿದ್ದೆ. 'ಅಂಕಲ್, ಅಪ್ಪ ಯಾಕೆ ಬರಲಿಲ್ಲಾ?"

"ಜೋಸೆಫ್ ಈಗ ಬಂದಾನು ಬೇಬಿ. ಮಳೀ ಗಡದ್ದು ಅದ, ನೀ ಒಳಗ ಹೋಗು" ಪಕ್ಕದ ಮನೆ ಬಾಗಿಲು ಮುಚ್ಚಿಕೊಂಡ ಮುತ್ತು.

ಮಳಿ ಬರಲಿ ಬಿಡು, ಇದೇನು ಮಹಾ ? ಅಪ್ಪ ತೋಯಿಸಿಕೊಳ್ಳುವದಿಲ್ಲವೇ? ಹಾಗೆ ನಾನೂ ಇಲ್ಲೇ ನಿಂತೇನು - ಟಪ ಟಪ ಮಳೆ ಹನಿ ಶಬ್ದ ಹೆಚ್ಚಾದಂತೆ "ಬೇಬಿ" ಎಂದು ಕರೆದಳು ಲೀನಾ.

ಬೇಬಿ ಓ ಕೊಡಲಿಲ್ಲ. ಗಳಿಗೆ ಗಳಿಗೆಗೆ ಅವಳ ನಿರಾಶೆ ಕಾದು ಉಗಿಯಾಗಿ, ಮೇಲೆ ಮೇಲೆ ಏರಿ ಹೋಗಿ, ಮುಖ ಮೋಡಗಟ್ಟಿತ್ತು.

"ಬೇಬಿ. ಒಳಗ ಬಾ" ಒಳಗಿನಿಂದ ಬಂದ ಲೀನಾ ಮಗಳನ್ನು ಎಳೆದು ಅಪ್ಪಿಕೊಂಡು ಜೋರೆಂದು ಸುರಿಯುತ್ತ ಕತ್ತಲನ್ನು ಇನ್ನಷ್ಟು ಗಾಢವಾಗಿಸುತ್ತಿದ್ದ ಮಳೆಯನ್ನೇ ದಿಟ್ಟಿಸಿದಳು.

"ಅಮ್ಮಾ, ಅಪ್ಪ ಇನ್ನೂ ಬರಲಿಲ್ಲ. ನನ್ನ ಹೊಸ ಫ್ರಾಕ್, ಕೇಕು, ಮೇಣದಬತ್ತಿ..." ಅದುಮಿಟ್ಟ ದುಃಖ ಈಗ ಕೆನ್ನೆಯ ಮೇಲೆ ಹರಿಯಹತ್ತಿತ್ತು. ಬೇಬಿಯ ಹುಟ್ಟು ಹಬ್ಬದ ದಿನ ಒಂದು ತಾಸು ಮೊದಲೇ ದೋಣಿಯನ್ನು ಬಿಡುತ್ತೇನೆಂದು ಹೇಳಿದ ಜೋಸೆಫ್ ಇನ್ನೂ ಮನೆಗೆ ಬರಲಿಲ್ಲವೆಂದು ಲೀನಾಗೂ ಚಿಂತೆ. ಸುರಿಯುವ ಮಳೆಯಲ್ಲಿ ಹೇಗೆ ಬಂದಾನು ಆಸರೆಗೆ ಎಲ್ಲಿಯಾದರೂ ನಿಂತಿದ್ದಾನು. ಬಂದಿದ್ದರೆ ಈ ಥಂಡಿಯಲ್ಲಿ ತಾನೂ ನೆರೆಮನೆಯ ಪಾತುಮ್ಮನಂತೆ ಗಂಡನಿಗೆ ಬಿಸಿನೀರು ಎರೆಯುತ್ತಿದ್ದಳು.

"ಈಗ ಬಂದಾರು ಬೇಬಿ, ಒಳಗ ಬಾ, ಪೇಟೆಗೆ ಹೋಗಿ ಬರಬೇಕಲ್ಲ ಅದಕ್ಕೇ ತಡವಾಗಿರಬೇಕು. ತಲೆ ಒದ್ದೆಯಾಗಿದೆ. ಒರಸ್ತೀನಿ ಬಾ. ನೆಗಡಿಯಾದರೆ ನಿನ್ನ ಶಾಲೆ, ಪರೀಕ್ಷೆ ಎರಡೂ ತಪ್ಪುತ್ತೆ ಅಲ್ಲವಾ?"

ತಾಯಿ ತಲೆ ಒರೆಸಿದ ಬಳಿಕ ಅಗ್ಗಿಷ್ಟಿಕೆಯ ಹತ್ತಿರ ಕುಳಿತ ಬೇಬಿಗೆ ಚಳಿಯಾಗತೊಡಗಿತು. ನಾಳೆಗೆ ತನಗೆ ಜ್ವರ ಬರ್‍ತದೇನೋ. ನೆಗಡಿಯೂ ಆಗ್ಬಹುದು. ತಲೆ ನೋಯುತ್ತೆ. ನಾಡಿದ್ದೇ ಪರೀಕ್ಷೆ. ತಾನು ಮಲಗಿಬಿಟ್ಟರೆ ಪರೀಕ್ಷೆ ತಪ್ಪಿ ಹೋಗಿ ಮಾರ್ಕ್ಸ್ ಕಮ್ಮಿ ಬೀಳುತ್ತೆ. ರ್‍ಯಾಂಕ್ ತಗೊಳ್ಳೋಕ್ಕಾಗಲ್ಲ. ಮತ್ತೆ ಅಪ್ಪು ಕುಟ್ಟೀನೇ ಫಸ್ಟ್

ಬರ್ತ್ತಾನೆ. ಉಹುಂ, ತಾನೂ ಮಲಗೊಲ್ಲ. ಶಾಲೆ ತಪ್ಪಿಸೊಲ್ಲ.ಅಷ್ಟೇ ಅಲ್ಲ, ಅಪ್ಪ ತರೋ ನೀಲಿ ಅಂಗಿ ಹಾಕಿಕೊಂಡು ನಾಳೆ ತಾನು ಶಾಲೆಗೆ ಹೋಗ್ಬೇಕು ಎಲ್ಲರೂ ತನಗೆ ಹ್ಯಾಪಿ ಬರ್ತಡೇ ಹೇಳಬೇಕು, ಅಪ್ಪು ಕುಟ್ಟಿ ತನಗೆ ಹ್ಯಾಪಿ ಬರ್ತಡೇ ಹೇಳಬ್ಬಹುದಾ? ಮಹಾ ಸೊಕ್ಕು ಅವನಿಗೆ ? ತಾನೇ ಜಾಣ ಅಂತ ತಿಳ್ಕೊಂಡಿದ್ದಾನೆ. ಅವನ್ನ ಹಿಂದೆ ಹಾಕಲೇಬೇಕು. ಈ ಸಲ ತಾನೇ ಫಸ್ಟ ಬರಬೇಕು. ಕಣ್ಣು ಎಳೆಯತೊಡಗಿದವು.

ತೂಕಡಿಸುತ್ತಿದ್ದ ಬೇಬಿ ತಾಯಿಯ ಒತ್ತಾಯಕ್ಕೆ ಗಂಜಿ ಉಂಡು ಮಲಗಿದಳು. ದೀಪವಿಟ್ಟುಕೊಂಡು ಗಂಡನ ದಾರಿ ಕಾಯುತ್ತಿದ್ದ ಲೀನಾ ಹತ್ತು ಗಂಟೆಯ ಶಬ್ದ ಕೇಳಿದಳು. 'ಅಪ್ಪ' 'ಅಪ್ಪ' ಎಂದು ಕನವರಿಸುತ್ತಿದ್ದ ಮಗಳತ್ತ ಬಾಗಿ, ತಲೆ ನೇವರಿಸಿ ಕಂಬಳಿ ಹೊಚ್ಚಿದಳು. ಮಗಳಿಗೆ ಅಪ್ಪ ಎಂದರೆ ಪಂಚಪ್ರಾಣ. ತಮಗೂ ಅಷ್ಟೇ, ಒಬ್ಬಳೇ ಮಗಳಲ್ಲವೇ? ಮದುವೆಯಾಗಿ ಹತ್ತು ವರ್ಷದ ಮೇಲೆ ಹುಟ್ಟಿದವಳು. ಅವಳ ರೂಪ, ಬುದ್ಧಿ ಎಲ್ಲರೂ ಮೆಚ್ಚುವವರೇ, ಎಂಟು ವರ್ಷಕ್ಕೇ ಎಷ್ಟೊಂದು ಬುದ್ಧಿ, ಪಾಪ! ದೊಡ್ಡವರ ಮನೆಯಲ್ಲಿ ಹುಟ್ಟಬೇಕಾದವಳು ಬಡ ಮೀನುಗಾರನ ಮಗಳಾದಳು. ನಾಳಿನ ಅವಳ ಹುಟ್ಟು ಹಬ್ಬಕ್ಕೆ ಹೊಸ ಅಂಗಿ. ಕೇಕು ತರಲು ದುಡ್ಡಿಗಾಗಿ ಅಪ್ಪ ಇಂದು ಎಷ್ಟು ಕಷ್ಟಪಡಬೇಕು ಎನ್ನೋದು ಪಾಪ ಈ ಹಸುಳೆಗೇನು ಗೊತ್ತು. ಲೀನಾಳ ಕಣ್ಣು ತುಂಬಿ ಬಂದವು. "ದೇವರೇ, ಈ ದಿನ ಚೆನ್ನಾಗಿ ಮೀನು ಸಿಗುವಂತೆ ದಯ ತೋರಪ್ಪಾ" ಎಂದು ಮುಖ ಮೇಲೆತ್ತಿ ಬೊಗಸೆ ಒಡ್ಡಿದಳು.

ಆಕಾಶವೇ ಹರಿದುಕೊಂಡು ಬಿತ್ತೋ ಎನ್ನುವಂತೆ ಒಮ್ಮೆಲೇ ಧಡ ಧಡ ಸಪ್ಪಳವಾಗತೊಡಗಿತು. ಅದೂ ಹತ್ತಿರದಲ್ಲಿಯೇ. ಬೇಬಿ ಗಾಬರಿಯಿಂದ ಎದ್ದು ಕುಳಿತಳು. ಲೀನಾ ಚೀರುತ್ತ ಮಗಳನ್ನು ಎಳೆದುಕೊಂಡು ಮನೆ ಬಿಟ್ಟು ಹೊರಗೆ ಓಡಿದಳು. ಭೂಕಂಪವಾಗುತ್ತಿದೆಯೇನೋ ಎನ್ನುವ ಭಯ ಅವಳಿಗೆ. ಆದರೆ ಹೊರಗೆ ಎಲ್ಲರೂ ಸರೋವರದ ಕಡೆಗೆ ಓಡುತ್ತಿದ್ದರು. ಕಡಲಿನ ಒಂದು ಭಾಗವೇ ಸರೋವರವಾಗಿತ್ತು ಅಲ್ಲಿ. ಅದರ ಮೇಲೊಂದು ಸೇತುವೆ. ಮುತ್ತು ಒದರುತ್ತಿದ್ದ. "ನೋಡ್ರಿ ಟ್ರೇನ್ ಬೀಳ್ತಾ ಇದೆ ಸರೋವರದಲ್ಲಿ. ಅಲ್ಲಿ ನೋಡ್ರಿ." ಲೀನಾ ಥರ ಥರ ನಡುಗುತ್ತಿದ್ದಳು. ಅವಳ ಕಣ್ಣೆದುರೇ ಆಟಿಗೆ ಸಾಮಾನಿನಂತೆ ಟ್ರೇನ್ ಡಬ್ಬಿಗಳು ನೀರಿನೊಳಕ್ಕೆ ಬೀಳುತ್ತಿದ್ದವು. ಬೀಳುತ್ತಿದ್ದ ಒಂದು ಡಬ್ಬಿಯ ಗಾಲಿಗಳು ತೇತುವೆಗೆ ಸಿಕ್ಕಿ ಹಾಕಿಕೊಂಡು ಅಲ್ಲಿಯೇ ಜೋತಾಡತೊಡಗಿದವು. ಡಬ್ಬಿಯೊಳಗಿಂದ ಜನ ಪುತು ಪುತು ನೀರಿನೊಳಕ್ಕೆ ಉದುರುತ್ತಿದ್ದರು. ಮಳೆ ನಿಂತ ಮೇಲೆ ಚದುರಿದ ಮೋಡಗಳ ನಡುವಿನ ಚಂದ್ರನ ಕ್ಷೀಣ ಬೆಳಕಿನಲ್ಲಿ ಜನ ಬಾಯಿ ಮುಚ್ಚದೆ ಬೆರಗಾಗಿ ನೋಡಿದರು. ಮೈಮರೆತ ಲೀನಾ ಇತ್ತ ತಿರುಗುವಷ್ಟರಲ್ಲಿ ಬೇಬಿ ಇರಲಿಲ್ಲ. ಆ ಗದ್ದಲದೊಡನೆ ಒಂದಾಗಿ ಓಡಿಬಿಟ್ಟಿದ್ದಳು. ಕತ್ತಲೆಯಲ್ಲಿ ಲೀನಾ "ಬೇಬಿ, ಬೇಬಿ ಜೋಸೆಫ್, ಬೇಬಿ ಎಲ್ಲಿ ?" ಎಂದು ಚೀರುತ್ತ ಕಾಲು ಬಂದತ್ತ ಓಡಿದಳು.

***

ತನ್ನ ಕೆನ್ನೆಯ ಮೇಲೊಮ್ಮೆ ಮೃದುವಾಗಿ ಬೆರಳಾಡಿಸಿ ಗೋಪಿ ಮೀಸೆಯ ಮರೆಯಲ್ಲಿ ನಕ್ಕ. ಮತ್ತೊಮ್ಮೆ ಆಡಿಸಲೂ ಹೆದರಿಕೆ ಅವನಿಗೆ. ಬೆಂಗಳೂರು ಸ್ಟೇಶನ್‌ನಲ್ಲಿ ತನ್ನನ್ನು ಬೀಳ್ಕೊಡುವಾಗ ಯಾರೂ ಕಾಣದತೆ ಚಂದ್ರಿಕಾ ಕೊಟ್ಟ ಹೂ ಮುತ್ತು ಅಲ್ಲಿತ್ತು. ಅಳಿಸಿ ಹೋಗುವದೇನೋ ಎನ್ನುವ ಕಾತರ ಅವನಿಗೆ. ಮತ್ತೊಮ್ಮೆ ಅವಳನ್ನು ಭೆಟ್ಟಿಯಾಗುವವರೆಗೆ ಅದು ಅಲ್ಲಿಯೇ ಇರಲಿ, ಹುಚ್ಚ ಹುಡುಗಿ! ಮದುವೆಯಾಗಿ ಎರಡು ತಿಂಗಳಲ್ಲಿ ಎಷ್ಟು ಹಚ್ಚಿಕೊಂಡಿದ್ದಾಳೆ ತನ್ನನ್ನು. ನಾಲ್ಕಾರು ದಿನಗಳ ಮಟ್ಟಿಗೆ ಆಫೀಸ್ ಕೆಲಸಕ್ಕೆ ತ್ರೀವೇಂದ್ರಮ್‌ಗೆ ಹೋಗಬೇಕು ಎಂದಾಗ ಕಣ್ಣೀರು ಸುರಿಸಿದ್ದು ನೋಡಿದರೆ ಕೆಲವು ದಿನಗಳ ಹಿಂದೆ ಈ ಹುಡುಗಿ ಯಾರೋ ಏನೋ ? ಬೆಂಗಳೂರಿನಲ್ಲಿಯೇ ಹುಟ್ಟಿ, ಬೆಳೆದ ತಾವಿಬ್ಬರೂ ಎಷ್ಟೋ ಸಲ ಅಪರಿಚಿತರಂತೆ ಒಬ್ಬರನ್ನೊಬ್ಬರು ದಾಟಿ ಹೋಗಿರುವುದು ಸಹಜ. ಆದರೆ ಈಗಿರುವ ಈ ಬಾಂಧವ್ಯ, ಈ ಪ್ರೀತಿ, ಈ ಬೆಸುಗೆ ಜನ್ಮಜನ್ಮಾಂತರದ್ದೇ

ಇರಬಹುದು. ತ್ರಿವೇಂದ್ರಂಗೆ ತಾನೂ ಬರುವುದಾಗಿ ಹಟ ಹಿಡಿದ ಅವಳನ್ನು ಸೀರೆ ಒಡವೆಗಳ ಆಸೆ ತೋರಿಸಿ ಸಮಾಧಾನ ಪಡಿಸಿ ಬರಬೇಕಾದರೆ ಸಾಕುಬೇಕಾಯಿತು. ತನಗಾದರೂ ಅವಳನ್ನು ಬಿಟ್ಟು ಬರುವ ಮನಸ್ಸಿತ್ತೇ ? ಅಲ್ಲಿಂದ ಮತ್ತೆ ನಾನು ಅತ್ತಿತ್ತ ಟೂರು ಮಾಡುವದಿತ್ತಲ್ಲ. ಅಪರಿಚಿತ ಜನ, ಊರು, ಭಾಷೆ, ಒಬ್ಬಳನ್ನೇ ಹೊಟೇಲ್‌ನಲ್ಲಿ ಬಿಡುವುದು ಒಳ್ಳೆಯದಲ್ಲ ಎನ್ನುವುದಕ್ಕೆ ಇಷ್ಟೆಲ್ಲ ಪಡಿಪಾಟಲು.

ಚಂದ್ರಿಕಾಳ ನೆನಪಿನಿಂದಾಗಿ ಟ್ರೇನಿನ ಕುಲುಕಾಟದಿಂದಾಗಿ ನಿದ್ರೆ ಬಾರದ ಗೋಪಿ ಅತ್ತಿತ್ತ ನೋಡಿದ. ಪ್ರೊಫೆಸರ ಅವರ ತಂಗಿ, ಅವಳ ಮಕ್ಕಳು. ಇನ್ನೊಬ್ಬ ಆಫೀಸರ ಎಲ್ಲ ಹಾಯಾಗಿ ನಿದ್ದೆ ಮಾಡುತ್ತಿದ್ದಾರೆ. ತನ್ನೊಡನೆ ಬೆಂಗಳೂರಿನಿಂದ ಪ್ರವಾಸಕ್ಕೆ ಹೊರಟ ಅವರೆಲ್ಲರ ಪರಿಚಯ ಅಷ್ಟಕ್ಕಷ್ಟೇ. ಇದ್ದುದರಲ್ಲಿಯೇ ಪ್ರೊಫೆಸರರು ಮಾತುಗಾರರು. ರಜೆಗೆ ತವರಿಗೆ ಬಂದಿದ್ದ ತಂಗಿ ಮತ್ತು ಅವಳ ಮಕ್ಕಳನ್ನು ತಿರುಗಿ ಕಳಿಸಲು ಹೊರಟಿದ್ದಾರೆ. ಹಾಗೆಯೇ ಕೇರಳವನ್ನು ಸುತ್ತಾಡಿ ಬರಬೇಕೆಂದು ನೈಸರ್ಗಿಕ ಚೆಲುವನ್ನು ಸವಿಯಲು ಅವರಿಗೆ ಆಸೆ. ಕವಿಯೂ ಆಗಿದ್ದ ಅವರನ್ನು ಇಲ್ಲಿಯ ನಿಸರ್ಗ ಸೌಂದರ್ಯವೇ ಮತ್ತೆ ಮತ್ತೆ ಎಳೆಯುತ್ತದೆ ಎಂದು ಭಾವಪರವಶರಾಗಿ ಹೇಳಿದ್ದರು. ಪ್ರೊಫೆಸರರ ಮಾತಿನ ಮೋಡಿ ಚಂದ್ರಿಕಾಳ ವಿರಹವನ್ನು ಕೆಲ ಹೊತ್ತಾದರೂ ಮರೆಸಿತ್ತು. ಅವಳ ತಂಗಿ ಕೊಟ್ಟ ಚಕ್ಕುಲಿ ಬಹಳ ರುಚಿಯಾಗಿತ್ತು. ಚಂದ್ರಿಕಾ ಈ ರೀತಿ ಅಡಿಗೆ - ತಿಂಡಿ ಮಾಡಲು ಕಲಿಯಬೇಕು. ಶ್ರೀಮಂತರ ಮಗಳು ಚೆಲುವೆ ಚಂದ್ರಿಕಾಳಿಗೆ ಕೆಲಸ ಮಾಡಿ ಅಭ್ಯಾಸವಿಲ್ಲ. ಹೊಸತಾಗಿ ಮದುವೆಯಾದ ತಮ್ಮ ಮುಂದೆ ಇನ್ನೂ ದೀರ್ಘಾವಧಿ ಇದೆ. ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು, ತಮ್ಮ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಒಳ್ಳೆಯ ಜೋಡಿ ಎನಿಸಿಕೊಳ್ಳಲು ಹರಿಡಾದುತ್ತಿದ್ದ ಮನಸ್ಸು ಸ್ಥಿಮಿತಕ್ಕೆ ಬಂದಂತಾಯಿತು. ಕುತ್ತಿಗೆಯವರೆಗೆ ಶಾಲು ಎಳೆದುಕೊಂಡು ಗೋಪಿ ಕಣ್ಣು ಮುಚ್ಚಿದ.

ಧಡಲ್ ಎನ್ನುವ ಶಬ್ದಕ್ಕೆ ಎಚ್ಚರವಾದ ಗೋಪಿ ದೂರ ಸಿಡಿದು ಬಿದ್ದ. ಎದ್ದು ನಿಲ್ಲಲು ಹೋದ. ಸಾಧ್ಯವಾಗದೆ ಜೋಲಿ ಹೊಡೆಯುತ್ತ ಹಾಗೆಯೇ ಮಲಗುವ ಹಲಗೆಗೆ ಡಿಕ್ಕಿ ಹೊಡೆದ. ದಡ ದಡ ಮೂಟೆ ಉರುಳಿದಂತೆ ಒಬ್ಬರ ಮೇಲೊಬ್ಬರು ಬೀಳುತ್ತಿದ್ದಾರೆ. ಕಾಲು ಮೇಲಾಗಿ ತಲೆ ಕೆಳಗಾಗುತ್ತಿದೆ. ಏನಾಗುತ್ತಿದೆ ಎನ್ನುವುದು ಹೊಳೆಯುವ ಮೊದಲೇ ರೇಲ್ವೆ ಡಬ್ಬಿ ಅಪ್ಪಳಿಸಿ ತಳಕ್ಕಿಳಿಯುತ್ತಿದ್ದ ಇನ್ನೊಂದು ಡಬ್ಬಿಯ ಮೇಲೆ ಬಿದ್ದಿತ್ತು, ಹಾಹಾಕಾರ, ಚೀತ್ಕಾರ, ಕೂಗಾಟ, ಅಳುವಿನಿಂದ ಸರೋವರದ ಅಲೆಗಳು ಎದ್ದೆದ್ದು ಅಪ್ಪಳಿಸಿ ಬಿದ್ದು ಏಳುತ್ತಿದ್ದವರನ್ನು ಇನ್ನಷ್ಟು ಮುಳುಗಿಸಿದ್ದವು. ಡಬ್ಬಿಯಲ್ಲಿ ನೀರು ತುಂಬಿಕೊಳ್ಳುತ್ತಿದ್ದಂತೆ ಒಬ್ಬೊಬ್ಬರೇ ಕೈಗೆ ಸಿಕ್ಕಿದ್ದನ್ನು ಆಸರೆಗೆ ಹಿಡಿದು ಜೋತಾಡತೊಡಗಿದರು. ಗೋಪಿಯ ಕಾಲು ಕೆಳಗೆ ಸಿಕ್ಕಿ ಎಳೆದುಕೊಳ್ಳಲು ಬಾರದೆ ಒದ್ದಾಡುತ್ತಿದ್ದ. ಅವನ ಕಾಲ ಮೇಲೆ ಲಗೇಜುಗಳಲ್ಲದೆ ದೇಹದ ಭಾರವೂ ಇತ್ತು. ಅವನಿಗೆ ನಿಲ್ಲಲೂ ಆಗದೆ ಒಳಗೆ ನುಗ್ಗುತ್ತಿದ್ದ ನೀರಿನಿಂದ ತಪ್ಪಿಸಿಕೊಳ್ಳಲೂ ಸಾಧ್ಯವಾಗದೆ ಅರ್ಧ ಮುಳುಗಿಬಿಟ್ಟಿದ್ದ.

ಇನ್ನಷ್ಟು ಹೊತ್ತು ಇಲ್ಲಿಯೇ ಉಳಿದರೆ ತನ್ನ ಸಾವು ಖಚಿತ. ತನ್ನ ಬದುಕು ಇನ್ನೂ ದೀರ್ಘವಾಗಿರುವಾಗ ಈ ಚಿಕ್ಕ ವಯಸ್ಸಿನಲ್ಲಿ ಇಂಥ ಒಂದು ದುರಂತದಲ್ಲಿ ಜೀವನ ಮುಕ್ತಾಯಗೊಳ್ಳಬೇಕೆ? ತನ್ನ ಬದುಕಿನ ಪುಸ್ತಕದ ತುಂಬ ಎಲ್ಲ ಬಿಳಿ ಹಾಳೆಗಳೇ, ಒಂದು ಅಕ್ಷರವಿಲ್ಲ ಚಿತ್ತು ಕಾಟುಗಳಿಲ್ಲ. ಹೀಗೆ ಬರಿಗೈಯಲ್ಲಿ ಖಾಲಿಯಾಗಿ ಈ ಲೋಕ ಬಿಡಬೇಕೆ ತಾನು ? ಉಹುಂ, ಅಕ್ಷರವಿಲ್ಲವೇಕೆ ? ಒಂದು ಒಂದೇ ಒಂದು ಚಿಹ್ನೆವಿದೆಯಲ್ಲ, ತನ್ನ ಪುಸ್ತಕದ ಮೊದಲ ಪುಟದಲ್ಲಿ ಅದೇ ,... ಅವಳೇ ಚಂದ್ರಿಕಾ. ಇದೇ ಪ್ರಾರಂಭ. ಹಾಗೆಂದು ಇದೇ ಕೊನೆಯೂ ಆಗಬಾರದಲ್ಲ. ತಾನು ತೀರಿದರೆ ಅವಳು ಬದುಕಲಾರಳು. ಅವಳೂ ಸಾಯುವುದು ಖಂಡಿತ. ಛೇ ಹಾಗಾಗಲು ತಾನು ಬಿಡಬಾರದು. ಏನಾದರೂ ತಾನು ಈಗ ಸಾಯಲೇಬಾರದು. ಏಳಬೇಕು ಇಲ್ಲಿಂದ ಸಾಧ್ಯವಿದ್ದಷ್ಟು ಬೇಗ ಓಡಿ ಹೋಗಬೇಕು. ಈ ಸಾವಿನ ಜಾಲದಿಂದ ಪಾರಾಗಬೇಕು. ಹರಿಯಬೇಕು ಕಿತ್ತೊಗೆಯಬೇಕು. ತನ್ನೆಲ್ಲ ಶಕ್ತಿ ಕೂಡಿಸಿ ಕಾಲು

ಎಳೆದುಕೊಳ್ಳುತ್ತಿದ್ದ ಗೋಪಿ, ಕಟ್ ಎಂದಿತು. ಕಾಲು ಮುರಿಯಿತೇ? ಬಗ್ಗಿ ನೋಡಿಕೊಳ್ಳಲೂ ಸಾಧ್ಯವಿಲ್ಲ. ಕಾಲು ನೋವನ್ನು ಮರೆತು ಜೀವ ಉಳಿಯಿತಲ್ಲ ಎಂದು ಎದ್ದು ನಿಲ್ಲಲು ಹೋದ. ಮೆತ್ತಗೆ ಏನೋ ತಗುಲಿತು. ತಾನು ನಿಂತದ್ದು ಪ್ರೊಫೆಸರರ ತಂಗಿಯ ದೇಹದ ಮೇಲೆ ಎನ್ನುವುದು ಗೊತ್ತಾದರೂ ಅಲ್ಲಿಂದ ಸರಿಯಲು ಸಾಧ್ಯವಿರಲಿಲ್ಲ. ಮನಸ್ಸು ಕಲ್ಲು ಮಾಡಿದ. ನೀರಿನಲ್ಲಿ ಕಾಲಾಡಿಸುತ್ತಿದ್ದ ಹಾಗೆ ಬ್ಯಾಗಿನ ನೆರವು ಸಿಕ್ಕು ಮತ್ತೆ ಮೇಲೇರಿದ. ಈಗ ಅವನ ಮುಖ ನೀರಿನ ಹೊರಗಿತ್ತು. ಯಾರದೋ ಕೈ, ಬೇರಾರದೋ ಕಾಲು, ತುಂಡಾದ ದೇಹ, ಆಸರೆಗಾಗಿ ಚಾಚುತ್ತಿದ್ದ ಕೈಗಳು, ಇವನ ಹೆಗಲ ಮೇಲೆಯೇ ಹತ್ತ ಬಯಸುವ ಕಾಲುಗಳು ಎದೆ ಝುಲ್ಲೆಂದಿತ್ತು. ಕಣ್ಣಿಗೆ ಕತ್ತಲೆ ಮುಸುಕುತ್ತಿತ್ತು. ಉಹುಂ ಈಗ ಪ್ರಜ್ಞೆ ಹೋದರೆ, ತಾನು ಸತ್ತಂತೆಯೇ. ಕಣ್ಣುಗಳು ಮುಚ್ಚದಂತೆ ತಡೆದುಕೊಂಡು ಹಿಗ್ಗಲಿಸಿ ಅತ್ತಿತ್ತ ನೋಡಿದ. ಪ್ರೊಫೆಸರರ ದೇಹ ಅರ್ಧ ಕಿಟಕಿಯ ಹೊರಗೆ ಅರ್ಧ ಒಳಗಿದ್ದು ನಿಶ್ಚಲವಾಗಿತ್ತು. ಇನ್ನು ತಡವಾದರೆ ಡಬ್ಬಿ ನೀರಿನಲ್ಲಿ ಮುಳುಗಿ ಹೋಗುತ್ತದೆ. ಸಾಧ್ಯವಿದ್ದಷ್ಟು ಬೇಗ ತಾನು ಕಿಟಕಿಯಾಚೆ ಹೋಗಬೇಕು. ಪ್ರೊಫೆಸರರ ಕಾಲುಗಳನ್ನೆತ್ತಿ ಸರೋವರಕ್ಕೆ ದೇಹವನ್ನು ನೂಕಿದ. ಅದೇ ಕಿಟಕಿಯಲ್ಲಿ ಕೈ ಚಾಚಿ ತನ್ನನ್ನು ಮೇಲೆತ್ತಲು ಕೂಗತೊಡಗಿದ.

ಬೆಳದಿಂಗಳಿನ ಕ್ಷೀಣ ಬೆಳಕಿನಲ್ಲಿ ಅತ್ತಿತ್ತ ರಭಸದಿಂದ ಬರುತ್ತಿರುವ ಚಿಕ್ಕ ಚಿಕ್ಕ ದೋಣಿಗಳು ಕಂಡವು. ಆಸೆ ಚಿಗುರಿತು. ಮತ್ತೆ ಮತ್ತೆ ಚೀರಿದ ಅವರೆಲ್ಲ ಬದುಕಿದವರನ್ನು ನೀರಿನಿಂದ ಎತ್ತಿ ದೋಣಿಗಳಿಂದ ದಡ ಮುಟ್ಟಿಸುವ ಕೆಲಸದಲ್ಲಿದ್ದರು. ಹತ್ತಿರದ ಹಳ್ಳಿಯಿಂದ ಜನ ಇನ್ನೂ ಓಡೋಡಿ ಬರುತ್ತಿದ್ದರು. ಗೋಪಿ ಅಲ್ಲಿ ತುಂಬ ಹೊತ್ತು ಜೋತು ಬಿದ್ದಾಗ ಅವನ ಕಾಲುಗಳನ್ನು ಯಾರೋ ಕೆಳಕ್ಕೆ ಎಳೆಯುತ್ತಿದ್ದರು. ಮುರಿದ ಕಾಲು ಮುಟ್ಟಿದಾಗ ಜೀವ ಹೋದಂತಾಗುತ್ತಿತ್ತು. ಪುಟ್ಟ ಪುಟ್ಟ ಕೈಗಳು. ಪ್ರೊಫೆಸರರ ತಂಗಿಯ ಮಗನಿರಬೇಕು. ಒಂದು ಕ್ಷಣ ಜೀವ ಅಲ್ಲಾಡಿದರೂ ಮತ್ತೆ ಕಠಿಣವಾಗಿ ಕಾಲು ಜೋರಾಗಿ ಜಾಡಿಸಿಬಿಟ್ಟ. ಅದೇ ಹೊತ್ತಿಗೆ ಹೊರಗಿನ ಬಲಿಷ್ಠ ಕೈಯೊಂದು ಮೇಲಕ್ಕೆ ಎಳೆಯುತ್ತಿತ್ತು. ಇನ್ನೊಬ್ಬ ಕಿಟಕಿಯ ಸರಳುಗಳನ್ನು ಮುರಿದು ಹೊರಗೆ ಬರಲು ಅನುವು ಮಾಡಿಕೊಡುತ್ತಿದ್ದ. ಜೀವದಿಂದ ಇದ್ದವರನ್ನು ಒಬ್ಬೊಬ್ಬರನ್ನಾಗಿ ಎಳೆದು ತಂದರೂ ಹೆಚ್ಚಿನ ಜನ ಸರೋವರದ ತಳ ಕಂಡದ್ದು ಸ್ಪಷ್ಟವಾಗಿತ್ತು. ನಿದ್ದೆ ಮಾಡುತ್ತಿದ್ದ ಅಮಾಯಕರು ಹಾಗೇ ಕಣ್ಣು ಮುಚ್ಚಿಬಿಟ್ಟಿದ್ದರು. ಗೋಪಿ ಪ್ರಯತ್ನದ ಫಲವಾಗಿ ತೀರಕ್ಕೆ ಬಂದು ಬಿದ್ದ. ಅಂಬುಲನ್ಸ ಬರುವವರೆಗೂ ಅವನು ಅಲ್ಲಿಯೇ ಬಿದ್ದಿರಬೇಕು. ಹೋರಾಟದ ಕ್ಷಣ ಕಳೆದ ಮೇಲೆ ಕಣ್ಣು ಮುಚ್ಚಿದ. ಎಚ್ಚರ ತಪ್ಪಿ ಹೋಯಿತು.

ಅಮ್ಮನ ಕೈಬಿಟ್ಟು ಓಡೋಡಿ ಬಂದು ಬೇಬಿ ಏನೋ ಎಡವಿ ಮುಗ್ಗರಿಸಿದಳು. ಗೋಪಿಯ ಮೈಮೇಲೆಯೇ ಅವಳು ಬಿದ್ದಿದ್ದರಿಂದ ಅವಳಿಗೇನೂ ಪೆಟ್ಟಾಗಲಿಲ್ಲ. ಅವಳು ಮುಂದೆ ಓಡದೆ ಅಲ್ಲಿಯೇ ಕುಳಿತು ಅವನ ಮೈ ಮುಖಜ ಮೇಲೆಲ್ಲ ಕೈಯಾಡಿಸಿದಳು. ಯಾರೋ ಪಾಪ ನೋವಾಗಿ ಬಿದ್ದಿದ್ದಾನೆ. ಮಾತು ಆಡಲೊಲ್ಲ ಎಷ್ಟು ಪೆಟ್ಟಾಗಿದೆಯೋ, ಕಷ್ಟದಲ್ಲಿರೋರಿಗೆ ಸಹಾಯ ಮಾಡಿದರೆ ದೇವರ ಸೇವೆ ಮಾಡಿದಂತೆ ಅಂತ ಅಮ್ಮ ದಿನಾ ಹೇಳ್ತಾಳೆ. ಇವನನ್ನ ಎಬ್ಬಿಸಿ ಮನೆಗೆ ಒಯ್ಯಬೇಕು. ತುಂಬಾ ಚಳಿ. ಬಟ್ಟೆ ಎಲ್ಲಾ ತೊಯ್ದು ಹೋಗಿವೆ, ಅಪ್ಪನ ಲುಂಗಿ ಬನಿಯನ್ ಕೊಡಬೇಕು.

'ಅಂಕಲ್', ಅಂಕಲ್, ಏಳಿ ಅಂಕಲ್" ಒಂದೇ ಸಮನೆ ಕೂಗಿ ಕೂಗಿ ಅವನನ್ನು ಹಿಡಿದು ಅಲ್ಲಾಡಿಸಿದಳು. ಗೋಪಿ ಕಣ್ಣು ತೆರೆದ. ರೇಶಿಮೆಯಂಥ ನುಣುಪು ಕೈ ಹಣೆಯ ಮೇಲಿದೆ. ಯಾರದಿದು? ಚಂದ್ರಿಕಾಳದೇ, ನಾನು ಮಲಗಿ ಎಷ್ಟು ಹೊತ್ತಾಯಿತು. ಚಂದ್ರಿಕಾ ಹೇಗೆ ಇಷ್ಟು ಚಿಕ್ಕವಳಾದಳು ? ನಾನು ಇಲ್ಲಿರುವುದು ಅವಳಿಗೆ ಹೇಗೆ ಗೊತ್ತಾಯ್ತು? ಓಃ ಅದೇ - ಅದೇ ಜನ್ಮ ಜನ್ಮದ ಬಾಂಧವ್ಯ. ಚಂದ್ರೂ ಎಂದ ಮೆಲುವಾಗಿ, ಬೇಬಿ ಮತ್ತಿಷ್ಟು ಬಾಗಿ ಕೆನ್ನೆ ಸವರುತ್ತ 'ನಾನು -ನಾನು ಅಂಕಲ್ ಬೇಬಿ. ಅಲ್ಲಲ್ಲ, ನೀಲಿಮಾ ಮೀನುಗಾರ ಜೋಸೆಫ್‌ನ ಮಗಳು. ಮುದ್ದಿನಿಂದ ನನ್ನ ಎಲ್ಲರೂ ಬೇಬಿಃ ಅಂತಾರೆ. ಏಳಿ ನಮ್ಮ ಮನೆಗೆ ಹೋಗೋಣ ಕೈ ಹಿಡೀಲಾ?'

ಕಣ್ಣು ತೆರೆದ ಗೋಪಿ ಕಷ್ಟಪಟ್ಟು ದಿಟ್ಟಿಸಿ ನೋಡಿದ. ಮುದ್ದು ಮುಖ. ನಿದ್ದೆಗಂಗಳು. ಮೆಲು ಮಾತು, ಜೇನಿನಂಥ ತುಟಿಗಳು, ಇವಳು ಚಂದ್ರಿಕಾ ಅಲ್ಲ. ತುಂಬಾ ಚೆನ್ನಾಗಿದ್ದಾಳೆ ಹುಡುಗಿ. ತನಗೂ ಅಂಥ ಒಂದು ಮಗುವಾಗಬೇಕು. ಪ್ರೀತಿಯಿಂದ ಬೇಬಿ ಎಂದು ಪಿಸುನುಡಿದ. ಸುತ್ತ ನೋಡಿದ ಎಲ್ಲೆಲ್ಲಿಯೂ ಅಳು, ಕಿರುಚಾಟ, ಒಡೆದ ತಲೆ,. ಮುರಿದ ಕೈಕಾಲು, ಎಳೆದು ಹಾಕಿದ ಶವಗಳು, ಮಾಂಸದ ಮುದ್ದೆಯಾದ ಶರೀರಗಳನ್ನು ಅಂಬುಲೆನ್ಸ್ ಬಂದು ತುಂಬಿ ಒಯ್ಯುತ್ತಿತ್ತು. ಸ್ಟ್ರೆಚರ್ ಎತ್ತುತ್ತ ಓಡಾಡುತ್ತಿದ್ದ ತರುಣ ತರುಣಿಯರು, ಮುದುಕರು, ಹಳ್ಳಿಗರು ಇನ್ನೂ ಯಾರಾರೋ, ಮಬ್ಬು ಗತ್ತಲಿನಲ್ಲಿ ಯಾವುದೂ ಸ್ಪಷ್ಟವಾಗಿರಲಿಲ್ಲ. ಹತ್ತಿರ ನಡೆದು ಹೋಗುತ್ತಿದ್ದ ಇಬ್ಬರು ಮಾತನಾಡಿಕೊಳ್ಳುತ್ತಿದ್ದರು. 'ಟ್ರೇನ್ ಸೇತುವೆ ಮೇಲೆ ಬರುತ್ತಲೇ ಒಂಬತ್ತು ಡಬ್ಬಿ ಉರುಳಿ ಸರೋವರಕ್ಕೆ ಬಿದ್ದಿವೆಯಂತೆ, ನೂರಾರು ಜನರು ಸತ್ತಿರಬೇಕು. ಗೋಪಿ ಗಡಗಡ ನಡುಗಿದ.

'ಚಳಿ ಅಯ್ತಾ ಅಂಕಲ್, ಏಳಿ, ನಮ್ಮ ಮನೆಗೆ ಹೋಗೋಣ, ನಿಮಗೆ ಒಣ ಬಟ್ಟೆ ಕೊಡ್ತೀನಿ, ಅಮ್ಮನ ಹತ್ತಿರ ಹೇಳಿ ಗಂಜಿ ಕೊಡಿಸ್ತೀನಿ' ಬೇಬಿ ಮತ್ತೆ ಮತ್ತೆ ಹೇಳಿದಳು.

ಸುತ್ತಲಿನ ನರಕದಲ್ಲಿ ಈ ದೇವತೆ ಎಲ್ಲಿಂದ ಬಂದಳು ಎಂದು ಯೋಚಿಸುವಷ್ಟರಲ್ಲಿ ಬಲಿಷ್ಠ ಕೈಯೊಂದು ಗೋಪಿಯ ಕುತ್ತಿಗೆ ಹಿಡಿಯಿತು. ಅಲ್ಲಿ ಬಂಗಾರದ ಚೈನು ಇರಲಿಲ್ಲ. ರಿಸ್ಟ್ ವಾಚು ಎಳೆದುಕೊಂಡಿತು. ಅದೇ ಕೈ ಜೇಬಿಗೆ ಹಾಕಿ ಪರ್ಸ್ ತೆಗೆಯಿತು. ಏಳಲಾಗದ ಗೋಪಿ ಬಿದ್ದಲ್ಲಿಯೇ ಒದ್ದಾಡಿದ. ಕಾಲು ವಿಪರೀತ ನೋಯುತ್ತಿತ್ತು. ಆ ಖದೀಮ ಅವನ ಬೆಲೆ ಬಾಳುವ ಪ್ಯಾಂಟ್ ಎಳೆಯುತ್ತಿದ್ದ. ಬೇಬಿ ಕೂಡಲೇ ಚೀರಿಕೊಂಡಳು. "ಕಳ್ಳಾ, ಕಳ್ಳಾ, ಬನ್ನಿ ಇಲ್ಲಿ ಯಾರಾದ್ರೂ ಬನ್ನಿ, ಪೊಲೀಸ್, ಕಳ್ಳನ್ನ ಹಿಡೀರಿ" ಮುಗಿಲು ಮುಟ್ಟುತ್ತಿದ್ದ ಆ ಹಾಹಾಕಾರದಲ್ಲಿ ಬೇಬಿಯ ಎಳೆ ದನಿ ಮುಳುಗಿಹೋಯಿತು. ಪ್ಯಾಂಟ್ ಕಳಚಿದ ಕಳ್ಳ ಶರಟಿಗೂ ಕೈ ಹಾಕಿದ. ಧಡ್..... ಬಗ್ಗಿದ ಅವನ ತಲೆಗೊಂದು ದೊಡ್ಡ ಕಲ್ಲೇಟು ಬಿತ್ತು. ಬೇಬಿ ಕೈಗೆ ಇನ್ನೊಂದು ಕಲ್ಲು ಪೆಟ್ಟು ತಿಂದವ ಅವಳನ್ನು ಹೊಡೆಯಲು ಹೋದ. ಬೇಬಿ ಅವನ ಕೈಗೆ ಸಿಗಲಿಲ್ಲ. ಅವನು ಅಟ್ಟಿಸಿಕೊಂಡು ಹೋದ. ಓಡುತ್ತಿದ್ದ ಬೇಬಿ. ಆ ರಾಕ್ಷಸ ಕಳ್ಳ ಕತ್ತಲಲ್ಲಿ ಕರಗಿ ಹೋದರು. ಸ್ಟ್ರೆಚರ್ ತರುವ ಮೊದಲೇ ಗೋಪಿ ಮತ್ತೊಮ್ಮೆ ಎಚ್ಚರ ತಪ್ಪಿದ್ದ.

***

ಟ್ರೇನ್ ಅಪಘಾತವಾಗಿ ಒಂದು ವರ್ಷ ಕಳೆದ ಮೇಲೆ ಅದೇ ದಿನ ಗೋಪಿ ಆ ಹಳ್ಳಿಗೆ ಬಂದಿಳಿದ. ಮೀನುಗಾರ ಜೋಸೇಫ್‌ನ ಮನೆ ವಿಚಾರಿಸಿಕೊಂಡು ಹೋದ. ಬಡಕಲು ಶರೀರ, ಗುಳಿಬಿದ್ದ ಕಣ್ಣಿನ ಜೋಸೆಫ್ ಕಾಲೆಳೆಯುತ್ತಾ ಹೊರಬಂದ. ಬೆಲೆಬಾಳುವ ಅರಿವೆ ಹಾಕಿದ ಅಪರಿಚಿತ ಕುಂಟನನ್ನು ಕಂಡು ಮಾತು ಬಾರದೆ ನಿಂತ. ಗೋಪಿ ತನ್ನ ಪರಿಚಯ ಹೇಳಿಕೊಂಡ. "ಬೇಬಿ ಎಲ್ಲಿ? ನಾನು ಅವಳನ್ನು ನೋಡಲೆಂದೇ ಬೆಂಗಳೂರಿನಿಂದ ಬಂದೆ, ಎಲ್ಲಿ ಅವಳು ಶಾಲೆಗೆ ಹೋಗಿದ್ದಾಳಾ ? ಎಂದು ತುಂಬಾ ಪ್ರೀತಿಯಿಂದ ಕೇಳಿದ.

ಜೋಸೆಫ್ ಸುಮ್ಮನಿದ್ದ. ಇವನು ಕಿವುಡನೆ ಎಂದುಕೊಂಡು ಮತ್ತೊಮ್ಮೆ ಅದೇ ಪ್ರಶ್ನೆ ಕೇಳಿದ. ಒಳಗಿನಿಂದ ಬಿಕ್ಕುವ ದನಿ ಕೇಳಿತು. ಗೋಪಿಯ ಮುಖದ ಬಣ್ಣವೇ ಹಾರಿತು. ಗಾಬರಿಯಾದ.

'ಬರ್ರಿ. ಒಳಗ ಬರ್ರಿ, ಬೇಬಿ ಅದಾಳೆ' ಜೋಸೆಫ್‌ನ ಹಿಂದೆ ಹೋದ ಗೋಪಿಗೆ ಕುಸಿಯುವಂತಾಯ್ತು. ಜೋಸೆಫ್ ಆಧಾರ ಕೊಟ್ಟ. ಬೇಬಿಯ ಫೋಟೋಕ್ಕೆ ಹಾರ ಹಾಕಿ ಮೇಣಬತ್ತಿ ಹಚ್ಚಿದ್ದರು.

"ಸರಿಯಾಗಿ ವರ್ಷದ ಹಿಂದೆ ಈ ದಿನ ನಮ್ಮ ಬೇಬಿ ಹುಟ್ಟಿದ ಹಬ್ಬವಿತ್ತು ಸಾಹೇಬರ. ನೀಲಿ ಅಂಗಿ ಕೇಕು ತರಲು ಹೇಳಿದ್ದಳು. ತಂದೆ; ಆದರೆ ತೊಟ್ಟುಕೊಳ್ಳಲಿಕ್ಕೆ ಅವಳೆ ಇಲ್ಲಾ. ಸರೋವರದಾಗ ಅವಳ ಹೆಣ ಸಿಕ್ಕಿತು. ಎಕ್ಸಿಡೆಂಟ್ ಆದ ಹೊತ್ತಿಗೆ ಅವಳು ಅಲ್ಲಿಗೆ ಹೇಗೆ ಬಂದಳೋ ನಮಗೆ ಗೊತ್ತಿಲ್ಲ" ಗಂಡ ಹೆಂಡತಿ ಇಬ್ಬರ ಎದ

ಒಡೆದು ಬಿಗಿಯುತ್ತಿತ್ತು. ಗೋಪಿ ಅವರ ಜೊತೆ ಕಣ್ಣೀರು ಸುರಿಸುತ್ತ ಹೇಳಿದ ಕಥೆ ಅವರಿಗೆ ಪವಾಡದಂತೆ ಕಂಡಿತು. ಮತ್ತೊಮ್ಮೆ ಮನದಣಿಯೆ ಅತ್ತರು. ಮೂವರೂ ಕೂಡಿ ಪ್ರಾರ್ಥನೆ ಮಾಡಿದರು.

'ಅಂಕಲ್ ಮನೆಗೆ ಹೋಗೋಣ ಬರ್‍ರಿ ಅಂತಿದ್ದೆಯಲ್ಲ ಬೇಬಿ. ನಾನು ಬರ್‍ತೇನೆ. ಪ್ರತಿ ವರ್ಷ ಬರ್‍ತೇನೆ ಬೇಬಿ ತಿರುಗಿ ಹೋಗುವಾಗ ಗೋಪಿ ಹೇಳಿದ ಅದರಂತೆ ಪ್ರತಿ ವರ್ಷ ಬರುತ್ತಿದ್ದ.

ಗೋಪಿಯ ಬದುಕಿನ ಪುಸ್ತಕದ ಹಾಳೆಗಳೆಲ್ಲ ತುಂಬುತ್ತ ಬಂದಿವೆ. ಪ್ರತಿ ಪುಟವೂ ಒಂದು ಹೊಸ ಕಥೆಯನ್ನೇ ಹೇಳುತ್ತದೆ. ಟ್ರೇನ್ ಎಕ್ಸಿಡೆಂಟಿನಲ್ಲಿ ಆಸ್ಪತ್ರೆ ಸೇರಿದ ಆರು ತಿಂಗಳ ಮೇಲೆ ಹೊರಬಂದಾಗ ಒಂದು ಕಾಲು ಕಳೆದುಕೊಂಡಿದ್ದ. ಅದರ ಜೊತೆಗೆ ಕೈಹಿಡಿದವಳನ್ನು ಕಳೆದುಕೊಂಡಿದ್ದ. ಜೀವನದಲ್ಲಿ ಸುಖದ ಕ್ಷಣಗಳನ್ನು ಮಾತ್ರ ಅನುಭವಿಸುವ ಅಪೇಕ್ಷೆಯ ಹೆಣ್ಣು ಚಂದ್ರಿಕಾ ಕುಂಟ ಗಂಡನಿಗೆ ಡೈವೋರ್ಸ್ ನೀಡಿದ್ದಳು. ಇಂಥ ಕ್ಷಣಿಕ ಬಾಂಧವ್ಯ ಮತ್ತೊಮ್ಮೆ ಬೆಳೆಸಲು ಸಿದ್ಧನಿರಲಿಲ್ಲ. ಗೋಪಿ ಮತ್ತೆ ಮದುವೆಯಾಗಲಿಲ್ಲ.

ತನಗೆ ಪೆನ್ಶನ್ ಆದೊಡನೆ ಬಂದ ಹಣದಿಂದ ಗೋಪಿ ಜೋಸೆಫ್‌ನ ಹಳ್ಳಿಯಲ್ಲಿ "ನೀಲಿಮಾ ಪ್ರಾಥಮಿಕ ಶಾಲೆ" ಆರಂಭಿಸಿದ್ದಾನೆ. ಶಾಲೆಯ ಮಕ್ಕಳ ಜೊತೆಗೆ, ಜೊಸೆಫ್ ಲೀನಾರ ಜೊತೆಗೆ ಆ ಹಳ್ಳಿಯಲ್ಲಿಯೇ ಇದ್ದು ತನ್ನ ಬದುಕಿನ ಕೊನೆಯ ಪುಟ ಬರೆಯಲಿದ್ದಾನೆ.

ನೀವು ಯಾವಾಗಲಾದರೂ ಸಂಜೆ ಅತ್ತ ಕಡೆಗೆ ವಾಕಿಂಗ್ ಹೋದರೆ ಆ ಸರೋವರವನ್ನೇ ದಿಟ್ಟಿಸುತ್ತಾ ಕುಳಿತ ವ್ಯಕ್ತಿಯೊಬ್ಬನನ್ನು ತಪ್ಪದೇ ಕಾಣುವಿರಿ ಅವನೇ ..... ಅವನೇ ಉಶ್ ! ಸುಮ್ಮನಿರಿ, ದಯವಿಟ್ಟು ಅವನ ಶಾಂತಿಗೆ ಭಂಗ ತರಬೇಡಿ.

***

■■

# ಗುಳದಾಳಿ

ಕಪ್ಪು ಆಕಾಶದಲ್ಲಿ ಥಳ ಥಳ ಮಿಂಚುವ ಬಿಳಿ ಚಿಕ್ಕೆಗಳು. ಅವ್ವನ ಕಸೂತಿಯನ್ನು ಕರಿ ಚಂದ್ರಕಾಳಿಯ ಸೀರೆ ನೆನಪಾಗಿತ್ತು ರೋಜಿಗೆ. ದಿಟ್ಟಿಸುತ್ತಿದ್ದರೆ ಇವು ಕಣ್ಣು ಮಿಟಿಕಿಸುತ್ತಿವೆಯಲ್ಲ. ಸೋಜಿಗದ ಹಿಂದೆಯೇ ದುಃಖ ತನ್ನನ್ನು ಅಣಕಿಸುತ್ತಿದೆಯೇ? ಥಟ್ಟನೆ ದೃಷ್ಟಿ ನೆಲಕ್ಕೆ ತಿರುಗಿಸಿದಳು. ಲೈಟಿನ ಬೆಳಕಿನಲ್ಲಷ್ಟೇ ಬಣ್ಣ ಬಣ್ಣಗಳ ಹೂವಿನಗುಂಪು. ಕಪ್ಪು ಹಿನ್ನೆಲೆಯಲ್ಲಿ ಹಸಿರು ಪೊದೆ ತಂಪಿಗೆ ನೀರೆರೆಯುವ ಕಾರಂಜಿ. ದಿನವೂ ಇದೇ ಜಾಗದಲ್ಲಿ ಕುಳಿತು ಮೈ ಮರೆಯುವಳು ರೋಜಿ.

ಹೊಲದ ಮನೆಯ ಹಿತ್ತಲಲ್ಲಿ ಪುಟ್ಟ ತೋಟ. ಅವ್ವ ಹಾಲು ಕೊಡುವ, ಅವ್ವಾ ಅವರ ಮನೆಗಳಲ್ಲೆಲ್ಲ ಕೇಳಿ, ಕದ್ದು, ತಂದು ಹಚ್ಚಿದ ತರತರದ ಹೂವಿನ ಗಿಡಗಳು. ಎಮ್ಮೆಗೆ ನೀರು ಕುಡಿಸುವಾಗ ಅವ್ವನ ಕಣ್ಣು ತಪ್ಪಿಸಿ ಗಿಡಗಳಿಗೆ ನೀರು. ಬಸ್ಯಾ ನಾಗ್ಯಾ ನೋಡಿದರೆ ಸಾಕು. ಅವ್ವನಿಂದ ಅಂದು ಮೈ ತುಂಬ ಏಟು. ದೂರದ ಹಳ್ಳದಿಂದ ನೀರು ಹೊತ್ತು ತರುವವರೇ ತಮ್ಮಂದಿರು. ತನಗೂ ನಾಲ್ಕಾರು ದಿನ ನೀರು ತರುವ ಶಿಕ್ಷೆ ಅವ್ವನ ಕೋರ್ಟಿನಲ್ಲಿ. ಅದೊಂದೇ ಕೆಲಸವಲ್ಲ ತನಗೆ. ಅಂಗಳ ಉಡುಗುವುದು, ಶಗಣಿ ಕಸ ಬಳಿಯುವುದು, ಕಟ್ಟಿಗೆ ಮಾಡುವುದು, ರೊಟ್ಟಿ ಬಡಿಯುವುದು ಎಲ್ಲಾ ಇದ್ದದ್ದೇ. ಬೆಳಗಿನಿಂದ ಸಂಜೆಯವರೆಗೂ ದುಡಿದ. ತೋಟದ ತುಂಬಾ ಅರಳಿದ ಮಲ್ಲಿಗೆ, ಜಾಜಿ, ಗುಲಾಬಿ, ಹೆಸರು ತಿಳಿಯದ ಹೂಗಳನ್ನು ನೋಡುತ್ತಿದ್ದರೆ ದಣಿವು ದುಃಖ ಮಟಾಮಾಯ. ನೋಡುತ್ತಿದ್ದರೆ ಎರಡು ಕಣ್ಣು ಸಾಲವು.

ಇದೇನು ಒರಟು ಬೆರಳಿನ ಕೈ ಮುಂದೆ ಬರುತ್ತಿದೆ. ಅರೆ! ಗುಲಾಬಿಗೇ ಕೈ ಹಾಕಿದೆ. ಉಹುಂ ಅದನ್ಯಾರು ಕೀಳಬಾರದು. ಗಬಕ್ಕನೆ ಆ ಕೈ ಗಟ್ಟಿಯಾಗಿ ಹಿಡಿದಳು. ಗುಲಾಬಿಯ ಮುಳ್ಳು ತರಚಿ ಬೆರಳಿನಿಂದ ಕೆಂಪು ಮಾಣಿಕ್ಯವೊಂದು ಎದ್ದು ತಟತಟ ಗುಲಾಬಿಯ ಮೇಲೆ ಉರುಳಿತು.

"ಏ ಚಿನ್ನೀ ಏನs ನೂವಾತೇನ? ರಗತ ಭಾಳ ಬರಾಕ ಹತ್ತೇತಿ." ಅವಳ ಬೆರಳು ಬಾಯಲ್ಲಿಟ್ಟು, ಚೀಪಿದ ಮಲ್ಲ. ನಾಚಿಕೆಯಿಂದ ಕೈ ಕೊಸರಿದಳು. ಓಡಿ ಹೋಗಬೇಕೆಂದರೆ ಗಂಡ ಗಟ್ಟಿಯಾಗಿ ಕೈ ಹಿಡಿದಿದ್ದ. ಚಿನ್ನಿ ನೋವು ಕಡಿಮೆ ಆತೇನ? ಅವಳಲ್ಲೆ ಪ್ರೀತಿಯ ದೃಷ್ಟಿ ನಟ್ಟು ಕೇಳಿದ್ದ ಮಲ್ಲ. ಗುಲಾಬಿ ಹೂ ಗಿಡದಾಗ ನೋಡಾಕ ಛಂದ, ಇನ್ನೊಮ್ಮೆ ಹರೀಬ್ಯಾಡಾ. ನಾ ನಿನ್ನ ಜಡ್ಯಾಗ ಹಾಕಲಿಕ್ಕೆ ಹರೀತಿದ್ದೆ ಚಿನ್ನಿ.

ಉಹುಂ. ಹರದು ಹಾಕ್ಕೊಂಡರ ಲಗೂನ ಬಾಡಿ ಹೋಗ್ತದ. ನನಗೆ ಅದು ಸೇರಂಗಿಲ್ಲಾ. ಹಾಂಗs ಆಗಲಿ. ನಾನು ಹರಿಯೂದಿಲ್ಲ. ನೀ ಹೇಳಿದಾಂಗ ಮಾಡ್ತೇನಿ. ನಿನ್ನ ನೋಡಾಣಾ, ನನಗ ಭಾಳ ಪ್ರೀತಿ ಬರ್ತದ. ಹಿಡಿದು ಮುದ್ದಾಡೂ ಹಾಂಗ ಆಗ್ತದ, ನೀ ನಮ್ಮೂರಿಗೆ ಯಾವಾಗ ಬರ್ತೀ ಚಿನ್ನಿ....

"ಅವ್ವ ಹೇಳ್ತಾಳ ನಾ ಇನ್ನೂ ದೊಡ್ಡಾಕಿ ಆಗಬೇಕಂತ. ಆಮ್ಯಾಲೆ ಬರ್ತೀನಿ. ನಿಮ್ಮ ಮನ್ಯಾಗೂ ಹಿಂತಾದ ತ್ವಾಟಾ ಮಾಡ್ತೇನಿ ಹೂವಿಂದು. ಹೂ ನನಗ ಭಾಳ ಸೇರತೈತಿ.

"ನೀನs ಹೂ ಇದ್ದಂಗ ಅದೀ": ಬಗ್ಗಿ ಅವಳ ಗಲ್ಲಕ್ಕೆ ಮುತ್ತು ಕೊಟ್ಟ ಮಲ್ಲ.

ಕೆನ್ನೆಯ ಮೇಲೆ ಕೈಯಾಡಿಸಿದಳು ರೋಜಿ. 'ಹೋ ಯಾರವರು ?' ಬೆಚ್ಚಿ ಅತ್ತ ತಿರುಗಿದಳು ಪಾರ್ಕಿನ ಗೇಟಿನಿಂದ ಲಾಠಿ ಬೀಸುತ್ತ ರಂಗಪ್ಪ ಬರುತ್ತಿದ್ದ.

ನೀ ಏನು, ರೋಜಿ ರಾತ್ರಿ ಭಾಳ ಆತು. ಇನ್ನ ಮನೀಗೆ ಹೋಗು. ದೀಪಾವಳಿ ಅಮಾಸಿ ಇಂದ ನಾನು ನಿನ್ನ ಮನೀಗೆ ಬರೂದಿಲ್ಲಾ ಹಬ್ಬದ ದಿನಾನೂ ಮನ್ಯಾಗ ಇರದಿದ್ದರ ಹೇಣ್ತಿ ಜಗಳಾಡತಾಳ. ನಿನಗ ಗೊತ್ತೈತಲ್ಲ. ಅವನ

ಖಾಕಿ ಬಟ್ಟೆ, ಕೈ ಕೋಲು ಕಣ್ಮರೆಯಾಯಿತು. 'ನನ್ನ ಮನೀಗೆ ಬಂದಿದ್ದರ ನಾ ಜಗಳಾಡಬೇಕಾಗುತ್ತಿತ್ತು' ಎಂದುಕೊಳ್ಳುತ್ತ ಉತ್ಸಾಹವಿಲ್ಲದ ರೋಜಿ ಕಾಲು ಎಳೆದಳು.

"ಈ ಒಂದ ರಾತ್ರಿ ಯಾರೂ ಬರಬಾರದು. ತಾನೊಬ್ಬಳs ಇರಬೇಕು. ಒಬ್ಬಳs ಮಲಗಬೇಕು. ಬ್ಯಾರೆ ಗಿರಾಕಿ ಬಂದರ ತಿರಿಗಿ ಕಳಿಸೇನು. ಆದರ ರಂಗಪ್ಪಗ ಹ್ಯಾಂಗ ಬ್ಯಾಡಾ ಅನ್ನೂದು. ನಡದು ನಡದು ಸಾಕಾಗಿ ಹೊಟ್ಯಾಗ ಕೂಳು ಇಲ್ಲ. ಬವಳಿ ಬಂದು ರಸ್ತೇದಾಗ ಬಿದ್ದಾಕಿನ್ನ ಎಬ್ಬಿಸಿ ತಂದು ಒಂದ ಸೂರು ಮಾಡಿ ಕೊಟ್ಟಾಂವನ ರಂಗಪ್ಪ. ಮೊದಮೊದಲ ತನ್ನ ಬಿಳಿ ತೊಗಲು, ಧಂದಾ ನೋಡಿ ಹುಚ್ಚಾಗಿ ಬಿಟ್ಟಿದ್ದ. ಯಮನಕ್ಕ ಬಂದು ಹಾದೀ ರಂಪು ಬಿದೀ ರಂಪು ಮಾಡಿ ಎಳಕೊಂಡ ಹೋಗಬೇಕಾಗಿತ್ತು. ಮನ್ಯಾಗ ಮುತ್ತಿನಂತಾ ಹೆಂಡ್ತಿ ಮೂರು ಮಕ್ಕಳು ಇದ್ದರೂ ರಂಗಪ್ಪಗ ನನ್ನ ಮ್ಯಾಲೆ ಆಸೇ. ಈ ಗಂಡ್ಸರ ಗುಣಾನ ಇಚಿತ್ರ. ಮನಸ ಎತ್ತಾಗ ಬೇಕ ಅತ್ತಾಗ ಹರಿಬಿಡತಾರ. ಅದಕೇನ ಲಂಗು - ಲಗಾಮು ಇಲ್ಲಾ. ನನ ಮನೀ ಮಾಲಕರ ಏನು ತಾ ನೋಡಿದರ ಕಲತಾಂವಾ. ಸೂಟು ಬೂಟು ಹಾಕ್ಕೊಂಡ ದರಬಾರ ಮಾಡಿಕೋತಾ ಅಡ್ಯಾಡಾಂವ. ಹೇಣ್ತಿ ತವರ್ಮನಿಗೆ ಹ್ವಾದ ಕೂಡ್ಲೆ ನನ ಹಂತ್ಯಾಕ ಬರತಾನ. ಮನೀ ಪುಕಟ ಕೊಟ್ಟಾನ. ನಂದು ನಾಗವ್ವಂದು ಇಬ್ಬರ ಹೊಟ್ಟಿ ತುಂಬತೈತಿ. ಬ್ಯಾರೆ ಗಿರಾಕಿ ಬಂದಾಗ ಮನಸ ಬಂದರ ಕರಕೊಳ್ಳಾಕಿ. ಇಂದ ರಾತ್ರಿ ಅಂತೂ ಯಾವ ರಾಜಾ ಮಹಾರಾಜ ಬಂದರೂ ಒಳಗೆ ಕರ್‍ಯಾಕಿ ಅಲ್ಲಾ."

'ಸುಂಯ್', ತಲೆ ಎತ್ತಿದಳು ರೋಜಿ. ವೇಗವಾಗಿ ಹಾರಿಹೋದ ಬಾಣ ಆಕಾಶದಲ್ಲೆ ಸಿಡಿದು ಬಣ್ಣಗಳೆಲ್ಲ ಚದುರಿ ಕಪ್ಪಿನಲ್ಲಿ ಮಾಯವಾದವು, ಅವಳ ಕನಸುಗಳ ಹಾಗೆಯೇ. ಎಲ್ಲರ ಮನೆಗೆ ತಳಿರು-ತೋರಣ, ರಂಗೋಲಿ, ಹೊಸಿಲಿಗೆ ದೀಪಗಳ ಸಾಲು, ಆಕಾಶಬುಟ್ಟಿ, ಹಿಗ್ಗು ಕೇಕೆ, ಸಂಭ್ರಮ, ಮಧುರವಾಸನೆ, ಸಿಲ್ಕಸೀರೆ, ಹೊರೆ ಹೂವು ಥಳಥಳಗುಟ್ಟುವ ಹೆಂಗಳೆಯರು, ಆಕಾಶದ ನಕ್ಷತ್ರಗಳೆಲ್ಲ ಭೂಮಿಗೇ ಬಂದಂತೆ ಬೆಳಕಿನ ಸರಮಾಲೆ.

ಹೆಜ್ಜೆ ಸಪ್ಪಳ ಕೇಳಿದ ನಾಗವ್ವ ಕೇಳಿದಳು. "ರೋಜಕ್ಕಾ ಊಟಾ ಮಾಡ್ತೀಯೇನವ್ವಾ, ಮದ್ದಿನದಾಗೂ ತಾಟ ಬಿಟ್ಟಿ. ಎದ್ದ ಹ್ವಾದಿ ಹೊಟ್ಟಿ ಹಸದಿದ್ದೀತ." ಹತ್ತಿರ ಬಂದು ಕಕ್ಕುಲತೆಯಿಂದ ಮೈ ತುಂಬ ಕೈಯಾಡಿಸಿದಳು.

"ಬ್ಯಾಡ ಯತ್ತೀ ನೀ ಉಂಡ ಬಾಗಲಾ ಹಾಕ್ಕೊಂಡ ಮಕ್ಕೋ. ಯಾರ ಬಂದರೂ ತಗೀಬ್ಯಾಡಾ."

ಕೋಣೆಯಲ್ಲಿ ಇದ್ದ ದೀಪವನ್ನು ಆರಿಸಿ, ನಕ್ಷತ್ರಗಳ ಮಿಂಚು, ದೀಪಗಳ ಬೆಳಕು, ಹೂವುಗಳ ಅಂದ. ತನ್ನ ಕನಸುಗಳನ್ನೇ ಹಾಸಿ ಹೊದ್ದುಕೊಂಡು ಗಟ್ಟಿಯಾಗಿ ಮುಸುಕು ಬಿಗಿದು ಇನ್ನೂ ಕತ್ತಲಾದಳು ರೋಜಿ.

'ತಂದ ಅನ್ನೂ ಒಂದ ಜೀವಾನೂ ಹತ್ತರ ಇಲ್ದಾಗ ಭಿಕ್ಷೆ ಬೇಡಕೋತ ತನ್ನ ಬಾಗಲಕ ಬಂದ್ಲು ನಾಗವ್ವ. ವಯಸ್ಸಾದಾಕಿ, ಬಲಗೈ ಮುರದು ಸೊಟ್ಟಾಗಿತ್ತು. ದಿಕ್ಕಿಲ್ಲಾಕಿನ್ನ ಇಟಗೊಂಡರ ತನಗೂ ಜೋಡ ಆಗ್ತಾಳ ಅನಿಸ್ತು. ಎಲಿಗೆ ಅಡಿಕೆಗೆ ಅಂತ ಹೇಳಿ ರೊಕ್ಕಾ ತೊಗೊಂಡು ಬರಬರತ ಆಕಿ ರಂಗಪ್ಪನ ಪೈಕಿನ ಆಗಿಬಿಟ್ಲು. ಮನೀಗೆ ಯಾರ ಬಂದ್ರು ಹೋದ್ರೂ ರಂಗಪ್ಪಗ ವರದಿ ಮುಟ್ಟಾಕ ಹತ್ತಿತು. ಮಾಲಕ ತನ್ನ ಹಂತೀಲೆ ಬರೂ ಸುದ್ದಿ ತಿಳಿದ ದಿನಾ ಜಗ್ಗಿ ಒದರಾಡಿದಾ ಸಿಟ್ಟಾಗಿ. ಆದ್ರೂ ಅದೇನ ಮಾಯಾನೋ ಮಕ್ಕೊಂಡ ಎದ್ದು ಹೋಗೂ ಮುಂದ ಸುಮಾಕ ಹೋದಾ. ಒಂದೊಂದ ತಿಗ್ಳು ಖರ್ಚಿಗೆ ಕೊಡುದs ತಪ್ಪಸತಿದ್ದಾ. ಬ್ಯಾರೆ ಗಿರಾಕಿನ್ನ ಕರಕೊಳ್ಳಾಕs ಬೇಕಾತು. ಬಂದವರಿಗೆಲ್ಲಾ ಹೂಂ ಅನ್ನಾಕಿ ಅಲ್ಲಾ ತಾನೂ. ತನ್ನ ರೂಪ ಎಲ್ಲಾರ ಕಣ್ಣೂ ಕುಕ್ಕತೈತಿ. ಇದs ಅಲ್ಲಾ ತನ್ನ ಬಾಳೆ ಹಾಳ ಮಾಡಿದ್ದು. ತವರ್ಮನೀ, ಗಂಡನ ಮನೀ ಬಳಗಾ ಎಲ್ಲಾ ದೂರ ಮಾಡಿದ್ದು.'

ದಡದಡ ನೂಕುವ ಸಪ್ಪಳ. 'ಯಾಂವಗ ತೆವಲು ಎತ್ತ್ಯೋ ಹಿಂತಾ ಹಬ್ಬದ ದಿನಾ' ನಾಗವ್ವ ಗೊಣಗಿದಳು. 'ಸುಮಾಕ ಇರು ಯತ್ತಿs ಏಳ ಬ್ಯಾಡಾ' ಬಾಗಿಲ ಹೊರಗೆ ಕುಡಿದು ಬಂದು ಗಲಾಟೆ ಮಾಡುವ ಗಂಡಸು! ನೆನಪಿನ ಈಟಿ ಇರಿಯಿತು. ಮೊದಲ ಗಂಡಿನ ಸಹವಾಸ. ಮೇಸ್ತ್ರಿಯ ರಾಕ್ಷಸ ಹಿಡಿತ. ಹಿಚಕಾಟ, ಕಡಿತ, ನೋವು, ನರಳಾಟ,

ಚೀರಬೇಕೆಂದರೂ ತುಟಿಗೆ ತುಟಿಯ ಅಂಚು. ಸಿಗರೇಟು ಮೈ ಬೆವರಿನ ಗಬ್ಬುನಾತ, ಹೊಟ್ಟೆ ನೋವು, ವಾಕರಿಕೆ. ನೆಲಕ್ಕೆ ಬಿದ್ದಾಗ ನೋವು ರಕ್ತವಾಗಿ ಹೊರಚಿಮ್ಮಿತ್ತು. ಇದೆಲ್ಲಾ ಆದದ್ದs ದೀಪಾವಳಿ ಹಬ್ಬದಾಗ. ಅದಕ್ಕ ಈ ಹಬ್ಬ ಬಂದರ ನನಗ ಬೆಳಕು ಕಾಣಾಂಗಿಲ್ಲ. ಕತ್ತಲ ತುಂಬತದ ಒಳಗ ಹೊರಗ ಕೂಡೇ. ಬೆಳಕ ಹುಡಿಕ್ಕೊಂಡ ಹೋಗದಿದ್ದರ ಹುಚ್ಚs ಹಿಡೀತದ ನನಗ.'

ನನ್ನ ಮದುವಿ ಆದಾಗ ಒಂಬತ್ತವರ್ಸದಾಕಿ ಇದ್ದೆ. ಮದುವ್ಯಾಗ ನನ್ನ ಗಂಡ ಮಲ್ಲನ್ನ ನೋಡಿದ್ದು. ಆಗ ಚಿಗರಮೀಸಿ ಒಡೀತಿದ್ದು. ಕಪ್ಪ ಇದ್ದರೂ ಕಳಾ ಇದ್ದಾ. ಉದ್ದನ್ನ ಮೂಗಿನ ಹಂತ್ಯಾಕ ಒಂದ ಕರೇ ನರೋಲಿ ಇತ್ತು. ಹೊಲಗೆಲಸಕ್ಕ ಸಹಾಯ ಆಗೂ ನೆವಾ ಮಾಡಿ ನನ್ನ ನೋಡಾಕ ನಮ್ಮೂರಿಗೆ ಯಾವಾಗರೆ ಬರತಿದ್ದಾ. ಮದವಿ ಗಂಡ ಅಂದರ ಏನ ಅನ್ನೂದ ನನಗ ಗೊತ್ತ ಇಲದಿದ್ರೂ ಅಂವಾ ಬಂದರ ಸಂತೋಸ ಆಗತಿತ್ತು. ಅಂವಾ ನಗೂದ ಎಷ್ಟು ಛಂದ . ಮಾತ ಎಷ್ಟು ಸಂವಿ ಅನಸತಿತ್ತು. ಅಂವಗೂ ಹಾಂಗ ಆಗತಿತ್ತಂತ. ಒಂದ ದಿನಾ ಕೇಳಿದ್ದಾ.

"ನಿನ ತಂಗಿ ಕಲ್ಲವ್ವ, ನಾಗಣ್ಣ-ಬಸಣ್ಣ ಯಾರೂ ನಿನ್ನಷ್ಟ ಬೆಳ್ಳಗಿಲ್ಲಲ್ಲ. ನಿಮ್ಮವ್ವಂತೂ ಕರ್ರಗ ಹಂಚೀ ಕಡ್ಡಿ ಆಗ್ಯಾಳ. ಈ ಬಣ್ಣಾ, ಕಣ್ಣು, ಕೂದಲಾ ನಿನಗ ಹ್ಯಾಂಗ ಬಂತು?'

'ನಮ್ಮಪ್ಪನ ಹೋತಿರಬೇಕ ನಾನು.' ಅವ್ವ ಯಾರ ಮುಂದೋ ಹೇಳಿದ ಮಾತನ್ನ ಸಟ್ಟನ ಮಲ್ಲಗ ಹೇಳಿದ್ದೆ. 'ಈ ರೂಪಕ್ಕೆ ಮೆಚ್ಚಿ ನಮ್ಮವ್ವ ನಿಮ್ಮ ಮನೀತನಾ ಬಂದು, ನನ್ನ ಹೊಟ್ಯಾಗಿನ ಕೂಸು ಒಂದ ವ್ಯಾಳೆ ಉಳಿದಿದ್ದರ ಮೇಸ್ತ್ರಿನ್ನ ಹೆಣ್ಣು ಕೇಳ್ಯಾಳ' ಎಂದಿದ್ದ. ಹೋಲತಿತ್ತೋ ಏನೋ ನನ ಗಂಡ, ಮಕ್ಳು ಸಂಸಾರ ಹಾಳ ಮಾಡಿದ ಆ ಪಿಶಾಚಿ ಮೇಸ್ತ್ರೀ, ಹಾಳಾಗಿ ಹೋಗಲಿ ಅಂವಾ ರವರವ ನರಕಾ ಕಾಣ್ಲಿ.

ಹಸಿದಿಂಬು ರೋಜಿಯನ್ನು ಪೂರ್ತಿ ಎಚ್ಚರಿಸಿತು. ತಟಕ್ಕನೆ ಹಾಸಿಗೆ ಬಿಟ್ಟೆದ್ದು ಗೂಡಿನಲ್ಲಿದ್ದ ಗಿಲೀಟಿನ ಗುಳದಾಳಿ ಕೊರಳಿಗೆ ಹಾಕಿಕೊಂಡು ಮತ್ತೆ ಹಾಸಿಗೆಯ ಮೇಲೆಯೇ ಗೋಡೆಗೊರಗಿ ಕುಳಿತಳು. 'ಏನಾರ ಬೇಕೇನವ್ವಾ ರೋಜಕ್ಕಾ?' ಎಚ್ಚರವಾಗಿಯೇ ಇದ್ದ ನಾಗವ್ವಾ ಕೂಗಿದಳು. ರೋಜಿ ಉತ್ತರ ಕೊಡಲಿಲ್ಲ. ಕೈ ಗುಳದಾಳಿಯನ್ನೇ ಸವರುತ್ತಿತ್ತು. ತುಟಿಗಳು ಮಲ್ಲನ ಜಪ ಮಾಡುತ್ತಿದ್ದವು. ಮೈಮೇಲೆ ಎಚ್ಚರವಿಲ್ಲದೆ ಎಷ್ಟು ಹೊತ್ತು ಹಾಗಿದ್ದಳೋ...

ಮತ್ತೆ ಯಾರೋ ಬಾಗಿಲು ಬಡಿದರು. ತಿಳಿಯದೇ ರೋಜಿಯ ಎದೆ ಬಡಿದುಕೊಂಡಿತು. ಕೈಗಳು ತಾಳಿಯನ್ನು ಇನ್ನಷ್ಟು ಗಟ್ಟಿಯಾಗಿ ಹಿಡಿದವು. ದೇಹ ಮಧುರವಾಗಿ ಕಂಪಿಸಿತು. ಸುಖದ ಅನುಭವದಿಂದ ಜೀವ ಹೊಯ್ದಾಡಿತು. ಚಿತ್ತ ಚಂಚಲವಾಗಿ, ನಿರ್ಧಾರ ಸಡಿಲಿತು. 'ಯತ್ತೀ ಯಾರ ಬಂದಾರ ನೋಡು, ಒಳಗ ಕಳಸ ಅವ್ರನ್ನ.'

ಬಂದವನ ಮುಖ ಸರಿಯಾಗಿ ಕಾಣುತ್ತಿರಲಿಲ್ಲ. ದೀಪವಿಲ್ಲದಿದ್ದರೂ ಕೋಣೆಯಲ್ಲಿ ಬೆಳಕಿತ್ತು. ಹತ್ತಿರ ಬಂದವನೇ ತುಂಬ ಹಸಿದವನಂತೆ ಅವಳನ್ನು ಅಪ್ಪಿಕೊಂಡ. ಎಂದೂ ಕಾಣದ ಸುಖದ ಮತ್ತು ಅವಳನ್ನೂ ಆವರಿಸಿತು. ಅವನ ದೃಢವಾದ ಬಾಹುಗಳ ಬಿಗಿ ಅಪ್ಪುಗೆಯಲ್ಲಿ ತೇಲಿ ಮೈಮರೆತಳು ರೋಜಿ. ಯಾವ ಗಿರಾಕಿಯ ಜೊತೆಗೂ ಹೀಗೆ ಸ್ಪಂದಿಸಿರಲಿಲ್ಲ. ಸೋತು ಮಲಗಿದಾಗಲೂ ಅಪ್ಪುಗೆ ಸಡಿಲಿರಲಿಲ್ಲ. ಅವನ ಕೂದಲಲ್ಲಿ ಬೆರಳಾಡಿಸುತ್ತಿದ್ದಳು. ಕಣ್ಣು ಮುಚ್ಚಿ ಸುಮ್ಮನೆ ಮಲಗಿದ್ದವನ ಮುಖದ ಮೇಲೂ ಅವಳ ಕೈ ಆಡಿತು. ಮೂಗಿನ ಹತ್ತಿರ ಬಂದಾಗ ನರೋಲಿ ಸಿಕ್ಕಿತು. ಮತ್ತೆ ಮತ್ತೆ ಮುಟ್ಟಿ ಖಾತ್ರಿ ಮಾಡಿಕೊಂಡಳು.

"ಸಣ್ಣಾಂದಿರತ ನನ ಮಾರಿ ಮ್ಯಾಲೆ ಕರೇ ಚಿಕ್ಕಿ ಐತಿ." ಗಂಡಸು ಖುಷಿಯಿಂದ ಅವಳ ಕೆನ್ನೆ ಹಿಂಡಿದ.

"ನಿಮ್ಮ ಹಸರ ಏನು?"

"ಮಲ್ಲಣ್ಣ ಅಂತ. ಹಾರೋಗೇರಿಯಂವಾ."

ಬೆಚ್ಚಿದ ರೋಜಿ ಎದ್ದು ಸೆರಗು ಸುತ್ತಿಕೊಂಡು ದೂರ ಸರಿದು ಕುಳಿತಳು.

'ಇಕಾ ಹಿಡಿ ಇದನ್ನು' ಇಪ್ಪತ್ತು ರೂಪಾಯಿ ನೋಟು ಚಾಚಿ ಹೇಳಿದ. ರೋಜಿ ಕೈ ನೀಡಲಿಲ್ಲ.

"ಹಬ್ಬಕ್ಕ ಶಾರಕ ಬಂದಿದ್ದೆ. ಎಲ್ಲಾ ಖರ್ಚಾಗಿ ಹೋದ್ವು. ನಾಳೆ ಮತ್ತ ಬರ್ತಿನಿ. ಆವಾಗ ಮತ್ತ ತಂದ ಕೊಡ್ತೀನಿ., ನನ್ನ ನಂಬು."

"ನಿಮ್ಮ ಹೇಣ್ತಿ." ದನಿ ಸೋತಿತ್ತು.

"ಹೇಣ್ತಿ ಸತ್ತು ಆರು ತಿಂಗಳಾತು. ಎಡ್ಡ ಮಕ್ಕಳ್ನ ಬಿಟ್ಟು ಸತ್ಲು. ಇವತ್ತ ಯಾಕೋ ಬಾಳ ಬ್ಯಾಸರಾತು. ನಿನ್ನ ಹಂತ್ಯಾಕ ಬಂದೆ. ನಿನಗ ಎಷ್ಟು ಕೊಟ್ಟರೂ ಕಡಿಮಿ ಅನ್ಸಾಕ ಹತ್ತೈತಿ. ನನ್ನ ನಂಬು, ನಾಳೆ ತರ್ತೀನಿ ರೊಕ್ಕಾ."

ರೋಜಿ ಕಣ್ಣುಗಳಲ್ಲಿ ನೀರು ತುಂಬುತ್ತಿತ್ತು. ಕತ್ತಲೆ ಎಲ್ಲ ಮರೆ ಮಾಡಿತ್ತು ಗಂಟಲು ಸರಿಪಡಿಸಿಕೊಂಡು "ನಾಳೆ ಬಂದಾಗ ತರ್ರಿ ಈಗ ಬ್ಯಾಡಾ."

ಅಮಾವಾಸ್ಯೆಯ ಮರುದಿನ ಪಾಡ್ಯ. ಹೂವು, ಹಣ್ಣು, ಸಿಹಿಯೊಡನೆ ಬಂದ ಮಲ್ಲಣ್ಣ ರೋಜಿಯ ಮನಸ್ಸು ತಡೆಯದೆ ಅವನ ಕಾಲುಗಳ ಮೇಲೆ ಬಿದ್ದು ಅತ್ತುಬಿಟ್ಟಳು. "ನಾನು..... ನಾನs ನಿಮ್ಮ ಚೆನ್ನಿ." ಮಲ್ಲಣ್ಣ ಬಾಯಿ ತೆರೆದು ಕುಳಿತ.

ನಮ್ಮ ದೊಡ್ಡಪ್ಪನ ಮಗಳು ಭಾಳ ಜುಲುಮಿ ಮಾಡಿ ತನ್ನ ಗಂಡನ ಊರಿಗೆ ಕರಕೊಂಡ ಹ್ಯಾದ್ಲು. ಅವರ ಊರಾಗ ಹನ್ನೆಡ್ಡ ವರ್ಸಕ ಒಮ್ಮೆ ದ್ಯಾಮವ್ವನ ಜಾತ್ರಿ ಆಗತಿತ್ತಂತ. ಮದುವೀ ಸೀರಿ ಉಟಗೊಂಡು ಬಂಗಾರದ ಗುಳದಾಳಿ ಹಾಕ್ಕೊಂಡು ಹೋಗಿದ್ದೆ, ಅದೂ ಅವ್ವ ಜಗಳಾಡಿ ಕೊಟ್ಟದ್ದು. ಸಣ್ಣಾಕಿ ಒಬ್ಬಾಕೆ ಎಮ್ಮಿ ಮೇಸಾಕ ಅಡ್ಡಾಡ್ತಿ ಅಂತ ಹೇಳಿ ಬಂಗಾರದ ತಾಳಿ ತಗದಿಟ್ಟು ಎರಡು ರೂಪಾಯಿ ಕೊಟ್ಟು ತಂದ ಗಿಲೀಟಿನ ತಾಳಿ ಹಾಕಿ ಕಳಸತಿದ್ಲು. ಸಂಭ್ರಮದಿಂದ ಜಾತ್ರಿಗೆ ಹೋಗಿ ಅಳಕೊಂತ ತಿರುಗಿ ಬಂದೆ. ಆ ಗದ್ದಲದಾಗ ತಾಳಿ ಯಾರೋ ಕತ್ತರಿಸಿ ಬಿಟ್ಟಿದ್ರು.

'ಏಳೆಂಟು ನೂರು ರೂಪಾಯಿ ನೀರಾಗ ಹಾಕಿದೆಲ್ಲ ಬೋಸಡಿ. ಬ್ಯಾಡಾ ಅಂತ ಚಾಲವರದ ಹೇಳ್ದೆ. ಕಳಕೊಂಡ ಬಂದಿ. ನಿಮ್ಮತ್ತಿ ಕೇಳಿದರ ಏನ ಹೇಳ್ಳಿ. ಮಳೀ ಇಲ್ಲ ಬೆಳೀ ಇಲ್ಲಾ. ಹೊಟ್ಟಿಗೇ ಇಲ್ಲಾಗ ಬಂಗಾರ ಹ್ಯಾಂಗ ಕೊಳ್ಳಲಿ. ಅಂದಾಕರಾ ದಿಮಾಕಿನಾಕಿ ಅದಾಳ ನೀಲವ್ವ. ಮದಿವ್ಯಾಗ ಅಳಿಯಾಗ ಬಂಗಾರ ಕೊಟ್ಟಿಲ್ಲಂತ ಸಿಟ್ಟ ಬಂದೈತಿ ಆಕೀಗೆ. ನಿಮ್ಮಪ್ಪ ಸತ್ತು ಪಾರಾದ. ನನ್ನ ಕೊಳ್ಳಿಗೆ ಉರಲು ಹಾಕಿ ಹ್ಯಾದಾ ಅಂತ ಬರಲು ತೊಗೊಂಡ ಬಡ್ಯಾಕ ಹತ್ತಿದ್ಲು ಅವ್ವ. ಮೈ ತುಂಬ ಬಾರ ಮೂಡಿದ್ವು. ಕೈ ಸೋತು ಸಾಕಾಗಿ ಬರಲು ಚೆಲ್ಲಿ ಭೋರಂತ ಅಳಾಕ ಹತ್ತಿದ್ಲು. ನಾ ಆಗಲೇ ಹನ್ನೆಡ್ಡ ವರ್ಸದಾಕಿ, ಇವತ್ತೋ ನಾಳ್ಯೋ ದೊಡ್ಡಾಕಿ ಆಗಾಕಿ ಎಲ್ಲಾ ತಿಳೀತಿತ್ತು. ನನ್ನ ತೆಪ್ಪು ಗೊತ್ತಾತು. ಅವ್ವನ ತೆಕ್ಕಿ ಬಿದ್ದು ಹೇಳಿದೆ. 'ಅವ್ವಾ ಅಳಬ್ಯಾಡಾ ನಾ ದುಡ್ಯಾಕ ಹೊಕ್ಕೇನಿ ಇಟ್ಟಂಗಿ ಭಟ್ಟಿಗೆ, ದಿನಾ ಹತ್ತು ರೂಪಾಯಿ ಕೊಡ್ತಾರ. ಅದರಾಗ ಮತ್ತ ಗುಳದಾಳಿ ಮಾಡ್ಸೂವಂತೆ. ಅಳಬ್ಯಾಡಾ' ಅಂತ.

ಇಟ್ಟಂಗಿ ಹೊರತಿದ್ದೆ. ಅರಲು ಕೊಡುತ್ತಿದ್ದೆ. ಅಂಗೈಯಾಗ ನೀರಗುಳ್ಳಿ ಎದ್ದು ಒಡದ್ವು. ರೊಟ್ಟೀ ಬಡಿಯೂ ಮುಂದ ಝುಳಕ್ಕ ಭಗಾ ಭಗಾ ಉರೀತಿತ್ತು. ಕಣ್ಣಾಗ ನೀರ ಇಳೀತಿತ್ತು. ರೊಕ್ಕ ಕೂಡಾಕ ಹತ್ತಿತ್ತು. ಒಂದ ದಿನಾ ದೊಡ್ಡಾಕಿ ಆದೆ. ಕೆಲಸಾ ಮಾಡೂ ಮುಂದ ತಿಪ್ಪವ್ವ ಹೇಳಿದ್ಲು 'ನಾ ಎಲ್ಲಾ ಮೇಸ್ತ್ರಿಗ ಹೇಳ್ತೀನಿ. ನೀ ಮನೀಗೆ ಹೋಗ. ಯಾರ್ನೂ ಮುಟ್ಟಬ್ಯಾಡಾ' ಅಂತ. ಕುಂದ್ರಸೂದು, ಆರತಿ, ಉಡಿ ತುಂಬೂದು ಹಸೀ ಮೈ ಅಂತ ಹೇಳಿ ಅವ್ವ ಹೊರಗs ಬಿಡಲಿಲ್ಲಾ. ನಿಮ್ಮೂರಿಗೆ ಸುದ್ದೀ ಕಳಿಸಿದ್ಲು ಅವ್ವ. ಅತ್ತಿ ಸೆಟಗೊಂಡು ತಾನೂ ಬರಲಿಲ್ಲಾ. ನಿನ್ನೂ ಕಳಿಸಲಿಲ್ಲಾ. ನಿಮ್ಮ ಚಿಗವ್ವನ ಸೊಸಿ ಕೈಯಾಗ ಒಂದು ಸುಮಾರ ಪತ್ತಲಾ, ಕೊಬ್ಬರಿಕಾರಾ ಕಳಿಸಿದ್ಲು. ಅವ್ವ ಗಿಲೀಟಿನ ತಾಳಿ ನನ ಕೊಳ್ಳಾಗ ಹಾಕಿ ಆರತಿ ಮಾಡಿದ್ಲು ಹುಳುಕು ಯಾರಿಗೂ ತಿಳೀಲಿಲ್ಲ ಅಂತ ನಮಗೂ ಸಮಾಧಾನ ಆಗಿತ್ತು. ಕೂಡಿದ ರೊಕ್ಕ ಎಲ್ಲಾ ಈ ಕಾರೇಕ ಖರ್ಚಾಗಿದ್ವು. ತಿಂಗಳ ಬಿಟ್ಟ, ನಾ ಮತ್ತ ಇಟ್ಟಂಗಿ ಕೆಲಸಕ್ಕೆ ಹೋಗಾಕ ಹತ್ತಿದೆ....

'ಮುಂದ'? ಎನ್ನುವಂತೆ ಕಣ್ಣೆತ್ತಿ ಅವಳತ್ತ ನೋಡಿದ ಮಲ್ಲಣ್ಣ.

ಕೆಲಸಾ ಕೊಡೂ ಮೇಸ್ತ್ರಿ ಒಂದಿನಾ ಎಲ್ಲಾರೂ ಹ್ವಾದ ಮ್ಯಾಲೆ ನನ್ನ ಹಿಡಕೊಂಡಾ. ಯಾರಿಗರೆ ಹೇಳಿದರೆ ಕೆಲಸದಿಂದ ತಗೀತೀನಿ ಅಂತ ಹೆದರಿಸಿದಾ. ಆ ವಾರಾ ಕೂಲಿ ಜೋಡಿ ಹತ್ತು ರೂಪಾಯಿ ಹೆಚ್ಚ ಕೊಟ್ಟಾ. ಕರೆದಾಗೆಲ್ಲಾ ಬರಬೇಕು ಅಂತ ಕರಾರ ಹಾಕಿದಾ. ಅವ್ವ ಬಯ್ತಾಳ ಅಂತ ಅಕೀ ಮುಂದ ಸುಳ್ಳ ಹೇಳಿದೆ. ಒಂದಿನಾ ನಾ ವಾಂತಿ ಮಾಡಿಕೊಂಡಾಗ ಗುಟ್ಟು ಹೊರಬಿತ್ತು. ನನ್ನ ಬಯ್ಯಲಿಲ್ಲಾ, ಬಡೀಲಿಲ್ಲಾ, ದರಾದರಾ ಎಳದು ಮನೀ ಬಿಟ್ಟು ಹೊರಗ ನುಗಿಸಿದ್ಲು. ಬಾಗಿಲಾ ಬಡಕೊಂಡ್ಲು. "ಹಾದರಗಿತ್ತಿ, ಮಂದ್ಯಾಗ ನನ ಮೂಗ ಕೊಯ್ದಿಟ್ಟಿ, ಎಲ್ಕರ ಸಾಯ ಹೋಗ. ನನ್ನ ಮನ್ಯಾಗ ಕಾಲ ಹಾಕಬ್ಯಾಡಾ ಅಂತ ಚೀರಿಕೊಂಡ್ಲು. ಗುಳದಾಳಿ ಕೊಳ್ಳಬೇಕು ಗಂಡನ ಮನೀಗೆ ಹೋಗಬೇಕು ಅನ್ನೂ ಆಸೇಕ ಬಿದ್ದು ಹಾಳಾದೆ ಅಂತ ಅತ್ತರೂ ಅವ್ವಗ ದಯಾ ಬರಲಿಲ್ಲ. ಎರಡ ದಿನಾ ಉಪಾಸ ಬಿದ್ದು ಎದ್ದು ಎತ್ಲಾಗೋ ಹೊಂಟಿದ್ದೆ, ಕಾಲು ಸೋಲೂತನಾ ನಡೆದೆ. ತಲೀ ತಿರಗತಿತ್ತು. ಕಣ್ಣಿಗೆ ಕತ್ತಲ ಬಂದ ಬಿದ್ದಬಿಟ್ಟೆ. ಎಚ್ಚರಾದಾಗ ರಂಗಪ್ಪ ನೀರ ಬಡೀತಿದ್ದಾ. ಸೀರೆಲ್ಲ ರಗತ ಆಗಿತ್ತು. ಗುಲಾಬಿ ಹೂ ಬೆಳಸೋ ಚಿನ್ನಿ ರೋಜಿ ಆದೆ...."

ಎಷ್ಟೋ ಹೊತ್ತು ಸುಮ್ಮನಿದ್ದ ಮಲ್ಲಣ್ಣ "ಗುಳದಾಳಿ ಕಳಕೊಂಡರ ಏನಾತು ಚಿನ್ನಿ ನನಗ ಒಂದ ಮಾತು ಹೇಳಿದ್ದರ....."

"ಹ್ಯಾಂಗ ಹೇಳ್ಲಿ, ನೀ ಇನ್ನೂ ಸಣ್ಣಾಂವಾ. ಅವ್ವನ ಮಾತ ಕೇಳಿ ನಮ್ಮೂರ ಕಡೆ ಹಾಯಲಿಲ್ಲ. ನಿಮ್ಮವ್ವ ಇರೂತನಕಾ ಬರಿಗೈಲೆ ನಾ ಅತ್ತೀ ಮನೀಗೆ ಬರೂದರ ಹ್ಯಾಂಗ?"

"ನಿನ್ನ ಹೇಣ್ತಿ ಹಾದರಾ ಮಾಡಿ ಯಾರಿಗೋ ಬಸರಾಗಿ ಊರ ಬಿಟ್ಟು, ಅವನ ಹಿಂದ ಓಡಿ ಹೋಗ್ಯಾಳ ಅಂತ ಅವ್ವ ಹೇಳಿದಾಗ ನನಗ ಖರೇನ ನಿನ್ನ ಕಡದು ತುಂಡು ಮಾಡ್ಬೇಕ ಅನ್ನೂವಷ್ಟ ಸಿಟ್ಟು ಬಂದಿತ್ತು. ನಾ ಎಷ್ಟ ಪಿರೀತಿ ಮಾಡ್ತಿದ್ದೆ ನಿನ್ನ. ಅದಽ ಸಿಟ್ಟಿನ್ಯಾಗ ಬ್ಯಾರೆ ಲಗ್ನಾದೆ."

"ನಾ ಇನ್ನೂ ನಿನ್ನಽ ಪಿರೀತಿ ಮಾಡ್ತೀನಿ. ಅದಕ್ಕಽ ನಿನ್ನೆ ರೊಕ್ಕ ಹಿಡೀಲಿಲ್ಲ. ನಾ ನಿನ್ನ ಹೇಣ್ತಿ, ಮಾಡಿಕೊಂಡ ಹೇಣ್ತಿ ಕೂಡ ಮಕ್ಕೊಂಡರ ಗಂಡನ ರೊಕ್ಕಾ ಇಸಕೋಬೇಕೇನ? ನಿನಗ ಇದೆಲ್ಲಾ ಹೇಳಬಾರದಂತ ಮಾಡಿದ್ದೆ. ನಿನ್ನೆ ರಾತ್ರಿ ಕತ್ತಲಿತ್ತು, ನಾ ಯಾರಂತ ಗೊತ್ತಾಗಲಿಲ್ಲ ನಿನಗ. ನಿನ್ನ ಹೇಣ್ತಿ ಸತ್ತಾಳ ಅಂದಿ. ನೀ ಬೇಕಾದಾಗ ನನ್ನಲ್ಲೆ ಬಂದು ಹೋಗು." ಸುಮ್ಮನೆ ಎದ್ದು ಹೋದ ಮಲ್ಲಣ್ಣನ ಹರವಾದ ಬೆನ್ನನ್ನೇ ದಿಟ್ಟಿಸುತ್ತಿದ್ದಳು ರೋಜಿ. .... ಅಲ್ಲಲ್ಲ ಚಿನ್ನಿ.

ಒಂದು ವಾರದಲ್ಲಿಯೇ ಮತ್ತೆ ಬಂದ ಮಲ್ಲಣ್ಣ. ಚಿನ್ನಿ ಪಾರ್ಕಿಲ್ಲಿಯ ಹೂವುಗಳ ಜೊತೆಗೇ ಹೂವಾಗಿದ್ದಳು.

"ನಿನ್ನ ನೋಡಿದಾಗಿನಿಂದ ನನ್ನ ಜೀವಕ ಸಮಾಧಾನ ಇಲ್ಲ ಚೆನ್ನಿ. ನಿಂದೇನೂ ತಪ್ಪಿಲ್ಲ. ಕಷ್ಟಾ ಉಂಡೀದಿ. ಅದಕ್ಕಽ ನಾ ಎಲ್ಲಾ ವಿಚಾರ ಮಾಡೀನಿ....." ಅವಳ ಹೃದಯದಲ್ಲಿ ಧಬಧಬೆ ಸಪ್ಪಳ ಜೋರು ಜೋರಾಗಿ ಕಿವಿ ಗಡಚಿಕ್ಕಿದವು.

"ಯಾಕ ಚಿನ್ನಿ ಮಾತಾಡವೊಲ್ಲಿ? ನಾನ ನಿನ್ನ ಕರಕೊಂಡ ಹೋಗಾಕ ಬಂದೀನಿ. ನನ್ನ ಹೇಣ್ತಿ ನೀನು. ನನ್ನ ಮನೀಗೆ ಬರ್ತೀ ಇಲ್ಲೋ?"

ಉಡಿಯಲ್ಲಿಯ ತಾಳಿ ತೆಗೆದ ಚಿನ್ನಿ ಮಲ್ಲಣ್ಣನ ಕೈಗೆ ಕೊಟ್ಟು ಕೊರಳು ಒಡ್ಡಿದಳು.

***

■■

# ದೇವಿ

"ಪಾರಕ್ಕ ಹಾಸಿಗಿ ಹಿಡಿದಾಳಂತ" "ಪಾರವ್ವನ ಕೈಕಾಲು ಬಾತಾವಂತ" "ಪಾರಿ ಇನ್ನೇನ ಉಳಿಯಾಂಗ ಕಾಣೂದಿಲ್ಲಂತ" ಸುದ್ದಿ ಚಿತ್ರ-ವಿಚಿತ್ರ ರೂಪ ತಳೆದು ಮಣ್ಣೂರಿನ ತುಂಬ ಸುಳಿದಾಡಿತು. ಕಣ್ಣಿಂದ ನೋಡಿದವರಿಗಿಂತ ಹೆಚ್ಚಾಗಿ ವರ್ಣರಂಜಿತವಾಗಿ ಬಣ್ಣಿಸಿ ಮಾತನಾಡಿದರು. ಊರಿನ ಗಂಡು ಹೆಣ್ಣು-ಮಕ್ಕಳೆಲ್ಲ "ಮನಿಷ್ಯಾ ಅಂದಮ್ಯಾಲೆ ಜಡ್ದು ಜಾಪತ್ರಿ ಬರೂವ, ಹುಟ್ಟಿದವರು ಸಾಯೂವವರ. ಆದರ ಪಾರವ್ವಗ ಜಡ್ಡಾತು ಅಂದರ ನಂಬಾಕ ಆಗಾಕಿಲ್ಲ" ಎಂದು ಒಳಗೇ ತಳಮಳಿಸಿದವರು ಕೆಲವರು. "ಈಟ ದಿನಾ ಮೆರದಾಡಿ ಕಡೀಕ ಬಕಬಾರ್ಲೆ ಬಿದ್ಲಲ್ಲ" ಎಂದು ಒಳಗೊಳಗೇ ಹಿಗ್ಗಿ ಹಿರೇಕಾಯಾಗಿ ಹಾಲು ಕುಡಿದವರೂ ಹಲವರಿದ್ದರು ಮಣ್ಣೂರಿನಲ್ಲಿ.

"ಬರೇ ಮಾತಾಡ್ತೀರಲ್ರೇ, ಪರದೇಸಿ ಮಗಳು. ಗಂಡನ್ನ ಕಳಕೊಂಡು ಗೇಣು-ಚೋಟು ಮಕ್ಕಳ್ನ ಕಟಿಗೊಂಡು ಗಂಡಸಿನಾಂಗ ಹೊಲದಾಗ ಮನ್ಯಾಗ ದುಡದು ಸತ್ಲು ಪಾರಿ. ಮಣ್ಣಿಗೆ ಹೋಗ್ರಿ, ನನ್ನೂ ಯಾರರೇ ಬಗಲಾಗ ಕೈ ಹಾಕಿ ಕರಕೊಂಡು ಹ್ವಾದರ ಹಿಡಿ ಮಣ್ಣು ಹಾಕಿ ಬಂದೇನು" ಸಂಕಟದಿಂದ ಕಣ್ಣೀರು ಹಾಕಿತು. ಮುದುಕಿ ಕಾಳವ್ವ, ಪಾರವ್ವನ ಗಂಡ ಮಲ್ಲಪ್ಪನ ಸೋದರತ್ತಿ.

ಕಾಳವ್ವ ಮೊಮ್ಮಗ ಕೆಂಚನನ್ನು ಹೊಲಕ್ಕೆ ಓಡಿಸಿದಳು. ಅವನು ತಂದ ಸುದ್ದಿ ಮಾತ್ರ ತೀರಾ ಬೇರೆಯೇ ಇತ್ತು. ಪಾರವ್ವ ಸತ್ತಿರಲಿಲ್ಲ. ಜ್ವರದಿಂದ ಹಾಸಿಗೆ ಹಿಡಿದದ್ದು ನಿಜ.

"ದೇವಿ ನಮ್ಮವ್ವಾ, ನೀ ಖರೇನ ಇದ್ದರ ಪಾರೀನ ಒಯ್ಯಬ್ಯಾಡವ್ವ ಮಕ್ಕಳು ದಿಕ್ಕೇಡಿ ಆಕ್ಯಾವು. ಇನ್ನೊಂದು ನಾಕೊಪ್ಪತ್ತು ಆಯುಸ್ಯಾ ಹಾಸು ಆಕೀಗೆ" ಗಲ್ಲ ಗಲ್ಲ ಬಡಿದುಕೊಂಡು ಮೇಲೆ ಕೈ ಎತ್ತಿ ಮುಗಿದಳು ಕಾಳವ್ವ.

ಪಾರವ್ವನ ಮೈದುನ ಫಕ್ಕೀರ ಹಾರಾಡಿದ. "ದಿಕ್ಕೇಡಿ ಯಾಕ ಆಗ್ತಾಳ್ಳು, ಸಾಯಲಿ ಆ ರಂಡಿ. ಆಕಿ ಇದ್ದ ಹೊಲ ನಮಗs ಬರಬೇಕ, ರಟ್ಟೀ ಮುರದು ದುಡದೇನಿ ನಾ ಆ ಹೊಲದಾಗ."

"ಪಾರವ್ವ ನಿಮ್ಮಣ್ಣನ ಹೇಣ್ತಿ. ಅದರಾಗ ದ್ಯಾಮವ್ವನ ಪೂಜಾರಿ. ಆಕೀ ಮೈಯಾಗ ದೇವಿ ಬರತಾಳ. ನೀ ಹಾಂಗೆಲ್ಲಾ ಬೈದರ ನಿನ ಮನೀ ಉಜ್ಜಳ ಆಗಾಕಿಲ್ಲ. ತಪ್ಪಾತು ಅನ್ನು" ಎಂದ ನೆರೆಮನೆ ಮುದುಕಿ ಹಾಲವ್ವನ ಸೊಸೆಗೆ ಗಂಡುಮಗು ಹುಟ್ಟಿದ್ದು ಪಾರವ್ವನ ಆಶೀರ್ವಾದದಿಂದ. ಕೂಡಿದ ಜನರೂ ಛೀ ಹಾಕಿದ್ದರಿಂದ ಫಕ್ಕೀರ ಹಲ್ಲು ಕಡಿಯುತ್ತ ಸುಮ್ಮನಾದ. ಅವನ ಹೆಂಡತಿ ನೀಲವ್ವ ಕಂಬದ ಮರೆಯಲ್ಲಿ ಬೆರಳು ಲಟಿಗೆ ಮುರಿದು ಶಾಪ ಹಾಕಿದಳು. "ಈಕಿ ಬಾಯಾಗ ಮಣ್ಣು ಬೀಳಲಿ."

ಪಾರವ್ವನೇನು ಸಾಹಿತಿ-ಕಲಾವಿದೆಯಲ್ಲ. ಮಂತ್ರಿ-ಶಾಸಕಳೂ ಅಲ್ಲ. ಮೂರು ಮಕ್ಕಳ ತಾಯಿ ವಿಧವೆ, ಪಾರವ್ವ. ಮಣ್ಣೂರಿನ ಜನ ಈ ತರದ ವಿವಿಧ ಪ್ರತಿಕ್ರಿಯೆಗಳಿಗೆ ಕಾರಣವಾದದ್ದು ಸೋಜಿಗವಾಗಿರಬೇಕಲ್ಲವೆ ? ವಾಚಕ ಮಹಾಶಯರೇ, ಹಾಗಾದರೆ ಅವಳ ಪೂರ್ವೇತಿಹಾಸ ಸ್ವಲ್ಪ ಕೇಳಿ:

ಮಣ್ಣೂರಿನ ಹತ್ತಿರದ ಹಳ್ಳಿ ಮಾಸೂರಿನಲ್ಲಿ ಬಡ ರೈತ ಕುಟುಂಬದಲ್ಲಿ ಪಾರವ್ವ ಹುಟ್ಟಿದಳು. ಯಾವ ಕೆಟ್ಟ ಗಳಿಗೆಯಲ್ಲಿ ಹುಟ್ಟಿದಳೋ ಅಲ್ಲಿಂದಲೇ ಅವಳ ಕಷ್ಟ ಶುರುವಾಯಿತು. ಹುಟ್ಟಿದ ತಿಂಗಳಲ್ಲಿ ಹೆತ್ತ ತಾಯಿ ಸತ್ತಳು. ಕರಿ ಹೆಗ್ಗಣದ ಮರಿ ಹಡದಾಳು' ಎನ್ನುವ ಹರಲಿ ಕೇಳಲಾರದೆ ಕಣ್ಣು ಮುಚ್ಚಿಕೊಂಡ ಪುಣ್ಯವಂತೆ ಅವಳು. ಮನೆಯಲ್ಲಿ ಒಲೆ ಹೊತ್ತಬೇಕಲ್ಲ! ಅಪ್ಪನಿಗೆ ಮತ್ತೊಬ್ಬ ಹೆಂಡತಿ ಬಂದಳು. ಕರಿ ಪಾರವ್ವನಿಗೆ ತಂಗಿ ತಮ್ಮಂದಿರು ಬಂದರು. ಆರು ವರುಷವಾದೊಡನೆ ಎಮ್ಮೆ ಕಾಯಲು, ಎಂಟು ವರುಷವಾದೊಡನೆ ರೊಟ್ಟೀ ಬಡಿಯಲು ಕಲಿತ ಪಾರವ್ವ

ಕೆಲಸದಲ್ಲಿ ನುರಿತದ್ದಕ್ಕೆ ಮಲ ಅವ್ವನಿಗೆ ಋಣಿಯಾಗಿರಲೇಬೇಕು. ಹೊಟ್ಟೆ ತುಂಬ ರೊಟ್ಟಿ ಇಲ್ಲದೆ ಹೊಲದಲ್ಲಿ, ಮನೆಯಲ್ಲಿ ಯಂತ್ರದಂತೆ ದುಡಿಯುವ ಕರೀಕೊಡ್ಡದಂಥ ಪಾರವ್ವನೂ ಒಂದು ದಿನ ಹೆಣ್ಣಾದಳು. 'ಅವ್ವ ಸತ್ತರೂ ಸೋದರಮಾವನಿರಬೇಕು' ನಿಜ. ಆದರೆ ಪಾರವ್ವನ ಪಾಲಿಗೆ ಅವನು ಇದ್ದೂ ಇಲ್ಲದಂತಿದ್ದ. ಹಚ್ಚಿಕೊಂಡರೆ ಎಲ್ಲಿ ಹೆಗಲ ಮೇಲೆ ಏರುವಳೋ ಎನ್ನುವ ಹೆದರಿಕೆಯಿಂದ ಇಪ್ಪತ್ತು ರೂಪಾಯಿ ಪತ್ತಲ, ಹತ್ತು ರೂಪಾಯಿ ಹಿಟ್ಟಕ್ಕಿಗೆ ಕೊಟ್ಟು ಕೈ ತೊಳೆದುಕೊಂಡ. ಅತ್ತೆ-ಮಾವ ತಿರುಗಿ ಇತ್ತ ನೋಡಲಿಲ್ಲ. ಮಗಳ ಮದುವೆ ಮಾಡುವ ಚಿಂತೆಯಿಂದ ತಲೆಗೆ ಕೈಕೊಟ್ಟು ಕುಳಿತ ಗಂಡನಿಗೆ ಉಪಾಯ ತೋರಿದಳು ಪಾರವ್ವನ ಮಲವ್ವ.

"ಮಣ್ಣೂರಿಗೆ ಹೋಗಿ ಬರೂಣ. ಅಲ್ಲೇ ನಮ್ಮ ದೊಡ್ಡಪ್ಪನ ಮಕ್ಕಳು ಅದಾರ. ದೊಡ್ಡಾಂವನ ಹೇಣ್ತಿ ಸತ್ತು ನಾಕ ವರ್ಷ ಆದ್ವು. ಎಡ್ಡ ಹೆಣ್ಣುಮಕ್ಕಳು ಮದುವಿ ಆಗಿ ಹೋಗ್ಯಾರ, ಹೊಲ ಮನಿ ಐತಿ, ಮಲ್ಲಣ್ಣಗ ಪಾರೀನ ಕೊಡೂಣು. ನಾ ಅವಂಗೆಲ್ಲಾ ಹೇಳ್ತೀನಿ, ಇಲ್ಲ ಅನ್ನಾಂಗಿಲ್ಲ."

ದಿನಕ್ಕೆ ಇಪ್ಪತ್ತು ರೊಟ್ಟಿ ತಿನ್ನುವ ಭಾವನಿಗೆ ರೊಟ್ಟಿ ಬಡಿದು ಬಡಿದು ಬೇಸತ್ತ ತಮ್ಮಂದಿರ ಹೆಂಡಂದಿರು ಸುದ್ದಿ ಕೇಳಿ ಖುಷಿ ಪಟ್ಟರು. ಗಂಡು ಮಕ್ಕಳಿಲ್ಲದ ಅಣ್ಣನ ಪಾಲಿಗೆ ಹೊಲ ನುಂಗಲು ಜೊಲ್ಲು ಸುರಿಸುತ್ತಿದ್ದ ಫಕ್ಕೀರ ಮಾತ್ರ ಅಡ್ಡಗಾಲು ಹಾಕಿದ. ಮುದುಕಗೆ ಈಗೆಂತ ಮದುವೆ ಎಂದು ಮಂದೀ ಎದುರು ಕೂಗಾಡಿದ. ಚೆನ್ನಾಗಿ ಕಿವಿ ತುಂಬಿಸಿಕೊಂಡಿದ್ದ ಮಲ್ಲಣ್ಣನಿಗೆ ಬಾಸಿಂಗ ಬಲ ಕೂಡಿ ಬಂದಿತ್ತು. ಪಾರವ್ವ ಮದಲಗತ್ತಿಯಾಗಿ ಮಣ್ಣೂರಿಗೆ ಬಂದಾಗ ಹದಿನಾಲ್ಕು ವರ್ಷದ ಹುಡುಗಿ.

ಮಂಚ, ಹೂವಿನ ಸರ, ಹಾಲು - ಹಣ್ಣು ಇಲ್ಲದೆ ಪಾರವ್ವನ ಪ್ರಥಮ ರಾತ್ರಿ ಬೇರೊಂದು ವಿಶಿಷ್ಟ ರೀತಿಯಲ್ಲಿಯೇ ನಡೆಯಿತು. ತಡಿಕೆ ಮರೆ ಮಾಡಿದ ಪಡಸಾಲೆಯಲ್ಲಿ ನಿದ್ದೆ ಬಾರದೆ ಹೊರಳಾಡಿದ ಪಾರವ್ವನಿಗೆ ಯಾವಾಗ ಜಂಪು ಹತ್ತಿತ್ತೊ ತಿಳಿಯದು. ಸರಿ ರಾತ್ರಿಯ ಹೊತ್ತು ಬೆನ್ನ ಮೇಲೊಂದು ಒದೆ ಬಿತ್ತು. ಅಂಗಾತ ಬಿದ್ದಳು ಪಾರವ್ವ. ಚೀರಬೇಕೆಂದರೂ ಭಯ ತುಂಬಿದ ದನಿ ಏಳಲಿಲ್ಲ. ಕುಡಿದು ಬಂದ ಮಲ್ಲಪ್ಪ ಅವಳ ಮೇಲೆ ಬಿದ್ದ. ರಾಕ್ಷಸನಂತಹ ಆಳು. ಜೀವ ಬಾಯಿಗೆ ಬಂದಿತು. ಒದ್ದಾಡಿ ಕೊಸರಾಡಿ ಜೋಲಿ ತಪ್ಪುತ್ತಿದ್ದ ಗಂಡನನ್ನು ತಳ್ಳಿ ಹೊರಗೆ ಓಡಿದಳು ಏನೂ ಅರಿಯದ ಪಾರವ್ವ. ಅಲ್ಲಿ ಕೆಮ್ಮುತ್ತ ಮಲಗಿದ್ದ ಕಾಳವ್ವತ್ತಿಯ ಮಗ್ಗಲು ಸೇರಿದಳು. ಹೆದರಿ ನಡುಗುತ್ತಿದ್ದ ಬಾಲೆಯನ್ನು ಅವುಚಿ ಹಿಡಿದು ಕೊಂಡಳು ಮುದುಕಿ. ತನ್ನ ಮದುವೆಯಾದದ್ದೇ ಮರತುಬಿಟ್ಟಂತೆ ಮಲ್ಲಪ್ಪ ಒಳಗೆ ನಿದ್ದೆ ಮಾಡಿದ್ದ. ಮರುದಿನ ಮನೆಮಂದಿಯೆಲ್ಲ ಛೀ ಹಾಕಿದರು, ಗಂಡನ ಮಗ್ಗಲು ಬಿಟ್ಟು ಓಡಿದ್ದಕ್ಕೆ. ಮಲ್ಲಪ್ಪನಂತೂ ಇವತ್ತು ರಾತ್ರಿ ಓಡಿದರೆ ಎಲುಬು ಮುರಿಯುತ್ತೇನೆ ಎಂದು ಗುದ್ದಿ ಹೇಳಿದ. ಹೀಗೆ ಶುರುವಾದ ಅವಳ ದಾಂಪತ್ಯ ಹುಲುಸಾದ ಫಲ ಕೊಟ್ಟಿತು. ನಾಲ್ಕು ವರ್ಷಗಳಲ್ಲಿ ಮೂರು ಮಕ್ಕಳ ತಾಯಾದಳು. ಕೊಡ್ಡದಂತೆ ಗಟ್ಟಿ ಮುಟ್ಟಾಗಿದ್ದ ಪಾರವ್ವ ಹಂಚೀಕಡ್ಡೀಯಾದಳು. ಹಗಲು ಮನೆ ಮಂದಿಯ ಕೈಯಲ್ಲಿ ರಾತ್ರಿ ಗಂಡನ ಕೈಯಲ್ಲಿ ಅವಳು ಅರೆಜೀವವಾದಳು. ಸತ್ತು ಹೋಗಬೇಕೆಂದು ಒಮ್ಮೊಮ್ಮೆ ಗೋಳಿಟ್ಟಾಗ ಮುತ್ತಿನಂತಹ ಮಕ್ಕಳನ್ನು ಮೊದಲು ಕೊಂದು ಆಮೇಲೆ ಸಾಯಿ ಎನ್ನುವಳು ಕಾಳವ್ವತ್ತಿ. ಹೆಂಡತಿಯನ್ನು ಹೊಲದಲ್ಲಿ ದುಡಿಸುತ್ತ, ಸಿಕ್ಕಷ್ಟು ವೇಳೆಯಲ್ಲೂ ಕುಡಿತವನ್ನೇ ಕಸಬು ಮಾಡಿಕೊಂಡ ಮಲ್ಲಪ್ಪ ಹೊಟ್ಟೆ ನೋವಿನಿಂದ ನರಳಿ ನರಳಿ ಒಂದು ದಿನ ಸತ್ತು ಹೋದ. ರಾತ್ರಿಯ ನರಕದಿಂದ ಪಾರವ್ವ ಪಾರಾದಳು. ಆದರೆ ಮೈದುನ ಫಕ್ಕೀರನ ಹೊಟ್ಟೆಕಿಚ್ಚು ಅವಳನ್ನು ಇಡಿಯಾಗಿ ನುಂಗಲು ಹವಣಿಸುತ್ತಿತ್ತು.

ಮತ್ತೊಂದು ರಾತ್ರಿ ಪಾರವ್ವ ಒಳಗೆ ಮಲಗಿದ್ದ ಮಕ್ಕಳನ್ನೆಲ್ಲ ಬಿಟ್ಟು ಓಡಿಬಂದು ಕಾಳವ್ವತ್ತಿಯ ಮಗ್ಗಲು ಸೇರಿದಳು. ಫಕ್ಕೀರ ಕುಡಿದು ಬಂದು ಅವಳನ್ನು ಹಿಡಿದುಕೊಂಡಿದ್ದ. ಚೆಲುವೆ ಹೆಂಡತಿ ಮನೆಯಲ್ಲಿದ್ದರೂ ಮೈದುನ ತನ್ನ ಮೈಮೇಲೆ ಕೈ ಹಾಕಲು ಬಂದ ಕಾರಣ ಪಾರವ್ವನಿಗೆ ಸ್ಪಷ್ಟವಾಗಿ ಹೊಳೆದಿತ್ತು. "ಯತ್ತೀs, ನಾಳೆ ಹೊಂತೂಟ್ಲೆ

ನಾ ಮಕ್ಕಳನ್ನ ಕಟಿಗೊಂಡು ಹೊಲಕ್ಕೆ ಹೊಕ್ಕೀನಿ. ಈ ಮನ್ಯಾಗ ಕಾಲು ಹಾಕಂಗಿಲ್ಲ. ಈ ಮನೀ ಋಣಾ ಮುಗೀತು". ಕಂಠ ತುಂಬಿದರೂ ಅಳಲಿಲ್ಲ ಪಾರವ್ವ.

ಊರ ಹಿರಿಯರ ಸಮಕ್ಷಮ ಪಾರವ್ವ ಮಕ್ಕಳ ಜೊತೆಗೆ ಹೊಲದ ಗುಡಿಸಲಲ್ಲಿ ಇರುವ ಏರ್ಪಾಡು ಮಾಡಿದಳು ಕಾಳವ್ವ. ಆ ಹೊಲ ಮಲ್ಲಪ್ಪನ ಪಾಲಿಗೇ ಬಂದದ್ದು. ಕಾಳವ್ವತ್ತಿ ಅವಳ ಜೊತೆಗಿದ್ದು ಧೈರ್ಯಕೊಟ್ಟಳು.

ಚಿಳ್ಳೆ-ಪಿಳ್ಳೆ ಮಕ್ಕಳು-ಒಬ್ಬಂಟಿಯಾಗಿ ಹೊಲದಲ್ಲಿ ಏಗಲಾರದೆ ಹಳ್ಳಿಯಿಂದ ಮಲತಮ್ಮನನ್ನು ತಂದಿಟ್ಟುಕೊಂಡಳು ಪಾರವ್ವ. ಅವಳ ಈ ಸ್ವಾತಂತ್ರ್ಯಕ್ಕೂ ಬೆಲೆ ತೆರಬೇಕಾಯಿತು. ಮನೆಯಲ್ಲಿ ಮೈದುನನೊಬ್ಬನದೇ ಕಾಟವಾದರೆ ಹೊಲದಲ್ಲಿ ಹರೆಯದ ಗಂಡಸರೆಲ್ಲ ಹಣಿಕಿ ಹಾಕುವವರೇ. ಒಂಟಿ ಗುಡಿಸಲು ಹಗಲೆಲ್ಲ ದುಡಿದು ಹೆಣವಾದರೂ ರಾತ್ರಿ ಕಣ್ಣು ಮುಚ್ಚಲೂ ಹೆದರಿಕೆ. ಕೆಲವೊಂದು ಪ್ರಸಂಗದಲ್ಲಿ ಹತ್ತಿರ ಬಂದವರನ್ನು ಕುಡಗೋಲು ತೋರಿಸಿ ಓಡಿಸಿದ್ದಳು.

ಇಷ್ಟು ವರ್ಷಗಳ ತನ್ನ ಬದುಕಿನಲ್ಲಿ ದೇವರು-ದಿಂಡರ ಉಸಾಬರಿಗೆ ಹೋದವಳಲ್ಲ ಪಾರವ್ವ. ಅದಕ್ಕೆಲ್ಲ ಅವಳಿಗೆ ವೇಳೆಯಾದರೂ ಎಲ್ಲಿತ್ತು ? ನಾಲ್ಕಾರು ತುತ್ತಿನ ಚೀಲಗಳನ್ನು ತುಂಬುವಷ್ಟರಲ್ಲಿಯೇ ಸೂರ್ಯ ಮೂಡಿ ಮುಳುಗುತ್ತಿದ್ದ. ಆ ವರುಷ ಮಳೆ ಸರಿಯಾಗಿ ಆಗದೆ ವರುಷ ಪೂರ್ತಿ ಹೊಟ್ಟೆ ತುಂಬುವಷ್ಟು ಬೆಳೆಯೂ ಕೈಗೆ ಹತ್ತಿರಲಿಲ್ಲ. ಗುಡಿ ಕಂಡಲ್ಲಿ ತಲೆ ಬಾಗಿ ಕೈ ಮುಗಿದು ತನ್ನ ಕೆಲಸಕ್ಕೆ ಸಾಗುವ ಪಾರವ್ವನನ್ನು ಕಂಡು ದೇವರಿಗೆ ಕರುಣೆ ಬಂದಿತು. ಜಾನಪದ ಕಥೆಗಳಲ್ಲಿ ನೀವು ಕೇಳಿದ್ದೀರಲ್ಲ! ಪಾರ್ವತಿ ಪರಮೇಶ್ವರರು ಲೋಕ ಸಂಚಾರಕ್ಕಾಗಿ ಹೊರಟಿರುತ್ತಾರೆ. ಅಲ್ಲಿ ಬಡವರನ್ನು ದುಃಖಿಗಳನ್ನು ಕಾಣುತ್ತಾರೆ. ಪಾರ್ವತಿ ದೇವಿಯದು ಹೆಂಗರುಳು. 'ಸ್ವಾಮೀ ಅವರಿಗೆ ಏನಾದರೂ ಸಹಾಯ ಮಾಡಿ' ಎನ್ನುತ್ತಾಳೆ. ಧನ ಕನಕ- ವಸ್ತುಗಳು ಅವರ ಮನೆ ತುಂಬುತ್ತವೆ ಸರಿ, ಬಡವರ ದುಃಖಗಳೆಲ್ಲ ದೂರಾಗುತ್ತವೆ. ಪಾರ್ವತಿ ಪರಮೇಶ್ವರರು ಸಂತುಷ್ಟರಾಗಿ ಮುಂದಕ್ಕೆ ಹೋಗುತ್ತಾರೆ. ಆದರೆ ಇಲ್ಲಿ ಸ್ವಲ್ಪ ವ್ಯತ್ಯಾಸವಾಯಿತು. ದೇವಿ ಮುಂದೆ ಹೋಗಲಿಲ್ಲ. ಪಾರವ್ವನ ಮನೆಯಲ್ಲಿಯೇ ಕುಳಿತುಬಿಟ್ಟಳು.

ಅದು ಹೇಗೆ ಸಾಧ್ಯ ಎಂದು ಅಚ್ಚರಿಯಾಯಿತೇ ? ಹಾಗಾದರೆ ಆ ಪ್ರಸಂಗವನ್ನೂ ಕೇಳಿ: ಒಂದು ಮಂಗಳವಾರ ಸಂತೆಯ ದಿನ. ಉಪ್ಪು, ಬೆಲ್ಲ, ಚಾ ಪುಡಿ, ಎಣ್ಣೆಗಾಗಿ ಪಾರವ್ವ ನಗರಕ್ಕೆ ಹೋಗಿದ್ದಳು. ಮನೆಯಲ್ಲಿ ಅವಳ ಚಿಕ್ಕಮಗ ಒಳ್ಳೆಣ್ಣೆ ಬಾಟ್ಲಿ ಒಡೆದಿದ್ದ. ಅವನನ್ನು ಹುಣಸೇ ಬರಲಿನಿಂದ ಚೆನ್ನಾಗಿ ತದಕಿ ಪೇಟೆಗೆ ಬಂದಿದ್ದಳು. ಅಲ್ಲಲ್ಲಿ ಸುತ್ತಾಡಿ, ಚೌಕಾಶಿ ಮಾಡಿ ಮೋಡಕಾ ಬಜಾರಿನಲ್ಲಿ ಎಂಟಾಣೆಗೆ ಒಂದು ಎಣ್ಣೆಯ ಬಾಟ್ಲಿ ಕೊಂಡಳು. ಎಲ್ಲಿಯಾದರೂ ಸೀಳು ಇದೆಯೇನೋ ಪರೀಕ್ಷಿಸಲು ಆಕಾಶಕ್ಕೆ ಎತ್ತಿ ಹಿಡಿದಳು. ಅಲ್ಲಿ ಒಂದು ಮುಖ! ಅಂದರೆ ಪೂರ್ತಿ ಮುಖವಲ್ಲ- ಕಣ್ಣು, ಮೂಗು ಕಂಡವು. ಮತ್ತೆ ಮತ್ತೆ ದಿಟ್ಟಿಸಿದಳು,. ಬಾಟಲಿ ಸರಿಸಿ ಆಕಾಶ ನೋಡಿದಳು,. ಏನೂ ಇಲ್ಲ. ಸೋಜಿಗವಾಯಿತು. ಓಡುತ್ತ ಹೊಲಕ್ಕೆ ಬಂದಳು, ಕಾಳವ್ವ ಹಣಮಂತರಿಗೂ ಬಾಟಲಿಯಲ್ಲಿ ಮುಖ ಕಂಡಿತು. ಏನಿದು ? ಯಾಕೆ ಹೀಗೆ ? ಒಂದೂ ತಿಳಿಯದೆ ಪೇಚಾಡಿದರು. ಕಾಳವ್ವತ್ತಿ ಅನುಭವಸ್ಥೆ.

"ಪಾರೀs ಈ ಮಾರಿ ಎಲ್ಲೋ ನೋಡಿದಂಗ ಐತೆಲ್ಲಾ."

"ಹೌದs ಯತ್ತೀs, ನನಗೂ ಹಾಂಗ ಅನಸ್ತೈತಿ."

ಇದೇನು ಕೇಡುಗಾಲಕ್ಕೆ ಬಂತೋ ಹೇಗೆ ತಿಳಿಯವದು? ಆ ರಾತ್ರಿ ಇಬ್ಬರೂ ನಿದ್ರೆ ಮಾಡಲಿಲ್ಲ. ಬೆಳಿಗ್ಗೆ ತಂಗಳುಣ್ಣುವಾಗ ಕಾಳವ್ವ ಮೆಟ್ಟಿಬಿದ್ದಳು. ರೊಟ್ಟೀ ಕೆಳಗೆ ಇಟ್ಟವಳೇ ಓಡಿ ಹೋಗಿ ಕೈ ತೊಳದು ಮತ್ತೆ ಬಾಟಲಿ ದಿಟ್ಟಿಸಿದಳು. ಹಾಗೆಯೇ ಅವಳ ಕಣ್ಣಲ್ಲಿ ನೀರು ಹರಿಯಿತು. ಬಾಟಲಿ ಕಣ್ಣಿಗೊತ್ತಿಕೊಂಡಳು.

"ತಾಯಿ ನಮ್ಮವ್ವಾ, ನಿನ ಮಕ್ಕಳ ಸಲಹವ್ವಾ". ಬಾಯಿ ತೆರೆದು ನೋಡುತ್ತಿದ್ದ ಪಾರವ್ವನಿಗೆ 'ಪಾರೀs ನಿನ್ನ ದೈವ ತೆರೀತು, ಕಷ್ಟ ಹರೀತು ನನ ಮಗಳ ದ್ಯಾಮವ್ವ ದೇವಿ ನಿನ್ನ ಮನೀ ಬಾಗಲಕ ಬಂದಾಳ. ತೊಳದು ಇಬೂತಿ, ಕುಂಕುಮ ಹಚ್ಚಿ ಪೂಜೆ ಮಾಡು. ನಿನಗ ಎಲ್ಲಾ ಛೊಲೊ ಆಗತೈತಿ" ಎಂದಳು.

ಮೊದಲು ಕಾಳವ್ವತ್ತಿಯ ತೆಕ್ಕೆಗೆ ಬಿದ್ದು ಭೋರೆಂದು ಅತ್ತಳು ಪಾರವ್ವ. ಆಮೇಲೆ ಬಾಟಲಿಗೆ ಅಡ್ಡಬಿದ್ದಳು.

"ನಾ ನಿನ್ನ ಕೂಸು ನಮ್ಮವ್ವಾ, ಅರೀದ ಮಳ್ಳಿ, ಏನಾದ್ರೂ ತೆಪ್ಪಾದ್ರ ಹೊಟ್ಯಾಗ ಹಾಕ್ಕೋ. ದಿನಾ ನಿನ್ನ ಪೂಜಿ ಮಾಡ್ತೀನಿ." ಮಕ್ಕಳನ್ನೂ ಅಡ್ಡ ಬೀಳಿಸಿ ಬಾಟಲಿಯನ್ನು ಒಂದು ಚಿಕ್ಕ ಮಣೆಯ ಮೇಲೆ ಇಟ್ಟು ಪೂಜೆ ಮಾಡಿದಳು.

ಕಾಳವ್ವನಿಂದ ಸಮಾಚಾರ ತಿಳಿದ ಊರ ಜನ ಹಿಂಡು ಹಿಂಡಾಗಿ ಸೋಜಿಗ ನೋಡಲು ಬಂದರು. ಬಂದವರಿಗೆಲ್ಲ ಕಾಳವ್ವ ಹೇಳಿದ್ದೊಂದೇ ಮಾತು.

"ಪಾರವ್ವ ಯಾರಿಗೂ ಕೇಡು ಬಗದಾಕಿ ಅಲ್ಲಾ. ಭಾಳ ಕಷ್ಟ ಉಂಡಾಳ. ದೇವರಿಗೆ ಸರ್ತಿ ಆಗಿ ನಡಕೊಂಡಾಳ, ಅವಳ ನಡತೀಗೆ ಮೆಚ್ಚಿ ದೇವಿ ಆಕೀ ಮನೀಗೆ ಬಂದಾಳ. ಸತ್ಯುಳ್ಳವರಿಗೆ ಕಾಣತಾಳ."

ಕಾಳವ್ವನ ಮಾತು ಬಂದ ಜನರಿಗೆಲ್ಲ ಸವಾಲಾಯಿತು. ಎಲ್ಲರಿಗೂ ಬಾಟಲಿಯಲ್ಲಿ ದೇವಿಯೇ ಕಂಡಳು. ದರ್ಶನ ಮಾಡಿ ಸಾಷ್ಟಾಂಗ ಬಿದ್ದರು. ಹರಕೆ ಹೊತ್ತರು. ಕಾಣಿಕೆ ಇತ್ತರು. ಮಣ್ಣೂರು, ಮಸ್ಯಾಳ. ನಿಚ್ಚಣಕಿ, ಬಾರಿಕೊಪ್ಪ, ಮದಗ ಎಲ್ಲ ಹಳ್ಳಿಯ ಭಕ್ತರೂ ದೇವಿಗೆ ನಡೆದುಕೊಳ್ಳುತ್ತ ಪಾರವ್ವನ ಬದುಕಿಗೆ ಸಂಪತ್ತು ಸಮೃದ್ಧಿ ತುಂಬಿಕೊಟ್ಟರು. ದೇವಿಯ ಹೆಸರಿನಲ್ಲಿ ಇಷ್ಟೊಂದು ಸುಖ ಸಿಗುತ್ತಿರುವಾಗ ಪಾರವ್ವ ನೇಮ ನಿಷ್ಠೆಯಿಂದ ಪೂಜೆ ಮಾಡಿದಳು. ಉಪವಾಸ - ವ್ರತ ಮಾಡಿದಳು. ಪ್ರತಿ ಮಂಗಳವಾರ, ಹುಣ್ಣಿಮೆ, ಅಮಾವಾಸ್ಯೆಗೆ ತಲೆಸ್ನಾನ ಮಾಡಿ ವಿಭೂತಿ, ಅಂಗಾರ ಧರಿಸಿ ಕಣ್ಣು ಮುಚ್ಚಿ ಕೈ ಮುಗಿದು ಕುಳಿತರೆ ಪ್ರತ್ಯಕ್ಷ ದ್ಯಾಮವ್ವ ಅವಳಲ್ಲಿ ಇಳಿದು ಬರುವಳು. ಭಕ್ತರು ಭಯದಿಂದ ನಡುಗಿ ಅಡ್ಡಬೀಳುವರು. ಕಷ್ಟ ಸುಖ ಹೇಳಿಕೊಳ್ಳುವರು.

"ಯವ್ವಾ ಮೂರದಿನಾ ಆತು. ಎಮ್ಮಿ ಮನೀಗಿ ಬಂದಿಲ್ಲ".

"ಬರೂ ಮಂಗಳವಾರ ಬರತೈತಿ, ಚಿಂತೀ ಮಾಡಬ್ಯಾಡ" ಪಾರವ್ವ ದೇವಿಯ ಮೇಲಿನ ಅಂಗಾರ ಕೊಡುವಳು.

"ಯವ್ವಾ, ನನ್ನ ಮಗ್ಗ ಜರ ಬರತಾವು." ಕಣ್ಣು ಮುಚ್ಚಿಕೊಂಡೇ ಪಾರವ್ವ ಕೊಡುವ ತೀರ್ಥಕ್ಕೆ ತಾಯಿ ಕೈ ಒಡ್ಡುವಳು.

'ಯವ್ವಾ ಮದುವ್ಯಾಗಿ ಐದು ವರ್ಷಾದ್ವು, ನನ್ನ ಸೊಸಿ ಹೊಟ್ಟೀಲೆ ಆಗವಲ್ಲಳು. ಇನ್ನೊಂದು ಮದಿವಿ ಮಾಡಲ್ಯಾ?"

"ಬ್ಯಾಡಾ, ಮನೀ ಲಕ್ಷ್ಮಿ ಆಕಿನ್ನ ಉರಸಬಾರದು. ಹನ್ನೊಂದು ಹುಣ್ಣಿವಿ ದೇವಿಗೆ ನಡಕೋ ಅನ್ನು, ಫಲಾ ಸಿಗತೈತಿ.

"ಯವ್ವಾs ಈ ಗೌಡನ ಕಾಟಾ ತಾಳಲಾರೆ, ಜೀಂವಾ ಕಳಕೊಳ್ಳಲ್ಯಾ ಅನಸ್ತತಿ" ಹರೆಯದ ವಿಧವೆಯೊಬ್ಬಳು ಹಲುಬಿದಳು.

"ಮಗಳ ಹೆಣ್ಣಂದ್ರ ಭೂಮಿತಾಯಿ ಇದ್ದಾಂಗ. ಆ ತಾಯಿ ಹಾಂಗ ತಾಳಿಕೋ, ಮಿಕ್ಕಿದಾಗ ಆಕೀನೂ ಬೆಂಕಿ ಕಾರತಾಳ ನೆಪ್ಪಿಡು."

ತನಗ ಒಳ್ಳೆಯದು ಮಾಡಿದ ದೇವಿ ಅವರನ್ನೂ ಕಾಪಾಡಲಿ ಎಂದು ಭಕ್ತಿಯಿಂದ ಬೇಡಿಕೊಳ್ಳುವಳು. ಪಾರವ್ವ. ಬಾಯಲ್ಲಿ ಹನಿ ನೀರು ಹಾಕದೆ ಸಂಜೆಯವರೆಗೂ ಬಂದ ಭಕ್ತರಿಗೆ ಅಂಗಾರ, ಹೂವು. ಕಲ್ಲುಸಕ್ಕರೆ ಕೊಟ್ಟು ಕಳಿಸಿದ ಪಾರವ್ವ ರಾತ್ರಿ ಮತ್ತೊಮ್ಮೆ ಸ್ನಾನ ಮಾಡಿ ದೇವರ ಕೋಣೆ ಒಳ ಹೊಕ್ಕು ಬಾಗಿಲು ಹಾಕಿ ಬಂದ ದಕ್ಷಿಣೆಯನ್ನೆಲ್ಲ ಎಣಿಸಿ, ಸರಿ ಎರಡು ಪಾಲು ಮಾಡಿ, ಒಂದು ಪಾಲು ತನ್ನ ಹಳೆಯ ಸಂದೂಕದಲ್ಲಿಟ್ಟು, ಇನ್ನೊಂದನ್ನು ಜಗಲಿಯ ಮೇಲಿನ ಹುಂಡಿಗೆ ಹಾಕುವಳು. "ತಾಯೀ ನಮ್ಮವ್ವಾ ಹಿಂಗs ನಡಸವ್ವಾ" ಎಂದು ಅಡ್ಡ ಬಿದ್ದು ಹೊರಗೆ ಬರುವಳು.

ಪಾರವ್ವನ ಗುಡಿಸಲು ಹಂಚಿನ ಮನೆಯಾಯಿತು. ದೇವಿಗೆ ಪ್ರತ್ಯೇಕ ಕೋಣೆಯಾಯಿತು. ಬಾಟಲಿಗೆ ಬೆಳ್ಳಿಯ ದೇವಿ ಮುಖವಾಡ ಬಂದಿತು. ಮಕ್ಕಳು ಕೈಗೆ ಬಂದರು. ಹೊಲಗೆಲಸಕ್ಕೆ ಎತ್ತು, ಹೈನಿಗೆ ಆಕಳುಗಳು ಬಂದವು. ಕಾಳವ್ವತ್ತಿ ತನ್ನ ಮಕ್ಕಳ ಜೊತೆ ಇರಲು ಮಣ್ಣೂರಿಗೆ ಹೋದಳು. ಅಪ್ಪ ಸತ್ತ ಮೇಲೆ ಹಣಮಂತ ಮಾಸೂರಿಗೆ ತಿರುಗಿ ಹೋದ. ದೇವಿ ಪೂಜೆಯ ದಿನ ಬಿಟ್ಟು ಉಳಿದ ದಿನ ಪಾರವ್ವ ಮಕ್ಕಳೊಡನೆ ಹೊಲದಲ್ಲಿ ದುಡಿಯುವಳು. ದೇವಿ ನೈವೇದ್ಯವಾಗಿ ಹೆಚ್ಚಾದ ಹಾಲು ಮಾರಲು ಪೇಟೆಗೆ ಹೋಗುವಳು. ತಾನು ಹಾಲು ಕೊಡುವ ಸಾಹೇಬರಿಗೆ ಗುರುತಿನಿಂದ ಹುಂಡಿ ಮತ್ತು ಸಂದೂಕದಲ್ಲಿದ್ದ ಹಣವನ್ನೆಲ್ಲ ಬ್ಯಾಂಕಿಗೆ ಜಮಾ ಮಾಡಿದಳು. ಚಿಕ್ಕ ಮಗನನ್ನು ಶಾಲೆಗೆ ಹಾಕಿದಳು.

ದೇವಿಯ ಎದುರು ಕಣ್ಣು ಮುಚ್ಚಿ ಕುಳಿತಾಗ ಅವಳ ಮನಸ್ಸಿನ ಆಳದಲ್ಲಿ ಆಗಾಗ ಒಂದು ಪ್ರಶ್ನೆ ಎದ್ದು ಕುಣಿಯುವುದು.

ಈ ಬಾಟಲಿಯಲ್ಲಿ ನಿಜವಾಗಿಯೂ ದ್ಯಾಮವ್ವ ಇರುವಳೇ? ತನ್ನ ಬುದ್ಧಿಗೆ ತೋಚಿದಂತೆ ಭಕ್ತರಿಗೆ ಉತ್ತರ ಹೇಳುವವಳು ತಾನೇ ಅಲ್ಲವೇ? ದೇವಿ ತನಗೆ ಒಂದು ದಿನವೂ ಕಂಡಿಲ್ಲ. ಮಾತಾಡಿಲ್ಲ. ಅವಳು ಇದ್ದಾಳೆಯೆ? ಇದ್ದರೆ ಎಲ್ಲಿದ್ದಾಳೆ? ಹೇಗಿದ್ದಾಳೆ? ಜನರ ಕ್ರೌರ್ಯ, ಮೋಸ, ದುಷ್ಟತನಗಳೆಲ್ಲ ತನಗೆ ಅರಿಯದ್ದಲ್ಲ. ದೇವಿ ಇದ್ದರೆ ದುಃಖಿಗಳಿಗೆ ಯಾಕೆ ಮತ್ತಷ್ಟು ಕಷ್ಟ ಕೊಡುತ್ತಾಳೆ? ಒಳ್ಳೆಯವರಿಗೆ ಒಳ್ಳೆಯದು ಯಾಕೆ ಮಾಡುವುದಿಲ್ಲ? ಈ ಎಲ್ಲ ಸಂಶಯಗಳು ಅವಳನ್ನು ಕಾಡಿದವು. ಇದೇ ಚಿಂತೆಯಲ್ಲಿ ಅಂತರ್ಮುಖಿಯಾಗುವಳು,. ದ್ಯಾಮವ್ವ ಇಲ್ಲವೇ ಇಲ್ಲ, ಎನ್ನುವ ಮಾತು ಮನಸ್ಸಿಗೆ ತಟ್ಟಿ ತಟ್ಟಿ ಹೋಗುತ್ತಿತ್ತು.

ಅಂದು ಸಾಹೇಬರ ಹೆಂಡತಿ ಹೇಳುತ್ತಿದ್ದರಲ್ಲ :"ಈ ಜಗತ್ತನ್ನು ಹುಟ್ಟಿಸಿದ್ದು ಒಂದು ಶಕ್ತಿ, ಆ ಶಕ್ತಿ ಮಾಡಿದ ನಿಯಮದಂತೆ ಸೂರ್ಯ, ಚಂದ್ರ, ಜಗತ್ತು ಎಲ್ಲಾ ನಡೆಯುತ್ತದೆ. ಅದನ್ನೇ ದೇವರು ಎಂದು ಬೇರೆ ಬೇರೆ ಹೆಸರಿಟ್ಟು ಎಲ್ಲರೂ ಪೂಜೆ ಮಾಡ್ತಾರೆ. ಬರಿ ಪೂಜೆ ಮಾಡುವುದರಿಂದ ಏನೂ ಆಗೋದಿಲ್ಲ.ನೀನು ಮಕ್ಕಳು ಹೊಲದಲ್ಲಿ ದುಡಿತೀರಿ, ಹೊಟ್ಟೆ ತುಂಬ್ತದೆ. ಸಾಹೇಬರು ಆಫೀಸ ಕೆಲಸ ಮಾಡ್ತಾರ, ನಾನು ಮನೆ ಮಕ್ಕಳು ನೋಡಿಕೋತಿನಿ. ಹೀಗೆ ಎಲ್ಲರೂ ತಮ್ಮತಮ್ಮ ಕೆಲಸ ಮಾಡ್ತಾ ಹೋದರೆ ಜೀವನ ಸರಿಯಾಗಿ ನಡೀತದೆ. ನಿಮ್ಮ ಪಾಲಿಗೆ ಬಂದ ಕೆಲಸಾನ ಪೂಜೆ ಅನ್ನೋ ಹಾಗೆ ನಿಷ್ಠೆಯಿಂದ, ಪ್ರೀತಿಯಿಂದ ಮಾಡಬೇಕು"ಎಂದು. ಅವರ ಮಾತು ಕೇಳಿದಾಗಿನಿಂದ ತಾನು ತಪ್ಪು ಮಾಡುತ್ತಿದ್ದೇನೆ ಎಂದು ಅನಿಸ್ತದೆ. ತನಗೆ ಭಕ್ತಿ ಇದ್ದರೆ, ನಂಬಿಕೆ ಇದ್ದರೆ ತಾನೊಬ್ಬಳು ಪೂಜೆ ಮಾಡಿದರೆ ಸಾಕು. ಉಳಿದವರನ್ನೂ ನಂಬಿಸೋದು ಮೋಸ. ಪ್ರಪಂಚದಲ್ಲಿಯ ಮೋಸದಲ್ಲಿ ತನ್ನ ಪಾಲೂ ಇದೆಯಲ್ಲಾ ! ಈ ತರದ ವಿಚಾರಗಳ ತಾಕಲಾಟ. ಪಾರವ್ವ ದಿನ ದಿನಕ್ಕೆ ಸೋಲುತ್ತಿದ್ದರೂ ತನ್ನ ಕಾಯಕ ಬಿಟ್ಟಿರಲಿಲ್ಲ.

ಇಂಥ ದಿನಗಳಲ್ಲಿ ಪಾರವ್ವ ಜಡ್ಡಿಗೆ ಬಿದ್ದಳು. ಬಿಟ್ಟೂ ಬಿಡದೆ ಜ್ವರ ಕಾಡಿದವು. ಭಕ್ತಿಯಿಂದ ದೇವಿಯ ಮೇಲಿನ ಹೂವು, ತೊಳೆದ ತೀರ್ಥವನ್ನು ಕುಡಿದು ದಿನ ಕಳೆದಳು. ಜ್ವರ ನಿಲ್ಲಲಿಲ್ಲ. ಇಂಥ ಬಾಯಿಲೆ ಅವಳಿಗೆ ಎಂದೂ ಬಂದಿರಲಿಲ್ಲ. ಅವ್ವನ ಅವಸ್ಥೆ ಕಂಡು ಗಾಬರಿಯಾದ ಸಂಗಣ್ಣ, ಡಾಕ್ಟರ ಹತ್ತಿರ ಹೋಗೋಣವೆಂದು

ದುಂಬಾಲು ಬಿದ್ದ. ಪಾರವ್ವ ಒಪ್ಪಲಿಲ್ಲ. ಇನ್ನೊಂದು ವಾರ ಕಳೆಯಿತು. ಇನ್ನೂ ಹಾಸಿಗೆ ಬಿಟ್ಟೇಳಲಿಲ್ಲ. ಇದೇ ಸುದ್ದಿ ಮಣ್ಣೂರಿನ ಜನರ ಬಾಯಿಗೆ ಆಹಾರವಾಯಿತು. ಹುಣ್ಣಿವೆ ಬಂದಿತು. ಮಕ್ಕಳು ಎಷ್ಟು ಹೇಳಿದರೂ ಕೇಳದೆ ನಸುಕಿನಲ್ಲಿ ಮೈ ತೊಳೆದು ದೇವಿಯ ಮುಂದೆ ಕುಳಿತಳು ಪಾರವ್ವ, ಜನ ಕೂಡಿದರು. ಅಡ್ಡ ಬಿದ್ದರು. ಪಾರವ್ವ ಕಣ್ಣು ತೆರೆದು ನೋಡಲಿಲ್ಲ. ತನ್ನಷ್ಟಕ್ಕೆ ನಾ ಹೋಕ್ಕೀನಿ, ನಾ ಒಲ್ಲೆ, ನಾ ಇಲ್ಲೆ ಇರಾಕ ಒಲ್ಲೆ. ಭೂಮಿಗೆ ಭಾರ ಆತು. ಪಾಪ ಹೆಚ್ಚಾತು. ಕೊಡಾ ತುಂಬಿತು. ಪಾಪದ ಕೊಡಾ ತುಂಬಿತು. ನನಗ ಹೊರಾಕ ಆಗೂದಿಲ್ಲ, ನಾ ಹೊಕ್ಕೀನಿ" ಹೀಗೆ ಮಧ್ಯ ರಾತ್ರಿಯವರೆಗೂ ಬಡಬಡಿಸಿದಳು. ಬಂದ ಜನ ನಡುಗಿ ಹೋದರು.

ಬೆಳಕು ಹರಿಯುತ್ತಿರುವಾಗ ಸಂಗಣ್ಣನನ್ನು ಎಬ್ಬಿಸಿ ಅವನ ಕೈಯಲ್ಲೊಂದು ಕೆಂಪು ವಸ್ತ್ರ ಗಂಟು ಕೊಟ್ಟಳು. ಏನೂ ತಿಳಿಯದೇ ಮಿಕಿ ಮಿಕಿ ನೋಡಿದ.

'ಇದನ್ನು ನಮ್ಮ ಹೊಲದ ಬಾವ್ಯಾಗ ಹಾಕಿ ಬಾ, ತಿರಗಿ ನೋಡ ಬ್ಯಾಡಾ. ನನ್ನ ಕನಸಿನ್ಯಾಗ ದೇವಿ ಬಂದು ನಾ ಹೊಕ್ಕೀನಿ ಅಂದಾಳ ಹೋಗಲಿ ಬಿಡು, ಖಾಲಿ ಆದ ಜಗಲಿಗೆ ಶರಣು ಮಾಡಿ ಸಂಗಣ್ಣ ಬಾವಿಯತ್ತ ಹೊರಟ.

ತಿರುಗಿ ಬಂದ ಮಗನಿಗೆ ಪಾರವ್ವ "ಚಕಡೀ ಕೊಳ್ಳ ಕಟ್ಟು ಸಂಗಣ್ಣಾ ಡಾಕ್ಟರ ಹಂತ್ಯಾಕ ಹೋಗೂಣು ಎಂದಳು.

***

■■

## ಎರಡೂ ಧ್ರುವಗಳೇ

ತುಪ್ಪ ಕುಡಿದು ನೊಣಗಳೆಲ್ಲ ಹಾರಿ ಹೋಗಿ ಬರಿದಾದ ಜೇನುಗೂಡಿನಂತೆ ಅವನ ತಲೆ ಖಾಲಿಯಾಗಿತ್ತು. ಮನಸ್ಸು ಹಗುರಾಗಿ ತೇಲುತ್ತಿತ್ತು. ಈ ಮನಸ್ಸೊಂದು ವಿಚಿತ್ರವಾದದ್ದು. ತಾನು ಕಣ್ಣಿಗೆ ಕಾಣದ್ದಾದರೂ ಯಾರ ಕಣ್ಣಿಗೂ ಕಾಣದ ವಿಚಾರಗಳು, ಕಲ್ಪನೆಗಳು,. ಚಿಂತೆಗಳನ್ನು ಹೊತ್ತುಕೊಂಡು ನಮಗೆ ಒಜ್ಜೆಯಾಗಿಬಿಡುತ್ತದೆ. ಆ ಭಾರ ಇಳಿದ ಮೇಲೆ ಬಹಳ ಕಾಲ ಹಾಸಿಗೆ ಹಿಡಿದು ಮಲಗಿದ ರೋಗಿಯಂತೆ ನಿಶ್ಶಕ್ತವಾಗಿ ಜೋಲಿ ಹೊಡೆಯುತ್ತದೆ. ಉಂಡದ್ದನ್ನೆಲ್ಲ ಕಾರಿಕೊಳ್ಳುವ ಎಳೆ ಬಸುರಿಯಂತೆ ತಿಂಗಳುಗಳಿಂದ ಅವನು ತಲೆಯಲ್ಲಿದ್ದುದನ್ನೆಲ್ಲ ಪೆನ್ನಿನ ಮೂಲಕ ಹಾಳೆಗೆ ಇಳಿಸಿಬಿಟ್ಟಿದ್ದ.

ಪ್ರಕಾಶಕನಿಂದ ಆಗಲೇ ನಾಲ್ಕಾರು ಪತ್ರಗಳೂ ಬಂದಿದ್ದವು, ಅವನಿಂದ ಮುಂಗಡ ತೆಗೆದುಕೊಂಡ ಹಣ ಖರ್ಚಾಗಿ ಹೋಗಿತ್ತು. ಇನ್ನೇಕೆ ಸುಮ್ಮನಿದ್ದಾನವನು ಹೆಚ್ಚೂ ಕಡಿಮೆಯಾದರ ಕೋರ್ಟಿಗೆ ಹೋಗಲೂ ಹಿಂಜರಿಯುವವನಲ್ಲ. ಅವನ ಸಿಟ್ಟಿಗೆ ಬಲಿಯಾಗಿ ಅವನು ಮಾಡುವುದಾದರೂ ಏನು ? ಕೊನೆಯ ಪ್ಯಾರಾ ಇನ್ನೊಮ್ಮೆ ಓದಿ, ತಿದ್ದಿದ ಕಾದಂಬರಿಯ ಹೆಸರಿನ ಬಗ್ಗೆ ತಲೆ ಕೆಡಿಸಿಕೊಳ್ಳುವವನಲ್ಲ. ಓದುಗರಿಗೆ ತನ್ನ ಹೆಸರೇ ಸಾಕು, ಪೆನ್ನು ಮುಚ್ಚಿ ಬೆರಳು ನೆಟಿಗೆ ಮುರಿದ. ಎರಡೂ ಕೈ ಹೆಣೆದು ತಲೆಯ ಹಿಂಭಾಗದಿಂದ ಮೇಲೆತ್ತಿ, ಇದ್ದಷ್ಟು ಬಾಯನ್ನು ಮತ್ತಷ್ಟು ಅಗಲಿಸಿ ಆಕಳಿಸಿದ. ಎದ್ದು ನಡೆಯತೊಡಗಿದ. ನಡಿಗೆ ಕುಣಿತವಾಯಿತು. ಉಸಿರು ಕಟ್ಟಿಸುವ ಆ ಕೋಣೆಯಿಂದ ಹೊರಬಂದ. ಮನೆ ಸುಮ್ಮನಿತ್ತು. ಹಂ. ಅವನ ಮನೆಯ ಹೆಸರೇ ನಿಶ್ಶಬ್ದ.

ಬರೆಯಲು ಕುಳಿತೊಡನೆ ಎಲ್ಲ ಧ್ವನಿಗಳೂ ಅವನ ಕಿವಿಯಲ್ಲೇ ಸದ್ದು ಮಾಡುವ ಜಾಗದಿಂದ ದೂರ ಬಲು ದೂರ ಬಂದು ಮನೆ ಕಟ್ಟಿಕೊಂಡಿದ್ದ. ಒಂದೊಂದು ಕೋಣೆ, ಕಿಟಕಿ, ಬಾಗಿಲುಗಳಿಗಾಗಿ ಕಾದಂಬರಿಗಳನ್ನೂ ಬರೆದಿದ್ದ. ಡೈನಿಂಗ್ ಟೇಬಲ್ ಮೇಲಿನ ಫ್ಲಾಸ್ಕ ಎತ್ತಿದ. ಕೆಳಗೊಂದು ಚೀಟಿ-

"ನಾನು ಶ್ಯಾಮನೊಡನೆ ಮ್ಯಾಟನಿ ಶೋಗೆ ಹೋಗುತ್ತಿದ್ದೇನೆ. ದಿಲೀಪನ ಫಿಲ್ಮು. ಬಿಡುವ ಹಾಗಿಲ್ಲ. ಹಾಗೇ ಮಾರ್ಕೆಟಿಂಗ್ ಮುಗಿಸಿ ಬರುತ್ತೇನೆ."

ಸರಿ -ಹೆಂಡತಿ, ಮಗಳು ಇಲ್ಲದ್ದು ಒಳ್ಳೆಯದೇ ಆಯಿತು. ಕಪಾಟಿನಲ್ಲಿಯ ವಿಸ್ಕಿ ತೆಗೆದು ಗ್ಲಾಸಿಗೆ ಸುರುವಿದ. ಚಿಪ್ಸ ತಿನ್ನುತ್ತ ಗುಟುಕಾಗಿ ಹೀರ ತೊಡಗಿದ.

'ಸರ್, ಪ್ಲೀಜ್ ಆಟೋಗ್ರಾಫ್ ಕೊಡಿರಿ' ವೀಣೆ ಬಾರಿಸಿತೇನೋ -

ಗುಲಾಬಿ ಬೆರಳು ಕೈ ಮುಂದೆ ಚಾಚಿತ್ತು. ಸಾಮಾನ್ಯವಾಗಿ ಯಾರನ್ನೂ ನೋಡದ ಸಹಿ ಗೀಚುವ ಅವನು ಕತ್ತೆತ್ತಿದ. ಕಣ್ಣು, ತುಟಿಗಳೆರಡೂ ನಕ್ಕವು.

'ನಾನು ಸುಪ್ರಿಯಾ'

'ಭಾವಗೀತೆಗಳನ್ನು ಹಾಡಿದವರು ನೀವs ಅಲ್ಲ ?'

'ಹೌದ್ರಿ, ಅದು ನೀವs ಬರೆದ ಕವಿತಾ'.

'ನಿಮ್ಮ ದನಿ ಬಾಳ ಇಂಪ ಅದ. ಚೆನ್ನಾಗಿ ಸಂಗೀತ ಅಭ್ಯಾಸ ಮಾಡಿದರ ಹೆಸರು ಪಡೀತೀರಿ. ಭಾವಪೂರ್ಣ ಆಗಿ ಹಾಡ್ತೀರಿ. ನನ್ನ ಕವಿತಾ ಇಷ್ಟ ಛಂದ ಅದ ಅಂತ ನನಗs ಅನಿಸಿದ್ದಿಲ್ಲಾ.'

'ಓಃ ನೀವು ಕವಿಗಳು ಸಾರ್, ಉತ್ಪ್ರೇಕ್ಷಾ ಮಾಡ್ತೀರಿ ಅನಸ್ತದ' ಗುಲಾಬಿ ಹೂವೋ ಥೇ ಅಲ್ಲ ಕೆಂಪು ಕೆಂಪಾಗಿದೆಯಲ್ಲ ! ತನ್ನ ಕೈಗೆ ಸಿಕ್ಕಿದ್ದರೆ ಎತ್ತಿ ಕೆನ್ನೆಗೆ ಒತ್ತಿಕೊಳ್ಳುತ್ತಿದ್ದೆ.

'ನೋ..... ನೋ...... ನಾ ಹಾಂಗ ಯಾರನ್ನೂ ಹೊಗಳೂದಿಲ್ಲ. ನನ್ನ ಮನಸ್ಸಿಗೆ ಬಂದಃದ ಅಂದ ಮ್ಯಾಲ ರಿಯಲಿ ಗುಡ್.'

ಸರ್ ನಂದು, ಸರ್ ನಂದು ತೊಗೊಳ್ರಿ, ಬೆಳೆಯುತ್ತಿರುವ ಕೈಗಳ ನಡುವೆ ಗುಲಾಬಿ ಕೈ ಮರೆಯಾಯಿತು.

ಪೆನ್ನು ಎತ್ತಿದ. ಕಾದಂಬರಿಯ ಹೆಸರು, ತನ್ನ ಹೆಸರು, ಅರಿಕೆ, ಅರಿಕೆಯಲ್ಲಿ ತಾನೇ ಹೊಸದೇನು? ಮಾಮೂಲು,

ಇದು ನನ್ನ ಇಪ್ಪತ್ತೆಂಟನೆಯ ಕಾದಂಬರಿ. ಈ ಕಾದಂಬರಿಯಲ್ಲಿ ಹೊಸ ವಸ್ತುವನ್ನು ಆರಿಸಿಕೊಂಡಿದ್ದೇನೆ. ಇಂದಿನ ಜಗತ್ತಿನಲ್ಲಿ ಎಲ್ಲರ ಕಣ್ಣಿಗೆ ಕಾಣುವ ದಾರಿದ್ರ್ಯ, ರೋಗ-ರುಜಿನ, ಬರಗಾಲ, ಮಹಾಪೂರ ಇವೆಲ್ಲ ಶೋಷಣೆಗಳ ಮೂಲ ದ್ರವ್ಯ. ಆದರೆ ಶೋಷಣೆಗೂ ವಿವಿಧ ಮುಖಗಳಿವೆ. ಅದರಲ್ಲಿ ಹೆಣ್ಣಿಗೆ ಆಗುವ ಶೋಷಣೆಯೇ ನನ್ನ ಕಾದಂಬಿರಿಯ ಮುಖ್ಯ ವಸ್ತು. ಓದುಗರೇ ನನ್ನ ಜೀವಾಳ. ನನ್ನ ಇತರ ಕೃತಿಗಳನ್ನು ಓದಿ ಪ್ರೋತ್ಸಾಹಿಸಿದಂತೆ ಸಹೃದಯ ಓದುಗರು ಈ ಕೃತಿಯನ್ನೂ ಸ್ವಾಗತಿಸುತ್ತೀರಿ ಎನ್ನುವ ನಂಬಿಕೆ ನನಗಿದೆ.

ಇನ್ನು ನನ್ನ ಸಾಹಿತ್ಯ ಕೃತಿಗಳಿಗೆ ಸ್ಫೂರ್ತಿಯ ಸೆಲೆಯಾಗಿದ್ದು, ನನ್ನ ಬರವಣಿಗೆಗೆ ಸಹಕಾರ ನೀಡುತ್ತಿರುವ ಸಹಧರ್ಮಿಣಿ ವಿಜಯಾಳನ್ನು ಇಲ್ಲಿ ನೆನೆಯದಿರಲಾರೆ.

ಸ್ಫೂರ್ತಿನೂ ಇಲ್ಲಾ, ಸೆಲೆ ಅಂತೂ ಮೊದಲೇ ಇಲ್ಲಾ- ಮಣ್ಣು, ಸುಡುಗಾಡು ನನ್ನ ಕಾದಂಬರಿಗಳ ಸಂಖ್ಯಾ ಕೂಡ ಅವಳಿಗೆ ನೆನಪು ಇರಲಿಕ್ಕಿಲ್ಲ. ಸಹಕಾರ ಮಾತ್ರ ಚೆನ್ನಾಗಿ ಕೊಡ್ತಾಳ. ನನ್ನ ಜೊತೆ ಸಹಕರಿಸೋದು ಬಿಟ್ಟರೆ ಅವಳಿಗೆ ಬೇರೆ ದಾರೀನೇ ಇಲ್ಲಲ್ಲ. ಮದುವೆಯಾದ ಹೊಸದರಲ್ಲಿ ಹೆದರುತ್ತ ಒಮ್ಮೆ ಬಾಯಿ ಬಿಟ್ಟಿದ್ದಳು.

"ನೀವು ಪ್ರೇಮ ವಿವಾಹ ಮಾಡಿಕೊಂಡಿದ್ದಿರಿ ಅಂತ ಕೇಳಿದ್ದೆ. ಮೆಚ್ಚಿ ಮದುವೆಯಾದ ಕಥಿ ನಿಮ್ಮ ಎಷ್ಟೋ ಕಾದಂಬರಿಯೊಳಗ ಓದೇನಿ. ಆದರ ಆಕಿನ್ನ ಬಿಟ್ಟಿರಿ ಯಾಕ ?'

ಎಲ್ಲಿಯೋ ದೂರದಿಂದ ನಿ.ಸಾ.ಗ.ಮ. ಧನಿಸಾ. ತಂಬೂರಿಯ ಝೇಂಕಾರ, ಮಾಲಕೌಂಸ ಆಲಾಪನೆ ಕೇಳುತ್ತಿತ್ತು. ಸನಿಹಕ್ಕೆ ಬರುತ್ತಾ ಕಿವಿಯೊಳಗೇ ಹೊಕ್ಕು ಕೊರೆಯತೊಡಗಿತ್ತು. ಬೆಳಗಿನವರೆಗೆ ಕೂತು ಬರೆದು ಅದೇ ತಾನೇ ದಣಿದ ಕಣ್ಣು ಥಟ್ಟನೆ ತೆರೆದುಕೊಂಡವು.

'ಸಾಕು ನಿಲ್ಸು'; ಚೀರಿ ಬಿಟ್ಟ-

'ಇರಲಿ ಬಿಡ್ರಿ ಅಷ್ಯಾಕ ಸಿಟ್ಟಿಗೇಳತೀರಿ, ನಿಮಗೆ ಮನಸ್ಸಿನಲ್ಲದಿದ್ದರ ಹೇಳಬ್ಯಾಡ್ರಿ. ನಿಮ್ಮ ಮೊದಲಿನ ಹೆಂಡತಿ ಏನವಳ ಹೆಸರು, ಹಾಂ ಸುಪ್ರಿಯಾ ನೋಡಲಿಕ್ಕೂ ಛಂದ ಇದ್ಲು. ಹಾಡು ಛಂದ ಅಂತಿದ್ಲು ಅಂತ ಕೇಳಿದವರೆಲ್ಲ ಹೇಳತಾರ.

'ಹಂ, ಸಾರಿ ವಿಜೀ ನಾ ಅಂದದ್ದು ನಿನಗ ಅಲ್ಲಾ. ನನಗ ಯಾಕೋ ಆ ವಿಷಯಾ ಎತ್ತೂದು ಮನಸ್ಸಿಗೆ ಬರೂದಿಲ್ಲ. ನನ್ನ ಸಾಹಿತ್ಯ ಸೇವೆಗೆ ಆಕಿ ಸಹಕಾರ ಸಿಗಲಿಲ್ಲಾ. ಅಷ್ಟು ತಿಳಕೋ. ಅದಕ್ಕಃ ಬಿಟ್ಟುಬಿಟ್ಟೆ.'

ಮೊದಲಿನವಳನ್ನು ಬಿಟ್ಟ ಹಾಗೆ ತನ್ನನ್ನೂ ಸುಪ್ರಿಯಾಳನ್ನು ನಾನು ಬಿಟ್ಟೆನೋ, ಅವಳೇ ನನ್ನ ಜೊತೆ ಏಗಲಾರದೆ ಬಿಟ್ಟು ಹೋದಳೋ ಗೊತ್ತಿಲ್ಲ. ಆದರೂ ಭಯ - ಆ ಭಯವನ್ನು ಅವಳಲ್ಲಿ ಹುಟ್ಟು ಹಾಕಿದವನೂ ತಾನೇ, ಅವನ ಮೇಲೆ ನಂಬಿಕೆ ಬರುವವರೆಗೂ ಆ ಭಯವನ್ನು ಹಾಗೆಯೇ ಪೋಷಿಸಿದ್ದೆ. ಆಮೇಲೆ ಆ ಜೀವನವೇ

ಅವಳಿಗೆ ರೂಢಿಯಾಯಿತು. ಕಾದಂಬರಿಯ ಮೊದಲ ಪುಟದಲ್ಲೆ ತನ್ನ ಹೆಸರು ಅಚ್ಚಾಗುವುದು ಅವಳಿಗೊಂದು ಹೆಮ್ಮೆಯ ವಿಷಯ. ಬಳಗ ವರ್ಗದವರಲ್ಲಿ, ಸ್ನೇಹಿತೆಯರಲ್ಲಿ ಎಲ್ಲರೂ ಅವಳ ಈ ಭಾಗ್ಯವನ್ನು ಹೊಗಳುವವರೇ. ಸರಿ ಇನ್ನೇನು ಬೇಕು? ಮನೆ, ಮಕ್ಕಳು, ಪೇಟೆ, ಸಿನಿಮಾ, ಮದುವೆ, ಪಿಕ್‌ನಿಕ್ ಎಲ್ಲ ಕಡೆಗೆ ಅಡ್ಡಾಡುತ್ತ ಸುಖವಾಗಿ ಇರುವಳು. ಲೇಖನಿಯೊಂದಿಗೆ ಗುದ್ದಾಡಲು ನನ್ನಿಷ್ಟಕ್ಕೆ ಬಿಟ್ಟಿರುವಳು.

ಆಯಿತು. ಇದನ್ನು ನಾಳೆ ಆ ಪ್ರಕಾಶಕನಿಗೆ ಕೊಟ್ಟು ಬಂದರಾಯಿತು. ಅವನೊಬ್ಬ ಶನಿ ! ನಕ್ಷತ್ರಿಕನಂತೆ ಬೆನ್ನು ಹತ್ತಿದ್ದಾನೆ. ನೌಕರಿ ಬಿಟ್ಟ ಮೇಲೆ ನನಗಾದರೂ ಇನ್ನೇನು ಕೆಲಸ ? ಬರವಣಿಗೆಯೇ ಉದ್ಯೋಗ.

'ನೀವು ಕವಿತೆ ಬರೆಯುವುದನ್ನೇ ಬಿಟ್ಟುಬಿಟ್ಟಿರಿ'. ಸುಪ್ರಿಯಾ ಆಕ್ಷೇಪಿಸಿದ್ದಳು ಒಮ್ಮೆ.

'ಕವಿತೆಗೆ ತುಂಬಾ ಕಷ್ಟಪಡಬೇಕು ಸುಪ್ರೀ. ಹಣವೂ ಸಿಗುವುದಿಲ್ಲ ನೋಡು, ಕಾದಂಬರಿಗಳಿಗೆ ಬಹಾಳ ಬೇಡಿಕೆ ಅದೆ.' ಅವಳು ತಿರಸ್ಕಾರದಿಂದ ನಕ್ಕು ನನ್ನ ಎದೆಗೆ ಇರಿದಿದ್ದಳು.

ಥೂ ಯಾಕೋ ಬಹಳ ಬೇಜಾರು. ವಿಸ್ಕಿ ಸಂತೋಷ ಕೊಡಲಿಲ್ಲ. ಮನೆಯಲ್ಲಿದ್ದು ಬಹಳ ದಿನಗಳಾದವು. ಹೊಸ ಕಾರಿನಲ್ಲಿ ಸುತ್ತಾಡಿ ಬರಲಾ ! ದೃಷ್ಟಿ ಮೇಜಿನ ಮೇಲೆ ಬಿದ್ದ ಪತ್ರಗಳತ್ತ ಹಾಯಿತು. ಹದಿನೈದು ದಿನಗಳ ರಾಶಿ, ಹೆಚ್ಚಿನವು ಓದುಗರಿಂದ ಬಂದ ಮೆಚ್ಚುಗೆಯ ಪತ್ರಗಳು. ಅವುಗಳ ಒಕ್ಕಣಿಕೆ ಅವನಿಗೆ ಕಂಠಪಾಠ. ಒಂದೊಂದಾಗಿ ಎತ್ತಿದ-ಮಾಧುರಿ, ಕೇತಕಿ, ಚಾರುಲತಾ, ನೀಹಾರಿಕಾ ಇತ್ಯಾದಿ ತೆಗೆದು ಬೇರೆ ಇಟ್ಟ. ಇವರಿಗೆಲ್ಲ ಅವನು ಉತ್ತರ ಬರೆಯಲೇಬೇಕು. ಸುಂದರ ಹೆಣ್ಣುಗಳು - ಅವನ ದೌರ್ಬಲ್ಯ, ಹೆಸರುಗಳೇನೋ ಸುಂದರವಾಗಿದೆ. ಅಷ್ಟಕ್ಕೇ ಅವರೂ ಸುಂದರಿಯರೇ? ಸಂದೇಹ. ಭೆಟ್ಟಿಯಾದ ಮೇಲೆ ಬೆಪ್ಪಾದದ್ದೂ ಉಂಟು.

ಕೆಲ ಆಮಂತ್ರಣ ಪತ್ರಿಕೆಗಳೂ ಅಲ್ಲಿದ್ದವು. ಮನರಂಜನ ಕಾರ್ಯಕ್ರಮ ಏನಾದರೂ ಇವೆಯೆ ? ಇದೇನು ಸಂಗೀತ ಸೌರಭ. ಇಂದೇ ಟೌನ್‌ಹಾಲಿನಲ್ಲಿ. ಏಳು ಗಂಟೆಗೆ 'ಕಿರಣ ಮನೋಹರ' ಅವರಿಂದ ಶಾಸ್ತ್ರೀಯ ಸಂಗೀತ. ಕಿರಣ ಮನೋಹರ ಸುಂದರ ಹೆಸರು. ಅವಳು ಸುಂದರಿಯೆ? ಕಂಠ ಇಂಪಾಗಿದ್ದರೂ ಕೋಗಿಲೆ ಕಪ್ಪಲ್ಲವೇ? ಛೇ ಇರಲಿಕ್ಕಿಲ್ಲ. ಹೆಸರಿನಲ್ಲಿಯೇ ಏನೋ ಮೋಡಿ ಇದೆ. ಸಂಗೀತಕ್ಕೆ ಹೋಗುವದು. ಅವಳ ಮುಖ ನೋಡುವ ಹಾಗಿದ್ದರೆ ಸ್ವಲ್ಪ ಹೊತ್ತು ಕೂತು ಬಂದರಾಯಿತು. ಸಿಡಿಯುತ್ತಿರುವ ತಲೆಗೆ ಬದಲಾವಣೆ ಬೇಕಿತ್ತು. ರೇಶಿಮೆಯ ಜುಬ್ಬಾ, ಪಾಯ್‌ಜಾಮದೊಳಗೆ ತೂರಿಕೊಂಡ.

'ಈ ಡ್ರೆಸ್ ನಿಮಗೆ ಬಹಾಳ ಒಪ್ಪತದ. ಈ ಹರವಾದ ಎದೆ, ಎತ್ತರ ನಿಲುವು' ಗುಲಾಬಿ ಬೆರಳುಗಳನ್ನು ಎದೆಯ ಮೇಲೆ ಆಡಿಸುತ್ತ ಒಂದು ವೀಣೆಯ ದನಿ ಕಿವಿಯಲ್ಲಿ ಗುನುಗುನಿಸಿತು. ಕಾರ್ಯದರ್ಶಿ ತುಂಬ ಗೌರವದಿಂದ ಸ್ವಾಗತಿಸಿ ಪ್ರತಿಷ್ಠಿತರಿಗೆ ಮೀಸಲಾದ ಮೊದಲ ಸಾಲಿನಲ್ಲಿಯೇ ಕೂಡ್ರಿಸಿದ. ಪರಿಚಯದ ಮುಗುಳ್ನಗೆ, ನಮಸ್ಕಾರ, ಗುಸುಗುಸು ಮಾತು - ಪರದೆಯ ಹಿಂದಿನಿಂದ ತಂಬೂರಿಯ ಝೇಂಕಾರ ಕೇಳುತ್ತಿತ್ತು. ಜೊತೆಗೆ ಸುತ್ತಿಗೆಯ ಬಡಿತ. ತಬಲಾದ ಬದಲು ತನ್ನ ಎದೆಯ ಮೇಲೆ ಬೀಳುತ್ತಿರುವಂತೆ ಅನ್ನಿಸಿ ಕಸಿವಿಸಿಯಾಯಿತು. ಮೊದಲಿನ ಸಂತೋಷ ಉಳಿಯಲಿಲ್ಲ. ಕುಳಿತಲ್ಲಿಯೇ ಮಿಸುಕಾಡಿದ. ಸೀಟು ಬಿಟ್ಟು ಎದ್ದ. ಈಗ ಗಾಯಕಿಯ ಪರಿಚಯ - ಕಿರಣ ಮನೋಹರ ಅವರ ಗುರು, ಘರಾಣೆ ದೇಶ ವಿದೇಶಗಳಲ್ಲಿ ಹಾಡಿ ಖ್ಯಾತಿ ಪಡೆದ ಕಲಾವಿದೆ.

ಪರದೆ ಸರಿಯುತ್ತಿದ್ದಂತೆ ತಂಬೂರಿಯ ಶೃತಿಯೊಡನೆ ಸಣ್ಣದಾಗಿ ಆಲಾಪ - ಎವೆ ಇಕ್ಕದೆ ಗಾಯಕಿಯನ್ನು ನೋಡುತ್ತ ಸೀಟಿಗೆ ಅಂಟಿಕೊಂಡ. ಚಪ್ಪಾಳೆಯ ಸುರಿಮಳೆ ಆಗುತ್ತಿದ್ದಾಗ ಎಚ್ಚರ, ಎದ್ದು ಕೈಮುಗಿದು ಹೋಗುವಾಗಲೂ ತನ್ನನ್ನು ನೋಡಲಿಲ್ಲವೇ ? ಎದೆ, ಹೆಜ್ಜೆ ಭಾರವಾಗಿದ್ದವು. ಕಾರ್ಯದರ್ಶಿ ಓಡೋಡಿ ಬಂದ.

'ಸರ್ ಬರ್ರಿ, ಚಹಾ ತೊಗೊಳ್ಳೂಣ, ಕಿರಣ ಅವರ ಪರಿಚಯ ಮಾಡಿ ಕೊಡ್ತೀನಿ.' ಬೇರೆಯವರ ಭಾವನೆಗಳನ್ನು ರೂಪಿಸಿ, ಬರೆಯುವ ತನಗೆ ಏನಾಯಿತು? ಏನಿಲ್ಲ ಶೂನ್ಯ, ಯಂತ್ರದಂತೆ ಅವನ ಹಿಂದೆ ಹೋದ.

'ಮೇಡಂ, ಇವರು ಖ್ಯಾತ ಕಾದಂಬರಿಕಾರ ಜಯಚಂದ್ರ....'

'ನೀವು ಮಾತಾಡ್ತಾ ಇರ್ರಿ. ನಾನು ಈಗ ಬಂದೆ' ಗಡಿಬಿಡಿಯಲ್ಲಿ ಓಡುತ್ತಿದ್ದ ಕಾರ್ಯದರ್ಶಿ.

'ಅಶೋಕ ನಿಲ್ರಿ. ಅವರು ಬರ್ತೀನಿ ಅಂದಾರ. ನಾ ಇಲ್ಲೆ ಅದೀನಿ ಅಂತ ಹೇಳ್ರಿ ಅವರಿಗೆ' ಮಾತಿನಲ್ಲಿ ಗತ್ತು, ಆತ್ಮವಿಶ್ವಾಸವಿತ್ತು.

'ಆಗಲಿ ಮೇಡಂ ಬರಲಿ, ಅವರು ಇಲ್ಲಿಗೆ ಬರೋದೇ ದೊಡ್ಡ ಮಾತು. ಎಲ್ಲಾರೂ ಊಟಾ ಮಾಡಿಕೊಂಡೇ ಹೋಗಿರಂತ. ನಾ ಸ್ವಲ್ಪ ವ್ಯವಸ್ಥಾ ನೋಡಿಕೊಂಡು ಬರ್ತೀನಿ. ಹದಿನೈದು ನಿಮಿಷದೊಳಗ ಎಲ್ಲಾ ರೆಡಿಯಾಗಿರ್ತದ.'

ಹೋಗು ಮಾರಾಯಾ ಹೋಗ...... ನಿನ್ನ ಹದಿನೈದು ನಿಮಿಷದೊಳಗ ಹದಿನೈದು ವರುಷದ ಮಾತು ಆಡಬೇಕಾಗೇದ ನಾವಿಬ್ಬರೂ-

'ಅಂ, ಏನಂದಿರಿ !'

"ಏನಿಲ್ಲಾ, ಕಿರಣ ಮನೋಹರ ಹೆಸರು ಓದಿ, ಮರುಳಾಗಿ ನಾ ಸಂಗೀತಕ್ಕ ಬಂದೆ. ನೀ ಹೆಸರ ಯಾಕ ಬದಲಾಯಿಸಿದಿ ?'

'ಯಾಕಂದರ ನನ್ನ ಗಂಡ ಮನೋಹರಗ ಕಿರಣ ಅನ್ನೂ ಹೆಸರು ಸೇರಿತು. ನನಗೂ ಹೊಸಾ ಹೆಸರು, ಹೊಸಾ ವಾತಾವರಣ ಬೇಕಾಗಿತ್ತು. ಹಿಂದಿನದು ಮರೀಲಿಕ್ಕೆ' ಅವಳ ದನಿಯಲ್ಲಿ ನೋವಿತ್ತೇ ?

ಅವಳ ಸೀರೆ, ಬೆಲೆ ಬಾಳುವ ಒಡವೆ, ಮೇಕಪ್, ಹೇರಸ್ಟೈಲ್ ಎಲ್ಲ ನೋಡುತ್ತ ದಂಗಾಗಿ ಮೂಕನಾಗಿದ್ದ ಜಯಚಂದ್ರ.

ಮೇಡಂ, ಪ್ಲೀಸ್ ನನಗೂ ಆಟೋಗ್ರಾಫ್, ಪ್ಲೀಸ್ ನನಗೆ, ನನಗೆ ಮೇಡಂ ಹತ್ತಾರು ಕೈಗಳು ಚಾಚಿ ಸರಿದು ಹೋದವು.

'ಮೇಡಂ, ಪ್ಲೀಸ್ ನನಗೂ ಆಟೋಗ್ರಾಫ್' ತನ್ನ ಅಂಗೈಯನ್ನೇ ಮುಂದೆ ಚಾಚಿದ್ದ ಜಯಚಂದ್ರ. ಬಗ್ಗಿ ಅವನ ಅಂಗೈ ಮೇಲೆ ಗೀಚಿದಳು. 'ಸುಪ್ಪಿ' ಅವಳ ತುಟಿಗಳೇನೋ ನಗುತ್ತಿದ್ದವು. ಕಣ್ಣುಗಳಲ್ಲಿ ಏನದು - ನೀರ ತೆರೆಯೆ ?

'ಸುಖವಾಗಿದ್ದೀಯಾ ಸುಪ್ಪಿ' !

'ಓ..... ಭೇಖುಶಾಲ್, ನನ್ನ ನೋಡಿದರ ಗೊತ್ತಾಗೋದಿಲ್ಲೇನ್ರಿ.'

'ಮನೋಹರ ಯಾರು ?'

'ಜಯ್, ನಿಮ್ಮನ್ನ ಬಿಟ್ಟ ಮ್ಯಾಲೆ ನಾನು ಪುಣೆಕ್ಕ ಅಕ್ಕನ ಮನೀಗೆ ಹೋದೆ. ಅಲ್ಲೆ ಕೆಲಸಾ ಮಾಡಿಕೋತಾ ಸಂಗೀತ ಕಲೀತಿದ್ದೆ. ನಾ ಕೆಲಸಾ ಮಾಡೂ ಫರ್ಮಿನ ಬಾಸ್‌ನ ಕಾಕಾ ಮನೋಹರ ಅವರ ಗುರುತು ಆಯ್ತು. ಪರಿಚಯ ಬೆಳೀತು. ನನ್ನ ಕಥಿ ಗೊತ್ತಾತು. ಆದರೂ ಲಗ್ನಾ ಮಾಡಿಕೊಳ್ಳೋಣ ಅಂದರು. ಸಂಗೀತದೊಳಗ ಈಗ ನಾ ಏನಾದರೂ ಸಾಧಿಸಿದ್ದರ ಅದು ಅವರ ಪ್ರೋತ್ಸಾಹದಿಂದ, ಸಹಕಾರದಿಂದ. ದೊಡ್ಡ ಉದ್ದಿಮೆದಾರರು, ಅವರ

ಜೊತಿಗೆ ದೇಶ ವಿದೇಶ ಎಲ್ಲಾ ತಿರುಗಾಡಿ ಬಂದೆ. ಇಲ್ಲೆ ಒಂದು ಬ್ರ್ಯಾಂಚ್ ಆಫೀಸ ಅದ. ಆಕಸ್ಮಾತ್ ಈ ಪ್ರೋಗ್ರಾಂ ಫಿಕ್ಸ ಆತು.!'

'ಮಕ್ಕಳು ?"

'ನನಗ ಆಗಿಲ್ಲಾ ಮನೋಹರ' ಅವರ ಮೊದಲನೆ ಹೆಂಡತಿಗೆ ಇಬ್ಬರು ಗಂಡು ಮಕ್ಕಳು ಇದ್ದಾರ. ತಾಯಿ ಇಲ್ಲದ ಮಕ್ಕಳಿಗೆ ನಾನೇ ತಾಯಿ. ಇರಲಿ. ಇವತ್ತಿನ ನನ್ನ ಸಂಗೀತ ಕೇಳಿ ನಿನಗ ಏನ ಅನ್ನಿಸಿತು?

'ಸುಪರ್ಬ'

"ಕಿರಣ, ಸಾರಿ, ಎಷ್ಟು ಪ್ರಯತ್ನ ಮಾಡಿದರೂ ಲಗೂ ಬರಲಿಕ್ಕೆ ಆಗಲಿಲ್ಲಾ. ಕಾರು ಕೈ ಕೊಟ್ಟಿತು. ದಿಲ್ಲಿಗೆ ಅರ್ಜೆಂಟಾಗಿ ಟ್ರಂಕಾಲ್ ಹಚ್ಚಬೇಕಾಗಿತ್ತು. ಕಾರ್ಯಕ್ರಮ ಹೇಗಾಯ್ತು?" ಮಧ್ಯ ವಯಸ್ಸು ದಾಟಿದ, ಸೂಟುಧಾರಿ ಆಕರ್ಷಕ ವ್ಯಕ್ತಿ ಹತ್ತಿರ ಬಂದರು. ತುಟಿ ಓರೆ ಮಾಡಿ ನಕ್ಕಳು ಕಿರಣ.

"ಇರಲಿ ಬಿಡ್ರಿ. ಯಥಾಪ್ರಕಾರ ಸಂಗೀತ ಮುಗಿದ ಮ್ಯಾಲೇ ಬಂದಿರಿ. ಇವರು ಜಯಚಂದ್ರ. ಖ್ಯಾತ ಕಾದಂಬರಿಕಾರರು. ನನ್ನ ಸಂಗೀತ ಭಾಳ ಮೆಚ್ಚಿಕೊಂಡರು. ಇವರು ಮನೋಹರ."

"ಜಯಚಂದ್ರ ಓಃ-ತಿಳೀತು, ನಿಮ್ಮನ್ನ ಭೆಟ್ಟಿ ಆದದ್ದು ತುಂಬಾ ಸಂತೋಷ" ಎನ್ನುತ್ತ ಕೈ ಚಾಚಿದ ಮನೋಹರ ಕಿವಿಯ ಯಂತ್ರವನ್ನೇ ದಿಟ್ಟಿಸುತ್ತಾ ನಿಂತ ಜಯಚಂದ್ರನಿಗೆ ಅವರಿಬ್ಬರ ಮಾತೊಂದೂ ಕೇಳಿಸುತ್ತಿರಲಿಲ್ಲ.

***

■■

# ಮತ್ತದೇ ರಾಗ

ಹಾಲಿನ ಡಬ್ಬಿಯ ಗಡಗಡ ಸಪ್ಪಳ. ಪೇಪರ್ ಹುಡುಗನ ಕರೆಗಂಟೆ, ದೂರದಿಂದ ಕೇಳುವ ಗೂಡ್ಸ್ ಗಾಡಿಯ ಸಿಳ್ಳು - ಇಂದಿರಾ ಕಣ್ಣು ಬೇಕೋ ಬೇಡವೋ ಎನ್ನುವಷ್ಟೇ ತೆರೆದಳು. ಐದೂವರೆಯ 'ಢಣ್' ಶಬ್ದ ಇನ್ನೊಂದು ಬೆಳಗಿನ ಆಗಮನ ಸೂಚಿಸಿತು. ಬೆನ್ನು. ನಡು ಎಲ್ಲ ನೋಯುತ್ತಿತ್ತು. ಹಿಂದಿನ ದಿನ ಕಾಲೇಜಿನಲ್ಲಿ ಪರೀಕ್ಷೆಗಳ ಮೇಲ್ವಿಚಾರಣೆ ವಹಿಸಿಕೊಂಡಿದ್ದರಿಂದ ಒಂದು ನಿಮಿಷವೂ ಬಿಡುವಿಲ್ಲದೆ ಸುತ್ತಾಡಿದ್ದಳು. ದೇಹ ಇನ್ನಷ್ಟು ಹೊತ್ತು ಮಲಗಲು ಬಯಸುತ್ತಿತ್ತು. ಹಾಗೆಯೇ ಮತ್ತೆ ಹೊರಳಿ ಮಲಗಿದಳು. ಕಣ್ಣಿಗೆ ಜೊಂಪು ಹತ್ತುತ್ತಿದ್ದಂತೆ ನಿಧಾನವಾಗಿ, ಗಂಭೀರವಾಗಿ ಝೋಂ ಎಂದು ತಂಬೂರಿಯ ಝೇಂಕಾರ ಶುರುವಾಯಿತು. ಇಂದಿರೆಯ ಮಿದುಳು ತಟ್ಟನೆ ಎಚ್ಚತ್ತಿತ್ತು. ಕಣ್ಣು ಮುಚ್ಚಿಕೊಂಡೇ ಕಿವಿ ತೆರೆದಳು. ತಂಬೂರಿಯ ನಾದದಲ್ಲಿ ಬೆರೆತು ಇನಿದಾದ ಜೇನಿನಂಥ ಧ್ವನಿ ಇದೆ. ಆಲಾಪ ಬೆಳೆ ಬೆಳೆಯುತ್ತ ಹೋದಂತೆ ಮಧು ಇಂದಿನ ರಿಯಾಜ್‌ನಲ್ಲಿ ಮಾಲಕೌಂಸ್ ರಾಗ ಎತ್ತಿಕೊಂಡಿದ್ದಾಳೆ. ಈಚೆಗಿನ ಒಂದೆರಡು ವರುಷಗಳಲ್ಲಿ ಇದು ಇಂಥದೇ ರಾಗ ಎಂದು ಗುರುತು ಹಿಡಿಯುವ ಶಕ್ತಿ ತನಗೂ ಬಂದಿದೆ. ಇದರಲ್ಲಿ ಆಶ್ಚರ್ಯವೇನಿಲ್ಲ.

"ಇಂದೂ, ನಿನ್ನ ಧ್ವನಿ ಚಂದ ಅದ. ಹಾಡು ಕಲಿ. ಸಂಗೀತ ಬರಬೇಕಾದರೆ ದೇವರ ದೇಣಿಗಿ ಅದು. ಆದರ ಅದಕ್ಕ ತಕ್ಕ ಶ್ರದ್ಧಾದಿಂದ ಕಷ್ಟಪಟ್ಟು ಕಲೀಬೇಕು, ಹಾಡು ಕೇಳ್ತಾ ಅಥವಾ ಹೇಳ್ತಾ ಇದ್ದರ ಮನಸ್ಸಿಗೆ ಎಷ್ಟು ಶಾಂತಿ ಇರ್‍ತದ. ಅದರ ಕಲ್ಪನಾ ಇಲ್ಲ ನಿನಗ." ಚಿಕ್ಕಂದಿನಲ್ಲಿ ಅವ್ವನ ಬಲವಂತಕ್ಕೆ ತಾನೂ ಒಂದೆರಡು ವರುಷ ಹಾರ್ಮೋನಿಯಂ ಹಿಡಿದು ಮಾಸ್ತರರ ಮುಂದೆ ಕುಳಿತಿದ್ದಳು. ಅವರು ಬಾಯಿ ಓರೆ ಮಾಡಿ ಹಾಡುವ ರೀತಿ, ಬಾಯ್ತುಂಬ ತಾಂಬೂಲ ಹಾಕಿದಾಗಿನ ಅವರ ತೊದಲು ಮಾತು. ಅಣ್ಣಂದಿರ ಮುಂದೆ ಫಾರ್ಸ್ ಮಾಡಿ ತೋರಿಸುವುದರಲ್ಲಿಯೇ ತನ್ನ ಕಲಿಕೆ ಮುಗಿದಿತ್ತು. ಮನೆಯಲ್ಲಿ ಯಾವಾಗಲೂ ತನ್ನ ಸ್ವಂತ ಅಭಿರುಚಿಗೆ. ಆಯ್ಕೆಗೆ ಸ್ವಾತಂತ್ರ್ಯ ಕೊಡುತ್ತಿದ್ದ ಅಪ್ಪ ತನ್ನ ಕಾಲೇಜು ವಿದ್ಯಾಭ್ಯಾಸಕ್ಕೆ ಮಹತ್ವಕೊಟ್ಟು ಸಂಗೀತ ಬಿಡಿಸಿದ್ದರು.

ಇತಿಹಾಸದ ಪುನರಾವರ್ತನೆ ತನ್ನ ಮನೆಯಲ್ಲಿಯೆ ಆಗಿದೆ. ಮಧುಮತಿಗೆ ಅಮ್ಮನಂತೆ ಸಂಗೀತವೆಂದರೆ ಹುಚ್ಚು. ಬೆಳಗ್ಗೆ, ಸಂಜೆ ಶ್ರದ್ಧೆಯಿಂದ ತನ್ಮಯಳಾಗಿ ಅವಳು ಹಾಡುವಾಗ ತನಗೆ ಆನಂದ, ಬೇಸರ ಎರಡೂ, ಈಗ ಅಡ್ಡಿಯಿಲ್ಲ. ಆದರೆ ನಾಳೆ ಮದುವೆಯಾದ ಮೇಲೆ ಹೇಗೆ ? ಅವಳಂತೆಯೇ ಅವಳ ಗಂಡನಿಗೂ ಸಂಗೀತದ ಬಗ್ಗೆ ಒಲವು ಇರಬೇಕಲ್ಲ ? ಇಲ್ಲವಾದರೆ ......

ತಟ್ಟನೆ ಹಾಸಿಗೆ ಬಿಟ್ಟು ಎದ್ದಳು ಇಂದಿರಾ. ಕೆಲಸಕ್ಕೆ ಬಾರದ ಯೋಚನೆಗಳಲ್ಲಿ ಮೈಮರೆತು ವೇಳೆ ಕಳೆಯಲು ತನ್ನಂಥ ದುಡಿಯುವ ಗೃಹಿಣಿಗೆ ಸಾಧ್ಯವಿಲ್ಲ. ಎರಡು ಹೆಣ್ಣುಮಕ್ಕಳ ತಾಯಿಯಾಗಿ ತನಗೆ ಮೈತುಂಬ ಕೈಗಳಿರಬೇಕು, ಕಣ್ಣುಗಳಿರಬೇಕು. ಬೆಳಗಿನಿಂದ ಸಂಜೆಯವರೆಗೆ ಒಂದೊಂದು ದಿನ ರಾತ್ರಿಯವರೆಗೂ ಕೆಲಸ, ಕೆಲಸ, ಮತ್ತೆ ಬೆಳಗು, ಮತ್ತೆ ರಾತ್ರಿ, ಇದೇ ರೀತಿ ಇಂದಿರಾ ಬದುಕಿನಲ್ಲಿ ಹದಿನೈದು ವರ್ಷ ಯಂತ್ರದಂತೆ ದುಡಿದಿದ್ದಾಳೆ. ಮನೆ ಕೆಲಸ, ಮಕ್ಕಳ ಜವಾಬ್ದಾರಿ, ಕಾಲೇಜಿನ ಕೆಲಸ, ಅಧ್ಯಾಪಕ ವೃತ್ತಿಗೆ ಅವಶ್ಯವಾದ ಓದು, ಪಿಎಚ್.ಡಿ.ಗೆ ವಿವರ ಸಂಪಾದನೆ, ಹೀಗೆ ಎಲ್ಲವನ್ನೂ ಸಾಧಿಸುವುದರಲ್ಲಿ ಶರೀರ ಕೃಶವಾಗಿ, ಕೂದಲು ಹಣ್ಣಾಗತೊಡಗಿದೆ. ಬಿಟ್ಟು ಬಂದ ಗಂಡನನ್ನು, ಅವನು ಕಟ್ಟಿಕೊಂಡವಳನ್ನು ಕುರಿತು ಚಿಂತಿಸಲೂ ಅವಳಿಗೆ ಬಿಡುವಿಲ್ಲ. ಬೇಗ ಬೇಗ ತಿಂಡಿ, ಅಡುಗೆ ಕೆಲಸ ಮುಗಿಸಿ, ಕಾಲೇಜಿಗೆ ಬಸ್ಸು ಹಿಡಿಯಲು ಓಡಬೇಕು.... ಮಮತಾ, ಏ 'ಮಮತಾ ನಿದ್ದಿ ಸಾಕು ಏಳು, ಹೊತ್ತಾತು' ಕಿರಿಯ ಮಗಳನ್ನು ಕರೆಯುತ್ತ ಅಡಿಗೆ ಮನೆಗೆ ಧಾವಿಸಿದಳು ಇಂದಿರಾ.

ಕುಕ್ಕರ್ ಇಟ್ಟ ಇಂದಿರಾ ಶಾಲೆಗೆ ಹೋಗಲು ತಯಾರಾಗುತ್ತಿದ್ದ ಮಗಳ ತಲೆ ಬಾಚಲು ಕುಳಿತಳು. ಬ್ಯಾಡ ಅವ್ವಾ, ನಾನಃ ಬಾಚಿಗೋತೀನಿ' ಎಂದು ಮಮತಾ ಕೇಳಿದರೂ ಬಿಡಲಿಲ್ಲ. ಮಗಳ ನುಣುಪಾದ ರೇಶಿಮೆಯಂಥ ಕೂದಲ ಮೇಲೆ ಹಣಿಗೆ ಆಡಿಸುತ್ತ ಆಡಿಸುತ್ತಾ....

ದಟ್ಟವಾದ ಉದ್ದ ಕೂದಲಿನಿಂದ ಮುಖ ಮುಚ್ಚಿಕೊಂಡ ಈಶ್ವರ 'ಇಂದೂ, ಈಗ ಹಗಲು ಹೋಗಿ ಕತ್ತಲಾಯ್ತು' ಎಂದು ನಗುತ್ತಿದ್ದ. ಅವನ ನೀಳ ಬಲಿಷ್ಠ ಕೈಗಳು ಅವಳನ್ನು ಸುತ್ತಿಕೊಳ್ಳುತ್ತಿದ್ದವು. ಆ ಬಂಧನದಲ್ಲಿ ಅವಳು ಸುಖಿ...

'ಅವ್ವಾ ಸಾಕು ಬಿಡು, ಎಷ್ಟೊತ್ತು ಬಾಚತೀ, ಸಾಲಿಗೆ ಹೊತ್ತಾಗ್ತದ, ಹಣಿಗಿ ತಾ ಇಲ್ಲೆ' ಮಗಳು ಸಿಡುಕುತ್ತ ಎದ್ದು ಹೋದಾಗ ಇಂದಿರಾ ಪೆಚ್ಚಾದಳು. ಅವಳ ಭಾವಲೋಕದಲ್ಲಿ ನಡೆಯುವ ತುಮುಲದ ಅರಿವು ಮಗಳಿಗಿಲ್ಲ.

ಡಾ. ಈಶ್ವರ ತನ್ನ ಎತ್ತರ ನಿಲುವು, ಮಿತವಾದ ಮಾತು, ಪಾಂಡಿತ್ಯ, ವಿದ್ಯಾರ್ಥಿ ವಲಯದಲ್ಲಿ ಹೆಸರು - ಇತ್ಯಾದಿ ಗುಣಗಳಿಂದ ಇಂದಿರಾಳ ಗಮನ ಸೆಳೆದಿದ್ದ. ಇಂದಿರಾ ತನ್ನ ಪಿಎಚ್.ಡಿ.ಯ ವಿಷಯ ಸಂಗ್ರಹಕ್ಕೆ ಪ್ರೊ. ರಾಮಕೃಷ್ಣರೊಡನೆ ಚರ್ಚೆ ಮಾಡಲು ಆಗಾಗ ಹೋಗುತ್ತಿದ್ದಳು. ಅಲ್ಲಿ ಒಂದು ದಿನ 'ಮಿಸ್ ಇಂದಿರಾ, ನಿಮಗ ಯಾವ ಸಹಾಯಬೇಕಾದರೂ ಡಾ. ಈಶ್ವರ ಅವರನ್ನು ಕೇಳಿ' ಎಂದು ಪರಿಚಯ ಮಾಡಿಸಿದ್ದರು. ಸ್ನೇಹದಿಂದ, ದೊಡ್ಡ ದನಿಯಿಂದ ಎಲ್ಲರನ್ನೂ ಮಾತಾಡಿಸುತ್ತ ಓಡಾಡುವ ಚುರುಕು ಹುಡುಗಿ ಇಂದಿರಾಳನ್ನು ಈಶ್ವರ ಆಗಾಗ ಕ್ಯಾಂಪಸ್‌ನಲ್ಲಿ ನೋಡುತ್ತಿದ್ದ. ಆದರೆ ಪರಿಚಯವಿರಲಿಲ್ಲ. ಪಿಎಚ್.ಡಿ. ವಿಷಯದ ಬಗ್ಗೆ ಚರ್ಚೆ ಮಾಡುತ್ತ, ಜೊತೆಗೆ ತಮ್ಮ ತಮ್ಮ ಜೀವನದ ಬಗ್ಗೆಯೂ ಚರ್ಚೆ ಮಾಡುತ್ತ ಇಬ್ಬರೂ ಹತ್ತಿರ ಬಂದಿದ್ದರು. ದೂರ ಅಸಹನೀಯವಾದಾಗ ಮದುವೆಯಾಗಲು ಬಯಸಿದ್ದರು.

"ಅವ್ವಾರ, ಬೆನ್ನು ನೋವು ಅಂತಿದ್ರಿ. ಎಣ್ಣೆ ಹಚ್ಚಿ ಬಿಸಿನೀರು ಹಾಕ್ತೀನಿ, ಬರ್ರಿ" ಸಿದ್ದವ್ವ ಎಣ್ಣೆ ಬಟ್ಟಲು ಹಿಡಿದು ಬಂದಳು.

'ಮನುಷ್ಯ ಸಂಘ ಜೀವಿ, ಇಂದೂ, ಅಂವಾ ಒಂಟಿಯಾದಿ ದ್ವೀಪದ ಹಾಂಗ ಇಲ್ಲೆ ಬಾಳಲಿಕ್ಕೆ ಸಾಧ್ಯ ಇಲ್ಲಾ. ಇಡೀ ಜೀವಕೋಟೀನ ಅವಲಂಬಿತ ಅದ. ಈ ಮನಿಯೊಳಗ ನಾವಿಬ್ಬರೂ ನೌಕರಿ ಮಾಡುವವರು. ನಮಗೂ ಯಾರರೆ ಸಹಾಯಕ್ಕ ಬೇಕಾಗ್ತಾರ. ಹಳ್ಳೀಯಿಂದ ನಮ್ಮ ಅಕ್ಕ ದೊಡ್ಡಕ್ಕ, ಅವಳ ಮಗಾ ಚಿಂತಾಮಣಿನ್ನ ಕರಸೂಣು' ಮದುವೆಯಾದ ಹೊಸದರಲ್ಲಿ ಈಶ್ವರ ಬಹಳ ಕಷ್ಟಪಟ್ಟು ತನ್ನ ಮನ ಒಲಿಸಿದ್ದ. ಈಶ್ವರನ ಮಾತು ನಿಜ. ಕಾಲೇಜಿನ ಪ್ಯೂನ್ ಕಾಳಯ್ಯ ಅವನ ಹೆಂಡತಿ ಸಿದ್ಧವ್ವನನ್ನು ತಾನೀಗ ಹಚ್ಚಿಕೊಂಡಿಲ್ಲವೇ ? ಗಂಡಿನ ಆಸರೆ ಇಲ್ಲದ ಈ ಮನೆಗೆ ಅವರ ಸಹಾಯ ಅಪೇಕ್ಷಿತ.

ಒರಟು ಕೈಗಳ ಸಿದ್ಧವ್ವ ಬೆನ್ನು ನೀವುತ್ತಿರುವಾಗ ಹಿತವಾದ ನೋವು, ಮೂವತ್ತು ವರ್ಷಕ್ಕೂ ಹಿಂದೆ ಅವ್ವ ತಲೆಗೆ ನೀರು ಎರೆಯುವಾಗ ಎಣ್ಣೆಯಲ್ಲಿ, ನೀರಿನಲ್ಲಿ ಅವಳ ಅಂತಃಕರಣ ಹರಿದು ಬರುತ್ತಿತ್ತು. ಅವ್ವ ಕ್ಷಯದಿಂದ ನರಳಿ ತೀರಿದ್ದಳು. ಮನೆಯಲ್ಲಿ ಅಪ್ಪ ಅಣ್ಣಂದಿರ ಪ್ರೀತಿ ವಾತ್ಸಲ್ಯದಲ್ಲಿ ಮರೆವು ನೆರವಿಗೆ ಬಂದಿತ್ತು. ಖಾಲಿಯಾದ ಮನಸ್ಸು ಬೇರೆ ಏನನ್ನೋ ಬಯಸುತ್ತಿತ್ತು. ಆಗಲೇ ಈಶ್ವರ ಗುರುತಾದದ್ದು.

" ನಿನಗೂ ಡಾ. ಈಶ್ವರ ಅವರಿಗೂ ಗುರುತು ಆಗಿ ಎಷ್ಟ ದಿನಾ ಆಯ್ತು ?" ಇಂದಿರೆಯ ಪ್ರೀತಿಯ ಅಣ್ಣ ಅವಳಿಗೆ ಸವಾಲು ಹಾಕಿದ್ದ.

" ಒಂದು ವರ್ಷದ ಮೇಲಾಯ್ತು."

"ಇಷ್ಟು ಕಡಿಮಿ ಅವಧಿಯೊಳಗ ಅವನನ್ನ ನೀನು ತಿಳಕೊಳ್ಳಲಿಕ್ಕೆ ಸಾಧ್ಯ ಇಲ್ಲಾ. ನಮ್ಮ ಸಮಾಜದೊಳಗ ಹುಡುಗಿಗೆ ಒಂದೇ ಸಲ ಮದುವಿ ಆಗೋದು. ಅದಕ್ಕ ನೀ ಇನ್ನೂ ವಿಚಾರ ಮಾಡಿ ನೋಡು."

"ಈಶ್ವರ ಎಲ್ಲಾ ರೀತಿಯಿಂದ ನನಗ ಅನುರೂಪ ಅದಾರ ಅಂತ ನನಗ ಗೊತ್ತಾಗೇದ. ಹೊಂದಿಕೊಂಡು ಹೋಗೋದು ನನ್ನ ಕೈಯೊಳಗ ಇರ್ತದ."

ತಂಗಿಯನ್ನು ಮದುವೆಯಾಗುವ ಹುಡುಗ ವಿದ್ಯಾವಂತ, ಸ್ಫುರದ್ರೂಪಿ, ಪ್ರೊಫೆಸರ ಆಗಿದ್ದರೂ ಅವನು ತಮಗಿಂತ ಕೆಳಜಾತಿಯವನು ಎಂದು ತಿಳಿದಾಗ ಇಂದಿರೆಯ ಮನೆಯವರಲ್ಲಿ ಅಸಮಾಧಾನಪಟ್ಟಿದ್ದರು. ಪ್ರತಿಷ್ಠಿತ, ಒಟ್ಟು ಕುಟುಂಬದ ಶ್ರೀಮಂತ ತಂದೆಯ ಮನೆಯಲ್ಲಿ ಈಶ್ವರನಿಗೆ ಸ್ವಾಗತ, ಗೌರವ ಸಿಗುವುದಿಲ್ಲವೆನ್ನುವ ವಿಷಯ ಖಾತ್ರಿ ಮಾಡಿಕೊಂಡ ಇಂದಿರಾ ಎಲ್ಲ ಹಿತವಚನಗಳನ್ನು ಕಡೆಗಡೆಸಿ, ಮನೆ ಬಿಟ್ಟು ಬಂದು ರಜಿಸ್ಟರ್ಡ್ ಮದುವೆಯಾಗಿದ್ದಳು.

ಗಂಡನೂ ತನ್ನಂತೆ ಅಧ್ಯಾಪಕ, ಬುದ್ಧಿಜೀವಿ. ಒಬ್ಬರನ್ನೊಬ್ಬರು ತಿಳಿದುಕೊಂಡು ಮದುವೆಯಾಗಿದ್ದರಿಂದ ತಮ್ಮದು ಆದರ್ಶ ದಾಂಪತ್ಯವಾಗುವುದೆಂದು ಇಂದಿರಾಳ ಕಲ್ಪನೆ. ತನ್ನ ವೃತ್ತಿ, ಮನೆ ಕೆಲಸ. ಪಿಎಚ್.ಡಿ. ಅಭ್ಯಾಸಕ್ಕೆ ಮೊದಲ ಪ್ರಾಶಸ್ತ್ಯ ಕೊಟ್ಟು ಈಗಲೇ ಮಕ್ಕಳು ಬೇಡವೆಂದ ಇಂದಿರಾಳ ಮಾತಿಗೆ ಈಶ್ವರ ಮಣಿದಿದ್ದ. ಬದಲಾಗಿ ಮದುವೆಯಾದ ಮೇಲೆ ಇಬ್ಬರ ಸಂಬಳವನ್ನು ಜಂಟಿ ಖಾತೆಯಲ್ಲಿ ಇಡಲು ಹೆಂಡತಿಯನ್ನು ಒಪ್ಪಿಸಿದ್ದ.

'ಈ ಸಲದ ರಜಾಕ್ಕ ಎಲ್ಲೋರಕ್ಕ ಹೋಗಿಬರೋಣ, ಏನು ?'

'ಬ್ಯಾಡ ಇಂದೂ ನನಗ ಬರಿಯೋದ ಅದ.'

'ರೋಟರಿ, ಲಯನ್ಸ್, ಚಿತ್ರಾ ಸಂಸ್ಥೆ ಮೆಂಬರ ಆಗೋಣು ಇಬ್ಬರೂ. ಅಂದರ ಬಹಾಳ ಜನರ ಪರಿಚಯ, ಸ್ನೇಹ ಆಗ್ತದ' ಇಂದಿರಾ ಹುರುಪಿನಿಂದ ಹೇಳುತ್ತಿದ್ದಳು.

'ಉಹುಂ' ಅದೆಲ್ಲಾ ಸುಮ್ಮನ ಪ್ರತಿಷ್ಠಾಕ್ಕ. ನಮಗೆ ವೇಳೆ ಎಲ್ಲಿ ಇರ್ತದ? ಓದೋದು, ಬರೆಯೋದು, ಬಹಾಳ ಇರ್ತದ' ಈಶ್ವರ ತಣ್ಣಗೆ ಹೇಳುತ್ತಿದ್ದ.

'ಕಲೀಗ್ಸ್ ಸ್ನೇಹಿತರು ಎಲ್ಲಾರೂ ಕೂಡಿ ಕನ್ಯಾಕುಮಾರಿಗೆ ಟ್ರಿಪ್ ಇಟ್ಟಕೊಂಡಾರ. ನಾವು ಹೋಗಿ ಬರೋಣಲ್ಲ. ದಕ್ಷಿಣ ಭಾರತ ನೋಡಿದಾಂಗ ಆಗ್ತದ' ಇಂದಿರಾ ಆಸೆಯಿಂದ ಗಂಡನ ಕ್ರಾಪಿನಲ್ಲಿ ಕೈಯಾಡಿಸುತ್ತಿದ್ದಳು.

'ಛೇ, ಛೇ, ಇಬ್ಬರಿಗೂ ಕೂಡಿ ಎರಡು -ಮೂರು ಸಾವಿರ ಖರ್ಚು ಆಗ್ತದ. ವಿನಾಕಾರಣ ರೊಕ್ಕಾ ಹಾಳು. ಆ ಕಡೆಗೆ ಯಾವಾಗರೆ ಸಮ್ಮೇಳನ, ಸೆಮಿನಾರು ಇದ್ದಾಗ ಹೋಗೂಣಂತ' ಈಶ್ವರ ಖಂಡಿತವಾಗಿ ನಿರಾಕರಿಸಿಬಿಡುತ್ತಿದ್ದ.

ಬಡತನದಲ್ಲಿ ಬೆಳೆದು ಬಂದ ಈಶ್ವರನಿಗೆ ಹಣವೆಂದರೆ ಪಂಚಪ್ರಾಣ. ಹಣ ಖರ್ಚು ಮಾಡುವುದಕ್ಕಿಂತ ಕೂಡಿಹಾಕುವುದರಲ್ಲಿಯೇ ಸಂತೋಷ. ಸ್ವಂತ ಮನೆಯಾಗಬೇಕು. ಹಳ್ಳಿಯಲ್ಲೊಂದು ಹೊಲ ಕೊಳ್ಳಬೇಕು. ಸಾಧ್ಯವಾದರೆ ಕಾರಿನಲ್ಲಿ ಅಡ್ಡಾಡಿ ಸಮಾಜದಲ್ಲಿ ಗಣ್ಯವ್ಯಕ್ತಿಯಾಗಬೇಕು. ಉಳಿದ ಖರ್ಚು ಕಡಿಮೆ ಮಾಡದೆ ಹಣ ಉಳಿಸಲು ಸಾಧ್ಯವಿಲ್ಲ. ಹೀಗಾಗಿ ಇಂದಿರಾಳ ವಿಚಾರಗಳೆಲ್ಲ ಕೃತಿಗಿಳಿಯಲು ಬಿಡುತ್ತಿರಲಿಲ್ಲ. ಬಹಳವಾದಿಸಿ, ಜಗಳವಾಡಿದರೆ "ನೀನೊಬ್ಬಳೆ ಹೋಗು, ನಾನು ಬರುವುದಿಲ್ಲ" ಎಂದುಬಿಡುತ್ತಿದ್ದ. ಅವಳ ಯಾವ ಆಸೆಯೂ ಈಡೇರದೆ ಮೂಡ್ ಕೆಟ್ಟು ಹೋಗುತ್ತಿತ್ತು. ಅಭ್ಯಾಸ ಹಿಂದೆ ಉಳಿಯತೊಡಗಿತ್ತು. ತಮ್ಮದು ಆದರ್ಶ ದಾಂಪತ್ಯವೇ? ಎಂದು ಚಿಂತಿಸುವುದರಲ್ಲಿಯೇ ಮಧುಮತಿ, ಮಮತಾ ಹುಟ್ಟಿದರು. ಎರಡೂ ಹೆಣ್ಣುಮಕ್ಕಳಾದುದಕ್ಕೆ ಒಳಗೊಳಗೆ ಈಶ್ವರನಿಗೆ ಅಸಮಾಧಾನ. ಗಂಡು ಮಗುವಿನ ಅವನ ಆಸೆಗ ಇಂದಿರಾ ಮಣಿಯದೆ ಎರಡೇ ಮಕ್ಕಳು ಸಾಕು ಎನ್ನುವ ನಿರ್ಧಾರಕ್ಕೆ ಬಂದಿದ್ದಳು.

'ಅವ್ವಾ ಪಲ್ಲೆ ಬಹಾಳ ಕಾರ ಆಗೇದ. ನನಗ ಸ್ವಲ್ಪ ಮೊಸರು ಹಾಕು.'

'ಅವ್ವಾ ನನಗೆ ಬಾಳಿಹಣ್ಣು, ಸಕ್ಕರಿ ಕೊಡು.'

ಅನ್ಯಮನಸ್ಕಳಾಗಿ ಉಣ್ಣುತ್ತಿದ್ದ ಇಂದಿರಾ, 'ಹೌದಃ ಮಧು, ಮರತು ಪಲ್ಲೇಕ ಎರಡು ಸಾರೆ ಖಾರಾ ಹಾಕಿದ್ನೋ ಏನೋ? ಎನ್ನುತ್ತ ಎದ್ದಳು.

ಮನೆ ಮಾಡಿದೊಡನೆ ಬಂದು ತಳವೂರಿದ ನಾದಿನಿ ದೊಡ್ಡಕ್ಕ ಮಾಡುವ ಅಡಿಗೆಯೋ, ದೇವರಿಗೆ ಪ್ರೀತಿ, ಗಂಡ ಲೊಟಕೆ ಹೊಡೆದು ಉಣ್ಣುವಾಗ ಇಂದಿರೆಯ ಕಣ್ಣು, ಮೂಗುಗಳಲ್ಲಿ ನೀರು ಇಳಿಯುತ್ತಿತ್ತು. ಅತಿಥಿಗಳು ಮನೆಗೆ ಬಂದಾಗ ಚೆನ್ನಾಗಿ ತಿಂಡಿ, ಅಡಿಗೆ ಮಾಡಲೂ ದೊಡ್ಡಕ್ಕನಿಗೆ ಬರದು. ಅದಕ್ಕೆ ಮತ್ತೆ ಇಂದಿರಾನೇ ನಿಲ್ಲಬೇಕು. ದೊಡ್ಡಕ್ಕನ ವೇಷ-ಭೂಷಣ. ಒರಟು ಮಾತು, ಎಲಡಿಕೆ, ತಂಬಾಕು ಹಾಕಿ ಅಲ್ಲಲ್ಲಿ ಪಿಚಿ ಪಿಚಿ ಉಗುಳುವುದು, ಕೆಲಸದವರೊಡನೆ ಹರಟೆ ಹೊಡೆಯುವುದು - ಇತ್ಯಾದಿ ಎಲ್ಲವೂ ಇಂದಿರಾಗೆ ಅಲರ್ಜಿ. ಇದೇ ವಿಷಯಕ್ಕೆ ಗಂಡ-ಹೆಂಡತಿಗೆ ಎಷ್ಟೋ ಸಲ ಜಗಳವಾಗುತ್ತಿತ್ತು. ತನ್ನ ಮನೆಯಲ್ಲಿಯೇ ತಾನು ಪರಕೀಯಳೆನ್ನುವ ಭಾವನೆ ಹುಟ್ಟುತ್ತಿತ್ತು.

ಬಸ್‌ಸ್ಟಾಪ್‌ನಲ್ಲಿ ಕಂಡ ಮುಖಗಳಿಗೆ ಪರಿಚಿತ ನಗೆ ಬೀರಿ ಗೋಡೆಗೆ ಆತು ನಿಂತಳು ಇಂದಿರಾ.

ಗಂಡ-ಹೆಂಡಿರ ಸಂಬಳದಲ್ಲಿ, ಈಶ್ವರನ ಕೈ ಬಿಗಿ ಹಿಡಿತದಿಂದಾದ ಉಳಿತಾಯದಲ್ಲಿ, ಒಂದು ಸಣ್ಣ ಸುಂದರ ಮನೆ ಕಟ್ಟಿ ಮುಗಿಸಿದ ದಿನಃ

'ಗೃಹಪ್ರವೇಶದ ದಿನಾ ನಮ್ಮ ಅಕ್ಕ- ಅಣ್ಣಂದಿರಿಗೆ ಆಮಂತ್ರಣ ಕಳಿಸೂಣು, ಅವರೂ ನೋಡಲಿ ನಮ್ಮ ಹೊಸಾ ಮನಿ ' ಎಲ್ಲವನ್ನೂ ಸಾಧಿಸಿದ ಹುರುಪಿನಲ್ಲಿದ್ದ ಇಂದಿರಾ ಗಂಡನ ಹುಬ್ಬುಗಂಟನ್ನು ಗಮನಿಸಿದ್ದಿಲ್ಲ.

ಒಂದು ತರಹದ ಕೀಳರಿಮೆಯಿಂದ ತಮ್ಮಿಬ್ಬರನ್ನು ಕಂಡ ತವರಿನವರೆದುರು ತನ್ನ ಮನೆಯ ಒಪ್ಪ- ಓರಣ, ವಸ್ತ್ರ-ಒಡವೆ, ಅತ್ಯುತ್ತಮ ತಿಂಡಿ, ಊಟದ ರುಚಿ ತೋರಿಸಿ, ರಾಜೋಪಚಾರ ಮಾಡಿ, ತಾನೇ ಸ್ವತಃ ರೂಪಿಸಿಕೊಂಡ ತನ್ನ ಬದುಕಿನಲ್ಲಿ ತಾನೆಷ್ಟು ಸುಖಿಯಾಗಿದ್ದೇನೆ ಎಂದು ಮನಗಾಣಿಸಿ ಕೊಟ್ಟು ಅವರ ತಪ್ಪು ಕಲ್ಪನೆಯನ್ನು ಹೋಗಲಾಡಿಸಬೇಕೆನ್ನುವುದು ಇಂದಿರೆಯ ಮನದಾಳದ ಹಂಬಲ. ಆದರೆ ಈಶ್ವರನ ಮನಃಸ್ಥಿತಿ ಇದಕ್ಕೆ ತೀರ ವಿರುದ್ಧವಾದದ್ದು. ಅವನು ಮನೆಯಲ್ಲಿದ್ದಾಗ ಇಂದಿರೆಯ ತವರಿನವರು ಯಾರಾದರೂ ಬಂದರೆ, 'ಹಲೋ ಎಲ್ಲಾ ಆರಾಮ?' ಅಲ್ಲಿಗೆ ಮುಗಿಯಿತು. ಮಾತು-ಕತೆ, ತನ್ನ ಕೋಣೆ ಸೇರಿ ಬಾಗಿಲು ಹಾಕಿ ಕುಳಿತುಬಿಡುತ್ತಿದ್ದ. ತನ್ನನ್ನು ಅಳಿಯನನ್ನಾಗಿ ಸ್ವೀಕರಿಸಲು ನಿರಾಕರಿಸಿದವರ ಭೆಟ್ಟಿ, ಮಾತು, ಊಟ ಉಪಚಾರ ಎಂದರೆ ಅವನ ಮನಸ್ಸಿಗೆ ಕಿರಿ ಕಿರಿ. ಅಲ್ಲದೆ ಇದಕ್ಕೆಲ್ಲ ಅನಾವಶ್ಯಕವಾಗಿ ಹಣ ಹೆಚ್ಚು ಖರ್ಚಾಗಿ ಮನೆಯ ತಿಂಗಳ ಲೆಕ್ಕದಲ್ಲಿ ಏರುಪೇರಾಗುತ್ತಿತ್ತಲ್ಲ. ಆ ದಿನವೆಲ್ಲ ಮನೆ ಮತ್ತೆ ರಣಾಂಗಣ....

ತನ್ನ ಬದುಕಿನ ಐವತ್ತು ವರ್ಷಗಳಲ್ಲಿ ಉದ್ದಕ್ಕೂ ಕುದುರೆ, ಆನೆ ಸೈನ್ಯಗಳಿಲ್ಲದೆ ಯುದ್ಧ ಮಾಡುವುದೇ ಆಯಿತು. ಇಂದಿರಾ, ನಿಟ್ಟುಸಿರು ಬಿಟ್ಟು ಕ್ಲಾಸಿನೊಳಗ ಹೋದಳು.

***

ಈಶ್ವರ ತುಂಬಾ ಮುಂದಾಲೋಚನೆಯ ಮನುಷ್ಯ, ಎಲ್ಲವನ್ನು ಪ್ಲ್ಯಾನ್ ಹಾಕಿಯೇ ಮಾಡುತ್ತಾರೆ ಎಂದು ಮೆಚ್ಚಿಕೊಳ್ಳುತ್ತಿದ್ದ ಇಂದಿರಾ ದಿನವೂ ಕಾಲೇಜಿಗೆ ಹೊರಡುವಾಗ ತನ್ನ ಪರ್ಸಿನಲ್ಲಿ ಹತ್ತು ರೂಪಾಯಿಗಿಂತ ಹೆಚ್ಚು ಇಡಲು ಬಿಡದ ಗಂಡನ ಬಗ್ಗೆ ಒಂದು ರೀತಿಯ ಸಂಶಯದ ಸುಳಿಯಲ್ಲಿ ಸಿಲುಕಿಕೊಳ್ಳತೊಡಗಿದಳು. ಇವರು ತಾನು ತರುವ ಸಂಬಳಕ್ಕಾಗಿಯೇ ತನ್ನನ್ನು ಮದುವೆಯಾದರೇ? ಪ್ರೀತಿಯೆಲ್ಲ ತೋರಿಕೆಯದಾಗಿತ್ತೇ? ತನ್ನ ಆಸೆ, ಆಕಾಂಕ್ಷೆ,

ರುಚಿ-ಅಭಿರುಚಿ ಎಲ್ಲವನ್ನೂ ಬಲಿಗೊಟ್ಟೆ. ಹೊಂದಿಕೊಳ್ಳುವುದೆಂದರೆ ಏನು? ವ್ಯಕ್ತಿತ್ವವನ್ನು ಸಂಪೂರ್ಣ ನಾಶ ಮಾಡಿಕೊಳ್ಳುವುದೇ? ತಮ್ಮ ಒಳ್ಳೆಯ ಉಡುಪಿಗಾಗಿ, ತಿನಿಸಿಗಾಗಿ, ಸಿನಿಮಾ ಪಿಕ್‌ನಿಕ್ ಇತ್ಯಾದಿ ಚೈನಿಗಾಗಿ ಹಣ ಖರ್ಚು ಮಾಡದ ತಂದೆಯ ಬಗ್ಗೆ ಮಧು, ಮಮತಾರಿಗೂ ಪ್ರೀತಿ ಅಷ್ಟಕ್ಕಷ್ಟೇ, ಉಳಿದ ಮಕ್ಕಳಂತೆ ಬೆಳೆಯುವ ಅವಕಾಶವೂ ಗಂಡನ ಇಂಥ ಸ್ವಭಾವದಿಂದ ಮಕ್ಕಳಿಗೆ ಇಲ್ಲವಾಗುತ್ತಿದೆ. ಇದಕ್ಕೆ ಏನು ಉಪಾಯ? ದೊಡ್ಡ ದನಿಯ, ನಿಷ್ಕಲ್ಮಷ ಮನಸ್ಸಿನ ಇಂದಿರಾ ಆಪ್ತ ಗೆಳತಿಯ ಎದುರು ತನ್ನ ಸಂಶಯವನ್ನು ಬಿಚ್ಚಿ ಹೇಳಿದಳು. ಸರಿ, ಇಷ್ಟು ಸಾಕಲ್ಲ, ಅದಕ್ಕೆ ರೆಕ್ಕೆಪುಕ್ಕ ಹುಟ್ಟಿಕೊಂಡು ಬೇರೆ ಬೇರೆ ಆಕಾರ, ರೂಪ, ತಳೆಯತೊಡಗಿತು. ಪ್ರೀತಿಸಿ ಮದುವೆಯಾದ ಇಂದಿರಾಳನ್ನು ತುಂಬಾ ಸುಖವಾಗಿಟ್ಟಿದ್ದೇನೆ, ಒಳ್ಳೆಯ ಉದ್ಯೋಗವಿದೆ. ಎರಡು ಮಕ್ಕಳು, ಸ್ವಂತ, ಒಂದಿಷ್ಟು ಆಸ್ತಿ, ಎಲ್ಲಾ ಇದ್ದೂ ಇವಳಿಗೆ ತೃಪ್ತಿಯಿಲ್ಲ. ಎಲ್ಲರ ಹತ್ತಿರ ತನಗೆ ಅವಮಾನವಾಗುವಂತೆ ಏನೇನೋ ಹೇಳಿಕೊಂಡು ತಿರುಗುತ್ತಾಳಲ್ಲ ಅವಳನ್ನು ಹಿಡಿದು ಚೆನ್ನಾಗಿ ಚಚ್ಚಬೇಕು ಎಂದುಕೊಂಡು ಈಶ್ವರನೂ ತಾಳ್ಮೆ ಕಳೆದುಕೊಂಡು ಕೂಗಾಡಿದ. ಅವರ ಸಂಸಾರದಲ್ಲಿಯ ಸಣ್ಣ ಸೀಳು ಗೆರೆ ದಿನದಿನಕ್ಕೆ ದೊಡ್ಡದಾಗುತ್ತ ಬಿರುಕುಬಿಟ್ಟಿತು. ಇಬ್ಬರೂ ಬಿರುಕು ಮುಚ್ಚುವ ಪ್ರಯತ್ನ ಮಾಡಲಿಲ್ಲ. ಜಗಳ, ಕೂಗಾಟ, ದ್ವೇಷ, ಚುಚ್ಚುಮಾತುಗಳು, ಜುಗುಪ್ಸೆ..... ಛೀ.... ಛೀ....

"ಓಃ ಇಂದಿರಾ, ನಮಸ್ಕಾರ, ಕಾಲೇಜು ಮುಗಿಸಿ ಮನೀಗೆ ಹೊರಟೀರೇನು?" ಇವತ್ತ ತಡಾ ಆಯ್ತು ನೋಡ್ರಿ."

"ಮೊನ್ನೆ ನಿಮ್ಮ ಮಧುನ ಸಂಗೀತ ಚೆನ್ನಾಗಿತ್ರಿ. ದನಿ ಎಷ್ಟು ಇಂಪು ಆದ. ಎಲ್ಲಾರೂ ಮೆಚ್ಚಿಕೊಂಡರು. ನೀವು ಅವಳಿಗೆ ಪ್ರೋತ್ಸಾಹ ಕೊಟ್ಟು ಕಲಿಸಬೇಕ್ರಿ. ಮುಂದ ಬಂದು ಹೆಸರ ಮಾಡ್ತಾಳ."

"ಹಾಂ, ಸುನಂದಾ, ನಮ್ಮ ಮಧೂಗ ಒಂದ ವರನ ಬಗ್ಗೆ ವಿಚಾರಿಸ್ತೀನಿ ಅಂದಿದ್ರಲ್ಲಾ ಏನಾಯ್ತು ಅದು?"

ಒಮ್ಮೆಲೆ ಸುನಂದೆಯ ಮುಖ ಪೆಚ್ಚಾಯಿತು. ಇಳಿದನಿಯಲ್ಲಿ, "ಹೋಗಲಿ ಬಿಡ್ರಿ. ಏನ್ಮಾಡ್ತೀರಿ ಅದನ್ನ ಕೇಳಿ. ಬಹಾಳ ಅರ್ಥೋಡಕ್ಸ ಮಂದೀರಿ ಅವರು. ನಮಗ ಹೊಂದೂದಿಲ್ಲ. ಆಯ್ತು, ನಾ ಬರ್‍ತೀನಿ" ಸುನಂದೆ ಇಳಿಯುವ ಸ್ಟಾಪ್ ಬಂದಿತ್ತು.

ಸೋತವಳಂತೆ ಕಿಟಕಿಗೆ ಒರಗಿ ಕಣ್ಣು ಮುಚ್ಚಿದಳು ಇಂದಿರಾ. ತಾನು ಮನೆ ಬಿಟ್ಟು ಬಂದಾಗ ಮಮತಾ ಚಿಕ್ಕವಳು. ಆದರೆ ಮಧುಗೆ ಎಲ್ಲ ತಿಳಿಯುತ್ತಿತ್ತು. ಅವಳ ಪ್ರೀತಿ, ಧೈರ್ಯ, ಆಸರೆಯಿಂದಲೇ ವರುಷಗಳನ್ನು ಕಳೆದಿದ್ದಾಳೆ. ಇನ್ನು ಅವಳಿಗೆ ಬೇಗ ಮದುವೆ ಮಾಡಿದರ ತನ್ನ ಒಂದು ದೊಡ್ಡ ಜವಾಬ್ದಾರಿ ಕಳೆದಂತೆ. ಮಧು ರೂಪ, ವಿದ್ಯೆ, ಸಂಗೀತ, ಕಲೆ ಯಾವುದರಲ್ಲಿಯೂ ಕಡಿಮೆಯಿಲ್ಲ. ಆದರೂ ಎರಡು-ಮೂರು ವರುಷಗಳಿಂದ ಪ್ರಯತ್ನ ಮಾಡುತ್ತಿದ್ದರೂ ಅನುರೂಪ ಹುಡುಗ ಸಿಗುತ್ತಿಲ್ಲ. ಸಿಕ್ಕ ಹುಡುಗ ಮನಸ್ಸಿಗೆ ಒಪ್ಪಿಗೆಯಿಲ್ಲ. ಮಗಳಿಗೆ ಗಂಡ ಸಿಗಲು ತಡವಾದುದಕ್ಕೆ ತಾನು ಗಂಡನಿಂದ ಬೇರೆಯಾಗಿ ಬಾಳುತ್ತಿರುವುದೂ ಒಂದು ಖಚಿತವಾದ ಕಾರಣ. ತನ್ನ ಪರಿಸ್ಥಿತಿ ಅರ್ಥಮಾಡಿಕೊಳ್ಳುವ ಜನ ಇದ್ದರೂ ಇರಬಹುದು. ಅವರು ಉದಾರವಾಗಿ ಯೋಚಿಸಬಹುದಲ್ಲ. ಜನ ಈಗೀಗ ಬದಲಾಗುತ್ತಿದ್ದಾರೆ. ಕಳೆದ ತಿಂಗಳು ನೋಡಿ ಹೋದ ಹುಡುಗ ಒಪ್ಪದಿದ್ದಾಗ ಯಾಕೋ ತುಂಬಾ ಬೇಸರವಾಗಿತ್ತು.

"ಅವ್ವಾಃ ಈ ನಾಟಕಾ ಎಲ್ಲಾ ಬಿಟ್ಟು ಬಿಡೂಣು. ನಾನು ಸಿಂಗಾರ ಮಾಡಿಕೊಂಡು ಬಂದವರ ಮುಂದ ಪ್ರದರ್ಶನಕ್ಕ ಕೂಡ್ರುದು ಬಿಟ್ಟು ಬೇರೆ ತರಹಾ ಮದುವಿ ಆಗೂದಿಲ್ಲೇನು?" ಎಂದಿದ್ದಳು ಮಧು ಬೇಸರದಿಂದ.

"ಇಂಥಾ ಮದುವೀ ಬಿಟ್ಟರ ಪ್ರೇಮವಿವಾಹ ಒಂದs ಹಾದಿ ನೋಡ. ಅಂದರ ಹುಡುಗಿ ತಾನs ಒಬ್ಬನ್ನ ಪ್ರೀತಿಸಿ ಮದುವಿ ಆಗೋದು. ಹಾಂಗ ನೀ ಯಾರನ್ನಾದರೂ ಆರಿಸಿದರ ಅಡ್ಡಿಯಿಲ್ಲ, ಮಧು. ನಾ ಸಂತೋಷದಿಂದ ಮದುವೀ ಮಾಡತೇನಿ" ಎಂದಿದ್ದಳು ತಾನು.

ಮಧು ತಿರುಗಿ ಏನೂ ಮಾತಾಡದೆ ಅಲ್ಲಿಂದ ಎದ್ದು ಹೋಗಿದ್ದಳು. ಅವಳ ಸ್ವಭಾವ ಗಂಭೀರ. ತಂದೆಯಂತೆ ಮಾತೂ ಕಡಿಮೆ. ಅವಳಂಥ ಸ್ವಭಾವದ ಹುಡುಗಿಗೆ ಪ್ರೇಮ ವಿವಾಹ ಸಾಧ್ಯವಿಲ್ಲ. ಎಲ್ಲವನ್ನೂ ಇಂದಿರಾ ಚಿಂತಿಸಿ ತನ್ನ ಪ್ರಯತ್ನ ಮುಂದುವರಿಸಿದ್ದಳು. ಇದೇ ವಿಷಯಕ್ಕೆ ಅಣ್ಣನಿಗೆ ಕಾಗದ ಬರೆದು ಉತ್ತರಕ್ಕಾಗಿ ಕಾಯುತ್ತಿದ್ದಳು. 'ಅನುಗಾಲವೂ ಚಿಂತೆ ಈ ಜೀವಕೆ' ಎನ್ನುವ ಹಾಗೆ ಈಗ ಮಗಳ ಮದುವೆಯ ಚಿಂತೆ ತನ್ನ ಬೆನ್ನು ಹತ್ತಿದ ಬೇತಾಳವಾಗಿದೆ...

ಮನೆಯ ಒಳಗೆ ಬರುತ್ತಿದ್ದ ಹಾಗೇ ಮಮತಾ, 'ಅವ್ವಾ ಪತ್ರ ಹಿಡಿ' ಎಂದಳು. ಅಣ್ಣ ಏನು ಬರೆದಿದ್ದಾನೋ, ಎದೆ ಡವ ಡವ ಎನ್ನುತ್ತಿತ್ತು.

"ಪ್ರೀತಿಯ ಇಂದೂ,

ನಿನ್ನ ಪತ್ರ ಮುಟ್ಟಿ ವಿಷಯ ತಿಳಿಯಿತು. ನನಗೂ ಬಿ. ಪಿ. ಯಿಂದ ತ್ರಾಸಾಗಿತ್ತು. ಆದ್ದರಿಂದ ಬೇಗ ಉತ್ತರ ಬರೆಯಲಿಲ್ಲ. ಮಧುಮತಿಗೆ ಗಂಡು ಹುಡುಕಲು ಬರೆದಿದ್ದೀ. ನಾನು ಅಲ್ಲಲ್ಲಿ ವಿಚಾರಿಸಿದೆ. ಹುಡುಗಿ ಯಾವ ಜಾತಿ ಎಂದು ಕೇಳುತ್ತಾರೆ. ಏನೆಂದು ಹೇಳಲಿ? ನೀನು ಮದುವೆ ಮಾಡಿಕೊಳ್ಳುವಾಗ ಇದನ್ನೆಲ್ಲ ವಿಚಾರ ಮಾಡಬೇಕಿತ್ತು....

ಮುಷ್ಟಿಯಲ್ಲಿ ಕಾಗದವನ್ನು ಮುದ್ದೆ ಮಾಡಿ, ಸೋಫಾಕ್ಕೆ ಒರಗಿ ಕಣ್ಣು ಮುಚ್ಚಿದಳು ಇಂದಿರಾ. 'ಅವ್ವಾs ನಿನಗ ದಣಿವು ಆಗೇದ. ಹಾಲು ಕಾಸಿತರ್‍ತೀನಿ.' ಮಮತಾ ಒಳಗೆ ಓಡುತ್ತಿದ್ದಾಗ, ಮಧುನ ತಂಬೂರಿಯ ಝೇಂಕಾರ ಸಣ್ಣದಾಗಿ ಶುರುವಾಗಿ ಕೋಣೆಯನ್ನು ತುಂಬತೊಡಗಿತು.

***

■■

# ಅಂತ್ಯ ಸಂಸ್ಕಾರ

ಪುಟ್ಟ ಪುಟ್ಟ ಎಳೆಯ ಮುಖ. ಹಳದಿ ಹುಲ್ಲಿನಂಥ ಒಣಕೂದಲು. ಹರಿದ ಅಂಗಿ-ಚೆಡ್ಡಿ. ಲವಲವಿಕೆ ನೋವು, ಹಸಿವು, ಮಿಶ್ರಣದ ಕಣ್ಣುಗಳು ಊಟದ ಬಟ್ಟಲು ನೀರಿನ ವಾಟಿ ಹಿಡಿದು ಸಾಲಾಗಿ ಬಂದು ಕುಳಿತವು. ಬಟ್ಟಲಿಗೆ ಒಂದೊಂದೇ ಪದಾರ್ಥ ಬಿದ್ದ ಹಾಗೆ ಕಣ್ಣು ಹೊಳೆದವು. ಮೂಗು ಅರಳಿದವು. ನಾಲಿಗೆ ನೀರೂರಿತು. ಕೈ ಚಡಪಡಿಸಿತು. ಹೊಟ್ಟೆ ಗೊರ ಗೊರ ಎಂದಿತು. ಎಲ್ಲ ದೃಷ್ಟಿಗಳೂ ಶಿವಣ್ಣನ ಮುಖದಲ್ಲೇ ನಟ್ಟಿದ್ದವು. ಹತ್ತಿರ ನಿಂತಿದ್ದ ಅಪರಿಚಿತರತ್ತ ಲಕ್ಷ್ಯವೇ ಇಲ್ಲ. ಶಿವಣ್ಣನ ಒಂದು ಸನ್ನೆ ಸಾಕಾಗಿತ್ತು ಕೈ ಬಾಯಿಗೆ ಜಗಳ ಸುರು-

"ಸಾಹುಕಾರರ, ಈ ಪಕ್ವಾನ್ನ ಭೋಜನ ಯಾರ ಹೆಸರಿನಲ್ಲಿ ನಡೀತದ ಹೇಳಿದರೆ ಅವರ ಆತ್ಮಾಕ ಶಾಂತಿ ಸಿಗಲಿ ಅಂತ ಪ್ರಾರ್ಥನೆ ಮಾಡ್ತಾರ ಮಕ್ಕಳು" ಅನಾಥಾಶ್ರಮದ ಮ್ಯಾನೇಜರ್ ಶಿವಣ್ಣ ವಿರುಪಾಕ್ಷಪ್ಪನವರನ್ನು ಕೇಳಿದರು.

"ಹೆಸರು ಹೇಳೂದೇನು ಬ್ಯಾಡಾ ಶಿವಣ್ಣಾ, ಮಕ್ಕಳು ಹೊಟ್ಟಿ ತುಂಬ ಊಟಾ ಮಾಡಿದರ ಅವರ ಆತ್ಮಕ್ಕ ಶಾಂತಿ ಸಿಕ್ಕಾಂಗ ಅಂತ ತಿಳಕೊಂಡೇವಿ." 'ಇವರೊಬ್ಬ ವಿಚಿತ್ರ ಪ್ರಾಣಿ' ಎನ್ನುವಂತೆ ನೋಡುತ್ತ ಶಿವಣ್ಣ "ನೀವು ಮಕ್ಕಳಿಗೆ ಎರಡು ಬುದ್ದೀ ಮಾತು ಹೇಳ್ತಿರೇನ್ರಿ ಸಾಹುಕಾರರ" ಎಂದರು ಕಾತುರರಾಗಿ, ಅದೂ ಬೇಡ ಎಂದು ವಿರೂಪಾಕ್ಷಪ್ಪ ಗೋಣು ಅಲ್ಲಾಡಿಸಿದರು.

"ನಿಮ್ಮೆಲ್ಲರ ತಾಯಿಯ ಆತ್ಮಕ್ಕ ಶಾಂತಿ ಸಿಗಲಿ. ಹುಂ ಊಟ ಮಾಡಿ' ಶಿವಣ್ಣನ ಮಾತು ಮುಗಿಯುವುದೊಂದೇ ತಡ ಸರಭರ, ಪಟ್ ಪಟ್, ಗುಟುಕ್ ಗುಟುಕ್ ಎಲ್ಲ ಸಪ್ಪಳ ಸುರುವಾದವು.

"ಈ ಅನ್ನ ಎಷ್ಟು ರುಚಿ ಅದ ಅಲ್ಲಾ"

"ಇಂಥಾ ಊಟಾ ನಾ ಎಂದೂ ಉಂಡಿದ್ದಿಲ್ಲಾ. ಇದs ಮೊದಲ್ನೇ ಸಾರೆ."

"ಸಾವುಕಾರರು ದಿನಾ ಇಂತಾದ್ದ ಉಣತಾರೋ. ನಾವು ಬಡವರು ದಿನಾ ರೊಟ್ಟಿ ಕಾರಬ್ಯಾಳಿ ಅಷ್ಟs"

"ಅದೂ ಹೊಟ್ಟಿ ತುಂಬಾ ಸಿಗೂದಿಲ್ಲಾ. ಈ ಗಾಲಿ ಎಷ್ಟ ಸೀ ಸೀ, ಹುಳಿ ಹುಳಿ ಅದ ಅಲ್ಲಾ. ಇದಕ್ಕ ಏನಂತಾರೋ."

"ಏನಂತಾರೋ ನನಗೂ ನೆನಪ ಇಲ್ಲಪಾ. ಒಂದ ಸಾರೆ ಅಗಸ್ಟ್ ೧೫ಕ್ಕ ಎಲ್ಲಾರಿಗೂ ಒಂದೊಂದು ತಿನ್ನಾಕ ಕೊಟ್ಟಿದ್ರು. ಅದರ ಮ್ಯಾಲೆ ಇವತ್ತ ತಿಂದದ್ದು ನೋಡು."

ಎಲ್ಲರಿಗೂ ಹೊಟ್ಟೆ ತುಂಬಾ ನೀಡಿಸುತ್ತ ಜಿಲೇಬಿ ಬುಟ್ಟಿ ಹಿಡಿದು ಬಂದ ಮಧುವಿಗೆ ಈ ಮಾತು ಕೇಳಿಸಿತು. ಇದಕ್ಕೆ ಜಿಲೇಬಿ ಎನ್ನುತ್ತಾರೆ ಎಂದು ಹೇಳಬೇಕೆಂದರೂ ಹಸಿದ ಹೊಟ್ಟೆಯಲ್ಲಿ ದಿನ ಕಳೆಯುವ ಈ ಮಕ್ಕಳಿಗೆ ಹೇಳಿ ಏನು ಉಪಯೋಗ - ಮನ ಮಿಡುಕಿತು.

'ಅಕ್ಕಾ ಅವರs ಈ ಬಳ್ಳ್ಯಾಗ ಸೀ ರಸಾ ಹೆಂಗ ತುಂಬತಾರ್ರಿ" ಹೊಟ್ಟೆ ತುಂಬಿದಂತೆ ಅನಾಥ ಮಗುವಿನ ಬಾಯಿಗೂ ಶಕ್ತಿ ಬಂದಿತ್ತು. ಅವನ ಮುಗ್ಧ ಪ್ರಶ್ನೆಗೆ ನಗು ಬಂದರೂ "ಜಿಲೇಬಿ ಮಾಡೂವಾಗ ನೋಡಿದರ ತಿಳೀತದಪಾ" ಎಂದ. ಮಧುಮತಿ ಇನ್ನಷ್ಟು ಜಿಲೇಬಿ ನೀಡಿ ಮುಂದೆ ಸರಿದಳು. "ಅಣ್ಣಾs ಇಲ್ಲೆ ಕೋಸಂಬರಿ, ಪಲ್ಲೆ ತಾ" "ಅತಿಗೀ ಈ ಸಾಲಿಗೆ ಇನ್ನೊಮ್ಮೆ ಮಸಾಲಿ ಅನ್ನಾ ಕೇಳಿ ಹೊಟ್ಟೆ ತುಂಬ ಉಣ್ರಿ ಇನ್ನಷ್ಟು ಕೇಳಿ ನೀಡಿಸಿಕೊಳ್ರಿ.

ಸಾವಕಾಶ ಊಟಾ ಮಾಡ್ರಿ." ಮಧುಮತಿ, ವಿವೇಕ, ಶಶಿ ಕೆಲಸದವರು ಓಡಾಡಿ ಉಪಚಾರ ಮಾಡಿದರು. ಮಕ್ಕಳ ಊಟದ ಸದ್ದು, ಮಾತು, ನಗುವಿನಿಂದ ಕೋಣೆ ದುಮುದುಮಿಸಿತು. ಜಿಲೇಬಿ ಬುಟ್ಟಿ ಇಟ್ಟು ಬಂದ ಮಧು ಗೋಡೆಗೆ ಒರಗಿನಿಂತಳು. ಅವಳ ದೃಷ್ಟಿ ಶೂನ್ಯವಾಯಿತು.

ಅನಾಥ ಮಕ್ಕಳಿಗೆ ಹೊಟ್ಟೆ ತುಂಬ ಊಟಾ ಹಾಕ್ರಿ. ಉಳಿದ ಯಾವದೂ ಪೂಜಿ, ಪುನಸ್ಕಾರ, ತಿಥಿ-ಗಣಾರಾಧನೆ ಏನೂ ಮಾಡಬ್ಯಾಡ್ರಿ. ನನ್ನ ಮಟ್ಟಿಗೆ ಗಣಂಗಳು ಅಂದರ ಹೊಟ್ಟಿ ಹಸಿದವರು. ಇದರಿಂದ ಪುಣ್ಯಾ ಸಿಗತದ ಅನ್ನೂದರೊಳಗೂ ನನಗ ನಂಬಿಕಿ ಇಲ್ಲಾ, ಹೊಟ್ಟೆ ತುಂಬಿದವರಿಗೆ ಹಾಕೂದಕಿಂತ ಹಸಿದವರಿಗೆ ಉಣಿಸೂದು ಒಳ್ಳೆಯದು ಅಂತ ನಾನು ತಿಳಕೊಂಡೇನಿ, ಅವ್ವನ ವಿಲ್‌ನ ಕಡೆ ಪ್ಯಾರಾ ಹಿಂಗ ಇತ್ತಲ್ಲ. ಜನರನ್ನ ಎದುರು ಹಾಕಿಕೊಂಡರೂ ಅವಳ ಮನಸ್ಸಿನಾಂಗ ಎಲ್ಲಾ ನಡಸೇವಿ. ಆತ್ಮ ಹಾಂ, ಆತ್ಮ ಅಥವಾ ಚೈತನ್ಯ ಒಂದು ಇರಬೇಕಲ್ಲ. ಅವ್ವನ ಆತ್ಮ ಎಲ್ಲಿ ಅದ? ದೂರ ಹೋಗಲಿಕ್ಕಿಲ್ಲ. ಇಲ್ಲೇ ಇರಬೇಕು. ನಮ್ಮ ಕಣ್ಣಿಗೆ ಕಾಣದಾಂಗ. ಈ ಮಕ್ಕಳ ನಗು, ತೃಪ್ತಿ ನೋಡಿ ಅದೂ ಸಂತೋಷ ಪಡ್ತಿರಬೇಕು. -ಅವ್ವಾಃ ಎಲ್ಯದೀ ನೀನು ಇಲ್ಲೇ ಅದೀಯಾ. ನೋಡು ಅವ್ವಾ ಇವರ ಸಂತೋಷ ನಿನಗ ಮುಟ್ಯದಲ್ಲಾ ? ಮಧುಮತಿಗೆ ತಿಳಿಯಂತೆ ಅವಳ ಕಣ್ಣೀರು ಹರಿಯುತ್ತಿದ್ದವು. ಪ್ರಶಾಂತ ಬಂದು ಅವಳ ಭುಜದ ಮೇಲೆ ಕೈಯಿಟ್ಟ ಮೌನವಾಗಿ. ಮಧು ತಲೆ ಬಾಗಿಸಿ ಗಂಡನ ಕೈ ಮೇಲೆ ಕೆನ್ನೆ ಇರಿಸಿದಳು. ಮಗಳು ಅಳಿಯನನ್ನು ನೋಡಿ ವಿರುಪಾಕ್ಷಪ್ಪ ಸೋತ ಕಾಲು ಎಳೆಯುತ್ತ ಬಂದು ಹತ್ತಿರ ಸಿಕ್ಕ ಕುರ್ಚಿಯಲ್ಲಿ ಕುಸಿದರು. ಅವರ ಮನಸ್ಸಿನ ತುಂಬ ಸರಸ್ವತಿ ತುಂಬಿಕೊಂಡಳು. ಮುಚ್ಚಿದ ಕಣ್ಣಿನ ಎದುರು ಒಂದು ಮುಖ ನಗುತ್ತಿತ್ತು....

ವಿರುಪಾಕ್ಷಪ್ಪ ತಮ್ಮ ವ್ಯವಹಾರದ ಎಲ್ಲ ಕೆಲಸಗಳನ್ನು ವಿವೇಕನಿಗೆ ಒಪ್ಪಿಸಿ ತಮ್ಮ ಎಲ್ಲ ವೇಳೆಯನ್ನು ಹೆಂಡತಿಯ ಹತ್ತಿರವೇ ಕಳೆಯುತ್ತಿದ್ದರು. ಶಶಿಕಲಾ, ಕೆಲಸದ ನಿಂಗವ್ವ ಎಲ್ಲ ಇದ್ದರೂ ಹಾಸಿಗೆ ಬದಲಿಸುವಾಗ ತಾವೇ ಅವಳನ್ನೆತ್ತಿ ಮಲಗಿಸುವರು. ದುಂಡು ದುಂಡಾಗಿ ಚೆಂಡು ಮಲ್ಲಿಗೆಯಂತೆ ಇದ್ದ ಸರಸ್ವತಿ ಒಂದು ವರ್ಷದಲ್ಲಿ ಒಣಗಿದ ಹೂವಾಗಿ ಗಾಳಿಗೆ ಹಾರಿ ಹೋಗುವಂತಾಗಿದ್ದಾಳೆ. ಅವಳನ್ನು ಎತ್ತಿದಾಗೊಮ್ಮೆ ಅವರ ಜೀವ ಝಲ್ಲೆನ್ನುತ್ತಿತ್ತು. ಆದರೆ ದಿನದಿನಕ್ಕೆ ಸಾವಿನ ಗುರುತುಗಳು ಅವಳಲ್ಲಿ ಸ್ಪಷ್ಟವಾಗುತ್ತಿದ್ದವು. ಹತ್ತಿರ ಕುಳಿತು ಹಣೆ ಸವರುತ್ತ ದಿಟ್ಟಿಸಿ ನೋಡುವ ಗಂಡನನ್ನು ನೋಡಿ ಸರಸ್ವತಿಗೂ ಸಂಕಟವಾಗುವುದು. ಮಗ-ಸೊಸೆ, ಮಗಳು-ಅಳಿಯ, ಮೊಮ್ಮಕ್ಕಳು, ಬಂಧು-ಬಳಗ, ತುಂಬಿದ ಸಂಸಾರ. ಆದರೂ ಸಾವು ತಮ್ಮನ್ನು ಅಗಲಿಸಿಯೇ ತೀರುವುದೆನ್ನುವ ಸಂಗತಿ ಅವಳಲ್ಲಿ ಗಟ್ಟಿಯಾಗುತ್ತಿತ್ತು.

ಸರಸ್ವತಿ ತುಂಬಿದ ಕೊಡ. ಇದ್ದಷ್ಟು ದಿನ ತನ್ನನ್ನು, ಮಕ್ಕಳು, ಮನೆಯನ್ನು ಪ್ರೀತಿಯಿಂದ ನೋಡಿಕೊಂಡವಳು. ಕಷ್ಟ-ಸುಖದಲ್ಲಿ ಪಾಲು ಹಂಚಿಕೊಂಡಳು. ತನಗಾಗಿ ಎಂದೂ ಏನೂ ಬಾಯಿಬಿಟ್ಟು ಕೇಳಿದವಳಲ್ಲ. ಒಳ್ಳೆಯ ಮನಸ್ಸಿನವಳು. ಅಂದವರು, ಆಡಿದವರು ಎಲ್ಲರೂ ನನ್ನವರೇ ಎನ್ನುವವಳು. ಈ ಒಳ್ಳೆಯ ಜೀವಕ್ಕೆ ಇಂಥ ಬೇನೆ ಹತ್ತಿತಲ್ಲ! ಎಲ್ಲ ಡಾಕ್ಟರರೂ ಕೈ ಬಿಟ್ಟಿದ್ದಾರೆ. ಇದ್ದಷ್ಟು ದಿನ ಮನೆಯ ಶಾಂತ ವಾತಾವರಣದಲ್ಲಿ ಇರುತ್ತೇನೆಂದು ಆಸ್ಪತ್ರೆ ಬಿಟ್ಟು ಬಂದಿದ್ದಾಳೆ. ಸಾವು ಎಷ್ಟು ಹತ್ತಿರ ಬಂದಿದೆ. ಎಂದರೆ ಅದರ ಕೊಕ್ಕು ಅವಳನ್ನು ಮುಟ್ಟಿದೆ ಯಾವಾಗ ಕುಕ್ಕುವದೋ ಗೊತ್ತಿಲ್ಲ.

'ಏನ ವಿಚಾರ ಮಾಡ್ತಿರಿ?" ಗಂಡನ ಮುಖ ನೋಡುತ್ತ ಸರಸ್ವತಿ ಕೇಳಿದಳು.

'ಬ್ಯಾರೆ ಏನಿಲ್ಲ ಸರೂ, ನಿನ್ನ ಬಗ್ಗೇ ವಿಚಾರ ಮಾಡ್ತಿದ್ದೆ. ಇಷ್ಟು ವರ್ಷ ಜೊತೆಗೆ ಇದ್ದರೂ ನೀನು ನಿನ್ನ ಸಲುವಾಗಿ ಏನೂ ಕೇಳ್ಲಿಲ್ಲ. ಈಗ ನನ್ನ ಬಿಟ್ಟು ಹೊರಟೀ, ಏನಾದರೂ ಆಸೆ ಇದ್ದರ ಹೇಳು ಅನ್ನಲಿಕ್ಕೆ ಮನಸ್ಸು ಹಿಂಜರೀತದ. ಯಾಕಂದರ ನಿನ್ನ ಪರಿಸ್ಥಿತೀನ ಹಾಂಗ ಅದ."

"ನೀವು ಖರೇನ ನನ್ನ ಆಸೆ ಪೂರ್ಣ ಮಾಡ್ತೀರೇನು?"

"ಯಾಕ ಸರೂ ನಿನಗ ಸಂಶಯ ಅದ ಏನು, ನೀ ಏನು ಕೇಳಿದ್ರೂ ನಾ ತಯಾರ ಅದೀನಿ."

"ಹಾಂಗಾದರ ನಾ ವಿಚಾರ ಮಾಡಿ ಹೇಳ್ತೀನಿ" ಅವಳು ಏನು ಕೇಳಿದರೂ ಕೊಡಬೇಕೆನ್ನುವ ವಿಚಾರದಿಂದ ವಿರುಪಾಕ್ಷಪ್ಪನವರ ಮನಸ್ಸು ತಮ್ಮ ಹಣಕಾಸಿನತ್ತ ಹೊರಳಿ ವಿವೇಕನೊಡನೆ ಮಾತನಾಡಲು ಎದ್ದು ಹೊರಗೆ ಹೋದರು.

ಎರಡು ಮೂರು ದಿನದ ತರುವಾಯ ಸರಸ್ವತಿ "ಸೋಮುನ್ನ ಕರಸ್ರಿ.... ಲಗೂನ ತಾರು ಅಥವಾ ಫೋನ್ ಮಾಡ್ರಿ" ಎಂದಳು ಗಂಡನಿಗೆ.

"ಸೋಮು ಯಾಕ? ಹೋದ ತಿಂಗಳು ಬಂದು ಹೋಗ್ಯಾನ, ಕೇಸು ಭಾಳ ಅದಾವ ಅಂತಿದ್ದಾ. ನಿನಗೆ ಬೇಕಾದದ್ದು ನನ್ನ ಕೇಳಲ್ಲ."

"ಇಲ್ಲಾ ಅಂವಾ ಬರಬೇಕು. ಕೆಲಸ ಅದ. ಆದಷ್ಟು ಲಗೂ ನಾಳೇ ಬಾ ಅನ್ರಿ."

ಅಡ್ವೋಕೇಟ ಸೋಮಶೇಖರ ಬಂದ. ಅಕ್ಕನೆಂದರೆ ಅಷ್ಟು ಪ್ರೀತಿ ಅವನಿಗೆ. ಅವಳೇನು ಕೇಳುತ್ತಾಳೊ ಎನ್ನುವ ಕುತೂಹಲದಿಂದ ಹತ್ತಿರ ಕುಳಿತ. ಉಳಿದವರೆಲ್ಲ ಹೊರಗೆ ಹೋಗಬೇಕೆಂದು ಹೇಳಿದಳು ಸರಸ್ವತಿ.

"ನನ್ನ ಮಾತು ನಡೆಸಿಕೊಡ್ತೀಯಾ, ಸೋಮು" ಎಂದಳು, ಅವನ ಕೈ ಹಿಡಿದು.

"ಕೇಳ್ಕರೆ ಕೇಳಕ್ಕಾ, ಮಾಮಾ, ನಾವು ಎಲ್ಲಾ ತುದಿಗಾಲ ಮ್ಯಾಲೆ ನಿಂತೀವಿ. ನಿನ್ನ ಆಸೆ ಏನು ಹೇಳು."

"ನಾನು ನಿನ್ನ ಕಡೇಂದ ವಿಲ್ ಬರಸಬೇಕಂತ ಮಾಡೀನಿ."

"ಆಗಲಿ ಹೇಳು ಅಕ್ಕಾ ನಾ ಬರುಕೋತೀನಿ. ನಿನ್ನ ವಸ್ತ್ರ, ಒಡವಿ, ಹೊಲಾ ಎಲ್ಲಾ ಯಾರಿಗೆ ಕೊಡಬೇಕಂತೀ ಹೇಳು."

ತುಟಿಗಳಲ್ಲೇ ನಕ್ಕು ಸರಸ್ವತಿ ಸಾವಕಾಶವಾಗಿ, ಸಣ್ಣ ದನಿಯಲ್ಲಿ ಉಸಿರಿಗೆ ವಿಶ್ರಾಂತಿ ಕೊಡುತ್ತ ಹೇಳುತ್ತ ಹೋದಳು. ಒಂದು ತಾಸಿನ ನಂತರ ಹೊರಗೆ ಬಂದ ಅವನ ಮುಖ ನೋಡಿದರು. ವಿರುಪಾಕ್ಷಪ್ಪ. ಅಲ್ಲಿ ಚಿಂತೆಯ ನೆರಳಿತ್ತು. ಮುಖ ಗಂಭೀರವಾಗಿತ್ತು.

"ವಿಲ್ ಯಾವಾಗಲೂ ಬರೆಸಿದವರು ತೀರಿಕೊಂಡ ಮ್ಯಾಲೆ ಓದ್ತಾರಲ್ಲ ಮಾಮಾ, ಹಾಂಗ ಇದೂ, ಅಲ್ಲೀವರೆಗೂ ಗುಟ್ಟಾಗಿ ಇರ್ತದ. ಆದರ ಅಕ್ಕನ ಸಾವಿನ ಸುದ್ದಿ ನನಗ ಲಗೂನ ತಿಳಿಸ್ಬೇಕು. ಆದಷ್ಟು ಲಗೂನ. ಮತ್ತ ನಾನು ಬರಲಾರದೆ ಅಂತ್ಯಕ್ರಿಯೆ ವ್ಯವಸ್ಥೆ ಮಾಡಬಾರದು ಮಾಮಾ ನೆನಪಿಡ್ರಿ. ಇದೇ ಮಹತ್ವದ್ದು" ಕಣ್ಣು ಒರೆಸಿಕೊಳ್ಳುತ್ತ ಸೋಮು ಹೊರಟುಹೋದ.

ಒಂದು ವಾರದಲ್ಲಿ ಸರಸ್ವತಿ ತೀರಿಕೊಂಡಳು. ಸಾವು ನಿರೀಕ್ಷಿತವಿದ್ದರೂ. ಅಗಲಿಕೆಯ ನೋವು ಎಲ್ಲರನ್ನೂ ಘಾತಿಸಿತು. ಸೋಮು ಬಂದು ಶಾಂತವಾಗಿ ಕಣ್ಣು ಮುಚ್ಚಿ ಮಲಗಿದ್ದ ಅಕ್ಕನ ಹಣೆ ಸವರಿ, ದುಃಖಿಸಿ ಹೊರಗೆ ಬಂದ.

ಮನೆಯವರು, ಬಂಧುಗಳು ಎಲ್ಲರೂ ಮಾಮಾನ ಕೋಣೆಗೆ ಬರಬೇಕೆಂದು ಹೇಳಿ ಕಳಿಸಿದ, ವಿಲ್ ಓದಲು ಈಗಲೇ ಏನು ಅವಸರ ಎಂದರು ವಿವೇಕ, ಮಧುಮತಿ.

"ಇಲ್ಲಾ ಮಧು, ಅಕ್ಕನ ವಿಲ್ ಮೊದಲಃ ಓದಬೇಕು. ಆ ಮ್ಯಾಲೆ ಉಳಿದ ಕೆಲಸಾ. ಎಲ್ಲಾರ್‍ರೂ ಕರಿ."

"ನಾನು ಸರಸ್ವತಿ ವಿರುಪಾಕ್ಷ ಹುಂಡೇಕಾರ, ವಯಸ್ಸು ಐವತ್ತಾರು, ಕ್ಯಾನ್ಸರ್ ಬೇನೆಯಿಂದ ಹಾಸಿಗೆ ಹಿಡದೇನಿ, ಇನ್ನ ಭಾಳದಿನಾ ಬದುಕೂದಿಲ್ಲಾ. ಅಡ್ವೋಕೇಟ್ ಸೋಮಶೇಖರ ಪಾಟೀಲರಿಂದ ವಿಲ್ ಬರಸ್ತಾ ಇದ್ದೀನಿ. ನನ್ನ ಮರಣದ ನಂತರ ಈ ವಿಲ್‌ನೊಳಗ ಇದ್ದ ಹಾಂಗ ಎಲ್ಲಾರು ನಡಕೋಬೇಕು. ಅಂತ ನನ್ನ ಇಚ್ಛಾ ಅದ."

ನನ್ನ ವಸ್ತ್ರ ಒಡವೆ ಎಲ್ಲಾ ಮಗಳು ಮಧುಮತಿ ಮತ್ತು ಮಗ ವಿವೇಕನ ಹೆಂಡತಿ ಶಶಿಕಲಾ ಇಬ್ಬರೂ ಅರ್ಧರ್ಧ ಹಂಚಿಕೋಬೇಕು. ನನ್ನ ಹೆಸರಿನ ಮೂರುವರೆ ಎಕರೆ ಹೊಲಾ ಮಾರಿ ಅದರ ರೊಕ್ಕದಿಂದ ಅನಾಥ ಹೆಣ್ಣುಮಕ್ಕಳಿಗೆ, ವಿಧವೆಯರಿಗೆ ಇರಲಿಕ್ಕೆ ಉಪಯೋಗ ಆಗೂ ಹಾಂಗ ಒಂದು ಹಾಸ್ಟೆಲ್ ಕಟ್ಟಿಸಬೇಕು. ಅದರ ವ್ಯವಸ್ಥೆ ಎಲ್ಲಾ ನನ್ನ ಯಜಮಾನರು ನೋಡಿಕೋಬೇಕು ಅಂತ ನನ್ನ ಇಚ್ಛಾ ಅದ.

ಇನ್ನೊಂದು ಮುಖ್ಯವಾದ ಮಾತು ಅಂದರ ಈ ಸೀರೆ, ಒಡವೆ, ಹೊಲಾ ಎಲ್ಲಾ ನನ್ನ ತಂದಿಯವರು ಮತ್ತು ಯಜಮಾನರು ಕೊಟ್ಟದ್ದು. ಆದರ ನನ್ನ ಈ ದೇಹ ಮಾತ್ರ ನನ್ನ ಸ್ವಂತ ಆಸ್ತಿ. ಅದನ್ನ ಯಾವುದೇ ರೀತಿ ವಿಲೇವಾರಿ ಮಾಡೂ ಅಧಿಕಾರ ನನಗ ಅದ ಅಂತ ನಾ ತಿಳಕೊಂಡೇನಿ. ನನ್ನ ಮರಣದ ತರುವಾಯ ತನ್ನ ದೇಹದ ಅಂತ್ಯಕ್ರಿಯಾ ನನ್ನ ಇಚ್ಛಾಪ್ರಕಾರ ಮಾಡಬೇಕು ಅಂತ ನನ್ನ ಆಸೇ ಅದ.

ನಾನು ಏಳೆಂಟು ವರ್ಷದಾಕಿ ಇದ್ದಾಗ ನನ್ನ ಅಜ್ಜಿ -ತಾಯಿಯ ತಾಯಿ ತೀರಿಕೊಂಡರು,. ಎಲ್ಲಾರೂ ಅವರ ಊರಿಗೆ ಹೋದ್ವಿ. ಊರ ಜನಾ ಎಲ್ಲಾ ಕೂಡಿದ್ರು. ಜೋರಾಗಿ ಹಲಗಿ ಬಾರಸ್ತಿದ್ರು. ಕಿವಿ ಮರ್ ಅಂತಿದ್ವು. ನನ್ನ ಎದೀ ಡಬ ಡಬ ಬಡಕೋತಿತ್ತು. ಮತ್ತೊಂದು ಕಡೆ ಭಜನಿಯವರು ಗಂಟಲು ಹರಿಯುವಾಂಗ ದನಿ ಎತ್ತರಿಸಿ ಹಾಡತಿದ್ರು. ಅವ್ವನ ನೋಡಿದ ಕೂಡಲೇ ಒಳಗಿನ ಹೆಣ್ಣುಮಕ್ಕಳು 'ಬಂದ್ಲ ನೋಡವ್ವ ನಿನ್ನ ಮಗಳೂ, ನೀ ಬಾಯಾಗ ಮಣ್ಣು ಹಾಕೊಂಡ ಹೊಂಟೀ ಎಂದು ಕಿರುಚಿದರು. ಯಾರೋ ಲಬ ಲಬ ಹೊಯ್ಕೊಂಡರು. ಎದೀ ಎದೀ ಬಡಕೊಂಡು ಅತ್ತರು. ನನಗ ಗಾಬರಿ ಆಯ್ತು. ಸಾವು ಅಂದರ ಏನು ಅನ್ನೋದು ಗೊತ್ತಿಲ್ಲದ ನಾನು ಅಜ್ಜೀನ್ನ ಹುಡುಕಾಡಿದೆ. ಆಕೀಗ ಭೋಲೋ ಸೀರಿ ಉಡಿಸಿ ಹಣೆ ತುಂಬ  ವಿಭೂತಿ ಕುಂಕುಮ, ಅರಿಶಿಣ, ಹಚ್ಚಿ ಹೂವಿನದಂಡೀ ಕಟ್ಟಿ ಬಂಗಾರ ಸಾಮಾನು ಹಾಕಿ ಚಪ್ಪಾಳೆಗಾಲು ಹಾಕಿ ಗೋಡೆಗೆ ಆತು ಕೂಡ್ರಿಸಿ, ಕುತ್ತಿಗೆಗೆ ಎರಡು ಕೋಲು ಆಧಾರ ಚುಚ್ಚಿ ಕೂಡ್ರಿಸಿದ್ದರು. ದೀಪ, ಊದುಬತ್ತಿ ಹೊಗೀ ಟೆಂಗಿನಹೋಳು, ಕತ್ತಲಮನಿ, ದುಃಖ ಇಲ್ಲದಿದ್ದರೂ ಹಾಡಿ ಹಾಡಿ ಅಳೂ ಮಂದಿ ಗದ್ದಲ. ನನಗ ಭಾಳ ಹೆದರಿಕಿ ಆತು. ಅವ್ವನ ಸೆರಿಗಿನ್ಯಾಗ ಮುಖಾ ಮುಚ್ಚಿಕೋಬೇಕಂದೆ; ಆದರ ಅವ್ವನ್ನ ಎಳದ ಒಯ್ದು ಅಜ್ಜಿ ಮಗ್ಗಲದಾಗ ನೊಣಾ ಝಾಡಿಸಲು ಕೂಡ್ರಿಸಿದರು. ನನಗ ಅಲ್ಲೆ ನಿಲ್ಲೂದಾಗಲಿಲ್ಲ. ಅಂಜಕೋತ ಎದ್ದು ಹಿತ್ತಲಕ ಹೋಗಿ ಮಾವನ ಮಕ್ಕಳ ಕೂಡ ಕೂತೆ. ಹೆದರಿಕೆ ಆಗಿ ಭಾಳ ಅತ್ತಿದ್ದೆ. ಅಜ್ಜೀನ ಎತ್ತೂ ಮುಂದ ನಮ್ಮನ್ನೆಲ್ಲಾ ಒಳಗ ಕರದ್ರು. ಯಾವನೊ ಹೊರಗಿನಿಂದ ಬಂದು ಅಜ್ಜೀ ತೊಡೀ ಮ್ಯಾಲೆ ಕಾಲಿಟ್ಟು ಮಣಮಣಾ ಮಂತ್ರಾ ಅಂದ. ನಾ ನೋಡಿದಾಗ ಅಂವಾ ಬೀಡಿ ಸೇದಿಕೋತ ಹೊರಗೆ ಭಜನಿಯವರ ಹತ್ರ ಕೂತಿದ್ದ. ಅಂವಾ ಅಜ್ಜೀನ ತುಳಿತಾನಲ್ಲ ಅಂತ ಭಯ ಸಿಟ್ಟು ಬಂತು. ಮಾವನ ಮಗನ ಮುಂದೆ ಹೇಳಿದೆ. ಹಿಂದಿನ ರಾತ್ರಿ ಅಂವಾ ಸೆರೇನ ಕುಡೀತಿದ್ದಾ ಅಂತ ಚೆನ್ನಣ್ಣಾ ನನಗ ಹೇಳಿದ. ನಾವು ಸಣ್ಣವರು ಅಂತ ಸ್ಮಶಾನಕ್ಕ ನಮ್ಮನ್ನ ಒಯ್ಯಲಿಲ್ಲ. ದೊಡ್ಡಾಕಿ ಆದ ಮ್ಯಾಲೆ ಇಲ್ಲಿತನಾ ಎಷ್ಟೋ ಅಂತ್ಯಕ್ರಿಯೆ ನೋಡೇನಿ. ಬಟ್ಟೆ ತೆಗೆದು, ಚೀಲದೊಳಗ ಇಳಿಸಿ ಮಾಡಿನಾಗಿಟ್ಟು ಮಣ್ಣು ಮುಚ್ಚತಾರ. ಛೀ ಛೀ ಮುಖ ಎಲ್ಲಾ ಮಣ್ಣಾಗ್ತದ, ಮೂಗು, ಕಣ್ಣೊಳಗ ಮಣ್ಣು ಹೋಗ್ತದ ಅನಿಸಿ ಮೈ ಜುಂ ಅಂತದ. ಸಣ್ಣ ಹುಡುಗಿ ಇದ್ದಾಗಿನಿಂದ ಗಾಬರಿ, ಹೆದರೀಕಿ, ಜಿಗುಪ್ಸೆ ಎಲ್ಲಾ ನನ್ನೊಳಗ ಸೇರಿಬಿಟ್ಟದ.

ಇನ್ನೊಂದ ಮಾತು, ನಾನು ಕಾಲೇಜಿನ್ಯಾಗ ಓದೂ ಮುಂದ ನನಗ ಜೀನ್ ಅಂತ ಗೆಳತಿ ಇದ್ದಳು. ಅವಳ ಅಂದರ ನನಗ ಭಾಳ ಪ್ರೀತಿ, ಓದು, ಆಟ, ಪಾಠ, ಎಲ್ಲಾ ಇಬ್ರೂ ಕೂಡಿ ಮಾಡತಿದ್ವಿ. ಅಗಲಿ ಇರತಿದ್ದಿಲ್ಲಾ. ಸುಖಾ -ದುಃಖಾ ಹಂಚಿಕೋತಿದ್ವಿ. ಈಗ ಆಕೀ ಮಿಲಿಟ್ರಿಯವರನ್ನ ಮದುವಿ ಮಾಡಿಕೊಂಡು ಹಿಮಾಲಯದ ತಪ್ಪಲಿನೊಳಗ ಅದಾಳ. ಯಾವಾಗರೆ ಪತ್ರಾ ಬರೀತಿರತಾಳ. ಅವಳ ತಂದಿ ತೀರಿಕೊಂಡಾಗ ನಾನು ಅವರ ಮನೀಗೆ ಹೋಗಿದ್ದೆ. ಒಳ್ಳೆ ಸೂಟು ಹಾಕಿ ಕಟ್ಟಿಗೆ ಪೆಟ್ಟಿಗೆಯೊಳಗ ಜೀನ್ ತಂದೀನ್ನ ಮಲಗಿಸಿದ್ದರು. ಹೂವ ಹಾಕಿದ್ದರು. ಮೇಣ ಬತ್ತಿ ಹಚ್ಚಿಟ್ಟದ್ದರು. ಹೊಟ್ಟೆ ತುಂಬ ದುಃಖ ಇದ್ದರೂ ಯಾರೂ ಜೋರಾಗಿ ಅಳತಿದ್ದಿಲ್ಲಾ. ನೆರೆದವರೆಲ್ಲಾ ಮೇಣಬತ್ತಿ ಹಚ್ಚಿ ಪ್ರಾರ್ಥನಾ ಮಾಡಿ ಮಾತಾಡದೆ ಸ್ವಲ್ಪ ಹೊತ್ತು ನಿಂತು ನೋಡಿ ಹೋಗುತ್ತಿದ್ದರು. ಆ ಶಾಂತ ವಾತಾವರಣದೊಳಗ ಮೇಣಬತ್ತಿ ಬೆಳಕಿನ್ಯಾಗ ಕಣ್ಮುಚ್ಚಿ ನಿದ್ದಿ ಮಾಡ್ತಾರೇನೋ ಅನ್ನೂ ಹಾಂಗ ಮಲಗಿದರು. ಸ್ಮಶಾನಕ್ಕ ಹೋದ ಮ್ಯಾಲೆ ಪೆಟ್ಟಿಗೀನ ತೆಗ್ಗಿನ್ಯಾಗ ಇರಿಸಿ ಮಣ್ಣು ಮುಚ್ಚಿದ್ದರು. ಇದೆಲ್ಲಾ ನನಗ ಹೊಸಾದು. ಅಂತ್ಯಕ್ರಿಯೆ ಮುಗಿಸಿ ಬಂದೆ. ಆ ರಾತ್ರಿ ನನಗ ಎಚ್ಚರಾದಾಗ ಮಳೀ, ಗುಡುಗು, ಮಿಂಚು ಇತ್ತು. ಜೀನ್‌ನ ತಂದಿ ಬೆಚ್ಚಗ ಪೆಟ್ಟಿಗೆಯೊಳಗ ಮಲಗ್ಯಾರಲ್ಲ. ಅಂತ ಅನಿಸಿ ಮನಸ್ಸಿಗೆ ಸಮಾಧಾನ ಆತು. ಅವತ್ತಿನಿಂದ ನನ್ನ ಮನಸ್ಸಿನ ಮೂಲಿಯೊಳಗ ಇದೊಂದು ಆಸೇ ಬಂದು ಬಿಟ್ಟದ. ನಾ ಸತ್ತ ಮ್ಯಾಲೆ ನನ್ನ ದೇಹಾನ ಹಿಂಗ ಶಾಂತ ರೀತಿಯಿಂದ, ಪೆಟ್ಟಿಗೆಯೊಳಗ ಹಾಕಿ, ಮಣ್ಣಿನೊಳಗ ಹಾಕಬೇಕು ಅಂತ. ಅದೇ ರೀತಿ ನನ್ನ ಗಂಡ, ಮಕ್ಕಳು ನನ್ನ ಆಸೇ ಪೂರೈಸಬಹುದು ಅಂತ ಇಚ್ಛಾ ಮಾಡೇನಿ."

ಅಲ್ಲಿಯವರೆಗೆ ಕೋಣೆ ನಿಶ್ಶಬ್ದವಾಗಿತ್ತು. ಒಮ್ಮೆಲೆ ಗುಜು ಗುಜು ಶಬ್ದ, ತಲೆಗೊಂದು ಮಾತು, "ನಮ್ಮ ಸಮಾಜದಾಗ ಹುಟ್ಟಿ ನಮ್ಮ ಪದ್ಧತಿ ನಡೆಸದಿದ್ದರ ಹ್ಯಾಂಗ, ಜನ ಸುಮ್ಮನಿರತಾರೇನು. ನಮ್ಮ ಹಿರೇರು ಎಲ್ಲಾ ವಿಚಾರ ಮಾಡೇ ಪದ್ಧತಿ ಮಾಡಿ ಇಟ್ಟಾರ. ಅವರ ವಿರುದ್ಧ ನಾವು ಹೋದರ ಛೀ ಅಂತಾರ ಜನರು. "ಮುತ್ತೈದಿ ಮಗಳು ಪುಣ್ಯವಂತಿ, ಅರಿಶಿಣ, ಕುಂಕುಮ, ಸೂರಿ ಮಾಡಬೇಕು, ಸೀರೆ ದಂಡಿ ಎಲ್ಲಾ ಕಟ್ಟಬೇಕು. ಮತ್ತೆ ಬೇಡಿದರೂ ಇವು ಸಿಗಂಗಿಲ್ಲಾ.' 'ಅಳಬಾರದಂತ, ಅತ್ತರ ಹೆಣಾ ಥಂದವ್ವಾ, ಸರಸವ್ವಂದು ಲೋಕದ ಹೊರ್ತ ಮಾತು. 'ತಾನು ಓದು ಬಲ್ಲಾಕಿ ಅಂತ ಎಲ್ಲಾರ್‍ನೂ ಮೀರಿ ನಿಲ್ಲಬಾರದವ್ವಾ' 'ಅವರು ಶ್ರೀಮಂತರವ್ವ ಏನ ಮಾಡಿದರೂ ನಡೀತದ.'

ವಿರುಪಾಕ್ಷಪ್ಪನವರ ತಂಗಿ ಎದ್ದು ಬಂದಳು. "ಓದಿದ್ದು ಆಯ್ತಲ್ಲ. ಏಳ್ರಣ್ಣಾ ಹೆಣಾ ಬಿರುಸಾಗ್ತದ. ಕಾಲು ಮುರೀಬೇಕಾಗತದ. ಇನ್ನೂ ಮೈ ತೊಳೀಬೇಕು. ಸೀರಿ ಉಡಸಬೇಕು. ಎಲ್ಲಾರಿಗೂ ತಡಾ ಆಗ್ತದ ಏಳ್ರಿ."

"ನಾಗವ್ವತ್ತೀ, ಇಷ್ಟೊತ್ತನಾ ಅವ್ವನ ಆಸೆ ಏನು ಇತ್ತು ಓದಿದ್ರಲ್ಲ. ಕೇಳಿದಿ ಇಲ್ಲೊ." ಮಧುಮತಿ ಅತ್ತೆಯನ್ನು ಎದುರಿಸಿದಳು.

"ಅಯ್ಯ, ಬ್ಯಾನಿ ಬಿದ್ದಾಕಿ, ಆಕಿ ಏನೋ ತಿಳೀಲಾರದ ಹಾಂಗ ಬರಸ್ಯಾಳಂತ ನೀವು ಹಾಂಗ ಮಾಡವರೇನು?"

"ಅವ್ವ ಬ್ಯಾನಿ ಬಿದ್ದರೂ ಆಕಿ ಬುದ್ಧಿ ಸರಿ ಇತ್ತು. ಅತ್ತೀ ಅತಿ ವಿಚಾರವಂತಳು. ಆಕಿ ವಿಚಾರ ಬುದ್ಧಿ, ನಿಮಗ ಅರ್ಥ ಆಗೂದು ಸಾಧ್ಯ ಇಲ್ಲ. ನಮ್ಮವ್ವನ ವಿಷಯ ನಮಗ ಸರಿ ಕಂಡಾಂಗ ಮಾಡ್ತೀವಿ." ವಿವೇಕ ಕಡ್ಡಿ ಮುರಿದಂತೆ ಉತ್ತರ ಕೊಟ್ಟ.

ಬಂಧುಗಳೆಲ್ಲ ಎದ್ದರು. "ವಿರುಪಾಕ್ಷಪ್ಪ, ನೀ ಏನು ಅಂತೀ ಹೇಳು, ಕುಣಿ ಕಡಿಯಾಕ, ಜಂಗಮರಿಗೆ, ವಿಮಾನಕ್ಕ, ಭಜನಿಯವರಿಗೆ ಮಣ್ಣಿಗೆ ಬರಲಿಕ್ಕೆ ಊರ ಜನರಿಗೆ ಹೇಳು ಅಂದರ ಹೇಳ್ತೀವಿ. ಮಕ್ಕಳ ಹಾಂಗ ನೀನೂ ಮಾತಾಡಿದರ ನಾವು ಹೊರಡ್ತೀವಿ."

"ಅವ್ವನ ಆಸೆ ಪೂರೈಸಬೇಕು ಅಂತ ಮಕ್ಕಳಿಗೆ ಆಸೆ ಇದ್ದಾಂಗ ಹೆಂಡತಿ ಕಡೀ ಇಚ್ಛಾ ಪೂರ್ಣ ಮಾಡಬೇಕು ಅಂತ ನನಗೂ ಮನಸ್ಸದ ಗುರಪ್ಪಣ್ಣಾ. ಆಕೀ ಇರೂತನಾ ನಿಮ್ಮೆಲ್ಲಾರ ಕೂಡ ಛೊಲೋತ್ನಾಗ ನಡಕೊಂಡಾಳ. ಜೀವ ಇಲ್ಲದಿದ್ದರೂ ಆಕೀ ದೇಹ ಅದ. ಆಕಿ ಇಚ್ಛಾದಂಗ ನಾಳೆ ಮುಂಜಾನೆ ಹತ್ತು ಗಂಟೇಕ ನಾವು ಮಣ್ಣು ಮಾಡ್ತೀವಿ. ನಿಮಗೆಲ್ಲಾ ಸರಿ ಅನಿಸಿದರ ಸ್ಮಶಾನಕ್ಕ ಬರ್ರಿ. ನಾನು ಆಕೀಗೆ ಮಾತು ಕೊಟ್ಟೇನಿ ಅದರಂತೇ ನಡೀತೀನಿ."

ವಿರೂಪಾಕ್ಷಪ್ಪನವರ ಮಾತು ಕೇಳಿದ ಕೆಲವರು ಸಿಡಿದು ದಡ ದಡ ಹೋಗಿ ಬಿಟ್ಟರು ಕೇವಲ ಕೆಲವರು ಅವರ ಒಳ್ಳೆಯತನಕ್ಕೋ ಋಣಭಾರಕ್ಕೋ ಒಳಗಾಗಿ ಅಲ್ಲಿಯೇ ಉಳಿದರು. ದುಃಖವನ್ನು ಹತ್ತಿಕ್ಕಿಕೊಂಡು ಮಧು, ಶಶಿ,. ಅವಳ ತಾಯಿ ಸರಸ್ವತಿಯ ದೇಹಕ್ಕೆ ಸ್ನಾನ ಮಾಡಿಸಿ, ಬಿಳಿಯ ಜರದಂಚಿನ ಸೀರೆ ಉಡಿಸಿ, ಪನ್ನೀರು ಚಿಮುಕಿಸಿ, ಗುಲಾಬಿ ಹೂ ಹಾಕಿ. ಮಿತವಾಗಿ ಅಲಂಕಾರ ಮಾಡಿ. ವಿವೇಕ ಮಾಡಿಸಿ ತಂದ ಪೆಟ್ಟಿಗೆಯಲ್ಲಿ ಮಲಗಿಸಿ ಸುತ್ತ ದೀಪ ಹಚ್ಚಿ ಕುಳಿತರು. ವಿಷಯ ತಿಳಿದ ಜನ ಗುಂಪು ಗುಂಪಾಗಿ ಬಂದು ನೋಡಿದರು. ಆಡಿಕೊಂಡ ಮಾತುಗಳೆಲ್ಲ ಗಾಳಿಗೆ ಹೋದವು.

ಸ್ಮಶಾನದಲ್ಲಿ ಪೆಟ್ಟಿಗೆ ಕುಣಿಯಲ್ಲಿ ಇಳಿಸುವಾಗ ಕೊನೆಯಬಾರಿಗೆ ಮುಖ ತೋರಿಸಲು ಮುಚ್ಚಳ ತೆರೆದಳು. ಸರಸ್ವತಿಯ ತುಟಿ ಕೊಂಕಿತೇ ? ಮಧುಮತಿ ದಿಟ್ಟಿಸಿ ನೋಡಿದಳು. "ಅವ್ವ ನಗ್ತಾಳ, ಅಪ್ಪಾ ಅಲ್ನೋಡು. ಅವ್ವ ನಗ್ತಾಳ" ಅಪ್ಪನನ್ನು ಅಪ್ಪಿಕೊಂಡು ಭೋರೆಂದು ಅತ್ತಳು ಮಧುಮತಿ. ಅವಳನ್ನು ಪ್ರಶಾಂತನಿಗೊಪ್ಪಿಸಿ ವಿರುಪಾಕ್ಷಪ್ಪ ಬಗ್ಗಿ ಹೆಂಡತಿಯ ಮುಖ, ಹಣೆ ಸವರಿದರು.

"ನಿನ್ನ ಮೈಗೆ ಮಣ್ಣು ಹತ್ತೂದಿಲ್ಲ ಸರೂ, ಮಳೀ ಗಾಳೀ ಏನೂ ಹತ್ತೂದಿಲ್ಲ. ಬೆಚ್ಚಗ, ಆರಾಮ' ಮಲಗು" ಅವಳು ನಗುತ್ತಿದ್ದಳು.

"ಅಪ್ಪಾಃ ಅಪ್ಪಾರ ಎಲ್ಲಾ ಕೆಲಸ ಮುಗೀತು. ನಡೀರಿ ಮನೀಗೆ ಹೋಗೋಣ. ಕಣ್ಣು ಒರೆಸಿಕೊಳ್ಳುತ್ತ ಇದ್ದ ವಿರುಪಾಕ್ಷಪ್ಪ ವಿವೇಕ, ಪ್ರಶಾಂತ ಆಧಾರದಿಂದ ಅನಾಥಾಶ್ರಮದ ಮೆಟ್ಟಿಲಿಳಿದರು.

***

■■

# ಚಿತ್ರ

"ಇಲ್ಲೆ ಬರ್ರಿ, ಅವ್ವ ಒಳಗ ಮಲಗ್ಯಾಳ' ಗುನುಗುನು ಕೇಳುತ್ತಿದ್ದ ದನಿ ಸ್ಪಷ್ಟವಾಗಿ ಹತ್ತಿರವಾಗುತ್ತಿದ್ದಂತೆ ಮೀನಾಕ್ಷಿ ಕಣ್ಣು ಮುಚ್ಚಿಕೊಂಡಳು.

"ಚ್ಚು, ಚ್ಚು, ಎಷ್ಟು ಸೊರಗ್ಯಾರಲ್ರಿ. " ಪ್ರಕಾಶರ ದನಿ ಗುರುತು ಹತ್ತಿದರೂ ಮೀನಾಕ್ಷಿ ಮಿಸುಕಲಿಲ್ಲ.

'ಅವ್ವ ಹಾಸಿಗಿ ಹಿಡದು ಮೂರ ತಿಂಗಳಾತು ಅಂಕಲ್. ಅರ್ಧಾಂಗವಾಯು ಆದವರು ಎಷ್ಟೋ ಮಂದಿಗೆ ಗುಣಾ ಆಗೇದ. ಟ್ರೀಟ್‌ಮೆಂಟ್ ನಡೆದದ. ಆದರೂ ಯಾಕೋ ಅವ್ವ ತಾನು ಬದುಕೂದೇ ಇಲ್ಲಾ ಅನ್ನೂ ಹಾಂಗ ಮಾತಾಡ್ತಾಳ." ಅಜಯನ ಮಾತಿನಲ್ಲಿಯ ಕಳವಳ ಅವಳ ಕಣ್ಣು ಹಸಿ ಮಾಡಿತು. ತೆರೆದರೆ ರೆಪ್ಪೆ ದಾಟಿ ಕಂಬನಿ ತುಳುಕಿತೆನ್ನುವ ಆತಂಕದಿಂದ ಬಿಗಿ ಹಿಡಿದಳು.

"ಅವ್ವಾ." ಅಜಯ ಪಿಸುಗುಟ್ಟಿದ. "ಮಲಗಲಿ ಬಿಡ್ರಿ." ಹೆಜ್ಜೆಗಳು ನಿಧಾನವಾಗಿ ದೂರವಾದವು.

ಒಂದು ದಿನ ಸ್ನಾನ ಮಾಡಿ ಹೊರಗೆ ಬರುತ್ತಿದ್ದವಳು ಹಾಗೆ ಪ್ರಜ್ಞೆ ತಪ್ಪಿ ಬಿದ್ದುಬಿಟ್ಟಿದ್ದಳು. ಆಸ್ಪತ್ರೆಯಲ್ಲಿ ಎಚ್ಚರವಾದಾಗ ಬಾಯಿ ಓರೆಯಾಗಿ ಮಾತು ನಿಂತಿತ್ತು ಬಲಗಡೆಯ ಸ್ವಾಧೀನ ತಪ್ಪಿಹೋಗಿತ್ತು. ಬಡೋದೆಯಿಂದ ಅಖಿಲ ಹೆಂಡತಿ ಮಕ್ಕಳೊಡನೆ ಬಂದು ನೋಡಿ ಹೋದ. ಒಬ್ಬಳೇ ಮಗಳು ಅನುರಾಧಾ ಬಂದು ಕಣ್ಣೀರಿಟ್ಟಳು. ಮಕ್ಕಳಿಬ್ಬರೂ ಹೊರಟು ನಿಂತಾಗ ಇನ್ನೊಮ್ಮೆ ಅವರನ್ನು ನೋಡುವೆನೋ ಇಲ್ಲವೋ ಎನ್ನುವ ಸಂಕಟದಿಂದ ತನ್ನ ಕಣ್ಣೀರು ತಾವಾಗಿಯೇ ಇಳಿದುಹೋಗುತ್ತಿದ್ದವು. ಸಾವಿಗಾಗಿ ಹೆದರಿ ಅಳುತ್ತಿದ್ದೇನೆ ಎನ್ನುವ ತಪ್ಪು ಕಲ್ಪನೆಯಿಂದ ಬಂದವರೆಲ್ಲರೂ ಬದುಕುವ ಭ್ರಮಾ ಲೋಕವನ್ನು ಸೃಷ್ಟಿಸುವವರೇ.

"ಈಗಿನ ಕಾಲದಾಗ ಎಷ್ಟೋ ಹೊಸಾ ಔಷಧ ಬಂದಾವ,. ಗುಣಾ ಆಗ್ತದ ನಿಮಗ ಕಾಳಜಿ ಮಾಡಬ್ಯಾಡ್ರಿ."

"ಡಾ. ಪಾಟೀಲರಿಗೆ ಒಮ್ಮೆ ತೋರಿಸಿದ್ದರ ನೆಟ್ಟಗಿತ್ತು. ಅವರ ಕೈಗುಣಾ ಭಾಳ ಛೋಲೋ ಅದ."

"ನಮ್ಮ ನೆಗೆಣ್ಣಿ ತಂದಿಗೆ ಅರ್ಧಾಂಗಿ ಆದಾಗ ಅಂಕೋಲಾದಿಂದ ಎಣ್ಣೀ ತರಿಸಿದ್ದರು. ದಿನಾ ಮಾಲಿಶ್ ಮಾಡುತ್ತಿದ್ದರು."

"ಇದೇನ ದೊಡ್ಡದಲ್ಲ ಬಿಡ್ರಿ. ಬ್ರೇನಿಗೆ ಲಕ್ವಾ ಹೊಡೆದು ಎಚ್ಚರ ಇಲ್ಲದ ಎಷ್ಟೋ ವರ್ಷ ಮಲಗಿದವರು ಇದ್ದಾರ. ನೀವೇನ ಮನಸಿಗೆ ಹಚ್ಚಿಕೋಬ್ಯಾಡರಿ."

"ಪಾಪ, ಎಷ್ಟು ಕೆಲಸಾ ಮಾಡವರು. ಗಂಡ, ಮಕ್ಕಳು, ಬರು ಹೋಗುವವರು ಎಲ್ಲಾರಿಗೂ ತಾವಃ ಸ್ವತಃ ಊಟಾ, ಉಪಚಾರಾ ಮಾಡಿದರ ಅವರಿಗೆ ಸಮಾಧಾನ. ಅಂಥವರು ಹಿಂಗ ನಿರ್ಜೀವ ಆಗಿ ಮಲಗೂದಂದರ ಮನಸ್ಸಿಗಿ ತ್ರಾಸ ಆಗ್ತದರೆವಾ."

"ಒಂದ, ಎರಡ. ಹೋಲಿಗಿ ಹೆಣಿಕಿ, ಹಾಡು, ಅಡಿಗಿ ಎಲ್ಲಾದರೊಳಗೂ ಶಾಣ್ಯಾರವ್ವ. ನಾವು ಅಂತಿದ್ವಿ ಇಷ್ಟೆಲ್ಲಾ ಹ್ಯಾಂಗ ಮಾಡತಿದ್ದಾರು ಅಂತ."

"ಭಾಳ ಹಚಿಕೊಂಡು ಮಾಡಿ ಮಾಡೇ ಹಿಂಗಾಯ್ತೋ ಏನೋ, ಯಾರು ಬಲ್ಲರು ? ಜಡ್ಡು ಬಂದ ಮೇಲೆ ಬೇಕಾದಷ್ಟು ಔಷಧ ಕೊಡತಾರ. ಆದರ ಜಡ್ಡ ಯಾಕ ಬರ್ತಾವ ಅನ್ನೂದು ಇನ್ನೂ ಕಂಡುಹಿಡೀವೊಲ್ಲರು."

"ಭಾಳ ಒಳ್ಳೇ ಸ್ವಭಾವ ಮೀನಾಕ್ಷಮ್ಮಂದು. ಯಾರಿಗೂ ಒಂದು ಬಿರುಸು ಮಾತು ಆಡುವವರಲ್ಲ. ಏನಿದ್ದರೂ ಒಳಗ ನುಂಗಿ ನಗನಗ್ತಾ ಇರುವವರು. ಪಾಪ ಹಿಂಗ ಮಲಗಿಬಿಟ್ಟಾರ.

"ಈ ಜನ್ಮದಾಗ ಅಲ್ಲದಿದ್ದರೂ ಹಿಂದಿನ ಜನ್ಮದಾಗಿನ ಪಾಪ ಕರ್ಮ ಇರಬೇಕು. ಅದಕ್ಕ ಯಾರು ಏನೂ ಮಾಡೂದು ಸಾಧ್ಯ ಇಲ್ಲಲ್ಲ. ಎಲ್ಲಾ ಆ ದೇವರ ಇಚ್ಛಾ ಅನ್ನೂದೂ."

ತಿರುಗಿ ಮಾತನಾಡಲು ಬಾಯಿ ಇಲ್ಲದಿದ್ದ ಆ ದಿನಗಳಿಂದ ಇಂಥ ಮಾತುಗಳು. ತಲೆ ಚಿಟ್ಟು ಹಿಡಿಸಿ ಉಸಿರುಗಟ್ಟಿಸುತ್ತಿವೆ. ಬೇರೆಯವರ ಕನಿಕರ ಮುಳ್ಳಾಗುತ್ತದೆ. ಅನುಕಂಪ ಇರಿಯುತ್ತದೆ. ಬೇನೆಯ ತೀವ್ರ ಸ್ಥಿತಿಯಲ್ಲಿ ಕೊರಡಿನ ಹಾಗೆ ಸುಮ್ಮನೆ ಬಿದ್ದುಕೊಳ್ಳುದೊಂದೇ ಉಪಾಯ. ತಡೆಯಲು ಅಸಾಧ್ಯವಾದಾಗ ಡಾಕ್ಟರರಿಂದ ಭೆಟ್ಟಿಗೆ ಯಾರನ್ನೂ ಬಿಡಬಾರದೆಂದು ಸದಾನಂದನಿಗೆ ಹೇಳಿಸಿದ್ದಳು.

ಅನುರಾಧಾ ಹತ್ತಿರವಿರುವವರೆಗೆ ತಾಯಿಯ ಮಡಿಲಲ್ಲಿ ಮಲಗಿದ್ದ ಮಗುವಿನಂತೆ ಮೀನಾಕ್ಷಿ ನಿಶ್ಚಿಂತೆಯಾಗಿದ್ದಳು. ಎಂಥ ಯಾತನೆಯಾಗುತ್ತಿದ್ದರೂ ಮಗಳು ಒಮ್ಮೆ ಮೈಮೇಲೆ ಕೈಯಾಡಿಸಿದರೆ ಸಾಕು. ಆಗಿನ ಮಟ್ಟಿಗಾದರೂ ನೋವು ಕಡಿಮೆಯಾಗುತ್ತಿತ್ತು. ಪ್ರೀತಿಗಾಗಿ ಹಾತೊರೆದು ಸೋತು ಹೋದ ಜೀವ ಅವಳದು.

ಗಂಡ, ಮಕ್ಕಳಿಗೆ, ವಯಸ್ಸಾದ ಅತ್ತೆಗೆ ತೊಂದರೆಯಾಗುವದೆಂದು ಕಣ್ಣೀರು ಒರೆಸುತ್ತ ಹೊರಟು ನಿಂತಳು ಅನುರಾಧಾ.

"ನಿನ್ನ ಸಂಸಾರಕ್ಕ ತ್ರಾಸ ಆಗಬಾರದು ಅನು. ನೀ ಬಂದು ಒಂದು ತಿಂಗಳಾತು. ಇದು ಲಗು ಗುಣಾ ಆಗೂ ಜಡ್ಡಲ್ಲ. ನೀಲೂ, ಅಜಯ ನೋಡಿಕೋತಾರ ನೀ ಹೋಗಿ ಬಾ." ತೊದಲು ಮಾತಿನಲ್ಲಿ ತಾನೇ ಹೇಳಿ ಮಗಳನ್ನು ಕಳಿಸಿದ್ದಳು.

"ಅಮ್ಮಾ, ನಿಮಗ ರಾತ್ರಿ ಏನಾರ ಬೇಕಾಗ್ತದಲ್ಲ. ನಾ ಇಲ್ಲೆ ನಿಮ್ಮ ಮಂಚದ ಹತ್ತರ ಕೆಳಗ ಮಲಕೋತೀನಿ." ಮಲಗುವ ಸಿದ್ಧತೆಯಲ್ಲಿ ನೀಲೂ ಬಂದಿದ್ದಳು ಆ ರಾತ್ರಿ.

ಮಯೂರ ಅಜಯನ ಹತ್ತಿರ ಮಲಗಿದ್ದ. ನೀಲೂ ರಾತ್ರಿ ಬಹಳ ಹೊತ್ತಿನವರೆಗೆ ಅತ್ತಿತ್ತ ಹೊರಳುತ್ತ ಎಚ್ಚರವಿದ್ದಳು. ಬೆಳಿಗ್ಗೆ ಕಣ್ಣು ಕೆಂಪಗಿದ್ದವು. "ಅಮ್ಮಾ, ಗುಂಗಾಡು ಭಾಳ ಅದಾವ. ನನಗ ಲಗೂನ ನಿದ್ದೇನೆ ಬರಲಿಲ್ಲ."

ಚಿಕ್ಕ ವಯಸ್ಸಿನಲ್ಲಿ ಯಾವ ಹುಡುಗೀಗೆ ಗಂಡನಿಂದ ದೂರ ಮಲಗೋದು ಇಷ್ಟವಾಗ್ತದೆ. ಸುಖದ ಕನಸುಗಳನ್ನು ಮೈತುಂಬ ಮನದ ತುಂಬ ತುಂಬಿಕೊಂಡು ಅವನ ಅಪ್ಪುಗೆಯಲ್ಲಿ ಮಲಗುವ ವಯಸ್ಸು ಇದು-

"ಅಪ್ಸರೆಯರು ಅನಾಮತ್ತಾಗಿ ಎತ್ತಿ ತಂದು ನನ್ನ ಬೊಗಸಿಯೊಳಗ ಇಟ್ಟಾರ ಈ ಎರಡು ನಕ್ಷತ್ರಾ." ಸದಾನಂದ ಮೃದುವಾಗಿ ಮುದ್ದಿಡುತ್ತಿದ್ದ.

"ಈ ಮುಖ ಕಮಲದೊಳಗ ಎರಡು ದುಂಬಿ ಯಾಕ ಬಡದಾಡತಾವ." ಕಮಲವನ್ನು ಅಂಗೈಯಲ್ಲಿ ಹಿಡಿದು ಎದೆಗೆ ಅಪ್ಪಿಕೊಳ್ಳುತ್ತಿದ್ದ.

'ಬೆಳಕು ಬ್ಯಾಡ, ಬ್ಯಾಡ ಮಿನ್ನಿ. ಈ ಕಣ್ಣಿನ್ಯಾಗಿನ ಮಿಂಚು ನನ್ನ ಇಡೀ ಜೀವನಕ್ಕ ಬೆಳಕು ತೋರಸ್ತದ." ತುಂಟತನದಿಂದ ಲೈಟು ತೆಗೆದು ಬಿಡುತ್ತಿದ್ದ.

ಗುಂಯ್.... ಗುಂಯ್ .... ಹಂ, ಉಹುಂ... ಓಹ್! ಮತ್ತೆ ಮತ್ತೆ ಬಂದು ಕೂಡುತ್ತಿದ್ದ. ಗುಂಗಾಡಿನ ಕಡಿತಕ್ಕೆ ಎಡಗೈ ಚಲಿಸಿದಳು ಮೀನಾಕ್ಷಿ.

ಒಂದು ಗುಂಗಾಡು ಕಚ್ಚಿದರೆ ಸಹಿಸಿಕೊಳ್ಳದ ಈ ದೇಹವನ್ನು ನಾಳೆ ಮಣ್ಣಿನಲ್ಲಿ ಹಾಕಿದಾಗ ಹೇಗಿರುತ್ತದೆಯೋ. ಸಾವು ಹತ್ತಿರವಾಗುತ್ತಿದ್ದಂತೆ ಅದರ ಬಗೆಗಿನ ಭಯವೂ ಮಾಯವಾಗುತ್ತದೆ. ಸುಮ್ಮನೆ ಮಲಗಿ

ಮಾಡುವದಾದರೂ ಏನು? ದೇಹ ಅಲುಗದಿದ್ದರೂ ತಲೆ ಕೆಲಸ ಮಾಡುತ್ತಲೇ ಇರುವುದಲ್ಲ. ಈಗೀಗ ತನ್ನ ವಿಚಾರಗಳೆಲ್ಲ ಸಾವಿಗೆ ಮುಟ್ಟುತ್ತವೆ. ಸಾವು ಹೇಗಿರುತ್ತದೆ. ಎನ್ನುವ ಅರ್ಥ ತಿಳುವಳಿಕೆ ತನಗೀಗ ಆಗಿದೆ. ತನ್ನ ಚೈತನ್ಯ ಅರ್ಧ ತುಂಡಾಗಿದೆ. ಇನ್ನರ್ಧವೂ ಮುಗಿದಾಗ ಈ ಯೋಚನೆಗಳೂ ಇರುವುದಿಲ್ಲ. ಎಲ್ಲೆಂದರಲ್ಲಿ ನೋಯುತ್ತಿರುವ, ನವೆಯುತ್ತಿರುವ ಈ ದೇಹ ತಣ್ಣಗಾಗಿ ಆರಾಮಾಗಿ ಮಣ್ಣಿನಲ್ಲಿ ಮಲಗುತ್ತದೆ. ಆಹ್ ! ಸಾವಿನಲ್ಲಿ ಎಷ್ಟು ಸುಖ! ಆದರೆ ಆ ಕ್ಷಣ ಬರುವವರೆಗೂ ಹೀಗೇ ಒದ್ದಾಡುತ್ತಿರಬೇಕಲ್ಲ. ಮಗ ಸೊಸೆ ಪ್ರೀತಿಯಿಂದ ಸೇವೆ ಮಾಡಿದರೂ ಇನ್ನೂ ಎಷ್ಟು ದಿನ ಅವರಿಗೆ ಭಾರವಾಗಿರೋದು ಎನ್ನುವ ಚಿಂತೆ ತನ್ನನ್ನು ಒಳಗೇ ಕೊರೆಯುತ್ತದೆ.

ಕಣ್ಣು ಜಗ್ಗುತ್ತಿದ್ದರೂ ಈ ಚಿಕ್ಕ ಕೀಟ ತನ್ನನ್ನು ಬಿಡಲೊಲ್ಲದು. ತನ್ನ ಯೋಚನೆಗಳೆಲ್ಲ ಸಾವಿನ ಸುತ್ತ ಸುತ್ತುತ್ತಿರುವಂತೆ ಇದು ಬಿಟ್ಟೂಬಿಡದೆ ತನ್ನ ಕೈಯನ್ನೇ ಮತ್ತೆ ಮತ್ತೆ ಮುತ್ತಿಡುತ್ತದೆ. ಮಚ್ಚರದಾನಿ ಬಿಟ್ಟಿದ್ದರೆ ಚೆನ್ನಾಗಿತ್ತು. ಯಾರಾದರೂ ಬರುವರೇ? ಬರಬಾರದೇ? ಪ್ರಕಾಶರನ್ನು ಕಳಿಸಿದ ಅಜಯ ಬರುವನೇ? ನೀಲೂ ಅಡಿಗೆ ಮನೆಯಲ್ಲಿದ್ದಾಳೇನೋ? ಉಹುಂ. ಇಲ್ಲ ಬಚ್ಚಲಿನಲ್ಲಿ ಇರಬಹುದು. ಮಯೂರನಿಗೆ ಸ್ನಾನ ಮಾಡಿಸಿ ತನ್ನ ಹತ್ತಿರ ತರುತ್ತಾಳೆ. ಎಡಗೈಯಿಂದ ಅವನ ತಲೆ ಬೆನ್ನು ಸವರಿ ಮುದ್ದಿಡುತ್ತೇನೆ. ಅವನ ಮೈ ಸುವಾಸನೆ ಮೂಗನ್ನು ತುಂಬುತ್ತದೆ. ಹತ್ತಿರ ಎಳೆದು ಅಪ್ಪಿಕೊಳ್ಳುವ ಪ್ರಯತ್ನ ಮಾಡುತ್ತೇನೆ. ಅವನೋ ಚೈತನ್ಯದ ಬುಗ್ಗೆ. ಅವನು ಹತ್ತಿರವಿದ್ದಷ್ಟು ಹೊತ್ತು ಆ ಚೈತನ್ಯ ತನ್ನಲ್ಲಿ ಹರಿದು ಬರುತ್ತಿರುವಂತೆ ಲವಲವಿಕೆ. ಆದರೆ ಆ ಸುಖ ಐದು ನಿಮಿಷದ್ದು ಮಾತ್ರ. ತಾಯಿಯೊಡನೆ ಅವನು ಹೊರಗೆ ಹೋದನೆಂದರೆ ಆಯಿತು. ಮಯೂರದಂತೆಯೆ ನರ್ತಿಸುತ್ತಿದ್ದ ತನ್ನ ಮನದ ಚೈತನ್ಯವೆಲ್ಲ ಸೋರಿ ಹೋಗಿ ಗಾಢವಾದ ಶೂನ್ಯ ತುಂಬಿಕೊಳ್ಳುತ್ತದೆ.

ಮತ್ತೆ ಹೆಜ್ಜೆ ಸಪ್ಪಳ, ಕಿವಿ ನಿಮಿರುತ್ತದೆ. ಆ ಸಪ್ಪಳಕ್ಕಾಗಿ ತನ್ನ ಕಿವಿಯಷ್ಟೇ ಅಲ್ಲ. ಹೃದಯವೂ ಸದಾ ಕಾಲ ಕಾಯುತ್ತಿರುತ್ತದೆ. ಬಾಗಿಲವರೆಗೆ ಬಂದ ಸಪ್ಪಳ ಅಲ್ಲಿಯೇ ನಿಲ್ಲುತ್ತದೆ. ಬಂದರೇ? ಹತ್ತಿರ ಬರಬಾರದೇ? ಬಂದು ತನ್ನ ಹತ್ತಿರ ಕುಳಿತು ಮೈದಡವಿ, ಮುಖದ ಮೇಲೆ ಕೈಯಾಡಿಸಿ, ಹಣೆಗೆ ಮುತ್ತಿಟ್ಟು ಮೊದಲಿನಂತೆ 'ಮಿನ್ನಿ ಹ್ಯಾಂಗ ಅದೀ? ಎಂದು ಕೇಳುವರೇ? ಉಹುಂ . ಇಲ್ಲ, ಇನ್ನೂ ಬಂದಿಲ್ಲ. ಕಣ್ಣು ತೆರೆದು ನೋಡಲೇ? ಉಹುಂ ನನ್ನ ಮನದ ಆಸೆ ಕಣ್ಣುಗಳಲ್ಲಿ ಇಣುಕಿತು. ದೇವರಲ್ಲಿಯೇ ಏನನ್ನೂ ಕೇಳದ ನಾನು ಇಲ್ಲಿ ಬೊಗಸೆ ಒಡ್ಡಲೇ ? ಕೇಳದೇ ಕೊಡುವದೇ ಅನನ್ಯ ಪ್ರೀತಿ ಅಲ್ಲವೇ? ಅವರನ್ನು ನೋಡಿದೊಡನೆ ಕಣ್ಣೀರು ತುಂಬಿ ಇಳಿದು, ತನ್ನ ದೌರ್ಬಲ್ಯ ಪ್ರದರ್ಶಿಸುವುದು ಬೇಡ. ಉಹುಂ ಏನಿದು? ಹೆಜ್ಜೆ ಸಪ್ಪಳ ಕ್ಷೀಣವಾಗುತ್ತ ಹೋಯಿತಲ್ಲ? ಹೊರಟೇ ಹೋದರೆ?" ಕಣ್ಣು ಹಸಿಯಾದವೇ? ಇಲ್ಲ ಇತ್ತಿತ್ತಲಾಗಿ ಅವೂ ಬತ್ತಿ ಹೋಗಿವೆ.

ಒಳಗೆ ಬಂದ ಅಜಯ 'ಅವ್ವಾ ಈ ಗುಳಿಗೀ ನುಂಗಿ ಹಾಲು ಕುಡಿ, ಗುಳಿಗೆ ಅಂಗೈಯಲ್ಲಿಟ್ಟು ನೀರಿನ ವಾಟಿ ಕೊಟ್ಟು ಹಾಲು ತರಲು ಒಳಗೆ ಹೋದ. ಮೀನಾಕ್ಷಿ ಗುಳಿಗೆಯನ್ನು ದಿಟ್ಟಿಸಿ ನೋಡಿ ಮಂಚದ ಕೆಳಗಿದ್ದ ಕಸದ ಬುಟ್ಟಿಗೆ ಶಬ್ದವಾಗದಂತೆ ಬಿಸಾಕಿ ನೀರು ಕುಡಿದಳು. ಅಜಯ ತಂದ ಹಾಲು ಎರಡು ಗುಟುಕು ಕುಡಿದು 'ಹಾಲು ಟೀಪಾಯ್ ಮ್ಯಾಲೆ ಇಡು ನನಗ ಬೇಕಾದಾಗ ತೊಗೋತೀನಿ' ಎಂದು ಮುಸುಕು ಎಳೆದಳು. ಅವ್ವ ಹೇಳದೆಯೆ ಮಚ್ಚರದಾನಿ ಹಾಕಿ ಬಾಗಿಲು ಮುಚ್ಚಿಕೊಂಡು ಹೊರಗೆ ಹೋದ ಅಜಯ. ಮೀನಾಕ್ಷಿ ಮುಚ್ಚಿದ ಕಣ್ಣುಗಳ ಹಿಂದಿನ ಚಿತ್ರ ನೋಡತೊಡಗಿದಳು....

ಎದೆಗೆ ಒರಗಿಸಿಕೊಂಡು ಭಾವಪರವಶನಾಗಿ, ಆವೇಶದಿಂದ ಮತ್ತೆ ತನ್ನ ಕಣ್ಣುಗಳನ್ನು ಮುದ್ದಿಸುತ್ತಿದ್ದ ಸದಾನಂದನ ಅಪ್ಪುಗೆಯಲ್ಲಿ ಕರಗಿ ಕಾಲದ ಪರಿವೆ ಇಲ್ಲದೆ ಮೈಮರೆಯುತ್ತಿದ್ದ ಆ ದಿನಗಳು ಎಷ್ಟು ಬೇಗ ಕಳೆದು ಹೋದವು.

"ಅಬ್ಬಾ! ಎಂಥಾ ಕಣ್ಣು ಮಿನ್ನಿ. ಇಲ್ಲೆ ನೋಡಿದರ ನಕ್ಷತ್ರಲೋಕದ ಸಾಕ್ಷಾತ್ಕಾರ ಆಗ್ತದ. ನನ್ನ ಕುಂಚದಿಂದ ಒಂದಿಲ್ಲಾ ಒಂದು ದಿನಾ ಇವುಗಳ ಚಿತ್ರಾ ಬಿಡಿಸೇ ತೀರ್ತೇನಿ." ಗಂಡನ ಹೊಗಳಿಕೆಗೆ ಸುಸ್ತಾಗಿ ತಾನು ಕಣ್ಣು ಮುಚ್ಚಿರುತ್ತಿದ್ದಳು.

"ಈ ರವಿವಾರ ನಿನ್ನ ಚಿತ್ರಾ ತಗೀತೀನಿ ಮಿನ್ನಿ." ಮೈಯೆಲ್ಲ ಕಚಗುಳಿ. ಆಸೆಯಿಂದ ಮನೆಗೆಲಸ ಮುಗಿಸಿ ಹೋಗಿಬರುವಷ್ಟರಲ್ಲಿ ಸದಾನಂದ ಡ್ರೆಸ್ ಮಾಡಿಕೊಂಡಿದ್ದ. "ವೆಂಕಟೇಶ್ ಬಂದಾರ. ಪ್ರೋಗ್ರಾಂ ಫಿಕ್ಸ್ ಮಾಡಲಿಕ್ಕೆ ಹುಬ್ಬಳ್ಳಿಗೆ ಹೋಗಬೇಕಾಗೇದ. ಸಾರಿ, ಚಿತ್ರಾ ಮುಂದಿನ ವಾರ ತಗೀತೀನಿ."

ಮುಂದಿನ ವಾರ ಸಂಗೀತ ಶ್ರವಣ ಆಕಾಶವಾಣಿ ಕಾರ್ಯಕ್ರಮ. ಅಂಗವಿಕಲರಿಗಾಗಿ ಮನರಂಜನಾ ಕಾರ್ಯಕ್ರಮ. ಗೆಳೆಯರೊಡನೆ ಪಿಕ್‌ನಿಕ್, ಆಫೀಸ್ ಟೂರು, ಸಾಹಿತಿಗಳ ಸಂದರ್ಶನ, ಗೆಳೆಯನ ತಂದೆ ಸಾವು ಅತ್ತೆಯವರ ಅನಾರೋಗ್ಯ.... ತಿಂಗಳು, ವರ್ಷಗಳು ಉರುಳಿದವು. ಸದಾನಂದನಿಗೆ ವೇಳೆ ಸಿಗಲೇ ಇಲ್ಲ. ಕುಂಚ ಅನಾಥವಾಗಿ ಮೂಲೆ ಸೇರಿತು. ಮನದ ಆಸೆ ಒಳಗೆ ಸುಟ್ಟು ಬೂದಿ ಮಾತ್ರ ತಳದಲ್ಲಿ ಉಳಿಯಿತು. ಮಕ್ಕಳಿಗೆ ಮದುವೆಯಾಯಿತು. ಹೊಸ ಪೀಳಿಗೆ ಹುಟ್ಟಿತು. ಯಾರಲ್ಲಿಯೂ ತನ್ನ ಕಣ್ಣು ಮೂಡಿಬರಲಿಲ್ಲ. ಕನ್ನಡಿಯಲ್ಲಿ ನೋಡಬೇಕೆಂದರೆ ಕನ್ನಡಕ ಅಡ್ಡಿಯಾಯಿತು. ಅರೇ! ವಾಹ್ ! ಎಷ್ಟು ಛಂದ ಕಣ್ಣು ! ಕಳೆದ ದಿನಗಳ ನೆನಪೆಂದರೆ ಒಣ ತುಟಿಗಳಿಗೆ ಜೇನು ಸವರಿದಂತೆ. ಅದನ್ನು ಸವಿಯುತ್ತಿರುವುದೇ ತನಗೀಗ ಆಧಾರ. ಎಡಗೈ ಎತ್ತಿ ಎರಡೂ ಕಣ್ಣು ಸವರಿಕೊಂಡಳು. ತನ್ನ ದೇಹದೊಡನೆ ಇವೂ ಮಣ್ಣಾಗಿ ನಾಶವಾಗಬೇಕೇ ? ಇವು ಸಾರ್ಥಕವಾಗಲಾರವೇ? ಹಂ, ಹೌದು, ಅವುಗಳ ಅಳಿವು ಉಳಿವು ತನ್ನ ಕೈಯಲ್ಲಿಯೇ ಇದೆಯಲ್ಲ. ಇಂಥ ಕಣ್ಣಿನ ನಾಶಕ್ಕೆ ತಾನು ಅವಕಾಶವೀಯಬಾರದು.

ಆ ಸಂಜೆ ಮೀನಾಕ್ಷಿ ಅಜಯನೊಡನೆ ಮಾತನಾಡಿದಳು. ತಾಯಿಯ ಬಯಕೆ ಕೇಳಿ ಮಗನ ಕಣ್ಣು ತುಂಬಿದವು. ಆದರೂ ಅವಳ ಹಟಕ್ಕೆ ಮಣಿಯಲೇಬೇಕಾಯಿತು. ಅದು ಕೊನೆಯ ಆಸೆ ಎಂದಾಗ ಅಜಯ ಅಸಹಾಯನಾದ.

ತನಗೀಗ ಐವತ್ತೆಂಟು ವರುಷ ತುಂಬಿದ್ದರೂ ಬದುಕಿನ ಹರವು ವಿಸ್ತಾರವಾಗುತ್ತಿದ್ದಂತೆ ಭಾಸ. ಹಿಂದಕ್ಕೆ ತಿರುಗಿ ನೋಡಲು ಮುಂದಿನ ಬಗ್ಗೆ ಚಿಂತಿಸಲು ಸಮಯವಿಲ್ಲದಂತೆ ಓಡುತ್ತಿದ್ದ ತಾನು ಒಮ್ಮೆಲೆ ಗಕ್ಕನೆ ನಿಂತು ಬಿಟ್ಟಿದ್ದ. ಸಮ್ಮೇಳನದ ಕೊನೆಯ ದಿನ. ಇನ್ನೂ ಪ್ರೇಕ್ಷಣೀಯ ಸ್ಥಳ ನೋಡುವ ಕಾರ್ಯಕ್ರಮವಿದ್ದಾಗ ಅಜಯನ ತಾರು ಬಂದಿತ್ತು. ಧಾವಿಸಿ ಹೋದೆ. ಬೆಚ್ಚಿ ಬಿದ್ದೆ. ಮೀನಾಕ್ಷಿಯ ಮೈ ತುಂಬ ನಳಿಗೆ. ಮಾತಿಲ್ಲ. ಕಣ್ಣು ತೆರೆದಿಲ್ಲ. ಉಸಿರಾಡುವ ಹೆಣ. ತಲೆ ತಿರುಗಿ ಕಣ್ಣು ಕತ್ತಲೆ ಬಂದಿತು. ನಿಲ್ಲಲು ಸಾಧ್ಯವಾಗದೆ ಹೊರಗೆ ಬಂದು ಕುಕ್ಕರಿಸಿದೆ. ನನ್ನ ಮಿನ್ನಿ ಕೈ ಬಿಟ್ಟಳೇ ? ಊಹುಂ ಇಲ್ಲ ರಿಕವರ್ ಆಗುತ್ತಾರೆನ್ನುವ ಆಶ್ವಾಸನೆ ಕೊಟ್ಟಿದ್ದಾರೆ ಡಾಕ್ಟರ್.

ಅವಳಿಗೆ ಎಚ್ಚರ ಬಂದೊಡನೆ ಅಜಯ ಬಂದು ನನ್ನನ್ನು ಕರೆದ. ನನ್ನ ಎದೆ ಹೊಡೆದುಕೊಳ್ಳುತ್ತಿತ್ತು. ಕಾಲು ನಡುಗುತ್ತಿದ್ದವು. ಹೇಗೋ ಹತ್ತಿರ ಹೋಗಿ ಕುಳಿತೆ. ಬಲಭಾಗ ನಿರ್ಜೀವವಾಗಿತ್ತು. ನನ್ನ ಜೀವನರಥ ಒಗ್ಗಾಲಿಯಾಗಿತ್ತು. ಅದು ಮತ್ತೆ ಮೊದಲಿನಂತೆ ಓಡಬಲ್ಲುದೇ ? ಉಹುಂ, ಸಾಧ್ಯವಿಲ್ಲವೆನಿಸಿತು. ಅದೇ ನನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ಬೇರೂರಿ ಬಿಟ್ಟಿತು. ಅವಳ ಎಡಗೈ ಹಿಡಿದುಕೊಂಡು "ನೀ ಆರಾಮ ಆಗ್ತೀಯಂತ ಡಾಕ್ಟರ ಹೇಳ್ಯಾರ." ನನಗೇ ಭರವಸೆ ಇಲ್ಲದ ಮಾತನ್ನು ಅವಳಿಗೆ ಹೇಳಿದೆ. ನನ್ನ ಮಾತಿನಲ್ಲಿಯ ಪೊಳ್ಳು ಅವಳಿಗೆ ಕಂಡಿರಬೇಕು. ಅಳತೊಡಗಿದಳು. ಭಾವೋದ್ವೇಗಕ್ಕೆ ಒಳಗಾಗಬಾರದೆಂದು ಡಾಕ್ಟರ್ ಹೇಳಿದ್ದರು. ನಾನು ಹೆಚ್ಚು ಮಾತನಾಡದೆ ಅವಳ ಕಣ್ಣೀರು ಒರೆಸಿ ಹೊರಗೆ ಬಂದೆ.

ನೀಲೂ ಬಹಳ ಒಳ್ಳೆಯ ಹುಡುಗಿ, ಅತ್ತೆಯನ್ನು ಚೆನ್ನಾಗಿ ನೋಡಿ ಕೊಳ್ತಾಳೆ. ಸಿದ್ದವ್ವ ಅವಳಿಗೆ ಸಹಾಯ ಮಾಡ್ತಾಳೆ. ಅಜಯನಿಗೆ ಅವ್ವ ಎಂದರೆ ಪ್ರಾಣ. ಮೀನಾಕ್ಷಿಯಾದರೂ ಅಷ್ಟೇ, ತನ್ನ ಪ್ರೀತಿಯನ್ನು ಎಲ್ಲರಿಗೂ

ಧಾರಾಳವಾಗಿ ಹಂಚಿದ್ದಳು. ಮನೆಯಲ್ಲಿ ಎಲ್ಲರ ಮೇಲೂ ಅವಳ ಪ್ರೀತಿಯ ಅಧಿಕಾರದ ಮುದ್ರೆ. ಅವಳ ಉಪಚಾರ, ಉಪದೇಶ, ಆಜ್ಞೆ, ಆದರ್ಶ ಎಲ್ಲಕ್ಕೂ ಎಲ್ಲರೂ ಒಪ್ಪಬೇಕು. ಅದು ಉಳಿದವರಿಗೆ ಪ್ರಿಯವಾದದ್ದು ಕೂಡ. ಅವಳ ಇಂಥ ಪ್ರೀತಿಯ ಆಧಾರದ ಮೇಲೆ ನಾನು ಇಷ್ಟು ದಿನ ಸುಖವಾಗಿ ಜೀವನ ನಡೆಸಿದ್ದೆನಲ್ಲ. ನನ್ನ ಆಧಾರ ಸ್ತಂಭ ಕಡಿದು ಬಿದ್ದಾಗಿನಿಂದ ನನ್ನ ಜೀವ ಜೋಲಿ ಹೊಡೆಯುತ್ತಿದೆ. ಕೋಣೆಯಲ್ಲಿ ಕಾಲಿಟ್ಟಾಗ ಅವಳೇ ಕಣ್ಣು ಮುಚ್ಚಿದ್ದರೆ ಮಾತ್ರ ಹತ್ತಿರ ಹೋಗುವುದು ನನ್ನಿಂದ ಸಾಧ್ಯವಾಗುತ್ತಿತ್ತು. ಅಲ್ಲಿ ಒಂದು ನಿಮಿಷವೂ ನಿಲ್ಲುವ ಧೈರ್ಯ ಸಾಲದೆ ಚಡಪಡಿಸಿ ಯಾರನ್ನಾದರೂ ಕರೆಯುವ ನಟನೆ ಮಾಡುತ್ತ ಅಲ್ಲಿಂದ ಹೊರಬೀಳುತ್ತಿದ್ದೆ. ರಾತ್ರಿಯೆಲ್ಲ ನಿದ್ದೆ ಬಾರದೆ ಹೊರಳಾಡುತ್ತಿದ್ದೆ. ಕಣ್ಣುಮುಚ್ಚಿದರೆ ನನ್ನ ಬೊಗಸೆಯಲ್ಲಾಡುತ್ತಿದ್ದ ಆ ಸುಂದರ ಕಣ್ಣುಗಳದೇ ಚಿತ್ರ. ಮಿನ್ನಿ ತಿರುಗಿ ಮೊದಲಿನಂತೆ ಆಗುವಳೇ ? ಉಹುಂ, ಇಲ್ಲ ಇಲ್ಲ ಎಂದು ಬಾಯಿ ಓರೆಯಾಗಿ ವಿಕಾರವಾದ ಆ ಮುಖ ಕಣ್ಣು ಮುಂದೆ ಬಂದು ನನ್ನ ಒಳಗಿನ ದನಿಯೊಂದು ಚೀರುತ್ತಿತ್ತು. ಈ ರೀತಿ ಬದುಕುವದಕ್ಕಿಂತ ಸಾವೇ ಮೇಲಲ್ಲವೇ ? ನನ್ನ ಒಳದನಿಗೆ ಬೆಚ್ಚಿ ಗಟ್ಟಿಯಾಗಿ ಎದೆಯನ್ನು ಮುಚ್ಚಿಕೊಳ್ಳುತ್ತಿದ್ದೆ. ನನಗಾಗುವ ಸಂಕಟವನ್ನು ಯಾರ ಮುಂದೆ ಹೇಳಲಿ ? ಮೊನ್ನಿನವರೆಗೂ ಅದನ್ನೆಲ್ಲ ಕೇಳಿ ಸಾಂತ್ವನ ನೀಡುತ್ತಿದ್ದವಳೇ ಮೀನಾಕ್ಷಿ.

ತಿಂಗಳುಗಳು ಕಳೆಯುತ್ತ ನಿಧಾನವಾಗಿ ಮೀನಾಕ್ಷಿ ಚೇತರಿಸಿಕೊಂಡಿದ್ದಳು. ಬಾಯಿ ಓರೆಯಾಗಿದ್ದರೂ ತೊದಲು ಮಾತು ಬಂದಿತು. ಹಾಸಿಗೆ ಬಿಟ್ಟು ಏಳಲು ಮಾತ್ರ ಸಾಧ್ಯವಾಗಿರಲಿಲ್ಲ. ಅವಳ ಯಾತನೆ ನೋಡಲು ಹಿಂಜರಿದು ಕೋಣೆಗೆ ಹೋಗುವುದನ್ನೇ ಕಡಿಮೆ ಮಾಡಿದ್ದೆ. ಬಾಣ ಚುಚ್ಚಿಸಿಕೊಂಡ ಜಿಂಕೆಯಂತೆ ವೇದನೆಪಡುತ್ತ ಅವಳು ಹೊರಳಾಡುತ್ತಿದ್ದಳು. ಇಲ್ಲವೇ ನಿಷ್ಕ್ರಿಯಳಾಗಿ ಮಲಗಿರುತ್ತಿದ್ದಳು. ಛೆ.... ಛೇ .... ದೇವರು ದಯಾಮಯನಾಗಿದ್ದರೆ ಇಂಥ ನೋವಿನಿಂದ ಇವಳನ್ನು ಮುಕ್ತಗೊಳಿಸಬಾರದೇ? ಕೊನೆಗೂ ಆ ದಿನ ಬಂದಿತ್ತು.

ತೆರೆದ ಕಣ್ಣುಗಳು ಹಾಗೆಯೇ ಇದ್ದವು. ಮೀನಾಕ್ಷಿ ಹೋಗಿಬಿಟ್ಟಿದ್ದಳು. ಅಜಯ ಅಳುತ್ತಲೇ ಎದ್ದು ಹೋಗಿ ಯಾರಿಗೋ ಫೋನ್ ಮಾಡಿ ಬಂದ. ಡಾಕ್ಟರ್ ಬಂದರು. "ಅಪ್ಪಾ ನೀವು ಇಲ್ಲಿಂದ ಸರೀರಿ" ಅಜಯನ ದನಿ ನಡುಗುತ್ತಿತ್ತು. ಡಾಕ್ಟರ್ ಪೆಟ್ಟಿಗೆ ತೆಗೆದು ತಮ್ಮ ಕೆಲಸ ಸುರು ಮಾಡಿದರು. ನಾನು ಗಟ್ಟಿಯಾಗಿ ಚೀರಿದೆ. 'ಏನಿದು?" "ಹೌದು ಅಪ್ಪಾ, ಅವ್ವ ಸಾಯೂಕಿಂತ ಮೊದಲು ತನ್ನ ಕಣ್ಣು ದಾನಾ ಮಾಡ್ಯಾಳ. ಈ ಫಾರ್ಮ ನೋಡ್ರಿ, ಡಾಕ್ಟರ ಕೆಲಸಕ್ಕೆ ಅಡ್ಡೀ ಮಾಡಬ್ಯಾಡ್ರಿ ಲಗೂನ ಕೆಲಸಾ ಮುಗಸ್ಲಿ. ಇಲ್ಲಾಂದರ ಅವ್ವನ ಕೊನೇ ಆಸೆ ಈಡೇರಿಸಲಿಕ್ಕೆ ಸಾಧ್ಯ ಆಗೂದಿಲ್ಲ." ಮೂಕನಾಗಿ ನಾನು ಎದ್ದು ಬಂದಿದ್ದೆ. ತನಗೆ ತಿಳಿಸದೆ ಮೀನಾಕ್ಷಿ ಕಣ್ಣು ಕೊಟ್ಟಳೇ ? ಅವ್ವ ಮಗ ಒಂದಾದರು. ಸಾಯುವ ಹೊತ್ತಿನಲ್ಲಿ ನಾನು ಪರಕೀಯನಾಗಿಬಿಟ್ಟೆ. ದೈಹಿಕವಾಗಿ, ಮಾನಸಿಕವಾಗಿ ಅವಳು ನನ್ನಿಂದ ದೂರವಾಗುತ್ತಲೇ ಇದ್ದಳು. ಅವಳ ಸಾವನ್ನು ಬಯಸಿದ ನಾನೇ ಅಪರಾಧಿಯಾಗಿದ್ದೆ. ನನ್ನ ಅಂತರಂಗವನ್ನೆಲ್ಲ ಅವಳು ಚೆನ್ನಾಗಿ ಅರ್ಥ ಮಾಡಿಕೊಂಡಿರುವುದು ಸಾಧ್ಯ. ಅವಳ ಸಾವಿನ ಅಪೇಕ್ಷೆ ನನ್ನ ಕಣ್ಣುಗಳಲ್ಲಿ ಮೂಡಿ ಅವಳ ಹೃದಯಕ್ಕೆ ತಟ್ಟಿತೇ ? ಅಜಯ ಹೇಳಿದ ಇನ್ನೊಂದು ಮಾತು ನನ್ನ ಸಾವಿನವರೆಗೂ ನನ್ನನ್ನು ಹಿಂಬಾಲಿಸುತ್ತದೆ. ಕೊನೆಯ ಒಂದೆರಡು ತಿಂಗಳು ಅವಳು ಔಷಧಿ ಸೇವಿಸಿಲ್ಲ. ಸಾವನ್ನೆ ಬಯಸುತ್ತಿದ್ದಳು. ಕಾರಣ ಬದುಕಿನಲ್ಲಿ ಆಸಕ್ತಿ ಇರಲಿಲ್ಲ. ಅವಳನ್ನು ಜೀವನಕ್ಕೆ ಕಟ್ಟಿ ಹಾಕುವ ಸೂತ್ರ ನನ್ನ ಕೈಯಲ್ಲಿತ್ತು. ಆದರೆ ನನ್ನ ಮನೋದೌರ್ಬಲ್ಯದಿಂದಾಗಿ ನಾನೇ ಅದನ್ನು ಕತ್ತರಿಸಿದ್ದೆ. ನನ್ನ ಮನದ ನೋವನ್ನು ಅವಳಿಗೆ ತಿಳಿಯುವಂತೆ ಹೇಳಲು ನನ್ನಲ್ಲಿ ಶಬ್ದಗಳಿರಲಿಲ್ಲ. ಇಲ್ಲಿ ನಾನು ಸೋತೆ. ಒಂದು ದೃಷ್ಟಿಯಲ್ಲಿ ಕೊಲೆಪಾತಕಿಯಾದೆ. ಈ ಮನದ ಭಾರವನ್ನು ಹೊತ್ತು ಜೀವನ ಕಳೆಯುವುದರಲ್ಲಿ ನಾನು ಹಂಚ್‌ಬ್ಯಾಕ್ ಆಗಿಬಿಡುತ್ತೇನೇನೋ. ನನ್ನ ಸಾವು ಯಾವಾಗ? ಹೇಗೆ? ಯಾರು ಬಲ್ಲರು?

ಸದಾನಂದ ಕುಂಚವನ್ನು ಕೈಗೆತ್ತಿಕೊಂಡು ತನ್ನ ಭಾರವನ್ನು ಕಡಿಮೆ ಮಾಡಿಕೊಳ್ಳತೊಡಗಿದ.

***

■■

# ಹರಿದ ಚೂರು ಹೊಂದಿಸಿ

ವಿದ್ಯಾರ್ಥಿಗಳೊಡನೆ ಹದಿನೈದು ದಿನ ಉತ್ತರ ಭಾರತ ಟೂರಿನಲ್ಲಿದ್ದೆ. ಪ್ರವಾಸದಲ್ಲಿಯ ಅಡಚಣೆಗಳಿಂದ, ಬೇಜವಾಬ್ದಾರಿ ವಿದ್ಯಾರ್ಥಿಗಳ ಜವಾಬ್ದಾರಿಯಿಂದ, ಅಪಥ್ಯವಾಗುವ ಆಹಾರದಿಂದ ಬೇಸರ, ಸುಸ್ತು ಮುತ್ತಿಕೊಂಡಿತ್ತು. ಪುಟಿದೇಳುವ ಉತ್ಸಾಹದ ಚಿಲುಮೆಯಂಥ ಹುಡುಗ-ಹುಡುಗಿಯರಿಂದ, ಹಿತ-ಮಿತವಾದ ಕುಡಿತದಿಂದ, ಊರೂರು ತಿರುಗಿದ ಅನುಭವಗಳಿಂದ ಎಲ್ಲಕ್ಕೂ ಹೆಚ್ಚಾಗಿ ಸುಮಾ ಹೇಳಿದ-

"ಸರ್ ನಿಮ್ಮ ಪ್ರೀತಿ, ಉತ್ಸಾಹ ನಮ್ಮೊಡನೆ ಬೆರೆಯುವ ರೀತಿ ನೋಡಿದರೆ ನೀವು ಐವತ್ತರ ಸಮೀಪದವರು ಅನಿಸೋದೇ ಇಲ್ಲ" ಎಂದ ಮಾತಿನಿಂದ.

" ನಿಮ್ಮ ಯೌವ್ವನದ ಗುಟ್ಟೇನು ಸರ್. ನಿಮ್ಮನ್ನು ಕಂಡರೆ ಹೊಟ್ಟೆ ಕಿಚ್ಚಾಗುತ್ತೆ ಸರ್' ಎನ್ನುತ್ತಿದ್ದ ತುಂಟ ಶ್ರೀನಿವಾಸ, ಪ್ರದೀಪರ ಜೋಕ್ಸ್‌ಗಳಿಂದ ಹೊಸ ಮನುಷ್ಯನಾಗಿದ್ದೆ. ಕವಿತೆ ಬರೆಯುವ ಪ್ರೀತಿ ಉಕ್ಕಿತ್ತು. ನನ್ನ ಕವಿತೆ ಹುಟ್ಟುವುದೇ ಹಾಗೇ, ಕಾಲೇಜಿನ ಪಾಠ ಪ್ರವಚನಗಳಲ್ಲಿ - ಕ್ಷಮಿಸಿ, ಬಹಳಷ್ಟು ಸಾಹಿತಿಗಳು ಅಧ್ಯಾಪಕರೇ ಆಗಿರುವುದರಿಂದ ಹೀಗೆ ಹೇಳಿದ್ದೇನೆ. ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವವ ಸಾಹಿತಿ ಎಂದು ಹೆಸರು ಪಡೆದ ಮೇಲೆ ಅವನ ಸಾಹಿತ್ಯ ರಚನೆಯಲ್ಲಿ ಒಂದು ಕ್ರಮ, ಶಿಸ್ತು ಇರುತ್ತದೆ. ಆದರೆ ನನ್ನದೇ ಬೇರೆ ರೀತಿ, ತಿಂಗಳುಗಟ್ಟಲೆ ಗುಪ್ತವಾಗಿದ್ದದ್ದು ಒಮ್ಮೆಲೆ ಕಾರಂಜಿಯಾಗಿ ಪುಟಿಯುತ್ತದೆ.

ಅಂದು ಕವಿತೆ ಬರೆದೇ ತೀರಬೇಕೆಂಬ ಹಟ. ಬೆಳಿಗ್ಗೆ ವಾಕಿಂಗ್ ಹೋಗಿ ಗಂಗಾ ನದಿ ತೀರದಲ್ಲಿ ಜನಸಂದಣಿ ಬಿಟ್ಟು ದೂರ ಕೂತಿದ್ದೆ. ಮನಸ್ಸು ಹೊರಗೆ ಹರಿಯುತ್ತಿದ್ದರೂ ಚಿತ್ತ ಒಳಮುಖವಾಗುತ್ತಿರುವಾಗ ತಟ್ಟನೆ ಕವಿತೆಯ ಸಂಪರ್ಕ ಕಡಿದುಹೋಗಿತ್ತು. ದಿನೇಶ ನಾನು ಕುಳಿತಲ್ಲಿಯೇ ಬಂದಿದ್ದ. ನನ್ನ ಅಸಮಾಧಾಮವನ್ನು ಕಂಡೂ ದಿನೇಶ ಅಲ್ಲಿಂದ ಕದಲಲಿಲ್ಲ. ಹತ್ತಿರವೇ ತಾನೂ ಕುಳಿತು ನದಿಯನ್ನು ದಿಟ್ಟಿಸುತ್ತಿದ್ದ. ಇಲ್ಲಿಯವರೆಗೆ ಬಂದವ ಮಾತನಾಡಲು ಹಿಂಜರಿಯುತ್ತಿದ್ದ. ಬೇರೆಯವರ ಮುಖ ನೋಡಿ ಮನಸ್ಸು ತಿಳಿಯುವ ಶಕ್ತಿ ತನಗಿದೆ ಎಂದು ಆಗಾಗ ಕೊಚ್ಚಿಕೊಂಡು ಹೆಮ್ಮೆ ಪಡುತ್ತಿದ್ದೆ. ಆದರೂ ಆಗ ತನಗಾದ ಬೇಸರ ಅವನಿಗೆ ತಿಳಿಯಲಿ ಎಂದು ನಾನೂ ಮೌನವಾಗಿದ್ದೆ. ಹಳೇನೀರು ಹರಿದು ಹೋಗಿ ಹೊಸ ನೀರು ಬರುವುದನ್ನು ನೋಡುತ್ತಾ ಕಾದು ಕುಳಿತಿದ್ದೆವು ಇಬ್ಬರೂ. ತುಟಿ ಕಚ್ಚುತ್ತ ಮಾತು ನುಂಗುತ್ತ ಕಡ್ಡಿಯಿಂದ ನೆಲ ಕೆರೆಯುತ್ತಿದ್ದ ದಿನೇಶ ನನ್ನಲ್ಲಿ ಕನಿಕರ ಹುಟ್ಟಿಸಿದ. ವಿದ್ಯಾರ್ಥಿಗಳ ಸಮಸ್ಯೆಗಳು, ಕೌಟುಂಬಿಕ ಅಡಚಣೆಗಳು, ಪ್ರೇಮ ಪ್ರಕರಣಗಳು, ಕುಡಿತ ಬಡಿದಾಟಗಳು ಎಲ್ಲವನ್ನೂ ಕೇಳಿ ತಿಳಿದು, ಸಹಾಯ ನೀಡುತ್ತಿದ್ದ ನನ್ನಲ್ಲಿಯ ಜನಪ್ರಿಯ ಅಧ್ಯಾಪಕ ಎಚ್ಚೆತ್ತ.

'ಹಲೋ, ದಿನೇಶ ಏನಾಯ್ತು, ಏನು ವಿಷಯ ಹೇಳಿ" ಹೇಳಿಕೊಂಡು ಹಗುರ ಮಾಡಿಕೊಳ್ಳಲಿ ಎನ್ನುವ ಔದಾರ್ಯದಿಂದ ಕೇಳಿದೆ. ತುಟಿಗಳಿಂದ ಸದ್ದು ಹೊರಬರಲಿಲ್ಲ.

"ಪ್ರೇಮ ಪ್ರಕರಣದಲ್ಲಿ ಸಿಕ್ಕಿದ್ದೀರಾ? ಪ್ರೇಮಿಗಳಿಗೆ ನನ್ನ ಹೃದಯದ ಮೂಲೆಯಲ್ಲಿ ಒಂದು ಮೆತ್ತನ್ನ ಹಾಸಿಗೆಯಿದೆ." ಇಲ್ಲವೆನ್ನುವಂತೆ ತಲೆ ಆಡಿಸಿದ ಅವನು ಸುಮಾಳನ್ನು ಪ್ರೀತಿಸುತ್ತಿದ್ದಾನೆನ್ನುವ ಸಂಶಯ ನನ್ನನ್ನು ಬಾಧಿಸುತ್ತಿತ್ತು. ಈ ಬಾಧೆಗೆ ಕಾರಣ, ಸುಮಳ ಅಗಲ ಕಣ್ಣುಗಳಲ್ಲಿಯ ಪ್ರೀತಿ ನನ್ನನ್ನೂ ಆಕರ್ಷಿಸಿದ್ದೇ. ಹಗುರವಾಗಿ ಮತ್ತೆ ಕೇಳಿದೆ.

"ನಾನೊಂದು ತಪ್ಪು ಮಾಡಿದ್ದೀನಿ ಸರ್."

"ಮನುಷ್ಯನಾಗಿ ಹುಟ್ಟಿ ತಪ್ಪು ಮಾಡೋದು ಸಹಜ. ಆದರೆ ಅದನ್ನು ತಿಳಿದು ತಿದ್ದಿಕೊಳ್ಳೋದು ಬಹಳ ಮುಖ್ಯ ದಿನೇಶ."

"ತಿದ್ದಿಕೋಬೇಕು ಅಂತಲೇ ಇಲ್ಲಿಗೆ ಬಂದೆ. ವರ್ಷ ಕಳೆದರೂ ಹೇಳಲಾಗದ್ದನ್ನು ಈಗ ನಾನು ಹೇಳಲೇಬೇಕು." ಮತ್ತೆ ಸುಮ್ಮನಾದ. ಚಿಂತೆ ತುಂಬಿದ ಅವನ ಮುಖ, ನದಿಯತ್ತ ದಿಟ್ಟಿಸುತ್ತಿದ್ದ ರೀತಿ ನೋಡಿದಾಗ ನನ್ನ ಕಣ್ಣೆದುರೇ ನದಿಗೆ ಧುಮುಕುತ್ತಾನೇನೋ ಎಂದು ಭಯವಾಯಿತು. ಅವನ ಭುಜ ಸವರಿ ಪ್ರೀತಿಯಿಂದ ಮತ್ತೆ ಕೇಳಿದೆ.

"ನೀವು ನನ್ನನ್ನು ಕ್ಷಮಿಸುತ್ತೀರಾ", ಗೋಗರೆದ.

"ನೀನು ಮಾಡಿದ ತಪ್ಪೇನು ಹೇಳಪ್ಪ ಆಮೇಲೆ ಮುಂದಿನ ಮಾತು. ಅಷ್ಟಾಗಿ ಕ್ಷಮಿಸೋದಕ್ಕೆ ನಾನ್ಯಾರು, ನನಗೆ ಸಂಬಂಧವೇನು ತಿಳೀಬೇಕಲ್ಲ. ಹೆದರಬೇಡ ಹೇಳು.

'ನಾನು.... ನಾನು ಕಾಶಿನಾಥರ ಭಾವಮೈದುನ, ಅಂದರೆ ಅಷ್ಟು ಹತ್ತಿರದ ಸಂಬಂಧವಲ್ಲ. ಅವರ ಹೆಂಡತಿಯ ಚಿಕ್ಕಮ್ಮನ ಮಗ. ನೀವು ಅವರು ಚಡ್ಡಿದೋಸ್ತರು, ಗಳಸ್ಯ ಕಂಠಸ್ಯ...."

"ಅದೆಲ್ಲಾ ಹಳೇ ವಿಷಯ. ಈಗ ಅಂಥ ಸಂಬಂಧವೇನೂ ಉಳಿದಿಲ್ಲ" ನನ್ನ ಮುಖ ಕೆಂಪಾಗಿತ್ತು. ಒರಟಾಗಿಯೇ ಹೇಳಿದೆ.

'ಅದು ನನಗೆ ಗೊತ್ತಿದೆ ಸರ್, ನಿಮ್ಮ ಗೆಳೆತನ ಮುರಿಯೋಕೆ ನಾನೇ ಕಾರಣ. ನೀವೊಮ್ಮೆ ಅವರಿಗೆ ಕೈ ಸಾಲ ಎಂದು ಸಾವಿರ ರೂಪಾಯಿ ಕೊಟ್ಟಿದ್ದಿರಿ. ಆದಷ್ಟು ಬೇಗ ಮುಟ್ಟಿಸ್ತೀನಿ ಅಂತ ಅವರೂ ಹೇಳಿದ್ದರು."

"ಸಾವಿರ ರೂಪಾಯಿಗಾಗಿ ನಾನು ಗೆಳೆತನ ಬಿಟ್ಟಿಲ್ಲ. ಸ್ನೇಹಕ್ಕಾಗಿ ಜೀವ ಕೊಡೋದಕ್ಕೂ ನಾನು ಸಿದ್ಧ, ಆಗ ನಾನೂ ಕಷ್ಟದಲ್ಲಿದ್ದೆ. ಅವ್ವ ಆಸ್ಪತ್ರೆಯಲ್ಲಿದ್ದರು. ಮಗನ ಕಾಲೇಜು ಫೀಜು ತುಂಬಬೇಕಿತ್ತು. ಇದುವರೆಗೂ ಹಣ ನನಗೆ ತಿರುಗಿ ಬರಲಿಲ್ಲ. ಕೊಟ್ಟ ಮಾತಿಗೆ ತಪ್ಪಿದರೆ ನನ್ನ ಗೆಳೆಯನೇ ಅಲ್ಲ. ವಂಚಕ, ಅವನು ನನ್ನ ಹತ್ತಿರವೂ ಸುಳೀಬಾರದು. ಆ ಮಾತೆಲ್ಲ ಯಾಕೀಗ" ಎದ್ದು ಹೊರಡಲು ತಯಾರಾದೆ. ನನ್ನ ಒಂದು ಸುಂದರ ಬೆಳಗಿನ ಅನುಭವ ಹಾಳಾಗಿತ್ತು. ಕವಿತೆ ಕಮರಿ ಹೋಗಿತ್ತು.

"ಸ್ವಲ್ಪ ನಿಲ್ಲಿ ಸರ್, ಅದನ್ನೇ ನಾನೀಗ ಹೇಳ್ತಿರೋದು. ಅವರು ನನ್ನ ಕೈಯಲ್ಲಿ ಹಣ ಕೊಟ್ಟು ನಿಮಗೆ ಮುಟ್ಟಿಸಲು ಹೇಳಿದರು. ನಾನು ಅದೇ ನಿಮ್ಮ ಕಾಲೇಜಿಗೆ ಬಂದಿದ್ದೆ. ಮೋಜಿಗೆ ಆ ಹಣ ಹಾರಿಸಿಬಿಟ್ಟೆ. ಅಷ್ಟೇ ಅಲ್ಲ, ಸಾಲ ಮುಟ್ಟಿದ ಮೇಲೆ ನೀವೂ ಕೈಸಾಲ ಕೇಳಿದ್ದೀರಿ ಎಂದು ಹೇಳಿ ಅವರು ಕೊಟ್ಟ ಆ ಸಾವಿರ ರೂಪಾಯಿಯನ್ನೂ ಗುಳುಂ ಮಾಡಿಬಿಟ್ಟೆ."

ಸಿಟ್ಟು ಬಂದರೆ ನಾನು ಮನುಷ್ಯನೇ ಅಲ್ಲ. ಮೈ ಉರಿಯುತ್ತಿತ್ತು. ಅವನನ್ನು ಎತ್ತಿ ನದಿಯಲ್ಲಿ ಒಗೆಯಲು ಭುಜ ಕುಣಿಯುತ್ತಿದ್ದವು.

"ನಡಿ ಇಲ್ಲಿಂದ. ಓಡು, ದೂರ ನನ್ನಿಂದ" ಕಿರುಚಿದೆ. ಬಿಳಿಚಿಕೊಂಡ ದಿನೇಶ. "ನೀವು ಏನು ಬೇಕಾದರೂ ಶಿಕ್ಷೆ ಕೊಡಿ ಸರ್. ಪೂರ್ತಿ ಹೇಳೇಬಿಡ್ತೀನಿ. ಅವರ ಆರೋಗ್ಯ ಚೆನ್ನಾಗಿರಲಿಲ್ಲ. ಹಣದ ಅವಶ್ಯಕತೆ ತುಂಬಾ ಇತ್ತು. ಆಗಾಗ ಅಕ್ಕನ ಹತ್ತಿರ ಹೇಳ್ತಿದ್ದರು. "ಚಂದ್ರುಗೆ ಎಷ್ಟು ತೊಂದರೆಯೋ ಏನೋ, ಹಣ ಬೇಗ ತಿರುಗಿ ಕೊಡ್ತೀನಿ ಅಂತ ಹೇಳಿದವ ಇನ್ನೂ ಕೊಟ್ಟಿಲ್ಲ. ಅವನನ್ನು ಹೇಗೆ ಕೇಳೋದು ಅಂತ. ಆಗಲೂ ನಾನು ನಿರ್ಲಜ್ಜನಾಗಿ ಸುಮ್ಮನಿದ್ದೆ."

ಅಷ್ಟು ಹಣವನ್ನು ನಾನು ಗೆಳೆಯರೊಡನೆ ಗುಂಡು ಪಾರ್ಟಿಯಲ್ಲಿ ಕಳೆಯುತ್ತಿದ್ದೆ. ಆದರೂ ಗೆಳೆಯ ಕೊಟ್ಟ ಮಾತಿಗೆ ತಪ್ಪಿದನಲ್ಲ ಎಂದು ಅವನ ಸಂಪರ್ಕವನ್ನೇ ಬಿಟ್ಟು ಬಿಟ್ಟಿದ್ದೆ. ತಪ್ಪು ನನ್ನದೇ, ನಾವಿಬ್ಬರೂ ಬೆಟ್ಟಿಯಾಗಿದ್ದರೇ......

"ಊರಿಗೆ ಹೋದ ತಕ್ಷಣ ಅವನನ್ನು ಭೆಟ್ಟಿಯಾಗ್ತೀನಿ."

"ಅದು ಸಾಧ್ಯವಿಲ್ಲ ಸರ್. ಎರಡು ತಿಂಗಳ ಹಿಂದೆ ಅವರು ತೀರಿಕೊಂಡ್ರು. ಕೊನೆಗಾಲಕ್ಕೆ ಅಕ್ಕ ಅವರನ್ನ ತವರು ಮನೆಗೆ ಕರೆದುಕೊಂಡು ಹೋಗಿದ್ರು. ಮಕ್ಕಳ ಜೊತೆಗೆ ಇನ್ನೂ ಅಲ್ಲಿಯೇ ಇದ್ದಾರೆ."

ನನ್ನ ಸಿಟ್ಟು ಆಮೇಲೆ ಎಲ್ಲ ಇಳಿದುಹೋಯಿತು. ಮುಂಗೋಪಿಯಾಗಿ ತಪ್ಪಿದೆ. ಒಂದು ಸಲ ಅವನಲ್ಲಿ ಒಂದು ಮಾತು ಕೇಳಬೇಕಿತ್ತು. ನನ್ನ ಅಹಂ ಅಡ್ಡ ಬಂದಿತು. ಅಲ್ಲಲ್ಲಿ ಭೆಟ್ಟಿ ಆದಾಗಲೂ ನಿರ್ಲಕ್ಷಿಸಿದೆ. ಈ ದಿನೇಶನದಷ್ಟೇ ನನ್ನದೂ ತಪ್ಪು, ನಿತ್ರಾಣವಾಗಿ ನಡೆಯಲೂ ಶಕ್ತಿ ಇಲ್ಲದೆ ಲಾಡ್ಜ್ ಕಡೆಗೆ ಹೊರಟೆ.

***

ಎರಡು ಪೆಗ್ ವಿಸ್ಕಿ ಮುಗಿಸಿ ಮೂರನೆಯದನ್ನು ಹಾಕಿಕೊಳ್ಳುವ ಮೊದಲೇ ಸುಮಾ ಒಳಗೆ ಬಂದಿದ್ದಳು.

"ಕುಡಿಯೋದು ಸಾಕು ಸರ್. ದಿನೇಶ ಎಲ್ಲ ಹೇಳಿದ. ಆದದ್ದನ್ನೆಲ್ಲ ಮರೆತು ಬಿಡಿ" ಭುಜವನ್ನು ಮೃದುವಾಗಿ ಒತ್ತಿದಳು.

"ಇಲ್ಲಿ ಬಾ ಸುಮಾ. ನನ್ನ ಹತ್ತಿರ ಕೂತ್ಕೋ. ನಾನು ಸಾಯೋವರೆಗೂ ಕಾಶೀನಾಥನನ್ನ ಮರೆಯೋದಕ್ಕೆ ಸಾಧ್ಯವಿಲ್ಲ. ಜುಜುಬಿ ಸಾವಿರ ರೂಪಾಯಿಗಾಗಿ ಚಿನ್ನದಂಥ ಗೆಳೆಯನನ್ನ ಕಳೆದುಕೊಂಡೆನಲ್ಲ. ಅವನು ಮತ್ತೆ ಸಿಗ್ತಾನ್ಯೇ ? ವಂಚಕ ಅಂತ ಎಲ್ಲರ ಹತ್ತಿರ ಹೀನಾಯ ಮಾಡಿದೆ. ನಾನು, ನಾನೇ ವಂಚಕ, ಲೋಭಿ, ದುಷ್ಟ. ಅವನು ಸಾಯುವಾಗ ನನ್ನ ಬಗ್ಗೆ ಎಂಥ ಕೆಟ್ಟ ಭಾವನೆ ಇಟ್ಟುಕೊಂಡಿರಬಹುದು. ಅದನ್ನ ತಿದ್ದೋಕೆ ಸಾಧ್ಯವೇ ?" ತಲೆಯ ಮೇಲೆ ಕೈ ಹೊತ್ತೆ, ಮತ್ತು ನಿಧಾನವಾಗಿ ಏರುತ್ತಿತ್ತು.

"ಅಷ್ಟೊಂದು ಸೆಂಟಿಮೆಂಟಲ್ ಆಗಬೇಡಿ ಸರ್. ಸಮಾಧಾನ ಮಾಡ್ಕೊಳ್ಳಿ" ಮತ್ತಿನಿಂದಾಗಿ ಅವಳ ದನಿ ಪಿಸುದನಿಯಾಗಿ, ಮಾದಕವಾಗಿ ಕೇಳಿಸಿತು. ಅವಳ ಸೊಂಟಕ್ಕೆ ಕೈ ಹಾಕಿ ಹತ್ತಿರ ಎಳೆದುಕೊಂಡೆ. "ಸುಮಾ, ನೀನು ಬಹಳ ಜಾಣೆ, ಒಳ್ಳೇ ಹುಡುಗಿ, ನಿನ್ನನ್ನ ನಾನು ಮೆಚ್ಚಿದ್ದೀನಿ." ಕೊಸರಿಕೊಳ್ಳುತ್ತಿದ್ದ ಅವಳನ್ನು ಬಿಗಿಯಾಗಿ ಹಿಡಿದಿದ್ದೆ. ಅವಳು ನನಗಿಂತಲೂ ಚುರುತು. ಕಣ್ಣಿ ಕಿತ್ತ ಕರುವಿನಂತೆ ಜಿಗಿದೆದ್ದ ಸುಮಾ.

"ಪ್ಲೀಸ್ ಸರ್, ನಿಮ್ಮನ್ನ ಕಂಡರೆ ತುಂಬಾ ಗೌರವವಿದೆ, ಪ್ರೀತಿಯಿದೆ, ಹುಚ್ಚರ ಹಾಗಾಗಬೇಡಿ. ನಾನು ದಿನೇಶನವಳು. ಪರೀಕ್ಷೆ ಮುಗಿದೊಡನೆ ನಾವು ಮದುವೆ ಆಗ್ತೀವಿ."

ನನ್ನ ರಕ್ತ ಕುದಿಯಿತು. "ದಿನೇಶ ಒಳ್ಳೇ ಹುಡುಗನಲ್ಲ. ಸುಳ್ಳ ಕಳ್ಳ, ಅವನೇ ಇದಕ್ಕೆಲ್ಲ ಕಾರಣ" ಚೀರಿದೆ.

ಅವಳು ಶಾಂತವಾಗಿ, ದೃಢವಾಗಿ ಹೇಳಿದಳು. 'ನನಗೆ ಎಲ್ಲಾ ಗೊತ್ತು. ನಿಮ್ಮ ಕ್ಷಮೆ ಕೇಳಿಕೊಳ್ಳೋದಕ್ಕೆ ನಾನೇ ಅವನಿಗೆ ಹೇಳಿದವಳು. ಮನುಷ್ಯ ತಪ್ಪು ಮಾಡೋದು ಸಹಜ. ಅದನ್ನ ತಿದ್ದಿಕೊಳ್ಳೋದು ಮುಖ್ಯ ಅಂತ ಹೇಳಿದ್ದಿರಿ. ಅವನೀಗ ನಿಜವಾದ ಮನುಷ್ಯ, ನೀವು ಮಾತ್ರ ರಾಕ್ಷಸರಾಗಬೇಡಿ ಪ್ಲೀಸ್."

ಸುಮಾ ಹೊರಟು ಹೋದಳು. ನಾನು ಹಾಸಿಗೆಯಲ್ಲೆ ಕುಸಿದು ಬಿದ್ದೆ. ಸುಮಾ ಎಲ್ಲ ಹುಡುಗಿಯರ ಹಾಗಲ್ಲ. ಕೈ ಚಾಚಿದರೆ ತೆಕ್ಕೆಗೆ ಬೀಳುವ ಹುಡುಗಿಯರನ್ನು ನೋಡಿದ್ದೆ. ಅವಳ ಪ್ರತ್ಯೇಕತೆಯೆ ನನ್ನನ್ನು ಆಕರ್ಷಿಸುತ್ತಾ ಇತ್ತು.

ನನ್ನ ಸಂಶಯ ನಿಜವಾಗಿತ್ತು. ದಿನೇಶ-ಸುಮಾ ಪ್ರೇಮಿಗಳು, ಸುಮಾಳಲ್ಲಿಯ ನನ್ನ ಪ್ರೀತಿ ಹೆಚ್ಚಾಯಿತೇ ಹೊರತು ತನ್ನನ್ನು ಅವಮಾನಿಸಿದಳೆಂದು ಕಡಿಮೆಯಾಗಲಿಲ್ಲ. ಇದಕ್ಕೆ ಕಾರಣ ಅವಳು ನನಗೆ ಲಕ್ಷ್ಮಿಯನ್ನು ನೆನಪಿಗೆ ತರುತ್ತಾಳೆ. ಲಕ್ಷ್ಮಿ ಯಾರೆಂದು ನಿಮಗೆ ಗೊತ್ತಿಲ್ಲ. ನಿಮ್ಮನ್ನು ಹೆಚ್ಚು ಊಹೆಯಲ್ಲಿಡುವದಿಲ್ಲ....

ಸಾಮಾನ್ಯವಾಗಿ ಸಂಜೆ ಸಿಟಿಮಾರ್ಕೆಟ್ಟಿನಲ್ಲಿ ತುಂಬಾ ರಷ್.

"ಚಂದ್ರು ಗಾಡಿ ನಿಲ್ಸಿ ನಾನು ಬೇಕರಿಯಲ್ಲಿ ಮಕ್ಕಳಿಗೆ ತಿಂಡಿ ತೊಗೋತೀನಿ" ಸ್ಕೂಟರ ಇಳಿದು ಹೋದಳು ಇಂದಿರಾ. ಹೆಸರು ಮಕ್ಕಳದು, ಆದರೆ ಕುರುಕಲು ತಿಂಡಿ, ಕುಡಿಯುವಾಗ ತನಗೇ ಬೇಕು. ಅಲ್ಲೇ ನಿಂತು ಸಿಗರೇಟು ಹೊತ್ತಿಸಿದೆ.

"ಎಕ್ಸ್‌ಕ್ಯೂಸ್ ಮಿ" ಬದಿಗೆ ಸರಿದು ನಿಂತೆ. "ಓ, ಲಕ್ಷ್ಮೀ" ಆಶ್ಚರ್ಯದಿಂದ ತೆರೆದ ಬಾಯಿಂದ ಬೀಳುತ್ತಿದ್ದ ಸಿಗರೇಟು ಹಿಡಿದುಕೊಂಡೆ.

"ಹಲೋ ಚಂದ್ರು, ಎಷ್ಟೋ ವರ್ಷಗಳಾದ್ವಲ್ಲ ಭೆಟ್ಟಿ ಆಗಿ." ಲಕ್ಷ್ಮೀಗೂ ಅಷ್ಟೇ ಆಶ್ಚರ್ಯವಾಗಿತ್ತು. ಇಂದಿರಾ ಬಂದೆ ಬಿಟ್ಟಳು.

"ಇಂದು, ಇವರು ಲಕ್ಷ್ಮಿ, ನಮ್ಮೂರವರೇ, ಚಿಕ್ಕಂದಿನಲ್ಲಿ ನನ್ನೊತೆ ಕೂಡಿ ಆಡಿದವರು. ನನ್ನ ಹೆಂಡತಿ ಇಂದಿರಾ" ಅಷ್ಟರಲ್ಲಿ ಸಿಗರೇಟು ಹೊಸಕಿದ್ದೆ.

"ಬಾಲ್ಯ ಕಾಲ ಸಖಿ ಅಂತ ಚೇಷ್ಟೆ ಮಾಡ್ತಿದ್ದೆಯಲ್ಲ ಚಂದ್ರು ಮತ್ತೆ ಈ ಬಹುವಚನ ಯಾಕೆ ? ಇವನು ತುಂಬಾ ತುಂಟ. ಇಂದಿರಾ ಆಗಲೇ ನಿಮಗೂ ಗೊತ್ತಾಗಿರಬೇಕು" ಮೆಚ್ಚುಗೆಯಿಂದ ಇಂದಿರಾಳನ್ನು ನೋಡಿ ಕಣ್ಣು ಮಿಟುಕಿಸಿದಳು. ಇವಳೇನೂ ಬದಲಾಗಿಲ್ಲ. ಹಿಂದಿನ ಅದೇ ಲಕ್ಷ್ಮಿ ಎಂದೆನಿಸಿ ಖುಷಿಯಾಯಿತು.

"ಇಂದಿರಾ ಏನೂ ಕಡಿಮೆಯವಳಲ್ಲ ಲಕ್ಷ್ಮಿ, ನನ್ನ ವಿದ್ಯಾರ್ಥಿನಿಯಾಗಿದ್ದಾಗಲೆ ಗಾಳ ಬೀಸಿ ನನ್ನ ಗಂಟು ಹಾಕ್ಕೊಂಡು ಬಿಟ್ಲು" ಎಂದೆ.

'ಓಃ ನಿಮ್ಮದು ಲವ್ ಮ್ಯಾರೇಜು, ಅಭಿನಂದನೆಗಳು, ಮಕ್ಕಳು ?"

"ಇಬ್ಬರು ಗಂಡುಮಕ್ಕಳು. ಈಗ ಉಳಿದಿರೋದು ಬರಿ ಮ್ಯಾರೀಡ್ ಲೈಫು, ಲವ್ ಗಿವ್ ಏನೂ ಇಲ್ಲ" ಇಂದಿರಾ ಮೂಗು ಎಳೆದಳು.

"ಹಂ, ಕೃಷ್ಣ ಅಂತ ಅವನಿಗೆ ಇನ್ನೊಂದು ಹೆಸರು. ಎಲ್ಲರೂ ಅವನಿಗೆ ಸೋತಿರೋರೆ. ನಿನ್ನೊಬ್ಬಳನ್ನು ಬಿಟ್ಟು" ತಮಾಷೆಯಾಗಿ ಮಾತನಾಡುತ್ತಿದ್ದ ಇಬ್ಬರನ್ನೂ ಕಣ್ಣಲ್ಲೇ ಅಳೆಯುತ್ತಾ ಹೋಲಿಸುತ್ತಾ ನಗುತ್ತಿದ್ದೆ.

"ಏನದು? ಸೋಲು, ಗೆಲುವಿನ ಮಾತು, ಇಂಥ ಮಾರ್ಕೆಟ್ಟಿನಲ್ಲಿ ನಿಂತುಕೊಂಡು" ಜುಬ್ಬ ಪಾಯಿಜಾಮದ ಕನ್ನಡಕಧಾರಿ ಹತ್ತಿರ ಬಂದರು.

"ಶ್ರೀ ಮತ್ತು ಶ್ರೀಮತಿ ಚಂದ್ರಶೇಖರ. ನನ್ನ ಸ್ಕೂಲಿನ ಸಹಪಾಠಿ ಚಂದ್ರು ಮಿ. ಮಂಜುನಾಥ, ನಾನು ಸೋತಿದ್ದು ಇವರಿಗೆ ಮಾತ್ರ. ವೃತ್ತಿಯಿಂದ ಇಂಜಿನಿಯರ್, ಸ್ವಂತ ಕಾಂಟ್ರ್ಯಾಕ್ಟ್ ಮಾಡ್ತಾರೆ."

"ನೀವೂ ಜಾಬ್ ಮಾಡ್ತೀರಾ ಲಕ್ಷ್ಮೀ" ಇಂದಿರಾ ಕುತೂಹಲ ತಡೆಯಲಿಲ್ಲ.

"ನಾನೀಗ ಡಾ. ಉಮಾದೇವಿ ಎಂ.ಡಿ. ಗೈನಿಕ್, ಸ್ವಂತ ಪ್ರಾಕ್ಟೀಸ್ ಮಾಡ್ತಿದ್ದೀನಿ. ಶಿವಾಜಿನಗರದಲ್ಲೇ ಮನೆ. ನರ್ಸಿಂಗ್ ಹೋಂ ಇದೆ. ಇಬ್ಬರೂ ಮಕ್ಕಳ ಜೊತೆ ಬನ್ನಿ" ಲಕ್ಷ್ಮಿ ವಿಳಾಸ ಕೊಟ್ಟಳು. ಖಂಡಿತ ಬರ್ಬೇಕು"

ವಿಶ್ ಮಾಡಿ ಇಬ್ಬರೂ ಕಾರಿನತ್ತ ಹೊರಟರು. ಮನೆ ಮುಟ್ಟುವಷ್ಟರಲ್ಲಿ ಇಂದಿರಾ ನೂರೆಂಟು ಪ್ರಶ್ನೆ ಕೇಳಿದ್ದಳು. ಎಲ್ಲಕ್ಕೂ ಸಮಾಧಾನವಾಗಿಯೆ ಉತ್ತರಿಸಿದ್ದೆ."

ತಾಯಿ ತೀರಿಕೊಂಡಾಗ ಲಕ್ಷ್ಮಿ ಶವದ ಮೇಲೆ ಬಿದ್ದು ಹೊರಳಾಡಿ ಅತ್ತದ್ದು. ತನ್ನ ತಾಯಿ ಅವಳನ್ನು ಎತ್ತಿಕೊಂಡು ಮನೆಗೆ ಬಂದು ತನ್ನ ಹತ್ತಿರ ಕೊಟ್ಟು ಸಾವಿತ್ರಮ್ಮನ ಶವಸಂಸ್ಕಾರಕ್ಕೆ ಹೋದದ್ದು, ಇನ್ನೂ ಕಣ್ಣ ಮುಂದೆ ಕಟ್ಟಿದ ಹಾಗಿದೆ. ಅವಳಿಗೆ ಎರಡನೆ ತಾಯಿ ಬಂದ ಮೇಲೆ ತಮ್ಮ ಮನೆಯಲ್ಲೇ ಹೆಚ್ಚು ಹೊತ್ತು ಕಳೀತಾ ಇದ್ಲು. ಮನೆಯಲ್ಲಿ ಮತ್ತೆ ಚಿಕ್ಕ ಮಕ್ಕಳಿಲ್ಲದ್ದರಿಂದ ತಾನೇ ಅವಳ ಸಂಗಾತಿ, ಆಟ, ಪಾಠ, ಜಗಳ ಎಲ್ಲದರಲ್ಲೂ ತುಂಬಾ ದಿಟ್ಟ ಹುಡುಗಿ. ಲಕ್ಷ್ಮಿ ಓದಿನಲ್ಲಿ ಮುಂದು. ಸ್ಕೂಲಿನಲ್ಲಿ ಹುಡುಗರು ಛೇಡಿಸೋದಕ್ಕೆ ಹೆದರ್ತಿದ್ದರು. ಇಂಥ ಪುಟ್ಟ ಸಖಿ ತನ್ನ ಕಣ್ಣ ಮುಂದೆ ಬೆಳೆಯುತ್ತಿದ್ದಂತೆ ಏನೇನೋ ಮಾತಿಗೆ ನಿಲುಕದ ಭಾವನೆಗಳು ತನ್ನಲ್ಲಿ ಹುಟ್ಟುತ್ತಿದ್ದವು.

ಆ ವಯಸ್ಸಿಗೆ ತಕ್ಕಂತೆ ಚಂದ ಕಾಣುವ ಹುಡುಗಿಯರನ್ನೆಲ್ಲ ಪ್ರೀತಿಸುತ್ತ ತನ್ನ ಭಾವನೆಗಳನ್ನು ಅಕ್ಷರ ರೂಪದಲ್ಲಿ ಇಳಿಸಿ ಒಂದು ಕಾಗದ ಬರೆದು ಲಕ್ಷ್ಮಿಗೆ ಕೊಟ್ಟಿದ್ದೆ. ಅದನ್ನು ತಂದು "ನಾನು ನಿನ್ನೊಡನೆ ಹುಡುಗನಂತೆಯೇ ಬೆಳೆದಿದ್ದೇನೆ ಚಂದ್ರು. ನಾನು ನಿನ್ನ ಸಖಿ ಅಲ್ಲ ಸಖ, ತಿಳಿದುಕೋ" ಎಂದು ಬೆದರಿಸಿ ಚರ ಚರ ಹರಿದು ಹಾಕಿದಾಗ ನಾನು ಬೆಪ್ಪಾಗಿ ನಿಂತಿದ್ದೆ. ಅಲ್ಲಿನ ವಿದ್ಯಾಭ್ಯಾಸ ಮುಗಿದೊಡನೆ ಅವಳ ಅಜ್ಜನ ಊರಿಗೆ ಮೆಡಿಕಲ್ ಕಾಲೇಜು ಸೇರಿದ್ದಳು. ಆ ನಂತರ ಇಂದೇ ಅವಳ ಭೆಟ್ಟಿ.

ಎಲ್ಲ ಕೇಳಿದ ಇಂದಿರಾ "ಅದಕ್ಕೇ ಅವಳು ನಿಮಗೆ ಕೃಷ್ಣ ಎಂದು ಹೆಸರಿಟ್ಟದ್ದು" ಎಂದು ಮೂತಿ ತಿರುವಿ ಮಲಗಿದಳು. ನಿಜವಾಗಿಯೂ ತನ್ನ ಜೀವನದಲ್ಲಿ ಎಷ್ಟೋ ಹುಡುಗಿಯರನ್ನು ಕಂಡಿದ್ದೇನೆ. ಆದರೆ ಈ ಲಕ್ಷ್ಮಿಯೊಬ್ಬಳು ತನಗೆ ಸೋಲದವಳು. ಬಹಳ ವರ್ಷಗಳ ಮೇಲೆ ಕಂಡ ಲಕ್ಷ್ಮಿ ನನ್ನ ಮನಸ್ಸನ್ನು ಕಲಕಿದ್ದಳು.

ಇಂದಿರಾಳಿಗೆ ಒಳ್ಳೆಯ ಕೆಲಸ ಸಿಕ್ಕು ಮನೆ ಬದಲಾಯಿಸಿದಾಗ ಲಕ್ಷ್ಮಿಯ ಮನೆ ಹತ್ತಿರದಲ್ಲೇ ಇತ್ತು. 'ಮಂಜುನಾಥ ಸಾಹಿತ್ಯಾಭ್ಯಾಸಿ, ಕವಿ. ಅಷ್ಟು ಬಿಜಿನೆಸ್ ಮಧ್ಯೆಯೂ ಓದೋಕೆ ಬಿಡುವು ಇಟ್ಟುಕೊಂಡಿರ್ತಾರೆ. ನಿನ್ನ ಕವಿತೆಗಳನ್ನ, ಲೇಖನಗಳನ್ನ ತುಂಬಾ ಮೆಚ್ಚಿಕೊಂಡಿದ್ದಾರೆ. ಒಂದು ರೀತಿಯಲ್ಲಿ ನಿನ್ನ ಬೀಸಣಿಗೆ' ಎಂದು ಲಕ್ಷ್ಮಿ ಹೇಳಿ ನಕ್ಕಾಗ ನಾನು ಉಬ್ಬಿ ಹೋಗಿದ್ದೆ. ಹಣಕಾಸಿನ ಅಂತಸ್ತಿನಲ್ಲಿ ಅಲ್ಲದಿದ್ದರೂ ಬುದ್ಧಿಯಲ್ಲಾದರೂ ತಾನೇ ಮೇಲು ಎಂದು ಕೊಚ್ಚಿಕೊಂಡು ಲಕ್ಷ್ಮಿಯಿಂದ ಬಯ್ಯಿಸಿಕೊಂಡಿದ್ದೆ.

ಮಂಜುನಾಥನ ಕವಿತೆಗಳನ್ನು ಓದಿ, ಮೊದಮೊದಲ ಪ್ರೋತ್ಸಾಹದ ಮಾತುಗಳನ್ನಾಡಿದ್ದೆ. ಅದೂ ಲಕ್ಷ್ಮಿ ಗಂಡ ಎಂದು. ಕಾವ್ಯಾಂಶ ಕಡಿಮೆಯಿದೆ. ಹಸಿಹಸಿಯಾಗಿ ಇಳಿಸುವದಕ್ಕಿಂತ ಸಂಕೇತ, ಪ್ರತಿಮೆಗಳಿಂದ ಕಾವ್ಯದಲ್ಲಿ ಬಿಗುವಿರಬೇಕು ಎಂದು ತಿಳಿಸಿ ಹೇಳಿದ್ದೆ. ಭಾಷಾಜ್ಞಾನ, ಶಬ್ದಸಂಪತ್ತು ಸಾಲದು. ಇನ್ನಷ್ಟು ಓದು ಚೆನ್ನಾಗಿ ಅಭ್ಯಾಸ ಮಾಡೋವರೆಗೆ ಒಂದೆರಡು ವರ್ಷ ಬರೆಯುವದನ್ನೇ ನಿಲ್ಲಿಸಿಬಿಡಿ ಎಂದು ಬೇಸರದಿಂದ ಹೇಳಿದ್ದೆ. ಒಂದು ಸಂಕಲನವನ್ನಾದರೂ ಪ್ರಕಟಿಸಬೇಕೆನ್ನುವ ಆಸೆಯಿಂದ ಮಂಜುನಾಥ ಮುನ್ನುಡಿ ಬರೆಯಲು ಕೇಳಿದಾಗ ಸ್ಪಷ್ಟವಾಗಿ ನಿರಾಕರಿಸಿದ್ದೆ. ಸ್ವತಃ ಲಕ್ಷ್ಮಿಯೇ ಬಂದು ಕೇಳಿದರೆ ಏನು ಮಾಡಬೇಕೆಂದು ವಿಚಾರಿಸಿದ್ದೆ. ಮಂಜುನಾಥನ ಒಳ್ಳೆಯದಕ್ಕೇ ನಾನು ಹೇಳ್ತಿರೋದು ಎಂದು ನನ್ನೊಳಗೇ ಸಮರ್ಥಿಸಿಕೊಂಡಿದ್ದೆ.

ಒಂದು ದಿನ ಲಕ್ಷ್ಮಿಯೇ ಮನೆಗೆ ಬಂದು ತುಂಬ ಸುಂದರವಾಗಿ, ಅಚ್ಚುಕಟ್ಟಾಗಿ, ಅಚ್ಚಾದ ಪುಸ್ತಕದ ಪ್ರತಿ ಕೊಟ್ಟು ಹೋದಳು. ಬೇರೆ ಒಬ್ಬ ಲೇಖಕರಿಂದ 'ಮುನ್ನುಡಿ' ಬರೆಸಿದ್ದರು ಮಂಜುನಾಥ, ನನ್ನ ಮೈ ಉರಿಯಿತು. ಪ್ರಮುಖ ಪತ್ರಿಕೆಯಲ್ಲಿ ಅದರ ಬಗ್ಗೆ ವಿಮರ್ಶೆಯೆನ್ನುವ ಹೆಸರಿನಲ್ಲಿ ಚೆನ್ನಾಗಿ ಬಯ್ದು ಬರೆದೆ. ಆಮೇಲೆಯೆ ನನ್ನ

ಸಿಟ್ಟು ಕೊಂಚ ಶಾಂತವಾದದ್ದು. ಲಕ್ಷ್ಮಿಯ ಗಂಡನಾದಷ್ಟಕ್ಕೆ ಅವನನ್ನು ಹೊಗಳಬೇಕೆ? ನನ್ನ ಲೇಖನಿಗೆ ಎಲ್ಲರೂ ಸಮಾನರು ಎಂದು ಇಂದಿರಾಳ ಮುಂದೆ ಕೊಚ್ಚಿಕೊಂಡೆ. ಅವಳು ಏನೂ ಉತ್ತರ ಕೊಡದೆ ತುಟಿ ಕೊಂಕಿಸಿ ನಕ್ಕಿದ್ದಳು. ಲಕ್ಷ್ಮಿ ನನ್ನ ಕೈಗೆ ಸಿಗಲಿಲ್ಲವೆನ್ನುವ ಹತಾಶೆ ಈ ರೂಪು ತಾಳಿದೆ ಎನ್ನುವ ಶಂಕೆ ನನ್ನ ಒಳ ಹೊರಗನ್ನು ಚೆನ್ನಾಗಿ ಬಲ್ಲ ಇಂದಿರಾಳಿಗೆ ಮೂಡಿರಬಹುದು. ಮುಂದೆ ಭೆಟ್ಟಿಯಾದಾಗ ಗಂಡ-ಹೆಂಡತಿ ಇಬ್ಬರೂ ನನ್ನ ವಿಮರ್ಶೆಯ ಬಗ್ಗೆ ಮಾತು ಎತ್ತಿರಲಿಲ್ಲ. ಬೇರೆ ಪತ್ರಿಕೆಗಳ ಒಳ್ಳೆಯ ಮಾತುಗಳಿಂದ ತೃಪ್ತರಾದಂತಿತ್ತು. ಆಕ್ಷೇಪಿಸಿದ್ದರೆ, ಜಗಳವಾಡಿದ್ದರೆ, ಏನಾದರೂ ಹೇಳಿ ನನ್ನನ್ನು ಸಮರ್ಥಿಸಿಕೊಳ್ಳಬಹುದಿತ್ತು ಎಂದು ತುಂಬ ಚಡಪಡಿಸಿದೆ. ಅವರು ಮಾತ್ರ ಮೊದಲಿನ ಸ್ನೇಹ ಆತ್ಮೀಯತೆಯಿಂದ ಕಾಣುತ್ತಿದ್ದದ್ದು ನುಂಗಲಾರದ ಬಿಸಿ ತುಪ್ಪವಾಗಿತ್ತು.

ಹಳ್ಳಿಯಿಂದ ಗಂಗಕ್ಕನನ್ನು ಕರೆಸಿದ್ದೆ. ತುಂಬು ಗರ್ಭಿಣಿ. ಗರ್ಭ ನಿಂತಾಗಿಂದ ಅಸ್ವಸ್ಥಮಾದಿಂದ ನರಳುತ್ತಿದ್ದಳು. ಮೂರನೆಯ ಹೆರಿಗೆ. ತುಂಬ ನಿಶ್ಶಕ್ತಳಾಗಿದ್ದರಿಂದ ಒಳ್ಳೆಯ ಚಿಕಿತ್ಸೆ ಬೇಕಾಗಿತ್ತು. ಬಂದ ಮರುದಿನವೇ ಎಲ್ಲರನ್ನು ಗಾಬರಿ ಮಾಡಿದ್ದಳು. ಅಕ್ಕ ಉಸಿರಿಗೆ ಒದ್ದಾಡುವುದನ್ನು ನೋಡಲಾರದೆ ಲುಂಗಿಯಲ್ಲೇ ಲಕ್ಷ್ಮಿಯ ಮನೆಗೆ ಓಡಿಹೋಗಿದ್ದೆ.

"ಸಾಧ್ಯವಿದ್ದಷ್ಟು ಬೇಗ ಬಾ ಲಕ್ಷ್ಮಿ" ಲಕ್ಷ್ಮಿ ಹೊರಗೆ ಬಂದಿರಲಿಲ್ಲ. ಮಂಜುನಾಥರೇ ಬಂದು 'ದಯವಿಟ್ಟು ಕ್ಷಮಿಸಿ, ಅವಳೀಗ ಬರೋದಿಲ್ಲ' ಎಂದಾಗ ನನ್ನ ಕೆನ್ನೆಗೆ ಹೊಡೆದಂತಾಗಿತ್ತು. ತಾನು ಕರೆದೊಡನೆ ಲಕ್ಷ್ಮಿ ಕಾರಿನಲ್ಲಿ ಬರುತ್ತಾಳೆಂದುಕೊಂಡು ಸ್ಕೂಟರ್ ಕೂಡ ತರದೆ ಓಡಿಬಂದಿದ್ದೆ. ಲಕ್ಷ್ಮಿಯನ್ನು ಹೊರಗೆ ಬರದಂತೆ ತಡೆದ ಮಂಜುನಾಥ ವಿಲನ್‌ನಂತೆ ಕಂಡುಬಂದಿದ್ದರು. ಸಿಟ್ಟಿನಲ್ಲಿ ಮೂಕನಾಗಿ ಬೇರೆ ಡಾಕ್ಟರಲ್ಲಿ ಓಡಿದ್ದೆ. ಕೊನೆಗೂ ಅವರು ಸಣ್ಣತನ ತೋರಿಸಿಕೊಂಡರೆಂದು ಹೆಮ್ಮೆಯಿಂದ ಒಳಗೇ ಬೀಗಿದ್ದೆ. ಡಾಕ್ಟರಳಾಗಿ ಕರ್ತವ್ಯ ಮಾಡಿದ ಲಕ್ಷ್ಮಿಯ ಬಗ್ಗೆ ಅವಳ ಮೇಲಿನ ಅಧಿಕಾರದಿಂದ ನನ್ನೊಡನೆ ಅವಳು ಬರದಂತೆ ತಡೆದ ಮಂಜುನಾಥರ ಬಗ್ಗೆ ಜಿಗುಪ್ಸೆಪಟ್ಟುಕೊಂಡೆ. ಆ ಹೆರಿಗೆಯಲ್ಲಿ ಅಕ್ಕನ ಜೀವ ಉಳಿಯಲಿಲ್ಲ. ಮನಸ್ಸು ಇನ್ನೂ ಕಹಿಯಾಯಿತು.

ಇಬ್ಬರೂ ಕೂಡಿ ದುಃಖ ಸೂಚಿಸಲು ಮನೆಗೆ ಬಂದಾಗ ಒಳಗೆ ಇಲ್ಲವೆಂದು ಹೇಳಿಸಿದೆ. ಇಂದಿರಳೊಡನೆ ಮಾತಾಡಿ ಹೋದರು.

"ಅವರು ಮನುಷ್ಯರೇ ಅಲ್ಲ, ಕೊಲೆಗಡುಕರು" ಎಂದು ಜರಿದೆ.

"ಪಾಪ ! ಅವರಿಗೆ ಏನು ತೊಂದರೆಯಿತ್ತೋ. ಸುಮ್ಮನೆ ಹಾಗೆ ಮಾಡೋರಲ್ಲ. ಚೆನ್ನಾಗಿ ಪ್ರ್ಯಾಕ್ಟೀಸಿದೆ, ಒಳ್ಳೇ ಹೆಸರಿದೆ' ಇಂದಿರಾ ಅವರನ್ನೇ ವಹಿಸಿಕೊಂಡಿದ್ದಳು. ನನ್ನ ಮುಂಗೋಪ, ಅಹಂ, ಅವಳಿಗಲ್ಲದೆ ಇನ್ನಾರಿಗೆ ಗೊತ್ತು.

"ಅಂತೂ ನನ್ನ ವಿಮರ್ಶೆಯ ಮೇಲೆ ಚೆನ್ನಾಗಿ ಸೇಡು ತೀರಿಸಿಕೊಂಡರು" ಚೀರಿದೆ. ಇಂದಿರಾ ಬೆಪ್ಪಾಗಿ ಸುಮ್ಮನಾದಳು. ಸಾವಿನ ಸಂಕಟ ಅವರ ಮನೆಯ ದಾರಿಗೆ ಅಡ್ಡಗೋಡೆಯಾಯ್ತು.

ನಾಲ್ಕೈದು ವರ್ಷ ಕಳೆದ ಮೇಲೆ ಮಂಜುನಾಥ ಅನಿರೀಕ್ಷಿತವಾಗಿ ಮನೆಗೆ ಬಂದರು. ಒಂದು ಸಣ್ಣ ಕಾರ್ಯಕ್ರಮವಿದೆ. ನೀವಿಬ್ಬರೂ ಮನೆಗೆ ಬರಲೇಬೇಕೆಂದು ಆಮಂತ್ರಿಸಿದರು. ತಮ್ಮ ಎರಡನೆಯ ಕವನಸಂಕಲನವನ್ನು ಪ್ರಮುಖ ಲೇಖಕರಾದ ಡಾ. ಸೋಮನಾಥರಿಂದ ಬಿಡುಗಡೆ ಮಾಡಿಸಿದರು. ಮೊದಲ ಪ್ರತಿಯನ್ನು ನನ್ನ ಕೈಗಿಟ್ಟು ಆತ್ಮೀಯತೆಯಿಂದ ಅಪ್ಪಿಕೊಂಡರು. ಪುಸ್ತಕದ ಮೊದಲ ಪುಟ ತಿರುವಿದಾಗ ಆಶ್ಚರ್ಯ ಕಾದಿತ್ತು.

'ಸಾಹಿತ್ಯ ರಚನೆಯಲ್ಲಿ ಮಾರ್ಗದರ್ಶನ ನೀಡಿದ ಗೆಳೆಯ, ಖ್ಯಾತ ವಿಮರ್ಶಕ ಕವಿ, ಚಂದ್ರಶೇಖರರಿಗೆ ಅರ್ಪಣೆ' ಎಂದಿತ್ತು. ನನ್ನ ಕಣ್ಣುಗಳನ್ನು ನಂಬಲಾಗದೆ ದಿಟ್ಟಿಸುತ್ತಿದ್ದೆ. ಬಫೆಗೆ ಸಿದ್ಧಪಡಿಸುತ್ತ ಅತ್ತಿತ್ತ ಓಡಾಡುತ್ತಿದ್ದ ಲಕ್ಷ್ಮಿ ನನ್ನ ಹತ್ತಿರ ಬಂದಳು.

"ನಾನು ಬಂದು ನಿಮ್ಮಕ್ಕನಿಗೆ ಚಿಕಿತ್ಸೆ ಮಾಡಲಿಲ್ಲವೆಂದು ನಿನಗೆ ಸಿಟ್ಟು ಬಂದು ನಮ್ಮನ್ನು ದೂರ ಮಾಡಿದೆ ಚಂದ್ರು. ನಾನು ಬಂದಿದ್ದರೂ ಗಂಗಕ್ಕನನ್ನು ಉಳಿಸಿಕೊಳ್ಳೋದು ಸಾಧ್ಯವಿರಲಿಲ್ಲ ಅನ್ನೋ ವಿಷಯ ನಾನು ಆಸ್ಪತ್ರೆಯಲ್ಲಿ ವಿಚಾರಿಸಿಕೊಂಡಾಗ ತಿಳೀತು. ನನ್ನಿಂದ ಅನ್ಯಾಯವಾಗಲಿಲ್ಲ. ನಿನ್ನ ಆತುರದ ಕೋಪ ನನಗೆ ಚೆನ್ನಾಗಿ ಗೊತ್ತು. ನಾನು ನಿನ್ನ ಬಾಲ್ಯ ಕಾಲ ಸಖಿ. ಆದರೆ ನಾನು ಹೆಣ್ಣು ಅನ್ನೋದೇ ನೀನು ಮರೆತುಬಿಟ್ಟೆ. ಆ ಆದಿನ ನನಗೆ ಗರ್ಭಪಾತವಾಗಿ ಹಾಸಿಗೆ ಬಿಟ್ಟು ಏಳಲಾರದ ಸ್ಥಿತಿಯಲ್ಲಿದ್ದೆ. ಮಂಜು, ತುಂಬಾ ಸಂಕಟಪಟ್ಟರು."

ಎತ್ತರವಾಗಿ ಬೆಳೆದ ಅವರನ್ನು ನೋಡಲಾಗದೆ ತಲೆ ತಗ್ಗಿಸಿದೆ. "ತಪ್ಪು ಮಾಡುವುದು ಸಹಜ. ಅದನ್ನು ತಿದ್ದಿಕೊಳ್ಳೋದು ಮುಖ್ಯ. ಅಲ್ಲವೇ ಚಂದ್ರಶೇಖರ." ಮಂಜುನಾಥ ಹೆಗಲಿಗೆ ಕೈ ಹಾಕಿ ಎಳೆದೊಯ್ದರು. ಸಖಿ ನಗುತ್ತಿದ್ದಳು....

ಬರೆಯುತ್ತಿದ್ದ ಚಂದ್ರಶೇಖರನ ಕೈ ನಿಂತಿತು. ಬರೆದದ್ದನ್ನು ಮತ್ತೆ ಮತ್ತೆ ಓದಿದ. ಹುಬ್ಬುಗಂಟಿಕ್ಕಿದ. ಬೆರಳುಗಳಿಂದ ಹಣೆ ಬಡಿದುಕೊಂಡ. ಸಿದರೇಟು ಹೊತ್ತಿಸಿ, ಕಾಲು ಮುಂದೆ ಚಾಚಿ ಆರಾಮವಾಗಿ ಕೂತು ಮೇಲ್ಛಾವಣಿ ದಿಟ್ಟಿಸಿದ. ಒಂದು ನಿರ್ಧಾರಕ್ಕೆ ಬಂದು ಕಾಗದಗಳನ್ನೆಲ್ಲ ಕೂಡಿಸಿ ಚರಚರ ಹರಿದು ಹಾಕಿ ಲೆಟರ್‌ಪ್ಯಾಡ್ ಎತ್ತಿಕೊಂಡ.

ಪ್ರೀತಿಯ ರಾಮಣ್ಣ

ನನ್ನ ಐವತ್ತನೆಯ ಹುಟ್ಟುಹಬ್ಬಕ್ಕೆ ಅಭಿಮಾನಿಗಳು, ಗೆಳೆಯರು ಸೇರಿ ಹೊರತರಲಿರುವ ಸಂಭಾವನಾ ಗ್ರಂಥಕ್ಕೆ ನನ್ನ ಜೀವನದ ಕೆಲವು ನೆನಪುಗಳನ್ನು ಬರೆಯಲು ಕೇಳಿದ್ದೀರಿ. ಸದ್ಯ ನನ್ನಿಂದ ಏನೂ ಬರೆಯಲಾಗುತ್ತಿಲ್ಲ. ದಯವಿಟ್ಟು ಕ್ಷಮಿಸಿ. ನನ್ನ ಲೇಖನವಿಲ್ಲದೆ ಪುಸ್ತಕ ಹೊರತರುವದೇ ಒಳ್ಳೆಯದು.

ವಂದನೆಗಳು

ಚಂದ್ರಶೇಖರ

ಹಾಯಾಗಿ ಉಸಿರು ಬಿಟ್ಟು, ಕಡ್ಡಿ ಗೀರಿ ಚೂರುಗಳಿಗೆ ಬೆಂಕಿ ಇಟ್ಟ.

***

■■

# ಗಾಂಧೀ ಮಗಳು

ಮಕ್ಕಳಿಗೆ ಕೂಗಿ ಕೂಗಿ ಪಾಠ ಹೇಳಿ ಗಂಟಲು ನೋಯುತ್ತಿತ್ತು. ರೂಮಿಗೆ ಬಂದು ಡಬ್ಬಿ ತೆಗೆದ ದೇವಕಿ ಗಬ ಗಬ ತಿನ್ನತೊಡಗಿದಳು. ಉಳಿದ ಸಹೋದ್ಯೋಗಿಗಳೂ ಅದೇ ಊಟ ಮಾಡುತ್ತಿದ್ದರು. ಊಟಕ್ಕೆ ಕುಳಿತಾಗ ಮೊದಲೆಲ್ಲ ತಂದದ್ದನ್ನು ಹಂಚಿಕೊಳ್ಳುವಷ್ಟು ಪ್ರೇಮವಿತ್ತು ಅವರಲ್ಲಿ. ಅವಳು ಬಂದ ಮೇಲೆ ಎಲ್ಲಿ ತನ್ನ ಊಟದಲ್ಲಿಯೂ ಪಾಲು ಕೊಡುತ್ತಾಳೋ ಎನ್ನುವ ಭಯದಿಂದ ಈ ಪ್ರೀತಿ ತನ್ನಷ್ಟಕ್ಕೆ ತಾನೆ ಮಾಯವಾಗಿತ್ತು, ಒಂದಿಷ್ಟೂ ಸುಳಿವು ಕೊಡದೆ. ಇದು ದೇವಕಿಗೇನೋ ದುಃಖದ ಸಂಗತಿ. ಅವಳಾದರೂ ತಾನೆ ಏನು ಮಾಡಬಲ್ಲಳು? ಆ ಜಾತಿಯಲ್ಲಿ ಹುಟ್ಟಿದ್ದು ತನ್ನ ತಪ್ಪೇನಲ್ಲ, ಆ ಜಾತಿಯನ್ನು ಹುಟ್ಟಿಸಿದವರದ್ದೇ ತಪ್ಪು ಎನ್ನುವ ವಾದ ಅವಳದು. ಹಾಗೆಂದು ವಾದ ಬೆಳೆಸುವವಳೂ ಅವಳಲ್ಲ. ಅಷ್ಟೇ ಅಲ್ಲ. ಕೀಳರಿಮೆಯಿಂದ ಅವರ ಮುಂದೆ ಕುಗ್ಗಿ ನಡೆಯುವುದು ದೌರ್ಬಲ್ಯವೆಂದುಕೊಂಡಿದ್ದಳು. ಅವರಾದರೂ ಊಟ ಉಡುಗೆಯ ವಿಷಯದಲ್ಲಿ ಅಷ್ಟು ಕಟ್ಟುನಿಟ್ಟಾದರೂ ಉಳಿದುದರಲ್ಲಿ ಸ್ನೇಹಿತೆಯರೇ.

"ದೇವಕೀ, ನಿಮ್ಮ ಸೀರಿ ಎಷ್ಟ ಛಂದ ಅದ, ಎಲ್ಲಿ ಕೊಂಡಿರಿ?" ಎಂದು ಶ್ಯಾಮಲಾ ಕೇಳಿದರೆ-

"ದೇವಕೀ, ನಿಮಗ ಕರ‍್ರಗ ಮೊಣಕಾಲತನಾ ಉದ್ದ ಕೂದಲು ಅದಾವ, ಯಾವ ಎಣ್ಣೀ ಹಚ್ತೀರಿ?" ಮಂದಾಕಿನಿ ವಿಚಾರಿಸುವಳು.

'ಶುದ್ಧ ನಾರಿಯಲ್ ತೇಲ್" ಎಂದು ಟಿ.ವಿ. ಜಾಹೀರಾತಿನಂತೆ ಕಣ್ಣು ತಿರುಗಿಸುತ್ತ ದೇವಕಿ ಹೇಳುವಾಗ ಎಲ್ಲರೂ ನಕ್ಕುಬಿಡುವರು.

"ನಿಮ್ಮ ದನಿ ಕೋಗಿಲೆ ಹಾಂಗ ಎಷ್ಟ ಮಧುರ ಅದ ದೇವಕಿ. ಈ ಸಾರೆ ವಾರ್ಷಿಕೋತ್ಸವಕ ಮಕ್ಕಳಿಗೆ ಗ್ರುಪ್ ಸಾಂಗ್ ನೀವ ಕಲಸರಿ" ಎಂದು ಸರಿತಾ ಉಪಾಯವಾಗಿ ಹೊಣೆ ಹೊರಿಸುವಳು.

"ನಮ್ಮ ಶಾಲೆಯ ಲತಾ ಮಂಗೇಶಕರ ನಾನೇ" ಎಂದು ಅವರ ಪ್ರಶಂಸೆಯನ್ನು ನಗೆಯಲ್ಲಿ ತೇಲಿಸಿಬಿಡುವಳು ದೇವಕಿ-

ಆ ದಿನ ಶ್ಯಾಮಲಾಳ ಮುಖ ಬಾಡಿತ್ತು. ಕಣ್ಣು ಕೆಂಪಾಗಿತ್ತು. "ಯಾಕ್ರೀ ಶ್ಯಾಮಲಾ ಏನಾಗೇದ? ಆರಾಮ ಅದೀರಿಲ್ಲೋ?" ದೇವಕಿಯ ಮೆತ್ತಗಿನ ದನಿಯಲ್ಲಿಯ ಪ್ರೀತಿ ಶ್ಯಾಮಲಾಳ ದುಃಖಕ್ಕೆ ಚಾಲನೆ ಕೊಟ್ಟಿತು.

ಏನೂ ಇಲ್ಲ ಎನ್ನುತ್ತಲೇ ಅಳುತ್ತ ಎಲ್ಲ ಹೇಳಿದಳು ಶ್ಯಾಮಲಾ. ಅವಳ ತಾಯಿಗೆ ಜಡ್ಡಾಗಿದೆ. ತಮ್ಮ ಹಣಕ್ಕಾಗಿ ಪತ್ರ ಬರೆದಿದ್ದಾನೆ. ತಿಂಗಳಿಗೆ ಸಾವಿರಾರು ರೂಪಾಯಿ ಸಂಪಾದಿಸುವ ಗಂಡ ಹಣ ಕೊಡಲು ತಯಾರಿಲ್ಲ. ತವರಿನವರ ಕಷ್ಟಕ್ಕೆ ಸಹಾಯ ಮಾಡಬೇಕೆಂಬ ಮನಸ್ಸಿಗೆ ನೋವಾಗುತ್ತಿದೆ. ಗಂಡ ಇವಳ ಪೂರ್ತಿ ಸಂಬಳ ಬ್ಯಾಂಕಿಗೆ ಹಾಕುತ್ತಾನೆ. ತನ್ನ ಖರ್ಚಿಗೆ ಬೇಕಾದರೂ ಜಗಳ ಮಾಡಿ ಪಡೆಯಬೇಕು. ದೇವಕಿಗೆ ಆಶ್ಚರ್ಯ, ಸಿಟ್ಟು. ಅವಳು ದುಡಿದ ಹಣದ ಮೇಲೆ ಅವಳಿಗೆ ಹಕ್ಕಿಲ್ಲವೇ? ಶ್ಯಾಮಲಾಳ ಗಂಡ ಜಿಪುಣ, ಮಂದಾಕಿನಿ ಗಂಡವ ತವರುಮನೆಯಿಂದ ತಾ ಎಂದು ಬರೆ ಹಾಕ್ತಾನೆ. ಸರಿತಾನ ಅತ್ತೆ ಅವಳು ಬಂಜೆ ಎಂದು ಎಲ್ಲರೆದುರು ಹೀಯಾಳಿಸಿ, ಹಿಂಸೆ ಮಾಡ್ತಾಳೆ. ಎಂಥ ಹೆಂಗಸರಿವರು, ಎಷ್ಟೊಂದು ನೋವು ನುಂಗ್ತಾರೆ, ಮತ್ತೆ ತಮ್ಮ ಸಮಾನರು ಯಾರಿಲ್ಲ ಅಂತ ಸೊಕ್ಕು ಮಾಡ್ತಾರೆ. ಕಣ್ಣೀರಿನಲ್ಲಿ ಕೈ ತೊಳೀತಾರೆ. ಸಹಿಸಲಿಕ್ಕೆ ಆಗದಿದ್ದಾಗ ಜೀವಾ ಕೊಡ್ತಾರೆ. ಎದುರಿಸಿ ನಿಲ್ಲೋ ಅಷ್ಟು ಛಾತೀನೇ ಇಲ್ಲ ಇವರಲ್ಲಿ. ಕಲಿತವರೂ ಅಷ್ಟೇ, ಮೇಲ್ಜಾತಿಯವರಾದರೇನು, ನಮ್ಮವರಾದರೇನು ಒಬ್ಬೊಬ್ಬರದು ಒಂದೊಂದು ತರದ ದೌರ್ಬಲ್ಯ, ಮೂರ್ಖತನ ; ಹೇಡಿಗಳು - ದೇವಕಿ ವಿಚಾರ ಮಾಡುತ್ತ ಕೈ ತೊಳೆಯಲು

ಎದ್ದಾಗ ಕೋಣೆ ಖಾಲಿಯಾಗಿತ್ತು. ಮರುದಿನ ದೇವಕಿ ಶ್ಯಾಮಲಾಳಿಗೆ ನೂರು ರೂಪಾಯಿ ಕೊಟ್ಟಿದ್ದಳು. ಅವಳು ತಿರುಗಿ ಕೊಡ್ತಾಳೆ ಎನ್ನುವ ಭರವಸೆಯೂ ಇಲ್ಲದೆ.

ತನ್ನ ಹಿಂದೆ ತನ್ನ ಬಗ್ಗೆ ಮಾತಾಡಿಕೊಳ್ತಾರೆ ಎನ್ನುವ ಬಗ್ಗೆ ದೇವಕಿ ಎಂದೂ ತಲೆ ಕೆಡಿಸಿಕೊಂಡವಳಲ್ಲ. ಕ್ಲಾಸು ಮುಗಿಸಿ ಡಬ್ಬಿ ಹಿಡಿದು ಬರುವುದು ಒಂದು ದಿನ ತಡವಾದಾಗ ಶ್ಯಾಮಲಾ ಮಂದಾಕಿನಿಗೆ ಹೇಳುತ್ತಿದ್ದ ಮಾತು ಕಿವಿಗೆ ಬಿದ್ದಿತ್ತು.

"ಗಂಡನ್ನ ಬಿಟ್ಟು ಬಂದು ಆರಾಮ ಚೈನೀ ಅದಾಳ ತಾನೊಬ್ಬಳs, ಇಂಥವರಿಗೆಲ್ಲಾ ಏನ ನೀತಿ-ನಡಾವಳಿ ಇರ್ತದ, ಮನಸ್ಸಿಗಿ ಬಂದದ್ದs ಮಾಡತಾರ."

ಅವರು ಮಾತು ಕಿವಿಗೆ ಬಿದ್ದೇ ಇಲ್ಲವೆನ್ನುವಂತೆ ಒಳಗೆ ಬಂದು ಎಲ್ಲರನ್ನೂ ನೋಡಿ ನಗು ತೂರಿ ಡಬ್ಬಿ ಬಿಚ್ಚಿದಳು. ಶ್ಯಾಮಲಾ ಮಾತ್ರ ತಗ್ಗಿಸಿದ ತಲೆ ಎತ್ತಿರಲಿಲ್ಲ.

ತನ್ನ ಬಗ್ಗೆ, ತನ್ನ ಹಿಂದಿನ ಜೀವನದ ಬಗ್ಗೆ ಇವರಿಗೆಲ್ಲ ಏನು ಗೊತ್ತಿದೆ ? ತನ್ನ ಮನೆ ಎಲ್ಲಿದೆ, ಮನೆಯಲ್ಲಿ ಯಾರಾರಿದ್ದಾರೆ ಎನ್ನೋದೂ ಗೊತ್ತಿಲ್ಲ. ತನ್ನ ಗಂಡ ಯಾರೂ ಅನ್ನೋದೂ ಇವರಿಗೆ ಗೊತ್ತಿಲ್ಲ. ಈ ದಿನ ತನ್ನ ಮನೆಯಲ್ಲಿ ಏನಾಗಿದೆ. ತನಗೆ ಏನು ಕಷ್ಟ ಇದೆ, ಹ್ಯಾಗೆ ಜೀವನ ಮಾಡ್ತೀನಿ -ಉಹು ತಿಳಕೊಳ್ಳೋದರಲ್ಲಿ ಯಾರಿಗೂ ಆಸಕ್ತಿ ಇಲ್ಲ. ಇಂಥವರ ಮುಂದೆ ನಾನು ನನ್ನ ಸುಖ-ದುಃಖ ತೋಡಿಕೊಳ್ಳಲೇ ? ಉಹುಂ, ನನ್ನ ಅಭಿಮಾನ ಒಪ್ಪೊದಿಲ್ಲ. ಢಣ್ ಢಣ್ ಶಾಲೆಯ ಗಂಟೆ ದೇವಕಿಯನ್ನು ಎಚ್ಚರಿಸಿ ಮನೆಗೆ ಓಡುವಂತೆ ಮಾಡಿತು.

ದೇವಕಿಯ ಕೈ ಮಗಳನ್ನು ತಟ್ಟುತ್ತಿದ್ದರೂ ಬಾಗಮ್ಮನ ಮುಖವೇ ಕಣ್ಣ ಮುಂದೆ ಕಟ್ಟಿತ್ತು. ಜ್ವರ ಬಂದ ಕಿರಣಳನ್ನು ಸಂಜೆಯವರೆಗೆ ನೋಡಿಕೊಂಡಿದ್ದಳು. ಆದರೆ ಅವಳಿಗಾಗಿ ಇವತ್ತು ಅವಸರದಲ್ಲಿ ಏನೂ ತಂದಿರಲಿಲ್ಲ. ಎಲೆ, ಅಡಿಕೆ, ನಾಶೀ ಪುಡಿ ಏನಾದರೂ ತರಬೇಕಿತ್ತು. ತನ್ನ ಖಾಲಿ ಕೈ ನೋಡಿ ಬಾಗಮ್ಮನವರ ಮುಖ ಗಂಟಾಗಿತ್ತು. ನಿರಾಶೆಯಿಂದ ಮುಖ ತಿರುವಿದ್ದಳು. ಆದರೆ ಹೀಗೆ ತಂದುಕೊಡುವ ಆಸೆಯನ್ನು ಹಚ್ಚಿದವಳು ತಾನೆ. ಮೊದಮೊದಲು ಮುದುಕಿ ಏನೂ ಬೇಡ ಎನ್ನುತ್ತಿದ್ದಳು. ಈಗೀಗ ಏನಾದರೂ ತರದಿದ್ದರೆ ಸಿಟ್ಟು ಬರುತ್ತದೆ. ಬಾಗಮ್ಮನಿಗೆ....

ಗೌತಮ ಬುದ್ಧ ಹೇಳಿದ್ದು ಸತ್ಯ, 'ಆಸೆಯೇ ದುಃಖಕ್ಕೆ ಮೂಲ' ಎಂದು ಹೇಳಿದ ಬುದ್ಧ ಆಸೆಯನ್ನು ಗೆದ್ದು ಮಹಾಪುರುಷನಾದ. ಆದರೆ ತನ್ನ ಗುರು, ಮಾರ್ಗದರ್ಶಿ, ಕೇರಿಯ ಯುವಕರ ನಾಯಕ ತನ್ನ ಶ್ರೀಧರಣ್ಣ ಏನಾದ ? ಬುದ್ಧನ ತತ್ತ್ವಗಳಿಗೆ ಮರುಳಾಗಿ ಬೌದ್ಧನಾಗಿ ನಮ್ಮ ಕೇರಿಯನ್ನು ಬಿಟ್ಟು ಒಳ್ಳೆಯ ಬೀದಿಗೆ, ಅಂತಸ್ತಿಗೆ, ಮಹಡಿ ಮನೆಗೆ, ಬದಲಾಗುತ್ತ ಹೋದ ಶ್ರೀಧರಣ್ಣ ಎತ್ತರಕ್ಕೆ ಏರಲು ಹೋಗಿ ಕೆಳಗೆ ಬಿದ್ದುಬಿಟ್ಟಿದ್ದ. ನಾವಿದ್ದ ಜಾಗದಿಂದಲೇ ಮೇಲೆ ಹೋಗೋದಕ್ಕೆ ಸಾಧ್ಯವಿಲ್ಲವೇ? ಯಾಕಿಲ್ಲ? ಮನುಷ್ಯ ಬದಲಾಗಬೇಕೆ ಹೊರತು ಒಂದುಂಗಿ ಬಿಟ್ಟು ಇನ್ನೊಂದನ್ನ ತೊಡುವ ಹಾಗೆ ಆಗಬಾರದು. ಧರ್ಮ ಬದಲಾದರೆ ಒಳಗಿನ ಆಸೆ, ರೋಷ, ದುಷ್ಟತನ ಎಲ್ಲ ಹೋಗಿಬಿಡುತ್ತವೆಯೆ ಎಂದು ಅವನೊಡನ ತುಂಬಾ ಜಗಳಾಡಿದೆ. 'ನೀನೂ ಸದಾಶಿವನ ಹಾಂಗ ಮಾತಾಡಬ್ಯಾಡಾ' ಅಂದ. 'ಯಾರು ಸದಾಶಿವ' ಅಂದೆ, ತನ್ನ ಗೆಳೆಯನ ಪರಿಚಯ ಮಾಡಿಕೊಟ್ಟ....

"ನಿನ್ನ ಸೀದ್ರಣ್ಣ ಬೌದ್ಧ ಆಗಿ ಆನಂದ ಆಗಲಿಕ್ಕೆ ಹೊಂಟಾನ, ನೀ ಏನ ಆಗ್ತೀ" ಸದಾಶಿವ ಮೊದಲನೇ ಪ್ರಶ್ನೆ ಎಸೆದಿದ್ದ.

"ಈ ಮಾತಿಗೆ ಅಣ್ಣನ ಕೂಡ ಮನ್ಯಾಗ ದಿನಾ ಜಗಳಾಡತೀನಿ. ಅಂವಾ ಕೇಳವೊಲ್ಲ, ಅಂವನ ತಲ್ಯಾಗ ದೆವ್ವ ಹೊಕ್ಕೈತಿ,"

"ಹೌದು, ನೀ ಅನ್ನೂದು ಖರೇ ಐತಿ, ಅಂವನ ತಲ್ಯಾಗ ದೆವ್ವ ಹೊಕ್ಕೈತಿ. ನಾನು' ಸಂಘದ ಗೆಳೆಯರು ಎಲ್ಲಾರೂ ಕೂಡಿ ಭಾಳ ಪ್ರಯತ್ನ ಮಾಡಿದಿವಿ. ಏನೂ ಉಪಯೋಗ ಆಗಲಿಲ್ಲ. ಅಂವಾ ಅಂತೂ ನಮ್ಮ ಕೈ ಬಿಟ್ಟ ಹೊಂಟಾನ, ನೀ ಏನ ಮಾಡೂವಾಕಿ ಹೇಳ. ಇಲ್ಲೇ ಅಪ್ಪ-ಅವ್ವನ ಕೂಡ ಇರ್ತೀಯೋ, ನೀನು ಹೋಗ್ತಿಯೊ?"

"ನಮ್ಮಪ್ಪ-ಅವ್ವ ತಮ್ಮಂದಿರು ಎಲ್ಲಾರೂ ಅಣ್ಣನ ಕೂಡ ಹೋಗಲಿಕ್ಕೆ ಒಂಟಿಗಾಲ ಮ್ಯಾಲ ನಿಂತಾರ. ನಾ ಮಾತ್ರ ಗಟ್ಟಿ ಮನಸ ಮಾಡೇನಿ. ನಾ ಒಬ್ಬಾಕಿ ಆದರೂ ಅಡ್ಡಿಯಿಲ್ಲಾ, ಇಲ್ಲೇ ಕೇರಿಯೊಳಗs ಇದs ಗುಡಸಲದಾಗs ನಾ ಇರಾಕಿ."

"ಹೊಟ್ಟೆಗೆ ಏನ್ಮಾಡ್ತಿ?"

"ಪಿ.ಯು.ಸಿ. ಪಾಸಾಗೇನಿ. ಎಲ್ಲ್ಯಾರ ಕೆಲಸಾ ಹುಡುಕತೇನಿ, ಯೋಗೀಶ ಪ್ರಿಂಟಿಂಗ್ ಪ್ರೆಸ್ಸಿನ್ಯಾಗ ಕೆಲಸಾ ಕೊಡಸ್ತೀನಿ ಅಂದಾನ. ನಮ್ಮ ಸಂಘದ ಕೆಲಸಾ ಮಾಡತೇನಿ. ನಮ್ಮ ಜನರಿಗೆ ತಿಳಿವಳಿಕೆ ಹೇಳ್ತೀನಿ. ಅವರಿಗೆ ಆಗೂ ಅನ್ಯಾಯಾ, ಅತ್ಯಾಚಾರಾ ಎದುರಿಸತೀನಿ" ಆವೇಶದಿಂದ ಹೇಳಿದೆ. ಅವನ ಕಣ್ಣುಗಳಲ್ಲಿ ಮೆಚ್ಚುಗೆ ಮೂಡಿತ್ತು.

"ವಾಹ್‌ರೇ ! ಹುಡುಗೀ. ಇನ್ನೂತನಾ ನಿನ್ನಂಥಾ ಹುಡುಗೀನs ನನಗೆ ಸಿಕ್ಕಿದ್ದಿಲ್ಲಾ." ಅವಮ ಹೊಗಳಿಕೆ ತನ್ನ ಕಪ್ಪು ಕೆನ್ನೆಗಳನ್ನು ಕೆಂಪಾಗಿಸಿದ್ದು ಅವನಿಗೆ ಕಾಣುವುದು ಹೇಗೆ ಸಾಧ್ಯ ? ಹಾಗೇ ಮಾತು ಮುಂದುವರಿಸಿದ್ದ. "ನಿನ್ನ ಛಲ, ದಿಟ್ಟತನದ ಮಾತು, ಗಟ್ಟಿ ಮನಸ್ಸು ನೋಡಿದರ ನಮ್ಮ ಅವ್ವನ ನೆನಪ ಆಗತೈತಿ." ಸದಾಶಿವನ ಅವ್ವನನ್ನು ಎಂದಾದರೂ ನೋಡಬೇಕೆಂದು ತನಗೆ ಆಗಲೇ ಅನಿಸಿತ್ತು.

ಸಂಘ, ಸಮ್ಮೇಳನ, ಹೋರಾಟ, ಮೆರವಣಿಗೆಯ ಕೆಲಸಗಳಲ್ಲಿ ನನ್ನ, ಸದಾಶಿವನ ಓಡಾಟ, ಒಡನಾಟ ಹೆಚ್ಚಾಗತೊಡಗಿತ್ತು. ಕೇರಿಯ ಜನರ ಬಾಯಿ ಸುಮ್ಮನಿದ್ದೀತೆ? ನನ್ನ ಬಿಳಿ ಅರಿವೆ, ಮಾತು, ಓದು, ಬುದ್ಧಿ ಅವರಿಂದ ನನ್ನನ್ನು ದೂರ ಒಯ್ದಿರಬೇಕು. ನನಗೆ ತಂಗಿಯೇ ಇಲ್ಲ. ಸತ್ತು ಹೋಗಿದ್ದಾಳೆಂದು ಒದರಿ ಜಗಳಾಡಿ ಹೋಗಿದ್ದ ಸೀದ್ರಣ್ಣನ ಮನೆಯ ಹೊಸಲು ನಾನು ಮತ್ತೆ ಮೆಟ್ಟಿರಲಿಲ್ಲ. ತನ್ನ ಸುತ್ತ ಮುತ್ತೆಲ್ಲ ಹುಡುಗರೇ ಇದ್ದರೂ ತನಗೆ ಸರಿಯಾಗುವಂಥ ಒಬ್ಬ ಯುವಕನೂ ಕಣ್ಣಿಗೆ ಬಿದ್ದಿರಲಿಲ್ಲ. ಅಣ್ಣನ ವೈರಿಗಳು, ನನ್ನ ಬಗ್ಗೆ ಹೊಟ್ಟೆಕಿಚ್ಚು ಪಡುವವರೂ ಅಲ್ಲಿದ್ದರು. ಅಂಥವರ ಮಾತುಗಳಿಂದ ತಳಮಳಗೊಳ್ಳುತ್ತಿದ್ದೆ. ಅಂಥ ದಿನಗಳಲ್ಲೇs-

"ದೇವಕೀ, ನೀ ನನ್ನ ಮದುವೀ ಆಗ್ತೀಯಾ" ಸದಾಶಿವನ ಮಾತಿಗೆ ಬೆಚ್ಚಿಬಿದ್ದಿದ್ದೆ. ನನ್ನ ಮನಸ್ಸಿನ ಮಾತುಗಳನ್ನೇ ಕಿವಿ ಕೇಳುತ್ತಿರುವ ಭ್ರಮೆ ಎಂದುಕೊಂಡೆ.

"ದೇವೂ ನನಗೆ ನಿನ್ನ ಸ್ವಭಾವ, ಗುಣಾ ಭಾಳ ಸೇರ್ತದ, ನಾವಿಬ್ಬರೂ ಮದುವೀ ಮಾಡಿಕೊಂಡರ ಸುಖದಿಂದ ಇರ್ತೀವಿ ಅನಸ್ತದ."

"ನನ್ನ ರೂಪ, ಬಣ್ಣಾ....?"

"ಅಮವಾಸ್ಯೆ ದಿನಾ ನಕ್ಷತ್ರ ಹೊಳದಾಂಗ ಥಳಾಥಳಾ ಹೊಳೀತಾವಲ್ಲ ಈ ಜೋಡಿ ಕಣ್ಣು. ಇದರ ಮುಂದ ನಾ ಜಗತ್ತs ಮರೀತೇನಿ. ಈ ನಿನ್ನ ಉದ್ದನ್ನ ಕೂದಲ ನನಗೆ ಎಷ್ಟ ಹುಚ್ಚು ಹಿಡಿಸೈತಿ ಅಂದರ ಸಾಯೂವಾಗ ಈ ನಿನ್ನ ಜಡೀಲೆ ಉರ್ಲ ಹಾಕ್ಕೋಬೇಕು ಅನಸತೈತಿ.' ತಳಮಳ, ಉದ್ವೇಗ ಎಲ್ಲ ಶಾಂತವಾಗಿ ಶುದ್ಧ ಪ್ರೇಮ ಒಂದೆ ಉಳಿದಿತ್ತು ನನ್ನ ಮನಸ್ಸಿನಲ್ಲಿ.

ಮಾನವ ಕುಲವೇ ನಮ್ಮ ಕುಟುಂಬ ಎಂದುಕೊಂಡ ನಾವಿಬ್ಬರೂ ಒಂದು ಸಭೆಯಲ್ಲಿ ನೂರಾರು ಜನರ ಎದುರು ಹಾರ ಬದಲಾಯಿಸಿ ಸತಿ-ಪತಿಗಳಾದೆವು. ನನಗೆ ಅಷ್ಟೇ ಸಾಕಿತ್ತು. ಸದಾಶಿವ ಸುಮ್ಮನಿರದೆ ರಜಿಸ್ಟ್ರಾರ ಕಚೇರಿಯಲ್ಲಿಯೂ ಮದುವೆ ನೋಂದಾಯಿಸಿದ. ಮನುಷ್ಯನಿಗೆ ಕಾಣುವಂಥ ಮುಖವೊಂದೇ ಅಲ್ಲದೆ ಇನ್ನೂ ಬೇರೆ ಬೇರೆ ಮುಖಗಳಿರುತ್ತವೆಂದು ತಿಳಿಯದಷ್ಟು ನಾನು ಮುಗ್ಧಳಾಗಿದ್ದೆ. ಅಲ್ಲದೇ ನನಗೆ ಇದ್ದದ್ದೊಂದೇ ಮುಖ. ಅಲ್ಲದೆ ನನ್ನ ಬದುಕಿನ ಹೀರೋ ನಾಲ್ಕಾರು ವರ್ಷಗಳಲ್ಲಿ ಸಂಪೂರ್ಣ ಬದಲಾಗಿದ್ದ. ಮನಸ್ಸಿನ ಆಸೆಗೆ ಮಿತಿಯಿಲ್ಲ ಎನ್ನುವ ಮಾತಿಗೆ ಸದಾಶಿವನೂ ಹೊರತಾಗಿರಲಿಲ್ಲ. ಆದರ್ಶ ಪ್ರೇಮವನ್ನು ಎಲ್ಲೋ ಒಗೆದುಬಿಟ್ಟು ಅಂತರ್ಜಾತಿ ವಿವಾಹಕ್ಕೆ ಸರಕಾರ ಕೊಡುವ ಎಲ್ಲ ಸವಲತ್ತುಗಳನ್ನೂ ಪಡೆದ; ಹಣ, ನೌಕರಿ,ಸೈಟು ಎಲ್ಲ ಬಾಚಿಕೊಂಡ. ಮದುವೆಯಾದೊಡನೆ ನಾನು ಕೇರಿಯ ಗುಡಿಸಲನ್ನು ಬಿಡಬೇಕಾಗಿತ್ತು. ಅದೇ ನನ್ನ ತಪ್ಪು. ಸದಾಶಿವ ನನ್ನ ಜೊತೆಗೆ ನನ್ನ ಗುಡಿಸಲಲ್ಲಿ ಇರಲು ಸಾಧ್ಯವೇಕಿಲ್ಲ ಎನ್ನುವ ಪ್ರಶ್ನೆ ನನ್ನ ಮನದಲ್ಲಿ ಹುಟ್ಟದಷ್ಟು ಅವನ ಪ್ರೇಮನಾಟಕದ ನಾಯಕಿಯ ಪಾತ್ರದಲ್ಲಿ ಕಳೆದುಹೋಗಿದ್ದೆ. ಸರಕಾರೀ ಕಾಲೇಜಿನ ರೀಡರು, ಒಳ್ಳೆ ಮನೆ, ಸೀರೆಗಳು, ಪಾತ್ರೆ - ಸಾಮಾನು, ಓಡಾಡಲು ಸ್ಕೂಟರು, ಕಂಕುಳಲ್ಲೊಂದು ಮಗು, ಕೆಲಸ ಬಿಟ್ಟು ಹಾಯಾಗಿದ್ದೆ. ಎಲ್ಲ ಇತ್ತು, ಇನ್ನೇನು ಬೇಕಿತ್ತು ನನಗೆ. ಇಷ್ಟೇ ಸಾಕೆ ? ಸಾಕಾಗಿಲ್ಲ ಇನ್ನೂ ಏನೋ ಬೇಕು ಎನ್ನುವ ಅತೃಪ್ತಿ ಒಳಗೇ ಹೊಗೆಯಾಡುತ್ತಿತ್ತು. ಸದಾಶಿವ ಕ್ಲಾಸು, ಪರೀಕ್ಷೆ, ಕಾಲೇಜು ಎಂದು ಸಂಘದ ಕೆಲಸಕ್ಕೆ ತಪ್ಪಿಸಿಕೊಳ್ಳುತ್ತಿದ್ದ ವಿಷಯ ನನ್ನ ಗಮನಕ್ಕೆ ಬರುತ್ತಿತ್ತು. ಬರಬರುತ್ತ ನಾನು ಹೋದರೂ ಗೊಣಗುತ್ತಿದ್ದ. ಕೊನೆಗೆ ನಿರ್ಬಂಧ ಹಾಕಿದ. ಅದೇ ಅಸಮಾಧಾನ ಬೆಳೆದು ತನ್ನಲ್ಲಿ ಬಿಸಿಯಾಗಿ ಜಗಳಗಳಾಗುತ್ತಿದ್ದವು. ಪ್ರೇಮದ ಕಾವು ಇಳಿಯುತ್ತ ಹೋದಂತೆ ಈ ಎಲ್ಲ ಕೊರತೆಗಳು ಸ್ಪಷ್ಟವಾಗಿ ಇಬ್ಬರ ನಡುವಿನ ಬಿರುಕು ಹೆಚ್ಚುತ್ತಾ ಹೋಯಿತು. ಅಂದು ತಾನು ಹಟ ತೊಟ್ಟು ಕಿರಣಳನ್ನು ಎತ್ತಿಕೊಂಡೇ ಮೆರವಣಿಗೆಯಲ್ಲಿ ಹೋದೆ. ಸದಾಶಿವ ಸಿಟ್ಟಾಗಿ ತನ್ನನ್ನು ಹೊಡೆದು ಮರ್ಯಾದೆ ಹಾಳಾಗುತ್ತಿದೆಯೆಂದು ಕೂಗಾಡಿದ. ಇತ್ತಿತ್ತಲಾಗಿ ಅವನು ತನ್ನನ್ನು ತೀವ್ರವಾಗಿ ಪ್ರೇಮಿಸಲೂ ಹಿಂಜರಿಯುತ್ತಿದ್ದ. ನಮ್ಮ ದಾರಿ ಕವಲೊಡೆದಿದ್ದವು. ಈ ಬದಲಾವಣೆ ಹೇಗೆ ಕೊನೆಗೊಳ್ಳುತ್ತದೆ ಎಂದು ತಾನು ಭಯಪಡುತ್ತಿದ್ದ ದಿನಗಳಲ್ಲೇ-

"ದೇವಕಿ, ನಾ ಹಳ್ಳಿಗೆ ಹೋಗಿ ಬರತೇನಿ. ಕೆಲಸ ಅದ. ತಿರುಗಿ ಬರೂದು ತಡಾ ಆಗ್ತದ, ನನ್ನ ದಾರೀ ನೋಡಬ್ಯಾಡಾ."

"ನಿಮ್ಮ ಅವ್ವನ್ನ, ಹಳ್ಳೀನ ನಾನೂ ನೋಡಬೇಕು. ಈ ಸಲಾ ಆದ್ರೂ ನನ್ನೂ ಕರಕೊಂಡು ಹೋಗ್ರಿ"

"ಇಲ್ಲಾ, ನನ್ನ ಮದುವಿ ಆಗೇದ ಅದೂ ಹರಿಜನ ಹುಡುಗೀ ಮಾಡಿಕೊಂಡೀನಿ ಅಂತ ನಾ ಯಾರಿಗೂ ಹೇಳಿಲ್ಲ. ಗೊತ್ತಾದರ ಅವ್ವ ಎದಿ ಒಡಕೊಂಡ ಸಾಯ್ತಾಳ. ನೀ ಬರೂದು ಬ್ಯಾಡಾ."

ಸದಾಶಿವ ಹೊರಟು ಹೋಗಿದ್ದ. ನಮ್ಮ ಮದುವೆಯಾಗಿ ಮೂರು ವರ್ಷ ಕಳೆದಿದ್ದರೂ ಈ ಸುದ್ದಿ ಮನೆಯಲ್ಲಿ ಹೇಳಿಲ್ಲ ಎಂದಿದ್ದ ಸದಾಶಿವನ ಇನ್ನೊಂದು ಮುಖದ ಪರಿಚಯ ಆದಾಗ ನಾನು ಕುಸಿದುಬಿದ್ದೆ. ಅದೇ ಕೊನೆಯ ಭೆಟ್ಟಿ. ತಿಂಗಳು ಕಳೆದರೂ ಸದಾಶಿವ ಬರಲಿಲ್ಲ. ಮನೆಯ ದಿನಸಿ ತೀರಿದಾಗ ಪಾತ್ರೆ ಮಾರಿದೆ. ಸದಾಶಿವನೇ ಬಿಟ್ಟು ಹೋದಮೇಲೆ ಆ ಮನೆಯಲ್ಲಿ ಇರುವ ಅಧಿಕಾರ ತನಗಿಲ್ಲ ಎನ್ನಿಸಿದಾಗ ಎರಡು ದಿನ ಉಪವಾಸವಿದ್ದೆ. ಪೈಸೆ ಖರ್ಚಿಲ್ಲದೆ ಮಗಳ ಜೊತೆಗೆ ಕೆರೆಗೆ ಬಿದ್ದು ಸಾಯಬೇಕೆನ್ನುವ ಯೋಚನೆಯೂ ಬಂದಿತ್ತು. ಮನೆಯವರು, ಕೇರಿಯವರು, ಸಮಾಜ, ವ್ಯವಸ್ಥೆ ಎಲ್ಲದರ ವಿರುದ್ಧ ಹೋರಾಡುವ ದಿಟ್ಟೆಯಾಗಿದ್ದ ನಾನು ಈ ಭಂಡ ಗಂಡನ ಜೊತೆಗಿದ್ದು ಹೇಡಿಯಾಗಿಬಿಟ್ಟೇನೇ? ಉಹುಂ - ಸೋತು ಸಾಯಬಾರದು. ಕಷ್ಟ ನನಗೇನೂ ಹೊಸದಲ್ಲ. ಮಗಳೊಡನೆ ಸ್ವತಂತ್ರವಾಗಿ ಬದುಕಬೇಕು, ಆದರೆ ಅದಕ್ಕೂ ಮೊದಲು ಸದಾಶಿವನ ಬಣ್ಣ ಬಯಲು ಮಾಡಬೇಕು. ಅವನ ಅವ್ವನಿಗೆ ತಾನ್ಯಾರೆಂದು ತಿಳಿಯಬೇಕು.

ವಿಚಾರ ಮಾಡುತ್ತ ಮಲಗಿದ ದೇವಕಿಗೆ ಒಮ್ಮೆಲೆ ಎಚ್ಚರಾಯಿತು. ಕಿರಣಳ ಜ್ವರ ಇಳಿದು ಬೆವರು ಸುರಿದಿತ್ತು. ಕಿಡಿಕಿಯ ಕೆಳಗೆ ಪತ್ರವೊಂದು ಬಿದ್ದಿತ್ತು-ತನಗೆ ಬರೆಯುವವರಾದರೂ ಯಾರು -ಅಪರಿಚಿತ ಕೈಬರಹ, ಕುತೂಹಲದಿಂದ ಓದಿದಳು.

ಪ್ರೀತಿಯ ದೇವೂ,

ನಾನು ನಿನಗೆ ಬರೆಯುತ್ತಿರುವದು ಇದೇ ಮೊದಲು, ಕೊನೆಯದೂ ಇದೇ ಪತ್ರ. ಕೆಲವು ತಿಂಗಳುಗಳಿಂದ ನನ್ನ ಆರೋಗ್ಯ ಸರಿ ಇರಲಿಲ್ಲ. ಡಾಕ್ಟರರಿಗೆ ತೋರಿಸಲು ಹೋದೆ. ನಾನಾ ತರದ ಪರೀಕ್ಷೆಗಳಾದ ಮೇಲೆ ಡಾಕ್ಟರ ಕ್ಯಾನ್ಸರ್ ಆಗಿದೆ, ಬೇಗ ಅಪರೇಷನ್ ಮಾಡಬೇಕೆಂದರು. ಈ ರೋಗದ ಬಗ್ಗೆ ನಾನೂ ಅಷ್ಟಿಷ್ಟು ಓದಿಕೊಂಡಿದ್ದೇನೆ. ಇದು ಸಾವನ್ನು ಮುಂದೆ ಹಾಕುವ ರೋಗವೇ ಹೊರತು ಗುಣವಾಗುವುದಿಲ್ಲ. ಮಕ್ಕಳಿಬ್ಬರ ಬೇಜವಾಬ್ದಾರಿಯಿಂದ ಆಸ್ತಿ ಹಾಳಾಗುತ್ತಿದೆ. ಅಂಥವರ ಮೇಲೆ ನನ್ನ ಆಪರೇಷನ್ ಖರ್ಚೂ ಹಾಕಲು ಮನಸ್ಸು ಒಪ್ಪುವುದಿಲ್ಲ. ನನ್ನ ಕೆಲಸ ಮುಗಿದಿದೆ. ಇನ್ನೂ ಬದುಕಬೇಕೆನ್ನುವ ಆಸೆಯೂ ನನಗಿಲ್ಲ. ನಿನಗೆ, ಕಿರಣಳಿಗೆ ಆಶೀರ್ವಾದಗಳು. ನನ್ನ ಬದುಕನ್ನು ಮುಗಿಸುವ ನಿರ್ಧಾರ ಕೈಗೊಂಡಿದ್ದೇನೆ. ಬದುಕೇ ಒಂದು ಹೋರಾಟ. ನಿನ್ನ ಹೋರಾಟದಲ್ಲಿ ಯಶಸ್ಸು ಸಿಗಲಿ.

ನಿನ್ನ

ಗೌರತ್ತೆ

ಮನೆಯ ಛಾವಣಿಯೇ ತನ್ನ ಮೇಲೆ ಕಡಿದುಕೊಂಡು ಬೀಳುತ್ತಿದೆಯೆ? ತಲೆ ಗಟ್ಟಿಯಾಗಿ ಹಿಡಿದುಕೊಂಡು ದೇವಕಿ ಚೀರಿದಳು. ಅತ್ತು ದುಃಖ ಹಗುರ ಮಾಡಿಕೊಳ್ಳಲು ತನಗೆ ಅತ್ತೆಯ ತೊಡೆಯೊಂದು ಇತ್ತು. ಈಗ.... ಈಗ ತಾನು ನಿಜವಾಗಿಯೂ ಅನಾಥೆ. ಸಂಜೆಯ ಕತ್ತಲು ಆವರಿಸಿಕೊಳ್ಳುತ್ತಿದ್ದಂತೆ ಅಳುವು ನಿಂತು ಮನಸ್ಸಿನಲ್ಲಿ ಶೂನ್ಯ ತುಂಬಿಕೊಳ್ಳತೊಡಗಿತ್ತು. ಕಿರಣ 'ಅವ್ವಾಃ ಹಸಿವಿ' ಎಂದಾಗ ಎಚ್ಚತ್ತು ಅವಳಿಗೆ ಹಾಲು ಕುಡಿಸಿ ಬಗಲಲ್ಲಿಟ್ಟುಕೊಂಡು ಬಸ್‌ಸ್ಟ್ಯಾಂಡ್ ದಾರೀ ಹಿಡಿದಳು. ಏನಾದರಾಗಲಿ - ಅತ್ತೆಯನ್ನೊಮ್ಮೆ ನೋಡಲೇಬೇಕು- ಅವಳನ್ನು ಮೊದಲು ನೋಡಿದ ದಿನ...

"ನೀನು ದೇವಕಿ ಏನು? ನಾನು ಸದಾಶಿವನ ಅವ್ವ ಗೌರವ್ವ. ಸರಪೂರಿಂದ ಬಂದೀನಿ. ಇಂವಾ ನಮ್ಮ ಆಳುಮಗಾ ಫಕೀರ, ಫಕೀರಾ ನೀ ಹೊರಗ ಕಟ್ಟಿಮ್ಯಾಲೆ ಕೂಡ್ರು."

ಎತ್ತರವಾದ, ಕೆಂಪು ಬಣ್ಣದ ಬೆಳ್ಳಿಗೂದಲಿನ ಹೆಂಗಸೊಬ್ಬಳು ಹೊಸ್ತಿಲು ದಾಟಿ ಒಳಬರುತ್ತ ಹೇಳಿದಾಗ ದೇವಕಿಯ ಎದೆ ಡವಡವ ಎಂದಿತ್ತು. ಯಾವ ಉಪಚಾರಕ್ಕೂ ಕಾಯದೆ ಒಳಗೆ ಬಂದು ಕುಳಿತ ಅತ್ತೆಯನ್ನು ನೋಡಿ ಸಿಟ್ಟಿನ ಮಾತುಗಳೆಲ್ಲ ಒಳಗೇ ಇಂಗಿಹೋಗಿದ್ದವು. ನಿಧಾನವಾಗಿ ಮಾತನಾಡಿದ್ದಳು ಗೌರತ್ತೆ.

"ನಿನ್ನ ಪತ್ರಾ ಮುಟ್ಟಿತು ದೇವೂ. ಆದರ ತಡಾ ಆತು. ನಿನ್ನ ಮದುವೀ ಆಗೀನಿ ಅಂತ ಸದಾಶಿವ ನಮಗೆ ತಿಳಿಸಿಯೇ ಇಲ್ಲ- ಅಂವಗ ನನ ಮಗಾ ಅನಲಿಕ್ಕೂ ನಾಚಿಕೆ ಬರ್‍ತದ- ಈಗ ಹದಿನೈದು ದಿನಾ ಆತು ನಮ್ಮ ಜಾತೀದ ಇನ್ನೊಂದ ಹುಡುಗಿ ಮದುವೀ ಮಾಡಿಕೊಂಡು ಹನಿಮೂನಿಗೆ ಹೋಗ್ಯಾನ. ಈ ಸುದ್ದಿ ಕೇಳಿದರ ನಿನಗೆ ಕೆಟ್ಟ ಅನಸ್ತದ ಅನ್ನೂದು ಗೊತ್ತಾಗೇ ನಾನಃ ಬಂದೆ. ನಿನ್ನ ನೋಡಿ ಮಾತಾಡಬೇಕು ಅನಿಸ್ತು ಬಂದೆ." ಅವಳ ದನಿಯಲ್ಲಿಯ ನಿಷ್ಕಪಟತೆ ನನ್ನ ಮನಸ್ಸನ್ನು ಮುಟ್ಟಿ ನಂಬುವಂತೆ ಮಾಡಿತು. ತಾನು ಮೋಸಕ್ಕೆ ಬಲಿಯಾದೆ ಅನ್ನೋದು ನೆನಪಾಗಿ ದುಃಖ ಉಕ್ಕಿ ಬಂತು. ಅದನ್ನು ತಿಳಿದವಳಂತೆ ಗೌರತ್ತೆ ತನ್ನನ್ನು ಹತ್ತಿರ ಎಳೆದುಕೊಂಡಳು. ಆಕೀ ಉಡಿಯೊಳಗೆ ನಾ ಮನಸಾ ಅತ್ತುಬಿಟ್ಟೆ.

"ನನ್ನ ಮಗಾ ಒಂದ ಹೆಣ್ಣಿನ ಕುತಿಗೀ ಕೊಯ್ದಾ ಅಂದರ ಅಂವಾ ನನ್ನ ಪಾಲಿಗೆ ಸತ್ತಾಂಗ. ಆದರ ನಾ ಈಗ ಏನ ಮಾಡಿದರೂ, ಏನ ಆಡಿದರೂ ಆಗಿ ಹೋದ ತಪ್ಪು ತಿದ್ದಾಕ ಆಗೂದಿಲ್ಲ. ನಿನಗ ಏನ ಸಹಾಯ ಬೇಕಾದರೂ ಕೇಳು, ಮಾಡ್ತೀನಿ." "ಮಗಳ್ನ ಕರಕೊಂಡು ಒಬ್ಬರ ಮನೀ ಬಾಗಿಲಿಗೆ ಹೋಗಬಾರದು. ಯಾರಿಗೂ ಭಾರ ಆಗಬಾರದು. ನನ್ನ ಕಾಲ ಮ್ಯಾಲೆ ನಾ ನಿಂತು ಜೀವನಾ ಮಾಡಬೇಕಂತೀನಿ" ಅನ್ನೂ ನನ್ನ ಮಾತು ಕೇಳಿ ಮತ್ತೊಮ್ಮೆ ಅಪ್ಪಿಕೊಂಡಳು.

"ಮಗಳs ನಿನ ಬಣ್ಣ ಕಪ್ಪ ಆದರೂ ಮನಸು ಬೆಳ್ಳಗೈತಿ. ನಿನ್ನಂತಾ ಹೇಣ್ತಿ ಕೂಡ ಬಾಳೇ ಮಾಡೂ ದೈವ ಆ ಎಡವಟ್ಟಗಿಲ್ಲ, ಮತ್ತೇನ ಬೇಕಾದರೂ ಕೇಳು. ನಿನಗ ಅಧಿಕಾರ ಐತಿ. ಬರಬೇಕು ಅನ್ನಿಸಿದಾಗ ಹಳ್ಳೀ ಮನೀಗೆ ಬಾ. ನನಗೂ ಹೆಣಮಕ್ಕಳಿಲ್ಲ. ಎರಡೂ ಗಂಡು. ಸಾಲೀ ಕಲಿತು ಶಾಣ್ಯಾ ಆಗಿ ನಾಕ ಮಂದಿಗೆ ಉಪಕಾರ ಮಾಡಲಿ ಅಂತ ಕಲಿಸಿದರ ಇಂವಾ ಹಿಂಗ ಮಾಡಿದಾ. ಇವನ ತಮ್ಮ ಮಲ್ಲೇಶಿ ವಿದ್ಯಾ ತಲೀಗೆ ಹತ್ತಲಾರದ ಹೊಲಾ ಮಾಡ್ತೀನಿ ಅಂತ ಊರಾಗ ಬಿಳೇ ಅರಿವಿ ಹಾಕ್ಕೊಂಡ ತಿರಗತಾನ. ಮನ್ಯಾಗ ಹೆಣ್ತೀ ಮಕ್ಕಳು ಇದ್ರೂ ರಾತ್ರಿ ಯಾವಾಕಿನ್ನರೆ ಹುಡುಕ್ಕೊಂಡು ಹೊಲಗೇರಿಗೆ ಹೋಕ್ಕಾನ. ಹಿಂತಾ ಮಕ್ಕಳು ಹುಟ್ಟದಿದ್ದರ ಛೊಲೋ ಇತ್ತು. ಮುಪ್ಪಿನ ಕಾಲಕ್ಕ ಮನಸೀಗಿ ಶಾಂತಿ ಇರಬೇಕು. ಇದನೆಲ್ಲಾ ನೋಡಿದರ ಲಗೂನ ಕಣ್ಣು ಮುಚ್ಚಲಿ ಅಂತೀನಿ." ರಾತ್ರಿ ಪಕ್ಕದಲ್ಲಿ ಮಲಗಿದ ಗೌರತ್ತೆ ಕಣ್ಣೀರು ತಂದು ಹೇಳಿದ್ದಳು.

"ಯವ್ವಾs ನೀನs ನನ್ನವ್ವ. ಹಂಗ ಸಾಯೂ ಮಾತ ಆಡಬ್ಯಾಡಾ" ಅಂದಿದ್ದೆ. ಎಂದೂ ಕಾಣದ ಆ ಹೆಂಗಸಿನೊಡನೆ ತನ್ನ ಸಂಬಂಧ ಏನಿತ್ತು? ಅವಳು ತನ್ನನ್ನು ಬಿಟ್ಟು ಹೋದ ಗಂಡನ ಅವ್ವ. ಆದರೆ ಬದುಕಿನಲ್ಲಿ ಸುಖಕ್ಕಿಂತ ಕಷ್ಟವನ್ನೇ ಹೆಚ್ಚು ಉಂಡ ಹೆಣ್ಣು ಎಂದು ಕೇಳಿದ್ದೆ. ಬಹುಶಃ ಅದೇ ತಮ್ಮಿಬ್ಬರನ್ನು ತಳಕು ಹಾಕಿರಬೇಕು.

"ಯವ್ವ, ನೀ ಎಲ್ಲಾರ ಹಾಂಗ ಅಲ್ಲ, ಜಗತ್ತಿನ್ಯಾಗಿನ ಎಲ್ಲಾ ಹೆಂಗಸರೂ ಒಂದ ಆದರ, ನೀ ಒಬ್ಬಾಕೀನೇ ಒಂದು ಅನಿಸೇದ ನನಗ."

"ಹುಚ್ಚವ್ವ, ನಾ ಏನ ಹೆಚ್ಚಿನಾಕಿ ಕಂಡೆ ನಿನಗ."

"ನಿನ್ನ ಕುಲಾ ಹೆಂತಾದ್ದು ಏನ ಕತಿ. ಆದರೂ ನೀ ನನ್ನ ಒಪ್ಪಿಕೊಂಡು ಅಪ್ಪಿಕೊಂಡಿ, ಇದು ಭಾಳ ದೊಡ್ಡ ಮಾತು. ಸಭಾದಾಗ ದೊಡ್ಡ ಮನುಷ್ಯರು ದೊಡ್ಡ ದೊಡ್ಡ ಮಾತ ಹೇಳತಾರ. ಆದರ ಮನೀ ಬಾಗಿಲಿಗೆ ಹೋದರ ಒಳಗ ಬಾ ಅನ್ನಾಂಗಿಲ್ಲ. ನೀ ಒಬ್ಬಾಕಿ ಅಪವಾದ ಅದೀ."

'ಅದಕ್ಕ ಬ್ಯಾರೇನ ಕಾರಣ ಐತಿ ದೇವೂ. ಹುಟ್ಟಿದ ಮನ್ಯಾಗ ನಾ ಬೆಳದದ್ದ ಹಾಂಗ. ನಮ್ಮಪ್ಪ ವೀರಪ್ಪ ದೇಶಕ್ಕ ಸ್ವತಂತ್ರ ತರಾಕ ಹೋರಾಡಿ ಪೋಲಿಸರ ಹೊಡೆತಾ ತಿಂದು ಜೇಲಿಗೆ ಹೋಗಿದ್ದ. ಗಾಂಧೀ ಅಜ್ಜನ ಕಟ್ಟಾ ಭಕ್ತ ಅಂವಾ. ಮಕ್ಕಳಿಗೆಲ್ಲಾ ಓದೂ ಬರಹ ಕಲಿಸಿದಾ. ಖಾದೀ ತೊಡಾಕ ಹಚ್ಚಿದ್ದಾ, ನೂಲಾಕ ರಾಟೀ ತಂದಕೊಟ್ಟಿದ್ದಾ, ರಟ್ಟೀ ಮುರದು ದುಡದ ತಿನ್ರಿ ಅಂತಿದ್ದಾ. ಆ ಜಾತಿ ಪಾತಿ ಎಲ್ಲಾ ಮನಿಸೇರ ಮಾಡಿಕೊಂಡದ್ದೋ ಮಕ್ಕಳ್ರಾ, ಎಲ್ಲಾರ ಮೈಯಾನ ರಕ್ತ ಕೆಂಪs ಐತಿ, ಹುಟ್ಟಿಸಿದ ದೇವರು ಒಬ್ಬನs ಅದಾನ ತಿಳಿಕೊಳ್ರಿ ಅಂತ ಬುದ್ಧಿ ಹೇಳತಿದ್ದಾ."

'ಹಂತಾ ದೊಡ್ಡ ಮನಶ್ಯಾನ ಮಗಳಾಗಿ ನೀ ಹಿಂತಾಕಿ ಆಗೀ ಯವ್ವಾ. ಮತ್ತ ನಿನ್ನ ಮಗ್ಗ ಆಟ ಹಿಂತಾ ಬುದ್ಧಿ ಯಾಕ ಬರಲಿಲ್ಲಾ, ನಿನ ಟಂಕಸಾಲ್ಯಾಗ ಖೊಟ್ಟಿ ರೂಪಾಯಿ ಆದ ಅಲ್ಲ ಅಂವಾ ?

ಗೌರತ್ತೆ ಉಸಿರು ಬಿಟ್ಟು ಎಷ್ಟೋ ಹೊತ್ತು ಸುಮ್ಮನಿದ್ದು ಹೇಳಿದ್ದಳು. "ಸದಾಶಿವ ತಮ್ಮ ಅಪ್ಪನ್ನ ಹೋತಾನ ದೇವೂ" ಎಂದು, ತನ್ನ ಕುತೂಹಲ ತಡೆಯದೆ ಮತ್ತಷ್ಟು ಕೆದಕಿದ್ದಳು.

"ಹದಿನಾರು ವರ್ಷಕ್ಕ ಸರವೂರ ಸಾವುಕಾರನ ಎರಡನೇ ಹೇಣ್ತಿ ಆಗಿ ಬಂದೆ ದೇವೂ. ಆಗಿಂದ ನಾ ಬರೇ ಕಷ್ಟಾನ ಸೋಸೇನಿ. ಬೇಕಾದಷ್ಟು ಶ್ರೀಮಂತಿಕೆ ಇದ್ರೂ ಗೌಡಗ ಗುಣಾ ಇದ್ದಿದ್ದಿಲ್ಲ. ಲಂಗು ಲಗಾಮು ಇಲ್ಲದ

ಗೂಳಿ ಹಾಂಗ ಮೆರದಾ. ಮೊದಲನೆಯಾಕಿ ಇವನ ಹೊಡತಕ್ಕ ಸತ್ತಿದ್ದಳಂತ. ಪೋಲೀಸರ ಬಾಯಿಗೆ ರೊಕ್ಕಾ ತುಂಬಿ ಉಳಕೊಂಡಿದ್ವಾ. ಹೇಣ್ತಿ ಅಂದರ ಕಾಲಾನ ಚಪ್ಪಲಿ ಆಗಿತ್ತು ಅವಂಗ. ಹಾಂಗ ಗುದ್ದಾಡಿಕೊಂತ ಸದಾಶಿವ, ಮಲ್ಲೇಶಿ ಹುಟ್ಟಿದರು. ಗೌಡ ಊರಾಗ ರಂಡೀ ಇಟ್ಟಿದ್ದು ಗೊತ್ತಾತು. ನನ್ನ ರಕ್ತಾ ಕುದೀತು. ಇಂವನ ಕೂಡ ಬಾಳೇ ಸಾಕಾಗಿ ಹೋಗಿತ್ತು. ತಿರಿಗಿ ಬಿದ್ದೆ ನೋಡು, ನನ್ನ ಸನೇಕ ಬರಗೊಡಲಿಲ್ಲಾ. ನೀ ನನ್ನ ಮುಟ್ಟಿದಿ ಅಂದರ ನೋಡು ಅಂತ ಕುಡಗೋಲ ತೋರಿಸಿದ್ನಿ. ಖೋಲಿ ಬಾಗಲಾ ಹಾಕ್ಕೊಂಡು ಮಕ್ಕಳ್ನ ಕರಕೊಂಡು ಕುಡಗೋಲ ತಲೆದಿಂಬಿಗೆ ಇಟಕೊಂಡ ಮಲಗತಿದ್ದೆ. ಸಾಯೂತನಾ ಹಿಂಗs ಇದ್ವಿವಿ. ಸೆರೆ, ಕೆಟ್ಟ ಜಾಳಿ ಎಲ್ಲಾ ಕೂಡಿ ಅಂವನ್ನ ಜೀವ ತೊಗೊಂಡ್ವು. ಮನೀ ಭಾರಾ ಎಲ್ಲಾ ನಾ ಹೊತ್ಕೊಂಡೆ."

"ಸತ್ಯಕ್ಕ ನ್ಯಾಯಕ್ಕ ಹೊಡದಾಡೂವಾಕಿ ಯವ್ವಾ ನೀನು. ಅದಕs ನಿನ ಮಾರಿ ಮ್ಯಾಲೆ ಕಳೇ ಹ್ಯಾಂಗ ಐತಿ ನೋಡು."

"ಸುಮ್ಮನ ಹೊಗಳಬ್ಯಾಡ ಹುಡುಗೀ ನೀನು. ಈ ಹೊಡೆದಾಟದಾಗ ನಮ ಜೀವಾ ಸಣ್ಣಾಗತೈತಿ ಅನ್ನೂದು ಮರೀಬ್ಯಾಡಾ. ಸರ್ಪದ ಜೋಡಿ ಸರಸಾ ಆಡಿದಾಂಗ ಆಕೈತಿ ನಮ ಬಾಳೆ. ನೀ ಮನಸೀಗೆ, ದೇಹಕ್ಕ ಮುಗುದಾಣಾ ಹಾಕಿ ಕೈಯಾಗ ಇಟಕೊಂಡು ತಪ್ಪ ಹೆಜ್ಜಿ ಇಡದಂಗ ನಡದೀ ಅಂದರ ಈ ಮಂದಿ ಡೊಗ್ಗಿ ಸಲಾಮು ಹಾಕತಾರ. ನೀ ಹಾದೀ ಬಿಟ್ಟೀ ಅಂದರ ಅದs ಮಂದಿ ಆಳಿಗೊಂದು ಕಲ್ಲು ಹೊಡೆದು ಸಾಯಿಸ್ತಾರ. ನಾಕ ಮಂದಿ ಬೆರಳ ಎತ್ತೂಹಾಂಗ ನಾ ಬಾಳೇ ಮಾಡಲಿಲ್ಲ. ನನಗ ಅದs ಬಲಾ. ನಿನಗೂ ಒಂದ ಮಾತ ಹೇಳ್ತೀನಿ. ನೆಪ್ಪ ಇಟಕೊ. ನಿನ್ನ ಕಾಲಮ್ಯಾಲ ನಿಂತು ಅನ್ನಾ ಸಂಪಾದಿಸಿಕೋ. ಆದರೂ ನೀ ಇನ್ನೂ ಸಣ್ಣಾಕಿ. ಜೋಡಿ ಬೇಕು ಅನಿಸಿದರ ಸದಾನ ಕಡೆ ಸೋಡಚೀಟಿ ತೊಗೊಂಡು ಬ್ಯಾರೆ ಮದುವೀ ಮಾಡಿಕೋ. ಅಂವನ ಕಿವಿ ಹಿಡಿದು ತಂದು ನಿಮ್ಮನ್ನ ಕೂಡಸಾಕ ನನಗ ಬರತೈತಿ. ಆದರ ಒಮ್ಮೆ ಮನಸ ಮುರದ ಮ್ಯಾಲೆ ಬಾಳೆ ಮಾಡಿದರ ಏನ ಸಂವಿ ಇರತೈತಿ. ಆ ಹುಡುಗೀಗೂ ಮೋಸ ಆಗೇದ. ಸಾಯೂತನಕ ಈ ಚಿಂತಿ ನನ್ನ ಕಾಡತೈತಿ." ಆ ರಾತ್ರಿ ಅತ್ತೆ ಸೊಸೆ ಕಣ್ಣು ಮುಚ್ಚಿರಲಿಲ್ಲ.....

"ಸರವೂರು ಬಂತು, ಯಾರು ಇಳೀರಿ" ಕಂಡಕ್ಟರ ಕೂಗುತ್ತಿದ್ದ. ದಿಗ್ಗನೆ ಎದ್ದಳು ದೇವಕಿ. ಒಂದು ಕಾಲದ ಗಂಡನ ಮನೆ ಹುಡುಕಿಕೊಂಡು ಬಾಗಿಲಿಗೆ ಬಂದ ದೇವಕಿಯ ಕಾಲಿನ ಶಕ್ತಿ ಸೋರಿಹೋಯಿತು. ರಣಹಲಗೆ ಅಳು.... ಜನರ ನೂಕು ನುಗ್ಗಲು ದಾಟಿದಳು.

"ನನ್ನವ್ವ ಏನು ಛಂದ ಕಾಣತಾಳ ನೋಡ್ರೇss ಕರೀ ಸೀರಿ ಉಟಗೊಂಡು, ಈಬೂತಿ ಪಟ್ಟಾ ಬಡಕೊಂಡು, ರುದ್ರಾಕ್ಷಿ ಸರಾ ಹಾಕ್ಕೊಂಡು ಶಿವಪೂಜಿ ಮಾಡಾಕ ಹ್ವಾದಳೇನ್ರೀ ನನ್ನವ್ವ" ಕೂಡಿದ ಹೆಂಗಸರೆಲ್ಲ ಹಾಡಿಕೊಂಡು ಅಳುತ್ತಿದ್ದಾಗ-

"ಸರ್ರಿ ಸರ್ರಿ ಸ್ವಾಮೇರ ಬಂದ್ರು ಜಾಗಾ ಬಿಡ್ರಿ. ಪಾದಪೂಜೆ ಮಾಡಸರಿ, ಕಾಯಿ ಒಡೀರಿ, ಕಪ್ಪುರಾ ಹಚ್ಚರಿ, ಪತ್ರೀ ಹಂಚರಿ. ಬಾರೋ ಮಲ್ಲೇಶ, ಸದಾಶಿವ ನೀ ಇತ್ಲಾಗ ನಿಲ್ಲು ಶೇಕವ್ವ, ವಿಜಯವ್ವ ಮುಂದಕ ಬರ್ರಿ, ಕಡೀ ಪೂಜಾ ಇದು, ಎತ್ತಬೇಕಿನ್ನ. ಮನೀ ಮಂದಿ ಎಲ್ಲಾರೂ ಬರ್ರಿ" ಆ ಜನ ಜಾತ್ರೆಯಲ್ಲಿ ದೇವಕಿ ಯಾರೆಂದು ಯಾರೂ ಕೇಳಿರಲಿಲ್ಲ. ಸದಾಶಿವ ಮಾತ್ರ ಕೆಕ್ಕರಿಸಿ ನೋಡಿದ್ದ. ಅವನತ್ತ ಕಣ್ಣೆತ್ತಿಯೂ ನೋಡದೆ ಕಿರಣಳನ್ನೆತ್ತಿಕೊಂಡು ಗೋಡೆಗೆ ಒರಗಿ ನಿಂತಿದ್ದಳು ದೇವಕಿ.

ಗೌರತ್ತೆಯ ಮುಖ ಮಣ್ಣಿನಲ್ಲಿ ಮರೆಯಾದಂತೆ ದೇವಕಿಯೂ ಅಲ್ಲಿಂದ ಮರೆಯಾಗುತ್ತಿದ್ದಳು. ಸದಾಶಿವ ಸುಮ್ಮನಿರಲಿಲ್ಲ. ಶತಮೂರ್ಖ! ದೇವಕಿಯ ರಟ್ಟೆ ಹಿಡಿದೆಳೆದು ಹೊರಗಿನ ಕಟ್ಟೆಗೆ ಎಳೆದೊಯ್ದು, "ನೀಯಾಕ ಬಂದಿ ಇಲ್ಲೆ ? ಏನ ಸಂಬಂಧ? ಯಾರ ಹೇಳಿ ಕಳಿಸಿದ್ರು ನಿನಗ ?" ಪೌರುಷ ತೋರಿಸಲು ದಬಾಯಿಸಿದ.

ಅಲ್ಲಿಯವರೆಗೆ ಅವಳ ಕಡೆಗೆ ಲಕ್ಷ್ಯ ಕೊಡದ ಮನೆಯ ಜನರೆಲ್ಲ ತಮಾಷೆ ನೋಡುವವರಂತೆ ಬಂದು ಗುಂಪಾದರು. ದೇವಕಿಯ ರಕ್ತ ಕುದಿಯಿತು. ಕಣ್ಣು ಕೆಂಪೇರಿದವು. ಹೊಟ್ಟೆಯ ಸಂಕಟ ದುಃಖವೆಲ್ಲ ನುಗ್ಗಿ ಬಾಯಿಗೆ ಬಲ ಕೊಟ್ಟಿತು.

"ಏನೋ ಭಾಡ್ಯಾ, ನೀ ಯಾರು ಅಂತೀಯಲ್ಲ. ನಿನ್ನ ಹೇಣ್ತಿ ದೇವಕಿ ನಾನು. ಈ ಹುಡುಗಿ ನಿನ್ನ ಮಗಳು. ಈ ಮನೀ ಸೊಸಿ ನಾನು. ನಮ್ಮತ್ತಿ ಮಣ್ಣಿಗೆ ಬಂದೇನಿ. ಯಾರ ಯಾಕ ಕರಸಬೇಕೋ ನನ್ನs?"

ಸದಾಶಿವನ ಸಿಟ್ಟು ಏರುತ್ತಿದ್ದರೂ ಕಾಲಿನ ಬಲ ಸೋರಿಹೋಗಿ ಥರಥರ ನಡುಗತೊಡಗಿದ. ಆಧಾರಕ್ಕೆ ಹೆಬ್ಬಾಗಿಲ ಚೌಕಟ್ಟಿಗೆ ಅನಿಸಿ ನಿಂತು ಚೀರಿದ. "ಹೇಣ್ತೀ ಇದ್ದಿ. ಆದರ ಈಗಲ್ಲ. ಮಾನಾ ಮರ್ಯಾದಿ ಇದ್ದವರು ಮನ್ಯಾಗ ಇರತಾರ. ಕಂಡ ಕಂಡ ಗಂಡಸರ ಹಿಂದ ಬೀದಿ ಬೀದಿ ಅಡ್ಡ್ಯಾಡಾಕ ಓಡಿ ಹೋಗೂದಿಲ್ಲ."

"ಓಡಿ ಹೋದಾಕಿ ನಾ ಅಲ್ಲೋs ನೀನು. ಹೇಳದ ಕೇಳದ ಹೋಗಿ ಈ ಗೊಂಬೀನ್ನ ಲಗ್ನಾ ಮಾಡಿಕೊಂಡ ಬಂದಿ. ಪ್ರೇಮ, ಪ್ರೀತಿ ಅಂತ ನನ್ನ ಹಿಂದ ಓಡ್ಯಾಡಿ ಲಗ್ನಾ ಮಾಡಿಕೊಂಡದ್ದಕ್ಕ ರಜಿಸ್ಟ್ರಾರ ಕಚೇರ್ಯಾಗ ದಾಖಲೆ ಐತಿ. ನಾ ಮನಸ ಮಾಡಿದ್ದರ ನಿನ್ನ ಜೇಲಿಗೆ ಕಳಸತಿದ್ದೆ. ಪುಣ್ಯವಂತಿ, ನಮ್ಮ ಗೌರತ್ತಿ ಮಾರೀ ನೋಡಿ ಸುಮ್ಮನಾಗೀನಿ. ಯಾಕ ಬಂದಿ ಅಂದೆಲ್ಲಾ. ಒಂಬತ್ತ ತಿಂಗಳ ಹೊತ್ತ ಹಡದ ತಾಯೀನ ಬಾವಿಪಾಲು ಮಾಡಿದವರು ನೀವು ಗಂಡಸರs? ನನಗ ಗೊತ್ತಾಗಿದ್ದರ ನಾ ಜ್ವಾಪಾನಾ ಮಾಡತಿದ್ದೆ ಅತ್ತೀನ, ಇಕಾ ನೋಡಿಲ್ಲೆ, ಅತ್ತೀ ಪತ್ರಾ" ಎಂದು ಗೌರವ್ವನ ಪತ್ರವನ್ನು ಅವನತ್ತ ಬೀಸಿ ಒಗೆದವಳೇ ಮಗಳನ್ನು ಎತ್ತಿಕೊಂಡು ಭರಭರ ನಡೆದುಬಿಟ್ಟಳು. ಕೂಡಿದ ಮಂದಿ ಉಸಿರಾಡುವದನ್ನೂ ಮರೆತು ಕಲ್ಲಿನಂತೆ ನಿಂತಿದ್ದರು. ಆ ನಿಶ್ಶಬ್ದವನ್ನು ತೂರಿಕೊಂಡು ಒಂದು ಹೆಣ್ಣಿನ ಬಿಕ್ಕಳಿಕೆ ಮಾತ್ರ ದೇವಕಿಯ ಬೆನ್ನು ಹತ್ತಿತ್ತು.

***

■■

# ಕಾಣೆಯಾದವನು

ಎತ್ತರವಾದ ದೊಡ್ಡ ಗೇಟು, ವಿಶಾಲವಾದ ಕಂಪೌಂಡಿನ ಒಂದು ಬದಿಗೆ ಹಚ್ಚ ಹಸುರು ಬಣ್ಣದ ಕುತನಿಯಂಥ ಲಾನ್, ಸುತ್ತಲೂ ಬಣ್ಣಬಣ್ಣದ ಗುಲಾಬಿ ಗಿಡಗಳ ಚೌಕಟ್ಟು, ಇನ್ನೊಂದು ಬದಿಗೆ ವರ್ತುಲಾಕಾರದ ನೀರಿನ ತೊಟ್ಟಿ, ಮಧ್ಯ ಕಾರಂಜಿ, ತುಸು ದೂರದಲ್ಲಿ ದೊಡ್ಡ ಬಂಗಲೆ,ಗೇಟಿಗೆ ಇಂಗ್ಲೀಷಿನಲ್ಲಿ ಬಂಗಾರ ಬಣ್ಣದಲ್ಲಿ ಸುಂದರವಾಗಿ ಬರೆದ ಥಳಥಳಿಸುವ ಬೋರ್ಡು 'ಶ್ರೀ ಮುಕುಂದರಾವ್ ಐ.ಎ.ಎಸ್., ಮಹಾನಿರ್ದೇಶಕರು' ಎಂದು, ಗೆಳೆಯನೇ ಮುಂದೆ ಬಂದು ನಿಂತಂತಾಗಿ ಸುಧೀರನ ಮನಸ್ಸು ತುಂಬಿ ಬಂದು ಬೋರ್ಡಿನ ಮೇಲೆ ಮೃದುವಾಗಿ ಕೈ ಆಡಿಸಿದ. ಮಾಲಿಯ ಹತ್ತಿರ ಕೂತು ಬೀಡಿ ಸೇದುತ್ತ ಹರಟೆ ಹೊಡೆಯುತ್ತಿದ್ದ ವಾಚ್‌ಮನ್ ಓಡೋಡಿ ಬಂದ. ಬಂಗ್ಲೆಯ ಸಂರಕ್ಷಣೆ ಅವನ ಕರ್ತವ್ಯವಲ್ಲವೇ? ಯಾವನೋ ಹಾದಿ ಹೋಕ ಹೀಗೆ ಸಂಶಯಾಸ್ಪದ ರೀತಿಯಲ್ಲಿ ನಿಂತಿದ್ದರೆ ಸುಮ್ಮನಿದ್ದಾನೆಯೆ ಅವನು.

'ಯಾರು ಬೇಕಾಗಿತ್ತಪಾ? ಇಲ್ಲ್ಯಾಕ ನಿಂತಿ ನೀನು?" ಒರಟಾಗಿ ಕೇಳಿದ ಸುಧೀರನ ವೇಷಕ್ಕೆ ತಕ್ಕ ಮಾತು-

"ನಾನು ಸಾಹೇಬರ ಗೆಳೆಯಾ, ಅವರ ಊರಿಂದ ಬಂದೀನಿ. ಸಾಹೇಬರು ಮನೀ ಒಳಗ ಅದಾರೇನು?"

"ನಿಮ್ಮ ಹೆಸರಿನ ಚೀಟಿ ಕೊಡ್ರಿ. ಮಲ್ಲಣ್ಣ ತೋರಿಸಿಕೊಂಡು ಬರ್ತಾನ' ವಾಚಮನ್ ತುಸು ಮೆತ್ತಗಾಗಿ ಹೇಳಿದ.

ಪೀಂ.... ಪೀಂ.... ಕಾರು ಇತ್ತ ಬರುತ್ತಿತ್ತು. 'ಸಾಹೇಬರು ಆಪೀಸಿಗೆ ಹೊಂಟಾರ." ಗೇಟು ತೆಗೆಯುತ್ತ ಅವನೇ ಹೇಳಿದ. ಹತ್ತಿರ ಬರುತ್ತಿದ್ದ ಹಾಗೆ ಕಾರಿನ ವೇಗ ಕಡಿಮೆಯಾಗಿತ್ತು. ಸುಧೀರ ಎರಡು ಹೆಜ್ಜೆ ಮುಂದಿಟ್ಟ. ಮೊದಲಿನಂತೆ 'ಮುಕುಂದಾ' ಎಂದು ಕೂಗಲು ಸಾಧ್ಯವಾಗದೆ ತಬ್ಬಿಬ್ಬಾಗಿ ನಿಂತ. ಅವನ ಅದೃಷ್ಟಕ್ಕೆ ಮುಕುಂದ ಹೊರಳಿ ನೋಡಿದ. ದಿಟ್ಟಿಸಿದ, ಬತ್ತಿಕ ಕೆನ್ನೆ, ಹಣ್ಣಾಗುತ್ತಿದ್ದ ಮೀಸೆ, ಭಾವಪೂರ್ಣ ಕಣ್ಣುಗಳು, ನೀಳವಾದ ಮೂಗು, ಆ ಮೂಗನ್ನು ಆಗಾಗ ಜಗ್ಗಿ ಕೀಟಲೆ ಮಾಡುತ್ತಿದ್ದುದನ್ನು ಮುಕುಂದ ಮರೆತಿರಲಿಲ್ಲ, ಬಿಗಿದ ತುಟಿಗಳನ್ನು ಅರಳಿಸಿದ.

'ಓs ಸುಧೀ ಯಾವಾಗ ಬಂದಿ?" ತಟ್ಟನೆ ನಿಲ್ಲಿಸಿ ಕೈಗಡಿಯಾರ ನೋಡಿಕೊಂಡ." ಸ್ಸಾರಿ, ನಾ ಈಗ ಒಂದು ಅರ್ಜೆಂಟ ಮೀಟಿಂಗಿಗೆ ಹೊರಟನಿ, ಟೈಮಿಲ್ಲ ಬಹುಶಃ ಸಂಜಿಗೇ ಬರ್ತೀನಿ. ಒಳಗು ಹೋಗು. ಮಲ್ಲಾs ಸಾಹೇಬರ್ನ ಕರಕೊಂಡು ಹೋಗಿ ಬಾಯಿಯವರಿಗೆ ಭೆಟ್ಟಿ ಮಾಡಿಸು. ಬಾಯ್ ಸುಧೀ ಬರ್ತೀನಿ. ಮತ್ತ ಮಾತಾಡೂಣು."

ಪಾವಟಿಗೆ ಹತ್ತುತ್ತಿರುವಾಗ ಮಾತು ಕೇಳಿತು. 'ಯಾರ ಬಂದಾರ? ಸಾಹೇಬರ ಗೆಳೆಯ ಊರಿಂದ ಬಂದಾರ? ಹೊರಗಿನ ಗೆಸ್ಟರೂಮಿನ್ಯಾಗ ಕೂಡ್ರಸು. ಗಣೇಶಗ ಹೇಳಿ ಚಹಾ ತಿಂಡಿ ತಂದು ಕೊಡು."

ಭಾಮಿನಿ ಅತ್ತಿಗೆಯ ದನಿಯೇ ಇರಬೇಕು. ಆಕೆ ಹಳ್ಳಿಗೆ ಒಂದು ಸಲವೂ ಬರಲಿಲ್ಲ. ಮಾತಾಡಿಸಬೇಕೆಂದು ಸುಧೀರನ ಜೀವ ಹಾತೊರೆಯಿತು. ಅಪರಿಚಿತನಾಗಿ ಕರೆಯದೆ ಹೋಗುವುದು ಸಭ್ಯತೆಯಲ್ಲವೆನ್ನಿಸಿ ಅಲ್ಲಿಯೇ ಕೂತ. ಖಾರದ ಗೋಡಂಬಿ, ಉಪ್ಪಿಟ್ಟು, ಬಿಸ್ಕೆಟನೊಡನೆ ಚಹ ಬಂದಿತು. ಯಾಂತ್ರಿಕವಾಗಿ ಬೆರಳುಗಳು ಉಪ್ಪಿಟ್ಟಿನಲ್ಲಿ ಆಡುತ್ತಿದ್ದವು....

"ಏ ಸುಮಾs, ಸುಮತೀs,ನೋಡಿಲ್ಲೆ ಯಾರ ಬಂದಾರ, ಹೂಗಾರ ಮಾಸ್ತರು ನಮಗ ಕನ್ನಡ ಕಲಸತಿದ್ದರು. ನನ್ನ ಮ್ಯಾಲೆ ಭಾಳ ಪ್ರೀತಿ ಅವರಿಗೆ ಅಂತ ಹೇಳತಿದ್ದೆ. ಪ್ಯಾಟ್ಯಾಗ ಭೆಟ್ಟಿ ಆದರು ಕರಕೊಂಡು ಬಂದೆ."

"ನಮಸ್ಕಾರರೀ, ನೀವು ಬಂದದ್ದಕ್ಕ ಸಂತೋಷ ಆತು. ನಿಮ್ಮ ಬಗ್ಗೆ ಇವರು ಭಾಳ ಹೇಳತಿರತಾರ."

"ನಮಸ್ಕಾರವಾ, ಎಲ್ಲಾ ಆರಾಮ ? ಸುಧೀರನ್ನೂ ನಾ ಭಾಳ ನೆನಸತಿದ್ದೆ. ಇಂಥಾ ಶಿಷ್ಯರು ಸಿಗೂದs ಅಪರೂಪ, ಕ್ಲಾಸಿನ್ಯಾಗ ಎಲ್ಲಾದರೊಳಗೂ ಅವನs ಫಸ್ಟು, ಏನವಾ ಬಹಳ ಶಾಣ್ಯಾ. ಆದರ ಏನ ಮಾಡೂದು, ನೀಲಕಂಠಪ್ಪ ತೀರಿಕೊಂಡ ಮ್ಯಾಲೆ ಮನೀ ಜವಾಬ್ದಾರಿ ಎಲ್ಲಾ ಇವನ ಕೊಳ್ಳಿಗೇ ಬಿತ್ತು. ಹೆಚ್ಚು ಕಲತಿದ್ದರ ಎಷ್ಟು ಮುಂದ ಬರತಿದ್ನೋ' ಮಾಸ್ತರರ ಅಂತಃಕರಣ ಮಿಡುಕಿತ್ತು.

ತಾನು ಹುಡುಗಿಯಂತೆ ನಾಚಿದ್ದ. "ಇರಲಿ ಬಿಡ್ರಿ ಮಾಸ್ತರ ಅದೆಲ್ಲಾ ಯಾಕೀಗ, ನಿಮ್ಮಂಥಾ ಹಿರಿಯರ ಆಶೀರ್ವಾದದಿಂದ ನಾವು ಆರಾಮs ಅದೀವಿ. ಕೂಡ್ರಿ ಚಾಪಿ ಮ್ಯಾಲೆ ದಿಂಬಿಗೆ ಆನಿಸಿ ಆರಾಮ ಕೂಡ್ರಿ. ಮಾಸ್ತರಿಗೆ ಏನರೆ ಕೊಡಲ್ಲ."

ಅಡಿಗೆ ಮನೆಗೆ ಹೋದ ಸುಮತಿ ಪಾನಕಕ್ಕೆ ಲಿಂಬಿ ಹಣ್ಣು, ಚಹಕ್ಕೆ ಹಾಲು ಇಲ್ಲದೆ ಪೇಚಾಡಿ ಹುಣಿಸೆ ಹಣ್ಣಿನ ರಸಕ್ಕೆ ಬೆಲ್ಲಕೂಡಿಸಿ ಪಾನಕ ಮಾಡಿ ತಂದಿದ್ದಳು. ಅದನ್ನು ಕೊಡುವಾಗಲೂ ಎಷ್ಟು ಸಂಕೋಚ ಅವಳಿಗೆ. ಆದರೆ ಮಾಸ್ತರರು ಪ್ರೀತಿಯಿಂದ ಚಪ್ಪರಿಸುತ್ತ ಪಾನಕ ಕುಡಿದು ಮಾತಿಗೆ ಹಚ್ಚಿದ್ದರು. ಅವರಿಗೆ ಹೂಂಗುಟ್ಟುತ್ತ, ನಗುತ್ತ ತನ್ನ ಹರಿದ ಸೀರೆಯ ಸೆರಗು ಕಾಣದಂತೆ ಮರೆ ಮಾಡಿ ಹೊಸ್ತಿಲ ಒಳಗೆ ಕುಳಿತಿದ್ದಳು ಸುಮತಿ.....

ಉಪ್ಪಿಟ್ಟು ಒಳಗೆ ಇಳಿಯಲು ಹಟ ಮಾಡುತ್ತಿತ್ತು. ಬಾಗಿಲ ಹತ್ತಿರ ಸಪ್ಪಳವಾಯಿತು. ತಲೆ ಎತ್ತಿದ ದಿಗ್ಗನೆ ಎದ್ದು ನಿಂತ. ಮಾತೂ ಹೊರಡಲಿಲ್ಲ. ಆಭರಣ, ಆಧುನಿಕ ಕೇಶಾಂಲಕಾರ ರೇಷ್ಮೆ ಸೀರೆಯಿಂದ ಅಲಂಕೃತಳಾಗಿ ಹೊರಗೆ ಹೋಗಲು ಸಿದ್ಧಳಾಗಿ ಬಂದಿದ್ದಳು ಭಾಮಿನಿ.

"ನಮ್ಮ ಕ್ಲಬ್ಬಿನ ಮೀಟಿಂಗಿಗೆ ಹೊರಟೇನಿ. ಗಣೇಶ ಊಟಕ್ಕ ನೀಡತಾನ, ನೀವು ಊಟಾ ಮಾಡ್ರಿ. ನಾವು ಬರೋದು ಲೇಟ ಆಗ್ತದ."

"ಹುಡುಗರೂ ಇಲ್ಲೇನು ಮನಿಯೊಳಗ?" ಮನಸ್ಸಿನ ಮಾತು ಹೊರಬಂದಿತ್ತು.

"ಅನುಪಮ ಟೂರಿಗೆ ಹೋಗ್ಯಾನ. ಆದಿತ್ಯ ಕ್ರಿಕೆಟ್ ಮ್ಯಾಚಿಗೆ ಹೋಗ್ಯಾನ. ಇಬ್ಬರೂ ದೊಡ್ಡವರಾಗ್ಯಾರ. ಅವರಿಗೂ ಸಾಕಷ್ಟು ಆಕ್ಟಿವಿಟೀಸ್ ಇರತಾವ. ಯಾವಾಗ ಮನೀಗೆ ಬರ್‍ತಾರೋ ಹೋಗ್ತಾರೋ ಗೊತ್ತs ಆಗೂದಿಲ್ಲ. ನಾ ಹೋಗಿ ಬರ್‍ತೀನಿ."

"ಇದನ್ನ..." ತಡವರಿಸುತ್ತ ಸುಧೀರ ಕೈ ಚಾಚಿದ. "ಮುಕುಂದಗ ಪ್ರೀತಿ ಅಂತ ಸುಮತಿ ಬೇಸನ್ ಉಂಡಿ ಮಾಡಿ ಕಳಿಸ್ಯಾಳ. ತೊಗೊಳ್ರಿ."

"ಅವರ ವೇಟ ಜಾಸ್ತಿ ಆಗೇದ ಅಂತ ಡಾಕ್ಟರರು ಡಯಟ್ ಮಾಡಲಿಕ್ಕೆ ಹೇಳ್ಯಾರ. ಅವರು ಸ್ವೀಟ್ ತಿನ್ನೂದಿಲ್ಲ. ಇರಲಿ, ಗಣೇಶಾ ಈ ಪ್ಯಾಕ್ ತಗದ ಇಡು. ನಾ ಬರ್‍ತೀನಿ'. ಸಕ್ಕರೆ ತುಪ್ಪಕ್ಕಾಗಿ ಶೆಟ್ಟಿ ಅಂಗಡಿಯಲ್ಲಿ ಮಾಡಿದ ೫೦ ರೂಪಾಯಿ ಸಾಲದ ನೆನಪಿನಿಂದ ಸುಧೀರನ ಕತ್ತು ಬಗ್ಗಿ ಹೋಯಿತು.

ಮಧ್ಯಾಹ್ನ ಸರಿಯಾಗಿ ೧೨ ಗಂಟೆಗೆ ಗಣೇಶ ಊಟಕ್ಕೆಕರೆದ. ಬಗ್ಗಿದರೆ ಮುಖ ಕಾಣುವಷ್ಟು ಫಳಫಳ ಹೊಳೆಯುವ ದೊಡ್ಡ ಮೇಜಿನ ಸುತ್ತಲಿನ ಖಾಲಿ ಕುರ್ಚಿಗಳ ನಡುವೆ ಸುಧೀರ ಒಬ್ಬನೇ ಕುಳಿತಿದ್ದ. ಎರಡು - ಮೂರು ತರದ ಪಲ್ಯ, ಚಟ್ನಿಗಳು, ಚಪಾತಿ, ಅನ್ನ, ತುಪ್ಪ, ಸಾರು, ಗಟ್ಟಿ ಮೊಸರು. ಸಿಹಿ ತಿಂಡಿ -ಅತಿಥಿ ತುಂಬ ಸಂತೋಷ ಪಡುವಂಥ ಸುಗ್ರಾಸ ಭೋಜನ. ಸುಧೀರನ ಮೌನ, ಸಂಕೋಚ ತಿಳಿದುಕೊಂಡ ಗಣೇಶ ಉಪಚಾರ ಮಾಡುತ್ತಿದ್ದ. ಆದರೆ ಅವನ ಮನಸ್ಸು, ದೇಹ ಎರಡೂ ಅಸ್ತವ್ಯಸ್ತ ಸ್ಥಿತಿಯಲ್ಲಿದ್ದವು. ಊಟದ ಮಧ್ಯೆ ಹಿಂಬಾಗಿಲಿನಲ್ಲಿ

ಯಾರೊ ಕರೆದರು. ಗಣೇಶ ಹೋದ. ಆಳುಗಳು ಮೂಟೆ ಇಳಿಸಿದ ಸದ್ದು. "ಪರಮೇಶಪ್ಪ ಗೋಧಿ, ಸಕ್ಕರೆ ಚೀಲಾ ಕಳಿಸ್ಯಾರಂತ ಬಾಯಿಯವರಿಗೆ ಹೇಳು ಗಣೇಶಪ್ಪಾ ಮರೀಬ್ಯಾಡಾ, ಇಕಾ ನೀನೂ ಚಹಾ ಕುಡಿ, ನಿಶ್ಶಬ್ದವನ್ನು ತೂರಿ ಬಂದ ಮಾತು ಸುಧೀರನ ಕಿವಿಯಿಂದ ಮಿದುಳಿಗೆ ಕಟ್ಟಿ ಹೊಟ್ಟೆಗಿಳಿಯಿತು. ಏನೋ ಒಂಥರಾ ಸಂಕಟ ಸುರುವಾಗಿ ಬಾಯಲ್ಲಿ ಚಿಳಿಚಿಳಿ ನೀರು ತುಂಬಿತು. ತಿಂದದ್ದೆಲ್ಲ ಹೊರಗೆ ಬರುವಂತೆ ಅನಿಸಿದಾಗ ಅರ್ಧಕ್ಕೇ ಊಟ ಬಿಟ್ಟು ಬಚ್ಚಲಿನಲ್ಲಿ ವಾಂತಿ ಮಾಡಿ, ಗಾಬರಿಯಾದ ಗಣೇಶನಿಗೆ ಸಮಾಧಾನ ಹೇಳಿ ಸುಧೀರ ಕೋಣೆಗೆ ಹೋಗಿ ಮಲಗಿಕೊಂಡ-

ತಿಂಡಿ ತಿಂದ ಮೇಲೆ ಒಬ್ಬನೇ ಕುಳಿತು ಏನು ಮಾಡುವದೆಂದು ಊರಲ್ಲಿ ಅಡ್ಡಾಡಲು ಹೋಗಿದ್ದ. ಅಪರಿಚಿತ ಊರು, ಜನ. ಕಾಲು ಹೋದತ್ತ ಅಡ್ಡಾಡಿ ಅವರಿವರನ್ನು ಕೇಳಿ ಅಲ್ಲಿಯ ಸುಪ್ರಸಿದ್ಧ ಎಸ್.ಎಮ್.ಕೆ. ಕಾಲೇಜಿನ ಭವ್ಯ ಕಟ್ಟಡ ನೋಡಿ ಸಂತಸಪಟ್ಟಿದ್ದ. ಅಲ್ಲಿಯೆ ಗಿಡದ ನೆರಳಿನಲ್ಲಿ ಕುಳಿತು ತನ್ನ ಮಗ ಸುದೀಪನ ಭವಿಷ್ಯವನ್ನು ಕುರಿತು ಕನಸು ಕಂಡಿದ್ದ. ತನ್ನ ಹಳ್ಳಿ, ತವರೂರು ಬಿಟ್ಟು ಬೇರೆ ಯಾವ ಊರನ್ನೂ ನೋಡದ ಸುಮತಿಯ ಬಗ್ಗೆ ಅನುಕಂಪ ಹುಟ್ಟಿ, ಅವಳನ್ನೂ ಒಮ್ಮೆ ಅಲ್ಲಿಗೆ ಕರೆದು ತರಬೇಕೆಂದು ಯೋಚಿಸಿದ್ದ. ಹಾದಿ ತಪ್ಪಿ ಅಲ್ಲಲ್ಲಿ ಅಡ್ಡಾಡಿ ಮನೆಗೆ ಬರುವಷ್ಟರಲ್ಲಿ ಬಿಸಿಲು ಏರಿತ್ತು. ತಲೆ ಸಣ್ಣಗ ನೋಯುತ್ತಿತ್ತು. ಈಗ ಊಟವೂ ಸೇರಲಿಲ್ಲ. ಹೀಗೆ ಏಕಾಗುತ್ತಿದೆ ತನಗೆ! ತಿಳಿಯದೆ ಒದ್ದಾಡಿದ. ತುಪ್ಪಳದಂಥ ಹಾಸಿಗೆಯ ಮೇಲೆಯೂ ನಿದ್ದೆ ಬಾರದೆ ಹೊರಳಾಡುತ್ತ ಸಂಜೆ ಕಳೆದ. ಸುತ್ತೆಲ್ಲ ಝಗಝಗಿಸುವ ಬೆಳಕಿದ್ದರೂ ತನ್ನನ್ನು ಚುಚ್ಚುವ ನೀರವತೆಯನ್ನು ಎದುರಿಸಲಾಗದೆ ಮುಸುಕು ಹಾಕಿ ಮಲಗಿಕೊಂಡಿದ್ದ.

ಬೈಕು ನಿಂತಿತು. ಬೂಟಿನ ಸದ್ದು ಒಂದೇ ಏಟಿಗೆ ಎರಡೆರಡು ಮೆಟ್ಟಿಲು ಹಾರಿ ಹತ್ತಿರ ಬರುತ್ತಿತ್ತು. ಜೀವ ತಡೆಯದೆ ಎದ್ದು ಹೊರಗೆ ಹೋದ. ತನ್ನೊಬ್ಬ ಗೆಳೆಯನೊಡನೆ ಒಳಗೆ ಬರುತ್ತಿದ್ದ. ನಿಂತು ಇವನಾರೋ ಅನ್ನುವಂತೆ ಮಿಕಿ ಮಿಕಿ ನೋಡಿದ. "ನಿನ್ನ ಹೆಸರು ಆದಿತ್ಯ ಅಲ್ಲs? ಮುಕುಂದ ಸಣ್ಣಾವ ಇದ್ದಾಗ ಥೇಟು ನಿನ್ನಾಂಗ ಇದ್ದ. ನಾನು ಅವನ ಗೆಳೆಯಾ ಸುಧೀರ."

ಅದೇ ಅಪರಿಚಿತ ದೃಷ್ಟಿಯಿಂದ ನೋಡುತ್ತ ಆದಿತ್ಯ - "ಹೌದೇನು, ನಾ ಅಂತೂ ನಿಮ್ಮನ್ನ ಎಂದೂ ನೋಡಿಲ್ಲ. ಪಪ್ಪಾ, ಮಮ್ಮಿ ಬರೂ ಹೊತ್ತು ಆಗೇದ. ಒಳಗ ಕೂಡ್ರಿ. ಬಾರೋ ಸಚಿನ್" ಎನ್ನುತ್ತ ಒಳಗೆ ಹೋಗಿ ಬಿಟ್ಟ. ಸುಧೀರನ ತಲೆನೋವು ಹೆಚ್ಚಾಯಿತು. ಮೈಯಲ್ಲಿ ಚಳಿ ಚಳಿ, ಊಟ ಬೇಡವೆಂದು ಗಣೇಶನಿಗೆ ಹೇಳಿ ಅವನ ಒತ್ತಾಯಕ್ಕೆ ಒಂದು ಲೋಟ ಹಾಲು ಕುಡಿದ. ತನ್ನ ಕೋಣೆ, ಮಂಚ, ಹಾಸಿಗೆಯೂ ಬೇಸರವಾಗಿ ಹಾಲಿನಲ್ಲಿ ಟಿ.ವಿ. ನೋಡುತ್ತ ಕುಳಿತ. ಹತ್ತು ಗಂಟೆಯ ಮೇಲೆ ಹೆಂಡತಿಯೊಡನೆ ಪಾರ್ಟಿ ಮುಗಿಸಿಯೇ ಬಂದ ಮುಕುಂದ ತುಂಬಾ ಬಳಲಿದ್ದ. "ಹಾಯ್ ! ಸುಧೀ ಊಟ ಆತೇನು. ನಿನಗ ಊಟಾ ಮಾಡಸು ಅಂತ ಭಾಮಾ ಅಲ್ಲಿಂದ ಫೋನ್ ಮಾಡಿದ್ಲು" ಎನ್ನುತ್ತ ಉತ್ತರಕ್ಕೆ ಕಾಯದೆ ಒಳಗೆ ಹೋದ. ಡ್ರೆಸ್ ಬದಲಾಯಿಸಿ ಡ್ರಿಂಕ್ಸ್ ಗ್ಲಾಸ್ ಹಿಡಿದುಕೊಂಡು ಬಂದು ಸುಧೀರನ ಮಗ್ಗಲು ಕುಳಿತು ಬೆನ್ನು ಚಪ್ಪರಿಸಿ ಹೇಳಿದ, "ಊರೊಳಗ ಕೆಲಸಾ, ಅಂಗಡಿ, ಟ್ಯೂಶನ್, ಸಂಸಾರ ಅಂತ ಜಂಜಾಟ ಇದ್ದs ಇರತದ, ಆರಾಮ ಆಗಿ ನಾಲ್ಕು ದಿನಾ ಇದ್ದು ಹೋಗು."ಸುಧೀರ ಸುಮ್ಮನಿದ್ದ.

"ಸ್ವಲ್ಪ ಕುಡೀತಿಯಾ ಸುಧೀs ಹಾಕಲ್ಯಾ?" ಸುಧೀರ ಮೌನವಾಗಿ ತಲೆ ಆಡಿಸಿದ. ಅವನ ದೃಷ್ಟಿಯೆಲ್ಲ ಟಿ.ವಿ. ಮೇಲಿತ್ತು. ಗೆಳೆಯನ ಕಣ್ಣುಗಳಲ್ಲಿ ನೋಡಿದರೆ ಇನ್ನೇನು ಕಾಣುತ್ತೇನೋ ಎನ್ನುವ ಹೆದರಿಕೆ. ಮನಸ್ಸಿನಲ್ಲಿ ಮೂಡಿದ ಮಾತುಗಳಲ್ಲಿ ಒಂದನ್ನೂ ಹೇಳಲದಾದ. "ನಿನಗ ಬ್ಯಾಡಪಾ ಈ ದುರಭ್ಯಾಸ."

ದಿನಾಲು ನೂರಾರು ಜನರನ್ನು ಭೆಟ್ಟಿ ಆಗೂ ಮನುಷ್ಯಾಗ ಇನ್ನೊಬ್ಬರ ಮನಸ್ಸಿನ್ಯಾಗ ಇಳದು ಮಾತನಾಡೂ ಸ್ವಭಾವನ ಹೋಗಿ ಬಿಡತದೋ ಏನೋ, ಇಂವಾ ಅದs ಹಿಂದಿನ ಮುಕುಂದನs ಅಲ್ಲ. ಪೂರ್ಣ ಬದಲ ಆಗ್ಯಾನ. ಸುಧೀರ ಯೋಚಿಸುತ್ತಿದ್ದ. "ಸುಧೀ, ನಾ ಕುಡೀತಿನಂತ ತಪ್ಪು ತಿಳಕೋ ಬ್ಯಾಡಾ. ಹಾಯ್ ಸೊಸೈಟಿಯೊಳಗ ಇವೆಲ್ಲಾ ಬೇಕs ಬೇಕಾಗತಾವ. ಇರಲಿ. ನೀ ಹ್ಯಾಂಗ ಅದೀ, ಹೆಲ್ತ ಸರಿಯಾಗಿ ಇದ್ದಾಂಗ ಕಾಣೂದಿಲ್ಲ. ನನಗಿಂತ ಆರು ತಿಂಗಳು ಸಣ್ಣಾಂವ. ಆಗಲೇ ಮುದುಕ ಆಗೀದಿ. ಮನ್ಯಾಗ ಎಲ್ಲಾರೂ ಆರಾಮ ಅದಾರ? ಮಕ್ಕಳು ಏನ ಕಲೀತಾರ? ನಾವು ಭೆಟ್ಟಿ ಆಗಿ ಭಾಳ ವರ್ಷ ಆತ ಅಲ್ಲs" ಮತ್ತೆ ಇಂಥ ಅವಕಾಶ ಸಿಗಲಿಕ್ಕಿಲ್ಲವೆನ್ನುವಂತೆ ಮುಕುಂದ ಒಂದೇ ಉಸುರಿಗೆ ಮಾತನಾಡಿದ.

"ಸಂದೀಪ ಪಿ.ಯು.ಸಿ. ಸೆಕೆಂಡ್ ಇಯರ್ ಅದಾನ. ರ್‍ಯಾಂಕ್ ಸ್ಟೂಡಂಟು, ಶಾಣ್ಯಾ ಅದಾನ, ರೇವತಿ ಈಗ ಎಸೆಸೆಲ್ಸಿ ಕಲೀತಾಳ."

"ವ್ಹಾ! ಅಡ್ಡೀಯಿಲ್ಲ, ಬ್ರಿಲಿಯಂಟ್ ಚ್ಯಾಪ್. ಮುಂದ ಭಾಳ ಕಲಸು ಅವಗ. ಇಂಜಿನಿಯರ ಆಗಲಿ ಅಥವಾ ಡಾಕ್ಟರ ಆಗಲಿ. ನಿನ್ನಾಂಗ ಅಂಗಡ್ಯಾಗ ಕಾರಕೂನಕಿ ಮಾಡಾಕ ಹಚ್ಚಬ್ಯಾಡಾ. ಮಕ್ಕಳ ಭವಿಷ್ಯ ಛೊಲೋ ಆಗೂಹಾಂಗ ನಾವು ಪ್ರಯತ್ನ ಮಾಡಬೇಕು."

ಟ್ರಿನ್ ಟ್ರಿನ್ .... "ತಡಿ ಬಂದೆ" ಬೆಡ್‌ರೂಮಿಗೆ ಓಡಿದ ಮುಕುಂದ.....

'ಅಪ್ಪಾs" ತಾನು ಬರುವಾಗ ಸಂದೀಪ ತುಂಬ ಸಂಕೋಚದಿಂದ ಕೇಳಿದ್ದ. "ನಮ್ಮ ರಿಜಲ್ಟ ಹತ್ತರ ಬಂತು. ಗೆಳೆಯರೆಲ್ಲಾ ಮುಂದಿನ ಕಾಲೇಜಿಗೆ ಹೋಗೂ ತಯಾರಿ ನಡಿಸ್ಯಾರ. ನಾ ಪರೀಕ್ಷೆಯೊಳಗ ಛೊಲೋ ಮಾಡೀನಿ. ೮೫ ರಿಂದ ೯೦ ಪರಸೆಂಟಾದ್ರೂ ಆಗ್ತದ. ನನ್ನೂ ಕಾಲೇಜಿಗೆ ಕಳಸ್ತೀರೇನು? ಹೇಳ್ರಿ. ಒಂದ ಡಿಗ್ರಿ ಸಿಕ್ಕರ ನೌಕರಿ ಹಿಡದು ನಿಮಗೂ ನೆರವಾಗತೀನಿ, ನಮ್ಮ ಮನೀ ಆರ್ಥಿಕ ಪರಿಸ್ಥಿತಿನೂ ಸುಧಾರಿಸ್ತದ. "

ಮೈತುಂಬ ಸಾಲದ ಹೊರೆ ಹೊತ್ತು ಎಂಟನೂರು ರೂಪಾಯಿ ಸಂಬಳದಲ್ಲಿ ಸಂಸಾರ ನಡೆಸಲು ಒದ್ದಾಡುವ ತಾನು ಏನು ಹೇಳಲೂ ಸುಮ್ಮನಿದ್ದ. ಸುಮತಿ ಒಂದು ಸೂಚನೆ ನೀಡಿದ್ದಳು. "ನಿಮ್ಮ ಲಂಗೋಟಿ ಗೆಳೆಯಾ ವರ್ಗ ಆಗಿ ಆ ಜಿಲ್ಲಾಕ ಸಾಹೇಬರಾಗಿ ಬಂದಾರ ಅಂತ ಭೆಟ್ಟಿ ಆಗಲಿಕ್ಕೆ ಹೊರಟೀರಲ್ಲ. ಸಂದೀಪನ ವಿದ್ಯಾಭ್ಯಾಸಕ್ಕ ಏನಾದರೂ ಸಹಯ ಮಾಡ್ತಾರೇನೋ ಕೇಳಿ ನೋಡ್ರೆಲ್ಲ." ಆ ಮಾತನ್ನು ಅತ್ತ ತಳ್ಳುವಂತೆ ತಲೆ ಕೊಡವಿದ ಸುಧೀರ....

"ಹಾಂ. ಹಲೋ ಹಲೋ ನಾನು .... ನಾ ನು ಮುಕುಂದರಾವ್ ಮಾತಾಡ್ತಿರೋದು. ಯಾರು ? ಪಾಟೀಲರೇನು? ಹಾಂ ನಮಸ್ಕಾರರೀ" ಟ್ರಂಕಾಲ್ ಬೇಡವೆಂದರೂ ಸುಧೀರನ ಕಿವಿಗೆ ಬೀಳುತ್ತಿತ್ತು. "ನಾ ಮೊನ್ನೆ ನಿಮಗೆ ಹೇಳಿದ್ನೆಲ್ಲ, ನಮ್ಮ ಹುಡುಗ್ಗ ಒಂದು ಮೆಡಿಕಲ್ ಸೀಟು ಬೇಕೂ ಅಂತ. ಡೊನೇಷನ್ ಎಷ್ಟಾದ್ರೂ ಕೊಡ್ತೀನಿ. ನಮಗ ಸೀಟು ಬೇಕs ಬೇಕು. ಹಾಂ, ಏನು ಕಮಿಟಿಯವರು ಎರಡು ಲಕ್ಷ ಕೇಳತಾರ? ಹಾಂ ಹೆಚ್ಚಾತು. ಆದರೂ ಪರವಾಗಿಲ್ಲ ನಾ ಕೊಡ್ತೀನಿ. ಹುಡುಗರು ಏನೇನೋ ಆಸೆ ಇಟಕೊಂಡಿರ್ತಾರ. ಅಂವಾ ಡಾಕ್ಟರ ಆಗsಬೇಕು. ಅಂತಾನ ಓ.ಕೆ. ಬಾ ಅಂದರ ನಾನ s ಬರ್ತೀನಿ. ಹಾಂ. ಏನ ತೊಂದರಿ ಇಲ್ಲಾ. ನಾವಿಬ್ಬರೂ ಚೀಫ್ ಸೆಕ್ರೆಟರಿಯವರ ಮಗಳ ಮದುವಿಗೆ ಬಂದsಬರತೀನಿ. ಆಗ ಭೆಟ್ಟಿ ಆಗ್ತೀನಿ. ಥ್ಯಾಂಕ್ ಯು, ನಮಸ್ಕಾರ" ಮುಕುಂದ ಹತ್ತಿರ ಬಂದು ಕುಳಿತ. ತುಂಬ ಖುಷಿಯಲ್ಲಿದ್ದ.

'ಸುಧೀ. ನಮ್ಮ ಮಕ್ಕಳ ಸಲುವಾಗಿ ನಮಗೊಂದು ಕರ್ತವ್ಯ, ಜವಾಬ್ದಾರಿ ಇರತದ ಏನಪಾ. ಅವರ ಭವಿಷ್ಯ ರೂಪಿಸಬೇಕು, ಮುಂದ ಅವರನ್ನ ಸೆಟಲ್ ಮಾಡಬೇಕು. ಇದೆಲ್ಲಾ ನಮ್ಮ ಕೈ ನಡಿಯೂ ಮುಂದ ಮಾಡಬೇಕು. ಅದೆಲ್ಲಾ ಇರಲಿ. ಸುದೀಪ ಬಾಳ ಶಾಣ್ಯಾ ಅದಾನ ಅಂತ ಹೇಳತಿದ್ದೆಲ್ಲಾ ಅವನ್ನ ನೀನು ಕಾಲೇಜಿಗೆ ಕಳಸಲಿಕ್ಕೇ ಬೇಕು. ಇಲ್ಲೆ ಎಸ್.ಎಮ್.ಕೆ. ಕಾಲೇಜು ಭಾಳ ಛೊಲೋ ಅದ ಏನಪಾ. ಅದರ ಪ್ರಿನ್ಸಿಪಾಲರಿಗೆ ಬೇಕಾದರ ನಾ

ಫೋನು ಮಾಡಿ ಹೇಳ್ತೀನಿ, ಹಾಸ್ಟೆಲಿನ್ಯಾಗ ರೂಮು ಕೊಡಸ್ತೀನಿ. ಪ್ರೀತಿ ಗೆಳೆಯಾ ಅಂದ ಮ್ಯಾಲೆ ಇಷ್ಟೂ ಮಾಡದಿದ್ದರ ಹ್ಯಾಂಗ?" ತೊಡೆ ತಟ್ಟಿ ಜೋರಾಗಿ ನಕ್ಕ ಮುಕುಂದನ ಗ್ಲಾಸು ತುಳುಕಿ ಸುಧೀರನ ಪೈಜಾಮು ಒದ್ದೆ ಆಯಿತು. ಅತ್ತ ಲಕ್ಷ್ಯವಿಲ್ಲದ ಮುಕುಂದ ಬೇರೆಯೇ ಲೋಕದಲ್ಲಿ ತೇಲುತ್ತಿದ್ದ. ತನ್ನ ಪೈಜಾಮ ತೊಳೆಯಲು ಸುಧೀರ ಎದ್ದು ಹೋಗಿ 'ಗುಡ್‌ನೈಟ್' ಎಂದ.

ಟಕ್... ಟಕ್ ಬೂಟಿನ ಸದ್ದು ಹತ್ತಿರ ಬಂದು ಮಗ್ಗಲು ಕೋಣೆಯಲ್ಲಿ ಮಾಯವಾಯಿತು, ಅದು ಮುಕುಂದರಾವ್ ಅವರ ಬಂಗ್ಲೆಯ ಆಫೀಸ್ ರೂಮು. ಇನ್ನೊಂದು ದಿನವಾದರೂ ಇರಲೇಬೇಕೆಂದು ಗೆಳೆಯ ಹೇಳಿದ ಮಾತಿಗೆ ಕಟ್ಟುಬಿದ್ದು ಸುಧೀರ ಉಳಿದುಕೊಂಡಿದ್ದ.

"ರಂಗಪ್ಪಾ ನಿನ್ನೆ ಲೋಕಾಪುರದಾಗ ಪಾರ್ಟಿ ಬಂದಿತ್ತಲ್ಲ. ಏನಂತಾರ ?"

"ಅವರು ಹತ್ತ ಸಾವಿರ ತಂದಿದ್ದರ್ರಿ. ಇಪ್ಪತ್ತೈದರ ಕೆಳಗ ಆಗೂದಿಲ್ಲ ಅಂತ ನಾ ಸಾಫ ಹೇಳಿಬಿಟ್ಟೆನ್ರಿ." ಮಹಾನಿರ್ದೇಶಕ ಪಿ.ಎ. ರಂಗಪ್ಪ ಹೇಳುತ್ತಿದ್ದ.

"ಸರಿ ಕಾಳಜಿ ಮಾಡಬ್ಯಾಡ್ರಿ ಸರ್. ನಾ ಎಲ್ಲಾ ಹ್ಯಾಂಡಲ್ ಮಾಡತೇನಿ, ಈಗ ಜ್ಯುವೆಲ್ಲರಿ ಅಂಗಡಿ ಸೇಠ ಬಂದಾರ್ರಿ. ಅವರದೊಂದು ಕೇಸ ಇತ್ತು...."

"ಹೌದೌದು, ನನಗೆಲ್ಲಾ ಗೊತ್ತದ. ಬರ್ತೀನಿ ಅಂತ ಫೋನ್ ಮಾಡಿದ್ರು. ಅವರನ್ನ ಒಳಗೆ ಕರಕೊಂಡು ಹೋಗಿ ಬಾಯಿಯವರಿಗೆ ಭೆಟ್ಟಿ ಮಾಡಸರಿ. ಆಮ್ಯಾಲೆ ಇಲ್ಲಿಗೆ ಕರಕೊಂಡು ಬರ್ರಿ."

ಗೋಡೆಯ ಆಚೆಗೆ ನಡೆದ ಮಾತುಗಳೆಲ್ಲವೂ ಸುಧೀರನಿಗೆ ಅಶರೀರವಾಣಿಯಾಗಿದ್ದವು. ಹಿಂದಿನ ರಾತ್ರಿ ನಾಳೆ ಮತ್ತೆ ಮಾತನಾಡೋಣ ಎಂದಿದ್ದ ಮುಕುಂದ ಮಾತನಾಡಲು ಇನ್ನೇನು ಉಳಿದಿದೆ ? ಏನೂ ಇಲ್ಲವೆಂದೇ ಒಮ್ಮೊಮ್ಮೆ ಅನಿಸುತ್ತದೆ. ಅವನ ಮಾತುಗಳು ತನಗೆ ಸೇರುವುದಿಲ್ಲ. ತನ್ನ ಮಾತುಗಳಿಗೆ ಅವನು ಕಿವಿ ಕೊಡುತ್ತಿಲ್ಲ. ಒಟ್ಟಿನಲ್ಲಿ ಇಬ್ಬರೂ ಕಿವುಡರು. ತನ್ನ ಒಳಗಿನ ಮಾತುಗಳು ಹೊರಬರಲು ದಾರಿಯನ್ನು ಹುಡುಕುತ್ತಿವೆ. ಆದರೆ ಎಲ್ಲ ದಾರಿಗಳು ಮುಚ್ಚಿಹೋಗಿವೆ. ತಮ್ಮಿಬ್ಬರ ಮಧ್ಯೆ ಒಂದು ಭದ್ರವಾದ ಅಡ್ಡಗೋಡೆ ನಿಂತಿದೆ. ಅದನ್ನು ದಾಟಿಹೋಗಲು ತನ್ನಿಂದ ಸಾಧ್ಯವಾಗುತ್ತಿಲ್ಲ. ತನಗೆ ಇನ್ನೇನೂ ಬೇಕಿಲ್ಲ. ತನ್ನ ಚಿಕ್ಕಂದಿನ ಮುಕುಂದ ಬೇಕು. ಅವನ ಪ್ರೀತಿ ಬೇಕು. ಅವನು ತನ್ನೊಡನೆ ಕಣ್ಣುಮುಚ್ಚಾಲೆ ಆಡುತ್ತ ಕೈಗೇ ಸಿಗುತ್ತಿಲ್ಲ. ಅದಕ್ಕೇ ತನಗೆ ಈ ತಳಮಳ, ಅಸ್ವಸ್ಥತೆ ಎಲ್ಲ....... ಮೈ ಬೆಚ್ಚಗಾಗಿ ತುಂಬಾ ಸೆಕೆಯಾಗುತ್ತಿದೆ. ಕೋಣೆ ಎಲ್ಲ ಬಿಸಿಯಾಗಿ ಭಟ್ಟಿಯಾಗಿದೆ. ಉಸಿರು ಕಟ್ಟುತ್ತಿದೆ. ಸುಧೀರ ಚಡಪಡಿಸುತ್ತ ಎದ್ದು ಹೋಗಿ ಕಿಡಕಿಗಳನ್ನು ಅಗಲವಾಗಿ ತೆರೆದ. ತಂಗಾಳಿಗೆ ಮುಖ ಒಡ್ಡಿದ. ಊಹುಂ, ಅಲ್ಲಿ ಎಲ್ಲವೂ ಸ್ತಬ್ಧವಾಗಿದೆ. ಸೂಸುವ ಗಾಳಿ ಇಲ್ಲ. ಎಲೆಗಳಲ್ಲಿ ಚಲನೆ ಇಲ್ಲ. ಎಲ್ಲಿ ನಿರ್ಜೀವವಾಗಿದೆ. ತಾನಿನ್ನು ಇಲ್ಲಿ ಇರುವುದು ಸಾಧ್ಯವಿಲ್ಲ. ಕತ್ತು ಹಿಸುಕಲು ಬರುತ್ತಿರುವ ಈ ಬೆರಳುಗಳಿಂದ ಓಡಬೇಕು. ದೂರ.... ದೂರ ಓಡಿಹೋಗಿ ಬಿಡಬೇಕು. ಈಗಲೇ ಹೊರಗೆ ಹೋಗಬೇಕು.

ಸುಧೀರ ಕೈಚೀಲ ಹಿಡಿದು ಎದ್ದು ನಿಂತ. ಇಲ್ಲಿಗೆ ಬಂದ ಮೇಲೆ ಹೇಳದೆ ಹೋಗುವುದು ಸಭ್ಯತೆ ಅಲ್ಲವಲ್ಲ. ನಡುಗುತ್ತಿದ್ದ ಹೆಜ್ಜೆಗಳಿಂದ ಪ್ರಯಾಸಪಟ್ಟು ಹಾಲಿನವರೆಗೆ ಹೋದ. ಮುಖ ಬಿಳುಪೇರಿತ್ತು. ತೀರ ನಿತ್ರಾಣನಾಗಿದ್ದ. ನಿನ್ನೆಯಿಂದ ಹೊಟ್ಟೆಗೆ ಅನ್ನ ಹೋಗಿರಲಿಲ್ಲ. ಉಂಡದ್ದೂ ವಾಂತಿಯಾಗಿತ್ತು. ತಲೆ ತಿರುಗಿದಂತಾಯ್ತು. ಆಧಾರಕ್ಕೆ ಹತ್ತಿರದ ಟೇಬಲ್ ಮೇಲೆ ಕೈ ಇಟ್ಟ. ಠಳ್ಳಳ್ಳ! ತಲೆಯಲ್ಲಿ ಬಾಂಬ್ ಸಿಡಿದಂತಾಯ್ತು. ಸುಂದರವಾದ ಬಿಳಿಯ ಕಾಜಿನ ಕೃಷ್ಣನ ಮೂರ್ತಿ ಒಡೆದು ಚೂರುಚೂರಾಗಿತ್ತು.

ಮುಕುಂದ, ಭಾಮಿನಿ, ಆದಿತ್ಯ, ರಂಗಪ್ಪ ಎಲ್ಲರೂ ಒಮ್ಮೆಲೆ ಹಾಲಿನಲ್ಲಿ ಪ್ರತ್ಯಕ್ಷರಾದರು. "ಮುಕುಂದಾ, ನಾ ಊರಿಗೆ ಹೋಗತೀನಿ." ಅವರೆಲ್ಲರ ದೃಷ್ಟಿ ನೆಲದ ಮೇಲಿತ್ತು. ಹೊರಗೆ ಹೋಗುತ್ತಿದ್ದ ಸುಧೀರನ ಕಾಲಿಗೆ ಕಾಜಿನ ಚೂರು ನೆಟ್ಟು, ಕೆಂಪು ಹೆಜ್ಜೆಯ ಗುರುತು ಮೂಡುತ್ತಾ ಹೋಯಿತು.

***

■■

# ಮೇಣಬತ್ತಿ

ಸುತ್ತಲಿನ ದಟ್ಟ ಕತ್ತಲೆಯಲ್ಲಿ ಕಾರಿನ ದೀಪಗಳ ಬೆಳಕು ರಸ್ತೆಯ ಅಗಲಕ್ಕೆ ಬಿಳಿಯ ಹಾಸಿಗೆಯಂತೆ ಹರಡಿ ಮುಂದೆ ಮಾಯವಾಗುತ್ತಿತ್ತು. ಮಳೆಯ ಮೋಡಗಳು ನಕ್ಷತ್ರಗಳನ್ನು ಮುಚ್ಚಿಹಾಕಿದ್ದವು. ಬೀಳುತ್ತಿದ್ದ ಒಂದೊಂದೇ ಹನಿಗಳು ಕಾಜಿನ ಮೇಲೆ ಅಗಲವಾಗಿ ಚಿತ್ರ ಬಿಡಿಸುತ್ತಿದ್ದವು. ತುಂಬ ಖುಷಿಯಿಂದ ಸಿಳ್ಳು ಹಾಕುತ್ತಿದ್ದ ಶಶಿಧರ ಮೂಗು ಅರಳಿಸಿ ಉಸಿರೆಳೆದುಕೊಂಡ. ಮೈಯ ನರನರಗಳಲ್ಲಿ ಉತ್ಸಾಹ ತುಂಬಿಕೊಂಡಿತು. ಆಹಾ! ಮಣ್ಣಿನ ವಾಸನೆ. ಇನ್ನೊಮ್ಮೆ ಮತ್ತೊಮ್ಮೆ ಕಾದ ಮಣ್ಣಿನ ಮೇಲೆ ಬಿದ್ದ ಮೊದಲ ಹನಿಯಿಂದ ಸೂಸುವ ಕಂಪು! ಸುಳಿಗಾಳಿ ಬೀಸಿ ಬಂದು ಅವನ ತಿದ್ದಿ ತೀಡಿದ ಬೆಳ್ಳಿ ಕೂದಲುಗಳನ್ನು ಚದುರಿ ಚೆಲ್ಲಾಡಿತು. ಕಚಗುಳಿಯಿಟ್ಟಂತಾಗಿ ಶಶಿಧರ ಸ್ಟೈಲಾಗಿ ಹಿಂದಕ್ಕೆ ಸರಿಸಿಕೊಂಡ.

ಹಿಂದಿನಿಂದ ಒಂದೇ ಸವನೆ ಕೇಳುತ್ತಿದ್ದ ಹಾರ್ನ ಶಬ್ದ ಅವನನ್ನು ಎಚ್ಚರಿಸಿತು. ರಾತ್ರಿ ಹತ್ತು ಗಂಟೆಯಲ್ಲಿ ಇಡೀ ಜಗತ್ತನ್ನೇ ಗೆದ್ದ ಗತ್ತಿನಲ್ಲಿ ರಸ್ತೆಯ ಮಧ್ಯದಲ್ಲಿ ಕಾರು ಓಡಿಸುತ್ತಿದ್ದೇನೆ. ರಾಜಾಧಿರಾಜನಂತೆ ನಗು ಬಂದಿತು. ತಾನು ರಾಜನಾದರೆ ರಾಣಿ ಎಲ್ಲಿ? 'ಹೊಟೇಲ್ ಮೇನಕಾ'ದ ಶಯ್ಯಾ ಗೃಹದ ಹಂಸತೂಲಿಕಾ ತಲ್ಪದಲ್ಲಿಯೇ ? ಆಹ್ ! ಗುಲಾಬಿ ಪಕಳೆಗಳ ರಾಶಿಯಲ್ಲಿ ಹೊರಳಿದ ಅನುಭವ. ಆ ತಂಪು, ಆ ಮಿದುವು, ಎಂಥ ಸುಖ! ಎಷ್ಟು ಸುಖ ! ಈ ತರದ ಅನುಭವ ಅವಳಿಗಾಗಲಿಲ್ಲವೇ ? ಅದರ ಕಿಂಚಿತ್ ಗುರುತನ್ನು ಅವಳು ತೋರಿಸಲಿಲ್ಲ. ತನ್ನಿಂದ ಹಣ ಪಡೆದ ಕೂಡಲೆ ಎಷ್ಟು ಬೇಗ ಹೊರಟು ಹೋದಳಲ್ಲ ಪರದೆಯ ಮೇಲಿನ ಚಿತ್ರದಂತೆ. ಅವಳ ವರ್ತನೆಯಿಂದ ನಿರಾಶೆಯಾಗಿದ್ದರೂ ಅವಳನ್ನು ಬೇಗ ಮರೆಯುವುದು ಸಾಧ್ಯವಿಲ್ಲ ಎನ್ನಿಸುತ್ತದೆ. ಮನದ ಮೂಲೆಯಲ್ಲೊಂದು ಸಂಶಯ ಬೇಡವಾದರೂ ಸುಳಿಯಿತು. ತನಗೆ ವಯಸ್ಸಾಯಿತೆ? ಐವತ್ತೆರಡು ಏನಂಥಾ ವಯಸ್ಸು. ಮನಸ್ಸು ಮಾಡಿದ್ದರೆ ಇನ್ನೊಂದು ಮದುವೆಯಾಗಬಹುದಿತ್ತು. ಇದಿರಿನ ಚಿಕ್ಕ ಕನ್ನಡಿಯಲ್ಲಿ ಹಣಿಕಿದ. ಮುಪ್ಪಿನ ಯಾವ ಲಕ್ಷಣಗಳೂ ಕಾಣಲಿಲ್ಲ. ಕಿರುನಗೆ ತುಟಿಗಳಲ್ಲಿ ಮೂಡುತ್ತಿರುವಾಗಲೇ ಬದಿಯಲ್ಲಿ ಇನ್ನೊಂದು ಮುಖ. ಅರೇ ಏನಿದು .... ಮಂಜು ... ಮಂಜಾಗಿದೆ. ಆಂ ನೀನು? ಎಲ್ಲಿ ಬಂದಿ? ಅಸ್ಪಷ್ಟ ಮುಖ ತಿಳಿಯಾಯಿತು. ...

'ಬಾರವ್ವ, ಸಾವಕಾಶ ಬಂದು ಆ ಕುರ್ಚಿ ಮ್ಯಾಗೆ ಕೂಡ್ರು' ಅಯ್ಯನವರು ಹೇಳಿದರು. ಮುತ್ತಿನ ಬಣ್ಣದ ಕೆಂಪಂಚಿನ ಜರಿ ಸೀರೆಯುಟ್ಟ ಸುಗಂಧವತಿಯೊಡನೆ ಕಿರುಗೆಜ್ಜೆಗಳ ಕಿಣಿ ಕಿಣಿ ನಾದ ಹತ್ತಿರ ಬಂದಿತು.

'ನಿನ್ನ ಹೆಸರ ಏನವಾ' ಅಪ್ಪ ಕೇಳಿದರು.

'ಮೀನಾಕ್ಷಿ' ಕಂಪಿಸುವ ಮಧುರವಾದ ದನಿ.

'ಏನೇನ ಕಲಿತೀಯವಾ' ಅಡಿಗೆ, ಹಾಡು, ಕಸೂತಿ ಎನ್ನುವ ಉತ್ತರ ಕೇಳುವ ಆಸೆಯಿಂದ ಅವ್ವ ಕೇಳಿದಳು.

'ಬಿ. ಕಾಂ. ಸೆಕೆಂಡ್ ಕ್ಲಾಸ್ ಪಾಸಾಗೇನ್ರಿ.'

'ಎಂ.ಕಾಂ. ಯಾಕ ಓದಲಿಲ್ರಿ' ಅಣ್ಣ ಕೇಳಿದ.

'ಆಕಿ ಏನ ನೌಕರಿ ಮಾಡಬೇಕಾಗೇದ ಬಿಡ್ರಿ. ಸಾಕಂತ ನಾನಃ ಬಿಡಿಸಿದೆ' ಅವಳ ಅಪ್ಪ ಹೇಳಿದರು. 'ಒಂದಿಷ್ಟು ಕನಡಾ, ಇಂಗ್ಲೀಷ್ ಓದಿ ತೋರಿಸವಾ ತಂಗೀ.'

ಹತ್ತಿರದವರಿಗೂ ಕೇಳಿಸದ ಗುನುಗುನು ದನಿ. 'ಸಾಕು ಬಿಡವಾ, ಅಕ್ಕಾ ಅವರ ಕುಂಕುಮಾನ ಹಚ್ಚಿ ಉಡಿ ತುಂಬರಿ. ಹಿರೇರಿಗೆ ನಮಸ್ಕಾರ ಮಾಡಿ ಒಳಗ ಹೋಗವಾ' ಅಯ್ಯನವರ ಅಪ್ಪಣೆ.

ಆದರೆ ಅವಳು ಒಳಗ ಹೋಗಲಿಲ್ಲ. ನನ್ನ ಮಗ್ಗುಲಲ್ಲೇ ಕುಳಿತುಬಿಟ್ಟಿದ್ದಳು, ಮದುವೆಯ ಮಂಟಪದಲ್ಲಿ.

'ಸೊಂಯ್, ಸೊಂಯ್' ಸಿಗರೇಟು ಹಚ್ಚುತ್ತಿದ್ದ ಶಶಿಧರ ಕಾರು ಬದಿಗೆ ಸರಿಸಿ ನಿಲ್ಲಿಸಿ ಕಣ್ಣುಮುಚ್ಚಿ ಸೀಟಿಗೆ ಒರಗಿದ...

ಪಟ್ಟನೆ ಸಿಗರೇಟು ಹಾರಿ ಹೊರಗೆ ಬಿತ್ತು. ಮೀನಾಕ್ಷಿ ಕಿತ್ತು ಎಸೆದಿದ್ದಳು. 'ಎಷ್ಟ ಸಾರೆ ಹೇಳಬೇಕ ನಿಮಗ. ಸೇದೂದು ಆರೋಗ್ಯಕ್ಕ ಛೊಲೋ ಅಲ್ಲಾ ಅಂತ.'

'ಹಾಂಗ ನಾ ಭಾಳ ಸೇದೂದಿಲ್ಲ ಮೀನೂ. ಯಾವಾಗರೆ ಬ್ಯಾಸರ ಆದಾಗ ಒಂದs ಸೇದ್ತೇನಿ.'

"ಅದನ್ನೆಲ್ಲಾ ನಾ ನಂಬೂದಿಲ್ಲ. ಸಿಗರೇಟ ಬದ್ಲಿ ಒಂದು ಲೋಟಾ ಹಾಲು ಕುಡೀರಿ, ಜೂಸ ಕುಡೀರಿ, ನಿಮ್ಮ ಒಳ್ಳೇದಕ್ಕ ಹೇಳ್ತೀನಿ."

'ಅಲ್ಲಾ ಮೀನೂ ಇಷ್ಟ ಗಳಿಸಿ ತರ್ತೀನಿ. ನನ್ನ ಸಂತೋಷಕ್ಕ ಒಂದ ಸಿಗರೇಟು, ಒಂದು ಪೆಗ್ ವ್ಹಿಸ್ಕಿ. ಅಷ್ಟೂ ಸ್ವಾತಂತ್ರ್ಯ ಇಲ್ಲs ನನಗ, ಹಿಂಗ ಯಾಕ ಕಾಡತೀ ನನ್ನ?'

'ಯಾಕ ಅಂದರ ಈಗ ನೀವು ಒಬ್ಬರs ಇಲ್ಲಾ, ಮನೀ ಹೇಣ್ತಿ, ಮಕ್ಕಳು ಎಲ್ಲಾ ಜವಾಬ್ದಾರಿ ನಿಮ್ಮ ಮ್ಯಾಲೆ ಅದ. ನೀವು ಅಡ್ಡದಾರಿ ಹಿಡೀದಾಂಗ ನೋಡಿಕೊಳ್ಳೂದು ನನ್ನ ಕರ್ತವ್ಯ. ನನಗೂ ಎಷ್ಟೋ ಬ್ಯಾಸರ ಆಗತದ, ನಾ ನಿಮ್ಹಾಂಗ ಸೇದತೀನs ಕುಡೀತೀನs'.

ಅವಳ ಕಪಾಳಕ್ಕೊಂದು ಬಿಗಿಯಲು ಎತ್ತಿದ ಕೈಯಿಂದ ತಾನೇ ಹೊಡೆದುಕೊಳ್ಳಬೇಕೆನ್ನಿಸಿತ್ತು...

ತುಟಿ ಚುರುಗುಟ್ಟಿತು. ಆ ದಿನದ ಎಂಟನೆಯ ಸಿಗರೇಟು ಬೀಸಾಕಿ ಕಾರು ಬಿಟ್ಟ.

***

ಚಂದ್ರಪ್ಪ ಊಟಕ್ಕೆ ಕರೆದರೂ ಏಳದೆ ಶಶಿಧರ ಡ್ರಿಂಕ್ಸ್ ತಯಾರಿಸಿಕೊಂಡು ಬಂದು ಟಿ.ವಿ. ಮುಂದಿನ ಸೋಫಾದಲ್ಲಿ ಆಸೀನನಾದ. 'ಅವ್ವಾರು ತೀರಿಕೊಂಡ ಮ್ಯಾಲೆ ಎಷ್ಟು ಬದಲ ಆಗ್ಯಾರ ಸಾಹೇಬ್ರು. ಮನಸ್ಸಿಗೆ ಭಾಳ ಹಚಿಕೊಂಡಾರ, ಈ ಸಾರೆ ಸೂಟಿಗೆ ವಿನೋದಣ್ಣಾರು ಬಂದಾಗ ಹೇಳ್ಬೇಕು' ಚಂದ್ರಪ್ಪ ಊಟದ ತಾಟು ಮೇಜಿನ ಮೇಲೆ ಇರಿಸಿ ಮಲಗಲು ಹೊರಟು ಹೋದ. ಟಿ.ವಿ. ತನ್ನಷ್ಟಕ್ಕೆ ಹಾಡುತ್ತಿತ್ತು, ಕುಣಿಯುತ್ತಿತ್ತು. ಅತ್ತ ಲಕ್ಷ್ಯವಿಲ್ಲದ ಶಶಿಧರನ ದೃಷ್ಟಿ ತಿಳಿಬಣ್ಣದ ದ್ರವದಲ್ಲಿ ನಟ್ಟಿತ್ತು....

ಆ ರಾತ್ರಿ ಅಪರೂಪಕ್ಕೆ ಮೀನಾಕ್ಷಿಯ ಪ್ರೀತಿ ಉಕ್ಕಿ ಬಂದಿತ್ತು. ತಾನೂ ಅವಳೊಡನೆ ಖುಷಿ ಹಂಚಿಕೊಳ್ಳಬಯಸಿದ್ದ. ಮುದ್ದಿಸಲೆಂದು ಮುಂದೆ ಬಂದವಳು ಹಿಂದೆ ಜಿಗಿದು ಚೀರಿದಳು

'ಸೆರೆ ಕುಡದು ಬಂದೀರಿ ಹೌದಲ್ಲೋ. ನನಮ್ಯಾಲೆ ಆಣೀ ಮಾಡಿಸಿಕೊಂಡೀನಿ ಕುಡೀಬ್ಯಾಡ್ರಿ ಅಂತ. ನಾ ಸತ್ತರೂ ನಿಮಗೇನ ಚಿಂತೆ ಇಲ್ಲ. ಮತ್ತೊಬ್ಬ ಹೇಣ್ತಿ ಸಿಗತಾಳ. ನೀವು ಮನಸ್ಯಾರಲ್ಲ ಕಟುಕರು.'

ಇವತ್ತ ನನಗ ಪ್ರಮೋಷನ್ ಸಿಕ್ಕದ ಮೀನೂ. ಆಫೀಸಿನವರಿಗೆ ಪಾರ್ಟಿ ಕೊಡಬೇಕಾತು. ಕಂಪನೀಗೆ ಅಂತ ನಾನೂ ಸ್ವಲ್ಪ ತೊಗೊಂಡೆ.. ನೀ ಬ್ಯಾಡ ಅಂದಾಗ ಬಿಟ್ಟೇನಿ, ನಾ ಏನ ದಿನಾ ಕುಡೀತೀನೇನು ?

'ಹಾಂ ಹಾಂ, ನೀವೇನ ನೆವಾ ಹೇಳೂದು ಬ್ಯಾಡಾ. ಒಂದು ದಿವಸ ಅಂತ ಹೆಳಿ ಸುರು ಆಗ್ತದ. ಆ ಮ್ಯಾಲೆ ಚಟಕ್ಕ ಬೀಳತದ. ನನಗೆಲ್ಲಾ ಗೊತ್ತದ ಗಂಡಸರ ಗುಣಾನs ಹಿಂಗ. ಇವತ್ತ ಸಿಗರೇಟು, ನಾಳೆ ಸೆರೆ, ನಾಡದು ಹೆಂಗಸು ಅಂತ. ದುಶ್ಚಟಾ ಬಂದರ ಎಲ್ಲಾ ಕೂಡೇ ಬರ್ತಾವ. ನನ್ನ ಸ್ವಾದರತ್ತಿ ಸಂಸಾರ ಹಿಂಗs ಹಾಳಾತು. ನೀವು ಕುಡೀತೀರಿ ಅಂತ ಗೊತ್ತಿದ್ದರ ನಾ ಈ ಮದುವೀನ ಒಪ್ಪತಿದ್ದಿಲ್ಲ. ನಿಮಗೇನ ಗೊತ್ತದ, ನಾವು ಹೆಂಗಸರು ನಮದೆಲ್ಲಾ

ಜೀವಾ ಸುದ್ದಾ ಒತ್ತೀ ಇಟ್ಟು ನಿಮ್ಮ ಸಲುವಾಗಿ ಬದಕತೇವಿ. ನಿಮಗ ಅದರ ಕಿಮ್ಮತ್ತಿಲ್ಲಾ, ನನ ಮಾತು ಅಂದರ ಕಸಕ್ಕಿಂತ ಕಡೀ ನಿಮಗ."

'ಮೀನೂ ಪ್ಲೀಸ್, ಜೋರಾಗಿ ಒದರಬ್ಯಾಡಾ, ಮೀನೂ.'

'ಯಾಕ ನನಗೇನ ಯಾರ ಹೆದರಿಕಿ. ನಿಮ್ಮ ಕಲ್ಯಾಣ ಗುಣಾ ಗೊತ್ತಾಗ್ಲಿ ಎಲ್ಲಾರಿಗೂ.'

ಅವಳ ಚೀರಾಟಕ್ಕೆ ಅವ್ವ, ಮಕ್ಕಳು ಎದ್ದು ಬಂದರು. ಅವ್ವ ನಾನು ಎಷ್ಟು ಸಮಾಧಾನ ಮಾಡಿದರೂ ಕೇಳದೆ ಮಾವನಿಗೆ ಫೋನ್ ಮಾಡಿದಳು. ಅವರು ಮರುದಿನವೇ ಊರಿಂದ ಓಡೋಡಿ ಬಂದರು, ಏನೋ ದೊಡ್ಡ ಅನಾಹುತವಾದಂತೆ. ಅವರ ಮಗಳನ್ನು ಹರಿದು ತಿನ್ನುವ ರಾಕ್ಷಸನು ನಾನು ಎನ್ನುವಂತೆ ನನಗೇ ಉಪದೇಶ ಮಾಡಿದರು. ಹೀಗಾದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ ಎನ್ನುವ ಬೆದರಿಕೆಯನ್ನೂ ಹಾಕಿದರು. ತಂದೆಯ ಮುಂದೆ ಸಂಸಾರದ ಮಾನವನ್ನೆಲ್ಲ ಜಾಲಾಡಿದಳು.

ನನ್ನ ಸಣ್ಣ ಸಣ್ಣ ಆಸೆಗಳನ್ನು ಕತ್ತರಿಸಿ ಹಾಕಿ ಸಾಧ್ವಿ ಶಿರೋಮಣಿಯಂತೆ ನಾಟಕವಾಡುವ ಮೀನಾಕ್ಷಿಯನ್ನು ಒಂದೊಂದು ರಾತ್ರಿ ಕುತ್ತಿಗೆ ಹಿಚುಕಿ ಕೊಂದುಬಿಡಲೇ ಎನ್ನುವಷ್ಟು ಸಿಟ್ಟು ಬರುತ್ತಿತ್ತು. ಹಾಸಿಗೆಯಲ್ಲಿ ಅವಳು ಆಡುವ ಆಟ ತನ್ನನ್ನು ಹುಚ್ಚನನ್ನಾಗಿಸುತ್ತಿತ್ತು. ತಾನು ಆಸೆಪಟ್ಟು ಕೇಳಿದಾಗ ಅವಳು ಎಂದೂ ಒಪ್ಪಿಕೊಂಡವಳಲ್ಲ. ಅವಳ ಇಷ್ಟಕ್ಕೆ ಮಾತ್ರ ತಾನು ಬಾಗಲೇಬೇಕು. ಇಲ್ಲವೆಂದರೆ ತನ್ನ ಮಾನ ಮೂರು ಕಾಸಿಗೆ ಹರಾಜಾಗೋದು. ಇದನ್ನೆಲ್ಲಾ ಅವ್ವನ ಮುಂದೆ ತೋಡಿಕೊಳ್ಳಲಾ, ಮಾವನ ಹತ್ತಿರ ಹೇಳಲಾ? ಸಂಕೋಚದ ಮುದ್ದೆ ನಾನು. ಮಕ್ಕಳಿಗಾಗಿ, ಮರ್ಯಾದೆಗಾಗಿ ತಗ್ಗಿದೆ. ಪ್ರೀತಿಸುವ ಹೆಂಡತಿ, ಮಗ-ಮಗಳು, ಅಧಿಕಾರ, ಬಂಗ್ಲೆ, ಕಾರು ನನ್ನದು ಆದರ್ಶ ಸಂಸಾರ ನೋಡುವವರ ಕಣ್ಣಿಗೆ. ನನಗೆ?

ಛೇ ಛೇ ಇಷ್ಟೊಂದು ಸಂತೋಷ ಸಿಕ್ಕಾಗ ಮೀನಾಕ್ಷಿ ಯಾಕಾದರೂ ನೆನಪಾದಳೋ - ಈ ನೆನಪುಗಳಿಂದ ಮನಸ್ಸು ಕಹಿ ಮಾಡಿಕೊಳ್ಳೋದೇ ಬೇಡ. ಗೋಡೆಯ ಮೇಲೆ ನಗುತ್ತಿದ್ದ ಮೀನಾಕ್ಷಿಯ ಮುಖಕ್ಕೆ ಕೈಯಲ್ಲಿದ್ದ ಗ್ಲಾಸ್ ಬೀಸಿ ಒಗೆಯುವುದನ್ನು ಕಷ್ಟಪಟ್ಟು ತಡೆದುಕೊಂಡ.

ಮೀನಾಕ್ಷಿ ಕಾಣದಂತೆ ಬೆಡ್‌ರೂಮಿಗೆ ಹೋಗಿ ಬಿದ್ದುಕೊಂಡರೂ ನಿದ್ದೆ ಹತ್ತಿರ ಸುಳಿಯಲಿಲ್ಲ. ಮತ್ತೆ ಮತ್ತೆ ಆ ಹೆಂಗಸಿನ ನೆನಪು. ಬೇರೆ ಯಾವ ಹೆಣ್ಣೂ ಇಷ್ಟು ಕಾಡಿರಲಿಲ್ಲ. ತಾನು ಪಟ್ಟ ಸುಖಕ್ಕೆ ಪರ್ಸನ್ನೇ ಅವಳತ್ತ ಚಾಚಿದ್ದ. ವಿಚಿತ್ರ ಹೆಂಗಸು! ಅದನ್ನು ಮುಟ್ಟದೆ 'ಐನೂರು ರೂಪಾಯಿ ಕೊಡ್ರಿ ಸಾಕು' ಎಂದಿದ್ದಳು. ಅವಳು ಏನು ಕೇಳಿದ್ದರೂ ಇಲ್ಲವೆನ್ನದ ಸ್ಥಿತಿಯಲ್ಲಿದ್ದೆ ತಾನು. ತನ್ನ ಇಚ್ಛೆ ಅವಳಿಗೆ ತಿಳಿಯಲೆಂದೇ 'ಪ್ಲೀಜ, ಒಂದು ನಿಮಿಷ ನಿಲ್ಲಿ' ಎಂದೆ. ಸುಮ್ಮನೆ ತಿರುಗಿದಳು. ದುಂಡು ಮುಖ, ತುಂಬಿದ ಕೆನ್ನೆ, ಮೊಂಡ ಮೂಗು, ಕಣ್ಣುಗಳು ಕೆಳಗೆ ಬಾಗಿದ್ದವು. ಸಾಧಾರಣ ರೂಪ, ಮೀನಾಕ್ಷಿಯಂತೆ ಸುಂದರಿಯಲ್ಲ. ಹೆಜ್ಜೆ ಮುಂದಿಟ್ಟಳು.

"ಇಲ್ನೋಡ್ರಿ ನಾವಿಬ್ಬರೂ ಅಪರಿಚಿತರು. ನನ್ನ ಹೆಂಡತಿ ತೀರಿಕೊಂಡು ನಾಲ್ಕು ವರ್ಷಾದ್ವು. ಆಗಾಗ ಇಲ್ಲಿಗೆ ಬರ್ತೀನಿ. ನನ್ನ ತಪ್ಪು ತಿಳಿಬ್ಯಾಡ್ರಿ. ನಾನು ಕಾಮುಕ ಅಲ್ಲ. ನೀವು ಮತ್ತ ಎಂದ ಬರ್ತೀರಿ ಇಲ್ಲಿಗೆ?"

'ನೀವು ಕಾಮುಕ ಅಲ್ಲ ಅನ್ನುದು ನನಗೂ ಗೊತ್ತಾತು. ಆದರೆ ಹಣದ ಅವಶ್ಯಕತೆ ಇದ್ದಾಗ ಅಷ್ಟೇ ನಾ ಇಲ್ಲಿಗೆ ಬರೂವಾಕಿ. ಬೇರೆಯವರಿಗೆ ಬೇಕಾದಾಗ ಅಲ್ಲ, ಕ್ಷಮಿಸಿ ಬರ್ತೀನಿ.' ಹೇಗೆ ಬಂದಿದ್ದಳೋ ಎಲ್ಲಿಂದ ಬಂದಿದ್ದಳೋ ಹಾಗೇ ಹೊರಟು ಹೋಗಿದ್ದಳು ಒಬ್ಬಳೇ.

ಇಂಥ ಹೊತ್ತಿನಲ್ಲಿ ತಾನು ಅವಳಿಗೆ ಲಿಫ್ಟ್ ಕೊಡಬಹುದಿತ್ತು. ಆದರೆ ಅವಳು ಮಾತಿಗೆ ಅವಕಾಶವನ್ನೇ ಕೊಟ್ಟಿರಲಿಲ್ಲ. ಅವಳಿಗೆ ಅಷ್ಟೊಂದು ಹಣದ ಅವಶ್ಯಕತೆ ಇದೆಯೇ ? ಆ ಹಣದಿಂದ ಅವಳೇನು ಮಾಡಬಹುದು?

ಎಲ್ಲ ಹೆಂಗಸರ ಹಾಗೆ ಭಾರಿ ಜರಿ ಸೀರಿ, ಒಂದಿಷ್ಟು ಬಂಗಾರ ಕೊಳ್ಳಬಹುದು. ಮಧ್ಯವಯಸ್ಸು ಮೀರಿದ್ದರೂ ಮೀನಾಕ್ಷಿ ಸೀರೆ ಒಡವೆಗಳಿಗೆ ಎಷ್ಟು ಆಸೆ ಪಡುತ್ತಿದ್ದಳಲ್ಲ, ಕೊಡಿಸದಿದ್ದರೆ ಮನೆ ನರಕ ..... ನಿಮ್ಮಂಥವರನ್ನು ಕಟ್ಟಿಕೊಳ್ಳುವುದಕ್ಕಿಂತ ಬಾವಿಗೆ ಬಿದ್ದರೆ ಒಳ್ಳೆಯದು ಎನ್ನುತ್ತಿದ್ದಳು. ಇವಳು ಬಾವಿಗೆ ಬಿದ್ದರೆ ಒಳ್ಳೆಯದು ಎಂದು ನನಗೆ ಅನ್ನಿಸಿದ್ದಂತೂ ನಿಜ....

***

ನಾಲ್ಕಾರು ತಿಂಗಳಲ್ಲಿ ಐದಾರು ಸಲ ಅವಳು 'ಹೊಟೆಲ್ ಮೇನಕಾ'ಕ್ಕೆ ಬಂದಿದ್ದರೂ ಶಶಿಧರನಿಗೆ ಇನ್ನೂ ಅಪರಿಚಿತಳೇ. ಒಂದು ಸಲ ಸಾವಿರ ಕೇಳಿದ್ದಳು. ಒಂದೂ ಮಾತನಾಡದೆ ಹಣ ಎಣಿಸಿದ್ದೆ.

ಒಂದು ಸಂಜೆ ಆಫೀಸಿನಿಂದ ಮನೆಗೆ ಬರುವಷ್ಟರಲ್ಲಿ ಶಶಿಧರನ ಅಣ್ಣ ಹಳ್ಳಿಯಿಂದ ಬಂದಿದ್ದ. ಒಂಟಿಯಾಗಿದ್ದ ಶಶಿಧರನಿಗೆ ತುಂಬ ಸಂತೋಷ .

'ಶಶೀ, ನನ್ನ ಗೆಳೆಯ ರಾಮನಾಥನ ಮಗಾ ಶಿವನಾಥಗ ಮೈಯಾಗ ಆರಾಮ ಇಲ್ಲಂತ. ಸೀರಿಯಸ್ ಅಂತ, ಹೋಗಿ ನೋಡಿಕೊಂಡ ಬರೂಣು ಬಾ'. ಸಂಜೆ ಅಣ್ಣನೊಡನೆ ಹೋದ.

ಮನೆ ಬಾಗಿಲು ತೆಗೆದು 'ಬರ್ರಿ' ಎಂದವಳನ್ನ ನೋಡಿ ಬೆಚ್ಚಿದ. ಕಾಲು ನೆಲದಲ್ಲಿ ಹೂತು, ಮೈ ಬೆವರಿ, ನಾಲಿಗೆ ಒಣಗಿ, ಕಣ್ಣಿಗೆ ಕತ್ತಲು ಬಂದು ತಲೆ ಸುತ್ತುವಂತೆ ಅನಿಸಿ ಗೋಡೆಗೆ ಒರಗಿ ನಿಂತ.

'ಬಾರೋ ಒಳಗ, ಅಲ್ಯಾಕ ನಿಂತಿ ಕಂಬದಾಂಗ, ಇಕೀ ಶಿವನಾಥನ ಹೆಂಡತಿ ಉಮಾ. ಇಂವಾ ನನ್ನ ತಮ್ಮ ಶಶಿಧರ. ಇಲ್ಲೇ ಪ್ರೈವೇಟ್ ಕಂಪನೀಗೆ ದೊಡ್ಡ ಆಫೀಸರ ಆಗಿ ಬಂದಾನ. ಹ್ಯಾಂಗದಾನ ಶಿವನಾಥಾ?'

ಚಲಿಸಿದ ಕಾಲುಗಳು ಒಳಗೆ ಹೋದಾಗ ಇನ್ನೊಂದು ಶಾಕ್! ಇದೇನು ಮನಶ್ಯಾನೋ ಅರಿವೀಗಂಟೋ, ಕುರುಚಲು ಗಡ್ಡ, ಒಣಗಿ ಮುರುಟಿದ ದೇಹ, ಜೀವವಿಲ್ಲದ ಕಣ್ಣುಗಳು, ದೊಡ್ಡ ಹಣೆ, ಮುಖವನ್ನೇ ಸೀಳಿ ಎದ್ದು ಬರುವ ಮೂಗು -ಮಂಚದ ಮೇಲಿನ ದೇಹ ಚಲಿಸಿತು. ಅಣ್ಣ ಹಾಸಿಗೆಯ ಮೇಲೆ ಕೂತು ಕೈ ಹಿಡಿದುಕೊಂಡ.

'ಏನೋ ಶಿವು, ಹೆಂಗಾಗೀಯಲ್ಲೋ.' ಗಂಟಲು ಕಟ್ಟಿ ಮಾತು ನಿಂತು ಹೋಯಿತು. ಸಣ್ಣ ಹುಡುಗನೊಬ್ಬ ಶಶಿಧರ ಕೂಡ್ರಲು ಸ್ಟೂಲ ತಂದಿಟ್ಟ, ಉಮಾ ಚಹಾ ತಂದಳು. ಮುಖದಲ್ಲಿ ಮಾತಿಗೆ ನಿಲುಕದ ತೀವ್ರವಾದ ದುಃಖ, ನೋವು ಚಿಮ್ಮುವ ಕೆಂಪು ಕಣ್ಣುಗಳು, ಬಣ್ಣ ಕಳೆದುಕೊಂಡ ಹಳೆಯ ಸೀರೆ, ಮಾಸಿದ ಬಳೆಗಳ ಕೈ ಕಪ್ಪು ಮುಂದೆ ಚಾಚಿದಾಗ ಶಶಿಧರ ಚಲನೆ ಕಳೆದುಕೊಂಡಿದ್ದ.

'ಅಮರ, ಅಂಕಲ್‌ಗೆ ಚಹಾ ಕೊಡಪ್ಪ'

'ಇಷ್ಟ ಸೀರಿಯಸ್ ಆದ್ರೂ ತಿಳಿಸಿಬಾರದೇನವ್ವ ಉಮಾ. ರಾಮನಾಥ ಸತ್ತಮ್ಯಾಲೆ ನಾವೂ ದೂರ ಆದಿವ್ಯಾ?'

'ಹಾಂಗ್ಯಾಕ ಅಂತೀರಿ ಕಾಕಾ, ಆಪರೇಶನ್ ಆಗಿ ಎರಡು ವರ್ಷ ಆದ್ವು. ಈಗ ಮತ್ತ ಸುರು ಆಗೇದ. ಏನೋ ಕೈಲಾದಷ್ಟು ಉಪಚಾರ ನಡದದ. ನಮ್ಮ ಮನೀ ಪರಿಸ್ಥಿತಿ ಅಂತೂ ನಿಮಗೆಲ್ಲಾ ಗೊತ್ತs ಅದ.'

'ಶಿವೂಗ ಕ್ಯಾನ್ಸರ್ ಆಗೇದ ಅಂತ ಕೇಳೇ ರಾಮು ಹೊಟ್ಟೆಬ್ಯಾನಿ ಹಚಿಗೊಂಡ. ಹಳ್ಳ್ಯಾಗಿನ ಹೊಲಾ ಮಾರಿ ನಿಮಗೆ ಆಪರೇಶನ್‌ಕ ರೊಕ್ಕಾ ಕೊಟ್ಟಾ. ಆದರ ಮುಂದಿಂದೆಲ್ಲಾ ನೋಡದ ತಾನs ಕಣ್ಣ ಮುಚಿಕೊಂಡು ಹೋದ.' ಅಳಲೂ ಸಾಧ್ಯವಾಗದೇ ಶಿವನಾಥ ಮಲಗಿದಲ್ಲೇ ಮುಲುಗುಟ್ಟಿದ.

'ಮತ್ತ ಈಗ ಮನೀ ನೀನs ನಡಸತೀಯಲ್ಲವಾ. ನೌಕರಿ ಮಾಡತೀಯಂತ ಕೇಳಿದ್ದೆ.' ಶಶಿಧರ ಮೈಯೆಲ್ಲಾ ಕಿವಿಯಾದ.

'ಇವರ ನೌಕರಿ ಅಂತೂ ಯಾವಾಗೋ ಹೋಗೇದ ಕಾಕಾರ, ನಾನಃ ಒಂದ ಸಣ್ಣ ನೌಕರಿ ಹಿಡಿದೇನ್ರಿ. ಬಂಧು-ಬಳಗ, ಸ್ನೇಹಿತ್ರು ಯಾರಾದ್ರು ಎಷ್ಟು ದಿವಸಾ ಅಂತ ಕೊಟ್ಟ ನಡಸತಾರ್ರಿ. ಈಗಿನ ದಿನದಾಗ ತಮ್ಮ ಜೀವನಾನ ಭಾರ ಆಗಿರತದ, ಮುಂದಿಗೆ ಯಾಕ ತ್ರಾಸ ಕೊಡಬೇಕ್ರಿ.'

'ತಿಳಿವಳಿಕಿ ಇದ್ದಾಕಿ ಅದೀಯವಾ. ಎದೀ ಒಡಕೊಂಡಿಲ್ಲ. ದೇವರು ನಿಮಗ ಹಿಂತಾ ಹೊತ್ತು ತರಬಾರದಾಗಿತ್ತು.'

'ನನ್ನ ಪಾಲಿಗೆ ದೇವರು ಯಾವಾಗೋ ಸತ್ತ ಹೋಗ್ಯಾನೇಳ್ರಿ. ಕಾಕಾ, ನೀವು ಬಯ್ಯರಿ. ಆದರ ಅವನ್ನ ನಂಬಿ ಜೀವನಾ ಮಾಡಾಕ ನಾ ಏನ ಹುಟ್ಟಿ ಬಂದಿಲ್ಲ. ಬಂದದ್ದೆಲ್ಲಾ ಎದುರಿಸಬೇಕಲ್ರಿ. ಅಮರನನ್ನೂ ನೋಡಿಕೋಬೇಕ ನಾನು, ಎದೀ ಒಡಕೊಂಡರ ಹ್ಯಾಂಗ್ರಿ. ಆದರ ದಿನ ದಿನಕ ಇಷ್ಟಿಷ್ಟ ಒದ್ದಾಡಿಕೋತ ಸಾಯೂದನ್ನ ನೋಡಾಕ ಮಾತ್ರ...' ಅಲ್ಲಿಯವರೆಗೆ ತಡೆದಿದ್ದ ಪ್ರವಾಹ ಉಕ್ಕಿ ಹರಿಯಿತು.

ತನ್ನನ್ನು ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗದೆ ಶಶಿಧರ ತಟ್ಟನೆ ಎದ್ದು ಬಂದು ಕಾರಿನಲ್ಲಿ ಕೂತ. ಹೊಟ್ಟೆಯಲ್ಲಿ ಉರಿ, ಸಂಕಟ, ತಾಳದೆ ತಲೆ ಛಿದ್ರ ಛಿದ್ರವಾಗುತ್ತಿತ್ತು. ಮೈಯ ಚರ್ಮವನ್ನೆಲ್ಲ ಸುಲಿದು ಬಿಡುವಂತೆ ಬಾರುಕೋಲಿನಿಂದ ಯಾರೋ ಚಟ್‌ಚಟ್ ಬಾರಿಸುತ್ತಿದ್ದರು.

ದಾರಿಯಲ್ಲಿ ಅಣ್ಣ ಹೇಳುತ್ತಿದ್ದ. 'ನನಗಂತೂ ಭಾಳ ಕೆಟ್ಟ ಅನ್ನಿಸಿತಪಾ. ಉಮಾ ಗಟ್ಟಿ ಹೆಂಗಸು. ನನ್ನ ಹೇಣ್ತಿ ಹಂತಾಕಿ ಆಗಿದ್ದರ ಅತ್ತತ್ತು ಸಾಯತಿದ್ಲು. ಖರ್ಚಿಗೆ ಸಾಲದ, ಮನೀ ಸಾಮಾನು ಸುದ್ದಾ ಮಾರ್‍ಯಾಳಂತ. ಹಿಂತಾ ರೋಗ ಯಾವ ವೈರಿಗೂ ಬರಬಾರದು. ಬರೂ ಮುಂದ ನಾನಃ ಅಮರನ ಕೈಯ್ಯಾಗ ನೂರ ರೂಪಾಯಿ ಕೊಟ್ಟ ಬಂದೆ.'

ಕಷ್ಟಪಟ್ಟು ಕಾರು ನಡೆಸುತ್ತಿದ್ದ ಶಶಿಧರ ಬಾಯಿ ಹೊಲಿದುಕೊಂಡಿದ್ದ. ಹೇಳಲು ಬೇಕಾದಷ್ಟಿದ್ದರೂ ಶಬ್ದಗಳ ರೂಪದಲ್ಲಿ ಹೊರ ಬರದೆ ಒಳಗೇ ಮೈಯನ್ನು ಸುಡುತ್ತಿದ್ದವು. ತೃಪ್ತಿ, ಸುಖ ಎಂದು ಬೀಗುತ್ತಿದ್ದವ ತನ್ನ ನೀಚತನಕ್ಕೆ ಜುಗುಪ್ಸೆ ಪಟ್ಟುಕೊಳ್ಳುತ್ತಿದ್ದ. ಬರುವಾಗ ಉಮಾಳಿಗೆ ಸಮಾಧಾನದ ಒಂದು ಮಾತನ್ನೂ ಹೇಳದೆ ಓಡಿ ಬಂದ ಹೇಡಿತನಕ್ಕೆ ನಾಚಿಕೆ ಪಟ್ಟುಕೊಳ್ಳುತ್ತಿದ್ದ.

'ಶಶಿ, ಯಾವಾಗರೆ ಹೋಗಿ ಆ ಸಂಸಾರಕ್ಕ ಒಂದಿಷ್ಟು ಸಮಾಧಾನ ಹೇಳಿ ಬಾ. ರಾಮು ನನ್ನ ಪ್ರೀತಿ ಗೆಳೆಯಾ ಆಗಿದ್ದ.'

ಒಗ್ಗಾಲಿಯಾದ ಬಂಡಿಯ ಭಾರವನ್ನು ಒಬ್ಬಳೇ ಹೊತ್ತು ಎಳೆಯುತ್ತಿರುವ ಉಮಾಳಿಗೆ ಸಮಾಧಾನದ ನಾಲ್ಕು ಮಾತು ಸಾಕೇ? ಇಂಥ ಪರಿಸ್ಥಿತಿಯಲ್ಲಿ ಬರೀ ಮಾತು ಸಾಕೆ? ಪ್ರಶ್ನೆಗೆ ಉತ್ತರ ಹೊಳೆಯದೆ ಶಶಿಧರ ವಿಲಿವಿಲಿ ಒದ್ದಾಡುತ್ತಿದ್ದ.

ಬಿಸಿಲಿನ ಬೇಗೆಯಿಂದ ಕಾದು ಪುಡಿಪುಡಿಯಾಗುತ್ತಿದ್ದ ಮಣ್ಣಿನ ಮೇಲೆ ಹದವಾಗಿ ಹನಿ ಹನಿ ಮಳೆ ಬಿದ್ದು ಕಂಪು ಸೂಸುತ್ತ ಹೂವಿನಂತೆ ಅರಳಿದ ಮನಸ್ಸು ಈಗ ಬಿರುಸಾದ ಮಳೆಗಾಳಿ ಬೀಸಿ ಚಳಿಗೆ ಗಡ ಗಡ ನಡುಗಿ ರಕ್ತ ಹೆಪ್ಪುಗಟ್ಟಿ ಮುದ್ದೆಯಾಗಿ ಮೂಲೆಗೆ ಬಿದ್ದಿತ್ತು.

ಬುಟ್ಟಿ ತುಂಬ ಹಣ್ಣು ಹೂವು ಬಿಸ್ಕೀಟು ಹಿಡಿದು ಶಶಿಧರ ಮತ್ತೊಂದು ದಿನ ಆ ಮನೆಗೆ ಹೋದ. ಗಟ್ಟಿ ಮನಸ್ಸು ಮಾಡಿ. ಹಾಸಿಗೆ ಹತ್ತಿರ ಕುಳಿತು ನಿರ್ಜೀವಗೊಳ್ಳುತ್ತಿದ್ದ ಕೈಗಳನ್ನು ಹಿಡಿದುಕೊಂಡ.

'ಶಶಿಧರ, ನನಗ ಈಗ ಸಾವಿನ ಬಗ್ಗೆ ಎಷ್ಟೂ ಹೆದರಿಕೆ ಇಲ್ಲಾ. ಆದಷ್ಟು ಲಗೂನ ಸಾವು ಬರಲಿ ಅಂತೇನಿ. ಅದರಿಂದ ಸ್ವಲ್ಪ ಆದರೂ ಉಮಾನ ತ್ರಾಸ ಕಡಿಮಿ ಆದೀತು ಅಂತ' ತುಂಬಾ ಕಷ್ಟಪಟ್ಟು ಹೇಳಿದ ಶಿವನಾಥ. ತಲೆ ಕೂದಲೆಲ್ಲ ಉದುರಿ ಇನ್ನೂ ವಿಕಾರವಾಗಿ ಕಾಣುತ್ತಿದ್ದ.

'ಹಿಂಗ ಮಾತಾಡಿ ಉಮಾ ಅವರ ಮನಸ್ಸಿಗೆ ನೋವು ಮಾಡಬ್ಯಾಡ್ರಿ ಶಿವು.'

'ಜೀವನದಾಗ ನಾ ಆಕೀಗೆ ಏನೂ ಸುಖಾ ಕೊಡಲಿಲ್ಲ. ಬರೇ ಗೋಳು. ಈಗ ಆಕೀಯಿಂದ ನಾ ಇನ್ನೂ ಬದಿಕೇನಿ ಅನ್ನೂದು ಗೊತ್ತಿದ್ದರೂ ಈ ಹುಚ್ಚು ಮನಸ್ಸು ನಾ ಸತ್ತ ಮ್ಯಾಲೆ ಇವರ ಗತಿ ಏನು ಅಂತ ಚಿಂತಿ ಮಾಡ್ತದ ನೋಡ್ರಿ' ಬತ್ತಿದ ಕಣ್ಣುಗಳಿಂದ ಸೆಲೆ ಚಿಮ್ಮಿತು. ಶಿವನಾಥನ ಮುಖ, ತಲೆ, ಕೈ ಸವರುತ್ತಿದ್ದ ಶಶಿಧರನಿಗೆ ಅಡಿಗೆ ಮನೆಯಿಂದ ಕ್ಷೀಣವಾಗಿ ಬಿಕ್ಕುವ ದನಿ ಕೇಳುತ್ತಿತ್ತು. ಈ ಅಸಹಾಯಕತೆಯೇ ಅವಳನ್ನು ಹೋಟೆಲ್‌ಗೆ ಎಳೆದು ತಂದಿತ್ತು. ಅವಳು ಕೆಲಸ ಮಾಡುವ ಫ್ಯಾಕ್ಟರಿ ಮ್ಯಾನೇಜರನೇ ಅವಳನ್ನು ಮೊದಲ ಸಲ ಅಲ್ಲಿಗೆ ಕರೆ ತಂದಿದ್ದ. ಮುಳುಗಿ ಹೋಗುತ್ತಿರುವ ಸಂಸಾರಕ್ಕಾಗಿ ಹಿಂತಿರುಗಿ ಬಾರದ ಹಾಗೆ ಉಮಾ ಮುಂದಿನ ಹೆಜ್ಜೆ ಇಟ್ಟಿದ್ದಳು.

'ಈ ಶನಿವಾರ ರಾತ್ರಿ ಅಲ್ಲಿಗೆ ಬರ್ರಿ. ಅವರ ಕಿಮೋಥೆರಪಿಗೆ ನನಗ ರೊಕ್ಕ ಬೇಕು.' ಕಳಿಸಲು ಬಂದ ಉಮಾ ಹೇಳಿದಳು. ಶಶಿಧರ ಆರ್ತನಾಗಿ ನೋಡಿದ. ಆದರೆ ದಾನಕ್ಕೆ ಕೈ ಒಡ್ಡಲು ತಾನು ಸಿದ್ಧಳಿಲ್ಲ ಎಂದು ಖಂಡಿತವಾಗಿ ಹೇಳಿದಳು ಉಮಾ.

-ಕೊನೆಗೊಂದು ದಿನ ಬಂದಿತು. ಉಮಾಳಿಂದ ಚೀಟಿ 'ಶಿವನಾಥ ತೀರಿಕೊಂಡ್ರು. ದಯಮಾಡಿ ಆಸ್ಪತ್ರೆಗೆ ಬರ್ರಿ.' ಶಶಿಧರ ಹುಡುಗನ ಜೊತೆ ಹೋಗಿ ಅಂತ್ಯಕ್ರಿಯೆಯ ಎಲ್ಲ ವ್ಯವಸ್ಥೆ ಮಾಡಿ ಬಂದ. ಉಮಾಳಿಗೆ ಸಮಾಧಾನದ ಎರಡು ಮಾತು ಹೇಳಬೇಕೆಂದರೆ ಅವಳು ಅಳುತ್ತಿರಲಿಲ್ಲ.

ಮುಂದೊಂದು ದಿನ-

'ಯಾಕ ? ಲೈಟ ಹೋಗ್ಯಾವೇನು ? ದೀಪಾ ಹಚ್ಚಿಲ್ಲಲ್ಲಾ? ಅಮರ ಎಲ್ಲ್ಯದಾನ?' ಕತ್ತಲಲ್ಲಿ ಗೋಡೆಗೊರಗಿ ಕುಳಿತ ಉಮಾಳನ್ನು ಕೇಳಿದ ಶಶಿಧರ.

'ಅಮರ ಆಡಲಿಕ್ಕೆ ಹೋಗ್ಯಾನ' ಮೇಣಬತ್ತಿ ಹಚ್ಚುತ್ತ ಮುಂದುವರಿಸಿದಳು. 'ಕರಂಟ್ ಬಿಲ್ ತುಂಬಿಲ್ಲ. ಕೆ.ಇ.ಬಿ. ಯವರು ಕತ್ತರಿಸಿ ಹೋಗ್ಯಾರ. ಅವರು ತೀರಿಕೊಂಡಾಗಿನಿಂದ ನಾ ಕೆಲಸಕ್ಕೂ ಹೋಗಿಲ್ಲ. ಒಂದು ತಿಂಗಳು ರಜಾ ಬೇಕು ಅಂದೆ., ಕೆಲಸದಿಂದ ತಗದ ಹಾಕಿಬಿಟ್ಟಾರ' ಮಂಜಿನಂತೆ ಕೊರೆಯುವ ದನಿಯಲ್ಲಿ ಮತ್ತೆ ಹೇಳಿದಳು.

'ನನಗೊಂದು ಉಪಕಾರಾ ಮಾಡ್ತೀರೇನು.'

'ಏನ ಹೇಳ ಉಮಾ, ಏನು ಮಾಡ್ಬೇಕು.'

'ನಿಮ್ಮ ಆಫೀಸಿನ್ಯಾಗ ನನಗ ಒಂದು ಸಣ್ಣ ನೌಕರಿ ಕೊಡಸರಿ. ನಾ ಗ್ರ್ಯಾಜ್ಯುಯೇಟ್ ಅಲ್ಲಾ. ನಮ್ಮಿಬ್ಬರ ಹೊಟ್ಟಿ ತುಂಬೂವಷ್ಟು ಪಗಾರ ಆದ್ರೂ ಸಾಕು.' ಅವಳ ದನಿಯಲ್ಲಿ ಕಂಪನವಿತ್ತು.

ಶಶಿಧರ ಎದ್ದು ಹತ್ತಿರ ಬಂದು ಅವಳ ಹೆಗಲ ಮೇಲೆ ಕೈಯಿಟ್ಟ.

'ನಾ ಹೇಳಿದ ವಿಷಯ ವಿಚಾರ ಮಾಡಿದೇನು ಉಮಾ. ನಾ ನಿನ್ನ ಮದುವಿ ಆಗ್ತೀನಿ ಅಂತ ಹೇಳಿದ್ದೆ. ಈಗ ಮತ್ತೊಮ್ಮೆ ಕೇಳ್ತೀನಿ. ನಿನಗೆ ಬಾಳು ಕೊಡ್ತೀನಿ. ಮಕ್ಕಳು ದೊಡ್ಡವರಾಗ್ಯಾರ. ಅವರ ಜವಾಬ್ದಾರಿ ಮುಗದದ.

ನಾನೂ ಒಂಟಿ, ನಿನ್ನಂತಾ ಒಬ್ಬ ಸಂಗಾತಿ ಬೇಕು. ಅಮರನ್ನ ಇಬ್ಬರೂ ಬೆಳಸೂಣು. ನಿನ್ನ ಸುಖ ದುಃಖದೊಳಗ ಭಾಗಿ ಆಗಲಿಕ್ಕೆ ಅವಕಾಶಾ ಕೊಡು. ಪ್ಲೀಜ ಉಮಾ, ಶಾಂತ ಆಗಿ ವಿಚಾರ ಮಾಡಿ ನನ್ನ ಮಾತು ಒಪ್ಪಿಕೋ.'

'ಶಶಿಧರ ದಯಮಾಡಿ ತಪ್ಪು ತಿಳಕೊಬ್ಯಾಡ್ರಿ. ಮದುವೀ ಮಾತು ತಗದ ಹಾಕ್ರಿ. ನನ್ನ ಮನಸ್ಸು ಒಪ್ಪೂದಿಲ್ಲ.'

'ಯಾಕ ಉಮಾ? ಸಮಾಜಕ್ಕ ಹೆದರತೀಯೇನು?'

'ಹೆದರಿಕಿ? ನನಗ? ಈ ಸಮಾಜದ ಹೆದರಿಕಿ ಇದ್ದರ ಹೋಟೆಲ್‌ಕ ಹೋಗುವಂಥಾ ಕೆಲಸಾ ನಾ ಮಾಡಿತಿದ್ನೇನು? ಯಾರ ಏನಂದರೂ ಅನ್ನಲಿ ಗಂಡನ ಸಲುವಾಗಿ ಇದು ನನ್ನ ಕರ್ತವ್ಯ ಅಂತ ಗಟ್ಟಿ ಮನಸ್ಸು ಮಾಡಿದ್ದೆ. ಆದರ ಓ.ಟಿ. ಮಾಡಲಿಕ್ಕೆ ಹೋಗ್ತೀನಿ ಅಂತ ಮನ್ಯಾಗ ಸುಳ್ಳು ಹೇಳೂ ಮುಂದ ಮಾತ್ರ ಜೀವಾ ಹಿಂಡಿ ಹೋಗತಿತ್ತು.'

'ನಿನ್ನ ಈ ಗುಣಾನs ನನಗ ಭಾಳ ಸೇರ್‍ತದ ಉಮಾ. ನಿನ್ನಂಥ ಸಂಗಾತಿ ಸಿಕ್ಕರ ನನ್ನ ಸುದೈವ ಅಂತೀನಿ. ವಿಧವಾ ವಿವಾಹಕ್ಕ ಈಗೇನ ಅಷ್ಟ ವಿರೋಧ ಇಲ್ಲಲ್ಲ. ನೀ ಯಾಕ ಒಲ್ಲೆ ಅಂತೀಯೋ ತಿಳಿವೊಲ್ಲದು ನನಗ.'

'ನನಗ ಅನಿಸಿದ್ದು ಹೇಳ್ತೀನಿ ಕೇಳ್ರಿ. ನಮ್ಮಿಬ್ಬರ ಮಕ್ಕಳ ದೃಷ್ಟಿಯಿಂದ ವಿಚಾರ ಮಾಡಿದರ ನಾವಿಬ್ಬರೂ ಈ ವಯಸ್ಸಿನೊಳಗ ಮದುವಿ ಆಗೂದು ಒಳ್ಳೇದಲ್ಲ. ಸ್ವತಂತ್ರ ಆಗಿ ನಾನು ಅಮರನ್ನ ಬೆಳೆಸಿ ದೊಡ್ಡವ ಮಾಡಿದೆ ಅಂದರ ನಮ್ಮಿಬ್ಬರ ನಡುವೆ ಆತ್ಮೀಯತೆ, ಪ್ರೀತಿ, ಗೌರವ ಉಳಿಸಿಕೊಂಡಿರಲಿಕ್ಕೆ ಸಾಧ್ಯ ಅದ. ಅದೇ ನಾನು ನಿಮ್ಮ ಹೆಂಡತಿ ಆದೆ ಅಂದರ ನಿಮ್ಮವಳೇ ಆಗಿಬಿಡ್ತೀನಿ. ಅಮರಗ ಈಗ ಎಲ್ಲಾ ತಿಳೀತದ. ನಿಮ್ಮನ್ನು ಅಪ್ಪ ಅಂತ ಅಂವಾ ಒಪ್ಪದಿದ್ದರ ನಾ ಹರದು ಹಂಚಿ ಹೋಗ್ತೀನಿ. ಹಾಂಗs ನಿಮ್ಮ ಬೆಳೆದ ಮಕ್ಕಳು ಸೊಸಿ, ಅಳಿಯಾಗ ನಾನು ಹೊರಗಿನವಳಾಗ್ತೀನಿ. ಇದರಿಂದ ಇಬ್ಬರಿಗೂ ಶಾಂತಿ, ಸಮಾಧಾನ ಸಿಕ್ಕೀತು ಅಂತ ನನಗ ಅನಸೂದಿಲ್ಲ. ನಾ ಹೇಳೂದರ ಬಗ್ಗೆ ನೀವೂ ವಿಚಾರ ಮಾಡ್ರಿ.'

'ನೀ ಎಷ್ಟು ಆಳವಾಗಿ ವಿಚಾರ ಮಾಡ್ತೀಯಲ್ಲ ಉಮಾ. ನಾ ಬರೇ ನನ್ನ ಒಂಟಿತನ, ನಿನ್ನ ಕಷ್ಟ ಅಷ್ಟs ನೋಡಿದ್ದೆ.'

'ನಿಮಕಿಂತ ಸಣ್ಣಾಕಿ ಆದರೂ ಈ ಜೀವನದಿಂದ ನಾ ಬಾಳಷ್ಟು ಪಾಠಾ ಕಲತೀನಿ ಶಶಿಧರ. ನಾನು ತಾಯಿ ಇಲ್ಲದ ತಬ್ಬಲಿ. ಮಲತಾಯಿ ಕೈಯಾಗ ಸಣ್ಣಾದೆ, ಹಣ್ಣಾದೆ. ರೂಪ, ವಿದ್ಯಾ, ಸಂಪತ್ತು ಏನೂ ಇಲ್ಲದ ನನ್ನ ಶಿವನಾಥ ಮದುವಿ ಆದ್ರು. ಅವರು ನನ್ನ ಪಾಲಿನ ದೇವರಾಗಿದ್ರು. ಈಗ ಅವರೂ ಇಲ್ಲ. ಹಿಂಗ ಬರೂ ಸಮಸ್ಯೆಗಳನ್ನ ಎದುರಿಸೋದು ನನಗ ರೂಢಿ ಆಗಿ ಬಿಟ್ಟದೆ. ಈಗ ಒಂದ ಸಮಾಧಾನ ಅಂದರ ನನಗ ಆತ್ಮೀಯವಾಗಿ ನೀವೊಬ್ಬರು ಇದ್ದೀರಿ, ನಾ ಒಂಟಿ ಅಲ್ಲಾ ಅನ್ನೋದು. ನಮ್ಮ ನಮ್ಮ ಕಷ್ಟ ಸುಖದೊಳಗ ಭಾಗಿಯಾಗೂಣು. ನಾವಿಬ್ಬರೂ ಮೊದಲಿನ ಹಾಂಗs ಇರೂಣು. ಮದುವೀ ಬಂಧನ ಬ್ಯಾಡಾ, ದಯಮಾಡಿ ನನ್ನ ಅರ್ಥಾ ಮಾಡಿಕೊಳ್ರಿ ಶಶಿ.'

ಅಳುತ್ತಿದ್ದ ಉಮಾಳ ಕಣ್ಣೀರು ಒರೆಸಿ, ' ಮೊದಲಿನ ಹಾಂಗs ಇರೂಣು. ಹಾಂ ಮತ್ತ' ಎಂದು ಕಣ್ಣು ಮಿಟುಕಿಸಿ ನಕ್ಕ. ಮನೆಯಲ್ಲಿದ್ದ ಕೋಣೆಯ ಮೇಣಬತ್ತಿಯೂ ಆರಿ ಹೋಗಿ ಅಲ್ಲಿ ಕತ್ತಲು ತುಂಬಿಕೊಂಡರೂ ಇಬ್ಬರ ಮನಸ್ಸಿನಲ್ಲೂ ಹೊಸ ಬೆಳಕು ಹರಡಿಕೊಂಡಿತು.

***



# ಅಪರಿಚಿತರೇ ?

ಟ್ಯಾಕ್ಸಿ ಆಸ್ಪತ್ರೆಯ ಆವರಣದಲ್ಲಿ ಬಂದು ನಿಂತೊಡನೆ ಅವಳ ಪಾದಗಳು ಒಂದೊಂದೇ ಪಾವಟಿಗೆಗಳನ್ನೇರತೊಡಗಿದವು. ಪ್ರಭು ಟ್ಯಾಕ್ಸಿ ಹಣ ಕೊಟ್ಟುದನ್ನು ಹೊರಳಿ ನೋಡದೆ ಮುಂದೆ ನಡೆದಳು. ಮೈ ಭಾರಕ್ಕೆ ತಕ್ಕಂತೆ ನಿಧಾನವಾಗಿ ಹೆಜ್ಜೆ ಇಡುವುದನ್ನು ಕಲಿತುಕೊಂಡಿದ್ದ ಕಾಲುಗಳು ಇಂದು ಅವಳಿಗೇ ತಿಳಿಯದಂತೆ ಅವಸರ ಮಾಡಿ ಮುಂದೆ ಓಡುತ್ತಿದ್ದವು. ಒಂದೆರಡು ಸಲ ಸೀರೆ ನಿರಿಗೆ ತೊಡರಿ ಬೀಳುವಂತಾದಾಗ ಅಟ್ಟದ ಕಟಾಂಜನದ ಆಧಾರ ಸಿಕ್ಕಿತು.

ಪ್ರಭು ಫೋನಿನಲ್ಲಿ ಅವಸರದಿಂದ ಸುದ್ದಿ ಹೇಳಿದ್ದಲ್ಲದೆ ತನ್ನ ಉತ್ತರಕ್ಕೂ ಕಾಯದೆ ಟ್ಯಾಕ್ಸಿ ತಂದು ನಿಲ್ಲಿಸಿ ಬಿಟ್ಟಿದ್ದ. ತನ್ನ ಮಾರುತಿ ಈಗಲೇ ರಿಪೇರಿಗೆ ಹೋಗಬೇಕೇ? 'ಜುಂ' ಅಂತ ಡ್ರೈವ್ ಮಾಡಿಕೊಂಡು ಬಂದು 'ನಿನಗಿಂತ ನಾ ಏನೂ ಕಡಿಮೆಯಿಲ್ಲ' ಅಂತ ತೋರಿಸಬಹುದಾಗಿತ್ತು. ನಗು ಬಂದಿತು. ಅವನು ಕಣ್ಣು ತೆರೆದು ನೋಡುವ ಸ್ಥಿತಿಯಲ್ಲಿಯೇ ಇಲ್ಲದ ಹೊತ್ತಿನಲ್ಲಿ ತಾನು ಏನು ಅನ್ನೋದನ್ನು ಅವನಿಗೆ ತೋರಿಸಿ ಹೊಟ್ಟೆ ಉರಿಸಲು ಹೊರಟಿದ್ದೇನಲ್ಲ !

ಅವನನ್ನು ಭೇಟಿಯಾಗಿ, ಮಾತನಾಡಿ ಸುಮಾರು ಹತ್ತು ವರುಷ ಕಳೆದು ಹೋದವು. ಅಲ್ಲಲ್ಲಿ ಅವನ ಫೋಟೋ ನೋಡಿ ಪ್ರಶಂಸೆ ಓದುತ್ತಿದ್ದೇನೆ ಹೊರತು ಇಂಥವನ ಹೆಂಡತಿ ನಾನು ಎಂದು ಹೆಮ್ಮೆ ಪಟ್ಟುಕೊಳ್ಳುವ ಕಾಲ ಕಳೆದುಹೋಗಿತ್ತು. ಗೊತ್ತಿದ್ದವರಿಗೆ ಮಾತ್ರ ಗೊತ್ತು. ಅಂಥವರ ಸಹಾನುಭೂತಿಯ ಮಾತು, ಕನಿಕರದ ನೋಟ ಸಹಿಸಲಾರದೆ ಟ್ರಾನ್ಸಫರ್ ತೆಗೆದುಕೊಂಡು ದೂರ ಬಂದಿದ್ದೆ. ಇವತ್ತು ಇಲ್ಲಿಗೆ ಬರುವುದೋ ಬೇಡವೋ ಅನ್ನುವ ಅನುಮಾನ ತನ್ನನ್ನು ಕಾಡುತ್ತಲೇ ಇತ್ತು. ಇಲ್ಲಿಯವರೆಗೆ ಬಂದು ಮುಟ್ಟಿದ್ದೇ ಆಶ್ಚರ್ಯದ ಸಂಗತಿ.

ಒಂದು ಮಾತನ್ನೂ ಆಡದೆ ನಿರ್ಭಾವದಿಂದ ಕುಳಿತ ತನ್ನನ್ನು ನೋಡಿ ಪ್ರಭು "ಅವ್ವ ಭಾಳ ಮನಸ್ಸಿಗೆ ಹಚ್ಚಿಕೊಂಡಾಳ" ಎಂದುಕೊಂಡಿರಬಹುದು. ಬರುವಾಗ ಕಾರಿನಲ್ಲಿ ತನ್ನ ಕೈ ಹಿಡಿದೇ ಕುಳಿತುಕೊಂಡಿದ್ದ. ತನ್ನ ದುಃಖವನ್ನು ಅವ್ವ ಹೊರಚೆಲ್ಲಿದರೆ ಮನಸ್ಸಿನ ಭಾರ ತುಸು ಕಡಿಮೆಯಾದೀತು ಎಂದು ಒಂದೆರಡು ಸಲ ಅಪ್ಪನನ್ನು ಕುರಿತು ಮಾತನಾಡಲು ಪ್ರಯತ್ನಿಸಿ ಸೋತಿದ್ದ. ತನ್ನ ಬಿಟ್ಟು ಹೋರಗಿನವರು- ಮಗ, ಮಗಳು, ಗಂಡ, ಜೀವ ಕೊಟ್ಟ ಅಪ್ಪ ಅವ್ವನನ್ನೂ ಹಿಡಿದು - ತನ್ನ ಬಗ್ಗೆ ಎಷ್ಟು ಕಡಿಮೆ ತಿಳಿದುಕೊಂಡಿದ್ದಾರಲ್ಲ. ಅವರೆಲ್ಲರ ಬಗ್ಗೆ ನನಗೂ ಎಲ್ಲವೂ ತಿಳಿದಿಲ್ಲ. ಅದೂ ನಿಜ. ಒಬ್ಬರನ್ನೊಬ್ಬರು ತಿಳಿದುಕೊಳ್ಳಲು ಒಂದು ಜೀವಮಾನ ಸಾಲದು. ಅಪರಿಚಿತರಾಗಿಯೇ ಸೂರಿನಡಿ ಇರಲೂ ಸಾಧ್ಯ. ಸಂಸಾರ ನಡೆಸುವುದೂ ಅಸಾಧ್ಯವಲ್ಲ. ಆದಷ್ಟು ನಮಗೆ ಬೇಡವಾದುದನ್ನೇ ನಾವೆಲ್ಲ ಮಾಡುತ್ತಿರುತ್ತೇವೆ. ಈ ದೇಹದಲ್ಲಿ ಮನಸ್ಸು ಅನ್ನುವುದೇ ಒಂದು ವಿಚಿತ್ರ ವಸ್ತು. ಉಹುಂ - ಅದು ವಸ್ತುವೂ ಅಲ್ಲ. ಏನೋ ಒಂದು. ಅದಕ್ಕೆ ಬಣ್ಣವಿಲ್ಲ, ಆಕಾರವಿಲ್ಲ, ರುಚಿಯಿಲ್ಲ, ಭಾವನೆಗಳು ಮಾತ್ರ ಇವೆ. ಬುದ್ಧಿ ಭಾವನೆಗಳು ಎರಡೂ ಸಮ ಪ್ರಮಾಣದಲ್ಲಿ ಗಂಡು ಹೆಣ್ಣುಗಳಿಗೆ ಇದ್ದರೆ ಪ್ರಪಂಚ ಸರಳವಾಗಿ ಸುಸೂತ್ರವಾಗಿ ನಡೆಯುತ್ತಿತ್ತೇನೋ. ಒಬ್ಬೊಬ್ಬರಲ್ಲಿ ಒಂದೊಂದು ತರ. ಬುದ್ಧಿಭಾವಗಳ ಗುದ್ದಾಟದ ಫಲ ಈ ಸಂಕೀರ್ಣ ಬದುಕು.

ಯೋಚನೆಯಲ್ಲಿ ಮುಳುಗಿದ್ದ ತನಗೆ ದಾರಿ ಸವೆದದ್ದೇ ತಿಳಿಯಲಿಲ್ಲ. ಪ್ರಭು ತೂಕಡಿಸುತ್ತಿದ್ದ. ತನ್ನ ಹೊಟ್ಟೆ ಹಸಿದಿತ್ತು. ಗಂಡ ಕೋಮಾದಲ್ಲಿದ್ದ ಮಾತ್ರಕ್ಕೆ ಹೆಂಡತಿ ಹೊಟ್ಟೆ ಸುಮ್ಮನಿರಬೇಕಲ್ಲ. ಸಕ್ಕರೆ ಕಾಯಿಲೆಯವಳು. ಮಧ್ಯಾಹ್ನದ ಪಥ್ಯದ ಊಟ ಕರಗಿ ಹೋಗಿತ್ತು. ಕೂಳಿಗೆ ಗತಿ ಇಲ್ಲದ ಬಡವರ ಹೊಟ್ಟೆಯ ಸಂಕಟ ತಿಳಿಯಬೇಕಾದರೆ ಇದ್ದುಳ್ಳವರಿಗೆ ಸಕ್ಕರೆ ಕಾಯಿಲೆ ಬರಬೇಕು ಎಂದು ಕಾಮ್ರೇಡ್ ಚೆನ್ನಯ್ಯ ಚೇಷ್ಟೆ ಮಾಡುತ್ತಿದ್ದ.

"ಪ್ರಭು ನನಗ ಹಸಿವಿ ಆಗೇದ"

ಅವನಿಗೆ ಆಶ್ಚರ್ಯವಾಗಿರಬಹುದು. ಒಂದು ಕ್ಷಣ ತನ್ನ ಮುಖವನ್ನು ದಿಟ್ಟಿಸಿ ಸುಮ್ಮನಾಗಿದ್ದ. ಮುಂದೆ ದಾರಿಯಲ್ಲಿ ಸಿಕ್ಕ ಧಾಭಾದಿಂದ ತನಗೆ ಪರೋಟಾ, ಪಲ್ಯ ಕಟ್ಟಿಸಿ ತಂದು ಕೊಟ್ಟ. ತಾನು ತಿನ್ನಲಿಲ್ಲ ಆಮೇಲೆ ಅವನು ತನ್ನ ಕೈ ಹಿಡಿದುಕೊಳ್ಳಲಿಲ್ಲ ಎನ್ನುವುದು ತಡವಾಗಿ ಗಮನಕ್ಕೆ ಬಂದಿತ್ತು. ತನ್ನದೇ ರಕ್ತ, ಮಾಂಸಗಳಿಂದ ಮೂಡಿಬಂದ ಮಗ ಕೊನೆ ಉಸಿರು ಎಳೆಯುತ್ತಿದ್ದ ಅಪ್ಪನಿಗೆ ಅಂಟಿಕೊಂಡಿದ್ದ. ಮನಸ್ಸಿನೊಳಗೆ ನಕ್ಕಿದ್ದೆ. ತನ್ನಲ್ಲಿಯ ಭಾವನೆಗಳು ಸತ್ತು ಹೋಗಿವೆಯೇ ?

ಝಗ್ಗನೆ ಬೆಳಕು ಹೊತ್ತಿಕೊಂಡು ಕಣ್ಣಿನಲ್ಲಿ ಕತ್ತಲು ತುಂಬಿತು. ಕಾರಿಡಾರಿನಲ್ಲಿ ನಡೆಯುತ್ತಿದ್ದಂತೆ ಆಯಾಸವೆನಿಸಿತು. ಏದುಸಿರು ಬರುತ್ತಿತ್ತು.

"ಇನ್ನೂ ಎಷ್ಟು ದೂರ ಅದ ಪ್ರಭು."

"ಆಯ್ತು ಅವ್ವಾ ಬಂದs ಬಿಟ್ಟಿತು., ಅದು ಮೂರನೆಯ ಅಂತಸ್ತು, ಇದs ಹತ್ತು ನಂಬರಿನ ಖೋಲಿ."

ಪರವಾಯಿಲ್ಲ. ಮೈ ಅರಿವು ಕಳೆದುಕೊಂಡಿದ್ದರೂ ಗಂಡ ಎಂದಿನಂತೆ ಮೇಲಿನ ಅಂತಸ್ತಿನಲ್ಲೇ ಇದ್ದಾನೆ. ಅಲ್ಲಿ ಇದ್ದ ನರ್ಸ್ ಕುರ್ಚಿ ಇಟ್ಟು ಹೊರಗೆ ಹೋದಳು.

"ಇಲ್ಲೇ ಬಾ ಅವ್ವಾ. ಅಪ್ಪನ ಸ್ಥಿತಿ ಸುಧಾರಿಸಲಿಕ್ಕೆ ಹತ್ತೇದ ಅಂತ ಸ್ಪಶಲ್ ವಾರ್ಡಿಗೆ ಶಿಫ್ಟ್ ಮಾಡೀವಿ ಅಂತ ಡಾಕ್ಟರರು ಹೇಳಿದ್ರು, ಕೆಳಗೆ ಕೇಳಿಕೊಂಡs ಬಂದೇನಿ. ಇಲ್ಲೇ ಕುರ್ಚಿ ಮ್ಯಾಲೆ ಕೂಡ್ರು. ಆದರ ಅಪ್ಪಗ ಇನ್ನೂ ಎಚ್ಚರ ಬಂದಿಲ್ಲ. ದಿನಾs ಸಂಜೀಮುಂದ ತಂಗಿ ಬಂದಿರ್‍ತಾಳ. ಇವತ್ತ ನಾಟಕದ ರಿಹರ್ಸಲ್ ಮುಗಿಸಿಕೊಂಡು ಬರಲಿಕ್ಕೆ ಸ್ವಲ್ಪ ತಡಾ ಆಗ್ತದ ಅಂತ ಶುಭಾ ಹೇಳಿದ್ಳು. ನೀ ಕೂತಿರು. ನಾ ಔಷಧ ತೊಗೊಂಡ ಬರಲಿಕ್ಕೆ ಹೋಗ್ತೇನಿ, ಹಾಂ."

ಇಡೀ ಕೋಣೆಯನ್ನೇ ಗಂಜಿಗೆ ಹಾಕಿ ಇಸ್ತ್ರೀ ಮಾಡಿದ ಹಾಗಿತ್ತು. ಅಷ್ಟೊಂದು ಸ್ವಚ್ಛ, ಬಿಳಿ. ಮಂದ ಬೆಳಕು. ನಿಶ್ಶಬ್ದ ಕೋಣೆ. ಹತ್ತಿರ ಕುಳಿತು ಮೇಲೆ ನೋಡಲೇಬೇಕಲ್ಲ. ಹಾಸಿಗೆಗ ಅಂಟಿಕೊಂಡ ಹಾಗೆ ಒಂದು ಗುಪ್ಪೆ ಅಲ್ಲಿತ್ತು. ಬಿಳಿಗೋರಿಯಿಂದ ಮುಖವಷ್ಟೇ ಹೊರಗೆ ಚಾಚಿದ ಹಾಗಿತ್ತು. ಉದುರಿದ ಕಣ್ಣ ರೆಪ್ಪೆ. ಸೊರಗಿದ ಮುಖದಲ್ಲಿ ಎದ್ದು ಕಾಣುವ ಮೂಗು. ತಗ್ಗಿನಲ್ಲೊಂದೊಂದು ಗೋಲಿ ಇಟ್ಟ ಹಾಗೆ ಮುಚ್ಚಿದ ಗುಡ್ಡೆಗಳು, ಬೋಳುತಲೆ, ಇವನs ಅವನೇನು? ಅಥವಾ ಇದು ಬೇರೆ ಯಾರ ರೂಮೋs. ಪ್ರಭು ದಾರಿ ತಪ್ಪಿಲ್ಲ ಹೌದಲ್ಲ? ಬೇರೆ ಯಾವುದೋ ಗಂಡಸಿನ ಹತ್ತರ ಕೂಡ್ರಿಸಿ ಹೋಗಲಿಕ್ಕೆ ಪ್ರಭು ಏನ ಹುಚ್ಚ ಏನು? ಅಲ್ಲ, ಅವನs ಅವನು. ಮಹೇಶನ ಹೌದು. ಒಂದs ಒಂದು ಬೊಗಸಿ ಅಷ್ಟು ಮಿದುಳು. ಅದಕ್ಕ ಒಂದ ಸಣ್ಣ ತೂತು ಬಿದ್ದರ ಮನುಷ್ಯಾ ಇಷ್ಟ ಬದಲ ಆಗ್ತಾನ? ಇಷ್ಟು ಸಣ್ಣಾಗತಾನ? ಸೋಲತಾನ? ಆಂ ಇಷ್ಟು....

ಅಕ್ಕ, ಅತ್ತಿಗೆ, ಮದುವೆಗೆ ಬಂದ ಹೆಂಗಸರೆಲ್ಲ ನಿಂತು ನಗುತ್ತಿದ್ದಾಗ ಎರಡು ಪಾವಟಿಗೆಗಳನ್ನು ಒಮ್ಮೆಗೇ ಜಿಗಿಯುತ್ತ ಹಾರುತ್ತ-ಬೆಳ್ಳಿ ಗೆಜ್ಜೆಗಳ ಕಿಣಿ ಕಿಣಿನಾದ ಕಿವಿ ತುಂಬುತ್ತಿರುವಾಗ ಪರಿಮಳ ತುಂಬಿದ ಕೋಣೆಯಲ್ಲಿ ಕಾಲಿಟ್ಟ ಅನು ಉದ್ವೇಗ, ಗಾಬರಿ, ನಾಚಿಕೆ, ಏದುಸಿರು, ಕಾಣದಂತೆ ಕಣ್ಣುಮುಚ್ಚಿ ಬಾಗಿಲಿಗೊರಗಿ ನಿಂತುಬಿಟ್ಟಳು. ಸಿಗರೇಟು, ಬೆವರು, ಸುಗಂಧ ಮಿಶ್ರಣದ ಒರಟು ಕೈಗಳೆರಡು ಅವಳನ್ನು ತಬ್ಬಿಕೊಂಡವು. ತಲೆ ತಿರುಗಿತೆ? ಮೈಮೇಲಿನ ಒಡಿತ ಇನ್ನೂ ಬಿಗಿಯಾಯಿತು. ಅಬ್ಬ! ಏನು ಭೀಮಬಲ ಆ ತೋಳುಗಳಲ್ಲಿ! ಮೈ ಎಲುಬೆಲ್ಲ ಲಟಕ್.... ಲಟಕ್

ತೋಳು ಸವರಿಕೊಂಡಳು. ಹಾಗೇ ಕೈ ಸರಿಯುತ್ತ ಭುಜಕ್ಕೆ ಬಂದು ನಿಂತಿತು. ಅಲ್ಲೊಂದು ಸಣ್ಣ ಕಲೆ. ಮೊದಲ ರಾತ್ರಿಯ ಗುರುತು. ಮರುದಿನ ನೀರು ಎರೆಯಲು ಬಂದ ಅಕ್ಕನಿಂದ ಮುಚ್ಚಿಡಲು ಸಾಧ್ಯವಾಗಿರಲಿಲ್ಲ. ಕ್ರೀಮ್ ತಂದು ಸವರಿ ನಗುತ್ತ ಕಿವಿಯಲ್ಲಿ ಪಿಸುಗುಟ್ಟಿದಳು. "ನಿನ ಗಂಡ ಭಾಳ ಜೋರ ಅದಾರ ಅನು." ತನ್ನ ಕೆಂಪು ಕೆನ್ನೆ, ಕಿವಿ ಉತ್ತರ ಕೊಟ್ಟಿದ್ದವು. ಅದೇ ಜೋರು ತನ್ನ ಜೀವನದ ದಿಕ್ಕನ್ನು ಬದಲಿಸಿತ್ತು.

ಅವಳ ಕೈ ಹೊದಿಕೆಯೊಳಗೆ ಸೇರಿ ಹುಡುಕಿತು. ತೆಳುವಾದ ಕಟ್ಟಿಗೆಯಂಥ ನಿರ್ಜೀವ ತೋಳು, ಕೈ ತುಂಬ ನರಗಳು, ಎಲುಬು-ಅವನು ಹೋದಲ್ಲಿ ಬಂದಲ್ಲಿ ಒಂದು ಮುಗುಳ್ನಗೆ, ಮಿಂಚು ನೋಟ, ಕೈಕುಲುಕು, ಹಲೋಗಳಿಗೆ ಕಾದಿದ್ದವರಲ್ಲಿ ಕಷ್ಟಪಟ್ಟು ಒಳನುಗ್ಗಿ ಅವನ ತೋಳುಗಳಲ್ಲಿ ಬಂಧಿತಳಾಗಲು ಕಾತರದಿಂದ ಕ್ಷಣಗಳನ್ನು ಎಣಿಸುತ್ತಿದ್ದವಳು ತಾನು. ಒಂದು ದಿನ....

"ಏಃ ಹುಡುಗೀ ನಿನ್ನ ಬಲೀಗೆ ಬಿದ್ದೆ ನಾನು" ಎಂದು ತನ್ನ ಉದ್ದ ಹೆರಳು ಕುತ್ತಿಗೆಗೆ ಸುತ್ತಿಕೊಂಡು ಕಟ್ಟಿಹಾಕಿದ್ದ ಆ ಬಂಧನದಲ್ಲಿ ಸಂತೋಷ ಪಡುತ್ತಿದ್ದ ತನ್ನನ್ನು ಎಷ್ಟು ಹಗುರವಾಗಿ ಒಂದಿಷ್ಟು ಗುರುತೂ ಉಳಿಯದಂತೆ ಬಿಚ್ಚಿ ಹಾಕಿ ಬಿಟ್ಟಿದ್ದ.

ಒಂದು ಸಂಜೆ ಮಹೇಶನ ದಾರಿ ಕಾಯುತ್ತಿರುವಾಗ ಅಕ್ಕನ ಮಗಳು ಅನಿತಾ ಬಂದಿದ್ದಳು. ಅವಳ ಗೆಳತಿ ಸುನೀಲಾ ಮಹೇಶನ ಸಿತಾರಾ ಕಾರ್ಯಕ್ರಮ ಕೇಳಿದಳಂತೆ. ಅವಳಿಗೂ ಕಲಿಯಬೇಕೆಂದು ಆಸೆಯಾಯಿತಂತೆ, ಕರೆದುಕೊಂಡು ಬಂದಿದ್ದಳು.

"ಅವರಿಗೆ ಕಾಲೇಜು, ಸಂಘ, ಸಂಗೀತ, ಭಾಷಣ ಅಂತ ವೇಳೇನ ಸಿಗೋದಿಲ್ಲ. ಸಿತಾರ ಯಾರಿಗೂ ಕಲಿಸೂದಿಲ್ಲ. ಇರಲಿ ಕೂತುಕೋ ಭೆಟ್ಟಿ ಆಗೂವಂತೆ." ತನ್ನ ಮಾತು ಸುಳ್ಳಾಗಿತ್ತು. ಸುನೀಲಾಳಿಗೆ ಸಿತಾರ ಕಲಿಸಲು ಮಹೇಶ ಒಪ್ಪಿಬಿಟ್ಟಿದ್ದ. ಅಟ್ಟದ ಮೇಲಿನ ಕೋಣೆ ಏಕಾಂತಕ್ಕೆ ಸರಿಯಾದ ಜಾಗವಾಗಿತ್ತು. ಮಹೇಶ ಒಪ್ಪಿದ್ದು ಅವಳು ಕೊಡುವ ಹಣಕ್ಕಾಗಿ ಅಲ್ಲ. ಇದರ ಹಿಂದೆ ಏನೋ ಒಂದು ಇದೆ ಎನ್ನುವ ಸಂಶಯ ತನ್ನ ಮನಸ್ಸಿನಲ್ಲಿ ಬೆಳೀತಾನೇ ಇತ್ತು. ಮೊದಲು ಸುನೀಲಾ, ಆಮೇಲೆ ಗಾಯತ್ರಿ, ಅನಂತರ ಮಾಲಾ- ಛೇ ಮಾಲಾ ಮೊದಲೋ ತನಗೆ ನೆನಪಿಲ್ಲ. ಅಂತೂ ಒಬ್ಬೊಬ್ಬರನ್ನು ಅಪ್ಪಿ ಮುದ್ದಾಡಿದ ತೋಳುಗಳು ಇವೆ. ಆ ಅಪ್ಪುಗೆಯ ಮಧ್ಯೆ ತಾನು ನುಸುಳಲು ಸಾಧ್ಯವಾಗದೆ ತಾನು ಕೂಗಾಡಿದಾಗ,

"ದೊಡ್ಡ ಕನ್ನಡಿಯೊಳಗ ನಿನ್ನ ಮೈ ನೋಡಿಕೊಂಡೀಯೇನು? ಅನು ಮೊದಲ ಹ್ಯಾಂಗಿದ್ದಿ. ಎರಡು ಮಕ್ಕಳು ಆಗೂದರೊಳಗಃ ಡ್ರಮ್ಮು ಆಗೀದಿ. ನೋಡು ಆ ಗಾಯತ್ರೀನ, ಕಾಲೇಜಿಗೆ ಹೋಗೂ ಮಗಾ ಅದಾನಂತ ಅನಸೂದಿಲ್ಲ. ಮೈಕಟ್ಟು ಹ್ಯಾಂಗ ಇಟಕೊಂಡಾಳ."

"ಒಬ್ಬ ಹೆಂಡತಿ ಸಾಕಾಗೂದಿಲ್ಲೇನ ನಿಮಗ? ಅಥವಾ ನನ್ನ ಸಹವಾಸನ ಸಾಕಾಗೇದೋ. ಅಂತೂ ಒಬ್ಬ ವಿಚಿತ್ರ ಮನುಷ್ಯರು ನೀವು."

ಒಂದಿಷ್ಟೂ ಹಿಂದೆ ಮುಂದೆ ನೋಡದೆ ಉತ್ತರ ಕೊಟ್ಟಿದ್ದ ಮಹೇಶ, "ಅನೂ ಈ ಟೇಬಲ್ ಮೇಲೆ ತಿನಸು ಇಟ್ಟೀಯಲ್ಲಾ. ಇದು ದೋಸೆ, ಇದು ಚಕ್ಕಲಿ, ಇದು ಜಾಮೂನು, ಒಂದೊಂದಕ್ಕೂ ಒಂದೊಂದು ಬೇರೆ ರುಚಿ. ದಿನಾಃ ದೋಸೆ ತಿಂದು ತಿಂದು ವಾಕರಿಕಿ ಬಂದಃದ ನನಗ. ನನಗ ಹಸಿವಿ ಹೆಚ್ಚು, ಚಪಲ ಹೆಚ್ಚು. ಎಲ್ಲಾ ಥರಾ ತಿಂದರಃ ನನಗ ಸುಖಾ."

"ಏನ ಸುಖಾನೋ ಮಣ್ಣೋ, ಹೀಗಾದರ ಮದುವಿ ಅರ ಯಾಕ ಬೇಕು. ಅಂತೂ ನಿಮ್ಮ ಗುಣಾ ತಿಳದಂಗ ಆತು. ಸಂಸಾರ ಮಾಡಾಕ ಸುರುಮಾಡಿ ಹನ್ನೆರಡ ವರ್ಷ ಆದ್ವು. ಅಲ್ರೀ. ನಾನೂ ನಿಮ್ಮಂಗ ಬ್ಯಾರೆ ರುಚಿ ನೋಡಿದರ?" ಮಹೇಶನ ಬಾಯಿ ಮುಚ್ಚಿದೆ ಅಂತ ಬೀಗಿದ್ದೆ. ಉಹುಂ - ನಿರ್ಲಜ್ಜ "ನಾನು ಉದಾರ ಬುದ್ಧಿಯಾಂವಾ ಅದೀನಿ ಅನೂ, ನೀನು ಬೇಕಾದ್ದ ಮಾಡಲಿಕ್ಕೆ ಸ್ವತಂತ್ರ ಅದೀ" ಅಂದಿದ್ದ.

ಅವನ ಜಂಭದ ಮಾತು ಕೇಳಿ ಮೈ ಉರಿದು ಹೋಗಿತ್ತು. ಹೆಣ್ಣಿಗೆ ಸ್ವಾತಂತ್ರ್ಯ ಕೊಟ್ಟರೂ ಅವಳು ಬೇಕಾದ್ದು ಮಾಡೋದಿಲ್ಲ ಅನ್ನೊ ಖಾತ್ರಿಯಿಂದಲೇ ಆ ಮಾತು ಹೇಳಿದ್ದು. ಮಾನವ ಪ್ರಾಣಿಗಳಲ್ಲಿ ಬುದ್ಧಿ ಹೇಗೆ

ಎಲ್ಲರಲ್ಲಿಯೂ ಒಂದೇ ಸ್ತರದಲ್ಲಿ ಇರೋದಿಲ್ಲವೋ ಹಾಗೆ ಕಾಮವೂ ಇರೋದಿಲ್ಲ ಅನ್ನೋದು ಅವನಿಗೆ ಚೆನ್ನಾಗಿ ಗೊತ್ತು. ಅದರಲ್ಲೂ ಹನ್ನೆರಡು ವರುಷಗಳ ದಾಂಪತ್ಯ ಜೀವನದಲ್ಲಿ ತನ್ನಲ್ಲಿಯ ಕಾಮ ಆರುತ್ತ ಬಂದದ್ದನ್ನೂ ತಿಳಿದಿದ್ದ. ತನ್ನಿಂದ ಏನೂ ಸಾಧ್ಯವಿಲ್ಲವೆಂದು ನಂಬಿಬಿಟ್ಟಿದ್ದ. ಅವನ ನಂಬಿಕೆಯನ್ನು ಸುಳ್ಳು ಮಾಡಲು ತಾನೊಮ್ಮೆ ಪ್ರಯತ್ನಿಸಿದ್ದಳು. ದುರ್ಗಕ್ಕೆ ಹೋದ ಮೇಲೆ ಕ್ಲಬ್‌ನಲ್ಲಿ ಪರಿಚಯವಾದ ಮೂರ್ತಿಯೊಡನೆ ಒಂದು ರಾತ್ರಿ ಕಳೆದಿದ್ದಳು. ಅದೊಂದು ಕೆಟ್ಟ ಅನುಭವ. ಈ ತೋಳುಗಳನ್ನು ನೆನೆಯುತ್ತ ನೆನೆಯುತ್ತ....

ಗುಲಾಬಿ ಉಗುರಿನ ನೀಳ ಬೆರಳುಗಳು ಈಗ ಕಟ್ಟಿಗೆಯ ಚೂರುಗಳು. ಜಡೆ ಜಗ್ಗಿ ಕುರುಳು ಸವರಿ, ಕೆನ್ನೆ ನೇವರಿಸಿ, ಗದ್ದ ಹಿಡಿದೆತ್ತುವ ನೀಳ ಬೆರಳುಗಳು ಸಿತಾರಿನ ಮೇಲೆ ಓಡಿದಷ್ಟೇ ಸರಾಗವಾಗಿ ತನ್ನ ದೇಹವನ್ನೂ ಮೀಟುತ್ತಿದ್ದರು. ಆ ಬೆರಳುಗಳನ್ನೆತ್ತಿ ಕೆನ್ನೆಗೆ ಒತ್ತಿಕೊಂಡು ಹಾಗೇ ಹೊದಿಕೆಯ ಒಳಗೆ ಇರಿಸಿದಳು. ಮತ್ತೆ ಚಲಿಸುವವೇ ಇವು. ಉಸಿರು ಬಿಟ್ಟಳು.

ಕೈ ಗಂಟುಗಂಟಾದ ಪಾದಗಳನ್ನೀಗ ಸವರುತ್ತಿತ್ತು.

ಸಂಜೆಗತ್ತಲು ಮನೆಯಲ್ಲಿ ಇಣುಕುತ್ತಿರುವ ಹೊತ್ತಿನಲ್ಲಿ ಅವ್ವ ದೇವರ ಮುಂದೆ ದಿಂಪ ಹಚ್ಚಿ ಅಜ್ಜಿಗೆ ಕಾಲು ಮುಟ್ಟಿ ನಮಸ್ಕಾರ ಮಾಡಿ ಅಲ್ಲಿಯೇ ಇರುವ ಅಪ್ಪನ ಪಾದಕ್ಕೂ ಹಣೆ ಹಚ್ಚುತ್ತಿದ್ದಳು. ಅಪ್ಪ ಅವಳನ್ನು ಭುಜ ತಟ್ಟಿ ಎಬ್ಬಿಸುವುದನ್ನು ನೋಡುವುದರಲ್ಲಿ ನಮಗೆ ಖುಷಿ. ಮಕ್ಕಳ ಕಣ್ಣಿಗೆ ಬೀಳುತ್ತಿದ್ದ ಅವರ ಸರಸ ಅದೊಂದೇ....

ತನ್ನ ಹುಟ್ಟುಹಬ್ಬದ ದಿನ ಅಂದು ರಜ ಹಾಕಿ ಸಂಭ್ರಮದಿಂದ ಎಲ್ಲ ಕೆಲಸ ಮುಗಿಸಿ ತಲೆಗೆ ನೀರು ಹಾಕಿಕೊಂಡು, ಹೊಸ ಸೀರೆ ಉಟ್ಟು ಕನ್ನಡಿಯ ಮುಂದೆ ನಿಂತಾಗ ಥಟ್ಟನೆ ಅವ್ವನ ನೆನಪಾಗಿತ್ತು. ಗಂಡನ ಕೋಣೆಗೆ ಹೋಗಿ ಮಂಡಿ ಊರಿ ಬಗ್ಗಿ ಪಾದ ಹಿಡಿದಿದ್ದಳು. ಮಹೇಶ ತಟ್ಟನೆ ಎದ್ದು ನಿಂತು,

"ಅನು, ನನ್ನ ಅಷ್ಟು ದೊಡ್ಡಾವನ ಮಾಡಬೇಡಾ. ನಾನು ದುರ್ಬಲ, ಕಾಮ, ಕ್ರೋಧ, ರಾಗ, ದ್ವೇಷ ಎಲ್ಲಾ ಇರೂ ಮನುಷ್ಯಾ, ನೀ ಇಷ್ಟು ಭಾವುಕ ಆಗಬೇಡಾ." ಅಪ್ಪಿಕೊಂಡು ಪಟ ಪಟ ಮುತ್ತು ಕೊಟ್ಟಿದ್ದ.

ಕೈ ಮೈ ಮರೆತು ಎದೆ ಸವರುತ್ತಿತ್ತು.

ನೋವು, ನಿರಾಶೆ, ಕಷ್ಟ ಸುಖ ಎಲ್ಲ ಹೊತ್ತಿನಲ್ಲಿ ಈ ಎದೆಯ ಹರಹಿನಲ್ಲಿ ಹೂತುಹೋದವಳು ತಾನು. ಈಗ ಇಲ್ಲೇನಿದೆ? ಬರಿ ಎಲುಬಿನ ಗೂಡು. ಜೀವ ಇದೆಯೇ? ಎಲ್ಲಿ ಸಪ್ಪಳ ಕೇಳುವುದೇ ಇಲ್ಲ. ಇನ್ನಷ್ಟು ಹತ್ತಿರ ಬಗ್ಗಿ ಎದೆಗೆ ಕಿವಿ ಇಟ್ಟಳು. ಗೂಡಿನಲ್ಲೊಂದು ಹಿಡಿಯಷ್ಟು ಪುಟ್ಟ ಹಕ್ಕಿ ಟುಕು ಟುಕು ಜೀವ ಹಿಡಿದು ರೆಪ್ಪೆ ಬಡಿಯುತ್ತಿದೆ. ತುಂಬಾ ಕ್ಷೀಣವಾಗಿದೆ. ಟುಕು ಟುಕು ನಿಂತು ನಿಂತು ಬಡಿಯುತ್ತಿದೆ. ಯಾವಾಗ ನಿಂತೇ ಹೋಗುವುದೋ ಗೊತ್ತಿಲ್ಲ. ತಾನು ಕೇಳುತ್ತಿರುವಾಗಲೇ ನಿಂತುಬಿಟ್ಟರೆ? ಭಯವಾಯಿತು. ದುಃಖ ಉಕ್ಕಿ ಬಂದಿತು. ಕಣ್ಣು ತುಂಬಿ ಹರಿಯಿತು., ಎದೆಯ ಮೇಲಿನ ಬಟ್ಟೆ ನೆನೆಯಿತು. ಇಲ್ಲ, ಈ ಹಕ್ಕಿ ಹಾರಿ ಹೋಗಲು ಬಿಡಬಾರದು ಗಟ್ಟಿಯಾಗಿ ಹಿಡಿದುಕೊಳ್ಳಬೇಕು. ಇನ್ನಷ್ಟು ಎರಡೂ ಕೈ ಚಾಚಿ ಕೊರಡನ್ನು ತಬ್ಬಿಕೊಂಡಳು, ತಲೆ, ಮುಖ, ಎದೆ, ಕೈ, ಕಾಲು, ಪ್ರೀತಿಯಿಂದ ಸವರಿದಳು. ಸವರುತ್ತ -ಸವರುತ್ತ ಕಾಲ ಸರಿದದ್ದೂ ತಿಳಿಯಲಿಲ್ಲ. ಕೊರಡು ಸರಿಯಿತೆ? ಬಡಿತ ಸ್ಪಷ್ಟವಾಯಿತೆ ? ಬೆರಳು ಚಲಿಸಿದವೆ ? ಗುಡ್ಡೆ ಅಲುಗಾಡಿದವೆ ? ಕೆನ್ನೆಯ ನರಗಳು ಕುಣಿದವೆ? ಹಕ್ಕಿಯ ಟುಕು ಟುಕು ಟುಕು ಜೋರಾಯಿತು? ಉಸಿರು ಹೊರ ಚೆಲ್ಲಿತೆ?

ಮಗ; ಮಗಳು ಡಾಕ್ಟರರೊಡನೆ ಒಳಗೆ ಬರುತ್ತಿದ್ದಂತೆ ಅನೂ ಕುರ್ಚಿ ಬಿಟ್ಟೆದ್ದು ದಡ ದಡ ಹೊರಗೆ ಹೋದಳು.

***

■■

# ಮರಕ್ಕಾ ಒಂದೀಟ ಪಿರೀತಿ ಬೇಕ

ಹೆದ್ದಾರಿಯಿಂದ ಬಲಕ್ಕೆ ಹೊರಳಿ ಮಣ್ಣಿನ ತಗ್ಗು ದಿನ್ನೆಯ ದಾರಿಯಲ್ಲಿ ತುಸು ದೂರ ನಡೆದರೆ ಸಿಗುವುದೇ ಹೊನ್ನೂರು. ಜಮೀನು ಮುಳುಗಡೆಯಾದ ಮೇಲೆ ಕಟ್ಟಿದ ಹೊಸ ಹಳ್ಳಿಯಿದು. ಸಂಗನಗೌಡರ ಮಗ ಪ್ರಕಾಶ ಎಂ.ಎ. ಕಲಿತವ. ಅವನಿಂದಾಗಿ ಹೊನ್ನೂರಿನಲ್ಲಿ ಒಂದು ಬಾಲವಾಡಿ, ಪ್ರಾಥಮಿಕ ಶಾಲೆ, ಆರೋಗ್ಯ ಕೇಂದ್ರದ ಒಬ್ಬ ನರ್ಸ್, ಲಗುಮವ್ವನ ಗುಡಿ, ಈಶ್ವರ ದೇವಸ್ಥಾನ, ಕಲ್ಲಿನ ಗೋಡೆಯ ಕೆಂಪು - ಕರಿ ಹಂಚಿನ ಮನೆಗಳು, ಅಲ್ಲೊಂದು - ಇಲ್ಲೊಂದು ಅಂಟೆನಾಗಳು - ಇತ್ಯಾದಿ ಎಲ್ಲ ಇವೆ. ಜನರಿಗೆ ಅನುಕೂಲವಾಗುವಂತೆ ಕೊಳವೆ ಬಾವಿ, ವಿದ್ಯುತ್ ದೀಪಕ್ಕೂ ಓಡಾಡುತ್ತಿದ್ದ. ಚುನಾವಣೆ ಸಮೀಪಿಸುತ್ತಿದ್ದರಿಂದ ಕೆಲಸಗಳೂ ಬೇಗ ಆಗುತ್ತಿದ್ದವು. ಇಲ್ಲಿ, ಹೊನ್ನೂರಿನಲ್ಲಿ ಬಡವ - ಬಲ್ಲಿದರೆನ್ನದೆ ಎಲ್ಲರಿಗೂ ಮನೆ ಕಟ್ಟಲು ನಾಲ್ಕು ಗುಂಟೆ ಜಾಗ, ಊಳಲು ನಾಲ್ಕು ಎಕರೆ ಭೂಮಿ ಇದೆ. ಹಳ್ಳಿಯಲ್ಲಿ ಕಾಲಿಟ್ಟರೆ ಮೊದಲು ಸಿಗುವುದೇ ಸಮಗಾರ ಲಚ್ಚಣ್ಣನ ಮನೆ. ಪಕ್ಕದ್ದು ಸಿದ್ಧಣ್ಣಂದು, ಎದುರಿನದು ವಿಠ್ಠಲರಾಯರದು. ಸಂಗನಗೌಡರು ಮತ್ತು ಸಾಬರು, ಈರಯ್ಯ ಸ್ವಾಮಿ, ಬ್ಯಾಡರ ಸತ್ಯಪ್ಪ, ಜಾಡರ ಶಿವಣ್ಣ, ಕುರುಬರ ಅಪ್ಪಯ್ಯ ಹೀಗೆ ಪಟ್ಟಿ ಬೆಳೆಯುತ್ತದೆ. ಹೆಚ್ಚು ಕಡಿಮೆ ಎಲ್ಲರ ಉದ್ಯೋಗ ಒಕ್ಕಲುತನ. ಪಡ ಭೂಮಿಯನ್ನು ಸಾಗುವಳಿ ಮಾಡುತ್ತ ಬದುಕುತ್ತಿದ್ದವರಿಗೆ ಮಾತುಕತೆ, ಕೊಡ-ಕೊಳ್ಳುವಿಕೆ, ಜಗಳ ಬಯ್ಗುಳ ಎಲ್ಲ ಸಹಜವಾದದ್ದೇ. ಅಂಥ ಒಂದು ದಿನ ಸಿದ್ದಣ್ಣನ ಹೆಂಡತಿ ಕಮಲವ್ವ ಲಚ್ಚಣ್ಣನ ಹೊಸ ಹೆಂಡತಿ ಚಂದ್ರವ್ವನನ್ನು ಕೇಳಿದಳು:

"ಮುದುಕಿ ಹ್ಯಾಂಗ ಅದಾಳಬೇ ?"

"ಕೌದಿ ಮ್ಯಾಲೆ ಹೆಣಾ ಬಿದ್ದಾಂಗ ಬಿದ್ದಾಳ. ಉಸರ ಒಂದು ಆಡತೈತಿ."

"ಇನ್ನೇನ ಭಾಳ ದಿನಾ ಕಳಿಯಾಕಿಲ್ಲ. ನಾಕ ದಿನಾ ಆತು ನೆಳ್ಳೂ ದನೀನು ಕೇಳಿಲ್ಲ. ಅದಕ್ಕs ಕೇಳಿನ್ನಿ."

"ಟೊಂಕ ಮುರದರೂ ತಿಕ ಹೊಸೀತಿದ್ಲು. ಹಿತ್ತಲಕ ಹೋಗ್ತಿದ್ಲು, ನಾ ಬರೂಕಿಂತ ಮುಂಚೇಕ ಗಟ್ಟ್ಯಾಗಿ ಮಲಗಿಬಿಟ್ಟಾಳಲ್ಲ:"

"ಚಂದ್ರವ್ವ, ನಿಮ್ಮಕ್ಕ ಚೆನ್ನವ್ವನ ಮ್ಯಾಲೆ ಲಚ್ಚಣ್ಣ ಜೀವಾ ಬಿಡತಿದ್ನಬೇ. ಆಕೀನೂ ಹಾಂಗs ಗಂಡನ್ನ, ಮಕ್ಕಳ್ನ, ಅತ್ತಿನ ಭಾಳ ಚೆಂದಾಗಿ ಜ್ಯಾಪಾನಾ ಮಾಡವಳು. ಒಂದ ದಿನಾನು ಜಗಳ ಇಲ್ಲಾ, ಬಯ್ಗುಳ ಇಲ್ಲಾ, ಕುಲು ಕುಲು ನಕ್ಕೋತ ಇರುವಾಕಿ."

"ಹೌಂದ ಚಿಗವ್ವ, ಹಂತಾ ಅಕ್ಕ ಇಟ್ಟ ಲಗೂನ ಸಾಯ್ತಾಳ ಅಂತ ಯಾರ ತಿಳಿದಿದ್ರು. ನಮ್ಮಕ್ಕ ಕಳ್ಳಿನಾಕಿ, ಭಾಳ ಪಿರೀತಿ ಇದ್ನಬೇ ನನ್ನ ಮ್ಯಾಲೆ. ಮಾವ ಆಕಿಗೇನ ತಂದುಕೊಟ್ಟರೂ ಊರಿಗೆ ಬಂದಾಗ ನನಗೂ ಒಂದೀಟು ಕೊಡೂವಾಕಿ."

"ನಮ್ಮ ಚಂದ್ರವ್ವ ಗಂಡ ಸತ್ತು, ಮಗಳ್ನ ಕರಕೊಂಡು ತವರುಮನೀ ಸೇರ್ಯಾಳ. ಅತ್ತಿಗೆಯ ಕಣ್ಣೀರು ಕೂಳು ಒಂದ ಮಾಡಸ್ತಾರ ಅಂತ ಚೆನ್ನವ್ವ ನನ್ನ ಮುಂದ ಮರಾ ಮರಾ ಮರಗತಿದ್ನಬೇ. ನಿನಗ ಒಂದು ಜೋಡೀ ಹುಡುಕಿ ಉಡುಕಿ ಮಾಡಿ ಕೊಡಬೇಕ ಅಂತ ಚಿಂತೀ ಮಾಡತಿದ್ಲು. ಈಗ ನೋಡು ನಿನ್ನ ನಸೀಬು, ಆಕಿ ಸತ್ತು ಮಾವನ್ನ ನೀನು ಮಾಡಿಕೊಳ್ಳೂ ಹಾಂಗ ಆತು. ಯಾವಾಗ ಏನಾಗ್ತೈತೊ ಯಾಂಬಲ್ಲ."

"ಈ ಮದಿವೀ ಮಾಡದs ನನ್ನಟಕ ನನ್ನ ಬಿಟ್ಟಿದ್ದರ ಬೇಸಿತ್ತ ನೋಡ ಚಿಗವ್ವಾ" ಚಂದ್ರವ್ವ ಕಣ್ಣು ಒರೆಸಿಕೊಂಡಳು.

"ಯಾಕ ಚಂದ್ರವ್ವ, ಲಚ್ಚಣ್ಣನಂತಾ ಗಂಡ ಸಿಗಾಕ ಪುಣ್ಯಾ ಮಾಡಿರಬೇಕ. ಹೊಲದಾಗ ದುಡಿಯಾಂವಾ, ಉಣ್ಣಾಂವಾ, ಹ್ಯಾಣ್ತಿ ಮಕ್ಕಳಾ ಅಂತ ಹಚಿಕೊಳ್ಳಾಂವ. ಉಳದ ಗಣಸರಗತೇ ಏನ ಕುಡೀತಾನ, ಬಡೀತಾನ, ಬ್ಯಾರೆ ಹೆಣ್ಣಿನ ಸಂಗತಿ ಮಾಡ್ತಾನ, ಏನು ಕಡಿಮಿ ಆಗೇತಿ ನಿನಗ ? ಗಂಡ ಸತ್ತ ಮುಂಡಿ ಅಂತ ಊರ ಗಣಸರ ಕಣ್ಣಿಗೆ ಮದುವೀ ಮಾಡಿಕೊಂಡ ನೆಳ್ಳಾಗ ಅದೀ. ಯಾಕ ಅಳತೀ?"

"ಹೊರಗಿನಿಂದ ನೋಡಾವರಿಗೆ ಎಲ್ಲಾ ಚಂದ, ನನ ಸುಕಾ ನಿಮಗೇನ ಗೊಂತ ಆಗತೈತಿ."

"ಹಾಂs ಆ ಮುದುಕಿ ಒಂದ ಐತಿ, ತೊಳದು ಬಳದು ಮಾಡಬೇಕಾಗತೈತಿ ಅಂತ ಬ್ಯಾಸರಾ ಮಾಡಿಕೊಂಡೀಯೇನ. ನೀ ಸಣ್ಣಾಕಿ, ತಿಳವಳಿಕಿ ಕಮ್ಮಿ. ನಮ ಜೀವಾ ಯಾವಾಗ ಹೋಗತೈತಿ ನಮಗ ಗೊಂತಿಲ್ಲ. ಮುಪ್ಪಾನ ಮುದುಕರಾಗಿ ಸಗತೀ ಕಳಕೊಂಡ ಹಾಸಿಗೀ ಹಿಡದ ಬಿದ್ದರ ಏನ ಮಾಡಬೇಕಬೇ. ಇದು ಯಾರಿಗೂ ತಪ್ಪಿದ್ದಲ್ಲ; ನಮಗೂ ಒಂದು ದಿನಾ ಹಿಂತಾದ ಬರೂದ ಅಂತ ತಿಳಿಕೊಂಡ ಇದ್ದವರ ಚಾಕರಿ ಮಾಡಬೇಕಬೇ. ಆ ಮಕ್ತುಂ ಸಾಬನ ಸೊಸಿ ಪಾತಿಮಾನ ನೋಡ, ಮದುವಿ ಆಗಿ ಬಂದ ಸಂಗಾಟಲೆ ಗಂಡನ್ನ ಕರಕೊಂಡ ಬ್ಯಾರೆ ಆದ್ಲ. ಈರಯ್ಯ ಸ್ವಾಮೇರ ಅವ್ವ ಮೊನ್ನಿ ನನ ಮುಂದ ಅಳತಿತ್ತಬೇ. ತನ್ನ ಸೊಸಿ ನಾಯಿಗೆ ಕೂಳ ಹಾಕಿದ್ಹಾಂಗ ಮುಕ್ಕಾಟಿಲೆ ರೊಟ್ಟಿ ಎತ್ತಿ ಒಗೀತಾಳಂತ, ಹಿಂಗ ಮಾಡಿದರ ದೇವರು ಮೆಚ್ಚಾಕಿಲ್ಲ, ನೀ ಗುಣವಂತಿ ಅದೀ ಅಂತ ಹೇಳತೇನು."

"ಚಿಗವ್ವಾs ನಾ ದಗದಾ ಮಾಡಾಕ, ಮುದಕೀ ಚಾಕರೀ ಮಾಡಾಕ ಹಿಂದ ಮುಂದ ನೋಡಂಗಿಲ್ಲ. ನೀನs ನೋಡತೀಯಲ್ಲ, ಮುದುಕೀನ್ನ ಹ್ಯಾಂಗ ಜ್ಯಾಪಾನಾ ಮಾಡತೀನಿ ಅಂತ. ಹೇಲು, ಉಚ್ಚಿ ಬಳೀತಿನಿ. ನೀರ ಹಾಕ್ತೀನಿ, ಸೀರಿ ಉಡಸ್ತೀನಿ. ಏಟ ಮಾಡಿದರೂ ದರಕಾರ ಇಲ್ಲಾ. ಮುದಕೀ ಬಯ್ಗುಳ ತೆಪ್ಪೂದಿಲ್ಲ. ಗಂಡಗ ದಯಾ ಮಯಾ ಇಲ್ಲಾ, ನಾ ಏನ ಮನಶ್ಯಾಳ ಅಲ್ಲೇನು?" ಕಣ್ಣೀರು ಹರಿಯಬಿಟ್ಟಳು ಚಂದ್ರವ್ವ.

"ಯಾಕೋ ಭಾಳ ತ್ರಾಸಾಸಿಕೊಂಡೀ. ಮೊನ್ನಿ ರಾತ್ರಿ ಹಿತ್ತಲಕ ಬಂದಿನ್ನಿ. ನೀ ಅಳೂ ದನಿ ಕೇಳಸ್ತಿತ್ತು. ಯಾಕ ಲಚ್ಚಣ್ಣ ಹೊಡದ್ನೇನ ?"

"ಹುಂ, ಅವತ್ತs ಮುದುಕೀ, ಸೀರ್‍ಯಾಗ ಎರಡಕ್ಕ ಮಾಡಿಕೊಂಡಿತ್ತs. ಕೈ ಖಾಲಿ ಇದ್ದಿದ್ದಿಲ್ಲಾಂತ ಹಿತ್ಲದಾಗ ಕಲ್ಲಮ್ಯಾಲೆ ಚೆಲ್ಲಿದ್ದೆ. ದೀಪ ಹತ್ತಿದ ಮ್ಯಾಲೆ ತೊಳ್ಯಾಕ ಹತ್ತಿದೆ. ಎರಡೆರಡು ಕೊಡಾ ನೀರ ಹಾಕಿ ತೊಳೀಬೇಕ. ಗೊಮ್ಮಂತ ನಾರತಿತ್ತs ಆ ಹೊಲಸ ನಾತಿಗೆ ವಾಂತಿ ಬಂದ್ಹಾಂಗ ಆತು. ಸಿಟ್ಟೂ ಬಂತು. ಇನ್ನೂ ಏಸ ದಿನಾ ಈ ನಾತಾ ಕುಡಿಬೇಕೋ" ಅಂದೆ. ಬಂದಾವನ ಬಗ್ಗಿಸಿ ದಬಾ ದಬಾ ಗುದ್ದಿದ ನೋಡ ನನ್ನ ಗಂಡ-

"ನಮ್ಮವ್ವ ಸಾಯಲಿ ಅಂತೀಯಾ? ಯಾವ ಬೋಸಡೀನೂ ನಮ್ಮವ್ವನ ಚಾಕರೀ ಮಾಡೂದ ಬ್ಯಾಡಾ, ನಾ ಎಲ್ಲಾ ಮಾಡಿಕೊಂತೀನಿ." ಅಂತ ಒದರಿ ಹೋಗಿ ಅವ್ವನ ಮಗ್ಗಲದಾಗ ಮಕ್ಕೊಂಡ ಉಣ್ಣದ. ಅಂದ ಯಾರೂ ಉಣ್ಣಲಿಲ್ಲ. ಅವತ್ನಿಂದ ನನ್ನs ಸೂಸೀನ್ನ ಮುದುಕೀ ಹತ್ತರ ಹೋಗಾಕ ಕೊಟ್ಟಿಲ್ಲಬೇ. ಅಂತೂ ನನ ಗಂಡ ನನ ಮೈ ಮುಟ್ಟಿ ಹೊಡದ್ನಲ್ಲ ಅಂತ ಹಿಗ್ಗೂ ಆತು, ಅತ್ತೆ."

ಬಾಯಿ ತೆರೆದುಕೊಂಡೇ ಕುಳಿತಿದ್ದ ಕಮಲವ್ವ ಕೇಳಿದಳು. "ಏs ಏನs ಹುಡುಗೀ, ಏನ ಅಂತೀ. ಖಬರ ಐತೇನ ಮೈ ಮ್ಯಾಲೆ? ಮದುವಿ ಆಗಿ ವರ್ಸ ಆದ್ರೂ ಲಚ್ಚಣ್ಣ ನಿನ್ನ ಮುಟ್ಟಿಲ್ಲs?"

"ಸುಳ್ಳ ಹೇಳಿದ ಬಾಯಾಗ ಹುಳಾ ಬಿದ್ದಾವ ಚಿಗವ್ವಾ. ನಾ ಈ ಮನೀಗಿ ಬಂದ ದಿನಾ 'ನನಗ ಈಗ ಮದುವಿ ಬ್ಯಾಡಾಗಿತ್ತು. ಅವ್ವನ ಜುಲುಮೀಗೆ ನಿನ್ನ ಮಾಡಿಕೊಂಡೀನಿ' ಅಂತ ಹೇಳಿ ಹೆಗಲಿಗೆ ಕಂಬಳಿ ಹಾಕ್ಕೊಂಡ ಹೊಲಕ್ಕ ಹೋಗಿಬಿಟ್ಟ. ನಾ ಏನ ಎಳಕೊಂಡ ಬರಲ್ಯಾ ಅಂವನ್ನ. ಬರಬರತ ಬದಲ ಅದಾನು ಅನ್ನೂ ಆಸೇಕ ಸುಮ್ಮನಾದೆ. ಎಂದರ ಒಂದ ದಿನ ಮನಗಿದರ ಅವ್ವನ ಮಗ್ಗಲದಾಗs ಮಲಗಾಂವ. ಮುದುಕೀಗೂ ಗೊಂತ

ಆತು. ಅದೂ ವಟಾ ವಟಾ ಅಂತಿತ್ತು. ನಾನು ಅಡಿಗೀ ಮನ್ಯಾಗ ಪಿಳಿ ಪಿಳಿ ಕಣ್ಣಾ ಬಿಟಕೊಂತ, ಹೊಳ್ಯಾಡಕೊಂತ ಬರತಾನೇನೋ ಅಂತ ಜಪಾ ಮಾಡಿಕೊಂತ ಬಿದ್ದಿರತೇನಿ. ಚಿಗವ್ವಾs ನಂದೂ ಒಂದು ಬಾಳೇನ, ಹಿಂತಾ ಪರೀಂದ ಮದಿವಿ ಯಾಕ ಮಾಡಿಕೊಬೇಕಾಗಿತ್ತು?"

"ನೀನರೆ ಅಂವನ ಹಂತ್ಯಾಕ ಹೋಗಬೇಕಾಗಿತ್ತು. ಬೆಂಕೀ ಹಂತ್ಯಾಕ ಬೆಣ್ಣಿ ಇಟ್ಟರ ಕರಗದ ಬಿಟ್ಟೀತs!"

"ಬೆಳ್ಳ ಬೆಳತನಾ ಹಿಂಗs ಜೀಂವಾ ಮುಟಿಗ್ಯಾಗ ಹಿಡಂಕೊಂಡ ಹೆಜ್ಜಿ ಸಪ್ಪಳದ ದಾರೀ ನೋಡತಿನ್ನಿ. ಒಮ್ಮೊಮ್ಮೆ ಏಳತಿದ್ದಾ, ಹಾಂ, ಬಂದಾ ಇತ್ತಾಗ, ಬರಾಕ ಹತ್ಯಾನ ಅನ್ನೂದರಾಗ ಚರಿಗಿ ಎತ್ತಿ ಗಳಾಗಳಾ ನೀರು ಕುಡದವ್ನ ಹೋಗಿ ಬಿಡಾಂವ. ನಿದ್ದಿ ಹತ್ತದs ಹೊಳ್ಯಾಡಾಂವ. ಬೆಣ್ಣಿ ಆದರ ಕರಗೀತವ್ವ ಕಲ್ಲೇನು ಕರಗೀತು ?"

"ಅಂವಾ ಇನ್ನೂ ಚೆನ್ನವ್ವನನ್ನು ಮರೆತಿಲ್ಲಬೇ. ಅದಕ್ಕs ಹಾಂಗ ಮಾಡ್ಯಾನು. ನಿನ್ನ ನಸೀಬ ಖೊಟ್ಟಿ ಐತಿ ಮಗಳ, ಎಲ್ಲಾ ಮುಚ್ಚಿಟ್ಟಕೊಂಡ ಬಾಳೆ ಮಾಡತೀ. ನಿನ್ನ ಗುಣಾ ನೋಡಿ ನನಗೂ ಹಿಂತಾ ಮಗಳ ಒಂದ ಇರಬೇಕಾಗಿತ್ತು ಅಂತ ಅನಸತೈತಿ.

ಚಂದ್ರವ್ವನ ದುಃಖಕ್ಕೆ ಪೂರ ಬಂದು ಕಮಲವ್ವನಿಗೆ ತೆಕ್ಕೆ ಬಿದ್ದು ಅಳಹತ್ತಿದಳು. ಅವಳ ಕಣ್ಣೀರಿಗೆ ಅಣೆಕಟ್ಟು ಕಟ್ಟುವಂತೆ ಸೂಸಿ ಓಡುತ್ತ 'ಅಪ್ಪ ಬಂದ್ನಬೇ' ಎಂದು ಕೂಗಿ ಓಡಿಹೋದಳು.

***

ಚಂದ್ರವ್ವನ ಕಣ್ಣೀರ ಹೊಳೆಗೆ ಕೊಚ್ಚಿ ಹೋಗಬೇಕಾಗಿದ್ದ ಲಚ್ಚಣ್ಣ ಅಚಲನಾಗಿದ್ದ. ದೊಡ್ಡ ಬಂಡೆಗಲ್ಲಿನಂತೆ ಸ್ಥಿರವಾಗಿ ಕಲ್ಲು ಹೃದಯದವನಾಗಿದ್ದ. ಮೊದಲು ಅವನು ಹೀಗಿರಲಿಲ್ಲ. ಲಚ್ಚಣ್ಣ ಇದ್ದಲ್ಲಿ ನಗು, ಹರಟೆ, ಉತ್ಸಾಹ, ನಾಟಕ, ಬಯಲಾಟದಲ್ಲಿ ಅವನ ಪಾತ್ರ, ಕುಣಿತ ಎಲ್ಲರಿಗೂ ಅಚ್ಚುಮೆಚ್ಚು. ದ್ಯಾಮವ್ವನ ಗುಡಿ ಕಟ್ಟುವಾಗ, ಮಕ್ಕಳಿಗೆ ಸಾಲೆ ಸುರು ಮಾಡುವಾಗ ಊರಿಗೇ ಮುಂದಾಗಿ ಕೆಲಸಕ್ಕೆ ಕೈ ಹಚ್ಚುವವನೇ ಅವನು. ತಾನಂತೂ ಕಲಿಯಲಿಲ್ಲ. ಮಗನಾದರೂ ಕಲಿಯಲಿ ಎಂದು ಸಾಲ ಸೋಲ ಮಾಡಿ ಮಗನನ್ನು ಕಾಲೇಜಿಗೆ ಕಳಿಸಿದ್ದ. ಸಂಗನಗೌಡರ ಮಗ ಪ್ರಕಾಶನ ನಂತರ ತನ್ನ ಮಗನೇ ಬಿ.ಎ. ಆಗುವವ ಎಂದು ಚೆನ್ನಪ್ಪನೆದುರು ಮೀಸಿ ತಿರುವುತಿದ್ದ. ಮಗನಿಗೆ ಹಣ ಕಳಿಸಲು ಒಂದಕ್ಕೆರಡರಷ್ಟು ದುಡಿಯುವರು ಇಬ್ಬರೂ. ಚೆನ್ನವ್ವ ಸತ್ತ ನಾಲ್ಕು ವರ್ಷಗಳಲ್ಲಿ ಲಚ್ಚಣ್ಣ ನಡೆದಾಡುವ ನೆರಳು ಆಗಿದ್ದಾನೆಂದು ಊರವರೆಲ್ಲರ ವ್ಯಥೆ.

ಆ ಗುರುವಾರ ರಾಮಾಪುರದ ಸಂತೆಗೆ ಒಯ್ಯಲು ಹಣ್ಣುಗಾಯಿ, ಬದನೆಕಾಯಿಗಳ ಚೀಲ ಹೊತ್ತು ಹೆದ್ದಾರಿಗೆ ಬಂದವನನ್ನು ಶಿವಣ್ಣ ಹಿಂಬಾಲಿಸಿಕೊಂಡು ಬಂದಿದ್ದ. ಹೊರೆ ಇಳುವಿ ಬಸ್ಸಿನ ದಾರಿ ಕಾಯುತ್ತ ನಿಂತ ಲಚ್ಚಣ್ಣ, ಹತ್ತಿರ ನಿಂತ ಶಿವಣ್ಣನನ್ನು ನೋಡಿ ಹುಬ್ಬುಗಂಟಿಕ್ಕಿದ. ಹಟ ಸಾಧಿಸುವವನಂತೆ ಶಿವಣ್ಣ,

"ಸಂತೀಗೆ ಹೊಂಟ್ಯಾ ಲಚ್ಚಣ್ಣಾ" ಎಂದ. ಗೊತ್ತಿದ್ದೂ ಕೇಳುತ್ತಾನಲ್ಲ ಎಂದು ಸಿಟ್ಟಿನಿಂದ ನೋಡಿದ ಲಚ್ಚಣ್ಣನತ್ತ ನೋಡಿ ಶಿವಣ್ಣ ನಕ್ಕ.

"ನಿನ್ನೆ ದ್ಯಾಮವ್ವನ ಗುಡಿಗೆ ಯಾಕ ಬರಲಿಲ್ಲೋ ಲಚ್ಚಣ್ಣಾ. ಊರ ಹಿರೇರೆಲ್ಲಾ ಕೂಡಿದ್ರು. ಈ ಸರ್ತಿ ಜಾತ್ರಿಗೆ ಸತ್ಯಹರಿಶ್ಚಂದ್ರ ನಾಟಕಾ ಆಡಬೇಕಂತ ಠರಾಸಿದ್ರಪಾ." ಲಚ್ಚಣ್ಣ ಬಾಯಿ ಬಿಡಲಿಲ್ಲ.

"ಊರೆಲ್ಲಾ ಒಂದಾಗಿ ಕೆಲಸಾ ಮಾಡೂ ಮುಂದ ನೀ ಒಬ್ಬಾಂವ ತೆಪ್ಪಿಸಿದರ ಹ್ಯಾಂಗೋ ಹರಿಶ್ಚಂದ್ರನ ಪಾರ್ಟ ನಿನ್ನ ಬಿಟ್ಟರ ಯಾರ ಮಾಡವರು. ಹಿರೇರು ನೀನs ಆ ಪಾರ್ಟ ಮಾಡಬೇಕಂತ ಹೇಳ್ಯಾರ ನೋಡ."

ಊರಿನ ಮಾತು ಬಂದಾಗ ಲಚ್ಚಣ್ಣ ಮೆತ್ತಗಾದ. "ಐs ಶಿವಣ್ಣಾs ನಿನ್ನ ಕಾಲ ಬೀಳತೇನೋ, ನನ್ನಟಕ ನನ್ನ ಬಿಡ್ರೆಪಾ. ಪಾರ್ಟ ಮಾಡವರಿಗೆ ಏನ ಕಮ್ಮಿ. ಸಿದ್ಧಪ್ಪ ಅದಾನ, ಮತ್ತುಂಸಾಬನ ಮಗಾ ಗೌಸ ಅದಾನ, ನನಗs ಯಾಕ ಬೆನ್ನ ಹತ್ತೀರಿ?"

"ಅಸರಂತ ರಾಜಾ ಪಾರ್ಟ ಮಾಡಿಕೊಂತ ಬಂದಾವ ನೀನs ಅಲ್ಲೇನೋ ಲಚ್ಚಣ್ಣಾ. ನಿನ ಪಾರ್ಟಗೆ ಕಳಾ ತುಂಬಿದಾಂಗ ಉಳದವರಿಗೆ ಆಗೂದಿಲ್ಲ ಏನಪಾ. ಜಾತ್ರಿಗಿ ಕೂಡಿದ ಮಂದೀ ಮುಂದ ನಮ್ಮ ಮಾನ ಉಳೀಬೇಕೋ ಬ್ಯಾಡೋ? ಗೌಡರು ಹೇಳಿ ಕಳಿಸ್ಯಾರ ನಾಳೆ ಚಂಜೀ ಮುಂದ ಗುಡೀಗೆ ಬರಬೇಕಂತ."

"ಶಿವಣ್ಣಾs ನನ ಜೀವಾ ಯಾಕ ತಿಂತೀರೋ. ನನಗಂತೂ ಈ ಬಾಳೇನುs ಬ್ಯಾಸರ ಆಗೇತಿ ನೋಡ. ಚೆನ್ನೀನ ನಾನs ಕೊಂದಾವ ಅಂತ ಈಗಲೂ ರಾತ್ರಿ ಮನಸ್ಸಿನ್ಯಾಗ ಕಟೀತೈತಿ. ನಾ ಏನ ಮಾಡ್ಲಿ."

"ಅಲ್ಲೋ ಲಚ್ಚಣ್ಣಾ, ಬಂಡಿಗೆ ಹೂಡಿದ ಎತ್ತು ಬಸ್ಸಿಗೆ ಹೆದರಿ ಹಾದೀಬಿಟ್ಟು ಹಳ್ಳಕ ಬಿದ್ದುವಪಾ; ಬಂಡಿ ಒಗ್ಗಾಲಿ ಆಗಿ ತೆಗ್ಗಿನ್ಯಾಗ ಬಿದ್ದು ಚೆನ್ನವ್ವನ ತಲಿ ಒಡಿತಪಾ. ಬಿದ್ದೇಟಿಗೆ ಸತ್ತs ಹ್ವಾದ್ಲು. ಇದರಾಗ ನಿಂದೇನ ತಪ್ಪೈತಪಾ. ಮುದುಕಿ ಟೊಂಕ ಮುರೀತು. ಚೆನ್ನವ್ವ ಸತ್ತು ನಾಕ ವರ್ಸಾದ್ರೂ ಇನ್ನೂ ಹೊಟ್ಟಿಬ್ಯಾನಿ ಹಚಿಗೊಂಡಿಯಾ. ಛೀ ತಗೀಯೋ, ಚೆನ್ನವ್ವನ ಭೂಮಿರಿಣಾ ಮುಗದಿತ್ತು. ನೀ ಹಿಂಗ ಚಿಂತೀ ಮಾಡಿದರ ಸತ್ತಾಕಿ ತಿರಗಿ ಬರತಾಳೇನ. ಹೊಸಾ ಹೇಣ್ತಿ ಬಂದಾಳ ಮಗ್ಗಲದಾಗ, ಹಿಂದಿಂದೆಲ್ಲಾ ಮರತಬಿಡು ಇನ್ನ. ಎಷ್ಟ ಬಾರಿ ಹೇಳಬೇಕ ನಿನಗ. ಎಲ್ಲಾ ಮರತು ಮಂದ್ಯಾಗ ಕೂಡಪಾ ಲಚ್ಚಣ್ಣಾ."

"ನನ ಸಂಕಟಾ ನಿನಗೆ ತಿಳಿಯೂದಿಲ್ಲೋ ಶಿವಣ್ಣಾ,. ಆಕೀ ಪಡಕುಂದ್ರಿ ಜಾತ್ರೀಗೆ ಬರಾಕ ಒಲ್ಯಾ ಅಂತಿದ್ಲೋ ತಮ್ಮಾ. ನಾನs ಜುಲುಮೀ ಮಾಡಿ ಮುದುಕೀನ್ನ, ಆಕೀನ್ನ ಕರಕೊಂಡ ಹ್ವಾದೆ. ಚೆನ್ನಿ ಸತ್ಲು, ಇನ್ನೂ ಸಣ್ಣಾಕಿ, ಹೌಸಿನ್ಯಾಕಿ, ಮಗಾ ಸಾಯೇಬ ಆಗೂದ ನೋಡತಿದ್ಲು. ಏನೇನೋ ಆಸೆ ಇಟಕೊಂಡಿದ್ಲು. ನಾನs ಕೊಂದ್ನೆಪೋ ನಾನs ಕೊಂದೆ. ಮನ್ಯಾಗಿದ್ದರ ಬದಕತಿದ್ಲೋ ಇಲ್ಲೋ? ಟೊಂಕಾ ಮುರಕೊಂಡ ಮುದಕಿ ಗೋಳ್ಯಾಡತೈತಿ. ಅದರ ಗೋಳ್ಯಾಟ ನೋಡಲಾಸಲ್ಲ. ಅದು ಕೌದ್ಯಾಗ ಬಿದ್ದು ಗೊಮ್ಮಂತ ಹೊಲಸ ನಾರೂ ಮುಂದ ಇದರ ಸಾವು ಬರಬಾರದs ಅನಸತೈತಿ. ಇದಕೆಲ್ಲಾ ನಾನsಕಾರಣ ಹೌದಲ್ಲೋ. ಮುದುಕೀ ಕಿರಿಕಿರೀಗೆ ಚಂದ್ರೀನ್ನ ಮದುವೀ ಮಾಡಿಕೋಬಾರದಾಗಿತ್ತು ಅನಸತೈತಿ. ನನ್ನ ತಲೀ ಕೆಟ್ಟು ಹುಚ್ಚು ಹಿಡಿಯೂದೊಂದs ಉಳದೈತಿ. ಹಿಂತಾದರಾಗ ಎಲ್ಲಾ ಮರತು ನಾ ರಾಜಾನ ಪಾರ್ಟ ಹ್ಯಾಂಗ ಮಾಡಲೋ. ರಾಜಾ ಹರಿಶ್ಚಂದ್ರ ಹೇಣ್ತಿನ್ನ ಕೊಂದರೂ ಅಂವಾ ಸತ್ಯವಂತ, ಮಹಾತ್ಮ ಅದಕs ದೇವರು ರಾಣಿನ್ನ ಬದಕಿಸಿದ. ಆದರ ನನ್ನ ನೋಡು, ನಾನು ಪಾಪಿಷ್ಟ, ಚೆನ್ನೀನ ಕೊಂದೆ. ಅವ್ವನ್ನ ಅರೆಜೀವಾ ಮಾಡಿದೆ. ನಾ ಬದಕಿ ಇರಬಾರ್ದೋ ಶಿವಣ್ಣಾ, ನಾ ಬದಕಿರಬಾರ್ದು.' ರುಮಾಲಿನಿಂದ ಮುಖ ಮುಚ್ಚಿಕೊಂಡು ಅಳಹತ್ತಿದ ಲಚ್ಚಣ್ಣನ ಮಾಯದ ಗಾಯವನ್ನು ಇನ್ನಷ್ಟು ಕೆದಕಲು ಬಯಸದ ಶಿವಣ್ಣ ಅವನನ್ನು ಸಂತೈಸಿದ.

"ಇರಲಿ ಸುಮ್ಮಕಾಗು, ಲಚ್ಚಣ್ಣ. ಸದಾಶಿವ, ನಾಗವ್ವ, ಚಂದ್ರವ್ವ, ಸೂಸಿ, ನಮಗ ಎಲ್ಲಾರಿಗೂ ನೀ ಬೇಕಪ್ಪ. ನೀ ಹಿಂಗ ಅಂದರ ಮುದುಕಿ ಮತ್ತೀಟು ಎದೀ ಒಡಕೊಂತೈತಿ. ಯಾವದೂ ನಮ ಕೈಯಾಗಿಲ್ಲ. ನೀ ಸಾಯೂ ಮಾತ ಆಡಬಾರ್ದು. ಬಂದದ್ದಕ್ಕ ಗಟ್ಯಾಗಿ ನಿಂತು ಬದುಕ ಮಾಡಬೇಕು ಅಂತ ಮೊನ್ನಿ ಪುರಾಣದಾಗ ಸ್ವಾಮೇರು ಹೇಳಿದ್ದು ಕೇಳಲಿಲ್ಲs. ಆಗಿ ಹೋಗಿದ್ದು ಮರ್‍ಯಾಕ ಯತನ ಮಾಡ. ಬ್ಯಾರೇ ಕಡೆ ಲಕ್ಸೇವ ಹಾಕ. ಚಂಜೀ ಮುಂದ ಚಾವಡಿಗಿ ಬಾ. ಟಿ.ವಿ. ಹಾಕಿರ್ತಾರ ನೋಡೀಯಂತ. ನಾಳೆ ನಿನ್ನ ಸದಾಶಿವ ಸಾಯೇಬ ಆಗಿ ಬಂದರ ನಿನ್ನ ಮನ್ಯಾಗೂ ಟಿ.ವಿ. ಬರತೈತಿ. ನೋಡಿಕೊಂತ ಆರಾಮ ನೀ ಕುಂದ್ರುವಂತೆ. ಆತಿಲ್ಲೋ. ಹಂ. ಈಗೇನ ಸಂತ್ಯಾಗ ಭಾಳ ಕೆಲಸ ಐತೇನ. ಇಕಾ ಒಂದ ಬೀಡಿ ಹಚ್ಚ."

"ಹಾಂಗೇನಿಲ್ಲಪಾ, ಇದೀಟ ಕಾಯಿಪಲ್ಲೆ ಮಾರಿ ಚಾಪುಡಿ, ಬೆಲ್ಲ ಎಣ್ಣಿ, ತರತೀನಿ. ಇಲಿ, ಹೆಗ್ಗಣಾ, ಹೆಚ್ಚಾಗ್ಯಾವ, ಅವಕ ಔಷಧ ತರ್ತೀನಿ."

"ಬಸ್ ಬಂತ ನೋಡ ಲಚ್ಚಣ್ಣ. ನಾ ಹಣ್ಣಗಾಯಿ ಚೀಲಾ ಹಿಡಿತೀನಿ ನೀ ಹತ್ತ ಮದಲ. ಗೌಡರಿಗಿ ಚಂಜೀ ಮುಂದ ನಾ ಎಲ್ಲಾ ಹೇಳ್ತೀನಿ."

***

ಮೇಲೆ ಧಗಧಗ ಉರಿಯುವ ಬಿಸಿಲು, ಕೆಳಗೆ ಸುಡುವ ಕಲ್ಲು, ಮಣ್ಣು, ತರಿಯುವ ಕಂಟಿ, ಚುಚ್ಚುವ ಮುಳ್ಳು, ಕುರುವಿನಂತೆ ಕಾಣುವ ಬಂಡೆಗಳು, ದೂರತಳದಲ್ಲಿ ಮಿಣಿ ಮಿಣಿ ಮಿನುಗುವ ಹಾಲು ಬಾವಿ, ಹಸಿರು ಇಲ್ಲದ ಗುಡ್ಡ, ಸೂಸಿ ಎಲ್ಲವನ್ನೂ ದಾಟುತ್ತ ದಾಟುತ್ತ ಗುಡ್ಡ ಹತ್ತಿದಳು. ಹಸಿರು ಹುಡುಕುತ್ತ ಗುಡ್ಡದ ನೆತ್ತಿಯನ್ನೂ ಸೇರಿಸಿದಳು. ಅಲ್ಲೊಂದು ಬೇವಿನ ಮರವಿತ್ತು....

'ಮರಕ್ಕಾs, ಏ ಮರಕ್ಕಾss ನಾ ಬಂದೀನಿ, ಸೂಸಿ, ದಿನಾs ಬರೂಹಾಂಗ ಅಪ್ಪೂರಕಿಂತ ಮೊದಲs ಓಡಿ ಬಂದೀನಿ. ನಾನs ನೆಳ್ಳಾಗ ಕುಂದ್ರಾಕಿ. ಏs ಭೀಮಕ್ಕಾ, ಸೋಮಕ್ಕಾ, ಗಂಗೀ ನೀವು ಹೋಗ್ರಿ. ದೂರ ಕಾಲಾಡಿಸಿಕೊಂಡು ಹಸರು ಮೇದ ಬರ್ರಿ. ಹೊಟ್ಟಿ ತುಂಬ ತಿನಬೇಕ ಹಾಂ, ಚಂಜೀಕ ಹಾಲ ಹಿಂಡದಿದ್ದರ ಅಪ್ಪ ಬಯ್ತಾನ, ಅವ್ವ ನನ್ನ ಹೊಡೀತಾಳ 'ಹಿಂಗs ಏನ ದನಾ ಮೇಸೂದು, ಕೂಳಿಗೆ ದಂಡ ಅದೀ' ಅಂತಾಳ, ಗಂಗೀ ನನ ಕರಾ ಕಾಳಿ ಇಲ್ಲೇ ಇರಲಿ ನನ ಹಂತ್ಯಾಕ. ಈ ನೆಳ್ಳಾಗ ಕಟ್ಟತೇನಿ ಕಾಳೀನ್ನ, ಈ ಮರಕ್ಕಾ ದಿನಾs ನನಗ ರಾಜಾರಾಣಿ ಕಥೀ ಹೇಳತಾಳ. ಹಾಂ. ಏ ಮರಕ್ಕಾs ನನಗ ಬ್ಯಾಸರ ಆಗೈತಿ, ಒಂದ ಕಥಿ ಹೇಳವ್ವ. ನನ ಜೋಡಿ ಮಾತಾಡವರ ಯಾರೂ ಇಲ್ಲವಾ, ನೀನರೆ ಮಾತಾಡವ್ವ ಯಾಕ ಸುಮ್ಮನ ಅದೀ. ಆಂ. ನೀ ಹೇಳೂದಿಲ್ಲs ಹೋಗಲಿ ಬಿಡು. ನಿನಗ ಕಥೀ ನೆನಪ ಆಗವೊಲ್ತ. ಇವತ್ತ ನಾನs ಕಥೀ ಹೇಳಲ್ಯಾ? ಮರಕ್ಕಾs ನಂದ ಕಥೀ ಹೇಳಲ್ಯಾ....

'ನನ್ನ ಹೆಸರು ಸುಶೀಲಾ, ಎಲ್ಲಾರೂ ಸೂಸಿ ಸೂಸಿ ಅಂತ ಕರೀತಾರ, ನನ್ನ ಸಣ್ಣ ಮಾವನ ಹೇಣ್ತಿ ಹಗಲೆಲ್ಲಾ ನನ್ನ ಗುದ್ದಿ 'ಹುಟ್ಟಿದ ವರ್ಸಕ್ಕs ಅಪ್ಪನ ಮುಂಗಿ ನೀರ ಕುಡೀತ ಈ ಪೀಡಾ. ನಮಗ ಮುಳುವು ಆಗಿ ಕುಂತೈತಿ ಅಂತ ಬಯ್ಯತಿದ್ಲು. ಇನ್ನೊಬ್ಬ ಮಾವನ ಹೇಣ್ತಿ ಅಂತೂ ನಮ್ಮ ಕೂಟ ಮಾತs ಆಡುತಿದ್ದಿಲ್ಲ. ಆಕಿ ಮಕ್ಕಳು ಯಾರರೇ ಮಾತಾಡಿದರೂ, ನನಕೂಟ ಆಡಿದ್ರೂ ಅವರ್ನ ಹಚ್ಚಿ ಹೊಡೀತಿದ್ಲು. ನನ ಹೊಟ್ಟಿ ಭಾಳ ಹಸದಿತ್ತಂತ ಒಂದ ದಿನಾ ನಾನs ರೊಟ್ಟಿ ತೊಗೊಂಡ ತಿಂದದ್ದಕ್ಕ ಕಡಚೀ ಕಾಸಿ ಕೈ ಮ್ಯಾಲೆ ಬರೀ ಎಳದಬಿಟ್ಲು. ಮರಕ್ಕಾs ಇಕಾ ನೋಡಿಲ್ಲೆ ಇನ್ನೂ ಕಲೀ ಐತಿ. ಅಂದಿಂದ ಇನ್ನೂ ತನಾ ಹಸಿವಿ ಆಗೇತಿ ಅಂತ ನಾ ಅನ್ನೂದಿಲ್ಲ. ಮಾವಗೋಳ ಮಕ್ಕಳ ಸಾಲಿ ಕಲೀತಿದ್ರು. ಅವರ ಪಾಟಿ, ಪುಸ್ತಕಾ ನನಗ ಮುಟ್ಟಾಕೂ ಕೊಡತಿದ್ದಿಲ್ಲ. ಅವರ ಹಾಕ್ಕೊಂಡ ಅರಿಬೀ ನಾ ತೊಟಕೊಂಡ ದೊಡ್ಡಾಕಿ ಆದೆ. ನಮ್ಮವ್ವ ದನಾ ದುಡದಂಗ ದುಡೀತಿದ್ಲು. ರಾತ್ರಿ ಮಕ್ಕೊಂಡಾಗ ಆಕೀ ನೆಳ್ಳಿದರ ನನಗ ಸಂಕಟ ಆಗ್ತಿತ್ತು. 'ಯವ್ವಾ ತಲೀ ಹಿಚಕಲ್ಯಾ, ಕಾಲ ಹರೀತಾವೇನು ಒತ್ತಲ್ಯಾ' ಅಂತ ಕೇಳಿದರ ನನ್ನ ಅವಚಿಕೊಂಡ ಅತ್ತ ಬಿಡತಿದ್ಲು, ಅಳೂ ದನಿ ಏನರೆ ಅತ್ತಿಗೋಳ ಕಿವಿಗೆ ಬಿದ್ದರ 'ಬೋಸಡೇರು ನಾವು ಚೆಂದಾಗಿ ಇರೂದ ನೋಡಲಾಗದ ಅಳತಾವ' ಅಂತ ಬಯ್ಯತಿದ್ದರು.

"ದೊಡ್ಡವ್ವನ ಊರು ಹೊನ್ನೂರಿಗೆ ಬಂದಾಗ ಅಟ ನಮಗ ಹೊಟ್ಟಿ ತುಂಬ ಊಟ, ಕಣ್ತುಂಬ ನಿದ್ದಿ. ನಾಕ ದಿನಾ ಇರೂದರಾಗ ಹೊಲದಾಗ ಕೆಲಸ ಭಾಳ ಅದಾವ ಅಂತೇಳಿ ಸಣ್ಣ ಮಾವ ಕರ್ಲ್ಯಾಕ ಬರತಿದ್ದಾ. ಹಗ್ಗಾ ಹಚ್ಚಿ ಎಳಕೊಂಡ ಹೋಗೂ ದನದ್ಹಾಂಗ ಅವನ ಹಿಂದ ಹೋಗತಿದ್ವಿ. ಆ ದೇವರು ನಮಗs ಯಾಕ ಇಷ್ಟ ತರಾಸ ಕೊಡತಾನ ಅಂತ ಬಸವಣ್ಣನ ಗುಡೀ ಕಟ್ಟೀಮ್ಯಾಲೆ ಕುಂತ ಅಳತಿದ್ದೆ. ಒಂದ ದಿನಾ ಸಿಟ್ಟ ಭಾಳ ಬಂತು. ಅತ್ತಾ

ಇತ್ತಾಗ ನೋಡಿ ರಸ್ತೆದಾಗಿನ ಕಲ್ಲು ತೊಗೊಂಡ ಬಸವಣ್ಣನ ಮ್ಯಾಲೆ ಬೀಸಿ ಒಗದ ಓಡಿ ಬಂದ್ನಿ. ಇನ್ನೂ ತನಾ ಇದನ್ನ ಯಾರ ಮುಂದೂ ಹೇಳಿಲ್ಲ. ಮರಕ್ಕಾ, ನನ್ನ ಹೊಟ್ಟ್ಯಾಗಿನ ಮಾತು. ನಿನಗ ಒಬ್ಬಾಕಿಗೆ ಹೇಳೀನಿ. ನೀ ಯಾರ ಮುಂದೂ ಹೇಳಬ್ಯಾಡ ಹಾಂ, ಮತ್ತ.

"ನನ್ನ ಪಿರೀತಿ ದೊಡ್ಡವ್ವ ಬಂಡೀ ಗಾಲಿ ಹಾದು ತಲೀ ಒಡದು ಸತ್ಲು ಅಂತ ಸುದ್ದಿ ಬಂತು. ನಿನ್ನ ಬದ್ಲಿ ನಾನರೆ ಸಾಯಬಾರದಾಗಿತ್ತs ಅಂತ ಎದೀ ಎದೀ ಬಡಕೊಂಡು ಹೊಳ್ಳ್ಯಾಡಿ ಅತ್ಲು. ಆಕಿ ನನ್ನ ಚಿಂತೀನ ಮಾಡಲಿಲ್ಲ. ದೊಡ್ಡಪ್ಪ ಅಂತೂ ಹಾಸಿಗೀ ಹಿಡಿದುಬಿಟ್ಟಿದ್ದ. ಗಂಡನ ಮನೀಂದ ಬಂದ ನಾಗಕ್ಕನ ಎಲ್ಲಾನೂ ಮಾಡತಿದ್ಲು. ಮುದುಕಿ ಸೊಂಟಾ ಮುರಕೊಂಡು ಬಿದ್ದಿದ್ಲು. ನಾಗಕ್ಕನ ಫಜೀತಿನ ಫಜೀತಿ.

"ದೊಡ್ಡವ್ವನ ಮನೀ ಋಣಾ ತೀರಿತು. ನಾವಿಬ್ರೂ ತಿಳಕೊಂಡ್ವಿ. ನಮ್ಮ ವಸ್ತೂನ ಹ್ವಾದ ಮ್ಯಾಲೆ ನಮ್ಮನ್ನ ಕರಸವರ್‍ಯಾರು. ಅಣ್ಣದೇರು ಹೊಟ್ಟಿ ತುಂಬ ಕೂಳ ಹಾಕೂದಿಲ್ಲ, ಅಂದ ಮ್ಯಾಲೆ ನನ ಮಗಳ ಮದುವಿ ಯಾರ ಮಾಡವರು ಅಂತ ನಮ್ಮವ್ವಗ ಚಿಂತಿ ಹತ್ತಿತ್ತು. ನನಗೂ ಹತ್ತ ವರ್ಸ ಆಗಿದ್ವು. ಯವ್ವಾ ನನ ಮದವೀ ಚಿಂತಿ ಮಾಡಬ್ಯಾಡಾ. ರಟ್ಟ್ಯಾಗ ಸಗತಿ ಐತಿ ಇಬ್ರೂ ಕೂಡಿ ದುಡಿಯೂಣು ಉಣ್ಣೂಣ. ಈ ಮಾವಗೋಳ ಹಂಗs ಬ್ಯಾಡಾ. ಬ್ಯಾರೇ ಗುಡಸಲಾ ಹಾಕ್ಕೊಂಡ ಇರೂಣ ನಡಿ' ಅಂದರ ನಮ್ಮವ್ವ 'ಹುಚ್ಚ ನನ ಮಗಳs' ಅಂತ ಅಳತಿದ್ಲು. ನಾ ಹೇಳಿದ್ಹಾಂಗ ನಡಕೊಳ್ಳೂದು ಇಷ್ಟ ಹಗರ ಇಲ್ಲಾ ಅಂತ ನನಗೂ ತಿಳಿಯಾಕ ಹತ್ತಿತ್ತು...

ಒಂದಿನಾ ಹೊನ್ನೂರಿಂದ ಅಮ್ಮ ಹಿರೇರ ಕೂಟ ಹೇಳಿ ಕಳಿಸಿದ್ಲು. ಚಂದ್ರವ್ವನ್ನ ನಮ್ಮ ಲಚ್ಚಣ್ಣಗ ಉಡುಕೀ ಮಾಡಿಕೊಡ್ರೀ ಅಂತ. ಅವ್ವ ಸಾಫಾಗಿ ಹೇಳಿಬಿಟ್ಲು. 'ನನ್ನ ಜೋಡಿ ಸೂಸವ್ವನ್ನೂ ಹೊನ್ನೂರಿಗೆ ಕರಕೊಂಡ ಬರಾಕಿ' ಅಂತ. ಮದುವಿ ಗೊತ್ತಾದ ಮ್ಯಾಲೆ ಅತ್ತಿಗೋಳಿಗೆ ಬಾಳಾ ಹಿಗ್ಗ ಆಗಿತ್ತು. ಈ ಎರಡೂ ಪೀಡಾ ಹೋಗ್ತಾವಲ್ಲ ಅಂತ.

"ನನಗ ಹೊಸಾ ಪರಕಾರಾ ಪೋಲಕಾ ಹೊಲಿಸಿದ್ರು. ನಮ್ಮವ್ವ ಗಂಡನ ಮನೀಗೆ ಹೊಂಟಾಗ ಹೊಸಾ ಮನೀಗೆ ಬಲೇ ಹುರುಪೀಲೆ ಬಂದ್ನಿ. ಅವರ ದೊಡ್ಡವ್ವ ಸತ್ತಾಗಿಂದ ಮನೀ ಬಣ್ಣಾನ ಬದಲ ಆಗಿತ್ತು. ನಾಗಕ್ಕ ಗಂಡನ ಮನ್ಯಾಗ ಅದಾಳ. ಸದಾಶಿವಣ್ಣ ಓದಾಕ ಪರವೂರಿಗೆ ಹೋಗ್ಯಾನ. ಅಮ್ಮ ಕುಂಡೀ ಸವರಿಕೋತ ಮನೀ ಕಾರಭಾರಾ ಮಾಡತಿದ್ಲು. ಸಗತಿ ಕಡಿಮಿ ಆಗಿದ್ರೂ ಬಾಯಿ ಜೋರ ಆಗಿತ್ತು. ತನ್ನ ಚಾಕರಿ ಮಾಡಿಸಿಕೊಳ್ಳಾಕ ಆಕೀನs ದುಂಬಾಲ ಬಿದ್ದು ಮಗನ ಮದಿವೀ ಮಾಡಿದ್ಲಂತ, ಈಗಂತೂ ಹಾಸಿಗೀನ ಹಿಡದಾಳ, ದೊಡ್ಡಪ್ಪ ಮೂಕ ಆಗ್ಯಾನ. ಯಾವಾಗ್ಲೂ ಸಿಟ್ಟಿನ್ಯಾಗ ಇರತಾನ, ಅವ್ವ ಅವನ ಮುಂದ ನಿಂದ್ರಾಕ ಹೆದರತಾಳ. ದುಡಿಯೂದು, ತಿನ್ನೂದು, ಉಣ್ಣಾಕ ಕುಂತ್ರೂ ಸಾಕು ಬೇಕು ಅನ್ನೂದಿಲ್ಲ ದೊಡ್ಡಪ್ಪ.

"ಹಾಂ. ಮರಕ್ಕಾs ನಮ್ಮವ್ವನ ಗಂಡ ಅಂದ ಮ್ಯಾಲೆ ನನಗ ಅಪ್ಪನ ಆಗಬೇಕಲ್ಲ. ಒಂದಿನಾ ಅಣ್ಣನಾಂಗ ನಾನೂ ಯಪ್ಪಾ ಅಂತ ಕರೆದೆ. ಹೊಳ್ಳಿ ನನ್ನ ಕಪಾಳಿಗೆ ಬೀಸಿ ಹೊಡದವನ ದಡ ದಡ ಹೊರಗ ಹೋಗಿಬಿಟ್ಟಾ. ಈಗ ಮೊದಲಿನಾಂಗ ನನಗ ದುಕ್ಕ ಆದರ ಅವ್ವನ ಉಡ್ಯಾಗ ಬಿದ್ದು ಅಳೂ ಹಾಂಗಿಲ್ಲಾ. ಅವ್ವ ಒಳಗ ಅಡಿಗೀ ಮನ್ಯಾಗ ಒಬ್ಬಾಕೀ ಮನಗತಾಳ. ನಾ ಬರಲ್ಯಾ ನಿನ ಹಂತ್ಯಾಕ ಅಂದರ ಬ್ಯಾಡಾ ಅಲ್ಲೇ ಮುದುಕೀ ಹಂತ್ಯಾಕ ಮಲಕೋ ಅಂತಾಳ. ಅಮ್ಮ ಹಾಸಿಗಿ ಹಿಡಿದಮ್ಯಾಲೆ ಎಲ್ಲಾ ಅಲ್ಲೇ ಮಾಡತಾಳ ಗೊಮ್ಮಂತ ನಾರತಾಳ. ನನಗಂತೂ ವಯಕ್ ಅಂತಿತ್ತು. ಈ ಮುದಕಿ ಲಗೂನ ಸತ್ತರ ಗಾಳಿ ಹಸನ ಆಕ್ಕೈತಿ ಅಂತಿದ್ದೆ ಮನಸ್ಸಿನ್ಯಾಗ. ಮಂದೀ ಮನ್ಯಾಗಿನ ಹಾಂಗ ನಮ್ಮಪ್ಪ ಅವ್ವ ಯಾಕ ಮಾತಾಡೂದಿಲ್ಲಾ, ನಗೂದಿಲ್ಲಾ ಅಂತಿದ್ದೆ. ಹಿಂದಕ ಬಂದಾಗ ದೊಡ್ಡಪ್ಪ ಬಳೀ, ರಿಬ್ಬನ್ನು, ಪಿನ್ನು ಎಲ್ಲಾ ಕೊಡಿಸಿ ತಲಿ ಸವರಿ ಪಿರೀತಿಲೆ ಮಾತಾಡಿದ್ದಾ, ಈಗ್ಯಾಕ ಹಿಂಗ ಆಗ್ಯಾನು ಅಂತಿದ್ದೆ...

ಆದರ ಮರಕ್ಕಾs ದೊಡ್ಡಪ್ಪ ಭಾಳ ಚಿಂತೀ ಮಾಡ್ತಾನ. ಚೆನ್ನಿ ನಿನ್ನ ನಾನs ಕೊಂದೆ ಅಂತಾನ. ಯವ್ವಾ ನಿನಗ ಹೆಂತಾ ಗತೀ ಬಂತs ಅಂತ ಅಳ್ತಾನ. ಅಂವಾ ಅಳೂ ಮುಂದ ಹಾಸಿಗ್ಯಾಗ ಮಕ್ಕೊಂಡ ನನ ಕಣ್ಣಾಗೂ ನೀರ ಹರೀತಾವ. ಹಿಂಗ ಮಾಡಿದ ಆ ದೇವರ ಮ್ಯಾಲೆ ಸಿಟ್ಟು ಬಂದು ಈ ಸಾರೆ ಸಗಣೇನ ಒಗಿತೇನಿ ನಿನಗ ನೋಡ್ತಿರು ಅಂದೇನಿ....

"ಮರಕ್ಕಾ ನಿನಗ ಒಂದು ಗುಟ್ಟಿನ ಮಾತ ಹೇಳ್ತೀನಿ. ಯಾರಿಗೂ ಹೇಳಬ್ಯಾಡಾ. ಒಂದ ರಾತ್ರಿ, ಮುದುಕಿ ಉಂಯ್ ಉಂಯ್ ಅಂತ ನೆಳ್ಳತಿತ್ತ. ನನಗ ಎಚ್ಚರಾತು. ದೊಡ್ಡಪ್ಪ ಹೊಲಕ್ಕ ಹೋಗೂದ ಬಿಟ್ಟ ನಾಕೈದ ದಿನಾ ಆಗಿತ್ತು. ಅವ್ವಗ ಅಪ್ಪಗ ಜಗಳ ಆಗಿತ್ತು. ಮುದುಕಿ ಹಗಲೂ ರಾತ್ರಿ ಒದರತಿತ್ತು. 'ತಟಕು ಇಸಾ ಕೊಡ್ರೇ ನಾ ಸಾಯ್ತೀನಿ' ಅಂತ, ಅವತ್ತೂ ಅಳತಿತ್ತು. ದೊಡ್ಡಪ್ಪ ಎದ್ದ. ತಾನs ಪುರಲಿ ಹಾಕಿ ಒಲಿ ಹೊತ್ತಿಸಿ ಚಾ ಕಾಸಿದಾ. ಮಾಡಿನ್ಯಾಗಿಂದ ಉಣ್ಣೀಪುಡೀ ಚೀಟು ತೊಗೊಂಡು ಮುದುಕೀ ವಾಟೇದಾಗ ಹಾಕಿ ಚಾ ಸುರುವದಾ. ಅವನ ಕೈ ನಡಗಾಕ ಹತ್ತಿದ್ದು. ಚೂರs ಮುಸುಕ ಸರಿಸಿ ನಾ ನೋಡತಿದ್ದೆ. ಆದರ ಮಿಸುಕ್ಯಾಡಲಿಲ್ಲ. ಮುದುಕಿ ಚಾ ಕುಡುದು ಮಕ್ಕೊಂಡಿತು. ದೊಡ್ಡಪ್ಪ ದೀಪಾ ಆರಿಸಿದಾ. ನನಗ ಎಚ್ಚರ ಆದಾಗ ಬೆಳಕ ಹರಿದಿತ್ತು. ಅವ್ವ ಬಾಯಿ ಬಡಕೊಂಡು ಅಳತಿದ್ದು. ಮಂದೆಲ್ಲಾ ಬಂದ್ರು. ದೊಡ್ಡಪ್ಪ ಮಾತ್ರ ಕಂಬಕ್ಕ ಆತು ಕಲ್ಲಿನಾಂಗ ಕುಂತಿದ್ದಾ. ಮುದುಕೀನ ಮಣ್ಣು ಮಾಡಿ ಬಂದ್ರು. ದೊಡ್ಡಪ್ಪನ ಕಣ್ಣಾಗ ಒಂದ ಹನಿ ನೀರ ಇದ್ದಿದ್ದಿಲ್ಲಾ. 'ಪಾಪ ಲಚ್ಚಣ್ಣ ಅವ್ವನ ಮ್ಯಾಲೆ ಜೀವ, ಮನಸಿಗೆ ಹಚಿಕೊಂಡಾನ. ಹಿಂಗs ಇದ್ದರ ಹುಚ್ಚ ಹಿಡಿದರ ಏನ ಗತಿ? ನಮಗ ಏನೂ ಬ್ಯಾಡಾ ಮರಕ್ಕಾ. ಒಂದೀಟ ಪಿರೀತಿ ಬೇಕು. ಮರಕ್ಕಾs ಪಿರೀತಿಗೆ ನಾವ ಎಲ್ಲಾ ಕೊಡ್ತೀವಿ. ಬೆವರ ಕೊಡ್ತೀವಿ, ರಕ್ತಾ ಕೊಡ್ತೀವಿ, ನಮ್ಮೆಲ್ಲಾ ಕೊಡ್ತೇವಿ, ನೀನs ಹೇಳು ಮರಕ್ಕಾs ನಮ್ಮ ಅಪ್ಪಗ ನೀನs ಹೇಳು ಹೇಳತೀಯಾ ? ಮರಕ್ಕಾs ಏನದು ಸಪ್ಪಳಾ ? ಗುಡುಗs ಹೌದು, ಗುಡುಗಾಕ ಹತ್ತೈತಿ. ಮಿಂಚು ಹೊಡೀತೈತಿ. ಸಂಜೀ ಆತು ಮರಕ್ಕಾ ನಾ ಹೋಗ್ತೀನಿ, ಮನೀಗೆ ಹೋಗ್ತೀನಿ."

ಸೂಸಿ ಊರ ಕಡೆಗೆ ಓಡುತ್ತಿದ್ದಳು. ಹಾಳು ಭಾವಿಯ ದಂಡೆಯಲ್ಲೊಂದು ಆಕಾರವಿತ್ತು. ಆಕಾರಕ್ಕೆ ಕೈಕಾಲು ಮೂಡಿ ಯವ್ವಾs ಚೆನ್ನೀ ಎಂದು ಕೂಗಿದಾಗ ಸೂಸವ್ವಾ ಗಟ್ಟಿಯಾಗಿ ಕಾಲಿಗೆ ಜೋತುಬಿದ್ದಳು. ಹತ್ತು ವರ್ಷದ ಹುಡುಗಿಗೆ ಹತ್ತು ಜನರ ಬಲ ಬಂದಿತ್ತು. "ಯಪ್ಪಾs ನೀ ಸಾಯಬ್ಯಾಡಾ, ನೀ ಬೇಕ ನಮಗ" ಸೂಸವ್ವ ಚೀರಿದಳು. ಹಿಂದೆ ಬಿದ್ದ ಲಚ್ಚಣ್ಣ ಸೂಸಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಅಳತೊಡಗಿದ. ದೊಡ್ಡ ದೊಡ್ಡ ಹನಿಗಳು ರಪ್ ಕಪ್ ಹೊಡೆದು ಅವರನ್ನು ತೊಯ್ಯಿಸಿದವು.

***

■■

# ವಸುಂಧರಾ

ಕಳೆದ ಕೆಲವು ದಿನಗಳಿಂದ ಅಹಲ್ಯೆ ತನ್ನ ಮನಸ್ಸು ತುಂಬಿದ್ದಾಳೆ. ಅದೇ ಅಹಲ್ಯೆ. ಪಂಚ ಮಹಾಪತಿವ್ರತೆಯರಲ್ಲಿ ಒಬ್ಬಳು. ಗಂಡನನ್ನು ಬಿಟ್ಟು ಬಂದ ತನಗೆ ಅವಳ ಬಗ್ಗೆ ಅನುಕಂಪವಿದೆ. ಅದಕ್ಕೆ ಅವಳ ಕಥೆಯೇ ಕಾರಣ. ಅದೇ ತನ್ನನ್ನು ಸೆಳೆದದ್ದು. ಅಪ್ರತಿಮ ಸುಂದರಿ, ರಾಜಕುಮಾರಿ, ಗೌತಮನಂಥ ಕಠೋರ ತಪಸ್ವಿಯನ್ನು ಮದುವೆಯಾಗಿ - ಇಂದ್ರನ ಚಾಪಲ್ಯಕ್ಕೆ ಬಲಿಯಾಗಿ - ಗಂಡನ ಶಾಪದಿಂದ ಕಲ್ಲಾದಳಂತೆ. ಅವಳು ಜಡಳಾಗಿ, ಜಗತ್ತಿನಿಂದ ವಿಮುಖಳಾಗಿ, ನಿರ್ಲಿಪ್ತೆಯಾಗಿರಬೇಕೆಂದು ತನ್ನ ಬಲವಾದ ಊಹೆ. ಕಲ್ಲಾದ ಅಹಲ್ಯೆ ರಾಮನ ಪಾದಸ್ಪರ್ಶದಿಂದ ಉದ್ಧಾರವಾದಳೆನ್ನುವ ಪವಾಡದ ಕಟ್ಟು ಕಥೆಯನ್ನು ನಂಬುವಂಥ ಭಾವುಕಳು ತಾನಲ್ಲ. ಹಾಗೆಂದು ಭಾವನೆಗಳು ಸತ್ತು ಹೋಗಿರುವವಳೂ ಅಲ್ಲ.

ಅತಿ ಸೂಕ್ಷ್ಮ ಭಾವನಾಜೀವಿ ಆಗಿದ್ದುದರಿಂದಲೇ ಒಂದು ಕಾಲದ ತನ್ನೊಳಗಿನ ನೋವು ತನ್ನ ಇಡೀ ಬದುಕನ್ನು ಮುಷ್ಟಿಯೊಳಗಿಟ್ಟುಕೊಂಡು ಆಟವಾಡುತ್ತಿರುವುದು. ಆ ನೋವಿನ ಬಗ್ಗೆ ತನ್ನನ್ನು ಬಿಟ್ಟು ತಿಳಿದಿದ್ದ ಇನ್ನೊಂದು ಜೀವವೆಂದರೆ ತಾಯಿಯೊಬ್ಬಳೇ. ಅವಳೂ ಸತ್ತು ಎಷ್ಟೋ ವರ್ಷಗಳಾದವು. ಆ ರಾತ್ರಿ ಗುಡುಗು, ಮಿಂಚು, ಸಿಡಿಲು, ಕೊನೆಗೆ 'ಧೋ' ಎಂದು ಮಳೆ. ಎಲ್ಲ ಪ್ರಕೃತಿಯಲ್ಲಿ ನಡೆದದ್ದಲ್ಲ. ತನ್ನಲ್ಲಿ -ತನ್ನ ಒಡಲೊಳಗೆ ಎಲ್ಲೊ ಒಂದು ಕಡೆ ಇಲ್ಲೇ ಎಂದು ಹೇಳದಂಥ ಜಾಗದಲ್ಲಿ ಸಣ್ಣಗೆ ಮಿಡಿಯುತ್ತಿದ್ದ ನೋವು. ದೊಡ್ಡ ದೊಡ್ಡದಾಗಿ ಬೆಳೆದು ಜಾಗಟೆ ಬಾರಿಸುತ್ತಿತ್ತು. ಏಳೆಂಟು ವರುಷದ ಹುಡುಗಿ -ಇಡೀ ಶರೀರವೇ ಅಲ್ಲಾಡುವಂತೆ ಗಡಗಡ ನಡುಗುತ್ತ, ಆಸರೆಗಾಗಿ ಕೈಚಾಚಿ ಓಡಿಹೋಗಿ ಅವ್ವನನ್ನು ತಬ್ಬಿಕೊಂಡಿದ್ದಳು. ಬೆಳಗಿನವರೆಗೂ ತೋಳತೆಕ್ಕೆಯಲ್ಲಿ ದುಃಖಿಸುತ್ತಿದ್ದ ಮಗಳನ್ನು ಅವ್ವನ ಅಂತಃಕರಣದ ಕೈ ಬೆನ್ನ ಮೇಲೆ, ನೆತ್ತಿಯ ಮೇಲೆ ಕೈ ಆಡಿಸುತ್ತ ಕಣ್ಣೀರು ಒರೆಸಿತ್ತು, ಮೈಯ ಒಳಗೆ ಸೂಕ್ಷ್ಮ ಭಾಗದಲ್ಲಿ ಕುರು ಆಗಿದೆಯೆಂದು ಪರೀಕ್ಷಿಸಿ ಹೇಳಿದ ಡಾಕ್ಟರರು ಅದನ್ನು ಕತ್ತರಿಸಿ ಹಾಕಿದ್ದರು. ದಿನವೂ ಡ್ರೆಸ್ಸಿಂಗ್ ಆಗುವಾಗ ಪುಟ್ಟ ಮಗಳ ಅಳು, ಸಂಕಟ ನೋಡಲಾರದೆ ಅವ್ವನೂ ಕಣ್ಣೀರು ಸುರಿಸಿದ್ದಳು. ಶರೀರದ ಗಾಯ ಕೊನೆಗೊಮ್ಮೆ ಮಾಯ್ದಿತ್ತು. ಆದರೆ ನೋವು ಮನಸ್ಸಿನ ಮೂಲೆಯಲ್ಲಿ ಜಗಲಿ ಹಾಕಿ ಕುಳಿತುಬಿಟ್ಟಿತ್ತು.

ಕುಸುರಿನ ಕೆಲಸವಾದ ಕಣ್ಣರೆಪ್ಪೆ ಕೆತ್ತುತ್ತಲೇ ಯೋಚಿಸುತ್ತಿದ್ದ ವಸುಂಧರಾ ಚಾಣ ಕೆಳಗಿಟ್ಟು ನೋಯುತ್ತಿದ್ದ ಬೆರಳು ನೀವಿಕೊಂಡಳು. ಫ್ಯಾನ್ ಸ್ವಿಚ್ ಹಾಕಿ, ನೇರವಾಗಿ ಕಾಲು ಚಾಚಿ ಗಾಳಿಗೆ ಮುಖವೊಡ್ಡಿದಳು. ಕೈಗೆ ಎಟಕುವಂತಿದ್ದ ಟೇಬಲ್ ಡ್ರಾ ಎಳೆದು ನೀಲಿ ಕವರಿನ ಡಾಯರಿ ತೆಗೆದು ಪುಟ ತಿರುವಿದಳು......

ಈ ದಿನ ಮನೆಗೆ ಬಂದಾಗ ಅಪ್ಪ ತುಂಬ ಖುಷಿಯಾಗಿದ್ದರು. ಗೌರಮ್ಮ ಮಾಡಿದ ತಿಂಡಿ, ಚಹಾ ಕೊಟ್ಟು, 'ಅಪ್ಪಾ, ನಾನು ಲೀಲಾನ ಕೂಡ ವಾಕಿಂಗ್ ಹೋಗಿ ಬರತೇನಿ' ಅಂದೆ. ನಾವಿಬ್ಬರೂ ಪರೀಕ್ಷೆ ಮುಗಿಸಿ ಹಾರಾಡುವ ಹಕ್ಕಿಗಳಾಗಿದ್ದೆವು. ದೂರ ಏಕಾಂತ ಜಾಗಕ್ಕೆ ನಡೆದು ಹೋಗಿ ನಿಸರ್ಗ ನೋಡುತ್ತ ಕೂಡ್ರಲು ನನಗೆ ತುಂಬಾ ಇಷ್ಟ. ಸಾಲುಹಕ್ಕಿಗಳು, ಬಣ್ಣ ಬಣ್ಣದ ಹಿಂಜಿದ ಮೋಡಗಳು, ದೂರ ಎಲ್ಲೋ ಕಂಡೂ ಕಾಣದಂತೆ ಕಣ್ಣು ಮಿಟುಕಿಸುವ ನಕ್ಷತ್ರ ನೋಡುತ್ತ ಹೊತ್ತಿನ ಪರಿವೆ ಇಲ್ಲದೆ ಮೌನವಾಗಿ ಕುಳಿತಿರುತ್ತಿದ್ದೆವು. ಲೀಲಾ ನನ್ನ ಆತ್ಮೀಯ ಗೆಳತಿ. ಅವ್ವ ಹೋದ ಮೇಲೆ ಅವಳೇ ನನಗೆ ಎಲ್ಲಾ. ಆದರೆ ಅಪ್ಪ ಈ ದಿನ ನನ್ನನ್ನು ಹೊರಗೆ ಬಿಡಲಿಲ್ಲ. ಸುಧೀರಣ್ಣನನ್ನು ಕರೆದರು. ಅವರ ಸಂತೋಷದ ಕಾರಣ ಹೊರಬಿತ್ತು.

"ನಿನ್ನ ಗೆಳತಿ ಮದುವಿಗೆ ಹೋಗಿದ್ದಿಯಲ್ಲ ವಸೂ. ಅಲ್ಲೆ ದೇಸಾಯಿ ವಕೀಲರ ಮಗ ಶ್ರೀಕಾಂತ ನಿನ್ನ ನೋಡಿ ಒಪ್ಪಿಕೊಂಡಾರಂತ. ವರಾ ಶ್ರೀಮಂತ, ಸುಂದರ, ಸುಶಿಕ್ಷಿತ, ದೊಡ್ಡ ನೌಕರಿಯೊಳಗ ಇದ್ದಾರ. ನಮಗ

ಪಸಂದ ಆಗೇದ. ನಾಳೆ ನೋಡಲಿಕ್ಕೆ ಬರತಾರ" ಎಂದು ಅಪ್ಪ ಬಾಯ್ತುಂಬ ನಕ್ಕಾಗ ಅಣ್ಣಾ ಹಿಗ್ಗಿ ಒಪ್ಪಿಗಿ ಕೊಟ್ಟ. ನನಗ ಅಳೂನ ಬಂತು.

"ನಾ ಮದುವೀ ಮಾಡಿಕೊಳ್ಳಾಕ ಒಲ್ಲೆ ಅಪ್ಪಾ" ಎಂದಾಗ ಅವರು ಇನ್ನಷ್ಟು ಜೋರಾಗಿ ನಕ್ಕರು. ನಾ ಸೀರಿಯಸ್ ಆಗಿ ಹೇಳ್ತೀನಿ ಅಂದಾಗ ಕಾರಣ ಕೇಳಿದರು. ಏನು ಹೇಳಬೇಕೋ ತಿಳಿಯದೇ ಸುಮ್ಮನಿದ್ದೆ. ಕೊನೆಗೂ ನನಗೆ ಸೂಕ್ತ ಕಾರಣ ಹೊಳೆಯದೆ ದಂಗುಬಡಿದು ಕುಳಿತಿದ್ದೆ. ಅಪ್ಪ ಹೇಳುತ್ತಲೇ ಹೋದರು. "ಸುಮ್ಮನ ಹುಡುಗಾಟಾ ಮಾಡಬ್ಯಾಡಾ, ಇಂಥಾ ವರಾ ಮತ್ತ ಸಿಗೂದಿಲ್ಲ. ಅವರಾಗಿ ಒಪ್ಪಿಕೊಂಡಾರ. ಎಲ್ಲಾ ಕೂಡಿ ಬಂದಽದ. ನಿನ್ನ ತಲೀ ಮ್ಯಾಲೆ ಅಕ್ಕೀಕಾಳು ಹಾಕಿಬಿಟ್ಟರ ನನಗೂ ನಿಶ್ಚಿಂತಿ." ನಾನು ಸೂತ್ರದ ಬೊಂಬೆಯಂತೆ ನಿರ್ಜೀವ ಆಗಿದ್ದೆ.

ಹೌದು, ಇಂದು ಅವ್ವ ಇದ್ದರೆ ಎಷ್ಟು ಚೆನ್ನಾಗಿತ್ತು. ನನ್ನ ಅಂತರಾಳದ ಭಯವನ್ನ. ಮದುವೆ ಎಂದರೆ ತನಗೆ ಮೈ ನಡುಕ ಎನ್ನುವುದನ್ನ ಅವಳಿಗೆ ವಿವರಿಸಿ ಹೇಳಬಹುದಾಗಿತ್ತು. ಪುರುಷನ ಸಹವಾಸ, ಸಂಪರ್ಕಕಕ್ಕೆ ತನ್ನ ದೇಹ, ಮನಸ್ಸು ಇನ್ನೂ ಸಿದ್ಧ ಇಲ್ಲ ಎನ್ನುವದನ್ನು ಯಾರ ಹತ್ತಿರ ತೋಡಿಕೊಳ್ಳಲಿ? ತಾನು ಏಕಾಕಿ, ಆಗಲಿರುವ ಮದುವೆಯಿಂದ ತಪ್ಪಿಸಿಕೊಳ್ಳೋದು ಸಾಧ್ಯವಿಲ್ಲ. ಅಳುತ್ತಲೇ ಡಾಯರಿ ಬರೆಯುತ್ತಿದ್ದೇನೆ.

ವಸುಂಧರೆಯ ಬೆರಳು ಚಲಿಸಿದವು.....

ಇಂದು ನಮ್ಮ ಪ್ರಥಮ ರಾತ್ರಿ. ಶ್ರೀಕಾಂತ ತುಂಬಾ ಖುಷಿಯಲ್ಲಿದ್ದ. ಅವನ ಕಣ್ಣು ತಪ್ಪಿಸಿ ಓಡಾಡುತ್ತಿದ್ದೆ. ನಾಟಿಕೆ ಎಂದು ಅವನು ಭಾವಿಸಿರಬೇಕು. ಮಲಗುವ ಕೋಣೆ ಹೊಕ್ಕಾಗ ನನ್ನೆದೆಯಲ್ಲಿ ಡವ ಡವ. ಅಂಗೈ-ಅಂಗಾಲು ಬೆವರು. ತಲೆ ಸುತ್ತಿ ಬರುತ್ತಿತ್ತು. ತುಂಬಾ ಆಯಾಸವಾಗಿತ್ತು. ಶ್ರೀಕಾಂತ ಹತ್ತಿರ ಬಂದಾಗ "ತುಂಬಾ ತಲೆ ನೋಯ್ತಿದೆ. ನಾ ಮಲಗ್ತೀನಿ. ಪ್ಲೀಜ್" ಎಂದೆ. ನನ್ನನ್ನೇ ದಿಟ್ಟಿಸಿ ನೋಡಿ ಸುಮ್ಮನೆ ಸರಿದು ಮಲಗಿಕೊಂಡ. ನಾನು ಕಣ್ತುಂಬ ನಿದ್ದೆ ಮಾಡಿದೆ...

ನಾಲ್ಕು ದಿನ ಕಳೆದರೂ ದಿನವೂ ಒಂದು ನೆಪ ಹೇಳಿ ಶ್ರೀಕಾಂತನಿಂದ ದೂರವಿದ್ದೆ. ಅವನ ತಾಳ್ಮೆಗೂ ಒಂದು ಮಿತಿಯಿತ್ತು. ಆ ದಿನ ಅವನಿಗೆ ಸಿಟ್ಟೂ ಬಂದಿತ್ತು. ಎಷ್ಟು ಬೇಡಿಕೊಂಡರೂ ಬಿಡದೆ ತುಂಬಾ ಹಿಂಸೆ ಮಾಡಿದ. ಅವನನ್ನು ನೂಕಿದಾಗ ಎರಡೂ ಕೈಚಾಚಿ ನನ್ನ ಕುತ್ತಿಗೆ ಹಿಚುಕಿದ. ಭಯದಿಂದ ಬೆಪ್ಪಳಾದೆ. ಚೀರಬಾರದೆಂದು ನನ್ನ ಬಾಯಿ ಒತ್ತಿ ಹಿಡಿದು ಬಲಾತ್ಕಾರ ಮಾಡಿದ. ಅವನಿಗೇನು ಸುಖ ಸಿಕ್ಕಿತೋ ತಿಳಿಯದು. ನನಗಂತೂ ನನ್ನೊಳಗಿನ ನೋವು ಮತ್ತೆ ಮರುಕಳಿಸಿತ್ತು. ಇಡೀ ರಾತ್ರಿ ಎಲ್ಲ ಅಳುತ್ತಿದ್ದೆ.

ದಿನವೂ ನನಗೆ ನರಕಯಾತನೆ, ಅವನಿಗೆ ಪೌರುಷಕ್ಕೆ ಅವಮಾನ. ಒಂದು ರಾತ್ರಿ ಸಹಿಸಲಾರದೆ ಅವನ ಎದೆ, ಮುಖವನ್ನೆಲ್ಲ ಪರಚಿಬಿಟ್ಟಿದ್ದೆ. ಮನೆಯವರಿಗೂ ಅಸಂತೋಷ. ಗಂಡ-ಹೆಂಡಿರಲ್ಲಿ ಏನೋ ಸರಿ ಇಲ್ಲವೆನ್ನುವ ಅನುಮಾನ. ಅತ್ತೆ ಕೂಡ ಬಾಯಿಬಿಟ್ಟು ಕೇಳಿರಲಿಲ್ಲ. ಒಂದು ರಾತ್ರಿ ಚಟ್ಟನೆ ಚೀರಿಕೊಂಡಾಗ ಎಲ್ಲರೂ ಎದ್ದುಬಂದಿದ್ದರು. ಧಡಾರನೆ ಬಾಗಿಲು ತೆಗೆದು ಹೊರ ಹೋದ ಶ್ರೀಕಾಂತ "ಅವ್ವಾಽ ಆಕೀ ತಲೀ ಸರಿ ಇಲ್ಲ. ನಮಗ ಮೋಸ ಆಗೇದ. ರೂಪ ನೋಡಿ ಮಳ್ಳ ಆದ್ವಿ. ನಾಳೆ ಆಕಿನ್ನ ತವರ್ಮನಿಗೆ ಕಳಸು" ಎಂದು ಹೋಗಿಬಿಟ್ಟ. ವಿಚಿತ್ರ ಪ್ರಾಣಿಯಂತೆ ಎಲ್ಲರೂ ನನ್ನನ್ನು ನೋಡಿದರು. ನನಗೆ ಏನೂ ಅನಿಸಲಿಲ್ಲ...

ಒಂದು ಮೋಜಿನ ಸಂಗತಿ ಇಲ್ಲಿದೆ. ನಾನು ಮನೋರೋಗಿ ಅಂದರೆ ಹುಚ್ಚಿ ಎಂದು ಗಂಡನ ಮನೆಯವರ ಹೇಳಿಕೆ. ಕೋರ್ಟಿನಲ್ಲಿ ಮಾವ ಅದನ್ನು ಸಿದ್ಧಮಾಡಿ ನನ್ನಿಂದ ಬಿಡುಗಡೆಯನ್ನೂ ಪಡೆದಿದ್ದಾರೆ. ಶ್ರೀಕಾಂತನ ಮನೆಯವರು ಮನುಷ್ಯರೇ ಅಲ್ಲ. ವರದಕ್ಷಿಣೆ ಆಸೆಗೆ ನಮ್ಮ ವಸೂಗೆ ಚಿತ್ರಹಿಂಸೆ ಕೊಟ್ಟರು ಎಂದು ತವರುಮನೆಯವರ ತಿಳುವಳಿಕೆ. ನನಗಂತೂ ಬಿಡುಗಡೆ ಸಿಕ್ಕಿತೆನ್ನುವ ಸಂತೋಷದಲ್ಲಿ ನಿಜ ಯಾರಿಗೂ ಹೇಳಲಿಲ್ಲ. ಯಾರಿಗೂ ಗೊತ್ತಿಲ್ಲ.

.................................................................................................................

ಕೊನೆಗೆ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಸಂಜೀವಿನಿಗೆ ಕೂಡ ನಿಜ ಏನು ಗೊತ್ತಿಲ್ಲ.... ನನ್ನ ಹೆರಿಗೆ ನಾರ್ಮಲ್ ಆಗುತ್ತದೆಂದು ಲೇಡಿ ಡಾಕ್ಟರ್ ಮತ್ತು ವಿಶೂ ಕಾಕಾ ಇಬ್ಬರೂ ಅಪ್ಪನಿಗೆ ಭರವಸೆ ಕೊಟ್ಟಿದ್ದರು. ಆದರೆ ಬೇನೆ ಸುರುವಾದಾಗ ನನ್ನಲ್ಲಿ ಚಂಡಮಾರುತವೆದ್ದಿತ್ತು. ಇಡೀ ದೇಹದ ನರನರವೂ ನೋವಿನಿಂದ ಮಿಡಿಯುತ್ತಿದ್ದವು. ಎಲ್ಲ ಅಂಗಗಳನ್ನು ಗಾಣಕ್ಕೆ ಹಾಕಿ ಮುರಿಯುತ್ತಿದ್ದಂತೆ ನನ್ನ ಮಿದುಳಿನಲ್ಲಿ ಚಟ್‌ಚಟ್ ಸಪ್ಪಳವಾಗುತ್ತಿತ್ತು. "ಅವ್ವಾs, ಅವ್ವಾs" ಎಂದು ಚೀರುತ್ತಿದ್ದೆ. ನನ್ನ ಒದ್ದಾಟ, ಸಂಕಟ ನೋಡಲಾಗದೆ ಅಪ್ಪ, ಸಿಜೇರಿಯನ್ ಮಾಡಲೇಬೇಕೆಂದು ಡಾಕ್ಟರರಿಗೆ ಒತ್ತಾಯ ಮಾಡಿದ್ದರು. ಅವರಿಗೆ ಮಗಳು ಬದುಕಿದರೆ ಸಾಕು ಎನಿಸಿತ್ತು. ಡಾಕ್ಟರರಿಗೆ ನಾನೊಂದು ಸ್ಪೆಸಿಮನ್ ಆಗಿದ್ದೆ....

ಅಷ್ಟೇ ಅಲ್ಲ, ಹೊರಜಗತ್ತಿಗೆ ನಾನೊಂದು ವಿಚಿತ್ರ, ವಿಕ್ಷಿಪ್ತ ಜೀವಿ. ಯಾರ ಜೊತೆಗೂ ಕೂಡದೆ, ಏಕಾಂಗಿಯಾಗಲು ಇಷ್ಟಪಡುವ ನಾನು ನಿಜವಾಗಿಯೂ ತಲೆ ಸರಿ ಇಲ್ಲದವಳು ಎಂದು ಜನ ತಿಳಿಯುವುದು ಸಹಜ. ಜನರ ಪರಿವೆ ನನಗಿಲ್ಲ. ನನಗೆ ನನ್ನದೆ ಹವ್ಯಾಸವಿದೆ. ಸಂಜೀವಿನಿ ದೊಡ್ಡವಳಾದಂತೆ ಕೈಗೆ ಬಿಡುವಾಗಿ ಚಿತ್ರ ಬರೆಯುತ್ತಿದ್ದ ಕುಂಚವನ್ನು ಬಿಟ್ಟು ಚಾಣವನ್ನು ಎತ್ತಿಕೊಂಡಿದ್ದೇನೆ. ಕಲ್ಲಿನೊಳಗೆ ಅಡಗಿರುವ ಬೇರು ಚಿಗಿತು, ಮೊಗ್ಗಾಗಿ, ಹೂವಾಗಿ ಅರಳುವುದನ್ನು ನೋಡಿದ ಅಪ್ಪ ವಿಶೂ ಕಾಕ ಸೋಜಿಗಪಟ್ಟರು. ಅವರಿಬ್ಬರ ನೆರವಿಲ್ಲದಿದ್ದರೆ ನಾನು ಈ ಮಟ್ಟಕ್ಕೆ ಬರುವುದೇ ಕನಸಿನ ಮಾತಾಗಿತ್ತು. ಚಾಣ, ಸುತ್ತಿಗೆ, ಕಲ್ಲುಗಳ ಜೊತೆ ಮಾತನಾಡುತ್ತ ಕಾಲ ಕಳೆಯುವ ಈ ಹುಚ್ಚಿಯನ್ನು ಅಂಗೈಯಲ್ಲಿಟ್ಟುಕೊಂಡು ಜೋಪಾನ ಮಾಡಿದರು. ಸಾಯುವ ಮೊದಲು ಅಪ್ಪನಿಗೆ ಒಂದು ತರದ ಮನಃಶಾಂತಿ ಸಿಕ್ಕಿತು....

ಎರಡೂ ಮಂಡಿಗಳ ಮೇಲೆ ತಲೆ ಒರಗಿಸಿ ಕುಳಿತ ಅಹಲ್ಯೆಯ ನೀಳ ಕೂದಲುಗಳನ್ನು ಸೂಕ್ಷ್ಮವಾಗಿ ಕೆತ್ತಲು ಚಿಕ್ಕ ಚಾಣವನ್ನು ಹಿಡಿದು ಕನ್ನಡಕವನ್ನು ಎತ್ತಿಕೊಂಡು, ಅಲ್ಲಿಯೆ ಇದ್ದ ಸಂಜೀವಿನಿಯ ಪತ್ರ ನೋಡಿ ಮುಗುಳುನಕ್ಕಳು ವಸುಂಧರಾ.

ಪ್ರೀತಿಯ ಅವ್ವ,

ನಿನ್ನ ಹುಟ್ಟುಹಬ್ಬಕ್ಕೆ ನಾನು ಕಳಿಸಿದ ಗ್ರೀಟಿಂಗ್ ಮುಟ್ಟಿರಬಹುದು. ಆ ದಿನ ನಾನೇ ಬರಬೇಕೆಂದು ಯೋಚಿಸಿದ್ದೆ. ಆದರೆ ಸಮೀರನಿಗೆ ತುಂಬಾ ಜ್ವರ ಬಂದವು. ದೆಹಲಿಯಲ್ಲಿ ಹಿಂದೂ-ಸಿಖ್ ಗಲಾಟೆ, ಕರ್ಫ್ಯೂನಿಂದಾಗಿ ಆಯಾ ನಾಲ್ಕು ದಿನ ಬರಲೇ ಇಲ್ಲ. ಹೀಗಾಗಿ ನಾನು ಮನೆಯಲ್ಲಿ ಉಳಿಯಬೇಕಾಯಿತು. ನಾಲ್ಕು ದಿನ ಹೊರಗಿನ ಜಗತ್ತು ನೋಡಿರಲಿಲ್ಲ. ಮಗೂನ ನೋಡಿಕೊಳ್ಳೋದರಲ್ಲಿ, ಮನೆ ಕೆಲಸದಲ್ಲಿ ಚೇತನ ತುಂಬ ಸಹಾಯ ಮಾಡಿದರು. ಈ ಯಾಂತ್ರಿಕ ಬದುಕಿನಲ್ಲಿ ನಾಲ್ಕು ದಿನ ನಮ್ಮ ಒಡನಾಟ ಹೊಸ ಹುರುಪು ನೀಡಿತು. ದುಃಖದ ನೆರಳಿನಲ್ಲಿ ಸುಖ ಕಾಣವುದರಿಂದಲೇ ಈ ಬದುಕು ಸಹ್ಯವಾಗುವುದು ಎಷ್ಟು ವಿಚಿತ್ರ ಅಲ್ಲವೇ? ಈಗ ಪರವಾಗಿಲ್ಲ. ಸಮೀರ ಆರೋಗ್ಯವಾಗಿದ್ದಾನೆ. ಚಿಂತೆ ಮಾಡಬೇಡ. ಆಯಾ ಬರುತ್ತಿದ್ದಾಳೆ. ಅವಳ ಗಂಡನಿಗೂ ಜ್ವರ ಬಂದಿದ್ದವಂತೆ. ಸಮೀರ ಬಹಳ ಬಳಲಿದ್ದಾನೆ ಎಂದು ಕಳವಳಪಟ್ಟಳು. ನೀನು ಮಾಣಿಕ ಬಾಯಿಯನ್ನು ನೋಡಿಲ್ಲ ಅವ್ವ. ನಿಜವಾಗಿಯೂ ನೀನು ಸಾವಿರಾರು ಮೈಲು ದೂರವಿರುವ ಕೊರತೆಯನ್ನು ಅವಳು ತುಂಬಿದ್ದಾಳೆ. ಪಾಪ! ದೆಹಲಿಯನ್ನು ಆಗಾಗ ಇಷ್ಟಿಷ್ಟೇ ಸುಡುತ್ತಿರುವ ಬೆಂಕಿಯಲ್ಲಿ ತನ್ನ ಮಕ್ಕಳನ್ನು ಕಳೆದುಕೊಂಡಿದ್ದಾಳೆ. ಈಗ ಮುದುಕ-ಮುದುಕಿ ಇಬ್ಬರೇ. ನಾನು ಕೊಡುವ ಐನೂರು ರೂಪಾಯಿಗಳಿಗಿಂತ ಅವಳು ಬರುವುದು ಸಮೀರನಿಗಾಗಿ ಎಂದು ನನಗೆ ಗೊತ್ತು.

ಇರಲಿ, ನಾನೀಗ ಪತ್ರ ಬರೆಯುತ್ತಿರುವುದು ಒಂದು ಮುಖ್ಯ ಕಾರಣಕ್ಕಾಗಿ. ನನ್ನ ಪತ್ರವನ್ನು ನಿಧಾನವಾಗಿ ಓದಿಕೊಂಡು ಅದರ ಹಿಂದಿನ ಆಸೆಯನ್ನು ತಿಳಿದುಕೋ. ಒಮ್ಮೆ ಓದಿ ಬದಿಗಿಟ್ಟು ಮತ್ತೆ ಚಾಣವನ್ನು ಕೈಗೆತ್ತಿಕೊಳ್ಳಬೇಡ.

ನಮ್ಮ ರಿಸರ್ಚ್ ಸೆಂಟರಿನಲ್ಲಿರುವ ಪ್ರೊ. ಮನದೀಪ ಸೇನ ಚಹಕ್ಕೆ ಮನೆಗೆ ಬಂದಿದ್ದರು. ಅವರು ನನ್ನ ಬಾಸ್ ಮತ್ತು ಗೈಡ್. ಇತಿಹಾಸದಲ್ಲಿ ಪಂಡಿತರು. ಒಟ್ಟಿನಲ್ಲಿ ಇಂಟರನ್ಯಾಷನಲ್ ಫಿಗರ್. ಅವರು ನೀನು ಕಟೆದ ಚಿಕ್ಕ ಬುದ್ಧನ ಮೂರ್ತಿ ನೋಡಿದರು. ಅಚ್ಚರಿಯಿಂದ ಅದನ್ನೇ ದಿಟ್ಟಿಸುತ್ತ ನಿಂತುಬಿಟ್ಟರು.

'ವಾಹ್! ವಂಡರಫುಲ್, ಎಲ್ಲಾ ಕಡೆಗೆ ತಪಸ್ವಿ ಬುದ್ಧನನ್ನೇ ನೋಡಿದ್ದೆ. ಆದರೆ ಬಾಲಬುದ್ಧನ ಇಂಥ ಮೂರ್ತಿಯನ್ನೇ ನೋಡಿರಲಿಲ್ಲ. ಆ ನಿರ್ಲಿಪ್ತ ಮುಖಭಾವವೇ ಹೇಳ್ತದೆ ಇವನು ಚಿಕ್ಕ ಸಿದ್ಧಾರ್ಥನಲ್ಲ. ಬಾಲಬುದ್ಧ ಎಂದು, ಸಿಂಪ್ಲಿ ಬ್ಯೂಟಿಫುಲ್." ನನ್ನ ಕಾಲು ನೆಲದ ಮೇಲೆ ಇರಲಿಲ್ಲ. ಉಬ್ಬಿ ಹೋಗಿ ಆಕಾಶದಲ್ಲಿ ತೇಲಾಡುತ್ತಿದ್ದೆ.

"ನಿಮಗೆ ಎಲ್ಲಿ ಸಿಕ್ಕಿತು ಇದು, ಇಂಥ ಅಪರೂಪದ ಕಲಾಕೃತಿ ?" ಎಂದು ಅವರು ಕೇಳಿದಾಗ ಭೂಮಿಗೆ ಇಳಿದೆ, ಆಗ ಎಲ್ಲ ಹೇಳಲೇಬೇಕಾಯಿತು. "ಎಂಥ ಉತ್ತಮ ಕಲಾವಿದೆ. ನಿಮ್ಮ ತಾಯಿ, ನಿಮ್ಮ ಆತಿಥ್ಯದ ಜೊತೆಗೆ ಇದೊಂದು ಸಂತೋಷದ ಸಿದ್ಧಿ ಎಂದರು. ಹೋಗುವಾಗ ಮತ್ತೊಮ್ಮೆ ಕಣ್ತುಂಬ ಮೂರ್ತಿ ನೋಡಿ ಹೋದರು. ಇದಿಷ್ಟು ನಡೆದ ವಿಷಯ. ಆದರೆ ಈಗ ಒಂದು ಪೇಚಿನ ಪ್ರಸಂಗ ಬಂದಿದೆ. ಮೊನ್ನೆ ಪ್ರೊ. ಸೇನ 'ನಾನು ಒಂದು ಸೆಮಿನಾರಿಗೆ ಬೆಂಗಳೂರಿಗೆ ಹೋಗ್ತಾ ಇದ್ದೀನಿ. ನಿಮ್ಮ ತಾಯಿಯವರನ್ನು ಒಂದು ಸಲ ನೋಡಬೇಕು, ಮಾತನಾಡಬೇಕು ಅನ್ನೋ ಆಸೆ. ದಯವಿಟ್ಟು ಅವರ ಅಡ್ರೆಸ್ ಕೊಡಿ" ಅಂದರು. ಬೇರೆದಾರಿ ಕಾಣದೆ ನಿನ್ನ ಅಡ್ರೆಸ್ ಬರೆದುಕೊಟ್ಟೆ. ಮನೆಗೆ ಬಂದ ಮೇಲೆ ಚೇತನ ಜೊತೆ ಮಾತನಾಡಿದೆ. ನನ್ನ ಪ್ರೊಫೆಸರ್ ನಿನ್ನನ್ನು ಕೇಳದೆ ಇಷ್ಟೆಲ್ಲ ಆಗಿದೆ. ಆದ್ದರಿಂದ ಈ ಪತ್ರ ಬರೆಯುತ್ತಿದ್ದೇನೆ. ಬರುವ ಸೋಮವಾರ ಪ್ರೊ. ಸೇನ ನಿನ್ನ ಮನೆಗೆ ಬರುತ್ತಾರೆ. ವಿಶೂ ಕಾಕಾರಿಗೆ ತಮ್ಮ ಕ್ಲಿನಿಕ್‌ನಿಂದ ಒಂದೆರಡು ಗಂಟೆ ಬಿಡುವು ಮಾಡಿಕೊಂಡು ಸೇನರನ್ನು ನಿನಗೆ ಭೆಟ್ಟಿ ಮಾಡಿಸಲು ಕೇಳಿಕೊಂಡಿದ್ದೇನೆ. ದಯವಿಟ್ಟು ಸಿಟ್ಟಾಗಬೇಡ. ಒಲ್ಲೆ ಎನ್ನಬೇಡ. ನೀನು ಯಾರ ಜೊತೆಗೂ ಮಾತು, ಭೆಟ್ಟಿ, ಸಂಪರ್ಕ ಇಟ್ಟುಕೊಳ್ಳುವುದಿಲ್ಲ ಎನ್ನುವುದು ನನಗೆ ಗೊತ್ತು. ಆದರೆ ಈಗ ನಾನು ಅಸಹಾಯಕಳು. ಇದೊಂದು ಸಲ ಒಪ್ಪಿಕೋ. ನಿನ್ನ ಧಾಬಲಿ-ಅರ್ಥಾತ್ ಏಪ್ರನ್ ಕಟ್ಟಿಡು. ನೀಟಾಗಿ ಡ್ರೆಸ್ ಮಾಡಿಕೋ. ನಿನ್ನ ತಾಯಿ ತುಂಬ ಚೆನ್ನಾಗಿದ್ದಾರೆ ಎಂದರೆ ನನಗೆ ಇನ್ನೆರಡು ಕೋಡು. ಹುಂ, ಹಾಗೆಯೇ ನಿನ್ನ ಕಾಲೇಜಿನ ಇಂಗ್ಲೀಷು ಸ್ವಲ್ಪ ನೆನಪು ಮಾಡಿಕೋ. ಸೇನರಿಗೆ ಬೆಂಗಾಲಿ, ಇಂಗ್ಲೀಷ್ ಬಿಟ್ಟರೆ ಬೇರೆ ಭಾಷೆ ಬರುವುದಿಲ್ಲ. ನೀನು ಮಾಡಿಟ್ಟ ಮೂರ್ತಿಗಳನ್ನು ಅವರಿಗೆ ತೋರಿಸು. ಒಳ್ಳೆಯ ಮನುಷ್ಯರು, ಸಂಕೋಚ ಬಿಟ್ಟು ಮಾತನಾಡು. ನಿನ್ನ ಶಿಲ್ಪಕಲೆಗೆ ಅವರಿಂದ ಹೊಸ ಮಾತುಗಳೂ ತಿಳಿಯಬಹುದು. ಒಟ್ಟಿನಲ್ಲಿ ನನ್ನ ಮಾನ ಉಳಿಸು. ಎಲ್ಲ ನಿನ್ನ ಕೈಯಲ್ಲಿದೆ. ನೀನು ಮನಸ್ಸು ಮಾಡಿದರೆ ಎಲ್ಲವೂ ಸಾಧ್ಯ. ನನ್ನನ್ನು ನಿರಾಶೆ ಮಾಡಬೇಡ. ಸೇನರ ಭೆಟ್ಟಿಯಾದ ಮೇಲೆ ಪತ್ರ ಬರೆ. ಚೇತನ ನಮಸ್ತೆ ಹೇಳಿದ್ದಾರೆ. ಸಮೀರ ಅಮ್ಮ ಅನ್ನಲು ಕಲಿತಿದ್ದಾನೆ.

ಮರೆತ ಮಾತು : ಹಾಂ, ಪ್ರೊ. ಸೇನ ಚೇಯ್ನ್‌ಸ್ಮೋಕರ್, ಹೇಗಾದರೂ ತಡೆದುಕೋ.

ನಿನ್ನ ಸಂಜೂ

***

ತಿಳಿನೀಲಿ ಹೂಗಳಿದ್ದ ಬಿಳಿ ಸೀರೆ ಉಟ್ಟುಕೊಂಡು ಕುಂಕುಮವನ್ನು ದುಂಡಗೆ ತೀಡುತ್ತಿರುವಾಗ ಕಿರುಗಂಟೆ ಝಣಝಣಿಸಿತು. ಮುತ್ತಿನೋಲೆಯ ಕಿವಿಯನ್ನು ಸುತ್ತಿದ್ದ ಬೆಳ್ಳಿ ಕೂದಲನ್ನು ಹಿಂದೆ ಸರಿಸುತ್ತ ವಸುಂಧರಾ ಬಾಗಿಲು ತೆರೆದಳು.

ಬೊಜ್ಜು ಮೈ, ಬೋಳು ತಲೆಯ, ಕನ್ನಡಕಧಾರಿ ಇತಿಹಾಸ ಪಂಡಿತರ ಬದಲು ಬಾಹುಬಲಿಯಂತೆ ಎತ್ತರ ನಿಲುವಿನ, ಅಗಲ ಭುಜದ ತೀಕ್ಷ್ಣ ದೃಷ್ಟಿಯ ಪ್ರೊ. ಸೇನರನ್ನು ನೋಡಿ ಅಚ್ಚರಿಯಿಂದ ತಲೆ ತಗ್ಗಿಸಿದಳು. ವಿಶೂಕಾಕಾಗೆ

ಅರ್ಜೆಂಟ್ ಕೆಲಸ ಬಂದಿದ್ದರಿಂದ ಅವರೊಡನೆ ಕಾಕಾನ ಮಗ ಪ್ರಶಾಂತ ಬಂದಿದ್ದ. ಪರಿಚಯ ಮಾಡಿಸಿ ಹೊರಟು ನಿಂತ.

"ಅಕ್ಕಾ, ನೀವಿಬ್ರೂ ಮಾತನಾಡ್ತಿರ್ರಿ. ಸ್ವಲ್ಪ ಕೆಲಸ ಅದ. ನಾ ಹೋಗಿ ಮತ್ತ ಬರ್ತೀನಿ, ಬಾಯ್."

ಈ ಅಪರಿಚಿತ ಪುರುಷನೊಡನೆ ಹೇಗೆ ಮಾತು ಪ್ರಾರಂಭಿಸಬೇಕು ತಿಳಿಯದೆ ಕುಳಿತಲ್ಲೇ ಚಡಪಡಿಸಿದಳು. ಸೇನ ತುಂಬ ಚುರುಕು. ಅವಳ ಸಂಕೋಚ ಹೋಗಲಾಡಿಸಲು ತಾನೇ ಮಾತಿಗೆ ಮೊದಲಿಟ್ಟರು. ಸಂಜೂನ ಜಾಣತನ, ಬುದ್ಧಿವಂತಿಕೆ, ಎಲ್ಲದರ ಬಗ್ಗೆ ಹೇಳಿದರು. ಕೋಣೆಯಲ್ಲಿ ಅಲ್ಲಲ್ಲಿ ಇಟ್ಟ ಮೂರ್ತಿಗಳನ್ನು ನೋಡುತ್ತ ತಿರುಗಾಡಿದರು. ಡವ ಡವ ಎನ್ನುತ್ತಿದ್ದ ಎದೆಯನ್ನು ವಸುಂಧರೆ ಹಿಡಿತಕ್ಕೆ ತಂದಳು. ಧೈರ್ಯ ಮಾಡಿ, "ನೀವು ಆರಾಮಾಗಿ ಕೂತುಕೊಳ್ರಿ. ಬಹಳ ಮಾತಾಡೂದು ಅದ. ಚಹಾ ತರ್ತೀನಿ" ಎಂದು ತಡವರಿಸುತ್ತ ಇಂಗ್ಲೀಷ್‌ನಲ್ಲಿ ಹೇಳಿದಳು.

ಚಹ ಕುಡಿಯುತ್ತ ಸೇನ ಹೇಳಿದರು, "ನಿಮ್ಮ ಒಂದು ವೈಶಿಷ್ಟ್ಯ ನನಗ ಎದ್ದು ಕಂಡಿದೆ ವಸುಂಧರಾ. ನಿಮ್ಮ ಮೂರ್ತಿಗಳಲ್ಲಿ ಒಂದೂ ಪುರುಷನದಿಲ್ಲ. ಎಲ್ಲವೂ ಸ್ತ್ರೀಯರು, ಇಲ್ಲವೇ ಮಕ್ಕಳು. ಯಾಕೆ ಅಂತ ನಾನು ಕೇಳೋದಿಲ್ಲ. ನೀವು ಪುರುಷದ್ವೇಷಿ ಅಲ್ಲ ಅಂತ ತಿಳಕೊಂಡಿದೀನಿ." ತುಟಿಯಂಚಿನಲ್ಲಿ ನಗೆ ಮಿನುಗುತ್ತಿತ್ತು.

ಅವರಿಂದ ಮುಖ ಮರೆಸಲು ವಸುಂಧರಾ ಧಿಗ್ಗನೆ ಎದ್ದಳು. ಅತ್ತಿತ್ತ ಏನೋ ಹುಡುಕಾಡಿದಂತೆ ಮಾಡಿ ಕಿಟಕಿಯ ದಂಡೆಯ ಮೇಲಿದ್ದ ಕರೀಕಲ್ಲಿನ ಚಿಕ್ಕ ಬಟ್ಟಲು ತಂದಿಟ್ಟಳು. "ಪ್ರೊಫೆಸರ ಸೇನ್, ನೀವು ಚೇನ ಸ್ಮೋಕರ ಅಂತೆ. ಸಿಗರೇಟ್ ಹಚ್ಚಬಹುದು. ಸಂಕೋಚ ಪಡಬೇಡಿ."

"ಪರವಾಗಿಲ್ಲ, ಥ್ಯಾಂಕ್ ಯೂ. ಓಹ್! ಎಷ್ಟು ಚೆನ್ನಾಗಿದೆ." ಬಟ್ಟಲಿನ ಸುತ್ತಲಿನ ಸುಳುವುಗಳನ್ನು ತಿರುಗಿಸಿ ನೋಡಿ ಮೆಚ್ಚಿದರು.

"ಅದು ನಿಮಗೆ ನನ್ನ ಕಾಣಿಕೆ. ದಯವಿಟ್ಟು ಇಟ್ಟುಕೊಳ್ಳಿ"

"ಥ್ಯಾಂಕ್ ಯೂ ವಸುಂಧರಾ. ತುಂಬಾ ಸಂತೋಷ."

ಮುಂದೆ ಕಲಾವಿದರ ಬಗ್ಗೆ, ಶಿಲ್ಪಕಲೆಯ ಶಾಸ್ತ್ರೀಯ ಗ್ರಂಥಗಳ ಬಗ್ಗೆ ಮಾತು ಮುಂದುವರಿಸಿದರು ಪ್ರೊ. ಸೇನ, ಹೆಚ್ಚು ಮಾತೆಲ್ಲ ಅವರದೇ. ದೇಶ ವಿದೇಶಗಳನ್ನು ಸುತ್ತಿದವರು, ಇತಿಹಾಸದ ಪಂಡಿತರು, ಕಲಾಭಿಮಾನಿಗಳು, ಶಿಲ್ಪಕಲೆಯ ಬಗ್ಗೆ ಹೆಚ್ಚು ತಿಳಿದವರು. ಅವರ ಮಾತಿನಲ್ಲಿ ಕಾಲ ಸರಿದದ್ದೇ ತಿಳಿಯಲಿಲ್ಲ. ವಸುಂಧರಾನ ಬದುಕಿನಲ್ಲಿ ಆ ಕಾಲ ತುಂಬ ಅಮೂಲ್ಯವಾದದ್ದು. ಶಿಲ್ಪಶಾಸ್ತ್ರದ ಬಗ್ಗೆ ತಾನು ಓದಿದ್ದು, ತಿಳಿದದ್ದು ತುಂಬಾ ಕಡಿಮೆ ಎನಿಸ್ತಿದೆ. ಅವಳಿಗೆ ಹವ್ಯಾಸವೆಂದು ಪ್ರಾರಂಭವಾಗಿದ್ದ ಅವಳ ಮೂರ್ತಿಗಳು ಇತ್ತೀಚೆಗೆ ಚೆನ್ನಾಗಿ ಮಾರಾಟವಾಗುತ್ತಿದ್ದವು. ಬೇಡಿಕೆಗಳೂ ಬಂದಿದ್ದವು. ಆದರೆ ಬೇರೆಯವರ ಬೇಡಿಕೆಗಿಂತ ತನ್ನ ಮನದಾಳದಿಂದ ಹೊರಹೊಮ್ಮುವ ಭಾವನೆಗಳಿಗೆ ರೂಪ ಕೊಡುವುದು ತನ್ನ ಸ್ವಭಾವ. ಅದರಲ್ಲೇ ನನಗೆ ಹೆಚ್ಚಿನ ತೃಪ್ತಿ ಎಂದ ಅವಳ ಮಾತು ಮನದೀಪರ ಮನ ತಟ್ಟಿತು. ಕೈಚಾಚಿ ಮೇಜಿನ ಮೇಲಿದ್ದ ಅವಳ ಕೈ ಹಿಡಿದು ಮೃದುವಾಗಿ ಅಂಗೈ ಮೇಲೆ ಕೈಯಾಡಿಸಿ ಬೆರಳು ನೇವರಿಸಿದರು. ಉಗುರು ಮುರಿದು, ಅಲ್ಲಲ್ಲಿ ಗೀರು ಬಿದ್ದು, ಗೆರೆಗಳಲ್ಲಿ ಕೊಳೆ ತುಂಬಿದ ಅಂಗೈಯನ್ನು ಸಂಕೋಚದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು ವಸುಂಧರಾ. ಸೇನ ಬಿಡಲಿಲ್ಲ.

"ನಿಮ್ಮ ಕೈಯಲ್ಲಿ ಕಲ್ಲು ಮೇಣವಾಗಿದೆ ವಸುಂಧರಾ, ಅದಕ್ಕೆ ಯಾವ ರೂಪವನ್ನೂ ಕೊಡಬಲ್ಲಿರಿ. ನಿಜವಾಗಿಯೂ ನಿಮ್ಮ ಏಕಾಗ್ರಚಿತ್ತ, ತಾಳ್ಮೆ ಅಪರೂಪದ್ದು. ಹೀಗೇ ಮುಂದುವರಿಸಿ. ಬೆಸ್ಟ್ ಆಫ್ ಲಕ್. ಬೆಂಗಳೂರಿಗೆ

ಬಂದಾಗಲೆಲ್ಲ ನಿಮ್ಮ ಭೆಟ್ಟಿಗೆ ಬರ್ತೀನಿ." ಮನದೀಪ ನಕ್ಕರು. ಮಗುವಿನಂಥ ಆ ನಿಷ್ಕಲ್ಮಷ ನಗೆ! ವಸುಂಧರಾನ ಮನಸ್ಸಿನಲ್ಲಿ ಅಚ್ಚೊತ್ತಿ ಹೋಯಿತು. ಸಂಕೋಚದ ಪೊರೆ ಕಳಚಿಬಿತ್ತು.

ಕಲ್ಲಿನಿಂದ ಅಹಲ್ಯೆ ಎದ್ದು ಬಂದಿದ್ದಳು. ವಸುಂಧರಾ ಚಾಣ ಕೆಳಗಿಟ್ಟು ಪೆನ್ನು ಎತ್ತಿಕೊಂಡಳು.

ಪ್ರಿಯ ಸಂಜೂ,

ಪ್ರೊ. ಸೇನ ಬಂದಿದ್ದರು......

ಮನದಲ್ಲಿ ಮೂಡಿದ ಭಾವನೆಗಳನ್ನು ಅಕ್ಷರಗಳಲ್ಲಿ ಇಳಿಸಲು ಅವಳಿಂದ ಸಾಧ್ಯವಾಗದೆ ಹೋಯಿತು.

***

■■

# ಹುಚ್ಚು

ಹೆಚ್ಚು ಬೆಳಕಿಲ್ಲದ ಈ ಚಿಕ್ಕ ಕೋಣೆಯಲ್ಲಿ ಬಂದಾಗ ಗೋಡೆಯಲ್ಲಿ ಒರಗಿಸಿಟ್ಟ ಬಟ್ಟೆಯ ಗಂಟಿನಂತೆ ಅವಳು ಕುಳಿತಿದ್ದಳು. ಛೇ ಇವಳು ಯಾರೋ ಬೇರೆ. ಅರ್ಧ ನರೆತ ಕೂದಲು, ಮಾಸಿದ ಸೀರೆ, ಸೊರಗಿದ ಮೈ ಮುಖ ಸರಿಯಾಗಿ ಕಾಣುತ್ತಿಲ್ಲ.

"ನಿಮ್ಮನ್ನ ನೋಡಾಕ ಯಾರೋ ಬಂದಾರ ಗಿರಿಜಮ್ಮಾ" ಹತ್ತಿರದ ಹಾಸಿಗೆಯಲ್ಲಿ ಮಲಗಿದ್ದ ಮುದುಕಿ ಕೂಗಿದಾಗ ಗಂಟು ಚಲಿಸಿತು. ಬೋಳು ಹಣೆ, ಒಡವೆಗಳಿಲ್ಲದ ಕಿವಿ, ಮೂಗು, ಹೂವಿಲ್ಲದ ತುರುಬು - ಈ ಸಲ ಅವಳಲ್ಲ ಎನಿಸಲಿಲ್ಲ - ಅವಳಿನ್ನೂ ದಿಟ್ಟಿಸಿ ನೋಡುತ್ತಲೇ ಇದ್ದಳು ನಂಬದಂತೆ. ಕಣ್ಣಿನ ಅಪರಿಚಿತ ಭಾವ ಮಾಯವಾಗುತ್ತ ಕ್ರಮೇಣ ದುಃಖ ತುಂಬಿಕೊಳ್ಳುತ್ತಿತ್ತು. ಅಲ್ಲಿಯ ನೋವು, ಅಸಹಾಯಕತೆ - ತಡೆಯಲಾಗಲಿಲ್ಲ, ಮೊಣಕಾಲೂರಿ ಕುಳಿತು, 'ದೊಡ್ಡವ್ವಾ' ಎನ್ನುತ್ತ ಅಪ್ಪಿಕೊಂಡಳು ಸರೋಜ. ಅವಳಿಗೂ ತನ್ನ ಒಂಟಿತನದ ಆಳದ ನೋವು ಚಿಮ್ಮಿ ಬಂದಿತ್ತು.

"ಸರೂ, ಸುಮ್ಮನಾಗು, ಅಳಾಕ ಏನ ಆಗೇತಿ ಈಗ?". ಬೆನ್ನು ನೇವರಿಕೆಯೊಡನೆ ಬಂದ ಮಾತು ಹಿತವೆನಿಸಿತು. ಕಣ್ಣುಮುಚ್ಚಿ ಸುಮ್ಮನೆ ಅವಳ ತೊಡೆಯ ಮೇಲೆ ಮಲಗಿದಳು ಸರೋಜ, ಎಷ್ಟೋ ವರ್ಷಗಳ ಹಿಂದೆ ಮಲಗುತ್ತಿದ್ದಂತೆ. ಹೆಣ್ಣು ಮಕ್ಕಳಿಲ್ಲದ ದೊಡ್ಡವ್ವನಿಗೆ ತನ್ನನ್ನು ಕಂಡರೆ ಆಟದ ಗೊಂಬೆ ಸಿಕ್ಕಂತೆ, ಮಗುವಾಗಿ ಆಡುವವಳು. ಅವಳ ಮುದ್ದುಗಳಿನ್ನೂ ಕೆನ್ನೆಯ ಮೇಲೆ ಹಸಿಯಾಗಿರುವಂತೆ ಅನಿಸುತ್ತಿತ್ತು. ಹಾಗೇ ಹೊತ್ತೆಷ್ಟು ಸರಿಯಿತೋ ಇಬ್ಬರಿಗೂ ತಿಳಿಯಲಿಲ್ಲ. ಇವಳನ್ನು ಬಿಟ್ಟು ವಿಮಲಾಬಾಯಿ ಹೊರಟುಹೋಗಿದ್ದಳು. ವಾತ್ಸಲ್ಯದಿಂದ ಬಗ್ಗಿ ಅವಳ ಸುರುಳಿಗುರುಳುಗಳನ್ನು ಸರಿಸುತ್ತ ಕೇಳಿದಳು ಗಿರಿಜಮ್ಮ.

"ನಾ ಇಲ್ಲೆ ಇದ್ದದ್ದು ನಿನಗ ಹ್ಯಾಂಗ ಗೊತ್ತಾತು ?"

"ನಿನಗ ಗೊತ್ತಿಲ್ಲ ದೊಡ್ಡವ್ವಾ, ನಾ ಇದs ಊರ ಕಾಲೇಜದಾಗ ಲೆಕ್ಚರರ ಅದೀನಿ. ಹತ್ತು ವರ್ಷದಿಂದ ಯಾರೂ - ಅವ್ವ ಅಪ್ಪ ಸುದ್ದಾ ನನಗ - ಪತ್ರಾ ಬರದಿದ್ದಿಲ್ಲ. ಗಿರೀಶಣ್ಣನ ಪತ್ರ ಬಂತು ಮೊನ್ನೆ. ಎರಡು ತಿಂಗಳಾದ್ದು ಅವ್ವ ಮನೀ ಬಿಟ್ಟು ಎಲ್ಲೋ ಹೋಗ್ಯಾಳ. ಅಪ್ಪ ತೀರಿಕೊಂಡಾಗಿಂದ ಮನಸ್ಸಿಗೆ ಹಚ್ಚಿಕೊಂಡು ಆಕಿ ಹುಚ್ಚು ಆಗ್ಯಾಳ. ನಿಮ್ಮೂರ ವೃದ್ಧಾಶ್ರಮದಾಗ ನೋಡಿದ್ಹಾಂಗ ಆಯ್ತು ಅಂತ ಯಾರೋ ಅಂದರು. ಅದಕ್ಕ ನೀ ನೋಡಿ ಬಂದು ಖರೇ ಏನದ ನಮಗ ತಿಳಿಸು. ನಾವು ಬಂದು ಕರಕೊಂಡು ಹೋಗ್ತೀವಿ ಅಂತ ಬರದಿದ್ದ."

"ಹುಚ್ಚು ಯಾರಿಗೆ ಹಿಡಿದsದೋ ಏನೋ ನನಗೆ ತಿಳೀವೊಲ್ಲದು. ಅವರಿಗೋ? ನನಗೋ?" ಕಣ್ಣೀರಿನಲ್ಲೇ ನಕ್ಕಳು ಗಿರಿಜಮ್ಮ.

"ಏಳಿನ್ನ ಮನೀಗೆ ಹೋಗೂಣು. ನಿನ್ನ ಕೂಡ ಭಾಳ ಮಾತಾಡಬೇಕು ನಾನು. ವಿಮಲಾಬಾಯಿಯನ್ನೂ ಕೇಳೀನಿ. ಅವರೂ ಒಪ್ಪಿಗಿ ಕೊಟ್ಟಾರ." ಏನೋ ಒಂದ ನಮೂನಿ ಅದಾರ, ನಿಮ್ಮ ದೊಡ್ಡವ್ವ, ನಾರ್ಮಲ್ ಇದ್ದಾಂಗ ಇಲ್ಲಾ. ನಮಗೂ ಪ್ರಾಬ್ಲೆಮ್ ಆಗ್ಯಾರ. ಅಗತ್ಯ ಮನೀಗೆ ಕರಕೊಂಡು ಹೋಗರಿ ಎಂದು ಅವರು ಹೇಳಿದ್ದನ್ನು ನೆನಪಿಸಿಕೊಂಡಳು ಸರೋಜ.

"ಬ್ಯಾಡವ್ವ, ನಿಮ್ಮ ಮನೀಗೆ ಬ್ಯಾಡಾ, ನಿನ್ನ ಗಂಡ ಏನರೆ ಅಂದಾರು. ಇಲ್ಲೇ ಮಾತಾಡೂಣು. ನಾಳೆ ಮತ್ತ ಬಾ" ಕಳುಹಿಸಿಕೊಡುವವಳಂತೆ ಕೈಯೂರಿ ಮೇಲೆದ್ದಳು ಮುಖದಲ್ಲಿ ಕಳೆ ಮೂಡತೊಡಗಿತ್ತು.

"ನಾ ಕರಿಯೂದು ನನ್ನ ಮನೀಗೆ ದೊಡ್ಡವ್ವಾ. ಗಂಡನ ಮನೀಗಲ್ಲ. ನಾನು ಗಂಡನ್ನ ಬಿಟ್ಟು ಬಂದು ಎರಡ ವರ್ಷಾದ್ವು. ಈಗ ಒಬ್ಬಾಕಿ ಅದೀನಿ. ನೀ ಬರಲಿಕ್ಕೇ ಬೇಕು." ಯಾವುದೇ ಸಂಕೋಚವಿಲ್ಲದೆ ಹೇಳಿದ ಸರೋಜ ಮೂಲೆಯಲ್ಲಿದ್ದ ಹಳೆಯ ಕೈಚೀಲ ಎತ್ತಿಕೊಂಡಳು.

ಒಂದು ಕ್ಷಣ ಸರೋಜಳ ಮುಖ ದಿಟ್ಟಿಸಿ ಮಾತಾಡಿದಳು ಗಿರಿಜಮ್ಮ ಕನವರಿಸುವವಳಂತೆ. "ಆತು, ಇಬ್ಬರೂ ಹುಚ್ಚರ ಆಗೀವಿ. ನಾನು ಮನೀ ಬಿಟ್ಟೆ, ನೀನು ಗಂಡನ್ನ ಬಿಟ್ಟಿ. ಆದರ ಸರೂ ನಿಮ್ಮವ್ವನ ಪತ್ರ ಬಂದಾಗ ಇವರು ಮೈಮ್ಯಾಗ ದೆವ್ವ ಬಂದವರ್ಹಾಂಗ ಕುಣಿದರು. ಆ ಲೌಡಿ ಎಲ್ಲಾರ ಮುಖಕ್ಕೆ ಮಸೀ ಬಳದು, ಬ್ಯಾರೆ ಜಾತಿಯವನ ಕೂಡ ಓಡಿಹೋಗ್ಯಾಳ ಅಂದಮ್ಯಾಲೆ, ನಮ್ಮ ಪಾಲಿಗೆ ಸತ್ತುಹೋದಳು. ಆಕೀ ಕೂಡ ಯಾವದೇ ರೀತಿ ಸಂಬಂಧ ಇಟಕೋಬಾರದು. ಆಕಿ ನಮ್ಮ ಮನೀ ಕಟ್ಟಿಕಲ್ಲ ಹತ್ತಬಾರದು ಅಂತ ಒದರಾಡಿದರು, ಆಕಳಾ ಹಿಂಡೂ ನೆವಾ ಮಾಡಿ ಹಿತ್ತಲದಾಗ ಹೋಗಿ ಅತ್ತೆ. ಒಬ್ಬಳಽ ಕೂತಕೊಂಡು ಸಂಕಟಾಪಟ್ಟೆ. ಆದರ ಒಳಗೊಳಗ ಸಂತೋಷಾನೂ ಆಗ್ತಿತ್ತು. ಯಾಕ ಗೊತ್ತೈತೇನ? ನಮ್ಮ ಸರೂ ತಾನು ಪ್ರೀತಿ ಮಾಡೂ ಹುಡುಗನ್ನ ಮದುವಿ ಆಗಿ ಸುಖದಿಂದ ಇರತಾಳಂತಲ್ಲಾ ಅಂತ." ಆದರ.....

ಒಂದು ಶಬ್ದವೂ ಕಿವಿಗೆ ಬೀಳದಂತೆ ಹೊರಗೆ ಹೊರಟ ಸರೋಜಳನ್ನು ಹಿಂಬಾಲಿಸಿದಳು ಗಿರಿಜಮ್ಮ. ದಿಂಬಿನ ಚೀಲದಿಂದ ಕಾಗದದ ಪುಡಿಕೆಯೊಂದನ್ನು ತೆಗೆದು ಕುಪ್ಪಸದೊಳಕ್ಕೆ ಸೇರಿಸಿಕೊಂಡದ್ದನ್ನು ಸರೋಜ ನೋಡಿಯೂ ನೋಡದಂತಿದ್ದಳು.

ಬೆಳಿಗ್ಗೆ ಸ್ನಾನ ಮಾಡಿ ಪೂಜೆ ಮಾಡಿದ ಹೊರತು ಬಾಯಲ್ಲಿ ಹನಿ ನೀರೂ ಹಾಕಿದವಳಲ್ಲದೊಡ್ಡವ್ವ. ಅವಳ ಮಡಿ, ಉಪವಾಸ, ವ್ರತ ಎಲ್ಲ ತಾನು ಕಂಡಿದ್ದಳು. 'ದೇವರ ಕ್ವಾಣೆ ಎಲ್ಲೆ ಐತಿ ಸರೂ' ಎಂದು ಕೇಳಿದರ 'ದೇವರು ಅದಾನಂತ ನಾನು ನಂಬೂದಿಲ್ಲ. ಪೂಜಿ ಮಾಡೂದೂ ಇಲ್ಲಾ. ದೊಡ್ಡವ್ವಾ ನಿನಗ ಬೇಕಽ ಬೇಕು ಅಂದರ ಆ ಶಿವನ ಕ್ಯಾಲೆಂಡರಕ ಪೂಜೆ ಮಾಡು' ಎಂದು ಹೇಳಬೇಕೆಂದುಕೊಂಡಿದ್ದಳು. ಆದರೆ ತಲೆಗೆ ಸ್ನಾನ ಮಾಡಿದ ಗಿರಿಜಮ್ಮ ಏನೂ ಕೇಳದೆ ಹಿತ್ತಿಲಿಗೆ ಕೂದಲು ಒಣಗಿಸಲು ಹೋಗಿ ಹೂವಿನ ಗಿಡಗಳ ಅಂದ - ಚಂದ ನೋಡುತ್ತ ನಿಂತದ್ದು ನೋಡಿ ಪೆಚ್ಚಾದಳು ಸರೋಜ.

ತನ್ನದೆನ್ನುವ ಮನೆಯನ್ನು ಬಿಟ್ಟುಬಂದವಳು. ಇನ್ನೊಬ್ಬರಿಗೆ ತೊಂದರೆ ಕೊಡಬಾರದೆನ್ನುವಷ್ಟು ಸೂಕ್ಷ್ಮ ಮನಸ್ಸಿನವಳು. ಅವಳ ನಂಬಿಕೆ ಅವಳಿಗೆ. ಪಾಪ, ಪೂಜೆ ಮಾಡದ್ದಕ್ಕೆ ಮತ್ತೆ ಅವಳ ಹುಚ್ಚು ಮರುಕಳಿಸಬಾರದಲ್ಲ. ತನ್ನ ಮನಸ್ಸಿಗಾದ ನೋವಿನಿಂದ ತಲೆ ಕೆಟ್ಟು ಮನೆ ಬಿಟ್ಟಿದ್ದಾಳೆ. ಇಲ್ಲವಾದರೆ ಅವಳಿಗೇನು ಕಡಿಮೆ. ಮೂವರು ಮಕ್ಕಳು. ಸೊಸೆಯಂದಿರು. ಆಸ್ತಿ-ಪಾಸ್ತಿ, ತುಂಬಿದ ಮನೆಯ ಯಜಮಾನಿಯಾಗಿ ಇರಬಹುದಿತ್ತು. ಮನೆ ಬಿಟ್ಟ ಕಾರಣವನ್ನು ತಾನಿನ್ನೂ ಕೇಳಿಲ್ಲ. ಸದ್ಯಕ್ಕೆ ಬೇಡ. ಅವಳಾಗಿಯೇ ಹೇಳಲಿ. ಅವಳಿಗೆ ಬೇಕೆನ್ನಿಸುವಷ್ಟು ದಿನ ಇಲ್ಲಿಯೇ ಇರಲಿ. ಸಂತೋಷವಾಗಿದ್ದರೆ ಸಾಕು. ತನಗೂ ಒಂದು ಆಸರ. ಮನೆಯ ಬಗ್ಗೆ ನಿಶ್ಚಿಂತೆ. ಯೋಚಿಸುತ್ತ ತಲೆ ಬಾಚಿಕೊಳ್ಳುತ್ತಿದ್ದ ಸರೋಜ ಕಿಡಕಿಯಲ್ಲಿ ಹಣಿಕಿದಳು. ಪಾತ್ರೆ ತೊಳೆಯುತ್ತಿದ್ದ ಪಾರ್ವತಿಯ ಮೊಮ್ಮಗುವನ್ನು ದೊಡ್ಡವ್ವ ಸೊಂಟದಲ್ಲಿಟ್ಟುಕೊಂಡು ಓಡಾಡುತ್ತಿದ್ದಳು. ನಾಳೆ ಅವಳ ಜಾತಿ ಗೊತ್ತಾದರೆ? ಸರೋಜಳಿಗೆ ನಗೆ ಬಂತು.

ಮತ್ತೊಂದು ದಿನ ಸರೋಜ ಮನೆಗೆ ಬಂದಾಗ ಬಾಗಿಲು ತೆರೆದ ದೊಡ್ಡವ್ವನ ಹಣೆಯಲ್ಲಿ ದೊಡ್ಡ ದುಂಡು ಕುಂಕುಮ, ತಲೆತುಂಬ ಹೂವು. ಅಚ್ಚರಿಯಾದರೂ ಸಂತೋಷವಾಯಿತು. "ದೊಡ್ಡವ್ವಾ, ಹಸಿವಿ ಆಗೇದ" ಎನ್ನುತ್ತ ಕಾಲು ತೊಳೆಯಲು ಹೋದಳು.

ಎಂಥಾ ವಿಚಿತ್ರ ಅದಾಳ ಈ ಹುಡುಗಿ. ನನ್ನ ನೋಡಿದರೂ ಸುಮ್ಮನs ಹೋದಳು. ಯಾಕ ಹಚ್ಚಿಕೊಂಡಿರಿ ಅಂತ ಸುದ್ಧಾ ಕೇಳಲಿಲ್ಲ. ಹಿಂಗ ಒಂದಿನಾ ಕುಂಕುಮಾ ಹಚ್ಚಿಕೊಂಡರ ಮುಕ್ತಾ ಎಷ್ಟು ರಂಪಾಟ ಮಾಡಿದಳು. ಬಯ್ದುಳು ಛೀ ಅಂದಳು. ಗಂಡ ಬಂದ ಕೂಡಲೇ ಹೇಳಿದಳು. ಸುರೇಶ ಅಂತೂ ಆಕಾಶನs ಕಡಕೊಂಡ ತಲೀಮ್ಯಾಲೆ ಬಿದ್ಹಾಂಗ 'ಕಾಲು ಬೀಳತೀನಿ ಅವ್ವಾ ನಮ್ಮ ಮನೀ ಮರ್ಯಾದಿ ಕಳಿಬ್ಯಾಡಾ' ಅಂತ ಹೇಳಿ ಆಣಿ ಮಾಡಿಸಿಕೊಂಡ. ಇವರ ಮನೀ ಮರ್ಯಾದಿ ನನ್ನ ಕುಂಕುಮದಾಗ ಇರತೈತೇನು ? ಇವರು ಹಣಾ ಗಳಿಸೂ ದಾರಿ ನೋಡಿದರ ಸೂಳಿ ಒಳ್ಳೇಕಿ. ಭ್ರಷ್ಟರು - ದುಷ್ಟರು, ಇಂಥಾ ಹುಳುಗೋಳು ನನ್ನ ಹೊಟ್ಯಾಗ ಹ್ಯಾಂಗ ಹುಟ್ಟಿದವೋ ಏನೋ, ನಾನೂ ಹಟಕ್ಕ ಬಿದ್ದು ದಿನಾ ಕುಂಕುಮಾ ಹಚಿಕೊಂಡೆ. ಹೂ ಮುಡಕೊಂಡೆ. ಖೋಲ್ಯಾಗ ಹಾಕಿದರು, ಹೊಡೆದರು ಹುಚ್ಚಿ ಅಂದರು.

ಚಕ್ಕುಲಿ ತಿನ್ನುತ್ತ ಸರೋಜಾ ಅಂದಳು, "ದೊಡ್ಡವ್ವಾ ನಾ ಒಂದು ಮಾತ ಹೇಳ್ತಿನಿ ಕೇಳ್ತಿಯಾ ? ಇವತ್ತು ಎಷ್ಟ ಛಂದ ಕಾಣತೀ. ದಿನಾ ಹಿಂಗs ಇರು" ಕಪ್ಪಿನೊಳಗಿನ ಚಹ ತುಳುಕುತ್ತಿತ್ತು. ಗಿರಿಜಮ್ಮನ ಕಣ್ಣಂಚಿನ ಮುತ್ತಿನ ಹನಿಯಂತೆ.

ದೊಡ್ಡವ್ವ ಹೇಳಿದಳು. ಮೂರು ದಿನದಿಂದ ಕೆಲಸಕ್ಕೆ ಬಾರದ ಪಾರ್ವತಿ ಬಂದಿದ್ದಳಂತೆ ಸಣ್ಣ ಮೂರು ಮಕ್ಕಳನ್ನ ಬಿಟ್ಟು. ಅವಳ ಮಗಳು ಲಕ್ಷ್ಮಿ ಜಡ್ಡಾಗಿ ಸತ್ತುಹೋಗಿದ್ದಳು. ಅಳಿಯ, ಹೆಂಡತಿ ಮಕ್ಕಳನ್ನು ಮೊದಲೇ ಹೊರಗ ಹಾಕಿದ್ದ. ತಾಯಿ - ಮಗಳು ಹಗಲೆಲ್ಲಾ ದುಡಿದರೂ ಎಲ್ಲರ ಹೊಟ್ಟೆ ತುಂಬುತ್ತಿರಲಿಲ್ಲ. ಈಗ ಈ ಚಿಳ್ಳೆ ಪಿಳ್ಳೆಗಳನ್ನು ತನ್ನ ಉಡಿಯಲ್ಲಿ ಹಾಕಿ ಹೋಗಿಬಿಟ್ಟ. ನೆನೆಸಿ ಬಹಳ ಗೋಳಾಡಿದ್ದಳು ಪಾರ್ವತಿ. ಹಡೆದ ಕರುಳು, ಅವಳ ಸಂಕಟ ನೋಡಿದ ದೊಡ್ಡವ್ವನೂ ತುಂಬಾ ಅತ್ತಿದ್ದಳು. ಸರೋಜಾ ಬಂದಾಗ ಕಣ್ಣಿನ ಕೆಂಪು ಇನ್ನೂ ಮಾಸಿರಲಿಲ್ಲ. ಮೂಲೆಯಲ್ಲೊಂದು ಚಾಪೆಯ ಮೇಲೆ ಪುಟ್ಟ ಜಯಾ ಮಲಗಿತ್ತು.

ಬೆದರುಗಣ್ಣುಗಳಿಂದ ತನ್ನ ಮುಖವನ್ನು ನೋಡುತ್ತ ನಿಂತ ದೊಡ್ಡವ್ವನ ಮನದ ಭಾವ ತಿಳಿದುಕೊಂಡ ಸರೋಜ ಹತ್ತಿರ ಹೋಗಿ ಸಲುಗೆಯಿಂದ ಗಿರಿಜಮ್ಮನ ಕೈ ಹಿಡಿದುಕೊಂಡಳು. "ದೊಡ್ಡವ್ವಾ, ಜಯಾನ್ನ ಇಲ್ಲೆ ಇಟ್ಟಕೊಂಡು ಛೊಲೋ ಮಾಡಿದಿ. ಪಾಪ, ಪಾರ್ವತಿ ಭಾಳ ಕಷ್ಟದಾಗ ಅದಾಳ. ನಾಳಿಂದ ಹಾಲು ಜಾಸ್ತಿ ಹಾಕಿಸಿಕೋ ಕೂಸಿನ ಸಲುವಾಗಿ." ಗಿರಿಜಮ್ಮ ಅವಳನ್ನು ಗಟ್ಟಿಯಾಗಿ ಅಪ್ಪಿಕೊಂಡುಬಿಟ್ಟಳು. ಮೌನವಾಗಿ ಅಳುತ್ತಿದ್ದ ದೊಡ್ಡವ್ವನ ಮೇಲಿನ ಹಿಡಿತ ಬಿಗಿ ಮಾಡಿದಳು ಸರೋಜ-

ದೊಡ್ಡವ್ವನದು ತುಂಬ ಅಂತಃಕರಣದ ಜೀವ. ಅವಳ ದೊಡ್ಡ ಮನೆ, ಅತಿಥಿಗಳ ಉಪಚಾರ, ಬಡಬಗ್ಗರಿಗೆ ಕರುಣೆ, ದೊಡ್ಡಪ್ಪನಿಗೆ ತಿಳಿಯದಂತೆ ಹಿತ್ತಿಲು ಬಾಗಿಲಿನಲ್ಲಿ ಕೈ ಎತ್ತಿ ಕೊಟ್ಟದ್ದು, ತಾನು ಕಂಡಿಲ್ಲವೇ ? ಅಳುತ್ತ ಬರುವವರ ಕಣ್ಣೀರು ಒರೆಸಿದ ಕೈ ಅವಳದು. ಈಗ ನೋಡಿದರೆ ಈ ಪರಿಸ್ಥಿತಿ. ತನ್ನದೆನ್ನುವುದು ಏನೂ ಇಲ್ಲ. ಕೈತುಂಬ ಇದ್ದ ಬಂಗಾರದ ಬಳೆಗಳು ಏನಾದವೋ, ಎಲ್ಲ ಯಾರಿಗೆ ಕೊಟ್ಟಳೋ? ಹತ್ತಿರವಿರುವ ಪುಡಿಕೆಯಲ್ಲಿ ಇದ್ದರೂ ಇರಬಹುದು. ಕೇಳಿದರೆ ಏನಾದರೂ ತಿಳಿದುಕೊಂಡಾಳು. ಅಷ್ಟಾಗಿ ಅವಳ ಬಂಗಾರಕ್ಕಾಗಿ ಆಸೆಪಟ್ಟು ನಾನು ಇಲ್ಲಿಗೆ ಕರೆದುಕೊಂಡು ಬಂದಿಲ್ಲವಲ್ಲ. ಅವಳು ನನ್ನವಳು. ತಾಯಿಗಿಂತ ತುಂಬಾ ಹತ್ತಿರದವಳು- ಯೋಚಿಸುತ್ತ ಪುಸ್ತಕ ಕೈಗೆತ್ತಿಕೊಂಡಳು. ಮಗುವಿನ ಉಚ್ಚೆ ಬಟ್ಟೆ ತೆಗೆಯುತ್ತಿದ್ದಳು ಗಿರಿಜಮ್ಮ.

ತಾಯಿ ಇಲ್ಲದ ಮಗುವನ್ನು ಜೋಪಾನ ಮಾಡುವದು ಸುಲಭದ ಮಾತಲ್ಲ. ಎಂಟ್ಹತ್ತು ದಿನ ರಾತ್ರಿ ಎಲ್ಲ ನಿದ್ದೆಗೆಟ್ಟಿದ್ದರೂ ಗಿರಿಜಮ್ಮ ಸೋಲೊಪ್ಪಿಕೊಂಡಿರಲಿಲ್ಲ. ಅವಳಿಗಿದ್ದ ಚಿಂತೆ ಒಂದೇ, ಮಗುವಿನ ಕೆಲಸಗಳಲ್ಲಿ ಸರೋಜಳನ್ನು ಚೆನ್ನಾಗಿ ನೋಡಿಕೊಳ್ಳಲು ಆಗುತ್ತಿಲ್ಲ ಎನ್ನುವದು. ಹೆಗಲಿಗೆ ಆನಿಸಿಕೊಂಡು ಓಡಾಡಿ, ತೊಡೆಯ ಮೇಲೆ ಹಾಕಿಕೊಂಡು ತಟ್ಟಿ, ತಟ್ಟಿ, ಕಳ್ಳ ದನಿಯಲ್ಲಿ ಜೋಗುಳ ಹಾಡಿ ಆಗ ತಾನೆ ಮಗುವನ್ನು ಮಲಗಿಸಿದ್ದಳು. ಕರೆಗಂಟೆ ಸದ್ದಾಯಿತು. ಮಿಸುಕಾಡಿ ಮತ್ತೆ ಮಲಗಿದ ಮಗುವಿನತ್ತ ನೋಡಿ ಬೆಕ್ಕಿನ ಹೆಜ್ಜೆ ಇಟ್ಟು ಹೊರಗೆ ನಡೆದಳು.

ಬಾಗಿಲಾಚೆ ಎತ್ತರದ ಸಾದುಗಪ್ಪಿನ ಯುವಕ ನಿಂತಿದ್ದ. ಚಕಿತನಾಗಿ ಹೆಜ್ಜೆ ಹಿಂದಿಟ್ಟು ಕೇಳಿದ. "ಸರೋಜ ಇನ್ನೂ ಬಂದಿಲ್ಲಾ ?"

ಇಲ್ಲಿಗೆ ಬಂದು ಎರಡು ತಿಂಗಳಾದರೂ ಇವನನ್ನು ನೋಡಿ ನೆನಪಿಲ್ಲ. "ಕಾಲೇಜ್ನಿಂದ ಸರೂ ಇನ್ನೂ ಬಂದಿಲ್ಲಾ. ಯಾಕ ಏನ ಕೆಲಸಿತ್ತು ?" ಅವಳು ಬರುವ ಹೊತ್ತಾಗಿದ್ದರೂ ಒಳಗೆ ಕೂಡ್ರಲ್ಲ ಎಂದು ಹೇಳಲು ಹಿಂಜರಿಕೆ. ಯಾರೋ ಏನೋ.

"ಅವಳಿಗೆ ಈ ಪುಸ್ತರ ಬೇಕೂಂತ ಕೇಳಿದ್ಲು. ಕೊಡೋದಕ್ಕೇಂತ ಬಂದೆ. ನೀವು ಯಾರೋ ಗೊತ್ತಾಗಲಿಲ್ಲ. ನಾನು ಯಾರೂಂತ ನಿಂಗೂ ಗೊತ್ತಿಲ್ಲ. ನಾನು ಸರೋಜಳ ಗಂಡ ಚಂದ್ರನಾಥ."

ಗಂಟಿಕ್ಕುತ್ತಿದ್ದ ಹುಬ್ಬು ಸಡಿಲವಾಯಿತು. "ಹಾಂ, ಹೌದೇನು ? ನಾನು ಆಕಿ ದೊಡ್ಡವ್ವ. ಬರ್ರಿ ಒಳಗ ಬರ್ರಿ, ಕೂಡ್ರಿ ನಾವ್ಯಾರೂ ನಿಮ್ಮನ್ನ ನೋಡೇ ಇಲ್ಲಲ್ಲ. ಅದಕ್ಕs ಗೊತ್ತಾಗಲಿಲ್ಲ. ಈ ಪುಸ್ತಕಾ ನಾನs ಕೇಳಿದೆ."

"ನೀವು ತುಂಬಾ ಓದ್ತೀರಾ ಅಮ್ಮ " ಚಂದ್ರನಾಥನಿಗೆ ಆಶ್ಚರ್ಯ .

"ಇಷ್ಟು ದಿನಾ ಅಂತೂ ಓದಲಿಕ್ಕೆ ಆಗಲೇ ಇಲ್ಲ. ಇನ್ನಾರೆ ಓದಬೇಕು ಅಂತ ಮಾಡಿದ್ದೆ. ಮನೀಯೊಳಗ ಇರೂವವರಿಗೆ ಜ್ಞಾನಾ ಬೆಳಸಿಕೊಳ್ಳಲಿಕ್ಕೆ ಪುಸ್ತಕಾನ ಬೇಕಲ್ಲ. ಇರಲಿ, ಮಾತೆಲ್ಲ ಆಮ್ಯಾಲೆ. ಈಗ ಏನ ತೊಗೋತೀರಿ. ಚಹನೋ ಕಾಫಿನೋ? "

"ಬೇಡಿ ಅಮ್ಮ, ನಾನು ಚಹಾ, ಕಾಫಿ ಕುಡಿಯೋಲ್ಲ. ತೊಂದರೆ ತೊಗೋಬೇಡಿ."

"ಹಾಗಂದರ ಬೋರ್ನವಿಟಾ ತರ್ತೀನಿ" ಸಂಭ್ರಮದಿಂದ ಒಳನಡೆದಳು ಗಿರಿಜಮ್ಮ.

ಕಪ್ಪ ಇದ್ದರೂ ಏನ ಕಳಾ ಐತಿ ಮಾರೀಮ್ಯಾಲೆ, ಎಷ್ಟ ಎತ್ತರ ಅದಾನ. ಆ ವಿನಯ. ಸರಳತನಾ. ಸರೋಜಾ ಪುಣ್ಯಾ ಮಾಡಿದ್ಲು ಇಂಥಾ ಗಂಡ ಸಿಗಾಕ. ಆದರ ಇಬ್ಬರೂ ಯಾಕ ದೂರ ಆದ್ರು ? ಏನು ಕಾರಣ ಇದ್ದೀತು. ಮನೀಗೆ ಬಂದದ್ದು ನೋಡಿದರ ಅಂಥಾ ಜಗಳ ಗಿಗಳ ಏನೂ ಆಗಿರಲಿಕ್ಕಿಲ್ಲ.

"ನೀವು ಏನೂ ತಿಳಕೊಳ್ಳದಿದ್ದರ ಒಂದು ಮಾತು ಕೇಳಲ್ಯಾ?"

"ಕೇಳಿ ಅಮ್ಮಾ, ನೀವು ನನ್ನ ತಾಯಿ ಸಮಾನ."

"ನೀವಿಬ್ಬರೂ ಪ್ರೀತಿ ಮಾಡಿ ಮದುವಿ ಆಗಿದ್ದರೂ ಬ್ಯಾರೆ ಯಾಕ ಆದಿರಿ?

"ಸರೂ ಏನೂ ಹೇಳಿಲ್ವಾ?"

"ನಾನು, ಮನೀ ಮಕ್ಕಳು ಎಲ್ಲಾ ಬಿಟ್ಟು ಯಾಕ ಬಂದೆ ಅಂತ ಆಕೀನೂ ಕೇಳಿಲ್ಲ. ನಾನೂ ಆಕಿನ್ನ ಏನೂ ಕೇಳಿಲ್ಲ. ನಿಮ್ಮನ್ನ ನೋಡಿ ಯಾಕೋ ಕೇಳಬೇಕು ಅನ್ನಿಸ್ತು. ಹೇಳಬೇಕು ಅನ್ನಿಸಿದರ ಹೇಳ್ರಿ. ಒತ್ತಾಯ ಇಲ್ಲ."

"ಅವಳಿಗೆ ಮಕ್ಕಳೇ ಬೇಡಾಂತ ಅಮ್ಮ. ನನಗೆ ಒಂದು ಮಗುವಾದರೂ ಬೇಕು. 'ನಮ್ಮದೇ ಯಾಕೆ ಬೇಕು. ಪ್ರೀತಿಗೆ ಒಂದು ಮಗು ತಂದು ಸಾಕ್ಕೊಂಡರೆ ಆಯ್ತಲ್ಲ' ಅಂತಾಳೆ. ಸಿಟ್ಟು, ಜಗಳ, ಮಾತು ಎಲ್ಲ ಆದ್ಮೇಲೆ ನೀವು ಬೇರೆ ಮದುವೆ ಮಾಡಿಕೊಳ್ಳಿ. ಮಕ್ಕಳಿಗಾಗಿ ಅಂತ ಮನೆ ಬಿಟ್ಟು ಬಂದಿದ್ದಾಳೆ."

ಇಷ್ಟು ಚಿಕ್ಕವಳಾಗಿ ಇವಳಿಗೆ ಇಂಥ ಬುದ್ಧಿ ಹೇಗೆ ಬಂದಿತು ? ಹೆತ್ತ ಮಕ್ಕಳ ಸುಖ ನಾನು ಕಂಡಿಲ್ಲವೇ ? ನಮ್ಮ ಮಕ್ಕಳು ನಮ್ಮಂತೆಯೇ ಇರ್‍ತಾರೆ ಅನ್ನುವ ಭರವಸೆಯೇ ಇಲ್ಲ. ಹಿಂದಿನ ತಲೆಮಾರಿನ ಯಾರನ್ನಾದರೂ

ಹೋಲಬಹುದು. ಸಂತ, ವಂಚಕ, ಕವಿ, ಕಲಾವಿದ, ಭ್ರಷ್ಟ, ದರೋಡೆಕೋರ ಏನಾದರೂ ಆಗಬಹುದು. ಈ ಸುಖಕ್ಕೆ ಮಕ್ಕಳು ಬೇಕೆಬೇಕಾ ?

ಚಲನೆಯಿಲ್ಲದ ಗೊಂಬೆಯಂತೆ ಕುಳಿತ ಗಿರಿಜಮ್ಮನನ್ನು ಚಂದ್ರನಾಥ ಕೇಳಿದ. "ಅಮ್ಮ ನೀವು ಹಿರಿಯರು. ಕಷ್ಟ-ಸುಖ ಕಂಡವರು. ನೀವು ಸರೋಜಳಿಗೆ ನನ್ನ ಪರವಾಗಿ ಒಂದೆರಡು ಮಾತು ಹೇಳ್ತೀರಾ. ಒಂದಾದರೂ ನಮ್ಮ ಮಗು ಬೇಕಲ್ವಾ?"

ಏನು ಹೇಳಲೂ ತೋಚದೆ ಸುಮ್ಮನೆ ತಲೆಯಾಡಿಸಿದಳು ಗಿರಿಜಮ್ಮ. ಸಣ್ಣಗೆ ಮಗು ಅತ್ತ ದನಿ ಕೇಳಿತು. ಬೆಚ್ಚಿದ ಚಂದ್ರನಾಥ ತಟ್ಟನೆ ಕುರ್ಚಿ ಬಿಟ್ಟೆದ್ದ. ಧಾವಿಸಿ ಒಳಗೆ ಹೋಗುತ್ತಿದ್ದ ಗಿರಿಜಮ್ಮ ಹೊರಳಿ ನೋಡಿ ನಗುತ್ತ ಹೇಳಿದಳು- "ತಾಯಿ ಇಲ್ಲದ ಕೂಸು. ನಮ್ಮ ಕೆಲಸದಾಕಿ ಮೊಮ್ಮಗಳು ಜಯಾನ್ನ ಇಲ್ಲೇ ಇಟಕೊಂಡೀವಿ." ಮಗುವನ್ನೆತ್ತಿಕೊಂಡು ಗಿರಿಜಮ್ಮ ಹೊರಗೆ ಬಂದಾಗ ಚಂದ್ರನಾಥ ಹೊರಟುಹೋಗಿದ್ದ. ಟೇಬಲ್ ಮೇಲೆ ಬಿಟ್ಟು ಹೋದ ಪುಸ್ತಕಗಳು ಅಣಕಿಸುತ್ತಿದ್ದವು. ಕಿರುನಗೆಯೊಂದಿಗೆ ಅವುಗಳನ್ನೆತ್ತಿಕೊಂಡು ಗಿರಿಜಮ್ಮ ಸರೋಜಳ ಬೆಡ್ ರೂಮಿನಲ್ಲಿಡಲು ಬಂದಾಗ....

ನಿಲುವುಗನ್ನಡಿ ಇದ್ದ ಕರೀಮರದ ಮಂಚ. ತುಪ್ಪಳದಂಥ ಸುಪ್ಪತ್ತಿಗೆ, ರೇಶಿಮೆಯ ಹೊದಿಕೆ, ಮತ್ತೇರಿಸುವ ಮಲ್ಲಿಗೆಯ ಕಂಪು, ಸುಗಂಧಿತ ವಾತಾವರಣ, ಬಾದಾಮಿ ಹಾಲು, ಸಿಹಿ ತಿಂಡಿ,. ಹಣ್ಣುಗಳು, ದಿನವೂ ಪ್ರಥಮ ರಾತ್ರಿಯೇ ಅವನಿಗೆ. ಮಕ್ಕಳಿಗಾರಿಗೂ ಕೋಣೆಯಲ್ಲಿ ಪ್ರವೇಶವಿರಲಿಲ್ಲ. ರಸಿಕ ಶಿಖಾಮಣಿ ಸಾವಿರಾರು ರೂಪಾಯಿ ಚೆಲ್ಲಲು ಸದಾ ಸಿದ್ಧ. ದಿನದ ಕೆಲಸಗಳನ್ನೆಲ್ಲಾ ಮುಗಿಸಿ ಮಲಗಲು ಹೋದಾಗ ಹೊಸತೊಂದು ಲೋಕವೇ ತೆರೆದುಕೊಳ್ಳುತ್ತಿತ್ತು. ಬಾಹುಬಂಧನ, ಚುಂಬನಗಳಲ್ಲಿ ಮೈಮರೆತೇ ಹೋಗುತ್ತಿತ್ತು. ಎಂದಾದರೊಮ್ಮೆ ಎಚ್ಚರವಾಗಿ ಪ್ರತಿಭಟಿಸಿದರೆ, ತಿರಸ್ಕರಿಸಿದರೆ ಮೈ ನುಗ್ಗಾಗಿ ಹೋಗುತ್ತಿತ್ತು ಹೊಡೆತಗಳಿಂದ. ಆ ಸುಖಕ್ಕಾಗಿಯೇ ಇಲ್ಲಿ ಉಳಿದಿದ್ದೆನೇ? ನಾಚಿಕೆಯಿಂದ ಗಿರಿಜಮ್ಮ ಮಂಚದ ಮೇಲೆ ಕುಕ್ಕರಿಸಿದಳು. ಕಟ್ಟಿಗೆಯ ಚಿಕ್ಕ ಮಂಚ, ಒಣ ಹಾಸಿಗೆ, ಭಣಭಣವೆನ್ನುವ ಕೋಣೆ. ಬುಕ್ ಶೆಲ್ಫ್, ಟೇಬಲ್ ಲ್ಯಾಂಪ್, ರಾತ್ರಿ ಬಹಳ ಹೊತ್ತಿನವರೆಗೆ ಆ ದೀಪ ಉರಿಯುತ್ತಿತ್ತು. ಸರೋಜ ನಿದ್ದೆ ಇಲ್ಲದೆ ಹೊರಳಾಡುತ್ತಿರಬಹುದೇ? ಚಿಕ್ಕವಳು, ಅವಳಿಗೇನು ಬಯಕೆ ಇರುವದಿಲ್ಲವೇ? ಆದರೂ ಅದ್ಭುತ ಹುಡುಗಿ ! "ನಾನು ಏಳೆಂಟು ವರ್ಷ ಸಂಸಾರ ಸಾಕಷ್ಟು ಅನುಭೋಗಿಸೇನಿ. ಈಗ ನನಗೇನೂ ಅದರೊಳಗ ಆಸಕ್ತಿ ಉಳಿದಿಲ್ಲಾ ಎಂದು ಸರೋಜ ಮಾತಿನ ಮಧ್ಯೆ ಒಮ್ಮೆ ಹೇಳಿದಾಗ ಗಿರಿಜಮ್ಮನ ಮನದ ಮೂಲೆಯಲ್ಲೊಂದು ಆಸೆ ಮೊಳೆತಿತ್ತು, ಕತ್ತಲು ಕವಿಯುತ್ತಿದ್ದ ಮನೆಯಲ್ಲಿ ಎದ್ದು ದೀಪ ಹಾಕಿದಳು ಗಿರಿಜಮ್ಮ.

ಧಡ್ ಎನ್ನುವ ಸಪ್ಪಳ ಕೇಳಿ ಓಡಿಬಂದಳು ಸರೋಜ. ಗಿರಿಜಮ್ಮ ಅಡಿಗೆ ಮನೆಯಲ್ಲಿ ಪ್ರಜ್ಞೆ ತಪ್ಪಿ ಬಿದ್ದಿದ್ದಳು. ಕೂಡಲೆ ಡಾಕ್ಟರ್ ಬಂದು ನೋಡಿದರು. ಲೋ ಬಿ. ಪಿ. ಇತ್ತು. ಸಂಪೂರ್ಣ ವಿಶ್ರಾಂತಿ ಬೇಕೆಂದರು. ಸರೋಜ ರಜೆ ಹಾಕಿದಳು. ಪಾರ್ವತಿಯ ಸಹಾಯದಿಂದ ಗಿರಿಜಮ್ಮ ಬೇಗ ಚೇತರಿಸಿಕೊಂಡರೂ ನಿಶ್ಶಕ್ತಿ ಇತ್ತು. ಅವರೊಬ್ಬರನ್ನೇ ಬಿಟ್ಟು ಹೋಗಲು ಸರೋಜಳಿಗೂ ಭಯ. ಕಣ್ಣು ಮುಚ್ಚಿ ಮುದ್ದೆಯಾಗಿ ಮಲಗಿದ ದೊಡ್ಡವ್ವನನ್ನು ನೋಡಿ ಹತ್ತಿರ ಬಂದು ಕುಳಿತು ಹಣೆಯ ಮೇಲೆ ಕೈ ಇಟ್ಟು ಕೇಳಿದಳು.

'ದೊಡ್ಡವ್ವಾ ನಿನಗ ಕೆಲಸ ಹೆಚ್ಚಾಗೇದ. ಆರಾಮನೂ ಇಲ್ಲ, ವಿಶ್ರಾಂತಿ ಬೇಕು. ಅದಕ್ಕ ಜಯಾನ್ನ ಕಳಿಸಿಬಿಡೂಣಂತ ವಿಚಾರ ಮಾಡೇನಿ. ಪಾರ್ವತಿಗೆ ರೊಕ್ಕದ ಸಹಾಯ ಮಾಡಿದ್ರಾತು."

ದೊಡ್ಡವ್ವನಿಂದ ಮಾತು ಬರಲಿಲ್ಲ. ಬದಲು ಮುಚ್ಚಿದ ಕಣ್ಣ ತುದಿಯಲ್ಲಿ ನೀರು ಇಳಿಯಿತು. ಸರೋಜ ಕಸಿವಿಸಿಗೊಂಡಳು. "ನಿನಗ ಮನಸ್ಸ ಇಲ್ಲದಿದ್ದರ ಬ್ಯಾಡಾ ದೊಡ್ಡವ್ವಾ."

'ಸರೂ, ನನ್ನ ದಿಂಬಿನ ಕೆಳಗ ಏನದ ನೋಡು."

"ಏನಿದು ದೊಡ್ಡವ್ವಾ" ಮನೆ ಲೆಕ್ಕದ ನೋಟ್‌ಬುಕ್ ತೆಗೆದಿದ್ದಳು.

"ಏನೇನೋ ಮನಸ್ಸಿಗೆ ಬಂದದ್ದೆಲ್ಲಾ ಗೀಚೇನಿ. ಒಂದ ಮನ್ಯಾಗ ಅದೀವಿ ಅಂದಮ್ಯಾಲೆ ಗುರುತು ಇಲ್ಲದವರ್ಹಾಂಗ ಇರೂದು ಬ್ಯಾಡ ಸರೂ. ಅದನ್ನು ನೀ ಓದಿ ನೋಡು" ಆಯಾಸಗೊಂಡವಳಂತೆ ಮತ್ತೆ ಕಣ್ಣು ಮುಚ್ಚಿದಳು ಗಿರಿಜಮ್ಮ.

ಮೊದಲ ಪುಟ ತೆರೆದಳು. ದೊಡ್ಡಪ್ಪನ ಕೈಬರಹ ನೋಡಿ ರೋಮಾಂಚನಗೊಂಡಳು ಸರೋಜ.

ಈ ಜಗತ್ತಿನಲ್ಲಿ ಮನುಷ್ಯರೇ ಹುಟ್ಟಿರದಿದ್ದರೆ ಏನಾಗುತ್ತಿತ್ತು. ಇದಕ್ಕೆ ಅಸ್ತಿತ್ವವೇ ಇರುತ್ತಿರಲಿಲ್ಲ. ಗಂಡು, ಹೆಣ್ಣು, ದಾಂಪತ್ಯ, ಮಕ್ಕಳು - ವಂಶ, ಆಸ್ತಿ-ಮನೆತನ, ಪ್ರೀತಿ-ದ್ವೇಷ, ಸಿಟ್ಟು-ಮೋಹ ಏನೂ ಇಲ್ಲದೆ ಬರೀ ಕಲ್ಲು ಮಣ್ಣುಗಳಿಂದ ನೀರು, ನದಿ, ಸಮುದ್ರ ಪರ್ವತಗಳಿಂದ ಕೂಡಿದ ಒಂದು ಗೋಲವಾಗಿರುತ್ತಿತ್ತು. ಸ್ತಬ್ಧ, ನಿಶ್ಶಬ್ದ, ನಿರ್ಜೀವ. ಶೂನ್ಯವಾಗಿರುತ್ತಿತ್ತು. ಅಯ್ಯೋ ನನ್ನ ಹುಚ್ಚುತನವೇ, ಮನುಷ್ಯರೇ ಹುಟ್ಟಿರದಿದ್ದರೆ ಈ ಎಲ್ಲ ಶಬ್ದಗಳಾದರೂ ಎಲ್ಲಿರುತ್ತಿದ್ದವು. ಸಾವಿರಾರು ವರ್ಷಗಳಿಂದ ಮನುಷ್ಯನ ಹುಟ್ಟು ಸಾವಿನ ನಿರಂತರ ಚಕ್ರ ಚಲಿಸುತ್ತಲೆ ಇದೆ. ದಿನದಿನಕ್ಕೆ ಜನನ ಸಂಖ್ಯೆ ಹೆಚ್ಚಾಗಿ ಈಗಂತೂ ಕೋಟಿಗಟ್ಟಲೆ ಜೀವಿಗಳಿದ್ದಾರೆ. ಅಷ್ಟೊಂದು ಜನ ಹುಟ್ಟಿ ಏನು ಮಾಡುತ್ತಾರೆ? ಇದೊಳ್ಳೆ ಪ್ರಶ್ನೆ. ಹುಟ್ಟುವಂದತೂ ಅವರ ಕೈಯಲ್ಲಿಲ್ಲ. ಹುಟ್ಟಿದ ಮೇಲೆ ಸಾವಿಗೆ ಹೆದರುತ್ತ ಬದುಕುವುದೊಂದೇ ಅವರಿಂದಾಗುವ ಕೆಲಸ. ಎಲ್ಲರ ಹಾಗೆ ನಾನೂ ಹುಟ್ಟಿದೆ. ಹೆಣ್ಣಾಗಿಯೇ ಹುಟ್ಟಬೇಕೆಂದು ನನಗೇನೂ ಆಸೆ ಇರಲಿಲ್ಲ. ಆದರೆ ಹುಟ್ಟಿದ ಮೇಲೆ ಯಾಕಾದರೂ ಹೆಣ್ಣಾಗಿ ಹುಟ್ಟಿದೆ ಎಂದು ದುಃಖ ಪಟ್ಟದ್ದಂತೂ ಸಾವಿರ ಸಲ. ಹೆಣ್ಣಾದರೂ ನನಗೂ ಮನಸ್ಸಿದೆ, ಭಾವನೆಗಳಿವೆ, ವಿಚಾರಗಳಿವೆ, ವ್ಯಕ್ತಿತ್ವವಿದೆ ಎಂದುಕೊಂಡಿದ್ದೆ. ಈ ಕುತ್ತಿಗೆ ಹಿಚುಕಲು ಕಬ್ಬಿಣದ ಕೈಗಳ ವ್ಯವಸ್ಥೆಯೊಂದಿದೆ ಎಂದು ಗೊತ್ತಿರಲಿಲ್ಲ.

ಹದಿ ವಯಸ್ಸಿಗೆ ಬಂದಾಗ ಹೊಳೆಯುವ ನಕ್ಷತ್ರಗಳನ್ನು ಮುಡಿಯಲ್ಲಿಟ್ಟುಕೊಂಡು ಕಾಮನಬಿಲ್ಲಿನ ಬಣ್ಣದ ರೆಕ್ಕೆಗಳನ್ನು ಕಟ್ಟಿಕೊಂಡು ಆಕಾಶದಲ್ಲೆಲ್ಲಾ ಅಪ್ಸರೆಯಂತೆ ಹಾರಾಡುತ್ತಿದ್ದೆ. ಕಾಲೇಜಿಗೆ ಹೋಗುವಾಗ ಏನೇನೋ ಆಸೆಗಳನ್ನಿಟ್ಟುಕೊಂಡಿದ್ದೆ. ನಮಗೆ ಇಂಗ್ಲೀಷ್ ಹೇಳುತ್ತಿದ್ದ ಪ್ರೊ. ರಾಮಮೂರ್ತಿ ತುಂಬ ಓದಿಕೊಂಡವರು. ಸ್ಕಾಲರ್, ಚೆನ್ನಾಗಿ ಪಾಠ ಹೇಳುತ್ತಿದ್ದರು. ಅವರ ಪ್ರಭಾವ ವಿದ್ಯಾರ್ಥಿಗಳ ಮೇಲೆ - ನನ್ನನ್ನೂ ಹಿಡಿದು - ಬಹಳವಾಗಿತ್ತು. ಜ್ಞಾನ ಹೆಚ್ಚಿಸಿಕೊಳ್ಳಲು ಬಹಳಷ್ಟು ಓದಬೇಕೆನ್ನುವ ಹುಚ್ಚು ಹಚ್ಚಿಕೊಂಡಿದ್ದೆ. ಜೀವನದಲ್ಲಿ ಏನನ್ನಾದರೂ ಸಾಧಿಸಬೇಕು, ಸತ್ಯವಂತ, ಪ್ರಾಮಾಣಿಕ, ನ್ಯಾಯನಿಷ್ಠುರಿ ಆಗಿರಬೇಕೆನ್ನುವ ಅದರ್ಶವನ್ನಿಟ್ಟುಕೊಂಡಿದ್ದೆ. ಈ ಗುಣಗಳೆಲ್ಲ ಕೇವಲ ಗಂಡಿನ ಸೊತ್ತೇನೂ ಅಲ್ಲವಲ್ಲ. ಕನಸಿನ ಲೋಕದಲ್ಲೇ ವಿಹರಿಸುತ್ತಿದ್ದ ನನಗೆ ವಾಸ್ತವದ ಅರಿವಿರಲಿಲ್ಲ. ಸೃಷ್ಟಿ ಸೌಂದರ್ಯವನ್ನು ವೀಕ್ಷಿಸುತ್ತಾ ಆನಂದದಿಂದ ಮೈಮರೆತು ಅಡ್ಡಾಡುತ್ತಿದ್ದಾಗ ಹೋಗಿ ಹಾಳು ಬಾವಿಯಲ್ಲಿ ದುಡುಮಮ್ಮನೇ ಬಿದ್ದಂತಾಗಿತ್ತು ನನ್ನ ಪರಿಸ್ಥಿತಿ.

ಅಪ್ಪ ನನ್ನ ಕೊರಳಿಗೊಂದು ಗುದ್ದಿ ಕಟ್ಟಿ ವಾಡೆಗೆ ಅಟ್ಟಿದಂತೆ ಗಂಡನ ಮನೆಗೆ ಅಟ್ಟಿಬಿಟ್ಟರು. ನನ್ನ ಗಂಡ ದುಷ್ಟ, ಭ್ರಷ್ಟ ಅಧಿಕಾರಿ. ಹಣ ಎಂದರೆ ಬಾಯಿ ಬಿಡುವರು. ಎಂಥ ಕೆಲಸಕ್ಕೂ ಹಿಂಜರಿಯುವವನಲ್ಲ. ಅವನ ಇಚ್ಛೆಯಂತೆ ಲಕ್ಷ್ಮಿ ಕಾಲು ಮುರಿದುಕೊಂಡು ನಮ್ಮ ಮನೆಯಲ್ಲಿ ಬಿದ್ದಿದ್ದಳು. ಇಂಥ ಪಾಪಿಯ ಮನೆಯಲ್ಲಿ ನೆಲೆಯಾಗುವ ಅವಳನ್ನು ದೇವಿ ಎಂದು ಯಾಕೆ ಕರೆಯಬೇಕು ? ಅವಳು ವೇಶ್ಯೆಯೇ ಎಂದು ನನ್ನ ಸಂತಾಪ. ಆದರೂ ಗಂಡನ ಹೊಡೆತ ತಾಳಲಾರದೆ ಲಕ್ಷ್ಮಿ ಪೂಜೆ ಮಾಡುತ್ತಿದ್ದೆ. ಪೂಜಾ ಗೃಹದಲ್ಲಿಯ ಬೆಳ್ಳಿಯ ಪಾತ್ರೆಗಳನ್ನು ಒಯ್ದು ತಿಪ್ಪೆಗೆ ಎಸೆಯಲೇ ಎನ್ನುವಷ್ಟು ಸಿಟ್ಟು ನನಗೆ,. ನನ್ನ ಮೆಲುಮಾತು, ಹಿತವಚನ, ಸಿಟ್ಟು, ಸೆಡವು, ಅಳು,

ಉಪವಾಸ ಒಂದೂ ಅವನನ್ನು ಸರಿದಾರಿಗೆ ತರಲಿಲ್ಲ. ಬದುಕಿನಲ್ಲಿ ನಾನು ಸೋತುಹೋಗಿದ್ದೆ. ಇಲ್ಲಿ ಸೋತರೂ ಮಕ್ಕಳನ್ನಾದರೂ ನನ್ನ ಇಚ್ಛೆಯಂತೆ ಬೆಳೆಸುತ್ತೇನೆ ಎಂದು ಆಸೆ ಇಟ್ಟುಕೊಂಡಿದ್ದೆ. ಅವರೂ ತದೆಯ ದಾರಿಯನ್ನೇ ಹಿಡಿದರು. ಈಗ ಲೋಕವೆಲ್ಲ ಹೇಗೆ ನಡೆಯುತ್ತದೆಯೋ ಹಾಗೆಯೇ ಇರಬೇಕು ನಾವೂ ಎಂದು ನನಗೇ ಬುದ್ಧಿ ಹೇಳತೊಡಗಿದರು. ಸ್ವಲ್ಪ ಸ್ವಲ್ಪವಾಗಿ ನನ್ನ ಕೈಯಿಂದ ಜಾರುತ್ತ ಜಾರುತ್ತ ಹೋಗಿ ನನ್ನಿಂದ ದೂರವಾಗಿ ಬಿಟ್ಟರು. ಯಾವ ನನ್ನ ಮಾತೂ ನಾಟದಷ್ಟು ದಪ್ಪ ಚರ್ಮದವರಾದರು. ಮನೆಯಲ್ಲಿಯ ಇಂಥ ಹತ್ತು ಜಾಣೆಯರೆದುರು ನಾನೊಬ್ಬಳೇ ಹುಚ್ಚಿಯಾದೆ. ಇದು ನನ್ನ ಬಾಳು. ಅಲ್ಲ ಅನ್ನುತ್ತ ಅಲ್ಲಿಯೇ ಬದುಕಿದೆ. ದಿನವೂ ವಿಷವನ್ನುಂಡೆ. ಸಂಕಟಪಡುತ್ತ ನಗುತ್ತಿದ್ದೆ. ತವರಿಗೆ ಹೋದಾಗ ಹೇಳಿ ಮನಸ್ಸು ಹಗುರ ಮಾಡಿಕೊಳ್ಳಬೇಕೆಂದರೆ ಅಲ್ಲಿ ಕೇಳುವವರೇ ಇರಲಿಲ್ಲ. ಅಪ್ಪ, ಅವ್ವ, ಅಣ್ಣ ತಂಗಿಯರು ಎಲ್ಲರಿಗೂ ಇವಳಿಗೇನು ಕಡಿಮೆ ಎನ್ನುವ ಭಾವನೆ. ಆಡಿಯೂ ತೋರಿಸುತ್ತಿದ್ದರು. ಆ ಮರುಭೂಮಿಯಲ್ಲಿಯೂ ನನಗೊಂದು ಒಯಾಸಿಸ್ ಇತ್ತು. ನಮ್ಮ ಅಪ್ಪನ ಸೋದರತ್ತೆ ಶಂಬವ್ವ. ಅವಳು ನನ್ನ ದುಃಖವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಳು. ನಾನು ಅಳುತ್ತಿದ್ದಾಗ ಅಂತಃಕರಣದ ಸೆಲೆ ಹರಿಯುತ್ತಿರುವಂತೆ ನನ್ನ ಬೆನ್ನ ಮೇಲೆ ಕೈಯಾಡಿಸುತ್ತ

"ಗಿರಿಜಾಽ ನೀನು ಥೇಟ ನಮ್ಮಪ್ಪ ಹಾಂಗ ಅದಿ. ನಿನ್ನ ಮುತ್ತಜ್ಜನೂ ಹಿಂಗಽ ಅಂತಿದ್ದಾ. ಕಡೀತನಕ ಜೀಂವಾ ಕೊಡಾಂವ. ಕುತ್ತಿಗಿತನಾ ಬಂದರೂ ಕೊಟ್ಟ ಮಾತಿಗೆ ತಪ್ಪಾಂವ ಅಲ್ಲ. ಒಂದು ದುಡ್ಡು ಬ್ಯಾರೇಯವರದು ತಿಂದಾಂವ ಅಲ್ಲಾ. ರೊಕ್ಕಾ ಗಳಿಸೂದು ಮುಖ್ಯ ಅಲ್ಲಾ. ಒಬ್ಬ ಸೂಳೀನೂ ಗಳಸ್ತಾಳ. ಮನುಷ್ಯಾ ದೇವರಾಗದಿದ್ದರೂ ಮನುಷ್ಯಾನಂಗರೆ ಬದುಕಬೇಕು ಅಂತಿದ್ದಾ. ಅಂವಾ ಗಂಡಸು. ಎಷ್ಟು ಕಷ್ಟ ಬಂದರೂ ತನಗೆ ಸರಿ ಅನಿಸಿದಾಂಗ ನಡಕೊಂಡ. ಆದರ ಬಾಳಾ, ನೀನು ಹೆಣ್ಣು. ಇದು ನಿನ್ನ ಪರೀಕ್ಷಾ ಅಂತ ತಿಳಕೋ. ಒಂದಿಲ್ಲ ಒಂದಿನಾ ನೀ ಇದರಿಂದ ಪಾರಾಗ್ತಿ" ಅಂತಿದ್ದಳು. ಆ ಮೇಲೆ ಬಿಟ್ಟುಬಿಟ್ಟೆ. ಎಲ್ಲರೂ ಗಿರಿಜವ್ವಗ ರೊಕ್ಕದ ಸೊಕ್ಕ ಅಂದರು.

ರಿಟೈರ್ ಆಗ ಗಂಡನೊಡನೆ ನಾನು ಕಾಶೀಯಾತ್ರೆಗೆ ಹೊರಟಾಗ ಎಲ್ಲರೂ ನನ್ನ ದೈವ ಕಂಡು ಕರುಬಿದರು. ಆದರೆ ನಾನು ಮಾತ್ರ ಮನಸಾ ಹೋಗಿರಲಿಲ್ಲ. ದನ ಎಳೆದಂತೆ ನನ್ನನ್ನು ಎಳೆದುಕೊಂಡು ಹೋಗಿದ್ದ. ಕಾಶಿಯಲ್ಲಿ ಆ ಗಂಗೆಯನ್ನು ನೋಡಿ ನನಗೆ ಅಳು ಬಂದುಬಿಟ್ಟಿತು. ಆ ಕೊಳಕು ನೀರಿನಲ್ಲಿ ಎಷ್ಟು ಜನ ಪಾಪಿಗಳು ಮುಳುಗಿ ಎದ್ದಿದ್ದಾರೋ, ಆ ನೀರನ್ನು ಮುಟ್ಟಲೂ ಹೇಸಿಗೆಯಾಯಿತು. ಹಿಮಗಿರಿಯಿಂದ ಸ್ಫಟಿಕ ಶಿಲಾರಸದಂತೆ, ಬಿಳಿಯ ಮುತ್ತಿನ ರಾಶಿಯಂತೆ, ಸ್ವಚ್ಛವಾಗಿ, ತಿಳಿಯಾಗಿ ಹರಿಯುವ ಗಂಗೆಯನ್ನು ಬೊಗಸೆಯಲ್ಲಿ ಹಿಡಿದು ಕುಡಿಯಬೇಕೆನ್ನುವ ನನ್ನ ರೆಪ್ಪೆಯೊಳಗಿನ ಕನಸು ಕರಗಿಹೋಗಿತ್ತು. ಕಣ್ಣೀರು ಕುಡಿಯುತ್ತಿದ್ದೆ. ಪಾಪ! ಗಂಗೆಗೂ ನನ್ನದೇ ಸ್ಥಿತಿ. ಅವಳಿಗೆ ಇಚ್ಛೆ ಇರಲಿ, ಇಲ್ಲದಿರಲಿ ದಿನಾಲು ಲಕ್ಷಗಟ್ಟಲೆ ಜನ ಮುಳುಗಿ ಎದ್ದು ಅವಳ ಬದುಕನ್ನು ನರಕವನ್ನಾಗಿ ಮಾಡುತ್ತಿದ್ದಾರೆ. ಒಂದು ವೇಳೆ ಅವಳಿಗೂ ಜೀವವಿದ್ದಿದ್ದರೆ ಯೋಚಿಸುತ್ತ ನಿಂತಿದ್ದೆ. ಒಬ್ಬ ಪೂಜಾರಿಯೊಡನೆ ನನ್ನ ಗಂಡ ಬಂದ. ನಾನು ಕೊಸರಾಡಿದರೂ ಬಿಡದೆ ಕೈ ಹಿಡಿದು ಎಳೆದುಕೊಂಡೊಯ್ದು ನನ್ನೊಡನೆ ಗಂಗೆಯಲ್ಲಿ ಇಳಿದ. ನನ್ನ ಬಿಚ್ಚಿದ ಕೂದಲನ್ನು ಎಳೆದು ಜಗ್ಗಿ ನಾನು ಮುಳುಗುವಂತೆ ಮಾಡಿದ. ಅವನ ಕುತ್ತಿಗೆ ಹಿಡಿದು ಅಲ್ಲಿಯೇ ಮುಳುಗಿಸಿ ಸಾಯಿಸಿ ಬಿಡಲೇ ಎನ್ನುವಷ್ಟು ಸಿಟ್ಟು ಬಂದಿತ್ತು ನನಗೆ. ಆ ಮನುಷ್ಯ ಹೂವು, ಮಂತ್ರಾಕ್ಷತೆ ಎರಚಿ ಮಂತ್ರ ಹೇಳಿ ದಕ್ಷಿಣೆ ವಸೂಲು ಮಾಡಿಕೊಂಡು ಹೋದ. ನನ್ನ ಶರೀರ ಮೈಲಿಗೆಯಾದಂತೆ ಮುದುಡಿಕೊಂಡಿತು. ಕಾಶಿಯಲ್ಲಿ ಇದ್ದಾಗಲೇ ಗಂಡನಿಗೆ ಜ್ವರ ಬರಲು ಸುರುವಾಗಿತ್ತು. ಅವನು ಮಾಡಿದ ಪಾಪದ ಜೊತೆಗೆ ಗಂಗೆಯಲ್ಲಿಯ ಕೊಳಕೂ ಸೇರಿಕೊಂಡು ಅವನ ಜೀವ ಬಲಿ ತೆಗೆದುಕೊಳ್ಳುವವರೆಗೂ ಬಿಡಲಿಲ್ಲ. ಮುಂದೆ ನನ್ನ ಜೀವವಿಧಾನ ಬೇರೆಯಾದೀತು ಎಂದು ಭಾವಿಸಿದ್ದೆ. ಆದರೆ ನಾನು ಮಹರ್ಷಿಯ ಮರಿಮೊಮ್ಮಕ್ಕಳಾದ ನನ್ನ ಮೂವರು ಮಕ್ಕಳು ನನ್ನನ್ನು ಅತ್ತಿತ್ತ ಬಿಡದೆ ಕಣ್ಣಲ್ಲಿಟ್ಟುಕೊಂಡು ಕಾಪಾಡತೊಡಗಿದರು. ಅದೇ ನನಗೆ ನರಕವಾಯಿತು. ಆಯುಷ್ಯದಲ್ಲಿ

ಉಳಿದ ದಿನಗಳನ್ನಾದರೂ ತನ್ನಿಚ್ಛೆಯಂತೆ ಬದುಕಬೇಕೆನ್ನುವ ಇಚ್ಛೆ ಪ್ರಬಲವಾಗಚೊಡಗಿತು. ಮನಸ್ಸು ಇನ್ನಷ್ಟು ಪ್ರಕ್ಷುಬ್ಧವಾಗತೊಡಗಿತು....

ನಾನು ಪೃಥ್ವಿ, ನಾನು ಹೆಣ್ಣು, ಭೂಮಿ, ನೀರು, ಗಾಳಿ, ಬೆಂಕಿ, ಆಕಾಶ ಈ ಎಲ್ಲವೂ ನನ್ನಲ್ಲಿವೆ. ನನ್ನಲ್ಲಿ ಜೀವ ಹುಟ್ಟುತ್ತದೆ. ಆದರೆ ಪೃಥ್ವಿ ಮುನಿದಾಗ ಜಗತ್ತನ್ನು ವಿನಾಶಪಡಿಸುವಂತೆ ಜೀವವನ್ನು ಕೊಲ್ಲುವದು ನನ್ನಿಂದ ಸಾಧ್ಯವಾಗುವುದಿಲ್ಲ. ಆ ಶಕ್ತಿಯೂ ನನ್ನಲ್ಲಿ ಇದ್ದರೆ ಎಷ್ಟು ಚೆನ್ನಾಗಿತ್ತು. ನನ್ನ ಮನಸ್ಸು ಕುದಿಯುತ್ತದೆ. ಹೊಟ್ಟೆಯಲ್ಲಿ ಬೆಂಕಿ ಸುಡುತ್ತದೆ. ಆದರೆ ಜ್ವಾಲಾಮುಖಿಯಂತೆ ಸ್ಫೋಟಗೊಳ್ಳುವುದಿಲ್ಲ.

"ಸಾಕು, ನಾ ಇನ್ನ ಓದೂದಿಲ್ಲ ಸಾಕು' ಮಂಜಾಗುತ್ತಿದ್ದ ಕಣ್ಣುಗಳನ್ನು ಒರೆಸಿಕೊಳ್ಳುತ್ತ ಸರೋಜ ದೊಡ್ಡವ್ವನತ್ತ ನೋಡಿದಳು. ಗಿರಿಜಮ್ಮನ ಕಣ್ಣುಗಳಲ್ಲೀಗ ಬೆಳಕಿತ್ತು. 'ಕಡೀ ಪ್ಯಾರಾ ನಾs ಹೇಳತೀನಿ ಕೇಳಿಲ್ಲೆ.' ಹಾಸಿಗೆಯ ಕೆಳಗಿನಿಂದ ಬಂಗಾರದ ನಾಲ್ಕು ಬಳೆ ತೆಗೆದುಕೊಟ್ಟು ಹೇಳಿದಳು.

"ನಿಮ್ಮಜ್ಜ ನನ್ನ ಮದುವಿಯೊಳಗ ಕೊಟ್ಟದ್ದು ಈ ಬಳಿ. ಆ ಮನೆಯಿಂದ ಬರುವಾಗ ಇವಿಷ್ಟs ತಂದೆ. ಇದರ ಮ್ಯಾಲೆ ನಿನಗೂ ಹಕ್ಕ ಅದ. ಜಯಾ ಇಲ್ಲೇ ಇರಲಿ. ಹೆಣ್ಣು ಹೆರದಿದ್ದರೂ ತಾಯಿ ಆಗ್ತಾಳ. ನೀನs ಆಕೀ ತಾಯಿ. ಜ್ವಾಲಾಮುಖಿ ಸ್ಫೋಟಗೊಳ್ಳುಹಾಂಗ ಆಕಿನ್ನ ಬೆಳಸೂಣು!"

***

■■

## 'ಜನರೇನು ಬಲ್ಲರು ಒಳಗಾಗೊ ಕೃತ್ಯವ'

ಟ್ರಿನ್.... ಟ್ರಿನ್... ಟ್ರಿನ್

ಪೋಸ್ಟ್ ಬಂತಾ ? ಹಾಲು ಬಂದು ಬಹಳ ಹೊತ್ತಾಯಿತಲ್ಲ. ಜಾನಕಿ ಮನೆಗೆ ಹೋಗುವಾಗ ಕಾಯಿಸಿ ಫ್ರಿಜ್‌ನಲ್ಲಿಟ್ಟು ಇಡುತ್ತೇನೆಂದು ಹೇಳಿದ ನೆನಪು.

'ಟ್ರಿನ್....' ಮಗ್ಗಲು ಮನೆಯ ವೆಂಕಟೇಶನ ಪೂಜೆ ನಡೆದಿರಬಹುದು. ಅಲ್ಲಲ್ಲ, ದೇವರ ಗಂಟೆಯ ಸಪ್ಪಳವಲ್ಲ. ಈ ದಿಮ್ಮೆನ್ನುವ ತಲೆಗೆ ಏನೂ ಹೊಳೆಯದು. ಪಕ್ಕಕ್ಕೆ ತಿರುಗಿದಳು ಮಾಲಿನಿ. ತಲೆ ತುಂಬಾ ಜಡವಾಗಿ ನೋಯುತ್ತಿತ್ತು. ಅತ್ತತ್ತು ಮಲಗುತ್ತಿದ್ದಳು. ಹಸಿವು ತಡೆಯದೆ ಏಳುತ್ತಿದ್ದಳು. ದುಃಖ ಒತ್ತರಿಸಿ ಬಂದು ಗಂಟಲು ತುಂಬಿ ಬಾವು ಬಂದಿತ್ತು. ಜನ ಬರುತ್ತಿದ್ದರು, ಹೋಗುತ್ತಿದ್ದರು. ಎಲ್ಲರೂ ಮತ್ತೆ ಮತ್ತೆ ಕೆದರುತ್ತಿದ್ದದ್ದು ಅದೇ ಗಾಯವನ್ನು ನೋವು ಮಾಯದಂತೆ.

ಮತ್ತೆ ಟ್ರಿನ್.... ಮುಖ ಕಿವುಚಿ ಮೈಮೇಲಿನ ಕಾಶ್ಮೀರಿ ಶಾಲು ಎಳೆದು ಹಾಕಿ ಎದ್ದು ಕುಳಿತಳು ಮಾಲಿನಿ. ಶಾಲು ಅವ್ವನ ತೊಡೆಯಂತೆ ಮೆತ್ತಗಿತ್ತು ಅವಳೇ ತಂದಿದ್ದು ಯಾತ್ರೆಗೆ ಹೋದಾಗ....

"ಇದಕ್ಯಾಕ ಖರ್ಚು ಮಾಡಿದಿಯವಾ. ಇಲ್ಲಿ ಬಿಸಿಲಿಗೆ ಶಾಲು ಬೇಕಾಗೂದಿಲ್ಲ. ನಿನಗ ರೊಕ್ಕಾ ಉಳಿಸಿಕೋಬೇಕಿತ್ತು."

"ಇರಲಿ ಬಿಡs ದಿಲ್ಲಿಯೊಳಗ ಎಲ್ಲಾರೂ ಏನೇನೋ ಕೊಂಡುಕೊಂಡರು. ನಾನು ಶಾಲು ತೊಗೊಂಡೆ. ಅಂಗಡೀಯಂವಾ ಇನ್ನೂರು ರೂ. ಹೇಳಿದ್ದಾ. ನಾನು ನೂರು ರೂಪಾಯಿಗೆ ಇಳಿಸಿದೆ ಗೊತ್ತದ ಏನು ?" ಎಷ್ಟ ಛಂದ ನಕ್ಕಿದ್ದಳು. ವ್ಯವಹಾರ ಜ್ಞಾನ ಭಾಳ ಇತ್ತು ಆಕೀಗೆ.

ಮತ್ತೊಮ್ಮೆ ಟ್ರಿನ್.... ಛೀ ಈ ಶನಿ ಬಿಡೂ ಹಾಂಗ ಕಾಣುದಿಲ್ಲ. ಇಷ್ಟೊತ್ತಿನ್ಯಾಗ ಯಾರ ಬಂದಿರಬೇಕು ಈ ಬಿಸಲಾಗ. ಪೀಪ ಹೋಲ್‌ಗೆ ಕಣ್ಣು ಇರಿಸಿದಳು. .... ಕೋಡು ಕೋರೆಹಲ್ಲು. ಕರೀಮುಖ.... ಹೆದರಿ ಹೆಜ್ಜೆ ಹಿಂದಕ್ಕಿರಿಸಿದಳು. ಇದ್ಯಾವ ಪ್ರಾಣಿ. ಮನುಷ್ಯರ ವಾಸನಿ ಹಿಡಕೊಂಡು ಬಂದದ್ದು! ಎದೆಯ ಮೇಲೆ ಕೈ ಇಟ್ಟುಕೊಂಡಳು. ತೀವ್ರಗತಿಯಲ್ಲಿ ಹೊಡೆದುಕೊಳ್ಳುತ್ತಿತ್ತು ಅರಿವಿಲ್ಲದೆ. ಎರಡೂ ಕೈಯಿಂದ ಕುತ್ತಿಗೆ ಒತ್ತಿಕೊಂಡು ಬಿಟ್ಟು ಉಸಿರಾಡಿದಳು. ಹೆದರಿದ ಮೈ ನಡುಗುತ್ತಿತ್ತು. ಇನ್ನೂ ಒಂದೆರಡು ಸಲ ಗಂಟೆ ಬಡಿದು ಎಚ್ಚರಿಸಿತು. ಸುಮ್ಮನೇ ನಿಂತಳು. ಸಪ್ಪಳ ಒಂದೊಂದೇ ಪಾವಟಿಗೆ ಇಳಿದು ದೂರವಾಗುತ್ತಿತ್ತು. ಕುತ್ತಿಗೆಗೆ ಬಂದ ಗಂಡಾಂತರ ಕರಗಿತೆಂದು ತಿಳಿದು ಬಾಗಿಲು ತೆರೆದು ಹಣಕಿದಳು. ಇಲ್ಲ, ಪ್ರಾಣಿ ಇನ್ನೂ ಗೇಟಿನ ಹತ್ತಿರ ನಿಂತಿತ್ತು. ಗುಲಾಬಿ ಮುಳ್ಳು ಗೀಚಿದ ಮುಂಗೈ ರಕ್ತ ದಿಟ್ಟಿಸುತ್ತಿತ್ತು. ಮುಖ ಹೊರಳಿಸಿ ಅವಳತ್ತ ನೋಡಿತು. ಆ ಕಣ್ಣುಗಳಲ್ಲಿನ ದುಃಖ, ನೋವು. ದೈನ್ಯ ಮಾಲಿನಿಯ ಮುಖಕ್ಕೆ ರಾಚಿತು. ಗುರುತು ಸಿಕ್ಕಂತೆ ಕಣ್ಣುಗಳನ್ನು ಅರಳಿಸಿ ನೋಡಿದಳು. ಅವುಗಳ ಮೋಡಿಯಿಂದ ಅವನ ಪಾದಗಳು ಮತ್ತೆ ಮನೆಯತ್ತ ಚಲಿಸಿದವು. ಬಂದು ಹಿಂಜರಿಯುತ್ತ ಕುರ್ಚಿಯ ತುದಿಗೆ ಕೂತ.

ಮಾಸಿದ ಬಿಳಿ ಜುಬ್ಬ. ಪಾಯಿಜಾಮ, ಅಂಚು ಹರಿದ ಜಾಕೀಟು, ಬಗಲ ಚೀಲ ಇಷ್ಟು ವರ್ಷಗಳಲ್ಲಿ ಕೆಂಪನೆಯ ಬಣ್ಣ ಸುಟ್ಟು, ಅರೆನೆರೆತ ಕೂದಲು ಮುಳ್ಳಿನ ಗಿಡದಂತೆ ಮುಖದ ತುಂಬ ಹಬ್ಬಿ, ಸೋತ ಕಣ್ಣುಗಳ ಮನುಷ್ಯ ಸಂಪೂರ್ಣ ಬದಲಾಗಿದ್ದ. ಅವಳ ಕಲ್ಪನೆಯ ವ್ಯಕ್ತಿ ಇವನಾಗಿರಲಿಲ್ಲ. ಹತೋಟಿಗೆ ಬರುತ್ತಿದ್ದ ದುಃಖ ಮರುಕಳಿಸಿ ಮಾಲಿನಿ ಜೋರಾಗಿ ಅಳತೊಡಗಿದಳು. ಇಷ್ಟು ದಿನಗಳಲ್ಲಿ ಚಿಕ್ಕ ಮಗುವಿನಂತೆ ಮನಸ್ಸು ಬಿಚ್ಚಿ ಎಂದೂ ಅತ್ತಿರಲಿಲ್ಲ. ಅವನು ತಲೆ ತಗ್ಗಿಸಿ ಸುಮ್ಮನೆ ಕೂತಿದ್ದ. ಅತ್ತತ್ತು ದಣಿದ ಮಾಲಿನಿ ಸಿಟ್ಟಿನಿಂದ ಅವನತ್ತ

ನೋಡಿದಳು. ಅವನು ಅಳುತ್ತಿರಲಿಲ್ಲ. ಆದರೆ ಅವನ ಶರೀರ ನಡುಗಿ ಯಾವಾಗ ನೆಲಕ್ಕೆ ಉರುಳುತ್ತಾನೋ ಎನ್ನುವಷ್ಟು ದಣಿದಿದ್ದ. ಗಾಬರಿಯಾದ ಮಾಲಿನಿ ಗ್ಲಾಸಿನಲ್ಲಿ ತಣ್ಣನೆಯ ನೀರು ತಂದಳು. ಗಟಗಟ ಕುಡಿದು ಕುರ್ಚಿಗೆ ಒರಗಿಸಿದ. ಮುಖ ಬಿಳಿಚಿಕೊಂಡಿತ್ತು. ಇವನೂ ,ಸಾಯ್ತಾನೋ ಏನೋ ಇಲ್ಲೇ ಜೀವಾ ಬಿಟ್ಟರ ಏನ ಗತಿ ? ಕೈ ಹಿಡಿದು ಸೋಫಾದಲ್ಲಿ ಮಲಗಿಸಿದಳು. ಮೈ ಕೆಂಡವಾಗಿತ್ತು.

"ಯಾಕ ಆರಾಮ ಇಲ್ಲೇನು ?"

"ಜ್ವರಾ ಬರತಿದ್ವು. ಸುದ್ದಿ ಗೊತ್ತಾದ ಕೂಡಲೆ ಹೊರಟೆ."

"ಎಲ್ಲಿಂದ ಬಂದಿ?"

"ದಾವಣಗೆರೆಯಿಂದ, ಮಾಲಿಕರ ಮಗಾ ಬಸ್ಸಿನ್ಯಾಗ ಕೂಡ್ರಿಸಿದಾ.... ಕಣ್ಣಿಗೆ ಕತ್ತಲು ಬಂದು ಬಸ್‌ಸ್ಟ್ಯಾಂಡಿನ್ಯಾಗ ಮಲಗಿದ್ದೆ. ನಿನ್ನ ಮನೀ ಹುಡುಕಾಕ ಇಷ್ಟೊತ್ತಾತು."

ಬಾಗಿಲು ತೆಗೆಯದೆ ಬಯ್ದು ಓಡಿಸಬೇಕಾಗಿದ್ದ ಅವನಿಗೆ ಹಾಲು ಕುಡಿಸಿ ಆಯಿತು. ಮುಖ ತೊಳೆದು ಬಟ್ಟೆ ಬದಲಾಯಿಸಿದ ಮೇಲೆ ಪ್ರಾಣಿ ಮನುಷ್ಯನಾದ.

"ಏನಾಗಿತ್ತು ಉಮಾಗ?"

"ಬಾಯಿ ಮುಚ್ಚು, ಆಕೀ ಹೆಸರ ತೊಗೊಳ್ಳೋ ಯೋಗ್ಯತಾ ಇಲ್ಲ ನಿನಗ" ಅವಳ ಸಿಟ್ಟಿಗೆ ಹೆದರಿ ಕಣ್ಣು ಮುಚ್ಚಿ ಮಲಗಿದ. ಕಣ್ಣೀರು ಗಲ್ಲದಿಂದ ಇಳಿದಾಗ ಮತ್ತೆ ಕರಗಿದಳು ಮಾಲಿನಿ.

"ಆಕೀಗೆ ಕ್ಯಾನ್ಸರ್ ಆಗಿ ಆರು ತಿಂಗಳ ಆಗಿತ್ತು. ಹಾಸಿಗಿ ಹಿಡದ್ಲು. ಉಳಿಸಿಕೋಬೇಕಂತ ಭಾಳ ಪ್ರಯತ್ನ ಮಾಡಿದ್ವಿ."

"ನನಗ ಬಾಳಣ್ಣ ಎಲ್ಲಾ ಸುದ್ದಿ ಹೇಳಿದ್ದ."

"ಹೌದಃ? ಹಾಂಗಾರ ನಿನಗ ಗೊತ್ತ ಇತ್ತಃ ಆದರೂ.... " ತಲೆ ಎತ್ತಿ ನೋಡುವಷ್ಟರಲ್ಲಿ ಎದ್ದು ಹೋಗಿದ್ದಳು. ಮಾಲಿನಿ.

ಹಾಸಿಗೆಯಲ್ಲಿ ಒಬ್ಬನೇ ಹೊರಳಾಡಿದ. ಅವಳು ಇದೇ ಹಾಸಿಗೆಯಲ್ಲಿ ಮಲಗಿರಬಹುದೇ ಇಲ್ಲಿಯೇ ಜೀವ ಬಿಟ್ಟಿರಬಹುದೇ. ಈ ಕೋಣೆಯ ಸುತ್ತು ಸುಳಿದಾಡುತ್ತಿರಬಹುದೇ. ಹುಡುಕುವಂತೆ ಅತ್ತಿತ್ತ ನೋಡಿದ. ಎದುರಿನ ಗೋಡೆಯ ಮೇಲೆ ಗಂಧದ ಹಾರ ಹಾಕಿಕೊಂಡ ಉಮಾ ವಿಜಯದ ನಗೆ ನಗುತ್ತಿದ್ದಳು. ತನ್ನ ಈಗಿನ ಅವಸ್ಥೆಯನ್ನು ನೋಡಿ....

ಮಿಂಚುವ ಕಣ್ಣುಗಳು, ತುಸು ಮೊಂಡ ಮೂಗು, ಕೇದಿಗೆಯ ಮೈ ಬಣ್ಣ, ಅವಳು ತಾನು ನೋಡಿದ ಹದಿನಾರನೆಯ ಹುಡುಗಿ.

ಉಮಾ ಪಿ.ಯು.ಸಿ. ಸೆಕೆಂಡ್ ಇಯರ್, ಪೇಂಟಿಂಗ್ ಹವ್ಯಾಸ, ವಯಸ್ಸು ಹದಿನೆಂಟು. ಮೂರು ಜನ ಅಣ್ಣಂದಿರು, ಇಬ್ಬರು ತಂಗಿಯರು. ಹೊತ್ತು, ಮುಹೂರ್ತ, ಜಾತಕಗಳಲ್ಲಿ ನಂಬಿಕೆಯಿಲ್ಲದ ತಾನು ಉಮಾಳನ್ನು ನೋಡಿದ ತಕ್ಷಣ ಒಪ್ಪಿ ಬಿಟ್ಟಿದ್ದೆ. ಅಪ್ಪನಿಗೆ ಸಿಟ್ಟು ಬಂದಿತ್ತು.

"ಒಳ್ಳೊಳ್ಳೆ ಮನಿತನದ ಛಂದನ್ನ ಕನ್ಯಾ ನಪಾಸ ಮಾಡಿದಂವಾ ಇಕಿನ್ನ ಒಪ್ಯಾನ. ನನಗೇನ ಪಸಂದಿಲ್ಲ ಬಿಡು. ಜಾತಕಾನೂ ಕೂಡೂದಿಲ್ಲ."

ಈ ಹುಡುಗಿ ಬೇಡವೆನ್ನಲು ಅಪ್ಪನ ನಿಜವಾದ ಕಾರಣ ತನ್ನ ಜಮೀನುದಾರಿಕೆಗೆ ತಕ್ಕಷ್ಟು ವರದಕ್ಷಿಣೆ ಸಿಗುವುದಿಲ್ಲವೆನ್ನುವುದು. ಬಿ.ಎ ಓದುವಾಗ ವರದಕ್ಷಿಣೆ ಇಲ್ಲದೆ ಮದುವೆ ಆಗುತ್ತೇನೆಂದು ಭಾಷಣ ಮಾಡಿದ ತನಗೆ ಇದು ಅವಮಾನ. ಅಪ್ಪ ಹೇಳಿದಂತೆ ಕೇಳುತ್ತ ಹೋದರೆ ಗೆಳೆಯರು ಚಪ್ಪಾಳೆ ತಟ್ಟಿ ನಗುತ್ತಾರೆ, ಹಂಗಿಸುತ್ತಾರೆ. ಅವರ ಮುಂದೆ ಆದರ್ಶವಾದಿ, ಹೀರೋ ಆಗಬೇಕಲ್ಲ ತಾನು ? ಇಲ್ಲದಿದ್ದರೆ ತನ್ನ ಮಾತಿಗೆ ಬೆಲೆ ಏನು ? ತಾನೇ ಕಿರಿಯ ಮಗ, ಅವ್ವನ ಬೆಂಬಲ ತನಗೇ, ಹಟ ಹಿಡಿದ ತಾನು ಮದುವೆಯಾದರೆ ಉಮಾಳನ್ನೇ ಎಂದು ಆಯಿತು.

"ನಾನು ನಿನ್ನ ಬಾಳ ಪ್ರೀತಿ ಮಾಡ್ತೀನಿ ಉಮಾ" ಮದುವೆ ನಿಶ್ಚಯವಾದ ಮೇಲೆ ತುಂಬಾ ಕಷ್ಟಪಟ್ಟು ಅವಳ ತಾಯಿಗೆ ಹೇಳಿ ಸಿನಿಮಾಕ್ಕೆ ಕರೆದುಕೊಂಡು ಹೋಗಿದ್ದೆ ಅಪ್ಪನಿಗೆ ಗೊತ್ತಾಗದಂತೆ. ಅವರ ಊರಿಗೆ ಹೋದದ್ದು ತನ್ನ ಮದುವೆಯ ಅರಿವೆಯ ಖರೀದಿಗೆ. ಅವಳ ಅಣ್ಣ ಬಾಳಣ್ಣನ ಬೆಂಬಲವೂ ತನಗಿತ್ತು.

ಥೀಯೇಟರಿನ ಕತ್ತಲಲ್ಲಿ ಮತ್ತೊಮ್ಮೆ ನನ್ನ ಮಾತನ್ನು ಪಿಸುಗುಟ್ಟಿದೆ. ಏನೂ ಉತ್ತರವಿಲ್ಲ. ಹತ್ತಿರ ಸರಿದು ಕೈ ಚಾಚಿದೆ. ಇನ್ನಷ್ಟು ಆಚೆ ಮುದುಡಿದಳು.

"ಯಾಕ ಉಮಾ ನನ್ನ ಮ್ಯಾಲೆ ನಿನಗ ಪ್ರೀತಿ ಇಲ್ಲೇನು" ಅಂದೆ.

'ಹುಂ' ಅಂದಳು. ಹೌದೋ ಅಲ್ಲವೋ ಎನ್ನುವಂತೆ. ಅವಳ 'ಹುಂ' ಗಳಲ್ಲೇ ತಮ್ಮ ಮೊದಲ ಭೆಟ್ಟಿ ಮುಕ್ತಾಯವಾಗಿತ್ತು. ನಿರಾಶೆಯಾಗಿತ್ತು ತನಗೆ. ಒಳ್ಳೆಯ ರೂಪ, ಬುದ್ಧಿ, ತಕ್ಕಷ್ಟು ಶ್ರೀಮಂತಿಕೆ ಇದ್ದೂ ಉಳಿದ ಪೋಲಿ ಹುಡುಗರಂತೆ ಹುಡುಗಿಯರ ಬೆನ್ನು ಹತ್ತಿ ಹೋದವನಲ್ಲ ತಾನು. ಅಹಂಕಾರ ತನ್ನ ಮೂಲ ಗುಣ. ತಾನು ಯಾವುದರಲ್ಲಿಯೂ ಕಡಿಮೆಯವನಲ್ಲ ಎನ್ನುವ ಹೆಮ್ಮೆ. ತನ್ನ ಇಂಗ್ಲೀಷು ಜ್ಞಾನ ತುಂಬಾ ಹೆಚ್ಚಿನ ಮಟ್ಟದ್ದು ದಡ್ಡನಲ್ಲ. ಇನ್ನಷ್ಟು ಕಲಿಯದ ಅಣ್ಣಂದಿರ ಮುಂದೆ ತನ್ನದೇ ಠೀವಿ. ಹೊಟ್ಟೆಕಿಚ್ಚಿನಿಂದ ತನ್ನ ಸಿಗರೇಟು, ಹೋಟೆಲ್, ಸಿನೆಮಾ ಖರ್ಚಿನ ಬಗ್ಗೆ ಚಾಡಿ ಹೇಳಿ ಅಪ್ಪನಿಂದ ಆಗಾಗ ಬಯ್ಗುಳ ಕೊಡಿಸುತ್ತಿದ್ದರು. ಅಪ್ಪ ಬಯ್ದರೂ ಪಾಕೆಟ್ ಮನಿ ತಪ್ಪಿಸುತ್ತಿರಲಿಲ್ಲ. ಹುಟ್ಟುತ್ತಲೇ ಅಣ್ಣ ತಮ್ಮಂದಿರು ದಾಯಾದಿಗಳು ಎನ್ನುತ್ತಾರೆ. ಅದು ನಿಜ ಅನ್ನಿಸುತ್ತಿತ್ತು. ತಾನು ಮದುವೆಯಾಗುವ ಹುಡುಗಿ ಅತ್ತಿಗೆಯರಿಗಿಂತ ಹೆಚ್ಚಿಗೆ ಕಲಿತವಳು ಎನ್ನುವುದೂ ಅವರ ದುಮ್ಮಾನಕ್ಕೆ ಕಾರಣ.

ಎರಡು ಮೂರು ಸಲ ಭೆಟ್ಟಿಯಾದರೂ ಉಮಾಳದು ಅದೇ ಮೌನದ ಪ್ರತಿಕ್ರಿಯೆ. ತನ್ನ ಪ್ರೀತಿಗೆ ಬೆಲೆಯೇ ಇಲ್ಲ. ತನ್ನನ್ನು ಮದುವೆಯಾಗುವ ಮನಸ್ಸೇ ಇಲ್ಲವೇನೋ ಎನ್ನುವ ಉದಾಸೀನತೆ. ಈ ಮದುವೆ ಒಲ್ಲೆ ಎಂದು ಬಿಟ್ಟುಬಿಡಲೇ ಎನ್ನುವಷ್ಟು ಸಿಟ್ಟು ಬಂದಿತ್ತು. ಈಗ ಬಿಟ್ಟರೂ ತನ್ನ ಹೆಮ್ಮೆಗೆ ಪೆಟ್ಟು. ಹಟ ಹಿಡಿದು ಮನೆಯವರನ್ನು ಒಪ್ಪಿಸಿದ ಮೇಲೆ ಏನು ಕಾರಣ ಹೇಳಿ ಬಿಡಿಸಿಕೊಳ್ಳುವದು, ಹಗ್ಗದಿಂದ ತಾನೇ ಕಾಲು ಕಟ್ಟಿಕೊಂಡಂತಾಗಿತ್ತು.

ಹೋಗಲಿ, ಅವಳಿಗೆ ನಾಚಿಕೆ, ಸಂಪ್ರದಾಯಸ್ಥ ಮನೆಯ ಹುಡುಗಿ ಕಟ್ಟುನಿಟ್ಟಾಗಿದ್ದಾಳೆ. ಫ್ರೀಯಾಗಿದ್ದು ಗೊತ್ತಿಲ್ಲ. ಇದೂ ಒಂದು ರೀತಿ ತನಗೇ ಒಳ್ಳೆಯದು. ತಿರುಗುವ ಹುಡುಗಿಯರನ್ನು ಕಂಡರೆ ತನಗೆ ಜಿಗುಪ್ಸೆ, ಮದುವೆಯಾಗಿ ತನ್ನ ಸ್ವಭಾವ ತಿಳಿದ ಮೇಲೆ ಬದಲು ಆದಾಳು ಎಂದೆಲ್ಲ ವಿಚಾರ ಮಾಡಿ ಮನಸ್ಸಿಗೆ ಸಮಾಧಾನ ತಂದುಕೊಂಡಿದ್ದೆ. ಒಳಗೆಲ್ಲೋ ಚುಚ್ಚುತ್ತಿದ್ದರೂ ಹೊರಗೆ ಸಂತೋಷವಾಗಿದ್ದೆ. ಬೀಗರು ಮಾಡಿಕೊಟ್ಟ ಮದುವೆಯೂ ತಮ್ಮ ಪ್ರತಿಷ್ಠೆಗೆ ತಕ್ಕುದಾಗಿರಲಿಲ್ಲ. ಅತ್ತಿಗೆಯವರು ಗುಸು ಗುಸು ಆಡಿಕೊಳ್ಳುತ್ತಿದ್ದರು. ಅಣ್ಣಂದಿರು ಮುನಿಸು ತೋರಿಸಿದ್ದರು. ಎಲ್ಲವನ್ನೂ ಕಾಣದಂತೆ ಇದ್ದೆ...

"ಅಪ್ಪಾs ಈ ಕ್ರೋಶಿನ್ ಗುಳಿಗೀ ತೊಗೋ, ಬೋರ್ನವಿಟಾ ಕುಡಿ" ಸಿಟ್ಟಾಗಿ ಎದ್ದು ಹೋಗಿದ್ದ ಮಗಳು ಮುಸುಕು ಸರಿಸಿದಳು. ಅರ್ಧ ಎಚ್ಚರ, ಅರ್ಧ ಮಂಪರಿನಲ್ಲಿ ಎದ್ದು ಎಲ್ಲ ಬಾಯಿಗೆ ಸುರಿದುಕೊಂಡ. ಹಣೆ ಮುಟ್ಟಿ ನೋಡಿದ ಮಾಲಿನಿ ಟಾವೆಲ್ ತಂದು ಬೆವರು ಒರೆಸುತ್ತ ಕೇಳಿದಳು.

"ಇಷ್ಟು ವರ್ಷದ ಮ್ಯಾಲೆ ಇವತ್ತ ನನ್ನ ನೆನಪ ಆತೇನು ನಿನಗ ?"

"ಬಾಳಣ್ಣನ ಬಾಯಿಂದ ಎಲ್ಲಾ ಸುದ್ದೀ ಕೇಳತಿದ್ದೆ ಮಾಲೂ, ನಿನ್ನ ಮದುವೀ ಸುದ್ದೀನೂ ಅವನs ಹೇಳಿದ್ದ. ಬಂದು ಅಕ್ಕಿ ಕಾಳು ಹಾಕಿದ್ದೆ. ನಿನ್ನ ಮಗಾ ದೊಡ್ಡಾವ ಆಗಿ ಇಂಜಿನಿಯರಿಂಗ್ ಓದ್ತಾನ ದಾವಣಗೆರ್‍ಯಾಗ, ಅಂತನೂ ಪತ್ರಾ ಬರದಿದ್ದಾ. ಒಮ್ಮೆ ದೂರಿಂದ ಅವನ್ನೂ ತೋರಿಸಿದ್ದ. ಯಾವಾಗರೆ ಹಾದ್ಯಾಗ ನೋಡತಿರತೀನಿ ಅವನ್ನ."

"ಹೌದಾs ದೀಪನ್ನ ನೋಡಿದ್ಯಾ, ಮಾತಾಡ್ಸಿದ್ಯಾ ?:"

"ನಾ ಯಾರು ಅನ್ನೂದು ಅಂವಗೇನು ಗೊತ್ತು ಮಾಲೂ. ನಿನ್ನ ಅಜ್ಜ ಅಂತ ಹೇಳಿಕೊಂಡರೂ ನಂಬಲಿಕ್ಕಿಲ್ಲ. ನಾ ಬದುಕಿ ಇದ್ದದ್ದೂ ನಿಮ್ಮವ್ವಗ ಗೊತ್ತ ಇರಲಿಕ್ಕಿಲ್ಲಾ. ನೋಡು ಆ ಫೋಟೋದಾಗ ಹಣೀ ಮ್ಯಾಲೆ ಕುಂಕುಮಾನೂ ಇಲ್ಲಾ. ಮಂಗಳಸೂತ್ರಾನೂ ಇಲ್ಲಾ."

"ಬಾಳೂ ಮಾಮಾ ನಿಮ್ಮ ಸುದ್ದೀ ಎಲ್ಲಾ ನಮಗೂ ಹೇಳಿತಿದ್ದಾ ಅನ್ನೂದು ನಿನಗ ಹ್ಯಾಂಗ ಗೊತ್ತಿಲ್ಲಾ. ನೀನು ದಾವಣಗೇರ್‍ಯಾಗಒಬ್ಬನ ಖಾನಾವಳ್ಯಾಗ ಊಟಾ ತಿಂಡಿ ಮಾಡಿಕೊಂಡ ಅದೀ ಅನ್ನೋದು ನಮಗ ಗೊತ್ತಿತ್ತು. ನಿನ್ನ ಜೋಡಿ ಮದುವಿ ಆಗಿ ಅವ್ವ ಏನ ಸುಖಾಪಟ್ಲು? ಯಾವಾಗರೆ ಕುಂಕುಮಾ ಹಚ್ಚತಿದ್ಲು. ಮಂಗಳಸೂತ್ರ ಕಳ್ಳ ಕಿತಗೊಂಡು ಹೋಗಿದ್ದ. ಅಲಂಕಾರಕ್ಕೆ ಆಕಿ ಎಂದೂ ಮಹತ್ವ ಕೊಡಲಿಲ್ಲಾ. ಎಷ್ಟು ಕಷ್ಟಪಟ್ಟು ದುಡೀತಿದ್ಲು. ನಿನಗ ಹ್ಯಾಂಗ ತಿಳಿದೀತು?" ಮಾಲಿನಿ ಕಣ್ಣು ಒರೆಸುತ್ತ ಹೇಳಿದಳು.

"ಆದರೂ ಸಾಯೂದರೊಳಗ ಒಂದ ಸಾರೆ ಅರೆ ನನ್ನ ನೋಡಬೇಕು ಅಂತ ಉಮಾಗ ಅನಿಸಲೇ ಇಲ್ಲೇನು?"

"ಹೌದು, ಬಾಳು ಮಾಮಾ ನನ್ನ ಮುಂದs ಕೇಳಿದ್ದ ನಿನ್ನ ಕರಕೊಂಡು ಬರಲೇನು ಅಂತ. ಆದರ ಅವ್ವ ಮಾರಿ ಹೊಳ್ಳಿಸಿ ಮಲಕೊಂಡಬಿಟ್ಲು. ನನಗ ಸಿಟ್ಟು ಉಕ್ಕತಿತ್ತು. ಸಾಯೂ ಮುಂದ ಅವಳ ಮನಸೀಗೆ ಶಾಂತಿ ಇರಲಿ ಅತ ನಾನs ಕರಕೊಂಡು ಬರಬ್ಯಾಡ ಅಂದೆ."

ಗಂಟಲು ಕಟ್ಟಿ ಮುಂದೆ ಮಾತು ಹೊರಡದೆ ಮಾಲಿನಿ ಮತ್ತೆ ಎದ್ದು ಹೋಗಿದ್ದಳು. ತನ್ನ ರೂಮಿನಲ್ಲಿ ಅವಳು ಬಿಕ್ಕಿ ಬಿಕ್ಕಿ ಅಳುತ್ತಿರುವ ದನಿ ಕೇಳುತ್ತಿದ್ದರೂ ಅಸಹಾಯ ಸ್ಥಿತಿಯಲ್ಲಿ ಹಾಗೆಯೇ ಮಲಗಿದ್ದ. ಎದ್ದು ಹೋಗುವಷ್ಟು ಚೈತನ್ಯ ಕಾಲುಗಳಲ್ಲಿದ್ದರೂ ಮಗಳ ಬೆಡ್ ರೂಮಿಗೆ ಹೋಗಿ ಸಮಾಧಾನ ಮಾಡುವಷ್ಟು ಸಲಿಗೆ ಇರಲಿಲ್ಲ: ಮಗಳ ಹತ್ತಿರಕ್ಕೆ ಹೋಗಲಾರದ ಸಂಕೋಚ ಅಡ್ಡಗೋಡೆಯಾಗಿತ್ತು.

ಜೀವನದಲ್ಲಿ ಮೊಟ್ಟಮೊದಲ ಬಾರಿಗೆ ಅವನ ಅಹಂಕಾರಕ್ಕೆ ಪೆಟ್ಟು ಬಿದ್ದಿತ್ತು. ತನ್ನನ್ನು ಕಸದಂತೆ ಸರಿಸಿ ಉಮಾ ಹೋಗಿದ್ದಳು. ಹೆಂಡತಿಯ ಮೇಲಿನ ಸಿಟ್ಟಿಗೆ, ಅವಳಿಗೆ ಪಾಠ ಕಲಿಸಬೇಕೆನ್ನುವ ಹಟಕ್ಕೆ ತಾನು ಪುಟ್ಟ ಮಗಳೊಡನೆ ಅವಳ ಕೈ ಬಿಟ್ಟು ಹೊರಟುಹೋಗಿದ್ದ. ಒಂದಲ್ಲ ಒಂದು ದಿನ ನನ್ನ ನೆರವು ಕೋರಿ ತಪ್ಪನ್ನೊಪ್ಪಿಕೊಂಡು ಕ್ಷಮೆ ಕೇಳುತ್ತಾಳೆಂದು ನಂಬಿಕೊಂಡಿದ್ದ. ತನ್ನ ನಂಬಿಕೆ ಹುಸಿಯಾಗಿತ್ತು. ಅವಳ ಹಟದ ಮುಂದೆ ತನ್ನದೇನೂ ಅಲ್ಲವೆಂದು ತುಂಬಾ ತಡವಾಗಿ ತಿಳಿದಿತ್ತು.

ಕೊನೆಯ ಸಲವೆಂದರೆ ಮಗಳ ಮದುವೆಯಲ್ಲಿಯೇ ಅವಳನ್ನು ನೋಡಿದ್ದು. ತನ್ನ ಮಗಳ ಮದುವೆಯಲ್ಲಿ ಅಪರಿಚಿತನಂತೆ ಕುಳಿತಿದ್ದ ತನ್ನನ್ನು ಅಣ್ಣಂದಿರೂ ಮಾತಾಡಿಸಿರಲಿಲ್ಲ. ಒಳಗೊಳಗೇ ನಗುತ್ತಿದ್ದರೇನೋ. ಬೀಗರಿಗೂ ಪರಿಚಯ ಮಾಡಿಸಿರಲಿಲ್ಲ. ಎಲ್ಲಾ ಕೆಲಸಕ್ಕೂ ಉಮಾ. ಎಲ್ಲ ಕಡೆಗೂ ಅವಳೇ ಮಂಟಪದ ಒಂದು ಮೂಲೆಯಲ್ಲಿ ಮಾತುಗಳು ಕಿವಿಗೆ ಬಿದ್ದಿದ್ದವು.

"ಹುಡುಗೀನ್ನ ದೊಡ್ಡಪ್ಪ ದೊಡ್ಡವ್ವ ಧಾರೀ ಎರದು ಕೊಡ್ತಾರಲ್ಲ. ಯಾಕ ಅಪ್ಪ ಇಲ್ಲೇನು ?"

"ಅದಾನಂತ ಎಲ್ಲ್ಯಾದಾನೋ ಏನೋ, ಹೆಂಡತೀಗೆ ಹೊಡದು ಬಡದು ಭಾಳ ತ್ರಾಸ ಕೊಡ್ತಿದ್ದಂತ. ನಿನ್ನ ಕೊಲ್ಲತೀನಿ ಅಂತಿದ್ದಂತ. ತಲೀ ಸರಿ ಇರಲಿಲ್ಲಾ ಅಂತಾರಪಾ. ಒಮ್ಮೆ ಮನೀ ಬಿಟ್ಟು ಹೋಗಿ ಬಿಟ್ಟ. ಯಾರೂ ಹುಡುಕಾಕ ಹೋಗಿಲ್ಲ. ಅವ್ವನs ಸಾಲ್ಯಾಗ ನೌಕರಿ ಹಿಡಿದು ಮಗಳ್ನ ಬೆಳಿಸಿದ್ಲಂತ. ಎಂಥೆಂಥಾ ಮಂದಿ ಇರ್ತಾರ ನೋಡಪಾ."

ತನ್ನ ತಲೆ ನಿಜವಾಗಿ ಕೆಟ್ಟು ಹೋಗಿತ್ತು. ಬಾಳಣ್ಣ ಊಟಕ್ಕೆ ಕಲೆಯಲು ಬಂದ. ಹೊಟ್ಟೆ ಹಸಿದಿದ್ದರೂ ಊಟ ಸೇರಲಿಲ್ಲ. ಕೈ ತೊಳೆಯುವ ಜಾಗದಲ್ಲಿ ಉಮಾ ನಿಂತಿದ್ದಳು. ಸಿಟ್ಟಿನಿಂದ ನೋವಿನಿಂದ ತನ್ನ ಕಾಲು ನಡುಗುತ್ತಿದ್ದವು. ಅವಳಿಗೆ ಎರಡೇಟು ಕೊಡುವಷ್ಟು ಸಿಟ್ಟು ಉಕ್ಕುತ್ತಿತ್ತು. ಆದರೆ ಅಲ್ಲಿ ಅವಳಿಗೆ ಸಂಪೂರ್ಣ ರಕ್ಷಣೆಯಿಂತ್ತು. ತನ್ನ ಮೇಲೆಯೇ ಅಧಿಕಾರ ಚಲಾಯಿಸುವಂತೆ ಅವಳೇ ನಿಷ್ಠುರವಾಗಿ ಹೇಳಿದ್ದಳು.

"ಮಾಲೂ ಗಂಡನ ಮನ್ಯಾಗ ಸುಖದಿಂದ ಇರಬೇಕಂದರ ನೀವ ಎಂದೂ ಇಲ್ಲಿಗೆ ಬರಬಾರದು. ಬಂದು ಮಂದ್ಯಾಗ ನಮ್ಮ ಮಾನಾ ಕಳೀಬ್ಯಾಡ್ರಿ. ಇಷ್ಟ ಮಾಡಲಿಕ್ಕೆ ನಾ ಇಡೀ ಜೀವನಾನ ಸವಸೇನಿ. ಇವತ್ತs ಕಡೀದು, ಹೋಗಿಬಿಡ್ರಿ."

ಮತ್ತೆ ಮತ್ತೆ ತನ್ನ ಅಹಂಕಾರಕ್ಕೆ ಪೆಟ್ಟು ಬೀಳುತ್ತಿತ್ತು. ಜೀವನದಲ್ಲಿ ಏನೇನೋ ಆಸೆ ಕಟ್ಟಿಕೊಂಡಿದ್ದೆ. ಕನಸು ಕಂಡಿದ್ದೆ. ಆದರ್ಶವಾದಿಯಾಗಿ ಎಲ್ಲರೂ ಭೇಷ್ ಎನ್ನುವಂತೆ ಬಾಳಬೇಕೆಂದುಕೊಂಡಿದ್ದೆ. ಎಲ್ಲವೂ ಮಣ್ಣುಗೂಡಿ ಹೋಗಿತ್ತು. ತನ್ನ ಒಳ್ಳೆಯ ಗುಣಗಳೆಲ್ಲ ಹಾಳಾಗಿ ಹೋಗಿ ದುಷ್ಟತನದ ಸಂಕೇತವಾಗಿ ತನ್ನ ಹೆಸರು ಉಳಿದಿತ್ತು. ಆದಷ್ಟು ಬೇಗ ಅಲ್ಲಿಂದ ಓಡಿಹೋಗಿದ್ದೆ. ನನ್ನ ಬದುಕನ್ನ ನರಕವನ್ನಾಗಿ ಮಾಡಿದವಳೇ ಉಮಾ. ಅಂದಿನಿಂದ ಮಗಳ ಮುಖ ನೋಡಿರಲಿಲ್ಲ. ಅವಳ ಚಿತ್ತದಲ್ಲಿನ ತನ್ನ ಚಿತ್ರ ಹೆದರಿಕೆ ಹುಟ್ಟಿಸುವಂತಿತ್ತು....

ಉಮಾs ಹಿಂಗ್ಯಾಕ ಮಾಡಿದಿ. ನಾ ಏನ ತಪ್ಪು ಮಾಡಿದ್ದೆ. ನನ್ನ ಅರ್ಥಾ ಮಾಡಿಕೊಳ್ಳಲಿಕ್ಕೆ ನೀ ಪ್ರಯತ್ನಾನ ಮಾಡಲಿಲ್ಲಾ. ನಾ ನಿನ್ನ ಎಷ್ಟ ಪ್ರೀತಿ ಮಾಡತಿದ್ದೆ ಅಷ್ಟು ನೀ ಮಾಡಲಿಲ್ಲಾ ಅನ್ನೂದs ನನ್ನ ಸಿಟ್ಟು. ನಿನಗ ಹೃದಯಾನ ಇಲ್ಲಾ. ನೌಕರಿ ಮಾಡ್ರಿ. ರೊಕ್ಕ ಗಳಿಸ್ರಿ ಅಣ್ಣಂದಿರು ದುಡದದ್ದು ಉಂಡು ತಿಂದು ಹಂಗಿನ್ಯಾಗ ಇರಬ್ಯಾಡ್ರಿ ಅಂತ ನನಗ ಉಪದೇಶಾ ಮಾಡಿ ಮಾಡಿ ನನ್ನ ತಲೀ ತಿಂದಬಿಟ್ಟಿ. ಯಾವಾಗ ನನಗ ನಿನ್ನ ಸಹವಾಸಾ ಬೇಕ ಅನಸತಿತ್ತು ಆಗ ಮುಖಾ ತಿರುಗಿಸಿ ಬಿಡತಿದ್ದೆ. ಅಷ್ಯಾಕ, ನಾ ಎಷ್ಟ ಪ್ರೀತಿಯಿಂದ ಮೊದಲ ರಾತ್ರಿ ದಿನಾ ಛಂದನ್ನ ವಾಚಿ ತಂದು ಕಟ್ಟಿದರ ನೀ ಏನಂದಿ-

"ಯಾರದರೆ ರೊಕ್ಕದಾಗ ಮಜಾ ಮಾಡು ಬುದ್ಧಿ ಒಳ್ಳೆಯದಲ್ಲ. ನನಗ ಇದು ಸೇರೂದಿಲ್ಲ. ನೀವು ಸ್ವತಾ ದುಡದು ತಂದುಕೊಡ್ರಿ ಆವಾಗ ನನಗ ಸಂತೋಷ ಆಗ್ತದ" ಅಂದಿ. ನನ್ನ ಅಭಿಮಾನಕ್ಕ ಪೆಟ್ಟು ಬಿತ್ತು. ಅವತ್ತs ನಿನ್ನ ಮ್ಯಾಲೆ ಅತ್ಯಾಚಾರಾ ಮಾಡಿದೆ. ನಿನ್ನ ಕಣ್ಣಾಗ ನೀರು ಹರೀತಿದ್ದದ್ದು ನೋಡಿದರೂ ನನ್ನ ಮನಸ್ಸು ಕರಗಲಿಲ್ಲ.

ಅಪ್ಪ ಇನ್ನೂ ಜೀವಂತ ಇದ್ದಾ. ಜಮೀನು ಪಾಲ ಆಗಿದ್ದಿಲ್ಲಾ. ಆಸ್ತಿಯೊಳಗ ನನಗೂ ಹಕ್ಕು ಇತ್ತು. ಸಣ್ಣ ಪಗಾರದ ಕಾರಕೂನಕಿ ನನಗ ಬೇಕಾಗಿದ್ದಿಲ್ಲ. ನನ್ನ ಯೋಗ್ಯತಾಕ್ಕ ತಕ್ಕಂಥಾ ನೌಕರೀ ಹುಡುಕತಿದ್ದೆ. ನೀ ಅದನ್ನೂ ತಿಳಕೊಳ್ಳಲಿಲ್ಲಾ. ನೀವೂ ಅಣ್ಣಂದಿರ ಹಾಂಗ ಹೊಲದ ದೇಖರೇಖಿ ಮಾಡ್ರಿ ಅಂತಿದ್ದಿ. ಇಷ್ಟ ಕಲತು ಶಾಣ್ಯಾ ಆಗಿ ಒಕ್ಕಲತನಾ ಮಾಡಬೇಕು ಅಂದರ ಅದಕ್ಕೂ ವಾದಸತಿದ್ದಿ. ನನ್ನ ಪರಿಸ್ಥಿತಿ ಅರ್ಥ ಮಾಡಿಕೊಳ್ಳೊ ಮನಸ್ಸs ಮಾಡಲಿಲ್ಲ.

ಆಗ ನನಗೂ ಪಶ್ಚಾತ್ತಾಪ ಆಗುತ್ತಿತ್ತು. ಉಮಾನ್ನ ಮದುವಿ ಆಗಬಾರದಿತ್ತು ಅಂತ ಅನಸತಿತ್ತು. ಯಾವಾಗಲೂ ಉಪದೇಶಾ ಮಾಡೂಮಂಥಾ ಬುದ್ಧಿವಂತ ಹೆಂಡತಿ ನನಗ ಬೇಕಾಗಿದ್ದಿಲ್ಲ. ಎದುರು ವಾದಿಸಿದಾಗ ನಿನ್ನ ಹೊಡೀತಿದ್ದೆ.

ಒಮ್ಮೆ ಅಂತೂ ಕುತಿಗೀ ಹಿಚಿಕಿ ಕೊಲ್ಲೂವಷ್ಟು ಸಿಟ್ಟು ಬಂದಿತ್ತು. ಚೀರಲಿಕ್ಕೂ ನಿನಗ ದನಿ ಇದ್ದಿಲ್ಲ. ಅಷ್ಟು ಕುತ್ತಿಗಿ ಒತ್ತಿ ಹಿಡದಿದ್ದೆ. ಆದರ ಸಣ್ಣ ಅತ್ತಿಗಿ ನೋಡಿ ಬಿಡಿಸಿಕೊಂಡಳು.

ಅಂದ ರಾತ್ರಿ ಅಪ್ಪನ ಕೂಡ ಜಗಳ ಆತು. ಉಮಾನ್ನ ಕೊಂದರ ಪೊಲೀಸರು ನಮ್ಮನ್ನೂ ಹಿಡಕೊಂಡು ಹೋಗ್ತಾರ ಅಂತ ಅಣ್ಣಂದಿರು ವಾದಿಸಿ ಅವರ ಪಾಲಾ ಕೊಟ್ಟು ಹೊರಗ ಹಾಕ್ರಿ ಅಂತ ಹಟಾ ಹಿಡದ್ರು. ಅಪ್ಪ ಒಪ್ಪಿಕೊಳ್ಳಬೇಕಾಯಿತು. ಅವ್ವ ತೀರಿಕೊಂಡಿದ್ಲು. ನನ್ನ ಪಾಲಿನ ಜಮೀನು ಮಾರಿ ರೊಕ್ಕಾ ತೊಗೊಂಡು ಮನೀ ಬಿಟ್ಟು ಹೋದೆ. ಮಾಲೂ ಭಾಳ ಸಣ್ಣಾಕಿ ಇದ್ಲು. ಆಕೀಗೆ ಏನೂ ತಿಳೀತಿದ್ದಿಲ್ಲ. ನಿಜವಾಗಿ ನನ್ನs ಉಮಾನ ನಡುವೆ ಏನು ನಡೀತಿತ್ತು ಅನ್ನೂಡು ಯಾರಿಗೂ ಗೊತ್ತಿಲ್ಲ. ಖರೇನ ನಾನು ಉಮಾನ್ನ ಪ್ರೀತಿ ಮಾಡತಿದ್ದೆ. ಅದಕ್ಕ ಇವತ್ತಿಗೂ ಯಾವ ಹೆಣ್ಣ ನನ್ನ ಬದುಕಿನ್ಯಾಗ ಬಂದಿಲ್ಲ.

ಉಮಾ, ಇದ್ದಾಗಂತೂ ನೀ ನನ್ನ ತಿಳಕೊಳ್ಳಲಿಲ್ಲ. ಈಗ ನೀನ ಹೋಗಿಬಿಟ್ಟೆ. ನಾ ಯಾರಿಗೆ ಹೇಳಲಿ? ಏನ ಹೇಳಲಿ, ನನ್ನ ಮನಸ್ಸಿನ ತಳಮಳಾ ಹ್ಯಾಂಗ ಬಿಡಿಸಿ ತಿಳಿಸಲಿ? ಹೇಳಿದರ ನಂಬವವವರು ಯಾರು ? ಬಾಳಣ್ಣಗ ಒಂದಿಷ್ಟು ನನ್ನ ಗುಣಾ ಗೊತ್ತದ. ನಮ್ಮಿಬ್ಬರನ್ನ ಕೂಡಿಸಬೇಕಂತ ಅಂವಾ ಭಾಳ ಪ್ರಯತ್ನಾ ಮಾಡಿದ. ಆದರ ನೀನೂ ನನ್ಹಂಗ ಹಟಮಾರಿ. ಗಂಡ ಇಲ್ಲ ಇಲ್ಲಂತ ತಿಳಕೊಂಡು ಬದಕತೇನಿ. ಆದರ ಅವಮಾನಾ ಮಾಡಿಸಿಕೊಂಡು ಹೊಡಿಸಿಕೊಂಡು ಅವನ ಜತೀಗೆ ಬದುಕೂದು ಸಾಧ್ಯ ಇಲ್ಲಾಂತ ಗುಟ್ಟಾಗಿ ಹೇಳಿಬಿಟ್ಯಂತ. ಅದಕ್ಕ ನಾ ಯಾರ ಹಂಗಿನ್ಯಾಗೂ ಇಲ್ಲದ ಸ್ವತಂತ್ರ ಆಗಿ ಬದಕ್ತೇನಿ ಅಂದ್ಯಂತ.

ಎರಡು ಚಕಮಕಿ ಕಲ್ಲು ತಿಕ್ಕಿದರ ಹುಟ್ಟೂದು ಬೆಂಕೀನ. ಹಾಂಗ ಹುಟ್ಟಿದ ಬೆಂಕಿಯೊಳಗ ನಮ್ಮ ಸಂಸಾರ ಸುಟ್ಟು ಕರಕ ಆಗಿ ಹೋಯ್ತು.

ಜ್ವರ ಇಳಿದಿದ್ದರೂ ನೆನಪಿನ ಝಳದಲ್ಲಿ ವಿಲಿ ವಿಲಿ ಒದ್ದಾಡುತ್ತಿದ್ದ. ನಿದ್ದೆ ಹಾರಿ ಹೋಗಿತ್ತು.

ಮಾಲಿನಿಯ ಮನೆ ನೋಡಿ ಸಂತೋಷವಾಗಿತ್ತು. ಒಂದೇ ದುಃಖದ ಸಂದತಿ ಎಂದರೆ ಮಗಳ ದೃಷ್ಟಿಯಲ್ಲಿ ತಾನು ದುಷ್ಟ. ಅವ್ವನನ್ನು ಕಾಡಿದ ಗಂಡು ರಾಕ್ಷಸ. ಹೌದಾ ? ಹೌದೋ ಅಲ್ಲವೋ ತಿಳಿಸಲೂ ಕಾಲ ಪ್ರಶಸ್ತವಾಗಿಲ್ಲ. ಇನ್ನೊಮ್ಮೆ ಭೆಟ್ಟಿಯಾದರೆ....ರೆ .... ಆಗದಿದ್ದರೆ ಅವಳಿಗೆ ಅಪ್ಪ ಎಂಥವನು ತಿಳಿಯದೇ ಹೋಗಬಹುದು. ತಿಳಿದರೂ ಸಮಾಜದಲ್ಲಿ ತನ್ನ ಅಪ್ಪ ಕೆಟ್ಟವನು ಎಂದು ಆಡಿಕೊಂಡವರಿಗೆಲ್ಲ ತಿಳಿಸಿ ಹೇಳಲು ಆದೀತೆ ? ಉಹುಂ .... ಸಾಧ್ಯವಿಲ್ಲ. ಹೀಗೆ ವಿಚಾರ ಮಾಡುತ್ತ ಕುಳಿತರೆ ಹೇಗೆ ? ಅವನು ಎದ್ದ.

ಅಳುತ್ತ ಮಲಗಿದ್ದ ಮಾಲಿನಿ ನಿದ್ದೆ ತಿಳಿದೆದ್ದು ಬಂದಳು. ಅಲ್ಲಿ ಹಾಸಿಗೆಯ ಮೇಲೆ ಅಪ್ಪನ ವಿಲ್ ಒಂದು ಪ್ರತಿ, ಪುಟ್ಟ ಕಾಗದ ಅವಳಿಗಾಗಿ ಕಾಯುತ್ತಿದ್ದವು.

***

■■

# ಹಿಂಬಡದ ಗಾಯ

ಹಿಂಬಡಕ್ಕಿಂತ ಮೇಲಿನ ಪಾದದ ಮೆತ್ತಗಿನ ಜಾಗದಲ್ಲಿಯ ಗಾಯದ ಸುತ್ತ ಕಾಲು ನೀಡಿ ಕುಳಿತ ದುಂಡವ್ವ ಮತ್ತೆ ಮತ್ತೆ ತೀಡುತ್ತಿದ್ದಳು. ಕಸರನ್ನು ಹೊರಹಾಕಲು ಸ್ವಲ್ಪ ಜೋರಾಗಿಯೇ ಹೆಬ್ಬೆರಳಿನಿಂದ ಒತ್ತಿ ಮುಖ ಕಿವುಚಿ ನೋವು ನುಂಗುತ್ತಿದ್ದಳು.

ಇಪ್ಪತ್ತೊರಸ ಹೊಲದಾಗ ದುಡದ್ರೂ ಹಿಂಗ ಎಂದೂ ಆಗಿರಾಕಿಲ್ಲ. ಕಣ್ಣ ಇಂಗಿ ಹೋಗ್ಯವೋ ಏನೋ. ಕೋಲಿ ತುಳಿದು ಕಾಲು ನೂವ ಮಾಡಿಕೊಂಡು ಮೂಲಿ ಗುಂಪಾಗಿ ಕುಂತೆ.

ಬೆರಳು ಸುತ್ತುತ್ತಿದ್ದಂತೆ ಅವಳ ಮನಸ್ಸೂ ಗಾಯದ ಸುತ್ತು ತಿರುಗುತ್ತಿತ್ತು. ದಿನಾs ಅರಿಶಿಣ ಎಣ್ಣೀ ಕಲಿಸಿ ತುಂಬಿದೆ. ಮುಟ್ಟಲ ಮುರಕೀ ತಪ್ಪಲ ಹಿಂಡಿದೆ. ದಿನದಿನಕ ನೂವ ಹೆಚ್ಚs ಆತು. ಸಿದ್ಧಣ್ಣನಕಿಂತಾ ಬಸವಗ ಕಳ್ಳ ಜಾಸ್ತಿ. 'ಯವ್ವಾ ರಾಮಣ್ಣನ ಕರಕೊಂಡ ಬರ್ತೇನಿ ಈ ಸುಕ್ರಾರ. ಔಷಧಾ ಕೊಡತಾನ. ಲಗ್ಗನ ಕಮ್ಮ ಆಗತೈತಿ ಏಳ, ಚಿಂತೀ ಮಾಡಿಬ್ಯಾಡಾ' ಅಂದ. ಕಂಪೊಂಡರ ರಾಮಣ್ಣ ಸೈಕೋಲ ಮ್ಯಾಲ ಬಂದಾ. ಅದೇನೋ ಸೆಪ್ಟಿಕ್ ಆಗ್ಯೆತಿ ಅಂತ ಒಂದ ಸೂಜಿ ಚುಚ್ಚಿ, ಮಲಾಮ ಹಚ್ಚಿ ಗುಳಿಗೀ ಕೊಟ್ಟಾ. ಇಪ್ಪತ್ತ ರೂಪಾಯಿ ಕಿಸೇಕ ಹಾಕ್ಕೊಂಡ ಹ್ವಾದಾ. ಮಾರಾಯಾ ಮತ್ತ ಮುಂದಿನ ಸುಕ್ರಾರ ಬರಾತನಂತ. ಈಗ ಬಾವು ಜರಾ ಕಮ್ಮ ಆಗೇತಿ. ಮತ್ತೂ ಕಮ್ಮ ಆಗದಿದ್ದರ ಚಕಡೀ ಕಟಿಗೊಂಡ ಸಿವಿಲ್‌ಕ ಒಯ್ಯಾನಂತ ಬಸಪ್ಪ. ಶಿವನs ಇನ್ನೂ ಏನೇನ ಸೋಸಬೇಕೋ ಈ ಜೀಂವಾ.

ಕೇಳುಗರೇ ಇಲ್ಲದ ದುಂಡವ್ವನ ಮಾತುಗಳು ಮಾಡಹೆಂಚಿನ ಮನೆಯ ಗೋಡೆಗೆ ಅಪ್ಪಳಿಸುತ್ತಿದ್ದವು. ಜೀವನ ಚರಿತ್ರೆ ಬರೆಸಿಕೊಳ್ಳಲು ಆಗದ ಸಾಮಾನ್ಯ ಮನುಷ್ಯಳು ಆಕೆ. ಆದರೂ ಲೋಕ ಬಿಟ್ಟು ಹೋಗುವ ಮೊದಲು ತಮ್ಮ ಬದುಕಿನ ಬಹುಭಾಗವನ್ನು ಬೇರೊಂದು ಜೀವದ ಕಿವಿಗೆ ಬೀಳುವಂತೆ ಮಾಡಿ ಆ ಮೂಲಕ ತಾವು ಇತರರ ಬಾಯಲ್ಲಿ ಬದುಕಬೇಕೆನ್ನುವ ಚಪಲವೇ ಎಲ್ಲರಿಗೂ. ಮೈ ಮುರಿ ದುಡಿತ, ಜವಾಬುದಾರಿ ಬೇರೆಯವರಿಗೆ ಒಪ್ಪಿಸಿ ಮನಸ್ಸಿನ ಮೂಲೆ ಮೂಲೆಗಳನ್ನು ಗುಡಿಸಿ ಖಾಲಿ ಮಾಡುತ್ತ ಇರುವದನ್ನು ಬಿಟ್ಟರೆ ಬೇರೇನು ಕೆಲಸ ಅವರಿಗೆ ?

ಹಾಗೆ ಇನ್ನೂ ಎಷ್ಟೊತ್ತು ಮಾತಾಡುತ್ತಿದ್ದಳೋ ದುಂಡವ್ವ ; ನೀಲವ್ವ ಒಳಗೆ ಬಂದದ್ದು ನೋಡಿ ಮಾತಿನ ಧಾಟಿ ಬದಲಿಸಿದಳು.

"ಯಾಕೋ ತಡಾ ಮಾಡಿದಿ ಅಲ್ಲಬೇ ಹಾಲ ಕೊಟ್ಟ ಬರಾಕ. ಬಸ್ ಸಿಗಲಿಲ್ಲೇನ." ಮಗಳ ಬಾಡಿದ ಮುಖ, ಕೆದರಿದ ತಲೆ ನೋಡಿ ಕಕುಲಾತಿಯಿಂದ ಕೇಳಿದಳು. ಬುಟ್ಟೀ ಇಳಿಸಿ ಉಸ್ಸ್ ಎಂದು ಗೋಡೆಗೆ ಆತು ಕುಳಿತ ನೀಲವ್ವ ಕವಕ್ಕನೇ ಸಿಟ್ಟಿಗೆದ್ದಳು.

'ಏನ ಯವ್ವ, ದಿನಾ ಏನ ಬಸ್ಸೀಗಿ ಹೋಗ್ತೀನ, ಬಸ್ಸಿಗೆ ಎಡ್ಡ ರೂಪಾಯಿ ಖರ್ಚ ಅಕ್ಕಾವ. ಅದರಾಗ ನಿನಗ, ಬಸಣ್ಣಗ ಎಲಡಿಕಿ ಆಗ್ಯೆತಿ ಅಂತ ಅದನೂ ಉಳಿಸಿ ನಡದ ಹೋಗಿ ಬರ್ತೀನಿ. ನಾಕೈದ ಮನೀಗಿ ಹೋಗಿ ಬರೂದ ಅಂದರ ತಡಾ ಆಗೂದ ಮತ್ತ', ಸೆರಗಿನಿಂದ ಬೆವರು ಒರೆಸಿಕೊಂಡು ಗಾಳಿ ಬೀಸಿಕೊಂಡಳು. ದುಂಡವ್ವ ಏಳಲಾರದೆ ಕೂತಲ್ಲಿಂದ ಕೈ ಚಾಚಿ ಹರಿವೆಯ ನೀರು ತುಂಬಿಕೊಟ್ಟಳು.

ಗಂಟಲಿಗೆ ಇಳಿದ ತಂಪು ನೀರೂ ನೀಲವ್ವನ ತಳಮಳ ಕಡಿಮೆ ಮಾಡಲಿಲ್ಲ. ಈ ದಿನ ಇವಳಿಗೆ ಸಾಗಪ್ಪನ ಭೆಟ್ಟಿ ಆಗಿರಲಿಲ್ಲ. ಮನಸ್ಸಿಗೆ ಉತ್ಸಾಹವಿಲ್ಲದೆ ಮೈಯ ಆಯಾಸ ಹೆಚ್ಚಾಗಿತ್ತು. ಸ್ವಲ್ಪ ಸುತ್ತು ಆದರೂ ದಿನಾಲೂ ಸಾಗಪ್ಪ ಕೆಲಸ ಮಾಡುವ ಆಫೀಸಿನ ಮುಂದೆ ಹಾಯ್ದು ದೇಸಾಯರ ಮನೆಗೆ ಹೋಗುತ್ತಿದ್ದಳು. ಅಲ್ಲಿ ವಾಚಮನ್

ನಾಗಪ್ಪ ಸ್ಟೂಲ್ ಮೇಲೆ ಕುಳಿತಿರುತ್ತಿದ್ದ. ಒಂದೊಂದು ಸಲ ಎದ್ದು ಹತ್ತಿರ ಬಂದು ಮಾತಾಡಿಸುತ್ತಿದ್ದ. ಅಲ್ಲಿ ಅವನು ಕಾಣದಿದ್ದರೆ ಅತ್ತಿತ್ತ ಏನೇನೋ ನೋಡಿದಂತೆ ನಟಿಸುತ್ತ ಬುಟ್ಟಿ ಹೊತ್ತುಕೊಂಡು ನಿಂತೇ ಬಿಡುತ್ತಿದ್ದಳು. ಸಾಹೇಬರ ಕೋಣೆಯಿಂದ ಅವನು ಹೊರಗೆ ಬಂದ ಮೇಲೆ ಮುಖ ನೋಡಿ ನಕ್ಕು ಅಲ್ಲಿಂದ ಮುಂದೆ ಸಾಗುತ್ತಿದ್ದಳು. ಇಂದು ನಿಂತು ನಿಂತು ಕಾಲು ಸೋತರೂ ಅವನು ಬಂದಿರಲಿಲ್ಲ.

ಕಟ್ಟಿ ಹತ್ತಿ ಹೋಗಿ ಯಾರ್ನಾದರೂ ಕೇಳಲ್ಯಾ. ಅವರು ಏನ ತಿಳಕೊಂಡಾರು. ನೀ ಯಾರು ? ಇಲ್ಲ್ಯಾಕ ಬಂದಿ ಅಂತ ಕೇಳಿದರ ಏನ ಹೇಬೇಕ. ಏನಾಗಿದ್ದೀತು ಇವಗ ಜರಾ ಬಂದೈತೋ, ಊರಿಗೆ ಹೋಗ್ಯಾನೊ ಕೆಲಸಾನ ಬಿಟ್ಟ ಹೋಗ್ಯಾನೋ, ಅವರಪ್ಪ ಬಂದ ಕರಕೊಂಡ ಹೋಗಿ ಮದವಿ ಮಾಡಿದ್ನೋ....

ನಾಗಪ್ಪನ ಮದುವೆಯ ವಿಚಾರ ಬಂದಾಗಂತೂ ಅವಳ ತಲೆ ಸಿಡಿಯ ಹತ್ತಿತ್ತು. ಕಣ್ಣಿಗೆ ಬವಳಿ ಬಂದ ಹಾಗೆ ಆಯಿತು. ಕಾಲು ಎಳೆದು ಹಾಕುತ್ತ ಕೆಲಸ ಮುಗಿಸಿ ಮನೆಗೆ ಬಂದಿದ್ದಳು. ಹಾಸಿ ಹೊತ್ತುಕೊಂಡು ಮಲಗಿಬಿಡುವಷ್ಟು ದಣಿವಾಗಿತ್ತು ಮೈಗೆ ಮನಸ್ಸಿಗೆ.

ಹಸಿದು ಬರುವ ತಮ್ಮ ತಂಗಿಯರ ಹಾಗೂ ಕಾಲು ನೋವಾಗಿ ಕೈಯಿಂದ ಕೆಲಸವೂ ಸಾಗದೆ ಅಳುವ ಅವ್ವನ ನೆನಪಾಗಿ ರೊಟ್ಟೀ ಬಡಿಯಲು ಎದ್ದಳು. ನಾಕಾರು ರೊಟ್ಟಿ ಬೀಳುವಷ್ಟರಲ್ಲಿ ಎಮ್ಮೆ ಹೊಡಕೊಂಡು ಆರತಿ ಉಡಿತುಂಬ ಕಾರೀಹಣ್ಣು ತುಂಬಿಕೊಂಡು ಬಂದಿದ್ದಳು. ಅಕ್ಕನಿಗಾಗಿ ಚಿಕ್ಕ ತಂಗಿಗೆ ಆರತಿ ಎಂದು ಹೆಸರಿಟ್ಟವಳೇ ತಾನು. ಗೋಡೆಯ ಮೇಲಿನ ಬರಹ ಓದಿ ಹೇಳುತ್ತಿದ್ದನಲ್ಲ ನಾಗಪ್ಪ ಕೀರತಿಗೆ ಒಬ್ಬ ಮಗ ಆರತಿಗೆ ಒಬ್ಬ ಮಗಳು ಎಂದು ಮತ್ತೆ ಅವನದೇ ನೆನಪು.

"ಯವ್ವಾ ಅಪ್ಪ ಪ್ಯಾಟ್ಯಾಗ ಭೆಟ್ಟಿ ಆಗಿದ್ದ. ನಾಗಣ್ಣ ಅಪ್ಪನ ಕೂಟ ಜಗಳಾ ಮಾಡಿ ಮನೀನ ಬಿಟ್ಟ ಹೋಗಿಬಿಟ್ಟಾನಂತ ಶನಿವಾರನ" ರೊಟ್ಟಿ ಮುರಿಯುತ್ತ ಹೇಳಿದ ಸಿದ್ದಣ್ಣ.

ರೊಟ್ಟಿ ಬಡಿಯುತ್ತಿದ್ದ ನೀಲವ್ವನ ಕೈ ನಿಧಾನವಾಯಿತು. ಹಂಚಿನಲ್ಲಿಯ ರೊಟ್ಟಿಗೆ ನೀರು ಹಚ್ಚುವದೂ ಮರೆತಳು. ನೀಳ ಮೂಗಿಗೆ ಇಳಿಯುತ್ತಿದ್ದ ಬೆವರನ್ನು ಎಡಗೈಯಿಂದ ಒರೆಸಿಕೊಳ್ಳುತ್ತ ಮೆಲ್ಲಗೆ ಕೇಳಿದಳು. 'ಎಲ್ಲಿ ಹೋಗ್ಯಾನಂತ?"

'ಏs ತಂಗಿ ಒಲಿಮ್ಯಾಲಿನ ರೊಟ್ಟಿ ಹೊತ್ತಾಕತ್ತೇತಿ ತಗೀ' ಮಗಳ ಮನದ ಮೂಕ ಸಂಕಟ ತಿಳಿದ ದುಂಡವ್ವ ಕೂತಲ್ಲೆ ಮಿಸುಕಾಡಿದಳು.

'ಎಲ್ಲಿ ಹೋಗ್ಯಾನೋ ಅಂವಗೂ ಗೊತ್ತಿಲ್ಲಂತ. ಮನ್ಯಾಗ ಮುಕ್ಕಜ್ವಾಳ ಇಲ್ಲಾ. ಕರ್ಚಿಗೆ ರೊಕ್ಕಾ ಕೊಡೂ ಅಂದರ ಅಪ್ಪ. ಯವ್ವಾs ನಿನ್ನ ಕೇಳದs ಶಾಮಣ್ಣೋರ ಅಂಗಡೀಗೆ ಶೇಂಗಾ ಹಾಕ್ಕೇನಿ ಅಂತೇಳಿ ಎಡ್ಡನೂರು ರೂಪಾಯಿ ಇಸಗೊಟ್ಟೇನಿ. ಯಕ್ಕಾs ಶೇಂಗಾ ಹಿಂಡ್ಯಾಗ ಒಂದೀಟ ಮಸರ ನೀಡಬೇ. ಏs ಆರತೀ ಆ ಪುಸ್ತಕಾ ತಗದಿಟ್ಟ ಬಾ ನೀನೂ ಉಣ್ಣಾಕ.'

"ಆತ ಬಿಡಪಾ, ಹಗಲೂ ಹನ್ನೆರಡು ತಾಸ ರಗತಾ ಸುಟಗೊಡ ಹೊಲದಾಗ ದುಡ್ಯಾವರ ನೀನು, ಬಸವಣ್ಣಾ ಆರಾಮಾಗಿ ಕರ್ಚಿಗೆ ಇಸಗೊಂಡ ಹೋಗಾಂವ ನಿಮ್ಮಪ್ಪ."

ಅವ್ವನ ಚುಚ್ಚುಮಾತಿನಿಂದ ಸಿಟ್ಟಾದ ಬಸಣ್ಣ ಹೇಳಿದ. 'ಏನ ಮಾತಾಡ್ತೀಯಬೇ, ಅಣ್ಣಾ ಕೊಟ್ಟಿದ್ದ ಯಾರಿಗೆ? ಅಪ್ಪಗ ಅಲ್ಲೇನು? ಈಟ ದಿನಾ ನಾಗಣ್ಣನ ಪಗಾರದಾಗ ಇದ್ದರಲ್ಲಾ ಅಪ್ಪ ಅಣ್ಣಾ. ಈ ಹೊಲದಾಗ ಅವರಿಗೂ ಪಾಲ ಇಲ್ಲೇನ?'

'ಹೌದೊ ಯಪ್ಪಾ, ಪಾಲ ಯಾಕ ಮಾಲ್ಕೀನ ಅವಂದ್ಯೆತಿ, ಅಂವಾ ಉಪಾಸ ಸಾಯಲಿ ಅಂತೀನೇನ ನಾನು? ನಾ ಏನ ತುಸಾ ಸಣ್ಣ ಆಗಿಲ್ಲ. ನಾಗಣ್ಣ-ಪುತಳೆವ್ವನ ಕಾಲಾಗ ಮಾಡಿ ಮಾಡಿ ಕೈಯಾಗಿನ ಗೆರಿ ಸಂವದಾವ, ನೀವು ಹುಟ್ಟೊಕಿಂತ ಮುಂಚೇ ಹಿರ್ಯಾನ ಕೂಡ ಹೊಲದಾಗ, ಮನ್ಯಾಗ ದುಡದು ದುಡದು ಮೈಯಾಗಿನ ಎಲಬು ಸವದು ಸಿಂಪಿ ಆಗ್ಯಾವೋ. ನನ್ನ ಜೀವದ ಖಬರ ಇಲ್ಲದ ಕೆಲಸಾ ಮಾಡೀನಿ. ಮಲಮಕ್ಕಳಿಗೆ ಬಾಯಾಗಿನ ತುತ್ತ ತಗದ ತಿನಸೇನಿ. ಇದ ಯಾವದೂ ದರಕಾರ ಇಲ್ದಾಂಗ ಪುತಳೀಗೆ ಮದುವೀ ಮಾಡಿದಾ ನಿಮ್ಮಪ್ಪ. ನೀಲವ್ವಗ ಏನ ಮಾಡಿದಾ ? ಮಗನ್ನ ಕಟಿಗಂಡು ಹೊರಗ ಹೋಗಿಬಿಟ್ಟಾ. ನನ್ನ ನಡುನೀರಾಗ ಕೈ ಬಿಟ್ಟ್ ಹ್ವಾದಾ' ಕೈಯಲ್ಲಿಯ ರೊಟ್ಟಿ ನೆಲಕ್ಕಿಟ್ಟವಳೇ ದುಂಡವ್ವ ಜೋರಾಗಿ ಅಳಹತ್ತಿದಳು.

'ಯವ್ವಾs ಇಕಾ ಬಿಸಿ ಬಿಸಿ ಚಾ ಇಟ್ಟೇನಿ ಕುಡಿ. ಗುಳಿಗೀ ನುಂಗಿ ನೀರ ಕುಡಿ. ಅಳಬ್ಯಾಡ. ಸುಮ್ಮನ ಚಿಂತೀ ಮಾಡಿ ತರಾಸ ಮಾಡಕೋ ಬ್ಯಾಡಾ. ಹೊರಗ ಹೋಗಿ ಬರೂವಂತಿ ಏಳ' ಎಲ್ಲ ಮರೆತಂತೆ ನೀಲವ್ವ ಉಪಚರಿಸಿದಳು ಅವ್ವನನ್ನು. ಅವ್ವ ಬಹಳ ಘಾಸಿಗೊಂಡಿದ್ದಾಳೆಂದು ಅವಳಿಗೆ ಗೊತ್ತು. ಅದರಲ್ಲೂ ಅಪ್ಪ ನಾಗಪ್ಪ ಮನೆಬಿಟ್ಟು ಹೋದಾಗಿನಿಂದ ಅದೇ ಚಿಂತೆ ಅವಳಿಗೆ.

ಕಾಲು ಚಾಚಿ ಮಲಗಿ ಕೌದಿ ಮುಸುಕು ಎಳೆದರೂ ನೀಲವ್ವನ ಮುಚ್ಚಿದ ಕಂಗಳ ಹಿಂದೆ ಸಂತೆ ನೆರೆದಿತ್ತು....

ದೊಪ್ಪ.... ದೊಪ್ ತತ್ತರಿಸುತ್ತ ಒಂದೊಂದೇ ಹೆಜ್ಜೆ ಇಡಲು ಕಲಿಯುತ್ತಿದ್ದ ತನ್ನನ್ನು ಹಿಂದಿನಿಂದ ನುಗಿಸಿದ್ದಳು ಪುತಳಿ. ಚಿವುಟುವುದು, ನುಗಿಸುವುದು, ಅಳಿಸುವುದು ಅವಳಿಗೆ ದಿನನಿತ್ಯದ ಆಟ. ತಾನು ಅಳುತ್ತ ನಿಂತಾಗ ರಮಿಸಿ, ಕಣ್ಣೀರು ಒರೆಸಿ, ನೀರು ಕುಡಿಸಿ ಎತ್ತಿಕೊಳ್ಳುವವ ಎಲ್ಲ ಅವನೇ. ಅವನ ಜೊತೆಗೇ ಬೆಳೆದರೂ ಅವನು ಮನೆ ಬಿಟ್ಟು ಹೋಗಲು ಕಾರಣಳಾದಳು ತಾನೇ. ಆಗ ಅಪ್ಪನನ್ನೂ ಬಿಟ್ಟು ಒಂಟಿಯಾಗಿ ಎಲ್ಲಿದ್ದಾನೋ, ಹೇಗಿದ್ದಾನೋ ಗಂಟಲು ಕಟ್ಟಿ ಎಷ್ಟು ಒತ್ತಿಕೊಂಡರೂ ಅಳು ಉಕ್ಕಿ ಬಂದಿತು.

ಮಗಳ ಬಿಕ್ಕಳಿಕೆ ಕೇಳಿದ ದುಂಡವ್ವಗ ಮಂಪರು ಹಾರಿಹೋಯಿತು. ಕಣ್ಣಿನ ಕತ್ತಲೆಯ ಮುಂದೆ ಕೆಂಪು ಗೋಲ ಗಿರಿಗಿರಿ ತಿರುಗುತ್ತಿತ್ತು....

ಅದೇ ಸೂರ್ಯ ಮುಳುಗುತ್ತಿದ್ದ. ಆಕಾಶವೆಲ್ಲ ಕೆಂಪಗೆ ಉರಿಯುತ್ತಿತ್ತು. ಎಲ್ಲೆಲ್ಲೂ ಬೆಳಕು. ಚಿಕ್ಕ ಚಿಕ್ಕ ಕರಿಚುಕ್ಕಿಯ ಸಾಲು ಗಾಳಿಯಲ್ಲಿ ತೇಲುತ್ತಿತ್ತು. ಹಕ್ಕಿಗಳೆಲ್ಲ ಗೂಡಿಗೆ ಮರಳುತ್ತಿದ್ದವು. ದುಂಡವ್ವನೂ ಹೊಸ ಗೂಡನ್ನು ಹುಡುಕಿ ಹೊರಟಿದ್ದಳು. ಮನಸಿನ ತುಂಬ ಬೆಳಕು ತುಂಬಿಕೊಂಡು ಆಸೆಗಳ ಉಯ್ಯಾಲೆಯ ಮೇಲೆ ಹಾರುತ್ತ ಹೊಸ ಊರಿನ, ಹೊಸ ಗಂಡನ ಮನೆಗೆ ಬಂದಿದ್ದಳು. ಪುಟ್ಟ ಮಗಳು ನೀಲೂನನ್ನು ಬಗಲಲ್ಲಿ ಇಟ್ಟುಕೊಂಡು ತಲೆ ಮೇಲೊಂದು ಗಂಟು ಹೊತ್ತು ಹರದಾರಿ ದೂರ ನಡೆದು ಹೊಲದಲ್ಲಿಯ ಮನೆಗೆ ಕಾಲಿಟ್ಟಳು. ಒಳಗೆ ಹರುಷ ಉಕ್ಕುತ್ತಿದ್ದರೂ ನಗುತ್ತಿರಲಿಲ್ಲ. ಸುತ್ತ ಪ್ರಕೃತಿಯ ಚೆಲುವು ಸೂರೆಗೊಂಡಿತ್ತು. ಮನೆ ಹತ್ತಿರದ ಮಾವಿನ ಗಿಡದಲ್ಲಿ ಹೂವು ಸುರಿದಿತ್ತು. ಬೇಲಿಯ ಮೇಲಿನ ಹೂಗಳು ಬಣ್ಣ ಬಣ್ಣವಾಗಿದ್ದವು. ಹಿತ್ತಲಲ್ಲಿಯ ದುಂಡವ್ವನ ಅರಳಿದ ಕಣ್ಣುಗಳು ಮೂಕವಾಗಿ ಸುತ್ತ ದಿಟ್ಟಿಸುತ್ತಿದ್ದವು. ಮಗಳಿಗೆ ಹಸಿವಾಗಿ ಅಳುತ್ತಿರುವ ಎಚ್ಚರವೂ ಅವಳಿಗಿರಲಿಲ್ಲ.

ತಲೆ ತುಂಬ ಮುಸುಕು ಹಾಕಿ ಹೊರಗೆ ಹೊರಸಿನ ಮೇಲೆ ಕುಳಿತ ಗಂಡಸರನ್ನು ದಾಟಿ ಮನೆ ಬಾಗಿಲಿಗೆ ಬಂದಳು. ಆರತಿ ಮಾಡಿಸಿಕೊಂಡು ಹೊಸಿಲ ಮೇಲಿಟ್ಟ ಸೇರು ಒದ್ದು ಸೂರೆ ಮಾಡಿ ಒಳಗ ಹೋಗುವ ಸಂಭ್ರಮವೆಲ್ಲ ಅವಳ ಮೊದಲ ಮದುವೆಯಲ್ಲೇ ಮುಗಿದು ಹೋಗಿತ್ತು. 'ಒಳ್ಯಾಕ ಬಾರಬೇ ದುಂಡವ್ವಾ ಇಕಾ ಇನಮ್ಯಾಲೆ ಇದs ಏನ ಮನೀ. ಗುರುಲಿಂಗಪ್ಪ ಗರೀಬ ಮನಿಶ್ಯಾ. ಹೇಣ್ತಿ ಸತ್ತಾಗಿಂದ ಕೈ ಬಾಯಿ ಸುಟಗೊಂಡ ಈ ಎಡ್ಡ ಮಕ್ಕಳ

ಜ್ಞಾಪಾನಾ ಮಾಡ್ಯಾನ. ಇನ ಮ್ಯಾಲೆ ನೀನಃ ಇವರ ತಾಯಿ. ಏ ಬರ್ರೆ ಇಲ್ಲೆ. ಪುತಳವ್ವ ನಾಗಪ್ಪ ಬರ್ರಿಲ್ಲೆ ಇಕೀ ನಿಮ್ಮವ್ವ. ನಿಮ್ಮಪ್ಪ ಕರಕೊಂಡ ಬಂದಾನ ಬರ್ರಿಲ್ಲೆ ಹತ್ತರ. ಹತ್ತಿರದ ಮನೆ ಹಿರಿಯಳು ನಿಂಗಮ್ಮ ಸ್ವಾಗತಿಸಿದ್ದಳು.

ಬಗಲಲ್ಲಿದ್ದ ಮಗಳನ್ನು ಕೆಳಗೆ ಇಳಿಸಿ ಕೈ ಚಾಚಿದಳು ದುಂಡವ್ವ ನೋಡಲು ಕೂಡಿದ ಹೆಂಗಸರ ಮಧ್ಯೆ ನಿಂತಿದ್ದ ಎಂಟು ವರ್ಷದ ಪುತಳಿ ಹೊಸಬಳನ್ನು ದುರುದುರು ನೋಡುತ್ತ ಅಲ್ಲಿಯೇ ನಿಂತಳು. ನಿಂಗಮ್ಮ ನುಗಿಸಿದರೂ ಹೆಜ್ಜೆ ಮುಂದಿಡಲಿಲ್ಲ. ಆರು ವರ್ಷದ ನಾಗೂ ಹಿಂಜರಿಯುತ್ತ ಮುಂದೆ ಮುಂದೆ ಬಂದ ಹೊಸ ಅವ್ವನ ಚಾಚಿದ ಕೈ ಹಿಡಕೊಂಡು ಅವ್ವಾಃ ಅಂದ. ಅದೇನು ಮಾಯೆ ಮುಸುಕಿತೋ ದುಂಡವ್ವನಿಗೆ ನಾಗಪ್ಪನನ್ನು ಅಪ್ಪಿಕೊಂಡಳು. ಪಾಪ ತಾಯಿ ಇಲ್ಲದ ತಬ್ಬಲಿ. ಅವಳ ಕಣ್ಣೀರು ಅವನ ಕೂದಲು ಹಸಿಮಾಡಿತು. ಅವ್ವನ ಅಪ್ಪುಗೆಯಲ್ಲಿ ಮಿಸುಕಾಡಿದ. ಪುಟ್ಟ ಪುಟ್ಟ ಕೈಗಳು ಅವನ ಬೆನ್ನು ತಟ್ಟುತ್ತಿದ್ದವು. ಅವ್ವನನ್ನು ಬಿಟ್ಟು ನೀಲೂನನ್ನು ಅವುಚಿಕೊಂಡ ನಾಗಪ್ಪ.

ಪುತಳಿಗೆ ಸಿಟ್ಟು ಬಂತು. ಮೂಗು ಹಿಗ್ಗಿಸಿಅರಚಿದಳು. 'ಇಕೀ ಯಾರು ? ಇಲ್ಯಾಕ ಬಂದಾಳ ?

'ಆಕೀನೂ ನಿಮ್ಮಾಕೀನಃ. ನೀಲೂ ನಿನ ಹೊಸಾ ಅವ್ವನ ಮಗಳು. ಅವರಪ್ಪ ಸತ್ತಾನ. ಇನ್ನ ಮ್ಯಾಲೆ ನಿಮ್ಮಪ್ಪನಃ ಆಕೀಗೂ ಅಪ್ಪ. ಆಕಿನೂ ಇಲ್ಲೇ ಇರತಾಳ.' ನಿಂಗಮ್ಮ ರಮಿಸಿ ಹೇಳಿದಳು ದುಂಡವ್ವನ ಇಳಿದ ಮೋರೆ ನೋಡುತ್ತ.

'ಥೂ ಥೂಃ ಏ ನಾಗ್ಯಾ ಆ ಕೊಳಕೀನ ಯಾಕ ಮುಟ್ಟಿದ್ಯೋ, ಇಳಿಸ ಆಕೀನ್ನ. ನಾ ಆಕೀ ಕೂಡ ಇರಾಕ ಒಲ್ಲೆ. ಆಕೀನ್ನ ಹೊರಗ ಹಾಕ್ರಿ ನಾ ಒಲ್ಲೆ' ಚೀರುತ್ತ ಪುತಳಿ ಹೊರಗೆ ಓಡಿ ಹೋಗಿ ಅಪ್ಪನ ತೊಡೆಯ ಮೇಲೆ ಬಿದ್ದಳು.

'ಹಾಂಗೆಲ್ಲಾ ಅನಬಾರದವ್ವ. ಅಳಬ್ಯಾಡಾ ಸುಮ್ಮಿರು. ಇಕಾ ಅವಲಕ್ಕಿ ತಿನ್ನು ಚಾ, ಕುಡಿ. ಸುಮ್ಮಿರು ಅಳಬಾರದು' ಅಪ್ಪ ಕೊಟ್ಟ ಅವಲಕ್ಕಿ ನೆಲಕ್ಕೆ ಚೆಲ್ಲಿ ಕಾಲು ದಪ ದಪ ಬಡಿದು ನೆಲಕ್ಕೆ ಬಿದ್ದು ಉರುಳಾಡಿ ಅತ್ತಳು ಪುತಳಿ.

'ತಾಯಿ ಸತ್ತ ಮಗಳು ಅಂತ ಭಾಳ ಸಲಿಗೀ ಕೊಟ್ಟೀಯೇನೋ ಗುರಪ್ಪಾ' ಬಾಯಿ ಮುಕ್ಕಳಿಸಿ ಮೀಸೆ ಒರೆಸುತ್ತ ಕೇಳಿದ ಊರ ಹಿರಿಯನೊಬ್ಬ. ಹೊಸ ಹೆಂಡತಿ ಮನೆಗೆ ಬಂದ ದಿನವೇ ನಡೆಯುತ್ತಿದ್ದ ರಗಳೆ ನೋಡಿ ಗುರಪ್ಪ ಸಿಟ್ಟಿಗೆದ್ದು ಪುತಳಿಗೆ ಒಂದೇಟು ಕೊಟ್ಟ. ಆಮೇಲೆ ಮನಸ್ಸು ಸಣ್ಣದು ಮಾಡಿಕೊಂಡು ತನ್ನ ಬಗೆಗೇ ಅಸಮಾಧಾನಪಟ್ಟುಕೊಂಡ.

ಬಂದ ಜನವೆಲ್ಲ ಚದುರಿದ ಮೇಲೆ ಪುತಳಿಯ ಸೋದರಮಾವ ಮಲ್ಲಣ್ಣ ಹಿಂದೆ ಉಳಿದಿದ್ದ. ಅತ್ತು ಅತ್ತು ಸೋತು ಉಣ್ಣದೆ ಮಲಗಿದ್ದ ಪುತಳಿಯ ತಲೆ ತಟ್ಟುತ್ತ ಮಲ್ಲಣ್ಣ ಹೇಳಿದ್ದ.

"ನೀ ಏನ ಚಿಂತಿ ಮಾಡಬ್ಯಾಡಾ ಗುರಣ್ಣಾ. ದುಂಡವ್ವನ್ನ ನಾ ಸಣ್ಣಾಕಿದ್ದಾಗಿಂದ ನೋಡೀನಿ. ಛೊಲೊ ಹೆಣಮಗಳು. ದುಡಿಮಿಗಾರ್ತಿ. ಬಾಳೇವಂತಿ. ಪಾಪ ಮದುವಿ ಆಗಿ ಮೂರ ವರಸಕ್ಕ ಗಂಡ ಸತ್ತ. ಅತ್ತೀ ಮನಿಯವರು ಕೂಳಿಗಿ ದಂಡ ಅಂತ ಹೊರಗ ಹಾಕಿದ್ರು. ತುಂಬಿದ ಬಸಿರಿ. ಅಣ್ಣಾ ಅತ್ತಿಗಿ ಕತ್ತೀ ಹಾಂಗ ದುಡಿಸಿಕೊಂಡರು. ಅನೋಲಿ ಸೋಸಿಗೋತ ಬಸರು ಬಾಣಂತನಾ ಮಾಡಿಕೊಂಡ್ಳು. ಕೂಸಿನ್ನ ಕಟಿಕೊಂಡು ಮಂದೀ ಹೊಲಕ್ಕ ದುಡಿಯಾಕ ಹೋಗತಿದ್ಳು. ಆಕೀನೂ ತಬ್ಬಲೀನ. ನೆಳ್ಳಂತ ಅಣ್ಣಾನ ಮನ್ಯಾಗ ಇರತಿದ್ಳು. ನಿನಗೂ ಒಂದು ಜೋಡ ಆತಲ್ಲ. ನನ ತಂಗೀ ಕೂಡ ಇದ್ದಾಂಗ ಆಕೀನೂ ಚಂದಾಗಿ ಬಾಳಸು. ಹಾಂ. ನಾಕ ದಿನಾ ನಾ ಹುಡುಗೂರ್ನ ಊರಿಗೆ ಕರಕೊಂಡ ಹೊಕ್ಕೇನಿ. ಮಕ್ಕೋಳಾಕ ಹೋಗಿನ್ನ' ಎಂದ ಮಲ್ಲಣ್ಣ ಮಿಸೆಯಲ್ಲಿಯೆ ಮುಗುಳು ನಕ್ಕು. ನಾಗಪ್ಪ ಅವ್ವನ ಸೆರಗು-

ಬಿಟ್ಟು ಸರಿದಿರಲಿಲ್ಲ. ರಾತ್ರಿ ಗುರಪ್ಪ ಒಳಗೆ ಬಂದು ನಾಗೂ, ನೀಲೂರ ನಡುವೆ ಮಲಗಿದ್ದ ಹೆಂಡತಿಯನ್ನು ತಲೆ ನೇವರಿಸಿ ದುಂಡೀ ಎಂದು ಮೆತ್ತಗೆ ಕರೆದು ಎಚ್ಚರಿಸಿದ್ದ....

ಕಾಲು ಸರಿಸಿ ಮಲಗಲು ಹೊರಳಿದ ದುಂಡವ್ವ ಸಣ್ಣಗೆ ನರಳಿದಳು. ಎರಡನೆಯ ಗಂಡನಿಗೂ ಎರಡು ಮಕ್ಕಳನ್ನು ಹೆತ್ತುಕೊಟ್ಟ ದುಂಡವ್ವ ಮತ್ತೆ ರಾಗ ತೆಗೆದಳು. 'ನನ್ನ ಬಿಟ್ಟ ಹ್ಯಾದಲ್ಲೋ ನಾ ಏನ ತೆಪ್ಪ ಮಾಡಿದ್ನಿ. ಐದ ಮಕ್ಕಳ್ನ ಜ್ವಾಪಾನಾ ಮಾಡಿ ದೊಡ್ಡಾವರನ್ನ ಮಾಡಿದ್ನಿ. ಇನ ಮಕ್ಕಳ ಸುಕಾ ಉಣಬೇಕಂದರ ಮಗನ ಕರಕೊಂಡ ಎದ್ದಽ ಬಿಟ್ಟೆಲ್ಲೋ.'

'ಇದಕೆಲ್ಲಾ ನಾನಽ ಕಾರಣ ಯವ್ವಾ. ನಾನಽ ಹುಟ್ಟಬಾರದಿತ್ತು. ಅಂದರ ಈ ಸಂಕಟ ನಿನಗ ಬರತಿದ್ದಿಲ್ಲ.'

'ಅಳಬ್ಯಾಡ ನನಗ ಮಗಳ. ನೀ ಸುಕದಿಂದ ಇರಬೇಕ. ಚೆಂದಾಗಿ ಜ್ವಾಪಾನಾ ಮಾಡಬೇಕಂತ ನಾ ಈ ಮದಿವಿ ಮಾಡಿಕೊಂಡ್ನಿ. ಇಲ್ಲಿಗ ಬಂದ ನೀ ಏನ ಸುಕಾ ಕಾಣಲಿಲ್ಲ. ಯವ್ವಾ ನಿನ್ನ ನಸೀಬ ಖೊಟ್ಟಿ ಐತಿ. ನಾ ಅವನ ಮಕ್ಕಳ್ನ ಪಕ್ಕದಾಗ ಇಟಕೊಂಡ ಪಿರುತಿಯಿಂದ ನೋಡಿಕೊಂಡೆ. ನಿನ ತಲಿಮ್ಯಾಲೆ ಎರಡ ಅಕ್ಕೀಕಾಳ ಹಾಗೂ ಮನಸ ಮಾಡಲಿಲ್ಲ ಅಂವಾ. ಆ ನಾಗ್ಯಾನೂ ಹಂತಾವನ. ಅಪ್ಪನ ಮನಸಿನ ವಿರುದ್ಧ ನಿನ್ನ ಮಾಡಿಕೊಂತೀನಿ ಅಂತಾನ. ಪಿರುತಿ ಪಿರುತಿ ಅಂತ ತಾನೂ ಹಾಳಾದಾ. ನಿನ್ನೂ ಹಾಳಗೆಡಿಸಿದಾ. ಹಿರ್ಯಾ ನೋಡಿದರ ಮಗನ ಕಟಿಗಂಡು ಹೋಗಿಬಿಟ್ಟಾ. ಯಾಕ ಸಿದ್ದಣ್ಣ, ಬಸಣ್ಣ ಅವನ ಮಕ್ಕಳಽ ಅಲ್ಲೇನು. ಅವರದೇನ ಕಾಳಜೀ ಐತೇನ ಅಂವಗ.'

'ದಿನಾಽ ಇದಽ ಹಾಡಾತ ಇಕೀದು' ಗೊಣಗುತ್ತ ಸಿದ್ದಣ್ಣ ಬಸಣ್ಣ ಎದ್ದು ಬಂದರು. 'ತಲೀ ಗಿಲೀ ಕೆಟ್ಟತೇನ ಯವ್ವಾಽ? ಯಾಕ ಹಾಂಗ ಒದರತೀ ಆಗಲಿಲ್ಲ ಹೋಗಲಿಲ್ಲ. ನೀಲಕ್ಕಗ ಮದುವಿ ಆಗಲಿಲ್ಲಂತ ಅಳತಿಯಲ್ಲ. ಆಕಿ ನೋಡಿದರ ಆದರ ನಾಗಪ್ಪನ್ನ ಆಗ್ತೀನಿ ಇಲ್ಲಾಂದರ ಹಾಂಗಽ ಇರತೀನಿ ಅಂತಾಳ. ನಾಗಣ್ಣನೂ ಅದಽ ಹಟಾ ಹಿಡದಾನ. ನಿನಗ ಅಪ್ಪಗ ಈ ಮದುವೀಗಿ ಮನಸ್ಸಿಲ್ಲ ತಾವಽ ಮಾಡಿಕೊಂತೀವಿ ಅಂತ ನಾಗಣ್ಣ ಅಂದರ ಅದಕೂ ಹೂಂ ಅನ್ನಾಂಗಿಲ್ಲ. ಅದಕಽ ದಿನಾ ಒಂದಕೂ ಜಗಳ ಆಡಿ, ಹೊಡಿ ಬಡಿ ಮಾಡಿ ರಂಬಾಟಾ ಆಗಿ ಅಪ್ಪ ಅಣ್ಣನ ಕರಕೊಂಡ ಮನೀ ಬಿಟ್ಟು ಹೋಗಿಲ್ಲೇನ ?'

ಸಿದ್ದಣ್ಣನ ಮಾತು ಮುಗಿಯುವುದೇ ತಡ ಬಸಪ್ಪನೂ ಕೂಗಿದ. 'ಹಾಡಿದ್ದ ಹಾಡೋ ಕಿಸಬಾಯಿ ದಾಸನಂಗ ದಿನಾ ಅತಗೋತ ಕೂತರ ಏನಾಗತೈತಿ. ಹೊಲದಾಗ ದುಡದು ದಣದ ಬಂದರ ತಲೀ ಚಿಟ್ಟ ಅಂತೈತಿ. ಒಂದೀಟರೆ ಮನ್ಯಾಗ ಸಾಂತೀ ಐತ್ಯಾ' ಹೆಂಗಸರಿಬ್ಬರೂ ಹಲ್ಲು ಕಚ್ಚಿಕೊಂಡರು.

'ಯವ್ವಾ ನೀವೇಟ ಹಟಮಾರಿ ಅದೀರೋ ಅದಕ್ಕಿಂತ ಹೆಚ್ಚ ಹಟಮಾರಿ ಅದಾನ ನಾಗಣ್ಣಾ. ಏಟ ಸಂಬಾವಿತ ಒಳ್ಳೇವ ಅದಾನ ಆಟಽ ಜಿದ್ದಿನವನೂ ಅದಾನ. ಅಪ್ಪ ಭೆಟ್ಟಿ ಆಗಿದ್ನಂತ ಹೇಳಿದ್ನೆಲ್ಲ. ಎಲ್ಲಾ ಹಕೀಕತ್ ಇನ್ನೂ ಹೇಳಿಲ್ಲ ನಿನ ಮುಂದ.'

'ಏನೋ ಸಿದ್ದಣ್ಣಾ, ಮತ್ತೇನೈತಿ ಸುದ್ದಿ ?'

'ಅಪ್ಪ ಹೇಳತಿದ್ದಾ, ನೌಕರಿ ಸಿಕ್ಕಾಗಿಂದ ಹೆಂತೆಂತಾ ಮನಿತನದ ಹೆಣ್ಣ ಬರಾಕಹತ್ಯಾವ. ಎಲ್ಲಾನೂ ಒಲ್ಲೇನ ಅನಕೊಂಡ ಕುಂತಾನು. ಹಿರೇರು ನನ್ನ ಬೈತಾರು; ಮೂವತ್ತ ವರ್ಸ ಆಗಾಕ ಬಂದರೂ ಮಗ್ಗ ಮದುವೀ ಮಾಡವ್ರೊಲ್ಲಿ ಅಂತ ಮಲ್ಲಣ್ಣನೂ ಅವನಂತಽ ಮಾತಾಡತಾನು. ನೀಲವ್ವ ಏನ ನನ ತಂಗಿ ಅಲ್ಲ. ಅಪ್ಪ ಬ್ಯಾರೆ ಅವ್ವ ಬ್ಯಾರೆ ಮಾಡಿಕೊಂಡರ ಆಕೀನ್ನಽ ಮಾಡಿಕೊಳ್ಳಾಂವ ಇಲ್ಲಾಂದರ ಮದಿವೀನಽ ಆಗಂಗಿಲ್ಲ. ನೀ ಹಿಂಗ ಮದುವಿ ಆಗ ಅಂತ ಗಂಟ ಬೀಳಬ್ಯಾಡ. ನಾ ಈ ಮನ್ಯಾಗೂ ಇರಾಂಗಿಲ್ಲ ನಿನಗ ಒಂದ ಪೈಸಾ ಕೊಡಾಂಗಿಲ್ಲ. ಮನೀ ಬಿಟ್ಟಽ ಹೋಗತೀನಿ.

ನೀ ಹೋಗಿ ನಿನ ಹೆಂಡ್ರು ಮಕ್ಕಳ ಕೂಟ ಹೊಲದ ಮನ್ಯಾಗ ಸುಕದಿಂದ ಇರಹೋಗ ಅಂತ ಜಗಳಾ ಮಾಡಿ ಹೋಗ್ಯಾನಂತಬೇ. ಅದಕs ಅಪ್ಪ ನನ್ನ ರೊಕ್ಕಾ ಕೇಳಿದ್ದು.

'ಹಿರ್‍ಯಾಗೇನ ಅಕ್ಕೈತಿ ಬಿಡು. ಅದಾಳಲ್ಲ ದೊಡ್ಡ ಮಗಳು ಪುತಳಿ, ಚಂದುಳ್ಳಿ ಚೆಲುವಿ ಪಿರೂತಿಯಾಕಿ ಅಪ್ಪನ್ನ ಮನ್ಯಾಗ ಇಟಕೊಂತಾಳ. ನನಗ ದುಕ್ಕ ಆದಟು ಕುಷಿ ಆಕೀಗೆ, ನನ್ನ ಜೀಂವಾ ತಿಂದಾಳ. ನನ್ನ ಕಾಡಾಕ ಸವತಿ ಬಿಟ್ಟ ಹೋಗ್ಯಾಳೋ ಏನೋ ಇಕೀನ್ನ.' ದುಂಡವ್ವ ಎದ್ದು ಕೂಡುತ್ತ ಮೂಗು ಸೀಟಿದಳು.

'ಇಲ್ಲಬೇ, ಆಕೀನೂ ಕೈ ಬಿಟ್ಟಾಳ. ಈಗ ಅಕ್ಕನ ಗುಣಾ ಗೊತ್ತಿಲ್ಲ ನಿನಗ. ಅಪ್ಪ ಮೊದಲಿನ ಹಾಂಗ ಈಗ ಅಕೀ ಮನೀ ತುಂಬಾಂಗಿಲ್ಲ ನೋಡ, ಅದಕs ನೀ ಇನ ಮ್ಯಾಲೆ ನಮ್ಮನೀಗೆ ಬರಬ್ಯಾಡಾ, ನನ ಗಂಡಗ ಸೇರಾಂಗಿಲ್ಲ ಅಂತ ಹೇಳ್ಯಾಳಂತ. ಊಟಕ್ಕ ಕುಂತಾಗ ತಂಗಳ, ಹಳಸಿದ್ದು ಹಾಕಿದ್ಲಂತ. ಅಪ್ಪನ ಕಣ್ಣಾಗ ನೀರs ಬಂದಿದ್ದು. ಭಾಳ ನರಮ ಆಗ್ಯಾನ ಅಪ್ಪ ಈಗ. ನಾವ ಹೋಗಿ ಬಾರೋ ಯಪ್ಪ ಮನೀಗೆ ಅಂದರ ಬರೂ ಹಾಂಗ ಅದಾನ. ತಾನs ಮನೀ ಬಿಟ್ಟ ಹೋಗ್ಯಾನ ಅಂದಮ್ಯಾಲೆ ತಾನs ತಿರಿಗಿ ಬರಾಕ ಮನಸ್ಸಾಗಾಂಗಿಲ್ಲ.' ಸಿದ್ದಣ್ಣನ ಮಾತಿಗೆ ದುಂಡವ್ವ ಒಳಗೇ ಖುಷಿಪಟ್ಟರೂ ಅಕ್ಕಸದಿಂದ ಹೇಳಿದಳು.

'ಹೋಗ್ಯಾನ ಹೋಗಲಿ ಬಿಡೋ ಅವನ್ಯಾಕ ಕರೀತೀರಿ.'

'ಅಲ್ಲಬೇ ದಿನಾ ಒಂದಕೂ ಅಳತೀದಿ ನೀನs ನನ ಬಿಟ್ಟ ಹ್ವಾದಾ ಅಂತ. ಮತ್ತ ಕರೀಬ್ಯಾಡಾ ಅಂತಿಯಲ್ಲ. ಮುಂದ ನಮದೂ ಮದುವೀ ಆಗಬೇಕೋ ಬ್ಯಾಡೋ' ಸಿದ್ದಣ್ಣ ಸಿಡಿಮಿಡಿ ಗುಟ್ಟಿದ.

'ಹೊಟ್ಟ್ಯಾಗ ಸಂಕಟ ಆಗಿ ಅಂತೀನೋ. ಅಂವಾ ಬರೂದು ಬ್ಯಾಡಾಗೈತೇನ ನನಗ.'

'ಇದೆಲ್ಲಾ ನನ್ನಿಂದಾನೋ ಸಿದ್ದಣ್ಣಾ, ಹುಟ್ಟಬಾರದಿತ್ತು ಈ ಹೆಣ್ಣು ಜಲ್ಮ' ಕಣ್ಣೀರು ಮಿಡಿದಳು ನೀಲವ್ವ.

'ಯಕ್ಕಾ ನೀ ಮತ್ತ ಸರ್‍ರ್‍ಯೋ ಬರ್‍ರ್‍ಯೋ ಸುರು ಮಾಡಬ್ಯಾಡ. ಅಣ್ಣ ಹೇಳೂದರಾಗ ಏನೂ ತಪ್ಪಿಲ್ಲ. ಅವನ ಅವ್ವಾ ಅಪ್ಪಾ ಬ್ಯಾರೆ, ನಿನ್ನ ಅವ್ವಾ ಅಪ್ಪಾ ಬ್ಯಾರೇ. ನಿನಗೂ ಅವನ ಮ್ಯಾಲೆ ಮನಸೈತಿ. ನೀವ ಮದಿವ್ಯಾಗಿ ಸುಕದಿಂದ ಇರ್‍ರಿ!

'ನನಗಂತೂ ಏನೂ ತಿಳೀವಲ್ಲು. ಒಮ್ಮೊಮ್ಮೆ ಕೆರಿ ಬಾವಿ ನೋಡಿಕೊಳ್ಳಲ್ಯಾ ಅನಸತೈತಿ.'

'ಹೂಂ ಅದಟ ಮಾಡಿ ನನ ಹೊಟ್ಟೆಗೆ ಬೆಂಕೀ ಹಾಕs ನೀಲೀ. ನೀ ಏನ ತೆಪ್ಪ ಮಾಡೀಯಂತ ಜೀಂವಾ ಕಳಕೋಬೇಕs, ನೋಡಿದ ಮಂದಿ ಏನಂದಾರು, ಅಪವಾದಾ ನಿನಗs ಬರೂದು. ಸಿದ್ದೂ, ಬಸ್ಸೂ ಹ್ಯಾಂಗರೆ ಮಾಡಿ ನಿಮ್ಮಪ್ಪನ್ನ ಕರಕೊಂಡ ಬರ್‍ರೆಪಾ ಅವನ ಕೈಕಾಲ ಬಿದ್ದ ಕೇಳಿಕೊಂತೀನಿ. ಸಾಯೂದರಾಗ ಈ ಹುಡುಗೀನ ಒಂದ ಗೊತ್ತಿಗೆ ಹಚ್ಚಿ ಸಾಯಬೇಕಂತೀನಿ.'

'ಸಾಯೂ ಮಾತ ಆಡಬ್ಯಾಡ ಯವ್ವಾ‍ಕೋಲಿ ನಟ್ಟರ ಯಾರೂ ಸಾಯೂದಿಲ್ಲ. ಗಾಯ ಮಾಯತೈತಿ. ನಾಳೆ ಹೊಕ್ಕೀನಿ ಅಪ್ಪನ್ನ ಕರಿಯಾಕ.'

'ಯಕ್ಕಾs ನಾಳೆ ನಾ ನಾಗಣ್ಣನ ಭೆಟ್ಟಿ ಆಗಾಕ ಹೊಕ್ಕೇನಿ. ಅಂವಾ ಮಲ್ಲಣ್ಣ ಮಾವನ ಮನ್ಯಾಗ ಇದ್ದಾನು. ಅವಂಗ ಏನ ಹೇಳ್ಲಿ?' ಬಸಣ್ಣನ ಚೇಷ್ಟೆಗೆ ಕೆಂಜಗದಂತ ಮುಖ ಮಾಡಿಕೊಂಡು ಎಮ್ಮೆಗೆ ಮೇವು ಹಾಕಲು ಹಕ್ಕೆಗೆ ಓಡಿದಳು ನೀಲವ್ವ.'

***

■■

# ಪ್ರೀತಿ ಪ್ರೇಮ, ಸಂಸಾರ ಇತ್ಯಾದಿ

" ಇವತ್ತು ಆದಿತ್ವಾರ ಅಲ್ಲ? ನಾ ಪ್ಯಾಟಿಗಿ ಹೋಗಿ ಮನೀ ಸಾಮಾನು, ಕಾಯಿಪಲ್ಲೆ ಎಲ್ಲಾ ತರಬೇಕು. ಚಂದ್ರಿಕಾನ್ನ ತಮ್ಮನ ಮನ್ಯಾಗ ಬಿಟ್ಟ ಹೋಗ್ತೇನಿ. ೧೨ ರಮ್ಯಾಲೆ ನೀವು ಹೋಗಿ ಕರಕೊಂಡು ಬರ್ರಿರೇನು" ಸೀರೆಗೆ ನಿರಿಗೆ ಮಾಡುತ್ತ ಕೇಳಿದೆ.

" ಇಲ್ಲಾ ರೇಣೂ, ನನಗ ಪುರಸೊತ್ತs ಇಲ್ಲಾ. ಬರಿಯೂದ ಅದ" ಆಗಲೇ ಕುರ್ಚಿಯ ಮೇಲೆ ಕೂತಿದ್ದ ನಾಗೇಂದ್ರ.

"ಆತು ನಾ ಬರ್ತೀನಿ. ನಿಮಗ ಏನರ ಬೇಕೇನು ?" ಯಥಾಪ್ರಕಾರ ಅವರು ಹೇಳಿದ ಬಾಟಲಿಯ ಹೆಸರು ಬರೆದಿಟ್ಟುಕೊಂಡೆ. "ಸ್ವಲ್ಪ ಸ್ವಲ್ಪ ಅನಕೊಂತ ಇತ್ತಿತ್ಲಾಗ ಕುಡಿಯೂ ಚಟಾ ಹೆಚ್ಚಾತು" ಮೆಟ್ಟಲಿಳಿದೆ....

"ಮೆಂತೆ ಪಲ್ಲೆ, ಬದನಿಕಾಯಿ, ಟೊಮೆಟೊ ಧಾರಣೆ ಹ್ಯಾಂಗಬೇ?"

"ಪಲ್ಲೆ ೨ ರೂ.ಗೆ ಸಿವುಡು, ಬದನಿಕಾಯಿ ೮ ರೂ., ಟಮಾಟಕಾಯಿ ೧೫ ರೂ. ಗೆ ಕೆಜಿ ಎಷ್ಟ ತೂಗಲಿ ಯವ್ವಾ' ಅಜ್ಜಿ ಅವಸರದಿಂದ ತಕ್ಕಡಿ ಎತ್ತಿದಳು.

..... ಹೊಸಳ್ಳಿಯ ಕಪ್ಪು ನೆಲದ ಥಳಥಳಿಸುವ ಹಸಿರು ಹೊಲ. ಬಣ್ಣಬಣ್ಣದ ಟೊಮೆಟೊ, ಬದನಿಕಾಯಿ, ಮೆಣಸಿನಗಿಡಗಳು, ಅಳ್ಳು ಬಿದ್ದರೆ ಆರಿಸುವಂತಹ ಸ್ವಚ್ಛ ಎರೆ ಮಣ್ಣಿನ ಹೊಲದ ಅಂಚಿನ ಬೇವಿನ ಗಿಡದ ತಂಪು ನೇರಳೇ ಅಜ್ಜಿ- ಅವ್ವನ ವಿಶ್ರಾಂತಿಧಾಮ. ನಮ್ಮ ಹಿಲ್ ಸ್ಟೇಶನ್ ಅಂತ ಅಕ್ಕ ನಾನು ಚೇಷ್ಟೆ ಮಾಡುತ್ತಿದ್ದೆವು. ರೇಲ್ವೆ ಇಲಾಖೆಯಲ್ಲಿ ಅಂಚೆ ಡಬ್ಬಿಯ ಪೊಲೀಸ್ ನೌಕರಿಯಲ್ಲಿದ್ದ ಅಪ್ಪ ಊರಿಗೆ ಬರುತ್ತಿದ್ದದ್ದೇ ಅಪರೂಪ. ಗಂಡಿನ ಸಹಾಯವಿಲ್ಲದೆ ಹೊಲ ಮನೆ ತೂಗಿಸುತ್ತಿದ್ದ ಅಜ್ಜಿಗೆ ಅವ್ವನ ದುಡಿಮೇಯೇ ಆಸರೆ. ಆಗಾಗ ಸಾಲೆಯ ಬಿಡುವಿನಲ್ಲಿ ಅಂಬಕ್ಕನೊಡನೆ ತಾನು ಹೊಲದಲ್ಲಿ ಶೇಂಗಾ ಹರಿಯುತ್ತ, ಕಸ ತೆಗೆಯುತ್ತ, ಹಾಡು -ಒಗಟು- ರಂಗೋಲಿ ಕಲಿಯುತ್ತ, ಅಕ್ಕ ತೊಟ್ಟು ಬಿಟ್ಟ ಅಂಗಿ, ಪರಕಾರ ತಾನೇಕೆ ತೊಡಬೇಕೆಂದು ಜಗಳವಾಡುತ್ತ ಬೆಳೆದವಳು. ತನಗೆ ತಮ್ಮನೊಬ್ಬ ಹುಟ್ಟಿದ. ಮಕ್ಕಳು ಹೇಗೆ ಹುಟ್ಟುತ್ತಾರೆ ಎನ್ನುವ ಸೋಜಿಗದಲ್ಲಿರುವಾಗಲೇ ಅಕ್ಕ ದೊಡ್ಡವಳಾಗಿ ಹೊಸ ಸುದ್ದಿಯೊಂದನ್ನು ತನ್ನಲ್ಲಿ ಉಸುರಿದ ದಿನ ನಡುಗಿ ಹೋಗಿತ್ತು ಮುಗ್ಧ ಮನಸ್ಸು. ದಿನ ಕಳೆದಂತೆ ಎಲ್ಲ ಹುಡುಗಿಯರಿಗೂ ಅದು ಸಹಜವಾದದ್ದು ಎಂದು ತಿಳಿದಾಗ ನಿರಾಳವಾಗಿತ್ತು. ತಾನು ದೊಡ್ಡವಳಾದಾಗ ಅಷ್ಟು ಹೆದರಿಕೆಯಾಗಿರಲಿಲ್ಲ. ಅಜ್ಜಿ ಅಕ್ಕನ ಸಾಲೆ ಬಿಡಿಸಿ ಮದುವೆ ಮಾಡು ಎಂದು ದುಂಬಾಲು ಬಿದ್ದಿದ್ದಳು. ಅಪ್ಪ ಅಲ್ಲಲ್ಲಿ ಪ್ರಯತ್ನ ಮಾಡುತ್ತಿದ್ದರೂ ಕೂಡಿ ಬಂದಿರಲಿಲ್ಲ. ಆ ಕಾರಣದಿಂದಾಗಿಯೇ ತಾನು ಹೈಸ್ಕೂಲು ಮುಗಿಸಿ ಅಜ್ಜಿಯೊಡನೆ ಜಗಳವಾಡಿ ಕಾಲೇಜಿಗೆ ಹಾಸ್ಟೆಲ್‌ನಲ್ಲಿರುವುದು ಸಾಧ್ಯವಾಯಿತು. ಚೆನ್ನಾಗಿ ಮಾರ್ಕ್ಸ್ ತೆಗೆದುಕೊಂಡಿದ್ದರಿಂದ ಫ್ರೀಶಿಪ್, ಪುಸ್ತಕಗಳು, ಜಾತಿಯ ವರದಾನ, ಬೇರೆ ಸಿಕ್ಕಿತ್ತು....

'ಯವ್ವಾ ಚೀಲಾ ಹಿಡಿಯಬೇ ಪಲ್ಲೆ ಹಾಕ್ತೀನಿ. ಬದನಿಕಾಯಿ ಟೊಮೆಟೊ ಅರ್ಧರ್ಧ ಕಿಲೋ ತೂಗೇನಿ, ಇಕಾ ಎತ್ಲಾಗ ಐತಿ ನಿನ್ನ ಮನಸ್ಸು ? ಏಟೊತ್ತಾತು ಕರೀತಿನಿ ಓ ಅನವೊಲ್ಲಿ."

ಇಪ್ಪತ್ತರ ನೋಟು ಕಂಡ ಅಜ್ಜಿ ಮತ್ತೆ ಗೊಣಗಿದಳು, "ಚಿಲ್ಲರೆ ಇಲ್ಲಬೇ. ನಿಂದs ಬೋಣಿಗಿ. ಮೊಮ್ಮಗಳು ದೊಡ್ಡಾಕಿ ಆಗ್ಯಾಳ. ಲಗೂನ ಊರಿಗೆ ಹೋಗಬೇಕು ನೀನ ಚಿಲ್ಲರೆ ಕೊಡು."

"ಯಮ್ಮಾ ಚಿಲ್ಲರ ನೀನs ಇಟಕೋ, ಮೊಮ್ಮಗಳಿಗೆ ಹಣ್ಣು ತೊಗೊ" ಅಂದು ಚೀಲ ಎತ್ತಿದೆ. ಖುಷಿಯಿಂದ ಬೊಚ್ಚುಬಾಯಿ ತೆಗೆದು ನಕ್ಕ ಅಜ್ಜಿಯನ್ನು ನೋಡಿ ಸಂತೋಷವಾಯ್ತು....

...ಅಜ್ಜಿ ತನ್ನನ್ನು ಹಾಸ್ಟೆಲ್‌ಗೆ ಕಳಿಸಲು ಬೇಡವೆಂದು ಮೊಂಡು ಹಿಡಿದಿತ್ತು. ಕಾಲ ಬದಲಾಗಿದೆ, ತಾನೂ ಕಲಿತು ನೌಕರಿ ಮಾಡಿ ಅಪ್ಪನಿಗೆ ಹಗುರ ಮಾಡುತ್ತೇನೆಂದು ವಾದಿಸಿದಾಗ,. ಅಪ್ಪನೂ ದನಿಗೂಡಿಸಿದ. ಕೊನೆಗೂ ಅರ್ಧ ಮನಸ್ಸಿನಿಂದ ಅಜ್ಜಿ ಒಪ್ಪಿತು. ಊರಿಗೆ ಬರುವ ಮೊದಲು ತನ್ನೊಬ್ಬಳನ್ನೇ ಹಿತ್ತಿಲ ಕಟ್ಟಿಗೆ ಕರೆದುಕೊಂಡು ತನ್ನ ಹೊಟ್ಟೆಯ ಸಂಕಟ ತೋಡಿಕೊಂಡಿತ್ತು. ಅಜ್ಜಿ ಹಟವಾದಿ ಆದರೂ ಮನಸ್ಸು ತುಂಬಾ ಮೆತ್ತಗೆ.

"ಅವ್ವೀ ನೀ ಭಾಳ ಕಲತಾಕಿ, ಶಾಣ್ಯಾಕಿ ಅದೀ. ನಾ ಹಳ್ಳೀ ಊರ ಮಳ್ಳ ಆದರೂ ಎಡ್ಡ ಮಾತ ಹೇಳ್ತೇನಿ ಮನಸಿನ್ಯಾಗ ಇಟಕೋ. ಹರೇದ ಹುಡುಗೇರ್‍ನ ಕಂಡರ ಹರಕೊಂಡ ತಿನ್ನೂ ಮಂದಿ ಭಾಳ. ಗಂಡಸು ಅಂದರ ಬೆಂಕಿ ಕೆಂಡ ಇದ್ದಾಂಗ. ಅದರಿಂದ ನೀನು ದೂರ ಇರು. ಕೆಂಡಾ ಹಿಡಿದರ ಕೈ ಸುಟ್ಟುಕೊಳ್ಳಾಕಿ ನೀನಃ. ನಾ ಆತು ನನ್ನ ಅಭ್ಯಾಸ ಆತು ಹಾಂಗ ಇರು. ಸಿಕ್ಕಾಂಗ ತಿರಗಬ್ಯಾಡಾ. ಒಬ್ಬಾಕಿ ಇರತೀ ಜ್ಯಾಕಿಯಿಂದ ಇರು." ಅಜ್ಜಿ ಅಳುತ್ತಿತ್ತು. ತಾನೂ ಕಣ್ಣು ಒರೆಸಿಕೊಳ್ಳುತ್ತ ಅಳಬ್ಯಾಡಾ ಅಜ್ಜಿ ಅಂದಾಗ ಸುಮ್ಮನಿರುವಂತೆ ಕೈ ಸನ್ನೆ ಮಾಡಿ-

"ನನ್ನ ಅನುಭವದ ಮಾತ ಹೇಳ್ತೇನಿ. ಈ ಮನಸು ಮಂಗ್ಯಾ ಇದ್ದಾಂಗ. ಕಂಡದ್ದೆಲ್ಲಾ ಬೇಕ ಅಂತತಿ. ತೆಪ್ಪ ಮಾಡೂ ಮುಂದ ಇಬ್ರೂ ಮಾಡ್ತಾರ ಸಿಕ್ಸಾ ಆಗೂದು ನಮಗಟ. ನಿಮ್ಮಪ್ಪ ಸಣ್ಣಾವ ಇದ್ದಾಗ ನಿಮ್ಮಜ್ಜ ನನ ಗಂಡ ಸತ್ತಾ. ತವರ್ಮನೀಗೆ ಬಂದೆ ಹರೇದಾಕಿ, ಮನಸ ತಡೀಲಿಲ್ಲ. ಆಳು ಮಗನ ಗೆಣೆತನಾ ಮಾಡಿ ಬಸರ ಆದೆ. ನಮ್ಮಪ್ಪ ತಲೀ ತಲೀ ಬಡಕೊಂಡಾ. ಆದರ ಸುಮ್ಮನ ಕೂಡಲಿಲ್ಲ. ಬಸರ ತಗಸಿದಾ. ಊರ ಬಿಡಿಸಿ ಇಲ್ಲಿಗೆ ತಂದ ಇಟ್ಟಾ,. ಹೊಲಾ ಕೊಟ್ಟಾ ಮುತ್ತಿನಂತಾ ಮಗನ್ನ ಕರಕೊಂಡ ಇರು ಅಂತ ಬುದ್ಧಿ ಹೇಳಿ ಹ್ವಾದಾ. ಇದ ಮಣ್ಣಿನ್ಯಾಗ ದುಡುದು ಮುಪ್ಪಾದೆ. ನಿಮ್ಮವ್ವ ಸೋನವ್ವಾ ಮಾತ್ರ ಗರತಿ ಗಂಗವ್ವ. ಪಾಂಡು ಊರೂರು ತಿರುಗಿದರೂ ಯಾರ್‍ನೂ ಕಣ್ಣೆತ್ತಿ ನೋಡಿದಾಕಿ ಅಲ್ಲ. ಅಕಿ ಪಾದಾ ತೊಳಕೊಂಡ ಕುಡೀಬೇಕ. ನಾನೂ ಅದೀನಿ ನೋಡ ನಾಯಿ ಮುಟ್ಟಿದ ಗಡಿಗಿ ಹಾಂಗ. ನಾಳೆ ಸತ್ತಮ್ಯಾಲೆ ನರಕದಾಗ ನನಗ ಏನ ಬೆಂಕ್ಯಾಗ ಹಾಕ್ತಾರೊ, ಕಾದ ಎಣ್ಯಾಗ ಹಾಕ್ತಾರೋ ನನ್ನ. ಇದ ಯಾರಿಗೂ ಗೊತ್ತಿಲ್ಲಬೇ. ನಿನ್ನ ಮುಂದ ಹೇಳೇನಿ. ನಿನ್ನ ಹೊಟ್ಟ್ಯಾಗ ಇಟಕೋ" ಅಳುತ್ತಿದ್ದ ಅಜ್ಜಿಯನ್ನು ತೆಕ್ಕೆ ಬಿದ್ದು ಸಮಾಧಾನ ಮಾಡಿಬಂದೆ.....

ಅಜ್ಜಿ ಮಾತು ನೆನಪಾದರೆ ಈಗಲು ನಗು ಬರ್‍ತದೆ. ಬಹುಶಃ ಈ ಸ್ವರ್ಗ ನರಕದ ಕಲ್ಪನೆಯೇ ಜನರನ್ನು ಪಾಪದಿಂದ ದೂರವಿಟ್ಟಿತ್ತೇನೋ. ವಿಜ್ಞಾನದಲ್ಲಿ ಪ್ರಗತಿಯಾಗಿ, ತಿಳುವಳಿಕೆ ಹೆಚ್ಚಾಗಿ ಅವೆಲ್ಲ ಮನುಷ್ಯರೇ ಮೂಡಿಸಿದ ಭ್ರಮೆ ಎಂದು ತಿಳಿದಾಗ ಪಾಪ ಭೀತಿಯೇ ಪಲಾಯನ ಮಾಡಿತು. ಈಗ ನೋಡಿದರೆ ಎಲ್ಲೆಲ್ಲೂ ಪಾಪ, ಮಹಾಪಾಪ! ಒಮ್ಮೆಲೆ ನೆನಪಾಯ್ತು. ಪಾಪ ಅಂತೆ ಯಾವುದು ಪಾಪ. ಸಣ್ಣ ವಯಸ್ಸಿನವರಿಗೆ ಗಂಡ ಸತ್ತ ಕೂಡಲೇ ಆಸೆ, ಕಾಮನೆ, ಎಲ್ಲಾ ಹೋಗಿಬಿಡ್ತಾವೇನು? ಗಂಡಸು ಬೇರೆ ಮದುವೆ ಮಾಡಿಕೊಳ್ಳೋದಿಲ್ಲವೇ ಹಾಗೆ ಅಜ್ಜಿಗೂ ಮದುವೆ ಮಾಡಿದ್ದರೆ ಈ ಸಮಸ್ಯೆಯೇ ಇರುತ್ತಿರಲಿಲ್ಲ. ಆದರೂ ಅಜ್ಜಿಗೊಬ್ಬ ಮಗ ಇದ್ದ. ಇಬ್ಬರ್‍ನೂ ನೋಡಿಕೊಳ್ಳೋವಂಥ ಉದಾರ ಮನಸ್ಸಿನವರು ಎಲ್ಲಿ ಸಿಗಬೇಕು. ಅಜ್ಜಿಗೆ ಗಂಡ ಸಿಕ್ಕಿದ್ದ ಆದರೆ ಅಪ್ಪನಿಗೆ ಜಾಗ ಎಲ್ಲಿತ್ತು, ಛಿ ಎಲ್ಲಾನೂ ಸಮಸ್ಯೇನ. ಎಲ್ಲಿ ನೋಡಿದ್ರೂ ಹೆಂಗಸರಿಗೆ ಕಷ್ಟವೇ ಕಷ್ಟ. ಹೀಗೆಲ್ಲಾ ವಿಚಾರ ಮಾಡ್ತಾ ಹೋದರ ತಲೀನಃಕೆಡ್ತದ.....

ತಲೆತುಂಬ ಯೋಚನೆಗಳಿದ್ದರೂ ಕೈ ಚೀಲ ಹೊತ್ತು ಗುರುತಿನ ದಾರಿಯಲ್ಲೆ ನಡೆದಿದ್ದೆ. ಇಂದ ಯಾಕೋ ಹಿಂದಿನದೆಲ್ಲಾ ನೆನಪ ಆಗತೈತಿ. ಆಯ್ತು ಕಿರಾಣಿ ಅಂಗಡೀನ ಬಂತಲ್ಲ.

"ಹಾಂ, ಬರ್‍ರಿ ಬರ್‍ರಿ ರೇಣಕ್ಕ. ಸಾಮಾನಿನ ಚೀಟಿ ತರ್‍ರಿಲ್ಲೆ, ಸ್ವಲ್ಪ ಕೂತ್ಕೊಳ್ರಿ. ಗದ್ದಲ ಅದ. ಸಾಮಾನು ಕಟ್ಟಲಿಕ್ಕೆ ಹೇಳ್ತೇನಿ ಕೂಡ್ರಿ' ಹಲ್ಲು ಕಿರಿಯುತ್ತ ಗಲ್ಲೇದ ಮೇಲಿದ್ದ ಮಡಿವಾಳಪ್ಪ ಸ್ವಾಗತ ಮಾಡಿದ.

ಅಂವ ನನ್ನ ನೋಡಿ ನಗೋದು ನೋಡಿದರ ಮೈ ಉರೀತದ. ಹಾಂಗ ಯಾವತ್ತೂ ನನ್ನ ಮೈ ದಿಟ್ಟಿಸಿ ನೋಡ್ತಿರ್ತಾನ. ಮೈ ತುಂಬ ಸೆರಗು ಹೊತ್ತರೂ ಬತ್ತಲೆ ಇದ್ದಾಂಗ ಅನಸ್ತದ. ಹೆಂಗಸರ್ನ ನೋಡೂದ ಒಂದು ಚಟಾನ ಅವನಿಗೆ. ಇಲ್ಲಿಗೆ ಬರಬಾರದು ಅಂದರ ನಾಗೇಂದ್ರ ಕೇಳೂದಿಲ್ಲಲ್ಲ. ಅವರ ಗೆಳೆಯನ ಅಣ್ಣನ ಅಂಗಡಿ ಇದು. ಆಗೀಗ ಒಂದಿಷ್ಟು ಉದ್ರಿನೂ ಕೊಡತಿರತಾನ. ಅವನ ಕೀಳು ಚಟದ ಬಗ್ಗೆ ನಾಗೇಂದ್ರನ ಮುಂದ ಮಾತಾಡಲಿಕ್ಕೂ ಸಂಕೋಚ ಆಗ್ತೈತಿ ನನಗ.

..... ಓದಲಿಕ್ಕೆ ಬಂದು ಹಾಸ್ಟೆಲ್‌ನಾಗ ಇದ್ದಾಗಿಂದ ಹಿಂತಾ ಗಂಡಸರ ಸಹವಾಸ ನನಗ ಬಂದಿತ್ತು. ಕೆಳಜಾತಿ ಹುಡುಗಿ, ನೋಡಲಿಕ್ಕೆ ಚಂದ ಅದಾಳ ಅಂದಮ್ಯಾಲ ಹ್ಯಾಂಗ ನಡೆಸಿಕೊಂಡರೂ ನಡೀತದ ಅಂತ ಅವರ ಸಮಜೂತಿ. ಅವರ ಮಾತು, ನೋಟ, ಸ್ಪರ್ಶ ಎಲ್ಲಾ ಅರ್ಥ ಆದರೂ ತಿಳೀಬಾರದಂಗ ನಟನಾ ಮಾಡ್ತಿದ್ದೆ. ಗಂಡಸರಷ್ಟs ಯಾಕ ಎಷ್ಟೋ ಮೇಲ್ಜಾತಿ ಹುಡುಗಿಯರಿಗೂ ನಮ್ಮ ಬಗ್ಗೆ ಕೀಳು ಭಾವನಾ ಇತ್ತು. ಹಿಂದ ಎಷ್ಟು ಆಡಿಕೊಂಡರೂ ನನ್ನ ಶಾಣ್ಯಾತನ, ರೂಪ, ಜೋರು, ಮಾತು ನೋಡಿ ನನ್ನ ಮುಂದ ಮಳ್ಳಿ ಹಾಂಗ ಇರತಿದ್ರು. ಕ್ಲಾಸಿಗೆ ರ್‍ಯಾಂಕ್ ತೊಗೊಂಡು ಇವರ್ನೆಲ್ಲಾ ಹಿಂದ ಹಾಕಬೇಕು ಅನ್ನೂ ಹಟದಿಂದ ಅದನ್ನೆಲ್ಲಾ ಅಲಕ್ಷ್ಯ ಮಾಡತಿದ್ದೆ....

"ಅಕ್ಕಾ ಅವರ, ಭೊಲೋ ಗೋದಿ ಹಾಕೀನ್ರಿ. ಹೊರಗ ತುಟ್ಟಿ ಆಗ್ಯಾವ. ನಿಮಗ ಬಿದ್ದ ಧಾರಣೀಗೆ ಕೊಡ್ತೀನ್ರಿ. ಬೆಲ್ಲಾ, ರವಾ, ಸಕ್ಕರಿ ಎಲ್ಲಾದರ ರೇಟೂ ಏರ್‍ಯಾವ್ರಿ"

"ಆಗಲಿ ಹಾಕ್ರಿ, ಇನ್ನೇನ ಮಾಡೂದು. ಎಲ್ಲಾರಿಗೂ ಆದದ್ದs ನಮಗೂ" ಅಂದೆ. ತಂದ ಹಣ ಸಾಲದೆ ಹೋದರೆ ಉದ್ರಿ ಹೇಳುವ ಪ್ರಸಂಗ ಬಂದೀತು ಎನ್ನುವ ಚಿಂತೆ ನನಗೆ. ಇಲ್ಲಿ ಪೂರ್ಣ ರೊಕ್ಕ ಚುಕ್ತಾ ಮಾಡಿದರ ನಾಗೇಂದ್ರರ ಬಾಟಲಿಗೆ ಹಣ ಉಳಿಯೋದಿಲ್ಲ, ಪೆಚ್ಚು ನಗೆನಕ್ಕೆ. ನನ್ನ ನಗುವಿನಿಂದ ಹುರುಪಾದ ಮಡಿವಾಳಪ್ಪ ಮಾತು ಬೆಳೆಸಿದ,

"ನಾಗೇಂದ್ರ ಆರಾಮ ಅದಾರೇನ್ರಿ. ಭಾಳದಿನಾ ಆತು ಭೆಟ್ಟಿನs ಆಗಿಲ್ಲಾ. ನಾ ಕೇಳಿದೆ ಅಂತ ಹೇಳ್ರಿ."

"ಆಯ್ತು ಹೇಳ್ತೀನಿ. ಅವರೊಂದು ಪುಸ್ತಕ ಬರೀತಾ ಅದಾರ. ಎಲ್ಲೂ ಹೊರಗ ಹೋಗಲಿಕ್ಕೆ ಟೈಮ ಇಲ್ಲ. ಕಾಲೇಜು, ಲೈಬ್ರಿ, ಮನಿ ಇದರಾಗs ವ್ಯಾಳ್ಯೆ ಕಳೀತಾರ."

"ಛೇ ಛೇ ಭಾಳ ಶಾಣ್ಯಾರು. ಸಾಹಿತ್ಯವಲಯದೊಳಗ ನಾಗೇಂದ್ರ ಅವರು ಭಾಳ ಪ್ರಸಿದ್ಧ ಆಗ್ಯಾರ ನೋಡ್ರಿ. ದೊಡ್ಡ ದೊಡ್ಡ ಮಂದಿ ಎಲ್ಲಾ ಅವರ್ನ ಹೊಗಳತಿರತಾರ. ಅವರ ಭವಿಷ್ಯ ಉಜ್ವಲ ಅದ. ರೇಣಕ್ಕ ನೀವು ದೈವಾನರು. ಇಂಥಾವರ ಕೈ ಹಿಡದಿರಿ."

ಸಾಹಿತ್ಯದ ಗಂಧವಿಲ್ಲದೆ ಮಾತು ಬೆಳೆಸುತ್ತ. ತಡಮಾಡುತ್ತಿದ್ದ ಮಡಿವಾಳಪ್ಪನ ಲಕ್ಷ್ಯ ಮತ್ತೊಬ್ಬ ಹೆಂಗಸಿನತ್ತ ಹರಿತು. ಅವನ ಮಾತುಗಳನ್ನೇ ಮೆಲುಕು ಹಾಕುತ್ತ ನಾನು ಕುಳಿತೆ. ..... ಹೌದು. ನಾಗೇಂದ್ರನ ಭೆಟ್ಟಿ ಆದದ್ದೇ ಅಕಸ್ಮಾತ್ ಆಗಿ ಲೈಬ್ರರಿಯಲ್ಲಿ. ಮೇಲಿನ ಶೆಲ್ಫಿನಲ್ಲಿದ್ದ ಪುಸ್ತಕ ತೆಗೆಯಲು ಕಾಲು ಎತ್ತರಿಸಿ ಸಾಹಸ ಪಡುತ್ತಿದ್ದೆ. ಇನ್ನೇನು ಕೈಗೆ ಸಿಕ್ಕಿತು ಎನ್ನುವಾಗ ಜಾರಿ ಹೋಗುತ್ತಿತ್ತು. ಹಿಂದಿನಿಂದ ಬಂದ ಬಲಿಷ್ಠ, ಕೂದಲು ತುಂಬಿದ ಕೈ ಪುಸ್ತಕ ಸಲೀಸಾಗಿ ತೆಗೆದು ತನ್ನ ಕೈಗೆ ಕೊಟ್ಟಿತ್ತು. ಹೊರಳಿ ನೋಡಿದಾಗ ಕನ್ನಡಕದ ಹಿಂದಿನ ಮಿಂಚುವ ಕಣ್ಣುಗಳು ಕಂಡಿದ್ದವು. ತನ್ನ ಥ್ಯಾಂಕ್ಸ್ ಕೂಡ ಕೇಳಿಸಿಕೊಳ್ಳದೆ ಹೊರಟು ಹೋಗಿದ್ದ. ಅವನ ಬಗ್ಗೆ ವಿವರ ಗೊತ್ತಾದದ್ದು ಅವನದೇ ಹಳ್ಳಿಯಿಂದ ಬಂದ ಮಾಲತಿ ತನ್ನ ಗೆಳತಿಯಾದ ಮೇಲೆ. ನಾಗೇಂದ್ರ ಪ್ರತಿಭಾವಂತ ವಿದ್ಯಾರ್ಥಿ. ಸಮಾಜ ಶಾಸ್ತ್ರದಲ್ಲಿ ಪಿಎಚ್.ಡಿ ಮಾಡುತ್ತಿದ್ದವ. ತನಗಿಂತ ಬೇರೆ ವರ್ಗದ ಕೆಳಜಾತಿಯವ, ಗಾಂಭೀರ್ಯ, ಬುದ್ಧಿವಂತಿಕೆಯಿಂದ ವಿದ್ಯಾರ್ಥಿಗಳ ಗುಂಪಿನಲ್ಲಿ ಎದ್ದು ಕಾಣುವ ಎಲ್ಲ ಹುಡುಗಿಯರಿಗೂ ಅವನ ಮೇಲೆ ಕಣ್ಣು, ಆದರೆ ಅವನು ಮಾತ್ರ ಸ್ಥಿತಪ್ರಜ್ಞ, ಅವನ ಈ ಗುಣವೇ ತನ್ನನ್ನು ಅವನತ್ತ ಸೆಳೆದದ್ದು.

ಮೂರನೆಯ ವರ್ಷದ ಸೂಟಿಯಲ್ಲಿ ಹಳ್ಳಿಗೆ ಹೋದಾಗ ಅಕ್ಕನ ಮದುವೆ ಗೊತ್ತಾಗಿತ್ತು. ವರ ಕನ್ನಡ ಸಾಲೆ ಮಾಸ್ತರನಾದ್ರೂ ಹತ್ತುಸಾವಿರ ವರದಕ್ಷಿಣೆ ಕೇಳಿದ್ದ. ಅಜ್ಜಿ ವಯಸ್ಸಾಗಿ ಹಾಸಿಗೆ ಹಿಡಿದಿದ್ದರಿಂದ ಹೊಲದ ಕೆಲಸ ಸಾಗುತ್ತಿರಲಿಲ್ಲ. ಅರ್ಧ ಹೊಲ ಮಾರಿ ಮದುವೆಗೆ ಹಣ ಹೊಂದಿಸಿದ್ದರು ಅಪ್ಪ. ಮಗಳ ಮದುವೆ ಮಾಡಿ ಸೋತಿದ್ದ ಅಪ್ಪ, ಉಳಿದ ಹೊಲ ಲಾವಣಿಗೆ ಕೊಟ್ಟುಬಿಟ್ಟಿದ್ದರು. ಹೀಗಾಗಿ ಮನೆಯ ವಾತಾವರಣ, ಜನ ಎಲ್ಲ ಬದಲಾಗಿ ತನ್ನ ಮನಸ್ಸು ಅಲ್ಲಿರಲು ಒಲ್ಲದೆ ಚಡಪಡಿಸುತ್ತಿತ್ತು. ಅಪರಿಚಿತ ಜಾಗಕ್ಕೆ ಬಂದ ಹಾಗೆ ಅನಿಸುತ್ತಿತ್ತು. ಬರುವಾಗ ಅಪ್ಪನಿಗೆ ಗಟ್ಟಿಯಾಗಿ ಹೇಳಿ ಬಂದಿದ್ದೆ. ತನ್ನ ಡಿಗ್ರಿ ಮುಗಿಸಿ ನೌಕರಿ ಹಿಡಿಯುವವರೆಗೆ ತನ್ನ ಮದುವೆಯ ಯೋಚನೆ ಮಾಡಬಾರದು ಎಂದು, ತನ್ನ ಮನದ ಮೂಲೆಯ ಆಸೆ ಗಟ್ಟಿಯಾಗುತ್ತಿತ್ತು. ತನ್ನ ಗಂಡನನ್ನು ತಾನೇ ಆರಿಸಿಕೊಳ್ಳಬೇಕೆನ್ನುವದೇ ಆ ಆಸೆ. ಪ್ರೇಮ ಎಲ್ಲಿತ್ತೋ ಮಾಡಿಕೊಳ್ಳುವವನು ಯಾರೋ 'ಹಾಲಿಲ್ಲ ಬಟ್ಟಲಿಲ್ಲ ಗುಟಕ್' ಎನ್ನುವಂತೆ.

ಊರಿಂದ ಬಂದ ಮರುದಿನ ಮಾಲೂನೊಡನೆ ಪೇಟೆಗೆ ಹೋಗಿದ್ದೆ. ಬಸ್ಸಿನಲ್ಲಿ ಬಹಳ ರಶ್ಶು. ಹಾಸ್ಟೆಲ್ ಮುಟ್ಟಲು ತಡವಾಗುತ್ತದೆಂದು ಗದ್ದಲದಲ್ಲೆ ನುಗ್ಗಿ, ನುಗಿಸಿ ಮುಂದೆ ಸರಿದು ಪಟ್ಟಿ ಹಿಡಿದು ನೇತಾಡುತ್ತಿದ್ದೆ. ಒಂಟಿ ಕಾಲೂರಲು ಮಾತ್ರ ಜಾಗವಿತ್ತು. ಸುತ್ತೆಲ್ಲ ಗಂಡಸರು. ಮೊದಲಿನಂತೆ ಮೈ ಮುದುಡಿ ಕೂಡ್ರದೆ ಗದ್ದಲ ಎಷ್ಟಿದ್ದರೂ ನುಗ್ಗುವುದು ಅಭ್ಯಾಸವಾಗಿತ್ತು. ಬ್ರೇಕ್ ಹಾಕಿದ ರಭಸಕ್ಕೆ ತೂಗಿ ಹಿಂದಿನವರ ಮೇಲೆ ಬಿದ್ದೆ. ಗಂಡಸಿನ ಕೈ ನನ್ನ ಸೊಂಟ ಬಿಗಿಯಾಗಿ ಬಿಡಿದು ದೂರ ನಿಲ್ಲಿಸಿತು. ಮೈ ಕಂಪಿಸುತ್ತಿತ್ತು. ಅವನ ಉಸಿರು ಕೆನ್ನೆಗೆ ಬಡಿಯುತ್ತಿತ್ತು. ಗಂಡಸಿನ ಮೈ ವಾಸನೆ, ಬೆವರು, ಸಿಗರೇಟಿನ ವಾಸನೆಯಿಂದ, ಸಿಟ್ಟು ಬರುವ ಬದಲು ಪುಲಕಿತಳಾಗಿದ್ದೆ, ಹಾಗೇ ಕಣ್ಣು ಮುಚ್ಚಿದ್ದೆ. ಮೃದುವಾಗಿ ತನ್ನ ಕಿವಿಯಲ್ಲಿ 'ಮಿಸ್ -ಸರಿಯಾಗಿ ನಿಂತ್ಕೋರಿ' ಎಂದು ಉಸುರಿ ಹಿಡಿತ ಸಡಿಲಗೊಳಿಸಿದ. ಕೃತಜ್ಞತೆಯಿಂದ ಹೊರಳಿ ದಿಟ್ಟಿಸಿದಾಗ ನಾಗೇಂದ್ರನ ಕಣ್ಣು ನಗುತ್ತಿದ್ದವು. ತಲೆ ತಗ್ಗಿಸಿ ಮುಂದೆ ಸರಿದೆ. ಮುಂದಿನ ಸ್ಟಾಪಿನಲ್ಲಿ ತಿರುಗಿ ನೋಡಿದೆ, ಅವನು ಇಳಿದು ಹೊರಟುಹೋಗಿದ್ದ. ಆ ರಾತ್ರಿ ಬಹಳ ಹೊತ್ತು ನಿದ್ದೆ ಬಾರದೆ ಹೊರಳುತ್ತಿದ್ದೆ. ನಾಗೇಂದ್ರನ ಸ್ಪರ್ಶದ ಜಾದೂ ಮನಸ್ಸಿನಲ್ಲಿ ಉಳಿದೇಬಿಟ್ಟಿತು....

'ಅಕ್ಕಾರ ಬೆಲ್ಲಾ ಎಂಥಾದ್ದು ಬೇಕೋ ನೋಡ್ರಿ" ಮಡಿವಾಳಪ್ಪನ ಕರ್ಕಶ ದನಿ ಎಚ್ಚರಿಸಿತ್ತು. "ಬೆಲ್ಲಾ ಮೆತ್ತಂದ ಕೊಡರಿ" ಮುರಿದು ಬಾಯಿಗಿಡುತ್ತ ಹೇಳಿದೆ.

.... ಕಾಲೇಜಿನಲ್ಲಿ,. ಲೈಬ್ರರಿಯಲ್ಲಿ ನಾನಾ ತರದ ಹುಡುಗರ ಸಹವಾಸ ಬಂದೇ ಬರುತ್ತಿತ್ತು. ಕೆಣಕಿದವರಿಗೆ ತಿರುಗಿ ಉತ್ತರ ಕೊಟ್ಟು ಜೋರು ಹುಡುಗಿ ಅನ್ನಿಸಿಕೊಂಡಿದ್ದೆ. ಒಂದು ದಿನ ಕ್ಲಾಸು ಮುಗಿಸಿ ಹೊರಗೆ ಬರುವಾಗ ಮಜಾ ಮಾಡಲೆಂದೇ ಕಾಲೇಜಿಗೆ ಬರುತ್ತಿದ್ದ ಅನಂತ ದೇಸಾಯಿ ತನ್ನ ಸೆರಗು ಎತ್ತಿ ಹಿಡಿದು 'ಈ ಸೀರಿ ಎಲ್ಲಿ ತೊಗೊಂಡ್ರಿ ರೇಣುಕಾ. ಎಷ್ಟ ಛಂದ ಅದ' ಅಂದ. ಸಿಟ್ಟಿನಿಂದ ತನ್ನ ಮೈ ಉರಿಯಿತು. ಕೈಯಲ್ಲಿದ್ದ ಪುಸ್ತಕದಿಂದ ಅವನ ಕೈಗೊಂದು ಏಟು ಕೊಟ್ಟು 'ನಿಮ್ಮಪ್ಪನ ಅಂಗಡ್ಯಾಗಲೇ' ಅಂದೆ. ಸುತ್ತಲಿನವರೆಲ್ಲ ಖೊಳ್ಳನೆ ನಕ್ಕು ದೇಸಾಯಿಗೆ ಅವಮಾನವಾಗಿತ್ತು. ಆಮೇಲೆ ಒದರಾಡಿದನಂತೆ. 'ಆ ರಂಡೀ ಮಗಳ ಸೊಕ್ಕ ಮುರೀದಿದ್ರ ನಾ ದೇಸಾಯೀನs ಅಲ್ಲಾ' ಅಂತ. ನಕ್ಕುಬಿಟ್ಟಿದ್ದೆ. ನಾಲ್ಕು ವರ್ಷಗಳಲ್ಲಿ ನಮ್ಮ ಜಾತಿಯ ಗುಂಪಿನ ಬೆಂಬಲ, ಸರ್ಕಾರದ ಸವಲತ್ತು ಎರಡನ್ನೂ ಚೆನ್ನಾಗಿ ಉಪಯೋಗಿಸಿಕೊಂಡಿದ್ದೆ. ಇಂಥ ಬೆದರಿಕೆಗೆಲ್ಲಾ ಬಗ್ಗುವವಳಲ್ಲ ನಾನು ಎಂದು ತೋರಿಸಿಕೊಟ್ಟಿದ್ದೆ. ಮಜಾ ಮಾಡುವ ಮೇಲ್ಜಾತಿಯ ಹುಡುಗಿಯರೂ 'ತಾ ಏನ ದೊಡ್ಡ ಸತಿ ಸಾವಿತ್ರಿ ಅಂತ ತಿಳಕೊಂಡಾಳ. ಹುಟ್ಟಿದ್ದು ಹೊಲಗೇರಿ ಆದರೂ ಬಡಿವಾರ ಎಷ್ಟ ಮಾಡತಾಳ' ಎಂದು ಆಡಿ ತೀಟೆ ತೀರಿಸಿಕೊಂಡಿದ್ದರು. ತಾನು ಕೆಳಜಾತಿಯವಳಾದರೂ ಹೊಲೆಯಳಲ್ಲ ಅನ್ನುವುದು ಈ ಪುಸ್ತಕದ ಗಿಳಿಗಳಿಗೆ ಹೇಗೆ ತಿಳಿಯಬೇಕು. ಇನ್ನೂ ಕೆಳಜಾತಿಯವರ ಬಗ್ಗೆ ತನಗೆ ಪ್ರೀತಿ, ಅನುಕಂಪ ಬೆಳೆಯುತ್ತಿತ್ತು. ಅಂಥದೇ ಜಾತಿಯಿಂದ ಬಂದು ತನ್ನತನವನ್ನು ಬೆಳೆಸಿಕೊಂಡು ತಲೆ ಎತ್ತಿ ನಡೆಯುವ ನಾಗೇಂದ್ರ ತನಗೆ ಅಚ್ಚುಮೆಚ್ಚಿನವನಾಗಿದ್ದ.

"ಅಕ್ಕಾರ ಇಕಾ ಬಿಲ್ ತೊಗಳ್ರಿ. ಸಾಮಾನು ಎಣಿಸಿಕೊಳ್ರಿ. ತಡಾ ಭಾಳ ಆತು ನಿಮಗ. ರಿಕ್ಷಾ ತರಸಲೇನ್ರಿ."

ಒಂದು ಗಂಟೆಯಾಗಿತ್ತು. ಚಂದ್ರಿಕಾ ಅಳುತ್ತಿರಬೇಕು. ಊಟದ ಹೊತ್ತು ಬೇಗ ಮನೆಗೆ ಹೋಗಲೇಬೇಕೆಂದು ಬಿಲ್ ಕೊಟ್ಟು ರಿಕ್ಷಾ ಹತ್ತಿದೆ. ಬಾಟ್ಲಿ ಒಯ್ಯದಿದ್ದರೆ ನಾಗೇಂದ್ರನಿಂದ ಬಯ್ಗಳು ತಿನ್ನಲು ಗಟ್ಟಿಯಾಗಬೇಕು. ನೌಕರಿ, ಮನೆ- ಮಗಳ ಕೆಲಸ, ಗಂಡನ ಉಪಚಾರದಲ್ಲಿ ತನಗೆ ವಿರಾಮವೇ ಇಲ್ಲ. ನೊಗಕ್ಕೆ ಕಟ್ಟಿದ ಎತ್ತಿನಂತೆ ದುಡಿಯುತ್ತಾ ಆಯಾಸಗೊಂಡಿದ್ದೇನೆ. ರಿಕ್ಷಾದಲ್ಲಿ ಕಣ್ಣುಜ್ಜಿ ಹಿಂದಕ್ಕೆ ಒರಗಿದೆ.

... ತಮ್ಮ ಕಾಲೇಜಿಗೆ ಉಪನ್ಯಾಸಕನಾಗಿ ಬಂದ ನಾಗೇಂದ್ರನನ್ನು ನೋಡಿ ಮನಸ್ಸು ಹುಚ್ಚೆದ್ದು ಕುಣಿಯಿತು. ಅವನ ಕ್ಲಾಸಿನಲ್ಲಿ ಆಗಾಗ ಕಾಣುತ್ತಿದ್ದ ತನ್ನನ್ನು ಕರೆದು "ರೇಣುಕಾ ನೀ ಈಗ ಫೈನಲ್ ಇಯರ್ ಅದೀ. ಮರೀಬ್ಯಾಡಾ. ಗಟ್ಟಿಯಾಗಿ ಕೂತು ನಿನ್ನ ವಿಷಯ ಅಭ್ಯಾಸ ಮಾಡು. ಅತ್ತಿತ್ತ ತಿರುಗಬ್ಯಾಡಾ" ಅಂತ ಗದರಿಸಿದ.

ಪರೀಕ್ಷೆ ಮುಗಿದು ಊರಿಗೆ ಹೋಗುವ ಮೊದಲು ಮಾಲೂನೊಡನೆ ಅವಳ ಗುರುತಿನವರ ಮನೆಗೆ ಹೋಗಿದ್ದೆ. ಬೇರೆ ವಿಷಯ ಮಾತಾಡಿ ಮುಗಿದ ಮೇಲೆ ಮನೆಯಾಕೆ ಹೇಳಿದರು- 'ಈ ಹೊರಗಿನ ರೂಮು ಬಾಡಿಗ್ಗೆ ಕೊಡೂದದ ಯಾರಿಗರೆ ಬೇಕಾಗಿದ್ರ ಹೇಳ್ರಿ' ಅಂತ. 'ಯಾಕ ಖಾಲಿ ಆಗೇದ ಏನು ಅಂತ ಮಾಲೂ ಕೇಳಿದಾಗ 'ಹೂಂ ನಾಗೇಂದ್ರ ಅಂತ ಒಬ್ಬ ಲೆಕ್ಚರರ ಇದ್ದಾ. ಛಲೋ ಹುಡುಗಾ ಅಂತ ತಿಳಕೊಂಡಿದ್ದೆ. ಆದರ ಯಾಕೋ ಅವನ ನಡತಿ -ರೀತಿ ಸರಿ ಕಾಣಲಿಲ್ಲ. ರಾತ್ರೋರಾತ್ರಿ ಕಳಿಸಿಬಿಟ್ಟೆ' ಅಂದರು. ತನ್ನ ಎದೆಗೇ ಒದ್ದಹಾಗಿತ್ತು ಆ ಮಾತು. ಅವರ ಮಾತು ಕೇಳಿ ನಾಗೇಂದ್ರ ನಮ್ಮ ಪರಿಚಯದವ್ರು ಅಂತ ಹೇಳಲಿಕ್ಕೂ ಬಾಯಿ ಬರಲಿಲ್ಲ ನಮ್ಮಿಬ್ಬರಿಗೂ.

ಮನಸ್ಸು ಭಾಳ ವಿಚಿತ್ರ. ನಾಗೇಂದ್ರ ಯಾರೋ ತಾನು ಯಾರೋ. ಆದರೂ ಅಂವ ಕೆಟ್ಟವ ಅಂದರ ನನ್ನ ಜೀವ ತಳಮಳಿಸತಿತ್ತು. ಅವನ ಮ್ಯಾಲೆ ನನ್ನ ಹಕ್ಕು ಅದ ಅಂತ ತಿಳಿಕೊಂಡಿದ್ದೆ, ನಂದೂ ಒಂದ ಹಟದ ಸ್ವಭಾವ. ಸೀದಾ ಸೀದಾ ಅವನ್ನ ಕೇಳೇ ಬಿಡೂಣು ಅಂತ ಅವನ ರೂಮಿಗೆ ಹೋದೆ. ಅವನಿಗೂ ನನ್ನ ಮನಸ್ಸು ಅರ್ಥ ಆಗಿತ್ತು. ಆದರೂ ಬಾಯಿ ಬಿಚ್ಚಿ ಏನೂ ಹೇಳಿದ್ದಿಲ್ಲ.

ಸಂಜೆಯಾಗಿತ್ತು. ಮನಿ ಮಾಲಕತಿ ಗಿಡಕ್ಕೆ ನೀರು ಹಾಕತಿದ್ಲು. ಇಬ್ಬರು ಹುಡುಗರು ಕ್ರಿಕೆಟ್ ಆಡತಿದ್ದರು. ಹೆಂಗಸು ನನ್ನ ಕಡೆ ಒಂದ ಥರಾ ಮಾಡಿ ನೋಡಿದರು. ನಾ ಅತ್ಲಾಗ ಲಕ್ಷ್ಯ ಕೊಡದ ಹಾಂಗs ಹೋದೆ.

"ಬಾ ರೇಣೂ ಒಳಗ ಬಾ."

ಒಮ್ಮೆಲೆ ಏನ ಹೇಳಬೇಕು ತಿಳೀಲಾರದ ಟೇಬಲ್ ಮ್ಯಾಲಿನ ಪುಸ್ತಕ ತಿರುವಿ ಹಾಕ್ಕೋತ ಕೂತೆ.

"ಯಾಕ ಬಂದಿ ಇಷ್ಟೊತ್ನ್ಯಾಗ ಹೇಳಲ್ಲ, ಏನೋ ಮಾತಾಡಲಿಕ್ಕೆ ಬಂದೀ?"

ಹಿಂದಿನ ರೂಮಿನ ಅವನ ಮಾಲಕತಿ ಹೇಳಿದ್ದನ್ನೆಲ್ಲ ಒದರಿಬಿಟ್ಟೆ. ಅವನ ಮುಖಾ ಕೆಂಪಾಗಿತ್ತು. 'ಇದೆಲ್ಲಾ ಖರೇ ಏನು? ಹೇಳಲ್ಲ. ಎಷ್ಟು ಹುಡುಗೇರ ಸಹವಾಸಾ ಮಾಡೀ ನೀನು' ರೊಚ್ಚಿನಿಂದ ಅವನ ತೋಳು ಹಿಡಿದು ಅಲುಗಾಡಿಸಿದೆ. ಕಣ್ಣಾ ತುಂಬ ನೀರಿತ್ತು.

ನನ್ನ ಮುಖಾ ದಿಟ್ಟಿಸಿ ನೋಡಿ ನನ್ನ ಎಳಕೊಂಡು ಮುಖಾ ಹತ್ತಿರ ತಂದು ಕಣ್ಣಾಗ ಕಣ್ಣಿಟ್ಟು ಕೇಳಿದಾ "ನಾ ಖರೇ ಹೇಳಿದ್ರ ನಂಬ್ತಿಯಾ."

ಆ ಹೊತ್ತಿನ್ಯಾಗ ಅವನ ಮಾತೂ ವೇದವಾಕ್ಯ ಆಗಿತ್ತು ತನಗ. 'ಹೂಂ' ಅಂದೆ. 'ಅದೆಲ್ಲಾ ಸುಳ್ಳು. ಹೊಟ್ಟೇಕಿಚ್ಚಿಗೆ ಕಥೀ ಕಟ್ಟಿ ಹೇಳ್ಯಾರ. ಅವರ ಮಗಳು ನಂದಾ ಹಗಲೆಲ್ಲಾ ನನ್ನ ಹಿಂದ ಬಿದ್ದಿದ್ಲು. ಒಂದ ದಿನಾ ರೂಮಿಗೆ ಬಂದಬಿಟ್ಲು. ನನಗ ಯಾಕೋ ಅಷ್ಟು ಸಲಿಗಿ ಸರಿ ಕಾಣಲಿಲ್ಲಾ. ಅವಳ ಅವ್ವನ ಹತ್ತರ ಹೋಗಿ ನಿಮ್ಮ ಮಗಳಿಗೆ

ಬುದ್ಧಿ ಹೇಳ್ರಿ, ಲಗೂನ ಮದುವೀ ಮಾಡ್ರಿ ಅಂತ ಹೇಳಿದೆ. ಅವರ ಮರ್ಯಾದಿ ಹೋತಲ್ಲ. ಅದಕ್ಕ ತಿರಗಿ ನನಗs ಲಫಂಗ, ಬದ್ಮಾಶ್ ಅಂತ ಬಯ್ದು ಹೊರಗ ಹಾಕಿಬಿಟ್ರು. ಇದು ನಡೆದದ್ದು. ನನ್ನ ನಂಬು ರೇಣೂ' ಅಂದ ನಾಗೇಂದ್ರ.

ನನಗ ಭಾಳ ಸಂತೋಷ ಆಗಿ ಅವನ್ನ ಅಪ್ಪಿಕೊಂಡು ಪಟಾ ಪಟಾ ಮುದ್ದ ಕೊಟ್ಟುಬಿಟ್ಟೆ. ನನ ಮನಸ್ಸು ಹಗರ ಆಗಿತ್ತು. ಏನ ಮಾಡ್ತೀನಿ ಅನ್ನೂ ಎಚ್ಚರಾನ ಇದ್ದಿದ್ದಿಲ್ಲ. ಅವನೂ ನನ್ನ ಬಿಗಿಯಾಗಿ ಅಪ್ಪಿ ತುಟಿಮ್ಯಾಲೆ ಮುತ್ತು ಕೊಟ್ಟ. ಮೈ ನಡುಗುತ್ತಿತ್ತು. ಹಣಿ ಬೆವರುತ್ತಿತ್ತು. ಮೈ ಕಾವು ಏರಿತ್ತು. ಹೇಳಲಾರದ ಹೊಸಾ ಅನುಭವ ಇಬ್ಬರಿಗೂ. ನನ್ನ ನಾಗೇಂದ್ರ ಅನ್ನೋದೊಂದs ಬಡಬಡಿಕಿ ನನಗ. ನಾಗೇಂದ್ರ ಮತ್ತ ಮತ್ತ ಮುದ್ದ ಕೊಟ್ಟು ವಿಚಿತ್ರ ಸುಖದೊಳಗ ಮೈ ಮರಿಯೂಹಾಂಗ ಮಾಡಿದ್ದ. ನನ್ನ ಸೆರಗು ಸರಿಸಿದ್ದ. ಅದೇ -ಹುಂ. ಅದs ಒಂದು ಗಳಿಗಿಯೊಳಗ ತಟ್ಟಂತ ಎಚ್ಚರಾದೆ. ಮನಸ್ಸಿನ ಮೂಲಿಯೊಳಗಿದ್ದ ಅಜ್ಜೀ ನೆನಪು ಆಯಿತು. ಆಕೀ ಮಾತು ಕಿವಿಯೊಳಗ ಗುಂಯ್ ಗುಟ್ಟಿತು. ಸಾಯುಮುಂದನೂ ನರಕದ ಶಿಕ್ಷಾದಿಂದ ಹೆದರಿ ಒದ್ದಾಡಿ ನರಳಿ ನರಳಿ ಸತ್ತ ಅಜ್ಜಿ ನೆನಪಾತು. ಸರಕ್ಕನ ಕೊಸರಿಕೊಂಡು ಸೆರಗು ಜಗ್ಗಿದೆ. ಕಸುವು ಹಾಕಿ ನಾಗೇಂದ್ರನ್ನ ನೂಕಿ ಬಾಗಿಲ ಕಡೆ ಓಡಿದೆ. ಸೆರಗು ನೆಲಕ್ಕೆ ಎಳೀತಿತ್ತು. ನಾಗೇಂದ್ರ 'ರೇಣು ನಿಲ್ಲು' ಅಂತ ಕರೀತಿದ್ದಾ. ಮೈ ಮ್ಯಾಲಿನ ಖಬರು ಇಲ್ಲದ ಹೊರಗ ಓಡಿ ಬಂದೆ. ಕೂದಲಾ, ಕುಂಕುಮಾ ಅಡ್ಡಾದಿಡ್ಡಿ ಆಗಿದ್ದು. ಮಾಲಕರ ಹೆಂಡತಿ, ಮಕ್ಕಳು, ಸುತ್ತಲಿನವರು ಗುಂಪು ಕೂಡಿದರು. ಏನಾತು ಏನಾತು ಅಂತ ಕೇಳತಿದ್ರು. ಸುಮ್ಮನ ಅಳತಿದ್ದೆ. ನನ್ನ ಅವಸ್ಥಾ ನೋಡಿ ಏನ ತಿಳಕೊಂಡರೋ ರಿಕ್ಷಾ ತರಿಸಿ ಹಾಸ್ಟೆಲ್‌ಕ ಕಳಿಸಿಕೊಟ್ರು. ಅವತ್ತs ರಾತ್ರಿ ಮಾಲೂನ ಮುಂದ ಎಲ್ಲಾ ಹೇಳಿ ಅತ್ತು ಮರುದಿನಾ ಹಳ್ಳೀಗೆ ಹೋಗಿಬಿಟ್ಟೆ.... ರಿಕ್ಷಾದವ ಬ್ರೇಕ್ ಹಾಕಿದ್ದ.

***

ಒಬ್ಬ ಪ್ರಕಾಶಕರು ಆರು ತಿಂಗಳಿಂದ ಗಂಟ ಬಿದ್ದಿದ್ರು. ಒಂದು ಪುಸ್ತಕ ಕೊಡ್ರಿ ಹಾಕ್ತೇವಿ ಅಂತ. ಪೇಪರು, ಪರೀಕ್ಷೆ, ಭಾಷಣಾ, ಸಂಘ, ಚಳುವಳಿ ಅಂತ ಹಾಂಗ ದಿನಾ ಕಳದಿದ್ವು. ವಿಮರ್ಶಾ ಲೇಖನಗಳೇನೊ ಇದ್ವು. ಅವನ್ನ ಹುಡುಕಿ ಆರಿಸಿ ತಿದ್ದಿ ಬರಿಯೂ ಕೆಲಸ ಉಳದಿತ್ತು. ಅದನ್ನ ಈ ತಿಂಗಳದೊಳಗ ಮುಗಿಸೇ ಕೊಡಬೇಕು ಅಂತ ಕೂತರ ತಲೀನ ಓಡವೊಲ್ಲದು. ಮನೀ ಶಾಂತ ಇತ್ತು. ಕೈಗೆ ಬಿಡುವು ಇತ್ತು. ಆದರ ಬರೀಲಿಕ್ಕೆ ಹುರುಪs ಇಲ್ಲಾ. ಎಲ್ಲಾರೂ ಹೇಳಿದ್ದನ್ನ ಹೇಳಬಾರದು. ವಿಚಾರ ಮಾಡಿ ಹೊಸದು ಏನಾದರೂ ಹೇಳಬೇಕು ಅನಸ್ತದ. ರೆಫರೆನ್ಸಿಗೆ ಪುಸ್ತಕ ಬೇಕಾಗಿದ್ದು ಹುಡುಕಿದರೆ ಸಿಗವೊಲ್ಲವು. ರೇಣು ರೂಮು ಸ್ವಚ್ಛ ಮಾಡೂ ಮುಂದ ಎಲ್ಲಿ ಇಟ್ಟಾಳೋ ಏನೋ. ಈಗ ಆಕಿ ಇರಬೇಕಾಗಿತ್ತು. ಪುಸ್ತಕ ಹುಡುಕಿ ಕೊಡತಿದ್ಲು. ಮತ್ತ ನಂದು ತಪ್ಪಾತು ಅಂತ ಅಳತಿದ್ಲು. ಭಾಳ ವಿಚಿತ್ರ ಹುಡುಗಿ ರೇಣೂ. ನಾ ಏನೂ ಹೇಳೂ ಅವಶ್ಯಕತೆ ಇಲ್ಲದ ನನಗ ಏನು ಬೇಕು ಎಲ್ಲಾ ತಿಳಿಕೋತಾಳ ಆಕಿ. 'ನಮ್ಮದು ಪ್ರೇಮವಿವಾಹ, ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಾ ಮಾಡಿಕೊಂಡೀವಿ' ಅಂತ ಹೆಮ್ಮೆಯಿಂದ ಎಲ್ಲಾರ ಮುಂದ ಹೇಳಿಕೋತಾಳ. ಆದರ ಎಷ್ಟೋ ಸಾರೆ ನನ್ನ ಗುರುತು ನನಗs ಸಿಗೂದಿಲ್ಲ. ನಾನು ಖರೇನ ಒಳ್ಳೆಯವನೋ, ಆದರ್ಶವಾದಿನೋ, ಬುದ್ಧಿವಂತನೋ, ಪ್ರಬುದ್ಧನೋ ಸಂಶಯ ಬರ್ತದ ಒಮ್ಮೊಮ್ಮೆ. ರೇಣೂನ ದೃಷ್ಟಿಯೊಳಗ ನಾನು ಈ ಸದ್ಗುಣಗಳ ಗಣಿ. ಹೌದೋ ಅಲ್ಲೋ ನೀವs ಹೇಳಬೇಕು.

ರೇಣೂನಂಗ ನಾನೂ ಹಳ್ಳೀ ಊರೊಳಗ ಹುಟ್ಟಿ ಬೆಳೆದಂವಾ, ಬಡವಾ, ಕೆಳಜಾತಿಯವ. ತನ್ನ ಹೊರತು ಉಳಿದವರೆಲ್ಲಾ ನಮ್ಮ ಹೊಲದಾಗ ದುಡಿಯೂವವರು. ಇಲ್ಲಾ ಜೀತಾ ಮಾಡುವರು. ಹಟಾ ಹಿಡಿದು ನಾನs ಒಬ್ಬನs ಸಾಲೀ ಕಲತೆ. ಎಷ್ಟು ಅವಮಾನ ಆದ್ರೂ. ಹಣದ ಕೊರತೆ ಆದ್ರೂ ಸರಕಾರದ ಸವಲತ್ತು ಉಪಯೋಗ ಮಾಡಿಕೊಂಡು ಕಾಲೇಜಿಗೆ ಬಂದೆ. ಇಲ್ಲಿಗೆ ಬಂದ ಮ್ಯಾಲೆ ನಾನೂ ಒಬ್ಬ ಮನುಷ್ಯಾ ಅನಿಸಿಕೊಂಡೆ. ರೇಣು

ಹೇಳತಾಳ ಬಸ್ಸಿನ್ಯಾಗ ಬೀಳೂವಾಕಿನ್ನ ಹಿಡೆದ್ನೆಂತ. ಲೈಬ್ರರಿಯೊಳಗ ಪುಸ್ತಕ ತಗದ ಕೊಟ್ನೆಂತ. ಸಿನಿಮಾದಾಗ ಹತ್ತಿರ ಕೂತಿದ್ರೂ ಮೈ ಮುಟ್ಟಿದ್ದಿಲ್ಲಂತ. ಅದೆಲ್ಲಾ ಒಂದೂ ನನಗ ನೆನಪಿಲ್ಲ. ನಮ್ಮಪ್ಪ ಕಚ್ಚೆ ಹರುಕ, ಕುಂಟತಿದ್ದಾ. "ಬ್ಯಾಡರ ನಿಂಗೀನ್ನ ಹಿಡಿಯಾಕ ಹೋಗಿ ಕಾಲ ಮುರಕೊಂಡ ಕುಂತಿ" ಅಂತ ಅವ್ವ ಬಯ್ಯುತಿದ್ದಳು. ಒಟ್ಟಿನ್ಯಾಗ ತಾನು ಅಪ್ಪನಾಂಗ ಆಗಬಾರದು. ಹೆಣ್ಣಿನಿಂದ ದೂರ ಇರಬೇಕು. ಗಂಭೀರ ಆಗಬೇಕು ಅಂತ ಪ್ರಯತ್ನ ಮಾಡಿ ಆ ಗುಣಾ ಬೆಳೆಸಿಕೊಂಡಿದ್ದೆ. ನನ್ನ ಈ ಗುಣಕ್ಕ ಮಳ್ಳಾಗಿ ಎಷ್ಟೋ ಹುಡುಗೇರು ಮ್ಯಾಲೆ ಬಿದ್ದು ಮಾತಾಡಸತಿದ್ರು. ಅವರ ಜೊತಿಗೂ ಅಷ್ಟಕ್ಕಷ್ಟs ಇರತಿದ್ದೆ ನಾನು. ಅನ್ಯಾಯದ ವಿರುದ್ಧ ಸಿಡಿದೇಳೂ ಸ್ವಭಾವಾನೂ ಬೆಳಸಿಕೊಂಡಿದ್ದೆ. ಅದಕ್ಕ ಕಾರಣ ನನ್ನ ಜಾತಿ. ಮೇಲ್ಜಾತಿಯವರಿಂದ ಭಾಳ ಅವಮಾನ, ಮೋಸ, ಸಹಿಸಿದ್ದೆ. ಹಳ್ಳಿಯಿಂದ ಬಂದ ವಿದ್ಯಾರ್ಥಿಗಳ ಗುಂಪು ನನ್ನ ಬೆಂಬಲಕ್ಕ ಇತ್ತಂತ ನಾನೂ ಧೈರ್ಯ ಮಾಡಿ ಮುಂದ ನುಗ್ಗತಿದ್ದೆ.

ಬರಬರ್ತಾ ರೇಣೂನ ದೃಷ್ಟಿಯೊಳಗ ಹೀರೋ ಆಗಿದ್ದೆ. ಅಕಿ ಮಾತು ನಡತಿಯಿಂದ ನನ್ನ ಪ್ರೀತಿಸ್ತಾಳಂತ. ಗೊತ್ತಿದ್ರೂ ಇಲ್ದಾಂಗ ನಟಸತಿದ್ದೆ. ಆದರ ಆಕಿ ಭಾಳ ದಿಟ್ಟ ಹುಡುಗಿ. ತನ್ನ ಮನಸ್ಸಿಗೆ ಬಂದದ್ದು ಮಾಡೇ ಬಿಡುವಾಕಿ. ಎಲ್ಲಾ ಕಡೇನೂ ನನ್ನ ಮ್ಯಾಲೆ ಕಣ್ಣಿಟ್ಟು ತಿರುಗುವಾಕಿ. ನಾನೂ ಆಕಿನ್ನ ಪ್ರೀತಿಸ್ತೇನಿ ಅಂತನೂ ಹೇಳಿದ್ದಿಲ್ಲ. ಮದುವಿ ಆದರ ರೇಣುನ್ನ  ಆಗಬೇಕು ಅನ್ನೂ ವಿಚಾರಾನೂ ನನಗ ಇದ್ದಿದ್ದಿಲ್ಲಾ. ಅಕಿ ಇಲ್ಲದಿದ್ದರ ನನಗ ಜೀವನಾನ ಇಲ್ಲಾ, ಹತಾಶ ಆಗ್ತೇನಿ, ಹುಚ್ಚ ಆಗ್ತೇನಿ ಅನ್ನೂವಷ್ಟು ಪ್ರೀತಿನೂ ಇದ್ದಿದ್ದಿಲ್ಲ ಆಕಿ ಮ್ಯಾಲೆ. ನನ್ನ ಒಬ್ಬ ಗೆಳೆಯಾ ತೋರಿಸಿದ ಕನ್ಯಾನೂ ನೋಡಿ ಬಂದಿದ್ದೆ. ಆ ಹುಡುಗೀನ್ನ ಒಪ್ಪಿಕೋಬೇಕೂ ಅಂತನೂ ಮಾಡಿದ್ದೆ. ಆದರ ಬ್ಯಾರೆ ಏನೇನೋ ಕೆಲಸ ಇದ್ದು ಅಂತ ಸದ್ಯ ಮುಂದಕ ಹಾಕಿದ್ದೆ. ಈ ಸುದ್ದಿ ಅದ ಹ್ಯಾಂಗೋ ರೇಣೂಗ ಗೊತ್ತಾತು. ಸೀದಾ ರೂಮಿಗೇ ಬಂದಳು. ಕನ್ಯಾ ನೋಡಿದ್ದು ಖರೇ ಆದ್ರೂ ಬ್ಯಾರೆಯವರ ಜುಲುಮಿಗೆ ಹೋಗಿದ್ದೆ ಅಂದೆ. ನನ್ನ ಮಾತು ನಂಬಿ ಸುಮ್ಮನಾದಳು.

ಮೊದಲಿನ ರೂಮು ಬಿಟ್ಟು ಬ್ಯಾರೆ ಔಟ್‌ಹೌಸ್ ಬಾಡಿಗೆ ಹಿಡಿದಿದ್ದೆ. ರೇಣೂ ಬಂದಳು. ಮುಖಾ ಬಾಡಿತ್ತು. ಅಳೂದೊಂದs ಬಾಕಿ, ತಲೀ ತುಂಬ ಏನೇನೋ ತುಂಬಿಕೊಂಡ ಬಂದಿದ್ಲು. ಹಿಂದಿನ ರೂಮಿನ ಮಾಲಿಕರು ಹೇಳಿದ್ದು ಖರೇ ಏನು ಅಂತ ಕೇಳಿದ್ಲು. ಅದು ಭಾಳ ಮಹತ್ವದ  ಪ್ರಶ್ನೆ ಆಗಿತ್ತು ಆಕೀಗೆ. ಖರೇನ ಅಲ್ಲಿ ನಡೆದದ್ದು ಹೇಳಲಿಕ್ಕೆ ಬರೂಹಾಂಗ ಇದ್ದಿದ್ದಿಲ್ಲಾ. ಸಿಗರೇಟು, ಡ್ರಿಂಕ್ಸ್, ಪಾರ್ಟಿ ಅಂತ ಬರೂ ಸಂಬಳ ಸಾಲತಿದ್ದಿಲ್ಲ. ಆರು ತಿಂಗಳ ಬಾಡಿಗಿ ಬಾಕಿ ಉಳದಿತ್ತು. ಅದಕ್ಕೂ ಒಂದು ಉಪಾಯ ಹೂಡಿದ್ದೆ. ನಿಮ್ಮ ಮಗಳು ರಾತ್ರಿ ನನ್ನ ಖೋಲಿಗೆ ಬಂದಿದ್ಲು ಅಂತ ಸುಳ್ಳ ಹೇಳಿದೆ. ಮದುವಿ ಆಗದ ಹರೇದ ಮಗಳು ತಮ್ಮ ಮರ್ಯಾದಿ ಹೋದೀತು ಅಂತ ಹೆದರಿ ಇವತ್ತs ರೂಮು ಖಾಲಿ ಮಾಡು ಅಂದ್ರು. ಖುಷಿಯಿಂದ ಆರ ತಿಂಗಳ ಬಾಡಿಗಿ ಉಳಿಸಿಕೊಂಡ ಹೊರಗ ಬಂದಿದ್ದೆ. ನಾ ಏನು ಹೇಳಿದ್ರೂ ನಂಬುವಂಥಾ ಹುಚ್ಚ ಹುಡುಗೀ ಮುಂದ ಇದs ಕಥೀ ಕಟ್ಟಿ ಹೇಳಿದೆ. ನನ್ನ ಮಾತು ಕೇಳಿ ಖುಷಿಯಾಗಿ ಅಪ್ಪಿಕೊಂಡು ಮುತ್ತ ಕೊಟ್ಟ ಬಿಟ್ಲು ರೇಣು. ನನಗೂ ಹೊಸಾ ಅನುಭವಾ. ನಾನೂ ಮುಂದುವರಿದೆ. ಒಮ್ಮೆಲೆ ಏನಾತೋ ಚೀರಿಕೋತ ಹೊರಗ ಓಡಿಬಿಟ್ಲು ರೇಣು. ಇದು ಘಾತ ಆತು ಅಂದುಕೊಂಡು ರೂಮಿನೊಳಗs ಉಳದೆ.

ಮರುದಿನಾ ನಾಗೇಂದ್ರ ಮೇಷ್ಟ್ರು ರೇಣೂನ ಮ್ಯಾಲೆ ಬಲಾತ್ಕಾರ ಮಾಡಿದ್ರು ಅಂತನ ಸುದ್ದಿ ಆಗಿಬಿಟ್ಟಿತ್ತು. ನಾ ಏನು ಹೇಳಿದ್ರೂ ಯಾರೂ ನಂಬೂ ಪರಿಸ್ಥಿತಿ ಇದ್ದಿದ್ದಿಲ್ಲಾ. ರೇಣೂ ಹಳ್ಳೀಗೆ ಹೋಗಿಬಿಟ್ಟಿದ್ಲು. ಯಾರಿಗೂ ನಾನು ಸಮಜಾಯಿಷಿ ಕೊಡಲಿಕ್ಕೆ ಹೋಗಲಿಲ್ಲ. ಸುಮ್ಮನಿದ್ದುಬಿಟ್ಟೆ. ಪ್ರಿನ್ಸಿಪಾಲರು ಕರೆಸಿ ವಾರ್ನಿಂಗ್ ಕೊಟ್ಟರು. ಮಾಲಕರು ಮನೀ ಬಿಡಿಸಿದರು. ಎಲ್ಲಾ ಕಣ್ಣೂ ನನ್ನ ಮ್ಯಾಲೆ ಇದ್ದವು. ಎಲ್ಲಾ ಸಹಿಸಿದೆ, ನುಂಗಿಕೊಂಡೆ. ಮೊದಲಿನ ಗಾಂಭೀರ್ಯ ಕಳಕೊಳ್ಳಲಿಲ್ಲ. ಕ್ರಮೇಣ ಎಲ್ಲಾ ಮರತುಹೋದ್ರು.....

ಅದs ವರ್ಷ ರೇಣು ಮತ್ತ ಬಂದು ಭೆಟ್ಟಿಯಾದಳು. ತಪ್ಪಾತು ಅಂತ ಕಾಲು ಬಿದ್ನು. ಆಯ್ತು ಮದುವೀ ಮಾಡಿಕೊಂಡ್ವಿ. ಬಲಾತ್ಕಾರ ಮಾಡಿದ ಹುಡುಗೀಗೆ ಹೊಸಾ ಜೀವನಾ ಕೊಟ್ಟೆ ಅಂತ ಪ್ರಸಿದ್ಧ ಆದೆ. ಜೀವಕ್ಕಿಂತ ಹೆಚ್ಚು ಪ್ರೀತಿಸೋ ರೇಣೂ ಅದಾಳ. ಮಗಳು ಹುಟ್ಟ್ಯಾಳ. ಒಳ್ಳೆ ನೌಕರಿ ಅದ. ಪ್ರಸಿದ್ಧ ಲೇಖಕ ಆಗೀನಿ. ಎಲ್ಲಾರೂ ಪ್ರೀತಿಸ್ತಾರ, ಗೌರವ ಕೊಡ್ತಾರ. ಹೀಂಗs ನಮ್ಮ ಸಂಸಾರ ಸುಸೂತ್ರ ನಡದsದ.

ಹಾಂ. ರೇಣೂ ಬಂದಳ ಕಾಣ್ತದ. ಈಗ ಛಲೋ ಚಹಾ ಮಾಡಿ ಕೊಡ್ತಾಳ. ಬಾಟ್ಲಿನೂ ತರ್ತಾಳ....

***

■■

# ಚೊಕ್ಕ ಬಂಗಾರ

ಚಿಕ್ಕ ಚಿಕ್ಕ ಚೌಕು ಮನೆಗಳ ಕೆಂಪು ಪಗಡೆ ಕಾಯಿ ಪಟ್ಟಾ, ನಡುನಡುವೆ ಹಳದಿ ಮನೆಗಳು, ಎಂಟು ಪಕಳೆಯ ಗುಲಾಬಿ ಬಣ್ಣದ ನಾಲ್ಕು ಕಮಲಗಳು ಮೂಲೆಗೆ ಒಂದೊಂದು, ಸುತ್ತ ಸೀರೆ ಧಡಿಯ ಚೌಕಟ್ಟು, ಕಣ್ಣಲ್ಲಿ ಕಣ್ಣಿಟ್ಟು ಸಣ್ಣ ಎಳೆ ಹಾಕುತ್ತಿದ್ದಳು ನಾಗವ್ವ. ಓಣಿಯ ನಾಲ್ಕಾರು ಮಕ್ಕಳು ಸುತ್ತ ಕುಳಿತು ಅರಿವೆ ಗಂಟಿನಿಂದ ಚೂರು ಆರಿಸಿ, ತಾ ಮುಂದು ನಾ ಮುಂದು-ನಂದು, ಯಮ್ಮಾ ನಂದು ತೊಗೋರ - ದುಂಬಾಲು ಬಿದ್ದಿದ್ದರು. ಬೇವಿನಗಿಡದ ಅಂಗಳದ ಮನೆ, ಕಟ್ಟೆಯ ಮೇಲೆ ಜಮಖಾನೆ ಹಾಸಿ ಕುಳಿತ ಮುದುಕಿ- ಮಕ್ಕಳು, ಬಣ್ಣಬಣ್ಣದ ಕೌದಿ ಎಲ್ಲ ಆ ಹಾದಿಗೆ ಅಡ್ಡಾಡುವ ಜನರಿಗೆ ಸಾಮಾನ್ಯ ನೋಟ, ನಾಗವ್ವ ಕೌದಿ ಹೊಲಿಯುತ್ತಿಲ್ಲ ಅಂದರೆ ಒಳಗೆ ಕೆಲಸದಲ್ಲಿದ್ದಾಳೆ, ಇಲ್ಲಾ ಊರಿಗೆ ಹೋಗಿದ್ದಾಳೆ ಎಂದು ಅರ್ಥ.

ನೀರಿಗೆ ಹೋಗುತ್ತಿದ್ದ ಹುಡುಗಿಯರೆಲ್ಲ ಬಂದು ಬಂದು ಕೌದಿ ಸರಿಸಿ ನೋಡಿ 'ಅವ್ವ ಏನ ಛಂದ ಆಗ್ಯೆತಬೇ ಡಿಜೈನು' ಕಣ್ಣು ಅರಳಿಸುವರು. ಹಿಡಿದ ದಾರ ಮುಗದು ಚಿಂಪ್ ಗಣ್ ಮಾಡಿ ಬೇರೆ ದಾರ ಪೋಣಿಸಲು ಕಷ್ಟಪಡುವ ನಾಗವ್ವನ ಹತ್ತಿರ ಬಂದು ಸೂಜಿ ಪೋಣಿಸಿ ಕೊಡುವರು. ಚುರುಕು ಹುಡುಗಿಯರು, 'ಯಮ್ಮ, ಅವ್ವಗ ಹೇಳಿ ಬರ್ತೀನಿ ನಾನೂ. ಕಸೂತಿ ಕಲಿಸಿ ಕೊಡಬೇ' ಅನ್ನುವರು.

'ಲಲ್ತಾ, ರೊಟ್ಟಿ, ಅಡಿಗಿ ಕೆಲಸಾ, ಸಾರಿಸೂದು, ನೀರು ತರೂದು ಎಲ್ಲಾ ಮುಗಿಸಿ ಈಟೊತ್ತಿನ್ಯಾಗ ದಿನಾ ಕೌದಿ ಹೊಲೀತೀನಿ, ಕಸ್ತೂರಿ ಬ್ಯಾನಿಯಾಕಿ, ಕೆಲಸ ನೀಗೂದಿಲ್ಲಾ, ನಿನಗೂ ಗೊತ್ತ ಐತೆಲ್ಲಾ. ಚಂಜೀಗ ಬೇಕಾದಾಗ ಬಾ ಮುರಿಗಿ ಕಸೂತಿ, ಮೆಂತೆ ಕಸೂತಿ  ಏನ ಬೇಕ ಎಲ್ಲಾ ಹೇಳಿ ಕೊಡ್ತೀನಿ. ಬಾ" ಲಲಿತಾ ನಗುತ್ತ ಓಡಿ ಹೋದಳು.

ಊರಲ್ಲಿ ಯಾರಿಗೆ ಗೊತ್ತಿಲ್ಲ ನಾಗವ್ವನ ಸೊಸೆ ಕಸ್ತೂರಿಯ ಸುದ್ದಿ! ಕಡೇ ಹೆರಿಗೆಯಲ್ಲಿ ಕೂಸು ಸತ್ತು ತ್ರಾಸಾಗಿ ಆಪರೇಶನ್ ಆಗಿ ಎಷ್ಟೋ ವರ್ಷ ಆದರೂ ಕೆಲಸ ತಪ್ಪಿಸಿ ಬೇನೆಯ ಸೋಗು ಹಾಕುವ ಕಪ್ಪುರದ ಗೊಂಬೆ. ಗಂಡ ಶಾಲೆ ಕೆಲಸ ಮುಗಿಸಿ ಬಂದಾಗ ಅತ್ತಿತ್ತ ಓಡಾಡಿ, ತೂರಾಡಿ, ಮೇಲುಮೇಲಿನ ಕೆಲಸ ಮುಗಿಸಿ, ಉಂಡು ಮಲಗಿ, ಎದ್ದು ಸಂಜೆ ಟಿವಿ ನೋಡುತ್ತ ಕಾಲಕಳೆಯುವಳು. ಒಕ್ಕಲಿಗರ ಮನೆಯಲ್ಲಿ ಹುಟ್ಟಿ ಬೆಳೆದರೂ ತೆಳ್ಳಗೆ ಬೆಳ್ಳಗೆ ನಾಜೂಕಿನವಳು.

ಇಪ್ಪತ್ತು ವರ್ಷದ ಹಿಂದೆ ಕಸ್ತೂರಿ ಮನೆಗೆ ಬಂದಾಗ ಇಡೀ ಚಂದೂರಿನಲ್ಲೇ ಇಷ್ಟು ಚಂದದ ಸೊಸೆ ಯಾರಿಗೂ ಇಲ್ಲವೆಂದು ಜಂಭ ಪಟ್ಟಿದ್ದಳು ನಾಗವ್ವ. ಬರಬರುತ್ತ ಬಣ್ಣ ತಿಳಿದಿತ್ತು. ಆದರೆ ಈಗಲೂ ಅಷ್ಟೇ ಪ್ರೀತಿ. ಹಡೆದ ಮೂರು ಮಕ್ಕಳನ್ನು ಮಣ್ಣಿಗಿಟ್ಟ ರಿಣಗೇಡಿ. ಪಾಪ ಏನು ಮಾಡೀತು ಎನ್ನುವ ಕನಿಕರ. ವಂಶದ ಹೆಸರು ಉಳಿಸಲಿಕ್ಕೆ ಬೆಳೆದು ಕೈಗೆ ಬಂದ ನಾಗಭೂಷಣ- ನಾಗಣ್ಣ ಎಂದರೆ ಅವಳ ಜೀವನದ ಜೀವ. ಪಂಚಪ್ರಾಣ. ಅಂತಹ ಮೊಮ್ಮಗನನ್ನು ಹೆತ್ತು ಕೊಟ್ಟ ಸೊಸೆಯ ಬಾರಾಖೂನ್ ಮಾಫ್.

'ಕೆಲಸ ಏನು ಮಹಾ, ಕೈಕಾಲು ಗಟ್ಟಿ ಇರೂತನಕಾ ದುಡೀತೀನಿ. ನಿಮ್ಮ ಮನೀಗ ಸೊಸಿ ಆಗಿ ಬಂದಾಳಂದರ ನಮ್ಮಾಕೀನೆ. ಯಾವ ಮನುಷ್ಯಾ ತೆಪ್ಪ ಮಾಡೂದಿಲ್ಲ. ಜೀವಾ ಇರೂತನಕಾ ಆಕೀ ಜೋಡಿ ಇರಬೇಕಂದರ ಸಹನ ಮಾಡಿಕೋಬೇಕು. ಹೊಟ್ಟ್ಯಾಗ ಹಾಕೋಬೇಕು' ಅನ್ನುವಳು ನಾಗವ್ವ ಸೊಸೆಯನ್ನು ಆಡಿಕೊಂಡವರೊಡನೆ, ಅವರ ಬಾಯಿ ತಾನೇ ತೆಪ್ಪಗಾಗುವುದು. ಅವಳ ತತ್ತ್ವಜ್ಞಾನಕ್ಕೆ ತಲೆದೂಗುವವರೇ ಬಹಳಷ್ಟು ಜನ. ನಾಗವ್ವ ಅಂದರೆ ನಾಲ್ಕು ವರ್ಷದ ಮಗುವಿನಿಂದ ಹಿಡಿದು ಮುಪ್ಪಾನ ಮುದುಕರ ವರೆಗೆ ಎಲ್ಲರಿಗೂ ಪ್ರೀತಿ.

'ಯಮ್ಮಾ ಟಪಾಲ್ ಬಂತೂ ಟಪಾಲ್' ಗಣೂ ಓಡಿ ಬಂದು ಪತ್ರ ಉಡಿಯಲ್ಲಿಟ್ಟ. ಮುಖದ ಹತ್ತಿರ ತಂದು ತಿರುಗಿಸಿ ತಿರುಗಿಸಿ ನೋಡಿದಳು. 'ನಾಗಣ್ಣಂದೇ ಇರಬೇಕು. ಅಕ್ಷರ ಹಾಂಗs ಅದಾವ. ಪಾರೀ ಒಳಗ ಕಸ್ತೂರೆಕ್ಕಗ ಕೊಟ್ಟ ಬಾ ಓದಿ ಹೇಳತಾಳ.' ಕುಣಿಯುತ್ತಿದ್ದ ಮನಸ್ಸು ಹತ್ತಿಕ್ಕಿ ಕಣ್ಣು ಕಿವಿ ಬಾಗಿಲಿನತ್ತ ನೆಟ್ಟಳು.

ಅಂತೂ ಅರಳಿದ ಮುಖದ ಕಸ್ತೂರಿ ಬಂದಳು ಹೊರಗೆ. "ಯತ್ತೀ, ಭೂಷಣ ಪತ್ರಾ ಬರದಾನ, ಆರ ತಿಂಗಳ ಪರೀಕ್ಷೆ ಮುಗಿಸಿ ಇನ್ನೊಂದೆಂಟು ದಿನಕ್ಕೆ ಊರಿಗೆ ಬರತಾನಂತ. ಅಮ್ಮ ಹ್ಯಾಂಗದಳಾಂತ ಕೇಳ್ಯಾನ."

'ಬರ್‍ತಾನs ಬೇಶಾತು. ಅಂವಗ ಗಾರಿಗಿ ಅಂದರ ಜೀಂವಾ. ಲಗೂನ ಸಾಮಾನ ತರಸು, ಮಾಡಿಬಿಡ್ತೀನಿ.' ಮೊಮ್ಮಗ ಬಂದೇ ಬಿಟ್ಟನೇನೋ ಎನ್ನುವಂತೆ ತಾರಾಡಿದ ಅತ್ತೆಯನ್ನು ನೋಡಿ ನಗುತ್ತ ಒಳನಡೆದಳು ಕಸ್ತೂರಿ.

ದೀಪ ಹಚ್ಚಿ ತಾಸೊತ್ತ ಕಳೆದ ಮೇಲೆ ಮನೆಗೆ ಬಂದ ಕಾಶಪ್ಪ ಹೇಳಿದ. 'ಯವ್ವಾ, ಇವತ್ತ ಪಂಚಾಯಿತಿ ಮೀಟಿಂಗ್ ಇತ್ತು. ನಮ್ಮೂರ ಹೆಣಮಕ್ಕಳು ನೀರು ಹೊತ್ತ ಹೊತ್ತ ಸಾಯಾಕ ಹತ್ಯಾರು. ಅದರ ವ್ಯವಸ್ಥಾ ಮಾಡಾಕಬೇಕ್ರಿ ಅಧ್ಯಕ್ಷರ. ಇಲ್ಲಾಂದರ ಮುಂದಿನ ಚುನಾವಣೆಯೊಳಗ ನಮಗ ಈ ಮಂದಿ ಹೋಟ ಕೊಡೂದಿಲ್ಲ, ಅಂತ ನಾ ಜಗಳಾಡಿದೆ. ನಾ ಮಾತು ಆಡಿದ ಮ್ಯಾಲೆ ಬನ್ನೂರ ಬಸ್ಯಾ ಜಗಳಾ ತಗದಾ - 'ನಮ್ಗೂ ನೀರ ಕೊಡಸ್ರಿ. ನಮ್ಮ ಹೆಂಗಸರ' ಹರದಾರಿ ನಡದ ನೀರ ಹೊರತಾರ. ದನಕ್ಕ, ಕುಡ್ಯಾಕ ಸುದ್ದಾ ನೀರಿಲ್ಲಾ' ಅಂತ.

'ಶಿವಲಿಂಗಪ್ಪ ಏನಂದ ?'

'ನಮ್ಗೂ ಎಲ್ಲ ಗೊತ್ತ ಅದ ಅಪಾ. ಎಲ್ಲಾ ಹಳ್ಳೀದೂ ಇದs ಹಣೇಬರಾ. ಆದರ ಇದಕ್ಕೆಲ್ಲಾ ಬರೇ ಸರಕಾರಾನ ನಂಬಿ ಕೂಡ್ರಬಾರದು. ಆದಷ್ಟು ಪ್ರಯತ್ನಾ ಮಾಡೂಣ. ನಾವೂ ಊರಾಗ ಅಡ್ಡ್ಯಾಡಿ ಪಟ್ಟೀ ಹಾಕಿ ರೊಕ್ಕಾ ಕೂಡಿಸಿ ಕೊಟ್ರ ಸರಕಾರದ ಸಹಾಯದಿಂದ ಎತ್ತರಂದು ದೊಡ್ಡ ಟ್ಯಾಂಕ ಕಟ್ಟಿಸಿ ನೀರು ಏರಿಸಿ ನಳಾ ಹಾಕಸಾಕ ಬರತೈತಿ' ಅಂದರು.

'ಹೂಂ ಪಟ್ಟೀ ಕೂಡಸದ ಏನ ಮಾಡ್ಯಾರು ಶಿವಲಿಂಗಪ್ಪನೋರು, ಅಧ್ಯಕ್ಷರು.'

ಮುಖಂಡರಾಗಿ ದೇವಸ್ಥಾನಕ್ಕೆ ಪಟ್ಟಿ ಕೂಡಿಸಿದಾಗ ಅವರ ಹೇಣ್ತಿ ದಾಕ್ಷಾಯಿಣಿ ಕೊಳ್ಳಾಗ ಮೋಹನಮಾಳ ಮಾಡಿಸಿದ್ರು. ಗಂಡ ಈಗ ಟ್ಯಾಂಕ ಕಟ್ಟಿಸಿದರ ಪಾಟ್ಲಿ ಮಾಡಸ್ತಾಳೋ ಏನೋ ಹೇಣ್ತಿ. ನೀವೂ ಅದೀರಿ ಪಂಚಾಯತಿ ಸದಸ್ಯರಂತ, ನನಗ ಏನ ಮಾಡಿಸಿ ಕೊಟ್ಟೀರಿ?'

ಗಂಡನ ಮುಂದೆ ಗಂಗಾಳ ಇಡುತ್ತ ಕೊಂಕು ಮಾತಾಡಿದ ಸೊಸೆಯ ಮಾತಿಗೆ ನಕ್ಕಳು ನಾಗವ್ವ. ಮಗ ಹೊಸದಾಗಿ ಸದಸ್ಯನಾದಾಗ ಗುಡಿಗೆ ಹೋಗುವ ದಾರಿಯಲ್ಲಿ ಮರೆಗೆ ನಿಂತು ಮಗ ಕುರ್ಚಿಯ ಮೇಲೆ ಕುಳಿತು ಊರ ಹಿರಿಯರ ಜೊತೆ ಮಾತಾಡುವುದನ್ನು ನೋಡಿ ಉಬ್ಬಿ ಬಂದಿದ್ದಳು. ಇದನ್ನೆಲ್ಲ ಕಾಣದ ಗಂಡನನ್ನು ನೆನೆಸಿ ಕಣ್ಣೀರು ಮಿಡಿದಿದ್ದಳು.

'ಯವ್ವಾ ಬೆಳಗಾಂವಿ ದೊಡ್ಡವ್ವಗ ಜಡ್ಡು ಜೋರಾಗಿ ನಿನ್ನ ನೋಡಬೇಕಂತ ಹೇಳಿ ಕಳಿಸ್ಯಾಳ. ನಿನ್ನ ಭಾಳ ನೆನೆಸತಾಳಂತ. ಹೋಗಿ ಬಾರಲ್ಲ' ರೊಟ್ಟಿ ಬಡಿಯುತ್ತಿದ್ದ ಅವ್ವನಿಗೆ ಹೇಳಿದ ಕಾಶಪ್ಪ.

'ತಿಂಗಳ ಹಿಂದ ದವಾಖಾನ್ಯಾಗ ಹಾಕಿದಾಗ ಹೋಗಿದ್ನೆಲ್ಲ, ನಾ ಇನ್ನೇನ ಉಳಿಯೂದಿಲ್ಲ ಅಂತ ಅತ್ಲಪಾ. ಆತು, ಮಾಡೂ ಪ್ರಯತ್ನಾ ಮಾಡ್ಯಾರ ಡಾಕ್ಟರು. ಮುಂದಿಂದು ಅವನಿಚ್ಛಾ ಅಂದೆ. ಆಕೀನ ಸಾಯೂದರಾಗ ನೋಡಬೇಕಂತ ಜೀವ ಹರೀತೈತಿ, ನಾಳೇ ಮುಂಜಾನಿ ಬಸ್ಸಿಗೆ ಹೋಗಲ್ಯಾ?'

'ನೀವೂ ಮಲ್ಲವ್ವತ್ತಿ, ಚಿಗದೊಡ್ಡವ್ವನ ಮಕ್ಕಳಾದ್ರೂ ಇಬ್ಬರಿಗೂ ಭಾಳ ಜೀಂವ. ಕೂಡೇ ಆಡಿ ಬೆಳೆದವರಂತ. ಇಷ್ಟ ನೆನಸತಾರ ಅಂದರ ಹೋಗಿ ಬಾರ·ಯತ್ತೀ.'

ಕಾಶಪ್ಪ ತಂದು ಕೊಟ್ಟ ಹಣ್ಣು, ಬಿಸ್ಕೀಟಿನ ಪ್ಯಾಕ್, ತನ್ನ ಸೀರೆಯ ಚೀಲದಲ್ಲಿ ಹಾಕಿ ಚಿಕ್ಕ ಮೊಮ್ಮಗಳು ಶೀಲಾನೊಡನೆ ಬಸ್‌ಸ್ಟ್ಯಾಂಡಿಗೆ ಹೋರಟ ಅಮ್ಮನ ಬೆನ್ನು ಹತ್ತಿದ ಶಿವು.

'ಶಿವೂ, ನಾನು ಊರಿಗೆ ಹೋಗಿ ಬರೂತನಕಾ ಅತ್ತಿ ಕೂಡ ಜಗಳಾಡಬ್ಯಾಡಾ. ಅಕೀ ಕೈಯಾಗಿನ ಕೆಲಸಾ ಮಾಡಪ್ಪ. ಶಾಣ್ಯಾ ಆಗಿರು. ಆದಟ್ಟು ನಿಮ್ಮ ಮಾವನ ಜೊತೀಗೆ ಉಣ್ಣಾಕ ಕುಂದ್ರು. 'ನಾದಿನಿಯ ಮಕ್ಕಳಿಗೆ ಹೊಟ್ಟೆ ತುಂಬ ಈಟ ಹಾಕದಷ್ಟು, ಸಣ್ಣಮನಸ್ಸು ಕಸ್ತೂರಿಗೆ.' ಯಮ್ಮಾ ನಾಳೆ ಸಂಜೀಕ ಬರ್ತೀಯೇನಬೇ' ಕಣ್ಣು ತಿಕ್ಕುತ್ತ ಕೇಳಿದ ಶಿವುನನ್ನು ನೋಡಿ ನಾಗವ್ವನ ಕರುಳು ಕಿವುಚಿತು. ಪರದೇಶಿ ಮಕ್ಕಳು. ಕುಪ್ಪಸಕ್ಕೆ ಕೈಹಾಕಿ ಚೀಲ ಬಿಚ್ಚಿ ಐದರ ನೋಟು ತೆಗೆದು ಅವನ ಕೈಗಿಟ್ಟಳು.

'ದೊಡ್ಡಮ್ಮ ಹ್ಯಾಂಗದಾಳೋ ಗೊತ್ತಿಲ್ಲಪ್ಪ. ನಾಕು ದಿನಾ ತಡಾ ಆದ್ರೂ ಆದೀತು. ಅಳಬ್ಯಾಡ. ನಿನಗ ಹಸಿವ್ಯಾದಾಗ ಏನರೆ ತೊಗೊಂಡ ತಿನ್ನು. ಗಾಡಿ ಹಾಸಿಲ ಬಿಟ್ಟರ ನನ್ನ ಕೈಯಾಗೂ ಹೆಚ್ಚ ರೊಕ್ಕ ಇಲ್ಲ. ನನ್ನಕೂಸ, ಲಗೂನ ಬರ್ತೀನಿ. ಹುಷಾರಾಗಿರು' ಅವನ ತಲೆ ಸವರಿ ಬಸ್ ಹತ್ತಿದಳು ಶೀಲಾನೊಡನೆ.

***

ಕಣ್ಣೀರು ತುಂಬಿದ್ದ ಶಿವೂನ ನೆನಪಾಗಿ ಸಂಕಟ ಪಟ್ಟಳು ನಾಗವ್ವ. ಗಂಡ ಸತ್ತ ದುಃಖ ಮರೆಯುವ ಮೊದಲೇ ಲೋಕಾಪುರದಿಂದ ಆಳು ಬಂದು ಅಳಿಯ ಗಂಗಣ್ಣ ಲೂನಾ ಟ್ರಕ್ ಆಕ್ಸಿಡೆಂಟ್‌ನಲ್ಲಿ ಸತ್ತಿದ್ದ. ಗೌರಿಯ ದುಃಖ ಹೇಳಲಾಸಲ್ಲ. ತನ್ನ ತೆಕ್ಕಿ ಬಿದ್ದು 'ನಾನೂ ಸಾಯ್ತೀನಿ ಯವ್ವಾಃ, ನಡನೀರಾಗ ಕೈ ಬಿಟ್ಟ ಹ್ವಾದಾ ನನ ಗಂಡ, ಮುಳುಗಿ ಹೋತ ನನ ಸಂಸಾರ. ಈ ಮೂರ ಕಂದವ್ವಗೋಳ್ನ ಕಟಗೊಂಡ ಹ್ಯಾಂಗ ಬದಕಲಿ' ಎಂದು ಅಳುತ್ತಿದ್ದಾಗ ತನ್ನ ಎದೆಯೂ ಒಡೆದಿತ್ತು. ಏನು ಮಾಡಬೇಕೆಂದು ತಿಳಿಯದೆ ತಾನೂ ಅಳುತ್ತ 'ಸತ್ತವರ ಕೂಡ ಯಾರೂ ಹೋಗುದಿಲ್ಲಬೇ ಗೌರಿ. ಮಕ್ಕಳ್ನ ನೋಡಾಕ ನೀ ಇರಬೇಕವ್ವ. ಆ ಸ್ವಾಮಿ ಎಲ್ಲಾ ನೋಡತಿರತಾನ. ಅವನ ಮ್ಯಾಲ ನಂಬಿಕೀ ಇಡು' ಎಂದಾಗ,

' ಆ ಸ್ವಾಮಿ ನನಗೇನ ಛೋಲೋ ಮಾಡ್ಯಾನ ಹೇಳ. ನನ ಗಂಡ ಇಷ್ಟ ಲಗೂ ಯಾಕ ಸತ್ತ. ನಾವ ಏನ ಕಮ್ಮಿ ಮಾಡಿದ್ವಿ ಅವನಿಗೆ. ದಿನಾ ಪೂಜಿಸಿ ಕಾಯಿ, ಕರ್ಪುರಾ ಎಲ್ಲಾ ಮಾಡತಿದ್ವಿ. ನಮಗೇನಾತ. ನನ ಮಕ್ಕಳು ಭಿಕಾರಿ ಆದ್ರು.' ತನ್ನ ಸಂಕಟದಲ್ಲಿ ಗೋಳಾಡುತ್ತಿದ್ದ ಗೌರಿಯನ್ನು ಕೊನೆಗೆ ಕಾಶಪ್ಪ ಸಮಾಧಾನ ಮಾಡಿದ್ದ.

'ತಂಗೆವ್ವ, ಈಗ ದಿನಾ ಆದ ಕೂಡಲೆ ಚಂದೂರಿಗೆ ನಡಿ. ಈ ಮನೀ ಬಾಡಿಗೀ ಕೊಡೂಣು, ಅಂಗಡಿ ಮುಚ್ಚಿ ಬ್ಯಾಂಕ್ ಸಾಲಾ ತೀರಸೂಣು' ಅಂದಿದ್ದ. ಊರಿಗೆ ಬಂದ ತಿಂಗಳಲ್ಲಿಯೇ ಕಸ್ತೂರಿಯ ಹುಬ್ಬುಗಂಟು, ಕೊಂಕುಮಾತಿಗೆ ಬೇಸತ್ತ ಗೌರಿ ತಾಯಿ, ಅಣ್ಣನೊಡನೆ ಮತ್ತೊಂದು ಹಂಚಿಕೆ ಹಾಕಿದ್ದಳು.

'ಯಣ್ಣಾ ಇರಭದ್ರನ ಸಾಲಿ ಮುಂದಿನ ವರ್ಷ ಮುಗೀತೈತಿ. ಹತ್ತನೇ ಯತ್ತಾ ಪಾಸಾದರ ಅಂವಾ ಅಂಗಡಿ ನೋಡಿಕೊಳ್ಳಿ. ಶಿವೂ ಸಾಲೀ ಕಲೀಲಿ, ಅಂವಾ ಖಾಲಿ ಆಗೂತನಕಾ ಅಂಗಡ್ಯಾಗ ನಾನಃ ಕುಂದ್ರತೇನಿ. ಒಮ್ಮೆ ಮುಚ್ಚಿದ ಮ್ಯಾಲ ಮತ್ತ ತೆರಿಯೂದ ಕಷ್ಟ. ಆದದ್ದ ಆಗಲಿ. ಈಟ ದಿನಾ ಅಡಿಗಿ ಮಾಡೂದಟ ಕೆಲಸ ಇತ್ತು ನನಗ, ಇನ್ನ ಇದೊಂದ ಆಗಲಿ, ಮಗಳಿಗೆ ನಾಲ್ಕು ಎತ್ತೆ ಸಾಲೀ ಕಲಿಸಿದ್ದೂ ಸಾರ್ಥಕ ಆಯ್ತು; ಲಗೂನ ತಿಳಿವಳಿಕಿ ಬಂತು.'

'ಆಗಲಿ ಗೌರವ್ವ, ಅವ್ವ, ನಾನು ಬಂದು ಎಲ್ಲಾ ವ್ಯವಸ್ಥಾ ಮಾಡಿಕೊಟ್ಟ ಬರತೇನಿ. ಆದರ ನೀ ನಂದೊಂದ ಮಾತ ಕೇಳ' ಕಾಶಪ್ಪನ ಮನಸ್ಸು ದೊಡ್ಡದು.

'ಈಗ ನೀ ಹೇಳಿದಾಂಗ ಈರಣ್ಣನ ಸಾಲೀ ಕಲಿಸಿಕೋತ ಅಂಗಡೀ ನೋಡಿಕೋ. ತಿಂಗಳಿಗೊಮ್ಮೆ ಅಂಗಡೀ ಸಾಮಾನು ಈರಣ್ಣನ್ನ ಕರಕೊಂಡು ಬೆಳಗಾಂವಿಗೆ ಹೋಗಿ ನಾ ತಂದು ಕೊಡ್ತೀನಿ. ಸಣ್ಣಾಂವ ಅಂವಗೂ ತಿಳೀಬೇಕಲ್ಲ. ಆದರ ಶಿವ್ಯಾ, ಶೀಲಾನ್ನ ಇಲ್ಲೇ ಬಿಟ್ಟ ಹೋಗು. ನಮಗೂ ಮನ್ಯಾಗ ಸಣ್ಣ ಹುಡುಗೂರಿಲ್ಲ. ಅವ್ವ ನೋಡಿಕೊಂತಾಳ. ಇನ್ನೊಂದೆರಡು ವರ್ಷ ಬಿಟ್ಟು ಕರಕೊಂಡ ಹೋಗು' ಅವನ ಮಾತು ತಾಯಿ ಮಗಳಿಗೆ ಸರಿ ಎನ್ನಿಸಿದರೂ ಕಸ್ತೂರಿ ಮೂಗು ಮುರಿಯದೆ ಇರಲಿಲ್ಲ. ಮಕ್ಕಳನ್ನು ಬಿಟ್ಟು ಬಿಡಲಾರದೆ ಹೋಗಿದ್ದಳು ಗೌರಿ ಲೋಕಾಪುರಕ್ಕೆ. ಅವಳ ನಸೀಬು ಕೆಟ್ಟದು.

ಮೊಮ್ಮಕ್ಕಳಾದರೂ ಕಲಿತು ಜಾಣರಾಗಲಿ ಎಂದು ನಾಗವ್ವನ ಮನಸ್ಸು.

ಒಂದೇ ಮನೆಯಲ್ಲಿ ಅಲ್ಲದಿದ್ದರೂ ಒಂದೇ ಊರಲ್ಲಿ ಹುಟ್ಟಿ ಬೆಳೆದು ದೊಡ್ಡವರಾದ ತನ್ನ, ಮಲ್ಲಕ್ಕನ ನಸೀಬು ಹೇಗೆ ಬೇರೆ ಬೇರೆಯಾಯ್ತಲ್ಲ. ಎಲ್ಲ ಶ್ರೀಮಂತಿಕೆ ಇದ್ದ ಬೆಳಗಾಂವಿ ಪಾಟೀಲರ ಮನೆ ಸೊಸೆಯಾಗುವ ಯೋಗ ಅವಳಿಗಿತ್ತು. ಚಂದೂರಿನಲ್ಲಿ ಹತ್ತಿಕರೆ ಹೊಲದಲ್ಲಿ ದುಡಿದು ತಿನ್ನುಣ್ಣುವ ಮನೆಗೆ ತಾನು ಬಿದ್ದೆ. ಕೂತು ಉಣ್ಣುವ ಭಾಗ್ಯ ಇಲ್ಲದಿದ್ದರೂ ಪ್ರೀತಿಗೇನೂ ಕಡಿಮೆ ಇದ್ದಿಲ್ಲ. ಗಂಡ, ಮಾವ, ಮೈದುನರು ಎಲ್ಲಾ ಒಳ್ಳೆಯವರೇ. ಅತ್ತೆ ಮನೆಗೆ ಬಂದ ಮೇಲೆಯೇ ತಾನು ಹೊಲಗೆಲಸ, ಮಾಡಲು ಕಲಿತದ್ದು. ಬೆಳಗಿನಿಂದ ರಾತ್ರಿವರೆಗೆ ಮೈಮುರಿದು ದುಡಿದ ಮೇಲೆ ಮಾದೇವನ ತೋಳಿನಲ್ಲಿ ದಣಿವೆಲ್ಲಾ ಮರೆತೇ ಹೋಗುತ್ತಿತ್ತು.

ಈಗಲೂ ಗಂಡನ ನೆನಪಾಗಿ ಕಣ್ಣು ತುಂಬಿ ಬಂದು ಸೆರಗು ಒತ್ತಿದಳು ನಾಗವ್ವ. ಮಗ್ಗುಲ ಕುಳಿತವಳು 'ಕಣ್ಣಾಗ ಕಸಾ ಬಿತ್ತೇನಬೇ, ಆ ಕಿಡಿಕಿ ಗಾಳಿ ಜೋರ ಐತಿ ಮುಚ್ಚು ಅದನ್ನ' ಎಂದು ಕಳಕಳಿಯಿಂದ ಸಲಹೆ ಮಾಡಿದಳು. ಅವಳ ಮಾತಿನತ್ತ ಲಕ್ಷ್ಯಕೊಡದೆ ಸುಮ್ಮನೆ ಗೋಣು ಹಾಕಿ ಕಣ್ಮುಚ್ಚಿ ಕುಳಿತಳು.

ಕಾಶೀನಾಥ ಮುಲ್ಕಿ ಪರೀಕ್ಷೆ ಪಾಸಾಗಿ ಟ್ರೇನಿಂಗ್ ಓದಲು ಹುಬ್ಬಳ್ಳಿಗೆ ಹೋಗಿದ್ದ. ಗೌರಿ ಚೊಚ್ಚಲು ಮಗು ಹಡೆದಿದ್ದಳು. ಕೆಲಸ ಕೈಲಾಗದೆ ಆಗಾಗ ನರಳುತ್ತ ಮಲಗುತ್ತಿದ್ದ ಮಹದೇವಪ್ಪ ಹುಬ್ಬಳ್ಳಿಗೆ ಹೋಗಿ ತೋರಿಸೋಣ ಎಂದು ಎಷ್ಟೋ ಸಲ ಹೇಳಿದರೂ ಅದೇ ಮಾತಿಗೆ ಬೆನ್ನು ಹತ್ತಲು ಇಬ್ಬರ ಕೈಗೂ ಬಿಡುವಿದ್ದಿಲ್ಲ. ಊರಲ್ಲಿಯೇ ಗುಳಿಗೆ ಔಷಧ ತಂದು ನುಂಗುತ್ತಿದ್ದ. ಹೊಲದಲ್ಲಿ ಕಾಲಿಗೆ ಬಿದ್ದ ಗುದ್ದಲಿ ಪೆಟ್ಟು ನೆವ ಆಗಿ ಗಾಯ ಮಾಯಲಿಲ್ಲ. ಮನೆಯ ಉಪಚಾರಕ್ಕೆ ಮಣಿಯದ ಮೇಲೆ ಹುಬ್ಬಳ್ಳಿಗೆ ಒಯ್ದಳು. ಗಂಡನಿಗೆ ಸಕ್ಕರೆ ಜಡ್ಡು ಹೆಚ್ಚಾಗಿದೆ. ತಡ ಮಾಡಿದ್ದರಿಂದ ಕಾಲು ಕೊಳೀತಾ ಇದೆ. ಕಾಲನ್ನೇ ತೆಗೆಯಬೇಕೆಂದು ಡಾಕ್ಟರರು ಹೇಳಿದಾಗ ಅವನಿಗಿಂತ ಮೊದಲು ತಾನೇ ಅತ್ತಿದ್ದಳು. ಆ ಮಾತು ಕೇಳಿದವ ಸುಮ್ಮನಿದ್ದು 'ಏನೂ ಬ್ಯಾಡ ಚಂದೂರಿಗೇ ಹೋಗೂಣು' ಎಂದು ಹಟ ಹಿಡಿದ. ಬಂದವ ಹಾಸಿಗೆ ಹಿಡಿದು ಮಲಗಿದವ ಏಳಲೇ ಇಲ್ಲ. ತಿಂಗಳಲ್ಲೇ ಜೀವಾ ಬಿಟ್ಟ. ತಾನು ಪಾಪಿಷ್ಠ ಮೊದಲಃ ಜುಲುಮಿ ಮಾಡಿ ಹುಬ್ಬಳ್ಳಿಗೆ ಒಯ್ಯಲಿಲ್ಲ. ತಡಾ ಮಾಡಿದ್ದಕ್ಕ ಗಂಡ ಸತ್ತಾ. ನೆನಪಾದರ ಇನ್ನೂ ಜೀವ ಮರ ಮರ ಅಂದು ಗಂಡನ ಮರಣಕ್ಕ ತಾನಃ ಕಾರಣ ಅಂತ ಅನಸತೈತಿ.

ಗಂಡ ಸತ್ತರೂ ಮಕ್ಕಳು, ಮನೀ ನಡಿಯೂದಃ ಬಿಲ್ಲ. ಯಾವದ ನಿಲ್ಲತೈತಿ. ತನ್ನ ಅಪ್ಪ ಕೊಟ್ಟ ಬಂಗಾರ ಮಾರಿ ಮಗನ ಟ್ರೇನಿಂಗ್ ಮುಗಿಸಿದ್ದಳು. ಕಾಶಪ್ಪಗ ಚಂದೂರಾಗ ಮಾಸ್ತರಿಕಿ ಸಿಗಲಿಕ್ಕೆ ಸಾಲಾ ಮಾಡಿದ್ದಳು. ಆಮೇಲೆ ಮದುವೀನೂ ಮಾಡಿದಳು.

ಚೆಂದನ್ನ ಸೊಸೆ ಕಸ್ತೂರಿಯನ್ನು ನಡೆದರೆ ಕಾಲು ನೋಯುವದೋ ಕುಳಿತರೆ ಕೈ ನೋಯುವದೋ ಎನ್ನುವಂತೆ ನಡೆಸಿಕೊಂಡಿದ್ದಳು. ಚೊಚ್ಚಲು ಬಸಿರಿಯ ಉಪಚಾರವೂ ಹಾಗೆಯೇ. ಹಿಗ್ಗು ಬಂದ ಹಾಗೆಯೇ ಮಾಯವಾಯಿತು. ಮಗು ಸತ್ತು ಹುಟ್ಟಿತ್ತು. ಎರಡನೆಯದು ಹೆಣ್ಣು ಮಗು. ನಾಲ್ಕು ದಿನ ಎಲ್ಲರ ಕೈಯಲ್ಲಿ ಆಡಿ, ನಕ್ಕು ಇದ್ದಕ್ಕಿದ್ದ

ಹಾಗೆ ಎರಡು ದಿನ ಜ್ವರ ಬಂದು ಸತ್ತುಹೋಯಿತು. ಕೂತರೆ, ನಿಂತರೆ ಕೆಲಸ ಮಾಡುತ್ತಿದ್ದರೆ ಕಣ್ಣೀರು ಹರಿಯುತ್ತಿತ್ತು ನಾಗವ್ವನಿಗೆ. ಒಂದು ಕೂಸಾದರೂ ಉಳಿದೀತೆ ಈ ಮನೆಗೆ ಎನ್ನುವ ಚಿಂತೆಯಿಂದ ಸೋತು ಹೋಗಿದ್ದಳು. ಮಗನ ಧೈರ್ಯ ಒಂದಿಷ್ಟು ಆಸೆ ಉಳಿಸಿತ್ತು.

ಆಗ ಉಳಿಸಿದ ನಮ್ಮಪ್ಪ ನಾಗಪ್ಪ - 'ಯಪ್ಪಾ, ನಮ್ಮಪ್ಪ ಬೇಡಿದವರಿಗೆ ಎಲ್ಲಾ ಕೊಡತೀಯಂತ, ನಮಗೊಂದ ಕೂಸಿನ್ನ ಉಳಿಸಿಕೊಡಪ್ಪ. ನಮ್ಮನ್ನೆಲ್ಲಾ ಕಾಯುವನೂ ನೀನಽ ಕೊಲ್ಲುವವನೂ ನೀನಽ; ನಮ್ಮ ಮನೀ ದೀಪಾ ಉಳಸೋ, ಸಾಯೂತನಾ ನಿನ್ನ ಹಾಡಿ ಹರಸತೇನಿ. ನನ ಕೈ ಬಿಡಬ್ಯಾಡ. ನನಗ ಯಾರೂ ದಿಕ್ಕಿಲ್ಲ. ಪರದೇಶಿ ನಾನು. ನಿನ್ನ ಪಾದದಾಗ ಬಿದ್ದೇನಿ. ನನ್ನ ಮನೀ ದೀಪಾ ಆರಸಬ್ಯಾಡ. ಈ ಮುದಿಕೀನ್ನ ಬೇಕಾರ ಕರಕೋ. ಎಲ್ಲಾ ಅನುಭೋಗಿಸೇನಿ. ಇನ್ನ ಇದ್ದು ಏನು ಮಾಡುದೈತಿ. ಕೈ ಮುಗದು ಬೇಡಿಕೋತಿನಿ. ಇದೊಂದು ನಡೆಸಿಕೊಡಪ್ಪ. ನಾಗಪ್ಪಾ ಶಿವನ ಮಗಾ ನೀನೂ. ಅವನ ಹಂತೇಲಿ ಇರಾವ.'

ಶಿವಾ ಕಣ್ಣು ತೆರೆದ. ಕಸ್ತೂರಿ ಮತ್ತೆ ತುಂಬಿದ ಬಸಿರಿ. ಇವತ್ತೋ ನಾಳೆಯೋ ಹೆರಿಗೆ. ಪಡಸಾಲೆಯಲ್ಲಿ ಸೊಸೆಯ ಹತ್ತಿರವೇ ಮಲಗಿದ್ದ ತನಗೆ ಸರಿರಾತ್ರಿ ತಟ್ಟನೆ ಎಚ್ಚರವಾಗಿತ್ತು. ಕಣ್ಣು ತುಂಬ ಕತ್ತಲು. ಆಗಿನ್ನೂ ಲೈಟ ಇದ್ದಿದ್ದಿಲ್ಲ.

ಚಿಮಣಿ, ಕಡ್ಡಿ ಪೆಟ್ಟಿಗೆಗೆ ಕೈ ಚಾಚಿದಳು, ಸಿಗಲಿಲ್ಲ. ತೆರೆದ ಕಿಡಕಿಯಿಂದ ಮಸಕು ಮಸಕು ಬೆಳಕು ಕಂಡಿತು. ಸೊಸೆಗೆ ಎಚ್ಚರಾದೀತೆಂದು ಸಪ್ಪಳ ಮಾಡದೆ ನಡೆದು ಹಿತ್ತಿಲ ಬಾಗಿಲು ತೆಗೆದು ಹೋಗಿ ಕಾಲು ಮಡಿದಳು. ಎದ್ದು ಇನ್ನೇನು ಹೊಸ್ತಿಲ ಒಳಗೆ ಕಾಲು ಇಡಬೇಕೆನ್ನುವುದರಲ್ಲಿ ಸರಕ್ಕನೆ ಏನೋ ಸರಿದಂತಾಯಿತು. ಕಾಲ ಹತ್ತಿರ ಬೆಳ್ಳಗೆ ಉದ್ದಕ್ಕಿತ್ತು. ಹೆಜ್ಜೆ ಹಿಂದೆ ಮುಂದೆ ಸರಿಸದೆ ನಿಂತಲ್ಲೇ ನಿಂತಳು. ಎದೆ ಹಾರುತ್ತಿತ್ತು. 'ಕಾಶಪ್ಪ' ಅಂದಳು. ಹೆಂಡತಿಯ ಹೆರಿಗೆಯ ಕನವರಿಕೆಯಲ್ಲಿದ್ದ ಅವನೂ ಕೂಡಲೆ ಎಚ್ಚರಾಗಿ 'ಓ' ಅಂದ.

'ಬುಡ್ಡಿ ಚಿಮಣಿ ಹಚ್ಚಿಕೊಂಡ ಹಿತ್ತಲಕ ಬಾರ ಯಪ್ಪಾ.'

ಅವ್ವನ ಆರ್ತದನಿಗೆ ಹೆದರಿ ಬ್ಯಾಟರಿ ಬಿಟ್ಟುಕೊಂಡು ಧಾವಿಸಿ ಬಂದ. ರಟ್ಟೆಗಾತ್ರದ ಎರಡು ಮಾರುದ್ದ ಹಾವು ಸರಸರ ಒಳಬಂದಿತ್ತು.

'ಯವ್ವಾ ದೊಡ್ಡ ಹಾವು, ಹೊಸ್ತಿಲಾ ದಾಟಿ ಬಂತಬೇ, ಭೀಮಣ್ಣನ್ನ, ಹಾಲಣ್ಣನ್ನ ಒದರಲ್ಯಾ, ಹೊಡೀತಾರ' ಹೆದರಿದ್ದ.

ಅಷ್ಟರಲ್ಲಿ ತನ್ನ ಕಾಲು ನಡುಗುವುದು ನಿಂತಿತ್ತು. 'ಒಳಗಽ ಬಂದನ ಸ್ವಾಮಿ. ಆಯ್ತು ಅವನಿಚ್ಛಾ. ಮೊದಲ ಬ್ಯಾಟ್ರಿ ಹಿಡಿ. ನಮ್ಮಪ್ಪ ಎಲ್ಲಿ ಹೋಗ್ತಾನ ನೋಡೂಣು.' ಜಂತಿಯಲ್ಲಿ ಸರಿಸರಿದು ಮುಂದೆ ಹೋಗಿ ನಾಗೊಂದಿಗೆ ಹತ್ತಿ ಮಲಗಿ ಬಿಟ್ಟಿತ್ತು ಹಾವು. ಅದೂ ಕಸ್ತೂರಿ ಮಲಗಿದ ಜಾಗೆಯ ಮೇಲೆಯೇ. ಎದೆ ಗಟ್ಟಿ ಹಿಡಿದುಕೊಂಡಿದ್ದಳು ತಾನು. ಗಾಬರಿಯಾಗಿದ್ದ ಮಗನಿಗೆ:

'ಸುಮ್ಮಿರು, ಕಸ್ತೂರಿ ಎಚ್ಚರಾದಾಳು. ಜೋರ ನಿದ್ದಿ ಹತ್ತೈತಿ. ಆಕಿ ಮಲಗಲಿ, ನಾನು ಹರಕೀ ಹೊತ್ತು ಅಮಾವಾಸ್ಯೆಗೆ ನಡಕೊಂಡ್ನೆಲ್ಲಾ ಆ ಸ್ವಾಮೀನ ಬಂದಾನ. ಹೆದರಬ್ಯಾಡಾ. ನೀ ಇಲ್ಲೇ ಇರು. ನಾನು ಬಸವಣ್ಣಗ ತುಪ್ಪದ ದೀಪ ಹಚ್ಚಿಟ್ಟು ಬರತೀನಿ.' ಅಂದು, ಬೆಳತನಕ ಕಣ್ಣುಮುಚ್ಚಿ ಕೈಜೋಡಿಸಿ ಕಂಬಕ್ಕಾತು ಕುಳಿತೇ ಇದ್ದಳು ತಾನು. ಬೆಳಗು ಮುಂಜಾನೆ ನೋವು ಸುರುವಾಗಿ, ನರಳುತ್ತ ಕಸ್ತೂರಿ ಹೊರಳಾಡುತ್ತಿದ್ದಾಗ ಯಾರ ಕಣ್ಣಿಗೂ ಬೀಳದಂತೆ ಸ್ವಾಮಿ ಹೊರಟುಹೋಗಿದ್ದ. ನಾಗಭೂಷಣ ಹುಟ್ಟಿದ. ಆಮೇಲೆ ಹುಟ್ಟಿದ ಹೆಣ್ಣು ಮಗು ಹೊಟ್ಟೆಯಲ್ಲಿಯೇ ಸತ್ತು ಕಸ್ತೂರಿಯನ್ನುಳಿಸಲು ಆಪರೇಷನ್ ಮಾಡಿದ್ದರು.

ತೊಡೆಯ ಮೇಲೆ ಮಲಗಿದ್ದ ಶೀಲಾನ್ನ ಎಬ್ಬಿಸಿ ಬೆಳಗಾಂವಿ ಬಸ್ ಸ್ಟ್ಯಾಂಡಿನಲ್ಲಿಳಿದ ನಾಗವ್ವ ನಡೆದುಕೊಂಡೇ ಬಸವನಗಲ್ಲಿಗೆ ಹೊರಟಳು. ವಕೀಲನಾದ ಮೇಲೆ ಹಳೆಮನೆ ಕೆಡವಿ ದೊಡ್ಡ ಕಾಂಕ್ರೀಟು ಮನೆ ಕಟ್ಟಿದ್ದ ಮಂಜುನಾಥ.

ನಾಗವ್ವನನ್ನು ನೋಡಿ ಟಿವಿ ಮುಂದೆ ಕುಳಿತಿದ್ದ ಅಕ್ಕನ ಸೊಸೆ ಶಾರದಾ ಅವಳ ತಂಗಿ ಇಂದಿರಾ ಎದ್ದು ಬಂದರು. ಮಕ್ಕಳಿನ್ನೂ ಶಾಲೆಯಿಂದ ಬಂದಿರಲಿಲ್ಲ.

'ಬರ್‍ರಿ, ಬರ್‍ರೀ ನಾಗವ್ವತ್ತಿ, ಅತ್ತೆವ್ವ ನಿಮ್ದು ದಾರೀ ಕಾಯಾಕ ಹತ್ಯಾರ. ಕಣ್ಣು ತಗದಾಗೆಲ್ಲಾ ನಾಗೂ ಬಂದ್ಲೇನು ಅಂತಾರ' ಅಂದಳು ಶಾರದಾ.

'ಬಡಬಡಿಸಿದರೂ ನಿಮ್ಮದ ಸುದ್ದಿ. ಡಾಕ್ಟರರಂತೂ ಆಸೇ ಬಿಟ್ಟಾರ. ಅದಕ್ಕ ಹೇಳಿ ಕಳಿಸಿದ್ವಿ.' ಗಂಡನ್ನ, ಎರಡು ಮಕ್ಕಳನ್ನ ಕಟ್ಟಿಕೊಂಡು ಅಕ್ಕನ ಮನೆ ಸೇರಿದ ಇಂದಿರಾ ತನ್ನ ಮನೆಯೇ ಎನ್ನುವ ಹಾಗೆ ಮಾತನಾಡಿದಳು. ಹಳ್ಳೀ ಜನರನ್ನು ಕಂಡರೆ ಧಿಮಾಕಿನ ಮಾತು ಆಡುವ ಆ ಹುಡುಗಿಯನ್ನು ಕಂಡರೆ ನಾಗವ್ವನಿಗೂ ಅಷ್ಟಕ್ಕಷ್ಟೆ.

ಹಣ್ಣು, ಬಿಸ್ಕೀಟಿನ ಪ್ಯಾಕ್ ಡೈನಿಂಗ ಟೇಬಲ್ ಮೇಲಿಟ್ಟು ಕಾಲು ತೊಳೆದು ಅಕ್ಕನ ಕೋಣೆಗೆ ಹೋದಳು. ಮುದ್ದೆಯಾಗಿ ಮಲಗಿದ್ದ ಅಕ್ಕ ಕೂಸಿನಂತೆ ಕಂಡಳು. ಪಲ್ಲಂಗದ ಮೇಲೆ ಕುಳಿತು 'ಯಕ್ಕಾ, ಮಲ್ಲಕ್ಕಾ' ಎರಡು ಮೂರು ಸಲ ಕೂಗಿದಾಗ ಕಣ್ಣು ತೆರೆದಳು. ಸಾವಿನ ನೆರಳಿತ್ತು ಮುಖದಲ್ಲಿ. ಜೀವವಿಲ್ಲದ ಕಣ್ಣು.

ಎದ್ದು ಕಾಣುವ ಮೂಗು, ಪೆಚ್ಚು ಬಿದ್ದ ಗಲ್ಲ, ಒಣಗಿದ ತುಟಿ-ಅಕ್ಕ ಕೈ ಬಿಟ್ಟಿದ್ದಾಳೆ. ರಗ್ಗು ಸರಿಸಿ ಕಾಲು ಮೇಲೆ ಕೈ ಇಟ್ಟಾಗ ಪಾದ ತಣ್ಣಗಿದ್ದವು. ನಾಗವ್ವನ ಕಣ್ಣು ಹನಿಯಿತು. ಗುರುತು ಹತ್ತಿದವರಂತೆ ಕಣ್ಣು ಅರಳಿಸಿ ಪಿಸುದನಿಯಲ್ಲಿ 'ನಾಗೂ' ಅಂದಳು. ನಾಲಿಗೆ ತುಟಿ ಸವರಿತು. ತಕ್ಷಣ ನಾಗವ್ವ ಎದ್ದು ನೀರಿನ ತಂಬಿಗೆ ಹಣಿಕಿದಳು. ಅದರಲ್ಲೊಂದು ಇರುವೆ ಬಿದ್ದು ತೇಲಾಡುತ್ತಿತ್ತು. ಒಳಗೆ ಹೋಗಿ ಫಿಲ್ಟರ ನೀರಿಗಿಷ್ಟು ಗ್ಲೂಕೋಜ ಸಕ್ಕರೆ ಹಾಕಿ ತಂದು ಸಣ್ಣ ಚಮಚದಿಂದ ಮೆತ್ತಗೆ ಬಾಯಿ ತೆರೆಸಿ ಕುಡಿಸಿದಳು. ದೀರ್ಘವಾಗಿ ಉಸಿರು ಎಳೆದು ಮತ್ತೆ ಕಣ್ಣು ಮುಚ್ಚಿದಳು ಮಲ್ಲಕ್ಕ.

ನಾಗವ್ವ ಎದ್ದು ಸೆರಗು ಕಟ್ಟಿ ಮೊದಲು ಉಚ್ಚೆ ತುಂಬಿದ ಬುಟ್ಟಿ ಹಿತ್ತಲಿಗೆ ಒಯ್ದು ಚೆಲ್ಲಿ ತೊಳೆದು ತಂದಿಟ್ಟು ಅದರ ಮೇಲೊಂದು ಮುಚ್ಚಳ ಹಾಕಿದಳು. ಸುತ್ತ ಬಿದ್ದ ಹಣ್ಣಿನ ಸಿಪ್ಪೆ, ಗುಳಿಗೆಯ ಕಾಗದದ ಚೂರು ಕಸಕಡ್ಡಿ ಎಲ್ಲ ಗುಡಿಸಿ ಫಿನಾಯಿಲ್ ನೀರಿನಿಂದ ನೆಲ ಒರೆಸಿ, ಎರಡು ಊದುಬತ್ತಿ ಹಚ್ಚಿಟ್ಟಳು. ಶಾರದೆಯನ್ನು ಕೇಳಿ ಮಡಿ ಬೆಡ್‌ಶೀಟ ತಂದು ಅಕ್ಕನನ್ನು ಹಗುರಾಗಿ ಸರಿಸಿ ಹಾಸಿದಳು. ಚಹ ಕೊಡಲು ಬಂದ ಶಾರದಾ

'ಅತ್ತೆವ್ವ ಚಹಾ ಕುಡೀರಿ. ನೀವು ಬಂದಿರಿ ನನಗ ನಿಶ್ಚಿಂತಿ ಆತು. ಮನೀ, ಮಕ್ಕಳು, ಕೆಲಸಾ ಅಂತ ನನಗೂ ಅತ್ತೆವ್ವನ್ನ ಸೂಧಾರಸೋದು ಆಗತಿದ್ದಿಲ್ಲ. ಇನ್ನಷ್ಟ ದಿನಾ ದವಾಖಾನ್ಯಾಗ ಇಡೂಣು ಅಂದ್ರ ಇವರು ಕೇಳಬೇಕಲ್ಲ. ಸತ್ರ ಮನ್ಯಾಗ ಸಾಯ್ತೀನಿ ಅಂತ ಹಟಾ ಹಿಡದು ಬಂದಾರ' ಪಟ ಪಟ ಒದರಿ ಹೋದಳು.

ಆ ರಾತ್ರಿ ಕಳೆಯುವುದು ಕಷ್ಟ ಎಂದರು ಸಂಜೆ ಬಂದು ನೋಡಿದ ಡಾಕ್ಟರರು. ನಾಗವ್ವ ಒಬ್ಬಳೇ ಅಕ್ಕನ ಹತ್ತಿರವಿದ್ದಳು. ಅವಳ ಹಾಸಿಗೆಯ ಮೇಲೆಯೇ ಕುಳಿತು ತನ್ನ ತೊಡೆಯ ಮೇಲೆ ತಲೆ ಇರಿಸಿಕೊಂಡು ಗುಬ್ಬಿಯಂತೆ ಬಾಯಿಬಿಟ್ಟಾಗ ಒಂದು ಅರ್ಧ ಚಮಚೆ ನೀರು ಬಾಯಿಗೆ ಹನಿಸುತ್ತಿದ್ದಳು. ಒಂದೆರಡು ಸಲ ಮಂಜುನಾಥ ಬಂದು ನೋಡಿ ಹೋಗಿದ್ದ. ಚಿಗವ್ವ ಇದ್ದಾಳೆಂದು ಅವನಿಗೂ ಸ್ವಲ್ಪ ಸಮಾಧಾನ. ಸರಿರಾತ್ರಿಯಲ್ಲಿ ಅತ್ತಿತ್ತ ಹೊರಳಾಡುತ್ತ ಮಲ್ಲವ್ವ ತಲೆಯತ್ತ ಸನ್ನೆ ಮಾಡಿ ಬಾಗಿಲು ನೋಡಿದಳು. ನಾಗವ್ವ ಎದ್ದು ಬಾಗಿಲು ಚಿಲಕ ಹಾಕಿ ಬಂದಳು. ಮತ್ತೆ ಮತ್ತೆ ಮಲ್ಲಕ್ಕ ದಿಂಬು ನೋಡಿದಾಗ ನಾಗವ್ವ ಅವಳ ತಲೆಯ ಕೆಳಗಿನ ದಿಂಬು ತೆಗೆದಳು.

ಇಷ್ಟು ವರ್ಷದ ಹಿಂದಿನ, ಗಂಟು ಗಂಟಾದ, ಹಳೆಯ ಹೊಲಸು ದಿಂಬನ್ನು ನಾಗವ್ವ ನೋಡಿದ್ದಳು. ಹಿಂದಿನ ಇತಿಹಾಸವೂ ಚೆನ್ನಾಗಿ ಗೊತ್ತು. ಜಪ್ಪೋ ಎಂದರೂ ಯಾರಿಗೂ ಅದನ್ನು ಮುಟ್ಟಗೊಡುತ್ತಿರಲಿಲ್ಲ. ಹತ್ತಿ ತೆಗೆದು ಹೊಸದು ಹಾಕಿಸಿಕೋ ಎಂದರೂ ಕೇಳಿರಲಿಲ್ಲ. ಎಲ್ಲ ಕಾಲದಲ್ಲೂ ಅದು ಹತ್ತಿರ ಇರಬೇಕು. ದವಾಖಾನೆಯಲ್ಲಿಯೂ ಅದು ಇತ್ತು ಬಿಳಿಗವಸಣಿಕೆ ಹಾಕಿಕೊಂಡು. ಮೊಮ್ಮಕ್ಕಳು ಆಡಿಸ್ಯಾಡಿ ನಗುತ್ತಿದ್ದರು. ಅದರಲ್ಲಿ ಏನೋ ಇರಬೇಕೆನ್ನುವ ಸಂಶಯ ಈಗ ಬಂದಿತು ನಾಗವ್ವನಿಗೆ. ಹೊಲಿಗೆ ಬಿಚ್ಚಿ ಅದರಲ್ಲಿ ಕೈ ಹಾಕಿದವಳು ಒಂದು ಮುಷ್ಟಿಯಷ್ಟು ಪುಟ್ಟ ಗಂಟನ್ನು ತೆಗೆದಳು. ತಲೆಗೆ ಒತ್ತದಂತೆ ದಪ್ಪ ಹತ್ತಿಯ ಮಧ್ಯದಲ್ಲಿತ್ತು ಅದು. ಹೊಲಸಾದ ಅರಿವೆಯಲ್ಲಿ ಸರಿಗೆಯ ತುಂಡು! ಚೊಕ್ಕ ಬಂಗಾರದ್ದು, ಸುರುಳಿ ಸುತ್ತಿ ದುಂಡಗೆ ಆಗಿತ್ತು. ಆರು ತೊಲೆ ಎನ್ನುವಂತೆ ಬೆರಳು ತೋರಿಸಿದಳು. ಅವಳ ಬಾಯಿಯ ಹತ್ತಿರ ಕಿವಿ ಇಟ್ಟಾಗ 'ಸೂಸವ್ವಗ ಗಂಗವ್ವಗ' ಎನ್ನುವ ಅಸ್ಪಷ್ಟ ಮಾತು ಹೊರಬಂತು. ಯಾರಿಗೂ ತಿಳಿಯಬಾರದು ಅನ್ನುವಂತೆ ಸನ್ನೆ ಮಾಡಿದಳು. ನಾಗವ್ವನ ಕೈ ಹಿಡಿದುಕೊಂಡು ಕಣ್ಣುಮುಚ್ಚಿ ಮಲಗಿದಳು. ಇಷ್ಟು ಮಾತ್ರಕ್ಕೆ ಕಾದಿದ್ದಳೇನೋ ಎನ್ನುವಂತೆ ನಸುಕಿನಲ್ಲಿ ಜೀವ ಬಿಟ್ಟಳು.

ಸರಿಗೆ ತುಂಡು ನಾಗವ್ವನ ಬಾಳೆಗಂಟಿಗೆ ಸೇರಿತ್ತು. ಸೀರೆಯ ನಿರಿಗೆಗಳ ನಡುವೆ ಇಟ್ಟು ಚೆನ್ನಾಗಿ ಸುರುಳಿ ಸುತ್ತಿ ಬಾಳೆಗಂಟು ಮಾಡಿ ಸಿಗಿಸಿದ್ದಳು. ಭದ್ರವಾಗಿತ್ತು. ಎಲ್ಲರ ಕಣ್ಣುತಪ್ಪಿಸಿ ಇಟ್ಟುಕೊಂಡದ್ದೇ ಮನಸ್ಸಿಗೆ ಮೈಗೆ ಭಾರವಾಗಿತ್ತು ಅಷ್ಟೇ. ಯಾರ ಲಕ್ಷ್ಯಕ್ಕೂ ಬಾರದಂತೆ ಇಷ್ಟು ಬಂಗಾರ ಉಳಿಸಿಕೊಂಡು ಬಂದಿದ್ದ ಮಲ್ಲಕ್ಕನ ಜಾಣತನಕ್ಕೆ ತಲೆದೂಗಿದಳು. ಸರಿಗೆ ಮದುವೆಯಲ್ಲಿ ದೊಡ್ಡಪ್ಪ ಅವಳಿಗೆ ಮಾಡಿಸಿಕೊಟ್ಟಿದ್ದು ಕತ್ತರಿಸಿ ಮಗನಿಗಿಷ್ಟು ಕೊಟ್ಟಿದ್ದಾಳೆ. ಹೆಣ್ಣುಮಕ್ಕಳಿಗೂ ಅಷ್ಟು ಮುಟ್ಟಲಿ ಎನ್ನುವ ಆಸೆ ತಾಯಿಗೆ. ಮಗ ಸೊಸೆಯರಿಗೆ ಹೇಳಿದರೆ ಶಾರದಾ ಬಡಪೆಟ್ಟಿಗೆ ಒಪ್ಪುವವಳಲ್ಲ. ' ಸೂಸವ್ವ ಗಂಗವ್ವರಿಗೆ ಎಲ್ಲಾ ಮದುವೆಯಲ್ಲಿ ಕೊಟ್ಟು ಆಗಿದೆಯಲ್ಲ. ಈ ಬಂಗಾರ ಮನೆಯ ಮೊಮ್ಮಕ್ಕಳಿಗೆ ಇರಲಿ' ಎನ್ನುವವಳೇ ಆಸ್ತಿ ಎಲ್ಲ ಇದ್ದರೂ ಆಸೆಗೆ ಕಡಿಮೆಯಿಲ್ಲ.

ವಿಚಾರ ಮಾಡುತ್ತ ಮಾಡುತ್ತ ಮನಸ್ಸು ಮತ್ತೆ ಮತ್ತೆ ಅದೇ ಟೊಂಗೆಗೆ ಜಿಗಿಯುತ್ತದೆ. ಎಷ್ಟು ಹತ್ತಿಕ್ಕಬೇಕೆಂದರೂ ಕೇಳುವುದಿಲ್ಲ. ಮಲ್ಲಕ್ಕನ ಹತ್ತಿರ ಬಂಗಾರ ಇದ್ದದ್ದು ಯಾರಿಗೂ ಗೊತ್ತಿಲ್ಲ. ಅವಳು ತನಗೆ ಕೊಟ್ಟದ್ದೂ ಯಾರೂ ನೋಡಿಲ್ಲ. ಸೂಸಿ, ಗಂಗಿಯರೂ ಈ ಸುದ್ದಿ ಎತ್ತಿಲ್ಲ. ಬಂದು ಮೂರು ದಿನವಾದರೂ ಅವ್ವನನ್ನು ನೆನೆಸಿ ಎದಿ ಬಡಿದುಕೊಳ್ಳುತ್ತಾರೆಯೇ ಹೊರತು ಅವ್ವ ಏನಾದರೂ ಹೇಳಿದಳೇನು ಎಂದು ಕೂಡ ಕೇಳಿಲ್ಲ. ಅಕ್ಕ ಏನು ಹೊರಗಿನವಳೇ, ದೊಡ್ಡವ್ವನ ಮಗಳು. ತಂಗಿ ಎಂದು ಪ್ರೀತಿ ಅಂತಃಕರಣ ಹಂಚಿಕೊಟ್ಟಿದ್ದಾಳೆಯೇ ಹೊರತು ತನಗೆ ಬಂಗಾರ, ಬೆಳ್ಳಿ ಹೊರಿಸಿಲ್ಲ. ಸೂಸವ್ವ, ಗಂಗವ್ವರಿಗೇನೂ ಕಡಿಮೆಯಿಲ್ಲ. ಇದ್ದವರಿಗೇ ಮತ್ತಿಷ್ಟು ಯಾಕೆ ? ತಾನೇ ಇಟ್ಟುಕೊಂಡರೆ ನಾಳೆ ನಾಗಭೂಷಣನಿಗೆ ಇಂಜಿನಿಯರ ಓದಿಸಲಾದರೂ ಆದೀತು. ಯೋಚಿಸಿದಷ್ಟೂ ಹೆಚ್ಚು ಹೆಚ್ಚಾಗಿ ಅದೇ ಮಾತು ತಲೆಯಲ್ಲಿ ಸುಳಿಯುತ್ತಿತ್ತು. ತೆಗೆದಿಟ್ಟುಕೊಂಡರೆ ತಪ್ಪೇನು ?

ಗಣಾರಾಧನೆಗೆ ಬಂದ ಹೆಂಗಸರ ನಡುವಿನ ಗೇಣು ಜಾಗದಲ್ಲಿ ಹೊರಳಾಡುತ್ತಿದ್ದಳು ನಾಗವ್ವ. ಮನೆ ತುಂಬ ಮಂದಿ. ಎಲ್ಲರಿಗೂ ಹಾಸಿಗೆ ಹೇಗೆ ಸಿಕ್ಕೀತು. ಸಿಮೆಂಟಿನ ಮೇಲಿನ ಜಮಖಾನೆ ತಣ್ಣಗಾಗಿತ್ತು. ಚಳಿ ಎನಿಸಿತು. ಕಾಲ ಹತ್ತಿರದ ಕೌದಿ ಎಳೆದುಕೊಂಡಳು. ತಾನೇ ಅಕ್ಕನಿಗೆಂದು ಹೊಲಿದು ಕೊಟ್ಟಿದ್ದು. ಸವೆದು ಸವೆದು ಸಿಂಪಿ ಆಗಿತ್ತು. ದಾರ ಹರಿದು ಜೋಡಿಸಿದ ಚೂರುಗಳು ಜೋತಾಡುತ್ತಿದ್ದವು. ಅಲ್ಲಲ್ಲಿ ತೂತು ಬಿದ್ದು ಒಳಗಿನ ಸೀರೆಯ ಅರಿವೆ ಕಾಣುತ್ತಿತ್ತು. ಆದರೂ ಅಕ್ಕ ಅದನ್ನು ಬಿಟ್ಟಿರಲಿಲ್ಲ. ರಗ್ಗಿನ ಒಳಗೆ ಜೋಡಿಸಿಕೊಂಡು ಹೊರುತ್ತಿದ್ದಳು. ರೇಶಿಮೆ ಹಾಂಗ ನುಣು ನುಣು ಅಂತದ. ಇದನ್ನ ಹೊತ್ತರ ನಿನ ಜೋಡಿ ಮಲಗಿಕೊಂಡಾಗ ಬೆಚ್ಚಗ ಆಗಿ ಕಣ್ತುಂಬ ನಿದ್ದಿ ಬರ್‍ತದ ಅನ್ನುತ್ತಿದ್ದ ಅಕ್ಕನ ಮಾತು ನೆನಪಾಗಿ ಅಳು ಉಕ್ಕಿ ಬಂದಿತು. ನಿನ್ನೆ ಇದ್ದ ಅಕ್ಕ ಇಂದು ಒಬ್ಬಳೇ ಮಣ್ಣಿನಲ್ಲಿದ್ದಾಳೆ. ಇಲ್ಲಿ ಯಾವದೂ ಶಾಶ್ವತವಲ್ಲ. ಕೊನೇತನಕ ಯಾರೂ ಇರೋದಿಲ್ಲ. ಬರುವಾಗ ಒಬ್ಬರೇ,

ಹೋಗುವಾಗ ಒಬ್ಬರೇ. ಒಳ್ಳೆತನ, ಕೆಟ್ಟತನ ಎರಡೇ ಮಾತು. ಬದುಕಿ ಇರುವವರೆಗೆ ಆ ಸ್ವಾಮಿ ಮೆಚ್ಚುವ ಹಾಗಿರಬೇಕು. ಮನಸ್ಸು ಒಯ್ದುತ್ತ ಹೋಗುತ್ತ ಹೋಗುತ್ತ ನಿದ್ದೆ ಹಚ್ಚಿದಳು ನಾಗವ್ವ. ಬಂದಾಗಿನಿಂದ ಮನೆಯ ಮಕ್ಕಳೊಡನೆ ಆಡುತ್ತ ಉಣ್ಣುತ್ತ ಶೀಲಾ ಹತ್ತಿರ ಬಂದಿರಲಿಲ್ಲ.

ಒಂದೇ ಬದಿಗೆ ಮಲಗಿದ್ದ ನಾಗವ್ವ ನಿದ್ದೆಗಣ್ಣಲ್ಲಿ ಹೊರಳಿದಳು. ತೋಳ ಮೇಲೆ ಏನೋ ಉದ್ದಕ್ಕೆ ಸರಿಯುತ್ತಿತ್ತು. ತೋಳು ದಾಟಿ ಕೊರಳು ಏರಿ ಗಲ್ಲಕ್ಕೆ ತಲೆ ಹಚ್ಚಿ ಪುಟ್ಟ ಮಗುವಿನಂತೆ ಮಲಗಿತು ಉದ್ದನ್ನ ಹಾವು. ಚಿಟ್ಟನೆ ಚೀರಬೇಕೆಂದವಳು ಕಣ್ಣುಬಿಟ್ಟಳು. ಹತ್ತಿರ ಮಲಗಿದ ಹೆಂಗಸಿನ ತೋಳು ಇವಳ ಮುಖದ ಹತ್ತಿರವಿತ್ತು. ದನಿ ಒಳಗೇ ಅಡಗಿತು. ಮೈ ಬೆವೆತು ನಡುಗುತ್ತಿತ್ತು. ಗಂಟಲು ಒಣಗಿ ಎದೆ ಡವ ಡವ ಎನ್ನುತ್ತಿತ್ತು. ಎದ್ದು ಬಚ್ಚಲಿಗೆ ಹೋಗಿ ಕಾಲು ತೊಳೆದು ಬಂದು ದೇವರ ಕೋಣೆಯಲ್ಲಿ ದೀಪ ಹಚ್ಚಿಟ್ಟು. 'ಸ್ವಾಮಿ ನಮ್ಮಪ್ಪಾ ನನ್ನಿಂದ ತಪ್ಪ ಆಗೇತಿ, ಹೊಟ್ಯಾಗ್ಯದ ಹಾಕೋರಪಾ' ಎಂದು ಅಡ್ಡ ಬಿದ್ದಳು. ಬಾಳೆಗಂಟು ಚುಚ್ಚಿತು. ಸ್ವಾಮಿಗಳ ಪಾದ ಪೂಜೆ, ಪಾದೋದಕ, ಕರಣಪ್ರಸಾದ, ಜಂಗಮರಿಗೆ, ಬಂದವರಿಗೆ ಊಟವಾದ ಮೇಲೆ ಹೆಂಗಸರ ಪಂಕ್ತಿ, ಸೂಸವ್ವ, ಗಂಗವ್ವರಿಗೆ ಮೊದಲೇ ಹೇಳಿದಂತೆ ಮಿಲ್ಕಿ ಮಾದೇವನ ಗುಡಿಗೆ ಕರಕೊಂಡು ಹೋಗಿ ಕಾಯಿ ಒಡೆಸಿ, ದಾರಿಯಲ್ಲಿ ಅಕ್ಕಸಾಲಿಗನ ಮನೆಗೆ ಹೋಗಿ ಸರಿಗೆ ಅರ್ಧ ಭಾಗ ಮಾಡಿಸಿ ಇಬ್ಬರಿಗೂ ಹಂಚಿಕೊಟ್ಟು 'ಅವ್ವ ಸತ್ಲಂತ ಚಿಗವ್ವನ್ನ ಮರಿಬ್ಯಾಡ್ರಿ. ಚಂದೂರಿಗೆ ಬರ್ರಿ' ಎಂದು ತಲೆ ಸವರಿ ಬಸ್ ಹತ್ತಿದಳು ನಾಗವ್ವ.

ಕೆಂಪು, ಕೇಸರಿ, ಹಳದಿ, ನೀಲಿ ತುಂಡುಗಳ ಮೋಡಗಳ ಆಕಾಶ ನೋಡಿ ತನ್ನ ಕೌದಿಯ ನೆನಪಾಗಿ ನಕ್ಕಳು. ಮನಸ್ಸು ಹಕ್ಕಿಯಂತೆ ಹಗುರಾಗಿ ಬಸ್ಸಿಗಿಂತ ವೇಗವಾಗಿ ಹಾರುತ್ತಿತ್ತು.

***

■■

# ಮಾಧುರಿ ಪರಿಣಯ

"ಏ ಅಲ್ನೋಡ್ರೇ ಮಾಧುರಿ ದೀಕ್ಷಿತ ನೀರಿಗೆ ಹೊಂಟಾಳ, ಆಕಿ ಹಿಂಬಾಲ ನಾವೂ ಹೋಗೋಣ ಬರ್ರೋ ಬರ್ರಿ." ತೆಂಗಿನ ಹೆಡೆಯ ಕ್ರಿಕೆಟ್ ಬ್ಯಾಟ್ ನೆಲಕ್ಕೆ ಒಗೆದ ನಿಂಗ ಓಡಿದ. ಅವನ ಹಿಂದೆ ಶಂಕ್ರಾ, ತಿಪ್ಯಾ, ಈಶ್ಯಾ ಎಲ್ಲರೂ. ಅನಾಥವಾಗಿ ನಿಂತಿದ್ದ ಮೂರು ಕಟ್ಟಿಗೆಯ ತುಂಡುಗಳನ್ನು ಕಿತ್ತುಕೊಂಡು ಒಲೆ ಉರಿಸಲು ಓಡಿದಳು ಪುಟ್ಟ ನೀಲಿ.

ಮಾದವ್ವ ಪಟ್ಟಣದಲ್ಲಿ ಬೆಳೆದ ಹುಡುಗಿ. ಹಳ್ಳಿಗೆ ಮದುವೆಯಾಗಿ ಬಂದ ಹೊಸದರಲ್ಲಿ ತನ್ನ ಹೆಸರು ಮಾಧುರಿ ಎಂದು ಎಲ್ಲರ ಮುಂದೆ ಹೇಳಿದ್ದಳು. ಮೂಗಿನ ಮೇಲೆ ಬೆರಳಿಟ್ಟ ಮುಗ್ಧ ಹೆಂಗಸರು 'ಇದೆಂತಾ ಹೆಸರ ನಮ್ಮವ್ವ' ಎಂದು ಮಾದವ್ವ ಎಂದೇ ಕರೆದರು. ಚಿಳ್ಳಿಪಿಳ್ಳಿಗಳ ಸಂಭ್ರಮವೇ ಬೇರೆ. ಅವರಿಗೆಲ್ಲ ಪುಢಾರಿ ಕೆರೆಮನಿ ನಿಂಗ. ಪಟ್ಟಣದಲ್ಲಿರೋ ಅಣ್ಣಂದಿರ ಮನೆಗೆ ಹೋದಾಗ ಟಿ.ವಿ. ಸಿನಿಮಾ ನೋಡಿ ಹುಚ್ಚು ಹಚ್ಚಿಸಿಕೊಂಡಿದ್ದವ, ಅವನೇ ಮಾಧುರಿ ದೀಕ್ಷಿತ ಹೆಸರು ಕೂಗಿ ಖುಷಿ ಪಡುತ್ತಿದ್ದ.

ಹಿಡಿಯಷ್ಟು ಟೊಂಕದಲ್ಲಿ ಖಾಲಿ ಕೊಡ ಇಟ್ಟು ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತ ಬಳುಕುತ್ತ ನಡೆದಿದ್ದ ಮಾದವ್ವ ಹೊರಳಿ ನೋಡಿ ಕಿಸಕ್ಕನೆ ನಕ್ಕಳು. ಹೊರಳಿದ ರಭಸಕ್ಕೆ ಉದ್ದ ಜಡೆ ತೂಗಾಡಿ ಟೊಂಕ ಸುತ್ತಿತು,. ಜೊತೆಗೆ ಬರುತ್ತಿದ್ದ ಶೇಕವ್ವ ತೆರವಿದ್ದ ಕೈ ಚಾಚಿ ಗೆಳತಿಯ ಜಡೆ ಸವರಿ ಹೊಟ್ಟೆ ಉರಿದುಕೊಂಡಳು. ಬೋರಿನ ಹತ್ತಿರ ಕೂಡಿದ ಹೆಂಗಸರನ್ನೆಲ್ಲ ಹುಡುಗರು ಬೇಗ ಬೇಗ ಜಾಗೆ ಖಾಲಿ ಮಾಡಿಸಿದರು. ಮಾದವ್ವನ ಕೊಡಗಳನ್ನಿಟ್ಟು ನಾ ಮುಂದು ತಾ ಮುಂದು ಎಂದು ಜಿಗಿಜಿಗಿದು ಪಂಪ್ ಹೊಡೆದರು. ಆ ಮಕ್ಕಳ ತಾಯಂದಿರೆಲ್ಲ ಒಟಗುಟ್ಟುತ್ತ ಮನೆಯತ್ತ ಸಾಗಿದರು.

'ಈ ಹುಡುಗಿ ನಮ್ಮೂರಿಗಿ ಬಂದೇನ ಬೇಸಾಗಲಿಲ್ಲ ಬಿಡವ್ವ. ಸೀರಿ, ಸೆರಗು, ಜಂಪರು ನಾನಾ ನಮೂನಿ ತೊಟಗೊಂಡರೂ ಬತ್ತಲೆ ಇದ್ದಾಂಗ ಕಾಣತೈತಿ. ಹಾದ್ಯಾಗ ಹೋಗೂ ಗಣಸೂರು, ಹರೇದ ಹುಡುಗೂರು ಹೊಳ್ಳಿ ಹೊಳ್ಳಿ ನೋಡತಾರ ಅನೂ ಖಬರs ಇಲ್ಲ ಇದಕ್ಕ, ಕಿಸಿಕಿಸಿ ಹಲ್ಲ ಕಿಸಗೊಂತ, ತಿಕಾ ತೂಗ್ಯಾಡಿಸಿಕೊಂತ, ಸೀರಿ ನೀರಿಗಿ ತುಳಕೊಂತ ಅಡ್ಡಾಡತೈತಿ. ರಾಮಣ್ಣನ ಮನೀ ಮರ್ಯಾದಿ ಕಳೀತೈತಿ ಬೇಬರ್ಸಿ."

'ಚಿಗವ್ವಾ ಆಕಿ ಮಾಡಕೊಂಡ ಗಂಡಾ ಮಾವಾ ನಾಲಿಗಿ ಹಲ್ನಾಗ ಇಟಗೊಂಡ ಸುಮಾಕ ಇರೂ ಮುಂದ ನಮ್ಮದೇನ ಹೋಗತೈತೆಬೇ ಗಂಟು ? ನೀ ಯಾಕ ಬಯ್ಯುತೀ."

ತನ್ನ ಮಗ ರೇವಣ್ಣ ಮಾದವ್ವನ ಮೇಲೆ ಕಣ್ಣಿಟ್ಟು, ಬಾಯಿ ಬಿಟಗೊಂಡು ಜೊಲ್ಲು ಸುರಸ್ತಾನಂತ ಹ್ಯಾಂಗ ಒಡದಾಳು ನಾಗವ್ವ. "ಅಲ್ಲಬೇ ಆ ಗಂಗವ್ವತ್ತಿ ಅರೆ ಹೆಂತಾಕಿ. ಮನೀಗ ಬಂದ ಸೊಸೀನ್ನ ಹದ್ದಬಸ್ತನ್ಯಾಗ ಇಟಗೊಳ್ಳಾಕ ಬರಾಕಿಲ್ಲೇನ ಆಕಿಗೆ. ಆ ಮೂಳನ ಹಿಂಬಾಲ ಬಿದ್ದು ಉಳದ ಹುಡುಗೀರು ಕೆಡತಾವ. ಊರಾಗ ಬೇಕಾದಂತಾ ಮರ್ಯಾದಸ್ತ ಮನೀ ಹುಡುಗೀರು ಸಿಗೂ ಮುಂದ ಈ ಸೋಗಲಾಡಿ ಸುಬ್ಬೀನ ತಂದಾಳಲ್ಲ" ತನ್ನ ಮಗಳು ಸುಮ್ಮಿಯನ್ನು ಭೀಮ ಮದುವೆಯಾಗಿಲ್ಲವೆನ್ನುವ ಉರಿ ಇತ್ತು ನಾಗವ್ವನ ಹೊಟ್ಟೆಯಲ್ಲಿ. ಚಂದ್ರವ್ವನಿಗೂ ಇದು ತಿಳಿಯದ ಮಾತಲ್ಲ. ಹಳ್ಳಿಯಲ್ಲಿ ಎಲ್ಲರ ಮನೆಯ ಮಾತೂ ಬಲಯಲಿಗಿಟ್ಟಿದ್ದೇ.

'ಗಂಗವ್ವ ತಂದಿಲ್ಲಬೇ ಮಾದವ್ವ ನಿನಗೂ ಗೊಂತ ಐತಿ, ಪಟ್ಟಣದಾಗ ಬೆಳೆದ ಹುಡುಗೀ ನಮ್ಮ ಹಳ್ಳ್ಯಾಗ ಏನ ಹ್ವಾರೆ ಮಾಡೀತು ಮರ್‍ಯಾಬ್ಯಾಡ ಅಂತ ಬಡಕೊಂಡಳಂತ. ಭೀಮ ಇದರ ಥಳಕಿಗೆ ಮಳ್ಳ ಆಗಿ ನಾ ಇಕೀನ್ನ ಲಗ್ನಣ ಆಗಾಂವಾ' ಅಂತ ಹಟಾ ಹಿಡಿದ್ನಂತ. ನೋಡಿದೆಲ್ಲ ನೀನೂ ಸೊಸಿ ಬಂದ ಮ್ಯಾಲೆ ರಾಮಣ್ಣ ಮಾವ ಮೀಸಿ

ಮ್ಯಾಲೆ ಕೈ ಎಳಕೊಂಡ ನಾಕ ದಿನಾ ಹ್ಯಾಂಗ ಓಡ್ಯಾಡಿದಾ. ಅಲ್ಲಬೇ ಚಿಗವ್ವಾ ಗಂಗವ್ವತ್ತಿ ಕೈಯಾಗ ಸೊಸಿನ್ನ ಬಿಟ್ಟಿದ್ರ ಬೇಸ್ಯಾಗಿ ಜಡದು ನಾಕೇಟು ಕೊಟ್ಟು ಒಗತನಾ ಮಾಡಾಕ ಕಲಿಸತಿದ್ಲ. ಆದರ ಈ ಅಪ್ಪಾ ಮಗಾ ಸುಮ್ಮಕ ಇರಬೇಕಲ್ಲ. ಏನ ಮಾಟಾ ಮಾಡ್ಯಾಳೋ ಅವರ ಮ್ಯಾಲೆ, ಅವತ್ತ ನೀನೂ ನೋಡಿದೆಲ್ಲ ನೆಪ್ಪ ಐತಿಲ್ಲೊ."

"ಹಾಂ ನೆಪ್ಪೈತಿ ನಂಗೂ. ಮಾದವ್ವ ಹೊಸ ಮದಲಗಿತ್ತಿ ಆಗಿ ಬಂದಾಗಲ್ಲs....."

"ಏ ಏ ಮಾದಿ, ಹಾದರಗಿತ್ತೀ. ಇದೇನ ಪಾತರದವರಾಂಗ ಚವರಿ ಹಾಕಿ ಲಡ್ಡ ಬಿಟ್ಟೀ. ಬಿಚ್ಚ ಅದನ್ನ. ಛಂದಾಗಿ ಕೂದಲಾ ಗಟ್ಟ್ಯಾಗಿ ಹಿಡದು ಬಿಗೀ ಆಗಿ ತುರಬಾ ಕಟಗೋ. ಇನ್ನೊಮ್ಮೆ ಕೂದಲಾ ಹಣೀ ಮ್ಯಾಲೆ ಇಳಿ ಬಿಟ್ಟೀ ಅಂದರ ಕರಾಕರಾ ಕತ್ತರಿಸೇಬಿಡ್ತೇನಿ ನೋಡ" ನೀರಿಗೆ ಹೊರಟ ಹೊಸ ಸೊಸೆಯ ಮೇಲೆ ಗಂಗವ್ವ ಆರ್ಭಟಿಸಿದ್ದಳು. ಹೊಸ್ತಿಲ ಹೊರಗೆ ಬಂದ ಸೊಸೆ ಮುಖ ಮುರಿದು-

'ಹೋಗs ಯತ್ತೀ. ತುರುಬಾ ಕಟ್ಟಾಕ ನಾ ಏನ ಹಳ್ಳೀ ಗಮಾರ ಅಲ್ಲ. ನಾ ಹಿಂಗs ಜಡೀ ಬಿಡೂವಾಕಿ, ನನಗ ಸೇರ್ತದ. ಸೀರಿ ಹಿಂಗ ಉಟಕೋ, ಕೂದಲಾ ಹಿಂಗ ಬಾಚಿಗೋ, ಸೆರಗು ತಲೀ ಮ್ಯಾಲs ಹಾಕ್ಕೋ, ಲೋಲಕ್ಕು, ಕಿಲಿಪ್, ಪಿನ್ ಹಾಕಬ್ಯಾಡಾ ಅಂತೆಲ್ಲಾ ಕಿಟಿಕಿಟಿ ಹಚ್ಚಬ್ಯಾಡಾ. ಬಂದಾಗಿನಿಂದ ವಟಾವಟಾ ಅನ್ನೂದ ಕೇಳಿ ಕೇಳಿ ಸಾಕಾಗಿ ಹೋಗೇತಿ ನನಗೂ. ಶಹಾರದಾಗ ಹುಟ್ಟಿ ಬೆಳದಾಕಿ ನಾನು' ಎನ್ನುತ್ತ ಬೀದಿಗೆ ಇಳಿದಳು.

ತಿರುಗಿ ವಾದಿಸಿದ ಮಾದವ್ವನ ಕೂದಲು ಹಿಡಿಯಲ್ಲಿ ಗಟ್ಟಿಯಾಗಿ ಹಿಡದ ಗಂಗವ್ವ ಸೊಸೆಯ ಬಗಲಲ್ಲಿದ್ದ ಕೊಡ ಬಿದ್ದು ಹೋದರೂ ಲಕ್ಷ್ಯ ಕೊಡದೆ ಹಾದಿ ತುಂಬ ಎಳದಾಡಿ ದಬದಬ ಬೆನ್ನಿಗೆ ಗುದ್ದಿದಳು.

"ಏ ಹೊಯ್ಮಾಲೀ ತಿರಿಗಿ ಮಾತಾಡತೀಯಾ ? ಹೊಸ್ತಲಕ ಮಳಿ ಬಡಕೊಂಡ ಬಂದ ನಾಕ ದಿನಾ ಆಗಿಲ್ಲ ಇನ್ನೂ, ಇಷ್ಟ ದಿಮಾಕ ಬಂತs ನಿನಗ? ನಾವೆಲ್ಲಾ ಹಳ್ಳೀ ಗಮಾರ್ರ, ನೀ ಭಾಳ ದೊಡ್ಡ ಪಟ್ಟಣದಾಕಿ. ನಾಕ ಮನೀ ಕಸಾ ಮುಸುರೀ ಮಾಡಿ, ಅವರ ಮನೀ ಎಂಜಲಾ ತಿಂದ ಬೆಳದಾಕಿ ನೀ, ಹೊಲಾ ಮನೀ ಮಾಡಕೊಂಡ ಊರಾಗ ಮರ್ವಾದಿಯಿಂದ ಬಾಳೇ ಮಾಡವರು ನಾವು. ಹಿರ್‍ಯಾಳು ಏನೋ ನಾಕ ಬುದ್ದೀಮಾತ ಹೇಳ್ತಾಳ ಅಂತ ಕೇಳೂದು ಬಿಟ್ಟು ಕಿಟಿ ಕಿಟಿ ಹಚ್ಚಬ್ಯಾಡ ಅಂತೀಯಾ. ನಾ ಬಾಯಲೆ ಹೇಳೂದಿಲ್ಲ. ಇನ್ನ ಮ್ಯಾಲೆ ಮೈಯಾಗಿನ ಎಲಬs ಮುರೀತೆನಿ ಹಿಂಗ.' ಮತ್ತೆ ಗುದ್ದಿದಳು. ಪೆಟ್ಟು ತಾಳದೆ ಲಬಲಬ ಹೊಯ್ಕೊಂಡಳು ಮಾದವ್ವ.

ಹೊಲದ ಕಡೆ ಚರಿಗೆ ಹಿಡದು ಹೋಗಿದ್ದ ರಾಮಣ್ಣ ತನ್ನ ಮನೆಯ ಮುಂದೆ ಕೂಡಿದ ಮಂದಿಯನ್ನು ನೋಡಿ ಓಡೋಡಿ ಬಂದ. ಹಕ್ಕೆಯಲ್ಲಿ ಎತ್ತು ಕಟ್ಟುತ್ತಿದ್ದ ಭೀಮ ಓಡಿ ಬಂದು ಅವ್ವನ ಕೈಯಿಂದ ಹೆಂಡತಿಯ ಜಡೆ ಬಿಡಿಸಿದ್ದ. ಕೂಡಿದ ಜನರೆದುರು ಹೋ ಎಂದು ಅರಚುತ್ತ ರಂಬಾಟ ಮಾಡುತ್ತಿದ್ದ ಹೆಂಡತಿಯನ್ನು ಅಪ್ಪಿಹಿಡಿದು ಸಂತೈಸುತ್ತಿದ್ದ. ರಾತ್ರಿ ಆಟವಾಡಲು ಸಿಗುತ್ತಿದ್ದ ಅವಳ ಉದ್ದ ಜಡೆ ಎಂದರೆ ಭೀಮನಿಗೆ ಪ್ರೀತಿ. ಅವ್ವನ ಮೇಲೆ ಸಿಟ್ಟು ಉಕ್ಕುತ್ತಿದ್ದರೂ ಧೈರ್ಯ ಸಾಲದೆ ತಡೆದು ಹಿಡಿದಿದ್ದ. ರಾಮಣ್ಣ ಭರಭರ ಬಂದು ಮುಡಚೆಟ್ಟಿನ ಕೈ ತೊಳೆಯುವುದನ್ನೂ ಮರೆತು ಮೊದಲು ಹೆಂಡತಿಯ ಬಾಯಿ ಮುಚ್ಚಿದ, ಕೆಟ್ಟ ಕೆಟ್ಟ ಬಯ್ಗುಳ ಕೇಳಲಾರದೆ.

'ಏ ಬಿಕನಾಸೀs ನಿನಗ ಬುದ್ದಿಗಿದ್ದಿ ಐತೇನ, ಏನ ತಲ್ಯಾಗ ಶೆಗಣಿ ತುಂಬೈತೊ? ಮಾದವ್ವ ಜಡೀ ಹಾಕ್ಕೊಂಡರ ನಿಂದೇನ ಗಂಟ ಹೋಯ್ತುs ಗಂಗೀ. ಮುದುಕಿ ಆಗಿ ಕೂದಲೆಲ್ಲಾ ಬೋಳಾಗಿ ನೀ ಲಡ್ಡ ಬಿಡತೀಯಾ, ಏನೋ ಸಣ್ಣಾಕಿ ಆಸೆ ಇದ್ದಾಂಗ ಇರತಾಳ. ಹೊಸತಾಗಿ ಬಂದ ಸೊಸೀನ ಹಾದಿಗೆ ಎಳೆದು, ಕೂಡಿದ ಮಂದ್ಯಾಗ ದನಾ ಬಡದಾಂಗ ಬಡಿಯೂದs? ನನ್ನ ಮರ್ವಾದಿ ಏನ ಉಳೀತ ಊರಾಗ. ನೀ ಇಂತಾ ಹಲ್ಕಟ್ ರಂಡಿ ಗಂಟ ಬಿದ್ದೀ ನನಗ. ಮಂದ್ಯಾಗ ನನ್ನ ನಗ್ಗೇಡು ಮಾಡತೀ. ನಿನ್ನಿಂದನ ನಾ ಪಂಚಾಯತಿ ಇಲೆಕ್ಷನ್ ಸೋತದ್ದು ಗಂಗೀ ನಿನ್ನಿಂದನ." ರಾಮಣ್ಣ ಜಿಪುಣಾಗ್ರೇಸರ. ಪೈಸಾ ಪೈಸಾ ಕೂಡಿ ಹಾಕುವವ. ಊರ ಜನರಿಂದ

'ಹೇಸಿಗ್ಯಾಗ ಹಣಾ ಬಿದ್ದರೂ ನಾಲಿಗಿ ಚಾಚತಾನ' ಅನ್ನಿಸಿಕೊಳ್ಳುವವ. ಕೈಬಿಟ್ಟು ಖರ್ಚು ಮಾಡದೆ ಇಲೆಕ್ಷನ್ ಸೋತಿದ್ದ. ಈಗ ತನ್ನ ಹೊಟ್ಟೆಯ ಕಿಚ್ಚನ್ನೆಲ್ಲ ಹೆಂಡತಿಯ ಮೇಲೆ ಕಾರಿಕೊಂಡ. ಅವನಿಗೆ ವೋಟು ಹಾಕದ ಜನವೆಲ್ಲ ಮೆಲ್ಲಗೆ ಸರಿಯತೊಡಗಿದರು. ಇಲೆಕ್ಷನ್‌ಗೆ ಸೊಸೆಯ ಜೆಡೆಗೆ ಏನು ಸಂಬಂಧ ತಿಳಿಯದೆ ಗಂಗವ್ವ ಕಕ್ಕಾವಿಕ್ಕಿಯಾಗಿ ನಿಂತಿದ್ದಳು. ಮೊದಲ ಜಟಾಪಟಿಯಲ್ಲೇ ಗೆದ್ದ ಸೊಸೆ ಬೀಗುತ್ತ ನೀರಿಗೆ ಹೋಗಿದ್ದಳು.....

ತನ್ನ ಅತ್ತೆತನ ತೋರಿಸಿಯೇ ತೀರಬೇಕೆನ್ನುವ ಗಂಗವ್ವನೇನೂ ಕಡಿಮೆ ಜಗಳಗಂಟಿಯಲ್ಲ. ಆಗಾಗ ಇಂಥ ಜಗಳಗಳು ನಡೆದೇ ಇರುತ್ತಿದ್ದವು. ಮನೆಯಲ್ಲಿ ಮಾದವ್ವ ಹೊಸದೊಂದು ಶಸ್ತ್ರ ಎತ್ತಿಕೊಂಡಿದ್ದಳು. ಜಗಳವಾದ ದಿನ ರಾತ್ರಿ ಎಲ್ಲ ಕೆಲಸ ಊಟ ಬಿಟ್ಟು ಮುಸುಕು ಹಾಕಿ ಮಲಗಿಬಿಡುವಳು. ಪಟ್ಟಣವಾಸದ ಉಡುಪು, ಬಿನ್ನಾಣ, ಫ್ಯಾಶನ್ ಎಲ್ಲ ಅನುಭವಿಸಿ ಸುಖವಾಗಿ ಬೆಳೆದಿದ್ದ ಮಾದವ್ವ ರಾತ್ರಿ ಅತ್ತು ಅತ್ತು ಪಾಪದ ಗಂಡನನ್ನು ಗೋಳು ಹೊಯ್ದುಕೊಳ್ಳುವಳು. ಬೇರೆ ಏನು ಮಾಡಲೂ ತೋಚದ ಭೀಮ ಉಪವಾಸ ಮಲಗಿದ ಹೆಂಡತಿಗೆ ಕದ್ದು ತಂದ ಬಾಳೆಹಣ್ಣು ತಿನ್ನಿಸಿ ಉಪಚಾರ ಮಾಡುತ್ತಿದ್ದ. ಗಂಡನ ತೋಳಿನಲ್ಲಿದ್ದು ಕನಸು ಕಾಣುವಳು ಮಾದವ್ವ. ಪಟ್ಟಣದಲ್ಲಿ ಅವಳು ಮನೆ ಕೆಲಸ ಮಾಡುವ ಮನೆಗಳಲ್ಲಿ ಟಿ.ವಿ. ಇತ್ತು. ಟಿ.ವಿ.ಯಲ್ಲಿ ಅವಳು ನೋಡಿದ ಸಿನಿಮಾಗಳಿಗೆ ಲೆಕ್ಕವಿರಲಿಲ್ಲ. ಮದುವೆಯಾಗಿ ಬಂದ ಮೇಲೆ ಸಿನಿಮಾ ಇರಲಿ, ಅದರ ಬಗ್ಗೆ ಮಾತಾಡಲಿಕ್ಕೂ ಯಾರೂ ಇಲ್ಲ. ಬೆಳಗಿನಿಂದ ರಾತ್ರಿವರೆಗೆ ಅಡಿಗೆ, ರೊಟ್ಟಿ, ಕಸ, ಮುಸುರಿ, ನೀರು. ಒಗ್ಯಾಣ, ಶಗಣಿ, ಕುಳ್ಳು ಕೆಲಸ ಕೆಲಸ ಕೆಲಸ. ರಾತ್ರಿ ಗಂಡನ ಹತ್ತಿರ ಮಲಗಿದಾಗಲೂ ಏನು ಸುಖ ಎಷ್ಟು ಸುಖ! ಭೀಮನ ರಟ್ಟೆಯೊಳಗ ಅಷ್ಟು ಕಸುವು ಇಲ್ಲ. ದಿನಾ ಹಾಲ ಕುಡೀತಾನ, ಕೆನಿ ಮೊಸರು ಬೆಣ್ಣೆ ರೊಟ್ಟಿ ತಿಂತಾನ. ಮುಟ್ಟಿದರ ಮೆತ್ತಮೆತ್ತಗೆ ಅದಾನ ಏನೇನೂ ಸುಖಾ ಇಲ್ಲ-

'ಸುಖಾ ಬೇಕಂದರ ಚಂಪಾನ ಅಣ್ಣ ಸುರೇಶನ ಆಗಬೇಕ. ಹಿಂತಿಂತಾ ತೋಳು ಎಟ್ಟದಿಪ್ಪ. ಏನ ಬಿಗಿತ. ಮೈಯಾಗಿನ ಎಲಬಽ ಮುರೀತಾನೇನೋ ಅನೂ ಹಾಂಗಿತ್ತು. ಅವತ್ತ ಮಾಲಕತಿ ಪ್ಯಾಟಿಯಿಂದ ಲಗೂನ ಬರದಿದ್ದರ ಇನ್ನೂ ಏನೇನ ಮಾಡತಿದ್ನೋ.... ಸುರೇಶನ ನೆಪ್ಪ ಆದರ ಹಕ್ಕೀ ಹಾಂಗ ಹಾರಿ ಹೋಗಲ್ಯಾ ಅನಸತೈತಿ..." ಮಾದವ್ವನ ಕನಸು ಬೆಳೆಯುತ್ತಾ... ಬೆಳೆಯುತ್ತಾ.... ಕೊನೆಯೇ ಇರಲಿಲ್ಲ.

"ತಲೀ ಬಾಚಿಕೊಂಡ ಮಾರೀ ನೋಡೇನಂದರ ಛಂದನ್ನ ಕನಡಿಹಳ್ಳ ಇಲ್ಲ ಈ ದರಿದ್ರ ಮನ್ಯಾಗ. ತಂದ ಕೊಡಂದ್ರ ನೀ ಕೇಳಂಗಿಲ್ಲ." ಭೀಮನ ತೋಳಿನಿಂದ ದೂರ ಸರಿಯುತ್ತ ಒಂದು ರಾತ್ರಿ ಸಿಟ್ಟಾದಳು ಮಾದವ್ವ.

"ಮಾದೀ ಅಲ್ಲಲ್ಲ ಮಾಧುರೀ ಚಿಕ್ಕೋಡಿಗಿ ಹೋಗಾಕ ಅಪ್ಪ ರೊಕ್ಕಾನ ಕೊಡವಲ್ಲ. ಬೇಡಿದಾಗಲೊಮ್ಮೆ ಈಗೆಲ್ಲಿ ಅದಾವ ರೊಕ್ಕ ಸುಗ್ಗಿ ಆಗಲಿ ಅಂತಾನ."

"ಹೂಂ, ಮಳ್ಳ ಅಂದರ ಓ ಅಂತೀ ನೀನೂ. ಸುಗ್ಗಿ ಅಂತ ಸುಗ್ಗಿ. ಅದೆಲ್ಲಾ ನೆವಾ. ಉಗರಾನ ಮಣ್ಣ ಸಿಡಸಾಂವ ಅಲ್ಲ ನಿಮ್ಮಪ್ಪ, ಅಂವನ್ಯಾಕ ಕೇಳತೀ. ನೀನೂ ಹೊಲದಾಗ ದನದ ಕೂಡ ದನದಾಂಗ ಹರ್‍ಯಾಗಿಂದ ಸಂಜೀತನಾ ದುಡೀತಿ. ಕಾಳ ಮಾರಿ ರೊಕ್ಕಾ ಮಾಡಿಕೋ ಕೈಯಾಗ. ಅದನೂ ನಾನಽ ಕಲಸಬೇಕಽ, ಎಬರೇಸಿ, ನನಗಂತೂ ಕನಡಿ ಬೇಕಽ ಬೇಕ ನೋಡ" ಗಂಡನನ್ನು ಓರೆಗಣ್ಣಿನಿಂದ ನೋಡುತ್ತ ಬಿಗಿಯಾಗಿ ತಬ್ಬಿದಳು ಮಾದವ್ವ. ಅಷ್ಟೇ ಸಾಕಾಯಿತು ಭೀಮನಿಗೆ. ಅಪ್ಪನ ಸರ್ಪಗಾವಲಿನಲ್ಲೂ ಹೆಂಡತಿಯ ಆಸೆ ಪೂರೈಸಿದ. ಹೃದಯಾಕಾರದ ಪ್ಲಾಸ್ಟಿಕ್ ಕಟ್ಟಿನ ಕನ್ನಡಿ ತಂದು ಪಡಸಾಲೆಯಲ್ಲಿ ತೂಗಿದಳು. ಅವ್ವ ಕೊಡಿಸಿದ್ದೆಂದು ಅತ್ತೆಗೆ ಹೇಳಲು ಮರೆಯಲಿಲ್ಲ.

"ಈ ಹುಚ್ಚುಮುಂಡಿಗೆ ಹಗಲೂ ಹನ್ನೆಡ್ಡ ತಾಸ ತಿದ್ದಿ ತೀಡಿಕೊಳ್ಳಾಕ ಭೇಶಾತು ಬಿಡು" ನೆರೆಯ ಅವ್ವಕ್ಕಗಳ ಮುಂದೆ ಚಿಟಿಕೆ ಮುರಿದುಕೊಂಡು ಬಯ್ದಳು ಗಂಗವ್ವ. ಮಾದವ್ವನನ್ನು ನೋಡಿ ಕಿಲಿಪ್, ಲೋಲಾಕು, ಪಿನ್ ಬೇಕೆಂದು ಕಾಡುತ್ತಿದ್ದ ಮಕ್ಕಳ ತಾಯಂದಿರೂ ದನಿಗೂಡಿಸಿದರು.

ಮಾದವ್ವನ ಮನದ ಮೂಲೆಯಲ್ಲಿ ಹಗಲು ರಾತ್ರಿ ಧಿಂಧಿಂ ಕುಣಿಯುತ್ತಿದ್ದ ಸುರೇಶ ಅಲ್ಲಲ್ಲ. ಅವನಂಥವನೊಬ್ಬ ಒಂದು ದಿನ ಪ್ರತ್ಯಕ್ಷನಾಗಿಬಿಟ್ಟ ಅವಳ ಮನೆ ಅಂಗಳದಲ್ಲಿ.

'ರಾಮಪ್ಪಣ್ಣ ಅದಾರೇನಬೇ" ಗಡಸು ದನಿ ಕೇಳಿ ಬೆಚ್ಚಿ ತಲೆ ಎತ್ತಿದಳು. ಬೆಳಿಗ್ಗೆ ಅಂಗಳಕಸ ಉಡುಗುತ್ತಿದ್ದ ಮಾದವ್ವ. 'ಅರೆ! ಯಾರಿಂವಾ. ಈಟ ದಿನಾ ಆತು ಈ ಊರಿಗೆ ಬಂದ ನಾ ನೋಡೇ ಇಲ್ಲಾ' ಪಿಳಿ ಪಿಳಿ ಕಣ್ಣುಬಿಟ್ಟಳು. ಬಂದವನೂ ನಸು ನಕ್ಕು ಅವಳ ದೃಷ್ಟಿಗೆ ಕೂಡಿಸುತ್ತ ಕಿರುಮೀಸೆ ಕುಣಿಯಿತು.

"ನಾನು ಪರಶ್ಯಾ, ಯಲ್ಲಪ್ಪನ ಮಗಾ. ರಾಮಪ್ಪಣ್ಣ ಅದಾನೇನ, ಒಂದ ಜರಾ ಕೆಲಸಿತ್ತು."

"ಮಾವ ಹೊಲದ ಕಡೆಗೆ ಹೋಗ್ಯಾನ, ಹಿರ್‍ಯಾ ಮಕ್ಕೊಂಡಾನ, ಎಬ್ಬಸಲ್ಯಾ?" ಕಣ್ಣು ಕೆಳಕ್ಕಿಳಿದು ನಾಚಿ ಕೆಂಪಾಗಿದ್ದಳು.

'ಬ್ಯಾಡಾ, ಅಂವೇನ ಬ್ಯಾಡ. ನಮ್ಮಪ್ಪಗ ಜರಾ ಬಂದು ಮಕ್ಕೊಂಡಾನ, ನಾನ ಚಿಕ್ಕೋಡಿಗಿ ಹೊಂಟಿದ್ವೀ. ಇಂದ ಮರೆಪ್ಪಗೋಳ ಮನ್ಯಾಗ ಲಗ್ಗಣ ಇತ್ತಲಾ, ನಮಗೂ ಹೇಳಿಕೆ ಬಂದೈತಿ. ಅಲ್ಲೆ ಈ ಹತ್ರೂಪಾಯಿ ಮುಯ್ಯಿ ಮಾಡಾಕ ನಿಮ್ಮಾವಗ ಹೇಳ. ಇಕಾ ಹಿಡಿ" ನೋಟು ಮಾದವ್ವನ ಕೈಗಿಡುತ್ತ ಬೆರಳಿನಲ್ಲೆ ಜಾದೂ ಮಾಡಿದ್ದ ಪರಶುರಾಮ.

ಸೊಸೆ ಅಂಗಳದಲ್ಲಿ ಇಷ್ಟೊತ್ತು ಏನು ಮಾಡುತ್ತಿದ್ದಾಳೋ ನೋಡಲು ಬಂದ ಗಂಗವ್ವನಿಗೆ ಕಸಬರಿಗೆ ಹಿಡಿದು ಗೊಂಬೆಯಂತೆ ನಿಂತ ಮಾದವ್ವ, ಹೋಗುತ್ತಿದ್ದವನ ಬೆನ್ನೂ, ಅಷ್ಟೇ ಕಂಡಿತು.

"ಬೆಳಕ ಹರ್‍ಯಾಣಾ ಯಾಂವನ್ನ ನೋಡಾಕ ನಿಂತೆ ಹೊಯ್ಮಾಲಿ, ಮನ್ಯಾಗ ರಾಶಿ ದಗದ ಬಿದ್ದೈತಿ ಇನ್ನೂ." ನಾಲ್ಕು ಮನೆ ಕೇಳುವಂತೆ ಚೀರಿದಳು ಗಂಗವ್ವ. ಕಳವು ಮಾಡುತ್ತ ಸಿಕ್ಕಿ ಬಿದ್ದವಳಂತೆ ನಡುಗಿದಳು ಮಾದವ್ವ. ತಕ್ಷಣ ಕಣ್ಣುಮುಂದೆ ಅತ್ತೆಯ ಆಕಾರ ಪ್ರತ್ಯಕ್ಷವಾಗಿ ನೋಟು ಅವಳತ್ತ ಚಾಚಿದಳು.

'ಇಕಾ ಹಿಡಿ ಈ ರೊಕ್ಕಾ, ಅಂವ ಯಾರೋ ನನಗ್ಗೊತ್ತಿಲ್ಲ, ಪರಶ್ಯಾ ಅಂತ ಮರೆಪ್ಪಗೋಳಿಗೆ ಮುಯ್ಯ ಮಾಡಾಕ ಮಾವನ ಕೈಯಾಗ ಕೊಡು ಅಂತ ಅಂದ, ತಗೊಂಡೆ. ಹೊತ್ತ ಹೊಂಡೂತಲೆ ಜಗಳಾ ತಗೀಬ್ಯಾಡ ನೀ."

"ಹುಂ. ಇಂವಾ ಯಾವಾಗ ಬಂದಾ ಜೋಕುಮಾರಾ ಊರಿಗೆ. ಪ್ಯಾಟಿ ಅಡ್ಡಾಡುದೆಲ್ಲಾ ಮುಗೀತೇನ. ಕಲ್ತು ಸಾಯೇಬ ಆಗಾಕ ಹೊಂಟಿದ್ದಾ." ತನ್ನ ಕನಸಿನ ರಾಜಕುಮಾರನನ್ನು ಕಂಡ ಖುಷಿಯಲ್ಲಿ ಸದ್ದು ಮಾಡದೆ ಕಣ್ಣುಗಳಲ್ಲೆ ನಗುತ್ತ ಅತ್ತೆಯನ್ನು ಹಿಂಬಾಲಿಸಿದಳು ಮಾದವ್ವ

ಹಳ್ಳಿಯಲ್ಲಿ ಯಾರು ಯಾರನ್ನೋ ಭೆಟ್ಟಿಯಾಗುವುದೇನೂ ಕಷ್ಟದ ಮಾತಲ್ಲ. ಹದ್ದಿನ ಕಣ್ಣಿನವರನ್ನು ತಪ್ಪಿಸಿದರೆ ಸಾಕು. ಮಾದವ್ವನಿಗೆ ಹಳ್ಳಿಯಲ್ಲಿ ಚರಗಿ ಹಿಡಿದು ಊರ ಹೊರಗಿನ ಗಿಡಗಂಟಿಗಳ ಹಿಂದೆ ಹೋಗುವುದೊಂದು ಪಡಿಪಾಟಲು. ತನ್ನನ್ನು ಹಳ್ಳಿಗೆ ಮದುವೆ ಮಾಡಿ ಕೊಟ್ಟ ಅವ್ವನಿಗೆ ಹಿಡಿಶಾಪ ಹಾಕಲು ಅದೂ ಒಂದು ಕಾರಣ. ನಿಸರ್ಗಕ್ರಿಯೆ ಸುಮ್ಮನಿರಲು ಬಿಟ್ಟೀತೆ? ಸುಮಾರು ಹೊತ್ತು ಕತ್ತಲಾದ ಮೇಲೆಯೇ ತಾನು ಚರಿಗೆ ಹಿಡಿಯುವಳು. ಕೆಲವು ದಿನ ಅತ್ತ ನೆರೆ ಗೆಣಕಾರ್ತಿಯರು ಜೊತೆಗೆ ಬಂದರು. ದಿನಾ ಸಾಯುವವರಿಗೆ ಅಳುವವರು ಯಾರು ? ಒಬ್ಬಳೇ ಹೋಗುವ ರೂಢಿ ಮಾಡಿಕೊಳ್ಳುತ್ತ ಹಳಬಳಾಗಿ ಬಿಟ್ಟಿದ್ದಳು. ಇಂಥ ಅವಕಾಶ ಬಿಟ್ಟಾನೇ ಪರಶುರಾಮ. ಸಂಧಿ ಸಾಧಿಸಿ ಅವಿತು ಅವಳನ್ನು ಹಿಡಿದುಬಿಟ್ಟ. ಅದಕ್ಕಾಗಿಯೇ ಚಡಪಡಿಸುತ್ತಿದ್ದ ಅವಳೂ ಮೈ ಹಸಿವು ಹಿಂಗಿಸಿಕೊಂಡಳು. ಮನೆಗೆ ಬಂದು ಕೈಕಾಲು ತೊಳೆದು ವಿಭೂತಿ ಹಚ್ಚಿಕೊಂಡು ದೇವರ ಪಟದ ಮುಂದೆ ಗಲ್ಲಗಲ್ಲ ಬಡಿದುಕೊಂಡು ಕೈ ಮುಗಿದಾಗ ಮನಸ್ಸಿಗೆ ಸಮಾಧಾನ. ಪ್ರೀತಿಸುವ, ಮುಗ್ಧ ಅಮಾಯಕ ಗಂಡನಿಗೆ ಮೋಸ

ಮಾಡುತ್ತಿರುವ ಚಡಪಡಿಕೆ. ಅಂಥ ಸಂಜೆಗಳಲ್ಲಿ ರಾತ್ರೀ ಭೀಮನನ್ನು ತೆಕ್ಕೆಯಲ್ಲಿ ಹಿಡಿದು ಮುದ್ದಾಡಿ ಪ್ರೀತಿ ಉಕ್ಕಿಸುವ ಹೆಂಡತಿಯನ್ನು ನೋಡಿ ಸ್ವರ್ಗ ಕೈಗೆ ಬಂದಷ್ಟು ಹಿಗ್ಗು ಭೀಮನಿಗೆ. ಅತ್ತೆ ಸೊಸೆಯರ ಜಗಳ, ರಂಬಾಟ ಕಡಿಮೆಯಾಗಿ ಸಂಸಾರ ಒಂದು ಹದಕ್ಕೆ ಬರುತ್ತಿದೆ ಎನ್ನುವಾಗ ಆ ಘಟನೆ ನಡೆಯಿತು.

ಆ ಸಂಜೆ ಮನೆ ಅಂಗಳದಲ್ಲಿ ಕೂಗಾಟ ಕೇಳಿಸಿತು. ಅತ್ತೆ ಸೊಸೆ ಧಾವಿಸಿ ಬಾಗಿಲಿಗೆ ಬಂದರು. ಯಲ್ಲಪ್ಪ ರಾಮಣ್ಣನನ್ನು ಬಯ್ಯುತ್ತಿದ್ದ. ಪರಶ್ಯಾ ತೋಳೇರಿಸಿ ಹೊಡೆದಾಟಕ್ಕೆ ಸಜ್ಜಾಗಿದ್ದ. ಮದುವೆಯಲ್ಲಿ ಮುಯ್ಯ ಮಾಡಲು ಹತ್ತು ರೂಪಾಯಿ ಕೊಟ್ಟಿದ್ದರೂ ರಾಮಪ್ಪ ಐದೇ ರೂಪಾಯಿ ಮುಯ್ಯ ಮಾಡಿ ಉಳಿದದ್ದು ಕಿಸೆಗೆ ಹಾಕಿದ್ದ. ಆಯಾರ ಪಟ್ಟಿಯನ್ನು ಸ್ವತಃ ತಾನೇ ನೋಡಿದ ಯಲ್ಲಪ್ಪನ ಸಿಟ್ಟು ನೆತ್ತಿಗೇರಿತ್ತು. ಅಪ್ಪನ ಮುಂದೆ ತಾವು ಸುಳ್ಳು ಹೇಳಿದೆನೆಂದು ಪರಶ್ಯಾ ಕೆರಳಿ ಕೆಂಡವಾಗಿದ್ದ. ಆದರೂ ರಾಮಪ್ಪ ಸಾಧಿಸುತ್ತಿದ್ದದ್ದು ಪರಶ್ಯಾ ಕೊಟ್ಟಿದ್ದು ಐದೇ ರೂಪಾಯಿ ಎಂದು. ಕೆಟ್ಟ ಕೆಟ್ಟ ಬಯ್ಯುತ್ತ ಅಪ್ಪನನ್ನು ಪರಶ್ಯಾ ಹೊಡೆಯಲು ಬಂದದ್ದು ನೋಡಿ ತಡೆಯದೆ ಭೀಮ ನಡುವೆ ಹೋಗಿ ಪರಶ್ಯಾನನ್ನು ನುಗಿಸಿದ. ಹೆಸರಿಗಷ್ಟೇ ಭೀಮ! ಪರಶ್ಯಾನ ತೋಳಬಲದ ಮುಂದೆ ಹೇಗೆ ಈಡಾದಾನು ಈ ನರಪೇತಲ. ಅಪ್ಪನನ್ನು ಬಿಟ್ಟು ಮಗನನ್ನು ಹಿಡಿದು ಹೊಡೆಯತೊಡಗಿದ. ಮಾದವ್ವನ ಮನಸ್ಸು ಕೋಮಲ ಸ್ವಭಾವದ ಗಂಡ ಪೆಟ್ಟು ತಿನ್ನುತ್ತಿರುವುದು ನೋಡಿ ಚಡಪಡಿಸಿತು. ಏನು ಮಾಡಲೂ ತೋಚದೇ ಕಕ್ಕಾಬಿಕ್ಕಿಯಾದಳು. ಬಿಡಿಸಲು ಹೋದ ರಾಮಪ್ಪನೂ ಏಟು ತಿಂದ. ಗಂಗವ್ವ ಬಯ್ಗುಳ ಮಳೆ ಸುರಿಸುತ್ತ ಮಣ್ಣು ತೂರಿ ಕೂಡಿದ ಮಂದಿಯೆದುರು ತಕತಕ ಕುಣಿದು ಶಾಪ ಹಾಕಿದಳು. ಬಾಗಿಲಲ್ಲೆ ನಿಂತು ಮಾದವ್ವ ದೈನ್ಯದಿಂದ ಕಣ್ಣಲ್ಲೇ ಬೇಡಿಕೊಂಡಳು ಗಂಡನನ್ನು ಬಿಟ್ಟುಬಿಡೆಂದು. ಪರಶ್ಯಾ ಅದನ್ನು ಕಂಡೂ ಕಾಣದಂತೆ ಹುರುಪು ತುಂಬಿ ಇನ್ನಷ್ಟು ಬಡಿದ.

"ಏ ಹುಡುಗೀs ಈ ಮನೀ ಸೊಸಿಯುs ಮಾಧುರಿ ಅಂತಲ್ಲs ನಿನ್ನ ಹೆಸ್ರು. ಅಂದ ನಾನ ನಿನ ಕೈಯಾಗ ಹತ್ತರ ನೋಟ ಕೊಟ್ಟಿದ್ನೆಲ್ಲ ಮುಯ್ಯ ಮಾಡಾಕ ನಿಮ್ಮಾವಗ ಕೊಡು ಅಂತ ಹೇಳಿದ್ದೆ ಹೌಂದಲ್ಲ. ನೀನರೆ ಕರೇವು ಏನೈತಿ ಹೇಳ. ಈ ಲುಚ್ಚಾ ನನ ಮಗಾ ಹಿಂತಾ ಹರಾಮಿ ರೊಕ್ಕಾ ತಿಂದs ಆಸ್ತಿ ಮಾಡ್ಯಾನ. ಎಂಜಲ ಕೈಲೆ ಕಾಗೀ ಹೊಡಿಯಾಂವ ಅಲ್ಲ ಅನೂದು ಗೊತ್ತಿದ್ದು ಕೊಟ್ಟಾಂವ ನಾನs ಹುಚ್ಚಮಂಗ್ಯಾ. ಏನೋ ದೊಡಮನಿಶ್ಯಾ ನಮ್ಮದು ತಿನ್ನಾಕಿಲ್ಲ ಅಂತ ತಪ್ಪ ತಿಳಕೊಂಡಿದ್ದೆ. ನೀ ಆಟ ಒದರ ಕರೇವ ಏನ ಅನ್ನೂದು. ಕೂಡಿದ ಮಂದ್ಯಾಗ ನಿಮ್ಮಾವನ ಆಬ್ರೂ ಕಳೀ. ಹೇಳ ಮತ್ತ ಹತ್ತರ ನೋಟ ಕೊಟ್ಟಿದ್ನೋ ಇಲ್ಲೋ."

ಗಂಡನ ಶರಟು ಹಿಡಿದು ನಿಂತು ಅಟ್ಟಹಾಸ ಮಾಡುತ್ತ ಗಂಟಲು ಹರಿಯುವಂತೆ ಒದರುತ್ತಿದ್ದ ಪರಶ್ಯಾ ನಿಜವಾಗಿಯೂ ಮಹಾಭಾರತದ ದುಃಶ್ಯಾಸನನಂತೆ ಕಂಡ ಮಾದವ್ವನ ಕಣ್ಣಿಗೆ. ಅವನ ರೂಪ, ತೋಳ್ಬಲ, ಕೊಟ್ಟ ಸುಖ ಬೆಳಗಿನ ಮಂಜಿನಂತೆ ಕರಗಿ ಹೋಯಿತು. ಪರಶ್ಯಾನ ಕೈಯಲ್ಲಿ ಹಿಗ್ಗಾಮುಗ್ಗಾ ಎಳೆದಾಡಿ ಬಿಡಿಸಿಕೊಂಡು ಅವಮಾನಿತನಾಗಿದ್ದ ಭೀಮನ ಕಣ್ಣಲ್ಲಿ ನೀರು ತುಳುಕುತ್ತಿತ್ತು. ಮಾದವ್ವನ ಕರುಳು ಚುರ್ ಎಂದಿತು. ಅಲ್ಲಿಯವರೆಗೆ ನಡುಗುತ್ತಿದ್ದ ಕಾಲುಗಳಲ್ಲಿ ದೈತ್ಯಶಕ್ತಿ ತುಂಬಿತು. ದಡದಡ ಬಾಗಿಲು ದಾಟಿ ಅಂಗಳಕ್ಕಿಳಿದವಳೇ ಪರಶ್ಯಾನ ಕೈಯಿಂದ ಗಂಡನನ್ನು ಬಿಡಿಸಿ ನಡುವೆ ನುಗ್ಗಿ ಟಪಾರನೆ ಅವನ ಕಪಾಳಿಗೆ ಒಂದೇಟು ಬಿಗಿದಳು. ಪರಶ್ಯಾ ಬೆಚ್ಚಿ ಹಿಂದೆ ಸರಿದ.

"ಏ ಪರಶ್ಯಾ ಯಾಕೋ ಬದ್ಮಾಶ್ ನನ ಮಗನ. ಮೈಯಾಗಿನ ಸೊಕ್ಕ ಭಾಳ ಆಗೈತಿ ನಿನಗ. ಊರಾಗ ಯಾರೂ ಹೇಳುವರು ಕೇಳುವರು ಅದಾರಿಲ್ಲೊ ನಿನಗ. ಹರೇ ಉಕ್ಕಿ ಹರ್ಯಾಕ ಹತ್ತೈತಿ. ಕಂಡ ಕಂಡ ಹೆಣ್ಣುಮಕ್ಕಳ ಕೈ ಹಿಡಿಯಾಕ ಬರತೀ, ಗರತಿ ಗಂಗವ್ವನ ಸೊಸೀ ನಾನು. ನಿನ್ನ ಬಲೀಗೆ ಬೀಳತೇನ ಜೋಕುಮಾರಾ? ಮೊನ್ನಿ ಕತ್ತಲ ಕಾವಳದಾಗ ಬಯಲು ಕಡೀಗೆ ಹೋಗೂ ಮುಂದ ನನ್ನ ಹಿಡಕೊಳ್ಳಾಕ ಬಂದಿದ್ದೆಲ್ಲೊ ಬೇಬರ್ಶಿ. ಚರಗೀಲೆ ನಿನಗೊಂದ ಏಟ ಕೊಟ್ಟು ಓಡಿ ಬಂದಿದ್ದೆ. ನಿನ ಕಚ್ಚೀ ಬದ್ರ ಇಟಕೋ. ಇಲ್ಲಾಂದರ ಹಾದೀ ಹೆಣಾ ಆಗಿ

ಹೋದೀ. ಸುಳ್ಳ ಬ್ಯಾರೇ ಹೇಳತೀಯಾ. ನೀ ಆವತ್ತ ಕೊಟ್ಟಿದ್ದs ಐದು ರೂಪಾಯಿ ನೋಟು. ಅದೂ ಹರದು ಚಿಂದಿ ಆಗಿತ್ತ. ಸುಮಸುಮಕ ಜಗಳಾ ತಗದ ಬಡಿಯಾಕ ಬಂದೀಯಾ ನನ್ನ ಗಂಡನ್ನ ನಡೀ ಅತ್ತ."

ತೆರೆದ ಬಾಯಿ ಮುಚ್ಚದೇ ಎಲ್ಲರೂ ನೋಡುತ್ತಿರಲು ಭೀಮನನ್ನು ಬಳಸಿ ಹಿಡಿದುಕೊಂಡು ಮನೆಗೆ ನಡೆದಳು ಮಾದವ್ವ. ಹೆಣದಂತೆ ಬಿಳಿಚಿಕೊಂಡಿದ್ದ ಪರಶ್ಯಾ ಕಂಬದಂತೆ ನಿಂತುಬಿಟ್ಟಿದ್ದ. 'ಸೂಳಿಮಗನ ನೀನs ನನಗ ಮೋಸಾ ಮಾಡಿ ರಾಮಣ್ಣನ ಕೂಡ ಜಗಳಾ ಹಚ್ಚಿದ್ಯಾ' ಯಲ್ಲಪ್ಪ ಗೊಣಗುತ್ತ ಜಾಗ ಬಿಟ್ಟ. ಕೂಡಿದ ಜನ ತಲೆಗೊಂದು ಮಾತಾಡುತ್ತ ಯಾರನ್ನೂ ನಂಬಬೇಕೋ ತಿಳಿಯದ ಭ್ರಾಂತಿಯಲ್ಲಿ ಮನೆ ಸೇರಿದರು. ಮಕ್ಕಳ ಗುಂಪಿನಲ್ಲಿದ್ದ ನಿಂಗ 'ಜೈ ಮಾಧುರಿ ದೀಕ್ಷಿತ' ಎಂದು ಕೂಗಿ ಕುಣಿದ.

ಮಾದವ್ವ ತಾನೂ ಗೆದ್ದು ಸೋತ ಮಾವನನ್ನೂ ಗೆಲ್ಲಿಸಿದ್ದಳು.

***



# ನನಗೂ ಒಂದು ಸೀಟು

ಕೇಳಲು ಇಂಪಾಗಿದ್ದರೂ ತಂತಿಗಳ ಮೃದುವಾದ ಝೇಂಕಾರ ಮನೆ ತುಂಬಿದ ಶಾಂತಿಯನ್ನು ಭಂಗಗೊಳಿಸಿದಾಗ ಸರಸ್ವತಿಯ ಕಿವಿಗೆ ಕರ್ಕಶವೆನಿಸಿ, ಬೆಚ್ಚಿ ತಲೆಯೆತ್ತಿ, ಮೋನಿಕಾ ಗಂಡನಿಗೆ ಕಾಣಿಕೆಯಾಗಿ ಕೊಟ್ಟ ಗೋಡೆ ಗಡಿಯಾರವನ್ನು ನೋಡಿದಳು. ಸಿತಾರಿನ ರಿಯಾಜಿಗೆ ಅರ್ಧ ತಾಸು ತಡವಾಗಿತ್ತು. ಬೆರಳಿನ ಮೀಟುವಿಕೆಯಲ್ಲಿ ಕೋಪ ತುಂಬಿತ್ತು.

ಎರಡು - ಮೂರು ವರ್ಷ ಸಿತಾರ ಕಲಿತರೂ ಒಂದು ರಾಗವನ್ನೂ ಸರಿಯಾಗಿ ಬಾರಿಸಲು ಬರದ ಮೋನಿಕಾ - ಒನಪು... ವಯ್ಯಾರ....ಚಂಚಲಕಣ್ಣಿನ ಹುಡುಗಿ. ದಿವಾಕರನನ್ನು ಕಂಡೊಡನೆ ತಾವರೆಯಂತೆ ಮುಖ ಅರಳಿ, ಬೆರಳು ಸಿತಾರಿನ ಮೇಲೆ ಓಡುತ್ತಿರಲಿಲ್ಲ. ಕಲಿತದ್ದು ಸಾಕು ಎಂದು ದಿವಾಕರನೇ ಅವಳನ್ನು ನಯವಾಗಿ ತಿರುಗಿ ಕಳಿಸಿದ್ದ.....

ಗಡಿಯಾರದ ಪೆಂಡುಲಂನಂತೆ ಸರಸ್ವತಿ ಒಳಹೊರಗೆ ಚಲಿಸುತ್ತಿದ್ದಳು. ರಭಸದಿಂದ ತಂತಿಯ ಮೇಲಿನ ಬೆರಳುಗಳು ಓಲಾಡುತ್ತಿದ್ದಾಗ ಡೈನಿಂಗ ಟೇಬಲ್ ಒರೆಸಿ, ಹಾಲು ಹೆಪ್ಪಿಟ್ಟು, ಕಾಲು ಎಳೆಯುತ್ತ ಬಂದು ಬರಿದಾದ ದೊಡ್ಡ ಹಾಸಿಗೆಗೆ ಒರಗಿದಳು.

ತಡವಾದದ್ದು ತನ್ನ ತಪ್ಪಲ್ಲ. ಕಾಲೇಜಿನಿಂದ ಬಂದು ತಿನಿಸು- ಚಹಾ ಮಾಡಿ ಗಂಡನೊಡನೆ ತಿಂದು, ಅಡಿಗೆಗೆ ಇನ್ನೂ ವೇಳೆ ಇದೆ, ಮರುದಿನದ ಲೆಕ್ಚರ್ ಪ್ರಿಪೇರ್ ಮಾಡಿಕೊಳ್ಳಲೇ .... ಉಹುಂ ಮುಂಚೆ ಕೂದಲಿಗೆ ಮೆಹಂದಿ ಹಚ್ಚಲೇ, ತಡವಾದರೆ ಬಿಳಿಕೂದಲು ಅಲ್ಲಲ್ಲಿ ಇಣುಕಿ... ಅಸಹ್ಯ....

ಸಿತಾರ ಪಂಡಿತ ದಿವಾಕರನನ್ನು ಮುತ್ತುವ, ಮಾತಿಗೆಳೆಯುವ, ಸ್ನೇಹ ಬಯಸುವ ಸಲಿಗೆ ಮಾಡುವ ಹೆಣ್ಣುಗಳಿಗೇನು ಕಡಿಮೆ..... ಮಲಗಿದ್ದಲ್ಲಿಯೇ ಹೊರಳಿದಳು. ಡ್ರೆಸ್ಸಿಂಗ್ ಟೇಬಲ್ ಕನ್ನಡಿ ಹೇಳುತ್ತಿದೆ, ದುಂಡು ಮುಖ, ದೊಡ್ಡ ಕಣ್ಣು, ನೀಳರೆಪ್ಪೆಯ, ಆಕರ್ಷಕ ಮೈ ಕಟ್ಟಿನ ತಾನು ಒಂದು ಕಾಲಕ್ಕೆ ಸುಂದರಿಯೇ ಇದ್ದೆ ಎಂದು. ಇದ್ದೆ ಆದರೆ ಈಗ ...?

ತುಟಿ ಕೊಂಕಿತು. ಅಮೆರಿಕದಲ್ಲಿ ಇಂಜಿನಿಯರ್ ಆಗಿರುವ ಕಿರಣನ ತಾಯಿ ತಾನು. ನೋಡಿದವರೆಷ್ಟೋ ಜನ ಹೇಳಿದ್ದಾರೆ, 'ನಿಮಗೆ ಅಷ್ಟು ದೊಡ್ಡ ಮಗ ಇದ್ದಾನೆಂದರೆ ನಂಬಲಿಕ್ಕೇ ಆಗೂದಿಲ್ಲ ಸರಸಕ್ಕಾ, ಚಿಕ್ಕವರಾಂಗ ಕಾಣ್ತೇರಿ.'

ಕುಲುಕುಲು ನಗು. ಮನಸ್ಸು ತುಂಬಿ ಉಕ್ಕುತ್ತಿತ್ತು. ಮುಖ ರಂಗೇರುತ್ತಿತ್ತು. ಎಲ್ಲರೂ ತನ್ನ ಕಡೆಗೇ ನೋಡುತ್ತಿದ್ದಾರೆಯೇ ? ಕಾಲು ನೆಲದ ಮೇಲೆ ಇಡುತ್ತಿರಲಿಲ್ಲ. ಹಗುರಾಗಿ ಗಾಳಿಯಲ್ಲೇ ಹಾರಾಡುತ್ತಿದ್ದೆ. ಬೇರೆಯವರ ದೃಷ್ಟಿಯಲ್ಲಿ ಎಷ್ಟು ಸುಖಿ ತಾನು. ಸ್ವರ್ಗಸುಖ ಸೂರೆಗೊಂಡಿದೆ. ತನ್ನ ಮನೆಯಲ್ಲಿ, ತನ್ನ ಪ್ರೊಫೆಸರ್ ಹುದ್ದೆ, ಸಂಗೀತ ಕ್ಷೇತ್ರದಲ್ಲಿ ಹೆಸರಾದ ದಿವಾಕರ, ಚಿಕ್ಕ ವಯಸ್ಸಿನಲ್ಲಿಯೇ ಅಮೇರಿಕಕ್ಕೆ ಹಾರಿಹೋದ ಕಿರಣ, ಏನಿದೆ ಕೊರತೆ ? ಜೀವನದಲ್ಲಿ ಇನ್ನೇನು ಬೇಕು? ಉಹುಂ, ಏನೂ ಇಲ್ಲ. ಹೌದಾ ? ಮನದ ಮೂಲೆಯಲ್ಲಿ ನೋವಿನ ಎಳೆಯ ಸಣ್ಣ ಝೇಂಕಾರ ದಿವಾಕರನ ಸಿತಾರಿನ ಪ್ರತಿಧ್ವನಿಯಲ್ಲಿ ಮುಚ್ಚಿಹೋಗುವಂತಿದೆ - ತನ್ನ ಒಳಗಿನ ದನಿ.

'ಪುಣ್ಯಾ ಮಾಡಿ ಬಂದೀರಿ ಸರಸ್ವತಿ. ಒಬ್ಬನs ಮಗಾ ಆದರೂ ಶಾಣ್ಯಾ ಅದಾನು' ಕಿರಣ ವಿದೇಶಕ್ಕೆ ಹೊರಟಾಗ ತನ್ನ ಕಲೀಗ್ಸ್ ಅಭಿನಂದಿಸಿದ್ದರು.

ಕಷ್ಟಪಟ್ಟು, ತನ್ನ ಸುಖ ಸಂತೋಷ ಎಲ್ಲ ತ್ಯಾಗಮಾಡಿ ಬೆಳೆಸಿದ್ದು ಇವರಿಗೆಷ್ಟು ಅರ್ಥವಾದೀತು. ಪುಣ್ಯ ಅಂತೆ ಪುಣ್ಯ, ತನ್ನ ಒಳಗೇನೂ ಸಂತೋಷವಿರಲಿಲ್ಲ. ಬದಲು 'ಮಗ ಸ್ವಲ್ಪ ಧಡ್ಡ ಆಗಿದ್ದರ ಛೋಲೋ ಆಗ್ತಿತ್ತೋ ಏನೋ' - ವಿಚಿತ್ರ ಆದರೆ ಅನಿಸಿದ್ದು ಸತ್ಯ. ಅದರ ಪರಿಣಾಮ ಈಗ ಕಾಣ್ತಿದೆ. ತನ್ನ ಭಯ ನಿಜವಾಗಿದೆ. ಎರಡು ವರ್ಷದ ಹಿಂದೆ ಭಾರತಕ್ಕೆ ಬಂದು ಹೋದ ಕಿರಣ, ಅಮೇರಿಕದಲ್ಲಿಯೇ ಸೆಟಲ್ ಆಗುವ ತಯಾರಿಯಲ್ಲಿದ್ದಾನೆ. ತಾನು ಮದುವೆ ಆಗಲಿರುವ ಹುಡುಗಿಯ ಬಗ್ಗೆ ವಿವರವಾಗಿ ಹೇಳುತ್ತೇನೆಂದು ನಿನ್ನೆ ಫೋನ್ ಮಾಡಿದ್ದ. ನಾಳೆ ಅವನ ಫೋನ್ ಬರಬಹುದು...... ಉಸ್....

ನೋವಿನ ಇನ್ನೊಂದು ಎಳೆ ಸದಾಕಾಲ ತಾನು ಇದ್ದೇನೆಂದು ಸಾರುತ್ತಲೇ ಇದೆ. ಕಿರಣ ಹುಟ್ಟಿ ನಾಲ್ಕು ವರ್ಷಗಳ ಮೇಲೆ ಕೈಗೆ ಬಂದ ಕರ್ಪೂರದ ಗೊಂಬೆ ಯಾಮಿನಿ. ನಾಲ್ಕಾರು ವರ್ಷ ಆಟವಾಡಿ ಇದ್ದಕ್ಕಿದ್ದಂತೆ ಕರಗಿಹೋಯಿತು. ದಿವಾಕರ ನೌಕರಿಗೆ ರಾಜೀನಾಮೆ ಕೊಟ್ಟು ಮೂರು ತಿಂಗಳಾಗಿತ್ತು. ಸಂಗೀತ ಕಾರ್ಯಕ್ರಮಕ್ಕೆ ಊರೂರು ತಿರುಗುತ್ತಿದ್ದ. ಮಗಳ ಕೊನೆಯ ಗಳಿಗೆಯಲ್ಲಿ ಇರಲಾರದ್ದಕ್ಕೆ ತುಂಬ ಸಂಕಟಪಟ್ಟಿದ್ದ. ತಪ್ಪು ಮಾಡಿದಂತೆ ಮನದಲ್ಲೇ ಕೊರಗುತ್ತಿದ್ದ. ಮಾಡಲು ಕೆಲಸವಿಲ್ಲದೆ ಕಾಲ ಕಳೆಯಲು ಒದ್ದಾಡುತ್ತಿದ್ದ. ದಿನ ನೂಕುತ್ತಿದ್ದರು, ಅಷ್ಟೆ ಮರೆವು ಮನುಷ್ಯನಿಗೊಂದು ವರ. ಕ್ರಮೇಣ ಮನಸ್ಸು ಸ್ಥಿಮಿತಕ್ಕೆ ಬಂದು ಸುಧಾರಿಸಿ ಕೊಂಡಿದ್ದರು. ಸಿತಾರಿನ ಧೂಳು ಝಾಡಿಸಿ ಕೈಗೆತ್ತಿಕೊಂಡಿದ್ದ ದಿವಾಕರ.

....ಸಂಜೆ ತಲೆಗೆ ಮೆಹಂದಿ ಹಚ್ಚಿಕೊಳ್ಳುತ್ತಿದ್ದಾಗ ಜಾನಕಿ, ತನ್ನ ಅಕ್ಕನ ನಾದಿನಿ ಬಂದಿದ್ದಳು. ಅವಳು ಇರುವುದು ವಿನಾಯಕ ನಗರ, ತುಂಬಾ ದೂರ. ಅಪರೂಪಕ್ಕೊಮ್ಮೆ ಬರುವವಳು. 'ಸಂಜೆ ಕಾಲೇಜಿನಿಂದ ಬಂದಿರ್ತೀರಿ, ಕೂತು ಮಾತಾಡಬಹುದು ಅಂತ ತಡವಾಗಿ ಬಂದೆ, ಅಂತ ಮಾತು ಸುರುಮಾಡಿದವಳು ಏಳೂವರೆ ಆದರೂ ಏಳಲಿಲ್ಲ. ತಿನಿಸು ಚಹಾ ಆಯಿತು. ಯಾರ್‍ಯಾರದೋ ಸುದ್ದಿ, ಮದುವೆ, ಮುಂಜಿ, ಓಡಿ ಹೋದದ್ದು, ಕಳುವು ಆದದ್ದು ಎಲ್ಲಾ. ಬೇರೆಯವರ ಮನೆ ಕಳುವಾದಾಗ ಮಾತು ರಂಜನೀಯ. ಕೊನೆಗೆ ತಮ್ಮ ಮಹಿಳಾ ಮಂಡಳದವರೆಲ್ಲ ಕೂಡಿ ಮೌಂಟ್ ಅಬು ಪ್ರವಾಸಕ್ಕೆ ಹೋದದ್ದು, ಇನ್ನೂ ಎಲ್ಲೆಲ್ಲೋ ಹೋಗುವ ಪ್ಲಾನ್ ಹಾಕಿದ್ದು ಎಲ್ಲಾ ಹೇಳಿದಳು.

"ಹಾಂಗೆಲ್ಲಾ ಟೂರಿಗೆ ಹೋದಾಗ ಮಕ್ಕಳನ್ನು ಎಲ್ಲಿ ಬಿಡ್ತೀ'? ಮನೆ, ಗಂಡ, ಮಗ, ನಾಯಿ.... ಸರಸ್ವತಿಯ ಸಮಸ್ಯೆ.

'ಇಬ್ಬರನ್ನೂ ಅವ್ವನಲ್ಲಿ ಕಳಿಸಿದ್ದೆ. ಇವರಿಗೆ ಕುಕ್ಕರ್ ಇಟಕೊಳ್ರಿ, ಇಲ್ಲಾಂದರ ಹೋಟೆಲ್ ಊಟಾ ಮಾಡ್ರಿ ಅಂತ ಹೇಳಿದ್ದೆ. ಅಲ್ಲ ಸರಸಕ್ಕಾ, ಬರೇ, ಮನೀ ಕೆಲಸಾ ಅಂತ ಕೂತರ ನಮಗ ಬಿಡುಗಡಿ ಯಾವಾಗ ? ನಾವು ಎಂದ ನೋಡುದು ಹೊರಗಿನ ಜಗತ್ತು ? ಅವರೇನ ತಾವಾಗೇ ಕಳಿಸಿಕೊಡ್ತಾರ ? ಜಗಳಾ ಮಾಡಿಯೇ ಹೋಗಿದ್ದೆ. ಸುಮ್ಮನ ಇದ್ದರ ನಿಮಗ ಏನು ಬೇಕು ಅಂತ ಕೇಳುವವರು ಯಾರು? ಆದರ ಒಮ್ಮೆ ಮನಿಯಿಂದ ಹೊರಗ ಹೋದಮ್ಯಾಲೆ ಭಾರಿ ಗಮ್ಮತ್ ಇರತ್ತ ಹಾಂ. ಸಣ್ಣ ಹುಡುಗರ ಹಾಂಗ ಕುಣಿತೀವಿ, ಹಾಡ್ತೀವಿ, ಬೇಕಾದ್ದು ಕೊಂಡು ತಿಂತೀವಿ, ಲೈಫನಾಗ ಒಂದು ನಮೂನಿ ಹುರುಪು ಬರ್‍ತದ, ಎಂಜಾಯ್ ಮಾಡಿ ತಿರುಗಿ ಬಂದ ಮ್ಯಾಲೆ ಒಂದಕ್ಕೆರಡರಷ್ಟು ಕೆಲಸಾ ಮಾಡ್ತೀವಿ."

ಜಾನಕಿಯ ಮಾತು ಕೇಳುತ್ತ ಮೈ ಮರೆತಿರಲಿಲ್ಲ ಸರಸ್ವತಿ. 'ಪ್ರವಾಸಕ್ಕೆಲ್ಲಾ ರೊಕ್ಕ ಬೇಕಲ್ಲ ಜಾನಕೀ, ನೀವೆಲ್ಲಾ ಗೃಹಿಣಿಯರು ಕಾಣ್ತದ, ವರ್ಕಿಂಗ್ ವಿಮೆನ್ ಅಲ್ಲ?' 'ಹೌದಕ್ಕಾ, ಇಬ್ಬರು ಮೂವರು ಅಷ್ಟ ವರ್ಕಿಂಗ್ ಅದಾರ, ನಾವೆಲ್ಲಾ ತಿಂಗಳಾ ತಿಂಗಳಾ ಚೀಟಿ ತುಂಬಿದ ರೊಕ್ಕ ಉಳಿಸಿಕೊಂಡಿರಿತೀವಿ. ಅದನ್ನ ಬಂಗಾರಾ ಕೊಂಡೆ, ಸೀರಿಕೊಂಡೆ, ಪಾತ್ರಿಕೊಂಡೆ ಅಂತ ಉಳದ ಹೆಂಗಸರ ಹಾಂಗ ಖರ್ಚು ಮಾಡೂದಿಲ್ಲ. ನಮ್ಮ ಪ್ರವಾಸಕ್ಕ ಅದs ರೊಕ್ಕ.'

ಕೊನೆಯ ಮಾತಿಗೆ ಇಬ್ಬರೂ ಜೋರಾಗಿಯೇ ನಕ್ಕಿದ್ದರು. ತಾವು ಉಳಿದ ಹೆಂಗಸರ ಹಾಗಲ್ಲ - ಮಾತು ಖುಷಿ ತಂದಿತ್ತು. ಇವರ ಮಾತಿನ ನಡುವೆ ಎರಡೆರಡು ಸಲ ದಿವಾಕರ ಹಾದು ಹೋಗಿದ್ದ. ಅವನ ಅಸಹನೆಯ ಕಾರಣ ತಿಳಿದಿತ್ತು ಸರಸ್ವತಿಗೆ. ಅವಸರದಲ್ಲಿ ಒಳಗೆ ಹೋಗಿ ಕುಕ್ಕರ್ ಇಟ್ಟು ಬಂದಿದ್ದಳು. ಎಂಟೂವರೆಗೆ ತಪ್ಪದೇ ದಿವಾಕರನ ರಾತ್ರಿ ಊಟವಾಗಲೇ ಬೇಕು. ನಂತರ ವಿಶ್ರಾಂತಿ, ಹತ್ತಕ್ಕೆ ಸಿತಾರ ಎತ್ತಿಕೊಂಡರೆ ರಾತ್ರಿ ಹನ್ನೆರಡರವರೆಗೆ ಎರಡು ತಾಸು ಭರಪೂರ ಪ್ರ್ಯಾಕ್ಟೀಸ್....

ಮದುವೆಯಾದ ಹೊಸದರಲ್ಲಿ ಬೆಡ್ ರೂಮಿನಲ್ಲಿಯೇ ಸಿತಾರ ಬಾರಿಸುತ್ತಿದ್ದ ದಿವಾಕರ. ಝೇಂಕಾರ ಕಿವಿ ತುಂಬಿಕೊಂಡು, ಕಣ್ಣುಮುಚ್ಚಿ ಆಲಿಸುತ್ತ ತಾನು ಹಾಸಿಗೆಯಲ್ಲಿ ಒರಗುತ್ತಿದ್ದಳು.

ಬೆಳಿಗ್ಗೆ ಐದಕ್ಕೆ ಎಚ್ಚರಗೊಂಡ ಕಣ್ಣುಗಳು ಯಾವ ಮಾಯದಲ್ಲೋ ಮುಚ್ಚಿರುತ್ತಿದ್ದವು. ಬಿಸಿ ಉಸಿರು, ಬೆಚ್ಚನೆಯ ದೇಹ, ಕಣ್ಣುಗಳ ಮೇಲೆ ಒರಟು ತುಟಿಗಳು, ಸಿಗರೇಟಿನ ವಾಸನೆ.... ಕಣ್ಣು ತೆರೆಯದೆ,

'ರಿಯಾಜ ಮುಗಿತೇನ? ಸಾರಿ ದಿವೂ, ನನಗೆ ನಿದ್ದಿ ಹತ್ತಿತ್ತು'.

'ಇಷ್ಟು ಛಂದನ್ನ ಹುಡುಗಿ, ಕೈಗೆ ಸಿಗೂ ಹಾಂಗ ಮಲಗಿ ನಿರೀಕ್ಷಾ ಮಾಡ್ತಾ ಇದ್ದರ ಸಿತಾರ ಕಡೆ ಲಕ್ಷ್ಯ ಹ್ಯಾಂಗ ಉಳೀತದ? ನಿನ್ನ ಕಣ್ಣು ತೆರೆದರೂ ಛಂದ, ಮುಚ್ಚಿದರೂ, ಕಣ್ಣಿನ ಉಬ್ಬು, ತಗ್ಗು, ನೀಳ ರೆಪ್ಪಿ. ಇದಕ ಒಂದು ಅಂಚು ಕೊಟ್ಟಾಂಗ ಎಸಳು ಹುಬ್ಬು, ಈ ಮೊಂಡ ಮೂಗು....' ಮೂಗು ಹಿಂಡುತ್ತಿದ್ದ ದಿವಾಕರನೊಡನೆ ಕೊಸರಾಡಿ ಬೆನ್ನ ಮೇಲೆ ಗುದ್ದುತ್ತಿದ್ದಳು. ಹತ್ತಿರ ಎಳೆದುಕೊಳ್ಳುತ್ತ....

ಸುಖದ ಸಂವೇದನೆಯ ಮಧ್ಯೆ ಕಣ್ಣು ತೆರೆದಳು ಸರಸ್ವತಿ. ಅಲ್ಲೇನಿತ್ತು? ಬರಿದಾದ ಹಾಸಿಗೆ. ಬೇರೊಂದು ಕೋಣೆಯಿಂದ ತಂತಿಗಳ ಝಣತ್ಕಾರ ಕೇಳುತ್ತಿತ್ತು. ಸಂಗೀತ ತೀವ್ರಗತಿಯಲ್ಲಿತ್ತು. ಇನ್ನೇನು ಮುಗೀತು. ರಿಯಾಜ ಮುಗಿದರೂ ದಿವಾಕರ ಈ ಕೋಣೆಗೆ ಈಗಲೇ ಬರುವುದಿಲ್ಲ. ಡ್ರಿಂಕ್ಸ್ ಹಾಕಿಕೊಂಡು, ಸಿಗರೇಟು ಹಚ್ಚಿ ಓದುತ್ತಾ ಕೂಡ್ರುತ್ತಾನೆ. ಯಾವಾಗ ಬಂದು ಮಲಗುತ್ತಾನೋ. ತನಗೆ ಗೊತ್ತೇ ಆಗುವದಿಲ್ಲ. ಮರುದಿನ ಅವನು ಏಳುವುದೇ ಒಂಬತ್ತರ ಮೇಲೆ; ತಾನು ಕಾಲೇಜಿಗೆ ಹೋಗುವ ಗಡಿಬಿಡಿಯಲ್ಲಿದ್ದಾಗ, ಸ್ನಾನ, ಊಟ ತಿಂಡಿ ನಾಲ್ಕಾರು ಮಾತು. ಟೇಬಲ್ ಮೇಲೆ ಎಲ್ಲ ಜೋಡಿಸಿ ಇಟ್ಟರೆ ಹಸಿವಾದಾಗೆದ್ದು ಊಟ ಮಾಡುತ್ತಾನೆ ಅಷ್ಟೇ. ಹತ್ತಿರವಿದ್ದೂಎಷ್ಟೋ ದೂರ .... ಕೈಗೆ ನಿಲುಕಲಾರದಷ್ಟು.

ಮುಷ್ಟಿಯಿಂದ ಉಸುಕು ಜಾರಿಹೋಗುವಂತೆ, ಕ್ಷಣ, ತಾಸು, ದಿನಗಳು ಕೆಳಗೆ ಸುರಿದು ಹೋಗುತ್ತಿವೆ ಮತ್ತೆ ಎತ್ತಿಕೊಳ್ಳಲು ಬಾರದಂತೆ. ಮಗನ ನೆನಪು ತೀವ್ರವಾದಾಗ, ದಿವಾಕರನ ಸಾಮೀಪ್ಯ ಸಿಗದೆ ಒಂಟಿಯಾದಾಗ, ಖಾಲಿಯಾದ ಮನಸ್ಸು ಖಿನ್ನವಾದಾಗ, ಕೊಡ ತುಂಬಿ ಹರಿಯುವಂತೆ ಕಣ್ಣೀರು ಸೋರುತ್ತದೆ. ಮನದ ಅಳಲನ್ನು ಹೇಳಿಕೊಳ್ಳಲು ಯಾರಿದ್ದಾರೆ? ಕಲೀಗ್ಸ್ ಶಾಂತಾ, ಜಲಜ ಅವರೊಡನೆ ಹೇಳಿಕೊಂಡರೆ ಹುಚ್ಚಿ ಎಂದು ನಗುವವರೇ. ಹತ್ತಿರದ ಸ್ನೇಹಿತರಂತೂ ಇಲ್ಲವೇ ಇಲ್ಲ. ಎಲ್ಲರೂ 'ಹಾಯ್' 'ಹಲೋ'ಗಳೇ. ಯುವಜನೋತ್ಸವದ ಕಾರ್ಯಕ್ರಮಗಳಿಗೆ ಕೂಡಿ, ಚರ್ಚೆ ಮಾಡಿ, ಓಡಾಡಿದ್ದಕ್ಕೆ ಪ್ರೊ. ಸುದರ್ಶನಗೂ ತನಗೂ ಜೋಡಿಸಿ ಕತೆ ಕಟ್ಟಿದ್ದರಲ್ಲ, ಅಬ್ಬಾ! ನೆನಪಾದರೆ ಈಗಲೂ ಜಿಗುಪ್ಸೆಯಾಗ್ತದೆ. ಕಟ್ಟುಕತೆಗೆ ಕೈಕಾಲು ಹುಟ್ಟಿ ದಿವಾಕರನವರೆಗೂ ಬಂದೀತೆಂದು ಹೆದರಿ ತಾನೇ ಒಂದು ದಿನ ಎಲ್ಲ ಅವನ ಮುಂದೆ ಹೇಳಿ ಅತ್ತುಬಿಟ್ಟಿದ್ದೆ. 'ಶಿಟ್ ಅದನ್ನೆಲ್ಲಾ ಮರತ್ಬಿಡು' ಅಂದಿದ್ದ. ಅಂದಿನಿಂದ ತನ್ನ ಬದುಕು ಮತ್ತೂ ಯಾಂತ್ರಿಕವಾಗಿದೆ. ಕಾಲೇಜು, ಮನೆ, ಕೆಲಸ ಲೆಕ್ಚರ್, ಪೇಪರ್ ಅಷ್ಟೇ.

ಛೀ. ಇವತ್ತೇನಾಗೇದ ತನಗ, ಏನೇನೋ ನೆನೆಸಿಕೊಳ್ತೀನಿ. ಮನಸ್ಸಿಗೆ ಎಷ್ಟು ಸಮಾಧಾನ ಹೇಳಿಕೊಂಡರೂ ಅಳು ಬರಲಿಕ್ಕೆ ಹತ್ತೇದ. ಊಟಕ್ಕೆ ಕೂತಾಗ ದಿವಾಕರ ಸಿಟ್ಟಿಲೆ ಒಂದೆರಡು ಮಾತು ಅಂದರ ಇಷ್ಟ್ಯಾಕ ಹಚಿಕೋಬೇಕು?

ಸಿತಾರ ರಿಯಾಜಕ ತಡಾ ಆತಂತ ಅವನಿಗೆ ಸಿಟ್ಟು ಬಂತು. ಆದರ ನಾ ಬೇಕೂಂತ ತಡಾ ಮಾಡ್ಲಿಲ್ಲ. ಮನೀ ಅಂದಮ್ಯಾಲೆ ನಾಕ ಜನಾ ಬರೋವರು ಹೋಗೋವರು ಇದ್ದs ಇರತಾರ. ಮಂದಿ, ಬಳಗ, ಸಮಾಜ ಬಿಟ್ಟು ಬದಕಲಿಕ್ಕೆ ಆಗ್ತದೇನು? ದಿವಾಕರ ಮೊದಲ ಹಿಂಗ ಇದ್ದಿದ್ದಿಲ್ಲ. ಸಿತಾರ, ಸಂಗೀತ ಪ್ರೋಗ್ರಾಂ, ಪತ್ರಿಕೆ, ಫೋಟೋ, ಪ್ರಚಾರ ಬಿಟ್ಟರ ಅವನ ಮಟ್ಟಿಗೆ ಬೇರೆ ಜಗತ್ತಿನ ಬಾಗಿಲು ಮುಚ್ಚಿ ಬಿಟ್ಯಾವ. ಜನರ ಆದರ, ಸ್ವಾಗತ, ಸತ್ಕಾರದಿಂದ ಪೂರ್ಣ ತೃಪ್ತಿ ಅದ ಅವನಿಗೆ, ಆದರ ನನಗ ... ಏನದ?

ದಿವಾಕರನ ಜೊತೆ ಹೋದಾಗಲೆಲ್ಲ ತಾನೊಂದು ಬೇರೆ ಲೋಕದ ಪ್ರಾಣಿ ಏನೋ ಎಂಬಂತೆ ವಿನಯ ಗೌರವದಿಂದ ದೂರ ನಿಂತು ಕೆಲವರು ನೋಡಿದರೆ, ಇನ್ನು ಕೆಲವರು ಇವಳಿಗೆ ಇಂಥ ಗಂಡ ಸಿಕ್ಕಿದ್ದಾನಲ್ಲ ಅಂತ ಹೊಟ್ಟೆಕಿಚ್ಚಿನಿಂದ ದುರುಗುಟ್ಟಿ ನೋಡ್ತಾರೆ.

'ಏನ್ರೀ ನೀವು ಸಿತಾರ ಬಾರಿಸಲಿಕ್ಕೆ ಕಲೀಲಿಲ್ಲೇನು ?' ಮಾತಿನಲ್ಲಿ ಚುಚ್ಚುತ್ತಾರೆ ಇನ್ನು ಕೆಲವರು. ಇಬ್ಬರೂ ಸಿತಾರ ಬಾರಿಸ್ತಾ ಕೂತರೆ ಮನೆ ನಡಸೋರು ಯಾರು ಅಂತ ಯೋಚಿಸೋದೆ ಇಲ್ಲ ಈ ಜನ, ತಾನಾದರೂ ಏನು ಕಡಿಮೆ? ಗಂಡನನ್ನು ಅವರೆಲ್ಲ ಹೊಗಳುತ್ತಿರುವಾಗ ಮುಗುಳ್ನಗುತ್ತ, ಎಲ್ಲಾ ನಿಮ್ಮಿಮ್ಮ ಪ್ರೀತಿ, ಅಭಿಮಾನ ಅಂತ ಕೈ ಮುಗಿದು, ನಾಟಕೀಯವಾಗಿ ಮಾತಾಡುತ್ತ, ಒಳಗೊಳಗ ಬೇಗ ಈ ಗದ್ದಲದಿಂದ ಪಾರಾಗಿ ಮನೆಗೆ ಹೋದರೆ ಸಾಕು ಅಂತ ಚಡಪಡಿಸ್ತಿರ್ತೇನೆ.

'ಓ ಸರಸ್ವತಿ ಬರ್ರಿ. ಇಲ್ಲಿ ಬರ್ರಿ, ಮುಂದಿನ ಸಾಲಿನ್ಯಾಗ., ಇವರು ದಿವಾಕರರ ಹೆಂಡತಿ.'

'ಹೆ ಹ್ಹೆ ತುಂಬಾ ಸಂತೋಷವಾಯ್ತು ನಿಮ್ಮ ಭೆಟ್ಟಿಯಾಗಿ. ದಿವಾಕರರ' ಹೆಂಡತಿಯಾಗಿ ಪುಣ್ಯ ಮಾಡೀರಿ. ದಿನಾ ಮನಿಯೊಳಗ ಇಂಥಾ ದಿವ್ಯ ಸಂಗೀತ ಕೇಳ್ತೀರಿ. ಹೆ ಹ್ಹೆ ನಮಸ್ಕಾರ.'

'ಇಲ್ನೋಡ್ರಿ ದೇಸಾಯರ, ಇವರs ಸಿತಾರ ಪಟು ಪಂಡಿತ ದಿವಾಕರರ ಪತ್ನಿ.

ದಿವಾಕರರ ಪತ್ನಿ ಹೆಂಡತಿ, ಅರ್ಧಾಂಗಿನಿ, ಎಲ್ಲಿ ಹೋದರೂ ಇದೇ ನನ್ನ ಐಡೆಂಟಿಟಿ. ತಲೆಚಿಟ್ಟು ಹಿಡಿದು ಹೋಗಿದೆ. ಯಾಕೆ? ತಾನೂ ಪ್ರೊಫೆಸರ್, ನೂರಾರು ಜನ ಸ್ಟೂಡೆಂಟ್ಸಿಗೆ ಕಲಿಸಿದ್ದೇನೆ. ಅವರೆಲ್ಲರ ಪ್ರೀತಿ, ಗೌರವ ತನಗಿದೆ. ಅರ್ಥಶಾಸ್ತ್ರದಲ್ಲಿ ಲೇಖನಗಳು ಪ್ರಕಟವಾಗಿವೆ. ಪುಸ್ತಕ ರೂಪದಲ್ಲೂ ಬಂದಿದೆ. ತನಗೊಂದು ವ್ಯಕ್ತಿತ್ವವಿದೆ, ಅಭಿರುಚಿ, ಆಲೋಚನೆಗಳಿವೆ. ಮನೆ ಜವಾಬ್ದಾರಿಯೂ ಇದೆ. ಇದೆಲ್ಲಾ ಜನರಿಗೆ ಕಾಣೋದೇ ಇಲ್ಲವೇ? ಸಿಟ್ಟಿನಿಂದ ಮನಸ್ಸು ಬಂಡೇಳುತ್ತಿತ್ತು. ಮತ್ತ ಮತ್ತೆ ಇದರ ಪುನರಾವರ್ತನೆಯಾಗುತ್ತ ಬಂದಂತೆ ತನ್ನ ಆಸಕ್ತಿ ಕಡಿಮೆಯಾಗಿ ಈಗೀಗ ಗಂಡನೊಡನೆ ಪ್ರೋಗ್ರಾಂಗಳಿಗೆ ಹೋಗುವದನ್ನೇ ಬಿಟ್ಟಿದ್ದಾಳೆ.

ಈ ಬದಲಾವಣೆ ಗುರುತುಸಿದ ಜನ ತಮ್ಮ ಕುಹಕ ಬುದ್ಧಿಗೆ ತಕ್ಕಂತೆ ದಿವಾಕರನೊಡನೆ ಯಾರ್‍ಯಾರೋ ಹುಡುಗಿಯರನ್ನು ಜೋಡಿಸಿ ಆಡಿಕೊಳ್ತಾರ. ಗಂಡಸಿನ ಬುದ್ಧಿ ಹೀಗೆ ಅಂತ ಹೇಳಲಿಕ್ಕೆ ಆಗೂದಿಲ್ಲ. 'ಹಾವು ಸಣ್ಣದು ಅನಬಾರದು. ಗಂಡಸು ನನ್ನವ ಅನಬಾರದು' ಅಂತ ಅಜ್ಜಿ ಹೇಳತಿದ್ದ ಮಾತು ಈಗೂ ನೆನಪದ ನನಗ. ಆದರೂ... ದಿವಾಕರನ ಬಗ್ಗೆ ಇಂಥಾ ಮಾತು ನಂಬಲಿಕ್ಕೆ ಯಾಕೋ ಮನಸ್ಸು ಒಪ್ಪೂದಿಲ್ಲ.... ದಿವಾಕರ, ದಿವೂ ಇನ್ನೂ ಬರಲಿಲ್ಲ ಮಲಗಲಿಕ್ಕೆ. ಹೋಗಿ ಕರೀಲೇನು? ಹುಂ.... ಉಹುಂ..... ಅಭಿಮಾನ ಅಡ್ಡ ಬರ್ತದ. ಬಂದಾಗ ಬರಲಿ....

.... ದಿನದಂತೆ ಬೆಳಿಗ್ಗೆ ಬೇಗ ಎಚ್ಚರಗೊಂಡಿದ್ದ ಸರಸ್ವತಿ ಗಾಢ ನಿದ್ದೆಯಲ್ಲಿದ್ದ ಗಂಡನ ಮುಖ ನೋಡಿದಳು. ಕಾಲನ ದಾಳಿಗೆ ಸಿಕ್ಕ ಮುಖ, ಉಬ್ಬಿದ ಕಣ್ಣುಗಳ ಕೆಳಗಿನ ತಪ್ಪು ವರ್ತುಲ, ಬಿಳಿ ತಲೆ, ಪೆಚ್ಚು ಗಲ್ಲ. ದಿಟ್ಟಿಸಿದಳು. ಜೊತೆಗೇ ಇದ್ದರೂ ದಿವಾಕರನನ್ನು ಸರಿಯಾಗಿ ನೋಡಿಲ್ಲವೇ ? ಎಷ್ಟು ಸೊರಗಿದ್ದಾನಲ್ಲ! ಬತ್ತಿ ಹೋದ ಹಣ್ಣಾಗಿದ್ದಾನೆ

ಪಾಪ! ವಿಶ್ರಾಂತಿ ಇಲ್ಲದ ದುಡಿತ ಯಾತಕ್ಕಾಗಿ ? ಹಣಕ್ಕಾಗಿ ಅಂತೂ ಅಲ್ಲ. ಆರಾಮವಾಗಿ ಮನೆಯಲ್ಲಿದ್ದರೆ ಸಾಕು. ಇಬ್ಬರೂ ಜೊತೆಗಿದ್ದರೆ ಒಂಟಿತನ ಕಾಡುವುದಿಲ್ಲ. ಮನದ ತಳಮಳದಿಂದ ತಲೆ ಬಿಸಿಯಾಗುವುದಿಲ್ಲ. ತನ್ನದೇ ಹುಚ್ಚುತನ. ದಿವಾಕರನಿಗೆ ಒಂಟಿತನ ಕಾಡೋದಿಲ್ಲ. ಸಿತಾರ ಜೊತೆಗೆ ಇದೆಯಲ್ಲ. ತಾನು.... ಸರಸ್ವತಿ.... ಈಗ ಅವನಿಗೆ ಬೇಕಾಗಿಲ್ಲ. ... ಹುಂ ಅವನ ಪಾಲಿಗೆ ತಾನು ಇಲ್ಲ.

ಕೈ ಜಾರಿ ಹೋಗುತ್ತಿರುವವನ್ನು ಹಿಡಿದುಕೊಳ್ಳುವಂತೆ ಗಂಡನನ್ನು ಗಟ್ಟಿಯಾಗಿ ಅಪ್ಪಿಕೊಂಡು, ದೀರ್ಘವಾಗಿ ಮುತ್ತಿಟ್ಟಳು ಸರಸ್ವತಿ. ಅರೆನಿದ್ದೆಯಲ್ಲಿ ಕೆಂಪು ಕಣ್ಣು ತೆರೆದು ನೋಡಿದ ದಿವಾಕರ ಮುಖ ಕಿವುಚಿ, ಅವಳನ್ನು ಕೊಸರಿ, ದೂರ ತಳ್ಳಿ 'ಥೂ ಎದ್ದ ಹೋಗ ಅತ್ಲಾಗ' ಎಂದು ಕಿರುಚಿ ಹೊರಳಿ ಮಲಗಿದ.

ಅಳು ಉಕ್ಕಿ ಬಂದು ಮುಖ ಮುಚ್ಚಿಕೊಂಡು ಬಿಕ್ಕಿದಳು. ಬೆರಳ ಸಂದಿಯಿಂದ ನೀರು ಜಾರುತ್ತಿತ್ತು. ಬೆನ್ನ ಮೇಲಾಡಲು, ತಲೆ ನೇವರಿಸಲು ಹತ್ತಿರ ಯಾವ ಕೈಯೂ ಇಲ್ಲ. ಗಂಡ, ಮಕ್ಕಳು ತನ್ನೊಬ್ಬಳನ್ನೆ ಬಿಟ್ಟು ಎಲ್ಲಾ ದೂರ ಹೋಗಿದ್ದಾರೆ. ತನಗೆ ಯಾರೂ ಇಲ್ಲ, ಈ ಮನೆಯೂ ತನ್ನದಲ್ಲ. ತಾನೂ ಎಲ್ಲಾದರೂ ಹೋಗಿ ಬಿಡಬೇಕು.

ಗೊರಕೆ ಹೊಡೆಯುತ್ತಿದ್ದ ದಿವಾಕರನನ್ನು ನೋಡುತ್ತ ಹಾಸಿಗೆ ಬಿಟ್ಟೆದ್ದು ಚಹಾ ಕುಡಿದ ಸರಸ್ವತಿ ಡೈರೆಕ್ಟರಿ ತೆಗೆದು ನಂಬರ್ ಹುಡುಕಿದಳು.

'ಹಲೋ, ಜಾನಕೀ, ಗುಡ್‌ಮಾರ್ನಿಂಗ್, ಅಪರೂಪಕ್ಕೆ ಮಾತಾಡ್ತೀನಿ ಅಂದ್ಯಾ ? ಹೌದ ಸ್ವಲ್ಪ ಕೆಲಸ ಅದ. ನಿಮ್ಮ ಮಂಡಳದ ಮುಂದಿನ ಟೂರು ಎಲ್ಲಿಗೆ ? ಕೊಡೈಕೆನಾಲ್ ? ಗುಡ್, ಎಂದು ಹೋಗ್ತೀರಿ? ಮುಂದಿನ ತಿಂಗಳ ? ಸರಿ, ನಿಮ್ಮ ಜೋಡಿ ನನಗೂ ಒಂದು ಸೀಟು ಬುಕ್ ಮಾಡ್ತೀಯಾ? ಪ್ಲೀಸ್, ಆಯ್ತು ಥ್ಯಾಂಕ್ ಯು.'

ಸುತ್ತ ಹಸಿರು ಗುಡ್ಡಗಳು, ವಿಸ್ತಾರವಾದ ನೀಲಿ ಸರೋವರ, ಬೊಟಾನಿಕಲ್ ಗಾರ್ಡನ್‌ನಲ್ಲಿ ಬಣ್ಣಬಣ್ಣದ ಬಯಲಾಟ. ಆಳವಾದ ಕೊಳದಿಂದ ಕೈಗೆ ಎಟಕುವಂತೆ ಮೇಲೆ ಏರಿ ಬರುತ್ತಿರುವ ಬಿಳಿ ಮಂಜಿನ ಮಾಯಾಜಾಲ.

'ಎಲ್ಲಿಂದ ಎಲ್ಲಿಗೆ ಬಂದೆ. ಇದೇ ಬೇರೆ ಲೋಕ. ಮಧುರೈಯಿಂದ ಕೊಡೈಕೆನಾಲ್ ಉರಿಯುವ ಅಗ್ಗಿಷ್ಟಿಕೆಯಿಂದ ಹಸಿರು ಫ್ರಿಜ್ಜಿಗೆ. ಪ್ರಕೃತಿಯ ಸೋಜಿಗ. ಬಿಸಿ ಹೆಚ್ಚಾದರೆ ಮೈ ಕಮರುತ್ತದೆ. ತಂಪು ಅತಿಯಾದರೆ ಈ ದೇಹ ಮಂಜಿನ ಗಡ್ಡೆ. ಯಾವುದೂ ಅತಿಯಾದರೆ ಒಳ್ಳೆಯದಲ್ಲ. ಮಿತಿಯಲ್ಲೇ ಇರಬೇಕು. ಈ ಬದುಕೂ ಹಾಗೆಯೇ.

ಎತ್ತರವಾದ ಸ್ಥಳದಲ್ಲಿ ಕಟಾಂಜನಕ್ಕೆ ಆತು ಒಬ್ಬಳೇ ನಿಂತಿದ್ದಳು ಸರಸ್ವತಿ. ಅವಳು ತನ್ನ ಯೋಚನೆಗಳ ಗುಂಗಿನಲ್ಲಿ ಏಕಾಂಗಿ.

'ಆಹಾ! ನನ್ನ ಮದುವೆಯಂತೆ, ಓಹೋ !ನನ್ನ ಮದುವೆಯಂತೆ. ಟಾಂ ಟಾಂ ಟಾಂ' ಗೊಗ್ಗರದನಿಯಲ್ಲಿ ಎರಡು ಮಕ್ಕಳ ತಾಯಿ ಪದ್ಮಾ ಹಾಡಿದಾಗ ಗುಂಪು ಗೊಳ್ಳೆಂದು ನಕ್ಕಿತು. ಹಿಂದೆಯೆ ಚಪ್ಪಾಳೆ, ಕೇಕೆ, ಅತ್ತಿತ್ತ ತಿರುಗಾಡುತ್ತಿದ್ದ ಪ್ರವಾಸಿಗರು ಹೊರಳಿ ನೋಡಿ ನಕ್ಕರೂ ಈ ಹೆಂಗಸರಿಗೆ ಎಚ್ಚರವಿಲ್ಲ. ಎಲ್ಲರೂ ಚಪ್ಪಾಳೆ ತಟ್ಟಿ ಹಾಡಿ, ನಗುತ್ತಿದ್ದಾರೆ.

ಎಷ್ಟು ಸ್ವಚ್ಛಂದವಾದ ನಡತೆ, ಮುಕ್ತಮನಸ್ಸಿನ ನಗು. ಮಕ್ಕಳಿಗಿಂತಲೂ ಸಣ್ಣ ಮಕ್ಕಳು. 'ಚಿಂತೆಯನ್ನು ಮನೆಯಲ್ಲೇ ಕಟ್ಟಿಟ್ಟು ಪ್ರವಾಸಕ್ಕೆ ಹೋಗುತ್ತೇವೆ' ಅಂದಿದ್ದಳಲ್ಲ ಜಾನಕಿ, ಇಲ್ಲಿಯೂ ಅದನ್ನೇ ತಂದರೆ ಉತ್ಸಾಹ, ಉಲ್ಲಾಸ ಹೇಗೆ ಬಂದೀತು? ಹೌದು, ಅವಳು ಅನ್ನುವುದೂ ನಿಜ. ಆದರೆ ತಾನು ಹಿಂದೆ ಬಿಟ್ಟುಬಂದದ್ದನ್ನೆಲ್ಲ ತನಗೇಕೆ ಮರೆಯಲು ಸಾಧ್ಯವಾಗುತ್ತಿಲ್ಲ?

'ನಾನು ಸ್ವಲ್ಪ ದಿನಾ ಊರಿಗೆ ಹೋಗಿ ಬರ್‍ತೇನಿ,' ಪ್ರವಾಸದ ತಯಾರಿ ಎಲ್ಲ ಮುಗಿದ ಮೇಲೆ ದಿವಾಕರನಿಗೆ ಹೇಳಿದ್ದಳು.

'ಎಲ್ಲಿಗೆ ಹೋಗ್ತಿ? ನೀ ಒಬ್ಬಾಕೀನ' ನಂಬದಂತೆ ಸಂಶಯದಿಂದ ಕೇಳಿದ್ದ. ತನ್ನನ್ನ ಬಿಟ್ಟು ಇವಳೆಲ್ಲಿ ಹೋಗ್ತಾಳೆ ಎನ್ನುವ ಭಾವವಿತ್ತು ಪ್ರಶ್ನೆಯಲ್ಲಿ.

'ನಾ ಒಬ್ಬಾಕಿನ ಹೋಗೂದಿಲ್ಲ. ಜಾನಕಿಯ ಮಹಿಳಾ ಮಂಡಲದವರ ಜೊತಿಗೆ ಮಧುರೈ, ಕೊಡೈಕೆನಾಲ್, ಪಳನಿ ಪ್ರವಾಸಕ್ಕೆ ಹೋಗಿಬರ್‍ತೀನಿ.'

'ನಾನೂ ಭೂಪಾಳಕ್ಕ ಸಂಗೀತ ಸಮ್ಮೇಳನಕ್ಕ ಹೊಗಬೇಕು. ನೀನು ಈಗ ಯಾಕ ಹೋಗ್ತೀ?' ಅಸಮಾಧಾನವಿತ್ತು ದನಿಯಲ್ಲಿ.

'ನಿಮ್ಮ ಸಂಗೀತ ಕಚೇರಿ, ಟೂರು, ಸಮ್ಮೇಳನ ಯಾವಾಗಲೂ ಇದ್ದS ಇರತಾವಲ್ಲ. ನಿಮಗ ಬಿಡುವು ಇರೂದಿಲ್ಲ. ನನ್ನ ಎಲ್ಲಿಗೂ ಕರಕೊಂಡು ಹೋಗೂದಿಲ್ಲ. ನಾ ಇನ್ನ ಯಾವಾಗ ನೋಡಬೇಕು ? ಯಾರ ಜೊತೀಗೆ' ದೃಢವಾಗಿ ಕೇಳಿದ್ದಳು ತಾನು.

ತೊಡೆಯ ಮೇಲಿನ ಸಿತಾರಿನ ತಂತಿಗಳ ಮೇಲೆ ಬೆರಳು ಆಡಿಸುತ್ತ, ಸುಮ್ಮನೆ ಕುಳಿತ ಗಂಡನನ್ನು ನೋಡಿ ಸಿಟ್ಟು ಉಕ್ಕಿ ಬರುತ್ತಿತ್ತು.

'ಏನರೆ ಹೇಳ್ರಲಾ, ಹಿಂಗ ಸುಮ್ಮನ ಕೂತರ ಹ್ಯಾಂಗ.'

'ನನಗ ತ್ರಾಸ ಆದರೂ ಚಿಂತಿಲ್ಲ. ಟೂರಿಗೆ ಹೋಗಬೇಕು ಅಂತ ನಿರ್ಧಾರ ಮಾಡೀ ಅಂದ ಮ್ಯಾಲೆ ಅದಕ್ಕ ನಾ ಏನ ಹೇಳಲಿ? ನಿನ್ನ ಮರ್ಜಿ ಬಂದಾಂಗ ಮಾಡು.' ಉದಾಸೀನವಾಗಿ ಹೇಳಿದ್ದ.

'ನಿಮಗ ಊಟದ್ದ ತ್ರಾಸ ಹೌದಲ್ಲೊ, ಗೆಳೆಯರ ಮನ್ಯಾಗ ಮಾಡ್ರಿ. ಇಲ್ಲಾ ಹೊಟೆಲ್‌ನ್ಯಾಗ ಊಟಾ ಮಾಡ್ರಿ, ಮನಿಗೆ ಬಂದು ಖೋಲಿ ಬಾಗಿಲಾ ಹಾಕಿ ಸಿತಾರ ಬಾರಿಸಿಕೋತ ಕೂಡ್ರಿ. ಯಾರೂ ನಿಮ್ಮನ್ನ ಡಿಸ್ಟರ್ಬ್ ಮಾಡೂದಿಲ್ಲ, ನಿಮಗೂ ಅಷ್ಟS ಬೇಕಲ್ಲ' ಅಕ್ಕಸದಿಂದ ಹೇಳಿ ಎದ್ದು ಹೋಗಿದ್ದಳು. ಅದು ಅವಳಿಗೆ ದೊರೆತ ಮೊದಲ ವಿಜಯ. ಆದರೂ ದಿವಾಕರನ ಮೌನ ಅವಳ ಸಿಟ್ಟನ್ನು ಹೆಚ್ಚು ಮಾಡಿತ್ತು.

ಮನೆ, ಗಂಡ, ಮಗ ಇಷ್ಟೇ ತನ್ನ ಸರ್ವಸ್ವ. ಅವರೂ ತನ್ನನ್ನ ಅಷ್ಟೇ ಪ್ರೀತಿ ಮಾಡ್ತಾರೆ. ಬಯಸ್ತಾರೆ. ಅಂತ ತಿಳಿದದ್ದೇ ತನ್ನ ತಪ್ಪು. ಒಬ್ಬೊಬ್ಬರು ಒಂದೊಂದು ದ್ವೀಪ. ಅವರಿಗೆ ಅವರವರದೇ ಜಗತ್ತು. ತನ್ನದೂ ಅತಿಯಾಯಿತು. ಯಾಕೆ ಇನ್ನೊಬ್ಬರ ಮೇಲೆ ಅವಲಂಬಿಸಿ ಬದುಕು ನಡೆಸಬೇಕು? ತಮ್ಮಿಬ್ಬರಿಗೂ ವಯಸ್ಸು ಆಗ್ತಾ ಇದೆ. ಹಿಂದೆ ಇದ್ದಷ್ಟು ದಿನ ಮುಂದೆ ಇರೋದಿಲ್ಲ. ಅದರಲ್ಲೂ ಇನ್ನೂ ಎಷ್ಟು ವರ್ಷ ಕೂಡಿ ಇರ್‍ತೀವಿ? ಸಾವು ಯಾರನ್ನ ಯಾವಾಗ ಒಯ್ತದ ಅನ್ನೂದು ಯಾರಿಗೂ ಹೇಳಲಿಕ್ಕೆ ಆಗೋದಿಲ್ಲ. ಆಮೇಲೆ ಆದರೂ ಒಬ್ಬರೇ ಬದುಕಬೇಕಲ್ಲ. ಅದನ್ನ ಇಬ್ಬರೂ ರೂಢಿ ಮಾಡಿಕೊಳ್ಳೋದು ಒಳ್ಳೇದು. ಅದಕ್ಕಾದರೂ ದಿವಾಕರನ್ನ, ಮನೀನ ಬಿಟ್ಟು ಅಡ್ಡಾಡಬೇಕು. ಈ ರೀತಿ ವಿಚಾರ ಮಾಡಿದರ ನಾನು ಮಾಡ್ತಾ ಇದ್ದದ್ದು ತಪ್ಪು ಅಂತ ಅನಿಸೂದಿಲ್ಲ. ಹಂ, ಹೌದು. ಈ ಸಲ ತಿರುಗಿ ಹೋದ ಮೇಲೆ ಇದS ಮಾತ ದಿವಾಕರಗೂ ತಿಳಿಸಿ ಹೇಳಬೇಕು. ಇಬ್ಬರೂ ಸಿಟ್ಟು ಸೆಡುವು ಮಾಡಿಕೊಂಡು ಮನಸು ಕೆಡಿಸಿಕೊಳ್ಳೂ ಕಾರಣಾನ ಇಲ್ಲ. ಒಬ್ಬರನ್ನ ಒಬ್ಬರು ಅರ್ಥ ಮಾಡಿಕೊಂಡರ ಮನಸ್ಸೂ ಹಗುರ ಆಗ್ತದ....

"ಹುಂ ಸಾಕು, ಸಾಕು ರಜನೀ, ಬಹಾಳ ಬಗ್ಗಬ್ಯಾಡಾ, ಈ ಮಂಜು ನಿನ್ನ ಕೈಗೆ ಸಿಗೂದಿಲ್ಲ. ಕೆಳಗ ಬಿದ್ದರ ನೀನS ಕೈ ಬಿಟ್ಟುಹೋಗ್ತೀ." ಹೊಸ ಮದುಮಗ ಹೆಂಡತಿಯ ಸುತ್ತ ಕೈ ಹಾಕಿ ಎಳೆದುಕೊಳ್ಳುತ್ತಿದ್ದ. ಸರಸ್ವತಿಯಲ್ಲಿ ಅಸೂಯೆ ನೆರಳಾಡಿತು. ಆ ಜೋಡಿ ನೋಡಿ. ಮನಸ್ಸು ಚೀರುತ್ತಿತ್ತು.

"ದೀವ್ಯಾ, ನನ್ನ ದಿವ್ಯಾ. ಈ ಬಿಳಿ ಮಂಜಿನೊಳಗ ಅಡಗ್ಯಾನೇನು ನನ್ನ ದಿವ್ಯಾ? ಕೈಗೆ ಸಿಕ್ಕಾನೇನು? ಬಗ್ಗಿ ಕೈ ಚಾಚಿದಳು ಸರಸ್ವತಿ."

ಬಲಿಷ್ಠ ತೋಳುಗಳೆರಡು ಅವಳನ್ನು ಹಿಡಿದುಕೊಂಡವು.

'ಅಹಾ! ಸಿಕ್ಕ, ನನ್ನ ದಿವ್ಯಾ ಸಿಕ್ಕ" ತೋಳು ಚಾಚಿ ಅಪ್ಪಿಕೊಂಡಳು. ರಕ್ತಚಲನೆಯ ಜೋರು. ಹಿತವಾದ ಬೆಚ್ಚನೆಯ ಸ್ಪರ್ಶ, ಹರವಾದ ಎದೆ. ಮೈ ಮನಸ್ಸಿನಲ್ಲಿ ವಿದ್ಯುತ್ ಹರಿತ. 'ದಿವ್ಯಾ, ದಿವ್ಯಾ'

'ಮೇಡಂ, ಏನಾಯ್ತು ಮೇಡಂ, ಮೈ ಚೆನ್ನಾಗಿಲ್ಲವೇ ?'

ತೆರೆದ ಕಣ್ಣಿನೊಡನೆ ಕನಸೂ ಹರಿಯಿತು. ಅಪರಿಚಿತ ಗಂಡಸು. 'ನೀವು ಜೋಲಿ ಹೋಗಿ ಕೊಳ್ಳಕ್ಕ ಬಿದ್ದೀರಿ ಅಂತ ಹಿಡಿದುಕೊಂಡೆ ಏನಾಯ್ತು? ತಲೆ ಸುತ್ತು ಬಂತಾ?' ಗಂಟಲು ಒಣಗಿ ಮಾತು ಬರಲಿಲ್ಲ. 'ಒಬ್ಬರೇ ಇದ್ದೀರಾ? ಕೆಳಗೆ ಇಳೀತೀರಾ ? ಹಾಗೇ ನನ್ನ ತೋಳು ಹಿಡಿದುಕೊಳ್ಳಿ.'

ಅವನ ಆಸರೆಯಲ್ಲೇ ನಾಲ್ಕಾರು ಪಾವಟಿಗೆ ಇಳಿದಳು. ಒಂದು ಕಡೆ ನಿಂತು ಕಣ್ಣು ಮುಚ್ಚಿ, ಮುಖ ಮೇಲೆತ್ತಿ ಉಸಿರು ಎಳೆದುಕೊಂಡಳು. ಮೈ ನಡುಕ ನಿಂತಿತ್ತು. ಕಾಲು ದೃಢವಾಗಿದ್ದವು. ಸರಿದು ನಿಂತು ಅವನನ್ನು ದಿಟ್ಟಿಸಿ ನೋಡಿ.

'ಬಹಳ ಥ್ಯಾಂಕ್ಸ್, ಏನಾತೋ ಗೊತ್ತಾಗಲಿಲ್ಲ. ಈಗ ಆರಾಮ ಅದೀನಿ. ಜೊತೀಗೆ ಗೆಳತೇರು ಅದಾರ. ಬರ್ತೀನಿ, ನಮಸ್ಕಾರ,' ಹೋಗೋಣು' ಜಾನಕಿ ಕೆಳಗಿನಿಂದ ಕೂಗಿದಳು.

ಅಬ್ಬಾ! ಎಷ್ಟು ಶಕ್ತಿ ಆ ತೋಳಿನಲ್ಲಿ, ಅಲ್ಲೇ ಕರಗಿ ಹೋಗ್ತಿನೇನೋ ಅನಿಸಿತ್ತು. ಎಂಥಾ ಅದ್ಭುತ ಅನುಭವ. ಜಿಂಕೆಯಂತೆ ಕೆಳಗೆ ಜಿಗಿಯುತ್ತ ಹೋಗುವ ಆಸೆ. 'ಮನೀಗೆ ಹೋದ ಮ್ಯಾಲೆ ದಿವಾಕರನ ಮುಂದ ಮನಸು ಬಿಚ್ಚಿ ಇಡೂ ಮುಂದ ಈ ಅನುಭವಾನೂ ಹೇಳಲೇನು, ಹೇಳಿದರ ಏನರೆ ತಿಳಕೊಂಡಾನೇನು ? ಅಲ್ಲಾ, ನಮ್ಮ ಮದುವಿ ಆಗಿ ಇಷ್ಟ ವರ್ಷ ಆದವು. ಗೊತ್ತಿಲ್ಲೇನು ? ಆಂ ಇರಲಿ, ಹೇಳೂದು ಬಿಟ್ಟರಾತು. ಸುಮ್ಮನಽ ಇಲ್ಲದ ಹೊಲಾ ಸಮಸ್ಯಾ ಯಾಕ ಹುಟ್ಟಿಸಿಕೋಬೇಕು ? ಇದು ನನ್ನಲ್ಲೇ ಇರಲಿ, ಬಿಚ್ಚಿ ಇಟ್ಟರ ಸ್ವಾರಸ್ಯ ಉಳಿಯೂದಿಲ್ಲ ನಿಂತು ಹೊರಳಿ ನೋಡಿದಳು ಸರಸ್ವತಿ. ಅಪರಿಚಿತ ಕಣ್ಮರೆಯಾಗಿದ್ದ. ನಿಧಾನವಾಗಿ ಇಳಿದು ಬಂದಳು. ತನ್ನ ಸೀಟಿಗೆ.

***

■■

# ಭೂತ

ತುಂಬಾ ಜಾಗರೂಕತೆಯಿಂದ ಒಂದೇ ವೇಗದಲ್ಲಿ ಕೆನೆಟಿಕ್ ಓಡಿಸುತ್ತಿದ್ದಳು ಉಮಾ. ಪೇಟೆ, ಥೇಟರುಗಳಿದ್ದಲ್ಲಿ ಎಷ್ಟು ಎಚ್ಚರದಿಂದ ಇದ್ದರೂ ಸಾಲದು. ಆಕಸ್ಮಿಕವಾಗಿ ಅಪಘಾತ ಸಂಭವಿಸಬಹುದು ಬದುಕಿನಲ್ಲಿ ನಡೆಯುವ ಹಾಗೆಯೇ ಗಾಡಿಗೂ.

ಬರಬರುತ್ತ ಜನದಟ್ಟಣೆ ಹೆಚ್ಚಾದಂತೆ ವೇಗವನ್ನು ಕಡಿಮೆ ಮಾಡಿ ಗಡಿಯಾರ ನೋಡಿದಳು. ಆರೂವರೆಗೆ ಕಾರ್ಯಕ್ರಮ ಪ್ರಾರಂಭ. ಹೊತ್ತಿಗೆ ಮೊದಲೇ ಅಲ್ಲಿದ್ದು ಅತಿಥಿಗಳನ್ನು ವೈಯಕ್ತಿಕವಾಗಿ ಪರಿಚಯ ಮಾಡಿಕೊಂಡು ನಿಮ್ಮ ಕಾವ್ಯ ನಾನು ಓದಿದ್ದೇನೆ, ನಿಮ್ಮ ಅಭಿಮಾನಿ ನಾನು ಎಂದು ಹೇಳಿಕೊಳ್ಳಬೇಕೆಂದು ಆಸೆ.

'ಓs ಸಿನಿಮಾ ಬಿಟ್ಟಿತೆಂದು ಕಾಣುತ್ತದೆ. ಇನ್ನು ಈ ಗದ್ದಲ ಕರಗಲು ಇನ್ನೂ ಹತ್ತು ಹದಿನೈದು ನಿಮಿಷ ಬೇಕು, ಚಡಪಡಿಸಿದಳು. ಇದೇನು ಜನ ಮುಂದೆ ಹೋಗಲೊಲ್ಲದು. ಇನ್ನೂ ಗುಂಪಾಗಿ ನಿಂತಿದ್ದಾರಲ್ಲ ಯಾಕೆ? ನಡುಬೀದಿಯಲ್ಲಿ ಜಗಳವೋ ಅಪಘಾತವೋ. ಹೋಗುಬರುವವರೂ ಹಣಿಕುತ್ತಿದ್ದಾರೆ. ಇಲ್ಲಿಂದ ಏನೂ ಕಾಣುವುದಿಲ್ಲ. ಸುದ್ದಿ ಮಾಧ್ಯಮದಲ್ಲಿರುವ ತಾನು ಏನೆಂದು ನೋಡದೇ, ಕೇಳದೇ ಹೇಗೆ ಹೋಗುವುದು ? ಗುಂಪಿನಲ್ಲಿ ನುಗ್ಗಿ ಒಳಹೊಕ್ಕಳು ಉಮಾ.

'ಅರೇ, ಇದೇನು ? ಏನಾಯಿತು ಇವರಿಗೆ?' ಒಮ್ಮೆಲೆ ಉದ್ಗಾರ ಹೊರಬಿತ್ತು.

"ಅಲ್ಲಾ ಮೇಡಂ, ಇವರು ನಿಮ್ಮ ಗುರ್ತಿನವರ ಏನ್ರಿ ? ಸಿನಿಮಾದ ಗೇಟ ದಾಟಿ ಹೊರಗ ಬಂದವ್ರು. ಹಾಂಗ ಕುಸಿದು ಬಿದ್ದಾರ ನೋಡ್ರಿ. ಜೊತಿಗೆ ಯಾರೂ ಇಲ್ಲಾ" ಯಾರೋ ಒಬ್ಬ ಹೇಳಿದ. ಮಜಾ ನೋಡುತ್ತಿದ್ದವರೆಲ್ಲ ಒಬ್ಬೊಬ್ಬರಾಗಿ ಜಾಗ ಖಾಲಿ ಮಾಡಿದರು.

ಮಂಡಿ ಊರಿ ಕುಳಿತ ಉಮಾ 'ಕಸ್ತೂರಕ್ಕಾ' ಎನ್ನುತ್ತ ನೆಲದ ಮೇಲೆ ಬಿದ್ದವಳ ಮೂಗಿನಡಿ ಬೆರಳಿಟ್ಟು ಬೆಚ್ಚಿದಳು. ತಕ್ಷಣ ಜಾಗೃತಳಾಗಿ ಕುತೂಹಲದಿಂದ ಇನ್ನೂ ಅಲ್ಲಿಯೇ ನಿಂತ ಜನರ ಸಹಾಯದಿಂದ ರಿಕ್ಷಾ ತರಿಸಿ ಅವಳನ್ನೆತ್ತಿ ಕೂರಿಸಿ ಪತ್ರಿಕಾ ಕಚೇರಿಗೆ ಫೋನ್ ಮಾಡಿದಳು. ಸಂಪಾದಕರು ಸಿಗಲಿಲ್ಲ.

'ಮಾಲಾ, ನಾ ಭಾಳ ಅವಸರದಾಗ ಅದೀನಿ, ಇವತ್ತಿನ ಸಮಾರಂಭದ ವರದಿ ಮಾಡಲಿಕ್ಕೆ ನೀನs ಹೋಗು, ಸರ್ ಪರ್ಮಿಶನ್ ತೊಗೊ.'

ಹಾಸ್ಪಿಟಲ್‌ನಲ್ಲಿ ಡಾಕ್ಟರರು ಹೇಳುವ ಮೊದಲೇ ಊಹಿಸಿದ್ದಳು ಕಸ್ತೂರಿ ತೀರಿಕೊಂಡಿದ್ದಾಳೆಂದು. ಹಾರ್ಟ್‌ಫೇಲ್ ! ಸಹಾಯ ಮಾಡಲು ಬಂದ ಜನರಿಗೆ ಶಾಕ್ ಕೊಡುವಂಥ ಸುದ್ದಿ. ಅಣ್ಣನಿಗೆ ಫೋನ್ ಮಾಡಿ ಕರೆಸಿ ತಾವೇ ಬಂಧುಗಳೆಂದು ಹೇಳಿಕೊಂಡು ಕಸ್ತೂರಿಯ ಅಂತ್ಯ ಸಂಸ್ಕಾರ ಮುಗಿಸಿದಳು. ತುಂಬ ದುಃಖವಾಗಿತ್ತು. ಕಸ್ತೂರಿ ಯಾರೋ ತಾನು ಯಾರೋ. ಆದರೂ ವಿಧಿಯ ವೈಚಿತ್ರ್ಯಕ್ಕೆ ಬೆರಗಾಗಿ, ಅವನ ಲೀಲೆ ಯಾರಿಗೂ ತಿಳಿಯದೆನ್ನುತ್ತಿದ್ದ ಮಾತು ನೆನಪಾಗಿ ದಂಗು ಬಡಿದು ಮನೆಗೆ ಬಂದು ಹಸಿವೆ ಇಲ್ಲವೆಂದು ಅತ್ತಿಗೆಗೆ ಹೇಳಿ ಸುಸ್ತಾಗಿ ಮಲಗಿಬಿಟ್ಟಳು. ....

'ಮುದುಕಿ ಆಗಿ ಓಡಿ ಬಂದು ಬಸ್ಸು ಹತ್ತುವಂಥಾ ಅವಸರ ಏನ್ರೀ, ಇನ್ನೊಂದು ಬಸ್ಸಿಗೆ ಬರಬಾರದೇನು?' ಕಂಡಕ್ಟರ ಯಾರನ್ನೋ ಜಬರಿಸುತ್ತಿದ್ದ. 'ಹುಂ, ಕಾಲ ಜಾರಿ ಕೆಳಗೆ ಬಿದ್ದು ಖತಂ ಆದರ ಎಲ್ಲಾ ನಮ್ಮ ತಲೀಗೇ ಅಪಾಯ ಬರೂದು' ಡ್ರೈವರ್ ದನಿಗೂಡಿಸಿದ.

ಅವಳೇನು ಹೇಳಿದಳೋ ಉಮಾಳಿಗೆ ಕೇಳಿಸಲಿಲ್ಲವಾದರೂ ಇಷ್ಟು ಅಪಮಾನ ಸಹಿಸಿದವಳನ್ನು ನೋಡಲು ಆಸೆಯಾಗಿ ನಿಂತವರ ನಡುವೆ ಇಣುಕಿದ್ದಳು. ಕಂಡದ್ದು ಸೀರೆಯ ಸೆರಗು, ಕರಿಬಿಳಿ ತಲೆ ಅರ್ಧ ಮುಖ ಅಷ್ಟೇ. ನಡುವೆ ಯಾವಾಗಲೋ ಇಳಿದು ಹೋಗಿದ್ದಳು ಆ ಹೆಂಗಸು.

'ಚಿಲ್ಲರೆ ಇಲ್ಲದ ಬಸ್ ಯಾಕ ಹತ್ತತೀರಿ ನೀವು ? ಎಷ್ಟ ಸಾರೆ ಹೇಳಬೇಕ ಈ ಹೆಂಗಸರಿಗೆ ತಿಳಿಯೂದೇ ಇಲ್ಲ. ಇವತ್ತಂತೂ ನನ್ನ ಹತ್ತರ ಚಿಲ್ಲರ ಇಲ್ಲ. ಇದ್ದರೂ ನಾ ಕೊಡೂದಿಲ್ಲ. ಚೀಟಿ ಹಿಂದ ಬರದ ಕೊಟ್ಟರೂ ಪಠಾಣರ ಹಾಂಗ ವಸೂಲ ಮಾಡಾಕ ನಿಂದರತೀರಿ. ತೊಗೊಳ್ರಿ ನಿಮ್ಮ ಐವತ್ತರ ನೋಟು. ಮುಂದಿನ ಸ್ಟಾಪಿನ್ಯಾಗ ಇಳದ ಬಿಡ್ರಿ.' ಪುರುಷ ಪ್ರಧಾನ ಸಮಾಜದ ನಿರ್ದಯಿ ಪ್ರತಿನಿಧಿ ಒದರಾಡುತ್ತಿದ್ದ ಮತ್ತೆ ಅದೇ ಹೆಂಗಸಿಗೆ. ಉಮಾಳಿಗೆ ಸಿಟ್ಟು ಉಕ್ಕಿತು.

"ರೀ ಕಂಡಕ್ಟರ, ಹಿಡೀರಿ ಮೂರು ರೂಪಾಯಿ, ಅವರಿಗೊಂದ ತಿಕೀಟು ಕೊಡ್ರಿ. ಹೆಣ್ಣುಮಕ್ಕಳ ಕೂಡ ಛಂದಾಗಿ ಮಾತಾಡೂದ ಕಲೀರಿ ಮೊದಲ" ಈ ಪೇಪರಿನ ಹುಡುಗಿಯನ್ನು ನೋಡಿ ಹುಬ್ಬು ಗಂಟಿಕ್ಕಿ ಬೆಲ್ ಬಾರಿಸಿದ ಕಂಡಕ್ಟರ. ಒಂದೇ ಒಂದು ಸಲವೂ ತಿರುಗಿ ನೋಡದೆ ಆ ಹೆಂಗಸು ತನ್ನ ಸ್ಟಾಪಿನಲ್ಲಿ ಸುಮ್ಮನೆ ಇಳಿದುಹೋದಳು.

ಉಮಾಳ ಕುತೂಹಲ ಹೆಚ್ಚಿತು. ಇವಳು ಎಲ್ಲರ ಹಾಗಲ್ಲ. ಒಂದು ವಿಶಿಷ್ಟ ವ್ಯಕ್ತಿ. ಅವಳು ಎಲ್ಲಿಂದ ಬರುತ್ತಾಳೆ ಎಲ್ಲಿಗೆ ಹೋಗುತ್ತಾಳೆ ತಿಳಿದುಕೊಳ್ಳುವಷ್ಟರಲ್ಲಿ ತಿಂಗಳುಗಳು ಕಳೆದಿದ್ದವು. ಸಿನಿಮಾಕ್ಕೆ ಇಷ್ಟು ಖರ್ಚು ಮಾಡುವ ಹೆಂಗಸೇ ಒಂದು ಒಗಟಾದಳು. ಅದನ್ನು ಬಿಡಿಸಲು ಹೊರಟ ಉಮಾ ಒಂದು ದಿನ ರಜ ಹಾಕಿ ಅವಳು ಇಳಿದ ಸ್ಟಾಪಿನಲ್ಲಿ ಇಳಿದು ಸಹಜವಾಗಿ ಹಿಂದೆ ನಡೆದಳು. ಬುಕಿಂಗ್ ಆಫೀಸ ಮುಂದೆ ದೊಡ್ಡ ಕ್ಯೂ ಇತ್ತು. ಅಲ್ಲಿ ನಿಂತ ಹೆಂಗಸಿನತ್ತ ನೋಟು ಚಾಚಿ ಉಮಾ 'ನನಗೊಂದು ಟಿಕೆಟ್ ಕೊಡ್ರಿ' ಎಂದಳು. ಸೊರಗಿದ ಮುಖದಲ್ಲಿ ಎದ್ದು ಕಾಣುವ ದೊಡ್ಡ ದೊಡ್ಡ ಕಣ್ಣುಗಳಿಂದ ದಿಟ್ಟಿಸಿದಳು ಹೆಂಗಸು. ಏನಿತ್ತು ಆ ದೃಷ್ಟಿಯಲ್ಲಿ ? ಪ್ರೀತಿ, ನೋವು, ದುಃಖ, ಶಾಂತಿ , ಸಂತಸ ಏನಿತ್ತು ! ಉಹುಂ, ಅಲ್ಲಿ ಏನೂ ಇರಲಿಲ್ಲ. ನಿರ್ಲಿಪ್ತ ದೃಷ್ಟಿ, ಎಲ್ಲೋ ಒಂದು ಕಡೆ ಅಲ್ಲ. ಶೂನ್ಯದಲ್ಲಿಯೇ ಇತ್ತು. ಅಂಥ ನೋಟವನ್ನು ಎಲ್ಲಿಯೂ ನೋಡಿರದ ಉಮಾ ಚಕಿತಗೊಂಡು ನಿಂತು 'ನಡೀರಿ' ಎಂದು ಅವಳೆ ಎಚ್ಚರಿಸಿದಾಗ ಒಳಗೆ ನಡೆದಳು.

"ಈ ಸಿನಿಮಾ ಭಾಳ ಸೇರಿತೇನ್ರಿ ನಿಮಗ" ಹೊರಗೆ ಬರುವಾಗ ಸಹಜವೆನ್ನಿಸುವ ಪ್ರಶ್ನೆ ಹಾಕಿದಳು ಉಮಾ.

"ಆಂ ಏನು ? ಸಿನಿಮಾನ ನಾ ಸರಿಯಾಗಿ ನೋಡಲಿಲ್ಲ" ಅಸಹನೆಯಿಂದ ಕೂಡಿದ ಮಾತು, ನಿನ್ನ ಸಹವಾಸ ಸಾಕು ಎನ್ನುವಂತೆ. ಉಮಾಳ ತಲೆಯಲ್ಲಿ ಹುಳು ಹರಿದಾಡಿದವು. ಮೂರನೆಯ ಸಲ ನೋಡಿದ ಮೇಲೆಯೂ ಸರಿಯಾಗಿ ನೋಡಲಿಲ್ಲವೆಂದರೆ ಇವಳ ತಲೆ ಕೆಟ್ಟಿಲ್ಲವಷ್ಟೇ. ತಾನು ಹುಚ್ಚಿಯ ಬೆನ್ನು ಬಿದ್ದಿದ್ದೇನಾ ? ಆದರೆ ತಾನು ನೋಡಿದ ಕಣ್ಣುಗಳಲ್ಲಿ ಉನ್ಮಾದವಿರಲಿಲ್ಲ. ನಿರ್ಲಿಪ್ತತೆ ಇತ್ತು. ತಾನು ಯೋಚಿಸಿದ್ದು ತಪ್ಪು ಎನ್ನಿಸಿ ಮೆಲುವಾಗಿ ಹೇಳಿದಳು.

" ಸರಿ, ಬರ್ತೀನ್ರಿ, ಥ್ಯಾಂಕ್ಸ್ ಕಂಪನಿ ಕೊಟ್ಟದ್ದಕ್ಕೆ ನೀವು ಮನೀಗೆ ಹೋಗಬೇಕೇನು ?'

"ಹೌದು" ಎಂದು ಮುಖ ತಿರುವಿ ಹೋದ ಹೆಂಗಸು ಬಿಟ್ಟೂ ಬಿಡದೆ ಕಾಡುತ್ತಿದ್ದಳು. ಅವಳು ತೆರೆದುಕೊಳ್ಳಲೊಲ್ಲಳು. ಇವಳದೋ ಬಿಡದ ತ್ರಿವಿಕ್ರಮನ ಛಲ. ಇನ್ನೊಂದು ದಿನ ಸಿನಿಮಾ ನೋಡಿ ಮನೆಗೆ ಹೊರಟ ಹೆಂಗಸನ್ನು ಹಿಂಬಾಲಿಸಿ ಅವಳ ಮನೆ ಪತ್ತೆ ಮಾಡಿದಳು. ತನ್ನದೇ ಲೋಕದಲ್ಲಿ ಇರುತ್ತಿದ್ದ ಅವಳ ಗಮನಕ್ಕೆ ಬಾರದ ಹಾಗೆ. ಅವಳು ತನ್ನ ಮುಖವನ್ನು ಮರೆಯುವಷ್ಟು ದಿನ ಕಳೆದ ಮೇಲೆ ಉಮಾ ಒಂದು ದಿನ ಅವಳ ಮನೆಯ ಬಾಗಿಲು ತಟ್ಟಿದಳು.

ಬಾಗಿಲು ತೆರೆದು ಎಂದೂ ಮನುಷ್ಯರ ಮುಖವನ್ನು ಕಾಣದಂತೆ ದಿಟ್ಟಿಸುತ್ತ ಹೆಂಗಸನ್ನು ನೋಡಿ "ದಯಮಾಡಿ ಈ ಅಡ್ರೆಸ್ ನೋಡಿ ಹೇಳ್ರಿ ಸ್ವಲ್ಪ.

ಅವಳ ಚೀಟಿಯತ್ತ ತಿರುಗಿಯೂ ನೋಡದೆ ಬಾಗಿಲು ಮುಚ್ಚುತ್ತಿದ್ದವಳನ್ನು ತಡೆದು "ಎಷ್ಟೋತ್ತಾನ ಈ ಮನೀ ಹುಡುಕಲಿಕ್ಕೆ ಅಡ್ಡ್ಯಾಡಿನಿ. ಬಾಯಾರಿಕೆ ಆಗೇದ ಒಂದಿಷ್ಟು ನೀರ ಕೊಡಿರಿ" ಎನ್ನುತ್ತ ಹೆಂಗಸಿನ ಬೆನ್ನು ಹಿಂದೆಯೇ ಬಂದು ಅಲ್ಲಿ ಇದ್ದ ಒಂದೇ ಕುರ್ಚಿಯ ಮೇಲೆ ಕುಳಿತುಬಿಟ್ಟಳು ಭಂಡ ಧೈರ್ಯದಿಂದ. ಕುತ್ತಿಗೆ ಹಿಡಿದು ದಬ್ಬಲಿಕ್ಕಿಲ್ಲ ಎನ್ನುವ ಭರವಸೆಯ ಮೇಲೆ. ಕೈಚಾಚಿ ಟೇಬಲ್ ಮೇಲಿದ್ದ ಪುಸ್ತಕ ಹಿಡಿದಳು. ಶೇಕ್ಸ್‌ಪಿಯರ್‌ನ 'ಕಿಂಗ್ ಲಿಯರ್' ನಾಟಕ, ಟೇಬಲ್ ಮೇಲೆ ಗೋಡೆಯ ಕಪಾಟಿನ ತುಂಬಾ ಪುಸ್ತಕಗಳು, ಎರಡೇ ಕೋಣೆ. ಒಂಟಿ ಜೀವ, ವಿದ್ಯಾವಂತೆ, ಏಕಾಂತಪ್ರಿಯೆ ಆರ್ಥಿಕವಾಗಿ ಕೆಳ ಮಧ್ಯಮವರ್ಗ. ಆ ಪುಟ್ಟ ಹೃದಯದಲ್ಲಿ ಯಾತನೆಯ ಸಮುದ್ರವಿದೆ. ಕಣ್ಣುಗಳ ನಿರ್ಲಿಪ್ತ ಭಾವ ಒಂದು ದೊಡ್ಡ ಗೋಡೆ. ಪಾತಾಳ ಗರಡಿ ಹಾಕಿದರೆ ಏನಾದರೂ ಸಿಗಬಹುದು. ಅಷ್ಟೊಂದು ನಿಗೂಢ ಅಂತರಾಳ. ಒಂದು ಕ್ಷಣದಲ್ಲಿ ಅಳೆದು ಸುರಿದ ಉಮಾಳ ಕುತೂಹಲಕ್ಕೆ ಪೂರ ಬಂದಿತ್ತು. ನಿಧಾನವಾಗಿ ನೀರಿನ ಲೋಟ ತುಟಿಗಿಟ್ಟಳು. ಇವಳು ಎದ್ದು ಹೋಗುವದನ್ನು ಅಸಹನೆಯಿಂದ ನಿರೀಕ್ಷಿಸುತ್ತ ನಿಂತವಳನ್ನು ನೋಡಿ, ರಮಿಸುವ ಧಾಟಿಯಲ್ಲಿ.

"ಕಸ್ತೂರೆಕ್ಕಾ, ನಿಮ್ಮನ್ನ ಎಲ್ಲೋ ನೋಡಿದಾಂಗ ಆಗೇದ"

"ನನ್ನ ಹೆಸರ ಹ್ಯಾಂಗ ಗೊತ್ತಾತು ನಿಮಗ" ಕಣ್ಣುಗಳು ಅರಳಿದ್ದವು. ಚಿಕ್ಕಂದಿನಲ್ಲಿ ಚೆಲುವೆ ಇರಬೇಕು. ಈಗ ಚಿಂತೆ, ಅನಾರೋಗ್ಯ, ಮುಪ್ಪು ಕೂಡಿವೆ. ಮುಗುಳ್ನಕ್ಕು ಮೃದುವಾಗಿ ಉತ್ತರಿಸಿದಳು ಉಮಾ.

"ಸಾರಿ, ನಿಮ್ಮ ಪರ್ಮಿಶನ್ ಇಲ್ಲದ ಪುಸ್ತಕಾ ನೋಡಿದೆ. ಎಮ್.ಎ. ಆಗೀರಿ. ಬಹಾಳ ಓದಿಕೊಂಡೀರಿ. ಈಗ ನೌಕರಿ ಎಲ್ಲಿ ಮಾಡ್ತೀರಿ?"

"ನಾನು ನೌಕರಿ ಮಾಡುತ್ತಿದ್ದೆ. ಈಗ ಬಿಟ್ಟೀನಿ. ಒಬ್ಬಳs ಅದೀನಿ, ಹೊತ್ತ ಕಳೀಲಿಕ್ಕೆ ಸಿನಿಮಾಕ್ಕ ಹೋಗ್ತೀನಿ. ತಿಳೀತಲ್ಲ ನಾ ಯಾರೂ ಅಂತ, ಸಾಕೋ ಇನ್ನೂ ಬೇಕೋ" ಮುಖದ ಮೇಲೆ ಹೊಡೆದಂತೆ ಹೇಳಿ ಹೊರಗಿನ ಬಾಗಿಲು ತೋರಿದ್ದಳು.

ಕಸ್ತೂರಿ ದೂರ ಮಾಡಿದಷ್ಟು ಆಕರ್ಷಣೆಯ ಕೇಂದ್ರ ಬಿಂದುವಾಗುತ್ತಿದ್ದಾಳೆ. ದಿನದಿನಕ್ಕೆ ಇನ್ನೂ ಹತ್ತಿರವಾಗುತ್ತಿದ್ದಾಳೆ. ಅವಳ ಬಗ್ಗೆ ಸಿಟ್ಟು ಅಸಹನೆ ಮೂಡುವ ಬದಲು ಅವಳ ದುಃಖದಲ್ಲಿ ಪಾಲು ಪಡೆಯಬೇಕೆನ್ನುವ ಆಸೆಯಾಗುತ್ತಿದೆ. ಪುನರ್ಜನ್ಮ ನಂಬಲಾರದ ತನಗೂ ಇದು ಯಾವ ಜನ್ಮದ ಮೈತ್ರಿ ಎನ್ನುವ ಆಲೋಚನೆ ಬರುತ್ತಿದೆ. ತನ್ನ ಮನದ ಮೂಲೆಯ ಬೆಚ್ಚನೆಯ ಜಾಗದಲ್ಲಿ ಕುಳಿತ ಕಸ್ತೂರಿಯನ್ನು ಇನ್ನೊಂದು ದಿನ ಪತ್ರಿಕಾ ಕಚೇರಿಗೆ ಹೋಗುವ ದಾರಿಯಲ್ಲಿ ಕಂಡಳು. ಕೆಲಸಕ್ಕೆ ತಡವಾದರೂ ಚಿಂತೆಯಿಲ್ಲ. ಚಂದ್ರಭೂಷಣರ ತಂದೆಯ ವಾತ್ಸಲ್ಯ ತಮ್ಮಿಬ್ಬರನ್ನು ಹತ್ತಿರಕ್ಕೆ ತಂದಿದೆ. ಕೆಲಸಕ್ಕ ಸೇರಿದಾಗಿನಿಂದ ಇದುವರೆಗೆ ಎಂದೂ ತನ್ನನ್ನು ಸಂಪಾದಕರು ಗದರಿಸಿಲ್ಲ. ತನ್ನ ಎಲ್ಲ ಸಾಹಸಕಾರ್ಯಗಳಿಗೂ ಪ್ರೋತ್ಸಾಹ ಕೊಡುತ್ತ ಬಂದಿದ್ದಾರೆ. ಅವರ ನೈತಿಕ ಬೆಂಬಲದಿಂದ ತಾನು ಧೈರ್ಯವಾಗಿ ಎಲ್ಲ ಕಡೆಯೂ ಮುನ್ನುಗ್ಗುತ್ತಾಳೆ. ಮೂರು ವರ್ಷಗಳಲ್ಲಿ ಹೆಸರು ಪಡೆದಿದ್ದಾಳೆ. ಉಜ್ವಲ ಭವಿಷ್ಯವಿದೆ ಎಂದು ಸಹೋದ್ಯೋಗಿಗಳನ್ನು ಬಿಟ್ಟು ಬೇರೆಯವರು ತನ್ನನ್ನು ಅಭಿನಂದಿಸಿದ್ದಾರೆ. ಕಸ್ತೂರಿಯ ಕಥೆಯು ತನ್ನ ಪತ್ರಿಕೆಗೊಂದು ಒಳ್ಳೆಯ ಸ್ಟೋರಿ ಆಗಬಹುದು.

ಗಾಡಿ ನಿಲ್ಲಿಸಿ ಕಾಯಿಪಲ್ಲೆ ಖರೀದಿಸುತ್ತಿದ್ದ ಕಸ್ತೂರಿಯ ಬಳಿಗೆ ಬಂದಳು. " ಹಲೋ" ಎಂದಳು.

ಕಸ್ತೂರಿ ತಲೆ ಎತ್ತಿದಳು. ಇಷ್ಟು ತಿರಸ್ಕಾರ ತೋರಿಸಿ, ದೂರ ಇಟ್ಟರೂ ಮತ್ತೂ ಬಂದು ಗಂಟು ಬೀಳುತ್ತದಲ್ಲ. ಇದೊಂದು ವಿಚಿತ್ರ ಪ್ರಾಣಿ "ಹಲೋ, ನಿಮಗ ಕಚೇರಿಗೆ ಹೋತ್ತಾಗಲಿಲ್ಲೇನು" ತುಸು ಸೌಮ್ಯವಾಗಿತ್ತು ದನಿ.

"ನಮ್ಮದು ಆಫೀಸ ಕೆಲಸ ಅಲ್ರೀ, 'ಸಮರಸ' ಪತ್ರಿಕೆಗೆ ವರದಿಗಾರ್ತಿ ನಾನು. ನನಗ ಜರ್ನಲಿಜಂ ಭಾಳ ಸೇರತದ ಅಂತ ಇದಕ್ಕs ಬಂದೇನಿ. ನಮ್ಮ ಕೆಲಸ ಕಚೇರಿಗಿಂತ ಹೊರಗ ಭಾಳ ಇರತದ ಅಂತ ನಿಮಗೂ ಗೊತ್ತಿರಬೇಕಲ್ಲ, ನಿಮ್ಮನ್ನ ನೋಡಿ ಭಾಳ ದಿನಾ ಆಗಿತ್ತು ಅದಕ್ಕs ನಿಂತೆ" ಕಸ್ತೂರಿಯ ಪ್ರತಿಕ್ರಿಯೆಯಿಂದ ಉತ್ತೇಜಿತಳಾಗಿ ಅತ್ಯುತ್ಸಾಹದಿಂದ ಅಗತ್ಯಕ್ಕಿಂತ ಹೆಚ್ಚಿಗೆ ವಿವರಣೆ ಕೊಟ್ಟಳು. ಮಾತು ಮುಂದುವರಿಸದೆ ಎಲ್ಲಿ ಹೊರಟುಬಿಡುತ್ತಾಳೋ ಎನ್ನುವ ಆತಂಕ ಅವಳಿಗೆ. ಕೈಗೆ ಸಿಕ್ಕ ಈ ಸ್ನೇಹ ಬೆಳೆಸುವ ಚಾನ್ಸ ಬಿಡಬಾರದೆನ್ನುವ ಹಟ. "ನೀವು"....

ಬಗ್ಗಿ ಪಲ್ಲೆ ಆರಿಸುತ್ತಿದ್ದ ಕಸ್ತೂರಿ ಎದ್ದು ನಿಲ್ಲದೆ ನೆಲಕ್ಕೆ ಕುಸಿಯುತ್ತಿದ್ದುದನ್ನು ನೋಡಿ ಗಾಬರಿಯಾಗಿ ಆಸರೆ ನೀಡಿ ಅವಚಿಕೊಂಡಳು. 'ಅಕ್ಕಾs ಏನಾತ್ರಿs, ಯಾಕ್ರೀ, ಕಣ್ಣು ಬಿಡದ ಕಸ್ತೂರಿಗೆ ಬಾಗವಾನಳ ನೀರು ಚಿಮುಕಿಸಿದಳು. ಎದೆ ಹಿಡಿದುಕೊಂಡು 'ಹಾ' ಎಂದು ಕಸ್ತೂರಿ ಉಸಿರು ಬಿಟ್ಟಾಗ ಉಮಾಳಿಗೆ ಹಾಯ್ ಎನಿಸಿತು.

"ನನ್ನ ಗಾಡೀ ಮ್ಯಾಲೆ ಗಟ್ಟ್ಯಾಗಿ ಕೂಡ್ರಿ. ಹತ್ತರದ ಡಾಕ್ಟರರ ಕಡೆ ಕರಕೊಂಡು ಹೋಗ್ತಿನಿ, ಹಾರ್ಟ್‌ಟ್ರಬಲ್ ಅದ ಏನು ? ಭಾಳ ತ್ರಾಸ ಆಗಾಕ ಹತ್ತೈತೇನು ?"

"ನನ್ನ ಪರ್ಸಿನ್ಯಾಗ ಗುಳಿಗಿ ಅದಾವ, ತಗದ ಕೊಡ್ರಿ. ಅಂದರ ಆರಾಮ ಅನಸ್ತದ. ಡಾಕ್ಟರ ಬರದ ಕೊಟ್ಟಾರ."

ಗುಳಿಗೆ ನುಂಗಿಸಿದ ಮೇಲೆಯೂ ಸಮಾಧಾನವೆನಿಸದೆ, "ನಿಮ್ಮನ್ನ ಮನೀಗೆ ಬಿಡ್ತೇನಿ ಬರ್ರಿ" ಅವಳ ಭುಜದ ಸುತ್ತ ಕೈ ಹಾಕಿ ನಡೆಸಿದಳು. ಮನೆಗೆ ಬಂದ ಮೇಲೆ ಇಬ್ಬರೂ ಉಮಾ ಮಾಡಿದ ಚಹಾ ಕುಡಿದು ಸ್ವಲ್ಪಹೊತ್ತು ಅವಳ ಕೈ ಹಿಡಿದುಕೊಂಡು ಕಸ್ತೂರಿ ಹಾಗೇ ಮಲಗಿದಳು. ಮತ್ತೆ ಕಣ್ಣು ತೆರೆದಾಗ ಅವುಗಳಲ್ಲಿ ಪ್ರೀತಿಯ ಒರತೆ ಇತ್ತು. ಈ ಬದಲಾವಣೆಯಿಂದ ಚಕಿತಳಾದವಳು ಉಮಾ. ನನಗ ಈ ಜಗತ್ತಿನೊಳಗೆ ಯಾರೂ ಇಲ್ಲ ಉಮಾ. ನಾನು ಸತ್ತರ ಅನಾಥ ಹೆಣಾ ಅಂತ ಯಾರಾದರೂ ಅಂತ್ಯಕ್ರಿಯೆ ಮಾಡಬಹುದು. ಹಾಂಗಂತ ಒಂದು ವಿನಂತಿ ಪತ್ರಾ ಬರದು ಯಾವಾಗಲೂ ನನ್ನ ಪರ್ಸಿನ್ಯಾಗ ಇಟ್ಟರತೇನಿ. ಈ ಕೀಲಿಕೈ ಮನೀದು. ನೀನs ಇಟಕೋ, ನಾನು ಸತ್ತ ಮ್ಯಾಲೆ ನೀನು ಈ ಮನೀಗೆ ಬಂದು ನನ್ನ ಕಪಾಟಿನೊಳಗಿನ ಪತ್ರಾ ತಗದು ಓದಿ ಅದರಂತ ಮಾಡಬೇಕು. ಪತ್ರಾ ನಿನ್ನ ಹೆಸರಲೆ ಬರದಿರತೀನಿ. ನೀ ಒಬ್ಬ ನಿಸ್ವಾರ್ಥ, ಸಾಹಸಿ, ಸರಳ-ಸ್ವಚ್ಛ ಮನಸ್ಸಿನ ಹುಡುಗಿ ಅಂತ ಈ ಜವಾಬ್ದಾರಿ ನಿನಗೆ ಒಪ್ಪಿಸೇನಿ. ಆಯ್ತು. ನನ್ನ ಮಾತಾಡೂ ಶಕ್ತಿ ಮುಗೀತು. ಥ್ಯಾಂಕ್ಸ್" ಬಳಲಿದವಳಂತೆ ಕಾಣುತ್ತಿದ್ದ ಕಸ್ತೂರಿಯನ್ನು ಬಿಡಲಾರದೆ ಬಿಟ್ಟು ಬಂದಿದ್ದಳು ಉಮಾ. ಅಂದೇ ಕಡೆ ಕಸ್ತೂರಿಯನ್ನು ನೋಡಿದ್ದು.

ಜೀವಮಾನದಲ್ಲಿ ತಾನು ಊಹಿಸಿರದ ಜವಾಬ್ದಾರಿಯನ್ನು ಹೊತ್ತು ಬಂದಿದ್ದಳು ಭಾರವಾದ ಮನಸ್ಸಿನಿಂದ. ಒಂಟಿ ಜೀವ, ಅನಾಥೆ, ಸತ್ತರೆ ಅಳಲು ಹಿಂದೆ ಯಾರೂ ಇಲ್ಲ. ಈ ಭಾವನೆಯೇ ತನ್ನನ್ನು ನಡುಗಿಸಿತ್ತು. ತಾನು ಯಾಕಾದರೂ ಕಸ್ತೂರಿಯ ಕಥೆಗೆ ಹಾತೊರೆದೆ, ಅವಳ ಬೆನ್ನು ಬಿದ್ದೆ, ಅಂತರಾಳ ಜಾಲಾಡಿಸಲು ಹೋದೆ. ಹೆಪ್ಪುಗಟ್ಟಿದ ಮೌನ ಕದಡಿದೆ. ಹೋಗದಿದ್ದರೆ ಅವಳ ಸಾವನ್ನು ಕಂಡ ತನಗೆ ಈ ತಳಮಳ, ನೋವು ಇರುತ್ತಿರಲಿಲ್ಲ. ಇಯ್ಯೋ ಪಾಪ! ಯಾವಳೋ ಬಿದ್ದು ಸತ್ತು ಹೋದಳಲ್ಲ ಎಂದು ಕನಿಕರಿಸಿ ತನ್ನ ಕರ್ತವ್ಯ ನಿಭಾಯಿಸಿ ಗಾಡಿ ಹತ್ತಿ ಹೊರಟು ಬಿಡುತ್ತಿದ್ದಳು. ತಾನು ಯಾಕೆ ಈ ಸುಳಿಯಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದೇನೆ. ಮನಸ್ಸಿನ ಹೊಯ್ದಾಟಕ್ಕೆ ಬೆಚ್ಚಿದಳು. ಅಂತಃಕರಣವುಳ್ಳ ಒಬ್ಬ ಹೆಣ್ಣಾಗಿ ಇನ್ನೊಂದು ನೊಂದ ಜೀವಕ್ಕೆ ಎರಡು ಹನಿ ಕಣ್ಣೀರು ಹಾಕದಷ್ಟು ಕಠಿಣಳಾದೆನೇ, ಸ್ವಾರ್ಥಿಯಾದೆನೇ ? ಬೆಳಗಿನವರೆಗೂ ಕಣ್ಣಿಗೆ ಕಣ್ಣು ಹಚ್ಚದೆ ಒದ್ದಾಡಿದಳು. ಕಣ್ಣು ಮುಚ್ಚಿದರೂ ನಾನು ಒಂಟಿ, ಅನಾಥೆ, ನನಗಾಗಿ ಅಳುವವರು ಯಾರು ಇಲ್ಲ ಎನ್ನುತ್ತಿದ್ದ ಕಸ್ತೂರಿಯ ಮುಖ ಮರೆಯಾಗುತ್ತಿರಲಿಲ್ಲ. ನಾನು ಉಮಾ, ನಾನು ಅಳುತ್ತಿದ್ದೇನೆ ಅಕ್ಕಾs ನಿನಗಾಗಿ ಅಳುತ್ತಿದ್ದೇನೆ. ಜಗತ್ತಿನಲ್ಲಿ ಇಂಥ ಜೀವಗಳೂ ಇವೆಯೇ ಅಚ್ಚರಿಪಡುತ್ತಿದ್ದಳು ಮನಸ್ಸಿನಲ್ಲಿಯೇ. ಅಂತೂ ಒಮ್ಮೆ ಬೆಳಗಾಯಿತು.

***

ಪತ್ರ ಬಿಡಿಸುತ್ತಿದ್ದ ಉಮಾಳ ಕೈ ನಡುಗುತ್ತಿತ್ತು.

ಪ್ರೀತಿಯ ಉಮಾ.

ನನಗೂ ಒಂದು ಮಗ ಅಥವಾ ಮಗಳು ಇದ್ದಿದ್ದರೆ ನಿನ್ನ ವಯಸ್ಸಿನದು ಇರುತ್ತಿತ್ತು. ಬೆಳಕು ಕಾಣುವ ಮೊದಲೇ ಕನಸಿನಂತೆ ಕರಗಿಹೋಯಿತು. ಅದಕ್ಕೆ ಕಾರಣ ನನ್ನ ಗಂಡ. 'ಸಮರಸ' ಪತ್ರಿಕೆಯ ಮಾಲಿಕ, ಮುದ್ರಕ, ಪ್ರಕಾಶಕ, ಸಂಪಾದಕ ಎಲ್ಲವೂ ಆಗಿರುವ ಚಂದ್ರಭೂಷಣ. ನಮ್ಮದು ಪ್ರೇಮ ವಿವಾಹ. 'ಸಮರಸ' ಹುಟ್ಟುಹಾಕಿ ಬೆಳೆಸಿದ್ದರಲ್ಲಿ ನನ್ನದೂ ಪಾಲಿದೆ. ನನ್ನ ಪ್ರತಿಭೆ, ಪಾಂಡಿತ್ಯ, ಬರವಣಿಗೆ ಭೂಷಣನಿಗೆ ನುಂಗಲಾರದ ತುತ್ತು ಆದಾಗ ನನ್ನನ್ನು ಕಡೆಗಣಿಸಿದ. ಅಪಮಾನಿಸಿದ. ಒಬ್ಬ ಉತ್ಸಾಹಿ ತರಳೆ, ವರದಿಗಾರ್ತಿಯ ಮೇಲೆ ಅತ್ಯಾಚಾರ ಮಾಡಿದಾಗ ಮಾತ್ರ ಅನ್ಯಾಯ ಸಹಿಸದೆ ಅವನ ವಿರುದ್ಧ ಸಿಡಿದೆದ್ದೆ. ಅದರ ಪರಿಣಾಮ ನನಗೆ ದೈಹಿಕ ಹಿಂಸೆ. ಮಗು ಗರ್ಭದಲ್ಲಿಯೇ ಸತ್ತುಹೋಯಿತು. ನನ್ನ ಸಹನೆಯೂ ಮುಗಿದಿತ್ತು. ಡೈವೋರ್ಸ್ ತೆಗೆದುಕೊಂಡು ಏಕಾಂಗಿಯಾದೆ. ತನ್ನ ವಿರುದ್ಧ ಬರೆದು ಬಯಲಿಗೆಳೆದಾಳೆನ್ನುವ ಹೆದರಿಕೆಯಿಂದ ಜೀವನಾಂಶ ಕೊಡುತ್ತಿದ್ದ. ಪತ್ರಿಕೆಗಾಗಿ ದುಡಿದಿದ್ದ ನನಗೆ ಹಕ್ಕೂ ಇತ್ತು. ಮನರಂಜನಾ ಲೋಕದಲ್ಲಿ ಹೊತ್ತು ಕಳೆಯಲು ಸಿನಿಮಾ ನೋಡುವ ಅಭ್ಯಾಸ ಬೆಳೆಸಿಕೊಂಡೆ. ಎಲ್ಲರನ್ನು ದೂರವಿಟ್ಟರೂ ಯಾವದೋ ಅನುಬಂಧಕ್ಕೆ ಒಳಗಾಗಿ ನೀನು ಹತ್ತಿರ ಬಂದೆ. ನನ್ನ ಭಾರ ನಿನಗೆ ಒಪ್ಪಿಸಿದ ದಿನ ನಾನು ಶಾಂತಿಯಿಂದ ಸಾಯಲು ಸಿದ್ಧಳಾದೆ. ಮನೆ ಬಾಡಿಗೆಯದು. ಸಾಮಾನು, ಪುಸ್ತಕಗಳೆಲ್ಲ ನಿನ್ನವು. ನಿನಗೆ ತೋಚಿದಂತೆ ಮಾಡು. ಪುಸ್ತಕ ಸಂಗ್ರಹ ನಿನಗೆ ಉಪಯೋಗವಾಗಬಹುದು. ನೀನೇ ಇಟ್ಟುಕೊಂಡರೆ ನನಗೆ ಸಮಾಧಾನ. ಈ ಜಗತ್ತಿನಿಂದ ಹೊರಡುವ ಸಮಯದಲ್ಲಿ ನಾನು ಒಂಟಿಯಲ್ಲ ಎನ್ನುವ ಭಾವನೆ ತಂದು ಕೊಟ್ಟ ನಿನಗ ತುಂಬಾ ಕೃತಜ್ಞಳು.

ನಿನ್ನ ಅಕ್ಕ

ಕಸ್ತೂರಿ

ಉಮಾ ಗಡಗಡ ನಡುಗಿ ಕಣ್ಣುಮುಚ್ಚಿ ಕುಳಿತಳು. ಅಲ್ಲಿಯೂ ಇನ್ನೊಂದು ಭೂತ ಕುಣಿಯುತ್ತಿತ್ತು.

***

# ಶ್ರದ್ಧಾಂಜಲಿ

ಊರಿಗೇ ಮಾವನಾಗಿದ್ದ ನಾಗಪ್ಪ ವಯಸ್ಸಾಗಿ, ಜಡ್ಡಾಗಿ ಕೊನೆಗೊಮ್ಮೆ ನರಳಿ ಸತ್ತ. 'ಪೀಡಾ ಹೋತು ಹಿಡಿ ಮಣ್ಣು ಹಾಕಿ ಬರೂಣ' ಎಂದು ಸ್ಮಶಾನಕ್ಕೆ ಹೋದರು ಊರ ಜನ. ಕೂಡಿದ ಜನರಲ್ಲಿ ಕಿಡಿಗೇಡಿ ಒಬ್ಬ ಪಿಸುಗುಟ್ಟಿದ್ದ. 'ಕಲ್ಲು ಮಣ್ಣು ಹಾಕಿ ಗಟ್ಟ್ಯಾಗಿ ತುಳೀರಿ, ಎದ್ದ ಬಂದಾನು.' ಅಂತ. ಯಾರ ಬಾಯಿಂದಲೂ ಒಂದು ಒಳ್ಳೇ ಮಾತು ಬರಲಿಲ್ಲ, 'ಶರಣರ ಸಾವು ಮರಣದಲ್ಲಿ' ಅನ್ನಲು ಅವನು ಶರಣನೂ ಅಲ್ಲ. ಸಭೆ ಸೇರಲಿಲ್ಲ. ಭಾಷಣ ನಡೆಯಲಿಲ್ಲ. ಅವನು ಧುರೀಣನೂ ಅಲ್ಲ. ಹುಟ್ಟಿ ಬಂದ, ಬಾಳಿದ, ಸತ್ತು ಹೋದ. ನಾಗಪ್ಪ ಮಾವ ಹೇಗಿದ್ದ ಏನು ಮಾಡಿದ? ಕುತೂಹಲವಿದೆಯೆ ನಿಮಗೆ? ಬನ್ನಿ ನಮ್ಮ ಜೊತೆ ಅವನ ಹಳ್ಳಿಯ ಮನೆಗೆ ಹೋಗೋಣ. ಒಬ್ಬೊಬ್ಬರಾಗಿ ಮಗ, ಮಗಳು, ಹೆಂಡತಿ ಎಲ್ಲರನ್ನೂ ಮಾತಾಡಿಸೋಣ.

**ಬಸವರಾಜ :** ನಮ್ಮಪ್ಪಗ ನಾ ಒಬ್ಬನs ಗಂಡು ಮಗಾ. ಆದೂ 'ಗಂಡು ಹುಟ್ಟಿತs ಬಂಗಾರ ಗುಂಡು ಹುಟ್ಟಿತs' ಅನ್ನೂ ಹಾಂಗ ಇಬ್ರು ಹೆಣಮಕ್ಕಳ ಮ್ಯಾಲೆ ಹುಟ್ಟಿದಂವಾ. ಆಮ್ಯಾಲೆ ನಮ್ಮವ್ವ ಹಡೀಲೆ ಇಲ್ಲ. ಅಪ್ಪ ಪ್ರಪಂಚಾ ಸುತ್ತಿದಂವಾ. ಕಾಯಿದೆ ಕಾನೂನು ಗೊತ್ತಿದ್ದಾಂವಾ ಏನಾರ ಮಾಡಿದ್ದಾನು. ಒಬ್ಬನ ಮಗಾ ಅಂತ ಅಂವೇನ ಒಂದಿನಾನೂ ತೊಡಿಮ್ಯಾಲೆ ಕುಂದ್ರಿಸಿಕೊಂಡ ಕಿರೀಟಾ ಹಾಕಲಿಲ್ಲಾ. 'ಲೇ. ಮಗನ ಹಲ್‌ಕಟ್ ಸೂಳಿ ಮಗನ ಬಾರಲೇ ಇಲ್ಲಿ. ಇನ್ನೊಮ್ಮೆ ಹಿಂಗ ಮಾಡಿದಿ ಅಂದರ ಕಾಲ್ಮರಿಲೆ ಹೊಡೀತಿನಿ ನಿನ್ನ' ಅಂತ ಎದ್ದರ ಕುಂತರ ಸಿಟ್ಟಿಗೇಳಾಂವಾ.

ನನಗಂತೂ ದುಡದ ದುಡದ ಸಾಕಾಗಿ ವಾರಿಗೀ ಗೆಳೆಯಾರ್‍ನ ನೋಡಿ ಹೊಟ್ಟಿಕಿಚ್ಚಾಗಿ ಮನೀ ಬಿಟ್ಟು ಎಲ್ಲ್ಯಾರೇ ಓಡಿ ಹೋಗಲ್ಯಾ ಅಂತಿದ್ದೆ.

ಒಂದೆರಡ ಸಾರೆ ಪ್ಲ್ಯಾನೂ ಹಾಕಿದ್ದೆ. ನಮ್ಮವ್ವ ಅಳೂದು ಕರಿಯೂದು ನೋಡಲಾರದ ಸುಮ್ಮನಾದೆ. ಅವ್ವ ಕದ್ದು ಮುಚ್ಚಿ ನೂರಾರು ರೂಪಾಯಿ ಕೈಯ್ಯಾಗ ತುರುಕಿ, ಹೋಗ ಬೆಳಗಾಂವ್ಯಾಗ ಸಿನೇಮ, ಚಾದಂಗಡಿ ತಿರಗ್ಯಾಡಿ ತಿರಗ್ಯಾಡಿ ಬಾ ಅಂತ ಕಳಸತಿದ್ಲು. ಒಂದಿನಾನೂ ಆಕಿ ನನಗ ತಿನ್ನಾಕ ಉಣ್ಣಾಕ ಕಡಿಮಿ ಮಾಡಲಿಲ್ಲಾ. ನನ್ನ ಒಬ್ಬನ್ನs ಉಣ್ಣಾಕ ಕುಂದರಿಸಿ ಹಾಲು ಬೆಲ್ಲ ತುಪ್ಪ ಮಸರು ಮಜ್ಜಿಗಿ ಕೈ ಜಲ್ಲ ಬಿಟ್ಟ ನೀಡತಿದ್ಲು. ಗರಡೀ ಮನೀಗಿ ಹೋಗಿ ಬಾ ಅಂತಿದ್ಲು. ಅದಕ್ಕs ನಾನೂ ಅಪ್ಪನಾಂಗ ಧಾಂಡಿಗ್ಯಾ ಆಗಿ ಮಸ್ತಾಗಿ ಬೆಳೆದೆ. ಅಪ್ಪನ ಸಿಟ್ಟಿಗೆ ಹೆದರಿ ನಾ ದುಡಿಯಾಕ ಕಲಿತೆ. ಹೊಲಾ ಕೊಂಡ್ಕಿ, ಆಸ್ತಿ ಬೆಳೀತು. ಒಂದ ವ್ಯಾಳೆ ಅಚ್ಚಾ ಮಾಡಿದ್ದರ ನಾನೂ ರಾಮ್ಯಾ, ಎಂಕ್ಯಾ, ಸಿದ್ಯಾರ ಹಾಂಗ ಗುಟಕಾ ತಿನಕೊಂತ ಸೆರೇದ ಅಂಗಡಿ ಮುಂದ ಬಿದ್ದಿರತಿದ್ದೆ.

ಅಪ್ಪನೂ ಯಾರಿಗೂ ತಿಳೀಲಾರದಂಗ ಕುಡೀತಿದ್ದಾ. ಅದೂ ಒಂದು ಅಳತ್ಯಾಗ. ಕುಡದರೂ ಯಾರಿಗೂ ಗೊತ್ತ ಆಗತಿದ್ದಿಲ್ಲಾ ಅವ್ವನ್ನ ಬಿಟ್ಟು. ಯಾಕಂದರ ಅಂವಗ ಅವರ ಹೆದರಿಕಿ ಇತ್ತಲ್ಲ. ಯಾರರೆ ತನ್ನ ಕಾಡಿದರ ಬಾರಿಗೀಲೆ ಝಾಡಿಸಿ ಬಿಡತಿದ್ಲು ಗಂಗವ್ವಾಯಿ. ಅಪ್ಪ ಮೂಬೆರಕಿ. ಆಕಿಗೆ ಗೊತ್ತ ಆಗದಾಂಗ ಹಾದರ, ಕುಡತಾ ಎಲ್ಲಾ ಮಾಡತಿದ್ದಾ. ಚೆಂಜಿ ಆದ ಕೂಡಲೆ ಮಕಾ ತೊಳಕೊಂಡ, ಮೂರ ಬಟ್ಟ ಈಬೂತಿ ಪಟ್ಟಾ ಬಡಕೊಂಡ, ಈರಭದ್ರದೇವರ ಮುಂದ ಊದಬತ್ತಿ ಹಚ್ಚಿ ತನ್ನ ಅವ್ವನ ಕಾಲ ಬೀಳತಿದ್ದಾ. ಆಯಿಗೆ ಖುಷೀನ ಖುಷಿ. ಮನಸ ತುಂಬಿ ಹರಕೀ ಕೊಡತಿದ್ಲು. ಅಪ್ಪಗ ಅವ್ವ ಅಂದರ ದೇವ್ರು. ಆಕೀ ಮಾತು ಹಸೀಗ್ವಾಡ್ಯಾಗಿನ ಹಳ್ಳು. ಬದಿಕಿ ಇರೂತನಾ ಆಕೀದs ರಾಜ್ಯ ನಮ್ಮನ್ಯಾಗ. ನಮ್ಮ ಅವ್ವನ್ನೂ ನಾ ಹಾಂಗs ಇಟಗೋತೀನಿ ಅಂದಿದ್ದೆ. ಆದರ ನಮ್ಮಪ್ಪನ ಮುಂದ ನಂದೇನೂ ಆಟ ನಡೀತಿದ್ದಿಲ್ಲ. ಗೆಳೆಯರೆಲ್ಲಾ ಹುಲೀ ಹೊಟ್ಟ್ಯಾಗ ಒಂದ ಇಲೀ ಹುಟ್ಟೈತಿ'

ಅಂತ ನಗಚಟಾಕಿ ಮಾಡತಿದ್ರು. 'ಅಗಸರ ಕತ್ತೀ ಹಾಂಗ ದುಡಿಯೂದ ಒಂದs ಗೊತ್ತೈತಿ ನಿನಗ, ತಲ್ಯಾಗ ಬುದ್ಧೀನ ಇಲ್ಲಾ ಮಣ್ಣಾ ತುಂಬೈತಿ' ಅಂತ ಪಿರೀತೀಲೆ ಬಯ್ಯತಿದ್ದರು. ಅಪ್ಪ ನನ ಮದುವೀ ಮಾಡಿತೀನಿ ಅಂತ ಓಡ್ಯಾಡಾಕ ಹತ್ತಿದಾ. ಒಂದಿನಾ ಅವ್ವನ ಕೈ ಹಿಡಕೊಂಡು ಹಿತ್ತಲದಾಗ ಅತ್ತೆ. ಅಪ್ಪ ನನ್ನ ಇಷ್ಟ ದ್ವೇಷಾ ಮಾಡತಾನ. ನೀ ಅದೀ ಅಂತ ಬದಕೇನಿ. ನನ್ನ ಯಾಕ ಹುಟ್ಟಿಸಿದೆಬೆ' ಅಂತ ಗೋಳಾಡಿದೆ.

'ಹುಚ್ಚ ನನ ಮಗನ. ಅವರ ಗುಣಾ ನಿನಗ ಗೊತ್ತಿಲ್ಲ. ನಿನ್ನ ಭಾಳ ಪಿರೀತಿ ಮಾಡತಾರೊ. ಹೊಲದಾಗ ಮನ್ಯಾಗ ನನ ಮಗಾ ಇಷ್ಟು ದುಡೀತೈತಿ. ಅದಕ್ಕ ಹೊಟ್ಟಿಗಿ ಏನೂ ಕಡಿಮಿ ಮಾಡಬ್ಯಾಡಾ ಅಂತಾರ. ನಾ ನಿನಗ ಕೊಡೂದು ಅವರ್ದs ರೊಕ್ಕ, ನನ್ನ ಹಂತ್ಯಾಕ ಒಂದ ದಮಡಿ ಇಲ್ಲಾ. ಎಲ್ಲಾ ಅವರ ಹೇಳಿದಾಂಗ ನಾ ಮಾಡತೀನಿ' ಅಂದು ನನ್ನ ಬೆನ್ನ ಮ್ಯಾಲೆ ಕೈಯಾಡಿಸಿ ಸಮಾಧಾನ ಹೇಳಿದ್ಲು. ನನಗ ನಂಬಾಕ ಆಗಲಿಲ್ಲ. ಏನ ವಿಚಿತ್ರ ಇದು ಅಂದುಕೊಂಡೆ. ಅಂವಾ ಏನು ಮಾಡಿದ್ರೂ ನನ್ನ ಹಿತಕ್ಕ ಮಾಡತಾನ ಅಂದು ಅಂವನ್ನs ನಂಬಿದೆ. ಈಗ ಇಂಥಾ ಅಪ್ಪನ್ನ ಕಳಕೊಂಡೆ. ನನ್ನ ಕಣ್ಣ ಮುಂದ ಕತ್ತಲs ಐತಿ. ಅಯ್ಯೋ ಯಪ್ಪಾs. ನಮ್ಮಪ್ಪಾs.....

ಬಸವರಾಜನ ಅಳು ನಿಲ್ಲುವ ಮೊದಲೆ-

**ಗಿರಿಜವ್ವ :** ಅಪ್ಪನ ದೊಡ್ಡ ಮಗಳು ನಾನು. ಚೊಚ್ಚಲ ಹೆಣ್ಣ ಹುಟ್ಟಿತಂತ ಅಪ್ಪಗ ಸಿಟ್ಟ ಬಂದಿತ್ತಂತ. ಮನೀ ಹೆಣ್ಣಮಗಳ ಅಂದರ ಲಕ್ಷ್ಮೀ ಇದ್ದಾಂಗ. ಹುಟ್ಟಿದ ಮನೀಗೆ ಕೊಟ್ಟ ಮನೀಗೆ ಹೆಸರ ತರತಾಳ. ಮುಂದಿಂದು ಗಂಡs ಆಕ್ಕೈತೇಳ. ಈಗೇನ ಮುದುಕ ಆಗಿ ಹ್ವಾದೇನ ಅಂತ ಆಯಿ ಮೂತಿಗೆ ತಿವದ ಮ್ಯಾಲೆ ಕೂಸಿನ ನೋಡಾಕ ಬಂದನಂತ. ತಿಂಗಳ ಕೂಸಿನ್ನ ಕೈಯಾಗ ತೊಗೊಂಡು ಸಂಸ್ಕೃತದಾಗ ಮಂತ್ರಾ ಅಂದು ಆಸೀರ್ವಾದಾ ಮಾಡಿ "ಬಣ್ಣ ಕಡಿಮಿ ಇದ್ದರೂ ಕಣ್ಣು ಮೂಗಿಲೆ ನಿನ್ನಾಂಗ ಚೆಲುವಿ ಅದಾಳ ನಿನ್ನ ಮಗಳು" ಅಂದನಂತ. ಅವ್ವ ಹಿಗ್ಗಿ ಹಿರೀಕಾಯಾಗಿ ಅವತ್ನಿಂದ ಕಣ್ಣೀರ ಹಾಕೂದ ಬಿಟ್ಟಳಂತ.

ನನ್ನ ಬೆನ್ನ ಮ್ಯಾಲೆ ತಂಗಿ ಸುಮ್ಮಿ ಹುಟ್ಟಿದಾಗ ಮಾತ್ರ ಬಾಣಂತೀನ ಹಿಡದು ಎಳದು ಹೊಡ್ಯಾಕ ಹೋಗಿದ್ನಂತ. ಗಂಗವ್ವಾಯಿ ಸೊಸಿ ಸತ್ತಗಿತ್ತಾಳಂತ ಅಪ್ಪನ್ನ ನುಗಿಸಿ ಈ ಸುಂದ್ರಿ ಮುಂದಿಂದು ಗಂಡ ಹಡಿದೀದ್ರ ಇಕೀನ್ನ ಬಿಟ್ಟ ಬ್ಯಾರೆ ಮದವೀ ಮಾಡ್ತೀನಿ ಬಾ ಮಗನ ಅಂತ ಸಮಾಧಾನ ಮಾಡಿ ಬಿಡಿಸಿದಳಂತ. ಅವ್ವ ಹೆದರಿ ಕಂಗಾಲಾಗಿ ಹೊಟ್ಟಿಗಿ ತಿನ್ನದ, ಕೂಸಿಗಿ ಮಲೀ ಕುಡುಸದ ಅತಗೊಂತ ಮಲಗಿದ್ಲು. ಅಪ್ಪ ಗುಡಾರ ಸರಿಸಿ ಬಂದು "ಸುಮ್ಮಿ ಸತ್ತಗಿತ್ತೀತು ಎದ್ದು ಮಲೀ ಕುಡಸs ಸುಂದ್ರಿ ಅಂತ್ಹೇಳಿ ಅವ್ವನ ಬಾಯಾಗ ಎರಡ ಪೇಡೆ ಹಾಕಿದ್ದು ಕತ್ತಲ ಮೂಲ್ಯಾಗ ಕುಂತಾಕಿ ನಾನs ನೋಡಿ ಪಿಳಿ ಪಿಳಿ ಕಣ್ಣ ಬಿಟ್ಟಿದ್ದೆ. ಆಯೀ ಮುಂದ ಹೇಳಬ್ಯಾಡ ಅಂತ ಅವ್ವ ನನಗೂ ಪೇಡೆ ಕೊಟ್ಟಿದ್ಲು."

ನಾ ನೆರತ ಎರಡು ವರ್ಷದ ಮ್ಯಾಲೆ ಐದು ತೊಲಿ ಬಂಗಾರಾ ಹಾಕಿ ದುಮ್ಮಿಹಾಳ ನಿಂಗಪ್ಪಗ ನನ್ನ ಮದುವಿ ಮಾಡಿ ಕೊಟ್ಟಾ. ಒಟ್ಟ ಕುಟುಂಬಾ. ಮನೀ ತುಂಬ ಮಂದಿ. ದಿನಾ ನಾಲ್ವತ್ತು ರೊಟ್ಟೀ ಬಡೀತಿದ್ದೆ. ಹೊಲಕ್ಕೂ ಹೋಗತಿದ್ದೆ. ನನ್ನ ಗಂಡಗ ಒಂದೀಟ ಹೊರ ಚಾಳಿ ಇತ್ತ. ನನಗ ಸುಳವ ಬಡದ ಕೂಡಲೆ 'ಅಪ್ಪನ ಮುಂದ ಹೇಳ್ತೀನಿ ನೋಡ್ರಿ. ನಿಮ್ಮನ್ನ ಆಕಿನ್ನ ಕೂಡೇ ಕಾಲ್ಮರೀಲೆ ಬಡೀತಾನ ನಮ್ಮಪ್ಪ. ಭಾಳ ಸಿಟ್ಟಿನಾಂವ' ಅಂತ ತಾಕೀತ ಮಾಡಿದೆ.

"ಹೋಗಲೇ ಏನ್ಹೇಳ್ತಿ ನಿಮ್ಮಪ್ಪಂದು. ಬಾಳ ಶುದ್ಧ ಮನಿಶ್ಯಾ. ಊರಿಗೊಂದ ಹೆಂಗಸನ್ನ ಇಟ್ಟಾನಂವ. ಊರಾಗ ಸಾಜೂಗ ಆಗಿ ಮಂತ್ರಿ ಕೊಟ್ಟಾರ, ಎಮ್ಮೆಲ್ಲೆ ಕೊಟ್ಟಾರ ಅಂತ ತಾನs ಕೊಡಿಸಿದ ಶಾಲ ಹೊತಕೊಂಡ ದಿಮಾಕಿಲೆ ಅಡ್ಯಾಡತಾನ. ನಿಮ್ಮಪ್ಪನ ಐದೇಶಿ ಬಲ್ಲೆ ನಾನು" ಅಂತ ತಿರಿಗಿ ತದಕಿದಾಗ ಗಪ್ಪಗಾರಾದೆ.

ಚೊಚ್ಚಲ ಹಡ್ಯಾಕ ತವರ್ಮನಿಗೆ ಬಂದೆ. ಮೊಮ್ಮಗಾ ಹುಟ್ಟಿದ ಸಂತೋಸಾ ಅಪ್ಪಗ ಭಾಳ ದಿನಾ ಉಳೀಲಿಲ್ಲಾ. ಒಂದಿನಾ ಬೆಳಗಾಂವಿಗಿ ಹೋಗೂ ಮುಂದ ಟ್ರಕ್ ಎಕ್ಸಿಡೆಂಟ್ ಆಗಿ ಅಪ್ಪನ ಕೈಕಾಲು ಮುರದ್ವು. ಮೂರು ತಿಂಗಳ ಬೆಳಗಾಂವಿ ದೊಡ್ಡ ದವಾಖಾನ್ಯಾಗ ಇದ್ದಾ. ಕರ್ಚ ಬಾಳಾತು. ಮನ್ಯಾಗಿನ ಬಂಗಾರಾ ಒತ್ತೀ ಇಟ್ಟಾ. ಅದರಾಗ ನಂದೂ ಕೂಡಿತ್ತು. ಗಂಡನ ಮನೀಯವರು ದಯಾ ಮಯಾ ಇಲ್ಲದ ಬಂಗಾರ ತಂದರ ಮನ್ಯಾಗ ಕಾಲಿಡು ಅಂದ ಬಿಟ್ಟರು. ತೊಟ್ಟಿಲ ನಿಬ್ಬಣ ಹೋಗಲೇ ಇಲ್ಲಾ. ನಾ ಮಗನ್ನ ಕಟಗೊಂಡ ಇಲ್ಲೇ ಉಳದ ಬಿಟ್ಟೆ. ಗಂಡಮಗನ ಜೋಡಿ ಹೊಲದಾಗ ಮನ್ಯಾಗ ದುಡಿಯಾಕ ಒಂದ ಆಳಾತ ಅಂತ ಅಪ್ಪನೂ ಸುಮ್ಮನಾಗಿಬಿಟ್ಟಾ. ಹಾಸಿಗೀ ಹಿಡಿದ ಗಂಗವ್ವಾಯಿ ಹೇಲು ಉಚ್ಚಿ ಬಳದೆ. ಸಾಯೂತನಾ ಸೇವಾ ಮಾಡಿದೆ. ನನಗೇನ ಗಂಡನ ಗರಜೂ ಇದ್ದಿದ್ದಿಲ್ಲಾ.

ಮೊಮ್ಮಗ ಎದೀ ಉದ್ದs ಬೆಳೆದಾ. ಅಪ್ಪನ ಜೀವ ಕುಟು ಕುಟು ಅಂತಿತ್ತೋ ಏನೋ. ದುಮ್ಮೀ ಹಾಳದವರ ಮ್ಯಾಲೆ ಮೊಮ್ಮಗಳ ಪಾಲಿಗೆ ಕೋರ್ಟ ಕೇಸ ಹಾಕಿದಾ. ಬೆಳಗಾಂವಿಗೆ ಓಡ್ಯಾಡಿ ಅವರ ಇವರ ಕೈಕಾಲ ಹಿಡಕೊಂಡು ಕೇಸ ಗೆಲ್ಲಿಸಿದಾ. ರಿಜಿಸ್ಟ್ರಿ ಕಾಗದಾ ನನ್ನ ಕೈಯಾಗ ಕೊಟ್ಟು ಹೋಗ ನನ ಮಗಳ ಮಗನ್ನ ಕರಕೊಂಡ ನಿನ್ನ ಮನ್ಯಾಗ ಇರಹೋಗ ಅಂದಾ. ನನ್ನ ಸಲುವಾಗಿ ಬಾಳೇ ಹಾಳಾತು ಅಂತ ಕಣ್ಣೀರ ಹಾಕಿದ್ನಂತ ಅವ್ವ ಹೇಳಿದ್ಲು. ನೋಡಾಕ ಹೊರಗ ನಮ್ಮಪ್ಪ ಕಲ್ಲಬಂಡಿ ಆದ್ರೂ ಒಳಗ ನೀರ ಸೆಲಿ ಇತ್ತು. ಹಂತಾ ಅಪ್ಪನ ಕಳಕೊಂಡ ನಾ ಪರದೇಶಿ ಆಗೀನ್ರೇs ಅಯ್ಯಯ್ಯೋ ನಮ್ಮಪ್ಪ ನಮ್ಮನ್ನ ಬಿಟ್ಟ ಹ್ಯಾದನ್ರೇ .....

ಗಿರಿಜವ್ವನ ಕಣ್ಣೀರು ಆರುವ ಮೊದಲೇ ....

**ಸುಮಿತ್ರಾ** : ನಾ ನಮ್ಮಪ್ಪನ ಎರಡ್ನೇ ಮಗಳು ಅನ್ನೂದಕಿಂತ ಅವ್ವನ ಮಗಳು ಅನ್ನೂದs ಖರೇ. ಕ್ಯಾದಿಗಿ ಬಣ್ಣ, ನೆಟ್ಟನ್ನ ಮೂಗು, ದೊಡ್ಡ ಕಣ್ಣು, ತುಂಬಿದ ಗಲ್ಲ, ಕಪ್ಪನ ದಟ್ಟ ಕೂದಲಾ ಎಲ್ಲಾ ಥೇಟ ಸುಂದ್ರವ್ವನ ಹಾಂಗs ಅಂತಿದ್ರು ಮಂದಿ. ಆದರ ಚಂದ್ರಗ ಒಂದ ಕಪ್ಪ ಕಲೆ ಇದ್ದಾಂಗ ನನ್ನ ಹಣೀ ಮ್ಯಾಲೆ ಬಲಕ್ಕ ಒಂದ ಕಲೀ ಐತಿ. ನಮ್ಮನೀ ತಲಬಾಗಲಾ ದಾಟಿದ ಮ್ಯಾಲೆ ಬಲಕ್ಕ ಗ್ಯಾದಲಿ, ನಾಕೆತ್ತು, ಎರಡೆಮ್ಮಿ ಆಕಳಾ, ಉಚ್ಚಿ-ಶೆಗಣೀ ನಾತಾ -ಎಡಕ್ಕ ನಾಕೈದ ಪಾವಟಿಗಿ ಏರಿದ ಮ್ಯಾಲೆ ಸಾಲ ಆರ ಕಂಬದ ಪಡಸಾಲಿ. ಅಪ್ಪ ಚಾಪೀ ಮ್ಯಾಲೆ ಗ್ಯಾಡಿಗೆ ಆತ ಕುಂತ, ಬಂದ ಮಂದೀ ಕೂಡ ಮಾತಾಡಿಕೊಂತ ತನ್ನ ದರಬಾರಾ ನಡಸೂ ಜಾಗಾ ಅದು. ನನಗಿನ್ನೂ ಚೂರ ಚೂರ ನೆನಪೈತಿ. ನನಗ ತಿನ್ನಾಕ ಉಂಡೀ ಕೊಟ್ಟ ಆಯೀ ಅವ್ವ ಕೂಡಿ ಬಸ್ಸೂನ್ನ ಎರ್ರ್ಯಾಕ ಹೋಗಿದ್ರು. ನನ್ನ ಕೈಯಾಗಿನ ಉಂಡಿ ಪಡಸಾಲಿ ಕಟ್ಟಿಕೆಳಗ ಬಿತ್ತು. ಅದನ್ನ ತೊಗೊಳ್ಳಾಕ ಹೋಗಿ ನಾನು ಕೆಳಗ ಬಿದ್ದೆ. ಫರಸಿ ಹಣೀಗೆ ಬಡದು ರಕ್ತ ಪುಟಿಯಾಕ ಹತ್ತ್ಯು. ಮುಂದಿನ ಮನೀ ಸತೀಶ ಓಡಿ ಬಂದು ಎಬ್ಬಿಸಿದಾ. ಅಪ್ಪ ಓಡಿ ಬಂದು ದೋತರಲೆ ನನ್ನ ಮಾರೀ ಮ್ಯಾಲಿನ ರಕ್ತಾ ಒರಿಸಿ ಎತ್ತಗೊಂಡ ಡಾಕ್ಟರ ಕಡೆ ಒಯ್ದಾ. ನಾ ಹುಟ್ಟಿದ ಮ್ಯಾಲೆ ಅದs ಮೊದಲನೇ ಸಾರೆ ಅಂವಾ ನನ್ನ ಎತ್ತಿದ್ದು. ಅದಕ್ಕs ನೆನಪೈತಿ ನನಗ.

ದೊಡ್ಡಾಕಿ ಆದಂಗ ಸತೀಶನ ಕಣ್ಣು ಯಾವಾಗ ನೋಡಿದರೂ ನನ್ನ ಮ್ಯಾಲೇ ಇರತಾವ ಅನ್ನೂದ ತಿಳಿಯಾಕ ಹತ್ತಿತು.

'ಸೂಮೀ, ಹಿಡಿ ಈ ಕೆಂಪ ಗುಲಾಬಿ, ನಿನ್ನ ಜಡ್ಯಾಗ ಛಂದ ಕಾಣತೈತಿ' ಅಂವಾ ಅಂದಾಗ ನಾನು ಅತ್ತಾಗ ಇತ್ತಾಗ ನೋಡಿ ಸೀನs ಮುಡಸು ಅನ್ನೂ ಹಾಂಗ ತಲಿ ತೋರಿಸಿ ತಿರಿಗಿ ನಿಲ್ಲತಿದ್ದೆ. ಅವನ ಬೆರಳು ಕುತಿಗಿ ಸುತ್ತ ಆಡಿದಾಗ ಕಚಗುಳಿ, ಮೈ ಜುಂ ಅಂತಿತ್ತು. ಅವನ ಕಣ್ಣಾಗಿನ ಪ್ರೀತಿ, ತುಂಟಾಟ ನನಗ ಭಾಳ ಸೇರತಿತ್ತು.

ಎಲ್ಲಾರ ಕಣ್ಣುತಪ್ಪಿಸಿ ಜಡೀ ಜಗ್ಗೂದು, ಮೈ ಮುಟ್ಟೂದು, ಗಲ್ಲಾ ಹಿಂಡೂದು ಮಾಡಿದಾಗ ನನ್ನ ಮೈ ಬಿಸಿ ಆಗಿ ಅಂವಗ ಅಲ್ಲೇ ಅಂಟಿಕೊಂಡ ಬಿಡಬೇಕ ಅನಸ್ತಿತ್ತು. ಗಿರಿಜಕ್ಕ, ಗಂಗವ್ವಾಯಿ ಕಣ್ಣ ತಪ್ಪಿಸಿ ಸಿನಿಮಾದಾಗ

ನೋಡಿದಾಂಗ ಪ್ರೀತಿ ಆಟಾ ಆಡೂದಂದರ ಹುರುಪ ತುಂಬತಿತ್ತು. ಸತೀಶನ್ನs ಮದುವಿ ಆಗಬೇಕು ಅಂತ ಭಾಳ ಆಸೇ ಮಾಡಿದ್ವೆ. ಅವನೂ ಮುದ್ದು ಕೊಟ್ಟ ಕೊಟ್ಟ ಹಾಂಗs ಹೇಳಿದ್ವಾ.

ಹಳ್ಳ್ಯಾಗ ನಮ್ಮಪ್ಪ ಮಾಡೂ ಕಿತಾಪತಿ ಏನತುಸಾ ಅಲ್ಲ. ಸತೀಶನ ಅಪ್ಪ ಸದಾಶಿವಪ್ಪನ ಹೊಲದ ಬಾಂದಕಲ್ಲ ರಾತ್ರೋರಾತ್ರಿ ಕಿತ್ತಿ ಒಳಗ ಸರಿಸಿಬಿಟ್ಟಾ. ತೊಗೋ ಇಬ್ಬರಿಗೂ ಜಗಳ ಆತು. ಹೊಡೆದಾಟಕ್ಕ ಸದಾಶಿವಪ್ಪ ಆಳಲ್ಲ. ಸೂಕ್ಷ್ಮ ಮನಿಶ್ಯಾ. ಮಕ್ಕಳ್ನ ಕಲಸೂ ನೆವಾ ಮಾಡಿ ಊರ ಬಿಟ್ಟ ಹೋಗಿ ಬಿಟ್ಟಾ. ನಾ ಹುಚ್ಚೀ ಹಾಂಗ ಸತೀಶನ ದಾರಿ ನೋಡೇ ನೋಡ್ದೆ. ಕಾದೂ ಕಾದೂ ಮೈ ಮನಸು ಎಲ್ಲಾ ಸೋತ ಹ್ವಾದು. ದಿನಕ್ಕ ದಿನಾ ಸತೀಶ ಮಸಕ ಆಕ್ಕೋತ ಹ್ವಾದಾ. ಮಾಯ ಆಗಿಬಿಟ್ಟಾ....

ಅಪ್ಪ ನನ್ನ ಮದುವಿ ಮಾಡಾಕ ತಯಾರಾದ. ಬಂದವರ ಮುಂದ ಗೊಂಬಿ ಹಾಂಗ ಸಿಂಗಾರಾಗಿ ಕೂತೆ. ಎದ್ದೆ. ಯಾರಾರೋ ಹುಂ ಅಂದ್ರು. ಯಾರ್‍ವಲ್ಲೆ ಅಂದರು. ನಾ ವಿಚಾರಾ ಮಾಡಾಕ ಹೋಗಲಿಲ್ಲಾ. ಕುಡಗೋಲು ಕುಂಬಳಕಾಯಿ ಅಪ್ಪನ ಕೈಯಾಗ ಕೊಟ್ಟು ಕುಂತ ಬಿಟ್ಟೆ. ನೀ ಏನಂತೀ ಅಂತ ಅಪ್ಪ ಎಂದೂ ಕೇಳಲಿಲ್ಲ. ಸಾಲೀನೂ ಮುಗದಿತ್ತು. ಜೋಡಿಯವರೆಲ್ಲಾ ಮದಿವ್ಯಾಗಿ ಹೋಗಿದ್ರು. ಶೇಂಗಾ ಹರ್‍ಯಾಕ, ಕಸ ತಗ್ಯಾಕ ಅಕ್ಕ ತಮ್ಮನ ಕೂಡ ಹೊಲಕ್ಕ ಹೋಗಿ ಮುಂಜಾನಿಂದ ಸಂಜೀತನಾ ಇದ್ದ ಬರತಿದ್ದೆ.

ಬದುಕು ಯಂತ್ರದಾಂಗ ಹ್ಯಾಂಗ ನಡೀತದ, ಎಷ್ಟ ದಿನಾ? ಉಪ್ಪು, ಹುಳಿ ಉಂಡ ದೇಹಾ ಏನೇನೋ ಬೇಕ ಅನಸತಿತ್ತು. 'ಸುಮಿತ್ರಾ' ಯಾರೋ ಕಿವೀ ಹತ್ತರ ಕರದರು, ಸಟ್ಟನ ತಿರುಗಿ ನೋಡಿದೆ. ಹುರಕಡ್ಡಿ ಶಂಭೂ ಹೆಗಲಿನ ಹತ್ತರ ನಿಂತಿದ್ವಾ. ಅವನ ಉಸರು ನನ್ನ ಗಲ್ಲಕ್ಕ ಬಡೀತಿತ್ತು. ಮೈಯಾಗ ಒಂಥರಾ ಆಗಿ ಮೈ ತುಂಬ ಹರಿದಾಡಿದಾಂಗ ಆತು. ಅಂವೇನ ನನಗ ಅರೇದಂವ ಅಲ್ಲ. ದಿನಾ ನಮ ಜೋಡಿ ಹೊಲದ ಕೆಲಸಕ್ಕ ಬರತಿದ್ದ. ಕಪ್ಪ ಇದ್ದರೂ ಕಳಾ ಇದ್ದ. ಕಣ್ಣಾಗ ಕಣ್ಣಿಟ್ಟು ನೋಡಿದಾ. ಕಣ್ಣಿಗೆ ಕತ್ತಲಿ ಬಂದಂಗಾತು.

'ಗಿರಿಜಕ್ಕಾ ಬಂದಿಲ್ಲಾ' ಅಂದ. ನನ ಗಂಟಲು ಒಣಗಿತ್ತು. ಕೈ ಹಿಚಕಿ ಕಿವ್ಯಾಗ ಪಿಸಿ ಪಿಸಿ ಅಂದಾ. ಯಂತ್ರದಾಂಗ ಗೋಣು ಹಾಕಿದೆ.

ಅಂದ ಮನೀ ಮುಟ್ಟೂದರಾಗ ದೀಪ ಹತ್ತಿತ್ತು. ಅವ್ವ ಹೊರಗs ಇದ್ಲು. 'ನಿಮ್ಮಪ್ಪ ಇನ್ನೂ ಮನೀಗೆ ಬಂದಿಲ್ಲ. ಸಪ್ಪಳಾ ಮಾಡದಾಂಗ ಹಿತ್ತಲ ಬಾಗಲದಾಗ ಬಾ ಯಾರರೆ ಕೇಳಿದರ ಹಣಮಪ್ಪನ ಗುಡೀಗೆ ಹೋಗಿದ್ದ ಅಂತ್ಹೇಳೆ.' ಹಾದರದ ಜೋಡಿ ಸುಳ್ಳ ಹೇಳಾಕೂ ಕಲಿಸಿದ್ಲು ನಮ್ಮವ್ವ. ಹಾಂಗs ಮತ್ತ ಮತ್ತ ಗುಡೀಗೆ ಹೋಗಿ ಬಂದೆ. ಮುಟ್ಟ ನಿಂತ ಹೊಟ್ಟೆ ಮುಂದ ಬಂತು. ಶಂಭ್ಯಾ ನಮ್ಮ ಜಾತಿ ಅಲ್ಲ. ಅಪ್ಪಗ ಹೆದರಿ ಮಾರಿ ತಪ್ಪಸಾಕ ಹತ್ತಿದಾ. ಅಪ್ಪಗ ಗೊತ್ತಾದರ ಹೊಡದದ ಕೊಂದ ಬಿಟ್ಟಾನ ಮಗಳ್ನ ಅಂತ ಚಿಂತೀ ಮಾಡಿ ಅವ್ವ ಮುಚ್ಚಿ ಮುಚ್ಚಿ ಇಟ್ಲು. ಗೊತ್ತ ಆದ ದಿನಾ 'ಘಾತಾ ಮಾಡಿದ್ಯ ರಂಡೀ' ಅಂತ ಚೀರ್‍ಯಾಡಿ ಕ್ವಾಣಿ ಬಾಗಲಾ ಹಾಕಿ ಹೊಡದಾ. ಹೊಡದಷ್ಟು ಹೊಡೀಲಿ ಹೊಟ್ಯ್ಯಾಗಿಂದು ಸತ್ತ ಹೋಗಲಿ ಅಂತ ನಾನೂ ಹಲ್ಲ ದವಡೀ ಕಚ್ಚಿ ಹೊಡಿಸಿಕೊಂಡೆ. ಅಷ್ಟಕ್ಕೆ ಅವನ ಸಿಟ್ಟು ಇಳೀಲಿಲ್ಲ. ನೀರೊಲಿ ಕೊಳ್ಳೀ ತಂದು ಬರೀ ಕೊಡಾಕ ಬಂದಾಗ ಮಾತ್ರ ಅವ್ವನ ಜೀವ ತಡೀಲಿಲ್ಲ. ಓಡಿ ಬಂದು ನನ್ನ ಅಪ್ಪಿಕೊಂಡು ಬಾಳೇಕ ಬಂದ ಮ್ಯಾಲೆ ಮದಲ ಸಾರೆ ಅಪ್ಪಗ ತಿರಿಗಿ ನಿಂತ್ಲು.

"ಇಟ್ಟ ವಯಸ್ ಆದರೂ ಮನೀ ಹೆಂಡ್ತಿ ಒಬ್ಬಾಕೆ ಸಾಲೂದಿಲ್ಲ ನಿನಗ. ನಾಯೀ ಹಾಂಗ ತಿಪ್ಪೀ ಮೂಸಾಕ ಹೋಗ್ತಿ. ಅದು ಹರೇದ ಹುಡುಗಿ. ನೀನು ನಿಂತ ಮದುವೀ ಮಾಡಿಕೊಟ್ಟದ್ದರ ಗಂಡನ ಮನ್ಯಾಗ ಸುಖದಿಂದ ಇರತಿದ್ಲು. ತಿಳೀಲಾರದ ತೆಪ್ಪ ಮಾಡಿದರ ಜೀವಾನ ತಗೀತಿ ಏನು ? ಅಕೀಕಿಂತ ನನಗ ಮದಲ ಬರೀ ಕೊಡು, ಈ ಹೆಣ್ಣ ಹಡದೀನಂತ."

ಅವ್ವನ್ನ ದುರು ದುರು ನೋಡಿ ಅಪ್ಪ ಉರಕೊಂತ ಹೊರಗ ಹೋದಾ. ಬೆಳತನಕ ಅವ್ವ ಎಣ್ಣೀ ಹಚ್ಚಿ ನನ್ನ ಮೈ ತೀಡಿ ನೀರಿನ ಕಾವು ಕೊಟ್ಲು. ಮರದಿನಾ ಹೊಡತಕ್ಕ, ಜ್ವರಕ್ಕ ನನ್ನ ಮೈ ಇಳದು ಹೋಗಿತ್ತು. ಡಾಕ್ಟರ ಕಡೇಂದ ಔಷಧ ಗುಳಿಗಿ ತಂದ ಅಪ್ಪ ಮಗಳಿಗೆ ಕಟ್ಟಿನ ಜ್ವರಾ ಅಂತ ದೊಡ್ಡ ದನ್ಯಾಗ ಹೇಳಕೊಂತ ಬಂದಿದ್ದ. ನೆಲಕ್ಕ ಬಿದ್ದರೂ ಮೀಸಿ ಮಣ್ಣ ಆಗಲಿಲ್ಲಾ ಅನ್ನೂವಂಪಾ ಅಪ್ಪ.

ಮುಂದ ಆರ ತಿಂಗಳದಾಗ ಅಪ್ಪ ನನ್ನ ಮದುವೀ ಮಾಡಿ ಕೈ ತೊಳಕೊಂಡ. ಬೆಳಗಾಂವ್ಯಾಗ ಸಣ್ಣ ರೆಡಿಮೇಡ ಅಂಗಡಿ ಇಟಕೊಂಡ ಅದಾನ ರಾಜಶೇಖರಾ. ಶುಭಕಾರೇಕ ಊರವರ ಯಾರರೇ ಕಲ್ಲ ಹಾಕ್ಯಾರಂತ ಬೆಳಗಾಂವಿ ಗುಡ್ಯಾಗ ಮದುವೀ ಮಾಡಿ ಕೊಟ್ಯಾ. ನನ್ನ ಗಂಡ ಭಾಳ ಪ್ರೀತಿಯಿಂದ ನೋಡಿಕೊಂತಾನ. ನಾನೂ ಹಿಂದಿಂದೆಲ್ಲಾ ಮರತು ಸಿಕ್ಕದ್ದ ಶಿವಾ ಅಂತ ಬಾಳೆ ಮಾಡತೇನಿ, ಮಗನಿಗೆ ಅಪ್ಪನ ಹೆಸರು ನಾಗಭೂಷಣಾ ಅಂತ ಇಟ್ಟೇನಿ.

ಎಂದೂ ಕಣ್ಣೀರ ಹಾಕದ ಅಪ್ಪ ನಾ ತೊಟ್ಟಿಲ ನಿಬ್ಬಣದ ಜೋಡಿ ಬೆಳಗಾಂವಿಗಿ ಬರೂ ಮುಂದ ದೋತರಾ ಮರೀ ಮಾಡಿ ಅತ್ತಾ. ಮನಸ್ಸಿಗಿ ಹಳಹಳಿ ಆತು. ಇದ್ಯಾಕೋ ಅಪಶಕುನ. ಅಪ್ಪನಂಥಾ ಗಂಡಸು ಅಳಬಾರ್ದು. ಇನ್ನೊಮ್ಮೆ ಅಪ್ಪನ್ನ ನೋಡ್ತೀನೋ ಇಲ್ಲೊ ಅನ್ನಿಸ್ತು. ಹಾಂಗs ಆತು. ನಮ್ಮಪ್ಪನ ಕಳಕೊಂಡ ದಿಕ್ಕೇಡಿ ಆದೆ. ಅಯ್ಯೋ ಅಪ್ಪ .... ನಮ್ಮಪ್ಪಾ ಹೋಗೇ ಬಿಟ್ಯಲ್ಲೋ..... ನಮ್ಮ ಕೈ ಬಿಟ್ಯೋ....

**ಸುಂದರವ್ವ :** ಸುಂದ್ರವ್ವಾ ಏs ಏಳs ಸುಂದ್ರೀ ಏಳs ಮೂಳಾ. ಏಟೊತ್ತ ಗಂಡನ ಮಗ್ಗಲಾಗ ಬಿದ್ದಕೋತಿ. ಹೆಣಮಕ್ಕಳು ಸೂರ್ಯಾ ಮೂಡುತನಾ ಮಲಗಬಾರ್ದು ಏಳ. ಅರಿಷ್ಟತನಾ. ಮನಾರ ಹ್ಯಾರೇ ಕುಂತೇತಿ. ಏಳs ಸುಂದ್ರೀ ಚುಚುಂದ್ರೀ.

ನಮ್ಮತ್ತಿ ಗಂಗವ್ವಾಯಿ ನಾ ನಡ್ಯಾಕ ಬಂದಾಗಿಂದ ಹಿಡದು ಅಕೀ ಸತ್ತು ಬಾಯಿ ಬಂದ ಆಗಿ ಗ್ವಾಡಿಗೆ ಕುಂಡ್ರೂತನಾ ದಿನಾ ಹಾಡಿದ ರಾಗ ಇದು. ಈ ಮನೀಗಿ ಬಂದಾಗ ಹನ್ನೆಡ್ಡು ವರ್ಸದ ಹುಡುಗಿ ನಾನು. ಅದs ವರ್ಸ ನೆರತಿದ್ದೆ. ರಾತ್ರೆಲ್ಲಾ ಗಂಡನ ಕಾಟಾ. ಬೆಳಗಾದರ ಅತ್ತೀ ಕಾಟಾ. ಮಾರೀತೊಳ್ಕೊಂಡು ನೀರೊಲಿಗೆ ಉರೀ ಹಾಕಿ ಜ್ವಾಳ ಬೀಸಾಕ ಕುಂದ್ರತಿದ್ದೆ. ಹಿತ್ತಲಕ ಹೋಗಾಕೂ ಹೆದರಿಕಿ, ಕತ್ತಲ ಗವ್ ಅಂತಿತ್ತು.

ಮನೀ ಕೆಲಸ ಮುಗದ ಮ್ಯಾಲೆ ಚೆಂದುಳ್ಳಿ ಚೆಲುವಿ ಸೊಸಿನ್ನ ಮುಂದ ಹಾಕ್ಕೊಂಡ ಹೊಲಕ್ಕ ಒಯ್ಯಾಕಿ. ದುಡದ ದುಡದ ಸಾಕಾಗಿ ತವರ್ಮನಿ ನೆನಿಸಿ ಕಣ್ಣೀರ ತಗದರ, ಸ್ವಾಟಿಗೆ ತಿವೀತಿದ್ಲು.

'ಹೊಯ್ಮಾಲೀ, ಹುಲಿಯಂಥಾ ಅತ್ತಿ ಅದೀನಿ. ಬಾಳೆ ಮಾಡಾಕ ಗಂಡ ಅದಾನ. ಗಂಡ ಸತ್ತ ರಂಡಿ ನಾನು. ಮಗನ್ನ ಹೊಟ್ಯಾಗ ಇಟಗೊಂಡ ಕೂಲೀಮಾಡಿ ಇಟ್ಟೆಲ್ಲಾ ಬದುಕ ಮಾಡೀನಿ. ನಿನಗ ಏನಾಗೇದ ಮೂಳಾ. ಯಾಕ ಅಳತೀ ಬಾಯ್ತುಂಬ ಹಲ್ಲ ಇಟಗೊಂಡ' ಮಗನ ಕಿವಿ ಚುಚ್ಚಿದರ ಸಾಕು ಅವನೂ ಬಂದು ದಬಾ ದಬಾ ನಾಕೇಟು ಹಾಕವನ. ಹೊಟ್ಟಿ ಹಸದರೂ ಒಂದ ರೊಟ್ಟಿ ಸಿಗತಿದ್ದಿಲ್ಲಾ, ಎಲ್ಲಾ ಮುದುಕಿ ಕೈಯ್ಯಾಗ.

ಕೂಸು ಹೊಟ್ಯಾಗ ಮೂಡಿದ ಮ್ಯಾಲೆ ನನಗೂ ಒಂದೀಟ ಅರವು ಬಂತು. ಹೊಲದಾಗ ಬೌಚಿಕಾಯಿ, ಸವತಿಕಾಯಿ, ಬೀಣ್ಸ ಮೆತ್ತಗ ಹರಕೊಂಡ ಬಂದ ನೆರಿ -ಹೊರಿ ಅವ್ವಕ್ಕಗೋಳಿಗಿ ಕೊಟ್ಟು, ಬಾಳಿಹಣ್ಣು, ಪೆಪ್ಪರಮಿಂಟ, ಕಲಸಕ್ರಿ ತರಿಸಿ ತಿಂತಿದ್ದೆ. ಅತ್ತಿ ಕಳವು ಕಲಸಿದ್ಲು. ಗಂಡ ಹಾದರಾ ಕಲಿಸಿದಾ ಅಂತ ರೂಢಿ ಮಾತ ಐತೆಲ್ಲ.

ಅಡಿಗೀ ಎಲ್ಲಾ ಮಾಡಿ ಮುಗಿಸಿ ಮಣೇ, ಅಡ್ಡಣಿಗಿ, ಗಂಗಾಳಾ ಚರಿಗಿ ಇಟ್ಟ ನಾ ಹೊರಗ ಹ್ವಾದ ಮ್ಯಾಲೆ ಮುದುಕಿ ಮಗನ್ನ ಕರದು ಉಣ್ಣಾಕ ನೀಡಾಕಿ. ಅಲ್ಲೆ ಯಾರೂ ಇರಬಾರ್ದು. ಮಗ್ಗ ಕಾಲಧೂಳಿ ಆದೀತಂತ ಅವ್ವಗ ಚಿಂತಿ. ಪಿರೀತಿ ಮಾಡಿ ಅನ್ನಾ, ತುಪ್ಪಾ, ಹಾಲಾ ಎಲ್ಲಾ ಭಾಳ ಭಾಳ ಹಾಕಾಕಿ. 'ಯವ್ವಾ ಹೊಟ್ಟಿ ತುಂಬಿತ ನನಗ ಸಾಕಬೇ' ಅಂತ ತಾಟ ಬಿಟ್ಟು ನನ ಗಂಡ ಏಳಾಂವಾ.

"ಯಾವಾಕೀ ಸುಡಗಾಡ ಕಣ್ಣಾ ಹತ್ತಿತೋ. ಏs ಸುಂದ್ರೀ ಬಾ. ನಿನ್ನ ಗಂಡ ಬಿಟ್ಟಾನ ಉಣ್ಣಬಾ" ಅನ್ನಾಕಿ ಅತ್ತಿ. ಹಿಂಗs ನನಗ ಪಕ್ವಾನ್ನ ಉಣ್ಣಾಕ ಸಿಗತಿತ್ತ. ಗಂಡನ್ನ ದರ್ಮಿಂದ ಊಟಂತ, ಮಕ್ಕಳ ದರ್ಮಿಂದ ನಿದ್ರಂತ ಕೇಳಿರಲ್ಲ ನೀವೂ. ರಾತ್ರಿ 'ಯಾಕೋ ಮಾರಿ ಸಣ್ಣ ಮಾಡೀಯಲ್ಲ ಸುಂದ್ರೀ. ಇಕಾ ಉತ್ತತ್ತಿ ತಂದೀನಿ ತಿನ್ನು. ಅವ್ವನ ಮನಸಿನ ಸಮಾಧಾನಕ ನಾ ನಿನ್ನ ಬಯ್ಯೂದು ಹೊಡಿಯೂದು. ಇಲ್ಲಾಂದರ ಅಕಿ ನನಗೂ ಕಾಸದಾರ ಅಂತಾಳ ನಿಮ್ಮಣ್ಣ ಶಿವಣ್ಣಗ ಅಂದಾಂಗ' ಅಂತ ಗದ್ದಾ ತುಟಿ ಹಿಡದು ರಮಸಾಂವ. ಹಿಂಗs ಬಾಳೇ ಅಂದರ ಏನ ಮತ್ತೆ ಒಂದಿನಾ ಅಳೂದು ಒಂದಿನ ನಗೂದು.

ಅತ್ತಿ ಸತ್ತ ಮ್ಯಾಲೆ ಗಂಡನ ಅರ್ದಾ ಸಿಟ್ಟು ಕಡಿಮಿ ಆತು. ಸೂಳಿ ಪಾಪ ಸನ್ನೇಸಿಗೆ ಅನ್ನೂ ಹಾಂಗ ಇಂವನ ತಪ್ಪಿಗೆ ಗಿರಿಜಿ ಬಾಳೆ ಹಾಳಾತು. ತಿರ್ಲಾಪೂರದಾಗ ಯಾವಾಕಿನ್ನೊ ಹಿಡಕೊಳ್ಳಾಕ ಹೋಗಿ ಅಕಿ ಮನೀ ಮಂದಿ ಈ ಗೆಣೆಕಾರನ್ನ ಜಜ್ಜಿ ಕೈ ಕಾಲ ಮುರದ ಇಟ್ಟಿದ್ರು. ದವಾಖಾನಿ ಕರ್ಚಿಗೆ ಗಿರಿಜಿ ಬಂಗಾರಾನೂ ಹೋತು. ಹೋಡೀಲಿ ಬಡೀಲಿ ಗಂಡನ ಮನೀಗಿ ಹೋಗ ಅಂತಾನಾ ಹೇಳಿದೆ. ಇಕೀದೂ ಘುಮಿಂಡಿ, ಹಟಾ ಮಾಡಿ ಹೋಗಲೇ ಇಲ್ಲ. ಈ ಚಿಂತಿನೂ ಗಂಡನ್ನ ಕಾಡತಿತ್ತ. ಈರಣ್ಣನ ದಯಾ. ಅದೂ ಬಗೀ ಹರೀತು ಅನ್ನೂದರಾಗ ಸುಮ್ಮ ಹಲಿವುಳಿದ್ಲು.

ನನ ಮಗಳು ಎದ್ದ ಕಾಣೂವಂತಾ ಚೆಲುವಿ. ಕಲತಾಕಿ, ದೊಡ್ಡ ನೌಕರದಾರಗ, ಎಂಜಿನೀರು ಡಾಕ್ಟರಗ ನೋಡಿ ಮದುವೀ ಮಾಡಿ ದೊಡ್ಡ ಮಂದ್ಯಾಗ ಅಡ್ಡಾಡಬೇಕಂತ ಮಾಡಿದ್ದೆ. ಆ ಸೂಳೆಮಗಾ ಸಂತೀಶ ಕಲತಾನಂತ ಅಂವಾ ಸಿಕ್ಕಿದ್ದರೂ ಮದುವೀ ಮಾಡತಿದ್ದೆ, ಕೆಲಸ ಕೆಟ್ಟ ಹೋತಲ್ಲ ಅಂತ ನನ್ನ ಮುಂದ ಗೋಳಾಡತಿದ್ರು.

ಬಿಸಿ ತುಪ್ಪ ಉಗುಳು ಹಾಂಗಿಲ್ಲ ನುಂಗೂ ಹಾಂಗಿಲ್ಲ. ಇಬ್ರೂ ಒಳಗೊಳಗ ಒದ್ದಾಡತಿದ್ವಿ. ಅವರಂತೂ ಕೈ ಕಾಲ ಕಳಕೊಂಡs ಬಿಟ್ಟಿದ್ರು. ಗಂಟಲದಾಗ ತುತ್ತು ಇಳೀತಿದ್ದಿಲ್ಲಾ. ದಿನ ದಿನಕ ನವೀತಿದ್ರು. ನಾನ ಒಂದಿನಾ ಧೈರ್ಯಾ ಹೇಳಿದೆ.

"ನಿಮಗ ಏನೋ ಕಾಡಾಟ ಇದ್ದಾಂಗ ಐತಿ. ಯಾರ್ನರೆ ಕೇಳಿ ನೋಡ್ರಿ. ಪೂಜಾ ಶಾಂತಿ ಏನರೆ ಹೇಳತಾರೇನ. ಬೆಳಗಾಂವಿ ಶಾಸ್ತ್ರೀಗೋಳು ಗೊಂತ ಅದಾರಲ್ಲ. ಹೋಗ್ರಿ ಕೇಳ್ರಿ ಹಾಂಗs ನಿಮ್ದು ಕುಂಡಲಿ ಒಯ್ಯರಿ." ಅವರ ಮಾರ್ಯಾಗ ಒಂದೀಟ ಕಳಾ ಬಂತು. ಕೇಳಾಕ ಹ್ವಾದ್ರು. ಬಂದ ಮ್ಯಾಲೆ ಅವರ ಹೇಳಿದ್ದ ಕೇಳಿದಂಗ ಆದೆ. ಬಾಯೆ ಬಂದಾತು ನಂದು.

"ಶನಿದೇವರ ಕಾಟ ಐತೆಂತ ನನಗ. ಐದು ಶನಿವಾರ ಹಣ್ಣುಕಾಯಿ ಒಯ್ದು ಗುಡೀಗ ಹೋಗಿ ಪೂಜಾ ಮಾಡಿ ಬರಬೇಕಂತ. ದಾರ್‍ಯಾಗ ಮಾತಾಡಬಾರದಂತ. ಮಂತ್ರಾನೂ ಹೇಳಿಕೊಟ್ಟಾರ ಜಪಾ ಮಾಡಬೇಕಂತ" ಅಂತ ಮೊದಲ ಅಂದ್ರು. 'ಮಾಡಿದರ ಆತು ಬಿಡ್ರಿ. ಸಮಾಧಾನ ಹೇಳೂದರಾಗ ಮಾಡೇ ಮಾಡತೀನಿ. ನಾ ಪೂಜಿ ಮಾಡಿ ಆ ಶನಿದೇವರ ಸಿಟ್ಟು ಇಳಸತೇನಿ. ಮನೀ ಮಂದಿಗೆ ಛಲೋ ಆದರ ಸಾಕು. ಆದರ ಇನ್ನೊಂದ ಮಾತ ಹೇಳ್ಯಾರ ಅವರು. ಕೇಳಿದರ ವಿಚಿತ್ರ ಅನಸಬೌದು. ಪೂಜಾ ಮಾಡಿ ಮುಗಿಯೂತನಾ ಮೈಮ್ಯಾಲೆ ಒಂದು ಚೂರು ಅರಿವಿ ಇರಬಾರದಂತ. ಅದಕ್ಕ ನಾ ಹಿಂಗ ವಿಚಾರ ಮಾಡೀನಿ. ಮುಂದಿನ ಶನಿವಾರದಿಂದ ಪೂಜಾ ಸುರೂ ಮಾಡ್ತೀನಿ. ರಾತ್ರಿ ಹನ್ನೊಂದರ ಮ್ಯಾಲೆ ನೀ ಎಲ್ಲಾ ತಯಾರ ಮಾಡಿ ಪಡಸಾಲ್ಯಾಗ ಇಟ್ಟ ನೀ ಮಕ್ಕೊಂಡ ಬಿಡು. ನಾ ಜಳಕಾ ಮಾಡಿ ಹಾಂಗs ಹೊಕ್ಕೀನಿ.'

ದೇವರಾ ಕೇಳಿದ ಮ್ಯಾಲೆ ಬ್ಯಾಡ ಬಿಡ್ರಿ ಅಂತ ಹೇಳೂದು ಹ್ಯಾಂಗ. ಅವರು ಬಿಡೂ ಹಾಂಗs ಕಾಣಲಿಲ್ಲಾ. ಐದೂ ಶನಿವಾರ ಅವರು ಗುಡೀಗೆ ಹೋಗಿ ಬರೂತನಾ ಜೀವಾಮುಟಿಗ್ಯಾಗ ಹಿಡಕೊಂಡ ಇರ್ತಿದ್ದೆ. ಬಂದ ಕೂಡ್ಲೆ

ಅವರ ಮಾರೀನ ನೋಡತಿದ್ವೆ. ತಿಂಗಳ ಮುಗಿಯೂದರಾಗ ಕರಿಮನಿ ರಾಯಪ್ಪ ದೆವ್ವ ಆಗಿ ಓಣ್ಯಾಗ ಅಡ್ಡ್ಯಾಡತನಾ ಅಂತ ಊರಾಗ ಸುದ್ದಿ ಹಬ್ಬಿತ್ತು. ಸುದ್ದೀ ಹಬ್ಬಿಸಿದವರಿಗೆ ಹರಕೀ ಕೊಟ್ಟೆ. ಪೂಜಾ ಮುಗದ ಮ್ಯಾಲೆ ಶನಿ ಇವರ್ನ ಹಿಡಕೊಂಡ ಬಿಟ್ಟಾಂತ ಕಾಣತ್ತೈತಿ. ಜಳಿಜರ ಅಂತ ಹಾಸಿಗಿ ಹಿಡಿದ ಮೂರ ತಿಂಗಳದಾಗ ಸತ್ತs ಹ್ವಾದ್ರು. ಅಯ್ಯೋ, ನಾ ಏನ ಮಾಡಲಿ. ಅಯ್ಯೋ ಒಬ್ಬs ಮನಿಶ್ಯಾ ದೇವರಾನೂ ಆಗ್ತಾನ, ದೆವ್ವಾನೂ ಆಗ್ತಾನ. ಈ ಜಗತ್ತಿನ್ಯಾಗ ಇದs ದೊಡ್ಡ ಚೋಜಿಗ.

***

■■

# ಒಳಸುಳಿಗಳು

ಸೂಟಕೇಸಗಳು, ತಿಂಡಿ-ತರಕಾರಿಗಳ ಚೀಲಗಳು, ಊಟದ ಡಬ್ಬಿ, ನೀರಿನ ಪ್ಲಾಸ್ಟಿಕ್ ಹೂಜಿ ಎಲ್ಲ ತಯಾರು ಮಾಡಿ ಕಾರಿನ ಡಿಕ್ಕಿಯಲ್ಲಿ ಜೋಡಿಸಿದ್ದ ಸಿದ್ದಪ್ಪ. 'ಬಾಗಲಕೋಟೆ ಏನೂ ದೂರ ಇಲ್ಲ ಅತ್ತಿಗೀ ಇಷ್ಟೆಲ್ಲಾ ಯಾಕ ಹಾಕ್ತೀರಿ' ಸುಮಾ ಹೇಳಿದರೂ ಮಾವಾರು ಹೇಳ್ಯಾರ ಸುಮಾ, ಅಂದಮ್ಯಾಲೆ ಎಲ್ಲಾ ಆಗಾಕಬೇಕು ಅಂದಿದ್ದಳು. ಗಂಗೂ.

ಪ್ರವಾಸಕ್ಕೆ ಸಜ್ಜಾಗಿ ಬಂದು ಹಾಲಿನಲ್ಲಿ ಸುರೇಶ ಕಾಯುತ್ತಾ ಕೂತಿದ್ದ. ಮುಖಕ್ಕೆ ಪೇಪರ ಅಡ್ಡವಾಗಿದ್ದರಿಂದ ಗಂಡನ ಮುಖ ಓದಲಾಗಿರಲಿಲ್ಲ ಸುಮಾಗೆ. ಬಂದ ಕೆಲಸ ಆಯಿತೋ ಇಲ್ಲವೋ ಗಂಡನನ್ನು ಹೇಗೆ ಕೇಳುವುದು. ಅರ್ಜೆಂಟಾಗಿ ಮಾವಾ ಅವರನ್ನ ಭೆಟ್ಟಿ ಆಗಬೇಕು, ನೀನೂ ನನ್ನ ಜೋಡಿ ಬಾ ಅಂತ ಕರಕೊಂಡು ಬಂದಾರ. ಮಕ್ಕಳ ಸಾಲಿ ತಪ್ಪತದ ಅಂತ ಅವರ್ನ ಹಾಸಿಗಿ ಹಿಡಿದ ಅತ್ತಿ ಮತ್ತ ಕೆಲಸದ ಚಿನ್ನಮ್ಮನ ಮ್ಯಾಲೆ ಬಿಟ್ಟು ಬಂದದ್ದು ಇದs ಮೊದಲನೇ ಸಾರೆ. ಕಾರಣಾನ ಊರೊಳಗs ಹೇಳಿದರ ತಾನು ಒಪ್ಪಲಿಕ್ಕಿಲ್ಲ ಅನ್ನೂ ಸಂಶಯ ಇತ್ತೇನೋ ಅವರಿಗೆ.

ಸುಮಾನ ಸ್ವಭಾವ ಭಾಳ ಸೂಕ್ಷ್ಮ,. ಸಂಕೋಚದ್ದು. ಅಳಿಯನಾಗಿ ಅವನಿಗೇನು ಅಭಿಮಾನವಿಲ್ಲವೇ ಪರಿಸ್ಥಿತಿಯೇ ಹಾಗಿದೆ. ಹೆಸರಿಗೆ ಇನಾಮದಾರ. ಆದರೂ ಅಪ್ಪನ ಉದಾರ ಬುದ್ಧಿ, ಜನಸೇವಾ ವ್ಯಸನಗಳಿಗೇ ಬಹಳಷ್ಟು ಕಳೆದು ಹೋಗಿದೆ. ತಾನು ಹಿಡಿದ ಕಂಟ್ರ್ಯಾಕ್ಟರಗಳಿಗೆ ಹಣ ಸರಿಯಾಗಿ ಸರಕಾರದಿಂದ ಪಾವತಿ ಆಗೂದಿಲ್ಲ. ದಿನದಿನಕ್ಕ ಸಾಲದ ಹೊರಿ ಹೆಚ್ಚ ಆಗೇದ. ಹಿಂಗs ಆದರ ಮುಳಗೇ ಹೋಗ್ತೇನಿ ಅಂತ ಹೆದರಿಕಿ. ಮಾವ ಏನಾದರೂ ಸಹಾಯ ಮಾಡಬಹುದು ಅಂತ ದೂರದ ಆಸೆ. ನಿಮ್ಮಪ್ಪನ ಹತ್ತರ ನಮ್ಮ ಕಷ್ಟಾ ಹೇಳಿಕೊಂಡು ದುಡ್ಡು ಅಥವಾ ವಕೀಲಿ ಯಾವದಾದರೂ ಆಗಲಿ ನಮಗ ಸಹಾಯ ಆಗ್ತದ. ಅವರ ಹೆಸರೂ ದೊಡ್ಡದದ, ಒಂದ ಮಾತು ಕೇಳು ಅಂದಾಗ ಸುಮಾ ಮಾರಿ ಕೆಳಗ ಹಾಕಿ ಎಷ್ಟೋ ಹೊತ್ತು ಮಾತ ಆಡಿದ್ದಿಲ್ಲ. ಅವಳ ಮೌನ ಅರ್ಥವಾದರೂ ಸುರೇಶ ಅಸಹಾಯಕ. 'ಮದುವ್ಯಾಗ ಸಾಕಷ್ಟು ಕೊಟ್ಟಾರ, ಮತ್ತ ಮಕ್ಕಳಾದ ಮ್ಯಾಲೆ ಸುದ್ದಾ ಕೈ ಬಿಚ್ಚಿ ಕೊಟ್ಟಾರ ಅಪ್ಪ, ಇನ್ನೂ ಹ್ಯಾಂಗ....' ಮಾತು ಅರ್ಧಕ್ಕೇ ನಿಂತಾಗ ಸುರೇಶ ತಾನೇ ಆ ಕೆಲಸ ಹೊತ್ತುಕೊಂಡಿದ್ದ.

ದೇವರ ಮನೆ ಬಾಗಿಲಲ್ಲಿ ಚಿತ್ರದ ಚೌಕಟ್ಟಿಗೆ ನಿಂತು ಯೋಚಿಸುತ್ತಿದ್ದಳು ಸುಮಾ ಶಿವಶಂಕರಪ್ಪ ಹೊರ ಬರುವದನ್ನೇ ಕಾಯುತ್ತ. ಗೋಡೆಯ ಮೇಲೆ, ಢಾಳಾಗಿ ವಿಭೂತಿ ಪಟ್ಟ, ಕುಂಕುಮ ಹಚ್ಚಿ ಹಾರ ಹಾಕಿಕೊಂಡು ತೂಗುತ್ತಿದ್ದ ತಾಯಿ ಲಕ್ಷ್ಮೀಬಾಯಿಯ ಫೋಟೋ ಕಾಣದೆ ಕಕ್ಕಾಬಿಕ್ಕಿಯಾದಳು ಒಂದು ಕ್ಷಣ. ಅತ್ತಿಗೆಯನ್ನು ಕೇಳಬೇಕೆಂದರೆ 'ಅವಳು ಎಂದೂ ತನ್ನೊಡನೆ ಮನಸ್ಸು ಬಿಚ್ಚಿ ಮಾತಾಡುವುದಿಲ್ಲ. ಒಳಗೊಂದು, ಹೊರಗೊಂದು. ಹಿಡಿದು ಬಿಟ್ಟವಳಂತೆ ಗೊಣಗ್ತಾ ಇರ್ತಾಳೆ' ಸುಮಾನ ಸೆರಗು ತಾಕಿ ಬಾಗಿಲಿನ ಕಿರುಗಂಟೆಗಳು ಮಧುರನಾದ ಹೊರಡಿಸಿದ್ದೂ ಅವನಿಗೆ ತಿಳಿಯಲಿಲ್ಲ.

ಅಂಗೈಯಲ್ಲಿ ಲಿಂಗವಿಟ್ಟು ಧ್ಯಾನಸ್ಥರಾಗಿದ್ದ ಅಪ್ಪ ಕಣ್ಣು ಬಿಟ್ಟರು. ಹೂವು ಪತ್ರೆಗಳನ್ನು ಎತ್ತಿ ಮಜ್ಜನಸಾಲೆಗೆ ಹಾಕಿ, ಹಣೆ ಹಚ್ಚಿ ಮತ್ತೆ ಮತ್ತೆ ಇಷ್ಟಲಿಂಗಕ್ಕೆ ನಮಸ್ಕರಿಸಿ, ಧೂಳಪಾವಡದಲ್ಲಿ ಮರೆಮಾಡಿ, ಬಂಗಾರದ ಕರಡಿಗೆಯಲ್ಲಿ ಪವಡಿಸಿ, ಶಿವದಾರದಿಂದ ಮೆಲುಕು ಹಾಕಿ 'ಶಿವ ಶಿವಾ' ಅನ್ನುತ್ತ ಬೆಳ್ಳಿ ಹೂವಿನ ಕರಿಮಣೆಯಿಂದ ಮೇಲೆ ಎದ್ದರು ಶಿವಶಂಕರಪ್ಪ.

ಅಜಾನುಬಾಹು ಆಕಾರ, ಸುತ್ತ ಪರಿಮಳ ಪೂಸಿಕೊಂಡು ದೇವರ ಮನೆ ಬಾಗಿಲಲ್ಲಿ ಕಾಣಿಸಿಕೊಂಡಿತು. ನೊಸಲ ತುಂಬ ಮೂರು ಬೆರಳು ವಿಭೂತಿ, ಮುಂಗೈ ರಟ್ಟೆ, ಭ್ರೂಮಧ್ಯೇ ಗಂಧದ ಬೊಟ್ಟು, ಶುಭ್ರ ಬಿಳಿಯ

ದೋತರ, ಹೆಗಲಮೇಲೊಂದು ತುಪ್ಪಡದಂಥ ಅಂಗವಸ್ತ್ರ. ಸುಮಾ ಎರಡು ಹೆಜ್ಜೆ ಹಿಂದೆ ಸರಿದು ಅಪ್ಪನ ಪಾದಕ್ಕೆ ಹಣೆಹಚ್ಚಿದಳು.

"ಹೊರಟ್ರೇನವ್ವಾ, ಎಲ್ಲಾ ತಯಾರಿ ಆತs ಏನೂ ಕಾಳಜಿ ಮಾಡಬ್ಯಾಡ್ರಿ. ನಾ ಎಲ್ಲಾ ಸರಿ ಮಾಡ್ತೀನಿ. ಸದಾಶಿವಪ್ಪಗೂ ಕೇಳಿದೆ ಅಂತ ಹೇಳು. ಕುಡಿಯೂದು ಬಿಡು ಅನ್ನು. ಮಾತಿಲ್ಲದೆ ನಿಂತ ಮಗಳ ಮನಸ್ಸು ಅರಿತ ಮಾತುಗಳು. 'ಗಂಗೂ, ಬಾರವ್ವ, ಸುಮಕ್ಕ ಹೋಗ್ತಾಳಂತ, ಹಬ್ಬಕ್ಕ ನಿಲ್ಲೂ ಹಾಂಗಿಲ್ಲ. ಆಕೀಗೆ ಉಡೀ ತುಂಬಿ ಕಳಸು."

ಉಡಿ ತುಂಬಿಸಿಕೊಂಡ ಸುಮಾ ತಾಯಿಯ ನೆನಪಾಗಿ ಕಣ್ಣು ತುಂಬಿಕೊಂಡಳು. 'ಅಪ್ಪಗ ಎಲ್ಲಾ ಕಡೆ ಲಕ್ಷ್ಯ. ಒಂದು ಸಣ್ಣ ಮಾತೂ ಮರಿಯೂ ಹಾಂಗಿಲ್ಲ' ಅತ್ತಿಗೆಗೆ ನಮಸ್ಕರಿಸುತ್ತ ಸಣ್ಣ ದನಿಯಲ್ಲಿ ಉಸುರಿದಳು.

"ಈ ಮುದುಕ ಹೇಳದ ಒಂದ ಹುಲ್ಲುಕಡ್ಡಿ ಅಲ್ಲಾಡೂದಿಲ್ಲಲ್ಲ. ಈ ಮನ್ಯಾಗ ನಮ್ಮ ಜೀವಕ್ಕ ಏನ ಸೊತಂತ್ರ ಐತಿ, ಸುಖಾ ಐತಿ ಅನುಭೋಗಿಸಿದವರಿಗೇ ಗೊತ್ತದು" ಅತ್ತಿಗೆ ಗೊಣಗುಟ್ಟಿದ್ದು ಮನದಲ್ಲಿಯೇ. ಅಪ್ಪನ ಋಣಭಾರದಿಂದ ಬಗ್ಗಿ, ಸಂಕೋಚದ ಪರದೆಯೊಳಗೆ ಮುಚ್ಚಿಟ್ಟುಕೊಂಡಿದ್ದ ಸುಮಾ ಕಣ್ಣು ಬಿಟ್ಟು ಅತ್ತಿಗೆಯ ಅತಂತ್ರ ಸ್ಥಿತಿ ಕಾಣುವಂತಿರಲಿಲ್ಲ.

ಪ್ರಯಾಣ ಮುಂದುವರೆದಾಗಲೂ ಗಂಡ ನಿರ್ಭಾವುಕನಾಗಿ ಮೌನಿಯಾಗಿದ್ದ. ಸುಮಾ ಮಾತಾಡಿಸಲು ಪ್ರಯತ್ನಿಸಿ ಸೋತು ಸೀಟಿಗೆ ಒರಗಿದಳು.

***

"ಗಾಡಿ ಬಂತಂತ ಕಾಣಸ್ತೈತೆ ನೋಡು ಬಾ" ಮೈ ತುಂಬ ಶಾಲು ಹೊತ್ತು ವರಾಂಡದ ಆರಾಮ ಕುರ್ಚಿಯಲ್ಲಿ ಕುಳಿತ ಚಂದ್ರಮ್ಮ ಹೇಳಿದರು.

ಕಾಗದ ಪತ್ರ ಸರಿಸಿಟ್ಟು ಎದ್ದು ನಿಂತ ಸುರೇಶ 'ಹೌದವ್ವಾ, ಹಳ್ಳಿಯಿಂದ ಅಪ್ಪಬಂದರು. ಈ ಸಾರೆ ಕಾಳು ಟ್ರಕ್ಕಿನ್ಯಾಗ ಅಲ್ಲ, ಮಿನಿ ಲಾರಿಯೊಳಗ ಬಂದಾವ. ಅವ್ವಾ ನೀ ಒಳಗ ನಡೀ. ಅಪ್ಪ ನೋಡಿದರ ಸಿಟ್ಟಿಗೇಳತಾರ. ಹೊರಗ ಥಂಡ್ಯಾಗ ಯಾಕ ಬಂದೀ ಅಂತ. ಮಲ್ಲವ್ವಾs ಉಗ್ರಾಣದ ಬಾಗಲಾ ತಗೀ. ಭೀಮಾ, ರಾಮಾ ಹಿತ್ತಲ ಬಾಗಿಲಕ ಹೋಗಿ ಚೀಲದ ನಿಟ್ಟು ಹಚ್ಚರಿ ಉಗ್ರಾಣದಾಗ' ಅವ್ವನ ಕೈ ಹಿಡಿದು ಒಳಗೆ ಕರೆದೊಯ್ದ.

"ಯೋಗಿs ನಂದೂ ಬರ್ರಿಲ್ಲೆ. ನಿಮಗೊಂದು ಮಜಾ ತಂದೀನಿ ಲಗೂ ಬರ್ರಿ" ಹಣ್ಣು ಸಿಹಿ ತಿಂಡಿಯ ಬುಟ್ಟಿಗಳನ್ನು ಸುಮಾನ ಕೈಯಲ್ಲಿ ಕೊಟ್ಟು ಇನ್ನೊಂದು ಚೀಲವನ್ನು ಮಾತ್ರ ತಾವೇ ಒಯ್ದು ರೂಮಿನಲ್ಲಿಟ್ಟು ಬಂದರು.

"ನಿಮ್ಮವ್ವ ಹ್ಯಾಂಗದಾಳ, ಶುಗರ, ಬಿ.ಪಿ. ನಾರ್ಮಲ್ ಅದಾವಿಲ್ಲೋ. ಡಾಕ್ಟರರು ಬಂದಿದ್ರೇನು. ನಾನೂ ಸುಗ್ಗಿಗೆ ಹೋಗಿ ಬಾಳ ದಿವಸಾದ್ವು. ಎಲ್ಲಾ ಬರೋಬ್ಬರಿ ನಡದೈತಿಲ್ಲೊ" ಮಾತಾಡುತ್ತಲೇ ಹಾಲಿನಲ್ಲಿ ಕೆಳಗೆ ಚಪ್ಪಳಗಾಲು ಹಾಕಿ ಕುಳಿತು ಸದಾಶಿವಪ್ಪ ಸೆಲ್ ಮೇಲೆ ನಡೆಯುವ ರೇಲ್ವೆ ಎಂಜಿನ್ ಆಡಿಸತೊಡಗಿದರು. ಅದು 'ಕೂ' ಎಂದು ಕೂಗುವುದು, ಹೊಗೆ ಬಿಡುವುದು. ಹಿಂದೆ ಮುಂದೆ ಸರಿದು ಓಡುವುದನ್ನು ನೋಡಿ ಚಪ್ಪಾಳೆ ತಟ್ಟಿ ನಗುತ್ತ ಕುಣಿಯುತ್ತಿದ್ದ ಯೋಗಿ ನಂದೂರೊಡನೆ ಮಗುವಾಗಿಬಿಟ್ಟರು. ಆಗ ಅವರೊಬ್ಬ ಹಿರಿಯ ರಾಜಕಾರಣಿ, ಮಾಜಿ ಎಂ.ಎಲ್.ಎ. ಧಣಿ, ಉಹೂಂ.... ಏನೂ ಅಲ್ಲ, ಮಗು ಮುಗ್ಧ ಮಗು ಅವರು. ಇವರು ಯಾವಾಗಲೂ ಹೀಗೇ ಇರಬಾರದೇ ಎಂದುಕೊಳ್ಳುತ್ತಿದ್ದ ಹತ್ತಿರದ ಜೀವಗಳಿದ್ದವು ಮನೆಯಲ್ಲಿ. ಹಾಗೆಂದು ತಮ್ಮ ಕರ್ತವ್ಯ ಎಂದೂ ತಪ್ಪಿಸಿದವರಲ್ಲ.

"ಸುರೇಶಾ, ಆ ಗದಗಿನ ಶಿವಶಂಕರಪ್ಪ ತನ್ನ ಮಗಳ್ನ ನೋಡಾಕ ಬರ್ರಿ ಅಂತ ಹೇಳಿ ಕಳಿಸ್ಯಾನಲ್ಲಪಾ, ಇದೇನ ಸೋಜಿಗ ಅಂತೀನಿ" ದಿನಚರಿಯ ಭಾಗವಾದ ಅಪ್ಪನ ಜೊತೆ ಒಂದರ್ಧ ತಾಸು ಕುಳಿತು ಆಡುವ ಮಾತು ಕತೆಗಳ ನಡುವೆ ಬಂದಿತ್ತು ಈ ಉದ್ಗಾರ. ಕಂಟ್ರಾಕ್ಟ ಸಮಸ್ಯೆಗಳು, ಬಿಲ್ಡಿಂಗ್ ಉಸ್ತುವಾರಿ, ಮೆಟೀರಿಯಲ್ ಕೊರತೆ, ಬಗ್ಗೆ ಮಾತಾಡುವಾಗ ತಟ್ಟನೆ ಈ ಮಾತು ಹೇಳಿದ್ದರು ಅಪ್ಪ, ಬಿ.ಇ. ಮುಗಿಸಿ ಮೂರು ವರ್ಷವಾಗಿತ್ತು. ಸ್ಪರ್ಧಾತ್ಮಕ ಕ್ಷೇತ್ರದಲ್ಲಿ ತನ್ನ ಕಾಲು ಗಟ್ಟಿಯಾಗಿ ಮೊದಲು ಊರಬೇಕು. ಬೇರೆ ವಿಚಾರಕ್ಕೆ ಜಾಗವೇ ಇರಲಿಲ್ಲ.

"ಈಗ್ಯಾಕಪ್ಪ ಮದುವೀ ಮಾತು. ನನಗಿನ್ನೂ ಭಾಳ ಕೆಲಸ ಅದಾವು."

"ಮದುವೀ ವಯಸ್ಸಿಗಿ ಬಂದ ಮಗಾ ಅದಾನ ಅನ್ನೂದ ನೆನಪ ಮಾಡಿಕೊಟ್ಟ ಶಿವಶಂಕರಾ, ಥ್ಯಾಂಕ್ಸ್ ಹೇಳ್ಬೇಕ ಅವಂಗ. ತಮ್ಮಾs ನಿನಗೂ ಇಪ್ಪತ್ತೇಳು ಮುಗದೂವಪಾ. ನಿಮ್ಮವ್ವಗೂ ಸೊಸಿನ್ನ ನೋಡಬೇಕನ್ನೂ ಆಸೆ ಇರೂದಿಲ್ಲೇನು. ನೀ ದುಡಿಯಾಕ ಗಟ್ಟಿ ಅದೀ ಅನ್ನೂದು ತಿಳಿಯಿತು. ಚಿಂತಿ ತಪ್ಪಿತು. ಇನ್ನ ಹೋಳಿಗಿ ಹಾಕಸೂ ವಿಚಾರಾ ಮಾಡು, ತಡಾ ಮಾಡೂದು ಬ್ಯಾಡ"

ಹಾಗೇ ಮಾತು ಮುಂದುವರೆದು ಮತ್ತೆ ಮತ್ತೆ ಹೇಳಿ ಕಳಿಸಿದ ಮಾವನ ಮನೆಯ ಮೆಟ್ಟಲೇರಿ ಸುಮಾನ್ನ ಒಪ್ಪಿ ಮದುವೆಯಾಗಿ ಹತ್ತು ವರುಷ ಉರುಳಿ ಹೋಗಿದ್ದವು.

ಮೊದಲ ದೀಪಾವಳಿಗೆ ಬಿಟ್ಟರೆ ಮಾವನ ಮನೆಗೆ ಹೋದದ್ದೇ ಕಡಿಮೆ. ಆ ದೊಡ್ಡ ಬಂಗಲೆ, ಶ್ರೀಮಂತಿಕೆಯ ಆಡಂಬರ, ಎಲ್ಲಕ್ಕಿಂತಲೂ ಹೆಚ್ಚಾಗಿ ಶಿವಭಕ್ತನ ಅಪರಾವತಾರ ನಾಟಕದ ರಾವಣನನ್ನು ನೆನಪಿಸುವ ಮಾವನನ್ನು ನೋಡಿದರೇ ಏನೋ ಒಂಥರಾ ಕಸಿವಿಸಿ. ಉಸಿರುಗಟ್ಟುವ, ಹಿಡಿದುಬಿಟ್ಟಂತೆ ಆಗುವ ವಾತಾವರಣ.... ಮಗ ವಿಶ್ವನಾಥನ ಜತೆ ಮಾತಾಡಿದ್ರೂ ಮಾವಂದು ಅದೇ ಧಾಟಿ ಆಳಿನೊಡನೆ ಮಾತಾಡಿದಂತೆ. ಬಾಲ ಮುದುರಿಕೊಂಡು ನಿಂತಿರುತ್ತಿದ್ದ ವಿಶ್ವನ್ನ ನೋಡಿ ತನಗೆ ಒಳಗೊಳಗೇ ನಗು .... ಕನಿಕರ. ಥಕ್ಕನೇ ಸುಮಾ ಎದುರು ಬಂದರೆ ಮಾವನ ದನಿ, ಮಾತು ಎರಡೂ ಬದಲಾಗುತ್ತಿದ್ದವು. ತನ್ನನ್ನು ಅಳಿಯಂದಿರೇ ಎಂದು ಕರೆಯುವ ಗೌರವದ ಹಿಂದೆ ಏನೋ ಗತ್ತು. ಹಿಂದಿನ ಕಿಚ್ಚಿನ ಝಳ ತಾಕಿ ತನ್ನ ಮನಸ್ಸು ಚಡಪಡಿಸುತ್ತಿತ್ತು. ಅದು ತನ್ನ ಕೀಳರಿಮೆ ಅಂತೂ ಅಲ್ಲ. ಮನಸ್ಸು ಬಿಚ್ಚಿ ತೆರೆದಿಡುವುದಕ್ಕೆ ಅವಕಾಶವೇ ಅಲ್ಲಿ ಯಾರಿಗೂ ಇಲ್ಲ. ಹತ್ತಿರವಿದ್ದರೂ ದೂರ. ಒಬ್ಬಳೇ ಪ್ರೀತಿಯ ಮಗಳ ಗಂಡ ಅನ್ನುವ ಪ್ರೀತಿ, ಮರ್ಯಾದೆಗಿಂತ 'ನನ್ನ ಮುಟ್ಟಿಗೆಯಲ್ಲಿ ಸಿಕ್ಕಿಬಿದ್ದೀ ನೋಡು, ನಿನ್ನ ಹೇಗೆ ಮಾಡ್ತೇನೆ ಅಂತಾನೇನೋ' ನನ್ನ ಒಳಗುದಿ. ಯಾರ ಹತ್ರ ಹೇಳಿಕೊಳ್ಳಲಿ. ಅವ್ವ ಮುಗ್ಧೆ. 'ಅಕ್ಕವ್ವ' ಅಂತ ಮರ್ಯಾದೆ ಕೊಡದೆ ಶಂಕರಪ್ಪ ಮಾವ ಅವಳೊಡನೆ ಮಾತಾಡೋದೇ ಇಲ್ಲ. ಸುಮಾಗೆ ಸಾಕಷ್ಟು ಬೆಳ್ಳಿ ಬಂಗಾರ ಸೀರೆಗಳು, ಮನೆ ಸಾಮಾನು ಅದೂ ಇದೂ ಅಂತ ಕೊಟ್ಟೇ ಕೊಡತಾರಲ್ಲ. ಅವ್ವ ಖುಶ್. ಕೊರತೆ ಅಂದರೆ ಅವಳ ದೃಷ್ಟಿಯಲ್ಲಿ ಸುಮಾಗೆ ತಾಯಿ ಇಲ್ಲ ಅನ್ನೋದೊಂದೇ.

ತಮ್ಮ ಅಪ್ಪನ ಎದುರು ತೋಡಿಕೊಂಡರೆ- "ನಾವು ಕೈಲಾಗದ ಮನಶೇರು ತಮ್ಮಾ, ಯಾರ ಬುದ್ಧಿ ಯಾರ ತಿದ್ದಾಕೂ ಸಾಧ್ಯ ಇಲ್ಲ. ಆತು. ತಾ ಮಾಡಿದ್ದು ತಾನು ಉಣತಾನು ನಿಮ್ಮಾತ. ಹೋಗೂ ಹಾಂಗ ಅದರ ಮಾವನ ಮನೀಗಿ ಹೋಗು, ಇಲ್ಲಾಂದರ ಬಿಡು. ಆದರ ಹುಡುಗೀನ್ನ ಮಾತ್ರ ಛಂದ ಆಗಿ ನೋಡಿಕೋಬೇಕ ಹಾಂ. ಆಕಿ ಮನಸ್ಸ ನೋಸ ಬ್ಯಾಡಾ."

ತಿಂಗಳು ತಿಂಗಳು ಬರುತ್ತಿದ್ದ ಬ್ಯಾಂಕಿನ ನೋಟೀಸು ತನ್ನ ನಿದ್ದೆ ಕಡಿಸುತ್ತಿದ್ದವು. ಎಂಟ್ಹತ್ತು ಲಕ್ಷ ಸಾಲವಾಗಿದೆ. ಬಡ್ಡಿ ಬೇರೆ.

"ಏನ್ರೀ ಇನಾಮದಾರ, ನಿಮಗೇನ ಕಡಿಮಿ. ಈ ಬಡವರ ಮ್ಯಾಲ ಅಷ್ಟು ದಯಾ ತೋರಿಸ್ರೆಲ್ಲಾ. ನಿಮ್ಮ ಕಾಗದಕ್ಕ ಸಹಿ ಮಾಡ್ತೀನಂತ, ಹೇಳ್ರಿ ಎಷ್ಟ ಪರಸೆಂಟ ಕೊಡ್ತೀರಿ .... ಹೆ ....ಹೆ ನಮಗಷ್ಟs ಅಲ್ರೆಪಾ. ಮ್ಯಾಲಿನವರ ಕಿಸೇನೂ ತುಂಬಬೇಕಲ್ಲ. ಇವತ್ತs ಬಾಯಿ ಬಿಡ್ರಿ. ನಾಳೆ ಸಹಿ ಮಾಡಿದ ಕಾಗದ ತಯಾರ ..... ಹಾ..... ಹಾ...."

ಪಾಟೀಲ ಇಂಜಿನೀಯರ ಮುಖಕ್ಕ ಪೇಪರವೇಟ್ ಒಗದು ಈ ಹಲ್ಲ ಮುರೀಲ್ಯಾ ಅನ್ನೂವಷ್ಟು ಸಿಟ್ಟು ಬರುತ್ತಿತ್ತು. ಪ್ರಾಮಾಣಿಕತನದಿಂದ ಕೆಲಸಾ ಮಾಡಿ ಕೊಟ್ಟಾವನೂ ಲಂಚಾ ಕೊಟ್ಟರ ಕಾಂಟ್ರಾಕ್ಟರಗ ಏನ ಉಳಿತದ? ಹೆಂಡರು ಮಕ್ಕಳನ್ನ ಉಪವಾಸ ಕೆಡವಬೇಕು.s ನಮ್ಮ ಕೇಸ ಬ್ಯಾರೇರಿ ಅಂದರ ನಿಮಗ್ಯಾರ ಅಪ್ಪಟ ಸುದ್ದ ಕೆಲಸಾ ಮಾಡ ಅಂದಿದ್ರೂ ಅಂತ ಕೇಳತಾರ ಛೀ... ಛೀ ಹೊಲಸು, ಕೊಳಕರು. ದುರ್ಗಂಧದದಾಗ ಮುಳಗಿ ಏಳತಾರ ಅಲ್ಲಿಂದ ಓಡಿ ಬರೂ ಹಾಂಗ ಆಗತೈತಿ ನಮ್ಮ ಮಾವನ ಮನೀವಾಸ. ನೀನೂ ಹಾಂಗ ಛೀ .... ಥೂ...

ಗಂಡನ ಹೆಗಲು ತಟ್ಟಿ'ಏಳ್ರಿ ಯಾಕ ಹಿಂಗ ಸುಮ್ಮನ ಅದೀರಿ. ಮಾತೂ ಆಡವಲ್ರಿ ಏ ಶಿವೂ ಕಾರು ನಿಲ್ಸು. ಬಿಸಿ ಬಿಸಿ ಚಹಾ ಕುಡಿಯೂಣಂತ ಇಲ್ಲೆ' ಅಂದಳು ಸುಮಾ.

***

ಸುರೇಶ ತಿರಿಗಿ ಬಂದಮ್ಯಾಲೆ ಕೆಲಸ ಕೆಟ್ಟಿದ್ದು ತಿಳೀತು. ಬೀಗತನಾ ಅಂದರ ರಾಜಕೀಯ ಮಾಡ್ಯಾನ ಈ ರೊಕ್ಕದ ದಿಮಾಕಿನ ಶಿವಶಂಕರ. ಸಾಕ್ಷಾತ್ ಶರಣ, ಸುರೇಶನಿಗೂ ಮಾವನ ಬುದ್ಧಿ ಗೊತ್ತಾಗಲಿ ಅಂತ ಸುಮ್ಮನಿದ್ದೆ. ಸಾಲ ಅಂತsರ ರೊಕ್ಕಾ ಕೊಟ್ಟು ಮಗಳ ಮನೀ ಉಳಸ್ತಾನೇನೋ ಅಂತ ಮಾಡಿದ್ದೆ. ಅವನ ರಾಕ್ಷಸ ಬುದ್ಧಿ ಹ್ಯಾಂಗ ಬದಲ ಆಗಬೇಕು. ಲಕ್ಷ್ಮೀನ್ನ ನಾ ಮದುವಿ ಆಗಬೇಕು ಅಂತ ಗೊತ್ತ ಮಾಡಿದ್ರೂ ಏನೋ ಕಿತಾಪತಿ ಮಾಡಿ ಅಂವಾ ಕುಡುಕಾ ಹೆಸರಿಗೇ ಇನಾಮದಾರ, ದೊಡ್ಡ ಸಾಲಗಾರ ಅಂತೆಲ್ಲಾ ಪರ್ವತ ಗೌಡರ ಕಿವಿ ತುಂಬಿ ನಮ್ಮ ಸಂಬಂಧಾ ಬಿಡಿಸಿ ತಾನು ಆಕಿನ್ನ ಮಾಡಿಕೊಂಡಾ. ನೂರಾ ಎಂಟು ಭಾನಗಡಿ ಮಾಡಿ ಆಸ್ತಿ ಬೆಳೆಸಿಕೋತ ಹೋದಾ. ಶ್ರೀಮಂತಿಕೆ ಎಷ್ಟ ಇದ್ದರೂ ಮನಸ ಶುದ್ಧ ಇರಬೇಕಲ್ಲ. ಲಕ್ಷ್ಮಿ ಬದಕಿ ಇದ್ದಾಗ ಆದರೂ ಏನ ಸುಖಾ ಇತ್ತು. ಅಕಿ.... ಸಾಯಾಕೂ ಈ ಲುಚ್ಚಾನ ಕಾರಣ ಅಂತ ಮಂದಿ ಏನೇನೋ ಮಾತಾಡ್ತಾರ. ಗಾಳಿ ಸುದ್ದಿ ಆಯ್ತು .... ಹೋದ್ನು....

ಕಾಲ ಕಳದ್ಹಾಂಗ ಜನರ ನಿಷ್ಠಾ ಬದಲ ಆತು. ಮನಸ್ಸಿಗೆ ಬ್ಯಾಸರ ಆತು. ಹಾಳಾಗಿ ಹೋಗಲಿ ಈ ರಾಜಕಾರಣ. ಜನರ ಸೇವಾ ಅಂತ ಎಲ್ಲಾ ಬಿಟಗೊಟ್ಟು ಮಗಾ ಸೊಸಿ ಮೊಮ್ಮಕ್ಕಳ ಜೊತಿ ಆರಾಮಾಗಿದ್ದು ಕುಡಕೋತ ನಂದs ಲೋಕದಾಗ ಇರಬೇಕಂದರ ಈ ತೊಡಕು ಬಂತು.

"ಧನೇರs, ಸುರೇಶಪ್ಪಾರು ಎಲ್ಲಾ ನಿಮ್ಹಾಂಗ ನೋಡರಿ. ಬಾಳ ದೊಡ್ಡ ಮನಸು. ಬಡಬಗ್ಗರ್ನ ಕಂಡರ ದಯಾ ಮಯಾ ಪಿರೂತಿ, ಪುಣ್ಯೇ ಮಾಡಿರಬೇಕರಿಯಾಪ್ಪಾ ಹಿಂತಾ ಮಕ್ಕಳ ಹುಟ್ಟಾಕ." ಮನಸ್ಸು ಹಿಗ್ಗಿ ಹೂವಾಗಿತ್ತು ಗುರಪ್ಪಜ್ಜ ಅಂದಾಗ, ಅವತ್ತ ಇನ್ನೂ ಒಂದಿಷ್ಟು ಹೆಚ್ಚs ಕುಡದಿದ್ದೆ.

ನಾ ಕುಡಿಯೂದು ನೋಡಿ ಸುರೇಶಗ ಕೆಟ್ಟ ಅನಸ್ತೈತಿ. ಆದರ ಆಡಿ ಎಂದೂ ತೋರಿಸೂದಿಲ್ಲ. ಒಳಗs ನೋಯತಾನ. ಅವನಿಗಂತೂ ನಾ ಇನ್ನ ಕುಡಿಯೂದು ಕಡಿಮಿ ಮಾಡಬೇಕು. ಈಗ ಅಂವಾ ಹಿಂಗ ಮಾರೀ ಒಣಗಿಸಿಕೊಂಡು ಮನಸು ಕುಗ್ಗಿಸಿ ಚಿಂತೀ ಮಾಡೂದು ನೋಡಿದರ ಕರುಳು ಕಿತ್ತು ಬರತೈತಿ. ಏನ್ ಮಾಡಲಿ - ಹೂಂ. .... ಏನರೆ ಮಾಡಬೇಕು ನಾನು ಈಗ, ಹಿಂಗ ನನ್ನಷ್ಟಕ್ಕ ನಾನs ಸುಮ್ಮನ ಇದ್ದಬಿಟ್ಟರ ಮಗನ ಜೀವನ ಹಾಳಾಗ್ತದ. ನಾನs ಒಂದ ದಾರಿ ಹುಡುಕಬೇಕ ಈಗ. ನನ್ನ ಕೈಲಾದ ಸಾಹಾಯಾ ಮಾಡಬೇಕ. ಈ ಏಕಾಂತ ಜೀವನಾ ಬಿಟ್ಟು ಜನರ ಮುಂದ ಹೋಗಬೇಕ. ಸ್ವಾರ್ಥಕ್ಕ ಅಂತs ಅಲ್ಲಾ, ಜನಕ್ಕೂ ಮಾಡಬೇಕ. ಈ ಸರಕಾರದ ಆಡಳಿತ ಮಂದಿಗೆ ಬ್ಯಾಸರ ಆಗೇತಿ. ಜನಾ ಇನ್ನೂ ನನ್ನ ಮರತಿಲ್ಲ. ಮನ್ನೆ ವಾಸಪ್ಪ, ಚಂದ್ರಶೇಖರ, ಸಿದ್ದಲಿಂಗಪ್ಪಾಜಿ

ಹೇಳೂದು ಕೇಳಿದ್ರ ನಿಷ್ಠಾವಂತರು ಇನ್ನೂ ಅದಾರ ಅಂತ ಅನಸತೈತಿ. ವಾತಾವರಣ ಇನ್ನೂ ಅಷ್ಟು ಕೆಟ್ಟಿಲ್ಲ. ಪ್ರಯತ್ನಾ ಮಾಡಿ ಅಂತೂ ನೋಡಬೇಕಲ್ಲ.... ಗ್ಲಾಸು ಕೆಳಗಿಟ್ಟು ಸದಾಶಿವಪ್ಪ ಎದ್ದು ನಿಂತರು.....

***

ಮಗಳು ಅಳಿಯನನ್ನು ಕಳಿಸಿ ಒಳಗ ಬಂದ ಶಿವಶಂಕರಪ್ಪ ನೆಲದಮೇಲೆ ಇರಲಿಲ್ಲ. ಬರ್ತಾನ ಆ ಕುಡುಕ ಮಗಾ ಸದ್ಯಾ, ನನ್ನ ಮನೀ ಬಾಗಿಲಿಗೆ ಬಂದs ಬರ್ತಾನ. ಇವು ಕೈಯಲ್ಲ ಕಾಲಂತ ತಿಳದೇನಿ. ನನ್ನ ಮಗ್ಗ ರೊಕ್ಕದ ಸಹಾಯಾ ಮಾಡು ಅಂತ ದೈನಾಸ ಬಿಟ್ಟು ಕೇಳೇಕೇಳ್ತಾನ. ದುಡ್ಡಲ್ಲ ಪೈಯಲ್ಲ ನಿಮ್ಮ ಅಪ್ಪನ್ನ ಕರಕೊಂಡ ಬಾ, ಕೂಡಿ ಮಾತಾಡ್ತೀವಿ, ಲಕ್ಷಗಟ್ಟಲೆ ರೊಕ್ಕಾ ಕೊಡ್ತೀನಿ ಅಂತ ಅಳಿಯಾಗ ಹೇಳಿ ಕಳಿಸೀನಿ. ಬರಲಿ ಆ ಮಗಾ ನನ ಬಾಗಿಲಿಗೆ ಕೈ ಚಾಚಲಿ ಬಿಕನಾಶಿ ಹಾಂಗ.

ನಾವೂ ನೀವೂ ಜಾತಿ ಒಂದs...... ದೂರದ ಬಳಗಾ, ನನಗೂ ಒಂದೀಟು ಏನರೆ ಸ್ಥಾನಾ ಮಾನಾ ಅಧಿಕಾರಾ ಕೊಡಸು ಅಂತ ಕೇಳಿಕೊಂಡರ, ಛೇ ಛೇ ಹಾಂಗೆಲ್ಲ ಮಾಡಬಾರದು. ನೀತಿ-ನಿಯತ್ತು, ಬಡ ಬಗ್ಗರು ದಯಾ ಮಯಾ ಅಂತ ದೊಡ್ಡ ಭಾಷಣಾ ಕುಟ್ಟಿ ಹಾಂಗs ತಿರಿಗಿ ಕಳಿಸಿದಾ. ನಮ್ಮನ್ನ ದೂರ ಇಟ್ಟಾ. ರಾಜಕಾರಣದಾಗ ನನ್ನ ಮುಂದ ಯಾರಿಲ್ಲ ಅಂತ ಮೆರೀತಿದ್ದಾ. ವೆಂಕಟಗೌಡಾ, ಮುನಿರಾಜು ನಾನು ಎಲ್ಲಾರು ಕೂಡಿ ಆ ಸಾರೆ ಇಲೆಕ್ಷನ್ ಸೋಲಿಸಿ ಬಿಟ್ವಿ, ಬಕಬಾರಲೆ ಬಿದ್ದ ನೋಡು. ನನಗಂತೂ ಹೋಳಿಗಿ ತುಪ್ಪಾ ಉಂಡಂಗಾತು. ನನ ಹೇಣ್ತಿ ಅವರು ದೇವರಂಥವರು, ಅವರಿಗೆ ಅನ್ಯಾಯಾ ಮಾಡಬ್ಯಾಡ್ರಿ ಅಂತ ನನ ಕಾಲ ಹಿಡಕೊಂಡು ಗೋಳೋ ಅಂತಿದ್ಲು. ಝಾಡಿಸಿ ಒದ್ದೆ. ಹೊಸ್ತಲಕ ತಲಿ ಬಡದು ಕೋಮಾದಾಗ ಹೋಗಿ ಹದಿನೈದು ದಿನದಾಗ ಮ್ಯಾಗ ಹೋಗಿಬಿಟ್ಲು. ನನ್ನ ಹೇಣ್ತಿಗೆ ಅಂವಾ ದೇವರು ನಾ ದೆವ್ವನs, ಆಕಿ ಸತ್ತಾಗ ಸುಮಾ ಇನ್ನೂ ಕೂಸಿತ್ತು. ಆ ದೇವರs ಬಂದು ನನ್ನ ಕಾಲಿಗೆ ಬೀಳಬೇಕಂತ ಬೆನ್ನ ಹತ್ತಿ ಅವನ ಮಗನಿಗೆ ಸುಮಾನ್ನ ಕೊಟ್ಟೆ. ಏನೂ ಅರೀದ ನನ್ನ ಮಗಳು ಕುಲು ಕುಲು ನಕ್ಕೋತ ಸುಖದಿಂದ ಅದಾಳ ಆ ಮನ್ಯಾಗ...

ಟ್ರಿನ್.... ಟ್ರಿನ್. 'ಅಪ್ಪಾs ನಾನು ಸುಮಾ' ಸಂತೋಷದಿಂದ ಮಾತೇ ಹೊರಡುತ್ತಿಲ್ಲ.

"ಯಾಕ ಬಾಳು, ಹ್ಯಾಂಗದೀರಿ ಆರಾಮs. ತಿಂಗಳಾಗಿ ಹೋತು ನೀವು ಹೋಗಿ ಯಾವಾಗ ಬರ್ತಾರ ನಿನ್ನ ಮಾವಾ ಗಂಡಾ...... ನಾ ದಾರೀ ಕಾಯಾಕ ಹತ್ತೀನಿ."

"ಇಲ್ಲಪ್ಪಾ ಅವರ್ಯಾರೂ ಬರೂದಿಲ್ಲ ಇವರ ಕೆಲಸಾ ಎಲ್ಲಾ ಮಾವಾರು ಮಾಡಿಕೊಟ್ಟರು. ಇವರೂ ಭಾಳ ಬಿಝಿ ಅದಾರ. ನಮ್ಮ ಪಕ್ಷದವರು ಇಲೆಕ್ಷನ್‌ಕ ನಿಲ್ರಿ ಅಂದರಂತ ಮಾವಾರಿಗೆ. ನಾ ಒಲ್ಲೆ ಸುರೇಶಗ ಟಿಕೆಟ್ ಕೊಡ್ರಿ, ನಾ ಹಿಂದ ಇರ್ತೀನಿ ಅಂದಾರ ಮಾವಾರು. ಇದೇ ಕೆಲಸದಾಗ ಅದಾರ ಇಬ್ರೂ. ಈ ಸುದ್ದಿ ಕೇಳಿ ಸಂತೋಷ ಪಡೂವವರು ನೀವೊಬ್ಬರು ಅದೀರಲ್ಲ. ನನಗ ಅವ್ವನೂ ಇಲ್ಲ.' ಸುಮಾನ ದನಿಯಲ್ಲಿ ಸಂತೋಷದ ಅಳು.

"ಹಾ. ಹಾಂ. ಸುಮಕ್ಕಾs ಭಾಳ ಸಂತೋಷ ಆತು. ಹೆ.... ಹೆ..... ಭಾಳ ಸಂತೋಷ ಆತವ್ವಾ .... ಸುದ್ದೀ ಕೇಳಿ." ಅಳಿಯನೇ ಎಂ.ಎಲ್.ಎ. ಆಗುವನೆನ್ನುವ ಸಂಭ್ರಮದಲ್ಲಿ ಶರಣ ಶಿವಶಂಕರಪ್ಪ ಗ್ಲಾಸು ಕೆಳಗಿಟ್ಟು ಬಾಟ್ಲಿಯನ್ನು ಎತ್ತಿದ.

***

■■

# ದೂರದ ಮನೆ

ಮುಗಿಲ ತುಂಬ ಓಡುವ ಗುಡುಗು, ಥಳಕ್ಕನೆ ಚಿಮ್ಮಿ ಬೆಚ್ಚಿಸುವ ಬೆಳಕು, ಖಟ್‌ಖಡಲ್ ಕಣ್ಣು ಮುಚ್ಚಿಸುವ ಸಿಡಿಲು... ಹಿಂದೆಯೇ ಬಂತು... ಬಂದೇ ಬಿಟ್ಟಿತು ಮನವನ್ನು ಇರಿಯುವ ಮಾತು...

'ಈ ನಿಮ್ಮ ಮಗಳು ಯಾವನ್ನರೆ ಕಟಿಗೊಂಡು ಓಡಿ ಹೋದ ಮ್ಯಾಲೆ ಎಚ್ಚರ ಬರತೈತಿ ನಿಮಗ. ಲಗೂನ ಛೊಲೋ ಒಂದು ವರಾ ನೋಡಿ ಮದುವಿ ಮಾಡರಿ ಅಂತ ಬೆನ್ನು ಹತ್ತಿ ಇಷ್ಟ ದಿವಸಾದ್ರು ಕಿವ್ಯಾಗ ಹಾಕ್ಕೋತಿರಾ. ನನ್ನ ಮಾತ ಯಾಕ ಕೇಳ್ತೀರಿ ನೀವು. ನಾ ಯಾವ ಗಿಡದ ತೊಪ್ಪಲ. ಎಲ್ಲೆಲ್ಲಿ ತಿರಗತಾಳೊ ಈ ಗಂಡುಬೀರಿ...'

'ಅವ್ವಾs' ಕಿರುಚಿದಳು ಸುಮಿ. 'ನಾ ಕಲಿಯೂದ ಮುಗಿಯೂತನಕಾ ನನ್ನ ಮದುವೀ ಸುದ್ದೀ ತಗೀಬ್ಯಾಡಾ ಅಂದರ ಹಗಲೆಲ್ಲಾ ಕಿಟಿಕಿಟಿ ಹಚ್ಚತಿ. ನೀ ಹಿಂಗ ನನ್ನ ಮನಸಿನ ವಿರುದ್ಧ ವರಾ ತಂದು ತೋರಸಬ್ಯಾಡಾ ನೋಡು ಮತ್ತ.'

'ಏನs, ಬಾಯಿ ಭಾಳ ಉದ್ದ, ಆಯ್ತು. ನೋಡು ಏನ್ಮಾಡ್ತೀ. ತಿರಗಿ ವಾದಸ್ತೀಯಾ' ಫಟ್... ಹೊಡೆತ, ಸುಮತಿಯ ಬಿಕ್ಕಿ ಬಿಕ್ಕಿ ಅಳು. ಸಣ್ಣಾಗಿ ಸೋನೆ ಸುರಿಯತೊಡಗಿತು.

ಕೆಲಸ ಹಿಡಿದಾಗಿನಿಂದ ಗಂಟು ಬಿದ್ದಿದ್ದಳು ಅವ್ವ ಮದುವೆ ಮಾಡಿಕೋ ಎಂದು. ಮಕ್ಕಳ ತಲೆಯ ಮೇಲೆ ನಾಲ್ಕು ಅಕ್ಕಿಕಾಳು ಹಾಕಿ ಸಾಯುವುದೇ ತಾಯಂದಿರ ಬದುಕಿನ ಕೊನೆಯ ಗುರಿ. ಇದಕ್ಕೆ ಎದಿರಾಡುವ ಮಾತೇ ಇಲ್ಲ.

'ಮನಿತನಾ ಭಾಳ ಛೊಲೋ ಐತಿ ತಮ್ಮಾs ಹುಡುಗಿ ಬಳಗದಾಗ ಇದ್ದಾಕಿ. ರೂಪದಾಗ ಕೈ ತೊಳಕೊಂಡ ಮುಟ್ಟಬೇಕ ಹಾಂಗ ಅದಾಳ. ಬಂಗಾರದಂತಾ ಗುಣಾ. ನಿನಗಂತೂ ಕನ್ಯಾ ಕೊಡಾಕ ಒಂಟಿಗಾಲ ಮ್ಯಾಲೆ ತಯಾರ ಅದಾರ. ಕೈತುಂಬ ಕೊಟ್ಟು ಮದುವೀ ಮಾಡತಾರ. ನಿನಗಂತೂ ಅಂಥಾದೆಲ್ಲಾ ಆಸೆ ಇಲ್ಲ ಬಿಡು. ನೀ ಒಮ್ಮೆ ಹೂಂ ಅರೆ ಅನ್ನು ಪ್ರಭಾಕರಾ.'

ಅವನಿಗಂತೂ ಯಾವ ಹುಡುಗಿಯಾದರೂ ಅಷ್ಟೇ ಅನಿಸಿತ್ತು ಆ ಕಾಲಕ್ಕೆ. ಅವ್ವನ ಮುದ್ದಿನ ಸೊಸೆಯಾಗಿ ಮಂಗಳಾ ಬಂದಳು. ಹಳೆಯದು ಹೋಗಿ ಹೊಸದು ಬರಲೇಬೇಕಲ್ಲ. ಒಂದು ಗಂಡಿಗೆ ಒಂದು ಹೆಣ್ಣು. ಮದುವೆ... ಮನೆ ಮಕ್ಕಳು... ಸಂಸಾರ. ಈ ಜಗತ್ತೇ ಜಂಗಮ. ಚಲಿಸುತ್ತ ಇರುವದರಲ್ಲೇ ಪ್ರಗತಿ. ಹಾಗೆಯೇ ಪ್ರಭಾಕರನ ಜೀವನ ರಥವೂ.

ಮನೆ ತುಂಬಿದ ಮಂಗಳ ಪ್ರೀತಿಯನ್ನೂ ತುಂಬಿ ತುಂಬಿ ಕೊಟ್ಟಳು. ಕೈಗೆ ಮಗ-ಮಗಳನ್ನು ಕೊಟ್ಟಾಗ ಮನ ಕರಗಿತು. ಬಿಚ್ಚಿಕೊಳ್ಳತೊಡಗಿದ. ಇಂಥವಳ ಮುಂದೇನು ಮುಚ್ಚುಮರೆ. ವರ್ಷಗಳಿಂದ ಮುಚ್ಚಿಟ್ಟ ಮಾತು ಅವಳ ಎದುರು ತೋಡಿಕೊಂಡು ಹಗುರಾದ. ಹಕ್ಕಿಯಂತೆ ಹಾರಾಡಿದ. ಸುಖದ ಕಲ್ಪನೆಯಲ್ಲಿ ತೇಲಾಡಿದ. ಮಂಗಳಾ ಮೌನಿ. ಅಳಲಿಲ್ಲ, ಸಿಟ್ಟಾಗಲಿಲ್ಲ... ಭಾವನೆಗಳೇ ಇಲ್ಲದ ಬಂಡೆ.

ದಿನದಿನಕ್ಕೆ ಸ್ವಲ್ಪ ಸ್ವಲ್ಪ ಸೂಕ್ಷ್ಮವಾಗಿ ಬದಲಾಗತೊಡಗಿತು ಬದುಕು, ಅವನಿಗೆ ಏನೋ ಕಳೆದುಕೊಳ್ಳುತ್ತಿರುವ ಅನುಭವ. ಕೈಜಾರಿ ಹೋಗುತ್ತಿದ್ದುದನ್ನು ಗಟ್ಟಿಯಾಗಿ ಹಿಡಿಯಲು ಹೋದ. ಊಹುಂ... ಸಿಗಲೊಲ್ಲದು. ತನ್ನ ಸ್ಪಷ್ಟ ಮಾತು. ಸರಳ ಗುಣ ಪಾರದರ್ಶಕತೆಯಿಂದ ಬದುಕಿನ ವಿಕಾರ ಮುಖದ ಪರಿಚಯ... ಪ್ರತ್ಯಕ್ಷ... 'ಬಹಳ

ವರ್ಷಗಳಿಂದ ಅವಳ ಸಂಪರ್ಕವೇ ಇಲ್ಲ. ಅವಳ ಮದುವೆಯೂ ಆಗಿ ಹೋಗಿರಬಹುದು. ಎಲ್ಲಿದ್ದಾಳೋ, ಗೊತ್ತಿಲ್ಲ. ನೀನೇ ನನ್ನ ಸಂಗಾತಿ' ಎಲ್ಲ ಹೇಳಿದ, ಬೇಡಿಕೊಂಡ ತಪ್ಪಾಯಿತೆಂದ. ಉಹುಂ ಈ ಬಂಡೆ ಅಚಲ. ಕರಗಲು ದಿನಗಳೋ, ವರ್ಷಗಳೋ, ಜೀವಮಾನವೋ, ಗೊತ್ತಿಲ್ಲ, ಎದೆಯಲ್ಲಿ ಭಾರ ಹೊತ್ತು ಬದುಕು ಇದ್ದಂತೆ ಸ್ವೀಕರಿಸಿದ.

'ತಮ್ಮಾs ನನ್ನ ಊರಿಗೇ ಕಳಿಸಿ ಬಿಡಪ್ಪಾ' ಅವ್ವ ದೀನಳಾಗಿದ್ದಳು. ಅಪ್ಪ ತೀರಿಕೊಂಡ ಮೇಲೆ ಅವಳ ಆರೋಗ್ಯ ಚೆನ್ನಾಗಿರಲಿಲ್ಲ. ಕೆಮ್ಮು ಅಸ್ತಮಾಕ್ಕೆ ತಿರುಗಿ ನರಳುತ್ತಿದ್ದಳು.

ಬಂಗಾರದಂತಹ ಸೊಸೆ ಈಗ ಕಾದ ಕಬ್ಬಿಣ. "ಮಕ್ಕಳು, ಮನೀಕೆಲಸಾ ಭಾಳಾಗ್ತದ. ಅತ್ತೀ ಸೇವಾ ಮಾಡೂದೆ ಆಗೂದಿಲ್ಲ ನನ್ನಿಂದ. ಹಳ್ಳೀಗೆ ಕಳಿಸಿಬಿಡ್ರಿ ಅವರ್ನ" ತಾಯಿಗಾಗಿ ಅವನಿಗಿದ್ದ ಪ್ರೀತಿ, ಕೊನೆಗಾಲದಲ್ಲಿ ಸುಖವಾಗಿಡಬೇಕೆನ್ನುವ ಹಂಬಲ. ಮನದ ನೋವು, ಮ್ಲಾನ ಮುಖ ಯಾವುದಕ್ಕೂ ಮಂಗಳಾ ಮಣಿಯಲಿಲ್ಲ. ಹಳ್ಳಿಗೆ ತಿರುಗಿ ಹೋದ ಅವ್ವನ ಸಾವು ಅವನ ಮನದಲ್ಲಿ ಮುರಿದ ಮುಳ್ಳು.

ಕನ್ಯೆ ನೋಡಲು ಬಂದ ನಾಲ್ಕಾರು ಜನ ತಿಂದು ಬಿಟ್ಟು ಹೋದ ಎಂಜಲು ಪ್ಲೇಟುಗಳೆಲ್ಲ ಹಾಲಿನಲ್ಲಿ ಹಾಗೆಯೇ ಹರವಿದ್ದವು. ಅವನ ಮೋರೆಗೆ ಹೊಡೆದಂತೆ, ಅವನನ್ನು ಒಂದು ಮಾತೂ ಕೇಳದೆ ವರನ ಮನೆಯವರನ್ನು ಆಮಂತ್ರಿಸಿ ಉಪಚಾರ ಮಾಡಿದ್ದಳು. ಮಂಗಳಾ ತುಟಿಪಿಟ್ ಅಂದಿರಲಿಲ್ಲ. ಚೆಲ್ಲಿದ ನೀರು, ಅರ್ಧ ಕುಡಿದು ಬಿಟ್ಟ ಚಹ, ಎಂಜಲು ಪ್ಲೇಟು... ಛೀ... ಅವಕಾಶವನ್ನು ಉಪಯೋಗಿಸಿಕೊಂಡು ಅವನನ್ನು ಘಾಸಿಮಾಡುತ್ತಿದ್ದದ್ದೇ ಹಾಗೆ. ಅವಳಿಗೇನು ಸಂತೋಷವೋ ಅದರಿಂದ.

ಬಿಸಿಯಾಗುತ್ತಿದ್ದ ತಲೆಯನ್ನು ಕೊಡವಿ ಹೊರಬಂದು ಚಪ್ಪಲಿ ಮೆಟ್ಟಿದ ಸುಮತಿ ಓಡಿ ಅಪ್ಪನ ಹತ್ತಿರ ಬಂದಳು. ಮೌನವಾಗಿ ಅವಳ ಕಣ್ಣೀರು ಒರೆಸಿ ಬೆನ್ನು ತಟ್ಟಿದ. ಅವರಿಬ್ಬರದು ಮೂಕ ಭಾಷೆ.

'ಪ್ಯಾಟ್ಯಾಗ ಹೋಗೋಣು ಬರ್ತೀಯಾ'

'ಹೂಂ. ಹೋಗ್ರಿ. ಹೋಗಿ ಆ ಮೋಡಕಾ ರದ್ದಿ ತಂದು ಹಾಕರಿ, ಮನ್ಯಾಗ ನಾ ಒಬ್ಬಾಕಿ ಅದೀನಲ್ಲಾ ಇಲ್ಲೇ ಕತ್ತೀ ಹಾಂಗ ದುಡಿಯಾಕ. ಸುಮೀ ನೀ ಎಲ್ಲೂ ಹೋಗಬ್ಯಾಡಾ. ಈ ರಂದೀ ಎಲ್ಲಾ ಯಾರು ಸ್ವಚ್ಛ ಮಾಡವರು? ನಾ ಒಬ್ಬಾಕೀನ ಸಾಯಲೇನು?' ಈಗ ಧಾರಾಕಾರವಾಗಿ ಮಳೆ.

ಗೋಡೆಗೆ ಒರಗಿ ಕಾಲು ಚಾಚಿ ಕುಳಿತು ಭೋರೆಂದು ಅಳುತ್ತಿದ್ದಳು ಮಂಗಳಾ. ಪೇಟೆಗೆ ಒಲ್ಲೆ ಎನ್ನುವಂತೆ ಸನ್ನೆ ಮಾಡಿದಳು ಸುಮಿ. ಹತ್ತಿರ ಹೋಗಿ ಅಳುತ್ತಿದ್ದ ಹೆಂಡತಿಯ ಕಣ್ಣೀರು ಒರೆಸಿ ಸಮಾಧಾನ ಮಾಡಲೇ ಎಂದುಕೊಂಡ ಪ್ರಭಾಕರ, ಮನಸ್ಸು ಕೇಳಲಿಲ್ಲ. ಕಾಲು ಸರಿಯಲಿಲ್ಲ. ಕನಿಕರದಿಂದ ಅವಳನ್ನು ನೋಡಿ ಹೊಸಿಲು ದಾಟಿ ಬಸ್ ಸ್ಟಾಪ್‌ಗೆ ನಡೆದ.

***

ತುಂಬಿ ಬರುವ ಬಸ್ಸಿನಲ್ಲಿ ನುಗ್ಗುತ್ತಿದ್ದ ಜನರ ನಡುವೆ ತಾನೂ ಸಿಕ್ಕು ಕೂಡ್ರಲು ಜಾಗವಿಲ್ಲದೆ ತೊಗಲು ಪಟ್ಟಿ ಹಿಡಿದು ಜೋತಾಡುತ್ತ. ಆರಾಮವಾಗಿ ಕುಳಿತವರು ಪರಿಚಯದ ಮುಗುಳ್ನಗೆ ವಿದ್ಯಾರ್ಥಿಗಳ 'ಹಲೋ ಸರ್' ' ನಮಸ್ಕಾರ'ಗಳಿಗೆ ಕಣ್ಣು, ಹುಬ್ಬು ಸನ್ನೆಗಳಲ್ಲೇ ಉತ್ತರ ಕೊಟ್ಟು ಪೇಟೆಯ ಸ್ಟಾಪ್‌ಗಿಳಿದು ಗದ್ದಲದಲ್ಲಿ ಗುಂಪಿನೊಡನೆ ಗೋವಿಂದನಾಗಿ ಸುತ್ತಾಡಿ ಬರುವುದು ಪ್ರಭಾಕರನ ಏಕಮೇವ ಖಯಾಲಿ. ಜನರ ಗದ್ದಲದಲ್ಲಿಯೂ ಸುಮ್ಮನೆ ಅತ್ತಿತ್ತ ಸುತ್ತಾಡುತ್ತ ಏಕಾಂಗಿಯಾಗಿ ಯಾರನ್ನೋ ಹುಡುಕುತ್ತಿರುವಂತೆ ಎದುರಿಗೆ ಬರುವವರ ಮುಖ ದಿಟ್ಟಿಸುತ್ತ, ಅವರು ಪೆಚ್ಚಾಗುವದನ್ನು ನೋಡುವದರಲ್ಲಿ ಒಂದು ತರಹದ ಖುಷಿ. ಕೆಲವರಂತೂ ಅವನ ನೋಟಕ್ಕೆ ಹೆದರಿ ಅತ್ತಿತ್ತ ಸರಿದು, ದಾರಿ ಬಿಟ್ಟು, ಮುಖ ಕಾಣದಂತೆ ಹೋಗುವುದನ್ನು ನೋಡಿ ಒಳಗೊಳಗೇ ನಗು. ತೀರ ಪರಿಚಯದವರು

ನಿಲ್ಲಿಸಿ ಮಾತನಾಡಿಸಿದರೂ ಎತ್ತಲೋ ಲಕ್ಷ್ಯ. ದಾರಿ ತಪ್ಪದೇ ಹೆಜ್ಜೆ ಹಗಿ ನಿಲ್ಲುತ್ತಿದ್ದದ್ದು ಶೇಖರನ ಪುಟ್ಟ ಅಂಗಡಿ ಎದುರಿಗೆ. ಕಾಲೇಜು ಮುಗಿದ ಮೇಲೆ ಸಂಜೆ ಹೊತ್ತು ಒಂದಿಷ್ಟು ಪತ್ರಿಕೆಗಳನ್ನು ಸೆಕೆಂಡ್‌ಹ್ಯಾಂಡ್ ಪುಸ್ತಕಗಳನ್ನು ಜೋಡಿಸಿಟ್ಟುಕೊಂಡು ಕೂಡ್ರುತ್ತಿದ್ದ ಶೇಖರ ಪ್ರಭಾಕರನ ವಿದ್ಯಾರ್ಥಿ. ಅಲ್ಲಿಗೆ ಪೇಟೆ ಯಾತ್ರೆಯ ಕೊನೆಯ ಘಟ್ಟ. ಕೈಯ್ಯಲ್ಲೆರಡು ಪುಸ್ತಕ ಹಿಡಿದು ಮತ್ತೆ ಮನೆಯ ದಾರಿ. ಶೇಕ್ಸ್‌ಪಿಯರ್, ಶಾ, ಮಿಲ್ಟನ್, ವರ್ಡ್ಸ್‌ವರ್ಥ ಎಲ್ಲ ಸಿಕ್ಕಿದ್ದೂ ಹಾಗೆಯೇ.

'ಹೊಲಾ ಅಲ್ಲಾ, ಮನೀ ಅಲ್ಲಾ, ಬೆಳ್ಳಿ- ಬಂಗಾರ ಅಲ್ಲಾ. ಮೋಡಕಾದಿಂದ ರದ್ದೀ ಪುಸ್ತಕಾ ತಂದು ಮನ್ಯಾಗ ಒಟ್ಟತೀರಿ' ಮಂಗಳಾನ ಒಡೆದ ರಿಕಾರ್ಡಿನ ಕಿರಿಕಿರಿ. ಅವನ ಓದಿನ ಹುಚ್ಚಿಗೆ ಪಗಾರದ ಹಣ ಹಾಕಬಾರದೆಂದು ಚಂಡಿ ಹಾಗೆ ಹಟ ಮಾಡಿದಾಗಲೇ ಅವನು ಸೆಕೆಂಡ್ ಹ್ಯಾಂಡ್‌ಗೆ ಹೋದದ್ದು. ಇದೂ ಅವಳಿಗೆ ಸಹನೆ ಇಲ್ಲ... ಮಂಗಳಾ ಯಾಕೆ ಹೀಗಾದಳು. ತನ್ನನ್ನು ಅಪಾರ್ಥ ಮಾಡಿಕೊಂಡು ಬದುಕನ್ನೇ ನರಕ ಮಾಡಿದ್ದಾಳಲ್ಲ. ಇದರಿಂದ ಅವಳಾದರೂ ಸುಖವಾಗಿದ್ದಾಳೆಯೆ? ತಾನೂ ಜಗಳ ತೆಗೆದು ಅತ್ತು ಮನೆಯ ಶಾಂತಿ, ನೆಮ್ಮದಿ ಹಾಳು ಮಾಡ್ತಾಳೆ. ಇಷ್ಟಕ್ಕೆಲ್ಲಾ ಆ ಶಕುಂತಲಾ... ಮಂಜಿನಂತೆ ಮಾಯವಾಗಿ ಹೋದ ಶಕುಂತಲಾ ಕಾರಣಳೇ? ನನ್ನ ಬದುಕಿನಲ್ಲಿ ಎಷ್ಟು ಗಟ್ಟಿಯಾಗಿ ಬೇರೂರಿಬಿಟ್ಟಿದ್ದಾಳಲ್ಲ ಅವಳು. ಎಲ್ಲಿದ್ದಾಳೋ ಗೊತ್ತಿಲ್ಲ. ಅನಿರೀಕ್ಷಿತವಾಗಿಯೇ ಬಂದಳು... ಬಂದ ಹಾಗೆಯೇ ಹೋಗಿಬಿಟ್ಟಳು.....

'ನಮಸ್ಕಾರರೀ ಪ್ರಭಾಕರ ರಾಯರ, ಗುರುಲಿಂಗಪ್ಪನೋರ ಮಗಾ ಅಲ್ಲೇನ್ರಿ ನೀವು'

'ಹೌದ್ರೀ. ನೀವೂ....'

'ನಾವು ನಿಮ್ಮ ಊರವರಃ. ನಾನು ಶಶಿಧರಗೌಡಾ ಪಾಟೀಲ. ಇಕೀ ನನ್ನ ಮಗಳು ಶಕುಂತಲಾ. ನಿಮ್ಮ ಕಾಲೇಜಿಗೇ ಕಲೀಲಿಕ್ಕೆ ಬಂದಾಳ.

'ಓಃ ದೊಡ್ಡಮನಿಯವರು. ನಾನು ಊರು ಬಿಟ್ಟು ಭಾಳ ದಿನಾ ಆದ್ವು. ಅದಕ್ಕಃ ಗುರುತು ಹತ್ತಲಿಲ್ಲ. ಕ್ಷಮಿಸ್ರಿ. ಎಡ್‌ಮಿಶನ್ ಆಯ್ತೇನು?'

'ಕಾಲೇಜದ್ದ ಆತ್ರಿ. ಹಾಸ್ಟೇಲ್‌ದ ಇನ್ನೂ ಆಗಬೇಕು' ವೀಣೆ ನುಡಿದಂಥ ದನಿ.

'ಆಯ್ತು ಪ್ರೊಫೆಸರ ಬರ್ತೀವಿ. ಸ್ವಲ್ಪ ಲಕ್ಷ್ಯ ಇರಲಿ ನಮ್ಮ ಹುಡುಗೀ ಕಡೆ. ಏನಾದ್ರೂ ಕೇಳಿದರ ಸಹಾಯ ಮಾಡ್ತಾ ಇರ್ರಿ. ನಮಸ್ಕಾರ.'

ಅವಳ ಕ್ಲಾಸಿಗೆ ಕಲಿಸುತ್ತಿದ್ದದ್ದು ಇಂಗ್ಲೀಷ ಕಾವ್ಯ. ಪ್ರೇಮಗೀತೆಗಳನ್ನು ಓದಿ, ವಿವರಿಸಿ ಹೇಳುವಾಗ ಅದೆಂಥದೋ ನಾಚಿಕೆ. ಹುಡುಗರ ಸಿಳ್ಳು, ಕೇಕೆ ಲೇವಡಿಗಳಿಂದ ಮತ್ತಷ್ಟು ನಾಚಿ, ಮುಖ ಕೆಂಪಾಗಿ, ಹುಡುಗಿಯರತ್ತ ನೋಡದೆ ಪುಸ್ತಕದಲ್ಲಿಯೇ ಕಣ್ಣು ನೆಟ್ಟು ಓದಿ, ಒಮ್ಮೆ ಪಾರಾದೆ ಎನ್ನುವ ಮನಸ್ಸು, ವಯಸ್ಸು. ಶಕುಂತಲೆ ಕ್ಲಾಸಿಗೆ ಬಂದ ಮೇಲಂತೂ ಪ್ರಭಾಕರನ ಅವಸ್ಥೆ... ಮನಸ್ಸಿನ ಗಾಬರಿ, ತುಡಿತ, ಎದೆಯ ಡವಡವ ಇದೆಲ್ಲ ಯಾಕೆ... ಮೊದಮೊದಲು ಏನೂ ತಿಳಿಯಲಿಲ್ಲ. ಬರಬರುತ್ತ ಅರ್ಥವಾಯಿತು. ಇದಕ್ಕೆಲ್ಲ ಶಕುಂತಲೆಯೇ ಕಾರಣ. ದನಿಯ ಇಂಪು, ಕಣ್ಣಿನ ಮಿಂಚು, ಬಳಕುವ ನಡಿಗೆ, ಎದೆ ಬಡಿತ ತಪ್ಪಿಸುವ ನಗು... ಪ್ರಭಾಕರ ಕಳೆದುಹೋಗಿದ್ದ. ಮನ ಹುಚ್ಚು ಹುಚ್ಚಾಗಿ ಕುಣಿಯುತ್ತಿತ್ತು. ಆಸೆ ಗರಿಗೆದರಿ ಕವಿತೆಗಳ ರೂಪದಲ್ಲಿಳಿಯಿತು.

ವರ್ಷ ಕಳೆದರೂ ಶಕುಂತಲೆಯದು ನಿರಾಯಾಸ ಭೇಟಿ, ಸರಳ ಮಾತು. ಸಹಜ ನಡವಳಿಕೆ.... ಮುಚ್ಚಿದೆ ಕದ.

ಕದ ತಟ್ಟಲೇ? ಅವಳಂತೂ ಹುಡುಗಿ, ವಯಸ್ಸಿಗೆ ಸಹಜವಾದ ನಾಚಿಕೆ, ಹಿಂಜರಿಕೆ... ಇರಬಹುದು. ಇನ್ನೂ ಎಷ್ಟು ದಿನ ಕಾಯುವದು, ತಾನೇ ಮುಂದುವರೆದರೆ? ಆದರೆ ಹೇಗೆ? ಏನಂತ ಕೇಳುವುದು? ಮಾತು ಬಿಟ್ಟರೆ? ಉಹುಂ ಹಾಗೇನೂ ಆಗಲಿಕ್ಕಿಲ್ಲ. ಅವಳೂ ಅದನ್ನೇ ನಿರೀಕ್ಷಿಸಿ ಕಾಯುತ್ತಿರಬಹುದು. ಒಂದು ಚೀಟಿ ಬರೆದರೆ... ನಿನ್ನನ್ನ ತುಂಬಾ ಪ್ರೀತಿಸ್ತೇನೆ. ನಿನಗೆ ಒಪ್ಪಿಗೆಯೆ? ನೇರವಾಗಿ ಚೀಟಿ ಕೈಯಲ್ಲಿ ಕೊಡುವದಕ್ಕಿಂತ ಪುಸ್ತಕದಲ್ಲಿಟ್ಟು ಕೊಟ್ಟರೆ ಹುಂ. ಅದೂ ಆಯಿತು. ಹಾಗೆ ಅವಳ ಹುಟ್ಟುಹಬ್ಬಕ್ಕೆ ಕಾಣಿಕೆಯಾಗಿ ಕೊಟ್ಟ 'ಕೊಲರಿಡ್ಜನ ಕವಿತೆಗಳು' ಪುಸ್ತಕ ತಿರುಗಿ ತನ್ನ ಕೈಗೆ ಬಂದದ್ದೂ ಇದೇ ಶೇಖರನ ಅಂಗಡಿಯಲ್ಲಿಯೆ ಅಲ್ಲವೇ...........

'ಹೊಸ ಪುಸ್ತಕಗಳು ಬೇರೆ ಬಂದಿಲ್ಲ ಸರ್' ಶೇಖರ ಹೇಳಿದ.

ಮನಸ್ಸು ಖಿನ್ನ, ಕಾಲು ಭಾರ, ಹೆಜ್ಜೆ ನಿಧಾನ, ದೃಷ್ಟಿ ನೆಲದಲ್ಲಿ... ಇನ್ನು ಮತ್ತೆ ಮನೆಯ ದಾರಿ... ಇನ್ನೇನು ಕಾದಿದೆಯೋ?

'ಸರ್ ಸರ್' ಯುವಕನೊಬ್ಬ ಹತ್ತಿರ ಬಂದ. ಅಪರಿಚಿತ ಮುಖ.

'ಸರ್ ನಮಸ್ಕಾರ. ನನ್ನ ಹೆಸರು ಮಹೇಶ ಅಂತ. ನಾ ನಿಮ್ಮ ಸ್ಟೂಡಂಟರೀ.'

'ಹೌದೇನು, ಯಾವಾಗ? ಸಾರಿ ನನಗೆ ನೆನಪಿಲ್ಲಲ್ಲ'

'ಆರೇಳು ವರ್ಷ ಆತ್ರಿ. ಪಿ.ಯು.ಸಿ. ಸೆಕೆಂಡ ಇಯರಕ ನೀವು ಇಂಗ್ಲೀಷ ಹೇಳತಿದ್ರಿ. ನಮಗೆಲ್ಲಾ ಭಾಳ ಇಂಟರೆಸ್ಟು, ಒಂದೂ ಕ್ಲಾಸ ತಪ್ಪಸತಿದ್ದಿಲ್ಲಾ."

ಮುಖ ಅರಳಿತು. ಸುಖದ ಕ್ಷಣಗಳೆಂದರೆ ಇವೇ, 'ಈಗೇನು ಮಾಡ್ತೀರಿ?'

'ಸರ್, ನಾನು ಮುಂದ ಇಂಜಿನಿಯರಿಂಗ್‌ಕ ಹೋದೆ. ಈಗೊಂದು ಕಂಪನಿಯೊಳಗ ಕೆಲಸಾ ಮಾಡ್ತೀನ್ರಿ. ಸರ್ ನನ್ನದೊಂದು ರಿಕ್ವೆಸ್ಟ. ನಮ್ಮ ಮನೀ ಇಲ್ಲೇ ಹತ್ತಿರ ಅದ. ಬರ್ರಿ. ಚಹಾ ಕುಡಿಯೂಣಂತ' ಅವನ ದನಿಯಲ್ಲಿ ಪ್ರೀತಿಯ ಸೆಳೆತವಿತ್ತು.

'ಅಪರೂಪಕ್ಕ ಭೆಟ್ಟಿ ಆಗೀರಿ, ಇಲ್ಲೇ ಐದು ಮಿನಿಟಿನ ಹಾದಿ. ಬರ್ರೀ'. ಒಲ್ಲೆ ಎನ್ನಲು ಪ್ರಭಾಕರನ ಮನಸ್ಸು ಒಪ್ಪಲಿಲ್ಲ.

ಮಧ್ಯಮವರ್ಗದ ಅಚ್ಚುಕಟ್ಟಾದ ಮನೆ, ಮಹೇಶ ಒಳಗೆ ಹೋದ. ಪ್ರಭಾಕರ ಸುತ್ತ ನೋಡುತ್ತ ಕುಳಿತರು. ಗೋಡೆಯ ಮೇಲೆ ಸುಂದರ ಯುವಕನ ದೊಡ್ಡ ಭಾವಚಿತ್ರ. ಹಾರ ಹಾಕಿತ್ತು. ಯಾರದಿರಬಹುದು. ಮನೆಯಲ್ಲಿ ಮತ್ತಾರು ಇಲ್ಲವೇ... ಮಹೇಶನ ತಂದೆ?

ಬಾಗಿಲ ಹತ್ತಿರ ಹೆಜ್ಜೆಯ ಸಪ್ಪಳ. ತಾಯಿ ಮಗ ನಿಂತಿದ್ದರು. ಬೆಳ್ಳಿಗೂದಲು, ಸ್ಥೂಲ ಶರೀರ, ಕುಂಕುಮವಿಲ್ಲದ ಹಣೆ... ಅರೆ... ಅವಳೇ ಇವಳು... ಅವಳೇ ದಿಗ್ಗನೆ ಎದ್ದರು ಪ್ರಭಾಕರ. ಶಕುಂತಲಾ ಒಂದು ಕ್ಷಣ ಬಾಗಿಲ ಚೌಕಟ್ಟಿಗೆ ಒರಗಿ ನಿಂತಳು.

'ಕೂಡ್ರಿ ಸರ್, ನೀವು ಆರಾಮ ಕೂಡ್ರಿ. ಇವರು ನನ್ನ ತಾಯಿ, ಅವ್ವಾ ಇವರು ಪ್ರೊ. ಪ್ರಭಾಕರರಾಯರು. ಕಾಲೇಜಿನಾಗ ನಮಗ ಇಂಗ್ಲೀಷ ಹೇಳತಿದ್ದರು.'

'ನಮಸ್ಕಾರ ಕೂಡ್ರಿ. ಮಹೇಶಾ ಥಂಡಿ ಗಾಳಿ ಬರತೈತಿ. ಹೊರಗಿನ ಬಾಗಿಲಾ ಹಾಕಪ್ಪಾ' ಶಕುಂತಲೆಗೆ ತನ್ನ ಗುರುತು ಹತ್ತಿಲ್ಲವೇ? ದಿಟ್ಟಿಸಿ ನೋಡಿದರೂ ಪರಿಚಯದ ಒಂದು ಗೆರೆಯೂ ಇಲ್ಲವಲ್ಲ. ತನ್ನನ್ನು ಮರೆತೇ ಬಿಟ್ಟಿದ್ದಾಳೆಯೆ? ಭೆಟ್ಟಿಯಾಗಿ ಇಪ್ಪತ್ತೆಂಟು ವರ್ಷಗಳಾದುವಲ್ಲ.

'ನಮಸ್ಕಾರ್ರಾ, ನೀವು ಬಂದದ್ದು ಭಾಳ ಸಂತೋಷ ಆತು. ಮಹೇಶಗ ಭಾಳ ಖುಷಿ ಆಗೇದ. ಅವನ ಸಂತೋಷಾನ ನನ್ನ ಸಂತೋಷ.'

'ಹೌದ್ರಿ ಸರ್. ಅವ್ವ ಹೇಳೂದು ಖರೆ. ನನ್ನ ತಂದಿ ನಾ ಸಣ್ಣಾಂವ ಇದ್ದಾಗ ಕ್ಯಾನ್ಸರ್ ಆಗಿ ತೀರಿಕೊಂಡರು, ನನಗೆ ಅವರ ನೆನಪೂ ಇಲ್ಲ. ಅವಾಗಿಂದ ತಂದಿ-ತಾಯಿ ಬಂಧು ಎಲ್ಲಾ ಅವ್ವನ ನನಗ'

'ಈ ಫೋಟೊ ಅವರದs ಅಲ್ಲ. ಪಾಽಪ ನೀ ಇಂಜಿನಿಯರ್ ಆದದ್ದೂ ನೋಡಬೇಕಾಗಿತ್ತು ಅವರು.'

'ಅವರೂ ದೊಡ್ಡ ಇಂಜಿನಿಯರ ಇದ್ದರ್ರಿ. ಅಪ್ಪ ಹೋದಾಗಿಂದ ಅವ್ವ ಭಾಳ ಕಷ್ಟ ಸೋಸ್ಯಾಳ. ಅದಕ್ಕs ಆಕೀಗೆ ಶುಗರ ಸುರು ಆಗೇದ. ಕಣ್ಣಿಗೆ ಪರಿನೂ ಬೆಳದದ. ಆಪರೇಶನ್ ಆಗಬೇಕು ಅಂತಾರ ಡಾಕ್ಟರು'

ಓs ಅದಕ್ಕs ತನ್ನ ಮುಖಾ ಸರಿಯಾಗಿ ಕಂಡಿಲ್ಲ. ಗುರುತು ಹತ್ತಿಲ್ಲ. 'ಅಯ್ಯ, ನಾ ಎಂಥಾ ಹುಚ್ಚಿ, ನಿಮ್ಮ ಸರ್ ಮನೀಗೆ ಬಂದಾರ. ಅವರಿಗೆ ಚಹಾ ಮಾಡೂದು ಬಿಟ್ಟು ಇಲ್ಲೇ ಕುಂತೀನಿ'

ಸೆರಗು ಸಾವರಿಸಿಕೊಂಡು ಒಳಗೆ ಹೋದ ಶಕುತಂಲಾ ಅಡಿಗೆ ಮನೆ ಕಟ್ಟೆ ಆಧರಿಸಿ ಬೀಳದಂತೆ ನಿಂತಳು. ಕಣ್ಣುಮುಚ್ಚಿ ದಡ್‌ದಡ್ ಎನ್ನುವ ಎದೆಯ ಮೇಲೆ ಕೈ ಇಟ್ಟು ಸುಧಾರಿಸಿಕೊಂಡಳು.

ಬಂದವರು ತನಗೂ ಕಲಿಸಿದ ಪ್ರಭಾಕರರೆಂದು ಗೊತ್ತಾದೊಡನೆ ತಲೆ ತಿರುಗಿ, ಕಣ್ಣುಕತ್ತಲೆ ಬಂದಿತ್ತು. ಮಗನ ಮುಂದೆ ಏನೂ ತೋರಿಸಿಕೊಳ್ಳಬಾರದೆನ್ನುವ ಎಚ್ಚರದಿಂದ ಗುರುತು ಹತ್ತದಂತೆ ನಟನೆ ಮಾಡಿದೆ. ಪ್ರಸಂಗವೇ ಹಾಗಿದೆಯಲ್ಲ. ಧೈರ್ಯ ಮಾಡಿ ಹೊತ್ತಿಗೆ ತಕ್ಕ ಮಾತುಗಳನ್ನೂ ಆಡಿದೆ. ಅವರಿಗೂ ನನ್ನ ನೆನಪು ಇರಬಹುದಲ್ಲವೇ? ಇರದೇ ಏನು. ಅವರು ತನಗೆ ಬರಿ ಪಾಠ ಮಾಡಿದವರಲ್ಲ. ತನ್ನನ್ನು ಪ್ರೀತಿಸಿದವರು. ಅವರ ಪ್ರೀತಿಯನ್ನು ಕಣ್ಣಿನಲ್ಲಿ, ನಡವಳಿಕೆಯಲ್ಲಿ ಗುರುತಿಸಿದ್ದೆ. ಆದರೂ ಕಂಡೂ ಕಾಣದಂತೆಯೆ ಇದ್ದೆ. ದಿನ ಕಳೆದಷ್ಟೂ ಅವರ ತಳಮಳ ಹೆಚ್ಚಾಗುತ್ತಿತ್ತು. ಕೊನೆಗೆ ಇಂಗ್ಲೀಷ್ ಕವಿತೆಗಳ ಪುಸ್ತಕ... ಯಾವದೋ ಹೆಸರೂ ಮರೆತುಹೋಗಿದೆ... ಆಗಲೆ ರದ್ದಿಗೆ ಹಾಕಿ ಬಿಟ್ಟೆ. ಆ ಪುಸ್ತಕದಲ್ಲಿ ಚೀಟಿ ಇಟ್ಟು ಕೊಟ್ಟಿದ್ದ ನೆನಪಿದೆ, ಏನು ಬರೆದಿದ್ದರೋ ನೆನಪಿಲ್ಲ. ಅದನ್ನು ಓದಿ ನನಗೆ ಏನೂ ಅನಿಸಿರಲಿಲ್ಲ. ನಗು ಬಂದಿತ್ತು ಅಷ್ಟೇ.

ಒಂದೇ ಊರಾದರೇನಾಯ್ತು, ಅವರ, ನಮ್ಮ ಅಂತಸ್ತೇ ಬೇರೆ ಬೇರೆ. ಅಪ್ಪ ಜಮೀನುದಾರರು. ಕೈಗೊಂದು, ಕಾಲಿಗೊಂದು ಆಳು, ದೊಡ್ಡ ಮನೆ, ಕಾರು, ಕಾಲೇಜು ಕಲಿಕೆ, ಹಾಸ್ಟೆಲ್ ವಾಸ... ಕೈತುಂಬ ಹಣ,ರೂಪ ನೋಡಿ ಬೆನ್ನುಹತ್ತುವ ಹುಡುಗರ ಸಾಲು...ಸಾಲು. ಇಂಗ್ಲೀಷ ಹೇಳುವ ಪ್ರಭಾಕರರ ಜೊತೆ ತಿರುಗಾಡಿದ್ದು, ಇಂಗ್ಲೀಷ್‌ಗಾಗಿ ಅವರಿಂದಾಗುವ ಪ್ರಯೋಜನಕ್ಕಾಗಿ, ಒಂದೇ ಊರವರು ಎನ್ನುವ ಕಾರಣಕ್ಕಾಗಿ ಅದನ್ನೇ ಪ್ರೇಮ ಅಂತ ಕೇಳಿದರೆ ತಾನೇನು ಹೇಳಬೇಕು. ತಲೆ ಯೋಚಿಸುತ್ತಿದ್ದರೂ ಕೈ ಕೆಲಸ ಮಾಡುತ್ತಿತ್ತು. ತಿಂಡಿ ಪ್ಲೇಟಿಗೆ ಹಾಕಿದಳು. ಚಹ ಸೋಸಿದಳು.

***

ಪ್ರೀತಿಸದೆ ಮದುವೆ ಆಗುವ ಗರಜು ತನಗೇನೂ ಇರಲಿಲ್ಲ. 'ನಿಮ್ಮನ್ನು ಪ್ರೀತಿಸೋದಿಲ್ಲ' ಅಂತ ಮುಖದ ಮೇಲೆ ಹೇಗೆ ಹೇಳೋದು. ಆಶೆ ಕರಗಿ ಹೋಗುತ್ತದಲ್ಲ. ತನ್ನ ಬಗ್ಗೆ ಏನು ತಿಳೀತಾರೋ... ತುಂಬಾ ಯೋಚಿಸಿದ್ದೆ. ಒಂದು ಉಪಾಯ ಹೊಳೆದಿತ್ತು. ತಂದೆಯ ಹೆಸರು ಹೇಳಿ "ಅವರು ನಮ್ಮ ಮದುವೆಗೆ ಒಪ್ಪೋದಿಲ್ಲ. ಕೇಳಿ ತುಂಬಾ ಸಿಟ್ಟಾಗಿದ್ದಾರೆ. ನಿಮಗೂ ಬುದ್ಧಿ ಕಲಿಸ್ತೇನೆ ಅಂತ ಧಮಕಿ ಹಾಕಿದ್ದಾರೆ. ದಯವಿಟ್ಟು ನನ್ನ ಮರೆತುಬಿಡಿರಿ. ನಾನೂ ಮರೀಲಿಕ್ಕೆ ಪ್ರಯತ್ನ ಮಾಡ್ತೀನಿ" ಅಂತ ಕಣ್ಣೀರು ತಂದ ಹಾಗೆ ನಟಿಸಿ ಹೇಳಿದೆ. ಅದೇ ಕೊನೆ. ಮುಂದೆ ಮಾತೇ ಎತ್ತಲಿಲ್ಲ. ಅವರ ಮದುವೆ ಆಯಿತೆಂದೂ ಕೇಳಿದೆ.

ಭಾರಿ ಶ್ರೀಮಂತರು, ರೂಪವಂತರು, ಅಧಿಕಾರಸ್ಥರು ಅಂತ ಮೆಚ್ಚಿ ಮೋಹನನನ್ನ ಮದುವೆ ಆದೆ. ಏರಿಕಿ ವಯಸ್ಸಿನೊಳಗ ಕ್ಯಾನ್ಸರ್ ಆಗಿ ಹೋಗಿಬಿಟ್ಟರು. ನನ್ನ ಹಣೆಬರಾ ಕೆಟ್ಟ ಅದ... ಮತ್ತ ಒಂಟಿ ಜೀವನಾ... ಇದು ನನ್ನ ಕರ್ಮ, ಕಣ್ಣೀರು ತುಂಬಿ ಅವಳ ದೃಷ್ಟಿ ಮಂಜಾಯಿತು. ಟ್ರೇ ಹಿಡಿದುಕೊಂಡೇ ಹೊಸ್ತಿಲು ಎಡವಿ ಜೋಲಿ ಹೊಡೆದಳು. ಮಹೇಶ ಓಡಿ ಬಂದು ಆಧಾರ ಕೊಟ್ಟ.

ಚಹದ ಕಪ್ಪು ಕೆಳಗಿಟ್ಟ ಪ್ರಭಾಕರ ಎದ್ದು ನಿಂತು ಕೈ ಮುಗಿದರು. ತಾನು ಪ್ರೀತಿಸಿದ ಹುಡುಗಿ ತನ್ನ ಗುರುತು ಹಿಡಿದ ಸುಳಿವೂ ಕೊಡಲಿಲ್ಲ. ಅಂದರೆ ಅವಳ ಮನದಲ್ಲಿ ತನಗೊಂದಿಷ್ಟು ಜಾಗ ಎಂದೂ ಇರಲಿಲ್ಲ. ಜೊತೆಗೆ ಬಾಳಲು ಬಂದ ಹೆಂಡತಿಯ ಮನದಲ್ಲಿಯೂ ತನಗೀಗ ಸ್ಥಳವಿಲ್ಲ. ಮನೆಗಂತೂ ಹೊರಟಿದ್ದೇನೆ. ಯಾರ ಮನೆ? ಎಲ್ಲಿಗೆ? ಇನ್ನೂ ಎಷ್ಟು ದೂರ... ಭಾರವಾದ ಕಾಲುಗಳನ್ನು ಎತ್ತಿ ಎತ್ತಿ ಹಾಕುತ್ತಿದ್ದರು ಪ್ರಭಾಕರ.

■■

# ಬೆಳಗು ಬೈಗಿನಾಟ

ಚಪ್ಪಲಿಗಳೊಡನೆ ಕೋಲಿನ ಸದ್ದು-ಚಪ್ ಚಪ್... ಟಕ್... ಟಕ್... ಟಕ್. ನೀಳ ಬೆರಳುಗಳಿಂದ ಬಿಳಿ ರಂಗೋಲಿ ಧಾರೆ ಅಂಗಳದಲ್ಲಿ ಇಳಿಯುತ್ತಿತ್ತು. ಮಾಹೇಶ್ವರಿ ತಲೆ ಎತ್ತಿ ನೋಡಿದಳು. ಮಾವನವರು ನಿಧಾನವಾಗಿ ಗೇಟಿನ ಕೀಲಿ ತೆಗೆದು ಗೋಡೆಯ ಮಾಡಿನಲ್ಲಿಟ್ಟು ರಸ್ತೆಗೆ ಹೆಜ್ಜೆ ಇಡುತ್ತಿದ್ದರು.

ಚುಕ್ಕೆ ಒಂದು... ಆಕಾಶದಲ್ಲಿ ಮೂಡುತ್ತಿರುವ ಬಣ್ಣಬಣ್ಣದ ಚಿತ್ತಾರಕ್ಕಿಂತ ಸುಂದರವಾದ ರಂಗೋಲಿ ತನ್ನಿಂದ ಹಾಕಲು ಸಾಧ್ಯವಿಲ್ಲ. ಈ ಮನೆಗೆ ಬಂದ ಇಪ್ಪತ್ತೆರಡು ವರ್ಷಗಳಲ್ಲಿ ನೂರಾರು ಹೊಸ ಹೊಸ ರಂಗೋಲಿ ಕಲಿತು ಹಾಕಿದ್ದಾಳೆ. ಬಣ್ಣ ತುಂಬಿದ್ದಾಳೆ.

ಚುಕ್ಕೆ ಎರಡು ..... ಭರ್ರ್‌ರ್ರ್‌ರ್ ಆರು ಗಂಟೆಯ ಮೊದಲ ಬಸ್ಸು ನಗರದೊಳಕ್ಕೆ ಹೋಯಿತು. ಹಿಂದೆಯೇ ಇನ್ನೊಂದು... ಶುಭ್ರವಾಗಿ ನಳನಳಿಸುವ ಹೂವಿನಂಥ ಮಕ್ಕಳು... ತಾನು ನೋಡುತ್ತಿದ್ದ ಹಾಗೆ ಅದೇ ರಸ್ತೆ... ಅಂಥದ್ದೇ ಹಳದಿ ಬಸ್ಸು, ಮಕ್ಕಳು ಬದಲಾಗಿರಬಹುದು ಅಷ್ಟೇ. ತನ್ನ ರಾಜಿ ಕೂಡ ಕೆಂಪು ಸ್ವೆಟರು, ಹಳದಿ ಕುಲಾವಿ, ಯುನಿಫಾರ್ಮ ಹಾಕಿಕೊಂಡು ಹೀಗೇ ಹೋಗುತ್ತಿದ್ದದ್ದು ಇನ್ನೂ ಮೊನ್ನೆ ಮೊನ್ನೆ ಕಂಡ ಹಾಗಿದೆ... ಬೆರಳ ನಡುವಿನಿಂದ ಬಿಳಿಯ ಗೆರೆ ಇಳಿದು ಚಿತ್ರ ಪೂರ್ತಿ ಆಯಿತು. ಇನ್ನೊಮ್ಮೆ ಆಕಾಶದತ್ತ ನೋಡಿ ನಸುಕೆಂಪು ಬಣ್ಣ ಕಣ್ತುಂಬ ತುಂಬಿಕೊಂಡ ಮಾಹೇಶ್ವರಿ ಒಳಗೆ ನಡೆದಳು.

ಹಾಲು ಕೆನೆ ಬಣ್ಣದ ದೇವರ ಜಗುಲಿ, ಕರೀಮರದ ಮಂಟಪದಲ್ಲಿ ಬೆಳ್ಳಿಯ ಶಿವಲಿಂಗ, ಥಳಗುಟ್ಟುವ ಮಜ್ಜನಸಾಲಿ, ತುಂಬಿದ ಕೊಡದ ನೀರಿನ ತಂಬಿಗೆ, ತೋಟದಲ್ಲಿ ಅರಳಿದ ನಂದಿಬಟ್ಟಲ, ಲಿಂಗದ ಹೂವು, ಡೇರೆ, ದಾಸವಾಳ ತುಂಬಿದ ಹೂಬುಟ್ಟಿ, ಎರಡು ಪುಟ್ಟ ಬೆಳ್ಳಿಯ ಬೆಳಗುತ್ತಿರುವ ಸಮೆಗಳು... ಗುರುಸಿದ್ದಪ್ಪನವರ ಲಿಂಗಪೂಜೆಗೆ ಎಲ್ಲ ಅಣಿ ಮಾಡಿಟ್ಟ ಮಾಹೇಶ್ವರಿ ಅಡಿಗೆ ಮನೆಗೆ ಹೊರಡುವ ಮೊದಲು ಬಾಗಿಲಲ್ಲಿ ನಿಂತು ಕೈ ಮುಗಿದಳು. 'ಶಿವಾ ಶಿವಾ ಈ ಸಮಸ್ಯಾ ಹ್ಯಾಂಗರೆ ನೀನs ಬಿಡಸಪ್ಪಾ'. ಮಹೇಶ ಎದ್ದು ಅಟ್ಟ ಇಳಿದು ಬರುತ್ತಿದ್ದ. ಅಂಗಳದಲ್ಲಿ ಸೂರ್ಯಕಿರಣ ರಂಗೋಲಿಯನ್ನು ಬೆಳಗಿದ್ದವು.

ಗಂಡ, ಮಾವನವರಿಗೆ ಬೆಳಗಿನ ಉಪಾಹಾರ ನೀಡಿದ ತಾಯಿ ಮಗಳನ್ನು ಎಬ್ಬಿಸಲು ನಡೆದಳು. "ಮಹೀ, ರಾಜೂ ರಾತ್ರಿ ಭಾಳ ಹೊತ್ತ ಓದತಿದ್ಲು. ಆಕಿನ್ನ ಈಗs ಎಬ್ಬಸಬ್ಯಾಡಾ.

ಪಾಪ ಮಲಕೊಳ್ಲಿ ಬಿಡು" ಮಹೇಶ ಹೆಂಡತಿಗೆ ಹೇಳಿದ.

"ಒಂಬತ್ತ ಗಂಟೇಕ್ಕ ಸ್ಪೆಶಲ್ ಕ್ಲಾಸ್‌ಗೆ ಹೋಗಬೇಕು ಅಂತಿದ್ಲು. ಇದು ಫೈನಲ್ ಇಯರ್ ಅಲ್ಲ. ಅಭ್ಯಾಸ ಭಾಳ ಇರತದ. ರಾತ್ರಿ ಓದತೇನಿ ಅಂತಾಳ. ಹಾಂಗs ರಿತೇಶನ್ನೂ ಎಬ್ಬಸತೇನಿ ಕಾಲೇಜಿಗೆ ಹೊತ್ತಾಗತದ"

ಮಗಳ ಮೈಯ ಕೆಳಗೆ ಮಡಚಿ ಬಿದ್ದ ಪುಸ್ತಕವನ್ನು ಎತ್ತಿಟ್ಟು ಕಿಟಕಿಯ ಪರದೆ ಸರಿಸಿದಾಗ ಬೆಳಕು ನುಗ್ಗಿ ಬಂದು ಕೋಣೆ ತುಂಬಿತು. 'ರಾಜೀs ರಾಜೂ'. ಊಹುಂ ಎಚ್ಚರವಿಲ್ಲ. ಬಿಳಿ ದುಪ್ಪಟಿಯಲ್ಲಿ ಕೆಂಪು ತುಟಿಗಳ, ಕಪ್ಪು ಕೂದಲಿನ, ಮುಚ್ಚಿದ ಕಣ್ಣುಗಳ ಹಿಂದೆ ಮುಗುಳು ನಗುವ ಮಲ್ಲಿಗೆ ತೂಕದ ಮುದ್ದು ಮಗು. ಮನಸ್ಸು ಹಿಗ್ಗಿನಲ್ಲಿ ಓಲಾಡಿತ್ತು. ಮತ್ತೊಂದು ಕ್ಷಣದಲ್ಲಿ ಮೊದಲ ಮಗು ಹೆಣ್ಣು ಎಂದಾಗ ಒಳಗೆ ನಿರಾಶೆಯಾಗಿತ್ತು. ಅತ್ತೆ ಮಾವ ಏನನ್ನುವರೋ ಎನ್ನುವ ಒಳಗುದಿ. ಮಹೇಶನಿಗೆ ಬೇಸರವಾಗುವದೆಂದು ಮನವು ಚಿಂತೆಯ ಬೀಡಾಗಿತ್ತು.

'ನನ್ನ ಹಾಂಗ ನಿನಗೂ ಹೆಣ್ಣs ಹುಟ್ಟಿತಲ್ಲವಾ' ಎಂದು ನಿಟ್ಟುಸಿರು ಬಿಟ್ಟಿದ್ದಳು ಅವ್ವ. ತನ್ನ ತಕ್ಷಣದ ನಿರಾಶೆಗೆ, ವ್ಯಥೆಗೆ ಕಾರಣ ತವರುಮನೆ ತುಂಬಿದ್ದ ಹೆಣ್ಣು ಬಳಗವೇ. ನಾಲ್ಕು ಹೆಣ್ಣಿನ ಮೇಲೆ ತಮ್ಮ ಹುಟ್ಟಿದ್ದ. ಎಲ್ಲರ ಕಣ್ಮಣಿಯಾಗಿ. ಆಮೇಲೆ ಇನ್ನೊಬ್ಬ. ಅವ್ವನಿಗೆ ತೃಪ್ತಿಯಾಗಿತ್ತು. ಮನೆಯಲ್ಲಿ ತಾನೇ ದೊಡ್ಡವಳು. ತಮ್ಮಂದಿರ ಸ್ನಾನ, ಹಾಲು, ಊಟ, ಆಟ, ನಿದ್ದೆ ಎಲ್ಲ ಕೆಲಸ ತನ್ನದೇ. ಕಾರಣ ಅವ್ವ ಒಮ್ಮೆ ಬಸುರಿ, ಒಮ್ಮೆ ಬಾಣಂತಿ. ಮೆಲುದನಿಯ ಜೋಗುಳದಿಂದ ಚಿಕ್ಕವರಿಗೆ ನಿದ್ದೆ ಮಾಡಿಸುವದೆಂದರೆ ತನಗೆ ಜೀವ. ಆದರೆ ಕೇಳಿ ಸಂತೋಷಪಡಲು ಒಂದು ಚಿಕ್ಕ ರೇಡಿಯೊ ಕೂಡ ಮನೆಯಲ್ಲಿರಲಿಲ್ಲ. ಗ್ರಾಮೀಣ ಬ್ಯಾಂಕಿನಲ್ಲಿ ಕ್ಲಾರ್ಕ್ ಆಗಿದ್ದ ಅಪ್ಪ. ಬರುವ ಸಂಬಳದಲ್ಲಿ ಸಂಸಾರ ನಡೆಸಲು ಒದ್ದಾಡುವ ಅವ್ವ, ಯಾರನ್ನು ಕೇಳಬೇಕು? ನೆರೆಮನೆಯಿಂದ ತೂರಿ ಬರುವ ರೇಡಿಯೊ ದನಿಗೆ ಮರುಳಾಗಿ ಕೆಲಸ ಮುಂದೆ ಸಾಗದೆ ಅವ್ವನಿಂದ ಬೈಗುಳ ಏರಿಸಿಕೊಂಡದ್ದು ಎಷ್ಟೋ ಸಲ. ತನ್ನ ಕ್ಲಾಸಿನ ಹುಡುಗಿ ಪಂಕಜ ಎಷ್ಟು ಚೆನ್ನಾಗಿ ಹಾಡುತ್ತಿದ್ದಳಲ್ಲ! ಅವಳ ಸಂಗೀತ ಪಾಠ ನಡೆಯುತ್ತಿದ್ದಾಗ ತಮ್ಮನನ್ನು ಆಡಿಸುವ ನೆವದಲ್ಲಿ ಅಲ್ಲಿಯೂ ಹೋಗಿ ಕೂಡುತ್ತಿದ್ದಳು.

ಅವ್ವನ ಆರನೆಯ ಬಾಣಂತನ ಮುಗಿಯುವ ಮೊದಲೇ ಅಪ್ಪ ಖುಷಿಯಿಂದ ಬಂದು ಹೇಳಿದ್ದರು. 'ಸರಸ್ವತೀ, ನಮ್ಮ ಮಾಹೇಶ್ವರಿನ್ನ ನೋಡಿ ಹೋಗಿದ್ದರಲ್ಲ ಗುಲ್ಬರ್ಗಾದ ಗುರುಸಿದ್ದಪ್ಪನೋರು, ಅವರ ಮಗಾ ಮಹೇಶ ಒಪ್ಪ್ಯಾರಂತೆ. ಮಾತಾಡಲಿಕ್ಕೆ ಬರತೀವಿ ಅಂತ ಬರದಾರು'. ಅವ್ವನ ಮುಖ ಅರಳಿದ ಹೂವಾಗಿತ್ತು. ಮೊದಲೇ ಚೆಲುವೆ. ತಾನೂ ಅವಳಂತೆಯೇ ಎಂದು ನೋಡಿದವರ ಅನಿಸಿಕೆ.

"ಆಯ್ತು. ಅಂತೂ ಒಂದು ಭಾರ ಇಳದಂಗಾತು. ಒಬ್ಬರಲ್ಲ ಇಬ್ಬರಲ್ಲ ನಾಲ್ಕು ಹೆಣ್ಣು. ಇವರ್ನ ಹ್ಯಾಂಗ ದಾಟಿಸಬೇಕಪಾ ಅಂತ ಚಿಂತಿ ಆಗಿ ನಿದ್ದೀನ ಬರತಿದ್ದಿಲ್ಲ ನನಗ. ಅಲ್ಲಾs ಅವರು ಶ್ರೀಮಂತರು ರೊಕ್ಕಾ ಪಕ್ಕಾ ಭಾಳ ಕೇಳತಾರೇನು ?"

'ಇಲ್ಲಂತೆ. ನಡುವಿನವರು ಹೇಳ್ಯಾರ, ಅವರ ಮಗನಿಗೆ ಮನಸ್ಸಿಗೆ ಬಂದರ ಸಾಕಂತ ಅಂದರು. ಮುಂದಿನ ವಾರ ಬರ್ರಿ ಅಂತ ಬರಿತೇನಿ.'

ನಾಲ್ಕಾರು ವರ ಮಹಾಶಯರು ನೋಡಿ ಹೋದ ಮೇಲೆ ಈ ಪರೀಕ್ಷೆಯಲ್ಲಿ ಪಾಸಾಗಿದ್ದಳು. ವರದಕ್ಷಿಣೆ ಬೇಡದ ವರ ಸಿಕ್ಕಿದ್ದಕ್ಕೆ ಅವ್ವ ಅಪ್ಪನ ಹಿಗ್ಗು ಹಿಡಿಸಲಾಸಲ್ಲ. ಕಾಲು ನೆಲದ ಮೇಲೇ ನಿಂತಿರಲಿಲ್ಲ. ತಾನಿನ್ನೂ ಓದಬೇಕು, ಸಂಗೀತ ಕಲಿಯಬೇಕು. ನೌಕರಿ ಹಿಡಿದು ಅಪ್ಪನಿಗೆ ಸಹಾಯ ಮಾಡಬೇಕು, ಈಗಲೇ ಮದುವೆ ಬೇಡ ಎನ್ನುವ ಮಾತುಗಳನ್ನೆಲ್ಲ ಗಂಟಲಲ್ಲೇ ನುಂಗಿ, ಮೂಕಳಂತೆ ತಲೆ ಬಾಗಿ ತಾಳಿ ಕಟ್ಟಿಸಿಕೊಂಡು ಈ ಮನೆಯ ಹೊಸ್ತಿಲು ಮೆಟ್ಟಿದ್ದಳು, ಎಲ್ಲರೂ ತನ್ನ ದೈವ ಕೊಂಡಾಡುವವರೇ. ಆದರೆ ತನ್ನ ಆಸೆಯ ಗೋರಿಗಳ ಮೇಲೆ ಈ ಮನೆ ನಿಂತದ್ದು ಯಾರಿಗೆ ಗೊತ್ತಿದೆ? ತನ್ನನ್ನು ಅರ್ಥ ಮಾಡಿಕೊಳ್ಳುವವರಾದರೂ ಯಾರು? 'ಅವ್ವಾs' ರಾಜೇಶ್ವರಿಯ ಕರೆಯಿಂದ ಎಚ್ಚೆತ್ತ ಮಾಹೇಶ್ವರಿ ವಾಸ್ತವ ಜಗತ್ತಿಗೆ ಬಂದಳು. ತುಂಬಾ ದೈನ್ಯಳಾಗಿ 'ಅವ್ವಾ ನಾ ಒಂದ ಮಾತ ಹೇಳ್ತೀನಿ ಕೇಳ್ತಿಯಾ' ಎಂದ ಮಗಳನ್ನು ತಾಯಿ ನಿಟ್ಟಿಸಿದಳು ಮೂಕಳಾಗಿ.

ಅವಳು ಹೇಳುವದೇನು ತನಗೆ ಗೊತ್ತಿಲ್ಲದ್ದೇ? ಅದೇ... ಅದೇ ಮಾತು ಇಪ್ಪತ್ತು ವರ್ಷಗಳ ಹಿಂದೆ ತಾನು ಹೇಳಬೇಕೆಂದರೂ ಹೇಳಲಾರದೇ ಹೋದದ್ದು. "ಅವ್ವಾs ನನಗ ಈಗs ಮದುವಿ ಬ್ಯಾಡಾ. ನಾ ಇನ್ನೂ ಮುಂದ ಎಮ್.ಬಿ.ಎ. ಓದಬೇಕು. ನೌಕರಿ ಹಿಡಿದು ಆರ್ಥಿಕವಾಗಿ ಸ್ವತಂತ್ರ ಆಗಬೇಕು ಅಂತೀನಿ. ಅಪ್ಪಗ ಅಜ್ಜಗ ಹೇಳವಾ" ರಾಜಿ ಆಸೆ ಕಣ್ಣುಗಳಿಂದ ಅಂಗಲಾಚುತ್ತಿದ್ದಳು.

"ರಾಜೀ, ಎಲ್ಲಾ ಗೊತ್ತಿದ್ದೂ ಕೇಳ್ತಿಯಲ್ಲ. ನಿಮ್ಮಪ್ಪ ನನ್ನ ಮಾತ ಎಂದಾರ ಕೇಳ್ಯಾರೇನು? ಅಜ್ಜನ ಮುಂದ ನಿಂತು ಹೇಳೂವಷ್ಟು ಧೈರ್ಯಾ ಅಂತೂ ನನಗೆ ಇನ್ನೂ ಬಂದಿಲ್ಲ. ನನಗೂ ಒಂದ ಮನಸ್ಸ ಅದ, ವಿಚಾರ

ಅದ, ಅಭಿರುಚಿ ಅದ ಅಂತ ಯಾರೂ ಎಂದೂ ತಿಳೀಲಿಲ್ಲ. ರಾಜೀ" ಹೊಟ್ಟೆಯಲ್ಲಿಯ ಗುಟ್ಟನ್ನು ಇಂದು ಬಿಚ್ಚಿ ಇಟ್ಟಿದ್ದಳು ಮಾಹೇಶ್ವರಿ ಎದೆಯುದ್ದ ಬೆಳೆದ ಮಗಳ ಮುಂದೆ. ಮಾತಿನೊಡನೆ ಎರಡು ಹನಿ ಕಣ್ಣೀರೂ ಇಳಿಯಿತು ಕೆನ್ನೆಯ ಮೇಲೆ.

ರಾಜಿ ಮೊದಲೇ ಯೋಚಿಸಿದ್ದಳೇನೋ "ಅವ್ವಾ, ನಾನು ಇವತ್ತ ಪ್ರಭಾ ಅತ್ತ್ಯಾಗ ಫೋನ್ ಮಾಡ್ತೀನಿ, ಲಗೂನ ಬರ್ರಿ ಅಂತ. ಆಕಿ ನನ್ನ ಅರ್ಥಾ ಮಾಡಿಕೋತಾಳ"

"ಹೂಂ, ಹಾಂಗ ಮಾಡು. ವಿಷಯ ಏನೂ ಅಂತ ಸ್ವಲ್ಪ ಸೂಚನೆ ಕೊಡು. ಪ್ರಭಾ ತಿಳುವಳಿಕಿ ಇದ್ದಾಕಿ ಅದಾಳ. ಆಕಿಗೆ ನಿನ್ನ ಮ್ಯಾಲೆ ಭಾಳ ಪ್ರೀತಿ. ತಂಗಿ ಮಾತು ಇವರು, ಮಾವನವರು ಕೇಳಿದರೂ ಕೇಳಬಹುದು."

ಕೆಳಗಿನಿಂದ ಅಂಗಡಿಗೆ ಹೊರಟು ನಿಂತ ಮಹೇಶ ಕೂಗುತ್ತಿದ್ದ. ಗಂಡನ ಮಾತಿಗೆ ಎದುರುತ್ತರ ಕೊಡುವ ಅಭ್ಯಾಸವಿಲ್ಲದ ಮಾಹೇಶ್ವರಿಯ ಕಣ್ಣಲ್ಲಿ ಮತ್ತೆ ನೀರು ಚಿಮ್ಮಿದವು.

***

ಸಂಜೆಯ ವಾಕಿಂಗ್ ಮುಗಿಸಿ ಬಂದ ಗುರುಸಿದ್ದಪ್ಪನವರಿಗೆ ಹಾಲು ತಂದವಳು ಪ್ರಭಾ. ಮಗಳನ್ನು ನೋಡಿ ಅಚ್ಚರಿಯಿಂದ ಕೇಳಿದರು. "ಯಾವಾಗ ಬಂದಿ ಪ್ರಭಾ? ವಕೀಲರೂ ಬಂದಾರೇನು?"

"ಇಲ್ಲಪಾ. ನಾ ಒಬ್ಬಾಕೆ ಬಂದೀನಿ. ನಿಮ್ಮೆಲ್ಲಾರ ಜೀವ ನೆನಸತಿತ್ತು ಅದಕ್ಕ ಬಂದೆ"

"ನಿನ್ನ ವಕೀಲಕಿ ಹ್ಯಾಂಗ ನಡದದ. ಸಂಜೀವ ಆರಾಮ ಅದಾನೇನು?"

"ಸಂಜೀವ ಹದಿನೈದು ದಿನಾ ಎನ್.ಸಿ.ಸಿ. ಕ್ಯಾಂಪಿಗಂತ ಹೋಗ್ಯಾನ, ನನ್ನ ಪ್ರ್ಯಾಕ್ಟೀಸ್ ಛೊಲೋ ನಡದದ. ಏನಾದರೂ ಸಮಸ್ಯಾ ಬಂದರ ಇವರೂ ಸಹಾಯ ಮಾಡ್ತಾರ. ಅವರ ಅಸಿಸ್ಟಂಟ ಆಗೇ ಕೆಲಸಾ ಮಾಡ್ತೀನಲ್ಲ ನಾನು. ಅಬ್ಬಬ್ಬಾ ಎಂಥೆಂಥಾ ಕೇಸು ಬರತಾವಂದಿ. ಹೆಣ್ಣಮಕ್ಕಳ ಮ್ಯಾಲೆ ಎಷ್ಟೆಷ್ಟು ಅನ್ಯಾಯಾ, ಅತ್ಯಾಚಾರ ನಡೀತದ. ಈಗೀಗಂತೂ ಇನ್ನೂ ಹೆಚ್ಚಾಗೇದ. ನಾ ಈಗ ಬಂದದ್ದೂ ಅಂಥಾದ್ದ ಒಂದು ಕೇಸಿನ ಸಲುವಾಗಿ ಅಂತ ತಿಳೀರಿ. ಅವರದೂ ಒಂದ ಜೀವ ಅಂತ ಈ ಗಂಡಸ್ರು ತಿಳಕೊಳ್ಳೂದೇ ಇಲ್ಲ."

ಅಡಿಗೆ ಮನೆಯಿಂದ ಅವಳ ಮಾತು ಕೇಳುತ್ತಿದ್ದ ಮಾಹೇಶ್ವರಿ ಮಗಳ ಕಂದಿದ ಮುಖ ನೋಡಿ ನಕ್ಕಳು.

"ಹಾಂ, ಹಾಂ. ಬ್ರೇಕ್ ಬ್ರೇಕ್... ಏನು ಪ್ರಭಾ ಭಾಳ ಜೋರ ನಡದದ ಭಾಷಣದ ತಾಲೀಮು ಅಪ್ಪನ ಮುಂದ. ಗಂಡಸರ್ನ ಬಯ್ಯುದ ನಿನ್ನ ಉದ್ಯೋಗ ಆಗೇದಲ್ಲ. ಮರತ ಬಿಟ್ಟಿದ್ದೆ. ಹಂ. ಇರಲಿ ಬಿಡು ನೀ ಯಾವಾಗ ಬಂದಿ ಊರಿಂದ?"

"ಅಣ್ಣಾ ನೀ ಯಾವಾಗ ಒಳಗ ಬಂದಿ ಸಪ್ಪಳಿಲ್ಲದ ನಾ ನೋಡಲೇ ಇಲ್ಲ"

"ಅಲ್ಲಾ ವಕೀಲ ಬಾಯವರಿಗೆ ನಮ್ಮಂಥಾ ತಕ್ಕಡೀ ತಮ್ಮಣ್ಣಗೋಳ ಹ್ಯಾಂಗ ಕಾಣಬೇಕು. ಏ ಮಹೀ ನನಗೂ ಬೋರ್ನವಿಟಾ ಇಲ್ಲೇ ತಾ"

"ನೀವು ಗಂಡಸರು ಯಾವಾಗಲೂ ಆರಾಮ ಕೂತು ಸೇವಾ ಮಾಡಿಸಿಕೊಳ್ಳೂದರಾಗ ಇರತೀರಿ. ಅತ್ತಿಗಿ ಗಿಡಕ್ಕ ನೀರು ಹಾಕಾಕ ಹೋಗ್ಯಾರ ತ್ವಾಟದಾಗ. ಹಾಲು ನಾನ ತರ್ತೀನಿ. ನಿನ್ನ ಪ್ರೀತಿ ರವಾದ ಉಂಡಿ ಮಾಡಿಕೊಂಡ ಬಂದೀನಿ."

"ಉಂಡಿ ಅಂದ ಕೂಡಲೆ ನೆನಪಾತು ನೋಡ ಪ್ರಭಾ. ನಾ ನಿನಗ ಪತ್ರಾ ಬರಿಯೂವವ ಇದ್ದೆ. ನೀನs ಬಂದಿ ಭೊಲೋ ಆತು. ಮಹೇಶ ಮಗಳ ಮದುವೀ ಉಂಡಿ ಹಾಕಾಂವ ಅದಾನ" ಗುರುಸಿದ್ದಪ್ಪ ಗೆಲುವಿನ ನಗೆ ನಕ್ಕರು.

"ಏನು, ರಾಜೀಗೆ ಮದುವೀನs. ಅಷ್ಟು ಸಣ್ಣ ಹುಡುಗೀಗೆ?" ಪ್ರಭಾ ಏನೂ ಅರಿಯದವಳಂತೆ ಅಚ್ಚರಿ ತೋರಿದಳು.

"ಸಣ್ಣ ಹುಡುಗೀ? ಹತ್ತೊಂಬತ್ತು ತುಂಬಿದವು ಮೊನ್ನೇ. ಬಿ.ಕಾಂ. ಕಡೀ ವರ್ಷ. ಸಣ್ಣಾಕಿ ಏನು ರಾಜೇಶ್ವರಿ ನಿನ್ನ ದೃಷ್ಟಿಯೊಳಗ?" ಮಹೇಶ ತಂಗಿಯ ಮೇಲೆ ಜೋರು ಮಾಡಿದ.

"ಆಕಿ ಮನಸ್ಸು ಇನ್ನೂ ಮದುವೀಗೆ ತಯಾರ ಇದ್ದಂಗಿಲ್ಲ ಹೋಗಲಿ, ಈ ಮದುವೀಗೆ ಅತ್ತಿಗಿ ಏನಂತಾಳ?"

"ಭೊಲೋ ಹೇಳಿದಿ. ಆಕಿಗೇನ ತಿಳೀತದ,ಆಕಿ ಏನ ನಿನ್ನಂಗ ಓದಿದಾಕೇನ, ವಕೀಲತೇನ. ಆಕಿನ್ನೇನ ಕೇಳೂದು"

"ಕಲಿಸಿದ್ದರ ಆಕೀನೂ ಇಂಜಿನಿಯರೋ, ವಕೀಲತೀನೊ ಆಗತಿದ್ದಳಲ್ಲ!" ತುಟಿಯ ತುದಿಯವರೆಗೆ ಬಂದ ಮಾತನ್ನು ನುಂಗಿದ ಪ್ರಭಾ, ಅಪ್ಪ, ಅಣ್ಣನನ್ನು ಇಂಥ ಹೊತ್ತಿನಲ್ಲಿ ಸಿಟ್ಟಿಗೆಬ್ಬಿಸಬಾರದೆನ್ನುವ ಚತುರೆ. ಹುಡುಗ ಏನು ಮಾಡ್ತಾನ" ಮಾತು ಮುಂದುವರೆಸಿದಳು.

"ಹಾಂಗ ಕೇಳು" ಹುರುಪಿನಿಂದ ಮಹೇಶ ವಿವರಿಸಿದ: "ಅಜಯಕುಮಾರ ಅಮೇರಿಕಾದಾಗ ಕಂಪ್ಯೂಟರ್ ಎಂಜಿನಿಯರ ಅದಾನ. ಮನೀಯವರು ಅನುಕೂಲವಂತರು. ಒಬ್ಬನs ಮಗಾ. ಯಾವ ಜವಾಬ್ದಾರೀನೂ ಇಲ್ಲಾ. ಮದುವಿ ಮಾಡಿಕೊಂಡು ರಾಜಿನ್ನೂ ಕರಕೊಂಡು ಹೋಗ್ತಾನ. ಜುಂ ಅಂತ ಆರಾಮ ಚೈನಿ ಕಾರಿನ್ಯಾಗ ಅಡ್ಡಾಡತ ಸುಖದಿಂದ ಇರತಾಳ" ಮಹೇಶ ಕನಸಿನ ಕುದುರೆಯ ಬೆನ್ನೇರಿದ್ದ.

"ಅಣ್ಣಾs, ಅಪ್ಪಾ ನಾನು ಶೋಷಣೆ, ಅನ್ಯಾಯ ಅಂತ ಭಾಷಣಾ ಮಾಡ್ತೀನಿ ಅಂತ ಟೀಕಾ ಮಾಡ್ತೀರಿ. ನಿಮಗ ಎಲ್ಲಾ ನಗಚಾಟಗಿ ಮಾತು. ಆದರ ರಾಜೀ ಜೀವನದ ಪ್ರಶ್ನ ಅದ ಅಂತ ನೀವು ವಿಚಾರ ಮಾಡೂದಿಲ್ಲ. ಪುರುಷಪ್ರಧಾನ ಸಮಾಜದಾಗ ಅನ್ಯಾಯದ ವಿರುದ್ಧ ನಾವೆಲ್ಲ ಅಂದರ - ಜಾಗ್ರತ ಮಹಿಳೆಯರು... ಮೆರವಣಿಗಿ, ಧರಣಿ ಸತ್ಯಾಗ್ರಹ ಎಲ್ಲಾ ಮಾಡ್ತೀವಿ. ಆದರ ಅದs ಅನ್ಯಾಯ ನಾನು ಹುಟ್ಟಿದ ಮನಿಯೊಳಗ ನಡಿಯೂದು ನೋಡಿ ನನಗ ನಾಚಿಕಿ ಬರ್ತದ. ಒಂಬತ್ತು ತಿಂಗಳು ಹೊತ್ತು, ಹೆತ್ತ ತಾಯಿನ್ನ ಮಗಳ ಮದುವೀ ಬಗ್ಗೆ ಕೇಳಲಾರದ್ದು, ಗಂಡನ ಕೈ ಹಿಡಿದು ಮುಂದೆ ಬಾಳೇ ಮಾಡುವ ಹುಡುಗೀಗೆ ಏನ ತಿಳೀತದ ಅನ್ನೂದು ನಿಮ್ಮಂಥಾ ಗಂಡಸರ ದೌರ್ಜನ್ಯ ಅನ್ನೂದ ಮೊದಲ ತಿಳಕೊಳ್ರಿ."

"ಅಲ್ಲ ಪ್ರಭಾ, ರಾಜೀ ಜೀವನ ಹಾಳಾಗಲಿ ಅಂತ ಮದುವೀ ಮಾಡತೀವೇನ ನಾವು" ಗುರುಸಿದ್ದಪ್ಪನವರು ತುಸು ಸಿಟ್ಟಿನಿಂದಲೇ ಕೇಳಿದರು.

ಪ್ರಭಾ ಸಹನೆ ಕಳೆದುಕೊಳ್ಳಲಿಲ್ಲ. "ಅಪ್ಪಾs, ಸ್ವಲ್ಪ ಶಾಂತ ಮನಸ್ಸಿನಿಂದ ಸಾರಾಸಾರ ವಿಚಾರ ಮಾಡ್ರಿ. ವರಾ ಅಮೆರಿಕಾದಾಗ ಕೆಲಸಾ ಮಾಡ್ತಾನ. ಭಾಳ ಶ್ರೀಮಂತ ಆಗ್ತಾನ ಅಂತ, ಶ್ರೇಷ್ಠ ವರಾ ಅಂತ ನೀವಿಬ್ಬರೂ ತಿಳಕೊಂಡೀರಿ. ಅಂವಾ ಅಲ್ಲೇ ಉಳೀಲಿಕ್ಕೆ ಮನಸ್ಸು ಮಾಡಿದರ ಯಾರೂ ಏನೂ ಮಾಡಲಿಕ್ಕೆ ಸಾಧ್ಯ ಇಲ್ಲ. ಮಗಳು ಕಡೀ ತನಕಾ ದೂರ ಆಗ್ತಾಳ. ಅವಳಿಗೆ ಹುಟ್ಟೂ ಮಕ್ಕಳು ಸುದ್ದಾ ನಮಗೆಲ್ಲಾ ಪರಕೀಯರು ಆಗ್ತಾರ. ವಿಚಾರ ಮಾಡೀರೇನು? ದಿನಮಾನಾ ಹಿಂಗs ಇರೂದಿಲ್ಲ. ವಯಸ್ಸು ಆದಮ್ಯಾಲೆ ಅವರಿಗೆ ಎಷ್ಟು ಸಮಸ್ಯಾ ಬರತಾವ. ಪರದೇಶದೊಳಗ ಅವರು ಪರದೇಶೀನ ಆಗ್ತಾರ."

"ಇತ್ತಿತ್ತಲಾಗ ಎಷ್ಟೋ ಮಕ್ಕಳು ವಿದೇಶದೊಳಗ ಇರ್ತಾರಲ್ಲ. ಅವರೆಲ್ಲಾ ಸುಖದಿಂದ ಇರೂದಿಲ್ಲೇನು?" ತನ್ನ ನಿರ್ಣಯ ಸೋಲುತ್ತಿದ್ದ ಬಗ್ಗೆ ಸಿಟ್ಟು ಬಂದಿತ್ತು ಮಹೇಶನಿಗೆ.

"ಹೌದು, ಮದುವಿ ಮಾಡಿಕೊಂಡು ವಿದೇಶಕ್ಕ ಕರಕೊಂಡು ಹೋಗ್ತಾರ. ಮುಂದ ಅವರು ಹ್ಯಾಂಗ ಜೀವನಾ ನಡಸ್ತಾರ ಎಷ್ಟ ಸಮಸ್ಯಾ, ಕಷ್ಟ ಬರ್ತಾವ ಅನ್ನೂದು ನಿಮಗ ಗೊತ್ತಾಗ್ತದ ಏನು? ಮುಖ್ಯ ಹುಡುಗನ ಗುಣ, ಸ್ವಭಾವದ ಬಗ್ಗೆ ನಿಮಗ ಏನು ಗೊತ್ತದ. ನನ್ನ ಗುರುತಿನ ಒಂದಿಬ್ಬರ ಹುಡುಗಿಯರ ಜೀವನಾನೇ ಹಾಳಾಗೇದ. ಇಲ್ಲಿಂದ ಮದುವಿ ಮಾಡಿಕೊಂಡು ಹೋದಮ್ಯಾಲೆ ಹುಡುಗೀಗೆ ಗೊತ್ತಾಯ್ತು ಗಂಡ ಮೊದಲೇ ಅಲ್ಲೇ ಒಂದು ಮದುವೀ ಮಾಡಿಕೊಂಡಾನ ಅಂತ. ಶಾಕ್ ಆಯ್ತು. ಅವಳ ಬದುಕು ನರಕ ಆಯ್ತು. ಹುಡುಗಿ ಸ್ವಲ್ಪ ಕಲತಾಕಿ ಇದ್ಲು. ಧೈರ್ಯಾ ಮಾಡಿ ಯಾರ್‍ಯಾರದೋ ಸಹಾಯ ತೊಗೊಂಡು ಹಿಂದುಸ್ಥಾನಕ್ಕ ತಿರಗಿ ಬಂದ್ಲು. ತಂದಿ-ತಾಯಿಗೆ ಒಂದ ಸಮಸ್ಯಾ ಆದ್ಲು. ಆಕೀಗೆ ಹೊಸಾ ಜೀವನಾ ಯಾರ ಕೊಡ್ತಾರ ಹೇಳ್ರಿ. ಹಿಂದಿನ ಕಹಿ ಅನುಭವದಿಂದ ಆಕಿ ಆರ್ಥಿಕವಾಗಿ ಸ್ವತಂತ್ರ ಆಗಿ ಇರಬೇಕು ಅಂತಾಳ. ಇದಕ್ಕ ಸುಖಾ ಅನಬೇಕs. ಯಾರದೋ ತಪ್ಪಿಗೆ ಇಕೀಗೆ ಶಿಕ್ಷಾ ಆತು. ಇನ್ನೊಂದು ಮಾತು ಹುಡುಗೀಗೆ ಪರದೇಶಕ್ಕ ಹೋಗಿ ಇರಬೇಕು ಅನ್ನೂ ಮನಸ್ಸು ಇದ್ದಾಗ ಅದರ ಸಾಧಕ ಬಾಧಕ ಎಲ್ಲಾ ವಿಚಾರ ಮಾಡಿ ತಿಳಿಸಿ ಹೇಳಬೇಕು. ಆದರ ರಾಜೀ ಮದುವಿ ಒಲ್ಲೆ ಅಂತ ಅಳೂ ಮುಂದ ಒತ್ತಾಯ ಮಾಡೂದು ದೌರ್ಜನ್ಯ. ಹೆಣ್ಣುಮಕ್ಕಳು ನಗನಗತಾ ಗಂಡನ ಮನೀಗೆ ಹೋಗಬೇಕು. ಕಣ್ಣೀರು ಹಾಕಿದರ ಯಾರಿಗೂ ಶ್ರೇಯಸ್ ಅಲ್ಲ. ನಮ್ಮ ಮನೀಯವರು, ಅತ್ತಿ ನನಗ ಕಲೀಲಿಕ್ಕೆ, ವಕೀಲಕಿ ಮಾಡಲಿಕ್ಕೆ ಪ್ರೋತ್ಸಾಹ ಕೊಟ್ರು. ಅಂತ ನನಗ ಬುದ್ಧಿ ಬೆಳೀತು, ವಿಚಾರ ಮಾಡ್ತೇನಿ. ಅವರ ದೊಡ್ಡ ಮನಸ್ಸು ನೀವು ಅಷ್ಟ ಕಲಕೊಳ್ರಿ . ನನಗ ಭಾಳ ಸಂತೋಷ ಆಗ್ತದ, ಅಲ್ಲಣ್ಣಾ ನಿನಗೇನ ಈಗ ಹತ್ತೆಂಟು ಹೆಣ್ಣು ಹುಟ್ಟಿ ಅಳತಾವ. ಇರಾಕಿ ಒಬ್ಬಾಕಿ ಮಗಳು. ಆಕಿ ಕಣ್ಣೀರು ಹಾಕದಾಂಗ ನೋಡಿಕೋಬೇಕಪ್ಪಾ. ಈ ಮದುವಿ ನನಗೇನ ಪಸಂದ ಇಲ್ಲ ಬಿಡಪಾ" ಪ್ರಭಾ ರಾಜೇಶ್ವರಿಯ ಪರವಾಗಿ ಚೆನ್ನಾಗಿಯೇ ವಕೀಲಕಿ ಮಾಡಿದಳು.

ಗುರುಸಿದ್ದಪ್ಪನವರ ಮುಖ ಬಾಡಿತ್ತು. "ರಾಜೇಶ್ವರಿ ಬಾ ಇಲ್ಲೆ" ಅವರ ದನಿಯಲ್ಲಿ ಪ್ರೀತಿ ತುಂಬಿತ್ತು. ಮಹೇಶ ತಲೆ ಬಾಗಿಸಿ ಏನೋ ಯೋಚಿಸುವಂತೆ ಕುಳಿತಿದ್ದ.

ಪಕ್ಕದ ಕೋಣೆಯಿಂದ ಬಂದ ರಾಜೇಶ್ವರಿಗೆ ದುಃಖ ಉಕ್ಕಿ ಬಂದಿತ್ತು. ಅಜ್ಜನ ತೊಡೆಯ ಮೇಲೆ ತಲೆ ಇಟ್ಟು ಬಿಕ್ಕುತ್ತ ಹೇಳಿದಳು. "ಅಜ್ಜಾ, ನಾ ನಿಮ್ಮನ್ನೆಲ್ಲಾ ಬಿಟ್ಟು ದೂರ ಹೋಗಬೇಕಂತಿರೇನು?" ಅಳುತ್ತಿದ್ದ ಮಗಳನ್ನು ಹತ್ತಿರ ಎಳೆದುಕೊಂಡು ಅಪ್ಪಿದ ಮಹೇಶ.

ಪ್ರಭಾ ಸಂಭ್ರಮದಿಂದ ತೋಟದಲ್ಲಿದ್ದ ಅತ್ತಿಗೆಯ ಹತ್ತಿರ ಹೋಗಿ ಸಮಾಧಾನದಿಂದ ಹೆಗಲ ಮೇಲೆ ಕೈ ಇಟ್ಟಳು. ಮಾಹೇಶ್ವರಿ ಮೌನವಾಗಿ ನಾದಿನಿಯ ಕೈ ಹಿಡಿದಳು. ಅಂಗಳದಲ್ಲಿ ಮುಸುಕುತ್ತಿದ್ದ ಕತ್ತಲೆಯನ್ನು ಸರಿಸಿದ ಬೆಳದಿಂಗಳು ರಂಗೋಲಿ ಹಾಕುತ್ತಿತ್ತು.



# ಅಚ್ಚ ಪರಿಮಳ

"ರೇಣೂ, ಏss ರೇಣೀss ಎಲ್ಲಿ ಹ್ಯಾದ್ಯ ಸಾಯಾಕ..."

ಸೂರ್ಯ ಮೂಡುತ್ತಿರುವಂತೆ ಸಾತವ್ವನ ಮೊದಲ ಕೂಗನ್ನು ಕೇಳಿಸಿಕೊಂಡ ರೇಣು ಥಳ ಥಳ ಹೊಳೆಯುವ ಪಾತ್ರೆಗಳನ್ನು ಎತ್ತಿಕೊಂಡು ಹಿತ್ತಿಲಿನಿಂದ ಒಳಗೆ ಬಂದಳು.

"ಹಗಲ ಎಲ್ಲಾ ಸೊಚ್ಚ ಸೊಚ್ಚ ಅಂತ ಕೆಲಸಾ ಮಾಡಿಕೋತನ ಇರತೀ. ನಿನ ಬಾಳೆ ಅಟ ಸೊಚ್ಚ ಮಾಡಿಕೊ ಅಂದರ ಕೇಳವೊಲ್ಲಿ. ಅಂವಗ ಎಡ್ಡನೇ ಮದುವಿ ಆಗ್ಯೆತಿ, ಆದ್ರ ನಿಂದು ಹೊಸ ಬಿಸಿ. ಗಂಡನ್ನ ಮುಟಿಗ್ಯಾಗ ಇಟಕೋಬೇಕನ್ನೂದು ನಿನಗ ತಿಳೀವೊಲ್ಲದೇನು? ಬರೇ ಸವತೀ ಮಕ್ಕಳ ಚಾಕರಿ ಮಾಡಿ ಸಾಯಬ್ಯಾಡಾ, ನಿನ ಹೊಟ್ಯಾಗೊಂದು ಕೂಸ ಹುಟ್ಟಲಿ. ಹಿಂಗ ಪರದೇಸಿ ಆಗಿ ಯಾರದೋ ಮನೀ ಅನ್ನೂ ಹಾಂಗ ದುಡಕೋತ ಇದ್ದರ ನಾಳೆ ಬೀಸಿ ಒಗದ ಬಾಳೆ ಎಲಿ ಆಗತೀ, ಬೋಸಡಿ. ಮುದುಕಿ ಒದರತೈತಿ ಅನಬ್ಯಾಡಾ. ನಾ ಹೇಳೂದ ಒಂದೀಟ ತಿಳಕೋ."

ಆರೆಂಟು ತಿಂಗಳಿಂದ ಅತ್ತೆಯ ಇದೇ ಪಲ್ಲವಿಯನ್ನು ಸುಮ್ಮನೆ ಕೇಳುತ್ತಾಳೆ ರೇಣುಕಾ. ಅತ್ತೆಯ ಬಾಯಿ ಕೆಟ್ಟದು, ಮನಸ್ಸು ಒಳ್ಳೇದು. ಆದರೂ ಅವಳ ಕಿರಿಕಿರಿ ತಾಳದೆ ತಾನೂ ಒಮ್ಮೆ ಬಾಯಿ ತೆರೆದಿದ್ದಳು.

"ಯತ್ತೀ ನಿನ ಮಗಾ ನನ್ನ ಮುಟ್ಟದಿದ್ದರ ನಾಚಿಕಿಬಿಟ್ಟು ನಾನಃ ಮ್ಯಾಲೆ ಬಿದ್ದು ಹೋಗಲ್ಯಾ? ಹಾಂಗ ಮಾಡಿದರ ನನ್ನ ಕಿಮ್ಮತ್ತೇನ ಉಳದೀತು?"

ಅದಕ್ಕೂ ಬೈಗುಳ ಸುರಿಮಳೆಯಾಗಿತ್ತು. 'ಆಹಾಹಾ ದೊಡ್ಡ ಮಹಾರಾಣಿ ಇಕೀ. ಕಿಮ್ಮತ್ತಂತ ಕಿಮ್ಮತ್ತು. ಗಂಡಾ ಹೇಣ್ತಿ ನಡೂ ಏನ ಬಿಗುಮಾನಾ. ನಾಳೆ ನಾ ಸತ್ತ ಮ್ಯಾಲೆ ನಿನ ಗತಿ ಏನಾಗತೈತಿ ನೋಡಿಕೊಳ್ಳs ಹಾದರಗಿತ್ತಿ.' ಬೈಗಳೇನೊ ಸರಾಗವಾಗಿ ಬಂದಿತ್ತು. ಗಂಡ ಮುಟ್ಟದ ಬಾಲಿ, ನಾಳೆ ಹೊರಗೆ ಯಾರನ್ನಾದರೂ ಜೊತೆ ಮಾಡಿಕೊಂಡರೆ ಮನೆಯ ಮರ್ಯಾದಿ ಏನು ಉಳಿದೀತು ಎನ್ನುವ ಚಿಂತೆಯೂ ಮುದುಕಿಯನ್ನು ಕಾಡುತ್ತಿತ್ತು.

ಅಡಿಗೆಮನೆಗೆ ಬಂದು ಯಾರನ್ನೋ ಕುರಿತು ಹೇಳುವಂತೆ ಚಹಾ ಮಾಡಲು ಹೇಳಿ ಹೋಗಿದ್ದ ಸತ್ಯಣ್ಣ, ಸಾತವ್ವನ ಬಾಯಿ ಮುಚ್ಚಿದರೂ ತಲೆ ಕೆಲಸ ಸುರುವಿತ್ತು.

ಆರು ವರುಷಗಳ ಹಿಂದೆ ಸಿಂಗವ್ವ ಮೂರನೆ ಕೂಸಿನ ಜೊತೆಗೆ ಬಸ್ ಅಪಘಾತದಲ್ಲಿ ಸತ್ತು ಹೋಗಿದ್ದಳು. ಯಾರು ಎಷ್ಟು ಒತ್ತಾಯ ಮಾಡಿದರೂ ಸತ್ಯಣ್ಣ ಇನ್ನೊಂದು ಮದುವೆಗೆ ಒಪ್ಪಿರಲಿಲ್ಲ. 'ಸಿಂಗೂ ಎಡ್ಡ ಮಕ್ಕಳನ್ನ ನನಗ ಬಿಟ್ಟ ಹೋಗ್ಯಾಳ ಸಾಕಿನ್ನ. ನನ್ನ ಹೊಸಾ ಸಂಸಾರಾ ಬ್ಯಾಡಾ. ಅವನ್ನ ಎಡ್ಡ ಕಣ್ಣಿನಾಂಗ ಜ್ವಾಪಾನ ಮಾಡ್ತೀನಿ' ಎಂದು ಮುಖ ತಿರುಗಿಸಿ ಎದ್ದು ಹೋಗುತ್ತಿದ್ದ.

'ಯಪ್ಪಾs ನನ ಮಗನ ಕಡೇ ಒಂದೀಟು ನೋಡಪ್ಪಾ ನನಗೂ ವಯಸ್ಸಾತು, ಕೆಮ್ಮು ದಮ್ಮು ಹಣ್ಣ ಹಣ್ಣ ಮಾಡ್ಯಾವ. ನನ್ನ ಮನೀಕೆಲಸಾನ ನೀಗವಾಲ್ತು. ಮಲ್ಲೀ ಚೊಚ್ಚಲ ಬಾಣೇತನಾ ಹ್ಯಾಂಗೋ ಮಾಡೀನಿ. ಮುಂದ ಹ್ಯಾಂಗ ಯಿಚಾರ ಮಾಡು. ನಂದು ಒಂದ ಕಾಲು ಮನ್ಯಾಗ, ಒಂದು ಕಾಲು ಗೋರ್‍ಯಾಗ. ಈ ಪರದೇಶಿ ಮೊಮ್ಮಗ ಶಂಕರನ ಹೊಟ್ಟಿ ನೆತ್ತಿ ನಾ ಸತ್ತ ಮ್ಯಾಲೆ ಯಾರ ನೋಡ್ತಾರೋ, ನೀ ಮದುವಿನ ಆದರ ಮನೀಗೆ ಒಂದ ಹೆಣ್ಣ ದಿಕ್ಕ ಆಕ್ಕೈತಿ. ಹೊಲಾ ಮನೀ, ನಂದು ಚಾಕರಿನೂ ಆಕ್ಕೈತಿ. ನಾನು ಸಾಯೂ ಮುಂದ ನಿಚ್ಚಿಂತ್ಯಾಗಿ ಕಣ್ಣ ಮುಚ್ಚತೇನಿ. ಒಲ್ಲೆ ಅನಬ್ಯಾಡೋ ಸತ್ಯಣ್ಣ' ಎಂದು ಕಣ್ಣೀರು ಸುರಿಸಿ, ಊಟ ಬಿಟ್ಟು ಅವ್ವ ಮಲಗಿದ ಮೇಲೆಯೇ 'ಏನಾರ ಮಾಡಿಕೊಳ್ರಿ' ಎಂದಿದ್ದ ಸತ್ಯಣ್ಣ.

'ಇಂವಗ ಹೆಣ್ತಿ ಬ್ಯಾಡೇನು? ಉಣ್ತಾನ ತಿಂತಾನ ಮಕ್ಕೋತಾನ ಎದ್ದ ಹೊಕ್ಕಾನ, ರೇಣೀ ಕೂಟ ಒಂದ ಮಾತಿಲ್ಲ, ಕತಿಯಿಲ್ಲ, ನಗಿಯಿಲ್ಲ. ರಾತ್ರಿ ಅರೆ ಪಿಸಿಪಿಸಿ ದನಿ ಕೇಳ್ತದೇನೋ ಅಂದರ ಬರೇ ಗೊರಕಿ ಸಪ್ಪಳ. ಹೇಣ್ತಿ ಅನ್ನೂ ಪಿರೀತಿ ಮಮತಾ ಒಂದೀಟೂ ಇಲ್ಲೇನ ಸತ್ಯಪ್ಪಗ. ಹೊಲದ ಕೆಲಸಾ ಹೇಳೂದು ಇದ್ದರೂ ನನ್ನ ಮುಂದ ಒದರಿ ಹೋಗತಾನ, ನಾ ಕುಂಟಲಗಿತ್ತಿ ಆಗಬೇಕೆನ ಇವರ ನಡಬರಕ.

"ಯತ್ತೀ ಚಾ ಆರಾಕ ಹತ್ತೇತಿ, ನಾನ ಒಯ್ದು ಕೊಡಲೇನ?"

"ಅಯ್ಯ ಶಿವನ ಅದನ್ನೂ ನಾನ ಹೇಳಬೇಕ? ಹೊರಗ ದೇವಪ್ಪ ಬಂದಾಂಗ ಕಾಣತೈತಿ. ನೀನs ಒಯ್ದುಕೊಡು."

ಒಳಕೋಣೆ ದಾಟುವದರಲ್ಲಿಯೇ ರೇಣುಕಾನ ಮೂಗು ಅರಳಿತು. ಸುಮಧುರ ವಾಸನೆ ಮೂಗು ತುಂಬಿ ಮೈ ಮನ ಅರಳಿಸಿತು. ಕುತೂಹಲ ತಡೆಯದೆ ಬಗ್ಗಿ ಹಣಿಕಿದಳು. ಹೌದು ಪರಿಮಳ ಅಲ್ಲಿಂದ ಸೂಸುತ್ತಿತ್ತು. ವಾತಾವರಣ ಆಹ್ಲಾದಕರವಾಗಿತ್ತು. ಸತ್ಯಣ್ಣ ಬಂದು ಚಹಾ ಒಯ್ದ.

ಸೊಗಸುಗಾರ ಆಸಾಮಿ ಕಣ್ಣು, ತುಟಿಗಳಲ್ಲಿ ನಗೆ ತುಂಬಿಕೊಂಡು ಎದ್ದು ನಿಂತ. 'ಹೊರಗೆ ಬರ್ರಿ, ಅತ್ತಿಗಿಯವರ, ನಾನು ದೇವು' ನಿಮ್ಮ ಮದಿವ್ಯಾಗ ನಾ ಊರಾಗ ಇದ್ದಿದ್ದಿಲ್ಲಾ. ನಮ್ಮ ಸತ್ಯಣ್ಣಗ ಮುಗುದಾಣ ಹಾಕಿದವರು ಹ್ಯಾಂಗ ಅದಾರಪಾ ನೋಡಬೇಕು ಅನ್ನಿಸ್ತು ಬಂದಬಿಟ್ಟೆ. ನಾನೂ ನಿಮಗ ದೂರ ಸಂಬಂಧದಾಗ ಮೈದುನ ಆಗಬೇಕು. ಭಾಳ ಸಂತೋಷ ಆತಪಾ ಸತ್ಯಣ್ಣ, ನಿಮ್ಮಿಬ್ಬರ ಜೋಡಿ ಛಂದ ಐತಿ' ಅಪರೂಪಕ್ಕೆ ಗಂಡನ ಮುಗುಳ್ನಗೆ ಕಂಡ ರೇಣುಕಾ ನಾಚಿ ಕೆಂಪಾಗಿ ಹಿಂದೆ ಸರಿದಳು.

ಆ ದಿನವೆಲ್ಲ ಮೈ ರೋಮಾಂಚನ, ಹುರುಪು ತುಂಬಿ ಸುಖದ ಹೊಸ್ತಿಲಲ್ಲಿ ನಿಂತಂತೆ ಅನಿಸುತ್ತಿತ್ತು ರೇಣುಕಾಳಿಗೆ. ಯಾಕೋ ಗೊತ್ತಿಲ್ಲ. ಕದ್ದು ಕದ್ದು ಗಂಡನನ್ನು ನೋಡಿದಳು ಸಂತೋಷಪಟ್ಟಳು.

***

ರಾತ್ರಿ ಕಳೆಯುತ್ತಿತ್ತು. ಸಮಯ ತಿಳಿಯದು. ಹಳ್ಳಿಯ ಮನೆಗಳಲ್ಲಿ ಚಿಮಣಿ ದೀಪ ಮೂರೂಸಂಜೆಗೆ ಆರಿ ಎಲ್ಲ ನಿಶ್ಶಬ್ದವಾಗಿತ್ತು. ಮುದುಕಿಯನ್ನು ಎಬ್ಬಿಸಿ ಉಚ್ಚೆ ಹೊಯ್ಯಿಸಿ, ಬಿಸಿನೀರು ಕಾಸಿಕೊಟ್ಟು ಬಂದು ಮಲಗಿದಳು. ಗಂಡನ ಗೊರಕೆ ಒಂದೇ ಸೂರು ಹಿಡಿದಿತ್ತು. ರೇಣಿಗೆ ನಿದ್ದೆಯೇ ಇಲ್ಲ. ಅತ್ತಿತ್ತ ಹೊರಳಿ ಹೊರಳಿ ಮೈ ನೋಯುತ್ತಿತ್ತು. ಮಾರು ದೂರದಲ್ಲಿ ಮಲಗಿದ್ದ ಗಂಡನಿಗೆ ಎಚ್ಚರವಾದೀತೆಂದು ಹೆದರಿ ಮುದ್ದೆಯಾಗಿ ಹೊರಳಿ ಮಲಗಿದಳು. ಬೆಳಕಿಂಡಿಯಿಂದ ಇಳಿದ ಬೆಳ್ಳಿಕೋಲು ನೆಲದ ಮೇಲೆ ಆಡುತ್ತಿತ್ತು. ಅದನ್ನೆ ದಿಟ್ಟಿಸುತ್ತ ಮಲಗಿದ್ದ ರೇಣುಕಾಳ ಸುತ್ತಮುತ್ತ ಸುವಾಸನೆ ಸುಳಿಯುತ್ತಿತ್ತು. ಆ ಪರಿಮಳ ಈಗ ಬೆಳದಿಂಗಳಿನಿಂದ ಇಳಿಯಿತೇ? ಹಿಂದೆಂದೂ ಇಂಥ ಸುವಾಸನೆ ಮೂಸಿರಲಿಲ್ಲ. ಯಾವದೋ ಬೇರೆ ಲೋಕದಲ್ಲಿ ಇದ್ದಹಾಗಿದೆ. ಎರಡು ತೋಳು ತನ್ನನ್ನು ಅಪ್ಪಿಕೊಂಡಿವೆ. ಮೃದುವಾಗಿ ಬೆನ್ನಮೇಲೆ, ಕೆನ್ನೆಮೇಲೆ ಕೈ ಆಡಿಸುತ್ತಿದೆ. ತಾನೂ ತೋಳು ಚಾಚಿ ಕಾಣದ ಮುಖಕ್ಕೆ ಮುಖ ಹಚ್ಚಿ ತಬ್ಬಿಕೊಂಡಿದ್ದೇನೆ. ಯಾರು... ಯಾರಿವರು... ದೇವಣ್ಣಾ... ಅಲ್ಲಲ್ಲ ತನ್ನ ಗಂಡ ಸತ್ಯಣ್ಣ. ಯಾರೋ ತಿಳಿಯದ ಸುಖದ ಅಮಲಿನಲ್ಲಿ ಕೈ ಚಾಚಿದ ರೇಣುಕಳಿಗೆ ಸಿಕ್ಕಿದ್ದು ಬರಿ ನೆಲ. ತಟ್ಟನೆ ಕಣ್ಣು ತೆರೆದಳು. ಎಲ್ಲವೂ ಮಾಯ, ದುಃಖ ಉಕ್ಕಿ ಬಂದಿತು. ಬೆಳ್ಳಿ ಕೋಲು ಸರಿದು ಹೋಗಿತ್ತು. ಹೊಗೆಯ ವಾಸನೆ ಸಾರಿಸಿದ ನೆಲದ ವಾಸನೆ ಮೂಗು ತುಂಬಿತ್ತು.

ಕತ್ತಲಲ್ಲಿ ಕಾಲಾಡಿಸುತ್ತ ಮೆಲ್ಲಗೆ ಬಾಗಿಲು ತೆರೆದು ಹಿತ್ತಲಲ್ಲಿ ಹೋಗಿ ಕುಳಿತಳು. ಮೈ ನಡುಕ ಇನ್ನೂ ನಿಂತಿರಲಿಲ್ಲ. ಸೆರಗಿನಿಂದ ಬೆವೆತ ಮೈ ಒರೆಸಿ ಗಾಳಿ ಬೀಸಿಕೊಂಡಳು. ಆಕಾಶದ ತುಂಬ ಬೆಳ್ಳನೆ ಬೆಳಕು ತುಂಬಿದ್ದರೂ

ಚೂರೂ-ಜೀವ ಸಂಚಾರ, ಮಧುರವಾಸನೆ ಇಲ್ಲದೆ ಉಸಿರಿಲ್ಲದೆ ಬಿದ್ದ ಹಾಗಿದ್ದ ಭೂಮಿ, ಆಕಾಶ, ಆ ಹೆಪ್ಪುಗಟ್ಟಿದ ಮೌನದಲ್ಲಿ ಒಂಟಿತನದ ಯಾತನೆಯಲ್ಲಿ ಮುಳುಗಿ ಈ ಬದುಕಿನ ಅರ್ಥವನ್ನು ಬಿಡಿಸತೊಡಗಿದಳು ರೇಣುಕಾ.

ಹಡೆದವ್ವ ಶಾಂತವ್ವ ಸತ್ತು ಹೋದಾಗ ತನಗಿನ್ನೂ ಹತ್ತು ವರುಷ. ಆರು ತಿಂಗಳಲ್ಲಿ ಅಪ್ಪ ಚಿನ್ನವ್ವನ್ನ ಕೂಡಿಕೆ ಮಾಡಿಕೊಂಡ. ಮಲ ಅವ್ವ ಬಂದ ಮೇಲೆ ತನ್ನ ಸಾಲೆಯು ಮುಗೀತು. ಅಂಗಳ ಉಡುಗಿ, ಶಗಣಿ, ಉಚ್ಚೆ ಬಳಿದು, ತಂಗಳು ತಿಂದು, ದನ ಗುಡ್ಡಕ್ಕೆ ಹೊಡಕೊಂಡು ಹೋಗಿ, ಸಂಜೆ ಮನೆಗೆ ಬಂದರೆ ಮತ್ತೆ ಮನೆಕೆಲಸ ಒಟ್ಟಿರುತ್ತಿತ್ತು. ಅವ್ವನನ್ನು ನೆನಿಸಿ ಗುಡ್ಡದಲ್ಲೇ ಅಳುತ್ತ ಕುಳಿತುಬಿಡ್ತಿದ್ದಳು. ಅಮ್ಮ ತನ್ನ ಹುಡುಕಿಕೊಂಡು ಬಂದು ರಮಿಸುತ್ತಿದ್ದಳು. ಅಂಥ ದಿನ ಚಿನ್ನವ್ವನ ಸಿಟ್ಟು ನೆತ್ತಿಗೇರಿ ತನಗೆ ಉಪವಾಸವೇ ಗತಿ. ಕುಡಿದು ಬಂದ ಅಪ್ಪನಿಗೆ ಇದ್ಯಾವದೂ ತಿಳೀತಿರಲಿಲ್ಲ. ಅವನ ಮುಂದೆ ಹೇಳಿದರೂ ಚಾಡಿ ಹೇಳ್ತಿಯಾ ಅಂತ ತನಗೇ ಎರಡೇಟು ಹಾಕುತ್ತಿದ್ದ. ಅಮ್ಮ ಚಿನ್ನವ್ವನ ಕದ್ದು ತೆಗೆದಿಟ್ಟ ರೊಟ್ಟಿ, ರಾತ್ರಿ ಎಬ್ಬಿಸಿ ತಿನಿಸುತ್ತಿದ್ದಳು. ಅವಳಿಂದಾಗಿ ತಾನು ಬದುಕಿದ್ದಳು.

ಅಪ್ಪನಿಗೆ ಚಿನ್ನವ್ವನ ಮಗ್ಗಲದಾಗ ಬಿದ್ಕೊಳ್ಳೂದೊಂದ ಗೊತ್ತಿತ್ತು. ಅವ್ವನ ನೆನಪ ಆಗಿ ನಾನೂ ನಿನ್ನ ಹಂತ್ಯಾಕ ಮಲಗ್ತೇನಿ ಅಪ್ಪಾ ಅಂತ ಹಟಾ ಹಿಡೀತಿದ್ದೆ. ನನ್ನ ದರಾದರಾ ಎಳದು ಹೊರಗ ಹಾಕಿ ಕ್ವಾಣೆ ಬಾಗಲಾ ಮುಚಿಕೋತಿದ್ದರು. ಅತ್ತು ಕರದು ಸಾಕಾಗಿ ನಾ ಒಂದು ದಿನಾ ಅಮ್ಮನ್ನ ಕೇಳಿದ್ದೆ.

"ಅಮ್ಮಾs ಚಿನ್ನವ್ವನ ಕರಕೊಂಡಾಂಗ ಅಪ್ಪನನ್ನೂ ಒಳಗ ಯಾರ ಕರಕೊಳ್ಳಾಂಗಿಲ್ಲಾ ಅವರಿಬ್ಬರ ಏನ ಮಾಡ್ತಾರ ಅಲ್ಲೆ?"

"ಹುಚ್ಚ ಹುಡುಗೀ ನೀ ಇನ್ನೂ ಸಣ್ಣಾಕಿ. ನಿನಗ ಹ್ಯಾಂಗ ಹೇಳಲಿ. ದೊಡ್ಡಾಕಿ ಆದ ಮ್ಯಾಲೆ ಎಲ್ಲಾ ನಿನಗೂ ಗೊತ್ತಾಗತೈತಿ" ಅಂದಿದ್ದಳು ಅಮ್ಮ. ದೊಡ್ಡವಳಾದ ಮೇಲೆ ತನಗೂ ಎಲ್ಲ ಗೊತ್ತಾಗಿತ್ತು. ಸೂಸಿ, ಕೆಂಪಿ, ನೀಲಿಯರು ತಮಗೆ ಸಿಕ್ಕ ಮಾಹಿತಿ ಇನ್ನಷ್ಟು ಮತ್ತಷ್ಟು ಸೇರಿಸಿದ್ದರು. ಮೈಮೇಲೆ ಮುಳ್ಳು ಎದ್ದಿದ್ದವು. ಥೂ ಅಸಯ್ಯ. ಛೀ ನಾಚಿಕೀನೆ ಇಲ್ಲ. ನಾ ಯಾರಿಗೂ ಮೈ ಮುಟ್ಟಾಕ ಕೊಡಾಕಿಲ್ಲ. ಹಟದಿಂದ ಹೇಳಿದ್ದಳು. ತಾನು ಮದುವಿ ಆಗೋದೆ ಇಲ್ಲಾ ಅಂತ ಜಂಬ ಕೊಚ್ಚಿಕೊಂಡಿದ್ದಳು. ಮದುವಿ ಆಗದಿದ್ದರೂ ಗಂಡಸು ತನ್ನ ಮೈ ಮುಟ್ಟಿದ ಸಂಗತಿಯೊಂದು ನಡೆದಾಗ ಕಕ್ಕಾಬಿಕ್ಕಿ ಆಗಿದ್ದಳು.

ತನ್ನೊಬ್ಬಳನ್ನು ಬಿಟ್ಟು ವಾರಿಗೆಯವರೆಲ್ಲಾ ಈರಣ್ಣನ ತೇರಿಗೆ ಹೋಗಿದ್ದರು. ಮೂರುಸಂಜೆ ಬಾವಿ ನೀರು ಸೇದಿ ತರುವಾಗ ದಾರ್‍ಯಾಗ ಹೋಗೂ ಗಂಡಸು ಯಾವನೋ ಮುಂದ ಬಂದು ಎದಿ ಹಿಚಿಕಿದಾ, ತಲಿಮ್ಯಾಲಿನ ಕೊಡಾ ಅವನ ಮ್ಯಾಲೆ ಒಗದು ಮನೀಗೆ ಓಡಿಬಂದಿದ್ದೆ. ಎದಿ ಧಡಾ ಧಡಾ ಅಂತಿತ್ತು. ಕಾಲು ನಡುಗಿ ಜಗಲಿ ಮ್ಯಾಲ ಬಿದ್ದಬಿಟ್ಟಿದ್ದಳು. 'ಹೊಯ್ಮಾಲಿ ಡೋಕಾರಿತನ ಮಾಡ್ತಾಳ. ಹರೇ ಉಕ್ಕಿ ಹರ್‍ಯಾಕ ಹತ್ತೇತಿ, ಕೆಲಸಾ ತಪ್ಪಿಸಲಾಕ ಇಲ್ಲದ್ದ ನೆವಾ ಹೇಳ್ತಾಳ.' ಚಿನ್ನವ್ವನ ಬಯ್ಗುಳ ಜೊತೀ ಅಪ್ಪನೂ ಬಾರುಕೋಲು ತೊಗೊಂಡು ಬೆನ್ನ ಮೇಲೆ ಬಾರಿಸಿದ್ದ.

ತಾನು ನೆರೆದು ಎಂಟ್ಹತ್ತು ವರ್ಷ ಆಗಿದ್ವು. ಮನ್ಯಾಗ ದುಡಿಯಾಕ ಒಂದ ಪುಕ್ಕಟ ಆಳ ಸಿಕ್ಕೈತಿ ಅಂತ ಚಿನ್ನವ್ವ ತನ್ನ ಮದುವಿ ಸುದ್ದೀನ ತಗೀತಿದ್ದಿಲ್ಲ. ಅಮ್ಮ ಹಲಬಿ ಸತ್ತ ಹೋದ್ಲು. ಒಂದ ದಿನಾ ಸಾತವ್ವ ನಮ್ಮ ಮನೀಗೆ ಹೆಣ್ಣ ಕೇಳಾಕ ಹಿರೇರ್‍ನ ಕಳಿಸಿದ್ಲು, ತಾನು ಈ ನರಕದಿಂದ ಮತ್ತೊಂದ ನರಕಕ್ಕ ಹೋಗಲಾರೆ ಅಂತ ಅತ್ತೆ, ಕರದೆ, ಉಪವಾಸ ಬಿದ್ದೆ. ಗೆಣತೇರು ಬಯ್ದು ಬುದ್ಧೀ ಹೇಳಿದ್ರು. ಅಪ್ಪನೂ ಒಪ್ಪಿದ್ದಾ. ಸಾತವ್ವ ಎರಡೂ ಕಡೆ ಖರ್ಚು ಹಾಕಿ ಮಗನಿಗೆ ಮದುವಿ ಮಾಡಿ ಈ ಮನೀಗೆ ತಂದಳು.

"ನಮ್ಮವ್ವನ ಮಕ್ಕಳನ ನೋಡಿಕೊಳ್ಳಾಕ ನಾ ಮದುವೀ ಆಗೀನಿ. ನಿನ್ನ ಕೂಡ ಸಂಸಾರಾ ಮಾಡಾಕ ನನಗ ಮನಸ್ಸ ಇಲ್ಲಾ. ಮಂದೀ ಕಣ್ಣಾಗ ಅಟ ನಾವ ಗಂಡಾ ಹೇಣ್ತಿ. ನನ್ನ ಸಿಂಗೂನ್ನ ಮರಿಯಾಕ ಆಗವೊಲ್ಲು. ಮನೀ

ನಿಂದ ಅಂತ ತಿಳಕೊಂಡು ಇಲ್ಲಿರು" ಅಂದು ಮುಖ ಅತ್ತ ತಿರುಗಿಸಿ ಮಲಗಿದ್ದ ಗಂಡನ ಕಣ್ಣೀರು ದೀಪದ ಬೆಳಕಿನಲ್ಲಿ ಹೊಳೆದಿತ್ತು. ತನ್ನ ಮನಸ್ಸು ನಿರಾಳ ಆಗಿತ್ತು. ದೇವರು ದೊಡ್ಡಾಂವಾ. ಎಂಥಾ ಭೋಲೋ ಗಂಡ ಸಿಕ್ಕ. ಈ ಮನೆಗೆ ಕಾಲಿಟ್ಟ ದಿನದಿಂದಲೇ ಸುಖವಾಗಿ ನಿದ್ದೆ ಮಾಡಿದ್ದಳು.

ದೇವರ ಮಾಯಾ ವಿಚಿತ್ರ. ಅವತ್ತು ಸುಖ ಅನಿಸಿದ್ದು ಇವತ್ತ ದುಃಖ ಅನಿಸೇದ. ಹಗಲು ರಾತ್ರಿ ಕನಸಿನ್ಯಾಗ ಮನಸಿನ್ಯಾಗ ಏನೋ ಹೇಳಲಿಕ್ಕೆ ಬಾರದ ತಳಮಳ, ನಿದ್ದಿ ನೀರಡಿಕಿ ಹಾರಿ ಹೋಗ್ಯಾವ. ಹಗಲು ಕೆಲಸದಾಗ ಮರತರೂ ರಾತ್ರಿ ನಿದ್ದಿಗೆಡಿಸತೈತಿ. ಮೈ ಬಿಸಿ ಏರತೈತಿ, ಆರತೈತಿ, ಪರಿಮಳ ಮೈ ತುಂಬತೈತಿ. ಮಾಯ ಆಗತೈತಿ. ಹ್ಯಾಂಗ್ಯಾಂಗೋ ಆಗತೈತಿ. ಏನೇನೋ ಬೇಕ ಅನಸತೈತಿ, ಹೇಳಾಕ ಬರಾಂಗಿಲ್ಲ. ಬಂದರೂ ಯಾರ ಮುಂದ ಹೇಳಲಿ? ಯಾರ ಹೆಗಲಿಗೆ ತಲಿ ಆನಿಸಿ ಅಳಲಿ? ಮಂದೀ ಮುಂದ ಹೇಳೂ ಮಾತ ಇದು? ಗಂಡುಳ್ಳ ಬಾಲಿ. ಹುಚ್ಚ ಖೋಡಿ ಸುಮ್ಮಕ ಒದ್ದಾಡತೈತಿ ಅಂತ ನಕ್ಕಾರು. ನನ್ನ ಸಂಸಾರದ ಗುಟ್ಟು ಹ್ಯಾಂಗ ಒಡೀಲಿ. ಕೇಳಿದರೂ ಯಾರರೆ ನಂಬತಾರ? ಈ ಹೆಣ್ಣಿನ್ಯಾಗ ಏನೋ ಊನ ಐತಿ ಅಂತಾರ. ಈ ಹುಚ್ಚ ಹಿಡಿಸಿದ ದೇವರಿಗೆ ಕಣ್ಣ ಇಲ್ಲ. ಏನ ಮಾಡಲಿ, ಎಲ್ಲಿ ಹೋಗಲಿ ಗುಡ್ಡದ ಎಲ್ಲವ್ವ ಮಾತಾಯಿ ಹ್ಯಾಂಗರೇ ಪಾರ ಮಾಡವ್ವಾ ನನ್ನ. ಹಿಂಗS ಇದ್ದರ ಹುಚ್ಚ ಹಿಡಿತೈತಿ ಇಲ್ಲಾ ಬಾವಿ ಬೀಳ್ತಿನಿ ನೀನS ಗತಿ ನನಗ...

ಕತ್ತಲಿದ್ದಾಗಲೆ ಎದ್ದು ಮನೆಗೆಲಸಕ್ಕೆ ತೊಡಗುವ ಹೆಂಡತಿ ಇನ್ನೂ ಮಲಗಿದ್ದನ್ನು ಕಂಡ ಸತ್ಯಣ್ಣ ಜ್ವರ ಬಂದಾವೇನು ಎಬ್ಬಿಸಲೊ ಬ್ಯಾಡೋ ಸಂಶಯದಿಂದ ಹತ್ತಿರ ಬಂದ. ಮುಗ್ಧ ಮುಖ, ಕಣ್ಣೀರ ಕಲೆ, ಕೆದರಿದ ಕೂದಲು, ಅಸ್ತವ್ಯಸ್ತವಾಗಿದ್ದ ಹೊದಿಕೆ. ಬ್ಯಾಡಾ ಇನ್ನಷ್ಟು ಮಲಗಲಿ ಎಂದು ತನ್ನ ಚಾದರ ಸರಿಯಾಗಿ ಹೊಚ್ಚಿ ಹೋದ. ಶಂಕರನ ಕೈಯಲ್ಲಿ ಚಹಾ ಕಳಿಸಿದಾಗಲೆ ರೇಣುಕಾಗೆ ಎಚ್ಚರ. ಹೊದಿಕೆ, ಚಹಾದಿಂದ ಅವಳಿಗೆ ಅಚ್ಚರಿ. ಸಂತೋಷ. ಶಂಕರ ಹಣೆ ಮುಟ್ಟಿ ನೋಡಿ 'ಅವ್ವಾ ಜ್ವರಾ ಬಂದಾವ ನಿನಗ, ಚಹಾ ಕುಡಿ, ಏಳಬ್ಯಾಡಾ. ಅಪ್ಪ ನಾನು ಕೆಲಸಾ ಎಲ್ಲಾ ಮಾಡ್ತೀವಿ. ನಾ ಇವತ್ತ ಸಾಲಿಗೆ ಹೋಗೂದಿಲ್ಲ' ರೇಣುಕಳಿಗೆ ಮಾತು ಬಾರದೆ ಕಣ್ಣೀರು ತುಂಬಿತು. ಆಯಾಸದಲ್ಲಿಯೂ ಸುಖ ಅನುಭವಿಸಿದಳು.

***

ಎಂದೂ ಏನನ್ನೂ ಬಾಯಿ ಬಿಟ್ಟು ಕೇಳದ ರೇಣುಕಳಿಗೆ ಯಲ್ಲಮ್ಮನ ಜಾತ್ರೆಗೆ ಹೋಗಲು ಅನುಮತಿ ಕೊಟ್ಟಿದ್ದ ಸತ್ಯಣ್ಣ. ವಯಸ್ಸಾದ ಮೇಲೆ ಮಡಿ, ಪೂಜೆ ಜೋಗಾಡುವುದು ಎಲ್ಲವನ್ನು ಬಿಟ್ಟಿದ್ದ ಸಾತವ್ವನ ಜೀವ ಚಡಪಡಿಸುತ್ತಿತ್ತು.

"ರೇಣೂ, ನೀ ಯಲ್ಲವ್ವನ ದರಶನಕ್ಕ ಹೊಂಟದ್ದು ಬೇಶ್ಯಾತು. ನಾ ಅಂತೂ ಕಾಲ ಮುರಕೊಂಡ ಬಿದ್ದೀನಿ. ಬೆಲ್ಲ ಬ್ಯಾಳಿ ಕಟಿಗೋ, ಮದುವೀ ಸೀರಿ ಉಟಗೋ. ಗುಡ್ಡಕ ಹೋಗಿ ಕಡಬ ಮಾಡಿ ಹಡಲಗಿ ತುಂಬಸು. ಹಣ್ಣ ಕಾಯಿ ಮಾಡಸು. ಹಾಂಗ ಹೊಸಾ ಮುತ್ತಿನ ಸರಾ ತೊಗೊಂಡ ಬಾ. ನೀ ಸಣ್ಣಾಕಿ. ತಿಳೀದಿದ್ದರ ಕೆಂಪವ್ವ, ನಿಂಗವ್ವನ ಕೇಳು ಎಲ್ಲಾ ಹೇಳ್ತಾರ. ದೇವಿಗೆ ಬೇಡಿಕೋ ನಿನ್ನ ಸಂಸಾರಾ ಕಟ್ಟಿ ಕೊಡಲಾಕ ಪರಸಾದಾ ತೊಗೊಂಡ ಬಾ. ಜ್ವಾಕಿ, ಜಾತ್ರಿ ಗದ್ದಲದಾಗ ಅತ್ತಾಗ ಇತ್ತಾಗ ಹೋಗಬ್ಯಾಡ ಮಗಳS".

"ಬಸ್ಸಿನ್ಯಾಗ ಹತ್ತೂ ಇಳಿಯೂ ಮುಂದ ಜ್ವಾಕಿ. ಇಕಾ ಖರ್ಚಿಗೆ ಇಟಕೋ". ಅತ್ತೆ, ಗಂಡನ ಅಂತಃಕರಣದ ಮಾತು ಕೇಳಿ ಗಂಟಲು ತುಂಬಿ ಬಂದ ರೇಣೂ ಸುಮ್ಮನೆ ಗೋಣು ಅಲ್ಲಾಡಿಸಿದಳು. ತುಂಬಿದ ಜನ ಜಾತ್ರೆಯಲ್ಲಿದ್ದರೂ ಅವಳು ಏಕಾಂಗಿ. ಕಣ್ಣು ಯಾರನ್ನೋ, ಕಾಣದ ಮುಖವನ್ನು ಅರಸುತ್ತಿತ್ತು. ಅದೇ ಅವತ್ತಿನ ಸುವಾಸನೆಗಾಗಿ ಮೂಗು ಚಡಪಡಿಸುತ್ತಿತ್ತು. ಮನಸ್ಸಿನ ಕಾತರ, ನಿರೀಕ್ಷೆ ಕಡಿಮೆ ಆಗಿರಲಿಲ್ಲ. ವೇದನೆ ದಿನ ದಿನಕ್ಕೆ ಹೆಚ್ಚಾಗುತ್ತಿತ್ತು. ಸಂಗಾತಿಗಾಗಿ ಹಂಬಲಿಸುತ್ತಿತ್ತು. ಕೈಗೆ ಸಿಕ್ಕರೂ ಸಿಗದಂತಿದ್ದ ಗೆಣೆಯ.

ಅವಳ ಅನ್ಯಮನಸ್ಕತೆ, ಎಚ್ಚರಗೇಡಿತನ ಕಂಡು ಜೊತೆಯಲ್ಲಿದ್ದ ಹಿರಿಯ ಜೋಗತಿ ಕರಿಯವ್ವ ಎಚ್ಚರಿಸಿದಳು.

"ಛಂದಾಗಿ, ಲಕ್ಸೇಕೊಟ್ಟ ಭಕುತಿಯಿಂದ ಪೂಜಿ ಮಾಡಬೇಕ ರೇಣವ್ವ. ಆ ಮಾತಾಯಿ ಎಲ್ಲಾನೂ ನೋಡತಿರತಾಳ. ಆಕಿ ಸಿಟ್ಟಿಗೆದ್ದರ ನಿನ್ನ ಜೀಂವಾ ಸೈತ ಬಿಡಾಕಿಲ್ಲ. ಯಲ್ಲಮ್ಮನ ಸಂಗತಿ ಅಂದರ ಆಟಲ್ಲ, ತಿಳಕೋ."

"ಈ ಕಷ್ಟದಿಂದ ಪಾರ ಮಾಡು ಯವ್ವಾ. ವರಾ ಆದರೂ ನೀಡು, ಬಲಿ ಆದರೂ ತೊಗೊ, ಮಾತಾಯಿ ನಿನಗ ಶರಣು ಬಂದೀನಿ" ನಿರ್ಧಾರ ಮಾಡಿ ಉದ್ದಕ್ಕೂ ಅಡ್ಡಬಿದ್ದಳು. ರೇಣವ್ವ.

ಹಾಗೇ ಎಷ್ಟು ಹೊತ್ತು ಬಿದ್ದಿದ್ದಳೋ ರೇಣುಕಾ. ಮೂಗು ಅರಳಿತು. ಅದೇ ಮಧುರ ವಾಸನೆ ತೇಲಿ ಬಂದು ಮೈ ತುಂಬಿತು. ಯಾರು ಯಾರೋ ದಾಟುತ್ತಿದ್ದರು. ತುಳಿಯುತ್ತಿದ್ದರು. ಎಡವುತ್ತಿದ್ದರು. ಎಚ್ಚರವಿಲ್ಲದೇ ಹಾಗೇ ಕಣ್ಣುಮುಚ್ಚಿದ್ದಳು. ಎರಡು ತೋಳುಗಳು ಅವಳನ್ನೆತ್ತಿ ಅಪ್ಪಿಕೊಂಡವು. ಮೈ ನಡುಕ, ಬೆವರಿನ ಮುತ್ತುಗಳು, ಕಣ್ಣುಗಳು ನೆಲದಲ್ಲಿ 'ಅಷ್ಟ್ಯಾಕ ನಾಚತಿ, ಹತ್ತರ ಬಾ. ಮಾರಿ ಮ್ಯಾಲೆತ್ತಿ ನೋಡು ನನ ಕಣ್ಣಾಗ. ಎದಿ ಮ್ಯಾಲೆ ತಲಿ ಇಡು. ನಾ ಗಟ್ಟ್ಯಾಗಿ ಹಿಡೀತೀನಿ. ಹೆದರಬ್ಯಾಡಾ. ನಾ ಏನ ಹೊರಗಿನವ ಅಲ್ಲ.' ನೆಲ ಅಪ್ಪಿಕೊಂಡು ನಿಶ್ಚಲಳಾಗಿ ಮಲಗಿದ ರೇಣವ್ವನನ್ನು ಮತ್ತೊಮ್ಮೆ ಎಚ್ಚರಿಸಿದವಳು ಕೆಂಪಮ್ಮ.

"ಏನ ಬೇಡಿಕೊಂಡ್ಯ ಹುಡುಗೀ. ಮುಂದಿನ ವರಸ ಬರೂ ಮುಂದ ಮಗನ್ನ ಎತ್ತಿಕೊಂಡು ಬರೂವಂತೆ. ಆ ತಾಯಿಗೆ ಎಲ್ಲಾ ಗೊತ್ತಾಗತೈತಿ. ನಿನ ಬಯಕಿ ತೀರಸ್ತಾಳ." ಕೆಂಪಾಗಿದ್ದ ರೇಣವ್ವನಿಗೆ ಚೇಷ್ಟೆ ಮಾಡಿ ಕೆಂಪಮ್ಮ ನಕ್ಕಳು.

***

ಮನೆಗೆಲಸ, ಅತ್ತೆಯ ಚಾಕರಿ, ಹೊಲದ ಕೆಲಸಗಳ ಮಧ್ಯೆ ವಾರಕ್ಕೆರಡು ಬಾರಿ ಹತ್ತಿರದ ಗುಡ್ಡಕ್ಕೆ ಹೋಗಿ ಕಟ್ಟಿಗೆ ಮಾಡಿಕೊಂಡು ಬರುತ್ತಾಳೆ ರೇಣುಕಾ. ಸಹಾಯಕ್ಕೆ ಹೆಣ್ಣು ದಿಕ್ಕಿಲ್ಲದೆ ಒಬ್ಬಳೇ ದುಡಿಯುತ್ತಾಳೆ. ಹೊಲದಲ್ಲಿ ಕಡಿಯಲು ಮರಗಳು ಇಲ್ಲದ್ದರಿಂದ ಹೆಂಡತಿ ಗುಡ್ಡಕ್ಕೆ ಹೋಗದೆ ಬೇರೆ ದಾರಿಯಿಲ್ಲ. ಜೀವ ಮರುಗಿದರೂ ಸತ್ಯಣ್ಣ ಸುಮ್ಮನಿದ್ದ.

ಆ ಸಂಜೆ ತಲೆ ಮೇಲೆ ಕಟ್ಟಿಗೆಯ ಭಾರ, ಎದೆಯ ತುಂಬ ದುಗುಡದ ಭಾರ, ಕಣ್ಣುಗಳಲ್ಲಿ ಕನಸಿನ ಭಾರ ಹೊತ್ತು ಜೋಪಾನವಾಗಿ ಒಂದೊಂದೇ ಹೆಜ್ಜೆ ಎತ್ತಿ ಇಡುತ್ತ ಗುಡ್ಡ ಇಳಿಯುತ್ತಿದ್ದಳು ರೇಣವ್ವ. ಸೂರ್ಯ ದಿನವೆಲ್ಲ ತಿರುಗಾಡಿ ದಣಿದು ವಿಶ್ರಾಂತಿಗೆ ತಾಯಿ ಬಳಿ ಸೇರಲು ಬೇಗ ಬೇಗ ಇಳಿಯುತ್ತಿದ್ದ. ಆಕಾಶದ ಕೆಂಪು ಕಪ್ಪಾಗುವ ಮೊದಲೇ ಗುಡ್ಡ ಇಳಿದು ಹಳ್ಳಿಯ ದಾರಿ ಹಿಡಿಯಬೇಕಾಗಿತ್ತು. ಹಾಗಂತ ಅವಸರ ಮಾಡುವಂತೆಯೂ ಇಲ್ಲ. ಕಾಲು ಜಾರಬಾರದಲ್ಲ! 'ಭೀಮಕ್ಕ ಕರದಾಗನ ತಿರುಗಿ ಬರಬೇಕಾಗಿತ್ತು. ಮಳಿಗಾಲ ಹತ್ರ ಬಂತು ಅಂತ ಒಣಾ ಕಟಿಗೀ ಆಸೇಕ ದೂರ ದೂರ ಹ್ವಾದೆ ಮುಂದಿನ ಹೆಜ್ಜೆ ಬಿದ್ದದ್ದು ಮುಳ್ಳು ಕಂಟಿಯ ಮೇಲೆ, ಹಾ ಎಂದು ಚೀರಿದಳು. ಅಂಗಾಲಲ್ಲಿ ದೊಡ್ಡ ಜಾಲಿ ಮುಳ್ಳು ಊರಿಕೊಂಡಿತ್ತು. ಕಾಲು ಊರುವಂತಿಲ್ಲ. ಬಗ್ಗಿ ತೆಗೆಯುವಂತಿಲ್ಲ. ಯಮಯಾತನೆ! ಕುತ್ತಿಗೆ ನೋವು, ಕಾಲು ನೋವು, ಮನಸಿನ ನೋವು ಕೂಡಿ ಭಾರ ಇನ್ನೂ ಹೆಚ್ಚಾಯಿತು. ಕುಂಟುತ್ತ, ಅಳುತ್ತ ದಾರಿ ಸೇರಿದಳು. ಮನೆ ಸೇರಲು ಇನ್ನೂ ದಾರಿ ದೂರ. ಅಚೀಚೆ ಯಾರೂ ಇಲ್ಲ. ಮತ್ತೆ ಕಣ್ಣೀರು ಹರಿಯಿತು.

ಅವಳ ಗೋಳು ಮುಟ್ಟಿತೇನೋ ಅನ್ನು ಹಾಗೆ ಸುವಾಸನೆ ಸೂಸಿತು. ಹೌದು ಅದೇ ಪರಿಮಳ. ದುಃಖದ ಪರದೆ ಸರಿಯಿತು. ಯಾರೋ, ಯಲ್ಲಮ್ಮ ತಾಯಿನೇ ಕಳಿಸಿರಬಹುದು ಕುತೂಹಲದ ಕಣ್ಣಿಗೆ ಕಾಣಿಸಿದವ ಸತ್ಯಣ್ಣ.

"ಯಾಕೋ ಕತ್ತಲಾದರೂ ನೀ ಬರಲಿಲ್ಲಾ ನೋಡಾಕ ಅಂತ ಬಂದೆ. ತಡಾಮಾಡಿದಿ."

ಕಾಲು ತೋರಿಸಿದಳು. ಮೌನವಾಗಿ ಸತ್ಯಣ್ಣ ಹತ್ತಿರ ಬಂದ. ಹಗುರಾಗಿ ಹೊರೆ ಎತ್ತಿ ಕೆಳಗೆ ಒಗೆದ. ಅವಳ ರಟ್ಟೆ ಹಿಡಿದು ದಾರಿ ಬದಿಯಲ್ಲಿದ್ದ ಕಲ್ಲ ಮೇಲೆ ಕೂಡ್ರಿಸಿದ. 'ಎಲ್ಲೆ ಕಾಲು ಕೊಡು' ಮಂಡಿಯೂರಿ ಕುಳಿತು ಮೃದುವಾಗಿ ಕಾಲು ಎತ್ತಿ ತನ್ನ ತೊಡೆಯ ಮೇಲಿಟ್ಟುಕೊಂಡ. ರೇಣೂನ ದೇಹ ಸಣ್ಣಗೆ ನಡುಗುತ್ತಿತ್ತು. 'ಅಗಳಾಡಬ್ಯಾಡ ನನ್ನ ಹೆಗಲ ಹಿಡಕೊ' ದೊಡ್ಡ ಮುಳ್ಳದ. ನೂವಾದರೂ ಸ್ವಲ್ಪ ತಡಕೊ, ಪಿನ್ ಇದ್ದರ ಕೊಡು ಕಿತ್ತು ತೆಗೆದ. 'ಎಂಥೆಂಥಾ ನೋವು ಸಹಿಸೇನಿ ಇದೇನು ಮಹಾ. ಅದೂ ನಿಮ್ಮ ಜೊತಿ ಇದ್ದಾಗ'. ಮುಳ್ಳಿಗೆ ಮನದಲ್ಲೇ ವಂದಿಸಿದಳು. ರೇಣುಕಾ 'ಕಟಿಗಿ ಹೊರಿ ಇಲ್ಲೇ ಒಗಿ ನಾಳೆ ತರೂಣಂತೆ. ಕಾಲು ಪೂರ್ತಿ ಊರಬ್ಯಾಡಾ ನಡಿ.

ಗಂಡನ ರೆಟ್ಟೆ ಹಿಡಿದು ಕುಂಟುತ್ತ ಬಂದಳು ರೇಣುಕ. ಸಾತವ್ವ ಶಂಕರ ಕೇಳಿದ್ದಕ್ಕೆ ಉತ್ತರ ಕೊಟ್ಟವನು ಸತ್ಯಣ್ಣ. ಹೆಂಡತಿಯ ಮುಖ ಮೊದಲ ಬಾರಿ ಎಂಬಂತೆ ಸತ್ಯಣ್ಣ ದಿಟ್ಟಿಸುತ್ತಿದ್ದ. ಕೆಂಪು ಗಲ್ಲ, ಸೆಳೆವ ಕಣ್ಣು, ಮುಗುಳ್ನಗೆ, ಬೆವರು, ಆಯಾಸ ಎಲ್ಲಾ ಕೂಡಿ ಹೊಸ ಹೆಣ್ಣಾಗಿದ್ದಳು. ಅವನ ಕಣ್ಣಿಗೆ ಕಣ್ಣು ಕೂಡುವ ಹೊತ್ತಿಗೆ ನಾಚಿಕೆ ಮೂಡಿ ಲಾಟೀನು ಬೆಳಕಿನಲ್ಲಿ ಓದುತ್ತಿದ್ದ ಶಂಕರನ ಹತ್ತಿರ ಹೋಗಿ ಕುಳಿತ. ಮನಸ್ಸು ಅಲ್ಲಿ ನಿಲ್ಲದೆ ರೇಣವ್ವನ ಹಿಂದೆ ಹಿಂದೆ ಸುಳಿಯುತ್ತಿತ್ತು. ಪ್ರೀತಿ, ಅನುಕಂಪ, ತನ್ನದೇ ವಸ್ತು ಎನ್ನುವ ಹೆಮ್ಮೆ. ಬಂಡೆಯಾಗಿದ್ದ ಸತ್ಯಣ್ಣನ ಮನಸ್ಸು ಮೇಣದಂತೆ ಕರಗುತ್ತಿತ್ತು.

ಮರುದಿನ ರೇಣುಕಾಳಿಗೆ ಆಶ್ಚರ್ಯ ಕಾದಿತ್ತು . ಹಕ್ಕೆಯಲ್ಲಿ ಹಾಕಿದ್ದ ಶಗಣಿಯನ್ನು ಹೆಡಿಗೆಯಲ್ಲಿ ತುಂಬಿ ತುಂಬಿ ತಿಪ್ಪೆಗೆ ಹಾಕಿ ಬಂದ ಸತ್ಯಣ್ಣ, ಹೊಲದಿಂದ ಬಂದ ಮೇಲೆ ನಾಲ್ಕಾರು ಕೊಡ ನೀರು ಸೇದಿ ತಂದು ಹಾಕಿದ. ಬೇಡ ಬೇಡ ಎಂದರೂ ಹಿತ್ತಲಲ್ಲಿ ಕಟ್ಟಿಗೆ ಸೀಳಿ ಒಲೆ ಹತ್ತಿರ ತಂದು ಹಾಕಿದ. ಮರುದಿನ ಜಳಕಕ್ಕೆ ಇಳಿದ ಗಂಡನ ಬೆನ್ನು ತಿಕ್ಕಿ ತಿಕ್ಕಿ ನೀರೆರೆದಳು ರೇಣವ್ವ. ರಾತ್ರಿ ಕಾಲು ಹಿಸುಕಲು ಬಂದ ಹೆಂಡತಿಯ ಸ್ಪರ್ಶ ಇನ್ನಷ್ಟು ಬೇಕೆನ್ನಿಸಿತು ಸತ್ಯಣ್ಣನ ಕಾಯ್ದ ದೇಹಕ್ಕೆ.

ಅಚ್ಚ ಪರಿಮಳ ಒಂದು ಅವರಿಬ್ಬರನ್ನು ಆವರಿಸಿಕೊಂಡಿತು.

■■

# ನಿರಾಳ

ಹೊರಗೆ ಧಗಧಗ ಉರಿಯುತ್ತಿದ್ದ ಕಟ್ಟಿಗೆಗಳನ್ನು ಒಲೆಯ ಒಳಕ್ಕೆ ತಿವಿದು ಸಾರು ಉಕ್ಕಿ ಹರಿಯದಂತೆ ಸೌಟು ಆಡಿಸುತ್ತ ಕಣ್ಣೀರನ್ನು ಒತ್ತಿ ಹಿಡಿದಿದ್ದಳು ಮಂಗಳಾ. ಅತ್ತೆಗೆ ಗಂಜಿ ಕುಡಿಸಿದ ಗಂಗಾಳ, ಹಾಲಿನ ಗಿಂಡಿಯನ್ನು ಹಿಡಿದು ಬಂದ ಗೌರಕ್ಕ ಪುನಃ ಪುನಃ ಮನದಲ್ಲಿ ಏಳುತ್ತಿದ್ದ ಪ್ರಶ್ನೆಯನ್ನು ಉಸಿರಿದಳು.

"ಸುಮೀ ಯಾಕ ಇನ್ನೂ ಬರಲಿಲ್ಲಾ?"

ಓರಗಿತ್ತಿಯ ಪ್ರಶ್ನೆಗೆ ಉತ್ತರ ಯಾರಿಗೆ ಗೊತ್ತಿತ್ತು? ದೀಪ ಹಚ್ಚುವ ಹೊತ್ತಾದರೂ ಕಾಲೇಜಿಗೆ ಹೋದ ಮಗಳು ಇನ್ನೂ ಮನೆಗೆ ಬಂದಿಲ್ಲ. ಒಡಲಲ್ಲಿ ಉರಿಯುತ್ತಿದ್ದ ಚಿಂತೆಯಲ್ಲಿ ಮಂಗಳ ಮೂಕಳಾಗಿ ತಲೆ ಅಲ್ಲಾಡಿಸಿದಳು. ಲೋಟ ನೀರು ಎತ್ತಿ ಗಟಗಟ ಕುಡಿದಳು. ಹೊಟ್ಟೆಯ ಬೆಂಕಿ ಆರಲು ಅಷ್ಟು ಸಾಕಾದೀತೆ ?

ಮುದುಕಿ ಮತ್ತ ಕೇಳಿತು. "ಆ ಸುಮೀ ಯಾಕ ಬಂದಿಲ್ಲಾ" ಅಂತ. ಇನ್ನು ಎಲ್ಲಿ ರಗಳೆ ಎಬ್ಬಿಸತೈತೊ ಅಂತ ನನ್ನ ಹೊಟ್ಟಿ ಕಡಿಯಾಕ ಹತ್ತೇತಿ.

ಉತ್ತರ ನಿರೀಕ್ಷಿಸದ ಗೌರಕ್ಕ ತಲೆಬಾಗಿಲಿಗೆ ನೀರು ಹಾಕಿ ಊದುಬತ್ತಿ ಹಚ್ಚುವ ನೆವ ಮಾಡಿ ಹೊರಗೆ ಹೋದಳು. ಶಾಲೆಯಿಂದ ಬಂದ ಚಿಳ್ಳೆ-ಮಿಳ್ಳೆಗಳು ಲಾಟೀನಿನ ಬೆಳಕಿನಲ್ಲಿ ಚಾಪೆಯ ಮೇಲೆ ಬಗ್ಗಿ ಕೂತು ಧ್ಯಾನಮಾಡುತ್ತಿದ್ದವು.

ಅಂಗಳಕ್ಕಿಳಿದು ನಾಲ್ಕು ಹೆಜ್ಜೆ ಮುಂದಕ್ಕೆ ಹೋಗಿ ನಿಂತರೆ ಮಬ್ಬುಗತ್ತಲು ನೆರಳಿನಂತೆ ನೆಲವನ್ನೆ ನುಂಗುತ್ತಿತ್ತು. ಅವಳಿಗೆ ಒಂದು ರೀತಿಯ ಭಯ ಮೈ ತುಂಬಿ...........

ಊರು ಬಿಟ್ಟು ದೂರದ ಒಂಟಿಮನೆ. ವಿಸ್ತಾರವಾದ ಪ್ರದೇಶದಲ್ಲಿ ಎಲ್ಲೆಲ್ಲೋ ಒಂದೊಂದು ಮನೆ. ಅಪೂರ್ಣ ಕಟ್ಟಡಗಳು. ದೊಡ್ಡ ಶ್ರೀಮಂತರ ಮನೆಗಳೂ ಅಲ್ಲ. ಕಾಂಪೌಂಡು ಗೋಡೆಗಳಿಲ್ಲ. ಹಗಲಿನಲ್ಲಿ ಒಂದಿಷ್ಟು ಕೆಲಸದಾಳುಗಳ ಉಲುವು, ಕತ್ತಲು ಮುಸುಕುತ್ತಿದ್ದಂತೆ ನಿರ್ಜನ ಪ್ರದೇಶ . ಡೆವಲಪ್ಡ್ ಏರಿಯಾ ಅಲ್ಲ. ಬೀದಿ ದೀಪಗಳಷ್ಟೇ ಅಲ್ಲ ಮನೆಗಳಿಗೇ ವಿದ್ಯುಚ್ಛಕ್ತಿ ಇಲ್ಲ. ರಸ್ತೆ ಗಟಾರ, ಅಂಗಡಿ, ಗಿರಣಿ, ಯಾವುದೂ ಇಲ್ಲ. ಏನು ಸಾಮಾನು ಬೇಕಾದರೂ ಗಂಡಸರು ಅಂಗಡಿ ಮುಚ್ಚಿ ಮನೆಗೆ ಬರುವಾಗ ರಾತ್ರಿ ಹತ್ತರ ಮೇಲೆ ತರಬೇಕು. ಇದ್ದದ್ದು ಒಂದೇ ತಮ್ಮದೇ ಸ್ವಂತ ಮನೆ.

ಮನೆಯ ಮುಂಬಾಗಿಲ ಚೌಕಟ್ಟು ಪೂಜೆ ಮಾಡಲು ಬಂದ ಗೌರಕ್ಕ -ಮಂಗಳೆಯರು ಹೌಹಾರಿದ್ದರು. ತುಂಬಿದ ವಠಾರದಲ್ಲಿ ಜಗತ್ತನ್ನೆ ಕಂಡ ಓರಗಿತ್ತಿಯರು ತಮ್ಮ ಅರ್ಧ ಬದುಕನ್ನು ಕಳೆದಿದ್ದರು. ನೆರೆ-ಹೊರೆಯನ್ನು ಬಿಟ್ಟು ವನವಾಸಕ್ಕೆ ಬಂದಂತಾಗಿತ್ತು. ಬಾಯಿ ಬಿಟ್ಟು ಆಡುವಂತಿಲ್ಲ.

ಇದಕ್ಕಿಂತ ಏನು? ಕಣ್ಣೀರು ತರಾಕ ಏನು ಧಾಡಿ ನಿಮಗ? ಪಾಶ್ ಏರಿಯಾದಾಗ ಬಂಗ್ಲೆ ಕಟ್ಟಾಕ ನಿಮ್ಮ ಗಂಡ ಏನ ಲಕ್ಷಾಧೀಶರ? ಕುಬೇರನ ಮೊಮ್ಮಕ್ಕಳ? ನಿಮ್ಮಪ್ಪ ಏನ ಗಂಟು ಕಟ್ಟಿಕೊಟ್ಟಾರ? ಹಾಸಿಗಿ ಇದ್ದಷ್ಟ ಕಾಲು ಚಾಚಬೇಕು.

ಸರಿ, ಬೈಗುಳಗಳ ಸುರಿಮಳೆ. ಮಂಗಳಾರತಿ ಮಾಡಿಸಿಕೊಂಡು ಓರಗಿತ್ತಿಯರಿಬ್ಬರೂ ಹಲ್ಲು ಕಚ್ಚಿ, ತುಟಿ ಬಿಗಿದು, ಗೊಣಗುತ್ತ ತಮ್ಮ ಸಿಟ್ಟನ್ನು ಮಕ್ಕಳಿಗೆ ನಾಲ್ಕೇಟು ಹಾಕಿ ತೀರಿಸಿಕೊಂಡಿದ್ದರು, ಸುಮಿತ್ರಳಿಗಷ್ಟೇ ಈಗ ಏಟುಗಳಿಂದ ಮುಕ್ತಿ ಸಿಕ್ಕಿತ್ತು. ಇವತ್ತು ಎಷ್ಟು ಹೊಡೆತಾ ತಿಂತಾಳೊ ಈ ಸುಮೀ, ಗೌರಕ್ಕನ ಕರುಳು ಚುರಕ್

ಎಂದಿತ್ತು. ಹೆಣ್ಣು ಮಕ್ಕಳಿಲ್ಲದ ಅವಳು ಈ ಮಗಳನ್ನು ಪಕ್ಕದಲ್ಲಿಟ್ಟುಕೊಂಡೇ ಜೋಪಾನ ಮಾಡಿದ್ದಳು. "ಹೊರಗ ಹೋದರ ಕತ್ತಲ ಗವ್ ಅಂತ್ಯೈತಿ. ನನಗ ಹೆದರಿಕಿ ಆತು. ಈ ಹುಡುಗಿ ಯಾವಾಗ ಬರ್ತಾಳೋ ಏನ ಕತೀನೋ" ಮಂಗಳೆ ದುಃಖ ತಡೆಯದೆ ಬಿಕ್ಕಿದ್ದು ನೋಡಿ ಹತ್ತಿರ ಬಂದು ಹೆಗಲ ಮೇಲೆ ಕೈ ಇಟ್ಟು "ಛೀ ಹುಚ್ಚೀ ಅಳಬ್ಯಾಡಾ, ದೇವರಿಗೆ ದೀಪಾ ಹಚ್ಚೇನಿ, ಕೈಕಾಲು ತೊಳಕೊಂಡು ಕೈಮುಗದ ಬಾ. ಈಗ ಬರ್ತಾಳ ಸುಮೀ" ಮುದುಕಿಗೆ ಕೇಳ್ಸೀತು ಮತ್ತೆ. ಸೂಕ್ಷ್ಮ ಕಿವಿಯ ಅತ್ತೆಗೆ ಪಿಸು ಮಾತನಾಡಿದರೂ ಕೇಳುತ್ತದೆ. ಕೂಡಲೆ ಹಾಲಮ್ಮನಿಂದ ಪುಂಖಾನುಪುಂಖವಾಗಿ ಪ್ರಶ್ನೆಗಳು ತೂರಿ ಬರುತ್ತವೆ. ಎಲ್ಲಿ ಎತ್ತ ಏನು, ಯಾರು, ಯಾಕೆ ಎಲ್ಲಾ ಹೇಳಲೇಬೇಕು. ನಡ ಮುರಿದು ಹಾಸಿಗೆ ಹಿಡಿದಿದ್ದರೂ ಅಲ್ಲಿಂದಲೇ ಮನೆಯ ಕಾರುಭಾರು. ಹರಿತ ಬಾಯಿ, ಜೋರು ಗಂಟಲು, ಮೈ ತುಂಬ ಧೈರ್ಯ ಇರುವ ಇಂಥದೊಂದು ಜೀವ ಮನೆಯಲ್ಲಿ ಇದೆ ಎನ್ನುವುದೇ ದೊಡ್ಡ ಬೆಂಬಲ ಆ ನಿರ್ಜನ ಪ್ರದೇಶದಲ್ಲಿ ಬದುಕು ಮಾಡಲು ಬಂದ ಈ ಹೆಂಗಸರಿಗೆ.

"ಏ.. ರಂಡೇರ ಏನ ಮಾತಾಡತೀರಿ ಅಲ್ಲೆ. ಪಿಸಿಪಿಸಿ ಅಂತ ಯಾಕ ಅಂತೀರಿ? ಮೈಯಾಗ ಸಗತಿ ಐತಿಲ್ಲೊ. ರೊಟ್ಟೀ ತಿಂದೀರಿಲ್ಲೊ? ಬರ್ರಿಲ್ಲೆ ಬೋಸಡೇರ. ಏನು ಮುಚ್ಚಿಡಾಕ ಹತ್ತೀರಿ. ಹೇಳ್ರಿ ಬರ್ರಿಲ್ಲೆ ಒದರ್ರೀ ಎಲ್ಯದಾಳ ಆಕಿ ಹೊಯ್ಮಾಲಿ ಕರೀರಿ. ಬಂದಾಳಿಲ್ಲೊ? ಇನ್ನೂ ಯಾಕ ಬಂದಿಲ್ಲಾ. ಕಿಡಿಕ್ಯಾಗ ಕಾವಳ ತುಂಬೇತಿ. ದೀಪಾ ಹಚ್ಚ ಬರ್ರಿ. ನೀವೇನ ದನಾ ಕಾಯ್ತಿರೇನು? ಸುಮೀ.. ಸುಮೀ.."

ಹಾಲಮ್ಮ ಒಂದೇ ಉಸುರಿನಿಂದ ಕಿರಿಚುತ್ತಿದ್ದಳು.

ಸುಮಿತ್ರ ಓಡುತ್ತಿದ್ದಳು... ದಮ್ಮು ಹಿಡಿದು ತೇಕುತ್ತಿದ್ದಳು... ಬರಿ ಹಣೆ. ಹರಿದ ಬ್ಲೌಜು, ಜಾರಿ ಬೀಳುತ್ತಿದ್ದ ಸೆರಗು ನಿರಿಗೆ, ಪುಸ್ತಕಗಳು... ಮೈಕೈ ಎಲ್ಲ ಮಣ್ಣು, ತರಚು ಗಾಯ, ಕುತ್ತಿಗೆಯಲ್ಲಿ ಉಗುರಿನ ಗೀರು, ಬಾಯಿ ಒಣಗಿ, ತಲೆ ತಿರುಗಿ, ಕಣ್ಣು ಮಂಜಾಗಿ, ಕಾಲು ಥರಥರ ನಡುಗಿ ಆದರೂ ಓಡುತ್ತಿದ್ದಾಳೆ ಒಬ್ಬಳೇ ಹುಡುಗಿ...

ಬಟ್ಟೆ ಹಾಕಿದ ಭೂತ ಬೆನ್ನು ಹತ್ತಿದೆಯೇನೋ ತಿರುಗಿ ನೋಡಿದಳು. ಇಲ್ಲಿ ಯಾರೂ ಇಲ್ಲ. ಮನೆ ಹತ್ತಿರವಿಲ್ಲ, ಪ್ರಪಂಚದ ಕೊನೆಗೆ ಇದೆ. ಏನೋ ನಾನು ಮುಟ್ಟುವೆನೋ... ಹುಂ... ಉಹುಂ... ಪ್ರಜ್ಞೆ ತಪ್ಪುವೆನೋ. ಕಣ್ಣ ತುಂಬ ಕತ್ತಲೆ ಒಮ್ಮೆಲೆ ನೆಲಕ್ಕೆ ಕುಕ್ಕರಿಸಿ ತಲೆ ಗಟ್ಟಿಯಾಗಿ ಹಿಡಿದುಕೊಂಡಳು.

ಒಬ್ಬಳೇ ಅಲ್ಲಿ ಕೂತಿರಲೂ ಭಯವಿಲ್ಲ. ತಲೆ ಪೂರ್ತಿ ಖಾಲಿ. ಇಲ್ಲೇ ಬೇರು ಬಿಟ್ಟರೇ ಚೆನ್ನ. ಆಗ ಮನೆಯೂ ಇಲ್ಲ. ನಾನೂ ಇಲ್ಲ. ಆದರೆ ಅದು ಸಾಧ್ಯವಿಲ್ಲ. ನಿಧಾನವಾಗಿ ಮೈ ಸವರಿಕೊಂಡಳು. ಎಲ್ಲಾ ಇವೆ... ಕಣ್ಣು, ಮೂಗು, ಕಿವಿ, ಕೈ, ಹೊಟ್ಟೆ, ಎದೆ ಅಲ್ಲಲ್ಲಿ ನೋವೂ ಇದೆ. ನಾನು ಹುಡುಗಿ... ಮರವಲ್ಲ. ನನಗೆ ಮನೆ, ತಂದೆ, ತಾಯಿ, ಅಜ್ಜಿ, ದೊಡ್ಡಪ್ಪ, ದೊಡ್ಡವ್ವ, ತಂಗಿ-ತಮ್ಮ ಎಲ್ಲಾ ಇದ್ದಾರೆ. ಅವರೆಲ್ಲಾ ದಾರಿ ಕಾಯ್ತಿದ್ದಾರೆ.

ಸುತ್ತಲು ಕಾವಳ ಕವಿಯುತ್ತಾ ಇದೆ. ಮನೆ ನೆನಪಾದೊಡನೆ ಮರಗಟ್ಟಿದ ಮೈ, ಮನಸ್ಸು ಬುದ್ಧಿ ಎಲ್ಲ ಎಚ್ಚರಾದವು. ಮನೆಗೆ ಹೋದ ಮೇಲೆ ಮುಂದೇನು? ಪ್ರಶ್ನೆ ಭೂತಾಕಾರ ತಾಳುತ್ತಿತ್ತು. ಯಾಕೆ ತಡ ಮಾಡಿದೆ; ಎಲ್ಲಿ ಹೋಗಿದ್ದೆ. ಏನಾಯ್ತು ಎಲ್ಲರ ಪ್ರಶ್ನೆ ಎದುರಿಸಬೇಕು ನಿಜ ಹೇಳಬೇಕಾ?

ಅಪ್ಪ, ದೊಡ್ಡಪ್ಪನ ಸಿಟ್ಟು ತಾನು ಅರಿಯದ್ದೇ. ಅವರ ಕೈಗೆ ಸಿಕ್ಕರೆ ಹೊಡೆದು ಚಿಂದಿ ಮಾಡಿಯಾರು... ತಾನು ಕಾಲೇಜಿಗೆ ಹೋಗುತ್ತಿರುವುದೇ ಅವರ ಇಚ್ಛೆಗೆ ವಿರುದ್ಧವಾಗಿ, ತನ್ನ ಹಠದಿಂದ ಅವ್ವ, ಅಜ್ಜಿಯರ ಬೆಂಬಲದಿಂದ.

"ಸುಮೀ ಇಷ್ಟ ಕಲಿತದ್ದು ಸಾಕು, ಕಾಲೇಜ ಕಲತು ಆಕಿ ಏನ ರಾಜ್ಯಾ ಆಳಬೇಕಾಗೇದ. ಮನ್ಯಾಗ ಅಡಿಗಿ, ರೊಟ್ಟಿ ಮನೀಕೆಲಸಾ ಕಲಸ್ರಿ ಸಾಕು" ಫರ್ಮಾನು ಹೊರಡಿಸಿದ್ದರು ಅಣ್ಣ, ತಮ್ಮ. ಸುಮಿತ್ರ ಅತ್ತು, ಕರೆದು ಅನ್ನ ನೀರು ಬಿಟ್ಟು ಹಾಲಮ್ಮನ ಮನಸ್ಸು ಕರಗಿಸಿದ್ದಳು.

ಹೆಣ್ಣುಮಕ್ಕಳು ವಿದ್ಯೆ ಕಲಿತರೆ ಒಳ್ಳೆಯದೆಂದು ವಾದ ಮಾಡಿ ಮಾಡಿ ವಠಾರದ ಮಾಲೀಕರ ಮಗಳು ರೂಪಾ ಹಾಲಮ್ಮನ ಮೇಲೆ ಪ್ರಭಾವ ಬೀರಿದ್ದು ಕೆಲಸ ಮಾಡಿತ್ತು.

"ಈಗಿನ ಕಾಲದಾಗ ಹುಡುಗೀರು ಕಾಲೇಜು ಕಲಿತರ ಭೊಲೋ ಗಂಡ ಸಿಗತಾನಂತ. ಮದುವಿ ಆಗೂತನಾ ಹೋಗಲಿ ಬಿಡ್ರೆಪಾ" ಹಾಗೆಯೇ ಸುಮಿತ್ರಳಿಗೂ ಬುದ್ಧಿ ಹೇಳಿದ್ದಳು "ಹೆಣ್ಣ ಹೆಂಗಸು ಮನಿ ಬಿಟ್ಟು ಹೊರಗ ಹೋದರ ಮಂದಿ ಬಟ್ಟು ಮಾಡಿ ತೋರಸದಾಂಗ ಬದುಕಬೇಕು. ಮನಿ ಮರ್ವಾದಿ ಕಾಯಬೇಕು. ಅಲ್ಲೆ ಇಲ್ಲೆ ಅಡ್ಡ್ಯಾಡಿ ಹಲ್ಲ ಕಿಸಿದು ಏನರೆ ಭಾನಗಡಿ ಮಾಡಿದಿ ಅಂದರ ಗಂಡಸರಕಿಂತ ಮೊದಲ ನಾನ... ನಿನ ಕೈ ಕಾಲ ಮುರದು ಮೂಲ್ಯಾಗ ಕುಂದರಸತೇನಿ ಗೊತ್ತಾತ?"

ಸುಮಿತ್ರ ಥರ ಥರ ನಡುಗಿದಳು. ಯಾವ ದಿಕ್ಕಿನಿಂದಲೂ ಗಾಳಿಯ ಸುಳಿವಿಲ್ಲ. ಉಸಿರು ಕಟ್ಟಿದೆ. ಮನೆಗೆ ಹೋಗದೆ ದೂರ ಓಡಿ ಹೋದರೆ? ಎಲ್ಲಿ ಹೋಗೋದು. ಹ್ಯಾಂಗ ಬದುಕೂದು, ಉಹುಂ, ಅದಕ್ಕಿಂತ ನಾನ ಸತ್ತರ? ಹೌದು ಸಾಯಬೇಕು. ನಾನು ಸತ್ತು ಹೋದರ ಅವ್ವ ನಾಕ ದಿನಾ ಅತ್ತು ಗೋಳಾಡಿ ಆಮ್ಯಾಲೆ ಮರೀತಾಳ. ಇತ್ಲಾಗ ಹೋದರ ಪ್ಲಾಟು ಮಾಡದ ಜಾಗಾದಾಗ ಒಂದ ಹಾಳ ಬಾವಿ ಇತ್ತು. ಅಲ್ಲೆ ಹೋಗಿ ಬಿದ್ದು ಸತ್ತರ? ನೀರಿಲ್ಲದ ಬಾವಿ. ಬರೆ ಪೆಟ್ಟಾಗಿ ಜೀವ ಉಳದರ? ಕೈಕಾಲು ಮುರುದು ಹಾಸಿಗಿ ಹಿಡಿದರ ಎಲ್ಲಾರಿಗೂ ಭಾರ... ಎದ್ದು ನಡೆಯುತ್ತಿದ್ದ ಸುಮಿತ್ರ ಗಕ್ಕನೆ ನಿಂತಳು.

ಇದೆಲ್ಲಾ ಹ್ಯಾಂಗಾತು, ಏನಾತು? ಯಾಕಾತು? ನಾ ಏನ ಪಾಪಾ ಮಾಡಿದೆ? ಉಹುಂ... ನಾ ಏನ ಪಾಪಾ ಮಾಡಿದೆ? ಪಾಪಾ ಮಾಡಿದವನ... ಬ್ಯಾರೆ. ದಿನಾಲು ಅಡ್ಡ್ಯಾಡತಿದ್ದೆ. ಇವತ್ತ... ಯಾಕ ಹಿಂಗಾತು? ಇದರೊಳಗೆ ನಂದೇನ ತಪ್ಪು... ನಾನು ಹೆಣ್ಣ ಆಗಿದ್ದ... ದೇವರ... ಅವನಿಗರೆ ಗೊತ್ತಾಗಬಾರದ... ನಂದೇನೂ ತಪ್ಪಿಲ್ಲ ಅಂತ.

ಆಕಸ್ಮಿಕವಾಗಿ ನಡೆದ ಘಟನೆಯಿಂದ ಹುಚ್ಚಳಾಗಿದ್ದ ಸುಮಿತ್ರಳ ಬುದ್ಧಿ ತಿಳಿಯಾಗುತ್ತ ಬಂದಿತ್ತು.

ಆ ದಿನ ನಡೆದದ್ದಿಷ್ಟೆ.

ಅರ್ಧ ಕಟ್ಟಿದ ಮನೆ, ಹಾಳು ಮನೆ. ದಿನವೂ ಆ ಮನೆ ದಾಟಿಯೇ ಬಸ್ ಸ್ಟಾಪಿಗೆ ಹೋಗಬೇಕು. ಬೇರೆ ಮನೆ ಕಟ್ಟುತ್ತಿರುವ ಆಳುಗಳು ಯಾರಾರೋ ಬಂದು ಇದ್ದು ಹೋಗುವ ಸ್ಥಳ. ಆ ದಾರಿಯಾಗಿ ಎರಡು ಮೂರು ದಿನದಿಂದ ಒಬ್ಬ ಹುಡುಗ... ಅಲ್ಲ ಚಿಗುರು ಮೀಸೆ ಯುವಕ ಬರುತ್ತಿದ್ದ. ಇಟ್ಟಿಗೆ, ಕಟ್ಟಿಗೆ, ಉಸುಕು ಬೀಳುತ್ತಿದ್ದದ್ದು ನೋಡಿದರೆ ಮತ್ತೆ ಮನೆಕೆಲಸ ಸುರು ಆಗುವ ಲಕ್ಷಣವಿತ್ತು. ದಾರಿಯಲ್ಲಿ ಉಲುವು ಆದೀತು ಎಂದು ಸಮಾಧಾನ ಪಟ್ಟುಕೊಂಡಿದ್ದಳು ಸುಮಿತ್ರ. ಪಠ್ಯಪುಸ್ತಕಗಳಲ್ಲದೆ ಕಥೆ, ಕಾದಂಬರಿ ಓದುವ ಹವ್ಯಾಸದ ಸುಮಿತ್ರಳಿಗೆ ಆ ದಿನ ಒಂದು ಕಾದಂಬರಿ ಸಿಕ್ಕಿತ್ತು. ಬೇಗ ಲೈಬ್ರರಿಗೆ ತಿರುಗಿ ಕೊಡಬೇಕು. ಕೊಟ್ಟುಬಿಡೇ ಎಂದು ಗೆಳತಿ ತುಂಬ ಒತ್ತಾಯಿಸಿದ್ದಳು. ಕೊನೆಯ ಪರಿಚ್ಛೇದ ಮುಗಿಸುವ ಹೊತ್ತಿಗೆ ಈ ದಿಕ್ಕಿಗೆ ಬರುವ ಬಸ್ಸು ತಪ್ಪಿ ಹೋಗಿತ್ತು. ಗಾಬರಿಯಾಗಿ ಒಬ್ಬಳೇ ಮನೆಯತ್ತ ಹೆಜ್ಜೆ ಹಾಕುತ್ತಿದ್ದಾಗ, ಹದ್ದಿನಂತೆ ಎರಗಿ ಬಾಯಿ ಮುಚ್ಚಿ ಹಾಳು ಮನೆಯೊಳಕ್ಕೆ ಎಳೆದುಕೊಂಡಿದ್ದ ಕಾಮುಕ.

ನೆಲಕ್ಕೆ ಕೆಡವಿ ಮೇಲೆ ಬಿದ್ದಾಗ ಚೀರುವ ಪ್ರಯತ್ನ ಮಾಡಿದ್ದಳು ಸುಮಿತ್ರ. ಒದರಿದರ ನಿನ ಕುತಗೀನ ಹಿಚಕಿ ಬಿಡತೇನಿ. ಸುಮ್ಮನ ಬಿದ್ದಕೋ. ಗಂಡು ಕೈ ಎಲ್ಲೆಂದರೆ ಅಲ್ಲಿ ಹಿಚುಕುತ್ತಿತ್ತು. ಮೈಯೆಲ್ಲ ಮುಳ್ಳು ಮುಳ್ಳು. ನೆಲ ಚುಚ್ಚುತ್ತಿತ್ತು. ಕಲ್ಲು ಮರಳು ಎಲ್ಲ ಬೆವೆತ ಮೈಗೆ ಅಂಟಿಕೊಂಡಿತ್ತು. ನಿಸ್ಸಹಾಯಕ ಕಣ್ಣಲ್ಲಿ ನೀರು ಇಳಿದಿತ್ತು. ಮೈ ಮನಸ್ಸು ಹೆದರಿ ನಡುಗುತ್ತಿದ್ದರೂ ಗಂಟಲು ಮೂಕವಾಗಿತ್ತು. ಅವನ ಮುಖ ಮೈ ಹತ್ತಿರವಾದಾಗ ಕಾಣದಂತೆ ಕಣ್ಣು ಮುಚ್ಚಿದ್ದಳು ಅಷ್ಟೇ...

ಲಜ್ಜೆ ಮಾಯವಾಗಿ ಆಕಾಶಕ್ಕೆ ತೆರೆದುಕೊಂಡಂತೆ ಬಿದ್ದಿದ್ದಳು ತಾನು. ಇದರಲ್ಲಿ ತನ್ನ ತಪ್ಪು ಏನಿದೆ ? ಎಲ್ಲಿ ಇದೆ? ಹೆಣ್ಣಾಗಿ ಹುಟ್ಟಿದ್ದು ತನ್ನ ತಪ್ಪಲ್ಲ, ಹುಟ್ಟಿಸಿದವರದೂ ಅಲ್ಲ...

ಕೂದಲು ಸರಿ ಮಾಡಿಕೊಂಡು ಸೆರಗು ಹೊದ್ದು ಮನೆಯೊಳಗೆ ಹೆಜ್ಜೆ ಇಟ್ಟಳು ಸಮಾಧಾನದಿಂದ. ಎದುರಿಗೆ ಬಂದ ಗೌರಕ್ಕನನ್ನು ಸರಿಸಿ ಬಚ್ಚಲಿಗೇ ಹೋದಳು. ಕೈ ಕಾಲು ತೊಳೆದು ಬಟ್ಟೆ ಬದಲಾಯಿಸಿ ದೇವರ ಕೋಣೆಗೆ ಬಂದಾಗ ಕಾಲು ನಡುಗಿದರೂ ಒಳಗೆ ಹೋಗಿ 'ತನ್ನಿಂದ ತಪ್ಪಾಗಿದ್ದರೆ ಕ್ಷಮಿಸು' ಮನದಲ್ಲೇ ಬೇಡಿಕೊಂಡಳು.

ಹಾಲಮ್ಮನಿಗೆ ವಾಸನೆ ಬಂದಿತೋ ಎನ್ನುವಂತೆ ಮತ್ತೆ ಕಿರುಚಿದಳು. 'ಸುಮೀ... ಏ ಚಿನಾಲಿ ಬಾ ಇಲ್ಲೆ. ಕುಕ್ಕರಸು. ಯಾಕ ಕತ್ತಲು ಮಾಡಿ ಬಂದಿ? ಹೇಳ'

ಹಾಲಮ್ಮ ಅನುಭವಿ, ಬುದ್ಧಿವಂತೆ. ಉಳಿದವರಂತೆ ಬೇಗ ಮರುಳುಗೊಳಿಸಲಿಕ್ಕಾಗೂದಿಲ್ಲ ಅವಳನ್ನ, ಸುಮಿತ್ರೆಗೆ ಗೊತ್ತು. ಆದರೂ ಒಂದು ಪ್ರಯತ್ನ...

"ಅಜ್ಜಿ ಮಾಸ್ತರರು ಕ್ಲಾಸು ತಡಾ ಮಾಡಿ ಬಿಟ್ಟರು. ಬಸ್ಸು ತಪ್ಪಿತು. ಬ್ಯಾರೆ ಬಸ್ಸು ಹಿಡಿದು ಓಡೋಡಿ ಬರೂದರಾಗ ಕತ್ತಲಾತು. ದಾರಿ ಛೊಲೋ ಇಲ್ಲಾ, ದೀಪ ಇಲ್ಲಾ ಅದಕ್ಕ..."

"ಅದಕ್ಕ ಏನಾತು? ಬಿದ್ದೇನು? ಪೆಟ್ಟು ಎಲ್ಲಿ ಆಗೇದ?"

"ಹೌದಜ್ಜಿ ಕಲ್ಲು, ಮುಳ್ಳು ಕಂಟಿ ಬಾಳ ಅದಾವ. ಕಾಣಿಸಲಿಲ್ಲಾ ಕತ್ತಲದಾಗ ಬಿದ್ದ ಬಿಟ್ಟೆ ಮೊಣಕಾಲು, ಮೊಣಕೈ ತರಚಿ ರಕ್ತ ಬಂದದ. ಆ ಮ್ಯಾಲೆ ಓಡಲಿಕ್ಕೆ ಆಗಲಿಲ್ಲ. ಸೀರೀನೂ ಹರೀತು" ಅಳು ಒಟ್ಟರಿಸಿ ಬಂದಿತ್ತು.

ಕಷ್ಟಪಟ್ಟು ಎದ್ದು ದಿಂಬಿಗಾನಿಸಿ ಕೂತ ಹಾಲಮ್ಮ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಮೊಮ್ಮಗಳನ್ನು ತೊಡೆಯ ಮೇಲೆ ತಲೆ ಇಡಿಸಿ ಬೆನ್ನ ಮೇಲೆ ಕೈಯಾಡಿಸಿದಳು.

ಬಾಯಿ ಬಡಿದುಕೊಂಡ ಸುಮಿತ್ರ ಚೀರಿದಳು. ಅಯ್ಯಯ್ಯೋ ಅಜ್ಜಿ ಮುಟ್ಟಬ್ಯಾಡಾ, ಬ್ಯಾಡಾ ಕೈ ದೂರ ಸರಿಸಲು ನೋಡಿದಳು.

"ಅಯ್ಯ... ಗೌರಿ-ಮಂಗಳೀ ಬರ್ರಿಲ್ಲೆ ಬೋಸಡೇರ, ದೊಡ್ಡ ಲೈಟು ಹಾಕರಿ, ಇಕೀಗೆ ಬೆನ್ನಿಗೆ ಏನಾಗೇದ ನೋಡ ಬರ್ರೀ, ಬಿದ್ದರ ಬೆನ್ನಿಗೆ ಪೆಟ್ಟಾತ ಹ್ಯಾಂಗ ? ತಗೀರಿ ಬ್ಲೌಜು. ಈ ರಂಡಿ ಏನೋ ಘಾತಾ ಮಾಡ್ಯಾಳ."

ಬೆನ್ನಿನ ತುಂಬ ಕಚ್ಚು, ರಕ್ತ ಮಂಜುಗಟ್ಟಿದ ಗಾಯ, ಧೂಳು ತುಂಬಿದ ಕೂದಲು, ಎದೆ, ಕುತ್ತಿಗೆಯ ಮೇಲೆಲ್ಲ ಗೀರು ಗಾಯ, ಛೇ ಛೇ ನೋಡಲಾಸಲ್ಲ!!

"ಖರೇ ಹೇಳು ಹೊಯ್ಯಾಲಿ, ಇಲ್ಲಾಂದರ ನಿನ ಚಂಡ ಮುರಿತೇನಿ" ಮಂಗಳಾಗೆ ತಡೆಯಲಿಲ್ಲ. ಛಟೀರನೇ ಮಗಳ ಕೆನ್ನೆಗೊಂದು ಏಟು ಹಾಕಿದಳು.

ಮುದುಕಿ ಸಹಿಸಲಿಲ್ಲ. ತಾನು ಹಿರಿಯಳು ಇದ್ದಾಗ ಸೊಸೆ ಹೊಡೆದದ್ದಕ್ಕೆ ಸಿಟ್ಟಾಯಿತು. "ಏ ಹಡಬಿಟ್ಟಿ ಸುಮಾಕ ಕುಂದ್ರು. ಬೊಬ್ಬಾಟಾ ಮಾಡಬ್ಯಾಡಾ. ಆ ಬಾಗಲಾ ಮುಚ್ಚಿ ಬರ್ರಿಲ್ಲೆ"

ಸುಮಿತ್ರ ಅಳುತ್ತ ಬಾಯಿ ಬಿಟ್ಟಳು. "ಅಜ್ಜಿ ಇದರೊಳಗ ನಂದೇನು ತಪ್ಪದ ಹೇಳು. ತಪ್ಪ ಇದ್ರ ನೀವ ಶಿಕ್ಷಾ ಕೊಡ್ರಿ. ಅನುಭೋಗಸತೇನಿ ಇರು ಅಂದರ ಇರ್ತೀನಿ, ಸಾಯ ಹೋಗ ಅಂದರ ಸಾಯ್ತೀನಿ."

ಹಾಲಮ್ಮ ದಂಗಾಗಿ ಮಾತು ಬಾರದೆ ಉಸಿರು ಬಿಟ್ಟು ಸೋತು ಕಣ್ಣುಮುಚ್ಚಿ ಹಾಸಿಗೆಯಲ್ಲಿ ಒರಗಿದಳು. ಎಲ್ಲರ ಕಣ್ಣಲ್ಲೂ ನೀರ ಧಾರೆ. ಸುಮಿತ್ರ ಹೆಣ್ಣಾಗಿ ಹುಟ್ಟಿದ್ದೇ ತಪ್ಪೇ? ಮಗಳ ದೈನೇಸಿ ಸ್ಥಿತಿ ನೋಡಿ ಮಂಗಳಾ, ಗೌರಕ್ಕ ಸಪ್ಪಳ ಮಾಡದೇ ಬಾಯಿಗೆ ಸೆರಗು ತುರುಕಿ ಕಣ್ಣೀರು ಹರಿಸಿದರು. ತೀರ್ಪು ಕೊಡಬೇಕಾದ ಹಾಲಮ್ಮ ಎದ್ದು ಕುಳಿತಾಗ ಮುಖ ಗಂಭೀರವಾಗಿತ್ತು.

"ಗೌರೀ ಮಂಗಳಾ ಏಳ್ರಿ. ಅಳೂದು ಸಾಕು, ಈಗ ಕೇಳಿದ್ದೆಲ್ಲಾ ಹೊಟ್ಯಾಗ ಇಟಕೊಳ್ರಿ. ಎಲ್ಲೂ, ಯಾರ ಮುಂದೂ ಉಸರಬ್ಯಾಡ್ರಿ. ಗಂಡಸರ ಕಿವಿಗೂ ಹಾಕಬ್ಯಾಡ್ರಿ. ಎಲ್ಲಾ ನುಂಗರಿ ಏನೂ ಆಗಿಲ್ಲ. ನಮ ಕೂಸು ಏನೂ ತಪ್ಪು ಮಾಡಿಲ್ಲ. ಕರಕೊಂಡು ಹೋಗ್ರಿ ನೀರ ಕಾಸಿ ಬೇಸ್ಯಾಗಿ ಎರೀರಿ, ತಿಕ್ಕಿ ತೊಳೀರಿ. ಗಂಗವ್ವ ಎಲ್ಲಾನೂ ಶುದ್ಧ ಮಾಡತಾಳ ಹೋಗ್ರಿನ್ನ" ಆದರೂ ಎಂಥದೋ ದುಗುಡ.

ಎಂಟ್ಹತ್ತು ದಿನ ಕಳೆದ ಮೇಲೆ ಸುಮಿತ್ರ ಕೊಟ್ಟ ಸೂಚನೆಯನ್ನು ಮಂಗಳಾ ಅತ್ತೆಯ ಕಿವಿಯಲ್ಲಿ ಉಸುರಿ ಮಗಳಿಗೆ ನೀರು ಎರೆಯಲು ಹೋದಳು. ಹೆಣ್ಣುಮಕ್ಕಳ ಮುಖದಲ್ಲಿ ಜೀವ ಕಳೆ ತುಂಬಿತು. ಎಲ್ಲರ ಮನಸ್ಸು ನಿರಾತಂಕ... ನಿರಾಳ.

■■

# ಗೂಡಿನೊಳಗೊಂದು ಹಕ್ಕಿ

ಮೂರು ನಾಲ್ಕು ದಿನಗಳಿಂದ ಮಾಲತಿಯ ತಲೆಯಲ್ಲಿ ಚಿಕ್ಕ ಸುನಾಮಿಯಂಥ ಸುಳಿ ಸುತ್ತುತ್ತಿತ್ತು. ತಾನು ಆಡಿದ ಮಾತು ತನಗೇ ತಿಳಿಯುತ್ತಿರಲಿಲ್ಲ. ಅವ್ವ ಫೋನಿನಲ್ಲಿ ಹೇಳಿದ ಮಾತನ್ನು ಅರಗಿಸಿ ಕುಡಿದು, ಬಿಟ್ಟಿದ್ದಳು. ಅದೇ ಅಮಲಿನಲ್ಲಿ ತೇಲಾಡುತ್ತಿದ್ದಳು. ವಿಚಾರ ಮಾಡಿ ಮಾಡಿ ತಲೆ ಒಲೆಯಾಗಿತ್ತು. ಮನದಲ್ಲಿ ಸಾರು ಕುದಿಯುತ್ತಿತ್ತು. ಅದಕ್ಕೆ ಕಾರಣ ಅವ್ವನ ಫೋನು...

"ಮಾಲೂ, ಸುಮಾನ ಅವ್ವ ತುಳಸಕ್ಕನ್ನ ಶೇಖರ ಮನೀಬಿಟ್ಟು ಹೊರಗ ಹಾಕ್ಯಾನಂತ. ಆಕಿ ಗೋಳ್ಯಾಡೂದೂ ನೋಡಲಿಕ್ಕೆ ಆಗೂದಿಲ್ಲವಾ. ಅಂಥಾ ದೆವ್ವನಂಥಾ ದೊಡ್ಡ ಮನ್ಯಾಗ ಗಂಡ ಸತ್ತ ಮುದುಕಿ ಒಬ್ಬಾಕೇ ಯಾರೂ ದಿಕ್ಕಿಲ್ಲದಾಂಗ ಹ್ಯಾಂಗ ಬದುಕಬೇಕೋ, ನೋಡಿ, ಕೆಟ್ಟ ಅನ್ನಿಸ್ತು." ಆಕಾಶ ಪಾತಾಳ ಒಂದ ಮಾಡೂ ಹಾಂಗ ಅಳಕೋತ ಹೇಳಿದ್ಲು. "ಗಂಟು ಮೂಟೆ ಕಟಿಕೊಂಡು ಹೋಗಿಬಿಡು ಅಂದಾ. ಹೆಣ್ಣು ಕೊಟ್ಟ ಅತ್ತಿಗೆ ಹಿಂಗ ಮರ್ಯಾದಿ ಕೊಡ್ತಾರ? ದೇವರ ಅಂವಗೇನ್ ಛೊಲೊ ಮಾಡೂದಿಲ್ಲ" ಅಂತ ಆಕಿ ಶಾಪಾ ಹಾಕಿದಾಗ ಮಾತ್ರ ನಾ ಸುಮ್ಮನಿರಲಿಲ್ಲ ನೋಡು. ತುಳಸಕ್ಕಾ ಸಾಕು ಬಾಯಿ ಮುಚಗೊಳ್ರಿ. ಶೇಖರಗ ಶಾಪಾ ಹಾಕಿದ್ರ ಸುಮಾಗ ಕೆಟ್ಟ ಆದೀತು ಅನ್ನೂ ವಿಚಾರ ಮಾಡ್ರಿ ಅಂತ ಬಯ್ದು ಬಂದೆ. ಆದರ ನನಗೂ ವಿಚಿತ್ರ ಅನಿಸೇದ. ಶೇಖರ ಒಳ್ಳೇ ಹುಡುಗ! ಇಷ್ಟ ಕಠೋರ ಯಾಕ ಆದಾ ಅಂತ ತಿಳೀಲಿಲ್ಲ" ಹೀಗೇ...

ಇನ್ನು ಒಳಗಿರಲಾರೆ ಎನ್ನುವಂತೆ ಸಂಜೆ ಗಂಡನೆದುರು ಸ್ಫೋಟಿಸಿತು.

"ಶೇಖರ ಇಷ್ಟು ಕೆಟ್ಟ ಆಗ್ತಾನಂತ ನನಗ ಅನಿಸಿದ್ದಿಲ್ಲ" ಹೆಂಡತಿಯ ದನಿಯಲ್ಲಿ ಬೇಸರವಿತ್ತೆಂದು ಅನಿಸಿದ ಅನಿಲ ವಿಷಯ ಏನೆಂದು ತಿಳಿಯದೆ ಹೆಂಡತಿಯನ್ನು ದಿಟ್ಟಿಸಿದ.

ಅವನ ದೃಷ್ಟಿ ಚುಚ್ಚಿದಂತಾಗಿ ಎಚ್ಚರಗೊಂಡು, "ಅಲ್ಲಲ್ಲ... ಅಂವಾ ಒಳ್ಳೆಯಂವಾ, ದೊಡ್ಡ ಮನಸ್ಸಿನವಾ ಅಂತ ತಿಳಕೊಂಡಿದ್ದಾರೆ..." ಅಂದಳು. ಮಾತು ಬೇರೆ ದಾರಿಯಲ್ಲಿ ಸಾಗುತ್ತಿರುವಂತೆ ಅನಿಸಿ ಶರ್ಟು ತೊಟ್ಟುಕೊಳ್ಳುತ್ತ, ಅದೇನು ಹೊಸಾ ವಿಷಯ ತನಗೆ ಮೊದಲೇ ಗೊತ್ತಿತ್ತು ಎನ್ನುವ ಭಾವದಲ್ಲಿ.

"ಯಾರು, ಅವನಃ ಹೌದಲ್ಲೊ ಶೇಖರಾ ನಿನಗ ಸೀರಿ..."

ಥಟ್ಟನೆ ಅವನ ಮಾತು ತುಂಡರಿಸಿ "ಮಕ್ಕಳಾದ ಮ್ಯಾಲೂ ಹಂಗಸ್ತಿರೇನು? ಸಾಕು ಸುಮ್ಮನಿರ್ರಿ. ನಾ ಅವನ ಹೆಸರು ನಿಮ್ಮ ಮುಂದ ತಗಿಬಾರದಾಗಿತ್ತು. ಆ ಮಾತು ನಾ ಯಾವಾಗ್ಲೋ ಮರತ ಬಿಟ್ಟೇನಿ"

-ಹೌದೇನು -ಖರೇ ಶೇಖರನ್ನ ಮರ್ತೀನ ಉಹುಂ, ಅದು ಈ ಜನ್ಮದಾಗ ಸಾಧ್ಯ ಇಲ್ಲ. ಆದರೂ ಅನಿಲನ ಹೆಂಡತಿ ಆಗಿ ಈ ನಾಟಕ ಮಾಡಾಕ ಬೇಕಲ್ಲ.

ಮಾತು ಸುರುಮಾಡಿದ ಮೇಲೆ ಮುಗಿಸಲೇಬೇಕಾದಂಥ ಗೊಂದಲದಲ್ಲಿ ಸಿಕ್ಕಿಬಿದ್ದ ಮಾಲಾ-

"ಹಂತಾ ದೊಡ್ಡ ಮಾತಲ್ಲ ಬಿಡ್ರಿ. ನಮಗ ಸಂಬಂಧಿಸಿದ್ದೂ ಅಲ್ಲ. ಶೇಖರ ತುಳಸಕ್ಕನ್ನ ಮನೀ ಬಿಟ್ಟು ಹೊರಗಹಾಕ್ಯಾನಂತ. ಒಬ್ಬಾಕೆ ಮಗಳು ಅಲ್ಲೇ ಇರತೀನಿ ಅಂತ ಹೋಗಿದ್ಲು ತುಳಸಕ್ಕ. ಈಗ ತಿರಿಗಿ ಬಂದಾಳಂತ ಅವ್ವ ಫೋನ್ ಮಾಡಿದ್ಲು" ಮಾತು ತೇಲಿಸಿದಳು ಮಾಲಾ.

"ಹಾಂ ತುಳಸಕ್ಕ ಅಂದರ ಶೇಖರನ ಅತ್ತಿ ಹೌದಲ್ಲೊ, ಅತ್ತಿ ಅಳಿಯಾಗ ಆಸ್ತಿ ಸಲುವಾಗಿ ಏನೋ ಜಗಳ ಬಂದಿರಬೇಕು. ಹೊರಗ ಹಾಕ್ಯಾನ. ಮತ್ತ ಕರಸ್ತಾನ, ಅದೇನ ದೊಡ್ಡ ಮಾತು"

ಅನಿಲ ಕ್ಲಬ್ಬಿಗೆ ಹೊರಟುಹೋದ. ಸ್ಫೋಟಗೊಂಡು ತಲೆಭಾರ ಇಳಿಸಿಕೊಂಡು ಮಾಲಾ ಪುನಃ ಯೋಚನೆಗೆ ಬಿದ್ದಳು.

ಶೇಖರನ ವಿಷಯ ಅನಿಲನ ಮುಂದೆ ಎತ್ತಿದ್ದು ನನ್ನ ತಪ್ಪು. ಎಷ್ಟು ಸಹಜವಾಗಿ ಶೇಖರನ ಬಗ್ಗೆ ಕೀಳು ಮಾತು ಆಡಿ ಹೋಗಿಬಿಟ್ಟ. ಗಂಡನ ಮುಂದೆ ಹೇಳಿದಂತೆ ನಿಜವಾಗಿಯೂ ಶೇಖರ ಕಟುಕ, ಸ್ವಾರ್ಥಿ ಅಂತ ನಾ ನಂಬಿದ್ದೇನು, ಗಂಡನ ಮುಂದೆ ನಾಟಕಾ ಮಾಡಬೇಕಾದ ಪಾತ್ರದ ಮಾತುಗಳೋ ತಿಳಿವೊಲ್ಲದು. ಶೇಖರನ ಮನೆಯಲ್ಲಿ ನಡೆದದ್ದೇನು? ಅವನು ಯಾಕೆ ಹೀಗೆ ಮಾಡಿದ, ಉಹುಂ ಒಂದೂ ಗೊತ್ತಿಲ್ಲ. ಆದರೂ ತನ್ನ ಒಳಗೆ ಯಾಕೆ ಈ ಕುದಿತ. ಅವನು ಕೆಟ್ಟವನೆನ್ನಿಸಿಕೊಳ್ಳಬಾರದು ಎನ್ನುವ ತುಡಿತ. ವರ್ಷಗಳಾದರೂ ಅವನು ತನ್ನ ಮನದಲ್ಲಿ ಕೂತು ಬಿಟ್ಟಿದ್ದಾನೆ. ಈಗಲೂ ತನ್ನನ್ನು ಪ್ರೀತಿಸ್ತಾನೋ, ಇಲ್ಲಾ ಸುಮಾಳೊಡನೆ ಬಾಳುತ್ತಾ ಮಾಲಾನನ್ನು ನೆನೆಸುತ್ತಾನೊ ಉಹುಂ ಒಮ್ಮೆ ಗೊತ್ತಿಲ್ಲ ಅನಿಸುತ್ತದೆ. ಮತ್ತೊಮ್ಮೆ ತಾನೇ ಅವನ ಮೊದಲ ಪ್ರೀತಿ ಅದನ್ನು ಯಾರೂ ಎಂದೂ ಮರೆಯುವದು ಸಾಧ್ಯವೇ ಇಲ್ಲ ಅನಿಸುತ್ತದೆ. ಶೇಖರನ ಪತ್ರವಿಲ್ಲ. ಭೇಟಿಯಿಲ್ಲ. ತನ್ನ ಪ್ರಶ್ನೆ ಕೊನೆಯವರೆಗೂ ಉತ್ತರವಿಲ್ಲದೆ ಉಳಿಯುವದೇನೋ!

ಮದುವೆಯಾದ ಹೊಸದರಲ್ಲಿ ವಿವೇಚನೆ ಇಲ್ಲದೆ ಮಾಲಾ ಅನಿಲನೆದುರು ಮನಸ್ಸು ಬಿಚ್ಚಿ ಇಟ್ಟಿದ್ದಳು. ಹನಿಮೂನಿಗೆ ಊಟಿಗೆ ಹೋದ ಸಮಯದಲ್ಲಿ ಕೈ ಕೈ ಹಿಡಿದು ಅಲೆದಾಡುತ್ತ ಸಂತೋಷದ ಅಮಲಿನಲ್ಲಿ ತನ್ನ ರೂಪದ ಗರ್ವದಲ್ಲಿ ಶೇಖರನ ಬಗ್ಗೆ ಹೇಳಿದ್ದಳು. ಅವಳ ಮಾತಿನ ಮಧ್ಯೆ ಅವನು ಬಂದದ್ದೇ ಅನವಶ್ಯಕವಾಗಿ. ಶೇಖರ ತನ್ನನ್ನು ಪ್ರೀತಿಸಿದ್ದ. ಆಗಾಗ ಮನೆಗೆ ಬರುತ್ತಿದ್ದ. ದೂರದ ಸಂಬಂಧಿ. ಮಾಲಾಳನ್ನು ಮದುವೆ ಮಾಡಿಕೊಡ್ತಿರೇನು ಅಂತ ಅಪ್ಪನ್ನ ಕೇಳಿದ್ದ. ಆದರೆ ತಮ್ಮ ಮದುವೆ ನಡೆಯಲಿಲ್ಲ. ತನ್ನ ರುಚಿ-ಅಭಿರುಚಿಗಳನ್ನು ತಿಳಿದುಕೊಂಡಿದ್ದವ ತಮ್ಮ ಮದುವೆಯಲ್ಲಿ ತಿಳಿನೀಲಿ ಬಣ್ಣದ ಚೆಲುವಾದ ರೇಶಿಮೆ ಸೀರೆ ಕಾಣಿಕೆಯಾಗಿ ಕೊಟ್ಟ ತರುಣ ಇಂಜಿನಿಯರನೇ ಶೇಖರ ಎಂದು ನೆನಪಿಸಿಕೊಟ್ಟಿದ್ದಳು.

ಒಂದು ಕ್ಷಣ ಸುಮ್ಮನಿದ್ದ ಅನಿಲ ತನ್ನ ಕೈ ಬಿಡಿಸಿಕೊಂಡು ನಿಂತುಬಿಟ್ಟಿದ್ದ. ಸುತ್ತಲಿನ ಹಸಿರಿನ ರಾಶಿಯನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಿದ್ದ. ಮಾಲಾನ ಮನಸ್ಸು ಎಲ್ಲೋ ಅಲೆಯುತ್ತಿತ್ತು. ಏನು ನಡೆಯುತ್ತಿದೆ ಎನ್ನುವುದರ ಪರಿವೆಯೆ ಇರಲಿಲ್ಲ. ಅನಿಲ ಅವಳನ್ನು ಬಿಟ್ಟು ಕಾಟೇಜ ಕಡೆಗೆ ಬಿರಬಿರನೆ ಹೊರಟು ಬಿಟ್ಟಿದ್ದ. ಇಬ್ಬರ ನಡುವೆಯ ಮೌನ ನೆಲೆಸಿತ್ತು.

ಮರುದಿನ ದೋಣಿ ವಿಹಾರಕ್ಕೆ ಹೊರಟಾಗ ಅದೇ ನೀಲಿ ರೇಶಿಮೆ ಸೀರೆ, ಮಡಿಚಿದರೆ ಹಿಡಿ ತುಂಬುವ ನವಿರಾದ ಸುಂದರ ಸೀರೆ, ಉಡಲು ತೆಗೆದಿಟ್ಟಳು. ಪಟ್ಟನೆ ಮುಖಕ್ಕೆ ಅಪ್ಪಳಿಸಿದಂತೆ ಬಂದಿತ್ತು ಆಜ್ಞೆ.

"ಆ ಸೀರಿ ನೀ ಎಂದೂ ನನ್ನ ಮುಂದ ಉಡಬಾರದು."

ಕನಸಿನ ಲೋಕದಲ್ಲಿದ್ದವಳಿಗೆ ಎಚ್ಚರವಾಗಿತ್ತು. ಚೆನ್ನಾಗಿ ಡ್ರೆಸ್ ಮಾಡಿಕೊಂಡರೂ ಉರಿಯುವ ಮುಖದ ಗಂಡ ಎದುರು ನಿಂತಿದ್ದ. ಇದನ್ನು ಬಾಸ್ಸಿಂಗ ನೇಚರ ಅನ್ನಬೇಕೋ ಗಂಡಿನ ಸಂಶಯ ಗುಣವೋ ತಿಳಿಯೋದಿಲ್ಲ ಎಂದು ಕುಗ್ಗಿದ್ದಳು. ಎಷ್ಟೋ ದಿನ ಗಂಡನೊಡನೆ ಏನು ಆಡುವದೊ ಏನು ಮಾತಾಡಿದರೆ ತಪ್ಪು ತಿಳಿಯುತ್ತಾರೊ ಎಂದು ಆತಂಕದಿಂದ ದಿಗ್ಭ್ರಮೆಗೊಂಡಿದ್ದಳು. ಜಗತ್ತು ಕಾಣದ ಹುಡುಗಿ, ಪಾಪ, ಶೇಖರನ ಕರಿನೆರಳು ಅವಳ ಸಂಸಾರದ ಮೇಲೆ ಬಿದ್ದಿತ್ತು. ಅಂಥ ಸುಂದರ ಸೀರೆಯನ್ನು ತವರಿನಲ್ಲಿ ಬಿಟ್ಟು ಬಂದಿದ್ದಳು.

ತವರಿಗೆ ಹೋದಾಗ ವಿಷಯ ತಿಳಿದು ಅವ್ವ ಚೆನ್ನಾಗಿ ಬಯ್ದಿದ್ದಳು. "ನಿನಗ ಬುದ್ಧಿ ಅದಃ ಏನ ಮಾಲಾ? ಉದ್ಯೋಕ ಸಾಲಿ ಕಲತಿ ಅಷ್ಟಃ. ಅನಿಲ ಇನ್ನೂ ನಿನಗ ಹೊಸಬರು. ಅವರ ಸ್ವಭಾವ ಹ್ಯಾಂಗ ಅಂತ ನಿನಗ ಏನೂ

ಗೊತ್ತಿಲ್ಲ. ಅಂಥವರ ಮುಂದ ಹಿಂಗೆಲ್ಲಾ ಸರಳ ಆಗಿ ಹೇಳಿ ಬಿಟ್ಟರ ಏನಂತ ತಿಳಕೊಂಡಾರು ಅಂತ ನೀ ವಿಚಾರಮಾಡಬೇಕಾಗಿತ್ತು. ಶೇಖರ ನಿನ್ನ ಮದುವಿ ಆಗ್ತೀನಿ ಅಂತ ಕೇಳಿದಾಗ ನಮಗೆಲ್ಲಾ ಮನಸ್ಸ ಇದ್ದರೂ ನೀನಃ ಒಲ್ಲೆ ಅಂದಿ. ನೀ ಅವನ್ನ ಪ್ರೀತಿ ಮಾಡಿದ್ದಿಲ್ಲ. ಇದೆಲ್ಲಾ ಅಳಿಯಂದಿರಿಗೆ ಹ್ಯಾಂಗ ಗೊತ್ತಾಗಬೇಕು? ನೀವಿಬ್ಬರೂ ಸಿನಿಮಾ, ಪಾರ್ಕ ಅಂತ ಎಷ್ಟ ಅಡ್ಯಾಡೀರೋ ನಿಮ್ಮ ಸ್ನೇಹಾ ಎಷ್ಟು ಮುಂದುವರದದೊ ಅಂತ ಅವರಿಗೆ ಸಂಶಯ ಹುಟ್ಟೂದ ಸ್ವಾಭಾವಿಕನ ಅದ. ಅಂಥಾ ಸಂಶಯ ಹುಟ್ಟಾಕ ಹೆಂಗಸರು ಅವಕಾಶ ಕೊಡಬಾರದು. ನಮಗ ನಮ್ಮದಃ ಒಂದು ಜಗತ್ತು ಇರ್ತದ. ಮನಸ್ಸಿನೊಳಗೊಂದು ಲೋಕ ಇರ್ತದ.

ಅದರೊಳಗಿನ ಗುಟ್ಟು ಗಂಡಗ ಅಷ್ಟ ಅಲ್ಲ ಯಾರಿಗೂ ಬಿಟ್ಟು ಕೊಡಬಾರದು. ಅದು ಶಾಣೇತನಾ ತಿಳೀತೇನು. ನೀ ಮಾಡಿದ ತಪ್ಪ ನೀನಃ ತಿದ್ದಿಕೊ. ಗಂಡನ ಮನಸು ಗೆದ್ದಕೊ. ಅಂದರ ನಿನ್ನ ಬಾಳೇ ಛಂದಾಗಿ ನಡೀತದ."

ಸಂಕುಚಿತ ಮನಸ್ಸು ಸಂಶಯದ ಸ್ವಭಾವ, ಪುರುಷರ ದಬ್ಬಾಳಿಕೆಯ ಪ್ರತಿನಿಧಿಯಂತಿದ್ದ ಅನಿಲನನ್ನು ಒಲಿಸಿಕೊಳ್ಳಲೇ ಬೇಕಿತ್ತು. ಬೇರೆ ಮಾರ್ಗವೇ ಇಲ್ಲ. ಗಂಡನ ಎಲ್ಲಾ ಮಾತಿಗೆ ಹೂಂಗುಟ್ಟಿ ಅವನ ಮನಸ್ಸು ತಿಳಿದು ನಡೆದು, ನೀನೇ ಇಂದ್ರ, ಚಂದ್ರ ಎಂದು ಹೊಗಳಿ ಅಟ್ಟಕ್ಕೇರಿಸಿ, ಹಂಡ್ರೆಡ್ ಪರ್ಸೆಂಟ್ ಅವರನ್ನೇ ಪ್ರೀತಿಸುತ್ತೇನೆ ಎಂದು ನಂಬಿಸಿ... ಸಂಸಾರ ರಥ ದಾರಿಗೆ ತಂದು ಎಳೆಯುತ್ತಿದ್ದಳು...

ಈಗ ಮೂಲೆಯಲ್ಲಿದ್ದ ಶೇಖರ ಎದ್ದು ಬಂದಿದ್ದ. ಅವ್ವನ ಮಾತಿನಲ್ಲಿ ಅರ್ಧ ಮಾತ್ರ ನಿಜವಿತ್ತು. ಅಪ್ಪ ಶೇಖರನ ಬಗ್ಗೆ ಕೇಳಿದಾಗ ಸ್ವಲ್ಪ ಸಿಟ್ಟು ಬೇಸರದಿಂದಲೇ ಒಲ್ಲೆ ಎಂದಿದ್ದಳು. ಆದರೆ ಮನಸ್ಸಿಲ್ಲ ಅಂತೇನೂ ಅಲ್ಲ... ಬಾಲಿಶ ಬುದ್ಧಿ. ದೂರದ ಸಂಬಂಧಿಕನಾಗಿ ಆಗಾಗ ಮನೆಗೆ ಬರುತ್ತಿದ್ದ ಶೇಖರನನ್ನು ನೋಡುತ್ತಿದ್ದಳು ಅನ್ನುವುದಕ್ಕಿಂತ ತಾರುಣ್ಯ ಸಹಜ ಲವಲವಿಕೆಯಿಂದ ಪರೀಕ್ಷಿಸುತ್ತಾ ಇದ್ದಳು. ಮನೆಯ ಹಿರಿಯರ ಜೊತೆ ಮಾತನಾಡುವಾಗ ತಾನು ಅತ್ತ ಸುಳಿದರೆ 'ಏನು ಮಾಲಾ ಕಾಲೇಜು ಹ್ಯಾಂಗ ನಡದಃದ' ಸಾಯನ್ಸ ತಗೊಂಡಿಯಲ್ಲ ಕಠಿಣ ಆಗ್ತದೇನು 'ಹಂ ಏನು ಎಲ್ಲಾ ಆರಾಮ' ಅಲ್ಲಿಗೆ ತಮ್ಮ ನಡುವಿನ ಮಾತು ಮುಗಿಯುತ್ತಿದ್ದವು.

ಅವನ ರೂಪು, ನಿಲುವು, ವಿದ್ಯೆ ಮೆಲುಮಾತು, ಎಲ್ಲವೂ ಚೆನ್ನ. ಬಹಳ ದಿನಗಳವರೆಗೆ ಅವನು ಮನೆಗೆ ಬರದಿದ್ದರೆ ಏನೋ ಭಣಭಣ. ಒಂದಲ್ಲ ಒಂದು ದಿನ ತನ್ನ ಮನದ ಒಳಹೊಕ್ಕು ನೋಡುತ್ತಾನೇನೊ ಎಂದು ಕಾಯುತ್ತಿದ್ದಳು. ಯೌವನದ ಬಯಕೆ ಪ್ರೀತಿ -ಪ್ರೇಮವನ್ನು ಸಿನಿಮಾ, ಟಿ.ವಿ. ಕಾದಂಬರಿಗಳಲ್ಲಿ ನೋಡಿ ಅದೇ ಲಹರಿಯಲ್ಲಿ ಮೈ ಮರೆತವಳು ಮಾಲತಿ.

ಎಲ್ಲಾದರೂ ದಾರಿಯಲ್ಲಿ ಭೆಟ್ಟಿಯಾಗಿ ಸಿಮಾನಕ್ಕೊ, ಪಾರ್ಕಿಗೊ, ಹೋಟೆಲ್‌ಗೋ ಕರೆದೊಯ್ದು ಪ್ರೀತಿಯಿಂದ ತನ್ನ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡುತ್ತ ತನ್ನ ಕೈ ಬೆರಳುಗಳೊಡನೆ ಆಟವಾಡುತ್ತ, 'ಮಾಲೂ ನನ್ನ ಮದುವೆ ಆಗ್ತೀಯಾ' ಅಂತ ಕೇಳಿದ್ದರೆ ಎಷ್ಟು ರೋಮ್ಯಾಂಟಿಕ್ ಆಗಿರುತ್ತಿತ್ತು. ಎಂಥ ಅರಸಿಕ ಶೇಖರ. ತನ್ನ ನಿರೀಕ್ಷೆಯ ಗುಳ್ಳೆ ಒಡೆದು ಹೋಗಿತ್ತು. ಅಪ್ಪನೆದುರು ಕೇಳು ಬದಲು ತಾನು ಕನಸಿದಂತೆ ಕೇಳಿದ್ದರೆ ಥಟ್ಟನೆ 'ಹೂಂ' ಎಂದು ಬಿಡುತ್ತಿದ್ದಳೇನೋ. ಒಂದಿಷ್ಟು ಗರ್ವ, ಪೂರ್ವಾಗ್ರಹ, ನಿರಾಶೆ ಎಲ್ಲ ಸ್ವಲ್ಪ ಸ್ವಲ್ಪ ಕೂಡಿ ಒಲ್ಲೆ ಎಂದು ಬಿಟ್ಟಿದ್ದಳು. ಮಾಲತಿಯ ಬದುಕಿನ ದಿಕ್ಕೇ ಬದಲಾಗಿತ್ತು.

ಹತ್ತು ವರುಷ ಕಳೆದು ಹೋದರೂ ಶೇಖರ ಮನಸ್ಸಿನಿಂದ ಮಾತ್ರ. ಕಿತ್ತು ಒಗೆಯಲು ಆಗದಂಥ ಪರಿಸ್ಥಿತಿ ತಂದಿದ್ದಾನೆ ಅನಿಲ. ಅದಕ್ಕೇ ಈ ತಳಮಳ, ಹೊಯ್ದಾಟ...

ತುಳಸಕ್ಕನ್ನ ಶೇಖರ ಹೊರಗ ಹಾಕಿದ್ದಕ್ಕ ನನಗ ಏನೂ ದುಃಖ ಇಲ್ಲಾ. ಆಕೀಗೆ ಶ್ರೀಮಂತಕಿ ಸೊಕ್ಕು. ಬಾಯಿ ಬೊಂಬಾಯಿ. ಮನಸ್ಸಿಗೆ ಬಂದದ್ದು, ಕೇಳಿದ್ದು, ನೋಡಿದ್ದು... ಉಪ್ಪು ಖಾರ ಹಚ್ಚಿ ಪ್ರಚಾರಮಾಡುವ

ತಾಟಗಿತ್ತಿ. ಅವಳ ಉದ್ಧಟತನ ನೋಡಿಯೂ ಉದಾಸೀನದಿಂದಿರುವ ಮುಕುಂದಪ್ಪ ಬಾಯಿ ಸತ್ತ ಮಗಳು ಸುಮಾಳಿಂದ ಅವಳ ಹಾರಾಟ ಇನ್ನೂ ಜೋರಾಗಿತ್ತು. ತನಗಂತೂ ಅವಳನ್ನು ಕಂಡರೇ ಮೈಯುರಿ. ಎಂದಾದರೂ ಸುಮಾನನ್ನು ನೋಡಲು ಹೋದಾಗ ಒಂದು ನಿಮಿಷ ಮಾತಿಗೆ ಸಿಕ್ಕರೆ ಸಾಕು, ಕೊಂಕು ಮಾತು ಆಡಿಚುಚ್ಚುವವಳೇ. ತನ್ನ ಉಡುಪು, ತಲೆ ಬಾಚುವಿಕೆ, ವಿದ್ಯೆ, ನಡವಳಿಕೆ ಟೀಕಿಸಿ.... ತನಗೆ ಗೊತ್ತು ಅವಳಿಗೆ ಹೊಟ್ಟೆಕಿಚ್ಚು ಸುಮಾಗಿಂತ ತಾನು ಬೆಳ್ಳಗೆ ಎತ್ತರವಾಗಿ ಸುಂದರಿಯಾಗಿ ಹೆಚ್ಚು ವಿದ್ಯೆ ಕಲಿತಿದ್ದೇನೆಂದು...

"ಕಲಿ ಭಾಳಷ್ಟು ಕಲತು ಡಿಗ್ರಿ ಮಾಡು, ನೌಕರಿ ಹಿಡಿ. ನಿನ್ನ ಅಪ್ಪ ಅವ್ವಗೂ ಸಹಾಯ ಆಗತೈತಿ. ನಿನಗೂ ಲಗೂನ ಗಂಡ ಸಿಕ್ಕಾನು. ನನಗಂತೂ ಅವರ್ನ ನೋಡಿದರ ಪಾಪ ಅನಸೈತಿ. ನಮಗ ಬೇಕಾದಷ್ಟು ಆಸ್ತಿ ಪಾಸ್ತಿ ಐತಿ. ಸುಮಾ ಒಬ್ಬಾಕೀನ ಮಗಳು, ವರಗೋಳು ನಮ್ಮ ಮನೀಮುಂದ ಕ್ಯೂ ನಿಲ್ಲತಾರ ಹೌದಲ್ಲೊ"

ಹಿರಿಯಳು ಅನ್ನೋದು ನೋಡದೆ ಕಪಾಳಿಗೆ ಎರಡು ಬಿಗೀಲ್ಯಾ ಅನಿಸಿತ್ತು. ಅವರ ಮನೀಗೆ ಹೋಗೂದು ಬಿಟ್ಟೆ. ಸೂಕ್ಷ್ಮ ಹುಡುಗಿ ಸುಮಾಗ ಗೊತ್ತು. ತಮ್ಮ ಮನೀಗೆ ಬಂದು ಕಣ್ಣೀರ ತಂದು ಕ್ಷಮಾ ಕೇಳಿದಳು ತುಳಸಕ್ಕನ ಮಾತಿಗೆ. ಹಾಂಗ, ಪಾಪ ಸುಮಾ ಸದ್ದಾಮುದ್ದಾ ಮುಗ್ಧ ಹುಡುಗಿ. ಒಳ್ಳೇಕಿ. ದೊಡ್ಡ ದೊಡ್ಡ ಕಣ್ಣು, ಉದ್ದಕೂದಲಾ, ಹಣೆಮೇಲಿನ ಸಣ್ಣ ಗಾಯ ಇದ್ದರೂ ಕಪ್ಪು ಸುಂದರಿ. ಹೆಚ್ಚು ವಿದ್ಯಾ ಹತ್ತಲಿಲ್ಲ. ಅದಕ್ಕೂ ತುಳಸಕ್ಕನ ಕಾರಣ ಇರಬೇಕು. ಈ ಸುಮಾನ್ನ ಶೇಖರ ಮದುವಿ ಆದ. ಆಸ್ತಿ ಆಸೇಕ ಮಾಡಿಕೊಂಡಾ ಅಂತ ಮಂದಿ ಅಂದರು. ತಾನೂ ನಂಬಲಿಲ್ಲ. ತನ್ನ ಹಾಗೆಯೇ ಅವರ ಸಂಸಾರವೂ ನಡೆದಿತ್ತು.

ಸಾಲೆಯಿಂದ ಸಂದೀಪ ಬಂದ. ಅವನಿಗೆ ತಿಂಡಿ ಕೊಡಲು ಮಾಲಾ ಎದ್ದು ಹೋದಳು ಮನಸ್ಸಿನ ಲೋಕವನ್ನು ಮುಚ್ಚಿಟ್ಟು.

ಫ್ರೆಂಡ್ಸ್ ಜೊತೆಗಿನ ಡ್ರಿಂಕ್ಸ್ ಪಾರ್ಟಿ ಮುಗಿಸಿ ಅನಿಲ ಇನ್ನೂ ಬಂದಿರಲಿಲ್ಲ. ಆಗಷ್ಟು ಆಫೀಸು ಗೆಳೆಯರು, ಕ್ಲಬ್ಬು ಎಂದು ಹೊರಗೆ ವೇಳೆ ಕಳೆಯುವದೇ ಗಂಡನ ದಿನಚರಿಯಾಗಿತ್ತು. ಒಂಟಿಯಾದಾಗಲೆಲ್ಲ ಮಾಲಾನ ಧ್ಯಾನ ಶೇಖರನ ಸುತ್ತ ಸುತ್ತುತ್ತಿತ್ತು. ಕಲ್ಪನೆಯಲ್ಲಿ ತಾನೇ ಅವನ ಎದೆಗೂಡಿನ ಹಕ್ಕಿಯಾಗುತ್ತಿದ್ದಳು.

ಹೊರ ಜಗತ್ತಿಗೆ ಬಂದ ಮಾಲಾಳ ದೃಷ್ಟಿ ಟಿ.ವಿ.ಯತ್ತ ಹೋಯಿತು. ಸೀರಿಯಲ್ ಒಂದರಲ್ಲಿ ಹೆಂಡತಿಗೆ ಗೊತ್ತಾಗದಂತೆ ಹೊರಗಿನ ಪ್ರೇಯಸಿಯ ಜೊತೆಗಿದ್ದ ಗಂಡ ಮಹತ್ವದ ಮೀಟಿಂಗಿನಲ್ಲಿ ಇದ್ದೇನೆಂದು ಹೆಂಡತಿಗೆ ಸಂದೇಶ ಕಳಿಸುತ್ತಿದ್ದ.

ಮಾಲಾಳಿಗೆ ತನ್ನ ದೇಹದ ಭಾಗವನ್ನು ಕೊರೆಯುತ್ತಿದ್ದಂಥ ನೋವು, ಯಾತನೆ ಕೆಲವು ದಿನಗಳಿಂದ ಒಳಗೇ ಸುತ್ತುತ್ತಿದ್ದ ಸುನಾಮಿಯ ಕೇಂದ್ರ ಸಿಕ್ಕಿತ್ತು. ಕಣ್ಣುತುಂಬಿ ಹರಿಯಿತು.

ಅವ್ವ ಅವತ್ತು ಬರೀ ತುಳಸಕ್ಕನ ವಿಷಯ ಹೇಳಿರಲಿಲ್ಲ. ಇನ್ನೊಂದು ವಿಷಯವೂ ಇತ್ತು. ಅದೇ ತನ್ನನ್ನು ಕೊರೆಯುತ್ತಿದ್ದುದು. ತನ್ನನ್ನು ಹೊರ ಹಾಕಿದ ಅಳಿಯನ ಮೇಲೆ ತುಳಸಕ್ಕ ಕೆಂಡ ಕಾರುತ್ತಿದ್ದಳು. "ಶೇಖರಾ ಆಫೀಸಿನ ಹುಡುಗಿ ಜೋಡಿ ಅದಾನ. ಆಕಿ ಜೋಡಿ ಸಿನಿಮಾ, ಹೋಟೆಲ್ ಅಂತ ಅಡ್ಡ್ಯಾಡತಾನ. ಮನೀಗೆ ಲಗೂನ ಬರೂದಿಲ್ಲ. ಬಯಕಿ ಹೆಚ್ಚಾಗಿ ತ್ರಾಸಾದರೂ ಸುಮಾನ್ನ ಹೊಳ್ಳಿ ನೋಡೂದಿಲ್ಲ. ಈ ಮಳ್ಳಿ ಬಾಯಿ ಮುಚಕೊಂಡ ಸುಮ್ಮನ ಇರತದ. ನನ ಹೊಟ್ಟ್ಯಾಗ ಸಂಕಟ ಆಗತದವಾ, ಸುಮಾಗ ಹೇಳಿದೆ ತಿನ್ನಾಕ ಉಣ್ಣಾಕ ನನಗೇನ ಕಡಿಮಿ ಇಲ್ಲಾ. ಇಂಥಾ ಗಂಡನ್ನ ಬಿಟ್ಟು ಬಂದು ಬಿಡು. ಇಬ್ರೂ ಹೋಗಿ ಬಿಡೂಣು ಅಂತ. ಅದೇನ ಹೇಳಿ ಮಾಟಾ ಮಾಡ್ಯಾನೋ ನಮ್ಮ ಹುಚ್ಚಿ ಒಲ್ಲೆ ಅಂತು ಅಂತ ಎಲ್ಲಾರ ಮುಂದ ಹೇಳಿ ಬೊಬ್ಬಾಟಾ ಮಾಡ್ಯಾಳ. ಮಂದಿ ತಲಿಗೊಂದು ಮಾತಾಡತಾರ. ನಾ ಅಂತೂ ನಂಬಲಿಲ್ಲವ್ವ" ಅಂದಿದ್ದಳು ಅವ್ವ.

ಮಾಲಾನೂ ನಂಬಿರಲಿಲ್ಲ. ಖರೇ ಏನು ತಿಳೀದೆ ಒದ್ದಾಡ್ತಾ ಇದ್ದಳು. ಯೋಚಿಸಿ ಯೋಚಿಸಿ ಸೋತು ಹೋದಳು, ಸರಿಯಾಗಿ ಊಟವಿಳಿಯದೆ ಅಶಕ್ತಳಾಗಿ ಜ್ವರ ಬಂತು. ಹಾಲು, ಗಂಜಿ ಹಾಕಲೂ ಮನೆಯಲ್ಲಿ ಯಾರೂ ಇಲ್ಲದೆ ಒಣಗಿದಳು. ಗಂಡ ನಾಲ್ಕು ದಿನ ನೋಡಿ ತವರ್ಮನಿಗೆ ಹೋಗು ಎಂದು ಹೇಳಿ ಆಫೀಸಿಗೆ ಹೋಗಿಬಿಟ್ಟ.

ವಾತಾವರಣದ ಬದಲಾವಣೆಯಿಂದ, ಅವ್ವನ ಆರೈಕೆಯಿಂದ ಜ್ವರ ಬೇಗ ನಿಂತರೂ ನಿತ್ರಾಣದಿಂದ ಇನ್ನೂ ಹಾಸಿಗೆಯಲ್ಲಿಯೇ ಇದ್ದ ಮಾಲಾನ್ನ ನೋಡಲು ಸುಮಾ ಬಂದಳು. ತನ್ನ ಯಾತನೆಗೊಮ್ಮೆ ಮುಕ್ತಿ ಸಿಗಬಹುದೆಂದು ಮಾಲಾ ಆಶಿಸಿದಳು.

ಮೈತುಂಬಿಕೊಂಡ ಗರ್ಭಿಣಿ ಸುಮಾ ತುಂಬ ಚೆಲುವಾಗಿದ್ದಳು. ತಿಳಿಯಾದ ಬಣ್ಣ, ತೃಪ್ತಿ ತುಂಬಿದ ಕಣ್ಣುಗಳು, ತಾಯ್ತನದ ಸಂತೋಷ, ಮನಸ್ಸಿನ ನೆಮ್ಮದಿ ಎಲ್ಲಾ ಎದ್ದು ಕಾಣುತ್ತಿತ್ತು. ಹೊಟ್ಟೆಕಿಚ್ಚು ಆಶ್ಚರ್ಯ.... ಅಲ್ಲಿಯೇ ಹತ್ತಿಕ್ಕಿದಳು.

"ಆರಾಮ ಅದೀಯಾ ಮಾಲಾ?"

"ಹೂಂ ಈಗ ಆರಾಮ ಆಗೇನಿ ಜ್ವರಾ ನಿಂತಾವ. ಬಂದ ಎಂಟ ದಿನಾ ಆತು. ಸಂದೀಪನ ಸಾಲಿ ತಪ್ಪತದ. ಅನಿಲಗ ಊಟದ ತ್ರಾಸಾಗ್ತದ. ಇನ್ನ ಹೋಗಬೇಕವ್ವ" ಸಹಜವಾಗಿ ಮಾತು ಮುಂದುವರಿಸುತ್ತ, "ಶೇಖರ ಹ್ಯಾಂಗದಾರ. ಮತ್ತೇನು ಸುದ್ದಿ?"

"ಆರಾಮ ಅದಾರ. ಅವ್ವ ಹಾಸಿಗಿ ಹಿಡಿದೀನಿ ಅಂತ ಪತ್ರಾ ಬರಸಿದ್ಲು. ಅದಕ್ಕ ಕಳಿಸಿಕೊಟ್ಟಾರ. ಬರೇ ನೆಗಡಿ, ಕೆಮ್ಮು. ಅದಕ್ಕಷ್ಟು ರಂಬಾಟಾ ಮಾಡ್ಯಾಳ" ಸುಮಾಳ ದನಿಯಲ್ಲಿ ಬೇಸರವಿತ್ತು.

"ಅಲ್ಲs ತುಳಸಕ್ಕ ಏನೋ ಹಬ್ಬಿಸ್ಯಾಳಂತ ಆಫೀಸಿನ ಹುಡುಗಿ.... ಗೆಳೆತನಾ" ಬೀಜದ ಮಾತು ಹೊರಬಿದ್ದಿತ್ತು.

ಸುಮಾಳ ಮುಖ ಬಾಡಿತು. "ಇಂತಾ ಮಾತು ನೀನೂ ನಂಬಿದೇನ ಮಾಲಾ? ಅವ್ವನ ಸ್ವಭಾವ ನಿನಗ ಗೊತ್ತs ಅದ ಅಲ್ಲ. ಬಾಯಿಗೆ ಬಂದದ್ದು ಒದರತಾಳ. ಶೇಖರಗ ಯಾವ ಗೆಳತೀನೂ ಇಲ್ಲಾ. ದಾರೀ ಬಿಟ್ಟಿಲ್ಲಾ. ಮೊದಲಿನಂಗs ನನ್ನ ಎಷ್ಟ ಪ್ರೀತಿ ಮಾಡ್ತಾರ. ಇಲ್ಲಾಂದರ ಹಿಂಗ ಅರಳತಿದ್ನೇನು ನಾ" ಮುಗ್ಧ ಸುಮಾ ಶೇಖರನ ಹೃದಯದಲ್ಲಿ ಮಾಲಾ ಇದ್ದದ್ದು ಗೊತ್ತೇ ಇಲ್ಲ. "ಹುಡುಗೀ ಕಥೀ ಕಟ್ಟ್ಯಾಳೇನ ಅಳಿಯಾನ ಹೆಸರ ಕೆಡಸಲಿಕ್ಕೆ."

"ಇವರ ಆಫೀಸಿನ್ಯಾಗ ಪ್ರೀತಿ ಅಂತ ಒಬ್ಬ ಹುಡುಗಿ ಅದಾಳ, ಇನ್ನೊಬ್ಬ ಕ್ಲಾರ್ಕ ಆಕೀಗೆ ತ್ರಾಸ ಕೊಡತಿದ್ನಂತ. ಸಿನಿಮಾಕ ಬಾ, ಹೊಟೆಲ್‌ಕ ಬಾ ಅಂತಿದ್ನಂತ. ಮದುವಿ ಆಗದ ಹುಡುಗಿ ಪಾಪ ಏನ್ಮಾಡಬೇಕು. ಮನಿಗೆ ಬಂದು ಇವರ ಹತ್ರ ಹೇಳಿಕೋತಿದ್ಲು. ಆಕೀ ಮನೀಯೊಳಗೂ ತ್ರಾಸ ಇತ್ತು. ಅಣ್ಣಗ ಕೆಲಸ ಸಿಕ್ಕಿದ್ದಿಲ್ಲ. ಅಪ್ಪ ಹಾಸಿಗೀ ಹಿಡಿದಿದ್ರು. ಆಕಿ ಕಷ್ಟ ಕೇಳಿ ನಮಗೂ ಕೆಟ್ಟ ಅನಿಸ್ತು. ಆ ಲಫಂಗ ಕ್ಲಾರ್ಕಗೆ ಇವರು ಮೆಮೊ ಕೊಟ್ಟರು. ಯಾವಾಗರೆ ಮನೀ ಕಡೆ ಬಾರವಾ ಅಂತ ನಾನ s ಹೇಳಿದ್ದೆ. ಬರತಿರತಾಳ ಅಷ್ಟs ಆಕೀಗೆ ನಾವಿಬ್ರೂ ಗಂಡನ್ನ ಹುಡುಕತೇವಿ."

"ಇಷ್ಟಕ್ಕ ಅತ್ತೀನ ಹೊರಗ ಹಾಕೂವಷ್ಟು ಕಲ್ಲು ಮನಸ್ಸಿನವರ ಶೇಖರ"?

"ಇಲ್ಲ ಮಾಲಾ ನೀ ಅವರ ಗುಣಾ ಸರಿಯಾಗಿ ತಿಳಕೊಂಡಿಲ್ಲ. ಅವ್ವ ಯಾರ್ನೂ ಎಲ್ಲೂ ಸುಖದಿಂದ ಇರಗೊಡಾಕಿ ಅಲ್ಲ. ಇಷ್ಟು ಆಸ್ತಿ ಅದ, ಹೊಲಾ -ಮನಿ ಅದಾವ ಎಲ್ಲಾ ನಿಮ್ಮದs, ಈ ಸೊಟ್ಟ ನೌಕರಿ ಬಿಟ್ಟ ಬಂದ ಬಿಡ್ರಿ. ನಮ್ಮ ದೊಡ್ಡ ಮನ್ಯಾಗ ಇರೂಣು ಅಂತ ದಿನಾ ಕಿಟಿಕಿಟಿ ಹಚ್ಚಿದ್ಲು. ಜಗಳಾ ಸುರು ಮಾಡಿದ್ಲು. ಇಂಥಾ ಮಾತು ಅವರಿಗೆ ಹ್ಯಾಂಗ ಸೇರತಾವು. ನಾವಿಲ್ಲೇ ಸುಖದಿಂದ ಅದೀವಿ ಅಂತ ಇವರು, ಇಬ್ಬರೂ ಹಟಮಾರಿ, ತನ್ನ ಮಾತು ಅಳಿಯನ ಹಟದ ಮುಂದ ನಡಿಯೂದಿಲ್ಲ ಅಂತ ಗೊತ್ತಾಗಿ, ಸುಳ್ಳ ಸುಳ್ಳ ಅವರಿಗೆ ಆ ಪ್ರೀತಿಗೆ

ಸಂಬಂಧ ಹಚ್ಚಿ ಹಬ್ಬಿಸಿದಳು ನೋಡು. ದಿನಾ ನನ್ನ ತಲಿ ಕೆಡಸಾಕ ಹತ್ತಿದ್ಲು. ಅವರಿಗೆ ಸಿಟ್ಟು ತಡೀಲಿಲ್ಲ. 'ಸುಮಾ, ನಿನ್ನ ಮುಖಾ ನೋಡಿ ನಾ ಇನ್ನೂ ತನಕಾ ತಡಕೊಂಡಿದ್ದೆ. ನನ್ನ ಸಂಸಾರನ ಹಾಳ ಮಾಡಲಿಕ್ಕೆ ನಿಂತಾರ ನಿನ್ನ ಅವ್ವ. ಅವರ ದುಡ್ಡು-ದುಗ್ಗಾಣಿ ನನಗ ಬ್ಯಾಡಾ. ಈಗs ಅವರಿಗೆ ಗಂಟು ಮೂಟಿ ಕಟಿಗೊಂಡು ತಮ್ಮ ದೊಡ್ಡ ಮನೀಗೆ ಹೋಗಲಿಕ್ಕೆ ಹೇಳು. ನಾ ಟಿಕೆಟ್ ತರ್ತೀನಿ ಅಂದ್ರು. ಅವರದೇನೂ ತಪ್ಪಿಲ್ಲ. ನನ್ನ ಇಷ್ಟು ಪ್ರೀತಿಯಿಂದ ನೋಡಿಕೊಳ್ಳೊ ದೇವರಂಥಾ ಗಂಡ ಅದಾರ. ಇನ್ನೊಂದೆರಡು ದಿನಾ ಇದ್ದು ನಾನೂ ಹೋಗಿಬಿಡ್ತೀನಿ."

ಬಂದಾಗಿನ ಹುರುಪು ಉತ್ಸಾಹ ಇಲ್ಲದೆ ಸುಮಾ ಸಪ್ಪಗಾಗಿದ್ದಳು. ಮಾಲಾಳ ತಲೆಯ ಮೇಲಿನ ಭಾರ ಇಳಿದು ಮನಸ್ಸು ಹಗುರಾಗಿತ್ತು. ಶೇಖರನ ಮನಸ್ಸಿನಲ್ಲಿ ಮತ್ತ್ಯಾರೂ ಇಲ್ಲ. ಮಾಲಾ ಒಬ್ಬಳೇ. ಹೃದಯ ಹಾಡುತ್ತಿತ್ತು. ಅಷ್ಟೇ ಸಮಾಧಾನ. ನರಕ ಚತುರ್ದಶಿಯ ನಸುಕು.... ಮನೆ ತುಂಬಾ ಪರಿಮಳ, ತಲೆಗೆ ನೀರೆರೆದು ರೇಶಿಮೆ ಸೀರೆಯುಟ್ಟು ಪೂಜೆ ಆರತಿ ಮಾಡಿ ಸುಮಾ ಹಚ್ಚಿಟ್ಟ ಪಣತಿಗಳನ್ನು ಶೇಖರ ಒಂದೊಂದಾಗಿ ತಂದು ಹೊಸ್ತಿಲು, ಕಟ್ಟೆ, ಕಿಟಕಿಗಳಿಗೆ ಇಡುತ್ತಿದ್ದ. ತುಂಬು ಗರ್ಭಿಣಿ ಸುಮಾಳ ಹೊಳೆಯುವ ಕಣ್ಣುಗಳಲ್ಲೂ ದೀಪಗಳನ್ನು ಕಾಣುತ್ತಿದ್ದ.

ಅದೇ ಹೊತ್ತಿಗೆ ತನ್ನ ಮನೆಯಲ್ಲಿ ಅಂಗಳ ಉಡುಗಿ, ರಂಗೋಲಿ ಹಾಕಿ, ತೋರಣ ಕಟ್ಟಿ ಆರತಿಗೆ ಸಜ್ಜು ಮಾಡಿಟ್ಟು ಎಲ್ಲರ ಹೆಸರಿನಲ್ಲಿ ಒಂದೊಂದು ಪಣತಿ ಹಚ್ಚಿಟ್ಟಳು ಮಾಲಾ. ಅದರಲ್ಲಿ ಶೇಖರನ ಹೆಸರಿನಲ್ಲಿಯೂ ಹಚ್ಚಿದ ದೀಪವಿತ್ತು.

■■

# ಸಂಗೀತಾ

ವೇದಿಕೆ ಏರಿದ ಮಂಜುಳೆಯ ಪುಟ್ಟ ಪುಟ್ಟ ಕಾಲುಗಳಲ್ಲಿ ನಡುಕವಿತ್ತು. ಕಣ್ಣುಗಳಲ್ಲಿ ಭಯಮಿಶ್ರಿತ ಆತಂಕವಿತ್ತು. ಪುಟ್ಟ ಹೃದಯ ಡಬ್... ಡಬ್... ಹೊಡೆದುಕೊಳ್ಳುತ್ತಿತ್ತು. ಹಾಗೆಯೇ ಸಾವರಿಸಿಕೊಂಡು ಬಂದು ಮೈಕಿನ ಮುಂದೆ ನಿಂತಳು. ಕಣ್ಣುಮುಚ್ಚಿ ಕ್ಷಣ ಹೊತ್ತು ತಲೆ ಬಗ್ಗಿಸಿದಳು. ಮುಖ ಮೇಲೆತ್ತಿ, ತಾಯಿ ಹೇಳಿಕೊಟ್ಟಂತೆ ಕೈಮುಗಿದಳು. ಎದುರಿನ ಸಭಿಕರನ್ನು ನೋಡಿದಾಗ ನೂರಾರು ಜೊತೆ ಕಣ್ಣುಗಳು ಕುತೂಹಲ ತುಂಬಿಕೊಂಡು ತನ್ನನ್ನೇ ದಿಟ್ಟಿಸುತ್ತಿರುವುದನ್ನು ಕಂಡಳು. ಅವಳ ಕಣ್ಣುಗಳು ಅರಸುತ್ತಿದ್ದವರು ಕೊನೆಗೂ ಕಂಡರು. ಅಪ್ಪ ಕಣ್ಣು ಸನ್ನೆಯಲ್ಲೇ ಅವಳಲ್ಲಿ ಧೈರ್ಯ ತುಂಬಿದರು. ಅಪ್ಪ ನಗುತ್ತ, ಸುರು ಮಾಡು ಎನ್ನುವಂತೆ ಸನ್ನೆ ಮಾಡಿದ. ಮಂಜುಳೆಯ ಗಾಬರಿ ಎಲ್ಲ ಮಾಯವಾಗಿ ಧೈರ್ಯ ಮೂಡಿತು. ಜೊತೆಗೇ ಅವಳ ಮಧುರ ಸ್ವರದಿಂದ ಗೀತೆಯೊಂದು ಹೊರಹೊಮ್ಮಿತು.

ಹೃದಯದರವಿಂದವೇ ಮನದ ಮಂದಾರವೇ
ಒಳುಗುಂದದಮಲ ಸೌರಭ ಸಾರವೇ ||

ಹಾಡು ಮುಗಿಯುವುದೊಂದೇ ತಡ, ಚಪ್ಪಾಳೆಯ ಸಪ್ಪಳದಲ್ಲಿ ಸಭೆಗೆ ತಲೆ ಬಾಗಿಸುವುದನ್ನೂ ಮರೆತು ವೇದಿಕೆಯಿಂದ ಜಿಂಕೆಯಂತೆ ಹಾರಿ ಹೋಗಿ ತಾಯಿ ತೊಡೆಯಲ್ಲಿ ಮುಖ ಮುಚ್ಚಿಕೊಂಡಿದ್ದಳು ಮಂಜು. ಚಿಕ್ಕ ಹುಡುಗಿಯ ಹಾಡು ಕೇಳಿದ ಸಹೃದಯ ಶ್ರೋತೃಗಳು ತಂದೆ-ತಾಯಿಯನ್ನು ಅಭಿನಂದಿಸುತ್ತಿದ್ದಾಗ ಪಂಡಿತ ಗುರುಮೂರ್ತಿಯವರು ಹತ್ತಿರ ಬಂದರು.

"ನಮಸ್ಕಾರಾ, ರಾಯರಃ ನಾ ಹೇಳಿದ್ದು ನಿಜಾ ಹೌದಲ್ಲೊ, ಮಂಜುಳಾಗ ಇಂಪಾದ ಸ್ವರಾ ಅದ. ಸಂಗೀತದ ಒಳಗ ಗತಿ ಅದ. ಅವಳಲ್ಲಿರೂ ಕಲಾ ಚಿವುಟಿ ಹಾಕಬ್ಯಾಡ್ರಿ. ಪ್ರೋತ್ಸಾಹ ಕೊಡ್ರಿ ಭಾಳ ಮುಂದ ಬರತಾಳ, ನಮ್ಮ ನಾಡಿಗೆ ಹೆಸರು ತರತಾಳ. ಟ್ಯೂಶನ್, ರೊಕ್ಕದ ಆಸೇಕ್ಕ ಹಿಂಗ ಹೇಳ್ತೀನಿ ಅಂತ ತಿಳಿಕೋಬ್ಯಾಡ್ರಿ ರಾಯರಃ"

ಮೂರ್ತಿ ಅವರ ಮಾತಿನಲ್ಲಿ ನಿಜವಿತ್ತು. ಕಳಕಳಿಯೂ ಇತ್ತು. ತಂದೆಯ ಎದೆ ಹೆಮ್ಮೆಯಿಂದ ಉಬ್ಬಿತು.

"ಹೌದು ಖರೇನ, ಭಾಳ ಛಂದಾಗಿ, ಮನಸ್ಸಿನಿಂದ ಹಾಡಿದ್ಲು. ಇಡೀ ಸಭಾಕ್ಕ ಸಭಾನಃ ಮುಗ್ಧ ಆಗಿ ಕೂತು ಕೇಳ್ತಿತ್ತು. ನೀವು ಕಷ್ಟಪಟ್ಟು ಕಲಿಸಿದ್ದಕ್ಕೂ ಸಾರ್ಥಕ ಆತು. ಆಯ್ತು, ಆಕೀ ಸಾಲೀ ಶಿಕ್ಷಣದ ಜೋಡಿ ಸಂಗೀತ ಕ್ಲಾಸೂ ನಡೀಲಿ. ಅವಳ ತಾಯಿನೂ ಬ್ಯಾಡ ಅನಲಿಕ್ಕಿಲ್ಲ. ಮುಂದ ಆಕೀ ಹಣೇಬರದಾಗ ಇದ್ದಂಗ ಆಗ್ತದ"

"ಮೊದಲ ಒಂದೆರಡು ವರ್ಷ ಹಾರ್ಮೋನಿಯಂ ಮ್ಯಾಲೆ ಕಲೀಲಿ. ಆಮ್ಯಾಲೆ ತಂಬೂರಿ ಕೊಡಸೀರಂತ. ಬೇಕಾದರ ಮನೋರಮಾನೂ ಆಕೀ ಜೋಡಿ ಬರಲಿ"

ಸಂಗೀತ ಶಿಕ್ಷಣ ಮುಂದುವರೆಯಿತು. ಮನೆಗೆ ತಂಬೂರಿ ತಬಲ ಬಂದವು. ಅಭ್ಯಾಸಕ್ಕೆ ವ್ಯತ್ಯಯವಾಗದಂತೆ ಮಂಜುಳಾ ನಸುಕಿನ ನಾಲ್ಕು ಗಂಟೆಗೇ ಎದ್ದು ರಿಯಾಜ್ ಮಾಡುತ್ತಿದ್ದಳು.

ಕಾಲ ನಿಲ್ಲುವುದಿಲ್ಲ ಅಲ್ಲವೇ?

ಬಾಗೇಶ್ರೀ... ಭೂಪ್ ... ಯಮನ್... ಕಾಪಿ ಖಮಾಜ್.... ಮಾಲ್‌ಕೌಂಸ್... ಆರೋಹಣ, ಅವರೋಹಣ, ಸ್ವರವಿಸ್ತಾರ... ಆಲಾಪನೆ... ಸ್ಥಾಯಿ... ಅಂತರಾ.... ತಾನ.

ಮೆಟ್ಟಿಲು ಮೆಟ್ಟಿಲಾಗಿ ಮೇಲೇರಿದ್ದ ಮಂಜುಳೆಯ ಕಂಠವೀಗ ಮಂದ್ರದಿಂದ ಲೀಲಾಜಾಲವಾಗಿ ಎತ್ತಬೇಕಾದತ್ತ ಹೊರಳಿ ತಾರಕಕ್ಕೇರಿ ಇಳಿಯುತ್ತಿತ್ತು. ಜೊತೆಗೆ ತಂಬೂರಿಯ ಝೇಂಕಾರ. ಕಣ್ಣುಮುಚ್ಚಿ ನಾದಲೋಕದಲ್ಲಿ ತಲ್ಲೀನಳಾದರೆ ಹೊರ ಜಗತ್ತನ್ನೇ ಮರೆಯುತ್ತಿದ್ದಳಾಕೆ. ಕೇಳಿದವರೆಲ್ಲ, ಹೆಸರಿಗೆ ತಕ್ಕ ಹಾಗೆ ಮಂಜುಳ ಧ್ವನಿ ಎನ್ನುತ್ತಿದ್ದರು. ಸಂಗೀತ ವಿದ್ಯೆಯೊಡನೆ ಏರುತ್ತಿದ್ದ ಅವಳ ವಯಸ್ಸನ್ನು ಗಮನಿಸುತ್ತಿದ್ದ ಅಪ್ಪ ಅವಳಿಗೆ ಗಂಡು ಹುಡುಕುವ ಪ್ರಯತ್ನವನ್ನು ಮುಂದುವರೆಸಿದ್ದರು. ಮಂಜುಳಾನ ಮದುವೆ ನಿಶ್ಚಯವಾದಾಗ ಅವಳ ಅದೃಷ್ಟಕ್ಕೆ ಎಲ್ಲರೂ ಕೊಂಡಾಡುವವರೇ. ಕರುಬದವರೂ ಇಲ್ಲದಿರಲಿಲ್ಲ.

ಶ್ರೀಮಂತ, ಸುಶಿಕ್ಷಿತ ಶೇಖರ ಅವಳ ಸಂಗಾತಿಯಾಗುವವನಿದ್ದ.

ಮದುವೆ ಹಂದರ ತುಂಬ ಸುಂದರವಾಗಿ ಅಲಂಕೃತವಾಗಿತ್ತು. ಜನರ ಗದ್ದಲ, ಗಜಿಬಿಜಿ, ಮಾತುಕತೆ, ಹೆಂಗಸರ ಒಡವೆ, ವಸ್ತ್ರ, ನಗು, ಮಕ್ಕಳ ಆಟ, ಜಗಳ, ಅಳು ಕೋಲಾಹಲ ಒಟ್ಟಿನಲ್ಲಿ ಸಂತೆಯಾಗಿತ್ತು ಮದುವೆ ಮನೆ. ಭರ್ಜರಿಯಾಗಿ ಹೂವಿನ ಮಾಲೆಗಳಿಂದ ಅಲಂಕರಿಸಿದ ವೇದಿಕೆಯ ಮೇಲೆ ನವದಂಪತಿಗಳಿದ್ದರು. ಜರಿ ಸೀರೆ, ಆಭರಣಗಳಿಂದ ಮಂಜುಳಾಳ ಅಲಂಕಾರ ಚೆನ್ನಾಗಿ ಮಾಡಿದ್ದರು. ನೀಲಿ ಸೂಟು, ಕೆಂಪು ಟೈಯಿಂದ ಶೇಖರ ಕಳೆಕಳೆಯಾಗಿದ್ದ. ಶೇಖರ ಹೆಂಡತಿಯನ್ನು ದಿಟ್ಟಿಸುತ್ತಿದ್ದ. ಆದರೆ ಮಂಜುಳೆಯ ನೋಟವೆಲ್ಲ ಎದುರಿನ ವೇದಿಕೆಯ ಮೇಲಿದ್ದ ಸಂಗೀತದ ಗುರು ಪಂಡಿತ ಗುರುಮೂರ್ತಿಯವರ ಮೇಲೆ. ಅವಳ ಪ್ರಿಯವಾದ ರಾಗವನ್ನು ತಾವು ಸ್ವತಃ ಹಾಡಲು ಪ್ರೇಮದಿಂದ ಮುಂದೆ ಬಂದಿದ್ದರು. ಅವಳ ದೃಷ್ಟಿ ಕಿವಿ, ಮನಸ್ಸು, ಎಲ್ಲ ಅತ್ತ ಕಡೆಗೇ ಇಟ್ಟಿದ್ದಳು. ಮುಗ್ಧ ಮನಸ್ಸಿನ ಹುಡುಗಿ, ಇದುವರೆಗೆ ತಂಬೂರಿ ಅವಳ ಸಂಗಾತಿಯಾಗಿತ್ತು. ಸಂಗೀತ ಪ್ರಪಂಚವಾಗಿತ್ತು. ಹೊಸ ಬದುಕಿನತ್ತ ಪಯಣ ತನ್ನದು ಎನ್ನುವದರತ್ತ ಅವಳ ಲಕ್ಷ್ಯವಿರಲಿಲ್ಲ. ಅವಳ ತನ್ಮಯತೆಗೆ ಆಗಾಗ ಶೇಖರನಿಂದ, ಬಂಧುಗಳಿಂದ, ಆಮಂತ್ರಿತರಿಂದ ಭಂಗ ಬರುತ್ತಿತ್ತು. ಸಂಗೀತದ ಸಂಪರ್ಕ ಕಡಿದುಹೋಗುತ್ತಿತ್ತು. ಒಳಗೆ ಮನದಲ್ಲಿ ಕಸಿವಿಸಿಯಾಗುತ್ತಿದ್ದರೂ ಮೇಲೆ ಯಾಂತ್ರಿಕವಾಗಿ ನಗುತ್ತಿದ್ದಳು. ಕೊನೆಗೊಮ್ಮೆ ಪಂಡಿತರ ಗಾಯನ ಮುಗಿಯಿತು. ಕೈ ಮುಗಿದು ಕಣ್ಣುಗಳಲ್ಲಿ ಕೃತಜ್ಞತೆ ಸೂಚಿಸಿದಳು.

ವಾಸ್ತವಲೋಕಕ್ಕಿಳಿದ ಮಂಜುಳಾ ಶೇಖರನತ್ತ ತಿರುಗಿ ನಗುತ್ತ 'ಹೇಗಿತ್ತು' ಎಂದಳು. 'ಏನು' ಎಂದನವ ಈಗ ಎಚ್ಚತ್ತವನ ಹಾಗೆ. 'ಕೇದಾರ' ಎಂದಳು. 'ಕೇದಾರನ ನಾ ಇನ್ನೂ ನೋಡೇ ಇಲ್ಲ. ಇಷ್ಟು ಲಗೂನ ಯಾಕ ಬದರಿ, ಕೇದಾರ? ಇನ್ನೂ ಈಗ ಮದುವಿ ಆಗೇದ. ಹನಿಮೂನಿಗೆ ಹೋಗೋಣ. ವಾನಪ್ರಸ್ಥಾಶ್ರಮದಾಗ ಅವೆಲ್ಲಾ' ಎಂದು ಮೀಸೆಯಡಿಯಲ್ಲಿ ನಕ್ಕ. ಗಂಡನ ಹಾಸ್ಯಪ್ರಜ್ಞೆಗೆ ಮನದುಂಬಿ ಮುದ್ದಾಗಿ ನಕ್ಕಳು ಮಂಜುಳಾ. ಹೊರಲೋಕವನ್ನು ಅರಿಯದ ಅಮಾಯಕ ಹುಡುಗಿ!

***

'ಮಾವನವರು ಊರಿಗೆ ಹೋಗ್ಯಾರಲ್ಲ'

'ಹೌದು ಕೋರ್ಟಿನ ಕೆಲಸ ಇತ್ತಂತೆ ಬೆಂಗಳೂರಿಗೆ ಹೋಗ್ಯಾರ'

"ನನಗೂ ಗೊತ್ತದ ಮತ್ತ ಅತ್ತೆವ್ವ. ಕುಸುಮಕ್ಕನೂ ಯಾರದೋ ಮನೀಗೆ ಹೋಗ್ಯಾರ, ನನ್ನೂ ಕರದರು. ಆದರ ಇವತ್ತ ನಿಮಗೆ ಸೂಟಿ ಅಲ್ಲs ಮನ್ಯಾಗ ಇರತೀರಿ ಅಂತ ನಾನೂ ಒಲ್ಲೆ ಅಂದೆ.'

'ಭೋಲೋ ಆತು ಬಿಡು. ಏನರೆ ಪ್ರೋಗ್ರಾಂ ಹಾಕೀ ಏನು? ಸಿನಿಮಾ, ಶಾಪಿಂಗು ಅಂತ?'

'ನನಗ ಅವೆರಡರದೂ ಹುಚ್ಚ ಇಲ್ಲ ಬಿಡ್ರಿ. ಆದ್ರ ಮನ್ಯಾಗ ನಾವಿಬ್ಬರ ಅದೀವಿ, ಶಂಕರಣ್ಣನೂ ತಮ್ಮ ಖೋಲ್ಯಾಗ ಓದಿಕೋತ ಕೂತಾರ, ಭಾಳ ದಿನದಿಂದ ಹಾಡೇ ಇಲ್ಲ. ತಂಬೂರಿ ತೊಗೊಂಡು ಹಾಡಲೇನು ಕೇಳತೀರೇನು?' ಆಸೆ ತುಂಬಿದ ದನಿಯಲ್ಲಿ ಮಂಜುಳಾ ಕೇಳಿದಳು.

'ಓss ಬೇಶಕ್! ಹಾಡು, ಮದುವಿ ಆಗಿ ಬಂದಾಗಿಂದ ನಿನ್ನ ಹಾಡು ಕೇಳೇ ಇಲ್ಲ.'

ತಂಬೂರಿಯ ಝೇಂಕಾರದೊಡನೆ ಮೈದುಂಬಿಕೊಂಡ ಮಂಜುಳೆಯ ಇಂಪಾದ ಸ್ವರ ಎರಡು ತಿಂಗಳ ಆಲಸ್ಯ ಎದ್ದೋಡಿಸಿ ಹೊಸ ಕಂಪನ ತಳೆದಿತ್ತು. ಮನೆ, ಕೋಣೆ, ಶೇಖರ ಎಲ್ಲವನ್ನೂ ಮರೆತು ಮಂಜುಳಾ ನಾದಲೋಕದಲ್ಲಿ ಮೈಮರೆತಳು. ಹಾಡು ಮುಗಿಸಿ ತಂಬೂರಿ ಮೆಲ್ಲಗೆ ಕೆಳಗಿಟ್ಟು ಗಂಡನ ಪ್ರಶಂಸೆಗೆ ಆಸೆ ಪಟ್ಟು ಒಂದೇ ಜಿಗಿತಕ್ಕೆ ಮಂಚದ ಹತ್ತಿರ ಬಂದಳು. ಗಂಡ ಗಾಢ ನಿದ್ದೆಯಲ್ಲಿದ್ದ. ಶೇಖರನ ಗೊರಕೆ ಅವಳನ್ನು ಅಣಕಿಸಿತು. ಹತಾಶಭಾವ ಅವಳನ್ನು ಆವರಿಸಿತು. ಕುಸಿದು ಹೋಯಿತು ಮನಸ್ಸು. ನಿರಾಶೆಯ ಕಾರ್ಮೋಡದಿಂದ ನಿಜವಾಗಿಯೂ ಕಣ್ಣಲ್ಲಿ ಹನಿ ಉದುರುವದರಲ್ಲಿತ್ತು.

'ವ್ಹಾವ್ ಅದ್ಭುತ! ಎಷ್ಟು ಛಂದ ಹಾಡಿದ್ರಿ ಅತ್ತಿಗೀ' ಶಂಕರ ಕೋಣೆಯ ಬಾಗಿಲಲ್ಲಿ ನಿಂತು ಚಪ್ಪಾಳೆ ತಟ್ಟುತ್ತಿದ್ದ. ಅಲ್ಲಿಯವರೆಗೂ ಚೆನ್ನಾಗಿ ನೋಡಿರದ ಅವನ ಮುಖ, ಕಣ್ಣು ದಿಟ್ಟಿಸಿದಳು. ಹೌದು ನಿಜವಾಗಿ ಸಂತೋಷ ಅಲ್ಲಿ ತುಂಬಿತ್ತು.

'ಇದs ಮೊದಲ್ನೇ ಸಾರೆ ನಾನು ನಿಮ್ಮ ಹಾಡು ಕೇಳಿದ್ದು, ಹಾಂ, ನನಗ ಪ್ರಾಮೀಸ್ ಮಾಡಬೇಕು ನೀವು. ನಾನು ಕೇಳಿದಾಗೆಲ್ಲ ಹಾಡಬೇಕು. ಹಾಂ. ಹಾಂ ಆಶ್ಚರ್ಯ ಆತೇನ ನಿಮಗ. ಈ ಔರಂಗಜೇಬನ ವಂಶದಾಗ ಇಂವ ಹ್ಯಾಂಗ ಹುಟ್ಟಿದಾ ಅಂತ. ಹಂ. ಹಂಗs ನೋಡ್ರಿ ನನಗ ಸಂಗೀತ ಅಂದರ ಭಾಳ ಪ್ರೀತಿ' 'ನಗುತ್ತ ಶಂಕರ ಕೆಳಗೆ ಇಳಿದು ಹೋದ.

ಮೈದುನನ ಹಾಸ್ಯಪ್ರಜ್ಞೆಗೆ ಮೃದುವಾಗಿ ನಕ್ಕಳು ಮಂಜುಳಾ. ಮನಸ್ಸು ಹಗುರಾಯಿತು. ಅಂದಿನಿಂದ ರೇಡಿಯೋದಲ್ಲಿ ಸುಪ್ರಸಿದ್ಧ ಗಾಯಕರ ಸಂಗೀತ ಕೇಳುತ್ತಿದ್ದಾಗ ಅತ್ತಿಗೆಯನ್ನು ಕರೆಯುತ್ತಿದ್ದ. ಇಬ್ಬರೂ ಕಣ್ಣು ಮುಚ್ಚಿ ಕೂತು ಸಂಗೀತ ಆಲಿಸಿ ಸುಖಿಸುತ್ತಿದ್ದರು. ಆದರೆ ಮಂಜುಳಾ ಮನೆಗೆ ಬಂದ ಸೊಸೆ. ಅಡುಗೆ ಮನೆಯಲ್ಲಿ ಅವಳಿಗೆ ಇನ್ನೂ ಕೆಲಸಗಳಿರುತ್ತಿದ್ದವು. ಇಲ್ಲವೇ ಶೇಖರ ಬೇಗ ಮಲಗಲು ಹೋಗುತ್ತಿದ್ದ. ಮಂಜುಳೆಗೆ ಬಿಡುವು ಸಿಗುತ್ತಿರಲಿಲ್ಲ. ಕೆಲವು ದಿನ ಹಾಗೆ ನಡೆದ ಮೇಲೆ ಶಂಕರ ಒಂದು ಟ್ರಾನ್ಸಿಸ್ಟರ್ ತಂದುಕೊಟ್ಟ.

'ಅತ್ತಿಗೀಯವರs ನೀವು ಎಲ್ಲಿ ಬೇಕಲ್ಲಿ ಇದನ್ನ ಇಟ್ಟುಕೊಂಡು ಸಂಗೀತ ಕೇಳ್ರಿ. ಹಾಂಗs ವಾರಕ್ಕೊಮ್ಮೆ ಎರಡ ಸಾರೆ ಆದರೂ ನೀವು ರಿಯಾಜ್ ಮಾಡ್ರಿ. ಶಾಸ್ತ್ರೀಯ ಸಂಗೀತಕ ಹಾಡೂದ ಬಿಟ್ಟರ ಒಳ್ಳೇದಲ್ಲ. ರೂಢಿ ತಪ್ಪಿಹೋಗತದ.'

ಮೈದುನನ ಕಾಣಿಕೆಯನ್ನೇನೋ ಕೃತಜ್ಞತೆಯಿಂದ ಸ್ವೀಕಾರ ಮಾಡಿದ ಮಂಜುಳೆಗೆ ರಿಯಾಜ್ ಮಾಡಲು ಏನೇನೋ ಅಡ್ಡಿ ಆತಂಕಗಳು, ಮನೆಗೆಲಸ, ಬಂಧುಬಾಂಧವರ, ನೆರೆಹೊರೆಯವರ ಆಗಮನ, ಊಟ, ಚಹಾ, ಮಾತುಕತೆಗಳಲ್ಲಿ ಅತ್ತೆ ನಾದಿನಿಯರಿಗೆ ಸಹಕಾರ, ಸ್ಕೂಲಿಗೆ ಹೋಗುವ ಚಿಕ್ಕ ನಾದಿನಿಯ ಹೋಂವರ್ಕ್, ಚಿಕ್ಕ ಪುಟ್ಟ ಸಹಾಯ, ಮನೆಯ ಓರಣ ಹೀಗೆ ಕೈತುಂಬಾ ಕೆಲಸ. ಇವುಗಳನ್ನೆಲ್ಲ ಮನೆಯ ಸೊಸೆಯೇ ಮಾಡಬೇಕು ತಾನೇ.

ಹೀಗೆಯೇ ತಿಂಗಳು ಕಳೆದಿದ್ದವು. ಇಷ್ಟು ದಿನ ತಾನು ಯಾರನ್ನೋ ಕಳೆದುಕೊಂಡ ಹಾಗೆ, ಏನನ್ನೋ ಮರೆತ ಹಾಗೆ ಮನಸ್ಸಿನ ಒಂದು ಭಾಗ ಚಡಪಡಿಸುತ್ತಿತ್ತು. ಆ ದಿನ ಶೇಖರ ಆಫೀಸಿಗೆ ಹೋದ ಮೇಲೆ ಕೋಣೆಗೆ ಹೋದಳು. ಮನಸ್ಸು ಖಿನ್ನವಾಗಿತ್ತು. ಏಕಾಂಗಿತನ ಕಾಡುತ್ತಿತ್ತು. ಸ್ವತಂತ್ರ ಹಕ್ಕಿಯಂತೆ ಹಾರಾಡುತ್ತಿದ್ದ ತವರುಮನೆ, ತಾಯಿ-ತಂದೆಯರ ನೆನಪಾಯಿತು. ಥಟ್ಟನೆ ಎದ್ದು ತಂಬೂರಿ ಇದ್ದಲ್ಲಿಗೆ ಹೋಗಿ ನೋವಾಗದಂತೆ ಅದನ್ನು ಎತ್ತಿ ಎದೆಗೆ ಅಪ್ಪಿಕೊಂಡಳು. ಮೈ ಜುಮ್ಮೆಂದಿತು, ಧೂಳು ಜಾಡಿಸಿ ಮುಸುಕು ತೆಗೆದು ಮೃದುವಾಗಿ ಮೀಟಿದಳು. ಝೇಂಕಾರ

ಕೇಳಿ ಎದೆ ಉಬ್ಬಿ ಬಂದಿತು. ಆನಂದ ಒಳಗೆ ಅದುಮಿ ಇಡಲು ಸಾಧ್ಯವಾಗದೆ 'ಬಾಗೇಶ್ರೀ' ರೂಪದಲ್ಲಿ ಹೊರಹೊಮ್ಮಿತು.

ಹತ್ತು ನಿಮಿಷ ಕಳೆದಿರಬೇಕು. ಧಪ್ ಧಪ್ ಕೋಣೆಯ ಬಾಗಿಲು ಮೇಲೆ ಯಾರೋ ಜೋರಾಗಿ ಬಡಿಯುತ್ತಿದ್ದರು. ಮೀಟುತ್ತಿದ್ದ ತಂಬೂರಿ ತಂತಿ ಚಟ್ ಎಂದಿತು. ಗಂಟಲು ಗೊರ್ ಗೊರ್ ಸಪ್ಪಳ ಮಾಡಿ ನಿಂತಿತು. ಕಣ್ಣು, ಕಿವಿ, ತೆರೆದಳು. ಅವಸರದಲ್ಲಿ ಎದ್ದು ಬಾಗಿಲು ತೆರೆದಳು. ಎದುರು ನಿಂತ ಅತ್ತೆಯ ಮುಖ ಕೋಪದಿಂದ ಕೆಂಪಗಾಗಿತ್ತು.

ಮುಖ ತಗ್ಗಿಸಿ ಹಿಂದೆ ಸರಿದಳು.

'ಏನಃ ಮಂಜುಳಾ, ಮಟಾಮಟಾ ಮಧ್ಯಾನದಾಗ ಏನ್ ಕಿರಿಕಿರಿ ಹಚ್ಚೀದಿ. ಮನಿಯೊಳಗಿನ ಮಂದಿ ಕೆಲಸ ಮಾಡಿ ಮಾಡಿ ದಣಿದಿರತಾರ. ವಿಶ್ರಾಂತಿ ಮಾಡಾಕೂ ಕೊಡೂದಿಲ್ಲೇನ? ತಂಬೂರಿ ತೊಗೊಂಡು ಗಾಯನಾ ಮಾಡಿಕೋತ ಕೂಡ್ರಾಕ ಇದೇನ್ ಸಾನೇರ ಮನೀನ? ನಿನ್ನ ಮಾವ ಕೇಳಿದರ ಸಿಟ್ಟಾಗತಾರ. ಹಾದ್ಯಾಗ ಹೋಗೂ ಬರೂವವರು, ಅಡ್ಡಾಡುವವರು ಕೇಳಿದರ ಚಪ್ಪಾಳೆ ಹೊಡದು ನಗತಾರ. ನೋಡವ್ವಾ ನಾವು ದೊಡ್ಡ ಮನಿತನದವರು, ಮರ್ಯಾದಸ್ಥರು, ನಮ್ಮ ಆಬ್ರೂ ಕಳೀಬ್ಯಾಡಾ. ಇನ್ನೊಮ್ಮೆ ಹಿಂಗ ಮಾಡಬ್ಯಾಡಾ, ನೆನಪ ಇಟ್ಟಕೋ.'

ಅತ್ತೆ ಧಪ ಧಪ ಕಾಲು ಬಡಿಯುತ್ತ ಕೆಳಗೆ ಇಳಿದು ಹೋದರೂ ಮಂಜುಳಾ ದಂಗು ಬಡೆದು ನಿಂತಿದ್ದಳು. ಎದೆ ಕುಸಿಯಿತು, ಹಾಸಿಗೆಯ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಯಾಕೆಂದು ರಮಿಸಿ ಕೇಳುವವರೂ ಹತ್ತಿರ ಇಲ್ಲದೇ ಮನದಣಿಯೆ ಅತ್ತಳು. ಅತ್ತೆಯ ಮಾತು ಬಾಣದಂತೆ ಚುಚ್ಚಿ ಗಾಯಮಾಡಿದ್ದವು. ಅವಳ ವಿಚಾರಗಳೇ ಅರ್ಥವಾಗಿರಲಿಲ್ಲ. ಸಂಗೀತ ಹಾಡುವವರಿಗೆ ಮಾನ ಮರ್ಯಾದೆ ಇರುವುದಿಲ್ಲವೇ? ಅದೂ ಒಂದು ಕಲೆ. ಇಂಪಾದ ದನಿ ಪ್ರತಿಭೆ ಇದ್ದವರೆಲ್ಲ ಹಾಡಬಹುದಲ್ಲ! ಅದು ಮನಸ್ಸಿಗೆ ಶಾಂತಿ, ಸಂತೋಷವನ್ನು ತರುತ್ತದೆನ್ನುವ ಮಾತು ಹಿರಿಯರಾದ ಅತ್ತೆಗೆ ತಿಳಿದಿಲ್ಲವೆ? ಇದರಿಂದ ಮನೆತನದ ಗೌರವ ಹೇಗೆ ಹೋಗುತ್ತದೆ? ಯೋಚಿಸಿ, ಹಣ್ಣಾದ ಮಂಜುಳ ಎದ್ದು ನಡುಗುವ ಕೈಗಳಿಂದ ತಂಬೂರಿಗೆ ನಮಸ್ಕಾರ ಮಾಡಿ ಮುಸುಕು ಹಾಕಿ ಭದ್ರವಾಗಿ ಕಟ್ಟಿ ಮೂಲೆಯಲ್ಲಿಟ್ಟಳು.

ತವರಿನಿಂದ ಕರೆಯಲು ಬಂದ ತಂದೆಯೊಡನೆ ಹೋಗಿ ತಂಬೂರಿಯನ್ನು ಎತ್ತಿ ತಂಗಿ ಮನೋರಮಾಗೆ ಒಪ್ಪಿಸಿ ನಿಟ್ಟುಸಿರುಬಿಟ್ಟಳು ಮಂಜುಳಾ. ಅವಳ ಪರಿಸ್ಥಿತಿ ಅರ್ಥ ಮಾಡಿಕೊಂಡ ಅವ್ವ-ಅಪ್ಪ ಒಂದು ದಿನವಾದರೂ ಹಾಡೆಂದು ಕೇಳದೆ ಅವಳ ಬದುಕು, ಭವಿಷ್ಯ ಮುಖ್ಯವೆಂದು ಮನಗಾಣಿಸಿದರು. ಅದಕ್ಕೆ ತಕ್ಕಂತೆ ಆಷಾಢದ ಮಳೆ-ಗಾಳಿಯಿಂದ ಅವಳ ಗಂಟಲು ಕಟ್ಟಿ ನೋವಾಗಿ ಜ್ವರದ ಬಾಧೆಯಿಂದ ನರಳಿದಳು. ಕೋಗಿಲೆಯ ಬಾಯಿಗೆ ಹುಣ್ಣಾಗಿತ್ತು. ಅವಳ ಜೀವನದಲ್ಲಿ ವಸಂತಮಾಸ ಬರುವುದೋ ಇಲ್ಲವೋ ಆ ದೇವರಿಗೇ ಗೊತ್ತು.!

ಮದುವೆಯಾಗಿ ಮೂರು ವರುಷದ ಮೇಲೆ ಈಗ ಮಂಜುಳಾ ಪುಟ್ಟ ಮಗಳ ತಾಯಿ. ಯಾರು ಎಷ್ಟೊಂದು ಹೆಸರುಗಳನ್ನು ಸೂಚಿಸಿದರೂ ಒಪ್ಪದೇ ಮಗಳನ್ನು ಸಂಗೀತಾ ಎಂದೇ ಕರೆದಿದ್ದಳು. ಅವಳನ್ನು ರಾಗ, ತಾನಗಳಿಂದ ಕೂಡಿದ ಮಧುರ ದನಿಯಲ್ಲಿ ಕರೆಯುವುದೆಂದರೆ ಅವಳಿಗೆ ತುಂಬಾ ಖುಷಿ, ಪ್ರೀತಿ.

ಐದು ತಿಂಗಳ ಪುಟ್ಟ ಮಗು ಆ ದಿನ ಇಂಜೆಕ್ಷನ್ ನೋವಿನಿಂದ ಅಳುತ್ತಿತ್ತು. ಎಷ್ಟು ರಮಿಸಿದರೂ, ಹಾಲು ಕುಡಿಸಿದರೂ ಸುಮ್ಮನಾಗಲೊಲ್ಲದು. ಅಜ್ಜ, ಅಮ್ಮ, ಅಪ್ಪ, ಅತ್ತೆ ಎಲ್ಲರೂ ಎತ್ತಿಕೊಂಡು ಲಾಲಿಸಿದರೂ ಮುಖ ಕೆಂಪಗೆ ಮಾಡಿಕೊಂಡು ಚೀರುತ್ತಿತ್ತು. ಗಂಟಲು ಒಡೆಯಿತು. ಮೊದಲು ಸಣ್ಣದಾಗಿದ್ದ ಧ್ವನಿ ಬರಬರುತ್ತ ತಾರಕಕ್ಕೇರಿತು.

ಪಕ್ಕದ ಕೋಣೆಯಲ್ಲಿ ಓದುತ್ತಿದ್ದ ಶಂಕರನಿಗೆ ಕಸಿವಿಸಿಯಾಯಿತು. ಅತ್ತಿಗೆಯನ್ನು ನೋಡಲು ಹೊರಗೆ ಬಂದ. ಕೋಣೆಯ ಬಾಗಿಲು ಮುಚ್ಚಿತ್ತು. ತೊಟ್ಟಿಲಿಗೆ ಹಾಕಿ ತೂಗುತ್ತಿದ್ದ ಜಿರ್ ಜಿರ್ ಸಪ್ಪಳ ಕೇಳಿತು. ಮಗುವಿನ ಅಳು ಮಾತ್ರ ಹಾಗೆಯೇ ಇತ್ತು. ಸಹನೆ ಮೀರಿತು ಶಂಕರನಿಗೆ. ಬಾಗಿಲು ನೂಕಲು ಹೊರಟಿದ್ದ. ಅಷ್ಟರಲ್ಲಿ ಇಂಪಾದ ಸ್ವರದಲ್ಲಿ ಕಂಪಿಸುವ ದನಿಯಲ್ಲಿ ಕೇಳಿತು.

"ಕಂದ ಜೋ ಜೋ ಪೂರ್ಣಚಂದ್ರ ಜೋಜೋ॥"

ನಾದ ಮಾಧುರ್ಯದಲ್ಲಿ ಮಗುವಿನ ಅಳು ನಿಂತಿತ್ತು.

■■

# ಹಂಡೆ ಮುರಿಗೆವ್ವ

ಆ ದಿನ ಹೊಸ ಸೊಸೆಯನ್ನು ಮನೆ ತುಂಬಿಸಿಕೊಂಡ ಸಂಗವ್ವತ್ತಿ ಊರ ಬಳಗವನ್ನೆಲ್ಲ ಕರೆದು ಮದುಮಕ್ಕಳಿಗೆ ಆರತಿ ಮಾಡಿಸಿದ್ದಳು. ಒಬ್ಬನೇ ಮಗ ಆದಪ್ಪನ ಮದುವೆಯನ್ನು ಬೇರೂರಿನಲ್ಲಿ ಮಾಡಿಕೊಂಡು ಬಂದಿದ್ದರಿಂದ ಎಲ್ಲರಿಗೂ ಬುಂದೇದ ಉಂಡಿ, ಕರಿದ ಅವಲಕ್ಕಿ ಚಹಾ ಫಳಾರ ಮಾಡಿಸಿದ್ದಳು. ಹರೆಯ ತುಂಬಿ ಹರಿಯುವಂತೆ ಓಡಾಡುತ್ತಿದ್ದ ಅವಳ ಹುರುಪು.... ಸಂಭ್ರಮ... ಆಹಾ!

ಮುರಿಗೆವ್ವ ನೋಡಿದವರ ಕಣ್ಣು ತುಂಬಿದ್ದಳು. ಅವಳ ಎತ್ತರ, ದುಂಡು ಮೈ, ಗೋಧಿ ಬಣ್ಣದ ಮುಂದೆ ಆದಪ್ಪ ಏನೂ ಅಲ್ಲ. ಹೆಸರೂ ಅಷ್ಟೇ ವಿಚಿತ್ರ, ಅಜ್ಜನ ನೆನಪಿಗೆ ಇಟ್ಟದ್ದು. ಆರತಿ ಆದ ಮೇಲೆ ಗಂಡನ ಹೆಸರು ಹೇಳುವ ಸಂದರ್ಭದಲ್ಲಿ ಫಜೀತಿ ಪಟ್ಟ ಮುರಿಗೆವ್ವ ಆದಪ್ಪನೋ ಇಲ್ಲಪ್ಪನೋ ಎಂದು ಮನಸ್ಸಿನಲ್ಲೇ ನಕ್ಕು ಎಲ್ಲರ ಮುಂದೆ ನಾಚಿ ಕೆಂಪಾಗಿ ತಲೆತಗ್ಗಿಸಿ ಒಗಟು ಹಾಕಿ ಗಂಭೀರವಾಗಿ ಆದ ಗೌಡರು ಎಂದು ಪಾರಾಗಿದ್ದಳು. ವಾರಿಗೆ ಗೆಳತೇರು ಆದೇಶ, ಆದಿನಾಥ ಎನ್ನಲು ಕಲಿಸಿಕೊಟ್ಟಾಗ ನಕ್ಕು ನಕ್ಕು ಕೆಂಪಾಗಿದ್ದಳು. ಸಂಗವ್ವತ್ತಿ ಸಂಜೆ ಸೊಸೆಯ ನಿವಾಳಿ ತೆಗೆಯಲು ಮರೆಯಲಿಲ್ಲ.

ಮಲ ಅವ್ವನ ನರಕದಿಂದ ಬಂದ ಮುರಿಗೆವ್ವನಿಗೆ ತನ್ನ ಹೊಸ ಮನೆಯೇ ಸ್ವರ್ಗ. ಅತ್ತೆಯೇ ದೇವರು, ಪೀಚಲು ಪ್ರಕೃತಿಯ ಕೀರಲು ದನಿಯ ಸಾಧು ಪ್ರಾಣಿ ಆದಪ್ಪ ಮೂಗಿಗೆ ಕವಡೆ ಕಟ್ಟಿಕೊಂಡು ಹೊಲದಲ್ಲಿ ದುಡಿಯುವ ಪ್ರಾಣಿ. ಈಗ ಚತುರ್ಭುಜನಾಗಿ ಮೈ ಮುರಿದು ದುಡಿಯುವ ಹೆಂಡತಿ ಸಿಕ್ಕ ಮೇಲೆ ಮನೆಗೆ ಯಜಮಾನ, ಮನೆಗೆ ಮಂಗಳೂರು ಹಂಚು, ಎರಡು ಮೂರು ಎಕರೆ ಹೊಲ ಜಾಸ್ತಿ ಆದ ಮೇಲೆ ಊರವರ ಕಣ್ಣಲ್ಲಿ ಕಾಣುವಂತಾಗಿದ್ದ. ಈ ಪಟ್ಟ ತಂದು ಕೊಟ್ಟವಳು ಮುರಿಗೆವ್ವ, ಗರತಿ ಗಂಗವ್ವ. ಸೊಸೆಯ ಮಾಯಕ್ಕೆ ಮರುಳಾದ ಸಂಗವ್ವತ್ತಿ ತಂಗೀ ಕೂಸs, ಬಾಳಾ ಅಂತ ಕಕಲಾತಿಯಿಂದ ಕರೆದು ಮನೆಯ ಯಜಮಾನಿಕೆ ಅವಳಿಗೇ ಕೊಟ್ಟು ಬಿಟ್ಟಿದ್ದಳು. ರಾತ್ರಿ ಹೆಂಡತಿ, ಗಂಡನಿಗೆ ಎಚ್ಚರಿಕೆ ಕೊಟ್ಟಿದ್ದಳು. ತಾನು ಹುಟ್ಟಿದ್ದು ಮುರಿಗೇಂದ್ರ ಸ್ವಾಮಿಗಳ ಹರಕೆಯಿಂದ; ತನ್ನನ್ನು, ದೊಡ್ಡ ಅಜ್ಜನ ಹೆಸರನ್ನು ಕೆಡಿಸಬಾರದೆಂದು. ಅದನ್ನು ಮೀರುವ ಛಾತಿಯಾದರೂ ಆದಪ್ಪನಿಗೆ ಎಲ್ಲಿತ್ತು? ಹೆಂಡತಿಗೆ ಬರ್ರಿ, ಹೋಗ್ರಿ, ಊಟಕ್ಕ ನೀಡ್ರಿ ಎನ್ನುತ್ತಿದ್ದ ಮಾತು ಈಗ ಗುಟ್ಟಾಗಿರಲಿಲ್ಲ.

'ಗಂಡನ ಎರಡರಷ್ಟು ತೂಕದ ಎತ್ತರದ ಹೆಂಡತಿ, ಅದಕ್ಕs ಆದಪ್ಪ ಹೆಂಡತಿಗೆ ಅಷ್ಟು ಮರ್ಯಾದಿ ಕೊಡ್ತಾನ' ಕಿಡಿಗೇಡಿಯೊಬ್ಬ ಪಿಸುಗುಟ್ಟಿದಾಗ ಊರೆಲ್ಲ ಮುಸಿಮುಸಿ ನಕ್ಕಿತ್ತು.

ಆದಪ್ಪ ದಿಲ್‌ದಾರ. ಇದಕ್ಕೆಲ್ಲ ಕಿವಿ ಕೊಡುವವನಲ್ಲ. ಗಂಭೀರವಾಗಿದ್ದು, ತನ್ನ ಕಾಯಕ ಮುಂದುವರೆಸಿದ್ದ. ಮುರಿಗೆವ್ವನಿಗಂತೂ ದಿನದ ಇಪ್ಪತ್ತನಾಲ್ಕು ತಾಸು ಸಾಲದು. ದನಾ-ಕರಾ, ಎತ್ತು-ನಾಯಿ, ಎಮ್ಮೆ, ಮೇವು, ಹುಲ್ಲು, ಕಾಳು-ಕಡಿ ಹಸನು, ಅಡುಗೆ -ರೊಟ್ಟಿ, ಒಗ್ಯಾಣ-ಕಸಾ ಅಂತ ನಸುಕಿನಿಂದ ರಾತ್ರಿ ಹಾಸಿಗೆ ಹಾಸುವವರೆಗೆ ದುಡಿತ. ಮೈತುಂಬ ಕೆಲಸ - ಕಣ್ತುಂಬ ನಿದ್ದೆ... ಆಗಾಗ ಕನಸು... ಕನವರಿಕೆ... ಹೊರಳಾಟ, ಚೀರಾಟ... ಮುಚ್ಚಿದ ಕಣ್ಣಿನ ಹಿಂದೆ ... ಹಿಂದೆ...

ಸುತ್ತೆಲ್ಲ ಹಸಿರು ಮುರಿಯುವ ಗುಡ್ಡ. ಬೇವಿನ ಮರದ ನೆಳಲು, ಜುಳು ಜುಳು ಹಾಡುತ್ತ ಹರಿಯುವ ನೀರಿನಲ್ಲಿ ಕೆಂಪುಕೆಂಪಾದ -ಪುಟ್ಟಿ ಪುಟ್ಟಿ ಪಾದಗಳು. ದನಕರುಗಳ ಹಿಂದೆ ಕಲ್ಲು ಮುಳ್ಳು ಅನ್ನದೆ ಬರಿಗಾಲಿನಲ್ಲಿ ಓಡ್ಯಾಡಿ, ಸೀಳಿ ಬಿರುಕು ಬಿಟ್ಟು ದಣಿದು ನೋಯುತ್ತಿದ್ದ ಕೆಂಪುಗೆರೆಗಳ ಅಂಗಾಲು. ತಂಪು ನೆಳಲಿನ ತಣ್ಣನೆಯ ನೀರಿನಲ್ಲಿ ಮುಳುಗಿ, ಮೈಗೆ ಜೀವರಸ ತುಂಬಿ, ಬಗ್ಗಿ ಕಣ್ಣು, ಮುಖಕ್ಕೆ ಅದೇ ನೀರು ಸಿಂಪಡಿಸಿ, ಗುಟುಕು ನೀರು

ಗಂಟಲಿಗೂ ಇಳಿಸಿ ಕಣ್ಣುಮುಚ್ಚಿ ಮುಖ ಮೇಲೆತ್ತಿ ಆಕಾಶದಲ್ಲಿ ಅವ್ವನನ್ನು ಹುಡುಕುತ್ತಿದ್ದಾಗ ಹತ್ತಿರದಲ್ಲೇ ಗರ್ಜಿಸಿತ್ತು ಹುಲಿ.

ಅಯ್ಯಪ್ಪಾ, ಅಯ್ಯಯ್ಯೋ ಹುಲಿ ತಿನ್ನಾಕ ಬಂದ್ಯೆತಿ. ಯಮ್ಮಾs ಯವ್ವಾ ಹುಲಿ ಬಂತಪ್ಪೋs

ಧೊಪ್ಪನೆ ಬಿತ್ತು ಪಂಜಿನ ಹೊಡೆತ, ಮತ್ತೆ ದೊಪ್ಪ್, ಬೆಚ್ಚಿ ಕಣ್ಣು ತೆರೆದಾಗ ಮುಖದ ಮೇಲೆ ಮತ್ತೆ ಹೊಡೆತ, ಪಂಜಿನಿಂದಲ್ಲ ಚಪ್ಪಲಿಯಿಂದ.

ಕಣ್ಣುಮುಚ್ಚಿ ಗಡಗಡ ನಡುಗುತ್ತಿತ್ತು ಪುಟ್ಟ ಪೋರಿ. ಯವ್ವಾs ಹೊಡಿಬ್ಯಾಡ. ಕಾಲ ಬಾಳ ನೂಸಾಕ ಹತ್ತಿದ್ವು. ಬಾಯಿ ಒಣಗಿತ್ತು, ಹಸುವು ಆಗಿತ್ತs, ಹಾಂಗ ನೆಳ್ಳಾಗ ಜರಾ ಕುಂತ ನೀರ ಕುಡಿಯಾಕ ಹತ್ತಿದ್ನಿ. ಹೊಡೀ ಬ್ಯಾಡ ಯವ್ವಾs ಬಂದ್ನಿ.'

ದೈನಾಸಬಡುತ್ತಿದ್ದ ಮಲ ಮಗಳನ್ನು ದರದರ ಎಳೆದು ತಂದು ಹೊಡೆದು ತನ್ನ ಜಳಕಕ್ಕೆ ನೀರು ಕಾಯಿಸಲು ಹಚ್ಚಿದ್ದಳು. ದಿನ ತುಂಬಿದ ಚಿಕ್ಕವ್ವ ಉರುವಲು ಕಡಿಮೆಯಾಗಿದ್ದಕ್ಕೆ ಅದೇ ಒಲೆಯ ಕಟ್ಟಿಗೆ ಹಿಡಿದು ತಬ್ಬಲಿಯ ಬೆನ್ನಿಗೆ ಬರೆ ಹಾಕಿದ್ದಳು...

ಅದೇ ಕೆಟ್ಟ ಕನಸು.... ಕನವರಿಕೆ... ಹಳವಂಡ...

ಮೊದಲ ಸಲ ಹೆಂಡತಿಯ ಬೆನ್ನ ಮೇಲೆ ಸುಟ್ಟ ಕಲೆ ನೋಡಿ ಮತ್ತೆ... ಮತ್ತೆ ಕನಸಿನಲ್ಲಿ ಬರುವ ಹುಲಿಯ ಪಂಜಿಗೆ ಮಾತ್ರ ಹೆದರಿ ಅಳುವ, ನಡುಗುವ ಮುರಿಗೆವ್ವನನ್ನು ತೆಕ್ಕೆಯಲ್ಲಿ ಹಿಡಿದು ರಮಿಸುತ್ತಿದ್ದ ಆದಪ್ಪ. ಅವಳ ಮಗುವಿನಂಥ ಮನಸ್ಸು ತಿಳಿದ ಗಂಡ-ಹೆಂಡತಿಯರ ಸಂಸಾರ ನೋಡಿ ಹಿಗ್ಗುತ್ತಿದ್ದಳು. ಅವ್ವನಂಥ ಅತ್ತೆ ಸಂಗವ್ವ. ಆದಪ್ಪನ ಹೆಂಡತಿಯನ್ನು ನೋಡಿ ಹೊಟ್ಟೆಕಿಚ್ಚಿನಿಂದ ಲಟಿಗೆ ಮುರಿಯುವವರೂ ಕಡಿಮೆ ಇರಲಿಲ್ಲ ಊರಲ್ಲಿ. ಅತ್ತೆಯರಂತೂ ಮುರಿಗೆವ್ವನನ್ನು ನೋಡಿ ಬಾಯಿ ಬಿಡುವವರೇ.

ಕುಡಿಯುವ ನೀರಿನ ಬಾವಿ ಇದ್ದದ್ದು ಊರ ಹೊರಗಿನ ಮಠದ ಅಂಗಳದಲ್ಲಿ. ನಾಲ್ಕು ಗಡಗಡೆಯ ದೊಡ್ಡ ಬಾವಿ. ಸ್ವಾಮಿಗಳ ದಯೆಯಿಂದ ಎಲ್ಲರಿಗೂ ಸೀನೀರು. ಬಳಕೆಗೆ ಊರ ನಡುವಿನ ಶಂಕರಲಿಂಗನ ಗುಡಿಯ ಹತ್ತಿರದ ಕಲ್ಲೆಕೆರೆಯ ನೀರು. ಬೆಳಗಿನ ಹೊತ್ತು ಎಲ್ಲರ ಠಿಕಾಣಿ ಸೀನೀರ ಹತ್ತಿರ.

ಮಣ್ಣಿನ ಕೊಡ, ತಗಡಿನ ಬಕೆಟ್, ಸಿಲಾವರ ಲೋಟ ಹಿಡಿದು 'ಯವ್ವಾ, ಯಪ್ಪಾs ಈಸ ನೀರ ಹಾಕಿ ಪುಣ್ಯಾ ಕಟಿಗೋಳ್ರಿ' ಕಳ್ಳು ಹರಿಯುವಂತೆ ದೈನಾಸ ಬಿಡುವವರ ಗುಂಪು ದೂರ ಮೂಲೆಯಲ್ಲಿ.

'ಓಡೀರೆಪಾ ಕುಡೀರಿ. ಯಜ್ಜಾs ನೀ ಬಕೀಟು ಹಿಡಿ ತುಂಬಿಕೋಡ್ತೀನಿ. ಮನೀಗಿ ಒಯ್ಯಿ. ಮತ್ತ ಹರದಾರಿ ನೆಲಾ ನಡಿಬ್ಯಾಡಾ. ಇಕಾ ಹಿಡಿ. ಸ್ವಾಮಿಗೋಳ ಪುಣ್ಯಾದಿಂದ ಗಂಗವ್ವ ಕಣ್ಣ ತಗದಾಳ ನಮ್ಮವ್ವ.'

'ಯವ್ವಾs ನನ್ನವ್ವ ದ್ಯಾವತಿ ಬಂದಾಂಗ ಬಂದೀಯ ನಮ್ಮ ಊರಿಗಿ. ನಿನ ಹೊಟ್ಟಿ ತಣ್ಣಗಿರ್ಲಿ' ಎಲ್ಲ ಹರಸುವರು ಮುರಿಗೆವ್ವನನ್ನು.

ನೀರಿನ ಅರಬು ಹೆಚ್ಚಾಗುವುದು ಬಿರು ಬೇಸಿಗೆಯಲ್ಲಿ. ಹೊರಗೂ ಒಳಗೂ ಉರಿ ಉರಿ ಒಣಗಿದ ಗಂಟಲು, ಬೆವರಿನ ಜಳಕ, ಮೈ ಎಲ್ಲಾ ಅಂಟಂಟು. ಕುಡಿಯಲು ನೀರು .... ನೀರು .... ನೀರಿಗೆ ಹಾಹಾಕಾರ, ಹೆಂಗಸರೆಲ್ಲ ಮನೆಯ ಕೆಲಸ ಬಿಟ್ಟು.... ಕಟ್ಟಿಟ್ಟು.... ಕಂದಮ್ಮಗಳನ್ನು ಬೆನ್ನಿಗಿಟ್ಟು ನಸುಕಿನ ತಂಪು ಹೊತ್ತಿನಲ್ಲಿ ನೀರಿಗೆ ಓಡುವ ಪರಿ ಪರಿಚಿತ.

ಅಂದು ಬೆಳಕು ಹರಿಯುವ ಹೊತ್ತು ಕುಂತವರು, ನಿಂತವರು, ಬಯಲಿಗೆ ಹೊಂಟವರು, ಚಾದಂಗಡಿಯಲ್ಲಿ ಜಮಾಯಿಸಿದವರು, ಹಜಾಮನಿಗೆ ತಲೆ ಕೊಟ್ಟವರು, ಗುಡಿಗೆ ಪಾದ ಬೆಳೆಸಿದವರು ಎಲ್ಲ ಎಂದರೆ ಎಲ್ಲರೂ ನಿಂತು ನೋಡುತ್ತಿದ್ದರು ಆ ಅಪರೂಪದ ದೃಶ್ಯವನ್ನು.

'ಅಯ್ಯs ಸಂಗವ್ವ ಹಂಗ್ಯಾಕ ಓಡಾಕ ಹತ್ತ್ಯಾಳಬೇ'.

'ಬಿಡs ಹುಡಗೀ, ಮುದಿಕಿ ಆಕೇನ ಓಡ್ಯಾಳ ಎಲ್ಲೋ ಹೊಂಟಾಳ.'

'ನಡೀಯ ನಿಂಗವ್ವಾ ನಾವೂ ಹೋಗೋಣ ಆಕಿ ಹಿಂದ'

ಮುಂದೆ ದಾಪುಗಾಲು ಹಾಕುತ್ತ ತಲೆ ಮೇಲೊಂದು, ಬಗಲಲ್ಲಿ ಇನ್ನೊಂದು ಸಣ್ಣಹಂಡೆ ಹೊತ್ತು ಹೋಗುತ್ತಿದ್ದವಳು ಹೊರಳಿ ನಿಂತು, ತೇಕುತ್ತ ಮಾತು ಬಾರದೆ ಕೈ ಮುಂದೆ ಮಾಡಿ ಓಡೋಡಿ ಬರುತ್ತಿದ್ದ ಅತ್ತೆಯನ್ನು ಎದುರಿಸಿದಳು ಮುರಿಗೆವ್ವ. ಬಿಸಿಲಿಗೆ ಬೆವರುತ್ತಿದ್ದ ಅತ್ತೆಯ ಕೈ ಹಿಡಿದು ಬಾವಿ ಕಟ್ಟೆಗೆ ಕೂಡ್ರಿಸಿ.

'ಯಾಕ ಅತ್ತೀs ಏನ ಕೆಲಸ ಇತ್ತು? ಎಲ್ಲಾ ಮಾಡಿಟ್ಟ ಬಂದಿದ್ದನೆಲ್ಲ. ಬಿಸಿ ರೊಟ್ಟಿ ತಿಂದ ಮಜ್ಜಿಗಿ ಕುಡದು ಅಡ್ಡಾಗಿದ್ದಿ. ಉಮಾ, ಸುಮಾನ್ನ ಸಾಲಿಗಿ ಕಳಿಸಿ ಲಗೂ ಲಗೂನ ನೀರ ತುಂಬಸೂಣ ಅಂತ ಬಂದ್ನಿ ಏನ ಬಂದಿ ?'

ಅತ್ತೆ - ಸೊಸೆಯರ ಪ್ರೇಮ ಸಲ್ಲಾಪದತ್ತ ಲಕ್ಷ್ಯವಿಲ್ಲದ ಹೆಂಗಸರ ಕಣ್ಣು ಕುಕ್ಕಿಸುತ್ತಿತ್ತು ಥಳಥಳಿಸುತ್ತಿದ್ದ ಮುರಿಗೆವ್ವನ ಬಗಲಲ್ಲಿನ ಹೊಸ ತಾಮ್ರದ ಹಂಡೆ.

'ಎಲ್ಲಿ ತಗೊಂಡೆ ಸಂಗವ್ವ ಈ ಹಂಡೆ ಇನ್ನೂ ಹೊಸಾದೈತಿ'

'ರೊಕ್ಕಾ ಎಟ್ಟಕೊಟ್ಟೀಯ ಸಂಗವ್ವಕ್ಕ ಭಲೋ ಐತಿ, ಒಮ್ಮಿ ತುಂಬಿದರ ಎರ್ಡ್ ದಿನಾ ನೀರ ಅಕ್ಕಾವ. ನನ ಮಗಾ ಸೊಸೈಟಿ ಕೆಲಸಕ್ಕ ಹೋಕ್ಕಾನ, ನಾನೂ ತರಿಸ್ತೀನಿ'

ಸಂಗವ್ವನ ಬೆವರಿ ಬಾಡಿದ ಮುಖ ಅರಳಿ ಹೂವಾಯಿತು. ನೀರು, ಬಾವಿ, ಮನೆ ಎಲ್ಲಾ ಮರೆತು ಕಟ್ಟೆಗೆ ಕುಂತಳು.

'ಮಲ್ಲವ್ವಕ್ಕಾ ಮುರಿಗೆವ್ವನ ತವರ್ಮನೀಯವರ ಕೊಟ್ಟಾರಬೇ? ಇನ್ನೊಂದ ಸಾಣದು, ಹಳೇದು ಮನ್ಯಾಗಿಂದು.'

'ಮುದಿಕಿ ಆಗಿ ಸುಳ್ಳs ಬಡಾಯೀ ಹೇಳತೀ ಏನಬೇ. ನಾನ ಲಗ್ಗಿಣಕ ಬಂದಿದ್ನೆಲ್ಲ. ಸೊಸಿ ಚೆಲವಿ, ಗಟ್ಟಿ ಮುಟ್ಟ ಅದಾಳ. ಎಡ್ಡ ಆಳಿನ ಕೆಲಸಾ ಒಬ್ಬಾಕೆ ಮಾಡೂ ಹಾಂಗ ಅದಾಳ, ಅಂತs ಬಡವರ ಮನೀ ಪರದೇಶಿ ಹುಡುಗೀನ್ನ ಮಾಡಿದ್ನಿ ಅಂದಿದ್ದಿ. ಭಾಳ ಮಂದಿ ಬಡೂರ ಕೂಡಿ ಮದಿವೀ ಮಾಡ್ತಾರಲ್ಲ ಅದರಾಗ ಅಕ್ಕಿಕಾಳ ಹಾಕ್ಕೊಂಡ ಬಂದಿ, ಒಬ್ಬನs ಮಗಾ ಹೊಲಾ ಮನೀ ಐತಿ ದೈವುಳ್ಳವರು ಹೆಣ್ಣ ಕೊಡ್ತಾರಂದ್ರೂ ಕೇಳ್ಳಿಲ್ಲ. ಹೌದಲ್ಲೊ.'

''ಹೌದs ನಿಂಗವ್ವಕ್ಕ, ನೀ ಹೇಳಿದ್ದೆಲ್ಲ ಖರೇವು. ಇಕೀ ಮದುವ್ಯಾಗಿ ನಡಿಯಾಕ ನಮ ಮನೀಗಿ ಬಂದ ತಿಂಗಳ ಮ್ಯಾಲೆ ಅಮ್ಮ, ಸ್ವಾದರ ಮಾವಾ, ಹುಡಿಕ್ಕೊಂಡ ಬಂದ್ರವ್ವ. ಮಗಳ ಸತ್ತ ಮ್ಯಾಲೆ ಅಳಿಯಾ ದೂರ ಮಾಡಿದಾ ನಮ್ಮನ್ನ ಅಂತ ಮುದಿಕಿ ಅತ್ತ್ಲವ್ವ. ಬಾಣಂತಿ ಸತ್ಲು ಎಳೀ ಕೂಸನ್ನ ಇವರs ಸಾಕ್ಕೆದ ವರಸ ಜ್ವಾಪಾನಾ ಮಾಡಿದರಂತ. ಎಡ್ಡನೇ ಹೇಣ್ತಿ ಉಡಕಿ ಮಾಡಿಕೊಂಡ ಮ್ಯಾಲೆ ಮುರಿಗೆವ್ವನ್ನ ದುಡಿಯಾಕ ಕರಿಸಿಕೊಂಡ್ಲಂತ ಆ ಹೊಯ್ಮಾಲಿ. ಮೊಮ್ಮಗಳ ಬಾಳೇವ ನೋಡಿ ಹಿಗ್ಗಿ ಚೀಲ ಅಕ್ಕಿ, ಪೆಂಟಿ ಬೆಲ್ಲ, ಅಳಿಯಾಗ ಅರ್ಧಾ ತೊಲಿ

ಉಂಗರಾ, ಈ ತಾಮ್ರದ ಹಂಡೆ, ನಮ್ಮಿಬ್ರಿಗೂ ಸೀರಿ ಎಲ್ಲಾ ಕೊಟ್ಟು ಅವ್ವ ಬದುಕಿದ್ದರ ಎಟ್ಟ ಪೋಲಿಮಿ ಮಾಡತಿದ್ಲು ಅಂತ ಮುದಿಕಿ ಕಣ್ಣೀರ ಹಾಕಿತಃ ಯಕ್ಕಾ. ಜೀವಾ ಚುರು ಚುರು ಅಂತ್ಯು, ನನ್ನ ಸೊಸಿ ಅಂತೂ, ಹಂಡೇನ ಅವ್ವಾಂತ ಪೂಜಿ ಮಾಡ್ತಾಳ. ಬೀಗರಿಗೆ ಸೀ ಊಟಾ ಮಾಡಿಸಿ ಮತ್ತ ಬರ್ರೆವಾ ಪರದೇಶಿ ಮಗಳು ಹಿಗ್ಗತೈತಿ ಅಂತ ಹೇಳಿಕಳ್ಸಿದೆ. ಅಯ್ಯಾಃ ನನ ಮರವಃ ತಂಗೀ, ಈ ಹೊಸಾ ಹಂಡೆ ಯಾಕ ಹೊತಗೊಂಡ ಬಂದಿ. ಅದನ್ನ ನೀರ ತುಂಬಬ್ಯಾಡಾ ಬಟ್ಟಿ ಸರದೀತು, ಗೋಣ ಉಳಕೀತು ಅಂತ ಹೇಳಾಕ ಬಂದ್ನಿ ಬಾಳಾಃ ಮುರಿಗೆವ್ವಾಃ....

ಚುರುಗುಟ್ಟುತ್ತಿದ್ದ ಬಿಸಿಲಿಗೆ ನೆತ್ತಿಯ ಮೇಲಿನ ಸೆರಗು ಜಗ್ಗಿಕೊಂಡು ಸಂಗವ್ವ ಕೇಳಿದಾಗ 'ನಿನ ಸೊಸಿ ಮನೀ ಮುಟ್ಟಿ ತಾಸಾತಬೇ' ಅಶರೀರವಾಣಿ ಕೇಳಿ ಬಂದಿತು. ರಾತ್ರಿ ಹೆಂಡತಿಯ ತೋಳು ಮುಟ್ಟಿ ಆದಪ್ಪ ಹೇಳಿದ್ದ, ನಿನ್ ತೋಳಿಗೆ ದಿಟ್ಟಿ ಆಕ್ಕೈತಿ ಅವ್ವಗ ನಿವಾಳಿ ಇಳಸು ಅಂತೀನಿ.

ಕಾಲ ಸರಿಯುತ್ತಿತ್ತು ಹಿಂದೆ ಎಂದೂ ಬರದಂತೆ....

'ಅವ್ವಾಃನಾ ಸಾಲೀ ಕಡೆ ಹೋಗಿ ಬರ್ತೇನಿ. ಇವತ್ತ ಎಸ್.ಎಸ್.ಎಲ್.ಸಿ. ರಿಜಲ್ಟ ಹಚ್ಚತಾರ. ಹಾಂಗಃ ಪಿಕೋ ಫಾಲ್ ಮಾಡೂ ಪತ್ತಲಾನೂ ಅದಾವ, ಶಾಂತಲಾಗ ಕೊಟ್ಟ ಬರ್ತೇನಿ. ಪಾಸಾಗಲಿ ಅಂತ ಆಶೀರ್ವಾದ ಮಾಡವ್ವ. ಅಪ್ಪಗೂ ಹೇಳು ಮನ್ಯಾಗಿಲ್ಲ ಅಂವಾ. ಉಮಾ ನಾ ಬರ್ತೀನಿ.'

ಪ್ರಿಂಟೆಡ್ ವಾಯಿಲ್ ಸೀರೆ ಉಟ್ಟು ಉದ್ದ ಜಡೆಯಲ್ಲಿ ಮಲ್ಲಿಗೆ ಹೂ ಹಾಕಿ ಘಮ್ಮೆನ್ನುತ್ತ ಟಾಟಾ ಮಾಡುತ್ತ ಕೈಯಲ್ಲೊಂದು ಚೀಲ ಹಿಡಿದು ಅವಸರದಲ್ಲಿ ಹೊರಟ ಸುಮಾಳನ್ನು ಅಭಿಮಾನದಿಂದ ನೋಡುತ್ತ ತಲೆ ಬಾಗಿಲಲ್ಲಿ ನಿಂತಳು ಮುರಿಗೆವ್ವ.

'ಇಕೀ ಕೆಂಪಗ ಎತ್ತರ ನಾಕ ಮಂದ್ಯಾಗ ಎದ್ದ ಕಾಣೂವಂಗ ಛಂದ ಅದಾಳ ಬುದ್ಧಿವಂತಿ. ಇಂಗ್ಲೀಷ ಓದ್ತಾಳ, ಬರೀತಾಳ, ನಿಮ್ಮ ಸುಮಾ ಶಾಣ್ಯಾಳ ಅದಾಳ, ಆಕೀಗೇ ವಿದ್ಯಾ ಕಲಸರಿ ಅಂತ ಮಾಸ್ತರೂ ಹೇಳತಿದ್ದರು. ಸಾಲೀ ಕಲಿಸಿ ಮಾಲಿನಿಬಾಯಿ ಹಾಂಗ ನೌಕರೀನೂ ಹಿಡಿದ ಮ್ಯಾಲೆ ಶಹಾರದ ಕಲಿತ ವರನ ಹುಡುಕಿ ಮದ್ವಿ ಮಾಡೂಣ. ಈಗ ಅತ್ತೆವ್ವ ಇದ್ದರ ಉಮಾ ಸುಮಾನ್ನ ನೋಡಿ ಎಟ್ ಹಿಗ್ಗತಿದ್ಲು. ನಮ್ಮ ಮನ್ಯಾಗ ಲಕ್ಷ್ಮೀ ಸರಸೋತಿ ಹುಟ್ಯಾರ. ಅಕ್ಕಾ-ತಂಗೀ ಜೋಡಾಗಿ ಆಡಿನ ಮಲಿ ಹಾಂಗ ಬೆಳೆದ್ವು ಅಂತಿದ್ಲು. ಆಕೀ ನಸೀಬದಾಗ ನೋಡೂದಃ ಇಲ್ಲಾ' ಸೆರಗಿನ ಚುಂಗಿನಿಂದ ಕಣ್ಣು ತಿಕ್ಕಿಕೊಂಡ ಮುರಿಗೆವ್ವ ಅಸೂಯೆಯಿಂದ ಅವ್ವನನ್ನು ದಿಟ್ಟಿಸುತ್ತಿದ್ದ ಉಮಾನನ್ನು ಹತ್ತಿರ ಎಳೆದು ಅಪ್ಪಿಕೊಂಡು ನೆತ್ತಿ ಮೂಸಿ, ಬೆನ್ನು ಸವರಿ 'ನಡಿ ಲಗೂನ ಅಡಿಗಿ ಮಾಡೋಣ' ಎಂದಾಗ ಕುಣಿಯುತ್ತ ಓಡಿದಳು....

ಆದಪ್ಪನನ್ನು ಹೋಲುತ್ತಿದ್ದ ಉಮಾಳಿಗೆ ಶಾಲೆಗಿಂತ ಮನೆಗೆಲಸದಲ್ಲಿ ಹೆಚ್ಚು ಲಕ್ಷ್ಯ. ವಯಸ್ಸಾಗುತ್ತಿದ್ದ ಅವ್ವನ ಹಿಂದೆ ಮುಂದೆ ತಿರುಗುತ್ತ ಮನೆ, ಕೊಟ್ಟಿಗೆಗಳಲ್ಲಿ ಸುತ್ತುತ್ತ ಕೆಲಸಕ್ಕೆ ಕೈ ಹಚ್ಚುತ್ತಿದ್ದಳು. ಅವಳ ಪಾಲಿಗೆ ಶಾಲೆ ಮುಚ್ಚಿತ್ತು.

'...ಅವ್ವಾ ಸಂಜಿ ಆತು ಬಾಗಲಕ ನೀರ ಹಾಕಿ ಊದಬತ್ತಿ ಹಚ್ಚೇನಿ... ದೇವರ ಮುಂದ ದೀಪಾ ಮುಟ್ಟಸೇನಿ, ಶೇಕೂ ಬಂದಾಳ ಚಾವಡಿ ಮುಂದಿನ ನಳಕ್ಕ ನೀರಿಗೆ ಹೋಗ್ತೀನಿ.'

ಉಮಾ ಕೂಗಿದಾಗ ಮುರಿಗೆವ್ವ ಕಣ್ಣು ಬಿಟ್ಟಳು. ಸುಮಾನ ಮದುವೆಯ ಸಂಭ್ರಮದ ಕನಸಿನಿಂದ ಎಚ್ಚರಾಗಿ 'ಅಯ್ಯಾಃ ಕತ್ತಲಾತು, ದೀಪ ಹತ್ಯಾವ, ಸುಮಾ ಏ ಸುಮಾಃ ಸುಮಿಃ ಎಲ್ಲ್ಯ ಅದೀ....'

ಅಂದು ರಿಜಲ್ಟ ತಿಳಿಯಲು ಹೋದ ಸುಮಾ ತಿರುಗಿ ಮನೆಗೆ ಬರಲಿಲ್ಲ. ಸಾಲೆ, ಓಣಿ, ಗೆಳತಿಯರ ಮನೆ, ಕಡೆಗೆ ಬಾವಿ ಎಲ್ಲೂ ಇಲ್ಲ. ಸುಮಾನ ಸುಳಿವೇ ಇಲ್ಲ. ತಿರುಗಿ ತಿರುಗಿ ಕಾಲು ಎಳೆಯುತ್ತ ಸೋತ ಆದಪ್ಪ ಮನೆಗೆ

ಬಂದಾಗ ಹತ್ತು ವರ್ಷ ಹೆಚ್ಚು ಮುದುಕನಾಗಿದ್ದ. ಸಿಡಿಲು ಬಡಿದಂತೆ ಕೂತ ಮುರಿಗೆವ್ವನಿಗೆ ಗಂಡನ ಮುಖ ನೋಡಲು ಧೈರ್ಯವಿಲ್ಲ. ಇನ್ನು ಸತೀಶ ಹೇಳಿದ ಸುದ್ದಿ ಹೇಗೆ ಹಂಚಿಕೊಂಡಾಳು? ಬಿಡದ ಕರ್ಮ, ಕೈ, ಕಾಲು ನಡುಗುತ್ತಿದ್ದರೂ ಗಂಡನ ಕಾಲ ಬಳಿ ಕೂತು ಒತ್ತುತ್ತ, ಮೆತ್ತಗೆ ಉಸಿರು ಬಿಟ್ಟಳು.

'ಬಾಲಚಂದ್ರ ಅಂತ ಸುಮಿ ಕಾಲೇಜಿನ್ಯಾಗ ಮಾಸ್ತರ ಇದ್ದ, ಇಕೀಗೂ ಕಲಸತಿದ್ದಂತ. ಅಂವಗ ಶಹರದಾಗ ದೊಡ್ಡ ನೌಕರಿ ಸಿಕ್ಕಿತಂತ. ಇಂದ ಸಂಜಿ ಮುಂದ ಸುಮಿ ಅವನ ಜೋಡಿ ಬಸ್ ಏರಿ ಹ್ಯಾದ್ಲಂತ' ನೆಲ್ಲಕ್ಕೆ ಬಿದ್ದು ಶ್ರಾಪಿಸಿ ಧಪ್ ಧಪ್ ಬಡಿದಳು. ಅವಳ ಅಳು ಮುಗಿಲು ಮುಟ್ಟಿತ್ತು.

ಆಗಾಗ ಬಾಲಚಂದ್ರನ ಜೊತೆ ಸುಮಾನ ಓಡಾಟ, ಸಲಿಗೆ ಕಂಡ ಜನ ಊರಿನಲ್ಲಿದ್ದರೂ ಅಪ್ಪ ಅವ್ವಗೆ ಅವಳ ಅಂತ ಹತ್ತಿರಲಿಲ್ಲ. ಬೇರೆಯವರ ಮನೆಯ ಉಸಾಬರಿ ತಮಗೇಕೆನ್ನುವ ಸಜ್ಜನರು, ಹೇಳಿದರೆ ನಂಬುವರೆನ್ನುವ ವಿಶ್ವಾಸವಿಲ್ಲದ ಮಧ್ಯಮರು, ಮುಂದೆ ಏನಾಗುತ್ತದೆ, ಮಜಾ ನೋಡೋಣ ಎನ್ನುವ ಅಧಮರು ವಾಸಿಸುವ ಲೋಕವಿದು.

ಮುರಿಗೆವ್ವನ ಏಳಿಗೆಯಿಂದ ಸಂಕಟಪಡುತ್ತಿದ್ದ, ತನ್ನ ಮಗನಿಗೆ ಸುಮಾಳನ್ನು ಕೇಳಿದರೆ ಕೊಡಲಿಲ್ಲವೆನ್ನುವ ಸಿಟ್ಟಿನಿಂದ ಕುದಿಯುತ್ತಿದ್ದ ಮಲ್ಲವ್ವ ಊರೆಲ್ಲ ಸುದ್ದಿ ಬೀರಿ ಹಂಡೆ ಹಾಲು ಕುಡಿದಷ್ಟು ಸಂತೋಷಪಟ್ಟಳು.

'ನಮ್ಮ ಭೀಮಣ್ಣಗ ಸುಮಿನ್ನ ಕೊಡು ಅಂತ ಗಿಣಿಗೆ ಹೇಳಿದಾಂಗ ಹೇಳಿದ್ಯಾ. ನನ ಮಗಳ ಸಾಲೀ ಕಲೀತಾಳ, ಕಲಿತು ನೌಕರಿ ಮಾಡವರಿಗೆ ಕೊಡ್ತಿನಿ ಅಂತ ಮಾರೀ ತಿರವಿದಳು. ಈಗ ನೋಡ್ರಿ ಈ ಸೋಗಲಾಡಿ ಕಡಿಮಿ ಕುಲದವನ ಕೂಡ ಓಡಿ ಹೋಗಿ ಇವರ ಮಾರಿಗೆ ಮಸೀ ಹಚ್ಯಾಳ, ಅತ್ತರ ಏನ ಬಂತು? ಅವ್ವ ಅನ್ನಾಕಿ ಇಟ್ಟ ಸಲಿಗೀ ಕೊಟ್ಟು ಹೆಣ್ಣಗೋಳ್ನ ತಲಿಮ್ಯಾಲೆ ಇಟಕೋಬಾರದು ಹೌಂದಲ್ಲೊ. ಜರಾ ಹದ್ದಬಸ್ತಿನ್ಯಾಗ ಇಟ್ಟಿರಬೇಕು.'

ಊರಿನಲ್ಲಿ ಎಲ್ಲರೂ ಅಲ್ಲದಿದ್ದರೂ ಬಹಳಷ್ಟು ಜನ ಸುದ್ದಿಯನ್ನು ಸವಿ ಮಾಡಿಕೊಂಡು ಚಪ್ಪರಿಸಿದರು. ಅಷ್ಟಕ್ಕೆ ಮುಗಿಸದೆ- ಹಾಗಂತೆ ಹೀಗಂತೆ ಮರಿ ಕಿರಿ ಕಥೆಗಳನ್ನು ಹೊಸೆದು ಕಿರಿಕಿರಿ ಮಾಡಿದರು. ಭಂಡರಂತೂ ಮನೆಗೇ ಬಂದು ಮತ್ತೆ ಮತ್ತೆ ಅವವೇ ಮಾತುಗಳಲ್ಲೇ ತಿವಿದು ಘಾಸಿ ಮಾಡಿ ಇಬ್ಬರನ್ನೂ ಅಳಿಸಿಬಿಟ್ಟರು. ಆದಪ್ಪ ಕೈ ಕಾಲು ಕಳೆದುಕೊಂಡು ದುರ್ಬಲನಾಗಿ ಜನಕ್ಕೆ ಹೆದರಿ ಮುಖ ತೋರಿಸದೆ ಹಾಸಿಗೆ ಹಿಡಿದು ಕೊರಗಿದ.

ಹಲುಬಿ ಹಂಚೀಕಡ್ಡಿಯಾದ ಅವ್ವನನ್ನು ಎಲುಬಿನ ಹಂದರವಾದ ಅಪ್ಪನ್ನ ಜೋಪಾನ ಮಾಡುವ ಭಾರವೆಲ್ಲ ಸಣ್ಣ ಹುಡುಗಿ ಉಮಾನ ಮೇಲೆ. ತುಟಿ ಪಿಟ್ಟೆನ್ನದೆ ಹಗಲು ರಾತ್ರಿ ಸವೆದಳು ಉಮಾ. ಅಂಜುಬುರುಕ ಆದಪ್ಪ ಹೆಂಡತಿ ಮಗಳನ್ನು ಬಿಟ್ಟು ಕಣ್ಣುಮುಚ್ಚಿದ.

ಆಡಿಕೊಳ್ಳುವ ಮಾತುಗಳೆಲ್ಲ ಮುಗಿದು ಮುರಿಗೆವ್ವನ ತಾಳ್ಮೆಯೂ ಮುಗಿದಿತ್ತು. ಉಮಾನ ಜವಾಬ್ದಾರಿ ಇದೆಯಲ್ಲ. ಅವಳಿಗೆ ತಾನಲ್ಲದೇ ಇನ್ನ್ಯಾರು ದಿಕ್ಕು? 'ನನ ಪಾಲಿಗಿ ಓಡಿ ಹ್ಯಾದ ರಂಡಿ ಸತ್ತ ಹ್ಯಾಂದ್ಲು. ನನಗ ಇರೂದ ಇದೊಂದs ಕೂಸು ದೇವರ ಜಗಲಿ ಮುಟ್ಟಿ ಆಣೆ ಪ್ರಮಾಣ ಮಾಡಿ ಆಸರೆಗೆಂಬಂತೆ ಉಮಾಳನ್ನು ಅಪ್ಪಿ ಕರುಳು ಹರಿದುಕೊಂಡಳು.

ಥಳಥಳಿಸುತ್ತಿದ್ದ ತವರಿನ ತಾಮ್ರದ ಹಂಡೆ ತಿಕ್ಕದೆ ತೊಳೆಯದೆ ಕಪ್ಪಾಗಿ ಜೋಳ ತುಂಬಿಕೊಂಡು ಮೂಲೆಯಲ್ಲಿ ಕುಳಿತಿತ್ತು.

ಲೇs ಎಲೇ ಈಶ್ಯಾs ಲೇs ಯಾಕ ಬಂದ್ಯಲೇ ಮತ್ತ ನಮ ಕಟ್ಟಿಕಲ್ಲ ಹತ್ತಬ್ಯಾಡಾ ಮನೀ ಹತ್ರ ಸುಳೀಬ್ಯಾಡಾ ಅಂತ ಆಣೆ ಹಾಕಿದ್ನಿ. ಹಡಬಿಟ್ಟಿ ಮಗನs ನಾಚಿಕಿ ಬರೂದಿಲ್ವೇನೊ ಭಾಡ್ಯಾ ನಿನಗ? ನನ ಉಮಕ್ಕನ

ಕುತಿಗೀ ಕೊಯ್ದಿ. ಸುಳ್ಳೊಂದ, ಸೊಟ್ಟೊಂದು ಹೇಳಿ ಆ ಚಂಡಾಳ ಮಂಜ್ಯಾನ ಕೂಡ ಲಗ್ನಾ ಮಾಡಿಸಿ ನಮ ಬದಕ ಹಾಳ ಮಾಡಿದಿ. ಬಡೂರು ದುಡಕೊಂಡ ತಿನ್ನಾವರು ಸಂಪನ್ನರು. ಮನೀ ತುಂಬ ಮಕ್ಕಳಾಗ್ಯಾವ. ಮಂಜುನಾಥಗ ನಿಮ್ಮ ಉಮಾನ್ನ ಕೊಟ್ಟರ ಮನೀ ಅಳಿಯಾ ಆಗಿ ಬಂದು ಇದ್ದು ಹೊಲ - ಮನೀ ನೋಡಕೊಂತಾನ, ಮುಪ್ಪಿನ್ಯಾಗ ನಿಮ ಕಾಳಜಿ ಮಾಡತಾನ ಅಂತೆಲ್ಲಾ ಹೊಗಳಿ ಬೊಗಳ್ದಿ. ನಿನ್ನ ಮಾತ ನಂಬಿ ನಾನೂ ಆ ಬೈರೂಪಿಗೆ ಮಗಳ್ನ ಕೊಟ್ಟ ಹಾಳಾದ್ನಿ. ಹಡದ ಹೊಟ್ಟಿಗಿ ಬೆಂಕಿ ಹಾಕಿದೆಲ್ಲೊ, ನಿನವಂಸ ನಿರ್ವಂಸ ಆಗಾ, ನಿನ ಮಾರಿ ಮಣ್ಣಾಗ ಅಡಗ್ಲಿ. ಮಗನ, ನೀ ಒಂದs ನನ ಕೈಯಾಗ ಸಿಗೂ ಕಾಲ ಮುರದ ಕೈಯಾಗ ಕೊಡ್ತೇನಿ. ಲೇ ಈಶ್ಯಾ ಮುರಿಗೆವ್ವ ಅಂದರ ಏನಂತರ ತಿಳಿದೀಯೋ, ನನ ಶ್ರಾಪ ನಿನಗ ಹತ್ತದ ಇರೂದಿಲ್ಲೋ ಅಯ್ಯಯ್ಯೋ........

ಹಾಸಿಗೆಯಲ್ಲಿ ಕಣ್ಮುಚ್ಚಿ ಅತ್ತಿತ್ತ ಕೈ ಚಾಚಿ ಬಡಿಗೆ ಹುಡುಕುತ್ತ ಹತ್ತಿರವಿದ್ದ ನೀರಿನ ತಂಬಿಗೆ ಉಳ್ಳಿಸಿ ಬಿಟ್ಟು ತಣ್ಣನೆ ನೀರು ಕೌದಿಯ ಮೇಲೆ ಹರಿದಾಗ ಎಚ್ಚರಾದಳು ಮುರಿಗೆವ್ವ.

ಅಯ್ಯs ಮುತ್ತುs ಮುತ್ತಣ್ಣಾ ಗೀತಾs ಏ ಗೀತಿs, ಎಲ್ಲ್ಯದಿರೋ... ಬರ್ರಿ. ಯಾರರೆ ಬರ್ರ್ಯೋ... ತಲಿ ಮ್ಯಾಲೊಂದು ಗುಡ್ಡ ಕುಂತತಿ. ಮೈ ಕಾದ ಕೆಂಡ ಆಗಿ ಉರಿಯಾಕ ಹತ್ತೇತಿ, ಗಂಟ್ಲ ಒಣಗಿ ಸುಂಟಿ ಆಗೇತಿ. ಸಾಯಾಕ ಹತ್ತೇನಿ ಒಂದೀಟ ಚಾ ಕಾಸಿ ಕೊಡ್ರಿ ಸಂಕಟ ಆಕ್ಕತಿ, ಯಣ್ಣಾs... ತಂಗೀs...

ಪಡಸಾಲೆಯಲ್ಲಿ ರೇಡಿಯೋ ಒದರಿಸುತ್ತ, ಒದರೀ ಒದರೀ ತಲಿ ಚಿಟ್ಟ ಹಿಡಿಸಿಬಿಡ್ತಿ. ಕುಣಿಯುತ್ತಿದ್ದ ಗೀತಾ ಧಡ್... ಬಾಗಿಲ ನೂಕಿ ಬಂದು ಅಮ್ಮನಿಗಿಂತ ಜೋರಾಗಿ ಜಬರಿಸಿದಳು. 'ಏನಬೇ ನಿಂದ ರಗಳಿ, ಹಗಲು ಹನ್ನೆರಡು ತಾಸು' ನನಗ ಅಭ್ಯಾಸ ಮಾಡೂದ್ಯೆತಿ. ಇನ್ನೂ ನಾ ಹೋಂವರ್ಕ ಮಾಡಬೇಕ. ಮುತ್ತಣ್ಣ ವಕೀಲರ ಮನೀಗೆ ಟಿ.ವಿ. ನೋಡಾಕ ಹೋಗಿ ಕುಂತಾನ. ಅಪ್ಪ ದಿನಾ ಸಂಜೀ ಮುಂದ ಗೆಳ್ಯಾರ ಕೂಡ ಅಡ್ಡೇಕ ಹೋಗಿ ಇಸಪೇಟ ಆಡ್ತಾನ. ಅವ್ವ ಆರ್ಡರ ಮಾಡ್ತ್ಯಾಳ ಅಂತ ನಾ ಒಬ್ಬಾಕಿ ಮನ್ಯಾಗ ಅದೀನಿ, ನಿನಗ ಜೀವಾ ಹಿಂಡಾಕ ಸಿಗತೀನಿ. ನಿನ ಮಗಳು ಹೊಲದಿಂದ ಬರೂ....'

''ಒಂದೀಟ ಬಿಸಿನೀರ ಕಾಸಿ ಕೊಡಂದರ ಎಟ್ಟ ಮಾತ ಉದರಸ್ತಿಬೇ. ಕಟಿಗಿ ಪುಟಾ ಮಾಡೂ ಕೆಲಸ ಇಲ್ಲ. ಗ್ಯಾಸ ಅಂತೀರಲ್ಲ ಅದರಾಗ ಮಾಡ'.

'ಹಂ ಹುಂ ಮಾಡ... ಹಾಂ ನೋಡಲ್ಲೆ ಬಂದಳ ನಿನ ಮಗಳು ಹೇಳ ಆಕಿಗೆ'

'ಯಾಕವ್ವ, ಏನ ನಡದದ, ಏನ ಹೇಳ'ಂದಳು ಉಮಾ' ಕಾಲು ತೊಳೆದು ದೇವರ ಮುಂದಿನ ವಿಭೂತಿ ಧರಿಸಿ ಬಂದ ಉಮಾ ಅವ್ವನ ಹತ್ತಿರ ಕೂತು ದಣಿದ ಕಾಲ ಚಾಚುತ್ತ ಕೇಳಿದಳು. 'ಹೊಲಕ್ಕ ಹೋಗೂ ಮುಂದ ಗಂಜೀ ಮಾಡಿ ಒಲೀ ತೋಳ ಮ್ಯಾಗ ಇಟ್ಟಿದ್ದೆ. ಗೀತಾ ಹಾಲ ಹಾಕಿ ಕುಡಿಯಾಕ ಕೊಟ್ಟಳಿಲ್ಲೊ!'

ಹಗಲೆಲ್ಲ ಹೊಲದಲ್ಲಿ ಆಳುಗಳ ಕೂಡ ದುಡಿದು ದಣಿದು ಬಂದಿದ್ದರೂ ಕಕ್ಕುಲಾತಿಯಿಂದ ಮಗಳು ಆಡಿದ ಮಾತಿಗೆ, ಅವಳ ಪ್ರೀತಿಯ ಸ್ಪರ್ಶಕ್ಕೆ ಮುರಿಗೆವ್ವ ಕರಗಿ ಕಣ್ಣೀರಾದಳು.

'ಗಂಜೀನ ಕಾಮಿ ಉಳ್ಳಿಸಿ ಕುಡದು ಹೋಗೇತಿ. ಹೊಟ್ಟ್ಯಾಗ ಏನಿಲ್ಲ, ಒಂದೀಟ ಚಾ ಕಾಸಿ ಕೊಡಂತ ನಿನ ಮಗಳಿಗೆ ಚಾಲವರದೆ. ಬುಟ್ಟಿ ತುಂಬ ಮಾತಾಡಿದ್ಲವ್ವ. ನಾ ಇನ್ನ ಹಾಸಿಗಿ ಹಿಡಿದ ಮಲಗಬಾರದವ್ವಾ. ಲಗೂನ ಶಿವಾ ನನ ಕಣ್ಣ ಮುಚ್ಚಬೇಕ ನೋಡ'

ಸೆರಗಿನಿಂದ ಕಣ್ಣು ಒರೆಸಿಕೊಳ್ಳುತ್ತ ಚಟ್ಟಂತ ಎದ್ದು ಒಳಗೆ ಹೋದ ಉಮಾ ಚಾ ಬಿಸ್ಕೀಟು, ಜ್ವರದ ಗುಳಿಗೆ ಹಿಡಿದುಕೊಂಡೇ ಬಂದಳು. ಹೊಟ್ಟೆಗೆ ಬಿದ್ದ ಮೇಲೆ ಸಮಾಧಾನವೆನಿಸಿದ್ದ ಮುರಿಗೆವ್ವನ ಮುಚ್ಚಿದ ಕಣ್ಣುಗಳ ಮುಂದೆ ಸಮಸ್ಯೆ ಬ್ರಹ್ಮರಾಕ್ಷಸನ ರೂಪದಲ್ಲಿ ಕುಣಿಯುತ್ತಿತ್ತು. ಒಂದೇ ಚಿತ್ರ.....

........................................................................................................................................

ಎಲುವು ಎದ್ದು ಕಾಣುವ ಮೈ, ಪೆಚ್ಚು ಬಿದ್ದ ಗಲ್ಲ, ಎಣ್ಣೆ ಕಾಣದ ಧೂಳು ತುಂಬಿದ ಕೂದಲು, ಮಾಸಿದ ಸೀರೆ, ಬಣ್ಣವಿಲ್ಲದ ಬಳೆಗಳು... ಈಕಿ ನಮ್ಮ ಉಮ್ಮಕ್ಕನ ... ಅಲ್ಲ ಈಕಿ ಅಲ್ಲ. ನನ್ನ ಮಗಳ್ನ ಪಕ್ಕದಾಗ ಇಟಕೊಂಡ ಜ್ವಾಪಾನಾ ಮಾಡಿದ್ನಿ. ಚಿಗರಿಮರಿ ಹಾಂಗ ಕುಣಕೊಂತ ನನ ಹಿಂದ ಮುಂದ ಓಡಾಡಿಕೊಂತ ಕೆಲಸಾ ಮಾಡತಿದ್ಲು. ಆ ಮಗಳs ಈಕಿ. ರಾತ್ರಿ ನನ ಸೆರಗು ಮುಚಿಕೊಂಡ ಮಲಗತಿದ್ಲು, ಆ ಉಮಾನ ಈಕಿ? ಅಲ್ಲs ಅಲ್ಲ. ನನ ಮಗಳ ಪಿಚಾಚಿ ಇದು. ಇದ ಎಲ್ಲಿಂದ ಬಂತು. ಹ್ಯಾಂಗ ಬಂತು? ಈ ಮನೀ ಮುಳುಗಾಕ ಹತ್ತೇತಿ. ಮಗಳ ಬದಕ ಹಳ್ಳಾ ಹಿಡದೈತಿ ಇನ್ನು ಹಾದ್ಯಾಗ ಬೀಳೂದಟs ಉಳದೇತಿ. ನಾ ಯಾಕ ಸುಮ್ಮs ಕುಂತ ನೋಡಾಕತ್ತೇನಿ. ನನ ಬುದ್ದಿಗಿ ಬ್ರಮಾ ಆಗೈತೇನ. ಆ ನನ ಮದಲಿನ ಸಗತಿ ಎಲ್ಲಿ ಹೋತು? ಆ ಹೊಲಸ ರಂಡಿ ಓಡಿ ಹೋದ್ಲಂತ ಎಲ್ಲಾ ಮಾಯ ಆಗಿ ಹೋತೇನು? ನನ ಮಗಳ ಹಿಂತಾ ಬಾಳೇ ನೋಡಾಕನ ನಾವ ಗಂಡಾ ಹೇಣ್ತಿ ದುಡದು ಇಟ್ಟ ಆಸ್ತಿ ಮಾಡಿ ಇಟ್ಟೆವೇನ? ಯಪ್ಪಾs ಅಥಣಿ ಮುರಿಗೆಪ್ಪ ಸ್ವಾಮಿ ನಡನೀರಾಗ ನನಗ ಕೈಯಾಕ ಬಿಟ್ಟೆಪ್ಪಾ. ಹುಡಕಿ ಹುಡಕೀ ಹಿಂತಾ ಹರಾಮ ಕೋರಗ ಮಗಳ್ನ, ಆಸ್ತೀನ ಕೊಟ್ಟ ಹೆಂತಾ ತೆಪ್ಪ ಮಾಡಿದ್ನೆಪ್ಪಾ. ಮಳೀ ಇಲ್ಲ ಬೆಳೀ ಇಲ್ಲಾ. ದಿನಮಾನಾ ತುಟ್ಟಿ ಆಗ್ಯಾವ. ಮಕ್ಕಳ ಸಾಲಿ ಖರ್ಚು ಅಂತ ನಂಬಿಸಿ ತನ್ನ ಸಾಲಕ್ಕ ಎರಡು ಎಕರೆ ಹೊಲಾ ಮಾರಿಕೊಂಡಾನ. ತಾ ನೋಡಿದರ ಬಂಗಾರ ಚೈನು, ಬಿಳಿ ಅರಿವಿ ಹಾಕ್ಕೊಂಡ ಚೈನಿ ಮಾಡಿಕೊಂತ ಇಸ್ಪೇಟ ಆಡಾಕ ಹೋಗತಾನ. ಇಂವನ ಗೆಣೆಕಾರರೆಲ್ಲಾ ಕುಡಕ ಸೋಮಪ್ಪ, ಹಲ್‌ಕಟ್ ಮಾದಪ್ಪ ಹಿಂತಾವರ. ಈ ರಗಳೇ ರಂಪಾಟಾ ನೋಡಾಕ ಅತ್ತೀ, ಹಿರ್ಯಾ ಇಬ್ರೂ ಇಲ್ಲಾ. ಮಗಳ ಮಾರೀ ಮ್ಯಾಗಿನ ನಗೀ ಹಾರಿ ಹೋಗೇತಿ. ಹೊಟ್ಟೀ ತುಂಬ ಹಿಟ್ಟಿಲ್ಲ. ಮೈಗಿ ಬಟ್ಟಿ ಇಲ್ಲ. ಗಂಡನ ಪಿರೀತಿ ಮಕ್ಕಳ ಕಕ್ಕಲಾತಿ ಯಾವದು ಇಲ್ಲಾ. ಮನೀ ಅಳ್ಯಾನ್ನ ತಂದ ಅಳೂ ಪಾಳೀ ಬಂದೇತಿ ನನಗ. ಹಿಂಗs ಬಿಟ್ಟರ ಎಲ್ಲಾ ಹಾಳ ಮಾಡಿ ಹತ್ತೀ ಬಿತ್ತಿ, ಹೇಣ್ತಿ ಮಕ್ಕಳ ಕೈಯಾಗ ಪರಟಿ ಕೊಡಾಕೂ ಹೇಸಾಂವಲ್ಲ.

ಅವಡುಗಚ್ಚಿ ವಟಗುಡುತ್ತಿದ್ದ ಮುರಿಗೆವ್ವನ ಮಾತಿನ ಧಾಟಿ ಬದಲಾಯಿತು.... ಕಾವೇರಿತು...' ಏನ ಸೂಳಿಮಗನs ಮಂಜ್ಯಾ ಇಟ್ಟ ದಿನಾ ಮಗಳ ಬಾಳೆ ಹಾಳಾಗಬಾರದಂತ ಸುಮ್ನಿದ್ನಿ. ನನ ಬುದ್ದಿಗೇನ ಗರಾ ಬಡಿದಿತ್ತೋ. ಮಾಡ್ತೀನಿ ಬಾರಲೆ ಮಗನ, ನಿನ್ನ ಹಾದಿಗೆ ತರತೀನಿ ಇಲ್ಲಾ ಬೀದಿ ತೋರಸ್ತೀನಿ. ಮಗಳs ಉಮ್ಮಕ್ಕಾ ನೋಡ್ತಿರು, ನನ್ನ ಜಡ್ಡು ಜರಾ ಕಮ್ಮಿ ಆಗಲಿ, ಕಾಲಾಗ ಸಗತಿ ಬರಲಿ, ಕೈಯಾಗ ಕೋಲು ತೋಗೋತಿನಿ. ನಿನ್ನ ಗಂಡಗ ಬೇಶಾಗಿ ಝಾಡಸ್ತೇನಿ. ಹೊಲಾನಂದು ಮನೀ ನಂದು. ಏಟ ಹಾರ್‍ಯಾಡತಿಯೋ ಮಗನs ಅಂತೀನಿ, ಇಟ್ಟ ದಿನಾ ಒಳಗ-ಹೊರಗ ದುಡದು ಭಾಳ ಕಷ್ಟಾ ಸೋಸಿ ಮಗಳs ಇನ್ನ ಆರಾಮ ಇರು. ನನ್ನ ಉಮಾನs ನನಗ ಎಲ್ಲಾs, ರಾಣೀ ಹಾಂಗ ಇರು. ನಾ ತೆಪ್ಪ ಮಾಡಿದ್ನಿ.'

ಕೈ ಮುಗಿದು ಅತ್ತಿದ್ದಳು ಅವ್ವನನ್ನು ಅವಚಿಕೊಂಡು ಮಗಳೂ ಕಣ್ಣೀರು ಹರಿಸಿ ಹಗುರಾದಳು.

ಆ ದಿನ ಊರೆಲ್ಲ ಹಟ್ಟಿ ಹಬ್ಬದ ಸಂಭ್ರಮದಲ್ಲಿತ್ತು. ಮೈಯಲ್ಲಿ ಹೊಸ ಶಕ್ತಿ, ಕಣ್ಣಲ್ಲಿ ಮಿಂಚುವ ಬೆಳಕಿನೊಂದಿಗೆ ಎದ್ದು ಮುಖ ತೊಳೆದ ಮುರಿಗೆವ್ವ ತಿಕ್ಕಿತೊಳೆದು ನೀರು ತುಂಬಿ ಪೂಜೆ ಮಾಡಲು ತನ್ನ ತವರಿನ ಹಂಡೆ ಹುಡುಕಿದಳು. ಎಲ್ಲಿಯೂ ಕಾಣಲಿಲ್ಲ. ಅದನ್ನು ಇಟ್ಟ ಜಾಗ ಖಾಲಿಯಾಗಿ ದುಂಡಗಿನ ಕರಿ ಕಲೆ ಮಾತ್ರ ಇತ್ತು. ಕಣ್ಣು ಕೆಂಪಾಗಿ ಸಿಟ್ಟು ನೆತ್ತಿಗೇರಿತು. ಕೈಯಲ್ಲಿ ಕೋಲು ಹಿಡಿದು-

'ಲೇs ಎಲೆs ಯಾರದೀರಿ ಎಲ್ಲಿ ಸತ್ತೀರಿ ಮಂಜ್ಯಾ, ಮುತ್ಯಾ ಗೀತಿ ಎಲ್ಲ್ಯದಿರಿ ನನ ಹಂಡೆ ಎಲ್ಲ್ಯದ ಕಾಣವಲ್ತು?'

ಪಡಸಾಲೆಯಲ್ಲಿದ್ದ ಮೃತ್ಯುಂಜಯ ಓಡಿ ಬಂದು ತೊದಲಿದ. 'ಅಪ್ಪ... ಮೊನ್ನೆ ಅಪ್ಪ....'

'ಏನಲೇ ಏನ ಬಡ ಬಡಸ್ತೀ? ಏನ ಮಾಡಿದಾ ನಿಮ್ಮಪ್ಪ ಬೊಗಳೋ?'

'ಮೊನ್ನೆ ಅಪ್ಪ ಹಂಡೆ ಒಯ್ದ್ಯಾನ, ಟಿ.ವಿ. ಕೊಳ್ಳಾಕ ರೊಕ್ಕ ಕಡಿಮಿ ಬಿದ್ದಾವ್ ಅಂತಿದ್ದಾ. ಏನ ಮಾಡ್ಯಾನೋ ಗೊತ್ತಿಲ್ಲ' ಅಮ್ಮನ ಹೊಸ ಅವತಾರ ಕಂಡು ನಡುಗುತ್ತಿದ್ದ ಎದೆಯೆತ್ತರ ಬೆಳೆದ ಮೊಮ್ಮಗ.

'ಮಂಜ್ಯಾಲೇss' ಮನೆ ನಡುಗುವಂತೆ ಕೂಗಿದಳು ಮುರಿಗೆವ್ವ.

ಟಿ.ವಿ. ಮುಂದೆ ಕೂತು ಚಹಾ ಕುಡಿಯುತ್ತ ಹೆಂಗಸರ ಎದೆ ಕುಣಿತ ನೋಡುತ್ತ ತಾಳ ಹಾಕುತ್ತ ಖುಷಿಯಲ್ಲಿದ್ದ ಮಂಜುನಾಥ ಬೆದರಿ ಕಪ್ಪು ಕೆಳಗೆ ಬಿಟ್ಟ.

'ಲೇ ಮಂಗ್ಯಾನ ಮಗನ ಈಗs ಹಂಡೆ ತಂದ ಕೊಡು. ಕುಂಟ ನೆವಾ ಹೇಳಿದೆಂದರ ನಿನ್ನ ಕಾಲ ಮುರದ ಹಾಕಿ ಹಾದೀಗಿ ದಬ್ಬತೀನಿ ಹಂs. ಹೊರಬೀಳ ಹೋಗ'

ಒಂದೇ ಉಸುರಿಗೆ ಹೊರಗೆ ಓಡಿದ ಮಂಜುನಾಥನ ಎದೆಯ ಮೇಲೆಯೆ ಧಪ್ ಧಪ್ ... ಕೋಲು ಕುಟ್ಟುತ್ತಿತ್ತು.

■■

# ಸುರಪುರದ ಸಾಧ್ವಿ

ಆ ಕಂಪಾರ್ಟಮೆಂಟಿನಲ್ಲಿ ಅಜಿತನಿಗೆ ಸಿಕ್ಕಿದ್ದು ಕೆಳಗಿನ ಬರ್ಥ. ಅದು ಅವನಿಗೆ ಬೇಕಾಗಿರಲಿಲ್ಲ. ಜನರ ಓಡಾಟ, ಸಾಮಾನುಗಳ ದಟ್ಟಣೆ, ಬೆಳಕು, ಗಾಳಿ ಕಡಿಮೆ, ಮೇಲಿನವರ ಮರ್ಜಿ ಕಾಯಬೇಕು. ಕಿರಿಕಿರಿಯೇ ಹೆಚ್ಚು. ಹೋಗಲಿ, ಬಂದವರ ಜೊತೆ ಎಡ್ಜಸ್ಟ ಮಾಡಿ ಮೇಲಿನ ಬರ್ಥಗೆ ಹೋದರಾಯಿತು. ಕೈಗೊಂದು ಪುಸ್ತಕ ಹಿಡಿದು ಅರಾಮಾಗಿ ಕಾಲು ಚಾಚಿ ಕುಳಿತ.

"ಬರ್‍ರಿ ಲಗೂ ಬರ್‍ರಿ, ಟ್ರೇನು ಭಾಳ ಹೊತ್ತು ನಿಂದ್ರೂದಿಲ್ಲ. ಏಃ ಕೂಸಿನ್ನ ತಾ ಇಲ್ಲೆ. ನೀವಿಬ್ರೂ ಗಾಡಿ ಹತ್ತರಿ."

ಬಾಗಿಲ ಹತ್ತಿರ ಏರುದನಿ ಕೇಳಿತು. ಇಬ್ಬರು ಗಂಡಸರು, ಇಬ್ಬರು ಹೆಣ್ಣುಮಕ್ಕಳು, ಒಂದು ಪುಟ್ಟ ಕೂಸು. ಕಾಲು ಮಡಚಿ ಸರಿದು ಕೂತ ಅಜಿತ. ಕೂಸನ್ನು ಚಿಕ್ಕವಳ ಕೈಗೆ ಕೊಟ್ಟ ತಂದೆ ಹೇಳಿದ.

"ಸುಮಾಃ, ರಾತ್ರಿ ಕಿಡಿಕ್ಯಾಗಿಂದ ಸೂಸಗಾಳಿ ಬಂದು ಪಾಪೂಗ ಥಂಡಿ ಆದೀತು, ಬೆಚ್ಚನ್ನ ಅರಿವಿ ಹಾಕಿ ಶಾಲು ಹೊಚ್ಚಿ ಹತ್ತಿರ ಮಲಗಿಸಿಕೊ... ತಲೆ ಎತ್ತದೆ ಯಾಂತ್ರಿಕವಾಗಿ ಗೋಣು ಹಾಕಿದಳು ಮಗಳು.

'ಎಳೀ ಬೋಟಿನ್ನ ಇಲ್ಲಿ ಕೊಡು, ನಾನಃ ಸ್ವೆಟರು ಕಾಲುಚೀಲ, ಕುಲಾಯಿ ಹಾಕಿ ಕೊಡತೀನಿ', ತಾಯಿ ಹೇಳಿದಾಗ ಮೌನವಾಗಿ ಮಗುವನ್ನು ಎತ್ತಿ ಕೊಟ್ಟುಬಿಟ್ಟಳು. ಅವಳ ದೃಷ್ಟಿ ಬರಿದಾದ ಉಡಿಯಲ್ಲಿತ್ತು.

"ನೀನೂ ಹಸಿ ಬಾಣಂತಿ, ಭಾಳ ಹೊತ್ತು ಕೂಡ್ರ ಬ್ಯಾಡ, ಬೆನ್ನು ನೋಯ್ತದ ಮನ್ಯಾಗ ಊಟಾ ಸರಿಯಾಗಿ ಮಾಡಲೇ ಇಲ್ಲ ಥರ್ಮಾಸಿನ್ಯಾಗ ಹಾಲು ತಂದೇನಿ ಕುಡಿ. ನಾ ಹಾಸಿಗಿ ಹಾಕ್ತೇನಿ."

ತಾಯಿಯ ಮಾತಿಗೆ ಅವಳು ಒಲ್ಲೆ ಎನ್ನುವಂತೆ ಗೋಣು ಹಾಕಿದಾಗ ಅಜಿತನಿಗೆ ಆಶ್ಚರ್ಯ, ಕುತೂಹಲ! ಸ್ಪ್ರಿಂಗಿನ ಗೊಂಬೆ ಹಾಗೆ ಗೋಣು ಹಾಕುತ್ತಾಳಲ್ಲ ಈ ಹುಡುಗಿ. ಒಳಗೊಳಗೇ ನಗು. ಹಿಂದೆಯೇ, ಈ ಹುಡುಗಿಯ ಮುಖ ಕಾಣದು, ದನಿ ಕೇಳದು, ಮೂಕಿ ಇರಬಹುದೇ - ವ್ಯಥೆಪಟ್ಟ. ತಾಯಿಯ ಒತ್ತಾಯಕ್ಕೆ ಒಲ್ಲದ ಮನಸ್ಸಿನಿಂದ ಹಾಲು ಕುಡಿದು ಅವಳು ಮಲಗಿದ ಮೇಲೆ ಅಜಿತನಿಗೆ ನೆನಪಾಯಿತು.

"ಅಣ್ಣಾ ಅವರ. ನಿಮ್ಮ ಬರ್ಥ ಯಾವದರಿ?"

"ನಮ್ಮಾಕಿದು ನಡುವ ಬಂದಃದ. ನಾನು". ಶಿವಣ್ಣ ಮ್ಯಾಲೆ ಮಲಗ್ತೀವಿ. ಯಜಮಾನರೇ ಉತ್ತರ ಕೊಟ್ಟರು.

" ಈ ಕೆಳಗಿನ ಬರ್ಥ ಅಕ್ಕಾ ಅವರಿಗೆ ಕೊಟ್ಟು, ನಾ ಮ್ಯಾಲೆ ಮಲಗಬೇಕು ಅಂತ. ಪಾಪ ಹೆಣ್ಣುಮಕ್ಕಳು."

"ಆಗಲ್ರೆಪಾ ಭೋಲೋ ಆತು. ಮಗಳ ಜೋಡಿ ಮಲಕೋತಾಳ ಕೂಸಿನ್ನ ಕರಕೊಂಡು, ಥ್ಯಾಂಕ್ಸ್ ನಿಮಗ. ನಿಮ್ಮ ಹೆಸರು ?"

"ಅಜಿತ ಕೆಳಮನಿ ಅಂತ. ಸುರಪುರ ಕಾಲೇಜಿನ್ಯಾಗ ಲೆಕ್ಚರರ ಅದೀನಿ. ಇಲ್ಲೊಂದು ಸಾಹಿತ್ಯಕ ಕಾರ್ಯಕ್ರಮಕ್ಕ ಬಂದಿದ್ದೆ. ನೀವು ..."

"ನಾವೂ ಸುರಪುರಕ್ಕ ಹೊರಟೇವಿ. ಮಗಳ್ನ ಕಳಿಸಲಿಕ್ಕೆ ಬೀಗರು ಕರೀಲಿಕ್ಕೆ ಬಂದಾರ. ಶಿವಣ್ಣವರು ಚಿತವಾಡಗಿ ಅಂತ. ನಾನು ನಾಗಪ್ಪಣ್ಣ" ದನಿಯಲ್ಲಿ ದಣಿವಿತ್ತು. ಅಜಿತ ಅಡ್ಡಾಗಿ ಪುಸ್ತಕ ಕೈಗೆತ್ತಿಕೊಂಡ.

ಹೊತ್ತು ಎಷ್ಟಾಗಿತ್ತೋ ಗೊತ್ತಿಲ್ಲ. ಸಣ್ಣದಾಗಿ ಬಿಕ್ಕಳಿಸುವ ದನಿ. ಮಂಪರನ್ನು ಸೀಳಿ, ಅಜಿತನ ಕಿವಿಯನ್ನು ಹೊಕ್ಕಿತು. ಅರೆ ಎಚ್ಚರದಲ್ಲಿ ಆ ದನಿ ಮುಟ್ಟುವಂತೆ ಕೈ ಚಾಚಿದ. ತಣ್ಣನೆಯ ಗಾಳಿ, ಗಡಗಡ ಶಬ್ದ ರೈಲಿನ ತೂಗುವಿಕೆ, ಜಾರಿದ ಹೊದಿಕೆ, ಪೂರ್ತಿ ಎಚ್ಚರಾದ. ಹುಡುಗಿ ಮಲಗಿದಲ್ಲಿಂದ ಒತ್ತಿ ಹಿಡಿದ ಅಳು, ಬಿಕ್ಕಳಿಕೆ ಸದ್ದು, ಯಾರಿಗೂ ಎಚ್ಚರವಿಲ್ಲ. ಜೀವ ತಡೆಯದೆ ಶಬ್ದ ಮಾಡದಂತೆ ಕೆಳಗಿಳಿದ. ತಟ್ಟನೆ ದನಿ ನಿಂತುಹೋಯಿತು. ಏನಾಗಿದೆಯೋ ತನ್ನ ಆಳದ ದುಃಖವನ್ನು ಹೊರಹಾಕುತ್ತಿದ್ದಾಳೆ. ಅಪರಿಚಿತ ಹುಡುಗಿ. ತಾನು ಈಗ ಮಾತಾಡಿಸುವದೂ ಅನುಚಿತ. ಸುಮ್ಮನೆ ಕಕ್ಕಸಿಗೆ ಹೋಗಿ ವಾಪಸ್ಸಾದ. ಎಚ್ಚರವಾದಾಗ ಬೆಳಕು ಹರಿದು ಗಾಡಿ ಒಂದು ನಿಲ್ದಾಣದಲ್ಲಿ ನಿಂತಿತ್ತು.

ಹುಡುಗಿ ಒಬ್ಬಳೇ ಎದುರಿನ ಬರ್ಥನಲ್ಲಿ ಮಲಗಿದ್ದ ಮಗುವನ್ನು ಶೂನ್ಯ ದೃಷ್ಟಿಯಲ್ಲಿ ನೋಡುತ್ತ ಕುಳಿತಿದ್ದಳು. ಧೈರ್ಯ ಮಾಡಿ, 'ಎಲ್ಲಾರೂ ಎದ್ದಾರಲ್ಲ..."

ಅವನ ಮಾತು ಮುಗಿಯುವ ಮೊದಲೇ ತಲೆ ಎತ್ತಿದಳು ಸುಮಾ. ಕೋಮಲವಾದ ಮುಖದಲ್ಲಿ ಆಕಾಶದ ನೀಲಿಯನ್ನು ತುಂಬಿಕೊಂಡ ದೊಡ್ಡ ದೊಡ್ಡ ಕಣ್ಣುಗಳು, ಹುಬ್ಬಿನ ನಡುವೆ ಕಂಡೂ ಕಾಣದಂತೆ ಕಪ್ಪು ಚುಕ್ಕಿ-ವಿಧವೆಯ ಚಿನ್ಹೆ. ಎಲ್ಲ ಕತೆ ಹೇಳಿಬಿಟ್ಟವು. ಕಣ್ಣುಗಳಲ್ಲಿ ನೋವು ಮಡುಗಟ್ಟಿತ್ತು. ಗಂಡನೇ ಇಲ್ಲದ ಗಂಡನ ಮನೆಗೆ ಹೊರಟಿದ್ದಾಳೆ. ತನ್ನ ಶಿಲುಬೆಯ ಭಾರವನ್ನು ತಾನೇ ಹೊರಬೇಕಾಗಿರುವ ಒಂಟಿಜೀವ. ಅಜಿತನದು ಹೆಂಗರುಳು. ಆದರೆ ಮಾತಿನಿಂದ ಅವಳ ನೋವು ಮರೆಸಲು ಸಾಧ್ಯವಾಗದು. ಇಂಥ ಗಾಯ ಮರೆಸುವ ಶಕ್ತಿ ಇರುವುದು ಕಾಲಕ್ಕೆ ಮಾತ್ರ. ತನ್ನ ಸಹಾನುಭೂತಿಯನ್ನು ಶಬ್ದಗಳಲ್ಲಿ ಮೂಡಿಸಲು ಸಾಧ್ಯವಾಗದೆ ತಳಮಳಿಸುತ್ತ ಕುಳಿತ.

ಥರ್ಮಾಸ್, ಬಿಸ್ಕೀಟು, ಹಣ್ಣು-ಹಂಪಲುಗಳ ಪ್ಯಾಕೆಟ್ ಹಿಡಿದು ಹಿರಿಯರೆಲ್ಲ ಒಳಬಂದರು. ಹಾಲು ಹಣ್ಣು ಬೇಡವೆಂದು ಮತ್ತೆ ಮುಖ ತಿರುಗಿಸಿದ ಮಗಳಿಗೆ "ಸುಮಾ ಹಿಂಗ ಹಟಾ ಹಿಡೀಬ್ಯಾಡ. ನೀನು ಕೂಸಿಗೆ ಹಾಲು ಕುಡಿಸುವಾಕಿ. ಖಾಲಿ ಹೊಟ್ಟಿಲೆ ಇರಬಾರದವ್ವ. ಏನರೆ ತಿನ್ನು. ಹಾಲು ಕುಡಿ" ಹೆತ್ತಕರುಳು ಅಂಗಲಾಚಿತು.

'ಉಪವಾಸ ಇದ್ದರ ನಾ ಸಾಯೂದಿಲ್ಲ ಬಿಡು."

ಈಗ ಶಿವಣ್ಣನ ಸರದಿ. "ತಂಗೀ, ಮಹೇಶ ಹೋಗಿದ್ದಕ್ಕ ಎಲ್ಲಾರಿಗೂ ತ್ರಾಸ ಆಗೇದವ್ವ. ಹಿರೇರ ದುಃಖಾ ನೀ ಇನ್ನಷ್ಟು ಹೆಚ್ಚ ಮಾಡಬ್ಯಾಡ ಸುಮಕ್ಕಾ. ನೀ ನಡಿಯೂ ದಾರಿ ಇನ್ನೂ ಭಾಳ ದೂರ ಅದ. ಗಟ್ಟಿ ಮನಸ್ಸು ಮಾಡಿಕೋ."

"ನೀವರೆ ಹೇಳ್ರಿ, ಉಮೇಶಣ್ಣ ದೊಡ್ಡವರು." ದೊಡ್ಡ ಮಾವನ ಮಾತಿಗೆ ಬೆಲೆ ಕೊಟ್ಟು ಸುಮಾ ಹಾಲಿನ ಗ್ಲಾಸು ತುಟಿಗಿಟ್ಟಳು. ಸುರಪುರ ಸ್ಟೇಶನ್ನಿನಲ್ಲಿ ಅಜಿತ ಎಲ್ಲರಿಗೂ ಹೇಳಿ ತನ್ನ ದಾರಿ ಹಿಡಿದು ಹೋದ.

***

ಮನೆಯ ಬಾಗಿಲಿಗೆ ಬಂದು ನಿಂತ ಸುಮಾಳ ಕಾಲಿಗೆ ನೀರು ಹಾಕಿ ದೊಡ್ಡತ್ತೆ ಸುಶೀಲಕ್ಕ ಆ ಮನೆಯ ಚೊಚ್ಚಲು ಮೊಮ್ಮಗಳನ್ನು ಬರಮಾಡಿಕೊಂಡಳು.

ತೊಟ್ಟಿಲ-ಬಟ್ಟಲು ಹೆಸರಿಗೆ ಮಾತ್ರ. ಸನಾದಿ-ಭಜಂತ್ರಿಯಿಲ್ಲ. ಮುತ್ತೈದೆಯರಿಲ್ಲ. ಆಹೇರ ಇಲ್ಲ. ಆರತಿ, ದೃಷ್ಟಿ ನಿವಾಳಿ ಯಾವುದೂ ಇಲ್ಲ. ತಂದೆಯ ಮುಖ ಕಾಣದ ದುರ್ದೈವದ ಕೂಸು. ಮನೆಯಲ್ಲಿ ಸ್ಮಶಾನ ಮೌನ. ಅವ್ವ ಬಾಯಿಗೆ ಸೆರಗು ಒತ್ತಿ ಅಳು ತಡೆದಿದ್ದಳು. ಸುಮಾ ಸುಶೀಲಕ್ಕನ ಹಿಂದೆ ದೇವರ ಮನೆಗೆ ಹೋಗಿ ಜಗಲಿಗೆ

ಹಣೆ ಒತ್ತಿ ಅತ್ತೆಯ ಕೋಣೆಗೆ ಬಂದಳು. ಮಗಳನ್ನು ಚಿನ್ನಮ್ಮನ ಉಡಿಯಲ್ಲಿ ಹಾಕಿದಳು. ಮಹೇಶ ತೀರಿದ ಮೇಲೆ ಅತ್ತೆ-ಸೊಸೆಯರು ಮೊದಲ ಭೆಟ್ಟಿ, ದುಃಖ ಒಟ್ಟರಿಸಿ ನುಗ್ಗಿತು. ಚಿನ್ನಮ್ಮ ಸುಮಾಳನ್ನು ತಬ್ಬಿಕೊಂಡು ಕಣ್ಣೀರು ಹರಿಯಬಿಟ್ಟಳು. ಅಡಿಗೆಯ ಗೌರವ್ವ ದನಿ ತೆಗೆದಳು. ಸುತ್ತ ಮುತ್ತಿನ ಓಣಿಯ ಹೆಣ್ಣುಮಕ್ಕಳೂ ದನಿಗೂಡಿಸಿದರು. ಯಾರಿಗೆ ಯಾರು ಸಮಾಧಾನ ಹೇಳಬೇಕು. ಗೌರವ್ವ ಹೊಟ್ಟೆಯ ದುಃಖ ಹೊರಗೆ ಹಾಕಿದಳು.

"ಕುಬಸಾ ಮಾಡಿಸಿಕೊಂಡ ಈ ಮನೀಂದ ಹೋಗಿ ತಿರುಗಿ ಏನಾಗಿ ಬಂದೆಲ್ಲಃ ಸುಮಕ್ಕಾ. ನಿನ್ನ ಕಳಸೂ ಮುಂದ ಮನೀ ತುಂಬ ಮಂದಿ. ಜೇನುಗೂಡಿನಾಂಗ ಗಿಜಿಗಿಜಿ ಅಂತಿತ್ತು. ಅಣ್ಣನ್ನ ಕಳಕೊಂಡ ಮನೀ ಈಗ ಮೂಕ ಬಿದ್ದಃದ ಯವ್ವಾ. ನಿನ ಮಾರಿ ಹ್ಯಾಂಗ ನೋಡಲೇ ನಾನೂ. ಏನ ಖೊಟ್ಟಿ ನಸೀಬಃ ಸುಮಕ್ಕಾಃ ನಿಂದು." ಕರುಳು ಕಿತ್ತು ಬರುವಂಥ ಅಳು...

"ಏಃ ಗೌರವ್ವಾ..." ಕೈ ಬೀಸಿದಳು ಚಿನ್ನಮ್ಮ. ಗೌರವ್ವ ಬಾಯಿ ಮುಚ್ಚಿ ಅಡಿಗೆ ಮನೆ ಸೇರಿದಳು. ತೊಡೆಯ ಮೇಲಿದ್ದ ಸುಮಾಳ ತಲೆ ನೇವರಿಸುತ್ತಿದ್ದಳು ಚಿನ್ನಮ್ಮ.

"ಸುಮ್ಮನಾಗು ಸುಮಾ. ಎಷ್ಟು ಅತ್ತರೂ ಮಹೇಶ ತಿರುಗಿ ಬರೂದಿಲ್ಲ. ನಾ ಏನ ತಪ್ಪ ಮಾಡಿದ್ದೆ. ಯಾರ್ನ ಕೇಳಲಿ? ಏನ ಮಾಡಲಿ? ಮಹೇಶನ ಮ್ಯಾಲೆ ಎಲ್ಲಾ ಭಾರಾ ಹಾಕಿ ನಿಶ್ಚಿಂತಿ ಆಗಿದ್ದೆ. ಇದ್ದೊಬ್ಬ ಮಗನ್ನ ಎಕ್ಸಿಡೆಂಟಿನ್ಯಾಗ ಕಳಕೊಂಡೆ. ನನ್ನ ಪಾಲಿಗೆ ದೇವರು ಕಲ್ಲ ಆಗ್ಯಾನ. ಈ ಎರಡು ತಿಂಗಳದಾಗ ಈ ಪ್ರಶ್ನೆ ನೂರು ಸಾರೆ ಕೇಳಿಕೊಂಡೇನಿ ನೀಲಕ್ಕಾ. ನನಗಃ ಯಾಕ ಹಿಂಗಾತು. ನನ್ನ ಯಾಕ ಇಷ್ಟ ಪರೀಕ್ಷಾ ಮಾಡತಾನ ಈ ದೇವರು ಅಂತ. ಸುಮಾ, ನನಗ ಸೊಸೀನೂ ನೀನಃ ಮಗಳೂ ನೀನಃ, ನಿನ್ನ ಈ ಕೂಸು ಅಮೃತಾನ್ನ ಬಿಟ್ಟರ ನನಗ ಯಾರೂ ಇಲ್ಲವಾ. ಗಟ್ಟಿ ಮನಸು ಮಾಡು. ಅಳಬ್ಯಾಡಾ, ಸುಮ್ಮನಾಗು. ಬಂದದ್ದು ಇಬ್ಬರೂ ಕೂಡಿ ಎದುರಿಸೂಣು ಮಗಳಃ, ಎಲ್ಲಾರೂ ದೂರದಿಂದ ಬಂದೀರಿ. ನೀಲಕ್ಕಾ ಏಳ್ರಿ, ಎಲ್ಲಾರೂ ಸ್ನಾನಾ, ಊಟಾ ಮಾಡ್ರಿ. ಏಳ್ರಿ, ಅಣ್ಣಾರ್ನೂ ಎಬ್ಬಸ್ರಿ. ಸುಶೀಲಕ್ಕ ಎಲ್ಲಾರ್ನೂ ಕರಕೊಂಡ ಹೋಗ್ರಿ." ಬಡಬಡ ಎಲ್ಲ ಮಾತಾಡಿ ದಣಿದವರಂತೆ ಹಾಸಿಗೆಯಲ್ಲಿ ಒರಗಿದಳು ಚಿನ್ನಮ್ಮ.

***

"ಗೌರವ್ವಾಃ ಏಃ ಗೌರೀಃಃ" "ಯವ್ವ ಬಂದ್ನಿ."

"ಸುಮಾಗ ಜಳಕಕ್ಕ ನೀರು ಹಾಕಿದ್ಯಾ. ನೋಡು ಆಕಿ ಇನ್ನೂ ಬಾಣಂತಿ. ವಾರಕ್ಕ ಎರಡ ಸಾರೆ ಎಣ್ಣೆ ಹಚ್ಚಿ ಮೈ ಕೈ ಎಲ್ಲಾ ತಿಕ್ಕಿ ಸುಡು ಸುಡು ನೀರು ಹಾಕಿ ಎರೀಬೇಕು. ಕೂಸಿನ್ನ ದಿನಾ ನಾನಃ ಎರೀತೀನಿ. ನಿನ್ನ ಕೆಲಸ ಆದ ಕೂಡಲೇ ಹೇಳು ಮತ್ತ." 'ಹೂಂನವ್ವ.'

"ಸುಮಾಗಂತ ತುಪ್ಪದ ಒಗ್ಗರಣಿ ಬ್ಯಾರೆ ಅಡಿಗೀನ ಮಾಡು. ಖಾರಾ ಭಾಳ ಹಾಕಬ್ಯಾಡಾ. ಬಿಸಿಬಿಸಿ ಚಪಾತಿ ಬ್ಯಾಳಿ ಮಾಡು. ತುಪ್ಪಾ ಭಾಳ ನೀಡು. ದಿನಾ ಆಕಿಗಂತ ಸಿಹಿ ಮಾಡು. ಪಾಪ ಸಣ್ಣಾಕಿ ಅತ್ತು ಅತ್ತು ಹ್ಯಾಂಗ ಒಣಗಿ ಹೋಗ್ಯಾಳ ನೋಡು."

"ಯವ್ವಾ ನಾ ಎಲ್ಲಾ ಮಾಡ್ತೇನಿ. ಆದರ ಸುಮಕ್ಕ ಉಣ್ಣಾಕ ಒಲ್ಲೆ ಅಂತ ಹಟಾ ಹಿಡೀತಾಳ. ಹಾಲು ಅಂತೂ ಕುಡಿಯೂದಃ ಇಲ್ಲ. ಹೇಳಿ ಹೇಳಿ ಸಾಕಾಗತೈತಿ ನನಗ."

"ಸುಮಾ ಬಾ ಇಲ್ಲೆ. ನೀ ಇನ್ನೂ ಕೂಸಿಗೆ ಹಾಲು ಕುಡಸೂವಾಕಿ. ಎರಡೂ ಹೊತ್ತು ಛೊಲೋತ್ನಂಗ ಊಟಾ ಮಾಡಬೇಕು. ಹಾಲು ಕುಡೀಬೇಕು. ಅಮೃತಾ ಬೆಳದು ದೊಡ್ಡಾಕಿ ಆಗಬೇಕು. ನನಗ ನಿಮ್ಮಿಬ್ಬರನ್ನ ಬಿಟ್ಟರ

ಯಾರೂ ಇಲ್ಲಂತ ಹೇಳ್ತೀನಿ. ನಿಮ್ಮ ಸಲುವಾಗಿ ನಾನು ಬದುಕೇನಿ." ಮಾತಿನ ಕೊನೆಗೆ ಗಂಟಲು ಉಬ್ಬಿ ಬಂದಿತು. ಸುಮಾ ಧಾವಿಸಿ ಹೋಗಿ ಅತ್ತೆಯನ್ನು ತಬ್ಬಿಕೊಂಡಳು. ಇಂಥ ಪ್ರಸಂಗಗಳು ಬರಬರುತ್ತ ಕಡಿಮೆಯಾಗುತ್ತ ಬಂದವು.

"ನಿಮ್ಮತ್ತಿ ಬಾಳೇ ಭಾಳ ಕಷ್ಟದ್ದವ್ವ ಸುಮಕ್ಕ" ಅಕ್ಕಿ ಕೇರುತ್ತ ಗೌರವ್ವ ಪಿಸುಗುಡುವಳು. "ಒಂದೀಟೂ ಸುಕಾ ಪಡಲಿಲ್ಲ. ಈ ಮನೀಗೆ ಬಂದಾಗಿಂದ ನೋಡತೇನಿ. ಅತ್ತಿ, ಗಂಡಾ ಇಬ್ಬರೂ ಜೀವಾ ತಿನ್ನವರ. ಭಾಳ ಸಹನ ಮಾಡಿಕೊಂಡ್ಲು. ಮಹೇಶ ಹುಟ್ಟಿದ ಮ್ಯಾಲೆ ಆಕಿ ನಕ್ಕದ್ದು. ಹೊರಗಿನ ಚಾಳಿಗೆ ಬಿದ್ದು ಹಿರ್ಯಾ ಸತ್ತು ಹ್ವಾದಾ. ಅತ್ತಿ ಹ್ವಾದ್ಲು. ಈಗ ಮಗಾ ನಡನೀರಾಗ ಕೈಬಿಟ್ಟು ಹ್ವಾದಾ. ಈಗ ನಿಮ್ಮ ಮ್ಯಾಲೆ ಜೀಂವಾ ಇಟ್ಟಾಳ. ಆಕಿ ಮುಂದ ಅಳಬ್ಯಾಡ ಸುಮಕ್ಕಾ. ಗಟ್ಟಿ ಮನಸ ಮಾಡು."

ಸುಮಾಳ ಮನಸ್ಥಿತಿಯೇ ಬೇರೆ. ಗಂಡ ತೀರಿಹೋದ. ಇನ್ನು ತಿರುಗಿ ಬರಲಾರದ ನಿಜವನ್ನು ನಂಬಲೇಬೇಕು. ಒಂಟಿಯಾಗಿ, ಪರಾವಲಂಬಿಯಾಗಿ ಇನ್ನೊಬ್ಬರಿಗೆ ಭಾರವಾಗಿ ಇರಬೇಕು. ಈ ನಾಲ್ಕು ಗೋಡೆಗಳ ಮಧ್ಯೆ, ಉಂಡು ಉಡಲು ಕಡಿಮೆಯಿಲ್ಲ. ಆದರೂ ಏನೋ ಕೊರತೆ. ವಿಚಾರ ಸ್ವಾತಂತ್ರ್ಯವಿಲ್ಲ. ಮಗಳ ಪಾಲನೆ ಪೋಷಣೆ ಭವಿಷ್ಯ ಎಲ್ಲ ಅತ್ತೆಯ ಕೈಯಲ್ಲಿ. ಇಂಥ ಬದುಕು ಇನ್ನೂ ಎಷ್ಟು ವರ್ಷ? ನನ್ನ ಜೀವಮಾನದವರೆಗೆ, ಸಂಶಯವೇ ಇಲ್ಲ. ಅತ್ತೆಯ ಪ್ರೀತಿಗೇನೂ ಕಡಿಮೆಯಿಲ್ಲ. ತನ್ನನ್ನು ವಿಧವೆಯಂತೆ ನಡೆಸಿಕೊಂಡಿಲ್ಲ ತಮ್ಮ ದೊಡ್ಡಮನಸ್ಸಿನಿಂದ. ಇದೆಲ್ಲಾ ಎಷ್ಟು ದಿನ? ಯಾರಲ್ಲೂ ಹೇಳಲಾರದ ವಿಚಾರಗಳಿವು. ಸುಮಾನಲ್ಲಿ ಇದೇ ತೊಳಲಾಟ.

ಅಮೃತಾ ಈಗ ತಪ್ಪಹೆಜ್ಜೆ ಇಡುತ್ತ ಮನೆ ತುಂಬ ಓಡಾಡುವಳು. ಕಾರ್ಮೋಡದ ನಡುವಿನ ಮಿಂಚಿನಂತೆ ನಗೆ ಆಗಾಗ ಸುಳಿಯುವದು.

ಮಹೇಶ ತೀರಿಕೊಂಡ ಮೇಲೆ ಮತ್ತೊಮ್ಮೆ, ಮನೆತನದ ಜವಾಬ್ದಾರಿ ಶಿವಣ್ಣ ಮಾವನ ಹೆಗಲಿಗೇರಿತ್ತು. ಅಂಗಡಿ ವ್ಯವಹಾರ, ಹೊಲ, ಮನೆ ಕೆಲಸ, ಯಾವುದಕ್ಕೂ ಚಿನ್ನಮ್ಮನಿಗೆ ಶಿವಣ್ಣನ ಸಲಹೆ ಬೇಕಾಗಿತ್ತು. ಗಂಡನ ದೊಡ್ಡಪ್ಪನ ಮಗ - ಶಿವಣ್ಣ. ವಿಚಾರವಂತ, ಸುಸಂಸ್ಕೃತ. ಅವರೆಂದರೆ ಚಿನ್ನಮ್ಮನಿಗೆ ತುಂಬಾ ಪ್ರೀತಿ- ಗೌರವ. ಸುಶೀಲಕ್ಕ -ಶಿವಣ್ಣ ಆ ದಿನ ಸಂಜೆ ಮನೆಗೆ ಬಂದಾಗ ಸುಮಾಳಿಗೆ ಕರೆ ಬಂದಿತು.

"ಬಾ ಸುಮಕ್ಕಾ, ಕೂಡ್ರಿಲ್ಲೆ" ಮೈತುಂಬ ಸೆರಗು ಹೊದ್ದು ಅತ್ತೆಯ ಹತ್ತಿರ ಕೂತಳು.

"ನೋಡವ್ವ ಹೆಣ್ಣುಮಕ್ಕಳಿಗೆ ವಿದ್ಯಾ ಇರಬೇಕು. ಅದೊಂದು ಆಸ್ತಿ ಇದ್ದಂಗ ಅಂತ ನಿಮ್ಮತ್ತಿ ವಿಚಾರ ಐತಿ. ಆಕೀಗೆ ಕಲೀಬೇಕು ಅಂತ ಭಾಳ ಆಸೆ ಇತ್ತು ಅಂತ ಹೇಳತಿರತಾಳ. ಈಗೂ ಓದೂ ಹುಚ್ಚು ಹಚಿಕೊಂಡಾಳ. ಅದು ಸರೀನ. ವಿದ್ಯಾ ಅಂದರ ಸದ್ಯಕ್ಕ ನೀನು ಡಿಗ್ರಿ ಮಾಡಿಕೊಳ್ಳೂದು. ಅದರಿಂದ ನಿನಗ ಹೊರಜಗತ್ತಿನ ಸಂಪರ್ಕಾನೂ ಆಗ್ತೈತಿ. ವಿಚಾರ ಶಕ್ತೀನೂ ಬೆಳೀತೈತಿ. ಈ ವರ್ಷದಿಂದ ನೀನೂ ಕಾಲೇಜಿಗೆ ಹೋಗತೀಯೇನವ್ವ?" ಶಿವಣ್ಣ ಮಾವ ಗಂಭೀರವಾಗಿಯೇ ಕೇಳಿದ್ದರು. ಅವರ ಮಾತುಗಳೇ ಹಾಗೆ, ಸ್ಪಷ್ಟ ಮತ್ತು ನೇರ. ಯಾವುದೇ ದ್ವಂದ್ವವಿಲ್ಲ ಗೊಂದಲಗಳಿಲ್ಲ.

ಸುಮಾ ತನ್ನ ಕಿವಿಗಳನ್ನೇ ನಂಬಲಿಲ್ಲ. ಆಶ್ಚರ್ಯ, ಅನಿರೀಕ್ಷಿತ ಪ್ರಶ್ನೆಗೆ ಉತ್ತರ ಹೊಳೆಯದೆ ದಂಗುಬಡಿದಿದ್ದಳು. ಒಳಗಿನ ಸಂತೋಷ ಹೊರಚಿಮ್ಮದಂತೆ ತಲೆ ತಗ್ಗಿಸಿ ತುಟಿ ಬಿಗಿದಿದ್ದಳು.

"ಹೇಳು ಸುಮಾ. ನಿನ್ನ ವಿಚಾರ ಏನದ? ಅಮೃತಾನ್ನ ನಾನು, ಗೌರವ್ವ ನೋಡಕೋತಿವಿ. ಅದಕ್ಕ ನೀ ಚಿಂತೀ ಮಾಡಬ್ಯಾಡಾ. ನಿನ್ನ ಮುಂದಿನ ಜೀವನ ಒಳ್ಳೇದಾಗಲಿ ಅಂತ ನಾವೆಲ್ಲಾ ಹಿಂಗ ವಿಚಾರ ಮಾಡೀವಿ. ನೀ ಇನ್ನೂ ಮೂರು ವರ್ಷ ಅಭ್ಯಾಸ ಮಾಡಬೇಕಲ್ಲ. ನೀ ಮನಸಿಟ್ಟು ಓದಬೇಕು. ಹೂಂ ಅಂದರ ಮಾಮಾ ನಾಳೇ ನಿನ್ನ ಹೆಸರು ಹಚ್ಚಸತಾರ."

ಕಾಲೇಜು ವಿದ್ಯಾಭ್ಯಾಸ ಮುಂದುವರಿಯಿತು. ಅತ್ತೆಗೆ ಮಾತು ಕೊಟ್ಟಂತೆ ಸುಮಾ ಮನಸ್ಸುಗೊಟ್ಟು ಓದಿದಳು. ಮನೆಯ ವಾತಾವರಣ ಬದಲಾಗಿ ಹೊಸಗಾಳಿ ಬೀಸತೊಡಗಿತು. ಕಾಲೇಜಿನಲ್ಲಿ ಅಜಿತನ ಸ್ನೇಹ ಮುಂದುವರಿದು, ಪ್ರೀತಿ ಬೆಳೆದು ಸುಮಾಳ ಮುಖದಲ್ಲಿ ನಗು ಮೂಡತೊಡಗಿತ್ತು.

***

"ಅವ್ವಾಃ ನನ್ನ ಜೋಡಿ ನಮ್ಮ ಸರ್ ಬಂದಾರ. ನಿಮ್ಮನ್ನ ಭೆಟ್ಟಿ ಆಗಬೇಕಂತ." ಸುಮಾಳ ಲವಲವಿಕೆ, ಅರಳಿದ ಮುಖ, ಹುರುಪು ಚಿನ್ನಮ್ಮನ ಸೂಕ್ಷ್ಮದೃಷ್ಟಿಯಿಂದ ತಪ್ಪಿಸಿಕೊಳ್ಳಲಿಲ್ಲ.

ತಕ್ಷಣ ಎದ್ದು ನಿಂತ ಯುವಕ "ನಮಸ್ಕಾರ ಅಕ್ಕಾ ಅವರಃ, ನಾನು ಅಜಿತ ಕೆಳಮನಿ ಅಂತ. ಸುಮಾ ಅವರ ಕಾಲೇಜಿನ್ಯಾಗ ಲೆಕ್ಚರರ..." ಹಸನ್ಮುಖಿ, ವಿನಯವಂತ ತರುಣ. ಯಾಕೆ ಬಂದಿರಬೇಕು? ಏನೋ ಕುತೂಹಲ ಚಿನ್ನಮ್ಮನಿಗೆ. "ಓ ಬರ್ರಿ ಕೂಡ್ರಿ. ನೀವು ಬಂದದ್ದು ಸಂತೋಷ, ಗೌರವ್ವಾ ನಮಗೆಲ್ಲಾ ಚಹಾ ತಿನಸು ಇಲ್ಲಿಗೇ ತಂದಬಿಡು."

"ಮೊದಲೇ ತಿಳಿಸಲಾರದ ಬಂದದ್ದಕ್ಕ ದಯವಿಟ್ಟು ಕ್ಷಮಿಸ್ರಿ" ಮತ್ತೊಮ್ಮೆ ಕೈ ಜೋಡಿಸಿದ. ಸುಮಾ ಅವರ ತಂದೆ-ತಾಯಿ, ಯಜಮಾನ್ರು ಶಿವಣ್ಣನವರು ರೈಲಿನೊಳಗ ನನಗೂ ಪರಿಚಯ ಆಗಿದ್ದರು. ಈಗ ನಮ್ಮ ಹುಡುಗಿ ಕಾಲೇಜಿಗೆ ಬರತಾಳ ಸ್ವಲ್ಪ ಲಕ್ಷ್ಯ ಇರಲಿ ಅಂದಿದ್ರು. ಸುಮಾ ಅವರ ಪರಿಚಯ ಆಯ್ತು. ನನ್ನ ವಿಷಯ ಸಮಾಜಶಾಸ್ತ್ರ ಇದ್ದರೂ ನಾನು ಕನ್ನಡ ಸಾಹಿತ್ಯದ ಅಭ್ಯಾಸಿ. ಆಗಾಗ ಕಥೀ ಕವನ ಬರೀತಿರತೀನಿ. ನಿಮಗೂ ಸಾಹಿತ್ಯದ ಪ್ರೀತಿ ಅಂತ ತಿಳೀತು. ಸುಮಾ ಅವರು ನಿಮ್ಮ ಬಗ್ಗೆ ಭಾಳ ಹೇಳತಿರತಾರ. ಇಂತಾ ಪ್ರಗತಿಪರ ಮನಸ್ಸಿನ ತಾಯೀನ್ನ ನೋಡಬೇಕು ಅನ್ನಿಸಿತು ಬಂದಬಿಟ್ಟೆ.' ಒಂದೇ ಉಸಿರಿನಲ್ಲಿ ಎಲ್ಲ ಹೇಳಿ ಮುಗಿಸಿದ ಅಜಿತ.

ಅದೇನೋ ಒಂದು ಭಾವ ಸುಳಿಯಿತು. ಇವನು ಅಪರಿಚಿತ ಅಲ್ಲ ಎಂದೋ ಪರಿಚಯವಿದ್ದವನು ಇಂದು ಪ್ರತ್ಯಕ್ಷ ಭೆಟ್ಟಿಯಾಗಿದ್ದಾನೆ ಎನ್ನುವ ಆತ್ಮೀಯ ಭಾವನೆ ಮನಸ್ಸಿನಲ್ಲಿ ಮೂಡತೊಡಗಿದಂತೆ ಚೆನ್ನಮ್ಮನಿಗೆ ಅಚ್ಚರಿ !

" ಸುಮಾ ತಂದ ಪುಸ್ತಕ ಎಲ್ಲಾ ನಾನೂ ಓದಿದೆ. ಮನೀ ಕೆಲಸದಾಗ ಬಿಡುವು ಸಿಕ್ಕಾಗೆಲ್ಲಾ ಓದೂ ಹುಚ್ಚು-ಹಚಿಗೊಂಡೇನಿ..."

"ಹಾಂ. ನಾನೂ ಅದ ಪ್ರಶ್ನೆ ಕೇಳಬೇಕಂತ ಮಾಡಿದ್ದೆ. ಈ ಓದೂ ಹವ್ಯಾಸ ನಿಮಗ ಹ್ಯಾಂಗ ಸುರುವಾತು ಅಂತ."

ಎಷ್ಟು ಲಗೂ ಸಹಜ ಆಗಿ ಸರಳ ಆಗಿ ಈ ಪ್ರಶ್ನೆ ಕೇಳಿದ್ರಲ್ಲ ಅಜಿತ.

ಒಂದಃ ಮನೀಯೊಳಗ ಇದ್ದು ನಾನಃ ಇನ್ನೂ ಪ್ರಶ್ನಾ ಕೇಳಿಲ್ಲ. ಅತ್ತಿಯವರು ಉಳಿದ ಎಲ್ಲಾರಿಗಿಂತ ಒಂದ ಬ್ಯಾರೇನಃ ಅನ್ನೂದು ನನ್ನ ಅನುಭವಕ್ಕ ಬಂದದ. ಈಗ ಅದಕ್ಕ ಯಾರು ಪ್ರಭಾವ ಅದ ಅಂತ ನಾನು ಕೇಳೇ ಇಲ್ಲ. ಸುಮಾಳಿಗೆ ಸೋಜಿಗ!

ಮನಸ್ಸು ಬಿಚ್ಚಿ ಚಿನ್ನಮ್ಮ ನಕ್ಕು ಬಿಟ್ಟಳು ಮೊದಲು.

"ಯಾಕ್ರೀ ಅಜಿತ. ನನ್ನ ಸಂದರ್ಶನಾ ತೋಗೋಬೇಕಂತ ಮಾಡೀರೇನು? ಇರಲಿ, ನಿಮ್ಮ ಪ್ರಶ್ನಾಕ ಉತ್ತರಾ ಹೇಳಬೇಕಂದರ - ಸಣ್ಣಾಕಿ ಇದ್ದಾಗ ನನ್ನ ಕಾಕಾ ಓದಲಿಕ್ಕೆ ಪುಸ್ತಕಾ ತಂದು ಕೊಟ್ಟು ಕಲಿಸಿದರು. ಅವರಿಗೆ ನಾನು ಅಚ್ಚಾದ ಮಗಳು. ಅವರಃ ನನ್ನ ಬುದ್ಧೀಗೆ ಕೆಲಸಾ ಕೊಟ್ಟರು. ವಿಚಾರ ಮಾಡಲಿಕ್ಕೆ ಹಚ್ಚಿದರು. ಲಗ್ನಾಗಿ ಗಂಡನ

ಮನೀಗೆ ಬಂದ ಮ್ಯಾಲೆ ದೊಡ್ಡ ಮಾಮಾ ಅವರು ನನಗ ಪುಸ್ತಕಾ ಒದಗಿಸಿಕೊಟ್ಟರು. ನನ್ನ ಬದುಕಿನ್ಯಾಗ ಮಾಮಾ ದೊಡ್ಡ ಆಸರ ಆಗ್ಯಾರ. ಈಗ ದುಃಖಾ ಮರೀಲಿಕ್ಕೆ ಈ ಪುಸ್ತಕನ ಆಸರ ಆಗ್ಯಾವ."

"ಕ್ಷಮಿಸಬೇಕು. ನಿಮ್ಮ ದುಃಖಾ ಕೆದಕಿದೆ ನಾನು. ಆದರ ಅಕ್ಕಾ ಅವರ ನನ್ನ ತಮ್ಮ ಅಂತ ತಿಳಕೊಂಡು ಏಕವಚನದಾಗ ಮಾತಾಡ್ರಿ. ನಿಜವಾದ ಸ್ತ್ರೀವಾದಿಗಳು ಅಂದರ ನಿಮ್ಮಂಥವರು, ಬರೀ ಭಾಷಣಾ ಮಾಡುವವರು ಅಲ್ಲ. ನುಡಿದಂತೇನ ನಡೀಬೇಕು. ಅದರಿಂದ ಹೆಣ್ಣುಮಕ್ಕಳ ಶೋಷಣೆ ಎಷ್ಟೋ ಕಡಿಮಿ ಆಗ್ತದ ಅಂತ ನನ್ನ ಅಭಿಪ್ರಾಯ.:"

"ಹೌದು ಅಜಿತ. ನಿನ್ನ ಅಭಿಪ್ರಾಯ ನಾನೂ ಒಪ್ಪತೇನಿ. ನೀನೂ ಕಥೀ, ಕವಿತಾ ಬರೀತಿರತೀನಿ ಅಂದೆಲ್ಲ. ತಂದುಕೊಂಡು ನಾವೂ ಓದ್ತೀವಿ. ಬಿಡುವು ಇದ್ದಾಗ ಮನೀ ಕಡೆ ಬರ್ತಾ ಇರು."

ಸುಮಾನ, ಚಿನ್ನಮ್ಮನ ಸರಳತೆ, ಆತ್ಮೀಯತೆ ಅವನನ್ನು ಮತ್ತೆ ಮತ್ತೆ ಮನೆಯತ್ತ ಸೆಳೆಯಿತು.

***

ಕೆಲವು ದಿನಗಳಿಂದ ಚಿನ್ನಮ್ಮನ ಮನಸ್ಸಿನಲ್ಲಿ ಹೋರಾಟ ನಡೀತಾ ಇದೆ. ಎಂದೂ ಭಾವನೆಗೆ ಒಳಗಾಗದ ಅವಳ ಕೆಲಸ ಕಾರ್ಯಗಳಲ್ಲಿಯ ಶಿಸ್ತು ಏರುಪೇರಾಗಿದೆ. ಬೇಗ ಮಲಗುವುದಿಲ್ಲ. ಬೆಳಿಗ್ಗೆ ಏಳುವುದಿಲ್ಲ. ಊಟ-ತಿಂಡಿಗೆ ಹೊತ್ತುಗೊತ್ತಿಲ್ಲ. ಅಮೃತಾಳನ್ನು ಎತ್ತಿಕೊಂಡಿಲ್ಲ. ಯಾರೂ ಬಾಯಿಂದ ಆಡದಿದ್ದರೂ ಪರಿಣಾಮ ಮಾತ್ರ ಸುಮಾ, ಗೌರವ್ವ ಆಳುಗಳು ಎಲ್ಲರ ಮೇಲೂ ಆಗಿದೆ. ಸುಮಾಳಿಗೆ ಏನೋ ಗಾಬರಿ, ಕೇಳಲೂ ಭಯ.

ಇಂಥದೊಂದು ಸಮಸ್ಯೆ ತನ್ನ ಎದುರು ಧುತ್ತೆಂದು ನಿಂತಿರುವಾಗ ವಿಚಾರ ಮಾಡಲೇಬೇಕಲ್ಲ. ತನ್ನದೇ ಮುಖ್ಯ ಪಾತ್ರ. ತನ್ನ ನಿರ್ಧಾರವೇ ಕೊನೆಯದು ಅಂದಿದ್ದಾನೆ ಅಜಿತ. ಈ ಮನುಷ್ಯ ಇಂಥದೊಂದು ಸಮಸ್ಯೆ ತಂದಿಡುತ್ತಾನೆ ಎಂದು ಮೊದಲೇ ಗೊತ್ತಾಗಿದ್ದರೆ ಅವನನ್ನು ದೂರವೇ ಇಡಬಹುದಿತ್ತು. ಅಥವಾ ಸುಮಾಳನ್ನು ಕಾಲೇಜಿಗೇ ಕಳಿಸಬಾರದಿತ್ತು ಎನ್ನುವ ಯೋಚನೆಯೂ ಬಂದಿತ್ತು. ಥತ್! ತಾನು ಹೀಗೆ ಯೋಚಿಸಬಾರದು. ಅದನ್ನು ಕಿತ್ತು ಒಗೆದಿದ್ದಳು. ನಿಮ್ಮ ಮನಸ್ಸು ನೋಯಿಸಿದ್ದರೆ, ತಪ್ಪು ಮಾತಾಡಿದ್ದರೆ ಕ್ಷಮಿಸ್ರಿ ಅಕ್ಕಾ ಅವರ ಅಂದಿದ್ದ ಅಜಿತ. ಅವನು ಏನು ತಪ್ಪು ಮಾತಾಡಿದ್ದ. ನಿಮ್ಮ ಒಪ್ಪಿಗೆ ಇದ್ದರೆ ಸುಮಾಳನ್ನು ಮದುವೆ ಆಗ್ತೀನಿ ಅಂದ. ಮೊದಲು ಎದೆ ಧಸ್! ಅಂದದ್ದು ನಿಜ. ನಾನೂ ಮನುಷ್ಯಳೇ ಅಲ್ಲ. ಹೊಟ್ಟೆ ಉರಿಯಿತು. ನನ್ನ ಮಹೇಶನ ಸ್ಥಾನದಲ್ಲಿ ಅಜಿತ ಬರಬೇಕಾ? ಮನುಷ್ಯನಿಗೆ ಇಷ್ಟೊಂದು ಆಸೆ ಇರಬಾರದು. ನಾಳೆಯೇ ಅಜಿತನಿಗೆ ಹೇಳಿ ಬಿಡಬೇಕು. ಉಂಡ ಮನೆಗೆ ದ್ರೋಹ ಮಾಡಿದೆ ಅಂತ, ಹಾವಿಗೆ ಹಾಲು ಎರೆದ ಹಾಗಾಯ್ತು. ಅಮಾಯಕಳಾದ ನನ್ನ ಸೊಸೆ ತಲೆ ಕೆಡಿಸಿದೆ ಅಂತ ಬಯ್ದು ಹೊರಗೆ ಹಾಕಬೇಕು. ಮತ್ತೊಂದು ಕ್ಷಣಕ್ಕೆ ತಣ್ಣಗಾಗಿದ್ದೆ. ಸುಮಾ ಏನಂತಾಳೆ. ಅವಳ ಮನಸ್ಸಿನಲ್ಲಿ ಏನಿದೆ, ಗೊತ್ತಿಲ್ಲ. ಅವಳು ಒಲ್ಲೆ ಅಂದರೂ ಅನ್ನಬಹುದಲ್ಲ. ಮೂಲೆಯಲ್ಲೊಂದು ಸಣ್ಣ ಆಸೆ ಸುಳಿದಿತ್ತು. ಅವಳೂ ಹೋಗಿಬಿಟ್ಟರೆ ನನ್ನ ಗತಿ ಏನು, ನನಗೆ ಯಾರು ದಿಕ್ಕು? ಸುಮಾ, ಅಮೃತಾರನ್ನ ಇಟ್ಟುಕೊಳ್ಳುವುದರಲ್ಲಿ ನನ್ನ ಸ್ವಾರ್ಥವೂ ಇದೆಯಲ್ಲ. ಛೀ! ಇಷ್ಟು ಸಣ್ಣ ಮನಸ್ಸಿನವಳಾ ಚಿನ್ನಮ್ಮಾ ನೀನು. ನೀನೂ ಹೆಣ್ಣು. ವಿಚಾರ ಮಾಡು... ಅಂತರಾತ್ಮ ಕುಟುಕುತ್ತಿತ್ತು. ತನ್ನ ಬದುಕಿನ ಹಿಂದಿನ ಪುಟಗಳನ್ನು ತಿರುವುತ್ತಾ ಹೋದಳು........

ಬುದ್ಧಿ ಬೆಳೆದು ಹಿರೇರಿಗೆ ಪ್ರಶ್ನಾ ಮಾಡೂವಷ್ಟು ಧೈರ್ಯಾ ಬರೂದರೊಳಗ ಅಪ್ಪ-ಅವ್ವ ನನ್ನ ಮದುವೀ ಮಾಡಿಬಿಟ್ಟರು. ಮೇವು ಸಾಕಷ್ಟು ಇದ್ದ ಗ್ಯಾದಲಿಗೆ ದನಾ ಕಟ್ಟಿದಾಂಗ ಆಗಿತ್ತು ನನ್ನ ಬಾಳು.

ಅಂಗಳ, ರಂಗೋಲಿ, ದೇವರಮನಿ, ಅಡಿಗೀ ಒಲಿ, ಸಂಪ್ರದಾಯ, ಮೂಢನಂಬಿಕೆ, ತಗ್ಗಿಬಗ್ಗಿ ನಡಿಯೂದು ಇದs ದಿನಚರಿ ಆಗಿ ಹೋಯ್ತು. ಎರಡ ಅಂತಸ್ತಿನ ಮನಿ, ದೊಡ್ಡ ತಲಿಬಾಗಿಲ, ಹತ್ತಿ ಇಳಿಯೂವಂಥ ಹೊಸ್ತಿಲ, ಸಣ್ಣ ಕಿಡಕಿ, ಮನೀ ತುಂಬ ಹಳೇ ಮರದಂತಾ ಕಂಬ, ಬಾಗಿಲಾ ಮುಚ್ಚಿಬಿಟ್ಟರ ಒಳಗ ಕತ್ತಲ ಸಾಮ್ರಾಜ್ಯ. ಗಾಳಿ-ಬೆಳಕ ಎಲ್ಲಿಂದ ಬರಬೇಕು. ಉಸಿರು ಕಟ್ಟಿದಾಂಗ ಆಗತಿತ್ತು. ಹಣಿಕಿ ಹೊರಗ ನೋಡೇನು ಅಂದರ ಕಬ್ಬಿಣದ ಸರಳು ತಡೀತಿದ್ದವು. ಸೂರ್ಯಾನ ಕಿರಣ ಕಾಮನಬಿಲ್ಲಿನ ಬಣ್ಣಾ ಹಚ್ಚಿಕೊಂಡು ಬೆಳಕಿಂಡ್ಯಾಗಿಂದ ಕೆಳಗೆ ಇಳೀತಿದ್ದವು. ಹುಣ್ಣಿವಿ ದಿನಾ ಸ್ವಚ್ಛ ಬೆಳದಿಂಗಳ ಬೆಳಕು ಕಾಣಬೇಕಂದರ ಹಿತ್ತಲಕ ದನದ ಗ್ವಾದಲೀ ಹತ್ತರ ಹೋಗತಿದ್ದೆ. ಹುಚ್ಚೀ ಹಾಂಗ ಚಂದ್ರನ್ನ ನೋಡಿಕೊಂತ ನಿಂದರತಿದ್ದೆ. ಗೊತ್ತಿಲ್ದ ಕಣ್ಣೀರು ಹರೀತಿದ್ದವು.

'ಬಾಯ್ತುಂಬ ಹಲ್ಲು ಇಟಗೊಂಡು ಮೂರು ಸಂಜಿ ಅಳತಾಳ ಈ ಹುಚ್ಚ ಖೋಡಿ, ಅಪಶಕನ' ಅತ್ತಿ ಬಯ್ಯುತಿದ್ದಳು.

'ನೀ ಯಾಕ ಅಳತೀ, ಏನರೆ, ಬೇಕೇನು ನಿನಗ'ಅಂತ ಒಂದ ದಿನಾನೂ ಗಂಡ ರಮಿಸಿ ಕೇಳಲಿಲ್ಲ. ಗಂಡ ಹಗಲ ಹೊತ್ತ ಅಂಗಡ್ಯಾಗ ಇರತಿದ್ದಾ. ರಾತ್ರಿ ಹೊತ್ತ ಸೂಳೀ ಮನ್ಯಾಗ ಬಿದ್ದಿರತಿದ್ದ. ಜೀವ ಬ್ಯಾಸರಾಗಿ ನಾನs ಸತ್ತ ಹೋಗಬೇಕು ಅನಸತಿತ್ತು. ಹೀಗs ಇದ್ದರ ನಾ ಹುಚ್ಚಿ ಆಗತಿದ್ದೆ. ಗಂಡ ಮನಸ್ಸು ಬಂದಾಗ ಮಾತ್ರ ಮನ್ಯಾಗ ಮಲಗತಿದ್ದಾ. ಮಹೇಶ ಹುಟ್ಟಿದ. ಬದುಕಿರಬೇಕು ಅಂತ ಆಸೆ ಹುಟ್ಟಿಸಿದ. ಗಂಡನ್ನ ಮಾತ್ರ ದೂರ ಇಟ್ಟಬಿಟ್ಟೆ. ಅಷ್ಟೊತ್ತಿಗೆ ಗುಣಾ ಆಗದ ರೋಗಾನು ಹಚ್ಚಿಕೊಂಡಿದ್ದ. ಅವನ ಸಾವಿನಿಂದ ನನಗ ಏನೂ ದುಃಖ ಆಗಲಿಲ್ಲ. ಕೇಳಿದವರು ವಿಕೃತ ಮನಸಿನಾಕಿ ಅಂತ ನನ್ನ ಬಯ್ದಾರು. ಆದರ ನನಗ ಗೊತ್ತಿತ್ತು ಇದು ಈ ವ್ಯವಸ್ಥಾದ ವಿರುದ್ಧ ಬಂಡು ಏಳೂ ಮನಸ್ಸು. ಹೆಣ್ಣಿಗೊಂದು ನೀತಿ ಗಂಡಿಗೊಂದು ನೀತಿ ಯಾಕ? ಅದು ತಪ್ಪು.

ಅಲ್ಲಾ ಸುಮಾ ಈ ಮದುವಿ ಒಲ್ಲೆ ಅಂತ ಯಾಕ ಅನಬೇಕು... ಮಹೇಶನ ಜೋಡಿ ಪೂರ್ತಿ ಎರಡು ವರ್ಷ ಕೂಡಾ ಬಾಳೆ ಮಾಡಲಿಲ್ಲ ಈ ಹುಡುಗಿ. ಇನ್ನ ಬದುಕಿ ಇರೂತನಕಾ ಒಂಟಿಯಾಗಿರಬೇಕs. ಆ ನರಕಾ ನಾನೂ ಅನುಭೋಗಸೇನಿ. ಮತ್ತ ಇನ್ನೊಂದು ಮಾತು. ಸುಮಾನs ಸತ್ತು ಮಹೇಶ ಬದುಕಿದ್ದರ ... ಹೌದು ಇಷ್ಟೊತ್ತಿಗೆ ಅವನ ಮದುವಿ ಆಗಿ ಹೊಸಾ ಹೆಂಡತಿ ಜೊತಿ ಸುಖವಾಗಿ ಸಂಸಾರ ಮಾಡಿಕೊಂಡಿರತಿದ್ದ... ಅಂದ ಮ್ಯಾಲೆ ಸುಮಾ ಇನ್ನೂ ಸಣ್ಣಾಕಿ, ಆಕೀಗೆ ಯಾಕ ಈ ಶಿಕ್ಷಾ ? ಈ ಮದುವೀಗೆ ಒಪ್ಪೂದ ಸರಿ ನಿರ್ಧಾರ. ಆದರ ಮೊದಲು ಒಂದು ಮಾತು ಸುಮಾನ್ನೂ ಕೇಳಬೇಕಲ್ಲ. ಆಕೀಗೂ ಗೊತ್ತಿರಬೇಕಲ್ಲ.

ಹಾಂ. ನೆನಪಾತು ಅಜಿತ ಮನೀಗೆ ಬಂದು ಈ ವಿಷಯ ಮಾತಾಡಿದಾಗ ಸುಮಾ ಮನೀಯೊಳಗ ಇದ್ದಿಲ್ಲಾ. ಕಾಲೇಜು ಮುಗದ ಮ್ಯಾಲೆ ಆಕಿ ಹೊರಗ ಹೋದದ್ದs ಕಡಿಮಿ. ಆದರ ಆ ದಿನ ತೇಜಸ್ವಿನಿ ಮೇಡಂ ಅವರ ಪುಸ್ತಕಾ ತಿರುಗಿ ಕೊಡ್ತೀನಿ ಅಂತ ಹೇಳಿ ಹೋಗಿದ್ದಳು. ಬಹುಶಃ ಅಜಿತ ಆಕಿ ಕೂಡಿ ಮಾತಾಡಿಕೊಂಡs ಈ ಸಂಚು ಮಾಡಿರಬೇಕು. ಛೀ! ಸಂಚು ಯಾಕ ಅನಬೇಕು. ಆಯ್ತು. ಆಕಿನ್ನು ಕರದು ಕೇಳಬೇಕು. ಒಪ್ಪಿಗಿ ಇದ್ದರ ಮದುವಿ ಮಾಡಿದರಾತು.

"ಸುಮಾs ಏ ಸುಮಕ್ಕಾ, ಗೌರವ್ವಾs ಸುಮಾನ್ನ ನಾ ಕರೀತೀನಿ ಅಂತ ಹೇಳು."

ಅದೇ ಹೊತ್ತಿನಲ್ಲಿ ಹಿತ್ತಿಲಲ್ಲಿ ಹೂವಿನ ಗಿಡದ ಹತ್ತಿರ ನೆಪಕ್ಕೆ ಕಸ ತೆಗೆಯುತ್ತ ಕುಳಿತ ಸುಮಾಳ ತಲೆಯಲ್ಲಿ ಭೂಕಂಪ, ಗುಡುಗು, ಸಿಡಿಲು, ಎಲ್ಲ ಕೂಡಿದ ಕೋಲಾಹಲ. ಅಜಿತನಿಗೆ ಇದ್ದಷ್ಟು ಧೈರ್ಯ ತನಗಿಲ್ಲ. ನಮ್ಮ ಮದುವೆಗೆ ಅತ್ತೆ ಒಪ್ಪಿಯೇ ಒಪ್ತಾರೆ. ಅಂತ ಅವನಿಗೆ ದೃಢವಿಶ್ವಾಸ. ತಾನು ಪುಕ್ಕಲು. ತನ್ನ ಬದುಕಿನ ಸಂತೋಷವೇ ಅತ್ತೆಯ ಉತ್ತರದ ಮೇಲೆ ನಿಂತಿದೆ. ಮುಂದೆ ಏನಿದೆ? ಬೆಳಕೊ? ಕತ್ತಲೆಯೋ ಅಜಿತನಿಗೆ ಮುಂದಾಲೋಚನೆ

ಬಹಳ. ಚಿನ್ನಮ್ಮ ನಮ್ಮ ಮದುವೆಯಿಂದ ಒಂಟಿಯಾಗ್ತಾರೆ. ಅವರ ವಂಶದಕುಡಿ ಅಮೃತಾ ಒಬ್ಬಳೇ. ಅವಳನ್ನು ತಾವೇ ಇಟ್ಟುಕೊಳ್ಳಲು ಇಚ್ಛಿಸ್ತಾರೆ. ಅದರ ಬಗ್ಗೆ ಮಾತ್ರ ನೀನೇ ನಿರ್ಧಾರ ತಗೋಳ್ಳಬೇಕು ಅಂದಿದ್ದ. ಪಾಪ, ಅತ್ತೆ ಎಲ್ಲಾನೂ ತ್ಯಾಗ ಮಾಡಬೇಕಂದರೆ ಹೇಗೆ. ಹಾಗೆ ನಾವು ಬಯಸೋದು ತಪ್ಪೇs...

ಹೊರ ಜಗತ್ತಿನ ಪರಿವೆ ಇಲ್ಲದಂತೆ ತನ್ನದೇ ವಿಚಾರದಲ್ಲಿ ಮುಳುಗಿದ ಸುಮಾಳಿಗೆ ಗೌರವ್ವ ಹತ್ತಿರ ಬಂದೇ ಕರೆಯಬೇಕಾಯಿತು.

ಸುಮಾಳ ಎದೆ ಡವ ಡವ, ಕಾಲು ಥರಥರ, ಬೆವರು ಹನಿ ಮುಖದಲ್ಲಿ. ಹುಡುಗಿಯ ಅವಸ್ಥೆ ನೋಡಿ ಮೃದುವಾದಳು ಚಿನ್ನಮ್ಮ.

"ಅಜಿತ ನನಗ ಎಲ್ಲಾ ಸುದ್ದೀ ಹೇಳ್ಯಾನ." ಸುಮಾ ನೆಲ ನೋಡುತ್ತಿದ್ದಳು. ಕಿವಿಗಳಲ್ಲೇ ಜೀವ ಇಟ್ಟುಕೊಂಡು ಮುಂದಿನ ಮಾತಿಗೆ...

"ನಾನು ನಿಮ್ಮ ತಂದೀ-ತಾಯಿಗೆ ಪತ್ರಾ ಬರೀತೀನಿ. ಅದಕ್ಕಿಂತ ಮೊದಲ ನಿನಗ ಒಂದು ಮಾತು ಸ್ಪಷ್ಟ ಹೇಳಬೇಕಾಗಿತ್ತು."

ಅತ್ತಿ ಸಿಟ್ಟಾಗ್ಯಾರ. ನನ್ನ ತವರ್ಮನೀಗೆ ಕಳಿಸ್ತಾರ. ಅಪ್ಪ-ಅವ್ವ ಅಂತೂ ಮದುವೀಗೆ ಒಪ್ಪಲಿಕ್ಕೆ ಸಾಧ್ಯನ ಇಲ್ಲ. ನನಗ ಛೀಮಾರಿ ಹಾಕ್ತಾರ. ನಿಲ್ಲಲು ಶಕ್ತಿ ಸಾಲದೆ ಕಾಲ ಹತ್ತಿರ ಕುಸಿದಳು.

"ಅಕ್ಕಾ ಅವರ, ನಮ್ಮ ಮದುವಿಗೆ ನೀವು ಒಪ್ಪಲೇಬೇಕೂಂತ ನಮ್ಮ ಹಟಾ ಇಲ್ಲ. ನಿಮ್ಮ ಸಂತೋಷ, ನೆಮ್ಮದಿ ನಮಗ ಮುಖ್ಯ. ನಿಮ್ಮ ಒಪ್ಪಿಗಿ ಇಲ್ಲದಿದ್ದರ ಸ್ಪಷ್ಟಾಗಿ ಹೇಳ್ರಿ, ಈ ಮೂರು ವರ್ಷ ನಾವಿಬ್ಬರೂ ಸಾಕಷ್ಟು ವಿಚಾರ ಮಾಡೀವಿ. ಆ ವಿಷಯ ಕೈ ಬಿಟ್ಟು ನಾವೆಲ್ಲ ಸ್ನೇಹಿತರಾಗೇ ಇರೂಣಂತ."

ಅಜಿತ ಮಾತಿನಲ್ಲಿ ಆ ಅಭಿಪ್ರಾಯವನ್ನೂ ತಿಳಿಸಿದ್ದ. ಚಿನ್ನಮ್ಮನಿಗೆ ನೋವಿಗೆ ಲೇಪನವಿತ್ತು. ಮನಸ್ಸಿಗೂ ಹಿತವಾಗಿತ್ತು.

"ಅತ್ತೀ, ನಿಮ್ಮ ಕಾಲ ಬೀಳ್ತೀನಿ. ನಿಮ್ಮನ್ನ ಬಿಟ್ಟು ನಾ ಎಲ್ಲೂ ಹೋಗೂದಿಲ್ಲ. ನನ್ನ ತವರ್ಮನೀಗೆ ಕಳಸಬ್ಯಾಡ್ರಿ." ಚಿನ್ನಮ್ಮನ ಎದೆಗೆ ಇರಿದಂತಾಗಿ ಕಣ್ಣು ಒದ್ದೆಯಾಯಿತು.

"ಹುಚ್ಚ ಮಗಳ, ನಾ ಯಾಕ ನಿನ್ನ ಹೊರಗ ಹಾಕಲಿ. ನಿನ್ನ ಮಗಳ ಅಂತs ತಿಳಕೊಂಡೇನಿ. ಅಜಿತನ ಜೋಡಿ ಮದುವೀನೂ ಮಾಡ್ತೀನಿ. ಆದರ..."

ಮತ್ತೆ ಕುತ್ತಿಗೆಗೆ ಬಂದಿತು. "ನಿಮ್ಮದು ದೊಡ್ಡ ಮನಸ್ಸು. ಅವ್ವಾs ಏನ ಹೇಳ್ರಿ. ನೀವ ಹೇಳಿದಂಗ ಕೇಳ್ತೀವಿ ನಾವು. ಹೇಳ್ರಿ ಏನದು?"

"ಸುಮಾs, ನಮ್ಮ ವಂಶದ ಕುಡಿ ಅಮೃತಾ ನನಗ ಬೇಕು. ನಿನಗ ಮುಂದ ಮಕ್ಕಳಾಗ್ತಾವ. ಆದರ ನನಗ ಇರೂದು ಅದೊಂದs ಆಧಾರ."

ಆ ಗಳಿಗೆ ಬಂದೇ ಬಿಟ್ಟಿತ್ತು. ಹೆತ್ತ ಕರುಳು. ಸುಮ್ಮನೆ ಒಪ್ಪೀತೇ.

'ನಾನು ತಾಯಿ ಮಕ್ಕಳ್ನ ಅಗಲಿಸೂ ಪಾಪಾ ಮಾಡೂದಿಲ್ಲ ಸುಮಾ. ಒಂದೇ ಊರೊಳಗೆ ಇರ್ತೀವಿ. ಅಮೃತಾಗ ನೀವs ತಂದೀತಾಯಿ. ಬರ್ರಿ, ಭೆಟ್ಟಿ ಆಗ್ರಿ. ಆದರ ಅಮೃತಾ ಇಲ್ಲೇ ಬೆಳೀಬೇಕು.' ಬೇಡಿಕೆಯಿತ್ತು ದನಿಯಲ್ಲಿ.

ಕಣ್ಣೀರು ತಡೆಯಲು ಸಮಯ ಬೇಕಿತ್ತು. ಸುಮ್ಮನೆ ಹೊರಗೆ ಹೋಗಿ ಅಮೃತಾಳನ್ನು ತಂದು ಅತ್ತೆಯ ಉಡಿಯಲ್ಲಿ ಮಲಗಿಸಿದಳು ಸುಮಾ.

ಅಬ್ಬರದ ಅಲೆಗಳಿಂದ ಉಕ್ಕೇರುತ್ತಿದ್ದ ಸಮುದ್ರ ಈಗ ಶಾಂತವಾಗಿತ್ತು. ನಾಳೆ ಶಿವಣ್ಣ ಮಾಮಾ ಅವರ ಮುಂದೆ ಈ ಎಲ್ಲ ವಿಚಾರಗಳನ್ನಿಟ್ಟು ಅವರ ಸಲಹೆ ಕೇಳಬೇಕು. ಈ ನೆವದಿಂದಲಾದರೂ ಅವರ ಭೆಟ್ಟಿಯಾಗುತ್ತದೆ. ತನ್ನ ಮನದಾಳದ ಆಸೆಯನ್ನು ಬೆಚ್ಚಗೆ ಎದೆಯ ಗೂಡಿನಲ್ಲಿ ಮುಚ್ಚಿಟ್ಟುಕೊಂಡು ಬದುಕು ಸವೆಸಿದ್ದ ಚಿನ್ನಮ್ಮ ಅಮೃತಾಳನ್ನು ಎತ್ತಿ ಲೊಚಲೊಚ ಮುತ್ತಿಟ್ಟಳು.

ದೀಪಾವಳಿಯ ಸಂಜೆ ಅಂಗಳಕ್ಕೆ ತಳಿ ಹೊಡೆದು ರಂಗೋಲಿ ಹಾಕಿದ ಸುಮಾ ದೇವರಿಗೆ ದೀಪ ಹಚ್ಚಿ ಹಣತೆಗಳೊಡನೆ ಹೊರಬಂದು ಹೊಸ್ತಿಲಿಗೆ ಇಟ್ಟಳು.

■■

# ಆಪದ್ಬಂಧು

'ಅಯ್ಯೋs ಕೊನೆಗೂ ಬಂದ್ರಾ, ಎಷ್ಟೊ ಹೊತ್ತಿನಿಂದ ನಾನು ದಾರಿ ಕಾಯ್ತಾ ಇದೀನಿ' ಕೊರಳು ಕೊಂಕಿಸಿ, ಕುಡಿನೋಟದಿಂದ ನನ್ನನ್ನು ತಿವಿಯುತ್ತ ಸ್ವಾಗತಿಸಿದಳು ಸಾವಿತ್ರಿ. ನನಗೆ ಸಂತೋಷವೂ ದುಃಖವೂ ಒಟ್ಟಿಗೇ ಆದವು. ಪ್ರತಿದಿನದ ಪದ್ಧತಿಯಂತೆ ನನ್ನ ಹೆಂಡತಿ ಪಕ್ಕದ ಮನೆಯ ಪದ್ಮಮ್ಮನ ಮನೆಯಲ್ಲಿರದೇ ಸಂಜೆ ಹೊತ್ತಿನಲ್ಲಿ ನನ್ನ ಮನೆಯಲ್ಲೇ ಸಾವಿತ್ರಿ ನನ್ನನ್ನು ಎದುರುಗೊಂಡದ್ದಕ್ಕೆ ಸಂತೋಷ. ಇಷ್ಟು ಅಲಂಕಾರ ಮಾಡಿಕೊಂಡು ನನ್ನ ದಾರಿ ಕಾಯಬೇಕಾದರೆ ತಿಂಗಳ ಕೊನೆಯಲ್ಲಿ ಅಳಿದುಳಿದ ನನ್ನ ಕಾಂಚಾಣಕ್ಕೆ ಖೋತಾ ಬರುತ್ತದೆನ್ನುವ ಭಯಕ್ಕೆ ದುಃಖ.

'ಆಫೀಸಿನ್ಯಾಗ ಕೆಲಸ ಭಾಳ ಇತ್ತು ಸಾವಿತ್ರಿ. ಮುಗಿಸಿ ಹೊರಗೆ ಬರೂದರಾಗ ಮೊದಲನೇ ಬಸ್ಸು ತಪ್ಪಿ ಹೋತು. ಬಸ್ಸಿನ್ಯಾಗೂ ಭಯಂಕರ ಗದ್ದಲ ಇತ್ತು. ಅದಕ್ಕs ತಡಾ ಆತು. ಹೊಟ್ಟೆ ಬಾಳ ಹಸ್ತದ ಸಾವಿತ್ರಿ, ಏನರೆ ಕೊಡು'

ಸಾವಿತ್ರಿ ಮುಖ ಸೊಟ್ಟಗಾಯಿತು. ಅದಕ್ಕೆ ಕಾರಣ ನನಗೆ ಗೊತ್ತು. ತುಂಗಭದ್ರಾ ನದಿಯ ಆಚೆಯ ದಂಡೆಗೆ ಅವಳ ತೌರೂರು. ಈಚೆ ದಂಡೆಗೆ ನನ್ನ ಊರು. ನನ್ನ ಮಾತಿನಲ್ಲಿಯ ಅಗದೀ, ಭಾಳ, ಭಯಂಕರ, ಹಿಂದಾಗಡೆ - ಇವೆಲ್ಲ ಅವಳಿಗೆ ಅಪಥ್ಯ.

'ನಿಮ್ಮ ಭಾಷೆ ತುಂಬಾ ಒರಟು. ಇನ್ಮೇಲಾದರೂ ನಂಜೊತೆ ಇದ್ದು ಸ್ವಲ್ಪ ನಯ -ನಾಜೂಕಿನ ಮಾತು ಕಲೀರಿ' ಎಂದು ಮೂಗು ಮುರಿಯುವಳು.

'ನಾವು ಉತ್ತರ ಕರ್ನಾಟಕದವರ ಮಾತು ಒರಟಾಗಿದ್ದರೂ ಮನಸ್ಸು ಭಾಳ ಮೃದು. ಮತ್ತ ನಮ್ಮದು ದೊಡ್ಡ ಮನಸ್ಸು' ಸದಾಕಾಲ ನನ್ನದು ಇದೇ ಉತ್ತರ

ತಿನಿಸಿನ ತಟ್ಟೆಗಳನ್ನು ಹೊತ್ತು ಟೇಬಲ್ ಮೇಲಿಟ್ಟಾಗ ಕಣ್ಣು ಕಣ್ಣು ಬಿಡುವಂತಾಯಿತು ಪ್ರಸಾದನಿಗೆ.

'ನಿಮಗೆ ಆಶ್ಚರ್ಯ ಆಗಿದೆಯಾ ಇಷ್ಟೆಲ್ಲಾ ಹೇಗೆ ಮಾಡಿದೇ ಅಂತ ? ರವೆ, ಸಕ್ಕರೆ, ತುಪ್ಪ, ಕಡಲೆ ಹಿಟ್ಟು ಪದ್ಮಮ್ಮನವರ ಮನೇದು. ಈರುಳ್ಳಿ, ಎಣ್ಣೆ ಅಷ್ಟೇ ನಮ್ಮದು. ತಿನ್ನಿ ಬಿಸಿ ಬಿಸಿ ಸಜ್ಜಿಗೆ ಈರುಳ್ಳಿ ಬೋಂಡಾ.'

ಬಾಯಲ್ಲಿಯ ಸಿಹಿ ಸಜ್ಜಿಗೆ ಕಹಿಯಾಯಿತು. ಆದಾಯಕರ ಕಚೇರಿಯ ಕಾರಕೂನ ಪಶುಪತಿರಾಯನ - ಪದ್ಮಮ್ಮನ ಗಂಡ - ಸ್ಕೇಲು ಏನೆಂದು ನನಗೆ ಚೆನ್ನಾಗಿ ಗೊತ್ತಿದೆ, ತನಗಿಂತಲೂ ಕಡಿಮೆ. ಆದರೂ ತಿಂಗಳ ಕೊನೆಯಲ್ಲಿ ತಮ್ಮ ಮನೆಯ ತಿನಿಸಿಗೆ ಅವನ ಮನೆಯ ದಿನಸೇ ಗತಿ. ಅದರ ಗುಟ್ಟು ಏನು? ಯಾರಿಗೆ ಗೊತ್ತಿಲ್ಲ. ತಿನಿಸು ಗಂಟಲಲ್ಲಿ ಇಳಿಯಲು ಅನುಮಾನಿಸಿತು. ತಿಂಗಳ ಪಗಾರ ಬಂದ ಮೇಲೆ ಅವರ ಕಡ ಮುಟ್ಟಿಸುವೆನೆನ್ನುವ ಭರವಸೆಯಿಂದ ಹಸಿದ ಹೊಟ್ಟೆಗೆ ಎಲ್ಲವನ್ನೂ ತುಂಬಿದ. ಮರುಕ್ಷಣದಲ್ಲಿಯೇ ಅರ್ಧಾಂಗಿಯ ಆಜ್ಞೆ-

'ಏಳ್ರಿನ್ನ, ಬೇಗ ತಯಾರಾಗಿ. ಪೇಟೆ ಕಡೆ ಹೋಗಿ ಬರೋಣ'

'ಈಗ್ಯಾಕ ಪ್ಯಾಟ್ಯಾಗ? ಏನದ ಕೆಲಸ. ಇದs ಈಗ ಆಫೀಸಿಂದ ಬಂದೀನಿ'

'ನನಗೆ ಗೊತ್ತಿತ್ತು ನೀವು ಹೀಗೇ ಅಂತೀರಿ ಅಂತ. ಪದ್ಮಮ್ಮ ಮೈಕ್ರೋವೇವ್ ತಕ್ಕೊಂಡು ವರ್ಷ ಆಗಿ ಹೋಯ್ತು, ಆಗಿನಿಂದ ನಮಗೂ ಒಂದು ತರೋಣ ಅಂತ ಹೇಳ್ತಾನೇ ಇದೀನಿ. ನೀವೆಲ್ಲಿ ಕೇಳ್ತೀರಿ. ಸರಕಾರಿ ನೌಕರೀಲಿ ಇದಾರೆ ಅಂತ ನಮ್ಮಪ್ಪ ಬೆಳ್ಳಿ, ಬಂಗಾರ ಎಲ್ಲಾ ಕೊಟ್ಟು ಮದುವೆ ಮಾಡಿಕೊಟ್ಟರು. ನನಗೆ ನೋಡಿದರೆ ಕೇಳಿದ ಸಾಮಾನು ಒಂದೂ ಸಿಗೊಲ್ಲ. ನೋಡಿ, ನಿಮಗಿಂತಾ ಕಡಿಮೆ ದರ್ಜೆಯ ಕ್ಲಾರ್ಕ್ ಪಶುಪತಿರಾಯ ಹೇಗೆ

ಕಣ್ಣು ಕುಕ್ಕೋ ಹಾಗೆ ಜೀವನ ಮಾಡ್ತಾರೆ. ಕೇಳಿದರೆ ದೊಡ್ಡ ಉಪದೇಶಾನೆ ಆರಂಭಿಸಿಬಿಡ್ತೀರಿ. ನನ್ನ ಹಣೆಬರಹಾನೆ ಇಷ್ಟು' ಸಾವಿತ್ರಿಯ ನೇತ್ರಗಳಲ್ಲಿ ಗಂಗಾ-ಯಮುನಾ ಉದ್ಭವ.

'ಅಲ್ಲs ಸಾವು ನಮಗ ಯಾಕ ಬೇಕ ಆ ಮೈಕ್ರೋವೇವು ? ಅದು ಇಲ್ಲದ ಎಷ್ಟು ಬಿಸಿ ಬಿಸಿ ಅಡಿಗೆ ಮಾಡಿ ಉಣಿಸ್ತೀ ನೀನು. ಈಗ ನನ್ನ ಹತ್ತಿರ ಸಾವಿರಾರು ರೂಪಾಯಿ ಎಲ್ಲಿ ಅದಾವು ? ಹಾಂಗ ನನ್ನ ಸಂಬಳ ಸಾಲತಿದ್ದರ ಈ ತಿನಿಸಿಗೆ ಮಂದೀ ಮನೀಂದ ಕಡಾ ಯಾಕ ತರತಿದ್ದಿ. ವಿಚಾರ ಮಾಡಿಯೇನ ನೀನು ?'

'ಹೌದುರೀ, ನಿಮ್ಮ ಕೈ ಹಿಡದಾಗಿಂದ ನಾ ವಿಚಾರ ಮಾಡಿ ಮಾಡಿ ಹುಚ್ಚಿ ಆಗೇನಿ. ಕಡಿಮಿ ಸಂಬಳದ ಪಶುಪತಿರಾಯರ ಮನೇಲಿ ತಿಂಗಳಿಗೊಂದು ಸಾಮಾನು ತೊಗೊಳ್ತಾನೇ ಇರ್ತಾರೆ. ಸ್ಟೀಲ್ ಸಾಮಾನು, ಬೆಳ್ಳಿ ದೀಪದ ಕಂಬ, ಮ್ಯೂಜಿಕ್ ಸಿಸ್ಟಮ್. ನೆಕಲೇಸು, ಕಂಚೀ ಸೀರಿ ಹೀಗೇ. ಪದ್ಮಮ್ಮ ತೋರಸ್ತಾರ. ಎಷ್ಟು ಸಂತೋಷದಿಂದ ಇರ್ತಾರ. ಜಯನಗರದಾಗ ಒಂದ ಪ್ಲಾಟು ತೆಗೆಯೋರದಾರಂತ, ನಿಮ್ಮನ್ನ ಮದುವೆಯಾಗಿ ಏನು ಸುಖಾ ಕಂಡೆ ಹೇಳಿ'

'ಸಾವಿತ್ರೀ, ನಾನು ಈ ಮಾತು ಆಗಲೇ ನೂರಾರು ಸಾರೆ ಹೇಳಿನಿ. ಪಶುಪತಿರಾಯ ಹಾವಿನ ಹುತ್ತದಾಗ ಕೈ ಇಟ್ಟಾನ. ಈಗೇನೊ ನಾಗರಾಜ ರತ್ನಾ ಕೊಟ್ಟಾನ. ಯಾವಾಗ ಕಡೀತಾನೋ, ಗೊತ್ತಿಲ್ಲ. ಹಾಸಿಗಿ ಇದ್ದಷ್ಟs ಕಾಲು ಚಾಚಬೇಕು. ಈಗ ಇದ್ದಂಗ ಆರಾಮ ಅದೀವಿ ನಾವು'

ಸಾವಿತ್ರಿಯ ಅಳು ಅವಳ ಸಿಂಗಾರ ಕೆಡಿಸಿತೇ ಹೊರತು, ಅವನ ಮನಸ್ಸು ಬದಲಾಗಲಿಲ್ಲ. ಅಡಿಗೆ ಮನೆ ಸೇರಿದ ಅವಳನ್ನು ಹಿಂಬಾಲಿಸದೆ ಆರಾಮ ಕುರ್ಚಿಯಲ್ಲಿ ಕುಳಿತು ಯೋಚನಾ ಮಗ್ನನಾದ ಶೇಖರ.

ಇದಕ್ಕೆ ಕೊನೆ ಹೇಗೆ ಎನ್ನುವುದೇ ಅವನ ಯೋಚನೆ. ಪದ್ಮಮ್ಮನ ನೆರೆ ಬಿಡಿಸಿದರೆ ಸ್ವಲ್ಪಮಟ್ಟಿಗೆ ಶಾಂತಿಯಿಂದ ಇರಬಹುದಿತ್ತು. ಆದರೆ ಬೇರೆ ಮನೆ ಸಿಗುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಅಲ್ಲಿಯೂ ಪಶುಪತಿಯಂಥವರು ಇರುವುದಿಲ್ಲ ಎನ್ನುವ ಭರವಸೆ ಇದೆಯೆ? ಸಾವಿತ್ರಿಯ ಮನಸ್ಸಿನಿಂದ ಇಂಥ ದಾರಿಯಲ್ಲಿ ಹೋಗುವ ಬಯಕೆಯನ್ನು ಕಿತ್ತು ಹಾಕುವುದೊಂದೇ ಉಪಾಯ. ಇಂಥ ಚಿಕಿತ್ಸೆಯನ್ನು ಪ್ರಯೋಗಿಸಿ ಆಗಿತ್ತು. ಈಗ ಆರು ತಿಂಗಳ ಹಿಂದೆ ಹೀಗೇ ಒಂದು ದಿನ ಜಗಳವಾಡಿ ಊಟ ಮಾಡದೆ ಮಕ್ಕಳಿಗಷ್ಟೇ ಉಣಿಸಿ ಇಬ್ಬರೂ ಬರಿ ಹೊಟ್ಟೆಯಲ್ಲಿ ಮಲಗಿದ್ದರು...

ಸರಿರಾತ್ರಿಯಲ್ಲಿ ಶೇಖರ ಕೆಟ್ಟ ದನಿಯಲ್ಲಿ ಚಿಟ್ಟನೇ ಚೀರಿದ. ಅದೇ ತಾನೆ ನಿದ್ದೆಗಿಳಿದಿದ್ದ ಸಾವಿತ್ರಿ ಬೆಚ್ಚಿ ಎಚ್ಚತ್ತಳು. ಅವಳ ಹೊಟ್ಟೆಯಲ್ಲಿ ತಣ್ಣೀರು ಸುರಿದಂತೆ ಆಗಿ ಗಡಗಡ ನಡುಗುತ್ತಿದ್ದಳು. ಶೇಖರ ಇನ್ನೂ ಅಸ್ಪಷ್ಟವಾಗಿ ಏನೋ ಕೂಗುತ್ತಲೇ ಇದ್ದ. 'ಬಿಡ್ರಿ ನನ್ನ ಸಾವಿತ್ರೀನ್ನ ಬಿಟ್ಟು ಬಿಡ್ರಿ' ಅಂತೇನೋ ಕೇಳುತ್ತಿತ್ತು. 'ರೀ ಏಳ್ರಿ. ಏನ್ರಿ ಎಚ್ಚರಾಗ್ರಿ, ಕನಸು ಬಿತ್ತೇನ್ರಿ. ಏಳ್ರೀ' ಗಂಡನನ್ನು ಅಲುಗಾಡಿಸಿ ಎಬ್ಬಿಸಿದಳು. ಅವಳ ದನಿ ನಡುಗುತ್ತಿತ್ತು. ಕಣ್ತುಂಬ ನೀರು. 'ಏನಾಯಿತ್ರಿ ಕೆಟ್ಟ ಕನಸು ಬಿತ್ತಾ, ನಿಮ್ಮ ಮುಖ ಎಷ್ಟು ವಿಕಾರ ಆಗಿದೆಯಲ್ರಿ. ನನ್ನ ಜೀವ ಹೊಡ್ಕೊತಾ ಇದೆ ಕಣ್ರೀ. ಸ್ವಲ್ಪ ನೀರು ಕುಡೀರಿ.'

ರಾತ್ರಿಯ ಜಗಳ, ಅಳು ಎಲ್ಲಾ ಮರೆತೇಬಿಟ್ಟಿದ್ದಳು ಸಾವಿತ್ರಿ. ಶೇಖರನ ತಂತ್ರ ಅರ್ಧ ಫಲಿಸಿತ್ತು. ಮತ್ತೆ ಕಥೆ ಹೊಸೆದ.

'ಇಲ್ಲಾ ಸಾವಿತ್ರಿ ಜಗಳಾ ಆಡಿ ಅತ್ತು ಕರೆದು ಉಪವಾಸ ಮಲಗಿದೆಲ್ಲ. ನನಗ ಭಾಳ ಕೆಟ್ಟ ಅನಿಸ್ತು. ನನ್ನ ಹೆಂಡ್ತಿ ಮಕ್ಕಳ ಆಸೆ ಪೂರೈಸಲಿಕ್ಕೆ ನನ್ನಿಂದ ಆಗವೊಲ್ಲದು. ಇದೆಂಥಾ ಜೀವನ! ಇದರಕಿಂತ ಭಿಕಾರಿಗೋಳು ಸುಖದಿಂದ ಇರ್ತಾರಲ್ಲ. ಇಂಥಾ ಬದುಕು ಯಾಕ ಬಾಳಬೇಕು ಅಂತ ಭಾಳ ಹೊತ್ತು ವಿಚಾರ ಮಾಡಿದೆ. ಲಂಚಾ ತೊಗೊಂಡವರೆಲ್ಲಾ

ಸಿಕ್ಕು ಜೈಲಿಗೆ ಹೋಗೂದಿಲ್ಲಲ್ಲ. ನಾನೂ ಲಂಚಾ ತಿಂದು ನಿನ್ನ ಮಕ್ಕಳ್ನ ಸುಖದಿಂದ ಇಡಬೇಕು ಅಂತ ನಿಶ್ಚಯ ಮಾಡಿ ಮಲಕೊಂಡೆ'.

'ಹೌದs ಆದರ ಹಿಂಗ್ಯಾಕ ಚೀರಿದಿರಿ? ಕನಸು ಏನು ಬಿತ್ತು?'

'ಹಾಂ, ಕನಸು ನೆನೆಸಿದರ ಇನ್ನೂ ಮೈ ನಡಗತೈತಿ. ಸಾವೂ, ಕೈಯೊಳಗ ಸಾಕಷ್ಟು ರೊಕ್ಕ, ಬಂಗಾರಾ, ಸಾಮಾನು ಎಲ್ಲಾ ಮಾಡಿಕೊಂಡು ಸುಖದಿಂದ ಇದ್ವಿ. ನೀನು ಯಾವಾಗಲೂ ಕುಲುಕುಲು ನಕ್ಕೋತ ಇರೋದು ನೋಡಿ ಖುಷಿ ಆಗ್ತಿತ್ತು. ಆದರ ನಮ್ಮ ನಸೀಬ ಖೊಟ್ಟಿ. ಒಂದ ದಿನಾ ನಾವೆಲ್ಲಾ ಕಾರಿನ್ಯಾಗ ಹೊರಗ ಹೋಗಿ ಬರತಿದ್ವಿ. ನಿರ್ಜನ ಪ್ರದೇಶ. ರೋಡ್ ಲೈಟ್ಸ್ ಇಲ್ಲಾ. ಅಮಾವಾಸಿ, ಎಲ್ಲಿಂದೊ ಕೈಯಾಗ ದೊಣ್ಣೆ ಹಿಡಕೊಂಡು ಯಮದೂತನಂಥಾ ಧಾಂಡಿಗರು ಬಂದು ಕಾರು ನಿಲ್ಲಿಸಿ ನಿನ್ನ ಎಳಕೊಂಡು ಹೋದರು. ಹುಡುಗರು, ನಾನು ಮುಂದ ಹೆಜ್ಜೆ ಇಟ್ಟರ ಕೊಂದs ಬಿಡ್ತೀವಿ ಅಂತ ಹೇಳಿ ಮಕ್ಕಳ್ನ ನನ್ನ ಕಣ್ಣ ಮುಂದ ಕೊಚ್ಚಿ ಹಾಕಿದ್ರು. ನಾನು ಕಾಲು ಬೀಳ್ತೆನಿ ಬಿಡ್ರೆಪಾ ಅಂತ ಬೇಡಿಕೊಂಡೆ. 'ಮಗನs ಯಮದೂತರು ನಾವು. ಲಂಚಾ ತಿನ್ನೂವಂಥಾ ಪಾಪದ ಕೆಲಸಾ ಮಾಡಿ, ಬಿಡ್ರಿ ಅಂತೀಯಾ, ನಿನ್ನ ಹೆಂಡತಿ, ಮಕ್ಕಳ್ನ ಮೊದಲ ಕೊಚ್ಚಿ ಹಾಕ್ತೀವಿ. ನಿನ್ನ ಪಾಪದ ಪಾಲುದಾರರು ಅವರು. ಆಮ್ಯಾಲೆ ನಿನಗ ಶಿಕ್ಷಾ ಕೊಡ್ತೀವಿ' ಅಂತ ಕೆಂಪು ಕಣ್ಣು ಮಾಡಿ ಕೂಗಾಡತಿದ್ದರು. ಅದನ್ನ ಕಣ್ಣಾರೆ ನೋಡಿ ನಾನು ಚೀರುತಿದ್ದೆ ಸಾವು. ನೀವು ಹೋದ ಮ್ಯಾಲೆ ನನಗ ಏನದ ಕೆಲಸಾ. ನಮ್ಮ ಮನೀನ ಮುಳುಗ್ತದ ಅಲ್ಲಾ ಸಾವಿತ್ರೀ' ಅಳು ಉಕ್ಕಿ ಉಕ್ಕಿ ಹರಿಯಿತು.

'ಅಳಬ್ಯಾಡ್ರಿ. ನಾವೆಲ್ಲ ಇಲ್ಲೇ ಇದೀವಿ. ನೋಡ್ರಿ ಹುಡುಗರು ಆರಾಮ ಮಲಗಿಕೊಂಡಾರ. ನಿಮ್ಮ ಮುಖದ ಮ್ಯಾಲೆ ಹುಚ್ಚು ಕಳೇ ಸುರೀತಾ ಇದೆ. ನೀವು ಸಮಾಧಾನ ಮಾಡಿಕೊಳ್ರಿ. ನನ್ನ ಎದೀನೂ ಒಡೀತದೆ ನೀವು ಹೀಗೆ ಅಳ್ತಾ ಇದ್ರೆ. ಅದೊಂದು ಕೆಟ್ಟ ಕನಸೂಂತ ಮರೆತು ಬಿಡ್ರಿ. 'ತನ್ನ ತೊಡೆಯ ಮೇಲೆ ತಲೆ ಇಡಿಸಿಕೊಂಡು ನೇವರಿಸುತ್ತಿದ್ದಳು ಸಾವಿತ್ರಿ.

ತನ್ನ ಅಭಿನಯ ಯಶಸ್ವಿಯಾದುದಕ್ಕೆ ಶೇಖರ ಒಳಗೊಳಗೇ ನಗುತ್ತಿದ್ದ. ಅದರ ಪರಿಣಾಮ ಆರೇಳು ತಿಂಗಳು ಮಾತ್ರ. ಈಗ ಮತ್ತೆ... ಮತ್ತೆ ಅದೇ ರಾಗ...

ದೊಡ್ಡ ಸಾಹೇಬರಿಂದ ಮಂಗಳಾರತಿ ಮಾಡಿಸಿಕೊಂಡು ಸಪ್ಪೆ ಮುಖದಿಂದ ಹೊರಬಂದ ಶೇಖರನ ಭುಜ ತಟ್ಟಿದರು ಹೆಡ್‌ಕ್ಲಾರ್ಕ್ ಹನುಮಂತಪ್ಪ. ಅವನನ್ನು ಕಂಡರೆ ಅವರಿಗೆ ಒಂದು ತರದ ಪ್ರೀತಿ. ವಯಸ್ಸಾದವರು, ಕಷ್ಟ-ಸುಖ ಕಂಡವರು. ಆಫೀಸಿನ ಕೆಲಸದಲ್ಲಿ ಅನುಭವಿಕರು.

'ಯಾಕ್ರೀ ದೇಸಾಯರ, ಮಾರೀ ಸಣ್ಣ ಮಾಡೀರಿ. ಸಾಹೇಬರು ಅಂದದ್ದೆಲ್ಲಾ ಅಷ್ಟು ಮನಸ್ಸಿಗೆ ಹಚಿಕೋಬಾರದ್ರೆಪಾ'

'ಇಲ್ರೀ, ಅದನ್ನೇನೂ ಅಷ್ಟು ಸೀರಿಯಸ್ ತಗೊಂಡಿಲ್ಲ ನಾನು. ಮುಂಜಾನಿಂದ ತಲೀ ಭಾಳ ನೋಯಿಸತಿತ್ತು. ರಾತ್ರಿ ನಿದ್ದೀನೂ ಆಗಿದ್ದಿಲ್ಲ. ಅಪ್‌ಸೆಟ್ ಆಗಿದ್ದೆ. ಒಂದು ಸಣ್ಣ ತಪ್ಪಿಗೆ ಸಾಹೇಬರೂ ಸಿಟ್ಟಿಗೆದ್ದು ಬಯ್ದರು. ಎಲ್ಲಾ ಕೂಡಿತ್ತು'

'ತಲಿನೋವಿನ ಗುಳಿಗೆ ತೊಗೊಂಡು ಚಹಾ ಕುಡಿಯೂಣಂತ ನಡೀರಿ'

ಎಂದವರೇ ಟೊಪ್ಪಿಗೆ ತಲೆ ಮೇಲಿಟ್ಟು, ಶೇಖರನ ಭುಜಕ್ಕೆ ಕೈ ಹಾಕಿದರು.

ಬಿಸಿ ಬಿಸಿ ಚಹದೊಡನೆ ಆವರ ಆತ್ಮೀಯ ಮಾತುಗಳಿಂದ ಶೇಖರನ ಬೇಸರ ಕಡಿಮೆಯಾಯಿತು. ಹನುಂತಪ್ಪ ವಿಷಯಕ್ಕೆ ಬಂದರು.

'ನೋಡ್ರೆಪಾ ಈಗ ಹಣೇಗಂಟು ಬಿಚ್ಚಿದಿರಿ. ತಲಿನೋವು ಸುಳ್ಳು ನೆವ. ಈಗ ಹೇಳ್ರಿ ಏನು ಚಿಂತಿ ಮಾಡತಿದ್ರಿ, ಹೇಳಿ'

'ಏನಿಲ್ಲಾ ಏನೋ ಹೀಂಗ ಮನೀ ತಾಪತ್ರಯಾ'

'ಬಿಡ್ರಿ, ಇಷ್ಟಕ್ಕೆಲ್ಲಾ ಚಿಂತೀ ಮಾಡೂವವರs ಅಲ್ಲಾ ನೀವು. ನನಗ ಗೊತ್ತಿಲ್ಲೇನು ನಿಮ್ಮ ಧೈರ್ಯಾ , ಸಾಚಾತನಾ, ನಿಮ್ಮ ಕಷ್ಟ ನನ್ನ ಮುಂದ ಹೇಳಿದರ ಏನರೆ ಪರಿಹಾರ ಹುಡುಕೂಣಲ್ಲ'

ಅವರ ಪ್ರೀತಿ, ವಾತ್ಸಲ್ಯಕ್ಕೆ ಕಟ್ಟುಬಿದ್ದು ತನ್ನ ಸಾವಿತ್ರಿಯ ಮನಸ್ತಾಪದ ಬಗ್ಗೆ ಹೇಳಿದ. 'ಅವಳು ಹೇಳಿದಂಗ ಹಣಕ್ಕ ಅಡ್ಡದಾರಿ ಹಿಡೀಲಿಕ್ಕೆ ನನ್ನ ಮನಸ್ಸು ಒಪ್ಪೂದಿಲ್ಲ. ಮನಿಯೊಳಗ ರಸಕಸಿ ಇದ್ದರ ಮನಸ್ಸಿಗೆ ಸಮಾಧಾನ ಇರೂದಿಲ್ಲ. ಆಫೀಸಿನ ಕೆಲಸಾ ನೆಟ್ಟಗ ಆಗೂದಿಲ್ಲ. ಸಾಹೇಬರಿಂದ ಬೈಗುಳಾ ತಿನ್ನಬೇಕು. ಕೆಲಸದಾಗ ಹಿಂದ ಉಳದರ ನನಗ ಪ್ರಮೋಶನ್ ಹ್ಯಾಂಗ ಸಿಗಬೇಕು ಹೇಳ್ರಿ. ಇದೆಲ್ಲಾ ಸಾವಿತ್ರೀಗೆ ತಿಳಿಯೂದs ಇಲ್ಲ. ನನ್ನ ಪ್ರಾಮಾಣಿಕತೇಕ ಮನೀಯೊಳಗs ಬೆಲೆ ಇಲ್ಲಾಂದರ ಏನೂ ಮಾಡೂದು ತಿಳಿವೊಲ್ಲದು.'

ಕೊನೆಯ ಮಾತು ಬಹಳ ಬೇಸರದಿಂದ ಬಂದಿತ್ತು. ಅವನ ಪರಿಸ್ಥಿತಿ ಅರ್ಥ ಮಾಡಿಕೊಂಡ ಹನುಮಂತಪ್ಪ ಯೋಚನೆಗಿಳಿದರು. 'ಹಿಂಗ ಕೇಳ್ತಿನಿ ಎಂತ ತಿಳಿಬ್ಯಾಡರಿ ದೇಸಾಯರ. ಉಳಿದ ವಿಷಯದೊಳಗ ನಿಮ್ಮ ಮನೀಯವರ ಸ್ವಭಾವ ಹ್ಯಾಂಗ? ಅಂದರ ನಿಮ್ಮ ಮ್ಯಾಲೆ ಪ್ರೀತಿ... ಮಕ್ಕಳು, ಮನೀ ಮ್ಯಾಲೆ ಮೋಹ...'

'ಬಹಾಳ ಚೊಲೋ ಅದಾಳ್ರಿ. ಸಂಸಾರ ನಡಸಲಿಕ್ಕೆ, ಕೆಲಸಾ, ಅಡಿಗಿ ಎಲ್ಲಾದರೊಳಗೂ ಜಾಣಳು. ಆದರ ಸರೀಕದವರ ಹಾಂಗ ಇರಬೇಕು ಅನ್ನೂ ಹುಚ್ಚು ಒಂದ ಅದ ನೋಡ್ರಿ.'

'ಭಾಳ ಕಲತವರು -ಕಾಯ್ದೆ ಕಾನೂನು...'

'ಎಸ್ಸೆಸೆಲ್ಸಿ ಆಗ್ಯಾಳ. ಡಿಗ್ರಿ ಕಲತಿದ್ದರ ಆಕಿ ಎಲ್ಲಿ ಮನ್ಯಾಗ ಇರತಿದ್ದಳು? ತಾನೂ ಪಗಾರ ತರೂವಾಕಿ ಅಂತಿದ್ಲು. ಹೊರ ಜಗತ್ತಿಂದು ಅನುಭವ ಕಡಿಮಿನ ಅದ. ಯಾಕ್ರಿ, ಹಿಂಗ್ಯಾಕ ಕೇಳಿದ್ರಿ?'

'ನನ್ನ ತಲಿಯೊಳಗ ಒಂದು ಯೋಚನಾ ಬಂದsದ. ಒಂದ ಸಣ್ಣ ಆಟಾ ಆಡೂಣು, ಇನ್ನೆರಡ ದಿನ ಬಿಟ್ಟು ಪ್ಲ್ಯಾನ್ ಪೂರ್ತಿ ಆದ ಮ್ಯಾಲೆ ಹೇಳತೇನಿ ಹಾಂ. ನಿಮಗೆ ಒಳ್ಳೇದಾಗಲಿ ಅಂತ ನನ್ನ ಇಚ್ಛಾ'

'ಆಯ್ತು ಹಾಂಗ ಮಾಡ್ರಿ'

'ಏಳು ಹೊಡೆದು ಹೋಯ್ತು. ಯಾಕೋ ಇವರು ಇನ್ನೂ ಬರಲೇ ಇಲ್ಲವಲ್ಲ. ಇಷ್ಟ ಹೊತ್ತಿಗೆ ಬರಬೇಕಾಗಿತ್ತು. ಬೆಳಿಗ್ಗೆ ಆಫೀಸಿಗೆ ಹೋಗೋವಾಗ ನಾನು ಸರಿಯಾಗಿ ಅಡಿಗೆ ಮಾಡಿರಲೇ ಇಲ್ಲ. ನಗ್ತಾ ಊಟಾನೂ ಹಾಕಲಿಲ್ಲ. ಮುಖಾ ಸಣ್ಣದು ಮಾಡಿ ಹಾಗೇ ಹೋಗಿಬಿಟ್ಟರು. ನಿನ್ನೆ ರಾತ್ರಿ ಜಗಳ ಆದಾಗಿನಿಂದ ಇಬ್ಬರೂ ಮಾತೇ ಆಡಿಲ್ಲ. ಹೀಗೇ ಉತ್ತರಧ್ರುವ ದಕ್ಷಿಣ ಧ್ರುವದ ಹಾಗೆ ಇದ್ದರೆ ಜೀವನದೊಳಗ ಏನು ಸಾಮರಸ್ಯ ಉಳೀತದೆ. ಅವರೇನು ನನ್ನ ಮಕ್ಕಳ್ನ ಪ್ರೀತಿ ಮಾಡೋದಿಲ್ಲ ಅಂತಿಲ್ಲ. ಸಂಕ್ರಾಂತಿ ಹಬ್ಬಕ್ಕೆ ಪದ್ಮಮ್ಮ ಕಂಚೀ ಸೀರೆ ಖರೀದಿ ಮಾಡಿದ್ರೆ ಇವರು ಪ್ರೀತಿಯಿಂದ ತಾವೇ ಸಿಲೆಕ್ಟ್ ಮಾಡಿ ಒಳ್ಳೇ ಸೀರೇನೆ ತಂದಿದ್ರು. ಮಕ್ಕಳಿಗೂ ಹಾಗೇನೇ. ನಾನೇ ಜಗಳಾಡಬಾರದಿತ್ತು. ಆದರೆ ಮನಸ್ಸಿನ ಆಸೆ. ತಡ್ಕೊಳ್ಳೋಕಾಗಲ್ಲ. ಪದ್ಮಮ್ಮ ಬೆಳ್ಳಿ ಬಂಗಾರ ಸಿಲ್ಕ್ ಸೀರೆ, ಮನೆ

ಸಾಮಾನು ಎಲ್ಲ ಇಟ್ಟುಕೊಂಡು ಹಾಗೆ ನನ್ಮುಂದೆ ಮೆರೆದಾಡೋವಾಗ ನನ್ನ ಆಸೆಗಳೆಲ್ಲಾ ಉಕ್ಕಿ ಬರ್ತ್ತವೆ... ಕತ್ತಲಾಯಿತೆಂದು ಸಾವಿತ್ರಿ ಯೋಚನೆಗಳಿಂದ ಹೊರಬಂದು ದೇವರಿಗೆ ದೀಪ ಹಚ್ಚಿದಳು. ಆದರೂ ಅವಳು ತಲೆಬಾಗಿಲು ಬಿಟ್ಟು ಕದಲಲಿಲ್ಲ.

'ಅವ್ವಾಽ ಅಲ್ನೋಡು ಯಾರೋ ಬರತಾರ' ಹೇಮಂತ ಕೂಗಿದ.

'ಬರ್ರಿ ಬರ್ರಿ, ಅವರಿನ್ನೂ ಆಫೀಸಿಂದ ಬಂದೇ ಇಲ್ಲ'

'ನನ್ನ ಹೆಸರು ಹನುಮಂತಪ್ಪ. ದೇಸಾಯರ ಆಫೀಸಿನೊಳಗ ಕೆಲಸಾ ಮಾಡ್ತೀನಿ'

'ಹೌದೌದು, ನೆನಪದ ನನಗ. ನಮ್ಮ ಹೇಮಂತನ ಹುಟ್ಟಿದ ಹಬ್ಬಕ್ಕ ಬಂದಿದ್ದಿರಿ ಅಲ್ಲ. ಆರಾಮ ಇದೀರಾ?'

'ಹೂನ್ರಿ.. ಆರಾಮ. ನಿಮಗ ಒಂದು ವಿಷಯ ಹೇಳೂದಿತ್ತು. ಬಂದೆ' ತಡವರಿಸುತ್ತ ಮಾತೆತ್ತಿದರು ಹನುಮಂತಪ್ಪ.

'ಹೇಳ್ರಿ. ಏನದು? ಇವರೂ ಬಂದಿದ್ರೆ ಚೆನ್ನಾಗಿತ್ತು ಕೂತುಕೊಳ್ರಿ'

'ನಿಮ್ಮ ಯಜಮಾನರು ಇವತ್ತು ಮನೀಗೆ ಬರೂದಿಲ್ಲ...'

'ಯಾಕೆ ಬರೂದಿಲ್ಲ?ಟೂರಿಗೆ ಹೋದರೇನು? ಮನೀಗೆ ಬಂದು ಹೋಗಬೇಕಾಗಿತ್ತಲ್ಲ. ಯಾವಾಗ ಬರ್ತಾರ?'

'ಇಲ್ರಿ ಟೂರಿಗೆ ಹೋಗಿಲ್ಲ. ನಾ ಹ್ಯಾಂಗ ಹೇಳಲಿ. ಬಾಯಿ ಬರವೊಲ್ಲದು'

'ಹೇಳ್ರಿ, ಅಣ್ಣಾ ಅವರ, ಅವರು ಯಾಕೆ ಬರೊದಿಲ್ಲ. ನನ್ನ ಜೀವ ಚಡಪಡಿಸ್ತಾ ಇದೆ. ಬೇಗ ಹೇಳ್ರಿ', ಸಾವಿತ್ರಿ ಗಾಬರಿಯಿಂದ ಕುರ್ಚಿಯಲ್ಲಿ ಕೂತೇ ಬಿಟ್ಟಳು.

'ಅವರು ಇವತ್ತು ಮಧ್ಯಾಹ್ನ ಆಫೀಸಿನ್ಯಾಗ ಒಬ್ಬರ ಕಡೇಂದ ಸಾವಿರ ರೂಪಾಯಿ ಲಂಚಾ ತೊಗೊಳ್ಳೂ ಮುಂದ ಸಿಕ್ಕಿಬಿದ್ದರು. ಲಂಚ ನಿರೋಧ ಶಾಖೆಯವರು ಅವರ್ನ ಹಿಡಿದರು. ಈಗ ರಾಯರು ಪೋಲೀಸರ ತಾಬೆಯೊಳಗ ಅದಾರ' ಹಣೆಯ ಬೆವರು ಒರೆಸಿಕೊಳ್ಳುತ್ತ ಮುಖ ಕೆಳಗೆ ಹಾಕಿದರು ಹನುಮಂತಪ್ಪ.

'ಅಯ್ಯೋ ಇಲ್ರಿ. ಅವರು ಎಂದೂ ಲಂಚ ತಗೊಳ್ಳೋದಿಲ್ಲ. ದೇವರಾಣೆ ಎಂದೂ ತೆಕ್ಕೊಂಡಿಲ್ಲ. ತಪ್ಪು ತಿಳಿದು ಅವರನ್ನ ಹಿಡಿದಿರಬೇಕ್ರಿ'

'ಇಲ್ರಕ್ಕಾ. ದೇಸಾಯರು ಲಂಚಾ ತಗೊಳ್ಳೂ ಮುಂದ ರೆಡ್ ಹ್ಯಾಂಡ್ ಸಿಕ್ಕಾರ. ದೊಡ್ನ ಸಾಹೇಬರು ಅವರ ಮನೀಗೆ ಹೋಗಿ ಹೇಳಿ ಬರ್ರಿ ಅಂದರು. ಬಂದಿದ್ದೆ ಆಯ್ತು. ನಾ ಇನ್ನ ಹೋಗಿ ಬರ್ತೀನಿ' ಹನುಮಂತಪ್ಪ ಎದ್ದರು.

'ನಿಲ್ರಿ. ಹೋಗಬೇಡ್ರಿ. ನಿಮ್ಮ ತಂಗೀ ಅಂತ ತಿಳಕೊಂಡು ಅವರ್ನ ಬಿಡಿಸಿಕೊಂಡು ಬರ್ರಿ. ಅದೊಂದು ಉಪಕಾರಾ ಮಾಡ್ರಿ ಅಣ್ಣಾ' ಕಣ್ಣು ತುಂಬಿದ್ದವು. ಅವಳ ದೈನ್ಯಾವಸ್ಥೆ ನೋಡಿ ಹನುಮಂತಪ್ಪನವರ ಕರುಳು ಮರುಗಿತು.

ಉಹೂಂ ಇಷ್ಟು ಬೇಗ ಸೋಲಬಾರದು...

'ನಮಗ ಹಾಂಗೆಲ್ಲ ಮಾಡಲಿಕ್ಕೆ ಬರೂದಿಲ್ರವಾ. ದೇಸಾಯರಽ ಒಪ್ಪಿಕೊಂಡು ಬಿಟ್ಟಾರ, 'ನನ್ನ ಹೆಂಡತಿ ಬೆಳ್ಳಿ, ಬಂಗಾರ, ಸಾಮಾನು ಬೇಕು ಅಂತ ಹಗಲೆಲ್ಲಾ ಜಗಳಾ ಮಾಡತಿದ್ದಳು. ನನ್ನ ಸಂಬಳ ಸಾಲತಿದ್ದಿಲ್ಲಾ. ಅದಕ್ಕ ಲಂಚಾ ತೊಗೊಂಡೆ' ಅಂತ ಹೇಳ್ಯಾರ. 'ಇದರೊಳಗ ನಾವೇನು ಮಾಡಲಿಕ್ಕೆ ಬರ್ತದ ನೋಡ್ರಿ' ಅಭಿನಯ ಮುಂದುವರೆಸಿದರು ಹನುಮಂತಪ್ಪ.

'ಹೌದುರೀ ನಂದೇ ತಪ್ಪಾಯ್ತು. ಅವರು ದೇವರಂಥವರು. ನಾನೇ ಆಸೆಯಿಂದ ಹಣಕ್ಕ ಅವರ್ನ ಪೀಡಿಸ್ತಿದ್ದೆ. ನನ್ನ ತಪ್ಪಿಗೆ ದೇವರು ಶಿಕ್ಷಾ ಕೊಟ್ಟ. ನಾನು ಇನ್ನೇನು ಮಾಡ್ಲಿ, ಅವರನ್ನ ಜೇಲಿಗೆ ಕಳಿಸಿ ಹ್ಯಾಂಗ ಮುಖಾ ಎತ್ತಿ ಈ ಸಮಾಜದಾಗ ಬದುಕಲಿ? ಬಿಕ್ಕಿ ಬಿಕ್ಕಿ ಅತ್ತಳು ಸಾವಿತ್ರಿ ಮಕ್ಕಳನ್ನು ಹಿಡಿದುಕೊಂಡು.

ಸ್ವಲ್ಪ ಹೊತ್ತು ಅವಳನ್ನು ನೋಡುತ್ತಿದ್ದ ಹನುಮಂತಪ್ಪ ಮರುಕದಿಂದ 'ತಂಗೀ ಅಳಬ್ಯಾಡ್ರಿ. ಸಮಾಧಾನ ಮಾಡಿಕೊಳ್ರಿ. ನಿಮ್ಮ ತಪ್ಪು ನಿಮಗ ತಿಳಿದು ಪಶ್ಚಾತ್ತಾಪ ಆಗೇದ. ನನಗೊಂದು ಉಪಾಯ ಹೊಳದದ. ಪ್ರಯತ್ನ ಮಾಡಿ ನೋಡೂಣು. ದೇಸಾಯರು ಲಂಚಾ ತೊಗೊಂಡದ್ದು ಇದs ಮೊದಲನೇ ಸಾರೆ ಅನ್ನೂ ವಿಷಯ ದೊಡ್ಡ ಸಾಹೇಬರಿಗೂ ಗೊತ್ತದ. ನೀವs ನಿಮ್ಮ ಮನೆಯ ಪರಿಸ್ಥಿತಿ ಬಗ್ಗೆ ತಿಳಿಸಿ ಇನ್ನೊಮ್ಮೆ ಹಿಂಗ ಆಗಗೊಡೂದಿಲ್ಲ. ಇದೊಂದು ಸಾರೆ ಕ್ಷಮಾ ಮಾಡ್ರಿ ಅಂತ ಬೇಡಿಕೊಂಡು ಸಾಹೇಬರಿಗೆ ಒಂದು ಪತ್ರಾ ಬರದು ಕೊಡ್ರಿ. ಅವರು ತಮ್ಮ ಪ್ರಭಾವ ಬೀರಿ ದೇಸಾಯರನ್ನ ಬಿಡಿಸಬಹುದು'

'ಆಯ್ತು. ನೀವು ಹೇಗೆ ಹೇಳ್ತಿರೊ ಹಾಗೆ ಬರೆದು ಕೊಡ್ತೀನಿ. ಅವರು ಮನೀಗೆ ಬಂದರೆ ಸಾಕು. ನಂದು ತಪ್ಪಾಯ್ತು ಹೇಳ್ರಿ'

ಕಾಗದ ಬರೆದಾದ ಮೇಲೆ ಹೊರಗೆ ನಿಂತಿದ್ದ ಪ್ಯೂನ್ ಸಿದ್ಧನ ಕೈಲಿ ಕೊಟ್ಟು ಕಳಿಸಿ ಹೇಳಿದರು. 'ತಂಗೀ ನಿಮ್ಮ ಯಜಮಾನರ ಸ್ವಾಗತಕ್ಕ ಸಿದ್ಧ ಆಗರಿ; ಇನ್ನ ಚಹಾಕ್ಕ ಇಡ್ರಿ. ಅವರ ಜೊತಿಗೆ ನಾನೂ ಚಹಾ ಕುಡದs ಹೋಗತೇನಿ' ತಲೆ ತಗ್ಗಿಸಿ ಒಳಗೆ ಹೋದಳು. ಸಾವಿತ್ರಿ.

'ಓಹೋಹೋ ಬರ್ರಿ ದೇಸಾಯರ ಬರ್ರಿ. ಸುರಕ್ಷಿತ ಬಂದ್ರ್ಯಲ್ಲಾ ನಮ್ಮ ಕಾಗದ ಕೆಲಸಾ ಮಾಡೇದಲ್ಲಾ. ಬರ್ರಿ' ಒಳಗಿನಿಂದ ಬಂದ ಸಾವಿತ್ರಿ ತುಂಬಿದ ಕಣ್ಣುಗಳಿಂದ ಗಂಡನನ್ನು ದಿಟ್ಟಿಸಿ, ನಕ್ಕು ಚಹಾ ತಿನಿಸು ತರಲು ಒಳಗೆ ಹೋದಳು.

'ನಾಟಕದ ಯಶಸ್ಸಿಗೆ ಅಭಿನಂದನೆಗಳು'- ಶೇಖರ ಹನುಮಂತಪ್ಪನವರ ಕೈ ಹಿಡಿದುಕೊಂಡು ತುಂಬು ಹೃದಯದಿಂದ ನಕ್ಕ.

■■



ಗೃಹ ಜೀವನದಲ್ಲೇ ತೊಡಗಿದರೂ ಮನೆಯ ಕಟ್ಟೆಯ ಮೇಲಿಂದಲೇ ಶಾಂತಾದೇವಿ ಕಣ[illegible] ಎತ್ತರಿಸಿ ದೂರದ ಪರಿಸರವನ್ನು ನಿರೀಕ್ಷಿಸುತ್ತಾರೆ. ಆಧುನೀಕರಣದ ಗರ್ಭವೇದನ[illegible] ಸುತ್ತಲೂ ಜೀವನವನ್ನೇ ಬದಲಿಸುತ್ತಿರುವಾಗ ಗೃಹಿಣಿ ಕೂಡ ಕುಳಿತಲ್ಲಿಯೇ ಆದರೂ ಈ ತರಂಗಗಳಿಗೆ ಸ್ಪಂದಿಸಲಾರಳೆ?.... ಮಹಿಳೆಯಲ್ಲಾದ ವಿಚಾರ ಕ್ರಾಂತಿ, ದೃಷ್ಟಿ ವೈಶಾಲ್ಯ ಹಿಮ್ಮೆಟ್ಟುತ್ತಿರುವ ಗೋಡೆ, ಅಂಗಳು, ದಿಗಂತಗಳು - ಇವುಗಳಿಗೆ ಈ ಕಥೆಗಳೇ ಸಾಕ್ಷಿ. ಮಧ್ಯಮವರ್ಗ, ಒಂದೇ ಜಾತಿ, ಒಂದೇ ಪಟ್ಟಣಕ್ಕೆ ಇಲ್ಲಿಯ ವಸ್ತುಗಳು ಸೀಮಿತವಾಗಿಲ್ಲ. ಅನುಭವ ವ್ಯಾಪ್ತಿಗೂ ವಿಷಯ ವ್ಯಾಪ್ತಿಗೂ ನಡುವೆ ಇದ್ದ ಕಂದರವನ್ನು ಬಹಳಷ್ಟು ಕಥೆಗಳಲ್ಲಿ ಕಲ್ಪನಾಶಕ್ತಿಯಿಂದ ತುಂಬಿಕೊಟ್ಟಿದ್ದಾರೆ. ಮೇಲೆ, ತಮ್ಮಲ್ಲಿದ್ದ ಸೂಕ್ಷ್ಮಾವಲೋಕನದ, ಸಂಸ್ಕೃತಿಬದ್ಧ, ನೈಜ ವಿವರಗಳ ಹುಮ್ಮಸ್ಸಿನಿಂದ ಈ ತುಂಬಿಕೆಯನ್ನು ಗಟ್ಟಿಗೊಳಿಸಿದ್ದಾರೆ.

- ಡಾ. ಶಂಕರ ಮೊಖಾಶಿ ಪುಣೇಕರ (1973)

ಈ ಕಥೆಗಳು ವಾಸ್ತವಿಕ ಪರಂಪರೆಗೆ ಸೇರಿದವು. ಇಲ್ಲಿಯ ಜನ ನಮ್ಮ ಸುತ್ತಮುತ್ತಲಿನ ಜನ, ಇವರ ಸಮಸ್ಯೆಗಳು ನಿತ್ಯ ಜೀವನದ ಸಮಸ್ಯೆಗಳು. ಇಲ್ಲಿನ ಘಟನೆಗಳು ನಿತ್ಯಜೀವನದ ಘಟನೆಗಳು. ಈ ಮೂಲಕ ಇವರ ಆದರ್ಶಗಳ ಮತ್ತು ಮೌಲ್ಯಗಳ ಪರೀಕ್ಷೆ ನಡೆಯುತ್ತದೆ. ಯಾವ ತತ್ವವಾಗಲಿ, ಆದರ್ಶವಾಗಲಿ, ಅಮೂರ್ತವಾಗಿ ಎಷ್ಟೇ ಅಪೇಕ್ಷಣೀಯವಾಗಲಿ, ಬಾಳಿನ ಸಂದರ್ಭದಲ್ಲಿ ಅದಕ್ಕೆ ಮಾನವೀಯತೆಯ ಸ್ಪರ್ಶ ಆಗಲೇಬೇಕೆಂಬ ತಿಳಿವಳಿಕೆ ಎಲ್ಲ ಕಥೆಗಳನ್ನು ನಡೆಸುತ್ತದೆ.

- ಪ್ರೊ. ಎಲ್.ಎಸ್. ಶೇಷಗಿರಿರಾವ್ (1987)

ಸಣ್ಣ ಕಥೆಯನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ದುಕೊಂಡ ಲೇಖಕಿಯರಲ್ಲಿ ಶಾಂತಾದೇವಿ ಕಣವಿ ಅವರಿಗೆ ಮಹತ್ವದ ಸ್ಥಾನವಿದೆ. ಸ್ವ-ಅನುಭವದ ಒತ್ತಡಗಳಿಗಿಂತ ಸಹ ಅನುಭೂತಿಯ ಕಂಪನಗಳೇ ಅವರ ಕೃತಿಗಳ ನೆಲೆಯಾದುದರಿಂದ ಅವುಗಳ ಸಾಮಾಜಿಕ ಮುಖವೇ ನಮಗೆ ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಅದರಲ್ಲಿಯೂ ನಮ್ಮ ಸಮಾಜದಲ್ಲಿ ಹೆಣ್ಣು ಎದುರಿಸುತ್ತಿರುವ ಸಮಸ್ಯೆಗಳು ಅವರಿಗೆ ತೀವ್ರ ಆಸ್ಥೆಯ ವಿಷಯಗಳಾಗಿವೆ. ಇಂದಿನ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯರನ್ನು ಕುರಿತ ಎಲ್ಲ ಗಂಭೀರ ಬರಹಗಳಲ್ಲಿಯೂ ಪ್ರತಿಭಟನೆ ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಇವರ ಕಥೆಗಳಲ್ಲಿ ಅದು ಘೋಷಣೆಯ ಸರಳ ರೂಪವನ್ನು ತಾಳುವುದಿಲ್ಲ...... ಮಾಸ್ತಿ ಸಂಪ್ರದಾಯದ ಮುಖ್ಯ ಗುಣವಾದ ವಸ್ತುನಿಷ್ಠತೆ ಶಾಂತಾದೇವಿಯವರ ಕಥನದ ಗುಣವೂ ಆಗಿದೆ.

- ಡಾ. ಜಿ.ಎಸ್. ಆಮೂರ (1992)



ಸಪ್ನ ಬುಕ್ ಹೌಸ್®
3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455
Shop online : www.sapnaonline.com

ISBN : 978-81-280-2003-2


ಬೆಲೆ : ₹ 550/-